

# ಋಗ್ವೇದ ಸಂಹಿತಾ

ಭಾಗ—೨೯

ಎಂಟನೆಯ ಅಷ್ಟಕದ ಅಧ್ಯಾಯಗಳು ೩–೪

ಹತ್ತನೆಯ ಮಂಡಲದ ಸೂಕ್ತಗಳು ೭೨–೯೪

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೯

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೯

ಎಂಟನೆಯ ಅಷ್ಟಕದ ೩—೪ ನೇ ಅಧ್ಯಾಯಗಳು

ಹತ್ತನೆಯ ಮಂಡಲದ ಸೂಕ್ತಗಳು ೭೨-೯೪



*Translated with Exhaustive Critical Notes & Explanations*

*by*

ASTHANA MAHAVIDWAN

H. P. VENKATA RAO

*Editor.*

*Printed at*

SREE VINAYAK PRINTING WORKS, MYSORE

1954

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**
ಜಿ. ಸಿ. ಬಿ., ಜಿ. ಸಿ. ಎಸ್. ಐ ರವರು

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

—o—

Translator & Editor :
ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್

Associate.
ಶ್ರೀ G. N. ಚಕ್ರವರ್ತಿ, M. A,
Professor of Sanskrit, St. Philomina's College, Mysore.

---

## ಸಹಾಯಕ ವಿದ್ವನ್ಮಂಡಲಿ

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
4. ಬ್ರ॥ ಶ್ರೀ॥ ಹಿಟ್ನವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತ ವಿದ್ವಾನ್.
5. ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T., ಸಾಹಿತ್ಯವಿದ್ವಾನ್.
6. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
7. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯ ವಿದ್ವಾನ್, Govt. Oriental Research Institute. Mysore.
8. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು. Govt. Oriental Research Institute. Mysore.

# ಪೀಠಿಕೆ.

---

ಋಕ್ಸಂಹಿತೆಯ ಈ ಭಾಗದಲ್ಲಿ ಎಂಟನೆಯ ಅಷ್ಟಕದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳು ಅಡಕವಾಗಿವೆ. ಇವುಗಳಲ್ಲಿ ಗಹನವಾದ ತತ್ತ್ವಾರ್ಥಗಳನ್ನೊಳಗೊಂಡಿರುವ ಅನೇಕ ಸೂಕ್ತಗಳ ವಿವರಣೆ ಇದೆ. ವಿಶ್ವಕರ್ಮಸೂಕ್ತವೂ, ಪುರುಷಸೂಕ್ತವೂ ಇವುಗಳಲ್ಲಿ ಮುಖ್ಯವಾದವು. ಇವುಗಳನ್ನು ಸ್ವಲ್ಪ ವಿಸ್ತಾರವಾಗಿಯೇ ವಿವರಿಸಿದೇವೆ. ಇತರ ಕೆಲವು ಸೂಕ್ತಗಳಲ್ಲಿಯೂ ವಿಸ್ತಾರವಾದ ವಿವರಣೆಯು ಅವಶ್ಯಕವಾಗಿದ್ದರೂ ಗ್ರಂಥವು ವಿಸ್ತಾರವಾಗುವುದೆಂಬ ಶಂಕೆಯಿಂದ ಸಾಧ್ಯವಾದ ವಿವರಣೆಗಳನ್ನು ಮಾತ್ರ ಅಲ್ಲಲ್ಲಿ ಸೇರಿಸಲಾಗಿದೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತ ನೃಸಿಂಹರಾಜ ಒಡೆಯರ್,** ಎಂಬ ಶುಭಾನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ಶ್ರೀ ಜಯನಾಮ ಸಂ॥ ಮಾರ್ಗಶಿರ ಕೃಷ್ಣ ತ್ರಯೋದಶೀ ಬುಧವಾರ
ತಾ॥ 22-12-1954

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

# ವಿಷಯಾನುಕ್ರಮಣಿಕೆ



## ಎಂಟನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು



### ಹತ್ತನೆಯ ಮಂಡಲದ ಸೂಕ್ತಗಳು

ಪುಟಸಂಖ್ಯೆ

ಪುಟಸಂಖ್ಯೆ



ಎಂಟನೆಯ ಅಷ್ಟಕದಲ್ಲಿ ಮೂರನೇ ಅಧ್ಯಾಯವು ಸಮಾಪ್ತವು.

ಪುಟಸಂಖ್ಯೆ

## ನಾಲ್ಕನೆಯ ಅಧ್ಯಾಯವು.

ಪುಟಸಂಖ್ಯೆ

ಎಂಟನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವು

ವಿಷಯಾನುಕ್ರಮಣಿಕೆ ಸಮಾಪ್ತವು



## ಸಂಕೇತಾಕ್ಷರಗಳ ವಿವರಣೆಯು

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬ ಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ. ಉಣಾದಿ ಸೂತ್ರ
ಋ. ಸಂ. ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾ ವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ಸೂತ್ರ
ಬ್ರ. ಸೂ.—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ
ಬೃ. ದೇ.—ಬೃಹದ್ದೇವತಾ

Printed by, K. Venkatasubbiah,
at Sree Vinayak Printing Works, 550. Old Agrahar, Mysore.



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಪ್ರಾಜ್ಞಃ ಶ್ರೀಸಾಯಣಾಚಾರ್ಯೋ ವ್ಯಾಖ್ಯಾಯ ಚರಮೇಽಷ್ಟಕೇ ।
ಸ್ಫುಟಂ ದ್ವಿತೀಯಮಧ್ಯಾಯಂ ತೃತೀಯಂ ವಕ್ತುಮುದ್ಯತಃ ॥

### ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

### ಭಾಗ—೨೯



## ॥ ಅಷ್ಟಮಾಷ್ಟಕೇ ತೃತೀಯೋಽಧ್ಯಾಯಃ ॥

### ಎಂಟನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು.

## ಹತ್ತನೆಯ ಮಂಡಲದಲ್ಲಿ ಎಪ್ಪತ್ತೆರಡನೆಯ ಸೂಕ್ತವು.

## ಪೀಠಿಕೆ.

ಈ ಸೂಕ್ತದ ಮೊದಲನೆಯ ಋಕ್ಕಿನ ಭಾಷ್ಯದ ಪ್ರಾರಂಭದಲ್ಲಿ ಸಾಯಣರು— **ಅದಿತಿರ್ದಾಕ್ಷಾಯಣ್ಯನೇನ ಸೂಕ್ತೇನ ಸ್ವಯಂ ಯಥಾದಿತ್ಯಾನಜನಯತ್ತದ್ಬ್ರವೀತಿ**—ಎಂದರೆ ದಕ್ಷಪ್ರಜಾಪತಿಯ ಪುತ್ರಿಯಾದ ಅದಿತಿಯು ತಾನೇ ತನ್ನ ಪುತ್ರರಾದ ಆದಿತ್ಯರ ಅಥವಾ ದೇವತೆಗಳ ಉತ್ಪತ್ತಿಕ್ರಮವನ್ನು ಹೇಳುತ್ತಾಳೆಂದು ಸೂಚಿಸಿದಾರೆ. ಅದಿತಿಯ ಪುತ್ರರಿಗೆ ಆದಿತ್ಯರು ಅಥವಾ ಆದಿತೇಯರು ಎಂದು ಹೆಸರು. ಇವರನ್ನೇ ದೇವತೆಗಳೆಂದೂ ಸ್ವರ್ಗವಾಸಿಗಳೆಂದೂ ಕರೆಯುವ ರೂಢಿಯಿದೆ. ಕೋಶದಲ್ಲಿ— **ಆದಿತೇಯಾ ದಿವಿಷದೋ ಲೇಖಾ ಅದಿತಿನಂದನಾಃ** ಎಂದು

ಹೇಳಿದೆ. ಪುರಾಣಾದಿಗಳಲ್ಲಿ ಹೇಳಿರುವ ದೇವತೆಗಳ ಉತ್ಪತ್ತಿಕ್ರಮಕ್ಕೂ ಋಗ್ವೇದದಲ್ಲಿ ಹೇಳಿರುವ ದೇವತೆಗಳ ಉತ್ಪತ್ತಿ ಕ್ರಮಕ್ಕೂ ವ್ಯತ್ಯಾಸವಿದೆ. ಆದಿತ್ಯರನ್ನು ದೇವತೆಗಳೆಂಬ ಸಾಮಾನ್ಯಶಬ್ದದಿಂದ ಕರೆಯುವ ರೂಢಿಯಿದ್ದರೂ ಆದಿತ್ಯರ ಎಂದರೆ ಅದಿತಿಪುತ್ರರ ಸಂಖ್ಯೆಗೆ ಪರಿಮಿತಿಯುಂಟು. ಇವರ ಸಂಖ್ಯಾಪರಿಮಿತಿಯು ಕೆಲವುಕಡೆ ಆರು, ಏಳು, ಎಂಟು ಎಂದು ವಿಧವಿಧವಾಗಿ ಹೇಳಿದೆ. ತೈತ್ತಿರೀಯಬ್ರಾಹ್ಮಣದಲ್ಲಿಯೂ ತೈತ್ತಿರೀಯಾರಣ್ಯಕದಲ್ಲಿಯೂ ಇವರ ಸಂಖ್ಯೆಯು ಎಂಟೆಂದು ಸ್ಪಷ್ಟವಾಗಿ ತಿಳಿಸಿರುವುದಲ್ಲದೆ ಅವರ ಹೆಸರುಗಳನ್ನೂ ಸೂಚಿಸಿದೆ. ಈ ವಿಷಯವನ್ನು ನಾವು ಹಿಂದೆ ವಿವರಿಸಿದ್ದರೂ ಈ ಸೂಕ್ತದ ಮುಂದಿನ ಋಕ್ಕುಗಳಲ್ಲಿ ಎಂದರೆ ೮–೯ನೇ ಋಕ್ಕುಗಳಲ್ಲಿ ವಿಸ್ತಾರವಾಗಿ ವಿಮರ್ಶೆಮಾಡುತ್ತೇವೆ. ಅದಿತಿ ಪುತ್ರರಲ್ಲದ ಇತರ ದೇವತೆಗಳೂ ಕೆಲವರುಂಟು. ಅವರ ವಿಷಯವನ್ನು ಈ ಸೂಕ್ತದಲ್ಲಿ ವಿವರಿಸಿಲ್ಲ. ಅವರಲ್ಲಿ ಮುಖ್ಯರಾದ ಅಗ್ನಿ, ವಾಯು ಮುಂತಾದ ದೇವತೆಗಳ ಉತ್ಪತ್ತಿವಿಷಯದಲ್ಲಿ ನಾವು ಹಿಂದೆ ಸೂಕ್ಷ್ಮವಾಗಿ ಬರೆದಿದ್ದೇವೆ. ಮುಂದೆ ಸಂದರ್ಭಾನುಸಾರ ವಿವರಿಸುತ್ತೇವೆ.

ಈ ಸೂಕ್ತದಲ್ಲಿ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯೂ, **ಸತ್**, **ಅಸತ್** ಎಂಬ ವ್ಯಕ್ತಾವ್ಯಕ್ತಸ್ವರೂಪ ವಿವರಣೆಯೂ, ಯುಗವೇ ಮುಂತಾದ ಕಾಲ ಪರಿಮಿತಿಯ ಸಂಕ್ಷೇಪವಿವರಣೆಯೂ ಸೂಚಿತವಾಗಿದೆ. ಈ ವಿಷಯಗಳನ್ನು ಆಯಾ ಋಕ್ಕುಗಳ ವಿಶೇಷವಿಷಯಗಳಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ.

**ಬ್ರಹ್ಮಣಸ್ಪತಿಯೆಂದು** ಸಾಂಪ್ರದಾಯಿಕವಾಗಿ ಪ್ರಸಿದ್ಧನಾದ **ಬೃಹಸ್ಪತಿಋಷಿಯಿಂದ** ನಿರ್ಮಿತವಾದ ಈ ಸೂಕ್ತದಲ್ಲಿ ಬೃಹಸ್ಪತಿಯಿಂದ ದೃಷ್ಟವಾದ ತತ್ತ್ವವನ್ನೂ ಲೋಕದ ಸೃಷ್ಟ್ಯಾದಿಕ್ರಮವನ್ನೂ ವಿವರಿಸಿದೆ. ಆಧ್ಯಾತ್ಮಿಕ ತತ್ತ್ವವನ್ನು ವಿವರಿಸುವ ಅಘಮರ್ಷಣ, ದೀರ್ಘತಮಸ್, ಹಿರಣ್ಯಗರ್ಭ ಇತ್ಯಾದಿ ಋಷಿಗಳಂತೆ ಬೃಹಸ್ಪತಿಯೂ ಪ್ರಸಿದ್ಧನಾದ ಋಷಿಯು.

೧೦ನೇ ಮಂಡಲದ ೭೨ನೇ ಸೂಕ್ತವಾದ ಈ ಪ್ರಕರಣದಲ್ಲಿ ಬೃಹಸ್ಪತಿಯು ಜಗತ್ತಿನ ಸೃಷ್ಟಿಸ್ವರೂಪವನ್ನು ತನ್ನ ಸಾಕ್ಷಾತ್ಕಾರಕ್ಕನುಗುಣವಾಗಿ ವಿವರಿಸಿದ್ದಾನೆ. ಈ ವಿವರಣವು ನಿಷ್ಕೃಷ್ಟವಾದ ತತ್ತ್ವಜ್ಞಾನಕ್ಕೆ ಅಷ್ಟು ಉಪಕಾರಕವಾದ ಸಾಧನವಾಗಿಲ್ಲ. ಭಾಷೆಯು ಗಂಭೀರವಾಗಿದ್ದು ಋಷಿಯ ಭಾವವೇನು ಎಂಬುದನ್ನು ವಿಶದವಾಗಿ ತಿಳಿಸುವುದಿಲ್ಲ. ಭಾಷ್ಯಕಾರರೂ ಸಹ ಈ ವಿಷಯದಲ್ಲಿ ತಮ್ಮ ಕ್ಲೇಶವನ್ನು ಸೂಚಿಸಿದ್ದಾರೆ. ಆದರೂ ಸಹ, ಆಧ್ಯಾತ್ಮಿಕ ತತ್ತ್ವವನ್ನು ಪ್ರತಿಪಾದಿಸುವ ಉತ್ತಮಪ್ರಕರಣಗಳಲ್ಲಿ ಇದೊಂದಾಗಿದೆ.

**ದೇವಾನಾಂ ಜಾನಾ ವಿಪನ್ಯಯಾ ಪ್ರ ವೋಚಾಮ**—ದೇವತೆಗಳ ಉತ್ಪತ್ತಿಕ್ರಮವನ್ನು ನಮ್ಮ ಸ್ತುತಿವಾಕ್ಯಗಳಿಂದ ಪ್ರಶಂಸಿಸೋಣ ಎಂಬುದೇ ಸೂಕ್ತದ ಪ್ರಥಮ ಸಂಕಲ್ಪವಾಗಿರುತ್ತದೆ. ಈ ಸಂದರ್ಭದಲ್ಲಿಯೇ ಜಗತ್ತಿನ ಮೂಲತತ್ತ್ವವನ್ನು ವಿವರಿಸುವ ಪ್ರಯತ್ನಮಾಡಿದೆ.

**ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ ।**

(ಋ. ಸಂ. ೧೦-೭೨-೨)

ದೇವತೆಗಳ ಆದಿಸೃಷ್ಟಿಕಾಲದಲ್ಲಿ **ಅಸತ್ತಿನಿಂದ** **ಸತ್ತಿನ** ಉತ್ಪನ್ನವಾಯಿತು ಎಂಬುದೇ ಈ ಪ್ರಕರಣದ ಸಾರಾಂಶ. ಸದಾತ್ಮಕವಾದ ಜಗತ್ತಿಗೆ ಅಸದಾತ್ಮಕವಾದ ತತ್ತ್ವವೇ ಮೂಲವಾಗಿದ್ದಿತು ಎಂದು ತಾತ್ಪರ್ಯ. ಇಲ್ಲಿ **ಅಸತ್** ಎಂದರೆ **ಅಭಾವ**, ಏನೂ ಇಲ್ಲದ ಶೂನ್ಯವೆಂದರ್ಥವಲ್ಲ. **ಸತ್** ಎಂದರೆ ನಾಮರೂಪಾತ್ಮಕವೂ, ಮೂರ್ತರೂಪವೂ ಆದ ವಸ್ತುವೆಂತಲೂ, **ಅಸತ್** ಎಂದರೆ ನಾಮರೂಪರಹಿತವೂ ಅಮೂರ್ತವೂ ಆದ ವಸ್ತುವೆಂದೂ ತಾತ್ಪರ್ಯವೆಂದು ಸಾಯ

ಣರ ವಿವರಣೆಯಿರುತ್ತದೆ. **ಸತ್ ಅಸತ್** ಎಂಬ ಎರಡು ತತ್ತ್ವಗಳೂ ಕಾರ್ಯಕಾರಣಸಂಬಂಧವನ್ನು ಹೊಂದಿ ವ್ಯವಹಾರಾತ್ಮಕವಾದ ಜಗತ್ತಿಗೆ ಅಸತ್ತತ್ತ್ವವು ಹೇಗೆ ಮೂಲವಾಗಬಹುದು ? ಅದರ ನಿಜವಾದ ಸ್ವರೂಪವೇನು ? ಎಂಬುದನ್ನು ಮುಂದೆ **ನಾಸದಾಸೀತ್** (ಋ. ಸಂ. ೧೦-೧೨೯) ಎಂಬ ಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ. ಜಗತ್ಸೃಷ್ಟಿಯ ಕಾಲಸೂಚಕವಾದ **ಯುಗ**ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವೇನೆಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ. ಪೂರ್ವಯುಗ, ಉತ್ತರಯುಗ ಎಂಬುದರ ತಾತ್ಪರ್ಯವೇನು ? ಈ ಯುಗವಿಭಾಗಗಳಿಗೂ, ಆಯಾ ಯುಗಗಳಲ್ಲಿ ಸಂಭವಿಸಿದ ಸೃಷ್ಟ್ಯಾದಿಗಳಿಗೂ ಮೂಲಚೇತನವಾವುದು ? ಅದರ ಸಂಕಲ್ಪವೇನು ? ಇತ್ಯಾದಿ ವಿಷಯಗಳೂ ಪರಿಶೀಲಿಸಲ್ಪಡಬೇಕಾಗುತ್ತದೆ.

॥ ಸಾಯಣಭಾಷ್ಯಂ ॥

**ತತ್ರ ದೇವಾನಾಮಿತಿ ನವರ್ಚಮನುವಾಕಾಪೇಕ್ಷಯಾ ಚತುರ್ಥಂ ಸೂಕ್ತಮಾನುಷ್ಟುಭಂ ದೇವದೇವತ್ಯಂ । ಲೋಕನಾಮ್ನಃ ಪುತ್ರೋ ಬೃಹಸ್ಪತಿರಾಂಗಿರಸ ಏವ ವಾ ಬೃಹಸ್ಪತಿರ್ಋಷಿಃ । ಅಥವಾ ದಕ್ಷಸ್ಯ ದುಹಿತಾದಿತಿರ್ಋಷಿಃ। ತಥಾ ಚಾನುಕ್ರಾಂತಂ। ದೇವಾನಾಂ ನವ ಲೌಕ್ಯೋ ವಾ ಬೃಹಸ್ಪತಿರ್ಬಾರ್ಹಸ್ಪತ್ಯೋ ವಾದಿತಿರ್ವಾ ದಾಕ್ಷಾಯಣ್ಯದಿತಿರ್ವಾ ದೈವಮಾನುಷ್ಟುಭಮಿತಿ । ಗತಃ ಸೂಕ್ತವಿನಿಯೋಗಃ ॥**

ಅನುವಾದವು—ಹಿಂದಿನ ಭಾಗದಲ್ಲಿ ಹತ್ತನೇ ಮಂಡಲದ ಎಪ್ಪತ್ತೊಂದು ಸೂಕ್ತಗಳು ಮುಗಿದಿರುವುದರಿಂದ ಈಗ **ದೇವಾನಾಂ** ಎಂಬ ಎಪ್ಪತ್ತೆರಡನೆಯ ಸೂಕ್ತವು ಪ್ರಾರಂಭಿಸಲ್ಪಡುವುದು. ಇದು ಹತ್ತನೆಯ ಮಂಡಲದ ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಲೋಕಋಷಿಯ ಪುತ್ರನಾದ ಬೃಹಸ್ಪತಿ ಅಥವಾ ಅಂಗಿರಾಋಷಿಯ ಪುತ್ರನಾದ ಬೃಹಸ್ಪತಿಯು ಋಷಿಯು ; ಅಥವಾ ದಕ್ಷಪ್ರಜಾಪತಿಯ ಪುತ್ರಿಯಾದ ಅದಿತಿದೇವಿಯು ಋಷಿಯು ; ದೇವತೆಗಳು ದೇವತೆಯು ; ಅನುಷ್ಟುಪ್ಛಂದಸ್ಸು. ಅನುಕ್ರಮಣಿಕೆಯಲ್ಲಿ—**ದೇವಾನಾಂ ನವ ಲೌಕ್ಯೋ ವಾ ಬೃಹಸ್ಪತಿದಾರ್ಕ್ಷಾಯಣ್ಯದಿತಿರ್ವಾ ದೈವಮಾನುಷ್ಟುಭಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೨

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೭೨ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧,೨।
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಬೃಹಸ್ಪತಿರ್ಬೃಹಸ್ಪತಿರ್ವಾ ಲೌಕ್ಯ ಅದಿತಿರ್ವಾ ದಾಕ್ಷಾಯಣೀ ॥
ದೇವತಾ—ದೇವಾಃ ॥
ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ದೇವಾನಾಂ ನು ವಯಂ ಜಾನಾ ಪ್ರ ವೋಚಾಮ ವಿಪನ್ಯಯಾ ।
ಉಕ್ಥೇಷು ಶಸ್ಯಮಾನೇಷು ಯಃ ಪಶ್ಯಾದುತ್ತರೇ ಯುಗೇ ॥ ೧ ॥

॥ ಪದಪಾಠಃ ॥

ದೇವಾನಾಂ । ನು । ವಯಂ । ಜಾನಾ । ಪ್ರ । ವೋಚಾಮ । ವಿಪನ್ಯಯಾ ।

ಉಕ್ಥೇಷು । ಶಸ್ಯಮಾನೇಷು । ಯಃ । ಪಶ್ಯಾತ್ । ಉತ್ೞತರೇ । ಯುಗೇ ॥ ೧ ॥

॥ ಸಾಯಣಭಾಷ್ಯಂ ॥

ಅದಿತಿರ್ದಾಕ್ಷಾಯಣ್ಯನೇನ ಸೂಕ್ತೇನ ಸ್ವಯಂ ಯಥಾದಿತ್ಯಾನಜನಯತ್ತದ್ಬ್ರವೀತಿ । ಬೃಹಸ್ಪತ್ಯೃಷಿಪಕ್ಷೇ ಸ ಋಷಿರದಿತೇಃ ಸಕಾಶಾದಾದಿತ್ಯೋತ್ಪತ್ತಿಪ್ರಕಾರಮಾಹ । ವಯಂ ದೇವಾನಾಮಾದಿತ್ಯಾನಾಂ ಜಾನಾ ಜನ್ಮಾನಿ ಪ್ರ ವೋಚಾಮ । ಪ್ರಕಥಯಾಮ । ವಿಪನ್ಯಯಾ ವಿಸ್ಪಷ್ಟಯಾ ವಾಚಾ । ವಯಮಿತಿ ವೋಚಾಮೇತಿ ಚೋಭಯತ್ರ ಪೂಜಾರ್ಥಂ ಬಹುವಚನಂ । ಅಥೈಕವದಾಹ । ಯೋ ದೇವಾನಾಂ ಗಣಃ ಪೂರ್ವೇ ಯುಗ ಉತ್ಪನ್ನೋಽಪ್ಯುಕ್ಥೇಷು ಶಸ್ಯಮಾನೇಷು ಯಾಗೇ ಶಸ್ತ್ರೇಷ್ವನುಷ್ಠೀಯಮಾನೇಷೂತ್ತರೇ ಯುಗೇ ವರ್ತಮಾನಂ ಸ್ತುವಂತಂ ಸ್ತೋತಾರಂ ಪಶ್ಯಾತ್ ಪಶ್ಯತಿ । ಅನೇಕೇಷ್ವಪಿ ಯುಗೇಷು ಗತೇಷು ಕರ್ಮಸು ಸ್ತೂಯಮಾನೋ ವರ್ತತ ಇತ್ಯರ್ಥಃ ।

। ಪ್ರತಿಪದಾರ್ಥ ।

**ಯಃ**—(ಹಿಂದಿನ ಯುಗಗಳಲ್ಲಿ ಉತ್ಪನ್ನವಾಗಿದ್ದರೂ ಸಹ) ಯಾವ ದೇವಗಣವು । **ಉತ್ತರೇ ಯುಗೇ**—ಮುಂದಿನ ಯುಗಗಳಲ್ಲಿ । **ಉಕ್ಥೇಷು**—ಉಕ್ಥರೂಪವಾದ ಸ್ತುತಿಗಳು । **ಶಸ್ಯಮಾನೇಷು**-ಪಠಿತವಾಗುವ ಕಾಲಗಳಲ್ಲಿ । **ಪಶ್ಯೇತ್**—ನಮ್ಮನ್ನು ನೋಡಬಲ್ಲದೋ ಅಂತಹ । **ದೇವಾನಾಂ**—ದೇವತೆಗಳ । **ಜಾನಾ**—ಉತ್ಪತ್ತಿಕ್ರಮಗಳನ್ನು । **ವಯಂ**—ನಾವು । **ನು**—ಈಗ । **ವಿಪನ್ಯಯಾ**—ಸ್ಪಷ್ಟವಾದ ಸ್ತುತಿವಾಕ್ಕಿನಿಂದ । **ಪ್ರ ವೋಚಾಮ**—ಪ್ರಶಂಸಿಸಿ ಪಠಿಸೋಣ.

॥ ಭಾವಾರ್ಥ ॥

ಹಿಂದಿನ ಯುಗಗಳಲ್ಲಿ ಉತ್ಪನ್ನರಾಗಿದ್ದರೂ ಸಹ ಯಾವ ಆದಿತ್ಯಾದಿ ದೇವತೆಗಳು ಈಗಲೂ ಮತ್ತು ಮುಂದಿನ ಯುಗಗಳಲ್ಲೂ ಅವರನ್ನು ಪ್ರಶಂಸಿಸುವ ಉಕ್ಥಮಂತ್ರಗಳು ಪಠಿತವಾಗುವಾಗ ಮಾನವರನ್ನು ಅನುಗ್ರಹದೃಷ್ಟಿಯಿಂದ ನೋಡಬಲ್ಲರೋ, ಅಂತಹ ಆದಿತ್ಯಾದಿ ದೇವತೆಗಳ ಉತ್ಪತ್ತಿಕ್ರಮಗಳನ್ನು ನಾವು ಈಗ ಸ್ಪಷ್ಟವಾದ ಸ್ತುತಿವಾಕ್ಕುಗಳಿಂದ ಪ್ರಶಂಸಿಸಿ ಪಠಿಸೋಣ.

## English Translation

Let us proclaim with a clear voice the generations of the gods (the divine company), who, when their praises are recited, look (favourably on the worshipper) in this latter age.

## ॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಲೋಕಋಷಿಯ ಪುತ್ರನಾದ **ಬೃಹಸ್ಪತಿ** ಅಥವಾ ಅಂಗಿರಾಋಷಿಯ ಪುತ್ರನಾದ ಬೃಹಸ್ಪತಿ ಅಥವಾ ದಕ್ಷಪುತ್ರಿಯಾದ ಅದಿತಿಯು ಋಷಿಯೆಂದು ಹೇಳಿದೆಯಷ್ಟೆ. ಇವರಲ್ಲಿ ಯಾರೊಬ್ಬರಾದರೂ ಈ ಸೂಕ್ತಕ್ಕೆ ಋಷಿಯಾಗಬಹುದು ಎಂದರೆ ಈ ಸೂಕ್ತದಲ್ಲಿ ವಿವೃತವಾಗಿರುವ ವಿಷಯವನ್ನು ಮೂವರಲ್ಲಿ ಯಾರಾದರೂ ವಿವರಿಸಿರಬಹುದು ಎಂದಭಿಪ್ರಾಯವು. ಅದಿತಿಯೇ ಈ ಸೂಕ್ತದ ಋಷಿಯೆಂದು ಭಾವಿಸುವುದಾದರೆ ತಾನೇ ತನ್ನ ಪುತ್ರರಾದ ಆದಿತ್ಯರ ಜನನಕ್ರಮವನ್ನು ಹೇಳಿರುವುದು ಸಹಜವಾಗಿಯೇ ಇದೆ. ಬೃಹಸ್ಪತಿಯು ಋಷಿಯೆಂದು ಹೇಳುವ ಸಂದರ್ಭದಲ್ಲಿ ಬೃಹಸ್ಪತಿ ಋಷಿಯು ದೇವತೆಗಳ ಉತ್ಪತ್ತಿಕ್ರಮವನ್ನು ಹೇಳುತ್ತೇನೆಂದು ನಿರ್ದೇಶಿಸಿ ಅದರಂತೆ ಅವರ ಜನನಕ್ರಮವನ್ನು ವಿವರಿಸಿದ್ದಾನೆಂದು ತಿಳಿಯಬಹುದು.

**ದೇವಾನಾಂ ನು ಜಾನಾ – ಆದಿತ್ಯಾನಾಂ ಜನ್ಮಾನಿ** । ಆದಿತ್ಯರು ಅದಿತಿಯಲ್ಲಿ ಹೇಗೆ ಉತ್ಪನ್ನರಾದರು ? ಅವರು ಎಷ್ಟು ಮಂದಿ ? ಅವರು ಯಾವಾಗ ಉತ್ಪನ್ನರಾದರು ಮುಂತಾದ ವಿಷಯಗಳನ್ನು ವಿವರಿಸುವುದಕ್ಕಾಗಿ ಋಷಿಯು ಇಲ್ಲಿ **ಜಾನಾ - ಜನ್ಮಾನಿ** ಎಂಬ ಶಬ್ದವನ್ನು ಉಪಯೋಗಿಸಿದಾನೆ.

**ವಿಪನ್ಯಯಾ - ವಿಸ್ಪಷ್ಟಯಾ ವಾಚಾ** । ಸ್ಪಷ್ಟವಾದ ವಾಕ್ಯಗಳಿಂದ ; ಸಂಶಯಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟವಾದ ವಿವರಣೆಯುಳ್ಳ ವಾಕ್ಯಗಳಿಂದ ವಿವರಿಸುತ್ತೇನೆಂದು ಋಷಿಯು ನಿರ್ದೇಶಿಸುತ್ತಾನೆ.

**ವಯಂ**—ಇಲ್ಲಿ ಋಷಿಯು ಒಬ್ಬನೇ ಆದರೂ **ವಯಂ**- ನಾವು ಎಂಬ ಬಹುವಚನಪ್ರಯೋಗವನ್ನು ಮಾಡಿರುವುದು ಅಸಾಧುವಲ್ಲವೇ ಎಂದರೆ ಅದಕ್ಕೆ ಸಮಾಧಾನವಾಗಿ ಭಾಷ್ಯಕಾರರು—**ವಯಮಿತಿ ವೋಚಾಮೇತಿ ಚೋಭಯತ್ರ ಪೂಜಾರ್ಥಂ ಬಹುವಚನಂ**—ಇಲ್ಲಿ **ವಯಂ, ವೋಚಾಮ** ಎಂಬ ಎರಡು ಶಬ್ದಗಳೂ ಗೌರವಾರ್ಥವಾಗಿ ಬಹುವಚನದಲ್ಲಿ ಪ್ರಯುಕ್ತವಾಗಿವೆ ಎಂದು ಹೇಳಿದಾರೆ. ಇದಲ್ಲದೆ ಕವಿಗಳೂ, ಗ್ರಂಥಕರ್ತರೂ ತಮ್ಮ ಗ್ರಂಥಗಳಲ್ಲಿ ವೈಯಕ್ತಿಕವಾದ ಏಕವಚನಪ್ರಯೋಗಸಂದರ್ಭದಲ್ಲಿ ಬಹುವಚನವನ್ನು ಬಳಸುವುದು ಈಗಲೂ ರೂಢಿಯಾಗಿದೆ. ಆದ್ದರಿಂದ ಇಲ್ಲಿ ಬಹುವಚನಪ್ರಯೋಗವು ಸಾಧುವಾಗಿಯೇ ಇದೆ ಎಂದಭಿಪ್ರಾಯವು.

**ಉಕ್ಥೇಷು ಶಸ್ಯಮಾನೇಷು ಯಃ ಉತ್ತರೇ ಯುಗೇ ಪಶ್ಯಾತ್ (ತಸ್ಯ ಜಾನಾ ಪ್ರ ವೋಚಾಮ)– ಯಃ ದೇವಾನಾಂ ಗಣಃ ಯಾಗಕಾಲೇ ಶಸ್ತ್ರೇಷ್ವನುಷ್ಠೀಯಮಾನೇಷು ವರ್ತಮಾನಂ ಸ್ತುವಂತಂ ಸ್ತೋತಾರಂ ಪಶ್ಯತಿ (ತಂ ದೇವಗಣಸ್ಯ ಜನ್ಮಾನಿ ಪ್ರಕಥಯಾಮ)** । ಯಜ್ಞಮಾಡುವಾಗ ದೇವತೆಗಳನ್ನು ಆಹ್ವಾನಮಾಡುವಕಾಲದಲ್ಲಿ ದೇವತೆಗಳ ಗುಣಗಾನವನ್ನು ಮಾಡಿ ಅವರನ್ನು ಆಹ್ವಾನಮಾಡುವುದು ರೂಢಿಯು. ಇಂತಹ ಕಾಲದಲ್ಲಿ ದೇವತೆಗಳ ಜನನಕ್ರಮವನ್ನು ವಿವರಿಸುವುದು ಉಚಿತವಾಗಿಯೇ ಇದೆ. ಆದ್ದರಿಂದ ಉಕ್ಥಮಂತ್ರಗಳನ್ನು ಪಠಿಸಿ ದೇವತೆಗಳನ್ನು ಸ್ತೋತ್ರಮಾಡುವಾಗ ದೇವತೆಗಳ ಉತ್ಪತ್ತಿಕ್ರಮವನ್ನು ಹೇಳುತ್ತೇನೆಂದು ಋಷಿಯು ಇಲ್ಲಿ ವರ್ಣಿಸಿದಾನೆ. ಆ ದೇವತೆಗಳ ಜನನಕ್ರಮವನ್ನು ವರ್ಣಿಸಿದರೆ ಅವರ ಗುಣಗಾನಮಾಡಿದಂತಾಯಿತೇ ಎಂದರೆ ಅದನ್ನೇ ಈ ಋಕ್ಕಿನ ಉತ್ತರಾರ್ಧದಲ್ಲಿ ವರ್ಣಿಸಿದಾನೆ. ಮುಂದಿನ ಋಕ್ಕುಗಳಲ್ಲಿ ಎಂದರೆ ೨-೩ನೇ ಋಕ್ಕುಗಳಲ್ಲಿ ದೇವತೆಗಳ ಜನನವು ಸೃಷ್ಟಿಕಾಲದಲ್ಲಿ ಎಲ್ಲರ ಸೃಷ್ಟಿಗಿಂತಲೂ ಮೊದಲೇ ಆಯಿತೆಂದು ಹೇಳಲಾಗಿದೆ ಎಂದರೆ ದೇವತೆಗಳ

ಸೃಷ್ಟಿಯಾದ ಎಷ್ಟೋ ಕಾಲದನಂತರ ಮನುಷ್ಯಾದಿ ಪ್ರಾಣಿಗಳ ಸೃಷ್ಟಿಯಾಯಿತು. ಆದರೂ ಎಂದರೆ ಬಹುಕಾಲದ ಹಿಂದೆ ಸೃಷ್ಟಿಸಲ್ಪಟ್ಟಿದ್ದರೂ ದೇವತೆಗಳೂ ಈಗಲೂ ಸಹ ಮನುಷ್ಯರು ಮಾಡುತ್ತಿರುವ ಯಜ್ಞಯಾಗಾದಿಕರ್ಮಗಳನ್ನು ನೋಡಬಲ್ಲರೆಂದು ಇಲ್ಲಿ ಹೇಳಿದೆ. ಎಂದರೆ, ದೇವತೆಗಳು ಮನುಷ್ಯಾದಿಗಳಂತೆ ಅಲ್ಪಕಾಲ ಜೀವಿಸುವವರಲ್ಲ. ಅವರ ಆಯುಃಪ್ರಮಾಣವು ಬಹು ದೀರ್ಘವಾದುದು, ಅವರು ಬಹುಕಾಲ ಜೀವಿಸಬಲ್ಲರು ಇತ್ಯಾದಿ ದೇವತೆಗಳ ಗುಣಗಳನ್ನು ವರ್ಣಿಸುವ ಉದ್ದಿಶ್ಯದಿಂದಲೇ ಋಷಿಯು ಈ ಋಕ್ಕಿನ ಉತ್ತರಾರ್ಧದಲ್ಲಿ ದೇವತೆಗಳ ಆಯುಃಪರಿಮಿತಿಯನ್ನು ಮನುಷ್ಯರ ಆಯುಃಪರಿಮಿತಿಗೆ ಹೋಲಿಸಿ ವರ್ಣಿಸಿದಾನೆ.

**ಉತ್ತರೇ ಯುಗೇ - ಅನೇಕೇಷ್ವಪಿ ಯುಗೇಷು ಗತೇಷು ಕರ್ಮಸು ಸ್ತೂಯಮಾನೋ ವರ್ತೇತ ಇತ್ಯರ್ಥಃ ।** ಮುಂದಿನ ೨-೩ನೇ ಋಕ್ಕುಗಳಲ್ಲಿ **ಪೂರ್ವೇ ಯುಗೇ** ಮತ್ತು **ಪ್ರಥಮೇ ಯುಗೇ** ಎಂಬ ಶಬ್ದಗಳ ಪ್ರಯೋಗವಿದೆ. ಎಂದರೆ ಸೃಷ್ಟಿಯ ಪ್ರಾರಂಭಕಾಲಕ್ಕೆ ಪ್ರಥಮಯುಗ ಅಥವಾ ಪೂರ್ವಯುಗ ಎಂದು ಹೆಸರು ಅನಂತರ ಮುಂದೆ ನಡೆದು ಕಳೆದುಹೋಗುವ ಯುಗಗಳಿಗೂ, ಈಗ ನಡೆಯುತ್ತಿರುವ ಯುಗಕ್ಕೂ ಉತ್ತರಯುಗ ಎಂದು ಇಲ್ಲಿ ಅರ್ಥವು ಭಾಸವಾಗುವುದು. ಋಗ್ವೇದದಲ್ಲಿ ಯುಗಶಬ್ದವು ಕೆಲವು ಕಡೆ ಪ್ರಯುಕ್ತವಾಗಿದ್ದರೂ ಅವುಗಳು ಬೇರೆಬೇರೆ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವವು. ಪ್ರಕೃತಋಕ್ಕಿನಲ್ಲಿ ಮಾತ್ರ ಕಾಲದ ಒಂದು ದೊಡ್ಡ ವಿಭಾಗವೆಂಬ ಅರ್ಥದಲ್ಲಿ ಯುಗಶಬ್ದವು ಪ್ರಯುಕ್ತವಾಗಿರುವುದು. ಆದ್ದರಿಂದ ಯುಗಶಬ್ದದ ನಾನಾರ್ಥಗಳನ್ನು ಇಲ್ಲಿ ವಿಮರ್ಶೆ ಮಾಡುವುದು ಸೂಕ್ತವಾಗಿದೆ.



## ಯುಗಶಬ್ದದ ನಾನಾರ್ಥಗಳು ಮತ್ತು ಪ್ರಯೋಗಗಳು

ಯುಗಶಬ್ದವು ಕಾಲವಾಚಕವೆಂಬ ಅರ್ಥದಲ್ಲಿ ಪುರಾಣಾದಿಗಳಲ್ಲಿ ವಿಶೇಷವಾದ ವಿವರಣೆ ಇವೆ. ಅದರಲ್ಲಿಯೂ ಭಾಗವತ (ಸ್ಕಂ. ೩-೧೧-೧) ಮತ್ತು ವಿಷ್ಣುಪುರಾಣಗಳಲ್ಲಿರುವ ಕ್ರಮವು ಈರೀತಿ ಇದೆ—

**॥ ವಿದುರ ಉವಾಚ ॥**

**ಯದಾತ್ಥ ಬ್ರಹ್ಮರೂಪಸ್ಯ ಹರೇರದ್ಭುತಕರ್ಮಣಃ ।**
**ಕಾಲಾಖ್ಯಂ ಲಕ್ಷಣಂ ಬ್ರಹ್ಮನ್ಯಥಾ ವರ್ಣಯ ನಃ ಪ್ರಭೋ ॥**

(ಶ್ರೀ.ಭಾ. ೩-೧೦-೧೦)

"ಎಲೈ ಮಹರ್ಷಿಯೇ, ಬ್ರಹ್ಮರೂಪನಾದ ಹರಿಯ ಮಹತ್ಕರ್ಮಗಳನ್ನು ವರ್ಣಿಸಿದೆ. ಪ್ರಕೃತದಲ್ಲಿ ಜಗತ್ಸೃಷ್ಟಿಗೆ ಮೂಲಕಾರಣನಾದ ಹರಿಯು ಸೃಷ್ಟಿಸ್ಥಿತ್ಯಾದಿಗಳ ಪರಿಮಾಣವನ್ನು ನಿಷ್ಕರ್ಷಿಸಲು ಕಾಲರೂಪವಾದ ತತ್ತ್ವವನ್ನು ಹೇಗೆ ವಿಭಾಗಮಾಡಿರುವನು ? ಕಾಲದ ಸ್ವರೂಪವೇನು ಎಂಬುದನ್ನು ವಿವರಿಸಿ ಹೇಳು" ಎಂದು ವಿದುರನು ಪ್ರಾರ್ಥಿಸಿ ಕೇಳುತ್ತಾನೆ. ಅದಕ್ಕೆ ಉತ್ತರವಾಗಿ, ಮೈತ್ರೇಯನು ಕಾಲರೂಪವಾದ ತತ್ತ್ವವನ್ನು ಈರೀತಿ ವಿವರಿಸುತ್ತಾನೆ—

॥ ಮೈತ್ರೇಯ ಉವಾಚ ॥

ಗುಣವ್ಯತಿಕರಾಕಾರೋ ನಿರ್ವಿಶೇಷೋಽಪ್ರತಿಷ್ಠಿತಃ ।
ಪುರುಷಸ್ತದುಪಾದಾನಮಾತ್ಮಾನಂ ಲೀಲಯಾಸೃಜತ್ ॥

(ಶ್ರೀ. ಭಾ. ೩-೧೦-೧೧)

ಶಾಶ್ವತಸ್ಥಿತಿಯನ್ನು ಹೊಂದಿರುವ ಮಹತ್ಪ್ರಕೃತಿಯು ವಿಕಾರಗಳನ್ನು ಹೊಂದಿ ಬದಲಾಯಿಸುವುದೇ ಕಾಲವೆಂದು ಕರೆಯಲ್ಪಡುವುದು. ಈ ಕಾಲಕ್ಕೆ ಆಕಾರವೆಂಬುದಿಲ್ಲ. ಜನನಮರಣಗಳಿಲ್ಲ. ಆದರೆ, ವ್ಯಾವಹಾರಿಕವಾಗಿ ಮಾತ್ರ ಈ ಕಾಲಕ್ಕೆ ವಿಭಾಗಗಳುಂಟು. ಈ ಕಾಲವನ್ನು ನಿಮಿತ್ತವನ್ನಾಗಿ ಮಾಡಿಕೊಂಡು ಈಶ್ವರನು ತನ್ನ ಲೀಲಾರೂಪವಾಗಿ ಜಗತ್ತನ್ನೆಲ್ಲ ಸೃಷ್ಟಿಸಿದ್ದಾನೆ.

ವಿಶ್ವಂ ವೈ ಬ್ರಹ್ಮತನ್ಮಾತ್ರಂ ಸಂಸ್ಥಿತಂ ವಿಷ್ಣುಮಾಯಯಾ ।
ಈಶ್ವರೇಣ ಪರಿಚ್ಛಿನ್ನಂ ಕಾಲೇನಾವ್ಯಕ್ತಮೂರ್ತಿನಾ ॥
ಯಥೇದಾನೀಂ ತಥಾಗ್ರೇ ಚ ಪಶ್ಚಾದಪ್ಯೇತದೀದೃಶಂ ।
ಸರ್ಗೋ ನವವಿಧಸ್ತಸ್ಯ ಪ್ರಾಕೃತೋ ವೈಕೃತಸ್ತು ಯಃ ॥

(ಶ್ರೀ. ಭಾ. ೩-೧೦-೧೨, ೧೩)

ಸೃಷ್ಟಿಯನ್ನು ಹೊಂದುವ ಸಕಲ ಜಗತ್ತೂ ಬ್ರಹ್ಮಮಯವಾಗಿದೆ. ಬ್ರಹ್ಮಮಾಯೆಯಿಂದ ಸೃಷ್ಟವಾದ ಈ ಜಗತ್ತಿಗೆ ಅವ್ಯಕ್ತಸ್ವರೂಪವೂ, ಜಗತ್ತಿಗೆಲ್ಲ ನಿಯಾಮಕವೂ ಆದ ಕಾಲವೇ ಸರ್ವಕಾರಣವಾಗಿದೆ. ಈ ಜಗತ್ತಿನ ವ್ಯವಹಾರಕ್ಕಾಗಿಯೇ ಕಾಲವಿಭಾಗವು. ಆದರೆ ನಿತ್ಯವಾದ ಕಾಲಕ್ಕೆ ವಿಭಾಗಗಳಿಲ್ಲ. ಜಗನ್ನಿಯಾಮಕವಾದ ಈ ಕಾಲದ ಪ್ರಭಾವದಿಂದ ಒಂಭತ್ತು ವಿಧವಾದ ಸೃಷ್ಟಿಯೂ ಮತ್ತು ಪ್ರಾಕೃತವೈಕೃತವೆನಿಸಿದ ಹತ್ತನೆಯ ಸೃಷ್ಟಿಯೂ ಇರುತ್ತದೆ.

ಕಾಲದ್ರವ್ಯಗುಣೈರಸ್ಯ ತ್ರಿವಿಧಃ ಪ್ರತಿಸಂಕ್ರಮಃ ।
ಆದ್ಯಸ್ತು ಮಹತಸ್ಸರ್ಗೋ ಗುಣವೈಷಮ್ಯಮಾತ್ಮನಃ ॥

ದ್ವಿತೀಯಸ್ತ್ವಹಮೋ ಯತ್ರ ದ್ರವ್ಯಜ್ಞಾನಕ್ರಿಯೋದಯಃ ।
ಭೂತಸರ್ಗಸ್ತೃತೀಯಸ್ತು ತನ್ಮಾತ್ರೋ ದ್ರವ್ಯಶಕ್ತಿಮಾನ್ ॥

ಚತುರ್ಥ ಐನ್ದ್ರಿಯಃ ಸರ್ಗೋ ಯಸ್ತು ಜ್ಞಾನಕ್ರಿಯಾತ್ಮಕಃ ।
ವೈಕಾರಿಕೋ ದೇವಸರ್ಗಃ ಪಂಚಮೋ ಯನ್ಮಯಂ ಮನಃ ॥

ಷಷ್ಠಸ್ತು ತಮಸಃ ಸರ್ಗೋ ಯಸ್ತ್ವಬುದ್ಧಿಕೃತಃ ಪ್ರಭೋ ।
ಷಡಿಮೇ ಪ್ರಾಕೃತಾಃ ಸರ್ಗಾ ವೈಕೃತಾನಪಿ ಮೇ ಶೃಣು ॥

(ಶ್ರೀ. ಭಾ. ೩-೧೦-೧೪-೧೭)

ನಿತ್ಯವಾದ ಕಾಲದ ನಿಯಮಕ್ಕನುಸಾರವಾಗಿ ಮೂರು ವಿಧವಾದ ಪ್ರಳಯಗಳಿವೆ. ಸೃಷ್ಟಿಗೆ ಕ್ಲೃಪ್ತಕಾಲದಲ್ಲುಂಟಾಗುವ ಸುಷುಪ್ತಿರೂಪವಾದ ನಿತ್ಯ ಪ್ರಳಯ, ಸಂಕರ್ಷಣ ಮುಖಾಗ್ನಿಯೇ ಮುಂತಾದ ಕಾರಣಗಳಿಂದ ಉಂಟಾದ ನೈಮಿತ್ತಿಕ ಪ್ರಳಯ, ಸತ್ವಾದಿಗುಣಗಳ ಸಾಮ್ಯಾವಸ್ಥೆಯಿಂದುಂಟಾಗುವ ಪ್ರಾಕೃತಿಕ ಪ್ರಳಯ ಎಂದು ಈ ರೀತಿ ಮೂರು

ವಿಧ. ಪರಮಾತ್ಮನ ಸಂಕಲ್ಪದಿಂದ ಸೃಷ್ಟಿಗಳಲ್ಲಿ ಗುಣಗಳ ವೈಷಮ್ಯರೂಪವಾದ ಮಹತ್ತತ್ವವೇ ಮೊದಲನೆಯ ಸೃಷ್ಟಿ. ಭೂತೇಂದ್ರಿಯದೇವತಾ ಸೃಷ್ಟಿಗೆ ಕಾರಣವಾದ ಅಹಂಕಾರವೇ ಎರಡನೆಯ ಸೃಷ್ಟಿ. ಶಬ್ದಾದಿ ತನ್ಮಾತ್ರಗಳಿಗೂ ಪೃಥಿವ್ಯಾದಿ ಭೂತಗಳಿಗೂ ಕಾರಣವೆನಿಸಿದ ಸೂಕ್ಷ್ಮ ಭೂತಗಳೇ ಮೂರನೆಯ ಸೃಷ್ಟಿ. ಜ್ಞಾನಕರ್ಮರೂಪವಾದ ಇಂದ್ರಿಯ ಸರ್ಗವೇ ನಾಲ್ಕನೆಯದು. ಇಂದ್ರಿಯಾದ್ಯಭಿಮಾನಿದೇವತೆಗಳ ಮತ್ತು ಮನಸ್ಸಿನ ಸೃಷ್ಟಿಯೇ ಐದನೆಯದು. ಅವಿದ್ಯೆಯ ಸೃಷ್ಟಿಯೇ ಆರನೆಯದು. ಇದು ಪ್ರಕೃತಿಜನ್ಯಗಳಾದ ಆರು ಸೃಷ್ಟಿಗಳು. ಇನ್ನು ವಿಕೃತಿಜನ್ಯಗಳಾದ ಸೃಷ್ಟಿಯನ್ನು ಹೇಳುವೆನು.

**ರಜೋಭಾಜೋ ಭಗವತೋ ಲೀಲೇಯಂ ಹರಿಮೇಧಸಃ ।**
**ಸಪ್ತಮೋ ಮುಖ್ಯಸರ್ಗಸ್ತು ಷಡ್ವಿಧಸ್ತಸ್ಥುಷಾಂ ಚ ಯಃ ॥**

(ಶ್ರೀ. ಭಾ. ೩-೧೦-೧೮)

ಸ್ಥಾವರ ಸೃಷ್ಟಿಯೇ ಏಳನೆಯದು. ಇದು ಕಾಲನಿಯಾಮಕವು. ಇದು ಬ್ರಹ್ಮನ ಲೀಲಾಮಾತ್ರ. ಇದು ಆರು ವಿಧ. ಚೈತನ್ಯರಹಿತವಾದ ಓಷಧ್ಯಾದಿಗಳು. ಎಂಟನೆಯದೇ ತಿರ್ಯಗ್ಜಂತುಗಳು. ಈ ಸೃಷ್ಟಿಯಲ್ಲಿ ಇಪ್ಪತ್ತೊಂದು ಜಾತಿಯ ಪ್ರಾಣಿಗಳು. ಅವುಗಳಿಗೆ ಕಾಲವಿಜ್ಞಾನವಿಲ್ಲ. ಮಾನವಜಾತಿಯೇ ಒಂಭತ್ತನೆಯದು. ಮನುಷ್ಯ ತಿರ್ಯಕ್, ಸ್ಥಾವರಗಳೆಂಬ ಮೂರು ಸೃಷ್ಟಿಗಳೇ ವಿಕೃತಗಳು. ಸನತ್ಕುಮಾರಾದಿಗಳ ಸೃಷ್ಟಿಯು ಮಾತ್ರ ಪ್ರಾಕೃತ ವೈಕೃತಗಳೆಂಬ ಉಭಯಾತ್ಮಕಗಳಾಗಿವೆ.

(ಶ್ರೀ. ಭಾ. ೩-೧೦-೧೯-೨೪)

**ವೈಕೃತಾಸ್ತ್ರಯ ಏವೈತೇ ದೇವಸರ್ಗಶ್ಚ ಸತ್ತಮ ।**
**ವೈಕಾರಿಕಸ್ತು ಯಃ ಪ್ರೋಕ್ತಃ ಕೌಮಾರಸ್ತೂಭಯಾತ್ಮಕಃ ॥**

**ದೇವಸರ್ಗಶ್ಚಾಷ್ಟವಿಧೋ ವಿಬುಧಾಃ ಪಿತರೋಽಸುರಾಃ ।**
**ಗಂಧರ್ವಾಪ್ಸರಸಃ ಸಿದ್ಧಾ ಯಕ್ಷರಕ್ಷಾಂಸಿ ಚಾರಣಾಃ ॥**

(ಶ್ರೀ. ಭಾ. ೩-೧೦-೨೫-೨೬)

ದೇವತೆಗಳು, ಅಸುರರು, ಗಂಧರ್ವರು ಇತ್ಯಾದಿ ಎಂಟು ವಿಧ ಗುಂಪಿನವರೂ ವೈಕೃತಸೃಷ್ಟಿಯವರು. ಈ ರೀತಿ ಗುಣಪರಿಣಾಮರೂಪವಾದ ಬ್ರಹ್ಮಾಂಡವು ಭಗವಂತನ ಮಹಿಮೆಯಿಂದ ನದಿಯಲ್ಲಿ ಹರಿಯುವ ನೀರಿನಿಂದ ಆವರ್ತಬುದ್ಬುದಾದಿಗಳು (ಗುಳ್ಳೆಗಳು) ಒಂದೇ ಆವರ್ತಿ ಹುಟ್ಟುವಂತೆ ಪೌರ್ವಾಪರ್ಯವಿಲ್ಲದೆ ಒಮ್ಮೆಯೇ ಜನಿಸುತ್ತವೆ.

**ಅತಃ ಪರಂ ಪ್ರವಕ್ಷ್ಯಾಮಿ ವಂಶಾನ್ ಮನ್ವಂತರಾಣಿ ಚ ।**
**ಏವಂ ರಜಃಪ್ಲುತ ಸ್ಸ್ರಷ್ಟಾ ಕಲ್ಪಾದಿಷ್ವಾತ್ಮಭೂರ್ಹರಿಃ ॥**
**ಸೃಜತ್ಯಮೋಘಸಂಕಲ್ಪ ಆತ್ಮೈವಾಽಽತ್ಮಾನಮಾತ್ಮನಾ ॥**

(ಶ್ರೀ.ಭಾ. ೩.೧೦.೨೮-೨೯)

ಈರೀತಿ ಸೃಷ್ಟಿಯ ಕ್ರಮವು ಎರಡು ವಿಧವಾಗಿರುತ್ತದೆ. ಇನ್ನು ದೇವತೆಗಳ ವಂಶಾವಳಿಗಳನ್ನೂ ಮನ್ವಂತರಗಳನ್ನೂ ಹೇಳುತ್ತೇನೆ. ಪ್ರಥಮಕಲ್ಪದಲ್ಲಿ ಇಂದ್ರಾದಿನಾಮಗಳಿಂದ ಯಾವ ದೇವಾಸುರರು ಪ್ರಖ್ಯಾತಿಯನ್ನು ಹೊಂದಿರುವರೋ, ಅವರೇ ಬೇರೆ ಬೇರೆ ಮನ್ವಂತರಗಳಲ್ಲಿಯೂ, ಅದೇ ನಾಮರೂಪಗಳಿಂದ ಕೂಡಿರುವರು ಹೀಗೆ ಕಾಲಕ್ಕೆ ಉಪಲಕ್ಷಣಗಳಿಂದಲೂ ಗುಣಗಳ ಬದಲಾವಣೆಯಿಂದಲೂ ಹತ್ತು ವಿಧವಾದ ಸೃಷ್ಟಿಯಾಯಿತು. ಈಗ ಅದೇ

ಕಾಲದ ವಿಶೇಷಸ್ವರೂಪವನ್ನು ಹೇಳಬೇಕಾಗಿದೆ. ಆದುದರಿಂದ ಆ ಕಾಲವನ್ನು ಅಳೆದು ತೋರಿಸುವ ಪರಮಾಣುಸ್ವರೂಪವನ್ನು ಹೇಳುತ್ತೇನೆ ಎಂದು ಹೇಳುತ್ತ ಮೈತ್ರೇಯನು ಕಾಲದ ವಿಭಾಗಸ್ವರೂಪವನ್ನು ಈರೀತಿ ತಿಳಿಸಿದ್ದಾನೆ. ಈ ವಿಭಾಗವು ಕಾಲ, ದೇಶ ಮತ್ತು ಪದಾರ್ಥಗಳ ವಿಭಾಗವನ್ನು ತಿಳಿಸುವುದು.

|| ಮೈತ್ರೇಯ ಉವಾಚ ||

**ಚರಮಃ ಸದ್ವಿಶೇಷಾಣಾಮನೇಕೋಽಸಂಯುತಃ ಸದಾ |**
**ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ||**
**ಸತ ಏವ ಪದಾರ್ಥಸ್ಯ ಸ್ವರೂಪಾವಸ್ಥಿತಸ್ಯ ಯತ್ |**
**ಕೈವಲ್ಯಂ ಪರಮಮಹಾನವಿಶೇಷೋ ನಿರಂತರಃ ||**
**ಏವಂ ಕಾಲೋಽಪ್ಯನುಮಿತಃ ಸೌಕ್ಷ್ಮ್ಯೇ ಸ್ಥೌಲ್ಯೇ ಚ ಸತ್ತಮ |**
**ಸಂಸ್ಥಾನಭುಕ್ತ್ಯಾ ಭಗವಾನವ್ಯಕ್ತೋ ವ್ಯಕ್ತಭುಗ್ವಿಭುಃ ||**
**ಸ ಕಾಲಃ ಪರಮಾಣುರ್ವೈ ಯೋ ಭುಂಕ್ತೇ ಪರಮಾಣುತಾಂ |**
**ತತೋಽವಿಶೇಷಭುಗ್ಯಸ್ತು ಸ ಕಾಲಃ ಪರಮೋ ಮಹಾನ್ ||**

(ಶ್ರೀ.ಭಾ. ೩.೧೧.೧-೪)

ಪ್ರಪಂಚದಲ್ಲಿರುವ ಪದಾರ್ಥಗಳನ್ನು ವಿಭಾಗಿಸುತ್ತಾ ಬಂದಲ್ಲಿ ಯಾವ ಭಾಗವನ್ನು ಮುಂದಕ್ಕೆ ಭಾಗಿಸಲಾಗುವುದಿಲ್ಲವೋ, ಯಾವುದು ಬದಲಾವಣೆಯನ್ನು ಹೊಂದದೆಯೂ, ಗುಂಪುಗೂಡದೆಯೂ ಇರುವ ಅತ್ಯಲ್ಪಭಾಗವೋ, ಯಾವುವು ಒಂದುಗೂಡಿದ ಮೊತ್ತವನ್ನು ಪದಾರ್ಥಗಳೆಂದು ಜನರು ಕರೆಯುವರೋ, ಅದಕ್ಕೆ ಪರಮಾಣುವೆಂದು ಹೆಸರು. ಆ ಪರಮಾಣುಗಳೇ ಬದಲಾವಣೆಯಿಂದ ಮೊತ್ತವಾಗಿ ಭೇದವನ್ನುಳಿದ ಸಾಮಾನ್ಯ ಪ್ರಪಂಚರೂಪದಿಂದ ಪರಮಮಹತ್ತೆನಿಸುವುದು. ಹೀಗೆ ಕಾಲಮಾನವನ್ನು ತಿಳಿಸುವ ವಸ್ತುವು ಸೂಕ್ಷ್ಮಾವಸ್ಥೆಯಲ್ಲಿ ಪರಮಾಣುವೆಂದೂ, ಮಧ್ಯಮಾವಸ್ಥೆಯಲ್ಲಿ ಪದಾರ್ಥಗಳೆಂದೂ, ಸ್ಥೂಲಾವಸ್ಥೆಯಲ್ಲಿ ಬ್ರಹ್ಮಾಂಡರೂಪವಾಗಿ ಪರಮಮಹತ್ತೆಂತಲೂ ಹೇಗೆ ಹೆಸರನ್ನು ಪಡೆಯುವುದೋ ಹಾಗೆಯೇ, ಪದಾರ್ಥಗಳ ಬದಲಾವಣೆಗೆ ಕಾರಣವೆನಿಸಿ, ತಾನು ಅಗೋಚರವಾಗಿದ್ದರೂ ಗೋಚರ ವಸ್ತುಗಳಲ್ಲಿ ವ್ಯಾಪಿಸುತ್ತ ಭಗವಚ್ಛಕ್ತಿರೂಪವಾಗಿರುವ ಕಾಲವೂ ಕೂಡ ಸ್ಥೂಲ, ಸೂಕ್ಷ್ಮ, ಮಧ್ಯಮಾವಸ್ಥೆಗಳಿಂದ ಬೇರೆ ಬೇರೆ ಹೆಸರುಗಳನ್ನು ಪಡೆಯುವುದು.

**ಅಣುರ್ದ್ವೌ ಪರಮಾಣೂ ಸ್ಯಾತ್ತ್ರಸರೇಣುಸ್ತ್ರಯಃ ಸ್ಮೃತಃ |**
**ಜಲಾರ್ಕರಶ್ಮ್ಯವಗತಃ ಖಮೇವಾನುಪತನ್ನಗಾತ್ ||**

(ಶ್ರೀ. ಭಾ. ೩-೧೧-೪)

ಈ ಜಗತ್ತಿನಲ್ಲಿ ಪರಮಾಣುಸ್ಥಿತಿಯನ್ನು ಪಡೆದಿರುವ ಕಾಲವು ಪರಮಾಣುವೆಂದೂ, ಈ ಜಗತ್ತನ್ನೆಲ್ಲ ಆಕ್ರಮಿಸಿರುವ ಕಾಲವು ಪರಮಮಹತ್ತೆಂದೂ ಪ್ರಸಿದ್ಧವಾಗಿದೆ. ಇದರ ವಿಭಾಗಕ್ರಮವು ಈ ರೀತಿಯಿರುತ್ತದೆ—

**ತ್ರಸರೇಣುತ್ರಿಕಂ ಭುಂಕ್ತೇ ಯಃ ಕಾಲಃ ಸ ತ್ರುಟಿಃ ಸ್ಮೃತಃ |**
**ಶತಭಾಗಸ್ತು ವೇಧಃ ಸ್ಯಾತ್ತೈಸ್ತ್ರಿಭಿಸ್ತು ಲವಃ ಸ್ಮೃತಃ ||**

ನಿಮೇಷಸ್ತ್ರಿಲವೋ ಜ್ಞೇಯ ಆಮ್ನಾತಸ್ತೇ ತ್ರಯಃ ಕ್ಷಣಃ ।
ಕ್ಷಣಾನ್ಪಂಚ ವಿದುಃ ಕಾಷ್ಠಾಂ ಲಘುತಾ ದಶ ಪಂಚ ಚ ॥

ಲಘೂನಿ ವೈ ಸಮಾಮ್ನಾತಾ ದಶಪಂಚ ಚ ನಾಡಿಕಾ ।
ತೇ ದ್ವೇ ಮುಹೂರ್ತಃ ಪ್ರಹರಃ ಷಡ್ಯಾಮಃ ಸಪ್ತ ವಾ ನೃಣಾಂ ॥

ದ್ವಾದಶಾರ್ಧಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ ।
ಸ್ವರ್ಣಮಾಷೈಃ ಕೃತಚ್ಛಿದ್ರಂಯಾವತ್ಪ್ರಸ್ಥ ಜಲಪ್ಲುತಂ ॥

ಯಾಮಾಶ್ಚತ್ವಾರಶ್ಚತ್ವಾರೋ ಮರ್ತ್ಯಾನಾಮಹನೀ ಉಭೇ ।
ಪಕ್ಷಃ ಪಂಚದಶಾಹಾನಿ ಶುಕ್ಲಃ ಕೃಷ್ಣಶ್ಚ ಮಾನದ ।

ತಯೋಸ್ಸಮುಚ್ಚಯೋ ಮಾಸಃ ಪಿತೄಣಾಂ ತದಹರ್ನಿಶಂ ।
ದ್ವೌ ತಾವೃತುಃ ಷಡಯನಂ ದಕ್ಷಿಣಂ ಚೋತ್ತರಂ ದಿವಿ ।

ಅಯನೇ ಚಾಹನೀ ಪ್ರಾದುರ್ವತ್ಸರೋ ದ್ವಾದಶಸ್ಸ್ಮೃತಃ ।
ಸಂವತ್ಸರಶತಂ ನೄಣಾಂ ಪರಮಾಯುರ್ನಿರೂಪಿತಂ ॥

ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।
ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ॥

ಸಂವತ್ಸರಃ ಪರಿವತ್ಸರ ಇಡಾವತ್ಸರ ಏವ ಚ ।
ಅನುವತ್ಸರೋ ವತ್ಸರಶ್ಚ ವಿದುರೈವಂ ಪ್ರಭಾಷ್ಯತೇ ॥

ಯಃ ಸೃಜ್ಯಶಕ್ತಿಮುರುಧೋಚ್ಛ್ವಸಯನ್ ಸ್ವಶಕ್ತ್ಯಾ
ಪುಂಸೋಽಭ್ರಮಾಯ ದಿವಿ ಧಾವತಿ ಭೂತಭೇದಃ ।
ಕಾಲಾಖ್ಯಯಾ ಗುಣಮಯಂ ಕ್ರತುಭಿರ್ವಿತನ್ವಂ
ಸ್ತಸ್ಮೈ ಬಲಂ ಹರತ ವತ್ಸರಪಂಚಕಾಯ ॥

॥ ವಿದುರ ಉವಾಚ ॥

ಪಿತೃದೇವಮನುಷ್ಯಾಣಾಮಾಯುಃ ಪರಮಿದಂ ಸ್ಮೃತಂ ।
ಪರೇಷಾಂ ಗತಿಮಾಚಕ್ಷ್ವ ಯೇ ಸ್ಯುಃ ಕಲ್ಪಾದ್ಬಹಿರ್ವಿದಃ ॥
ಭಗವಾನ್ ವೇದ ಕಾಲಸ್ಯ ಗತಿಂ ಭಗವತೋ ನನು ।
ವಿಶ್ವಂ ವಿಚಕ್ಷತೇ ಧೀರಾ ಯೋಗರಾದ್ಧೇನ ಚಕ್ಷುಷಾ ॥

॥ ಮೈತ್ರೇಯ ಉವಾಚ ॥

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಂ ।
ದಿವ್ಯೈರ್ದ್ವಾದಶಭಿರ್ವರ್ಷೈಃ ಸಾವಧಾನಂ ನಿರೂಪಿತಂ ॥

ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾಕ್ರಮಂ ।
ಸಂಖ್ಯಾ ತಾನಿ ಸಹಸ್ರಾಣಿ ದ್ವಿಗುಣಾನಿ ಶತಾನಿ ಚ ॥

ಸಂಧ್ಯಾಂಶಯೋರಂತರೇಣ ಯಃ ಕಾಲಃ ಶತಸಂಖ್ಯಯೋಃ ।
ತಮೇವಾಹುರ್ಯುಗಂ ತಜ್ಜ್ಞಾ ಯತ್ರ ಧರ್ಮೋ ವಿಧೀಯತೇ ॥

ಧರ್ಮಶ್ಚತುಷ್ಪಾನ್ಮನುಜಾನ್ ಕೃತೇ ಸಮನುವರ್ತತೇ ।
ಸ ಏವಾನ್ಯೇಷ್ವಧರ್ಮೇಣ ವ್ಯೇತಿ ಪಾದೇನ ವರ್ಧತಾ ॥

ತ್ರಿಲೋಕ್ಯಾ ಯುಗಸಾಹಸ್ರಂ ಬಹಿರಾಬ್ರಹ್ಮಣೋ ದಿನಂ ।
ತಾವತ್ಯೇವ ನಿಶಾ ತಾತ ಯನ್ನಿಮೀಲತಿ ವಿಶ್ವಸೃಕ್ ॥

ನಿಶಾವಸಾನ ಆರಬ್ಧೋ ಲೋಕಕಲ್ಪೋಽನುವರ್ತತೇ ।
ಯಾವದ್ದಿನಂ ಭಗವತೋ ಮನೂನ್ಭುಂಜಂಶ್ಚತುರ್ದಶ ॥

ಸ್ವಂ ಸ್ವಂ ಕಾಲಂ ಮನುರ್ಭುಂಕ್ತೇ ಸಾಧಿಕಾಂ ಹ್ಯೇಕಸಪ್ತತಿಂ ।
ಮನ್ವಂತರೇಷು ಮನವಸ್ತದ್ವಂಶ್ಯಾ ಋಷಯಃ ಸುರಾಃ ॥

ಭವಂತಿ ಚೈವ ಯುಗಪತ್ಸುರೇಶಾಶ್ಚಾನು ಯೇ ಚ ತಾನ್ ।
ಏಷ ದೈನಂದಿನಃ ಸರ್ಗೋ ಬ್ರಾಹ್ಮಸ್ತ್ರೈಲೋಕ್ಯವರ್ತನಃ ॥

ತಿರ್ಯಙ್ನೃಪಿತೃದೇವಾನಾಂ ಸಂಭವೋ ಯತ್ರ ಕರ್ಮಭಿಃ ।
ಮನ್ವಂತರೇಷು ಭಗವಾನ್ ಬಿಭ್ರತ್ಸತ್ತ್ವಂ ಸ್ವಮೂರ್ತಿಭಿಃ ॥

ಮನ್ವಾದಿಭಿರಿದಂ ವಿಶ್ವಮವತ್ಯುದಿತಪೌರುಷಃ ।
ತಮೋಮಾತ್ರಾಮುಪಾದಾಯ ಪ್ರತಿಸಂರುದ್ಧವಿಕ್ರಮಃ ॥

ಕಾಲೇನಾನುಗತಾಶೇಷ ಆಸ್ತೇ ತೂಷ್ಣೀಂ ದಿನಾತ್ಯಯೇ ।
ತಮೇವಾನ್ವಪಿಧೀಯಂತೇ ಲೋಕಾ ಭೂರಾದಯಸ್ತ್ರಯಃ ॥

ನಿಶಾಯಾಮನುವೃತ್ತಾಯಾಂ ನಿರ್ಮುಕ್ತಶಶಿಭಾಸ್ಕರಂ ।
ತ್ರಿಲೋಕ್ಯಾಂ ದಹ್ಯಮಾನಾಯಾಂ ಶಕ್ತ್ಯಾ ಸಂಕರ್ಷಣಾಗ್ನಿನಾ ॥

ಯಾಂತ್ಯೂಷ್ಮಣಾ ಮಹರ್ಲೋಕಾಜ್ಜನಂ ಭೃಗ್ವಾದಯೋಽರ್ದಿತಾಃ ।
ತಾವತ್ತ್ರಿಭುವನಂ ಸದ್ಯಃ ಕಲ್ಪಾಂತೈಧಿತಸಿಂಧವಃ ॥

ಪ್ಲಾವಯಂತ್ಯುತ್ಕಟಾಟೋಪಚಂಡವಾತೇರಿತೋರ್ಮಯಃ ।
ಅಂತಃ ಸ ತಸ್ಮಿನ್ ಸಲಿಲ ಆಸ್ತೇಽನಂತಾಸನೋ ಹರಿಃ ॥

ಯೋಗನಿದ್ರಾನಿಮೀಲಾಕ್ಷಃ ಸ್ತೂಯಮಾನೋ ಜನಾಲಯೈಃ ।
ಏವಂ ವಿಧೈರಹೋರಾತ್ರೈಃ ಕಾಲಗತ್ಯೋಪಲಕ್ಷಿತೈಃ ॥

ಅಪಕ್ಷಿತಮಿವಾಸ್ಯಾಪಿ ಪರಮಾಯುರ್ವಯಶ್ಶತಂ ।
ಯದರ್ಧಮಾಯುಷಸ್ತಸ್ಯ ಪರಾರ್ಧಮಭಿಧೀಯತೇ ॥

ಪೂರ್ವಃ ಪರಾರ್ಧೋಽಪಕ್ರಾಂತೋ ಹ್ಯಪರೋಽದ್ಯ ಪ್ರವರ್ತತೇ ।
ಪೂರ್ವಸ್ಯಾದೌ ಪರಾರ್ಧಸ್ಯ ಬ್ರಾಹ್ಮೋ ನಾಮಮಹಾನಭೂತ್ ॥

ಕಲ್ಪೋ ಯತ್ರಾಭವದ್ಬ್ರಹ್ಮಾ ಶಬ್ದಬ್ರಹ್ಮೇತಿ ಯಂ ವಿದುಃ ।
ತಸ್ಯೈವ ಚಾಂತೇ ಕಲ್ಪೋಽಭೂದ್ಯಂ ಪಾದ್ಮಮಭಿಚಕ್ಷತೇ ॥

ಯದ್ಧರೇರ್ನಾಭಿಸರಸ ಆಸೀಲ್ಲೋಕಸರೋರುಹಂ ।
ಅಯಂ ತು ಕಥಿತಃ ಕಲ್ಪೋ ದ್ವಿತೀಯಸ್ಯಾಪಿ ಭಾರತ ॥

ವಾರಾಹ ಇತಿ ವಿಖ್ಯಾತೋ ಯತ್ರಾಸೀತ್ಸೂಕರೋ ಹರಿಃ ।
ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಚರ್ಯತೇ ॥

ಅವ್ಯಾಕೃತಸ್ಯಾನಂತಸ್ಯ ಅನಾದೇರ್ಜಗದಾತ್ಮನಃ ।
ಕಾಲೋಽಯಂ ಪರಮಾಣ್ವಾದಿರ್ದ್ವಿಪರಾರ್ಧಾಂತ ಈಶ್ವರಃ ॥

ನೈವೇಶಿತುಂ ಪ್ರಭುರ್ಭೂಮ್ನ ಈಶ್ವರೋ ಧಾಮ ಮಾನಿನಾಂ ।
ವಿಕಾರೈಃ ಸಹಿತೋ ಯುಕ್ತೈರ್ವಿಶೇಷಾದಿಭಿರಾವೃತಃ ॥

ಆಂಡಕೋಶೋ ಬಹಿರಯಂ ಪಂಚಾಶತ್ಕೋಟಿವಿಸ್ತೃತಃ ।
ದಶೋತ್ತರಾಧಿಕೈರ್ಯತ್ರ ಪ್ರವಿಷ್ಟಃ ಪರಮಾಣುವತ್ ॥

ಲಕ್ಷ್ಯತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ ।
ತದಾಹುರಕ್ಷರಂ ಬ್ರಹ್ಮ ಸರ್ವಕಾರಣಕಾರಣಂ ॥

ವಿಷ್ಣೋರ್ಧಾಮ ಪರಂ ಸಾಕ್ಷಾತ್ಪುರುಷಸ್ಯ ಮಹಾತ್ಮನಃ ।
ಇತಿ ತೇ ವರ್ಣಿತಃ ಕ್ಷತ್ತಃ ಕಾಲಾಖ್ಯಃ ಪರಮಾತ್ಮನಃ ॥

ಮಹಿಮಾ ವೇದಗರ್ಭೋಽಥ ಯಥಾಸ್ರಾಕ್ಷೀನ್ನಿಬೋಧ ಮೇ ।

ಕಾಲದ ಪ್ರಮಾಣವು ಎರಡು ವಿಧ. ಸೂಕ್ಷ್ಮ ಮತ್ತು ಸ್ಥೂಲ- ಅತ್ಯಂತ ಸೂಕ್ಷ್ಮವಾದುದಕ್ಕೆ ಪರಮಾಣುವೆಂದೂ, ಸ್ಥೂಲವಾದುದಕ್ಕೆ ಪರಮಮಹತ್ತೆಂದೂ ವ್ಯವಹಾರವಿರುತ್ತದೆ.

ಕಾಲಪ್ರಮಾಣದ ನಿಷ್ಕರ್ಷವು ಸೂರ್ಯನ ಗತಿಯನ್ನನುಸರಿಸುತ್ತದೆ. ಇದರ ವಿಭಾಗವು ಈರೀತಿ ಇರುತ್ತದೆ.

೧ ಅಣು—ಭಾಗಿಸಲಸಾಧ್ಯವಾದ ಬಹು ಸಣ್ಣ ವಸ್ತುವು

| | | |
|---|---|---|
| ೨ ಪರಮಾಣುಗಳು | = | ೧ ದ್ವ್ಯಣುಕ |
| ೩ ,, | = | ೧ ತ್ರಸರೇಣು |
| ೩ ತ್ರಸರೇಣುಗಳು | = | ೧ ತ್ರುಟಿ |
| ೧೦೦ ತ್ರುಟಿಗಳು | = | ೧ ವೇಧ |
| ೩ ವೇಧಗಳು | = | ೧ ಲವ |
| ೩ ಲವಗಳು | = | ೧ ನಿಮೇಷ |
| ೩ ನಿಮೇಷ | = | ೧ ಕ್ಷಣ |
| ೫ ಕ್ಷಣಗಳು | = | ೧ ಕಾಷ್ಠ |
| ೧೫ ಕಾಷ್ಠಗಳು | = | ೧ ಲಘು |
| ೧೫ ಲಘುಗಳು | = | ೧ ನಾಡಿಕಾ |
| ೨ ನಾಡಿಕೆಗಳು | = | ೧ ಮುಹೂರ್ತ |
| ೬ ಅಥವಾ ೭ ನಾಡಿಕೆಗಳು | = | ೧ ಯಾಮ ಅಥವ ಪ್ರಹರ |
| ೪ ಯಾಮಗಳು | = | ೧ ಅಹೋರಾತ್ರ |
| ೧೫ ಅಹೋರಾತ್ರಗಳು | = | ೧ ಪಕ್ಷ |
| ೧ ಶುಕ್ಲ+೧ ಕೃಷ್ಣಪಕ್ಷ | = | ೧ ಮಾಸ |
| ೨ ಮಾಸಗಳು | = | ೧ ಋತು |
| ೬ ,, | = | ೧ ಅಯನ |
| ೨ ಅಯನಗಳು | = | ೧ ವತ್ಸರ |
| ೧೨ ಮಾಸಗಳು | = | ೧ ಸಂವತ್ಸರ |

(ವತ್ಸರ, ಸಂವತ್ಸರ, ಪರಿವತ್ಸರ, ಇಡಾವತ್ಸರ ಅನುವತ್ಸರ ಇತ್ಯಾದಿ ಪ್ರಭೇದಗಳು ಸೂರ್ಯ, ಚಂದ್ರ ಇತ್ಯಾದಿ ಗ್ರಹಗಳ ಗತ್ಯನುರೋಧವಾಗಿದೆ). ೧೦೦ ಸಂವತ್ಸರಗಳು ಮಾನವನ ಆಯುಸ್ಸಿನ ಪರಮಾವಧಿಯಾಗಿದೆ.

ಸತ್ಯ (ಕೃತ) ತ್ರೇತ, ದ್ವಾಪರ ಮತ್ತು ಕಲಿ—ಇವು ನಾಲ್ಕು ಯುಗಗಳ ಒಂದು ಚಕ್ರ. ಎಂದರೆ ಕೃತ ಮೊದಲಾದ ನಾಲ್ಕು ಯುಗಗಳು ಕಳೆದಮೇಲೆ ಮತ್ತೆ ಕೃತಯುಗವೇ ಪ್ರಾರಂಭವಾಗುವುದು. ಈ ಕ್ರಮವು ಒಂದಾಗುತ್ತಲೊಂದು ನಡೆದುಬರುತ್ತಿರುವುದು. ಇವುಗಳ ಸಂಧ್ಯಾ ಮತ್ತು ಸಂಧ್ಯಾಂಶಗಳೂ ಸೇರಿ ೧೨೦೦೦ ದೇವಮಾನದ ವರ್ಷಗಳಾಗುತ್ತವೆ.

ಯುಗದ ಪ್ರಾರಂಭಕ್ಕೆ ಸಂಧ್ಯೆಯೆಂದೂ ಯುಗದ ಕೊನೆಗೆ ಸಂಧ್ಯಾಂಶವೆಂದೂ ಹೆಸರು. ಇವು ಯುಗ ಪ್ರಮಾಣಗಳಲ್ಲಿ ಸೇರಿಲ್ಲ. ಒಟ್ಟು ಇವುಗಳೆಲ್ಲದರ ಪ್ರಮಾಣವು ಈ ರೀತಿಯಿದೆ.

| | | | |
|---|---|---|---|
| ಸತ್ಯಯುಗದ ಸಂಧ್ಯೆಯು | ದೇವಮಾನದ | ೪೦೦ | ವರ್ಷಗಳು |
| ಸತ್ಯಯುಗ | ,, | ೪೦೦೦ | ,, |
| ,, ಸಂಧ್ಯಾಂಶ | ,, | ೪೦೦ | ,, |
| ತ್ರೇತಾಯುಗದ ಸಂಧ್ಯಾ | ,, | ೩೦೦ | ,, |
| ತ್ರೇತಾಯುಗ | ,, | ೩೦೦೦ | ,, |
| ,, ಸಂಧ್ಯಾಂಶ | ,, | ೩೦೦ | ,, |
| ದ್ವಾಪರಯುಗದ ಸಂಧ್ಯಾ | ,, | ೨೦೦ | ,, |
| ದ್ವಾಪರಯುಗ | ,, | ೨೦೦೦ | ,, |
| ,, ಸಂಧ್ಯಾಂಶ | ,, | ೨೦೦ | ,, |
| ಕಲಿಯುಗದ ಸಂಧ್ಯಾ | ,, | ೧೦೦ | ,, |
| ಕಲಿಯುಗ | ,, | ೧೦೦೦ | ,, |
| ,, ಸಂಧ್ಯಾಂಶ | ,, | ೧೦೦ | ,, |

---

ನಾಲ್ಕು ಯುಗಗಳ ಒಟ್ಟು .... .... ದೇವಮಾನದ ೧೨೦೦೦ ವರ್ಷಗಳು.

ಯುಗದ ಸಂಧ್ಯಾ ಮತ್ತು ಸಂಧ್ಯಾಂಶಗಳ ನಡುವೆ ಇರತಕ್ಕ ಕಾಲದಲ್ಲಿ ಧರ್ಮವ್ಯವಹಾರವು ಸಿದ್ಧಿನವಾಗಿರುತ್ತದೆ.

| | | | |
|---|---|---|---|
| ಈ ಧರ್ಮಕ್ಕೆ | ಸತ್ಯಯುಗದಲ್ಲಿ | ೪ | ಪಾದಗಳೂ |
| ,, | ತ್ರೇತಾಯುಗದಲ್ಲಿ | ೩ | ,, |
| ,, | ದ್ವಾಪರದಲ್ಲಿ | ೨ | ,, |
| ,, | ಕಲಿಯಲ್ಲಿ | ೧ | ಪಾದವೂ ಇರುತ್ತವೆ. |

ಇಂತಹ ೧೦೦೦ ಯುಗಚಕ್ರವು ಬ್ರಹ್ಮನ ಒಂದು ದಿನವಾಗುತ್ತದೆ. ಇದಕ್ಕೆ ಕಲ್ಪವೆಂದೂ ಹೇಳಬಹುದು. ಎಂದರೆ, ೧೨೦೦೦×೧೦೦೦ = ೧,೨೦,೦೦,೦೦೦ ದೇವಮಾನದ ವರ್ಷಗಳು ಬ್ರಹ್ಮನ ಒಂದು ದಿನದ ಅವಧಿಯು. ಇಷ್ಟೇಕಾಲವು ಬ್ರಹ್ಮನ ರಾತ್ರಿಯು. ಎಂದರೆ, ಒಟ್ಟು ೨೪೦೦೦೦೦೦ ದೇವಮಾನದ ವರ್ಷಗಳು ಬ್ರಹ್ಮನ ಒಂದು ಅಹೋರಾತ್ರವು. ಈ ಒಂದು ದಿನದಲ್ಲಿ ೧೪ ಮನುಗಳು ತಮ್ಮ ಆಧಿಪತ್ಯವನ್ನು ನಡೆಸುತ್ತಾರೆ.

$$\frac{೧೦೦೦}{೧೪} = ೭೧\frac{೩}{೭}$$ = ಸುಮಾರು ೭೧ ಯುಗಚಕ್ರಗಳು.

೧ ಮನ್ವಂತರಕ್ಕೆ ಒಟ್ಟು $\frac{೧೨೦೦೦\times೧೦೦೦}{೧೪} = ೮೫೭೧೪೨\frac{೬}{೭}$ ದೇವಮಾನದ ವರ್ಷಗಳಾಗುತ್ತವೆ.

ಬ್ರಹ್ಮನ ಸೃಷ್ಟಿಯಲ್ಲಿ ಪ್ರಾಣಿಗಳೂ, ಮಾನವರೂ, ಪಿತೃಗಳೂ ಮತ್ತು ದೇವತೆಗಳೂ ಅವರವರ ಕರ್ಮಾನುಸಾರವಾಗಿ ಉತ್ಪನ್ನರಾಗುತ್ತಾರೆ

ಮನ್ವಂತರಗಳಲ್ಲಿ ಭಗವಂತನು ಸಾಕ್ಷಾತ್ತಾಗಿಯೂ ಮತ್ತು ಮನ್ವಾದಿಗಳ ಮೂಲಕ ಪ್ರತಿನಿಧಿರೂಪದಲ್ಲಿಯೂ ಸಹ ಈ ವಿಶ್ವವನ್ನು ತನ್ನ ಸತ್ತ್ವದಿಂದ ರಕ್ಷಿಸುತ್ತಾನೆ. ಪ್ರಲಯಕಾಲದಲ್ಲಿ ತನ್ನ ಶಕ್ತಿಯನ್ನು ಸಂಗ್ರಹ ಮಾಡಿಕೊಳ್ಳುತ್ತಾನೆ. ಸಂಕರ್ಷಣನ ಮುಖಾಗ್ನಿಯಿಂದ ತ್ರಿಲೋಕವೂ ದಗ್ಧವಾಗುತ್ತದೆ. ಲೋಕವೆಲ್ಲವೂ ಉದಕದಿಂದ ವ್ಯಾಪ್ತವಾಗುತ್ತದೆ. ಆ ಉದಕದಲ್ಲಿ ಅನಂತನ ವಲಯದ ಮೇಲೆ ಪವಡಿಸಿ ಹರಿಯು ಧ್ಯಾನಾತ್ಮಕನಾಗಿರುತ್ತಾನೆ.

ಬ್ರಹ್ಮನ ಆಯುಸ್ಸಿನ ಪರಿಮಿತಿಯೂ ಸಹ ೧೦೦ ವರ್ಷಗಳು. ಈ ಆಯುಸ್ಸಿನಲ್ಲಿ ಅರ್ಧಭಾಗಕ್ಕೆ ಪರಾರ್ಧವೆಂದು ಪ್ರಸಿದ್ಧಿಯು. ಈಗ ಮೊದಲನೆಯ ಪರಾರ್ಧವು ಕಳೆದು ಎರಡನೆಯ ಪರಾರ್ಧವು ಆರಂಭವಾಗಿದೆ. ಬ್ರಹ್ಮನ ಪ್ರತಿಯೊಂದು ದಿನಕ್ಕೂ ಕಲ್ಪವೆಂದು ಹೆಸರು. ಈ ಮೊದಲನೆಯ ಪರಾರ್ಧದ ಆದಿಭಾಗಕ್ಕೆ ಬ್ರಹ್ಮಕಲ್ಪವೆಂದೂ, ಕೊನೆಯ ಭಾಗಕ್ಕೆ ಪದ್ಮಕಲ್ಪವೆಂದೂ ಹೆಸರು. ಈಗ ನಡೆಯುತ್ತಿರುವ ಎರಡನೆಯ ಪರಾರ್ಧದ ಆದಿಭಾಗಕ್ಕೆ ವರಾಹಕಲ್ಪವೆಂದು ಹೆಸರು. ಈ ಕಲ್ಪದಲ್ಲೇ ವರಾಹವತಾರವಾಗಿದ್ದಿತು.

ಬ್ರಹ್ಮನ ಈ ಎರಡು ಪರಾರ್ಧಗಳೂ ಒಟ್ಟಿಗೆ ಸೇರಿದರೆ ಭಗವಂತನಿಗೆ ಒಂದು ನಿಮೇಷಕಾಲಮಾತ್ರ. (ಕಣ್ಣು ಮಿಟುಕಿಸುವಷ್ಟು ಕಾಲ ಮಾತ್ರ). ಅವನು ಕಾಲದಿಂದ ಅಳೆಯಲ್ಪಡತಕ್ಕವನಲ್ಲ. ಕಾಲಾತೀತನು.

**ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಪದ್ಯತೇ ।**
**ಅವ್ಯಾಕೃತಸ್ಯಾನಂತಸ್ಯ ಅನಾದೇರ್ಜಗದಾತ್ಮನಃ ॥**

(ಶ್ರೀ.ಭಾ. ೩-೧೧-೩೮)

ವಿಷ್ಣುಪುರಾಣದಲ್ಲಿಯೂ ಕೃತಾದಿ ಯುಗಗಳ ಗಣನವು ಶ್ರೀಮದ್ಭಾಗವತದಲ್ಲಿ ವಿವರಿಸಿರುವಂತೆಯೇ ಇರುತ್ತದೆ. ಆದರೆ, ಮನ್ವಂತರಗಳ ಪರಿಮಾಣವು ಸ್ವಲ್ಪ ವಿಸ್ತೃತವಾಗಿ ತಿಳಿಸಲ್ಪಟ್ಟಿದೆ.

**ಚತುರ್ಯುಗಾನಾಂ ಸಂಖ್ಯಾತಾ ಸಾಧಿಕಾ ಹ್ಯೇಕಸಪ್ತತಿಃ ।** ನಾಲ್ಕು ಯುಗಗಳಲ್ಲೂ ಇರುವ ವರ್ಷಗಳ ಸಂಖ್ಯೆಗೆ ಎಪ್ಪತ್ತೊಂದು ಸಲದಷ್ಟು ಹೆಚ್ಚಾದ ಕಾಲವು ಈ ಮನ್ವಂತರದಲ್ಲಿರುತ್ತದೆ. ಅಲ್ಲದೆ ಇನ್ನು ಕೊಂಚ ಅಧಿಕ ಸಂಖ್ಯೆಯೂ ಇದರೊಂದಿಗೆ ಸೇರುತ್ತದೆ. ಇತರ ಪುರಾಣಗಳಲ್ಲೂ ಈ ಅಧಿಕ ಸಂಖ್ಯೆಯ ನಿರ್ದೇಶವಿರುತ್ತದೆ. ಆದರೆ, ಇದರ ಪ್ರಮಾಣವೆಷ್ಟೆಂದು ಎಲ್ಲಿಯೂ ಹೇಳಿಲ್ಲ.

ಮೇಲೆ ವಿವರಿಸಿರುವ ಯುಗ, ಮನ್ವಂತರ, ಕಲ್ಪ ಮೊದಲಾದ ಕಾಲದ ದೊಡ್ಡದೊಡ್ಡ ವಿಭಾಗಗಳ ವಿಷಯದಲ್ಲಿ ಋಗ್ವೇದದಲ್ಲಿ ಯಾವ ವಿವರಣೆಯೂ ಇರುವುದಿಲ್ಲ. ಆದರೆ (೧) ಜತೆ (೨) ಕೃತ, ತ್ರೇತಾ ಇತ್ಯಾದಿ ನಾಲ್ಕು ಕಾಲವಿಭಾಗಗಳಲ್ಲಿ ಒಂದು (೩) ಐದು ವರ್ಷಗಳ ಒಂದು ಕಾಲಪರಿಮಿತಿ (೪) ನೊಗ (೫) ಮಾನ ಅಥವಾ ಅಳತೆಯ ಸಾಧನ (೬) ಔಷಧಕ್ಕಾಗಿ ಉಪಯೋಗಿಸುವ ಒಂದು ವಿಧ ಸಸ್ಯ ಎಂಬ ಅರ್ಥಗಳಲ್ಲಿ ಈ ಶಬ್ದದ ಪ್ರಯೋಗವಿದ್ದಂತೆ ಕಂಡುಬರುತ್ತದೆ. ಉದಾಹರಣೆಗಾಗಿ—

**ಯದ್ವಶ್ಚಿತ್ರಂ ಯುಗೇಯುಗೇ ನವ್ಯಂ ಘೋಷಾದಮರ್ತ್ಯಂ ।**

(ಋ. ಸಂ. ೧-೧೩೯-೮)

**ಅಶ್ವೋ ನ ಕ್ರಂದಞ್ಜನಿಭಿಃ ಸಮಿಧ್ಯತೇ ವೈಶ್ವಾನರಃ ಕುಶಿಕೇಭಿರ್ಯುಗೇಯುಗೇ ।**

(ಋ. ಸಂ. ೩-೨೬-೩)

**ಯುಗೇಯುಗೇ ವಿದಥ್ಯಂ ಗೃಣದ್ಭ್ಯೋಽಗ್ನೇ ರಯಿಂ ಯಶಸಂ ಧೇಹಿ ನವ್ಯಸೀಂ ।**

(ಋ. ಸಂ. ೬-೮-೫)

**ತ್ವಾಂ ದೂತಮಗ್ನೇ ಅಮೃತಂ ಯುಗೇಯುಗೇ ಹವ್ಯವಾಹಂ ದಧಿರೇ ಪಾಯುಮೀಡ್ಯಂ ।**

(ಋ. ಸಂ. ೬-೧೫-೮)

**ಅಸೋ ಯಥಾ ನಃ ಶವಸಾ ಚಕಾನೋ ಯುಗೇಯುಗೇ ವಯಸಾ ಚೇಕಿತಾನಃ ।**

(ಋ. ಸಂ. ೬-೩೬-೫)

**ಧ್ರುವಾ ಏವ ವಃ ಪಿತರೋ ಯುಗೇಯುಗೇ ಕ್ಷೇಮಕಾಮಾಸಃ ಸದಸೋ ನ ಯುಂಜತೇ ।**

(ಋ. ಸಂ. ೧೦-೯೪-೧೨)

ಈ ಋಕ್ಕುಗಳಲ್ಲಿರುವ **ಯುಗೇಯುಗೇ** ಎಂಬ ಶಬ್ದಕ್ಕೆ ಭಾಷ್ಯಕಾರರು **ಪ್ರತಿದಿನಂ, ಕಾಲೇಕಾಲೇ, ಸರ್ವೇಷು ಯುಗೇಷು**—ಪ್ರತಿದಿನದಲ್ಲಿ, ಪ್ರತಿಕಾಲದಲ್ಲಿ, ಸಮಸ್ತಯುಗಗಳಲ್ಲಿ ಎಂದು ಅರ್ಥವಿವರಣೆಮಾಡಿದಾರೆ.

**ಏತದ್ವಚೋ ಜರಿತರ್ಮಾಪಿ ಮೃಷ್ಠಾ ಆ ಯತ್ತೇ ಘೋಷಾನುತ್ತರಾ ಯುಗಾನಿ ।**

(ಋ. ಸಂ. ೩-೩೩-೮)

**ಆ ಘಾ ತಾ ಗಚ್ಛಾನುತ್ತರಾ ಯುಗಾನಿ ಯತ್ರ ಜಾಮಯಃ ಕೃಣವನ್ನಜಾಮಿ ।**

(ಋ. ಸಂ. ೧೦-೧೦-೧೦)

ಎಂಬ ಋಕ್ಕುಗಳಲ್ಲಿ **ಉತ್ತರಾ ಯುಗಾನಿ** ಎಂಬ ಶಬ್ದಗಳಿಗೆ ಮುಂದಿನ ಅಥವಾ ಮುಂದೆ ಬರುವ (Future)ಕಾಲಗಳು ಎಂದರ್ಥವಿರುವುದು,

**ಉಕ್ಥೇಷು ಶಸ್ಯಮಾನೇಷು ಯಃ ಪಶ್ಯಾದುತ್ತರೇ ಯುಗೇ ।**

(ಋ. ಸಂ. ೧೦-೭೨-೧)

ಎಂಬ ಋಕ್ಕಿನಲ್ಲಿರುವ **ಉತ್ತರೇ ಯುಗೇ** ಎಂಬ ಶಬ್ದಗಳಿಗೆ ಮುಂದಿನ ಯುಗಗಳಲ್ಲಿ ಎಂದರೆ ಹಿಂದಿನ ಯುಗವು ಕಳೆದು ಹೋದಮೇಲೆ ಅನಂತರ ಬರುವ ಮುಂದಿನ ಯುಗ ಅಥವಾ ಕಾಲದಲ್ಲಿ ಎಂದರ್ಥವು.

**ಪುರೂಣಿ ರತ್ನಾ ದಧತೌ ನ್ಯಸ್ಮೇ ಅನು ಪೂರ್ವಾಣಿ ಚಖ್ಯಥುರ್ಯುಗಾನಿ ।**

(ಋ. ಸಂ. ೭-೭೦-೪)

ಎಂಬ ಋಕ್ಕಿನಲ್ಲಿರುವ **ಪೂರ್ವಾಣಿ** ಯುಗಾನಿ ಎಂಬ ಶಬ್ದಗಳಿಗೆ ಹಿಂದೆ ಕಳೆದು ಹೋದ ಯುಗಗಳಲ್ಲಿ ಅಥವಾ ಕಾಲಗಳಲ್ಲಿ ಎಂದರ್ಥವು.

**ನಚ್ಯಂತೇ ವಾಂ ಕಕುಹಾ ಅಪ್ಸು ಜಾತಾ ಯುಗಾ ಜೂರ್ಣೇವ ವರುಣಸ್ಯ ಭೂರೇಃ ।**

(ಋ. ಸಂ. ೧-೧೮೪-೩)

ಎಂಬ ಋಕ್ಕಿನಲ್ಲಿರುವ **ಯುಗಾ** **ಜೂರ್ಣೇ** ಎಂಬ ಶಬ್ದಗಳಿಗೆ ಹಿಂದಿನ ಅಥವಾ ಕಳೆದು ಹೋದ ಕಾಲ ಎಂದರ್ಥವು.

**ಪ್ರಮಿನತೀ ಮನುಷ್ಯಾ ಯುಗಾನಿ ಯೋಷಾ ಜಾರಸ್ಯ ಚಕ್ಷಸಾ ವಿ ಭಾತಿ ।**

(ಋ. ಸಂ. ೧-೯೨-೧೧)

**ತದೂಚುಷೇ ಮಾನುಷೇಮಾ ಯುಗಾನಿ ಕೀರ್ತೇನ್ಯಂ ಮಘವಾ ನಾಮ ಬಿಭ್ರತ್ ।**

(ಋ. ಸ. ೧-೧೦೩-೪)

**ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ ಭದ್ರಾಯ ಭದ್ರಂ ।**

(ಋ. ಸಂ. ೧-೧೧೫-೨)

**ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ ।**

(ಋ. ಸಂ. ೧-೧೨೪-೨)

ಎಂಬ ಋಕ್ಕುಗಳಲ್ಲಿಯೂ ಮತ್ತು ಋ. ಸಂ. ೧-೧೪೪-೪ ; ೨-೨-೨ ; ೫-೫೨-೪ ; ೬-೧೬-೨೩ ; ೭-೯-೪ ; ೮-೪೬-೧೨ ; ೮-೫೧-೯ ; ೯-೧೨-೭ ; ೧೦-೨೭-೧೯ ; ೧೦-೧೪೦-೬ ; ಎಂಬ ಋಕ್ಕುಗಳಲ್ಲಿಯೂ ಇರುವ ಯುಗಾನಿ ಎಂಬ ಶಬ್ದಗಳಿಗೆ ವಿಶೇಷಣವಾಗಿ ಮನುಷ್ಯಶಬ್ದವಿರುವುದರಿಂದ ಈ ಋಕ್ಕುಗಳಲ್ಲೆಲ್ಲಾ ಮನುಷ್ಯರ ಜೀವಿತ ಕಾಲವು ಎಂಬರ್ಥವಿರುವುದು. ಎಂದರೆ ಮನುಷ್ಯರ ಆಯುಃಪರಿಮಿತಿಯನ್ನು **ಮಾನುಷಾ ಯುಗಾನಿ** ಎಂಬ ಶಬ್ದಗಳಿಂದ ನಿರ್ದೇಶಿಸಲಾಗಿದೆ.

ಋ. ಸಂ. ೫-೭೩-೩ ಎಂಬ ಋಕ್ಕಿನಲ್ಲಿ **ನಾಹುಷಾ ಯುಗಾ** ಎಂಬ ಶಬ್ದಗಳಿಗೂ ಮಾನವನ ಜೀವಿತಕಾಲವೆಂದೇ ಅರ್ಥವು. ಆದರೆ—

**ದೀರ್ಘತಮಾ ಮಾಮತೇಯೋ ಜುಜುರ್ವಾನ್ ದಶಮೇ ಯುಗೇ ।**

(ಋ. ಸಂ. ೧-೧೫೮-೬)

ಎಂಬ ಋಕ್ಕಿಗೆ ಸಾಯಣರು ಅರ್ಥವಿವರಣೆಮಾಡುವಾಗ–ಮಮತಾ ಎಂಬ ಸ್ತ್ರೀಯ ಪುತ್ರನಾದ ದೀರ್ಘತಮಾಃ ಎಂಬ ಋಷಿಯು ಹತ್ತು ಯುಗಗಳ ಪರ್ಯಂತರ (**ದಶಯುಗಪರ್ಯಂತಂ**) ಅಶ್ವಿನೀದೇವತೆಗಳ ಅನುಗ್ರಹದಿಂದ ತನ್ನ ಪತ್ನೀಪುತ್ರಾದಿಗಳೊಡನೆ ಸುಖವಾಗಿ ಜೀವಿಸುತ್ತಿದ್ದು ಅನಂತರ ಎಂದರೆ ಹತ್ತು ಯುಗಗಳು ಕಳೆದಮೇಲೆ ಜೀರ್ಣವಾದ ಶರೀರವುಳ್ಳವನಾಗಿ ವೃದ್ಧಾಪ್ಯವನ್ನು ಹೊಂದಿದನು ಎಂಬಭಿಪ್ರಾಯವು ಉಕ್ತವಾಗಿದೆ. ಇಲ್ಲಿ ಹತ್ತು ಯುಗಗಳ ಕಾಲ ಮನುಷ್ಯನು ಜೀವಿಸುವುದು ಸಾಧ್ಯವಲ್ಲವಾದ್ದರಿಂದ ಈ ಋಕ್ಕಿನಲ್ಲಿರುವ ಯುಗಶಬ್ದಕ್ಕೆ ಐದು ಅಥವಾ ಹತ್ತು ವರ್ಷಗಳ ಒಂದು ನಿರ್ದಿಷ್ಟಕಾಲವು ಸೂಚಿತವಾಗಿರಬಹುದೆಂದು ಕೆಲವು ಪಾಶ್ಚಾತ್ಯಪಂಡಿತರ ಅಭಿಪ್ರಾಯವಾಗಿದೆ. ಅದರಂತೆ ಹತ್ತು ಯುಗಪರ್ಯಂತರ ಎಂದರೆ ನೂರು ವರ್ಷಗಳ ಅನಂತರ ಮನುಷ್ಯನು ಅತಿ ವೃದ್ಧನಾಗಿ ಜೀರ್ಣಾವಯವಗಳನ್ನು ಹೊಂದಿರುವುದು ಸಹಜವಾಗಿದೆಯೆಂದು ಅವರ ವಾದವು. ಅದು ಹೇಗಾದರೂ ಇಲ್ಲಿ ಯುಗಶಬ್ದಕ್ಕೆ ಒಂದು ನಿರ್ದಿಷ್ಟವಾದ ಕಾಲವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಋಗ್ವೇದದ ಮತ್ತೊಂದು ಸೂಕ್ತದಲ್ಲಿ—

ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ।
(ಋ.ಸಂ. ೧೦-೯೭-೧)

ಎಂಬ ಋಕ್ಕಿನಲ್ಲಿ ಓಷಧಿವನಸ್ಪತಿಗಳು ಎಂದರೆ ಸಸ್ಯವರ್ಗವು ದೇವತೆಗಳ ಸೃಷ್ಟಿಗಿಂತ ಮೂರು ಯುಗಗಳ ಪೂರ್ವದಲ್ಲಿಯೇ ಸೃಷ್ಟಿಸಲ್ಪಟ್ಟಿತು ಎಂದು ಹೇಳಿದೆ. ಇಲ್ಲಿ ಯುಗಶಬ್ದಕ್ಕೆ ಅತ್ಯಂತ ದೊಡ್ಡ ಕಾಲವಿಭಾಗವೆಂಬ ಅರ್ಥವನ್ನು ಧಾರಾಳವಾಗಿ ಹೇಳಬಹುದು. ಏಕೆಂದರೆ ಸಸ್ಯವರ್ಗವೇ ಇತರ ಚಲಿಸುವ ಪ್ರಾಣಿಗಳಿಗೂ, ದೇವತೆಗಳಿಗೂ ಮನುಷ್ಯರಿಗೂ ಮುಖ್ಯವಾದ ಆಹಾರವಾಗಿರುವುದರಿಂದ, ದೇವತೆಗಳಿಗಿಂತ ಎಷ್ಟೋಕಾಲದ ಹಿಂದೆಯೇ ಸಸ್ಯವರ್ಗವು ಸೃಷ್ಟಿಯಾಯಿತೆಂದು ಹೇಳುವುದು ಸಮಂಜಸವಾಗಿದೆ. ಆಧುನಿಕವಿಜ್ಞಾನವೂ ಸಹ (modern science) ಇದನ್ನೇ ಸಮರ್ಥಿಸುತ್ತದೆ.

ನಾವು ಹಿಂದೆ ಹೇಳಿರುವ ಕ್ರಮದಂತೆ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕುಯುಗಗಳ ಹೆಸರುಗಳು ಋಗ್ವೇದದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಐತರೇಯ ಬ್ರಾಹ್ಮಣದಲ್ಲಿ ಒಂದು ಕಡೆ ಮಾತ್ರ,

ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ ।
ಉತ್ತಿಷ್ಠಂಸ್ತ್ರೇತಾ ಭವತಿ ಕೃತಂ ಸಂಪದ್ಯತೇ ಚರಂಶ್ಚರೈವೇತಿ ॥
(ಐ. ಬ್ರಾ. ೩೩-೧೫)

ಕಲಿ, ದ್ವಾಪರ, ತ್ರೇತಾ, ಕೃತ ಎಂಬ ನಾಲ್ಕುಯುಗಗಳ ಹೆಸರುಗಳು ಸೂಚಿತವಾಗಿವೆ. ಈ ನಾಲ್ಕು ಹೆಸರುಗಳನ್ನು ಪುರುಷನ ನಾಲ್ಕುವಿಧ ಅವಸ್ಥೆಗಳಿಗೆ ಹೋಲಿಸಿದೆ. ಪುರುಷನು ಮಲಗಿ ನಿದ್ರಿಸುತ್ತಿರುವಾಗ ಕಲಿ ಎಂಬ ಅವಸ್ಥೆಯಲ್ಲಿರುವನೆಂದೂ ಎಚ್ಚರವಾಗಿದ್ದಾಗ ದ್ವಾಪರನೆಂದೂ ಎದ್ದುನಿಂತಾಗ ತ್ರೇತಾ ಎಂದೂ ಸಂಚಾರಶೀಲನಾದಾಗ ಕೃತ ಎಂಬ ಅವಸ್ಥೆಯಲ್ಲಿರುವನೆಂದೂ ಆದ್ದರಿಂದ ಕಲಿ, ದ್ವಾಪರ, ತ್ರೇತಾ, ಕೃತ ಎಂಬ ಯುಗಗಳು ಕ್ರಮವಾಗಿ ಒಂದಕ್ಕಿಂತ ಮತ್ತೊಂದು ಶ್ರೇಷ್ಠವೆಂದೂ ಹೇಳಿದೆ. ಕೆಲವರು ಕಲಿ ಮೊದಲಾದ ಶಬ್ದಗಳಿಗೆ ಪಗಡೆಯಾಟದಲ್ಲಿ ಉಪಯೋಗಿಸುವ ದಾಳಗಳ ಚಲನವಲನಗಳೆಂದು ಅಭಿಪ್ರಾಯಪಡುತ್ತಾರೆ.

॥ ಸಂಹಿತಾಪಾಠಃ ॥

ಬ್ರಹ್ಮಣಸ್ಪತಿರೇತಾ ಸಂ ಕರ್ಮಾರ ಇವಾಧಮತ್ ।
ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ ॥ ೨ ॥

॥ ಪದಪಾಠಃ ॥

ತಿಃ । ಏತಾ । ಸಂ । ಕರ್ಮಾರಃಽಇವ । ಅಧಮತ್ ।
ಯುಗೇ । ಅಸತಃ । ಸತ್ । ಅಜಾಯತ ॥ ೨ ॥

॥ ಸಾಯಣಭಾಷ್ಯಂ ॥

ಬ್ರಹ್ಮಣೋಽನ್ನಸ್ಯ ಪತಿರದಿತಿರೇತ್ಯೈತಾನಿ ದೇವಾನಾಂ ಜನ್ಮಾನಿ ಕರ್ಮಾರ ಇವ ಸ ಯಥಾ ಭಸ್ತ್ರಯಾಗ್ನಿಮುಪಧಮಿತಿ ಪ್ರಜ್ವಲನಾರ್ಥಮೇವಂ ಸಮಧಮತ್ । ಉದಪಾದಯದಿತ್ಯರ್ಥಃ । ದೇವಾನಾಂ ಪೂರ್ವ್ಯೇ ಯುಗೇ । ಆದಿಸೃಷ್ಟಾವಿತ್ಯರ್ಥಃ । ತೇಷಾಮುಪಾದಾನಕಾರಣಾದಸತೋ ನಾಮರೂಪವರ್ಜಿತತ್ವೇನಾಸತ್ಸಮಾನಾದ್ಬ್ರಹ್ಮಣಃ ಸಕಾಶಾತ್ಸನ್ನಾಮರೂಪವಿಶಿಷ್ಟಂ ದೇವಾದಿಕಮಜಾಯತ । ಪ್ರಾದುರಭೂತ್ । ಅಸದ್ವಾ ಇದಮಗ್ರ ಆಸೀತ್ತತೋ ವೈ ಸದಜಾಯತ । ತೈ.ಉ. ೨-೭ । ಇತಿ ಹಿ ಶ್ರುತಿಃ । ನ ಸದಾತ್ಮಕಸ್ಯ ಪ್ರಪಂಚಸ್ಯಾಸತ್ಕಾರಣತ್ವಂ ಯುಕ್ತಮಿತಿ ವಾಚ್ಯಂ ಛಂದೋಗೈಃ ಕಥಮಸತಃ ಸಜ್ಜಾಯೇತೇತ್ಯಸತ್ಕಾರಣತ್ವಮಾಕ್ಷಿಪ್ಯ ಸತ್ತ್ವೇವ ಸೋಮ್ಯೇದಮಗ್ರ ಆಸೀದಿತ್ಯವಧಾರಿತತ್ವಾತ್ । ಛಾಂ.ಉ. ೬-೨-೨ । ತರ್ಹ್ಯಸತ್ಕಾರಣಪ್ರತಿಪಾದಕವಾಕ್ಯಾನಾಂ ಕಾ ಗತಿರಿತಿ ಚೇತ್ ತೇಷಾಮವ್ಯಾಕೃತತ್ವಾಭಿಪ್ರಾಯತ್ವಾತ್ ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ । ಶತ. ೧೪-೪-೨-೧೫ । ಇತಿ ಶ್ರುತೇಃ । ಯದ್ಯೇವಂ ತರ್ಹ್ಯದಿತೇಃ ಸಕಾಶಾತ್ಕಥಂ ದೇವಾದ್ಯುತ್ಪತ್ತಿಃ । ವಾಯೋರಗ್ನಿರಿತ್ಯಾದಿವತ್ ಅಧಿಷ್ಠಾನಸಕಾಶಾದುತ್ಪತ್ತೇಃ । ಯದ್ವಾ । ದೇವಾನಾಂ ಕಾರಣಭೂತಂ ಸದಸತೋ ಬ್ರಹ್ಮಣಃ ಸಕಾಶಾದುತ್ಪನ್ನಮಿತಿ ಯೋಜನಾದುಕ್ತನ್ಯಾಯೋಽಸ್ಮಿನ್ಪಕ್ಷೇಽಪಿ ಸಮಾನ ಏವ ॥

॥ ಪ್ರತಿಪದಾರ್ಥ ॥

**ಕರ್ಮಾರ ಇವ**—ಕಮ್ಮಾರನು ತನ್ನ ತಿದಿಯನ್ನು ಒತ್ತಿ ಅಗ್ನಿಯನ್ನು ವೃದ್ಧಿಪಡಿಸುವಂತೆ । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು (ಅನ್ನಕ್ಕೆ ಪತಿಯಾದ ಅದಿತಿಯು) । **ಏತಾ**—ಈ ದೇವತೆಗಳನ್ನು । **ಸಮಧಮತ್**—ಚೈತನ್ಯದಿಂದ ತುಂಬಿ ವೃದ್ಧಿಪಡಿಸಿದನು । **ದೇವಾನಾಂ**—ದೇವತೆಗಳು । **ಪೂರ್ವ್ಯೇ ಯುಗೇ**—ಉತ್ಪನ್ನವಾಗುವುದಕ್ಕೆ ಪೂರ್ವಭಾವಿಯಾದ ಕಾಲದಲ್ಲಿ । **ಅಸತಃ**—ನಾಮರೂಪವರ್ಜಿತವಾದ ಅಮೂರ್ತವಾದ ತತ್ತ್ವದಿಂದ **ಸತ್**—ನಾಮರೂಪಗಳಿಂದ ಕೂಡಿದ ದೇವಾದಿಗಳು । **ಅಜಾಯತ**—ಉತ್ಪನ್ನರಾದರು.

॥ ಭಾವಾರ್ಥ ॥

ಕಮ್ಮಾರನು ತನ್ನ ತಿದಿಯನ್ನು ಒತ್ತಿ ಅಗ್ನಿಯನ್ನು ವೃದ್ಧಿಪಡಿಸುವಂತೆ, ಬ್ರಹ್ಮಣಸ್ಪತಿಯು ಈ ದೇವತೆಗಳನ್ನು ಚೈತನ್ಯದಿಂದ ತುಂಬಿ ವೃದ್ಧಿಪಡಿಸಿದನು. ದೇವತೆಗಳು ಉತ್ಪನ್ನವಾಗುವುದಕ್ಕೆ ಪೂರ್ವಭಾವಿಯಾದ ಕಾಲದಲ್ಲಿ ನಾಮರೂಪರಹಿತವಾದ ಅಮೂರ್ತತತ್ತ್ವದಿಂದ, ನಾಮರೂಪಗಳಿಂದ ಕೂಡಿದ ದೇವಾದಿಗಳು ಉತ್ಪನ್ನರಾದರು

## English Translation

Brahmanaspati filled these (generations of the gods) with breath as a blacksmith (his bellows); in the first age of the gods the existent was born of the nonexistent.

॥ ವಿಶೇಷವಿಷಯಗಳು ॥

ಇಲ್ಲಿ ಬ್ರಹ್ಮಣಸ್ಪತಿ ಶಬ್ದಕ್ಕೆ ಎರಡು ವಿಧ ಅರ್ಥಗಳನ್ನು ಹೇಳಬಹುದು ಬ್ರಹ್ಮಣಸ್ಪತಿ ಎಂದರೆ ಅನ್ನಕ್ಕೆ ಪಾಲಕನಾದ ಪ್ರಜಾಪತಿಯು ಅಥವಾ ಸರ್ವೇಶ್ವರನು ಅಥವಾ ಅದಿತಿಯು. ಅದಿತಿಯೆಂದರೆ ಪ್ರಪಂಚವ್ಯಾಪಕ ಶಕ್ತಿಯೂ ಎಂದೂ ಅರ್ಥವಾಗುವುದು. ಈ ವಿಷಯವನ್ನು ನಾವು ಈ ಸೂಕ್ತದ ನಾಲ್ಕನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿಸ್ತಾರವಾಗಿ ವಿವರಿಸುತ್ತೇವೆ.

**ಬ್ರಹ್ಮಣಸ್ಪತಿಃ ಏತಾಃ ಕರ್ಮಾರ ಇವ ಅಧಮತ್**—ಕಬ್ಬಿಣದ ಕೆಲಸವನ್ನು ಮಾಡುವ ಕಮ್ಮಾರನು ಕಬ್ಬಿಣವನ್ನು ಕಾಸುವುದಕ್ಕಾಗಿ ಅಗ್ನಿಯನ್ನು (ಕೆಂಡವನ್ನು) ತನ್ನ ತಿದಿಯಿಂದ ಒತ್ತಿ ಹೆಚ್ಚಾಗಿ ಗಾಳಿಬರುವಂತೆ ಮಾಡಿ ಅಗ್ನಿಯನ್ನು ಪ್ರಕಾಶಿಸುವಂತೆ ಮಾಡುವಂತೆ ಸರ್ವೇಶ್ವರನು ದೇವತೆಗಳನ್ನು ತನ್ನ ಅವ್ಯಾಹತಶಕ್ತಿಯಿಂದ ತುಂಬಿ ಅವರನ್ನು ಚೈತನ್ಯಯುಕ್ತರಾಗುವಂತೆ ಮಾಡಿದನು. ಸಮಸ್ತವಿಧವಾದ ಶಕ್ತಿಗಳೂ ಸರ್ವೇಶ್ವರನಲ್ಲಿವೆ. ಆ ಶಕ್ತಿಗಳಲ್ಲಿ ಕೆಲವು ಭಾಗವನ್ನು ದೇವತೆಗಳಲ್ಲಿ ಸ್ಥಾಪಿಸಿ ಅವರು ಚೈತನ್ಯಸಹಿತರಾಗುವಂತೆ ಮಾಡಿದನೆಂದಭಿಪ್ರಾಯವು. ಪರಮಾತ್ಮನಲ್ಲಿರುವ ಚೈತನ್ಯವು ಒಂದು ಸಮುದ್ರವಿದ್ದಂತೆ. ಭೂಮಿಯ ಮೇಲೆ ಇರುವ ನದಿ, ಭಾವಿ, ಕೆರೆ ಮೊದಲಾದ ಸಮಸ್ತ ಜಲಾಶಯಗಳಿಗೂ ಸಮುದ್ರವು ಹೇಗೆ ಮೂಲಭೂತವೋ ಅದರಂತೆ ದೇವತೆಗಳಲ್ಲಿಯೂ ಇತರ ಪ್ರಾಣಿಗಳಲ್ಲಿಯೂ ಇರುವ ಸಮಸ್ತ ಚೈತನ್ಯವೂ ಆ ಪರಮಾತ್ಮನ ಅಥವಾ ಸರ್ವೇಶ್ವರನ ಚೈತನ್ಯದ ಒಂದು ಅಂಶವೆಂದೇ ತಿಳಿಯಬೇಕು. ಆದ್ದರಿಂದ ಸೃಷ್ಟಿಕಾಲದಲ್ಲಿ ಸರ್ವೇಶ್ವರನು ತನ್ನ ಅಂಶವಾದ ಚೈತನ್ಯದಲ್ಲಿ ಕೆಲವು ಭಾಗವನ್ನು ದೇವಾದಿಗಳಲ್ಲಿ ತುಂಬಿ ಅವರು ನಿಶ್ಚೇಷ್ಟಿತರಲ್ಲದ ಮತ್ತು ಸಂಚರಿಸಬಲ್ಲ, ಆಲೋಚನೆಮಾಡಬಲ್ಲ, ಕರ್ಮಶಕ್ತಿಯುಳ್ಳ ದೇವತೆಗಳನ್ನಾಗಿ ಮಾಡಿದನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ದೇವಾನಾಂ ಪೂರ್ವ್ಯೇ ಯುಗೇ ಅಸತಃ ಸತ್ ಅಜಾಯತ**-ಇಲ್ಲಿ **ದೇವಾನಾಂ ಪೂರ್ವ್ಯೇ ಯುಗೇ** ಎಂದರೆ ಪ್ರಜಾಪತಿಯು (ಅಥವಾ ಸರ್ವೇಶ್ವರನು) ದೇವತೆಗಳನ್ನು ಸೃಷ್ಟಿಸುವುದಕ್ಕಿಂತ ಪೂರ್ವಭಾವಿಯಾಗಿ, ಆದಿಸೃಷ್ಟಿಯಲ್ಲಿ ಎಂದರ್ಥವು. ಆ ಕಾಲದಲ್ಲಿ ಎಂದರೆ ಸೃಷ್ಟಿಗೆ ಪೂರ್ವದಲ್ಲಿ ನಾಮರೂಪಗಳಿಂದ ಸಹಿತವಾದ (ಎಂದರೆ, ಬೆಟ್ಟ, ನದಿ, ವೃಕ್ಷ, ಪ್ರಾಣಿಗಳು, ಮನುಷ್ಯರು ಇತ್ಯಾದಿ) ಯಾವ ವಸ್ತುಗಳೂ ಇರಲಿಲ್ಲ. ಅವ್ಯಕ್ತಸ್ವರೂಪವೊಂದೇ ಇದ್ದಿತು. ಎಂದರೆ ಪರಮಾತ್ಮನು ತಾನೇತಾನಾಗಿ ಎಲ್ಲೆಲ್ಲಿಯೂ ಇಂದ್ರಿಯಗಳಿಗೆ ಅಗೋಚರವಾದ ತನ್ನ ಅನಂತಶಕ್ತಿಯಿಂದ ಕೂಡಿ ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದನು. ಪರಮಾತ್ಮನ ಈ ವಿಧವಾದ ಸ್ವರೂಪಕ್ಕೆ **ಅವ್ಯಕ್ತ, ನಿರ್ಗುಣ, ಅಸತ್** ಮೊದಲಾದ ಹೆಸರುಗಳುಂಟು. ಅದನ್ನೇ ಇಲ್ಲಿ ಅಸತ್ ಎಂಬ ಶಬ್ದದಿಂದ ನಿರ್ದೇಶಿಸಲಾಗಿದೆ. ಈ ಅವ್ಯಕ್ತಸ್ವರೂಪದಿಂದ **ಸತ್** ಎಂದರೆ ಇಂದ್ರಿಯಗಳಿಗೆ ಗೋಚರವಾಗುವ ಪರ್ವತಾದಿಗಳು, ಪ್ರಾಣಿಗಳು ಮೊದಲಾದವು ಉತ್ಪನ್ನವಾದವು ಎಂದು ಸೃಷ್ಟಿಕ್ರಮವನ್ನು ಋಷಿಯು ಈ ವಾಕ್ಯದಲ್ಲಿ ವರ್ಣಿಸಿದಾನೆ. ಈ ವಿಷಯವನ್ನು ವಿಸ್ತಾರವಾಗಿ **ಅಸದ್ವಾ ಇದಮಗ್ರ ಆಸೀತ್। ತತೋ ವೈ ಸದಜಾಯತ** (ತೈ. ಉ. ೨-೭) ಎಂಬ ಶ್ರುತಿವಾಕ್ಯವೂ (ತೈತ್ತಿರೀಯ ಉಪನಿಷತ್) **ಕಥಮಸತಃ ಸಜ್ಜಾಯೇತ। ಸತ್ತ್ವೇವ ಸೋಮ್ಯೇದಮಗ್ರ ಆಸೀತ್** ಎಂಬ ಛಾಂದೋಗ್ಯ ಉಪನಿಷದ್ವಾಕ್ಯವೂ (ಛಾ. ಉ. ೬-೨-೨) **ತದ್ಧೇದಂ ತರ್ಹ್ಯವ್ಯಾಕೃತಮಾಸೀತ್** (ಶ. ಬ್ರಾ. ೧೪-೨-೨-೧೫) ಎಂಬ ಶತಪಥಬ್ರಾಹ್ಮಣವಾಕ್ಯವೂ, **ವಾಯೋರಗ್ನಿಃ** (ತೈ. ಆ. ೮-೧) ಎಂಬ ತೈತ್ತಿರೀಯಾರಣ್ಯಕವಾಕ್ಯವೂ **ನಾಸದಾಸೀನ್ನೋ ಸದಾಸೀತ್** ಎಂಬ ಋಗ್ವೇದ ವಾಕ್ಯವೂ (೧೦-೧೨೯-೧) ಸಮರ್ಥಿಸುತ್ತವೆ. ಋಗ್ವೇದದಲ್ಲಿರುವ ಈ ಕೊನೆಯ ವಾಕ್ಯವನ್ನು ನಾವು ಮುಂದೆ ಆ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸುತ್ತೇವೆ.

। ಸಂಹಿತಾಪಾಠಃ ।

ದೇವಾನಾಂ ಯುಗೇ ಪ್ರಥಮೇಽಸತಃ ಸದಜಾಯತ ।
ತದಾಶಾ ಅನ್ವಜಾಯಂತ ತದುತ್ತಾನಪದಸ್ಪರಿ ॥ ೩ ।

॥ ಪದಪಾಠಃ ॥

ದೇವಾನಾಂ । ಯುಗೇ । ಪ್ರಥಮೇ । ಅಸತಃ । ಸತ್ । ಅಜಾಯತ ।
ತತ್ । ಆಶಾಃ । ಅನು । ಅಜಾಯಂತ । ತತ್ । ಉತ್ತಾನಽಪದಃ । ಪರಿ ॥ ೩ ॥

॥ ಸಾಯಣಭಾಷ್ಯಂ ॥

ಪೂರ್ವಾರ್ಧಮುಕ್ತಂ । ತದನ್ವಾಶಾ ದಿಶೋಽಜಾಯಂತ । ತತ್ಪರಿ । ತದನ್ವಿತ್ಯರ್ಥಃ । ಉತ್ತಾನಪದಃ । ಉತ್ತಾನಮೂರ್ಧ್ವತಾನಂ ಪದ್ಯಂತೆ ಇತ್ಯುತ್ತಾನಪದೋ ವೃಕ್ಷಾಃ । ತೇಽಜಾಯಂತ । ಪ್ರಾದುರಭವನ್ ॥

। ಪ್ರತಿಪದಾರ್ಥ ।

**ದೇವಾನಾಂ**—ದೇವತೆಗಳು ಉತ್ಪನ್ನವಾಗುವ । **ಪ್ರಥಮೇ ಯುಗೇ**—ಆದಿಕಾಲವಾದ ಸೃಷ್ಟಿಸಮಯದಲ್ಲಿ । **ಅಸತಃ**—ನಾಮರೂಪರಹಿತವಾದ ತತ್ತ್ವದಿಂದ । **ಸತ್**-ನಾಮರೂಪವಿಶಿಷ್ಟವಾದ ಜಗತ್ತತ್ತ್ವವು । **ಅಜಾಯತ**-ಉತ್ಪನ್ನವಾಯಿತು । **ತತ್ ಅನು**—ಆದರನಂತರ । **ಆಶಾಃ**—ದಿಕ್ಕುಗಳು । **ಅಜಾಯಂತ**—ಉತ್ಪನ್ನವಾದವು । **ತತ್ಪರಿ**—ಅದಾದಮೇಲೆ । **ಉತ್ತಾನಪದಃ**—ಊರ್ಧ್ವಮುಖವಾಗಿ ಬೆಳೆಯುವ ವೃಕ್ಷಾದಿಗಳು ಉತ್ಪನ್ನವಾದವು.

। ಭಾವಾರ್ಥ ।

ದೇವತೆಗಳು ಉತ್ಪನ್ನವಾಗುವ ಆದಿಕಾಲದಲ್ಲಿ (ಸೃಷ್ಟಿಸಮಯದಲ್ಲಿ) ನಾಮರೂಪರಹಿತವಾದ ತತ್ತ್ವದಿಂದ ನಾಮರೂಪಗಳಿಂದ ಕೂಡಿದ ಜಗತ್ತತ್ತ್ವವು ಉತ್ಪನ್ನವಾಯಿತು. ಅದರನಂತರ ದಿಕ್ಕುಗಳು ಉತ್ಪನ್ನವಾದವು. ಅದಾದಮೇಲೆ ಊರ್ಧ್ವಮುಖವಾಗಿ ಬೆಳೆಯುವ ವೃಕ್ಷಾದಿಗಳು ಉತ್ಪನ್ನವಾದವು.

English Translation

In the first age of the gods the existent was born of the non-existent; after that the quarters (of the horizon) were born, and after them the upward-growing (trees).

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನ ಉತ್ತರಾರ್ಧವೇ ಈ ಋಕ್ಕಿನ ಪೂರ್ವಾರ್ಧವಾಗಿ ಪಠಿತವಾಗಿರುವುದು. ಆದರೆ **ಪೂರ್ವ್ಯೇ** ಎಂಬ ಶಬ್ದಕ್ಕೆ ಬದಲಾಗಿ ಪ್ರಥಮೇ ಎಂಬ ಶಬ್ದಪ್ರಯೋಗವಿರುವುದು. ಅರ್ಥದಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಸ್ವಲ್ಪ ವ್ಯತ್ಯಾಸವಿದ್ದೇ ಇದೆ. **ಪ್ರಥಮೇ ಯುಗೇ** ಎಂದರೆ ಸೃಷ್ಟಿಯು ಪ್ರಾರಂಭವಾಗುವಾಗ ಮೊಟ್ಟಮೊದಲನೇ ಯುಗಕ್ಕೆ ಪ್ರಥಮಯುಗವೆಂದು ಹೇಳಬಹುದು. ಪೂರ್ವಯುಗವೆಂದರೆ ಈಗ ನಡೆಯುತ್ತಿರುವ ಯುಗವಲ್ಲದ ಇದರ ಹಿಂದಿನ ಯುಗಗಳಲ್ಲಿ ಒಂದಾನೊಂದು ಎಂದು ಹೇಳಬೇಕಾಗುವುದು. ಏಕೆಂದರೆ ದೇವತೆಗಳ ಸೃಷ್ಟಿಗಿಂತ ಮೂರು ಯುಗಗಳ ಹಿಂದೆಯೇ ಸಸ್ಯವರ್ಗದ ಸೃಷ್ಟಿಯಾಯಿತೆಂದೂ **ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ** (ಋ. ಸಂ. ೧೦-೯೭-೧) ಎಂಬ ಋಕ್ಕಿನಲ್ಲಿ ಹೇಳಿದೆ ಮತ್ತು ಈ ಋಕ್ಕಿನ ಉತ್ತರಾರ್ಧದಲ್ಲಿಯೂ ತದುತ್ತಾನಪದಸ್ಪರಿ—ವೃಕ್ಷಾದಿಗಳು (ಓಷಧಿವನಸ್ಪತಿಗಳು ಅಥವಾ ಸಸ್ಯವರ್ಗವು) ಪ್ರಥಮಯುಗಾನಂತರ, ದೇವತೆಗಳ ಸೃಷ್ಟಿಗಿಂತ ಪೂರ್ವದಲ್ಲಿ ಉತ್ಪನ್ನವಾಯಿತೆಂದು ಹೇಳಿದೆ. ದೇವತೆಗಳಿಗೂ, ಮನುಷ್ಯರಿಗೂ ಇತರ ಎಲ್ಲಾವಿಧ ಪ್ರಾಣಿಗಳಿಗೂ ಸಸ್ಯವರ್ಗವೇ ಮುಖ್ಯವಾದ ಆಹಾರವಾಗಿರುವುದರಿಂದ ಪ್ರಾಣಿಗಳ ಸೃಷ್ಟಿಗಿಂತ ಪೂರ್ವಭಾವಿಯಾಗಿ ಸಸ್ಯವರ್ಗದ (ವೃಕ್ಷಾದಿಗಳ) ಸೃಷ್ಟಿಯಾಯಿತೆಂದು ಹೇಳಿರುವುದು ಯುಕ್ತಿಯುಕ್ತವೂ ಸಮಂಜಸವೂ ಆಗಿದೆ.

। ಸಂಹಿತಾಪಾಠಃ ॥

ಭೂರ್ಜಜ್ಞ ಉತ್ತಾನಪದೋ ಭುವ ಆಶಾ ಅಜಾಯಂತ ।
ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ ॥ ೪ ॥

॥ ಪದಪಾಠಃ ॥

ಭೂಃ । ಜಜ್ಞೇ । ಉತ್ತಾನಽಪದಃ । ಭುವಃ । ಆಶಾಃ । ಅಜಾಯಂತ ।
ಅದಿತೇಃ । ದಕ್ಷಃ । ಅಜಾಯತ । ದಕ್ಷಾತ್ । ಊಂ ಇತಿ । ಅದಿತಿಃ । ಪರಿ ॥ ೪ ॥

॥ ಸಾಯಣಭಾಷ್ಯಂ ॥

**ಭೂರುತ್ತಾನಪದೋ ವೃಕ್ಷಾಜ್ಜಜ್ಞೇ । ತಥಾ ಭುವಃ ಸಕಾಶಾದಾಶಾ ಅಜಾಯಂತ । ತಥಾದಿತೇಜಾಯತ । ಉತ್ಪನ್ನಃ । ದಕ್ಷಾದು ದಕ್ಷಾದಪ್ಯದಿತಿಃ ಪರ್ಯಜಾಯತ । ನ ಸ್ವೋತ್ಪನ್ನಂ ಸ್ವಸ್ಯೈವ ಕಾರಣಮಪಿ ಭವತೀತಿ ವಿಪ್ರತಿಷಿದ್ಧಮಿತಿ ವಾಚ್ಯಂ । ಯಾಸ್ಕಾಚಾರ್ಯ ಇದಮೇವ ವಾಕ್ಯಮುದಾಹೃತ್ಯ ವಿರೋಧಮಾಶಂಕ್ಯ ಪರ್ಯಹರತ್ । ತಥಾ ಹಿ । ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರೀತಿ ಚ ತತ್ಕಥಮುಪಪದ್ಯೇತ ಸಮಾನಜನ್ಮಾನೌ ಸ್ಯಾತಾಮಿತ್ಯಪಿ ವಾ ದೇವಧರ್ಮೇಣೇತರೇತರಜನ್ಮಾನೌ ಸ್ಯಾತಾಮಿತರೇತರಪ್ರಕೃತೀ । ನಿ. ೧೧-೨೩ । ಇತಿ ॥**

॥ ಪ್ರತಿಪದಾರ್ಥ ॥

**ಭೂಃ**— ಭೂಲೋಕವು | **ಉತ್ತಾನಪದಃ**— ವೃಕ್ಷದಿಂದ | **ಜಜ್ಞೇ**— ಉತ್ಪನ್ನವಾಯಿತು | **ಭುವಃ**— ಪೃಥ್ವಿಯಿಂದ | **ಆಶಾಃ**— ದಿಕ್ಕುಗಳು | **ಅಜಾಯಂತ**— ಉತ್ಪನ್ನವಾದವು | **ಅದಿತೇಃ**— ಅದಿತಿಯಿಂದ | **ದಕ್ಷಃ**— ದಕ್ಷನು | **ಅಜಾಯತ**— ಉತ್ಪನ್ನನಾದನು | **ದಕ್ಷಾದು**- ಪುನಃ ದಕ್ಷನಿಂದ | **ಅದಿತಿಃ**- ಅದಿತಿಯು | **ಪರ್ಯಜಾಯತ**- ಉತ್ಪನ್ನಳಾದಳು.

॥ ಭಾವಾರ್ಥ ॥

ವೃಕ್ಷದಿಂದ ಭೂಲೋಕವು ಉತ್ಪನ್ನವಾಯಿತು. ಪೃಥ್ವಿಯಿಂದ ದಿಕ್ಕುಗಳು ಉತ್ಪನ್ನವಾದವು. ಅದಿತಿಯಿಂದ ದಕ್ಷನು ಉತ್ಪನ್ನನಾದನು. ಪುನಃ ದಕ್ಷನಿಂದ ಅದಿತಿಯು ಉತ್ಪನ್ನಳಾದಳು.

English Translation

The earth was born from the upward-growing (tree) the quarters, were born from the earth ; Daksha was born from Aditi, and afterwards Aditi from Daksha

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ವೃಕ್ಷಗಳಿಂದ ಭೂಮಿಯೂ ಭೂಮಿಯಿಂದ ದಿಕ್ಕುಗಳೂ ಉತ್ಪನ್ನವಾದವೆಂದು ಹೇಳಿದೆ. ಈ ವಿಷಯದಲ್ಲಿ ಸ್ವಲ್ಪ ವಿವರಣೆಯು ಆವಶ್ಯಕವು. ಸಸ್ಯವರ್ಗವೂ ವೃಕ್ಷಾದಿಗಳೂ ಭೂಮಿಯಮೇಲೆ ಇರುವುದನ್ನು ಎಲ್ಲರೂ ಬಲ್ಲರು. ಅವುಗಳು ಉತ್ಪನ್ನವಾಗುವುದಕ್ಕೆ ಭೂಮಿಯು ಅವಶ್ಯಕವಾದ್ದರಿಂದ ವೃಕ್ಷಾದಿಗಳಿಗಿಂತಲೂ ಪೂರ್ವದಲ್ಲಿ ಭೂಮಿಯು ಇದ್ದಿರಬೇಕು. ಆದರೆ ಇಲ್ಲಿ ವೃಕ್ಷಗಳಿಂದ ಭೂಮಿಯು ಉತ್ಪನ್ನವಾಯಿತೆಂದು ಹೇಳಿರುವುದರಿಂದ ವೃಕ್ಷಗಳೇ ಮೊದಲಿದ್ದು ಅನಂತರ ಭೂಮಿಯ ಉತ್ಪತ್ತಿಯು ಆಯಿತೆಂದು ಹೇಳುವುದು ಪರಸ್ಪರ ವಿರೋಧವಲ್ಲವೇ ? ಎಂದರೆ ಭೂಮಿಗಿಂತಲೂ ಮೊದಲು ಉದಕವು ಸೃಷ್ಟಿಯಾಗಿ ಆ ಉದಕವು ಎಲ್ಲೆಲ್ಲಿಯೂ ಹರಡಿತ್ತು. **ಆಪೋ ವಾ ಇದಮಗ್ರೇ ಸಲಿಲಮಾಸೀತ್, ಆಪೋ ವಾ ಇದಂ ಸರ್ವಂ ವಿಶ್ವಾ ಭೂತಾನ್ಯಾಪಃ** ಎಂಬ ಶ್ರುತಿವಾಕ್ಯಗಳೂ **ಅಪ ಏವ ಸಸರ್ಜಾದೌ** ಎಂಬ ಸ್ಮೃತಿವಾಕ್ಯಗಳೂ ಸಹ ಪ್ರಜಾಪತಿಯು ಮೊದಲು ಎಂದರೆ ಭೂಮಿಯನ್ನು ಸೃಷ್ಟಿಸುವುದಕ್ಕಿಂತ ಮೊದಲು ಉದಕವನ್ನು ಸೃಷ್ಟಿಮಾಡಿದನು ಎಂಬ ವಿಷಯವನ್ನು ಪ್ರತಿಪಾದಿಸುತ್ತವೆ. ಇದಲ್ಲದೆ **ಅಗ್ನೇರಾಪಃ। ಅದ್ಭ್ಯಃ ಪೃಥಿವೀ** ಎಂಬ ಉಪನಿಷದ್ವಾಕ್ಯವೂ ಉದಕದಿಂದಲೇ ಭೂಮಿಯ ಉತ್ಪತ್ತಿಯಾಯಿತೆಂದು ಹೇಳಿದೆ. ಆದ್ದರಿಂದ ಭೂಮಿಗೆ ಉದಕವೇ ಮೂಲವು. ಉದಕದಲ್ಲಿ ಸಸ್ಯಾದಿಗಳ ಉತ್ಪತ್ತಿಯುಂಟೇ, ಎಂದರೆ ಉಂಟು ಎಂದು ಹೇಳಬಹುದು. ಸಮುದ್ರದ ಕೆಳಭಾಗದಲ್ಲಿ ನಾನಾವಿಧ ಸಸ್ಯವರ್ಗವಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅಥವಾ ಇಲ್ಲಿ ಉತ್ತಾನಪದಶಬ್ದಕ್ಕೆ ಮೇಲ್ಮುಖವಾಗಿ ಬೆಳೆಯುವ ಅಥವಾ ಹರಡುವ ಎಂದರ್ಥಮಾಡಬಹುದು. ಸಮುದ್ರದ ಉದಕರಾಶಿಯಲ್ಲಿ ಮೇಲ್ಮುಖವಾಗಿ ಬೆಳೆಯುವ ಒಂದುವಿಧ ಜೀವರಾಶಿಯಿಂದ (Coral) ಭೂಮಿಯಂತಿರುವ ಘಟ್ಟಿಭಾಗವು ಉತ್ಪನ್ನವಾಗುವುದು ಆಧುನಿಕ ವಿಜ್ಞಾನಿಗಳಿಗೆ ತಿಳಿದೇ ಇದೆ. ಅಥವಾ ರಸರೂಪವಾದ ಉದಕದಿಂದ ಘನೀಭೂತವಾದ ಪೃಥ್ವಿಯು ಉತ್ಪನ್ನವಾಯಿತು ಎಂಬರ್ಥವನ್ನು ಬೇಕಾದರೂ ಹೇಳಬಹುದು.

ಇನ್ನು ಭೂಮಿಯಿಂದ ದಿಕ್ಕುಗಳು ಉತ್ಪನ್ನವಾದವು ಎಂಬ ವಿಷಯದಲ್ಲಿ ಇಷ್ಟನ್ನು ಮಾತ್ರ ಹೇಳಬಹುದು— ಸೃಷ್ಟಿಕಾಲದಲ್ಲಿ ಎಂದರೆ ಭೂಮಿಯು ಸೃಷ್ಟಿಯಾಗುವುದಕ್ಕೆ ಮೊದಲು ಎಲ್ಲೆಲ್ಲಿಯೂ ನೀರೇ ಆವರಿಸಿ ಮೇಲೆ, ಕೆಳಗೆ, ಮೊದಲಾದ ಯಾವ ವಿಭಾಗಗಳೂ ಇಲ್ಲದೇ ಇರುವ ಸ್ಥಿತಿಯಲ್ಲಿ ದಿಕ್ಕುಗಳ ವ್ಯವಸ್ಥೆಯಿರುವುದು ಸಾಧ್ಯವಿಲ್ಲ. ಭೂಮಿಯು ಸೃಷ್ಟಿಯಾದನಂತರ ಪೂರ್ವಪಶ್ಚಿಮದಕ್ಷಿಣೋತ್ತರ ಊರ್ಧ್ವಾಧರ ಎಂಬ ದಿಕ್ಕುಗಳ ವ್ಯವಸ್ಥೆಯು ತಾನಾಗಿಯೇ ಆಯಿತು ಎಂದರೆ ಅದರ ಅವಶ್ಯಕತೆಯುಂಟಾಯಿತು. ಆದ್ದರಿಂದಲೇ ಇಲ್ಲಿ ಭೂಮಿಯಿಂದ ದಿಕ್ಕುಗಳು ಉತ್ಪನ್ನವಾಯಿತೆಂದು ಹೇಳಿದೆ

ಈ ಋಕ್ಕಿನ ಉತ್ತರಾರ್ಧದಲ್ಲಿರುವ—**ಅದಿತಿರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ** ಎಂಬಲ್ಲಿ ಎರಡು ವಾಕ್ಯಗಳಿವೆ. ಅದಿತಿಯಿಂದ ದಕ್ಷನು ಉತ್ಪನ್ನನಾದನು ಎಂಬುವದು ಮೊದಲನೆಯ ವಾಕ್ಯ ; ದಕ್ಷನಿಂದ ಅದಿತಿಯು ಉತ್ಪನ್ನಳಾದಳು ಎಂಬುವದು ಎರಡನೆಯ ವಾಕ್ಯ. ಈ ವಾಕ್ಯಗಳಲ್ಲಿರುವ ಅರ್ಥವು (ವಿಷಯವು) ಪರಸ್ಪರ ವಿರೋಧವಾಗಿಲ್ಲವೇ ? ಕಾರಣದಿಂದ ಕಾರ್ಯವಾಗುವುದೇನೋ ಸರಿ. ಆದರೆ ಕಾರ್ಯವು ಕಾರಣಕ್ಕೆ ಮೂಲವಾಗುವುದು ಹೇಗೆ ? ಈ ವಿರೋಧಾಭಾಸವು ಹೇಗೆ ಪರಿಹಾರವಾಗುವುದು ? ಎಂದರೆ, ಇದಕ್ಕೆ ಸಮಾಧಾನವನ್ನು ಎರಡು ಮೂರು ವಿಧವಾಗಿ ಹೇಳಬಹುದು ಹೇಗೆಂದರೆ ಮೊದಲನೇ ವಾಕ್ಯದಲ್ಲಿರುವ ಅದಿತಿಶಬ್ದಕ್ಕೆ ಪ್ರಪಂಚನಿಯಾಮಕಶಕ್ತಿ ಅಥವಾ ಪರಬ್ರಹ್ಮ ಎಂದು ಅರ್ಥಮಾಡಬಹುದು. ಆಗ ಪರಬ್ರಹ್ಮನಿಂದ ದಕ್ಷನೂ, ದಕ್ಷನಿಂದ ಅವನ ಪುತ್ರಿಯಾದ ಅದಿತಿಯೂ ಉತ್ಪನ್ನರಾದರೆಂಬ ವಿಷಯವು ಸಮಂಜಸವಾಗುವುದು. ಅಥವಾ ಯಾಸ್ಕರು ಹೇಳಿರುವಂತೆ—

**ಆದಿತ್ಯೋ ದಕ್ಷ ಇತ್ಯಾಹುರಾದಿತ್ಯಮಧ್ಯೇ ಚ ಸ್ತುತಃ। ಅದಿತಿರ್ದಾಕ್ಷಾಯಣೀ। ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ। ಇತಿ ಚ। ತತ್ಕಥಮುಪಪದ್ಯೇತ ಸಮಾನಜನ್ಮಾನೌ ಸ್ಯಾತಾಮಿತಿ। ಅಪಿ ವಾ ದೇವಧರ್ಮೇಣೇತರೇತರಜನ್ಮಾನೌ ಸ್ಯಾತಾಮಿತರೇತರಪ್ರಕೃತೀ ॥**

(ನಿ. ೧೧-೨೩)

ಎಂದರೆ ಆದಿತ್ಯನಿಗೂ ದಕ್ಷನೆಂದು ಹೆಸರು. ಈ ದಕ್ಷನು ಆದಿತಿಪುತ್ರರ ಮಧ್ಯದಲ್ಲಿ ಎಂದರೆ ಆದಿತಿಪುತ್ರರಲ್ಲೊಬ್ಬನಂತೆ ಪರಿಗಣಿಸಲ್ಪಟ್ಟು ಸ್ತುತಿಸಲ್ಪಡುವನು. ಅದಿತಿಗೆ ದಾಕ್ಷಾಯಿಣಿಯೆಂದು ಎಂದರೆ ದಕ್ಷಪುತ್ರಿಯೆಂದು ಹೆಸರು. ಈಗ **ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ** ಎಂಬ ವಾಕ್ಯದಲ್ಲಿ ಆದಿತಿಯಿಂದ ದಕ್ಷನೂ ದಕ್ಷನಿಂದ ಅದಿತಿಯೂ ಉತ್ಪನ್ನರಾದರೆಂದು ಹೇಳಿರುವ ವಿಷಯದಲ್ಲಿ ಪರಸ್ಪರವಿರೋಧವು ವ್ಯಕ್ತಪಡುವುದಿಲ್ಲವೆ ಇದು ಹೇಗೆ ಸಾಧ್ಯವು ? ಎಂದರೆ ಇಲ್ಲಿ ದಕ್ಷ ಮತ್ತು ಅದಿತಿಯರು ಇಬ್ಬರಿಗೂ ಉತ್ಪತ್ತಿಸ್ಥಾನವು ಒಂದೇ ಆಗಿರುವುದನ್ನು ಋಷಿಯು ಈ ರೀತಿ ವರ್ಣಿಸಿದಾನೆಂದು ತಿಳಿಯಬೇಕು. ಇದಲ್ಲದೆ ದೇವತೆಗಳಲ್ಲಿ ಒಬ್ಬರಿಂದ ಮತ್ತೊಬ್ಬರು ಉತ್ಪನ್ನರಾಗುವುದೂ ಅಥವಾ ಅವರ ಸ್ವಭಾವಾದಿಗಳು ಪರಸ್ಪರ ಅನುಸರಿಸಿರುವುದೂ ಕಂಡುಬರುವುದರಿಂದ ಈ ರೀತಿ ವರ್ಣಿಸಲಾಗಿದೆ- ಅಗ್ನಿಯನ್ನು ಅದಿತಿಯೆಂದು ಕರೆಯುವ ರೂಢಿ ಇದೆ ಎಂದು ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ.

ಋ. ಸಂ. ೨-೨೭-೧ನೇ ಋಕ್ಕಿನಲ್ಲಿ ಅದಿತಿಯು ದಕ್ಷನಾಮಕನಾದ ಆದಿತ್ಯನ ತಾಯಿಯೆಂದು ಹೇಳಿದೆ. ಮತ್ತೆ ಎರಡು ಸ್ಥಳಗಳಲ್ಲಿ ೧೦-೫-೭ ; ೧೦-೬೪-೫ನೇ ಋಕ್ಕುಗಳಲ್ಲಿ ದಕ್ಷ ಮತ್ತು ಅದಿತಿಯರ ಪರಸ್ಪರ ಸಂಬಂಧವು ತೀರ ವಿಲಕ್ಷಣವಾಗಿವೆ,

ಅದಿತಿಶಬ್ದವನ್ನು ವಿವರಿಸುವಾಗ ಯಾಸ್ಕರು—**ಅದಿತಿರದೀನಾ ದೇವಮಾತಾ** (ನಿ. ೪-೨೨) ಕ್ಷೀಣವಾಗದಿರುವ ಶಕ್ತಿಯುಳ್ಳ, ದೇವಮಾತೆ ಎಂದು ಅದಿತಿಶಬ್ದಕ್ಕೆ ಅರ್ಥಮಾಡಿ ಅದಿತಿಯ ಸ್ವರೂಪವನ್ನು ಅವಳ ನಾನಾವಿಧ ರೂಪಗಳನ್ನು ತಿಳಿಸತಕ್ಕ—

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**

(ಋ. ಸಂ. ೧-೮೯-೧೦)

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. ಈ ಋಕ್ಕಿನಲ್ಲಿ ಅಖಂಡಳಾದ ಅದಿತಿಯು ಸಕಲವಿಶ್ವಕ್ಕೂ ಜನ್ಮದಾತೆಯು, ಅವಳೇ ಜಗಜ್ಜನನಿಯು, ಜಗಜ್ಜನಕನು. ಉತ್ಪನ್ನವಾದ ಸಕಲವಸ್ತುವೂ ಅವಳೇ, ಅದಿತಿಯೇ ಎಲ್ಲಕ್ಕೂ ಉತ್ಪತ್ತಿಸ್ಥಾನವು. ನಿಷಾದಾದಿ ಚತುರ್ವರ್ಣದ ಐದುವಿಧ ಜನರ ಪಂಗಡಗಳೂ ಅವಳೇ, ಅದಿತಿಯೇ ಸಕಲ ದೇವತೆಗಳು, ಅವಳೇ ಪ್ರಕಾಶಮಾನವಾದ ಸ್ವರ್ಗವು, ಅವಳೇ ಅಂತರಿಕ್ಷವು, ಅವಳೇ ಸಕಲ ವಿಶ್ವವು, ಅವಳೇ ವಿಶ್ವನಿಯಾಮಕಳು ಎಂದು ವರ್ಣಿಸಿದೆ.

**ನಿಷ್ಟಿಗ್ರೀ** ಮತ್ತು **ಉಷಸ್ಸು** ಈ ಎರಡು ದೇವತೆಗಳನ್ನು ಬಿಟ್ಟರೆ ದೇವಮಾತೆಯೆಂದು ಸಾಕ್ಷಾತ್ತಾಗಿ ನಿರ್ದಿಷ್ಟವಾಗಿರುವವರಲ್ಲಿ **ಅದಿತಿಯೇ** ಪ್ರಥಮ ದೇವತೆಯೆಂದು ತಿಳಿದುಬರುತ್ತದೆ.

**1. ಅದಿತಿಯ ಸ್ವರೂಪವನ್ನು ವರ್ಣಿಸುವ ವಿಶೇಷಗಳು.**

ಅದಿತಿಯನ್ನು ಉದ್ದೇಶಿಸಿದ ಪ್ರತ್ಯೇಕವಾದ ಸೂಕ್ತವಾವುದೂ ಇಲ್ಲದಿದ್ದರೂ ಸಹ, ಅನೇಕ ಸೂಕ್ತಗಳಲ್ಲಿ ಅಂತರ್ಗತವಾಗಿರುವ ಮಂತ್ರಗಳಿಂದ ಅದಿತಿಯು ಪ್ರಶಂಸಿತಳೂ, ಪ್ರಾರ್ಥಿತಳೂ ಆಗಿದ್ದಾಳೆ. ಪುತ್ರಾದಿಗಳನ್ನೂ, ಪಶ್ವಾದಿಸಂಪತ್ತುಗಳನ್ನೂ ಅನುಗ್ರಹಿಸಿಕೊಡಬೇಕೆಂದು ಪ್ರಾರ್ಥಿತಳಾಗಿದ್ದಾಳೆ. ಅವಳ ರಕ್ಷಣೆಯೂ, ಕ್ಷಮೆಯೂ, ಅನೇಕ ಕಡೆಗಳಲ್ಲಿ ಬೇಡಲ್ಪಟ್ಟಿದೆ (೧-೪೩-೨). ವರುಣನಿಗೂ, ಇನ್ನೂ ಇತರ ಕೆಲವು ದೇವತೆಗಳಿಗೂ ಮಾತೃವೆಂದೂ ವರ್ಣಿತಳಾಗಿದ್ದಾಳೆ. ನಿಘಂಟುವಿನಲ್ಲಿ **ಅದಿತಿ** ಪದವನ್ನು, (1) **ಪೃಥ್ವೀನಾಮಗಳಲ್ಲಿಯೂ**, (2) **ವಾಙ್ನಾಮಗಳಲ್ಲಿಯೂ**, (3) **ಗೋನಾಮಗಳಲ್ಲಿಯೂ**, (4) **ದ್ಯಾವಾಪೃಥಿವೀನಾಮಗಳಲ್ಲಿಯೂ** ಸೇರಿಸಿ ಪಠಿಸಿದೆ (ನಿ. ೧-. ; ೧-೧೧ ೨-೧೧; ೩-೩೦). ನಿರುಕ್ತದ ೪-೨೨ ನೇ ಪ್ರಕರಣದಲ್ಲಿ ಅದಿತಿಯನ್ನು ಅದೀನಾ **ದೇವಮಾತಾ**, ಮಹಾತ್ಮಳಾದ ದೇವಮಾತೆಯೆಂದು ವರ್ಣಿಸಿದೆ.

ಋಕ್ಸಂಹಿತೆಯಲ್ಲಿ (೧-೧೧೩-೧೯) ದೇವಮಾತೆಯಾದ ಉಷಸ್ಸೇ ಅದಿತಿಯ ಅನೀಕವೆಂದು ವರ್ಣಿಸಿದೆ (ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ). ಇಲ್ಲಿ ಅದಿತಿಯ ಮುಖವೆಂದು ಸ್ಥೂಲವಾದ ಅರ್ಥ. ಅವಳ ರೂಪಾಂತರವೆಂದು ಹೇಳಿದರೂ ಹೇಳಬಹುದು. ನಿರುಕ್ತದ ಬೇರೆ ಭಾಗದಲ್ಲಿ (೧೧-೨೨) ದೇವತೆಗಳ ವರ್ಗೀಕರಣವನ್ನು (ಹಿಂದೆ ತೋರಿಸಿದಂತೆ) ಅನುಸರಿಸಿ ಅಂತರಿಕ್ಷಸ್ಥರಾದ ದೇವತೆಗಳ ವಿಷಯವನ್ನು ವಿವರಿಸುವಾಗ ಸ್ತ್ರೀದೇವತೆಗಳಲ್ಲಿ **ಅದಿತಿಗೆ** ಅಗ್ರಸ್ಥಾನವನ್ನು ಕೊಟ್ಟಿದೆ.

**ಅಥಾತೋ ಮಧ್ಯಸ್ಥಾನಾಃ । ತಾಸಾಂ ಅದಿತಿಃ ಪ್ರಥಮಾಗಾಮಿನೀ ಭವತಿ**

(ನಿ. ೧೧-೨೨)

ಮಧ್ಯಮಲೋಕದ ಸ್ತ್ರೀದೇವತೆಗಳಲ್ಲಿ ಅದಿತಿಗೇ ಪ್ರಥಮಸ್ಥಾನವಿರುವುದು.

ಋಕ್ಸಂಹಿತೆಯಲ್ಲಿ ೪-೫೫-೩; ೪-೫೫-೭; ೫-೫೧-೧೧; ೬-೫೦-೧; ೭-೩೮-೪; ೭-೪೦-೨; ೮-೨೫-೧೦; ೮-೨೭-೫; ೮-೫೬-೧೦. ಇತ್ಯಾದಿ ಋಕ್ಕುಗಳಲ್ಲಿ ಅದಿತಿಯನ್ನು **ದೇವಿಯೆಂದೂ**, ೨-೪೦-೬; ೭-೬೦-೪; ೧೦-೯೨-೧೪ ನೇ ಮಂತ್ರಗಳಲ್ಲಿ **ದೇವೀ ಅದಿತಿರನರ್ವಾ**, ಅಪ್ರತಿಹತವಾದ ಶಕ್ತಿಯುಳ್ಳವಳೂ, ದೇವಾತ್ಮಳೂ ಆದ ಅದಿತಿಯೆಂದೂ; ೧-೧೩೬-೩ ರಲ್ಲಿ ಪ್ರಭಾಯುತಳೂ, ಕ್ಷಿತಿಯನ್ನು ಧರಿಸುವವಳೆಂದೂ, ದ್ಯುಲೋಕಸ್ಥಳೆಂದೂ (**ಜ್ಯೋತಿಷ್ಮತೀಮದಿತಿಂ**......................) ವರ್ಣಿಸಿದೆ. ಇದಲ್ಲದೇ, **ಉರುವ್ಯಚಾಃ**; ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವವಳು; (೫-೪೬-೬); **ವಿಶ್ವಜನ್ಯಾಂ**; ಸಕಲಮಾನವರಿಗೂ ಪ್ರಿಯ ಸಖಳು (೭-೧೦-೪); ಇತ್ಯಾದಿ ವಿಶೇಷಣಗಳು ಗಮನಾರ್ಹವಾದವಾಗಿವೆ. ಇಂತಹ ಉತ್ತಮಳೂ, ಲೋಕೋಪಕಾರಿಣಿಯೂ ಆದ ಅದಿತಿಯನ್ನು ಸ್ತುತಿಸುತ್ತಾ.

"ಪ್ರಾತಃಕಾಲದಲ್ಲಿಯೂ, ಮಧ್ಯಾಹ್ನದಲ್ಲಿಯೂ, ಸಾಯಂಕಾಲದಲ್ಲಿಯೂ ಸಹ ನಾನು ಅದಿತಿಯನ್ನು ಅನುಸ್ಯೂತವಾಗಿ ಪ್ರಾರ್ಥಿಸಿ ಕರೆಯುತ್ತೇನೆ" ಎಂದು ಋಷಿಯು ಪ್ರಶಂಸಿಸಿ ಪ್ರಾರ್ಥಿಸುತ್ತಾನೆ. (೫-೬೯-೩) ೧.೧೮೫-೩ ನೇ ಮಂತ್ರದಲ್ಲಿ ಅದೇ ಅದಿತಿಯ ಶುದ್ಧವಾದುದೂ, ಕ್ಷಯರಹಿತವಾದುದೂ, ದಿವ್ಯವಾದುದೂ ಅತ್ಯಂತ ಪೂಜ್ಯವಾದುದೂ ಆದ ಧನದಾನವು ಯಾಚಿತವಾಗಿದೆ. ೧-೧೬೬-೧೨ ರಲ್ಲಿ ಮರುತ್ತುಗಳನ್ನು ಪ್ರಶಂಸಿಸುವಾಗ, ಅವರಿಂದ ದತ್ತವಾಗತಕ್ಕ ಅನುಗ್ರಹವು ಅದಿತಿಗಳ ದಾನಕ್ಕೆ ಸಮನಾಗಿದೆಯೆಂದು ಅದಿತಿಯ ಪ್ರಶಂಸೆಯಿದೆ. ೪-೫೫-೩ ರಲ್ಲಿ ಪಸ್ತ್ಯಾ ಎಂಬುದು ಅದಿತಿಯ ವಿಶೇಷಗುಣವನ್ನು ಸೂಚಿಸುವ ವಿಶೇಷಣವಾಗಿದೆ. ಸಕಲರಿಗೂ ಆಶ್ರಯದಾತಳಾದ ಗೃಹದೇವತೆಯೆಂಬುದು ಇದರಿಂದ ತಿಳಿಯುತ್ತದೆ. ವಾಜಸನೇಯಸಂಹಿತೆಯಲ್ಲಿ ಅದಿತಿಯ ಮಹದ್ಗುಣಗಳನ್ನು ಈ ರೀತಿ ಸ್ತುತಿಸಿದೆ—

**ಮಹೀಮೂ ಷು ಮಾತರಂ ಸುವ್ರತಾನಾಂ...............ಅದಿತಿಂ ಸುಪ್ರಣೀತಿಂ ।**

(ತೈ. ಸಂ. ೧.೫-೧೧-೫ ಮತ್ತು ವಾ. ಸಂ. ೨೧-೫)

ಭಕ್ತರಿಗೆ ಆಶ್ರಯದಾತಳಾದ ಮಾತೆಯ ಸ್ವರೂಪಳೂ, ಯಜ್ಞಕ್ಕೆ ನೇತ್ರಿಯೂ, ಅತ್ಯತಿಶಯವಾದ ಶಕ್ತಿಯುಳ್ಳವಳೂ ಜರಾರಹಿತಳೂ, ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವವಳೂ, ರಕ್ಷಕಳೂ, ಕುಶಲತೆಯಿಂದ ಎಲ್ಲರಿಗೂ ಮಾರ್ಗವನ್ನು ತೋರಿಸಿ ಎಲ್ಲರನ್ನೂ ಸತ್ಪಥದಲ್ಲಿ ಕೊಂಡೊಯ್ಯುವವಳೂ ಆದ ಅದಿತಿಯನ್ನು ನಾವು ಪ್ರಾರ್ಥಿಸಿ ಕರೆಯೋಣ ಎಂದು ಅವಳ ಮಹತ್ತ್ವವನ್ನು ವರ್ಣಿಸಿದೆ.

## 2. ಅದಿತಿಯ ಮೂಲರೂಪದ ವಿಷಯದಲ್ಲಿ Roth ಮತ್ತು Max-muller ಎಂಬುವರು ತಿಳಿಸಿರುವ ಅಭಿಪ್ರಾಯಗಳು :—

ಅದಿತಿಯೆಂಬುದು, ನಿಯಮಿತವಾದ ಸೀಮಾಪ್ರದೇಶಗಳುಳ್ಳ ಪೃಥ್ವಿಗಿಂತಲೂ ಅಧಿಕವಾದ ಮಹತ್ತ್ವವನ್ನು ಹೊಂದಿರುವುದೂ, ಮಾನಾತೀತವಾದ ವಿಸ್ತೃತಿಯನ್ನು ಹೊಂದಿರುವುದೂ ಆದ ಅಂತರಿಕ್ಷದ ಅನಂತತ್ವವನ್ನು ವರ್ಣಿಸಲು ಅನಂತ ಎಂಬರ್ಥವನ್ನು ಕೊಡುವ ಪರ್ಯಾಯಪದವಾಗಿದೆಯೆಂದು Roth ಎಂಬ ಪಂಡಿತನ ಅಭಿಪ್ರಾಯ

ವಾಗಿರುತ್ತೆ. ಇದೇ ಪಂಡಿತನು ನಿರುಕ್ತವಾಕ್ಯವನ್ನು ವಿವರಿಸುವಾಗಲೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಅದಿತಿ ಎಂಬ ಪದಕ್ಕೆ ಅಲಂಘ್ಯ, ಅನತಿಕ್ರಮಣೀಯ, ಅಕ್ಷಯ್ಯ, ಪ್ರಮಾಣಾತೀತ ಎಂಬರ್ಥವು ಸಹಜವಾಗಿದೆ. “ಅನಂತತ್ವವನ್ನು ಪ್ರತಿಬಿಂಬಿಸುವ ದೇವತಾವಿಶೇಷಳಾಗಿದ್ದಾಳೆ. ಈ ರೂಪದಲ್ಲಿಯೇ ಇವಳು ಪೂಜಿತಳಾಗಿದಾಳೆ. ಅಲೌಕಿಕವಾದ ದಿವ್ಯತೇಜಸ್ಸು ಯಾವರೀತಿ ಅಪಾರ್ಥಿವವೂ, ನಿತ್ಯವೂ ಆದ ತತ್ತ್ವವೆಂದು ಪರಿಗಣಿತವಾಗಿರುವುದೋ ಅದರಂತೆಯೇ ತೇಜೋರೂಪರಾದ **ವರುಣ, ಮಿತ್ರ, ಅರ್ಯಮಾ, ಭಗ** ಇತ್ಯಾದಿ ಆದಿತ್ಯರೂ ಸಹ ಅದಿತಿರೂಪವಾದ ಈ ನಿತ್ಯತತ್ತ್ವದ ಪುತ್ರರೆಂದೇ ಪರಿಗಣಿತರಾಗಿದ್ದಾರೆ. “ಮಾನಾತೀತವಾದುದೂ, ಲೌಕಿಕಗೋಚರಕ್ಕೆ ಅತೀತವಾದುದೂ ಆದ ನಿತ್ಯತತ್ತ್ವವನ್ನು ಪ್ರತಿಬಿಂಬಿಸುವುದರಿಂದಲೇ ವೈದಿಕಸಾಹಿತ್ಯದಲ್ಲಿ ಈ ದೇವತೆಯ ನಿರ್ದಿಷ್ಟವಾದ ರೂಪಾದಿಗಳು ವರ್ಣಿತವಾಗಿ ಇರಲು ಸಾಧ್ಯವಾಗಿಲ್ಲ. ಆದಿತ್ಯರನ್ನು ಧಾರಣಮಾಡತಕ್ಕದ್ದೂ, ಆದಿತ್ಯರಿಂದಲೇ ಧರಿಸಲ್ಪಡತಕ್ಕದ್ದೂ, ಆದ ಈ ನಿತ್ಯತತ್ತ್ವವು ಆದಿತ್ಯರಿಗೆಲ್ಲಾ ಆಶ್ರಯರೂಪವಾಗಿದೆ. ಇದೇ ದಿವ್ಯಜ್ಯೋತಿಯು ಅವರೆಲ್ಲರ ಸಾರಭೂತವೂ ಆಗಿದೆ” ಎಂದು ಇದೇ ಪಂಡಿತನು ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ.

(Journal of the German Oriental Society Vol. 6. 68)

**ಅನಂತ** ಎಂಬ ತತ್ತ್ವವನ್ನು ಪ್ರತಿಬಿಂಬಿಸುವ **ಅದಿತಿ** ದೇವತೆಯು ಋಷಿಗಳಿಂದ ದೃಷ್ಟವಾಗಿರುವ ದೇವತೆಗಳಲ್ಲೆಲ್ಲಾ ಅತ್ಯಂತ ಪ್ರಾಚೀನಳು. ಆದರೆ, ಕೇವಲ ಮಾನಸಿಕವಾದ ಭಾವಕಲ್ಪನೆಯಲ್ಲೇ ಅಮೂರ್ತರೂಪದಲ್ಲಿ ಚಿಂತಿತಳಾಗಿರತಕ್ಕ ತತ್ತ್ವವಾಗಿರದೇ, ಮೂರ್ತರೂಪದ ವಿಶ್ವತ್ವವನ್ನು ಒಳಗೊಂಡ ದೇವತೆಯಾಗಿದ್ದಾಳೆ. ಮಾನುಷಪ್ರತ್ಯಕ್ಷಕ್ಕೆ ಗೋಚರಳಾಗತಕ್ಕವಳೂ, ಅನಂತವಾದ ವಿಸ್ತೃತಿಯುಳ್ಳವಳೂ, ಪೃಥ್ವಿಗಿಂತಲೂ ಮೀರಿದವಳೂ, ಅಂತರಿಕ್ಷಾದಿ ಲೋಕಗಳಿಗೂ ಅತೀತಳೂ ಆಗಿದ್ದಾಳೆ. ಅನಂತತ್ವವನ್ನು ಪ್ರತಿಬಿಂಬಿಸುವುದರಿಂದಲೇ ಅದಿತಿಯು ಅನೇಕ ವಿಧವಾದ ವಿಶೇಷಣಗಳಿಂದ ವರ್ಣಿತಳಾಗಿದ್ದಾಳೆ”.

(Translation of the Rig-veda, 1-230)

**3. ಅದಿತಿಯು ಆದಿತ್ಯರ ಮಾತೆ ಎಂದು ವರ್ಣಿಸಿರುವ ಪ್ರಕರಣಗಳು:—**

ಕೆಳಗೆ ಉದಾಹೃತವಾಗಿರುವ ವಾಕ್ಯಗಳಿಂದ ಅದಿತಿಯು, ವರುಣಾದಿ ದೇವತೆಗಳಿಗೆ ಮಾತೃವೆಂಬುದು ತಿಳಿಯುತ್ತದೆ. ಋಕ್ಸಂಹಿತಾವಾಕ್ಯಗಳೇ ಅಲ್ಲದೇ ಇತರ ಶ್ರುತಿಗಳೂ ಈ ಅಂಶವನ್ನು ತಿಳಿಸುತ್ತವೆ.

“ಸಂಪತ್ತುಗಳಿಗೆಲ್ಲಾ ಪ್ರಭುಗಳಾದ ಮಿತ್ರಾವರುಣರು ತಮ್ಮ ದಿವ್ಯಶಕ್ತಿಯನ್ನು ಪ್ರಕಾಶಪಡಿಸಲೆಂದು, ಜಗನ್ಮಾತೆಯೂ, ಮಹತ್ಸ್ವರೂಪವುಳ್ಳವಳೂ, ಪೂಜ್ಯಳೂ ಆದ **ಅದಿತಿಯು** ಮಿತ್ರಾವರುಣರನ್ನು ಹಡೆದಳು”

(೮–೨೫–೩)

“ಸಂಪದ್ಯುಕ್ತನಾದ ಮಿತ್ರನಿಗೂ ಅರ್ಯಮನಿಗೂ, ಪವಿತ್ರಾತ್ಮನಾದ ವರುಣನಿಗೂ ಮಾತೆಯಾದ ಅದಿತಿಯು ನಮಗೆ ರಕ್ಷಣೆಯನ್ನು ನೀಡಲಿ.

(ಋ.ಸಂ. ೧೦-೩೬-೩; ೧೦-೧೩೨.೬ ; ಅ. ವೇ. ೫-೧-೯) (೮–೪೭-೯)

೨–೨೭–೭ರಲ್ಲಿ ‘ **ರಾಜಪುತ್ರಾ** ’ ಎಂದರೆ ಜಗತ್ಪ್ರಭುಗಳಾದ ವರುಣಾದ್ಯಾದಿತ್ಯರೇ ಪುತ್ರರಾಗಿ ಉಳ್ಳವಳೂ ಎಂದೂ; ೩–೪–೧೧ರಲ್ಲು “ **ಸುಪುತ್ರಾ** ” ಉತ್ತಮರಾದ ಪುತ್ರರುಳ್ಳವಳು ಎಂದೂ : ೮-೫೬–೧೧ರಲ್ಲು **ಉಗ್ರಪುತ್ರಾ, ಅತಿ**

ಪ್ರಬಲವಾದ ಶಕ್ತಿಯುತರಾದ ಪುತ್ರರುಳ್ಳವಳು ಎಂದೂ, ಅಥರ್ವವೇದದ ೩-೮-೨ ಮತ್ತು ೧೧-೧೧-೧ನೇ ಮಂತ್ರಗಳಲ್ಲಿ **ಶೂರಪುತ್ರಾ** ಎಂದೂ ನಿರ್ದಿಷ್ಟಳಾಗಿದ್ದಾಳೆ. ಅ. ವೇ. ೮-೯-೨೧ನೇ ಮಂತ್ರದಲ್ಲಿ **ಅಷ್ಟಯೋನಿರದಿತಿರಷ್ಟಪುತ್ರಾ** ಅದಿತಿಯು ಅಷ್ಟಯೋನಿಯುಳ್ಳವಳು ಮತ್ತು ಅಷ್ಟ ಪುತ್ರರುಳ್ಳವಳು ಎಂದು ಸ್ತುತಳಾಗಿದ್ದಾಳೆ. ಇದೇ ಅಥರ್ವವೇದದ ೮-೯೦-೧೫ ನೇ ಮಂತ್ರದಲ್ಲಿ ಆದಿತ್ಯರಿಗೂ, ಅದಿತಿಗೂ ಇರುವ ಸಂಬಂಧವನ್ನು ಕೊಂಚ ವ್ಯತ್ಯಸ್ತವಾಗಿ ತಿಳಿಸಿದೆ.

**ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ.........................ಅದಿತಿಂ ವಧಿಷ್ಟ** ಆದಿಯು ವಸುಗಳಿಗೆ ದುಹಿತೆಯೂ, ರುದ್ರರಿಗೆ ಮಾತೆಯೂ, ಆದಿತ್ಯರಿಗೆ ಸಹೋದರಿಯೂ ಆಗಿದ್ದಾಳೆಂದು ವರ್ಣಿಸಿದೆ-ಸಾಮವೇದದಲ್ಲಿ ಅದಿತಿಯ ಭ್ರಾತೃಗಳೂ, ಪುತ್ರರೂ ಸಹ ಪ್ರತ್ಯೇಕವಾಗಿ ಕೆಳಗೆ ಉದಾಹೃತವಾವಾಗಿರುವ ವಾಕ್ಯದಲ್ಲಿ ತಿಳಿಸಿರುವಂತೆ ನಿರ್ದಿಷ್ಟರಾಗಿದ್ದಾರೆ.

**ತ್ವಷ್ಟಾ ನೋ ದೈವ್ಯಂ ವಚಃ...............ತ್ರಾಮಣಂ ವಚಃ**

(ಸಾ. ವೇ- ೧ ೨೯೯)

ತ್ವಷ್ಟೃವೂ, ಪರ್ಜನ್ಯನೂ, ಬ್ರಹ್ಮಣಸ್ಪತಿಯೂ ನಮಗೆ ಆಶೀರ್ವಚನಗಳನ್ನು ಪಠಿಸಲಿ. ಅದಿತಿಯೂ ಸಹ ಅವಳ ಪುತ್ರರೊಡನೆಯೂ ಭ್ರಾತೃಗಳೊಡನೆಯೂ (**ಪುತ್ರೈರ್ಭ್ರಾತೃಭಿಃ**) ನಮಗೆ ರಕ್ಷಣಾವಾಕ್ಯಗಳನ್ನು ಪಠಿಸಲಿ.

### 4. ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯಭಾವವಿದೆಯೇ ?

೧೦-೬೩-೨ನೇ ಋಕ್ಕಿನಲ್ಲಿ, ಉದಕ ಮತ್ತು ಪೃಥಿವಿಗಳೊಡನೆ ಅದಿಯೂ ದೇವಯೋನಿಯೆಂದು ವರ್ಣಿತಳಾಗಿದ್ದಾಳೆ. ಆ ಮಂತ್ರದ ಅರ್ಥವೇನೆಂದರೆ, " ಎಲೈ ದೇವತೆಗಳೇ, ನಿಮ್ಮ ನಾಮಗಳೆಲ್ಲವೂ ಪವಿತ್ರವಾದುವು ಮತ್ತು ಪೂಜ್ಯವಾದುವು. ಅದಿತಿಯ ಗರ್ಭದಲ್ಲಿ ಉತ್ಪನ್ನರಾದವರೂ, ಪೃಥ್ವಿಯ ಗರ್ಭದಲ್ಲಿ ಉತ್ಪನ್ನರಾದವರೂ ಮತ್ತು ಅಬ್ಜರೂ ಆದ ನೀವು ನಮ್ಮ ಪ್ರಾರ್ಥನೆಯನ್ನು ಕೇಳಿರಿ " ಎಂದಿದೆ.

[ಈ ವಿಭಾಗವು ದೇವತೆಗಳಲ್ಲಿ ದ್ಯುಲೋಕಸ್ಥರು, ಅಂತರಿಕ್ಷಸ್ಥರು ಮತ್ತು ಪೃಥಿವೀಸ್ಥರು ಎಂಬ ಮೂರು ವಿಭಾಗಾತ್ಮಕವಾಗಿರುತ್ತದೆ. (ಈ ವಿಭಾಗಕ್ರಮವನ್ನು ನಾವು ಹಿಂದೆ ೧-೧೩೯-೧೧ನೇ ಮಂತ್ರವನ್ನು ಉದ್ಧರಿಸಿದಾಗ ವಿಮರ್ಶಿಸಿದೇವೆ). ಅಂತರಿಕ್ಷಸ್ಥರು ಎಂಬುದಕ್ಕೆ ಬದಲಾಗಿ ಉದಕದಿಂದ ಉತ್ಪನ್ನರಾದವರು ಎಂದು ಹೇಳಿರುವುದು ಒಂದು ವಿಶೇಷ. ಆದರೆ, ಈ ಸನ್ನಿವೇಶದಲ್ಲಿ ಮಾತ್ರವಲ್ಲದೇ, ೧೦-೪೯-೨ರಲ್ಲೂ ಸಹ ಇದೇ ಪ್ರಯೋಗವಿರುತ್ತದೆ. " ದ್ಯುಲೋಕೋತ್ಪನ್ನರೂ, ಅಂತರಿಕ್ಷೋತ್ಪನ್ನರೂ ಮತ್ತು ಪೃಥಿವ್ಯುತ್ಪನ್ನರೂ ಆದ ಸಕಲ ದೇವತೆಗಳೂ ಸಹ ನನ್ನನ್ನೇ ಇಂದ್ರನೆಂದು ಪೂಜಿಸುತ್ತಾರೆ " ಎಂದು ಈ ವಿಭಾಗವಿದೆ. (ಪ್ರಕೃತವಾದ ಈ ಎರಡು ಉದಾಹರಣೆಗಳಲ್ಲಿಯೂ ಸಹ **ಅಪ್** ಎಂಬ ಶಬ್ದಕ್ಕೆ ಅಂತರಿಕ್ಷವೆಂದೇ ಅರ್ಥವನ್ನು ಹೇಳಬಹುದು). ಇದರಂತೆಯೇ, ೧೦-೬೫-೯ ; ೨-೩೮-೧೧ ;

;ಗಳಲ್ಲಿಯೂ ಇದೇ ವಿಭಾಗಗಳೂ ನಿಷ್ಕೃಷ್ಟವಾಗಿವೆ. ಆದರೆ, ೬-೫೦-೧೧

, ಪಾರ್ಥಿವಾಸಃ,, ಗೋಜಾತಾಃ, ಅಪ್ಯಾಃ ಎಂಬ ನಾಲ್ಕು ವಿಭಾಗ

೧೦-೬೩-೨ ರಂತೆಯೇ, ೧೦-೬೩-೩ ನೆಯ ಋಕ್ಕಿನಲ್ಲಿಯೂ ಈ ಅಂಶವನ್ನು ಗಮನಿಸಬಹುದು. " ಯಾವ ಆದಿತ್ಯರಿಗೆ ಮಾತೆಯಾದ ಪೃಥ್ವಿಯು ಮಾಧುರ್ಯೋಪೇತವಾದ ಕ್ಷೀರವನ್ನೂ, ಅದಿತಿರೂಪಳಾದ ದ್ಯುಲೋಕಾಧಿದೇವತೆಯು ಅಮೃತವನ್ನೂ ಕೊಡುವರೋ ಅಂತಹ ವೃಷ್ಟಿಪ್ರದರೂ ಸತ್ಕರ್ಮಕಾರಕರೂ ಆದ ಆದಿತ್ಯರಿಗೆ ಸ್ತುತಿಗಳನ್ನರ್ಪಿಸಿರಿ " ಎಂದಿರುವಾಗ **ಅದಿತಿಃ** ಎಂಬ ಪದವು **ದ್ಯೌಃ** ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲದೇ, ೫-೫೯-೮ನೇ ಋಕ್ಕಿನಲ್ಲಿಯೂ ಸಹ **ಮಿಮಾತು ದ್ಯೌರದಿತಿರ್ವೀತಯೇ** ಎಂದು ಪ್ರಯೋಗವಿದೆ. ಇಲ್ಲಿ **ಅದಿತಿ** ಶಬ್ದಕ್ಕೆ ಸಾಯಣರೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ. **ದ್ಯೌಃ ಅಂತರಿಕ್ಷಂ ; ಕೀದೃಶೀ । ಅದಿತಿಃ ಅದೀನಾ ।** **ದ್ಯೌಃ** ಎಂದರೆ **ಅಂತರಿಕ್ಷ** ಮತ್ತು ಅದೀನಳಾದ ಅದಿತಿಯೆಂದು ಒಂದರ್ಥವನ್ನೂ, ಎರಡನೆಯದಾಗಿ **ಅದಿತಿಃ-ಭೂಮಿಶ್ಚ** ಎಂದು **ಅದಿತಿ** ಶಬ್ದಕ್ಕೆ **ಭೂಮಿ** ಎಂಬ ಇನ್ನೊಂದರ್ಥವನ್ನೂ ಹೇಳಿದ್ದಾರೆ. ಇಂತಹ ಸಂದರ್ಭಗಳು ಅದಿತಿಗೂ ಅಂರಿಕ್ಷಕ್ಕೂ ತಾದಾತ್ಮ್ಯವನ್ನು ತೋರಿಸುತ್ತವೆ. ಆದರೆ,

**ದೇವಾ೩ಁ ಆದಿತ್ಯಾ೩ಁ ಅದಿತಿಂ ಹವಾಮಹೇ ಯೇ ಪಾರ್ಥಿವಾಸೋ ದಿವ್ಯಾಸೋ ಅಪ್ಸುಯೇ ।**
(೧೦-೬೫-೯)

ಎಂಬ ಈ ಮಂತ್ರದಲ್ಲಿ ಆದಿತ್ಯರು, ಅವರ ಮಾತೆಯಾದ ಅದಿತಿ ಇವರಲ್ಲದೇ ಪೃಥಿವ್ಯುತ್ಪನ್ನರೂ, ದ್ಯುಲೋಕೋತ್ಪನ್ನರೂ ಆದ ದೇವತೆಗಳು ಎಂದು ಬೇರೆ ಬೇರೆ ಹೇಳಿದೆ. **ಅದಿತಿ** ಮತ್ತು **ದ್ಯುಲೋಕ** ಇವೆರಡೂ ಭಿನ್ನವೆಂದು ಈ ಸಂದರ್ಭದಲ್ಲಿ ತಿಳಿಸಿದೆ.

### 5. ಅದಿತಿಯು ಪೃಥ್ವಿಗಿಂತಲೂ ಬೇರೆಯಾದ ದೇವತೆ ಎಂಬುದಕ್ಕೆ ಆಧಾರಗಳು.

ಮೇಲೆ ಉದ್ಧರಿಸಿರುವ ಕೆಲವುವಾಕ್ಯಗಳಲ್ಲಿ ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯವನ್ನು ಹೇಳಿದ್ದರೂ ಸಹ, ಸಂಹಿತೆಯ ಉಳಿದ ಭಾಗಗಳಲ್ಲೂ ಸಹ ಇದೇ ತಾದಾತ್ಮ್ಯಸಂಬಂಧವನ್ನು ತೋರಿಸಿದೆಯೆಂದು ಹೇಳಲಾಗುವುದಿಲ್ಲ. ಒಂದೊಂದು ಸಲ ಪೃಥ್ವಿಯೂ, ಅದಿತಿಯೂ ಒಂದೇ ಎಂದು ತೋರಿಸುವ ಸನ್ನಿವೇಶಗಳೂ ಇವೆ. ಆದರೆ ಇದಕ್ಕೆ ವ್ಯತ್ಯಸ್ತವಾದ ವರ್ಣನೆಗಳೂ ಇರುತ್ತವೆ. ನಿರುಕ್ತಪಾಠಗಳಂತೆ ಒಂದುಸಲ ಪೃಥಿವಿಗೂ ಇನ್ನೊಂದು ಸಲ ದ್ಯಾವಾಪೃಥಿವಿಗಳಿಗೂ ಪರ್ಯಾಯಪದವಾಗಿರುತ್ತದೆಂದು ಮೇಲೆ ತಿಳಿಸಿದೆ. ಉತ್ತಮವಾದ ಕರ್ಮವನ್ನಾಚರಿಸುವ ಪುತ್ರರೊಡಗೂಡಿ ಅದಿತಿ ರೂಪಳಾದ ಪೃಥ್ವಿಯು ಅಗ್ನಿಯ ಅನುಗ್ರಹದಿಂದ ಸ್ಥಿತಳಾಗಿದ್ದಾಳೆ ಇತ್ಯಾದಿಯಾಗಿ (೧-೭೨-೯) ಒಂದೆರಡು ಸನ್ನಿವೇಶಗಳಲ್ಲಿ **ಅದಿತಿ** ಶಬ್ದವು ಪೃಥ್ವಿಗೆ ವಿಶೇಷಣವಾಗಿರುತ್ತದೆ. (ಅ. ವೇ ೧೩-೧-೩೮) ಆದರೆ, ಇತರ ಅನೇಕ ಸಂದರ್ಭಗಳಲ್ಲಿ ಪೃಥ್ವಿಗಿಂತಲೂ ಭಿನ್ನಳಾದ ದೇವತೆಯೆಂಬುದು ನಿಷ್ಕೃಷ್ಟವಾಗಿ ತಿಳಿಯುತ್ತದೆ. ಉದಾಹರಣೆಗೆ,

" ದ್ಯಾವಾಪೃಥಿವಿಗಳೂ, ಉದಕಗಳೂ, ಸನಕ್ಷತ್ರನಾದ ಸೂರ್ಯನೂ ನಮ್ಮ ಪ್ರಾರ್ಥನೆಯನ್ನು ಕೇಳಲಿ " ಎಂದು ೩-೫೪-೧೯ನೇ ಮಂತ್ರದಲ್ಲಿ ಪ್ರಾರ್ಥಿಸಿ ಪುನಃ ಅದಕ್ಕೆ ಮುಂದಿನ ಎಂದರೆ. ೩-೫೪-೨೦ನೇ ಋಕ್ಕಿನಲ್ಲಿ, " ಆದಿತ್ಯರೊಡಗೂಡಿದ ಅದಿತಿಯು ನಮ್ಮ ಪ್ರಾರ್ಥನೆಯನ್ನು ಕೇಳಲಿ " ಎಂದು ಪ್ರಾರ್ಥಿಸಿದೆ. ಆದುದರಿಂದ ಅದಿತಿಯು ಪೃಥಿವಿಗಿಂತಲೂ ಭಿನ್ನಳು ಎಂಬ ವಿಷಯದಲ್ಲಿ ಸಂಶಯವಿಲ್ಲ. ಇನ್ನೂ ಕೆಲವು ಉದಾಹರಣೆಗಳನ್ನು ತೆಗೆದುಕೊಂಡರೆ

" ಇಂದ್ರನನ್ನೂ, ಅಗ್ನಿಯನ್ನೂ, ಮಿತ್ರನನ್ನೂ, ವರುಣನನ್ನೂ, ಅದಿತಿಯನ್ನೂ, ಅಂತರಿಕ್ಷವನ್ನೂ, ಪೃಥಿವಿ

ಯನ್ನೂ, ದ್ಯುಲೋಕವನ್ನೂ, ಮರುತ್ತುಗಳನ್ನೂ, ಪರ್ವತಗಳನ್ನೂ, ಉದಕಗಳನ್ನೂ ನಾನು ಪ್ರಾರ್ಥಿಸಿ ಕರೆಯುತ್ತೇನೆ" (೫-೪೬-೩)

"ಪಿತೃರೂಪನಾದ ಎಲೈ ದ್ಯುಲೋಕವೇ, ಉಪಕಾರಕಳಾದ ಪೃಥ್ವಿಯೇ, ಭ್ರಾತೃರೂಪನಾದ ಅಗ್ನಿಯೇ, ವಸುಗಳೇ, ನಮಗೆ ಸುಖದಾಯಕರಾಗಿರಿ. ಎಲೈ ಆದಿತ್ಯರೇ, ಅದಿತಿದೇವಿಯೇ, ನಮಗೆ ಪೂರ್ಣವಾದ ರಕ್ಷಣೆಯನ್ನು ನೀಡಿರಿ" (೬-೫೧-೫)

"ಮಿತ್ರನೂ, ವರುಣನೂ, ಅದಿತಿಯು, ಸಾಗರಾಧಿದೇವತೆಯೂ, ಪೃಥ್ವಿಯೂ, ದ್ಯುಲೋಕವೂ ನಮಗೆ ಸಂತೋಷಕಾರಕರಾಗಲಿ" (೯-೯೭-೫೮)

"ಪ್ರಾಜ್ಞರೂ, ವಿವೇಕಿಗಳೂ ಆದ ದ್ಯಾವಾಪೃಥಿವಿಗಳು ನಮ್ಮನ್ನು ರಕ್ಷಿಸಲಿ. ಮಿತ್ರಾವರುಣರ ಮಾತೆಯಾದ ಅದಿತಿಯೂ ನಮ್ಮನ್ನು ಆಪತ್ತುಗಳಿಂದ ರಕ್ಷಿಸಲಿ. (೧೦-೩೬-೨,೩)

"ದ್ಯಾವಾಪೃಥಿವಿಗಳು, ಯಮನೂ, ಅದಿತಿಯೂ, ತ್ವಷ್ಟೃವೂ................ವಿಷ್ಣುವೂ ನಮ್ಮ ಪೂಜೆಗೆ ಅರ್ಹರಾಗಿರುತ್ತಾರೆ" (೧೦-೯೨-೧೧)

"ಅತ್ಯುತ್ತಮವಾದ ರಕ್ಷಣೆಯನ್ನು ನೀಡತಕ್ಕ ಪೃಥ್ವಿಯನ್ನೂ, ಪಾಪರಹಿತವಾದ ದ್ಯುಲೋಕವನ್ನೂ, ಮಾರ್ಗದರ್ಶಕಳಾದ ಅದಿತಿಯನ್ನೂ...............ನಾವು ಆಶ್ರಯಿಸೋಣ" (೧೦-೬೩-೧೦)

ಇತ್ಯಾದಿ ವಾಕ್ಯಗಳಲ್ಲಿ ಪೃಥ್ವಿಗೂ ಅದಿತಿಗೂ ಇರತಕ್ಕ ಭಿನ್ನತೆಯು ಸ್ಪಷ್ಟವಾಗಿರುತ್ತದೆ. ಇದೇ ಅಭಿಪ್ರಾಯವನ್ನು ಸಮರ್ಥಿಸುವಂತೆ ವಾಜಸನೇಯ ಸಂಹಿತೆಯಲ್ಲಿಯೂ ಸಹ ಈ ರೀತಿ ಪ್ರಾರ್ಥನೆಯಿರುತ್ತದೆ:—"**ಪೃಥಿವೀ ಚ ಮೇಽದಿತಿಶ್ಚ ಮೇ**" ....ಪೃಥ್ವಿಯೂ, ಅದಿತಿಯೂ, ದಿತಿಯೂ....ನನ್ನನ್ನು ತೃಪ್ತಿಗೊಳಿಸಲಿ [ವಾ. ಸಂ. ೧೮-೨೨] ಎಂದಿದೆ. ಅಥರ್ವವೇದದಲ್ಲಿಯೂ ಸಹ; **ಭೂಮಿರ್ಮಾತಾ ಅದಿತಿರ್ನೋ ಜನಿತ್ರಂ**......." ಮಾತೃರೂಪಳಾದ ಪೃಥ್ವಿಯೂ, ಉತ್ಪತ್ತಿಹೇತುವಾದ ಅದಿತಿಯೂ ನಮ್ಮನ್ನು ರಕ್ಷಿಸಲಿ ಎಂದಿದೆ (ಅ. ವೇ. ೬-೧೨೦-೨).

ಆದರೆ ಕೆಲವು ಬ್ರಾಹ್ಮಣವಾಕ್ಯಗಳಲ್ಲಿ ಅದಿತಿಗೂ, ಪೃಥಿವಿಗೂ ನಿಷ್ಕೃಷ್ಟವಾದ ತಾದಾತ್ಮ್ಯವನ್ನೇ ಹೇಳಿದೆ. ಉದಾಹರಣೆಗೆ :—

"**ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ಪ್ರತಿಷ್ಠಾ**" (ಶ. ಬ್ರಾ. ೨-೨-೧-೧೯)

ಈ ಪೃಥಿವಿಯೇ ಅದಿತಿಯು; ಇವಳೇ ಜಗತ್ತಿನ ಧಾರಕಳು.

"**ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ದೇವಾನಾಂ ಪತ್ನೀ**" (ಶ. ಬ್ರಾ. ೫-೩-೧-೪)

ಈ ಪ...ಯೇ ಅದಿತಿಯು. ಅವಳೇ ಪೂಜ್ಯಳಾದ ದೇವಪತ್ನಿಯು. ಇತ್ಯಾದಿಯಾಗಿರತಕ್ಕ ಬ್ರಾಹ್ಮಣವಾಕ್ಯಗಳೂ ...ಕೆ. ನಿಷ...ಷ್ಟವಾದ ಅರ್ಥವನ್ನು ಆಯಾ ಸಂದರ್ಭೋಚಿತವಾಗಿ ಮಾತ್ರ ಹೇಳಬೇಕು.

ದೇವತೆಗಳಿಗೆಲ್ಲಾ ಮುಖ್ಯಳು ಎಂದು ಯಾಸ್ಕರು ಸೂಚಿಸಿರುವುದನ್ನು ಹಿಂದೆ ಅದಿತಿಪುತ್ರರಾದ ಆದಿತ್ಯರನ್ನು ದ್ಯುಲೋಕಸ್ಥರಾದ ದೇವತೆಗಳೊಡನೆ ಸೇರಿಸಿ

ಅವರ ಮಾತೆಯಾದ ಅದಿತಿಯನ್ನು ಮಾತ್ರ ।ಅಂತರಿಕ್ಷಸ್ಥರಾದ ದೇವತೆಗಳೊಡನೆ ಸೇರಿಸದಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ, ಆದರೆ ಯಾಸ್ಕರು ನಿಷ್ಕೃಷ್ಟವಾದ ವರ್ಗೀಕರಣದಲ್ಲಿ ಪ್ರಯತ್ನಿಸಿದ್ದಾರೆಂದು ಹೇಳಲಾಗುವುದಿಲ್ಲ.

**೬. ಅದಿತಿ ಮತ್ತು ದಿತಿ :—**

" ಎಲೈ ಮಿತ್ರಾವರುಣರೇ, ಉಷಃಕಾಲದಲ್ಲಿ ನಿಮ್ಮ ಸುವರ್ಣನಿರ್ಮಿತವಾದ ರಥವನ್ನು ಹತ್ತಿ ಅದಿತಿಯನ್ನೂ ದಿತಿಯನ್ನೂ ವೀಕ್ಷಿಸಿರಿ "

(ಋ. ಸಂ. ೫.೬೨-೮)

ಎಂಬ ಅರ್ಥವನ್ನು ಕೊಡುವ '**ಹಿರಣ್ಯರೂಪಂ**' ಎಂಬ ಮಂತ್ರದಲ್ಲಿ ಅದಿತಿಯು ದಿತಿಯೊಂದಿಗೆ ನಿರ್ದಿಷ್ಟಳಾಗಿದ್ದಾಳೆ. ಅದಿತಿ—ದಿತಿ ಈ ಎರಡು ಪದಗಳೂ ಸಹ ಒಂದಕ್ಕೊಂದಕ್ಕೆ ವ್ಯತ್ಯಾಸವನ್ನು ತೋರಿಸುವ ಅರ್ಥದಾಯಕವಾಗಿರುತ್ತದೆ. ಅಥವಾ ಒಂದರ ನ್ಯೂನತೆಯನ್ನು ಇನ್ನೊಂದು ಪೂರ್ಣಗೊಳಿಸುವುದಾಗಿರುತ್ತದೆ. ಈ ರೀತಿ ಒಂದರ್ಥದಲ್ಲಿ ಪರಸ್ಪರ ವಿರೋಧಸೂಚಕವೂ, ಇನ್ನೊಂದರ್ಥದಲ್ಲಿ ಪರಸ್ಪರ ಪರಿಪೂರಕವೂ ಆದ ಈ ಎರಡು ದೇವತೆಗಳ ಸಂಬಂಧವನ್ನೂ ಮತ್ತು ಭಿನ್ನತೆಯನ್ನೂ ಮೇಲಿನ ಮಂತ್ರವು ಸೂಚಿಸುತ್ತವೆ.

[ಇದೇ ಪದಗಳು ವಾಜಸನೇಯಸಂಹಿತೆಯಲ್ಲಿಯೂ ಸಹ ಪ್ರಯುಕ್ತವಾಗಿವೆ [೧೦-೧೬] ಇದಕ್ಕೆ ಭಾಷ್ಯಕಾರರು ಅಧಿದೈವಾರ್ಥದಲ್ಲಿ ತಾತ್ಪರ್ಯವನ್ನು ಹೇಳಿದ್ದಾರೆ. **ಅದಿತಿ** ಶಬ್ದಕ್ಕೆ ದಾರಿದ್ರ್ಯರಹಿತನೆಂದೂ (ಅದೀನ) ಮತ್ತು **ದಿತಿ** ಶಬ್ದಕ್ಕೆ ದರಿದ್ರನೆಂದೂ (ದೀನ) ಅರ್ಥಮಾಡಿದ್ದಾರೆ. ಎಂದರೆ ವಿಹಿತಾನುಷ್ಠಾತನಾದವನು ಅದಿತಿಯು; ನಾಸ್ತಿಕವರ್ತನೆಯುಳ್ಳವನು ದಿತಿಯು. ಈ ರೀತಿಯ ವ್ಯತ್ಯಾಸವನ್ನು ತೋರಿಸಿವೆ.

ಸಾಯಣರು ಋ.ಸಂ. ೫-೬೨-೮ನೇ ಮಂತ್ರದ ಭಾಷ್ಯದಲ್ಲಿ **ಅದಿತಿ**ಯೆಂದರೆ ಅಖಂಡನೀಯವಾದ **ಭೂಮಿ**ಯೆಂದೂ, ದಿತಿ ಯೆಂದರೆ ಖಂಡನೀಯವಾದ ಎಂದರೆ ವೈಯಕ್ತಿಕವಾದ ಪ್ರಜಾದಿಗಳುಳ್ಳ **ಭೂಮಿ**ಯೆಂದೂ ಅರ್ಥಮಾಡಿದ್ದಾರೆ. Roth ಎಂಬ ಜರ್ಮನ್ ಪಂಡಿತನು ಅದಿತಿಶಬ್ದಕ್ಕೆ ನಿತ್ಯವೆಂದೂ, ದಿತಿ ಶಬ್ದಕ್ಕೆ ಅನಿತ್ಯವೆಂದೂ ಅರ್ಥಮಾಡಿದಾನೆ.

(Journal of German Oriental Society. vol. VI p. 71)

ಒಟ್ಟಿನಲ್ಲಿ ಎಲ್ಲಾ ಸನ್ನಿವೇಶಗಳನ್ನೂ ಪರಿಶೀಲಿಸಿದರೆ, ಅದಿತಿಯು ಅಂತರಿಕ್ಷವನ್ನೂ, ದಿತಿಯು ಪೃಥ್ವಿಯನ್ನೂ ಪ್ರತಿಬಿಂಬಿಸುವ ದೇವತೆಗಳೆನ್ನಬಹುದೆಂದು ತೋರುತ್ತದೆ. ಪ್ರಕೃತಿಯ ಎಲ್ಲಾ ಅವಸ್ಥೆಗಳನ್ನೂ ಒಳಗೊಂಡಿರುವ ಪರಿಪೂರ್ಣಾವಸ್ಥೆಯನ್ನು ಈ ಎರಡು ತತ್ತ್ವಗಳೂ ಸೇರಿ ಪ್ರತಿಬಿಂಬಿಸುವುವು ಎಂದೂ ಹೇಳಬಹುದು.

ಋ.ಸಂ. ೪-೨-೧೧ನೇ ಮಂತ್ರದಲ್ಲಿ ಪ್ರಯುಕ್ತವಾಗಿರುವ ದಿತಿಶಬ್ದಕ್ಕೆ ಸಾಯಣರು **ಉದಾರಿಯಾದ ದಾನಿಯೆಂದೂ,** ಅದಿತಿ ಶಬ್ದಕ್ಕೆ ದಾನಮಾಡದಿರುವ **ಲೋಭಿ**ಯೆಂದೂ ಅರ್ಥಮಾಡಿದ್ದಾರೆ. ದಿತಿಂ— **ದಾತಾರಂ ; ಅದಿತಿಂ— ಅದಾತುಃ ಪಂಚಮ್ಯರ್ಥೇ ದ್ವಿತೀಯಾ ।** ಎಂದು ವಿವರಿಸಿದೆ.

ಅದಿತಿಯಿಲ್ಲದೇ, ಕೇವಲ ದಿತಿಪ್ರಯೋಗವಿರುವ ಸಂದರ್ಭಗಳೂ ಕೆಲವಿವೆ. ಉದಾಹರಣೆಗೆ—

"ಎಲೈ ಅಗ್ನಿಯೇ, ಪೂಜ್ಯರಾದ ಸವಿತೃ ಮತ್ತು ಭಗದೇವತೆಗಳೇ, ನಮಗೆ ಪ್ರಖ್ಯಾತಿಯನ್ನೂ ಸಂತತಿಯನ್ನೂ

ಅನುಗ್ರಹಿಸಿರಿ. ದಿತಿಯೂ ಸಹ ನಮ್ಮ ಅಪೇಕ್ಷಿತವಾದ ವಸ್ತುಗಳನ್ನು ಅನುಗ್ರಹಿಸಿ ಕೊಡುತ್ತಾಳೆ" (ಋ. ಸಂ. ೭-೧೫-೧೨)

ಎಂಬರ್ಥವನ್ನು ಕೊಡುವ 'ತ್ವಮಗ್ನೇ' ಎಂಬ ಮಂತ್ರದಲ್ಲಿ **ದಿತಿ** ಶಬ್ದಕ್ಕೆ ಸಾಯಣರು **ದೇವಿಯೆಂಬ** ಅರ್ಥವನ್ನು ಮಾತ್ರ ಹೇಳಿದ್ದಾರೆ. ಇಲ್ಲಿ ದಿತಿಯು **ಅದಿತಿಯೊಡನೆ** ಸೇರಿಲ್ಲ. ಈ ಸಂದರ್ಭದಲ್ಲಿ ಆಂಗ್ಲ ಅಥವಾ ಜರ್ಮನ್ ಪಂಡಿತರು ದಿತಿಶಬ್ದಕ್ಕೆ ತಮ್ಮದೇ ಆದ ಅರ್ಥವನ್ನು ತಮ್ಮ ಕಲ್ಪನೆಗನುಸಾರವಾಗಿ ಸೇರಿಸಿದ್ದಾರೆ. ಉದಾಹರಣೆಗೆ Roth ಎಂಬುವನು "ದಿತಿಯೆಂದರೆ ಔದಾರ್ಯವನ್ನಾಗಲಿ ಅಥವಾ ಸಂಪದ್ವೃದ್ಧಿಯನ್ನಾಗಲಿ ಪ್ರತಿಬಿಂಬಿಸುವ ದೇವತಾ ವಿಶೇಷ"ವೆಂದು ಹೇಳಿದ್ದಾನೆ. Max Muller ಎಂಬುವನು "ಈ ಸಂದರ್ಭದಲ್ಲಿ ಅದಿತಿ ಪದವೇ ದಿತಿಯಾಗಿ ಪಾಠಭೇದದಿಂದ ಪರಿವರ್ತಿತವಾಗಿದೆ"ಯೆಂದೂ ತಿಳಿಸಿದ್ದಾನೆ. ಅ. ವೇ. ೧೫-೬-೭; ೧೫-೧೮-೪; ವಾ. ಸಂ. ೧೮-೨೨ ಈ ಮಂತ್ರಗಳಲ್ಲಿ ದಿತಿ ಮತ್ತು ಅದಿತಿಯರು ಪ್ರತ್ಯೇಕ ದೇವತೆಗಳೆಂದು ಸ್ಪಷ್ಟವಾಗಿ ತಿಳಿಸಿವೆ. ಅ. ವೇ. ೭-೭-೧ ರಲ್ಲಿ ದಿತಿ ಪುತ್ರರಾರು ಮತ್ತು ಅದಿತಿ ಪುತ್ರರಾರು ಎಂಬುದನ್ನು ನಿರ್ದೇಶಿಸಿದೆ. ಈ ದಿತಿ ಪುತ್ರರೇ ಮುಂದೆ ಪುರಾಣಾದಿಗಳಲ್ಲಿ ದೈತ್ಯರೆಂದೂ, ದೇವತೆಗಳ ಶತ್ರುಗಳೆಂದೂ ಪರಿಗಣಿತರಾಗಿದ್ದಾರೆ.

**7. ವಿಶ್ವಪ್ರಕೃತಿಯನ್ನು ಪ್ರತಿಬಿಂಬಿಸುವ ದೇವತಾತತ್ತ್ವವೇ ಅದಿತಿಯಾಗಿರಲು ಸಾಧ್ಯ.**

ವಿಶ್ವವ್ಯಾಪಕವಾದ ಪ್ರಕೃತಿಯನ್ನೇ ಅದಿತಿಯು ಪ್ರತಿಬಿಂಬಿಸುತ್ತಾಳೆ ಎಂದು ತಿಳಿಸುವ ಮಂತ್ರಗಳೂ ಇರುತ್ತವೆ. ದ್ಯುಲೋಕಸ್ಥವೂ, ಅಂತರಿಕ್ಷಸ್ಥವೂ ಆದ ಯಾವ ಸಕಲ ವಸ್ತುಗಳುಂಟೋ, ದೈವೀ ಮತ್ತು ಮಾನುಷ ಎಂಬ ಯಾವ ಯಾವ ಭೂತಗಳುಂಟೋ, ಭೂತ ಭವಿಷ್ಯತ್ತು ಮತ್ತು ವರ್ತಮಾನಾದಿಗಳಿಗೆಲ್ಲಾ ಸೇರಿದ ಯಾವ ತತ್ತ್ವವಿಶೇಷವುಂಟೋ, ಅವೆಲ್ಲಕ್ಕೂ ಅದಿತಿಯೇ ಮೂಲಳು ಮತ್ತು ಅವಳೇ ಸರ್ವಾತ್ಮಳಾಗಿದ್ದಾಳೆ.

"ಅದಿತಿರ್ದ್ಯೌರದಿತಿರಂತರಿಕ್ಷಂ............................ಅದಿತಿರ್ಜನಿತ್ವಂ" (ಋ. ಸಂ. ೧-೮೯-೧೦)

ಅಖಂಡಳಾದ ಅದಿತಿಯು ಸಕಲ ವಿಶ್ವಕ್ಕೂ ಜನ್ಮದಾತೆಯು. ಅವಳೇ ಜಗಜ್ಜನನಿಯು, ಅವಳೇ ಜಗಜ್ಜನಕನು. ಉತ್ಪನ್ನವಾದ ಸಕಲ ವಸ್ತುವೂ ಅವಳೇ. ಅವಳೇ ಎಲ್ಲದಕ್ಕೂ ಉತ್ಪತ್ತಿಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದರಿಂದ ಕೂಡಿದ ಐದುಜಾತಿಯ ಜನರೂ ಅವಳೇ. ದೇವಗಂಧರ್ವಾದಿಗಳೂ ಅವಳೇ. ಅದಿತಿಯೇ ಸಕಲ ದೇವತೆಗಳು. ಅವಳೇ ಪ್ರಕಾಶಮಾನವಾದ ಸ್ವರ್ಗವು. ಅವಳೇ ಅಂತರಿಕ್ಷವು ಅವಳೇ ಸಕಲ ವಿಶ್ವವು. ಅವಳೇ ಹುಟ್ಟಿರುವ ಮತ್ತು ಹುಟ್ಟುವ ಸಮಸ್ತಕ್ಕೂ ನಿಯಾಮಕಳು.

ಸಾಯಣರು ಈ ವಾಕ್ಯಕ್ಕೆ ಭಾಷ್ಯವನ್ನು ಹೇಳುವಾಗ "ಇಲ್ಲಿ ಅದಿತಿಶಬ್ದಕ್ಕೆ ಪೃಥ್ವಿಯೆಂದಾಗಲಿ ಅಥವಾ ದೇವಮಾತೆಯೆಂದಾಗಲಿ ಅರ್ಥ" ಎಂದು ತಿಳಿಸಿ ಅವಳ ವಿಶ್ವವ್ಯಾಪಕತ್ವವನ್ನು ವಿವರಿಸಿದ್ದಾರೆ. ಅದಿತಿರದೀನಾ **ಅಖಂಡನೀಯಾ ವಾ ಪೃಥ್ವೀ ದೇವಮಾತಾ ವಾ ।............ಏವಂ ಸಕಲಜಗದಾತ್ಮನಾ ಅದಿತಿಃಸ್ತೂಯತೇ** ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ (**ಅದಿತಿರದೀನಾ ದೇವಮಾತಾ**) ಮಹಾತ್ಮಳಾದ ದೇವಮಾತೆಯೆಂದರ್ಥಮಾಡಿದ್ದಾರೆ. (ನಿ. ೪.೨೨) ಮೇಲೆ ಉದ್ಧೃತವಾಗಿರುವ ೧-೮೯-೧೦ನೇ ಮಂತ್ರದಲ್ಲಿ ಅವಳ ಮಾಹಾತ್ಮ್ಯವೂ ವಿವಿಧವಾದ ರೂಪಪ್ರಕಾಶನವೂ ವಿವೃತವಾಗಿದೆ.

**"ಸ್ವಯಂಭು ಬ್ರಹ್ಮ ಪರಮಂ ತಪೋ ಯತ್ । ಸ ಏವ ಪುತ್ರಃ ಸ ಪಿತಾ ಸ ಮಾತಾ"** ಸ್ವಯಂಭುವಾದ ಪರಬ್ರಹ್ಮನೇ ಪರಮಪವಿತ್ರವಾದ ತಪಸ್ಸು. ಆತನೇ ಪುತ್ರನು, ಆತನೇ ಮಾತೃವು, ಪಿತೃವು ಇತ್ಯಾದಿಯಾಗಿ ಯಾವ ರೀತಿ ಬ್ರಹ್ಮನಿಗೆ ಸರ್ವಾತ್ಮತ್ವವೂ ವಿಶ್ವವ್ಯಾಪಕತ್ವವೂ ವರ್ಣಿತವಾಗಿದೆಯೋ (ತೈ. ಬ್ರಾ. ೩-೧೨-೩-೧) ಅದೇ ರೀತಿಯಲ್ಲಿ ಈ ಮಂತ್ರದಲ್ಲಿ ಅದಿತಿಯು ವರ್ಣಿತಳಾಗಿದ್ದಾಳೆ.

**ಅದಿತಿ**ತತ್ತ್ವದ ಮಾಹಾತ್ಮ್ಯವನ್ನರಿಯಲು ಇನ್ನೊಂದು ಬಹು ಮುಖ್ಯವಾದ ಸನ್ನಿವೇಶವನ್ನು ಪರಿಶೀಲಿಸಬಹುದು. ಆ ಮಂತ್ರದ ತಾತ್ಪರ್ಯವು ಈ ರೀತಿಯಲ್ಲಿದೆ—

" ದೇವತೆಗಳಲ್ಲಿ ಯಾರು ಶ್ರೇಷ್ಠರು ? ಯಾವ ದೇವನನ್ನು ನೆನೆದರೆ ನನ್ನ ಈ ಕಷ್ಟವು ಪರಿಹಾರವಾಗುತ್ತದೆ ? ನನ್ನ ತಂದೆಯನ್ನೂ ತಾಯಿಯನ್ನೂ ಯಾವಾಗ ನೋಡುವೆನು ? (೧-೨೪-೧)

ಐತರೇಯ ಬ್ರಾಹ್ಮಣದಲ್ಲಿ ಇದೇ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳನ್ನು ಉದ್ಧರಿಸಿ ಈ ಮಂತ್ರಗಳು ಶುನಃಶೇಫನಿಂದ ಪಠಿತವಾದವೆಂದು ತಿಳಿಸಿದೆ. ಈ ಸನ್ನಿವೇಶಕ್ಕೂ ಶುನಃಶೇಫನಿಗೂ ನಿಕಟವಾದ ಸಂಬಂಧವಿದೆಯೋ ಇಲ್ಲವೇ ಎಂಬುದರ ವಿಷಯದಲ್ಲಿ ಕೆಲವು ಪಂಡಿತರಲ್ಲಿ ಅಭಿಪ್ರಾಯ ಭೇದವಿದೆ. ಅದು ಇಲ್ಲಿ ಅಷ್ಟು ಮುಖ್ಯವಲ್ಲ. ಯಾರು ಈ ಮಂತ್ರವನ್ನು ಪಠಿಸಿದ್ದರೂ ಆಪತ್ತಿನಲ್ಲಿ ಸಿಕ್ಕಿರುವ ಪುರುಷನು ಆಪತ್ತಿನಿಂದ ಪಾರಾಗಬೇಕೆಂಬ ಬಯಕೆಯಿಂದ ಪಠಿಸತಕ್ಕ ಮಂತ್ರವಾಗಿದೆ.

**8. ಅದಿತಿಯು ಪಾಪವನ್ನು ಕ್ಷಮಿಸತಕ್ಕ ದೇವತೆ;—**

Benfey ಎಂಬ ಪಂಡಿತನು ಇದೇ ಮೇಲೆ ಉದ್ಧರಿಸಿದ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳಲ್ಲಿ **ಅದಿತಿ** ಶಬ್ದಕ್ಕೆ ಅರ್ಥವನ್ನು ಹೇಳುವಾಗ ಈ ಪದಕ್ಕೆ ಪಾಪರಾಹಿತ್ಯವೆಂಬರ್ಥವನ್ನು ತಿಳಿಸಿದ್ದಾನೆ. (Orient and Occident I-33). ಈತನು ಹೇಳಿರುವ ತಾತ್ಪರ್ಯವು ಒಂದು ದೃಷ್ಟಿಯಿಂದ ಸಮಂಜಸವಾಗಿದೆ. **ಅದಿತಿಯು** ಪಾಪನಾಶಕಳು ಎಂಬುದು ಮಾತ್ರ ಪ್ರಸಿದ್ಧವಾದ ವಿಷಯವಾಗಿದೆ. ಪಾಪರಹಿತಳು ಎಂಬುದೂ **ಅನಾಗಸ** ಇತ್ಯಾದಿ ವಿಶೇಷಣಗಳಿಂದ ವಿವೃತವಾಗಿದೆ. ಆದುದರಿಂದಲೇ ಅವಳನ್ನು ನಿರ್ದೇಶಿಸಿದ ಪ್ರಾರ್ಥನೆಯೂ ಈ ರೀತಿಯಿರುತ್ತದೆ.

" ಎಲೈ ವರುಣನೇ, ನನ್ನ ಶಿರೋಭಾಗದಲ್ಲಿರುವುದೂ, ಅಧಃಪ್ರದೇಶದಲ್ಲಿರುವುದೂ ಆದ ಎಲ್ಲಾ ಬಂಧನಗಳನ್ನು ಬಿಡಿಸು. ನಾವು ಅದಿತಿಯ ವಿಷಯದಲ್ಲಿ ಪಾಪರಹಿತರಾಗಿರೋಣ" (೧-೨೪-೧೫)

ಹೀಗೆಯೇ ಅದಿತಿಯ ಅನುಗ್ರಹದಿಂದ ಲಭಿಸತಕ್ಕ ಪಾಪರಾಹಿತ್ಯವೂ ಆತ್ಮಶುದ್ಧಿಯೂ ವಿವೃತವಾಗಿರುವ ಕೆಲವು ವಾಕ್ಯಗಳನ್ನು ಕೆಳಗೆ ಉದ್ಧರಿಸಿದೆ.

" ಅದಿತಿಯು ನಮ್ಮನ್ನು ಪಾಪರಹಿತರನ್ನಾಗಿ ಮಾಡಲಿ" (೧-೧೬೨-೨೨)

" ಎಲೈ ಅದಿತಿಯೇ, ಮಿತ್ರಾವರುಣರೇ, ನಿಮ್ಮ ವಿಷಯದಲ್ಲಿ ನಾವೇನಾದರೂ ಪಾಪವನ್ನಾಚರಿಸಿದ್ದರೆ, ದಯವಿಟ್ಟು ಅದನ್ನು ಕ್ಷಮಿಸಿ ನಮ್ಮನ್ನು ಅನುಗ್ರಹಿಸಿರಿ." (೨-೨೭-೧೪)

"ಎಲೈ ಅಗ್ನಿಯೇ, ಮಾನವರಿಗೆ ಸಹಜವಾದ ಅವಿವೇಕದಿಂದ ನಾವು ಯಾವ ತಪ್ಪನ್ನು ಮಾಡಿದ್ದರೂ ಸಹ. ನಮಗೆ ಅದಿತಿಯ ಅನುಗ್ರಹವು ಲಭಿಸುವುದಕ್ಕಾಗಿ ನಮ್ಮನ್ನು ಪಾಪರಹಿತರನ್ನಾಗಿ ಮಾಡು." (೪–೧೨–೪)

"ದೇವತಾತ್ಮನಾದ ಸವಿತೃವಿನ ಸಹಾಯದಿಂದ ನಾವು ಅದಿತಿಯ ವಿಷಯದಲ್ಲಿ ಯಾವ ಪಾಪವನ್ನೂ ಆಚರಿಸದೇ ಇರುವಂತಾಗಲಿ." (೫–೮೨–೬)

"ಅದಿತಿಯ ಸಂಕಲ್ಪಿತವಾದ ನಿಯಮವನ್ನು ನಾವು ಪೂರ್ಣವಾಗಿ ಪಾಲಿಸುತ್ತಾ ವರುಣನಲ್ಲಿ ಯಾವ ಪಾಪವನ್ನೂ ಆಚರಿಸದಿರೋಣ. ವರುಣನು ಪಾಪಿಷ್ಠರನ್ನೂ ರಕ್ಷಿಸುವ ಸ್ವಭಾವವುಳ್ಳವನು." (೭–೮೭–೭)

"ಎಲೈ ಅಗ್ನಿಯೇ, ನಾವು ಯಾವ ಪಾಪವನ್ನು ಮಾಡಿದ್ದರೂ, ನಮ್ಮಲ್ಲಿ ದಯೆಯಿಂದ ಅದನ್ನು ಕ್ಷಮಿಸು. ಅರ್ಯಮನೂ, ಅದಿತಿಯೂ ಆ ಪಾಪವನ್ನು ನಾಶಮಾಡಲಿ." (೭–೯೩–೭)

"ಮಿತ್ರನು ನಮ್ಮ ಪ್ರಾರ್ಥನೆಯನ್ನು ಕೇಳಲಿ. ಅದಿತಿಯೂ, ದೇವತಾತ್ಮನಾದ ಸವಿತೃವೂ ನಮ್ಮನ್ನು ವರುಣನ ಮುಂದೆ ಪಾಪರಹಿತನೆಂದು ತಿಳಿಸಲಿ." (೧೦–೧೨–೮)

**" ಅನಾಗಾಸ್ತ್ವೇ ಅದಿತಿತ್ವೇ ತುರಾಸ ಇಮಂ ಯಜ್ಞಂ ದಧತು ಶ್ರೋಷಮಾಣಾಃ ।**
(ಋ. ಸಂ. ೭–೫೧–೧)

ಎಂಬ ಮಂತ್ರದಲ್ಲಿ **ಅದಿತಿತ್ವ** ಮತ್ತು **ಅನಾಗಾಸ್ತ್ವ** ಎಂಬ ಎರಡು ಪದಗಳೂ ಒಟ್ಟಿಗೆ ಪ್ರಯುಕ್ತವಾಗಿವೆ. "ಮಹಾತ್ಮರಾದ ದೇವತೆಗಳು, ನಮ್ಮ ಪ್ರಾರ್ಥನೆಯನ್ನು ಆಲಿಸಿ, ನಮ್ಮ ಯಜ್ಞಕರ್ಮಗಳನ್ನು ಪಾಪರಹಿತಗಳನ್ನಾಗಿಯೂ, ಅಭ್ಯುದಯಕಾರಕಗಳನ್ನಾಗಿಯೂ ಮಾಡಲಿ" ಎಂಬ ಈ ಪ್ರಾರ್ಥನೆಯಿದೆ. ಆದರೆ, ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಈ ಎರಡು ಪದಗಳ ಪ್ರಯೋಗವೂ ಒಟ್ಟಿಗಿದ್ದರೂ ಸಹ ಎರಡಕ್ಕೂ ಸಮಾನಾರ್ಥವಿರಬೇಕೆಂಬ ನಿಯಮವಿಲ್ಲ. **ಅದಿತಿ** ಶಬ್ದಕ್ಕೆ ಬೇರೆ ವಿಧವಾದ ನಿರ್ವಚನವನ್ನು ತೋರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**"ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ । ಸರ್ವಸ್ಯೈತಸ್ಯಾತ್ತಾ ಭವತಿ । ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ"** (ಶ. ಬ್ರಾ. ೧೦–೬–೫–೫ ; ಬೃ. ಉ. ೧–೨–೫)

ಬ್ರಹ್ಮನು ಯಾವ ಯಾವ ಪದಾರ್ಥಗಳನ್ನು ನಿರ್ಮಿಸಿದನೋ ಅವುಗಳೆಲ್ಲವನ್ನೂ ಪುನಃ ಭಕ್ಷಿಸತೊಡಗಿದನು. ಈ ಭಕ್ಷಣಕಾರ್ಯವಿದ್ದುದರಿಂದಲೇ **ಅದಿತಿ** (ಮೃತ್ಯು) ನಾಮನಿರ್ದೇಶವಾಯಿತು. ಈ ತತ್ತ್ವವನ್ನರಿತವನು ತಾನೂ **ಅದಿತಿ** ಸ್ವರೂಪವನ್ನು ಹೊಂದುವನು ಎಂಬುದಾಗಿ **ಅದಿತಿ**ಯ ನಾಮನಿರ್ವಚನವನ್ನು ತಿಳಿಸಿ ಈ ದೇವತೆಯ ವಿಶ್ವನಿಯಾಮಕತ್ವವನ್ನೂ ತಿಳಿಸಿದೆ. ಪರಬ್ರಹ್ಮನೂ ಈ ಕಾರಣದಿಂದ ಈ ನಾಮನಿರ್ದಿಷ್ಟನಾಗಿದ್ದಾನೆ.

ಅಲ್ಲದೇ, **"ವಿಶ್ವೇಷಾಮದಿತಿರ್ಯಜ್ಞಿಯಾನಾಂ"**; (೪–೧–೨೦) ; **"ಅಮೂರಃ ಕವಿರದಿತಿರ್ವಿವಸ್ವಾನ್"** (೭–೯–೩) ಇತ್ಯಾದಿ ಸ್ಥಳಗಳಲ್ಲಿ **ಅದಿತಿ** ಶಬ್ದವು **ಅಗ್ನಿಗೆ** ವಿಶೇಷಣವಾಗಿದೆ. ೯–೮೦–೫ರಲ್ಲಿ **ಅರ್ಯಮನಿಗೆ** ವಿಶೇಷಣವಾಗಿದೆ. ಯಾಸ್ಕರು ನಿರುಕ್ತದಲ್ಲಿ **"ಅಗ್ನಿರಪ್ಯದಿತಿರುಚ್ಯತೇ."** (ನಿ. ೧೦–೨೩), ಅಗ್ನಿಯೂ ಅದಿತಿ ಶಬ್ದವಾಚ್ಯನು ಎಂದು ತಿಳಿಸಿದ್ದಾರೆ. ಮತ್ತು ತಮ್ಮ ತಾದಾತ್ಮ್ಯಬೋಧಕವಾದ ವಾಕ್ಯವನ್ನು ಸಮರ್ಥಿಸಲು,

" ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವತಾತಾ "

(ಋ. ಸಂ. ೧-೯೪-೧೫)

ಎಂಬ ವಾಕ್ಯವನ್ನುದಾಹರಿಸಿ ಅಲ್ಲಿ ಅಗ್ನಿಶಬ್ದಕ್ಕೆ ವಿಶೇಷಣವಾಗಿ ಅದಿತಿಶಬ್ದದ ಪ್ರಯೋಗವಿರುವುದನ್ನು ತಿಳಿಸಿದ್ದಾರೆ. ಅಖಂಡನೀಯನಾದ ಎಂದರೆ ಪೂರ್ಣನಾದ ಅಗ್ನಿಯೆಂದರ್ಥವೆಂದು ಸಾಯಣರು ವಿವರಿಸಿದ್ದಾರೆ.

ಈ ರೀತಿ ಪಾಪನಾಶಕಳೂ, ಪಾಪಗಳನ್ನು ಕ್ಷಮಿಸುವವಳೂ ಆದ ಅದಿತಿಯ ರಕ್ಷಣೆಯನ್ನು ಬೇಡಿ ಕ್ಷಮೆಯನ್ನು ಯಾಚಿಸುವ ಅರ್ಥವನ್ನು ಕೊಡತಕ್ಕ ವಾಕ್ಯಗಳೆಲ್ಲವೂ ಸಹ ಅದಿತಿಯ ಅನಂತಶಕ್ತಿಯನ್ನು ವರ್ಣಿಸುವುದಾಗಿವೆ. ಈ ವಿಶೇಷಣಗಳೂ ಮತ್ತು ವರ್ಣನೆಗಳೂ ಅದಿತಿಯೇ ವಿಶ್ವನಿಯಮನಶಕ್ತಿಯುಳ್ಳವಳೆಂದು ತಿಳಿಸುತ್ತವೆ. ಈ ನಿಯಮನಗಳು ಕೇವಲ ಭೌತಿಕಶಕ್ತಿಯ ಪ್ರದರ್ಶನವಾಗಿರದೆ, ಆಧ್ಯಾತ್ಮಿಕನೀತಿನಿಯಮಗಳುಳ್ಳವು ಎಂದೂ ತಿಳಿಯುತ್ತದೆ. ಇದರಂತೆಯೇ, ಸವಿತೃ, ಸೂರ್ಯ, ಉಷಸ್ಸು, ದ್ಯಾವಾಪೃಥಿವಿಗಳು ಇತ್ಯಾದಿ ದೇವತೆಗಳೂ ಪ್ರಾರ್ಥಿತರಾಗಿದ್ದಾರೆ. (೪-೫೪-೩ ; ೧೦-೩೫-೨, ೩ ; ೩-೫೪-೧೯ ಇತ್ಯಾದಿ).

## 9. ವಿಶ್ವನಿಯಾಮಕಳಾದ ಅದಿತಿಯೂ ಸಹ ಇತರ ಶಕ್ತಿಗಳಿಂದ ನಿಯಂತ್ರಿತಳಾದವಳು ಎಂದು ವರ್ಣಿಸುವ ಕೆಲವು ಪ್ರಕರಣಗಳು :—

ವಿಶ್ವಪ್ರಭುಗಳೆಂದೆನ್ನಿಸಿಕೊಂಡ ವರುಣಾದಿ ದೇವತೆಗಳೂ, ಮಾತೆಯೆಂದು ವರ್ಣಿತಳಾದ ಅದಿತಿಯೂ ಸಹ ಕೆಲವು ವೇಳೆ ಇತರ ಶಕ್ತಿಗಳ ನಿಯಮನಕ್ಕೆ ಅಧೀನಳಾಗಿರಬೇಕೆಂಬ ವರ್ಣನೆಗಳೂ ಕೆಲವಿವೆ. ಉದಾಹರಣೆಗೆ :—

ಅದಿತಿಯು ತನ್ನ ಪುತ್ರರಾದ ವರುಣ, ಮಿತ್ರ, ಅರ್ಯಮ ಇತ್ಯಾದಿ ದೇವತೆಗಳೊಡನೆ ಕೂಡಿಕೊಂಡು ಸವಿತೃವನ್ನು ಸ್ತುತಿಸುತ್ತಲೂ, ಸವಿತೃವಿನ ಸಹಾಯವನ್ನು ಪ್ರಾರ್ಥಿಸುತ್ತಲೂ ಇರತಕ್ಕ ವರ್ಣನೆಯು ೭-೩೮-೪ ನೇ ಮಂತ್ರದಲ್ಲಿರುವುದು. ೮-೧೨-೧೪ ರಲ್ಲು ಅದಿತಿಯು ಇಂದ್ರನನ್ನು ಸ್ತುತಿಸಲು ಒಂದು ಸ್ತುತಿರೂಪವಾದ ಕೃತಿಯನು ನಿರ್ಮಿಸಿದಳು ಎಂದು ತಿಳಿಸಿದೆ. (**ಅದಿತಿಃ ಸ್ತೋಮಮಿಂದ್ರಾಯ ಜೀಜನತ್**)

## 10. ಋಕ್ಸಂಹಿತೆಯ ೧೦ ನೇ ಮಂಡಲದ ೭೨ ನೇ ಸೂಕ್ತದಲ್ಲಿ ವರ್ಣಿತವಾಗಿರುವಂತೆ ವಿಶ್ವಸೃಷ್ಟಿಯ ಕ್ರಮ :—ಅದಿತಿ, ದಕ್ಷ, ಆದಿತ್ಯರು ಮತ್ತು ಇತರ ದೇವತೆಗಳ ಉತ್ಪತ್ತಿಸ್ವರೂಪ :—

ಋಕ್ಸಂಹಿತೆಯಲ್ಲಿ ಹತ್ತನೇ ಮಂಡಲದ ೭೨ ನೇ ಸೂಕ್ತವು ಸಂಹಿತೆಯ ಇತರ ಸೂಕ್ತಗಳಷ್ಟು ಪ್ರಾಚೀನವಾದುದಲ್ಲ ಎಂದು ಕೆಲವು ಪಂಡಿತರ ಮತವಾಗಿದೆ. ಆದರೆ ಇದಕ್ಕೆ ಸರಿಯಾದ ಆಧಾರವನ್ನು ಕೊಡಲಾಗುವುದಿಲ್ಲ. ಆದರೆ ಈ ಸೂಕ್ತವು ಪ್ರಾಚೀನವೇ ಅಥವಾ ಅರ್ವಾಚೀನವೇ ಎಂಬ ವಿಷಯದ ವಿಮರ್ಶವು ಸದ್ಯಃ ಅಪ್ರಕೃತ. ಪ್ರಕೃತದಲ್ಲಿ ಉಪಯುಕ್ತವಾದುದು, ಈ ಸೂಕ್ತದಲ್ಲಿ ವಿವರಿಸಿರುವ ವಿಶ್ವಸೃಷ್ಟಿಯ ವರ್ಣನಾಕ್ರಮ. ಅದರ ವಿವರವು ಈ ರೀತಿಯಿದೆ.

(೧) ಪ್ರಶಂಸಾತ್ಮಕವಾದ ಈ ಸೂಕ್ತಮಂತ್ರಗಳಿಂದ ನಾವು ದೇವತೆಗಳ ಉತ್ಪತ್ತಿಕ್ರಮವನ್ನು ವರ್ಣಿಸುವೆವು. ಈ ಸ್ತುತಿರೂಪವಾದ ಮಂತ್ರಗಳ ಸಹಾಯದಿಂದ ಉತ್ತರಯುಗಕ್ಕೆ ಸೇರಿದ ನಮ್ಮ ಕರ್ಮಗಳನ್ನು ಪೂರ್ವಯುಗದ ದೇವತೆಗಳು ತಿಳಿಯಬಲ್ಲರು.

(೨) ಕಮ್ಮಾರನು ತಿದಿಯನ್ನು ಒತ್ತಿ ಒಳಗಿರುವ ಗಾಳಿಯನ್ನು ಹೊರಕ್ಕೆ ಬರಮಾಡುವಂತೆ, ಬ್ರಹ್ಮಣಸ್ಪತಿಯು ತಲ್ಲೀನವಾದ ಈ ದೇವತೆಗಳನ್ನು ಸೃಷ್ಟಿರೂಪದಲ್ಲಿ ಹೊರಗೆ ಆವಿರ್ಭೂತರಾಗುವಂತೆ ಮಾಡಿದನು. ದೇವತೆಗಳ ಅತ್ಯಂತ ಪ್ರಾಚೀನವಾದ ಯುಗದಲ್ಲಿ ಅಸತ್ತಿನಿಂದ ಸತ್ತು ಪ್ರಾದುರ್ಭೂತವಾಯಿತು.

(೩) ಆದಿಯಲ್ಲಿ ಅಸತ್ತಿನಿಂದ ಸತ್ತಿನ ಆವಿರ್ಭಾವವುಂಟಾಯಿತು. ಅದರಿಂದ ದಿಕ್ಕುಗಳ ಪ್ರಕಾಶನವಾಯಿತು. ಅನಂತರ ವೃಕ್ಷಗಳಿಂದ...........

(೪) ವೃಕ್ಷಗಳಿಂದ ಪೃಥ್ವಿಯೂ, ಪೃಥ್ವಿಯಿಂದ ದಿಕ್ಕುಗಳೂ ಉತ್ಪನ್ನವಾದವು. ದಕ್ಷನಿಂದ ಅದಿತಿಯೂ ಅದಿತಿಯಿಂದ ದಕ್ಷನೂ ಉತ್ಪನ್ನರಾದರು.

(೫) ಎಲೈ ದಕ್ಷನೇ, ಅದಿತಿಯು ನಿನ್ನಿಂದ ಉತ್ಪನ್ನಳಾದಳು. ಅವಳೇ ನಿನ್ನ ಪುತ್ರಿಯು. ಅನಂತರ, ಅವಳಿಂದ ಕಲ್ಯಾಣಾತ್ಮಕರೂ ಮತ್ತು ಅಮರ್ತ್ಯರೂ ಆದ ದೇವತೆಗಳು ಜನಿಸಿದರು.

(೬) ಎಲೈ ದೇವತೆಗಳೇ, ನೀವು ಯಾವಾಗ ಚಲಿಸಿದಿರೋ, ಅಂತರಿಕ್ಷದ ಉದಕಗಳನ್ನು ಯಾವಾಗ ಪ್ರಕ್ಷುಬ್ಧವಾಗುವಂತೆ ಮಾಡಿದಿರೋ, ಆ ಒಡನೆಯೇ ನರ್ತನಕಾರರ ದೇಹದಿಂದ ಹೊರಕ್ಕೆ ಹೊರಡುವಂತೆ ಅವರ ದೇಹದಿಂದ ರೇಣುಗಳು ಹೊರಕ್ಕೆ ಬಂದವು.

(೭) ಎಲೈ ದೇವತೆಗಳೇ, ಶ್ರಮಸಹಿಷ್ಣುಗಳಾದ ಮಾನವರಂತೆ ಯಾವಾಗ ನೀವು ವಿಶ್ವವನ್ನು ವ್ಯಾಪಿಸಿ ಅಲಂಕರಿಸಿ ರಚಿಸಿದಿರೋ, ಆಗಲೇ ನೀವು ಅಂತರಿಕ್ಷರೂಪದ ಸಮುದ್ರದಲ್ಲಿ ಅಂತರ್ಗತನಾದ ಸೂರ್ಯನನ್ನು ಹೊರಕ್ಕೆ ಬರಮಾಡಿ ಪ್ರಕಾಶಿಸುವಂತೆ ಮಾಡಿದಿರಿ.

(೮) ತನ್ನ ದೇಹೋತ್ಪನ್ನರಾದ ಅಷ್ಟಪುತ್ರರಲ್ಲಿ, ಏಳು ಜನರೊಡನೆ ಮಾತ್ರ ಅದಿತಿಯು ದೇವತೆಗಳನ್ನು ಸಮೀಪಿಸಿದಳು, ಎಂಟನೆಯವನಾದ ಮಾರ್ತಾಂಡನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದಳು.

(೯) ಪೂರ್ವಯುಗಕ್ಕೆ ಸೇರಿದ ದೇವತೆಗಳನ್ನು ಅದಿತಿಯು ಸಪ್ತಪುತ್ರರೊಂದಿಗೆ ಹೋಗಿ ಸೇರಿದಳು. ಎಂಟನೆಯವನಾದ ಮಾರ್ತಾಂಡನನ್ನು ಪುನಃ ಪಡೆದಳು, ಅವನ ಉತ್ಪತ್ತಿಗಾಗಿಯೂ ಮತ್ತು ಮರಣಕ್ಕಾಗಿಯೂ ಅವನಿಗೆ ಜನ್ಮವನ್ನು ಕೊಟ್ಟಳು.

ಇಲ್ಲಿ ೭ ನೇ ಋಕ್ಕಿನಲ್ಲಿ ಪ್ರಯೋಗಿಸಿರುವ **ಯತಯಃ** ಎಂಬ ಪದದ ತಾತ್ಪರ್ಯವೇನೆಂದು ವಿಮರ್ಶಿಸುವುದು ಪ್ರಕೃತವಾಗಿದೆ. ೧೧-೭೨-೭ ನೇ ಋಕ್ಕಿನಲ್ಲಿ ಯಾವ ವಿಶ್ವರಚನೆಯ ವರ್ಣನೆಯಿದೆಯೋ ಆ ರಚನೆಗೂ, ೮-೩-೯ ಮತ್ತು ೮-೬-೧೮ ನೇ ಮಂತ್ರಗಳಲ್ಲಿ ವರ್ಣಿತರಾಗಿರುವ ಭೃಗುಗಳಿಗೂ ಕೆಲವೆಡೆಗಳಲ್ಲಿ ಸಂಬಂಧವನ್ನು ತಿಳಿಸಿದೆ. ಪ್ರಕೃತವಾದ ಮಂತ್ರದಲ್ಲಿ **ಯತಯಃ** ಎಂಬ ಪದವು ಆ ಭೃಗುಗಳನ್ನು ನಿರ್ದೇಶಿಸುತ್ತದೆ ಎಂಬುದಾಗಿ ಬೋಟ್ಲಿಂಕ್ ಮತ್ತು Roth ಎಂಬ ಪಂಡಿತರು ಅಭಿಪ್ರಾಯಪಡುತ್ತಾರೆ. ಋ. ಸಂ. ೭-೧೩-೧ ರಲ್ಲಿ ಇದೇ ಪದವು ಅಗ್ನಿಗೆ ವಿಶೇಷಣವಾಗಿರುತ್ತದೆ. **(ವೈಶ್ವಾನರಾಯ ಯತಯೇ ಮತೀನಾಂ)** ೮-೬-೧೮ ರಲ್ಲಿ **"ಯೇ ಇಂದ್ರ ಯತಯಸ್ತ್ವಾ ಭೃಗವೋ ಯೇ ಚ......."** ಎಂಬಲ್ಲಿ **ಯತಯಃ** ಎಂಬುದಕ್ಕೆ ಒಂದು ಗುಂಪಿನ ಯಜಮಾನ ಸಂತತಿಯವರು ಎಂದಾದರೂ ಅರ್ಥಮಾಡಬಹುದು.

ಋಕ್ಸಂಹಿತೆಯಲ್ಲಿ ಅಂತರ್ಗತವಾಗದಿರತಕ್ಕ ಕೆಲವು ಸಾಮಮಂತ್ರಗಳಿವೆ. ಅವುಗಳೊಂದರಲ್ಲಿ **ಯತಿ** ಮತ್ತು **ಭೃಗು** ಈ ಎರಡು ಪದಗಳ ಪ್ರಯೋಗವೂ ಇರುತ್ತವೆ. (ಸಾ. ವೇ. ೨-೩೦೪) "**ಇಂದ್ರಸ್ತುರಾಷಾಣ್ಮಿತ್ರೋ ನ ಜಘಾನ ವೃತ್ರಂ ಯತಿರ್ನ** |" ಹಿಂದೆ ಮಿತ್ರನೂ, **ಯತಿಯೂ** ಕೊಂದಂತೆಯೇ, ಈಗಲೂ ಇಂದ್ರನು ವೃತ್ರನನ್ನು ಕೊಂದನೆಂದೂ, "**ಬಿಭೇದ ಬಲಂ ಭೃಗುರ್ನ**" ಭೃಗುವು ಕೊಂದಂತೆ ಬಲನನ್ನು ಕೊಂದನೆಂದೂ ಈ ಮಂತ್ರದ ತಾತ್ಪರ್ಯವಿರುತ್ತದೆ. ಇದಲ್ಲದೇ, ಐತರೇಯಬ್ರಾಹ್ಮಣದಲ್ಲಿ (೭-೨೮) ಇಂದ್ರನು **ಯತಿಗಳನ್ನು** ತ್ಯಾಗಮಾಡಿ ಅವರು ತೋಳಗಳಿಗೆ ಆಹುತಿಗಳಾಗುವಂತೆ ಮಾಡಿದನು ಎಂದಿದೆ.

೮ ನೇ ಮಂತ್ರದ ತಾತ್ಪರ್ಯವು ಅಥರ್ವವೇದದ "**ಅಷ್ಟಯೋನೀರದಿತಿರಷ್ಟಪುತ್ರಾ**" (ಅ. ವೇ. ೮-೯-೨೧) ಎಂಬ ವಾಕ್ಯದ ತಾತ್ಪರ್ಯವನ್ನು ಕೊಡುವುದಾಗಿದೆ. ಇದೇ ಅಭಿಪ್ರಾಯವನ್ನು ತೈತ್ತಿರೀಯಾರಣ್ಯಕದಲ್ಲೂ ತಿಳಿಸುತ್ತ "**ಅಷ್ಟಯೋನೀಮಷ್ಟಪುತ್ರಾಂ । ಅಷ್ಟಪತ್ನೀಮಿಮಾಂ ಮಹೀಂ ॥**" (ತೈ.ಆ. ೧-೧೩-೧) ಪೃಥ್ವಿಗೆ (ಅದಿತಿಗೆ) ಎಂಟು ಜನ್ಮವೂ, ಎಂಟು ಪುತ್ರರೂ, ಎಂಟು ಪತಿಗಳೂ ಇರುವುದಾಗಿ ತಿಳಿಸಿದೆ.

೭೨ ನೇ ಸೂಕ್ತದ ೮ ಮತ್ತು ೯ ನೆಯ ಮಂತ್ರಗಳು ತೈತ್ತಿರೀಯಾರಣ್ಯಕದಲ್ಲೂ ಉದ್ಧೃತವಾಗಿವೆ. "**ಪರಾ ಮಾರ್ತಾಂಡಮಾಸ್ಯತ್**" ಎಂದು ಸಂಹಿತಾಪಾಠಕ್ಕೆ ಬದಲಾಗಿ. ಅಲ್ಲಿ "**ಪರಾ ಮಾರ್ತಾಂಡಮಾಭರತ್**" ಎಂಬ ಪಾಠಬೇಧವಿರುತ್ತದೆ. ಇದಕ್ಕೆ ಭಾಷ್ಯಕಾರರು ಅರ್ಥವನ್ನು ವಿವರಿಸುತ್ತಾ ಈ ರೀತಿ ತಿಳಿಸಿದ್ದಾರೆ. "**ಮಾರ್ತಾಂಡಾಖ್ಯಂ ಅಷ್ಟಮಂ ಪುತ್ರಂ ' ಪರಾ ಭರತ್ ' ಪರಿ ತ್ಯಕ್ತವತೀ ಇತಿ ಯತ್ ತತ್ ಮೃತ್ಯವೇ ಮೃತ್ಯುನಿಮಿತ್ತಂ**" ಮಾರ್ತಾಂಡನು ಉತ್ಪನ್ನವಾದೊಡನೆಯೇ ಅಂಡವು ಮರಣಹೊಂದಿತೆಂದು ತಾತ್ಪರ್ಯ. ಮೇಲಿನ ೮ ನೇ ಮಂತ್ರಕ್ಕೆ ವಿವರಣೆಯನ್ನೀಯುತ್ತಾ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> "**ಅಷ್ಟೌ ಹ ವೈ ಪುತ್ರಾ ಅದಿತೇಃ । ಯಾಂಸ್ತ್ವೇತದ್ದೇವಾ ಆದಿತ್ಯಾ ಇತ್ಯಾಚಕ್ಷತೇ ಸಪ್ತ ಹೈವ ತೇಽವಿಕೃತಗ್ಂ ಹಾಷ್ಟಮಂ ಜನಯಾಂಚಕಾರ ಮಾರ್ತಾಂಡಗ್ಂ ಸಂದೇಘೋ ಹೈವಾಸ ಯಾವಾನೇವೋರ್ಧ್ವಸ್ತಾವಾಂಸ್ತಿರ್ಯಙ್ ಪುರುಷಸಮ್ಮಿತ ಇತ್ಯು ಹೈಕ ಆಹುಃ**".
>
> (ಶ. ಬ್ರಾ. ೩-೧-೩-೩)

ಅದಿತಿಗೆ ಎಂಟು ಜನ ಪುತ್ರರು. ಆದರೆ ಅವರಲ್ಲಿ ಏಳು ಮಂದಿ ದೇವತೆಗಳನ್ನು ಮಾತ್ರ ಮಾನವರು ಆದಿತ್ಯರೆಂದು ಕರೆಯುತ್ತಾರೆ. ಏತಕ್ಕೆಂದರೆ ಎಂಟನೆಯ ಮಾರ್ತಾಂಡನು ಹಸ್ತಪಾದಾದಿರಹಿತನಾಗಿ ಯಾವ ವಿಶೇಷಗುಣವೂ ಇಲ್ಲದೆ ಕೇವಲ ಮಾರ್ದವ ಗುಣದಿಂದ ಮಾತ್ರ ಯುಕ್ತನಾಗಿಯೂ, ನಿರ್ವಿಕಲ್ಪಕನಾಗಿಯೂ, ಎಷ್ಟು ಉನ್ನತವಾಗಿದ್ದನೋ ಅಷ್ಟೇ ದೀರ್ಘವಾಗಿಯು ಬೆಳೆದು ಉತ್ಪನ್ನನಾದನು. ಕೇವಲ ಮಾನವನ ಶರೀರದಷ್ಟು ಪ್ರಮಾಣವುಳ್ಳವನಾಗಿ ಮಾತ್ರವಾದನು ಎಂದು ಕೆಲವರ ಅಭಿಪ್ರಾಯ.

> **ತ ಉ ಹೈತ ಊಚುಃ । ದೇವಾ ಆದಿತ್ಯಾ ಯದಸ್ಮಾನನ್ವಜನಿಮಾ ತದಮುಯೇವ ಭೂದ್ವಂ. ತೇಮಂ ವಿಕರವಾಮೇತಿ ತಂ ವಿಚಕ್ರುರ್ಯಥಾಯಂ ಪುರುಷೋ ವಿಕೃತಸ್ತಸ್ಯ ಯಾನಿ ಮಾಗ್ಂಸಾನಿ ಸಂಸ್ಕೃತ್ಯ ಸನ್ಯಾಸುಸ್ತತೋ ಹಸ್ತೀ ಸಮಭವತ್ತಸ್ಮಾದಾಹುರ್ನ ಹಸ್ತಿನಂ ಪ್ರತಿಗೃಹ್ಣೀಯಾತ್ಪುರುಷಾಜಾನೋ ಹಿ ಹಸ್ತೀತಿ ಯಮು ಹ ತದ್ವಿಚಕ್ರುಃ ಸ ವಿವಸ್ವಾನಾದಿತ್ಯಸ್ತಸ್ಯೇಮಾಃ ಪ್ರಜಾಃ ॥** (ಶ. ಬ್ರಾ. ೩-೧-೩-೪)

ಈ ರೀತಿಯಾದ ವಿಕಲ್ಪರಹಿತನಾದ ಮಾರ್ತಾಂಡನನ್ನು ನೋಡಿ ಆದಿತ್ಯರು ಭೀತಿಗೊಂಡರು. "ಈ ಮಾರ್ತಾಂಡನು ನಮ್ಮ ರೂಪವನ್ನು ಹೋಲದಿದ್ದರೆ ಆಗ ನಮಗೆ ಮೃತ್ಯುವು ಸನ್ನಿಹಿತವಾದಂತೆಯೇ. ಆದುದರಿಂದ ನಾವು ಇವನನ್ನು ರೂಪವನ್ನು ಹೊಂದುವಂತೆ ಮಾಡಬೇಕು" ಎಂದು ಅವನನ್ನು ಪುರುಷಾಕಾರನನ್ನಾಗಿ ಪರಿವರ್ತಿಸಿದರು. ಅವನಿಗೆ ತಮ್ಮ ರೂಪವನ್ನುಂಟುಮಾಡಲು ಅವನ ಶರೀರವನ್ನು ಕತ್ತರಿಸಿ ಸರಿಪಡಿಸಿದಾಗ ಹೊರಕ್ಕೆ ತೆಗೆದ ಮಾಂಸವನ್ನು ಎಸೆದಾಗ ಅದರಿಂದ ಗಜವು ಉತ್ಪನ್ನವಾಯಿತು. ನಾಮರೂಪಾದಿ ವಿಶೇಷಗುಣಗಳಿಂದ ಕೂಡಿದ ಈ ಹೊಸ ವ್ಯಕ್ತಿಯನ್ನು **ವಿವಸ್ವಾನ್** ಎಂದು ಕರೆದರು, ಈ ವಿವಸ್ವಂತನೇ ಸಕಲ ಭೂತಗಳ ಉತ್ಪತ್ತಿಗೂ ಕಾರಣನಾದನು.

ಇದೇ ವಾಕ್ಯವು ತೈತ್ತಿರೀಯ ಸಂಹಿತೆಯಲ್ಲಿಯೂ ಉದಾಹೃತವಾಗಿ, ಅಲ್ಲಿ ಅದಿತಿಯ ಈ ಎರಡನೆಯ ಗರ್ಭವು ಅಂಡರೂಪದಲ್ಲಿ ಪರಿಣಮಿಸಿತು ಎಂದು ತಿಳಿಸಿದೆ. (ತೈ. ಸಂ. ೬-೫-೬-೧)

ಯಾಸ್ಕರು ಮೇಲಿನ ೧೦-೭೨-೪ ನೇ ಮಂತ್ರದ ತಾತ್ಪರ್ಯವನ್ನು ವಿವರಿಸುತ್ತಾ ನಿರುಕ್ತವಾಕ್ಯಗಳಲ್ಲಿ ಈ ರೀತಿ ತಿಳಿಸಿದ್ದಾರೆ.

**"ಆದಿತ್ಯೋ ದಕ್ಷ ಇತ್ಯಾಹುಃ । ಆದಿತ್ಯಮಧ್ಯೇ ಚ ಸ್ತುತಃ । ಅದಿತಿಃ ದಾಕ್ಷಾಯಣೀ । ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ (೧೦-೭೨-೪) ಇತಿ। ತತ್ಕಥಮುಪಪದ್ಯೇತ । ಸಮಾನಜನ್ಮಾನೌ ಸ್ಯಾತಾಂ ಇತಿ । ಅಪಿ ವಾ ದೇವಧರ್ಮೇಣೇತರೇತರಜನ್ಮಾನೌ ಸ್ಯಾತಾಮಿತರೇತರಪ್ರಕೃತೀ ॥** (ನಿ. ೧೧-೨೩)

ದಕ್ಷನು ಅದಿತಿಪುತ್ರರಲ್ಲೊಬ್ಬನೆಂದೂ, ಆದಿತ್ಯರ ಗುಂಪಿಗೆ ಸೇರಿದವನೆಂದೂ ಸ್ತುತನೂ ಪ್ರಖ್ಯಾತನೂ ಆಗಿದ್ದಾನೆ. ಆದರೆ, "ದಕ್ಷನಿಂದ ಅದಿತಿಯು ಉತ್ಪನ್ನಳಾದಳು. ಅದಿತಿಯಿಂದ ದಕ್ಷನು ಉತ್ಪನ್ನನಾದನು" ಎಂಬ ವಾಕ್ಯವು ಅದಿತಿಯೂ ದಕ್ಷಪುತ್ರಿಯೆಂಬುದನ್ನು ತಿಳಿಸುತ್ತದೆ. ಇದು ಹೇಗೆ ಸಾಧ್ಯವಾಗಬಲ್ಲದು? ಅವರಿಬ್ಬರಿಗೂ ಒಂದೇ ಉತ್ಪತ್ತಿಸ್ಥಾನವಿರಬಹುದು ಅಥವಾ ದೇವತೆಗಳ ಸ್ವಾಭಾವಿಕವಾದ ಶಕ್ತಿಗನುಗುಣವಾಗಿ ಒಬ್ಬರಿಂದ ಇನ್ನೊಬ್ಬರು ಉತ್ಪನ್ನವಾಗಿಯೂ ಇರಬಹುದು ಮತ್ತು ಪರಸ್ಪರ ಮಾಹಾತ್ಮ್ಯಗಳನ್ನು ಒಬ್ಬರಿಂದಿನ್ನೊಬ್ಬರು ಪಡೆದಿರಬಹುದು. ಇದೇ ರೀತಿ ಪರಸ್ಪರ ಒಬ್ಬರ ಉತ್ಪತ್ತಿಗೆ ಇನ್ನೊಬ್ಬರು ಯೋನಿಯಾದರು ಎಂಬ ವಿಷಯವನ್ನು ತಿಳಿಸುವ ಬೇರೆ ಶ್ರುತಿವಾಕ್ಯವೂ ಇರುವುದು.

**"ತಸ್ಮಾದ್ವಿರಾಡಜಾಯತ ವಿರಾಜೋ ಅಧಿ ಪೂರುಷಃ"** (೧೦-೯೦-೫)

ಪುರುಷನಿಂದ ವಿರಾಡುತ್ಪತ್ತಿಯು. ವಿರಾಡಿನಿಂದ ಪುರುಷನು ಉತ್ಪನ್ನನಾದನು ಎಂಬ ವಿಷಯವೂ ಸಹ ಪ್ರಸಿದ್ಧವಾಗಿದೆಯಾದುದರಿಂದ ದಕ್ಷ ಮತ್ತು ಅದಿತಿಗಳ ಉತ್ಪತ್ತಿಕ್ರಮವೂ ಇದೇ ರೀತಿ ಇದ್ದಿರಬಹುದು. ದಕ್ಷ ಮತ್ತು ಅದಿತಿಗಳ ಪರಸ್ಪರ ಸಂಬಂಧವನ್ನು ನಿರೂಪಿಸತಕ್ಕ ಬೇರೆ ವಾಕ್ಯಗಳನ್ನೂ ಪರಿಶೀಲಿಸಬಹುದು. **ಅಸಚ್ಚ ಸಚ್ಚ........ ವೃಷಭಶ್ಚ ಧೇನುಃ"** (೧೦-೫-೭)

೧. "ಅವ್ಯಾಕೃತವಾದುದೂ ಪಾರಮಾರ್ಥಿಕವಾದ ಸತ್ಯವುಳ್ಳದ್ದೂ ಆದ ತತ್ತ್ವವು ದಕ್ಷನ ವೀರ್ಯದಲ್ಲಿಯೂ ಮತ್ತು ಅದಿತಿಯ ಗರ್ಭದಲ್ಲಿಯೂ ಸ್ಥಿತವಾಗಿದ್ದು ನಂತರ ಸ್ತ್ರೀಪುಂರೂಪಕವಾದ ಎರಡು ಶಕ್ತಿಗಳನ್ನು ಒಳಗೊಂಡ ತತ್ತ್ವವಾಗಿ ಪರಿಣಮಿಸಿತು."

೨. “ ದಕ್ಷಸ್ಯ ವಾದಿತೇ ಜನ್ಮನಿ..........ವಿಷುರೂಪೇಷು ಜನ್ಮಷು ”

(೧೦-೬೪-೫)

ಎಲೈ ಅದಿತಿಯೇ, ದಕ್ಷನ ಜನನವಾದೊಡನೆಯೂ ಮತ್ತು ಅವನ ಸಂಕಲ್ಪಾನುಸಾರವಾಗಿಯೂ ನೀನು ಮಿತ್ರಾವರುಣರೂಪವಾದ ಎರಡು ಪ್ರಭುಗಳನ್ನು ಪೋಷಿಸಿದೆ.

ಹೀಗೆ, ೧೦-೭೨-೪ ಮತ್ತು ೫ ನೇ ಮಂತ್ರಗಳು ದಕ್ಷನೇ ಅದಿತಿಯ ಪಿತೃ ಮತ್ತು ಪುತ್ರನೆಂದು ಒಟ್ಟಿಗೆ ಎರಡು ಸಂಬಂಧಗಳನ್ನೂ ತಿಳಿಸಿದ್ದರೂ, ೨-೨೭-೧ ಇತ್ಯಾದಿ ವಾಕ್ಯಗಳಲ್ಲಿ ದಕ್ಷನು ಅದಿತಿಪುತ್ರನೆಂದೂ, ಆದಿತ್ಯ ರಲ್ಲೊಬ್ಬನೆಂದೂ ಸ್ಪಷ್ಟವಾಗಿ ತಿಳಿಸುತ್ತದೆ. ಇದಲ್ಲದೇ, ಇನ್ನೂ ಕೆಲವೆಡೆಗಳಲ್ಲಿ ದೇವತೆಗಳಿಗೆ **ದಕ್ಷಪಿತೃ** ಎಂಬ ವಿಶೇಷಣವಿರುತ್ತದೆ. ಉದಾಹರಣೆಗೆ—

೧. “ **ಸುಜ್ಯೋತಿಷಃ ಸೂರ್ಯ ದಕ್ಷಪಿತೃನನಾಗಾಸ್ತ್ವೇ ಸುಮಹೋ ವೀಹಿ ದೇವಾನ್** ”

(೬-೫೦-೨)

ಎಲೈ ಮಹಾತ್ಮನಾದ ಸೂರ್ಯನೇ, ದಕ್ಷನೇ ಪಿತೃವಾಗಿ ಉಳ್ಳ ದೇವತೆಗಳನ್ನು ಸಮೀಪಿಸು. (ಸಾಯಣರು ಇಲ್ಲಿ **ಪಿತೃ**ಶಬ್ದಕ್ಕೆ ಪಿತಾಮಹನೆಂದರ್ಥಮಾಡಿದ್ದಾರೆ. ಅದಿತಿಯು ದಕ್ಷಪುತ್ರಿಯಾದುದರಿಂದಲೂ, ದೇವತೆಗಳು ಅದಿತಿ ಪುತ್ರರಾದುದರಿಂದಲೂ, ದಕ್ಷನು ಈ ದೇವತೆಗಳಿಗೆ ಪಿತಾಮಹನು.)

೨. “ **ಯಾ ಧಾರಯಂತ ದೇವಾಃ ಸುದಕ್ಷಾ ದಕ್ಷಪಿತರಾ । ಅಸುರ್ಯಾಯ ಪ್ರಮಹಸಾ ॥** ”

(೭-೬೬-೨)

ದಕ್ಷಪಿತೃಗಳಾದ ಮಿತ್ರಾವರುಣರು ತಮ್ಮ ದಿವ್ಯಪ್ರಭುತ್ವವನ್ನು ಸ್ಥಾಪಿಸಿದ್ದಾರೆ ಇತ್ಯಾದಿಯಾಗಿರುತ್ತದೆ. ಇದರಂತೆಯೇ ತೈತ್ತಿರೀಯಸಂಹಿತೆಯಲ್ಲಿಯೂ ಸಹ,

**ಯೇ ದೇವಾ ಮನೋಜಾತಾ ಮನೋಯುಜಃ ಸುದಕ್ಷಾ ದಕ್ಷಪಿತಾರಸ್ತೇ ನಃ ಪಾಂತು ॥**

(ತೈ. ಸಂ. ೧-೨-೩-೧)

ಮನೋಜಾತರೂ, ಮನೋಯುಜರೂ, ದಕ್ಷನನ್ನೇ ಪಿತೃವಾಗಿ ಉಳ್ಳವರೂ ಆದ ದೇವತೆಗಳು ನಮ್ಮನ್ನು ರಕ್ಷಿಸಲಿ.

ಮೇಲಿನ ಉದಾಹರಣೆಗಳಲ್ಲಿ **ದಕ್ಷ** ಪದವು ವ್ಯಕ್ತಿವಾಚಕವಾದ ಒಂದು ನಾಮನಿರ್ದೇಶವೆಂದು ನಿಶ್ಚಯವಾಗಿ ಹೇಳುವಂತಿಲ್ಲ. ೮-೨೫-೫ ರಲ್ಲಿ ಮಿತ್ರಾವರುಣರು ‘ದಕ್ಷನ ಶಕ್ತಿಯುತರಾದ ಪುತ್ರರು’ (**ಸೂನೂ ದಕ್ಷಸ್ಯ ಸುಕ್ರತೂ**) ಎಂದು ವರ್ಣಿತರಾಗಿರದೇ, ‘ಶಕ್ತಿಯ ಪೌತ್ರರು’ (**ನಪಾತಾ ಶವಸೋ ಮಹಃ**) ಎಂದೂ ಸಹ ವರ್ಣಿತ ರಾಗಿದ್ದಾರೆ. ೬-೫೦-೨ ನೇ ಮಂತ್ರಕ್ಕೆ ಸಾಯಣರು ಅರ್ಥಮಾಡಿರುವ ಕ್ರಮವನ್ನು ಮೇಲೆ ತಿಳಿಸಿದೆ. ಮೇಲೆ ಉದಾಹೃತರಾಗಿರುವ ೭-೬೬-೨ ನೇ ಋಕ್ಕಿನಲ್ಲಿ **ದಕ್ಷಪಿತಾರಾ** ಎಂಬುವಕ್ಕೆ **ಬಲಸ್ಯ ಪಾಲಕೌ** ಶಕ್ತಿಯ ರಕ್ಷಕರು ಎಂದರ್ಥಮಾಡಿದ್ದಾರೆ **ಸಹಸಸ್ಪುತ್ರಃ, ಸಹಸಃಸೂನುಃ** ಇತ್ಯಾದಿ ವಿಶೇಷಣಗಳು ಕೆಲವೆಡೆಗಳಲ್ಲಿ **ಅಗ್ನಿ** ಪರ ವಾಗಿಯೂ (೮-೪೯-೨; ೮-೬೦-೧೧ ಇತ್ಯಾದಿ) ಕೆಲವೆಡೆಗಳಲ್ಲಿ **ಇಂದ್ರ**ಪರವಾಗಿಯೂ ೮-೭೯-೩ ಇತ್ಯಾದಿ) ಪ್ರಯುಕ್ತವಾಗಿವೆ.

ಶತಪಥಬ್ರಾಹ್ಮಣದ ೨-೪-೪-೨ ನೇ ವಾಕ್ಯದಲ್ಲಿ ದಕ್ಷನಿಗೂ ಸೃಷ್ಟಿಕರ್ತನಾದ ಪ್ರಜಾಪತಿಗೂ ತಾದಾತ್ಮ್ಯವನ್ನು ತೋರಿಸಿದೆ. ೨-೪-೪-೬ ರಲ್ಲಿ ಪರ್ವತಪುತ್ರನಾದ ಒಂದು ವ್ಯಕ್ತಿಯ ಹೆಸರೆಂದು ತಿಳಿಸಿದೆ.

ಈ ವೈದಿಕವಾಕ್ಯಗಳ ಆಧಾರವನ್ನೇ ಅವಲಂಬಿಸಿಕೊಂಡು ಕಥೆಯನ್ನು ವಿಸ್ತರಿಸಿರುವ ವಿಷ್ಣುಪುರಾಣದಲ್ಲಿ ದಕ್ಷನ ವಿಷಯವು ಯಾವರೀತಿ ವರ್ಣಿತವಾಗಿದೆಯೆಂದು ಪರಿಶೀಲಿಸಿದರೆ ಸದ್ಯಃ ಅಪ್ರಕೃತವಾಗಲಾರದು. ಈ ವಿಷ್ಣುಪುರಾಣದ ಪ್ರಕಟನದಲ್ಲಿ ಮೂರು ಪಾಠಭೇದಗಳು ಕಾಣುತ್ತವೆ. ಅವುಗಳನ್ನು ಒಂದೊಂದಾಗಿ ವಿಮರ್ಶಿಸಬಹುದು.

(೧) ಮೊದಲನೆಯ ಕ್ರಮದಲ್ಲಿ ಕಥೆಯ ವಿವರಣವು ಈ ರೀತಿಯಿದೆ :—ದಕ್ಷನು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನು. ಪ್ರಸೂತಿಯೆಂಬುವಳನ್ನು ವಿವಾಹಮಾಡಿಕೊಳ್ಳುತ್ತಾನೆ. ಆವಳಲ್ಲಿ ಇಪ್ಪತ್ತುನಾಲ್ಕು ಪುತ್ರಿಯರನ್ನು ಪಡೆಯುತ್ತಾನೆ. ಆದರೆ ಇವರಲ್ಲಿ ಅದಿತಿಯೂ ಒಬ್ಬಳು ಎಂಬುದನ್ನು ಸೇರಿಸಿಲ್ಲ.

(೨) ಎರಡನೆಯ ಪಾಠಕ್ರಮದಲ್ಲಿ :—ದಕ್ಷನ ಅರವತ್ತುಮಂದಿ ಪುತ್ರಿಯರಲ್ಲಿ ಅದಿತಿಯು ಒಬ್ಬಳೆಂದೂ, ಇವಳನ್ನು **ದಿತಿ, ದನು** ಮತ್ತು ಇನ್ನೂ ಹತ್ತುಮಂದಿಯರೊಂದಿಗೆ ಕಶ್ಯಪನಿಗೆ ವಿವಾಹಮಾಡಿಕೊಟ್ಟನೆಂದೂ, ಆಗ ಕಶ್ಯಪನಿಗೆ ಅದಿತಿಯಲ್ಲಿ ದ್ವಾದಶಾದಿತ್ಯರು ಉತ್ಪನ್ನರಾದರೆಂದೂ ತಿಳಿಸಿದೆ.

(೩) ಮೂರನೆಯ ಪ್ರವಚನದ ರೀತಿಯಲ್ಲಿ :—ಅದಿತಿಯು ದಕ್ಷನ ಪುತ್ರಿಯೆಂದೂ, ವಿವಸ್ವಂತನ (ಸೂರ್ಯನ) ಮಾತೆಯೆಂದೂ ತಿಳಿಯುತ್ತದೆ. [ಇದೇ ಅದಿತಿಯು ಕಶ್ಯಪನ ಪತ್ನಿಯೆಂದೂ, ವಾಮನಾವತಾರವನ್ನಾಶ್ರಯಿಸಿದ ವಿಷ್ಣುವಿನ ಮಾತೆಯೆಂದೂ ರಾಮಾಯಣದ ಒಂದು ಸನ್ನಿವೇಶದಲ್ಲಿ (ಇಲ್ಲಿಯೂ ಪಾಠಭೇದಗಳಿವೆ) ತಿಳಿಯುತ್ತದೆ.] ವಾಜಸನೇಯಸಂಹಿತೆಯಲ್ಲೂ (೨೯-೬೦) ಮತ್ತು ತೈತ್ತಿರೀಯಸಂಹಿತೆಯಲ್ಲೂ (೭-೫-೧೪-೧) ಅದಿತಿಯನ್ನು ವಿಷ್ಣು ಪತ್ನಿಯೆಂದು ತಿಳಿಸಿದೆ. **(ಅದಿತ್ಯೈ ವಿಷ್ಣುಪತ್ನ್ಯೈ ಚರುಃ)** ತೈತ್ತಿರೀಯಸಂಹಿತೆಯಿಂದ ಉದ್ಧೃತವಾಗಿರುವ ಕೆಳಗಿನ ಮಂತ್ರದಲ್ಲೂ ಅದಿತಿಯ ಸ್ವರೂಪವರ್ಣನೆಯು ಈ ರೀತಿಯಿರುತ್ತದೆ.

**ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ಅಸ್ಯೇಶಾನಾ ಜಗತೋ ವಿಷ್ಣುಪತ್ನೀ । ವಿಶ್ವವ್ಯಚಾ ಇಷಯಂತೀ ಸುಭೂತಿಃ ಶಿವಾ ನೋ ಅಸ್ತ್ವದಿತಿರುಪಸ್ಥೇ ॥**

ದ್ಯುಲೋಕಕ್ಕೆ ಅವಲಂಬನಪ್ರಾಯಳೂ, ಪೃಥ್ವಿಗೆ ಧಾರಕಳೂ, ವಿಶ್ವಕ್ಕೆಲ್ಲಾ ಒಡೆಯಳೂ, ವಿಷ್ಣುಪತ್ನಿಯೂ, ವಿಶ್ವ ವ್ಯಾಪಕಳೂ, ಶಕ್ತಿಯುತಳೂ ಆದ ಆದಿತಿಯು, ಅವಳ ಉತ್ಸಂಗವನ್ನೇ ಆಶ್ರಯಿಸಿರುವ ನಮಗೆ ಕಲ್ಯಾಣವನ್ನುಂಟು ಮಾಡಲಿ.

ಈ ಎಲ್ಲಾ ಸನ್ನಿವೇಶಗಳಲ್ಲೂ ಸಹ ಅದಿತಿಯು ಜಗತ್ಸೃಷ್ಟಿಗೂ, ಜಗತ್ಪೋಷಣೆಗೂ ಪ್ರಧಾನಕಾರಣಳಾಗಿದ್ದಾಳೆ ಎಂಬಂಶಗಳು ವಿಶದವಾಗಿವೆ.



॥ಸಂಹಿತಾಪಾಠಃ॥

ಅದಿ॑ತಿ॒ರ್ಹ್ಯಜ॑ನಿಷ್ಟ॒ ದಕ್ಷ॒ ಯಾ ದು॑ಹಿ॒ತಾ ತವ॑ ।
ತಾಂ ದೇ॒ವಾ ಅನ್ವ॑ಜಾಯಂತ ಭ॒ದ್ರಾ ಅ॒ಮೃತ॑ಬಂಧವಃ ॥ ೫ ॥

॥ ಪದಪಾಠಃ ॥

ಅದಿ॑ತಿಃ । ಹಿ । ಅಜ॑ನಿಷ್ಟ । ದಕ್ಷ॑ । ಯಾ । ದು॒ಹಿ॒ತಾ । ತವ॑ ।
ತಾಂ । ದೇ॒ವಾಃ । ಅನು॑ । ಅ॒ಜಾ॒ಯಂ॒ತ॒ । ಭ॒ದ್ರಾಃ । ಅ॒ಮೃತ॑ಬಂಧವಃ ॥ ೫ ॥

॥ ಸಾಯಣಭಾಷ್ಯಂ ॥

ಅದಿತಿದೇವತಾಕೇ ಪಶಾವದಿತಿರ್ಹ್ಯಜನಿಷ್ಟೇತ್ಯೇಷಾ ಹವಿಷೋಽನುವಾಕ್ಯಾ । ಸೂತ್ರಿತಂ ಚ । ಅದಿತಿರ್ಹ್ಯಜನಿಷ್ಟ ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ॥ ಆ. ೩-೮ ॥ ಇತಿ ॥

ಹೇ ದಕ್ಷ ತವ ಯಾ ದುಹಿತಾಭೂತ್ ಸಾದಿತಿರಜನಿಷ್ಟ ಹಿ ಪುತ್ರಾನಾದಿತ್ಯಾನ್ । ತದೇವಾಹ । ತಾಂ ದೇವಾ ಅನ್ವಜಾಯಂತ ಭದ್ರಾಃ ಸ್ತುತ್ಯಾ ಭಜನೀಯಾ ಅಮೃತಬಂಧವೋಽಮರಣಬಂಧನಾಃ ॥೧॥

॥ ಪ್ರತಿಪದಾರ್ಥ ॥

**ದಕ್ಷ**—ಎಲೈ ದಕ್ಷದೇವನೇ । **ಯಾ**—ಯಾರು । **ತವ**—ನಿನಗೆ । **ದುಹಿತಾ**—ಪುತ್ರಿಯೋ ಅಂತಹ । **ಅದಿತಿಃ**—ಅದಿತಿಯು । **ಅಜನಿಷ್ಟ ಹಿ**—ಆದಿತ್ಯಾದಿ ಪುತ್ರರನ್ನು ಹಡೆದಳು । **ತಾಂ ಅನು**—ಅವಳನ್ನುಹಿಂಬಾಲಿಸಿ । **ಭದ್ರಾಃ**—ಮಂಗಳಕರರೂ । **ಅಮೃತಬಂಧವಃ**—ಮರಣರೂಪವಾದ ಬಂಧನವಿಲ್ಲದವರೂ ಆದ । **ದೇವಾಃ**—ಇತರ ದೇವತೆಗಳು । **ಅಜಾಯಂತ**—ಉತ್ಪನ್ನರಾದರು.

॥ ಭಾವಾರ್ಥ ॥

ಎಲೈ ದಕ್ಷದೇವನೇ, ನಿನ್ನ ಪುತ್ರಿಯಾದ ಅದಿತಿಯು ಆದಿತ್ಯಾದಿ ಪುತ್ರರನ್ನು ಹಡೆದಳು. ಅವಳನಂತರ ಮಂಗಳಕರರೂ, ಮರಣರೂಪವಾದ ಬಂಧನರಹಿತರೂ ಆದ ಇತರ ದೇವತೆಗಳು ಉತ್ಪನ್ನರಾದರು

## English Translation

Aditi, who was your daughter, Daksha, was born; after her the gods were born adorable, freed from the bonds of death.

॥ ಸಂಹಿತಾಪಾಠಃ ॥

ಯದ್ದೇವಾ ಅದಃ ಸಲಿಲೇ ಸುಸಂರಬ್ಧಾ ಅತಿಷ್ಠತ ।

ಅತ್ರಾ ವೋ ನೃತ್ಯತಾಮಿವ ತೀವ್ರೋ ರೇಣುರಪಾಯತ ॥ ೬ ॥

॥ ಪದಪಾಠಃ ॥

ಯತ್ । ದೇವಾಃ । ಅದಃ । ಸಲಿಲೇ । ಸುಽಸಂರಬ್ಧಾಃ । ಅತಿಷ್ಠತ ।

ಅತ್ರ । ವಃ । ನೃತ್ಯತಾಂಽಇವ । ತೀವ್ರಃ । ರೇಣುಃ । ಅಪ । ಆಯತ ॥ ೬ ॥

॥ ಸಾಯಣಭಾಷ್ಯಂ ॥

ಅನಯೋತ್ತರೇಣ ಚಾದಿತ್ಯಾಃ ಸ್ತೂಯಂತೇ । ಯದ್ಯದಾ ಹೇ ದೇವಾಃ ಅದೋಽಮುಷ್ಮಿನ್ಸಲಿಲೇ ಯೂಯಂ ಸುಸಂರಬ್ಧಾಃ ಸುಷ್ಠು ಲಬ್ಧಾತ್ಮಾನೋಽತಿಷ್ಠತ ಸ್ಥಿತವಂತಃ । ಆಪೋ ವಾ ಇದಂ ಸರ್ವಂ । ತೈ. ಆ. ೧೦-೨೨ । ಅಪ ಏವ ಸಸರ್ಜಾದಾವಿತಿ ಶ್ರುತಿಸ್ಮೃತೀ । ಅತ್ರಾಸ್ಮಿನ್ಸಲಿಲೇ ನೃತ್ಯತಾಮಿವ ವೋ ಯುಷ್ಮಾಕಂ ಸಂಬಂಧೀ ತೀವ್ರೋ ದುಃಸಹೋ ರೇಣುರಂಶಭೂತ ಏಕೋಽಪಾಯತ । ಅಪಾಗಚ್ಛತ್ । ದಿವಂ ಪ್ರತಿ ಗತ ಇತಿ ಸೂರ್ಯಾಭಿಪ್ರಾಯಂ । ಪರಾ ಮಾರ್ತಾಂಡಮಾಸ್ಯದಿತಿ ವಕ್ಷ್ಯತಿ ॥

। ಪ್ರತಿಪದಾರ್ಥ ।

ದೇವಾಃ—ಎಲೈ ದೇವತೆಗಳೇ । ಯತ್—ಯಾವಾಗ । ಅದಃ ಸಲಿಲೇ—ಈ ಸರಸ್ಸಿನಲ್ಲಿ । ಸುಸಂರಬ್ಧಾಃ—ಉತ್ತಮವಾದ ಚೇತಸ್ಸುಳ್ಳವರಾಗಿ । ಅತಿಷ್ಠತ—ನೀವು ಸ್ಥಿತರಾದಿರೋ ಆಗ। ಅತ್ರ—ಇದೇ ಸರಸ್ಸಿನಲ್ಲಿ । ನೃತ್ಯತಾಂಇವ—ನೀವು ನರ್ತನಮಾಡುತ್ತಿರುವಿರೋಎಂಬಂತೆ । ವಃ—ನಿಮಗೆ ಸೇರಿದುದೂ । ತೀವ್ರಃ—ತೀಕ್ಷ್ಣವಾದುದೂ ಆದ । ರೇಣುಃ—ತೇಜಸ್ಸಿನ ಅಂಶವು । ಅಪಾಯತ—ಉದ್ಭೂತವಾಯಿತು

। ಭಾವಾರ್ಥ ।

ಎಲೈ ದೇವತೆಗಳೇ, ಯಾವಾಗ ನೀವು ಈ ಸರಸ್ಸಿನಲ್ಲಿ ಉತ್ತಮವಾದ ಚೇತಸ್ಸುಳ್ಳವರಾಗಿ ಸ್ಥಿತರಾದಿರೋ ಆಗ ಇದೇ ಸರಸ್ಸಿನಲ್ಲಿ ನೀವು ನರ್ತನ ಮಾಡುತ್ತಿರುವಿರೋ ಎಂಬಂತೆ, ನಿಮಗೆ ಸೇರಿದುದೂ, ತೀಕ್ಷ್ಣವಾದುದೂ ಆದ ತೇಜಸ್ಸಿನ ಅಂಶವು ಉದ್ಭೂತವಾಯಿತು.

## English Translation

When, gods, you abode in this pool well-arranged, then a pungent dust went forth from you as if you were dancing.

॥ ಸಂಹಿತಾಪಾಠಃ ॥

ಯದ್ದೇವಾ ಯತಯೋ ಯಥಾ ಭುವನಾನ್ಯಪಿನ್ವತ ।

ಅತ್ರಾ ಸಮುದ್ರ ಆ ಗೂಳ್ಹಮಾ ಸೂರ್ಯಮಜಭರ್ತನ ॥ ೭ ॥

॥ ಪದಪಾಠಃ ॥

ಯತ್ । ದೇವಾಃ । ಯತಯಃ । ಯಥಾ । ಭುವನಾನಿ । ಅಪಿನ್ವತ ।

ಅತ್ರ । ಸಮುದ್ರೇ । ಆ । ಗೂಳ್ಹಂ । ಆ । ಸೂರ್ಯಂ । ಅಜಭರ್ತನ ॥ ೭ ॥

॥ ಸಾಯಣಭಾಷ್ಯಂ ॥

ಯದ್ಯದಾ ಹೇ ದೇವಾಃ ಯತಯೋ ಯಥಾ । ವೃಷ್ಟ್ಯಾ ನಿಯಮಯಂತೀತಿ ವಾ ವರ್ಷಣೇನ ಯಾತಯಂತೀತಿ ವಾ ಯತಯೋ ಮೇಘಾಃ । ತೇ ಯಥೋದಕೈರ್ಭುವನಾನಿ ಲೋಕಂ ಪೂರಯಂತಿ ತದ್ವತ್ತ್ವತ್ತೇಜೋಭಿರಪಿನ್ವತ । ಪೂರಿತವಂತಃ । ಅತ್ರ ಸಮುದ್ರೇಽಪ್ಸ್ವಂತ ಗೂಳ್ಹಂ ನಿಗೂಳ್ಹಂ ಸೂರ್ಯಂ ಪ್ರಾತರುದಯಾಯಾಜಭರ್ತನ । ಆಹೃತವಂತಃ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ಯತ್**—ಯಾವಾಗ । **ಭುವನಾನಿ**—ಲೋಕಗಳನ್ನು । **ಯತಯೋ-ಯಥಾ**—ಮೇಘಗಳು ವೃಷ್ಟಿಯಿಂದ ತುಂಬುವಂತೆ । **ಅಪಿನ್ವತ**—ಈ ಲೋಕಗಳನ್ನು ನಿಮ್ಮ ತೇಜಸ್ಸಿನಿಂದ ತುಂಬಿದಿರೋ ಆಗ । **ಅತ್ರಸಮುದ್ರೇ**—ಈ ಉದಕಸಂಘದಲ್ಲಿ । **ಆ ಗೂಳ್ಹಂ**—ನಿಗೂಢವಾಗಿ ಅಡಗಿದ್ದ । **ಸೂರ್ಯಂ**—ಸೂರ್ಯನನ್ನು । **ಆ ಅಜಭರ್ತನ**—ಹೊರಕ್ಕೆ ಬರಮಾಡಿ ಪ್ರಕಾಶಪಡಿಸಿದಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಮೇಘಗಳು ವೃಷ್ಟಿಯಿಂದ ಲೋಕಗಳನ್ನು ತುಂಬುವಂತೆ ಈ ಲೋಕಗಳನ್ನು ನಿಮ್ಮ ತೇಜಸ್ಸಿನಿಂದ ತುಂಬಿದಿರೋ, ಆಗ ಈ ಉದಕಸಂಘದಲ್ಲಿ ಅಡಗಿದ್ದ ಸೂರ್ಯನನ್ನು ಹೊರಕ್ಕೆ ಬರಮಾಡಿ ಪ್ರಕಾಶಪಡಿಸಿದಿರಿ.

## English Translation

When, gods, you filled the worlds (with your radiance) as clouds (fill the earth with rain), then you brought forth the sun hidden in the ocean.

॥ ಸಂಹಿತಾಪಾಠಃ ॥

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ಸ್ಪರಿ ।
ದೇವಾँ ಉಪ ಪ್ರೈತ್ಸಪ್ತಭಿಃ ಪರಾ ಮಾರ್ತಾಂಡಮಾಸ್ಯತ್ ॥ ೮ ॥

॥ ಪದಪಾಠಃ ॥

ಅಷ್ಟೌ । ಪುತ್ರಾಸಃ । ಅದಿತೇಃ । ಯೇ । ಜಾತಾಃ । ತನ್ವಃ । ಪರಿ ।
ದೇವಾನ್ । ಉಪ । ಪ್ರ । ಐತ್ । ಸಪ್ತಽಭಿಃ । ಪರಾ । ಮಾರ್ತಾಂಡಂ । ಆಸ್ಯತ್ ॥ ೮ ॥

॥ ಸಾಯಣಭಾಷ್ಯಂ ॥

ಅಷ್ಟೌ ಪುತ್ರಾಸಃ ಪುತ್ರಾ ಮಿತ್ರಾದಯೋಽದಿತೇರ್ಭವಂತಿ ಯೇಽದಿತೇಸ್ತನ್ವಃ ಪರಿ ಶರೀರಾಜ್ಜಾತಾ ಉತ್ಪನ್ನಾಃ । ಅದಿತೇರಷ್ಟೌ ಪುತ್ರಾ ಅಧ್ವರ್ಯುಬ್ರಾಹ್ಮಣೇ ಪರಿಗಣಿತಾಃ । ತಥಾ ಹಿ । ತಾನನುಕ್ರಮಿಷ್ಯಾಮೋ ಮಿತ್ರಶ್ಚ ವರುಣಶ್ಚ ಧಾತಾ ಚಾರ್ಯಮಾ ಚಾಂಶಶ್ಚ ಭಗಶ್ಚ ವಿವಸ್ವಾನಾದಿತ್ಯಶ್ಚೇತಿ । ತಥಾ ತತ್ರೈವ ಪ್ರದೇಶಾಂತರೇಽದಿತಿಂ ಪ್ರಸ್ತುತ್ಯಾಮ್ನಾತಂ । ತಸ್ಯಾ ಉಚ್ಛೇಷಣಮದದುಸ್ತತ್ಪ್ರಾಶ್ನಾತ್ ಸಾ ರೇತೋಽಧತ್ತ ತಸ್ಯೈ ಚತ್ವಾರ ಆದಿತ್ಯಾ ಅಜಾಯಂತ ಸಾ ದ್ವಿತೀಯಮಪಚದಿತ್ಯಷ್ಟಾನಾಮಾದಿತ್ಯಾನಾಮುತ್ಪತ್ತಿರ್ವರ್ಣಿತಾ । ತೈ. ಸಂ. ೬-೫-೬-೧ । ಸಾದಿತಿಃ ಸಪ್ತಭಿಃ ಪುತ್ರೈರ್ದೇವಾನುಪ ಪ್ರೈತ್ । ಉಪಾಗಚ್ಛತ್ । ಅಷ್ಟಮಂ ಪುತ್ರಂ ಮಾರ್ತಾಂಡಂ ಸೂರ್ಯಂ ಪರಾಸ್ಯತ್ । ಉಪರಿ ಪ್ರಾಕ್ಷಿಪದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯೇ**—ಯಾವ ಮಿತ್ರಾದಿ ದೇವತೆಗಳು । **ಅದಿತೇಃ**—ಅದಿತಿಯ । **ತನ್ವಃ ಪರಿ**—ದೇಹದಿಂದ । **ಜಾತಾಃ**—ಉತ್ಪನ್ನರಾದರೋ ಅಂತಹ । **ಪುತ್ರಾಸಃ**—ಅದಿತಿಯ ಪುತ್ರರು । **ಅಷ್ಟೌ**—ಎಂಟುಮಂದಿ । **ಸಪ್ತಭಿಃ ಪುತ್ರೈಃ**—ಅವರಲ್ಲಿ ಏಳು ಪುತ್ರರೊಂದಿಗೆ । **ದೇವಾನ್**—ದೇವತೆಗಳಲ್ಲಿಗೆ । **ಉಪ ಪ್ರೈತ್**—ಹೋಗಿ ಸಮೀಪಿಸಿದಳು । **ಮಾರ್ತಾಂಡಂ**—ಸೂರ್ಯನನ್ನು । **ಪರಾಸ್ಯತ್**—ಊರ್ಧ್ವಭಾಗಕ್ಕೆ ಎಸೆದಳು. (ಅಂತರಿಕ್ಷದಲ್ಲಿ ಸ್ಥಾಪಿಸಿದಳು)

॥ ಭಾವಾರ್ಥ ॥

ಯಾವ ಮಿತ್ರಾದಿ ದೇವತೆಗಳು ಅದಿತಿಯ ದೇಹದಿಂದ ಉತ್ಪನ್ನರಾದರೋ ಅಂತಹ ಅದಿತಿಯ ಪುತ್ರರು ಎಂಟು ಮಂದಿ. ಅವರಲ್ಲಿ ಏಳು ಪುತ್ರರೊಂದಿಗೆ ದೇವತೆಗಳನ್ನು ಸಮೀಪಿಸಿದಳು ಸೂರ್ಯನನ್ನು ಮೇಲಕ್ಕೆ ಕಳುಹಿ ಅಂತರಿಕ್ಷದಲ್ಲಿ ಸ್ಥಾಪಿಸಿದಳು.

## English Translation

Eight sons (there were) of Aditi who were born from her body; she approached the gods with seven, she sent forth Martanda on high.

### ॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅದಿತಿಗೆ ಎಂಟು ಮಂದಿ ಪುತ್ರರೆಂದು ಹೇಳಿದೆ. ಕೆಲವುಕಡೆ ಏಳೆಂದೂ ಹೇಳಿದೆ. ಇವರಿಗೆ ಸಾಮೂಹಿಕವಾಗಿ ಆದಿತ್ಯರೆಂದು ಕರೆಯುವ ರೂಢಿಯಿದ್ದರೂ ಇವರಿಗೆಲ್ಲಾ ಪ್ರತ್ಯೇಕ ಹೆಸರುಗಳಿವೆ. ಇವರಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ವಿಚಾರವನ್ನು ಮೊದಲು ವಿವರಿಸಿ ಅನಂತರ ಆದಿತ್ಯರ ಸಂಖ್ಯಾಪರಿಮಿತಿಯೆಷ್ಟು, ಇವರು ಹೇಗೆ ಉತ್ಪನ್ನರಾದರು ಇತ್ಯಾದಿ ವಿಷಯಗಳನ್ನು ವಿಮರ್ಶೆಮಾಡುತ್ತೇವೆ.

**ಮಿತ್ರಃ, ವರುಣಃ, ಅರ್ಯಮಾ**—ಈ ಮೂರು ದೇವತೆಗಳೂ ಪ್ರತ್ಯೇಕ ದೇವತೆಗಳೆಂದು ಭಾವಿಸುಲ್ಪಟ್ಟಿದ್ದರೂ ಇವರು ಸೂರ್ಯನ ಅನೇಕ ರೂಪಗಳಾದ ಎಂದರೆ ದ್ವಾದಶಾದಿತ್ಯರಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಇಲ್ಲಿ ವಿವರಿಸಲ್ಪಟ್ಟಿರುವಂತೆ ತೋರುತ್ತದೆ. ಇದಲ್ಲದೆ ಈ ಮೂರು ದೇವತೆಗಳೂ ಅಗ್ನಿಯ ಬೇರೆ ರೂಪಗಳೆಂದು ಕೆಲವು ಕಡೆ ಹೇಳಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**
(ಋ. ಸಂ. ೫-೩-೧)

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ॥**
(ಋ. ಸಂ. ೫-೩-೨)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಆ ಅಗ್ನಿಗೆ ಮಿತ್ರನೆಂದೂ, ಕನ್ಯಾಸಂಬಂಧವಾದ ಹೋಮಾದಿಗಳಲ್ಲಿ ಅರ್ಯಮಾ ಎಂದೂ ಅಗ್ನಿಗೆ ಈ ಮೂರು ಹೆಸರುಗಳಿವೆಯೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಽಸೀತ್ಯಾಹ । ಮೈತ್ರಂ ವಾ ಅಹಃ। ವಾರುಣೀ ರಾತ್ರಿಃ। ಅಹೋರಾತ್ರಾಭ್ಯಾಮೇವೈನಮುಪಾವಹರತಿ ॥** (ತೈ. ಬ್ರಾ. ೧-೭-೧೦-೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಆದುದರಿಂದ ಈ ಮೂರು ದೇವತೆಗಳೂ ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ ಕೆಲವುಕಡೆ ಅಗ್ನಿಯ ಬೇರೆ ಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು.

ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೇ ಸ್ಪಷ್ಟವಾದ ವೈಶಿಷ್ಟ್ಯವಿದೆ ಎಂದರೆ ವೈಯಕ್ತಿಕ ಪ್ರಾಧಾನ್ಯವಿದೆ. ಋಗ್ವೇದದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರು ಅದಿತಿಯ ಪುತ್ರರೆಂದು ಹೇಳಿದೆ. ಆದ್ದರಿಂದ ಇವರನ್ನು ಆದಿತ್ಯರೆಂದು ಅನೇಕ ಕಡೆಗಳಲ್ಲಿ ಕರೆದಿದೆ. ಈ ಆದಿತ್ಯರು ಎಂದರೆ ಅದಿತಿಪುತ್ರರು ಆರುಜನರೆಂದು—

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।
ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥

(ಋ. ಸಂ. ೨-೨೭-೧)

ಎಂದರೆ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ, ಎಂದು ಆರು ಜನರ ಹೆಸರನ್ನು ಮಾತ್ರ ಹೇಳಿದೆ.

ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ।

(ಋ. ಸಂ. ೯-೧೧೪-೩)

ಎಂಬ ಋಕ್ಕಿನಲ್ಲಿ ಆದಿತಿಪುತ್ರರು ಏಳು ಜನರೆಂದಿದೆ—

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ಸ್ಪರಿ ।
ದೇವಾ ಉಪಪ್ರೈತ್ಸಪ್ತಭಿಃ ಪರಾ ಮಾರ್ತಾಂಡಮಾಸ್ಯತ್ ।
ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।
ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಾಂಡಮಾಭರತ್ ॥

(ಋ. ಸಂ. ೧೦-೭೨.೮, ೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು, ಅನಂತರ ಮಾರ್ತಾಂಡನೆಂದು ಒಟ್ಟು ಎಂಟುಮಂದಿ ಪುತ್ರರಿದ್ದರೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಆರಣ್ಯಕದಲ್ಲಿ—

ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾಁ ಉಪಪ್ರೈತ್ಸಪ್ತಭಿಃ । ಪರಾಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ ಮೃತ್ಯವೇ ತತ್ । ಪರಾಮಾರ್ತಾಂಡಮಾಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ ॥

(ತೈ. ಆ. ೧-೧೩-೩)

ಅದಿತಿಗೆ ಇದ್ದ ಎಂಟು ಮಂದಿ ಪುತ್ರರ ಹೆಸರನ್ನೂ ಹೇಳಿದೆ. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ. ಇದೇ ವಿಷಯವು ತೈತ್ತಿರೀಯಬ್ರಾಹ್ಮಣದಲ್ಲಿ—

ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಂಶಶ್ಚ ಭಗಶ್ಚಾಜಾಯೇತಾಂ । ಸಾ ಚತುರ್ಥಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಂಶ್ಚಾಜಾಯೇತಾಂ ॥

(ತೈ. ಬ್ರಾ ೧-೧-೯.೧, ೨. ೩)

ಎಂದು ಉಕ್ತವಾಗಿದೆ. ಅದಿತಿಯು ಎಂಟು ಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ಮೂರು ಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ. ಸಂ. ೨–೭ನೇ ಸೂಕ್ತದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ಲೋಕೋಪಕಾರಕವಾದ ಸಾಹಸಕೃತ್ಯಗಳ ವಿಸ್ತಾರವಾದ ವರ್ಣನೆ ಇದೆ.

ಮಿತ್ರಃ—ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ—

**ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।**

(ನಿ. ೧೦-೨೧)

ಮಿತ್ರಶಬ್ದಕ್ಕೆ ಅರ್ಥವೇನು ಎಂದರೆ—**ಮಿತ್ರಃ ಕಸ್ಮಾತ್ । ಸ ಹಿ ಪ್ರಮೀತೇಃ ತ್ರಾಯತೇ । ಪ್ರಮೀತಿಃ ಮರಣಂ । ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ ।** ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಅನ್ನಾದ್ಯಾಹಾರಗಳನ್ನು ಒದಗಿಸಿ, ಹಸಿವಿನಿಂದ ಉಂಟಾಗಬಹುದಾದ್ದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ ।** ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಎಂದರೆ ಸಮಸ್ತ ಪ್ರದೇಶಗಳನ್ನು ತೋಯ್ದು ಹೋಗುವಂತೆ ಎಂದರೆ ನೀರಿನಿಂದ ನೆನೆಯುವಂತೆ ಮಾಡುವುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಅಥವಾ— ಸ್ನೇಹನಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ ।** ಈ ದೇವತೆಯು ಉದಕದಿಂದ ಸಮಸ್ತವನ್ನೂ ಅಂಟಿಕೊಳ್ಳುವಂತೆ, ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗವಾಸಿಗಳನ್ನೂ ಧರಿಸುವನು ಎಂದರೆ ಪೋಷಿಸುವನು. ಎಲೈ ಮನುಷ್ಯರೇ, ಇಂತಹ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿರಾದಿಗಳನ್ನು ಅರ್ಪಿಸಿ ಎಂದು ಮಿತ್ರನ ಅಸಾಧಾರಣ ಗುಣಗಳನ್ನೂ, ಲೋಕೋಪಕಾರವನ್ನೂ ಬಹು ಚೆನ್ನಾಗಿ ವರ್ಣಿಸಿದೆ. ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಈ ಸೂಕ್ತ ಮಾತ್ರ (ಋ ಸಂ. ೩–೫೯) ಇತರ ಕಡೆ ಮಿತ್ರನು, ವರುಣ ಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದ್ದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿವುಳ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು. (ಋ. ಸಂ. ೩-೫೯) ಅಲ್ಲಿಯೂ ಆ ದೇವತೆಯ

ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ಹೇಳಲ್ಪಟ್ಟಿದೆ. ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ—

**ಮಹಾँ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ. ಸಂ. ೩-೫೯-೫)

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ. ಈ ಅರ್ಥವನ್ನು ಕೊಡುವ **ಯಾತಯಜ್ಜನ** ಎಂಬ ಶಬ್ದವು—

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ. ಸಂ. ೫-೭೨-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರ ಪರವಾಗಿಯೂ—

**ಮಿತ್ರಸ್ತಯೋರ್ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ।**

(ಋ. ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ. ಮೇಲೆ ಹೇಳಿದ ಋ. ಸಂ. ೩-೫೯ನೆಯ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ. ಮನುಷ್ಯರ ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ, ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರವಾಗಿದಾನೆ, ಎಂದು ಮಿತ್ರನ ಗುಣವರ್ಣನೆ ಇದೆ. ಋ. ಸಂ. ೫-೮೧-೪ರಲ್ಲಿ ಸವಿತೃ ಮತ್ತು ಮಿತ್ರರು ಒಂದೇ ಎಂದೂ, ವಾಜಸನೇಯಸಂಹಿತೆಯಲ್ಲಿ (ವಾ. ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ, ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ, ಋ. ಸಂ. ೧೦-೮-೪ರಲ್ಲಿ ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ ತನಗೋಸ್ಕರ ಉತ್ಪತ್ತಿಮಾಡುತ್ತಾನೆಂದೂ, ಋ. ಸಂ. ೩-೫.೪ ರಲ್ಲಿ ದೀಪ್ತನಾದ ಅಗ್ನಿಯೇ ಮಿತ್ರನು ಎಂದೂ, ಋ. ಸಂ. ೪.೩-೧ರಲ್ಲಿ ಅಗ್ನಿಯು ಜನಿತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**

(ಋ. ಸಂ. ೩.೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತನಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃವೂ, ಅಧ್ವರ್ಯುವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ, ಆಗಿರುವನೆಂದೂ, ಇವನು ನದಿಗಳಿಗೂ ಪರ್ವತಗಳಿಗೂ ಮಿತ್ರ (ಸ್ನೇಹಿತ, ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

**ವರುಣಃ—ವರುಣೋ ವೃಣೋತೀತಿ ಸತಃ** (ನಿ. ೧೦-೨) ಮೇಘಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ.

ವರುಣನು ಅತಿ ಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣದೇವತಾಕವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ. ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲಿ ಹನ್ನೆರಡಿವೆ. ಆದರೆ ಮಿತ್ರಾವರುಣರನ್ನು ಒಟ್ಟಾಗಿ ಸ್ತುತಿಸುವ ಸೂಕ್ತಗಳು ಇಪ್ಪತ್ತನಾಲ್ಕು ಇವೆ.

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ. ಅವನಿಗೆ ಮುಖ, ಕಣ್ಣು, ತೋಳುಗಳು, ಕೈಗಳು ಮತ್ತು ಪಾದಗಳಿವೆ; ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ, ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಾದಿಗಳ ವಿವರಣೆ ಇದೆ. ಅಗ್ನಿ, ಮಿತ್ರ ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**

(ಋ. ಸಂ. ೧-೧೧೫-೧)

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾঁ ಏತಿ ಪ್ರಿಯಂ ವರುಣಯೋರದಬ್ಧಂ ।**

(ಋ. ಸ. ೬-೫೧-೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ ।**

(ಋ. ಸಂ. ೭-೬೧-೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ ।**

(ಋ. ಸಂ. ೭-೬೩-೧)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।**

(ಋ.ಸಂ. ೧೦-೩೭-೧)

ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ. ಮತ್ತು ಋ. ಸಂ. ೭-೬೬-೧೦ ನೆಯ ಋಕ್ಕಿನಲ್ಲಿ ಅರ್ಯಮಾ, ಮಿತ್ರ, ವರುಣರು ಸೂರ್ಯನೇತ್ರರೆಂದು ಹೇಳಿದೆ. ವರುಣನು ದೂರದೃಷ್ಟಿಯುಳ್ಳವನು (**ಉರುಚಕ್ಷಸಂ**) ಎಂದು ಋ. ಸಂ. ೧-೨೫-೫ ; ೧-೨೫-೧೬ ; ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।**
**ಸೀದಂತು ಮನುಷೋ ಯಥಾ ॥**

(ಋ. ಸಂ. ೧-೨೬-೪)

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥**

(ಋ. ಸಂ ೫-೭೨-೨)

ಇತ್ಯಾದಿ ಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ, ವರುಣ, ಅರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

**ಯದೀಂ ಸಖಾಯಾ ಸಖ್ಯಾಯ ಸೋಮೈಃ ಸುತೇಭಿಃ ಸುಪ್ರಯಸಾ ಮಾದಯೈತೇ ।**

(ಋ. ಸಂ. ೪-೪೧-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಇಂದ್ರಾದಿ ದೇವತೆಗಳೊಡನೆ ಸೋಮಪಾನ ಮಾಡುತ್ತಾನೆಂದು ಹೇಳಿದೆ.

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ ।**
**ಪರಿ ಸ್ಪಶೋ ನಿ ಷೇದಿರೇ ।** (ಋ. ಸಂ. ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲಹೊದಿಕೆ ಅಥವಾ ನಿಲುವಂಗಿಯನ್ನೂ ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆಯಿದೆ. ವರುಣನ ರಥವು ಸುವರ್ಣಮಯವಾದುದು, ಮತ್ತು ಸೂರ್ಯನಂತೆ ಕಾಂತಿಯುಕ್ತವಾದದ್ದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣಮಾಡುತ್ತಾರೆ (ಋ. ಸಂ. ೫ ೬೩-೧) ಇತ್ಯಾದಿ ವರ್ಣನೆಗಳಿವೆ.

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲು ಲೋಕದಲ್ಲಿದೆ. ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾ೩ ಸ್ವಾ । ಸಾಮ್ರಾಜ್ಯಾಯ ಸುಕ್ರತುಃ ।**
**ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾँ ಅಭಿ ಪಶ್ಯತಿ । ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧-೨೫-೧೦, ೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ನೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರಸ್ತಂಭಗಳನ್ನಾಶ್ರಯಿಸಿ ದೃಢವಾಗಿದೆ. ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ (ಋ. ಸಂ. ೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು ಮಿತ್ರಾವರಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ. ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ. ಇತ್ಯಾದಿ ವರ್ಣನೆಗಳೂ ಇವೆ.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕ ಕಡೆ ರಾಜನೆಂದು ಕರೆಯಲ್ಪಟ್ಟಿದ್ದಾನೆ.

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**

(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**

(ಋ. ಸಂ. ೨-೨೭-೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ।**

(ಋ. ಸಂ. ೫-೮೫-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ. ದೇವತೆಗಳಿಗೂ, ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೆ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವಸೂಚಕವಾದ ಹೆಸರಿದೆ.

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿದೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧ ವಾಗಿದೆ. ಒಂದಾದರೂ ಕಥೆಗಳಿಲ್ಲ. ವರುಣನು ಭೌತಿಕ ಮತ್ತು ನೈತಿಕ ವಿಧಗಳ **(ವರುಣಸ್ಯ ವ್ರತಾನಿ)** ನಿಯಾಮಕನೆಂದು ಬಹಳವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು **ಮಾಯಾ** ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ, ರಾಕ್ಷಸರಿಗೆ ಅನ್ವಯಿಸುವ ಸಂದರ್ಭದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಕುಟಿಲವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸರಿಗೆ ಅನ್ವಯಿಸುತ್ತದೆ. ಅಸುರಶಬ್ದಾರ್ಥದಂತೆ ಮಾಯಾಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗವಿದೆ. ತನ್ನಲ್ಲಿ ನಿಗೂಢ ವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯ ನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆ ಮೋಡ ಗಳಿಂದ ಮಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದರುತ್ತವೆ. (ಋ ಸಂ. ೫-೬೩-೪) ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ. ಆದ್ದರಿಂದ ಈ **ಮಾಯಾ** ಎಂಬ ಪದವು ಋ. ಸಂ. ೬-೪೮-೧೪; ೭-೨೮-೪; ೧೦-೯೯-೧೦; ೧೦-೧೪೭-೫; ಮೊದಲಾದ ಋಕ್ಕುಗಳಲ್ಲೆಲ್ಲಾ ದೇವತೆಗಳಲ್ಲಿ ಮುಖ್ಯ ವಾಗಿ ವರುಣನಿಗೇ ಹೇಳಿದೆ.

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗವನ್ನು ಸ್ಥಾಪಿಸಿ ದನು. ಮತ್ತು

**ಆಸೀದದ್ವಿಶ್ವಾ ಭುವನಾನಿ ಸಂರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ।**

(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ ವರುಣನು ಸಮಸ್ತ ಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುದೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**

(ಋ. ಸಂ. ೭-೪೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂಲೋಕಗಳೂ (ಅಧೋಲೋಕಗಳೂ) ಅವನ ವಶದಲ್ಲಿವೆ ಯೆಂದೂ ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ. (ಋ. ಸಂ. ೫-೬೩-೭) ಅವರೇ ಸಮಸ್ತ ಜಗತ್ತಿಗೂ ರಕ್ಷಕರು. (ಋ. ಸಂ. ೨-೨೭-೪) ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ. (ಋ. ಸಂ. ೫-೬೯-೧, ೪) ಅವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮ ವನ್ನೂ ಇಟ್ಟಿದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದಾನೆ. ವರುಣ, ಮಿತ್ರ ಮತ್ತು ಅರ್ಯ

ಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ. (ಋ. ಸಂ ೭-೬೦-೪) ಇತ್ಯಾದ್ಯನೇಕ ಋಕ್ಕುಗಳಲ್ಲಿ ವರುಣನ ಅಧಿಕಾರ ವರ್ಣನೆ ಇದೆ.

ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ ೬-೪-೮-೪) **ಮಿತ್ರೋಽಹರಜನಯದ್ವರುಣೋ ರಾತ್ರಿಂ**—ಎಂದರೆ ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ. ಆದ್ದರಿಂದ—**ಮೈತ್ರಂ ವಾ ಅಹಃ ವಾರುಣೀ ರಾತ್ರಿಃ**—ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. (ತೈ. ಸಂ. ೨.೧-೭-೪) ಒಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ । ವೇದಾ ಯ ಉಪಜಾಯತೇ ।**

(ಋ. ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ತಿಂಗಳೂ ತಿಳಿದಿವೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು ಎಂದು ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ. ಅವನ ಅಪ್ಪಣೆಯ ಮೇರೆಯೇ ಅವು ಸತತವಾಗಿ ಪ್ರವಹಿಸುತ್ತವೆ. (ಋ. ಸಂ. ೨-೨೮-೪) ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ; (ಋ. ಸಂ. ೫-೮೫-೬) ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು. ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶವಾದರೂ ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ ಇದು ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಪುರಾಣಾದಿಗಳಲ್ಲ ವರುಣನು ಜಲಾಧಿಪತಿಯೆಂದು ಪ್ರಸಿದ್ಧನಾಗಿದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮ ದಿಕ್ಕಿಗೆ ಅಧಿಪತಿಯೆಂದು ಪುರಾಣಾದಿಗಳಲ್ಲಿ ಹೇಳಿರುವ ವಿಷಯ ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದೊಡನೆ ಇರುವ ನೀರಿನೊಡನೆಯೇ. ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ ಬುಡಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು ಭೂಮಿಯನ್ನೆಲ್ಲಾ ವರುಣನು ತೇವವಾಗಿ ಮಾಡುವನು ಎಂದು ಋ. ಸಂ. ೫-೮೫-೩, ೪ನೆಯ ಋಕ್ಕುಗಳಲ್ಲಿ ಹೇಳಿದೆ. ಒಂದು ಇಡೀ ಸೂಕ್ತವೇ (ಎಂದರೆ ಋ. ಸಂ. ೫-೬೩ನೆಯ ಸೂಕ್ತವು) ಅವರ ಮಳೆಗರೆಯುವ ಶಕ್ತಿಯನ್ನೂ ಸೂಚಿಸುತ್ತದೆ. ಯಜುರ್ವೇದ ಸಂಹಿತೆಯಲ್ಲಿ (ತೈ. ಸಂ. ೫-೫-೪-೧) **ಆಪೋ ವರುಣಸ್ಯ ಪತ್ನಯ ಆಸನ್**—ನೀರುಗಳು ವರುಣನ ಪತ್ನಿಯರೆಂದೂ, (ತೈ. ಸಂ. ೬-೪-೩-೨) **ಮಿತ್ರಾವರುಣೌ ವಾ ಅಪಾಂ ನೇತಾರೌ**—ಮಿತ್ರಾವರುಣರು ನೀರಿಗೆ ನಾಯಕರು ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇ ಪದೇ ಹೇಳಲ್ಪಟ್ಟಿವೆ. ಈ ಕಾರಣದಿಂದಲೇ ಅವನಿಗೆ **ಧೃತವ್ರತ** ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವು ಸಂದಿದೆ.

**ಪರಿ ಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು ವ್ರತಂ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೧-೭)

**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ ।**

(ಋ. ಸ. ೫-೬೯-೪)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೇ ಮಿತ್ರಾವರುಣಾರ್ಯಮರರ ಅಪ್ಪಣೆಗಳನ್ನು ಪಾಲಿಸುತ್ತಾರೆಂದೂ ಅನಾದಿ ದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿದೆ. ಮಿತ್ರಾವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲ ಕೊಡಲು ಸಾಧ್ಯವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ ಒಂದೊಂದುವೇಳೆ ಆದಿತ್ಯರಲ್ಲಿ ಅಥವಾ ಇತರ ಸಾಧಾರಣ ದೇವತೆಗಳಲ್ಲಿಯೂ ಕಂಡುಬರುತ್ತದೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನೂ ಅಭಿವೃದ್ಧಿಗೊಳಿಸುವರು (**ಋತಸ್ಯ ಗೋಪಾ**) ಎಂದರೆ ನಿಯಮಗಳನ್ನು ಪಾಲಿಸುವವರು (ಅಥವಾ ಪಾಲಿಸುವಂತೆ ಮಾಡುವವರು) ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕ ವೇಳೆ ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲಿ, ಹರಿಯುವ ನದಿಗಳಾಗಲಿ ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು : ಅವನ ಶಕ್ತಿಯನ್ನು ಮೀರಲಾರವು : ಅವನ ಕೋಪವನ್ನು ತಡೆಯಲಾರವು. ಮಿತ್ರಾವರುಣರ ಸೀಮೆಯು ಎಲ್ಲೆಕಟ್ಟನ್ನು ಆಕಾಶ ಮತ್ತು ನದಿಗಳು ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ **ಅಡಗಿವೆ.** ಎಲ್ಲಾ ಪ್ರಾಣಿಗಳ ವಸತಿಗಳೂ, ಮೂರು ಸ್ವರ್ಗಲೋಕಗಳೂ, ಮೂರು ಭೂಲೋಕಗಳೂ ಅವನಲ್ಲಿಯೇ ನಿಹಿತವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರಗಾಮಿಯಾದ ವಾಯುವಿನ **ಗತಿ,** ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆ ಬರುವ ಎಲ್ಲಾ ಪದಾರ್ಥಗಳನ್ನೂ ಅವನು ನೋಡುತ್ತಾನೆ. ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಉಪಾಯಗಳು ಎಲ್ಲವೂ ವರುಣನಿಗೆ **ತಿಳಿಯುತ್ತವೆ.** ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋ ದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪ ಬರುತ್ತದೆ. ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ, ಇವೆರಡಕ್ಕೂ ಅವನು ಬಹಳ ಕ್ರೂರಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿಸುವ ವರುಣನ ಪಾಶವು ಋ. ಸಂ. ೧-೨೪-೧೫ ; ೧-೨೫-೧೧ ; ೬-೭೪-೪ ; ೧೦-೮೫-೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿದೆ. ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ ; ಸತ್ಯವಾದಿಯನ್ನು ಬಿಟ್ಟುಬಿಡುತ್ತದೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ಸೇತೃಭಿರರಜ್ಜುಭಿಃ ಸಿನೀಥಃ ।**
**ಪರಿ ನೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ॥**

(ಋ. ಸಂ. ೭-೮೪-೨)

ಎಂಬ ಋಕ್ಕಿನಲ್ಲಿ ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ. ಈ ಪಾಶವೆಂಬ ಶಬ್ದವು ಇಡೀ ಋಗ್ವೇದದಲ್ಲಿ ಒಂದು ಕಡೆ ಮಾತ್ರ ಅಗ್ನಿದೇವತಾಕವಾದ ಮಂತ್ರದಲ್ಲಿ ಬಂದಿದೆ. ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶಬಂಧನ ಮತ್ತು ಮೋಚನ (ಪಾಶ ಬಿಡಿಸುವ) ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧಿಸಿದೆಯೆಂದು ಹೇಳಬಹುದು. ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾವರುಣರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ. ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಮನ್ನಿಸುತ್ತಾನೆ ; ಹಗ್ಗದಂತೆ ಬಿಚ್ಚುತ್ತಾನೆ ; ಮತ್ತು ಪಾಪಪರಿಹಾರ ಮಾಡುತ್ತಾನೆ. ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ. ಅವನ ಪೂರ್ವೀಕರು ಮಾಡಿದ ಪಾಪದಿಂದಲೂ ಮನುಷ್ಯರನ್ನು ಬಿಡುಗಡೆ ಮಾಡುತ್ತಾನೆ. ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ, ಉಲ್ಲಂಘಿಸಿ, ಆನಂತರ ಪಶ್ಚಾತ್ತಾಪಡುವವರನ್ನೂ ಉಳಿಸಿ ಕೊಡುತ್ತಾನೆ. ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರ ತೋರಿಸುತ್ತಾನೆ. ವರುಣನಲ್ಲಿ ನೂರುಗಟ್ಟಲೆ, ಸಾವಿರಗಟ್ಟಲೆ ಔಷಧಗಳಿವೆ. ಅವನು ಮೃತ್ಯುವನ್ನು ದೂರಮಾಡುತ್ತಾನೆ : ಮತ್ತು ಪಾಪವನ್ನು ಪರಿಹಾರ ಮಾಡುತ್ತಾನೆ. ಅವನು ಪ್ರಾಣಾಪಹಾರ ಮಾಡಬಲ್ಲನು ; ಜೀವದಾನವನ್ನೂ ಮಾಡಬಲ್ಲನು. ನಿತ್ಯತ್ವವನ್ನು ರಕ್ಷಣೆ ಮಾಡುವುದರಲ್ಲಿ ಬಹಳ ಕುಶಲನು ಇತ್ಯಾದಿಯಾಗಿ ವರುಣನ ಗುಣವರ್ಣನೆಯು ಅನೇಕ ಋಕ್ಕುಗಳಲ್ಲಿವೆ. ಇಲ್ಲಿ ನಾವು ಅದನ್ನು ಅತಿ ಸೂಕ್ಷ್ಮವಾಗಿ ವಿವರಿಸಿದ್ದೇವೆ. ಉಚಿತ ಸಂದರ್ಭದಲ್ಲಿ ಅದನ್ನು ವಿಸ್ತಾರವಾಗಿ ವಿವರಿಸುತ್ತೇವೆ.

ತೈತ್ತಿರೀಯಸಂಹಿತೆಯಲ್ಲಿ—**ಫಲ್ಗುನೀನಕ್ಷತ್ರಮರ್ಯಮಾ ದೇವತಾ...... ...... .... ಅನುರಾಧಾ ನಕ್ಷತ್ರಂ ಮಿತ್ರೋ ದೇವತಾ** .... ...... ...... ...... (ತೈ. ಸಂ. ೪-೪-೯-೨) ಎಂದರೆ—ಅರ್ಯಮನು ಪೂರ್ವ ಫಲ್ಗುನೀ ನಕ್ಷತ್ರಕ್ಕೂ, ಮಿತ್ರನು ಅನೂರಾಧಾ ನಕ್ಷತ್ರಕ್ಕೂ ಅಧಿಪತಿಗಳೆಂದು ಹೇಳಿದೆ.

**ಅರ್ಯಮಾ**—ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ ಆದಿತ್ಯರೆಂದರೆ ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. ನಾವು ಹಿಂದೆ ತಿಳಿಸಿದಂತೆ ಋಗ್ವೇದದಲ್ಲಿ (ಋ. ಸಂ. ೨-೨೭-೧) ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂಬ ಆರು ಜನರು ಹೆಸರುಮಾತ್ರವಿದೆ. ಋ. ಸಂ. ೯-೧೧೪-೩ನೆಯ ಋಕ್ಕಿನಲ್ಲಿ ಆದಿತ್ಯರ ಸಂಖ್ಯೆ ಏಳೆಂದೂ, ಋ. ಸಂ. ೧೦-೭೨-೮ ರಲ್ಲಿ ಆದಿತಿಯು ಮೊದಲು ಏಳುಜನ ಪುತ್ರರನ್ನು ದೇವತೆಗಳಿಗೆ ಒಪ್ಪಿಸಿ, ಎಂಟನೆಯ ಮಾರ್ತಾಂಡನನ್ನು ಆನಂತರ ಪಡೆದಳೆಂದೂ ಇದೆ. ಅ. ವೇ. ೮-೯-೨೧ ರಲ್ಲಿಯೂ, ತೈ. ಬ್ರಾ. ೧-೧-೯-೧ ರಲ್ಲಿಯೂ, ಅದಿತಿಗೆ ಮಿತ್ರ, ಅರ್ಯಮಾ, ವರುಣ, ಅಂಶ, ಭಗ, ಧಾತೃ, ಇಂದ್ರ, ವಿವಸ್ವಾನ್ ಎಂಬ ಎಂಟುಮಂದಿ ಪುತ್ರರೆಂದು ಹೇಳಿದೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೬-೧-೨-೮; ೧೧-೬-೩-೮) ಆದಿತ್ಯರು ತಿಂಗಳಿಗೊಬ್ಬರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಾದಿಗಳಲ್ಲಿಯೂ ಆದಿತ್ಯರು ಹನ್ನೆರಡುಮಂದಿಯೆಂದೇ ಇದೆ.

**ಅರ್ಯಮಾ** ಎಂಬ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ನೂರುಕಡೆ ಬಂದಿದ್ದರೂ, ಸಂಪೂರ್ಣವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿಘಂಟುವಿನಲ್ಲಿ) ದೇವತೆಗಳ ಹೆಸರುಗಳ ರೂಪನಿಷ್ಪತ್ತಿಯನ್ನು ವಿವರಿಸುವಾಗ ಈ ಅರ್ಯಮಾದೇವತೆಯ ಹೆಸರನ್ನು ಬಿಟ್ಟಿದಾರೆ. ಎರಡು ಮಂತ್ರಗಳಲ್ಲಿ ಹೊರತಾಗಿ ಬಾಕಿ ಕಡೆಗಳಲ್ಲೆಲ್ಲಾ ಬೇರೆ ದೇವತೆಗಳ ಜೊತೆಯಲ್ಲಿಯೇ ಪ್ರಸ್ತಾಪ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೇ. ಅಗ್ನಿಯನ್ನುದ್ದೇಶಿಸಿ ಕನ್ಯೆಯರನ್ನು ಒಲಿಸಿಕೊಳ್ಳುವಾಗ,

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ನೀನೇ ಅರ್ಯಮಾ ಎಂದು ಹೇಳಿದೆ.

**ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ।**

(ಋ. ಸಂ. ೧೦-೮೫-೩೬)

ಎಂಬ ಋಕ್ಕಿನಲ್ಲಿ—ಎಲೈ ದೇವತೆಗಳೇ, ಭಗ, ಅರ್ಯಮಾ, ಸವಿತೃ, ಪುರಂಧಿ ಇವರುಗಳು ಈ ವಧುವನ್ನು ನನ್ನ ಗೃಹಸ್ಥಾಶ್ರಮಕ್ಕೆ ನೆರವಾಗುವುದಕ್ಕಾಗಿ ನನಗೆ ಕೊಟ್ಟರು ಎಂದು ವರನು ಹೇಳುತ್ತಾನೆ.

ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।
ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥

(ಋ. ಸಂ. ೧೦-೧೨೬-೧)

ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ ।
**ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೭)

ಋ. ಸಂ. ೧೦-೧೨೬ನೆಯ ಸೂಕ್ತದಲ್ಲಿ ದೇವತೆಗಳು ವಿಶ್ವದೇವತೆಗಳೆಂದು ಹೇಳಿದ್ದರೂ ಮೇಲೆ ಉದಹರಿಸಿರುವ ಋಕ್ಕುಗಳಿಂದ ಮುಖ್ಯವಾಗಿ ಆದಿತ್ಯರನ್ನೇ ಇಲ್ಲಿ ಸ್ತುತಿಸಲಾಗಿದೆ. ಇದಲ್ಲದೆ **ದೇವಾಸಃ ಅಷ್ಟ** ಎಂದು ಮೊದಲನೆಯ ಋಕ್ಕಿನಲ್ಲಿ ಹೇಳಿರುವುದು. ಎಂಟುಮಂದಿ ಆದಿತ್ಯರನ್ನೇ (ವೇದದ ಆದಿತ್ಯರ ಸಂಖ್ಯೆ ಎಂಟು ಮಂದಿಗಿಂತ ಹೆಚ್ಚಾಗಿ ಎಲ್ಲಿಯೂ ಹೇಳಿಲ್ಲ) ಉದ್ದೇಶಿಸಿದೆ. ಇದಲ್ಲದೆ ೭ನೇ ಋಕ್ಕಿನಲ್ಲಿ **ಆದಿತ್ಯಾಸಃ** ಎಂಬ ಶಬ್ದವೂ ಇದನ್ನೇ ಸ್ಪಷ್ಟವಾಗಿ ತಿಳಿಸುತ್ತದೆ. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ (ಕೊನೆಯ ಋಕ್ಕು ಹೊರತು) ವರುಣೋ ಮಿತ್ರೋ ಅರ್ಯಮಾ ಎಂದು ಮಿತ್ರಾವರುಣಾರ್ಯಮರ ಹೆಸರು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು ಆದಿತ್ಯರಲ್ಲಿ ಈ ಮಿತ್ರಾವರುಣಾರ್ಯಮರ ಪ್ರಧಾನಸ್ಥಾನವನ್ನು ಪಡೆದಿರುವುದನ್ನು ಸೂಚಿಸುವುದಾಗಿದೆ. ಅರ್ಯಮನ ವಿಷಯವು ಋಗ್ವೇದದಲ್ಲಿ ಹೆಚ್ಚಾಗಿ ವಿವರಿಸಲ್ಪಟ್ಟಿಲ್ಲವಾದ್ದರಿಂದ ವಿಶೇಷ ವಿವರಣೆಯು ಸಾಧ್ಯವಿಲ್ಲ.



॥ ಸಂಹಿತಾಪಾಠಃ ॥

ಸ॒ಪ್ತಭಿಃ॑ ಪು॒ತ್ರೈರದಿ॑ತಿ॒ರುಪ॒ ಪ್ರೈತ್ಪೂ॒ರ್ವ್ಯಂ ಯು॒ಗಂ ।
ಪ್ರ॒ಜಾಯೈ॑ ಮೃ॒ತ್ಯವೇ॑ ತ್ವ॒ತ್ಪುನ॑ರ್ಮಾರ್ತಾ॒ಣ್ಡಮಾಭ॑ರತ್ ॥ ೯ ॥

॥ ಪದಪಾಠಃ ॥

ಸ॒ಪ್ತಽಭಿಃ॑ । ಪು॒ತ್ರೈಃ । ಅದಿ॑ತಿಃ । ಉಪ॑ । ಪ್ರ । ಐ॒ತ್ । ಪೂ॒ರ್ವ್ಯಂ । ಯು॒ಗಂ ।
ಪ್ರ॒ಽಜಾಯೈ॑ । ಮೃ॒ತ್ಯವೇ॑ । ತ್ವ॒ತ್ । ಪುನ॑ಃ । ಮಾ॒ರ್ತಾ॒ಣ್ಡಂ । ಆ । ಅ॒ಭ॒ರ॒ತ್ ॥ ೯ ॥

॥ ಸಾಯಣಭಾಷ್ಯಂ ॥

ಪೂರ್ವಮಂತ್ರೋಕ್ತ ಏವಾರ್ಥಃ ಪುನರತ್ರೋಚ್ಯತೇ । ಸಪ್ತಭಿರ್ಮಾರ್ತಾಂಡವ್ಯತಿರಿಕ್ತೈರ್ಮಿತ್ರಾದಿಭಿರದಿತಿಃ ಪೂರ್ವ್ಯಂ ಪುರಾಣಂ ಯುಗಮುಪ ಪ್ರೈತ್ । ಉಪಗತಾ । ಅಥ ಪ್ರಜಾಯೈ ಪ್ರಾಣಿನಾಮುತ್ಪತ್ತಯೇ ಮೃತ್ಯವೇ ತೇಷಾಂ ಮರಣಾಯ ಮಾರ್ತಾಂಡಂ ಮೃತಾದಂಡಾದ್ಭವಂ ಮಾರ್ತಾಂಡನಾಮಾನಂ ಸೂರ್ಯಂ ಪುನರಾಭರತ್ । ಆಹರತ್ । ದ್ಯುಲೋಕೇಽಧಾರಯತ್ । ಪ್ರಾಣಿಮರಣಜನನಾದೀನಾಂ ಸೂರ್ಯೋದಯಾಸ್ತಮಯಾಯತ್ತತಾ ಸ್ಫುಟಾ । ತಸ್ಯೈ ವ್ಯೃದ್ಧಮಾಂಡಮಜಾಯತೇತ್ಯಾದಿ ಬ್ರಾಹ್ಮಣಂ । ತೈ-ಸಂ. ೬-೫-೬-೧ । ಇತಿ ॥

॥ ಪ್ರತಿಪದಾರ್ಥ ॥

**ಅದಿತಿಃ**—ಅದಿತಿಯು । **ಸಪ್ತಭಿಃ ಪುತ್ರೈಃ**—ಏಳು ಜನ ಪುತ್ರರೊಂದಿಗೆ । **ಪೂರ್ವ್ಯಂ ಯುಗಂ**—ಹಿಂದಿನ ಯುಗಕ್ಕೆ । **ಉಪ ಪ್ರೈತ್**—ಹೋಗಿ ಸೇರಿದಳು । **ಪುನಃ**—ಅಲ್ಲದೇ । **ತ್ವತ್ ಮಾರ್ತಾಂಡಂ**—ಮಾರ್ತಾಂಡ ಸಂಜ್ಞಕನಾದ (ಎರಡನೆಯ) ಸೂರ್ಯನನ್ನು । **ಪ್ರಜಾಯೈ**—ಪ್ರಾಣಿಗಳ ಉತ್ಪನ್ನಕ್ಕಾಗಿಯೂ । **ಮೃತ್ಯವೇ**—ಅವುಗಳ ಕ್ಷಯಕ್ಕಾಗಿಯೂ । **ಆಭರತ್**—ದ್ಯುಲೋಕದಲ್ಲಿ ಸ್ಥಾಪಿಸಿದಳು.

॥ ಭಾವಾರ್ಥ ॥

ಅದಿತಿಯು ಏಳು ಜನ ಪುತ್ರರೊಂದಿಗೆ ಹಿಂದಿನ ಯುಗಕ್ಕೆ ಹೋಗಿ ಸೇರಿದಳು. ಉಳಿದ ಎಂಟನೆಯ ಆದಿತ್ಯನನ್ನು ಪ್ರಾಣಿಗಳ ಉತ್ಪನ್ನಕ್ಕಾಗಿಯೂ, ಅವುಗಳ ಕ್ಷಯಕ್ಕಾಗಿಯೂ ಸಹ ದ್ಯುಲೋಕದಲ್ಲಿ ಸ್ಥಾಪಿಸಿದಳು.

## English Translation

With seven sons Aditi went to a former generation, but she bore Martanda for the birth and death (of human beings).

## ಎಪ್ಪತ್ತಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಜನಿಷ್ಠಾ ಇತ್ಯೇಕಾದಶರ್ಚಂ ಪಂಚಮಂ ಸೂಕ್ತಂ ಶಕ್ತಿಪುತ್ರಸ್ಯ ಗೌರಿವೀತೇರಾರ್ಷಂ ಮಾರುತಂ ತ್ರೈಷ್ಟುಭಂ । ತಥಾ ಚಾನುಕ್ರಾಂತಂ । ಜನಿಷ್ಠಾ ಏಕಾದಶ ಗೌರಿವೀತಿರಿತಿ ॥ ಅಗ್ನಿಷ್ಟೋಮೇ ಮರುತ್ವತೀಯಶಸ್ತ್ರ ಇದಂ ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಜನಿಷ್ಠಾ ಉಗ್ರ ಇತ್ಯೇಕಭೂಯಸೀಃ ಶಸ್ತ್ವಾ ಮರುತ್ವತೀಯಾಂ ನಿವಿದಂ ದಧ್ಯಾತ್ । ಆ. ೫-೧೪ । ಇತಿ ॥ ಸೌಮಿಕಚಾತುರ್ಮಾಸ್ಯೇಷು ವೈಶ್ವದೇವೇऽಪ್ಯೇತನ್ಮರುತ್ವತೀಯಂ ನಿವಿದ್ಧಾನಂ । ಸೂತ್ರಿತಂ ಚ । ಜನಿಷ್ಠಾ ಉಗ್ರ ಉಗ್ರೋ ಜಜ್ಞ ಇತಿ ಮಾಧ್ಯಂದಿನಃ । ಆ. ೯-೨ । ಇತಿ ॥ ಮಹಾವ್ರತೇऽಪಿ ನಿಷ್ಕೇವಲ್ಯ ಏತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನಂ । ಐ. ಆ. ೫-೧-೧ । ಇತಿ ॥

ಅನುವಾದವು—**ಜನಿಷ್ಠಾಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಶಕ್ತಿಋಷಿಯ ಪುತ್ರನಾದ ಗೌರಿವೀತಿ ಎಂಬುವನು ಋಷಿಯು; ಮರುತ್ತುಗಳು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಜನಿಷ್ಠಾ ಏಕಾದಶ ಗೌರಿವೀತಿಃ** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಮರುತ್ವತೀಯ ಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಜನಿಷ್ಠಾ ಉಗ್ರ ಇತ್ಯೇಕಭೂಯಸೀಃ ಶಸ್ತ್ವಾ ಮರುತ್ವತೀಯಾಂ ನಿವಿದಂ ದಧ್ಯಾತ್** ಎಂಬ ಸೂತ್ರದಿಂದ (ಆ. ೫-೧೪) ವಿವೃತವಾಗಿರುವುದು. ಸೋಮಸಂಬಂಧವಾದ ಚಾತುರ್ಮಾಸ್ಯವೆಂಬ ಯಾಗಗಳಲ್ಲಿ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತವನ್ನು ಮರುತ್ವತೀಯ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಜನಿಷ್ಠಾ ಉಗ್ರ ಉಗ್ರೋ ಜಜ್ಞ ಇತಿ ಮಾಧ್ಯಂದಿನಃ** ಎಂಬ ಸೂತ್ರದಿಂದ (ಆ. ೯-೨) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನಂ** ಎಂಬ ವಾಕ್ಯದಿಂದ (ಐ. ಆ. ೫-೧-೧) ನಿರ್ದೇಶಿಸಲ್ಪಟ್ಟಿರುವುದು.

### ಸೂಕ್ತ—೭೩

ಮಂಡಲ— ೧೦ । ಅನುವಾಕ—೬ । ಸೂಕ್ತ— ೭೩ ॥
ಅಷ್ಟಕ—೮ । ಅಧ್ಯಾಯ—೩ । ವರ್ಗ—೩, ೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಗೌರಿವೀತಿಃ ॥
ದೇವತಾ—ಇಂದ್ರಃ ॥ (ಮರುತಃ)
ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಜನಿಷ್ಠಾ ಉಗ್ರಃ ಸಹಸೇ ತುರಾಯ ಮಂದ್ರ ಓಜಿಷ್ಠೋ ಬಹುಲಾಭಿಮಾನಃ।
ಅವರ್ಧನ್ನಿಂದ್ರಂ ಮರುತಶ್ಚಿದತ್ರ ಮಾತಾ ಯದ್ವೀರಂ ದಧನದ್ಧನಿಷ್ಠಾ ॥ ೧ ॥

॥ ಪದಪಾಠಃ ॥

ಜನಿಷ್ಠಾಃ । ಉಗ್ರಃ । ಸಹಸೇ । ತುರಾಯ । ಮಂದ್ರಃ । ಓಜಿಷ್ಠಃ । ಬಹುಲಽಅಭಿಮಾನಃ ।
ಅವರ್ಧನ್ । ಇಂದ್ರಂ । ಮರುತಃ । ಚಿತ್ । ಅತ್ರ । ಮಾತಾ । ಯತ್ । ವೀರಂ । ದಧನತ್ । ಧನಿಷ್ಠಾ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸಹಸೇ ಬಲಾಯ ತುರಾಯ ಶತ್ರೂಣಾಂ ಹಿಂಸನಾಯ ತ್ವಮುಗ್ರ ಉದ್ಗೂರ್ಣಬಲೋ ಜನಿಷ್ಠಾಃ । ಅಜಾಯಥಾಃ । ಕೀದೃಶಸ್ತ್ವಂ । ಮಂದ್ರಃ ಸ್ತುತ್ಯ ಓಜಿಷ್ಠಃ । ಓಜಃ ಶರೀರಬಲಂ, ಅತಿಶಯೇನ ತದ್ವಾನ್ ಬಹುಲಾಭಿಮಾನೋ ಭೂಯಿಷ್ಠಾಭಿಮಾನೀ। ಈದೃಶಂ ಮಹಾನುಭಾವಮಿಂದ್ರ. ಮತ್ರ ವೃತ್ರವಧೇ ಮರುತಶ್ಚಿನ್ಮರುತೋಽಪ್ಯವರ್ಧನ್ । ಸ್ತುತ್ಯಾ ಸಾಹಾಯ್ಯೇನ ವಾ ವರ್ಧಿತವಂತಃ । ಯದ್ಯದಾ ಧನಿಷ್ಠಾ ಧಾರಯಿತ್ರೀಂದ್ರಮಾತಾ ವೀರಂ ದಧನತ್ ಅಧಾರಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಬಹುಲಾಭಿಮಾನಃ**—ಅತಿಶಯವಾದ ಆತ್ಮಶ್ರದ್ಧೆಯುಳ್ಳವನೂ । **ಮಂದ್ರಃ**—ಪ್ರಶಂಸೆಗೆ ಅರ್ಹನೂ । **ಓಜಿಷ್ಠಃ**—ವೀರ್ಯದಿಂದ ಕೂಡಿದವನೂ ಆದ ನೀನು । **ಸಹಸೇ**—ಶಕ್ತಿಪ್ರದರ್ಶನಕ್ಕಾಗಿಯೂ । **ತುರಾಯ**—ಶತ್ರುನಾಶಕ್ಕಾಗಿಯೂ । **ಉಗ್ರಃ**—ಅತ್ಯಧಿಕವಾದ ಬಲವನ್ನು ಹೊಂದಿ । **ಜನಿಷ್ಠಾಃ**—ಉತ್ಪನ್ನನಾಗಿದ್ದೀಯೆ । **ಯತ್**—ಯಾವಾಗ । **ಧನಿಷ್ಠಾಮಾತಾ**—ಇಂದ್ರನನ್ನು ಧರಿಸಿದ್ದ ನಿನ್ನ ಮಾತೆಯು । **ವೀರಂ**—ಪರಾಕ್ರಮಿಯಾದ ನಿನ್ನನ್ನು । **ದಧನತ್**—ಧರಿಸಿದ್ದಳೋ ಆಗ । **ಇಂದ್ರಂ**—ಪ್ರಭುವಾದ ನಿನ್ನನ್ನು । **ಅತ್ರ**—ಈ ವೃತ್ರಹನನಕಾಲದಲ್ಲಿ । **ಮರುತಶ್ಚಿತ್**—ಮರುತ್ತುಗಳೂ ಕೂಡ । **ಅವರ್ಧನ್**—ಪುಷ್ಟಿಗೊಳಿಸಿದರು.

॥ ಭಾವಾರ್ಥ ॥

ಎಲೈ ಇಂದ್ರನೇ, ಅತಿಶಯವಾದ ಆತ್ಮಶ್ರದ್ಧೆಯುಳ್ಳವನೂ, ಪ್ರಶಂಸೆಗೆ ಅರ್ಹನೂ, ವೀರ್ಯದಿಂದ ಕೂಡಿದವನೂ ಆದ ನೀನು ಶಕ್ತಿಪ್ರದರ್ಶನಕ್ಕಾಗಿಯೂ, ಶತ್ರುನಾಶಕ್ಕಾಗಿಯೂ, ಅತ್ಯಧಿಕವಾದ ಬಲವನ್ನು ಹೊಂದಿ ಉತ್ಪನ್ನನಾಗಿದ್ದೀಯೆ. ನಿನ್ನ ಮಾತೆಯು ಪರಾಕ್ರಮಿಯಾದ ನಿನ್ನನ್ನು ಯಾವಾಗ ಧರಿಸಿದ್ದಳೋ, ಆಗ ಪ್ರಭುವಾದ ನಿನ್ನನ್ನು ವೃತ್ರಹನನಕಾಲದಲ್ಲಿ ಮರುತ್ತುಗಳೂ ಸ್ತುತಿಸಿ ಪುಷ್ಟಿಗೊಳಿಸಿದರು.

### English Translation

You have been born, (Indra), for strength, for slaying (enemies), powerful, adorable, most mighty, evtremely proud; the Maruts animated Indra in the (Vritra-fight) when (his) sustaining mother sustained the hero.

। ಸಂಹಿತಾಪಾಠಃ ।

ದ್ರುಹೋ ನಿಷತ್ತಾ ಪೃಶನೀ ಚಿದೇವೈಃ ಪುರೂ ಶಂಸೇನ ವಾವೃಧುಷ್ಟ ಇಂದ್ರಂ ।

ಅಭೀವೃತೇವ ತಾ ಮಹಾಪದೇನ ಧ್ವಾಂತಾತ್ಪ್ರಪಿತ್ವಾದುದರಂತ ಗರ್ಭಾಃ ॥

। ಪದಪಾಠಃ ॥

ದ್ರುಹಃ । ನಿಽಸತ್ತಾ । ಪೃಶನೀ । ಚಿತ್ । ಏವೈಃ । ಪುರು । ಶಂಸೇನ । ವವೃಧುಃ । ತೇ । ಇಂದ್ರಂ ।

ಅಭಿವೃತಾಽಇವ । ತಾ । ಮಹಾಽಪದೇನ । ಧ್ವಾಂತಾತ್ । ಪ್ರಽಪಿತ್ವಾತ್ । ಉತ್ । ಅರಂತ । ಗರ್ಭಾಃ ॥

। ಸಾಯಣಭಾಷ್ಯಂ ।

ದ್ರುಹೋ ದ್ರೋಗ್ಧುರಿಂದ್ರಸ್ಯ ಪೃಶನೀ ಚಿತ್ ಸೇನಾಪಿ ನಿಷತ್ತಾ । ತತ್ಸಂನಿಧೌ ನಿಷಣ್ಣಾಭೂತ್ । ಏವೈರ್ಗಂತೃಭಿರ್ಮರುದ್ಭಿಃ ಸಹಿತಮಿಂದ್ರಂ ನಿಷಣ್ಣೇತಿ ಸಂಬಂಧಃ । ತೇಽಪಿ ಮರುತಃ ಪುರು ಪ್ರಭೂತೇನ ಶಂಸೇನ ಸ್ತೋತ್ರೇಣೇಂದ್ರಂ ವವೃಧುಃ । ಅವರ್ಧಂತ ವೃತ್ರಂ ಜಿಘಾಂಸಂತಂ । ಅಥ ಮಹಾಪದೇನ ಮಹತಾ ವ್ರಜೇನಾಭೀವೃತೇವ ಪರಿವೃತಾನೀವ ಗವಾದೀನಿ ತಾನಿ ಯಥಾವರಣಾಪಗಮೇ ನಿರ್ಗಚ್ಛಂತಿ ತದ್ವತ್ತಾನ್ಯುದಕಾನಿ ಧ್ವಾಂತಾದಂಧಕಾರರೂಪಾತ್ಪ್ರಪಿತ್ವಾದಾಸನ್ನಾತ್ಪ್ರಾಪ್ತಾದ್ವೃತ್ರಾದ್ಗರ್ಭಾ ಗರ್ಭಭೂತಾನ್ಯುದಕಾನ್ಯುದರಂತ । ಉದಗಚ್ಛನ್ ॥

। ಪ್ರತಿಪದಾರ್ಥ ॥

**ದ್ರುಹಃ**—ಶತ್ರುಹಿಂಸಕನಾದ ಇಂದ್ರನ । **ಪೃಶನೀ ಚಿತ್**—ಸೇನೆಯೂ ಕೂಡ । **ಏವೈಃ**—ಮರುತ್ತುಗಳೊಡಗೂಡಿದ ಇಂದ್ರನನ್ನು ಸುತ್ತುವರೆದು । **ನಿಷತ್ತಾ**—ಕುಳಿತುಕೊಂಡಿತು । **ತೇ**—ಆ ಮರುತ್ತುಗಳೂ ಸಹ । **ಪುರು**—ಅತ್ಯಧಿಕವಾದ । **ಶಂಸೇನ**—ಸ್ತುತಿಯಿಂದ । **ಇಂದ್ರಂ**—ಇಂದ್ರನನ್ನು । **ವವೃಧುಃ**—ಪುಷ್ಟಿಗೊಳಿಸಿದರು (ಅನಂತರವೇ) । **ಮಹಾಪದೇನ**—ದೊಡ್ಡ ಕೊಟ್ಟಿಗೆಯ ಗೋಡೆಗಳಿಂದ । **ಅಭೀವೃತೇವ**—ಸುತ್ತುವರಿಯಲ್ಪಟ್ಟು ಬಂಧಿತವಾದ ಗೋವುಗಳು ದ್ವಾರವು ಸಿಕ್ಕಿದೊಡನೆಯೇ ಗುಂಪಾಗಿ ಹೊರಕ್ಕೆ ಓಡಿಬರುವಂತೆ ।

**ಧ್ವಾಂತಾತ್**—ಅಂಧಕಾರರೂಪನೂ । **ಪ್ರಪಿತ್ವಾತ್**—ಉದಕವನ್ನು ಸುತ್ತುವರಿದಿದ್ದವನೂ ಆದ ಪುಷ್ಟನಾದ ವೃತ್ರನಿಂದ । **ತಾ ಗರ್ಭಾಃ**—ಅವನಲ್ಲಿ ಅಡಕವಾಗಿದ್ದ ಉದಕಗಳು । **ಉದರಂತ**—ಹೊರಹೊರಟು ಪ್ರವಹಿಸಿದವು.

॥ ಭಾವಾರ್ಥ ॥

ಶತ್ರುಹಿಂಸಕನಾದ ಇಂದ್ರನ ಸೇನೆಯೂ ಇಂದ್ರನಿಗೆ ಸಹಾಯಮಾಡಲು ಮರುತ್ತುಗಳೊಡಗೂಡಿದ ಇಂದ್ರನನ್ನು ಸುತ್ತುವರೆದು ಸ್ಥಾಪಿತವಾಯಿತು. ಮರುತ್ತುಗಳೂ ಇಂದ್ರನನ್ನು ಅಧಿಕವಾಗಿ ಸ್ತುತಿಸಿ ಪುಷ್ಟಿಗೊಳಿಸಿದರು. ಒಡನೆಯೇ, ದೊಡ್ಡ ಕೊಟ್ಟಿಗೆಯ ಗೋಡೆಗಳಿಂದ ಸುತ್ತುವರಿಯಲ್ಪಟ್ಟ, ಬಂಧಿತವಾದ ಗೋವುಗಳು ದ್ವಾರವು ಸಿಕ್ಕಿದೊಡನೆಯೇ ಗುಂಪಾಗಿ ಹೊರಕ್ಕೆ ಓಡಿಬರುವಂತೆ, ಅಂಧಕಾರರೂಪನೂ, ಉದಕವನ್ನು ಸುತ್ತುವರೆದಿದ್ದವನೂ, ಪುಷ್ಟನೂ ಆದ ವೃತ್ರನಿಂದ ಅವನ ಗರ್ಭಪ್ರಾಯವಾಗಿದ್ದ ಉದಕಗಳು ಹೊರಹೊರಟು ಪ್ರವಹಿಸಿದವು.

## English Translation

The martial troop of (Indra) the injurer encamped around Indra, (accompanied) by the swift moving (Maruts): they animated him with abundant praise; like (cattle) penned up within a great stall, the embryonic (waters) issued from the (Vritra) who had arrived in the form of darkness.

॥ ಸಂಹಿತಾಪಾಠಃ ॥

ಋಷ್ವಾ ತೇ ಪಾದಾ ಪ್ರ ಯಜ್ಜಿಗಾಸ್ಯವರ್ಧನ್ವಾಜಾ ಉತ ಯೇ ಚಿದತ್ರ ।
ತ್ವಮಿಂದ್ರ ಸಾಲಾವೃಕಾನ್ತ್ಸಹಸ್ರಮಾಸನ್ದಧಿಷೇ ಅಶ್ವಿನಾ ವವೃತ್ಯಾಃ ॥ ೩ ॥

॥ ಪದಪಾಠಃ ॥

ಋಷ್ವಾ । ತೇ । ಪಾದಾ । ಪ್ರ । ಯತ್ । ಜಿಗಾಸಿ । ಅವರ್ಧನ್ । ವಾಜಾಃ । ಉತ । ಯೇ । ಚಿತ್ । ಅತ್ರ ।
ತ್ವಂ । ಇಂದ್ರ । ಸಾಲಾವೃಕಾನ್ । ಸಹಸ್ರಂ । ಆಸನ್ । ದಧಿಷೇ । ಅಶ್ವಿನಾ । ಆ । ವವೃತ್ಯಾಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ಪಾದಾವೃಷ್ವಾ ಮಹಾಂತೌ । ತಾದೃಶಸ್ತ್ವಂ ಯದ್ಯದಾ ಜಿಗಾಸಿ ಗಚ್ಛಸಿ ತದಾನೀಂ ವಾಜಾ ಋಭವೋಽವರ್ಧನ್ । ಆವರ್ಧಯನ್ । ಉತಾಪಿ ಚ ಯೇ ಚಿದ್ಯೇ ಕೇಚಿದ್ದೇವಾಃ

ಸಂತಿ ತೇಽಪ್ಯವರ್ಧಯನ್ । ಹೇ ಇಂದ್ರ ತ್ವಂ ಸಹಸ್ರಂ ಸಾಲಾವೃಕಾನಾಸನ್ಯಾಸ್ಯೇ ದಧಿಷೇ । ಧಾರಯಸಿ । ತದಾನೀಮಶ್ವಿನಾಶ್ವಿನಾವಸ್ಮಾ ವವೃತ್ಯಾಃ । ಆವರ್ತಯೇಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಪಾದಾ—ಪಾದಗಳು । ಋಷ್ವಾ—ಮಹತ್ವರೂಪವುಳ್ಳವಾಗಿವೆ । ಯತ್—ಯಾವಾಗ । ಪ್ರ ಜಿಗಾಸಿ—ನೀನು ಸಂಚರಿಸುವೆಯೋ ಆಗ । ವಾಜಾಃ—ಋಭುಗಳೂ । ಉತ—ಮತ್ತು । ಯೇ ಚಿತ್—ಉಳಿದ ಯಾವ ದೇವತೆಗಳಿದ್ದಾರೆಯೋ ಅವರೆಲ್ಲರೂ । ಅವರ್ಧನ್—ನಿನ್ನನ್ನು ಪುಷ್ಟಿಗೊಳಿಸುತ್ತಾರೆ । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಸಹಸ್ರಂ—ಸಹಸ್ರಸಂಖ್ಯಾಕವಾಗಿ । ಸಾಲಾವೃಕಾನ್—ಮೃಗವಿಶೇಷಗಳನ್ನು । ಆಸನ್—ಮುಖದಲ್ಲಿ । ದಧಿಷೇ—ಹೊಂದಿರುತ್ತೀಯೆ (ಆ ಕಾಲದಲ್ಲಿ) । ಅಶ್ವಿನಾ—ಅಶ್ವಿನೀದೇವತೆಗಳನ್ನು । ಆ ವವೃತ್ಯಾಃ—ನಮ್ಮಲ್ಲಿಗೆ ಹಿಂತಿರುಗಿ ಬರುವಂತೆ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪಾದಗಳು ಮಹತ್ವರೂಪವುಳ್ಳವಾಗಿವೆ. ನೀನು ಉತ್ತಮವಾಗಿ ಸಂಚರಿಸುವಾಗ ಋಭುಗಳೂ ಮತ್ತು ಇತರ ದೇವತೆಗಳೂ ನಿನ್ನನ್ನು ಪುಷ್ಟಿಗೊಳಿಸುತ್ತಾರೆ. ಎಲೈ ಇಂದ್ರನೇ, ನೀನು ಮೃಗವಿಶೇಷಗಳನೇಕವನ್ನು ನಿನ್ನ ಮುಖದಲ್ಲಿ ಹೊಂದಿರುತ್ತೀಯೆ. ಆ ಕಾಲದಲ್ಲಿ ಅಶ್ವಿನೀದೇವತೆಗಳನ್ನು ನಮ್ಮಲ್ಲಿಗೆ ಹಿಂತಿರುಗಿ ಬರುವಂತೆ ಮಾಡು.

## English Translation

Vast, (Indra), are your feet; when you advance, the Vajas, and whatsoever (deities are) there animated you; you, Indra, hold a thousand jackals in your mouth, may you bring back the Aswins.

॥ ಸಂಹಿತಾಪಾಠಃ ॥

ಸಮನಾ ತೂರ್ಣಿರುಪ ಯಾಸಿ ಯಜ್ಞಮಾ ನಾಸತ್ಯಾ ಸಖ್ಯಾಯ ವಕ್ಷಿ ।
ವಸಾವ್ಯಾಮಿಂದ್ರ ಧಾರಯಃ ಸಹಸ್ರಾಶ್ವಿನಾ ಶೂರ ದದತುರ್ಮಘಾನಿ ॥ ೪ ॥

॥ ಪದಪಾಠಃ ॥

ಸಮನಾ । ತೂರ್ಣಿಃ । ಉಪ । ಯಾಸಿ । ಯಜ್ಞಂ । ಆ । ನಾಸತ್ಯಾ । ಸಖ್ಯಾಯ । ವಕ್ಷಿ ।
ವಸಾವ್ಯಾಂ । ಇಂದ್ರ । ಧಾರಯಃ । ಸಹಸ್ರಾ । ಅಶ್ವಿನಾ । ಶೂರ । ದಧತುಃ । ಮಘಾನಿ ॥ ೪ ॥

। ಸಾಯಣಭಾಷ್ಯಂ ।

ಹೇ ಇಂದ್ರ ಸಮನಾ ಸಂಗ್ರಾಮೇ ತೂರ್ಣಿಸ್ತ್ವರಮಾಣೋಽಪಿ ಯಜ್ಞಮುಪ ಯಾಸಿ । ಉಪಗಚ್ಛಸಿ । ತದಾನೀಂ ನಾಸತ್ಯಾಶ್ವಿನೌ ಸಖ್ಯಾಯ ವಕ್ಷಿ । ವಹಸಿ । ಹೇ ಇಂದ್ರ ವಸವ್ಯಾಂ ವಸುಸಮೂಹಂ ಸಹಸ್ರಾ ಸಹಸ್ರಾಂ ಬಹುಸಂಖ್ಯಾಂ ಧಾರಯಃ । ಧಾರಯಸ್ಯಸ್ಮಾಕಮರ್ಥಾಯ । ಹೇ ಶೂರ ಅಶ್ವಿನಾಶ್ವಿನಾವಪಿ ತವಾನುಚರೌ ಮಘಾನಿ ಧನಾನಿ ದದತುಃ । ಅಸ್ಮಭ್ಯಂ ಪ್ರಯಚ್ಛತಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । **ಸಮನಾ**—ಸಂಗ್ರಾಮದಲ್ಲಿ । **ತೂರ್ಣಿಃ**—ನಿರತನಾಗಿದ್ದರೂ । **ಯಜ್ಞಂ**—ನಮ್ಮ ಯಜ್ಞಕ್ಕೆ । **ಉಪಯಾಸಿ**—ಬರುತ್ತೀಯೆ । **ನಾಸತ್ಯಾ**—ಅಶ್ವಿನೀದೇವತೆಗಳನ್ನು । **ಸಖ್ಯಾಯ**—ನಮ್ಮೊಂದಿಗೆ ಮಿತ್ರತ್ವವನ್ನು ಹೊಂದಲು । **ವಕ್ಷಿ**—ನಮ್ಮಲ್ಲಿಗೆ ಕರೆತರುತ್ತೀಯೆ । **ವಸವ್ಯಾಂ**—ಧನಸಮೂಹವನ್ನು । **ಸಹಸ್ರಾ**—ಅತ್ಯಧಿಕವಾದ ಸಂಖ್ಯೆಯಲ್ಲಿ । **ಧಾರಯಃ**—ನೀನು ಧರಿಸಿದ್ದೀಯೆ । **ಶೂರ**—ಪರಾಕ್ರಮಿಯಾದ ಇಂದ್ರನೇ । **ಅಶ್ವಿನಾ**—ನಿನ್ನವರಾದ ಅಶ್ವಿನೀದೇವತೆಗಳೂ ಸಹ । **ಮಘಾನಿ**—ಧನಗಳನ್ನು । **ದದತುಃ**—ನಮಗೆ ಕೊಡುತ್ತಾರೆ.

। ಭಾವಾರ್ಥ ।

ಎಲೈ ಇಂದ್ರನೇ, ನೀನು ಸಂಗ್ರಾಮದಲ್ಲಿ ನಿರತನಾಗಿದ್ದರೂ, ನಮ್ಮ ಯಜ್ಞಕ್ಕೆ ಬರುತ್ತೀಯೆ. ನಮ್ಮೊಂದಿಗೆ ಮಿತ್ರತ್ವವನ್ನು ಹೊಂದಲು ಅಶ್ವಿನೀದೇವತೆಗಳನ್ನು ನಮ್ಮಲ್ಲಿಗೆ ಕರೆತರುತ್ತೀಯೆ. ನೀನು ಅತ್ಯಧಿಕವಾದ ಸಂಖ್ಯೆಯಲ್ಲಿ ಧನಸಮೂಹವನ್ನು ಹೊಂದಿದ್ದೀಯೆ. ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನವರಾದ ಅಶ್ವಿನೀದೇವತೆಗಳೂ ಸಹ ನಮಗೆ ಧನಗಳನ್ನು ಕೊಡುತ್ತಾರೆ

English Translation

Hastening in battle you approach the sacrifice; you bring the two Nasatyas to friendship (with us); you, Indra, possess a heap of treasures, thousands (in number); the Aswins, hero, gave us riches.

। ಸಂಹಿತಾಪಾಠಃ ।

ಮಂದಮಾನ ಋತಾದಧಿ ಪ್ರಜಾಯೈ ಸಖಿಭಿರಿಂದ್ರ ಇಷಿರೇಭಿರರ್ಥಂ ।
ಆಭಿರ್ಹಿ ಮಾಯಾ ಉಪ ದಸ್ಯುಮಾಗಾನ್ಮಿಹಃ ಪ್ರ ತಮ್ರಾ ಅವಪತ್ತಮಾಂಸಿ ॥ ೫ ॥

॥ ಪದಪಾಠಃ ॥

ಮಂದಮಾನಃ । ಋತಾತ್ । ಅಧಿ । ಪ್ರಽಜಾಯೈ । ಸಖಿಽಭಿಃ । ಇಂದ್ರಃ । ಇಷಿರೇಭಿಃ । ಅರ್ಥಂ ।

ಆ । ಆಭಿಃ । ಹಿ । ಮಾಯಾಃ । ಉಪ । ದಸ್ಯುಂ । ಆ । ಅಗಾತ್ । ಮಿಹಃ । ಪ್ರ । ತಮ್ರಾಃ । ಅವಪತ್ ।

ತಮಾಂಸಿ ॥ ೫ ॥

॥ ಸಾಯಣಭಾಷ್ಯಂ ॥

ಇಂದ್ರ ಋತಾದ್ಯಜ್ಞಾದಧೀಷಿರೇಭಿರ್ಗಮನಶೀಲೈಃ ಸಖಿಭಿರ್ಮರುದ್ಭಿಃ ಸಹ ಮಂದಸಾನೋ ಮಾದ್ಯನ್ಪ್ರಜಾಯೈ ಯಜಮಾನಾಯಾರ್ಥಂ ಧನಂ ಪ್ರಯಚ್ಛತಿ । ಸ ಚೇಂದ್ರ ಆಭಿಃ ಪ್ರಜಾಭಿರ್ನಿಮಿತ್ತ-ಭೂತಾಭಿರ್ಮಾಯಾ ದಸ್ಯುಸಂಬಂಧಿನೀರ್ವಿನಾಶಯಿತುಂ ದಸ್ಯುಮುಪಾಗಾತ್ । ಸ ದಸ್ಯುಸ್ತಮ್ರಾ ಅವರ್ಷಣೇನ ಗ್ಲಾಪಯಿತ್ರೀರ್ಮಿಹೋ ವೃಷ್ಟೀಃ ಪ್ರಾವಪತ್ । ವ್ಯನಾಶಯದಿತ್ಯರ್ಥಃ । ತಮಾಂಸಿ..... ॥೫॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಋತಾತ್ ಅಧಿ**—ಯಜ್ಞಪ್ರದೇಶದಲ್ಲಿ । **ಇಷಿರೇಭಿಃ**—ವೇಗಗಾಮಿಗಳಾದ । **ಸಖಿಭಿಃ**—ತನ್ನ ಮಿತ್ರರಾದ ಮರುತ್ತುಗಳೊಂದಿಗೆ । **ಮಂದಮಾನಃ**—ಹರ್ಷವನ್ನನುಭವಿಸುತ್ತ । **ಪ್ರಜಾಯೈ**—ಯಜಮಾನರಿಗೆ । **ಅರ್ಥಂ**—ಧನವನ್ನು ಕೊಡುತ್ತಾನೆ । **ಆಭಿಃ**—ಅವರೊಂದಿಗೆ । **ಮಾಯಾಃ**—ಅಸುರರ ದುಷ್ಟಶಕ್ತಿಯನ್ನು ನಾಶಮಾಡಲು । **ದಸ್ಯುಂ**—ದಸ್ಯುವಿನಲ್ಲಿಗೆ । **ಉಪಾಗಾತ್**—ಬರುತ್ತಾನೆ । **ತಮ್ರಾಃ**—ವೃಷ್ಟಿಯಿಲ್ಲದೆ ಜಗತ್ತನ್ನು ಹಿಂಸಿಸುವ । **ಮಿಹಃ**—ಘನೀಭೂತವಾದ ವೃಷ್ಟಿಯನ್ನು । **ಪ್ರಾವಪತ್**—ಕರಗಿ ವೃಷ್ಟಿಯಾಗುವಂತೆ ಮಾಡಿದನು । **ತಮಾಂಸಿ**—ಕತ್ತಲೆಯನ್ನು ನಾಶಮಾಡಿದನು.

॥ ಭಾವಾರ್ಥ ॥

ಇಂದ್ರನು ತನ್ನ ಮಿತ್ರರಾದ ಮರುತ್ತಗಳೊಂದಿಗೆ ಯಜ್ಞಪ್ರದೇಶದಲ್ಲಿ ಹರ್ಷವನ್ನನುಭವಿಸುತ್ತ ಯಜಮಾನರಿಗೆ ಧನವನ್ನು ಕೊಡುತ್ತಾನೆ. ಅವರೊಂದಿಗೆ ಅಸುರರ ದುಷ್ಟಶಕ್ತಿಯನ್ನು ನಾಶಮಾಡಲು ದಸ್ಯುವಿನಲ್ಲಿಗೆ ಬರುತ್ತಾನೆ. ವೃಷ್ಟಿಯಿಲ್ಲದೆ ಜಗತ್ತನ್ನು ಹಿಂಸಿಸುವ ಘನೀಭೂತವಾದ ವೃಷ್ಟಿಯನ್ನು ಕರಗಿ ಸುರಿಯುವಂತೆ ಮಾಡಿದನು. (ಮಾಡುತ್ತಾನೆ) ಕತ್ತಲೆಯನ್ನು ನಾಶಮಾಡಿದನು (ನಾಶಮಾಡುತ್ತಾನೆ).

## English Translation

Indra rejoicing at the sacrifice accompanied by his swift-moving friends (the Maruts, gave) wealth to the people; he has come with them against the Dasyu to destroy his illusions; he has scattered the dark rain-clouds and the gloom.

॥ ಸಂಹಿತಾಪಾಠಃ ॥

ಸನಾಮಾನಾ ಚಿದ್ಧ್ವಸಯೋ ನ್ಯಸ್ಮಾ ಅವಾಹನ್ನಿಂದ್ರ ಉಷಸೋ ಯಥಾನಃ ।
ಋಷ್ವೈರಗಚ್ಛಃ ಸಖಿಭಿರ್ನಿಕಾಮೈಃ ಸಾಕಂ ಪ್ರತಿಷ್ಠಾ ಹೃದ್ಯಾ ಜಘಂಥ ॥೬॥

॥ ಪದಪಾಠಃ ॥

ಸಽನಾಮಾನಾ । ಚಿತ್ । ಧ್ವಸಯಃ । ನಿ । ಅಸ್ಮೈ । ಅವ । ಅಹನ್ । ಇಂದ್ರಃ । ಉಷಸಃ । ಯಥಾ । ಅನಃ ।
ಋಷ್ವೈಃ । ಅಗಚ್ಛಃ । ಸಖಿಽಭಿಃ । ನಿಽಕಾಮೈಃ । ಸಾಕಂ । ಪ್ರತಿಽಸ್ಥಾ । ಹೃದ್ಯಾ । ಜಘಂಥ ॥ ೬ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ವೃತ್ರಂ ಹಂತುಂ ಸನಾಮಾನಾ ಚಿತ್ ಸಮಾನನಾಮಾನೌ ನಿ ಧ್ವಸಯಃ । ನ್ಯಗಮಯತ್ । ಅಥೇಂದ್ರಸ್ತಂ ವೃತ್ರಮವಾಹನ್ । ಅವಹತವಾನ್ । ಯಥೋಷಸೋಽನಃ ಶಕಟಮವನಾಶಿತವಾನ್ ತದ್ವತ್ । ಅಥ ಪ್ರತ್ಯಕ್ಷೇಣೋಚ್ಯತೇ । ಹೇ ಇಂದ್ರ ತ್ವಮೃಷ್ವೈರ್ದೀಪ್ತೈರ್ಮಹದ್ಭಿರ್ವಾ ನಿಕಾಮೈರ್ನಿತರಾಂ ವೃತ್ರವಧಂ ಕಾಮಯಮಾನೈಃ ಸಖಿಭಿರ್ಮರುದ್ಭಿಃ ಸಾಕಂ ವೃತ್ರಂ ಹಂತುಮಗಚ್ಛಃ । ಆಗತ್ಯ ಚ ಪ್ರತಿಷ್ಠಾ ಪ್ರತಿಷ್ಠಾನಾನಿ ಶರೀರಾಣಿ ಹೃದ್ಯಾ ಹೃದ್ಯಾನಿ ರಮಣೀಯಾನಿ ಜಘಂಥ । ಹತವಾನಸಿ ॥ ಹಂತೇಸ್ಥಲ್ಯುಪದೇಶೇಽತ್ವತ ಇತೀಟ್ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸನಾಮಾನಾ**—ಒಂದೇ ಹೆಸರುಳ್ಳ ಇಬ್ಬರು ಅಸುರರನ್ನು । **ನಿ ಧ್ವಸಯಃ**—ನಾಶಮಾಡಿರುವೆ । **ಯಥಾ**—ಯಾವ ರೀತಿ । **ಉಷಸಃ**—ಉಷಸ್ಸಿನ । **ಅನಃ**—ಶಕಟವನ್ನು ವೃತ್ರನು ಮುರಿದನೋ ಆ ರೀತಿ । **ಇಂದ್ರಃ**—ಇಂದ್ರನು । **ವೃತ್ರಂ**—ವೃತ್ರಾಸುರನನ್ನು । **ಅವಾಹನ್**—ದೂರಕ್ಕೆ ತಳ್ಳಿ ಎಸೆದನು । (ಎಲೈ ಇಂದ್ರನೇ) **ಋಷ್ವೈ**—ಕಾಂತಿಯುತರೂ । **ನಿಕಾಮೈಃ**—ವೃತ್ರವಧೆಯನ್ನಿಚ್ಛಿಸಿದವರೂ । **ಸಖಿಭಿಃ ಸಾಕಂ**—ನಿನ್ನ ಮಿತ್ರರೂ ಆದ ಮರುತ್ತುಗಳೊಂದಿಗೆ । **ಅಗಚ್ಛಃ**—ವೃತ್ರವಧಕ್ಕಾಗಿ ಮುನ್ನುಗ್ಗಿದೆ । **ಹೃದ್ಯಾ**—ಆಕರ್ಷವಾದ । **ಪ್ರತಿಷ್ಠಾ**—ಅವನ ಶರೀರದ ಅವಯವಗಳನ್ನು । **ಜಘಂಥ**—ನಾಶಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಒಂದೇ ಹೆಸರುಳ್ಳ ಇಬ್ಬರು ಅಸುರರನ್ನು ನೀನು ನಾಶಮಾಡಿರುವೆ. ಯಾವರೀತಿ ಉಷಸ್ಸಿನ ಶಕಟವನ್ನು ವೃತ್ರನು ಮುರಿದನೋ, ಅದೇ ರೀತಿ ಇಂದ್ರನು ವೃತ್ರಾಸುರನನ್ನು ದೂರಕ್ಕೆ ತಳ್ಳಿ ಎಸೆದನು. ಎಲೈ

ಇಂದ್ರನೇ, ಕಾಂತಿಯುತರೂ, ವೃತ್ರವಧೆಯನ್ನಿಚ್ಛಿಸಿದವರೂ, ನಿನ್ನ ಮಿತ್ರರೂ ಆದ ಮರುತ್ತುಗಳೊಂದಿಗೆ ವೃತ್ರವಧಕ್ಕಾಗಿ ನೀನು ಮುನ್ನುಗ್ಗಿದೆ. ಆಕರ್ಷಕವಾದ ಅವನ ಶರೀರದ ಅವಯವಗಳನ್ನು ನೀನು ನಾಶಮಾಡಿದ್ದೀಯೆ.

## English Translation

You have expelled the two of the same name, you have destroyed the Vritra, as (he destroyed) the cart of the dawn ; you advance with the mighty friends (the Maruts), who were eager (to slay the Vritra;) you demolished his precious limbs.

॥ಸಂಹಿತಾಪಾಠಃ॥

ತ್ವಂ ಜಘಂಥ ನಮುಚಿಂ ಮಖಸ್ಯುಂ ದಾಸಂ ಕೃಣ್ವಾನ ಋಷಯೇ
ವಿಮಾಯಂ ।
ತ್ವಂ ಚಕರ್ಥ ಮನವೇ ಸ್ಯೋನಾನ್ಪಥೋ ದೇವತ್ರಾಂಜಸೇವ ಯಾನಾನ್ ॥೭॥

॥ ಪದಪಾಠಃ ॥

ತ್ವಂ । ಜಘಂಥ । ನಮುಚಿಂ । ಮಖಸ್ಯುಂ । ದಾಸಂ । ಕೃಣ್ವಾನಃ । ಋಷಯೇ । ವಿಽಮಾಯಂ ।

ತ್ವಂ । ಚಕರ್ಥ । ಮನವೇ । ಸ್ಯೋನಾನ್ । ಪಥಃ । ದೇವಽತ್ರಾ । ಅಂಜಸಾಽಇವ । ಯಾನಾನ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನಮುಚಿಮೇತತ್ಸಂಜ್ಞಕಮಸುರಂ ಜಘಂಥ । ಹತವಾನಸಿ । ಕೀದೃಶಂ । ಮಖಸ್ಯುಮ್ಮಖೋ ಯಜ್ಞಂ ವಿಘಾತುಮಿಚ್ಛಂತಂ ಯದ್ವಾ ತ್ವದೀಯಂ ಧನಮಿಚ್ಛಂತಂ । ಕಿಂ ಕುರ್ವನ್ । ದಾಸಮುಪಕ್ಷಪಯಿತಾರಂ ನಮುಚಿಮಸುರಮೃಷಯೇ ಮನವೇ ವಿಮಾಯಂ ವಿಗತಮಾಯಂ ಕೃಣ್ವಾನಃ ಕುರ್ವನ್ । ಕಿಂಚ ದೇವತ್ರಾ ದೇವೇಷು ಮಧ್ಯೇ ಮನವ ಋಷಯೇ ಸಾಮಾನ್ಯೇನ ಮನುಷ್ಯಾಯ ವಾ ಪಥೋ ಮಾರ್ಗಾನ್ತ್ಸ್ಯೋನಾಂಶ್ಚಕರ್ಥ । ಕೃತವಾನಸಿ । ಅಥವಾ ದೇವತ್ರಾ ದೇವೇಷು ಮಧ್ಯೇ ಗಂತವ್ಯಾನ್ಮಾರ್ಗಾನಿತಿ ವಾ ಸಂಬಂಧಃ । ಸ್ಯೋನಾಂಶ್ಚಕರ್ಥೇತ್ಯುಕ್ತಮೇವ ವಿವೃಣೋತಿ । ಅಂಜಸೇವ ಯಾನಾನಿತಿ । ಇವೇತ್ಯೇವಕಾರಾರ್ಥೇ । ಅಂಜಸೈವಾಕುಟಿಲೇನೈವ ಯಾನಾನ್ಗಂತವ್ಯಾನ್ಮಾರ್ಗಾನಕರೋಃ । ಅಥವಾ ಮಾರ್ಗೇಣಾಕುಟಿಲೇನೈವ ಗಂತವ್ಯಾಂಶ್ಚಕರ್ಥ । ಯಥಾ ಲೋಕೇ ಶೀಘ್ರಂ ಗತೋ ಮಾರ್ಗಃ ಕ್ರಾಂತ್ವಾ ಗತೋ ಮಾರ್ಗ ಇತಿ ಮಾರ್ಗಸ್ಯ ಗಂತೃತ್ವೋಪಚಾರಃ ತದ್ವದತ್ರಾಪಿ ಯಾತೃತ್ವಂ ದ್ರಷ್ಟವ್ಯಂ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) **ತ್ವಂ**—ನೀನು । **ದಾಸಂ**—ಹಿಂಸಕನಾದ ನಮುಚಿಯನ್ನು । **ಋಷಯೇ**—ಮನುವಿಗಾಗಿ । **ವಿಮಾಯಂ**—(ಅಸುರನ) ವಂಚನೆಯು ಪ್ರಕಟವಾಗದಿರುವಂತೆ । **ಕೃಣ್ವಾನಃ**—ಮಾಡುತ್ತ । **ನಮುಚಿಂ**—ಆ ನಮುಚಿಯನ್ನು । **ಜಘಂಥ**—ನಾಶಮಾಡಿದ್ದೀಯೆ । **ಕಿಂ ಚ**—ಮತ್ತು । **ದೇವತ್ರಾ**—ದೇವತೆಗಳ ನಡುವೆ । **ಮನವೇ**—ಮನುವಿಗಾಗಿ । **ಪಥಃ**—ಮಾರ್ಗಗಳನ್ನು । **ಸ್ಯೋನಾನ್**—ಸುಖಕರವಾದವನ್ನಾಗಿ । **ಚಕರ್ಥ**—ಮಾಡಿರುತ್ತೀಯೆ । **ಯಾನಾನ್**—ಸಂಚಾರಮಾರ್ಗಗಳನ್ನು । **ಅಂಜಸೇವ**—ನೇರವಾದವನ್ನಾಗಿಯೂ ಮಾಡಿರುವೆ

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂಸಕನಾದ ನಮುಚಿಯ ವಂಚಕಸ್ವಭಾವವನ್ನು ಮುರಿದು ಮನುವಿಗೆ ಹಿತವನ್ನುಂಟುಮಾಡಲು ಅವನನ್ನು ನಾಶಪಡಿಸಿದೆ. ಮತ್ತು ದೇವತೆಗಳಲ್ಲಿಗೆ ಮನುವು ಹೋಗಿ ಸೇರಲು ದೇವಮಾರ್ಗವನ್ನು ನೇರವಾದುದನ್ನಾಗಿಯೂ ಹಿತಕರವಾದುದನ್ನಾಗಿಯೂ ಮಾಡಿರುವೆ.

## English Translation

You have slain the slave Namuchi endeavouring (to disturb) the sacrifice, making his illusions powerless against the Rishi; you have made easy for Manu the paths to the gods so as (to make) the ways straight.

॥ ವಿಶೇಷವಿಷಯಗಳು ॥

**ನಮುಚಿಂ—ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ ತಂ ।** ಇಂದ್ರನೊಡನೆ ಯುದ್ಧಮಾಡುವುದನ್ನು ಬಿಡುವವನಲ್ಲವಾದ್ದರಿಂದ ಇವನಿಗೆ ನಮುಚಿಯೆಂದು ಹೆಸರು. ನಮುಚಿಯೆಂಬುವನು ಒಬ್ಬ ಅಸುರನು. ಇವನು ಮಹಾಬಲವುಳ್ಳವನಾದ್ದರಿಂದ ಇವನೊಡನೆ ಯುದ್ಧಮಾಡಿ ಇವನನ್ನು ಜಯಿಸುವುದು ಇಂದ್ರನಿಗೆ ಬಹಳ ಕಷ್ಟವಾಯಿತು. ಈ ಅಸುರನ ವಿಷಯವನ್ನು ನಾವು ಹಿಂದೆ ಕೆಲವು ಸಂದರ್ಭಗಳಲ್ಲಿ ಬರೆದಿದ್ದೇವೆ. ಆದರೆ ಇಂದ್ರನು ನಮುಚಿಯನ್ನು ಸಂಹಾರಮಾಡಿದ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿರುವುದೆಂದು ಭಾಷ್ಯಕಾರರು ಸೂಚಿಸಿರುವುದರಿಂದ ಅದನ್ನು ಇಲ್ಲಿ ವಿವರಿಸಿದ್ದೇವೆ—

**ಇಂದ್ರೋ ವೃತ್ರಗ್ಂ ಹತ್ವಾ । ಅಸುರಾನ್ ಪರಾಭಾವ್ಯ । ನಮುಚಿಮಾಸುರಂ ನಾಲಭತ । ತಗ್ಂ ಶಚ್ಯಾಗೃಹ್ಣಾತ್ । ತೌ ಸಮಲಭೇತಾಂ । ಸೋಽಸ್ಮಾದಭಿಶುನತರೋಽಭವತ್ । ಸೋಽಬ್ರವೀತ್ । ಸಂಧಾಗ್ಂ ಸಂದಧಾವಹೈ । ಅಥ ತ್ವಾವಸ್ರಕ್ಷ್ಯಾಮಿ । ನ ಮಾ ಶುಷ್ಕೇಣ ನಾರ್ದ್ರೇಣ ಹನಃ । ನ ದಿವಾ ನ ನಕ್ತಮಿತಿ । ಸ ಏತಮಪಾಂ ಫೇನಮಸಿಂಚತ್ । ನ ವಾ ಏಷ ಶುಷ್ಕೋ ನಾರ್ದ್ರೋ ವ್ಯುಷ್ಟಾಸೀತ್ । ಅನುದಿತಃ ಸೂರ್ಯಃ । ನ ವಾ ಏತದ್ದಿವಾ ನ ನಕ್ತಂ । ತಸ್ಯೈತಸ್ಮಿನ್ಲೋಕೇ । ಅಪಾಂ ಫೇನೇನ ಶಿರ ಉದವರ್ತಯತ್ । ತದೇನಮನ್ವವರ್ತತ । ಮಿತ್ರದ್ರುಗಿತಿ । ಸ ಏತಾನಪಾಮಾರ್ಗಾನಜನಯತ್ । ತಾನಜುಹೋತ್ । ತೈರ್ವೈ ಸ ರಕ್ಷಾಗ್ಂಸ್ಯಪಾಹತ । ಯದಪಾಮಾರ್ಗಹೋಮೋ ಭವತಿ । ರಕ್ಷಸಾಮಪಹತ್ಯೈ ॥** (ತೈ. ಬ್ರಾ. ೧-೭-೧-೫, ೬, ೭)

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಮೇಲೆ ಇನ್ನೂ ಇತರ ರಾಕ್ಷಸರನ್ನೂ ಸಂಹಾರಮಾಡಿದನು. ಆದರೆ ನಮುಚಿಯೆಂಬ ಅಸುರನನ್ನು ಜಯಿಸಲಾಗಲಿಲ್ಲ. ಇವನು ಮಹಾಬಲಶಾಲಿಯಾಗಿದ್ದನು. ಯಾವ ವಿಧವಾದ ಆಯುಧಗಳಿಗೂ ಜಗ್ಗಲಿಲ್ಲ. ಆದುದರಿಂದ ಇಂದ್ರನು ಅವನನ್ನು ತನ್ನ ಶರೀರಬಲದಿಂದಲೇ ಗೆಲ್ಲಬೇಕೆಂದು ಬಯಸಿ ಅವನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆದರೂ ಯುದ್ಧಮಾಡಿದಂತೆಲ್ಲ ನಮುಚಿಯ ಬಲವೇ ವೃದ್ಧಿಯಾಗುತ್ತಿತ್ತು. ಇಂದ್ರನು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಆಗ ಇಂದ್ರನು ತನ್ನನ್ನು ಬಿಡಬೇಕೆಂದು ನಮುಚಿಯನ್ನು ಕೇಳಲು ಆಗ ಆ ಅಸುರನು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನಿನ್ನನ್ನು ಬಿಡಬೇಕಾದರೆ ನಾನು ಹೇಳಿದಂತೆ ಕೇಳಬೇಕು. ಈಗ ನಾವು ಒಬ್ಬರಿಗೊಬ್ಬರು ಸಂಧಿಯನ್ನು ಮಾಡಿಕೊಳ್ಳೋಣ. ನೀನು ಮತ್ತೆ ನನ್ನೊಡನೆ ಯಾವುದಾದರೂ ತಂತ್ರದಿಂದ ಯುದ್ಧಮಾಡಿ ನನ್ನನ್ನು ಕೊಲ್ಲಬೇಕೆಂದು ಇಚ್ಛಿಸಬಹುದು. ಅಂತಹ ಸಂದರ್ಭದಲ್ಲಿ ನೀನು ನನ್ನನ್ನು ಕೊಲ್ಲಬೇಕೆಂದು ಉಪಯೋಗಿಸುವ ಆಯುಧವು ಹಸಿಯಾಗಿರಕೂಡದು, ಒಣಗಿರಲೂಕೂಡದು; ಹಗಲಿನಲ್ಲಿ ನನ್ನನ್ನು ಕೊಲ್ಲಕೂಡದು, ರಾತ್ರಿಯಲ್ಲಿಯೂ ಕೊಲ್ಲಕೂಡದು. ಈ ನಿಯಮಗಳಿಗೆ ನೀನು ಒಪ್ಪುವಿಯಾದರೆ ನಿನ್ನನ್ನು ಬಿಡುವೆನು ಎಂದು ಹೇಳಿದನು. ಇಂದ್ರನು ಹಾಗೆಯೇ ಆಗಲೆಂದೊಪ್ಪಿ ಅವನ ಹಿಡಿತದಿಂದ ಬಿಡಿಸಿಕೊಂಡು ಇವನನ್ನು ಹೇಗೆ ಜಯಿಸಬೇಕೆಂದು ಆಲೋಚಿಸತೊಡಗಿದನು. ಕೆಲವುಕಾಲದ ಮೇಲೆ ಅವನಿಗೆ ಒಂದು ಉಪಾಯವು ಹೊಳೆಯಿತು. ತನ್ನ ಎದುರಿಗೆ ಇದ್ದ ಸಮುದ್ರದ ನೊರೆಯು ಅವನ ದೃಷ್ಟಿಗೆ ಬಿದ್ದಿತು ಈ ನೊರೆಯು ಹಸಿಯೂ ಅಲ್ಲ ಒಣಗಿದುದೂ ಅಲ್ಲ. ಆದುದರಿಂದ ಇದನ್ನೇ ಆಯುಧವನ್ನಾಗಿ ಮಾಡಿಕೊಂಡು ನಮುಚಿಯನ್ನು ಸಂಹರಿಸುವೆನು. ರಾತ್ರಿಯು ಕಳೆದು ಉಷಃಕಾಲವು ಪ್ರಾರಂಭವಾಗಿ ಸೂರ್ಯನು ಉದಯಿಸುವುದಕ್ಕೆ ಮೊದಲು ಚೆನ್ನಾಗಿ ಬೆಳಕಾಗಿರುವುದು. ಆ ಕಾಲವು ಕತ್ತಲೆಯಲ್ಲದ್ದರಿಂದ ರಾತ್ರೆಯೂ ಅಲ್ಲ, ಸೂರ್ಯನು ಉದಯಿಸಿರುವುದಿಲ್ಲವಾದ್ದರಿಂದ ಹಗಲೂ ಅಲ್ಲ. ಇಂತಹ ಕಾಲದಲ್ಲಿ ಯುದ್ಧಮಾಡಿ ನೀರಿನ ನೊರೆಯಿಂದ ನಿರ್ಮಿತವಾದ ಆಯುಧದಿಂದ ಅವನನ್ನು ಕೊಂದರೆ ನಾನು ಆಡಿದ ಮಾತಿಗೆ ತಪ್ಪಿದಂತಾಗುವುದಿಲ್ಲ ಎಂದು ನಿಶ್ಚಯಿಸಿ ಅದರಂತೆ ನಮುಚಿಯೊಡನೆ ಯುದ್ಧಮಾಡಿ ಆ ನೊರೆಯಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಆದರೂ ಆ ಅಸುರನು ಮೃತನಾಗದೆ ಇಂದ್ರನನ್ನು ಕೊಲ್ಲುವುದಕ್ಕಾಗಿ ಅವನನ್ನು ಅಟ್ಟಿಸಿಕೊಂಡು ಬಂದನು. ಎಲೋ ಮಿತ್ರದ್ರೋಹಿಯಾದ ಇಂದ್ರನೇ! ನಿಲ್ಲು, ನಿಲ್ಲು, ನೀನು ನನ್ನನ್ನು ಕೊಲ್ಲುವುದಿಲ್ಲವೆಂದು ಮಾತುಕೊಟ್ಟು ಈಗ ಇಂತಹ ಮಿತ್ರದ್ರೋಹಕರವಾದ ಕೆಲಸವನ್ನು ಮಾಡಿರುತ್ತೀಯೆ. ನಿನ್ನನ್ನು ಈಗ ಕೊಲ್ಲದೆ ಬಿಡುವುದಿಲ್ಲ ಎಂದನು. ಆಗ ಇಂದ್ರನು ಹೆದರಿ ಅಪಾಮಾರ್ಗವೆಂಬ ವೃಕ್ಷವಿಶೇಷವನ್ನು ಸೃಷ್ಟಿಸಿ ಅದರ ಸಮಿತ್ತುಗಳಿಂದ ವೀರ್ಯವೃದ್ಧಿಗಾಗಿ ಅಗ್ನಿಯಲ್ಲಿ ಹೋಮಮಾಡಿದನು. ಆದರಿಂದ ಇಂದ್ರನ ಬಲವು ಅಧಿಕವಾಗಿ ಆ ನಮುಚಿಯನ್ನು ಸಂಹಾರಮಾಡಿದನು. ಆದುದರಿಂದ ರಾಕ್ಷಸರ ಬಾಧೆಯಿಂದ ಪಾರಾಗಬೇಕೆಂದು ಬಯಸುವವರು ಅಪಾಮಾರ್ಗ ಸಮಿತ್ತುಗಳಿಂದ ಹೋಮಮಾಡಬೇಕು ಎಂದಿರುವುದು. ಈ ನಮುಚಿಯನ್ನು ಇಂದ್ರನು ಸಂಹಾರಮಾಡಿದ ವಿಷಯವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ—

**ನಮ್ಯಾ ಯದಿಂದ್ರ ಸಖ್ಯಾ ಪರಾವತಿ ನಿಬರ್ಹಯೋ ನಮುಚಿಂ ನಾಮ ಮಾಯಿನಂ ।**

(ಋ. ಸಂ. ೧-೫೩-೭)

**ಅತ್ರಾ ದಾಸಸ್ಯ ನಮುಚೇಃ ಶಿರೋ ಯದವರ್ತಯೋ ಮನವೇ ಗಾತುಮಿಚ್ಛನ್ ।**

(ಋ. ಸಂ. ೫-೩೦-೭)

ಯುಜಂ ಹಿ ಮಾಮಕೃಥಾ ಆದಿದಿಂದ್ರ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೫-೩೦-೮)

ಪ್ರ ಶ್ಯೇನೋ ನ ಮದಿರಮಂಶುಮಸ್ಮೈ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೬-೨೦-೬)

ನಿವೇಶನೇ ಶತತಮಾವಿವೇಷೀರಹಞ್ಚ ವೃತ್ರಂ ನಮುಚಿಮುತಾಹನ್ ।

(ಋ. ಸಂ. ೭-೧೯-೫)

ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ ।

(ಋ. ಸಂ. ೮-೧೪-೧೩)

ಯಃ ಪಿಪ್ರುಂ ನಮುಚಿಂ ಯೋ ರುಧಿಕ್ರಾಂ ತಸ್ಮಾ ಇಂದ್ರಾಯಾಂಧಸೋ ಜುಹೋತ ।

(ಋ. ಸಂ. ೨-೧೪-೫)

ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ।

(ಋ. ಸಂ. ೧೦-೧೩೧-೪)

ಎಂಬ ಋಕ್ಕುಗಳಲ್ಲಿ ಹೇಳಿರುವುದು. ಮತ್ತೆಲ್ಲಿಯೂ ಇಲ್ಲ.

ಮನವೇ—ಮನುವಿನ ವಿಷಯವನ್ನು ನಾವು ಭಾಗ 18 ಪುಟ 178–179 ರಲ್ಲಿ ವಿವರಿಸಿದ್ದೇವೆ.

॥ ಸಂಹಿತಾಪಾಠಃ ॥

ತ್ವಮೇತಾನಿ ಪಪ್ರಿಷೇ ವಿ ನಾಮೇಶಾನ ಇಂದ್ರ ದಧಿಷೇ ಗಭಸ್ತೌ ।

ಅನು ತ್ವಾ ದೇವಾಃ ಶವಸಾ ಮದಂತ್ಯುಪರಿ ಬುಧ್ನಾನ್ವನಿನಶ್ಚಕರ್ಥ ॥ ೮ ॥

॥ ಪದಪಾಠಃ ॥

ತ್ವಂ । ಏತಾನಿ । ಪಪ್ರಿಷೇ । ವಿ । ನಾಮ । ಈಶಾನಃ । ಇಂದ್ರ । ದಧಿಷೇ । ಗಭಸ್ತೌ ।

ಅನು । ತ್ವಾ । ದೇವಾಃ । ಶವಸಾ । ಮದಂತಿ । ಉಪರಿऽಬುಧ್ನಾನ್ । ವನಿನಃ । ಚಕರ್ಥ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮೇತಾನಿ ನಾಮ ನಾಮಾನಿ ನಾಮಕಾನ್ಯುದಕಾನಿ ವಿ ಪಪ್ರಿಷೇ । ವಿಪೂರಯಸಿ ಹೇ ಇಂದ್ರ ಈಶಾನಃ ಸರ್ವಸ್ಯೇಶ್ವರಸ್ತ್ವಂ ಗಭಸ್ತೌ ಹಸ್ತೇ ದಧಿಷೇ ಧಾರಯಸಿ ವಜ್ರಂ ಧನಂ ವಾ । ಕಿಂಚ ತ್ವಾ ತ್ವಾಂ ಶವಸಾ ಬಲೇನೋಪೇತಂ ದೇವಾಃ ಸರ್ವೇಽನು ಮದಂತಿ । ಅನುಷ್ಟುವಂತಿ । ಸ ತ್ವಂ ವನಿನ ಉದಕವತೋ ಮೇಘಾನ್ರಶ್ಮೀನ್ವೋಪರಿಬುಧ್ನಾನುಪರಿಮೂಲಾನಧೋಮುಖಾಂಶ್ಚಕರ್ಥ । ಕೃತವಾನಸಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಏತಾನಿ ನಾಮ**—ಈ ಉದಕಗಳನ್ನು । **ವಿ ಪಪ್ರಿಷೇ**—ತುಂಬಿದ್ದೀಯೆ । **ಈಶಾನಃ**—ಪ್ರಭುವಾದ ನೀನು । **ಗಭಸ್ತೌ**—ನಿನ್ನ ಹಸ್ತಗಳಲ್ಲಿ ವಜ್ರಾಯುಧವನ್ನು । **ದಧಿಷೇ**—ಹೊಂದಿದ್ದೀಯೆ । **ಶವಸಾ**—ಶಕ್ತಿಯುತವಾದ । **ತ್ವಾ**—ನಿನ್ನನ್ನು । **ದೇವಾಃ**—ಸಕಲ ದೇವತೆಗಳೂ **ಅನುಮದಂತಿ**—ಪ್ರಶಂಸಿಸುತ್ತಾರೆ। **ವನಿನಃ**—ಉದಕಯುಕ್ತವಾದ ಮೇಘಗಳನ್ನು । **ಉಪರಿಬುಧ್ನಾನ್**—ಮೇಲ್ಭಾಗದ ಬುಡವುಳ್ಳವನ್ನಾಗಿ । **ಚಕರ್ಥ**—ಮಾಡಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಈ ಉದಕಗಳನ್ನೆಲ್ಲ ತುಂಬಿದ್ದೀಯೆ. ಪ್ರಭುವಾದ ನೀನು ಹಸ್ತಗಳಲ್ಲಿ ವಜ್ರಾಯುಧವನ್ನು ಹೊಂದಿದ್ದೀಯೆ. ಶಕ್ತಿಯುತನಾದ ನಿನ್ನನ್ನು ಸಕಲ ದೇವತೆಗಳೂ ಪ್ರಶಂಸಿಸುತ್ತಾರೆ. ನೀನು ಉದಕಯುಕ್ತವಾದ ಮೇಘಗಳನ್ನು ಮೇಲ್ಭಾಗದ ಬುಡವುಳ್ಳವನ್ನಾಗಿ ಮಾಡಿರುತ್ತೀಯೆ.

## English Translation

You have filled these waters, you, Indra, who are the lord (of all) bear (the thunderbolt) in your hands; the gods glorify you (who are endowed) with strength ; you have made the clouds with their root upwards.

॥ ಸಂಹಿತಾಪಾಠಃ ॥

ಚಕ್ರಂ ಯದಸ್ಯಾಪ್ಸ್ವಾ ನಿಷತ್ತಮುತೋ ತದಸ್ಮೈ ಮಧ್ವಿಚ್ಚಚ್ಛದ್ಯಾತ್ ।
ಪೃಥಿವ್ಯಾಮತಿಷಿತಂ ಯದೂಧಃ ಪಯೋ ಗೋಷ್ವದಧಾ ಓಷಧೀಷು ॥ ೯ ॥

॥ ಪದಪಾಠಃ ॥

ಚಕ್ರಂ । ಯತ್ । ಅಸ್ಯ । ಅಪ್ಽಸು । ಆ । ನಿಽಸತ್ತಂ । ಉತೋ ಇತಿ । ತತ್ । ಅಸ್ಮೈ । ಮಧು । ಇತ್ । ಚಚ್ಛದ್ಯಾತ್ ।
ಪೃಥಿವ್ಯಾಂ । ಅತಿಽಸಿತಂ । ಯತ್ । ಊಧಃ । ಪಯಃ । ಗೋಷು । ಅದಧಾಃ । ಓಷಧೀಷು ॥ ೯ ॥

॥ ಭಾಷ್ಯಂ ॥

ಅಸ್ಯೇಂದ್ರಸ್ಯ ಚಕ್ರಮಾಯುಧಂ ಯದಪ್ಸು ಅಂತರಿಕ್ಷೇ ನಿಷಣ್ಣಂ ಉತೋ ಅಪಿ ಚ ತದಾಯುಧಮಸ್ಮಾ ಇಂದ್ರಾಯ ಮಧು ಚಚ್ಛದ್ಯಾತ್ ವಶಂ ನಯತಿ । ಯತ್ಪೃಥಿವ್ಯಾಮತಿಷಿತಂ ನಿಮಿತ್ತಂ ಊಧಃ ಊಧಸೋ ಮೇಘಾತ್ ತದುದಕಂ ಪಯಃ ಗೋಷ್ವೋಷಧೀಷು ಚಾದಧಾ ಇತಿ ।

॥ ಪ್ರತಿಪದಾರ್ಥ ॥

**ಅಸ್ಯ**—ಈ ಇಂದ್ರನ । **ಯತ್**—ಯಾವ । **ಚಕ್ರಂ**—ಆಯುಧವು । **ಅಪ್ಸು**—ಅಂತರಿಕ್ಷದಲ್ಲಿ । **ಆ ನಿಸತ್ತಂ**—ಇರುವುದೋ ಎಂದರೆ ಸ್ಥಾಪಿತವಾಗಿರುವುದೋ ಅಥವಾ ಪ್ರಯೋಗಿಸಲ್ಪಡುವುದೋ । **ತತ್**—ಆ ಆಯುಧವು । **ಅಸ್ಮೈ ಇತ್**—ಇಂದ್ರನಿಗೆ ಮಾತ್ರವೇ । **ಮಧು**—ಮಧುರವಾದ (ಮತ್ತು ಮೇಘಸ್ಥವಾದ) ಉದಕವನ್ನು । **ಚಚ್ಛದ್ಯಾತ್**—ವಶಮಾಡುವುದು । **ಉತೋ**—ಮತ್ತು । **ಪೃಥಿವ್ಯಾಂ**—ಭೂಮಿಯ ಮೇಲೆ । **ಅತಿಸಿತಂ**—ಸ್ಥಾಪಿತವಾಗಿರುವ । **ಊಧಃ**—ಮೇಘದಿಂದ ಲಬ್ಧವಾದ (ಎಂದರೆ ಮಳೆಯ) । **ಯತ್ ಪಯಃ**—ಯಾವ ಉದಕವಿರುವುದೋ । **ತತ್**—ಆ ಉದಕವನ್ನು (ಎಲೈ ಇಂದ್ರನೇ ನೀನು) **ಗೋಷು**—ಗೋವುಗಳಲ್ಲಿ (ಪಯೋರೂಪವಾಗಿಯೂ) । **ಓಷಧೀಷು**—ಓಷಧಿವನಸ್ಪತ್ಯಾದಿಗಳಲ್ಲಿ ಎಂದರೆ ಸಸ್ಯವರ್ಗದಲ್ಲಿ । **ಆದಧಾಃ** ಸ್ಥಾಪಿಸಿರುತ್ತೀಯೆ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಇಂದ್ರನಿಂದ ಪ್ರಯುಕ್ತವಾಗುವ ಅವನ ವಜ್ರಾಯುಧವು ಮೇಘಗಳಲ್ಲಿರುವ ಮಧುರವಾದ ಉದಕವನ್ನು ಇಂದ್ರನಿಗೆ ವಶಮಾಡುವುದು. ಎಂದರೆ ಇಂದ್ರನು ತನ್ನ ವಜ್ರಾಯುಧದ ಸಹಾಯದಿಂದ ಮೇಘೋದಕವನ್ನು ತನ್ನ ವಶಪಡಿಸಿಕೊಳ್ಳುವನು. ಎಲೈ ಇಂದ್ರನೇ, ಭೂಮಿಯ ಮೇಲೆ ಇರುವ ನದಿ ಜಲಾಶಯ ಮೊದಲಾದವುಗಳ ಉದಕವನ್ನೂ ಗೋವುಗಳಲ್ಲಿ ಪಯೋರೂಪದಿಂದಿರುವ ಉದಕವನ್ನೂ ಓಷಧಿವನಸ್ಪತಿಗಳಲ್ಲಿ ರಸರೂಪದಿಂದಿರುವ ಉದಕವನ್ನೂ ಸಹ ನೀನೇ ಸ್ಥಾಪಿಸಿರುತ್ತೀಯೇ.

English Translation

When his thunderbolt abode everywhere in the firmament, it also subjugated the water to him; the water which is let loose upon the earth puts milk into cows and herbs.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಸಾಯಣಭಾಷ್ಯವು ಯಾವ ಪುಸ್ತಕದಲ್ಲಿಯೂ ದೊರೆಯುವುದಿಲ್ಲ. ಆದ್ದರಿಂದ ಪೂನಾನಗರದ ವೈದಿಕ ಸಂಶೋಧನಮಂಡಲಿಯವರಿಂದ ಪ್ರಕಟಿತವಾದ ಸಾಯಣಭಾಷ್ಯಸಹಿತವಾದ ಋಗ್ವೇದಸಂಹಿತೆಯಲ್ಲಿ ಬೇರೆ ಪುಸ್ತಕದಿಂದ ಸಂಗೃಹೀತವಾಗಿರುವ ಭಾಷ್ಯವನ್ನೇ ಇಲ್ಲಿ ಕೊಟ್ಟಿದೆ. ಇದರ ಕರ್ತೃವು ಯಾರೆಂಬುದು ವಿಶದವಾಗಿಲ್ಲ. ಇದರಂತೆ ಇನ್ನೂ ಎರಡು ಮೂರು ವಿಧ ಬೇರೆ ಬೇರೆ ಪುಸ್ತಕಗಳಲ್ಲಿರುವ ಪಾಠಾಂತರಗಳನ್ನು ಅಲ್ಲಿಯೇ ಕೊಟ್ಟಿದ್ದರೂ ಅವುಗಳ ಅವಶ್ಯಕತೆ ಅಷ್ಟಾಗಿ ಕಂಡುಬರುವುದಿಲ್ಲವಾದ್ದರಿಂದ ಅವುಗಳನ್ನು ಇಲ್ಲಿ ಬರೆದಿಲ್ಲ. ಸಾಮವೇದದಲ್ಲಿ (ಸಾ.೩೩೧) ಈ ಋಕ್ಕು ಪಠಿತವಾಗಿರುವುದು. ಅದಕ್ಕೆ ಸಾಯಣರು ಬರೆದಿರುವ ಭಾಷ್ಯವನ್ನು ಇಲ್ಲಿ ಕೊಡಲಾಗಿದೆ.

**ಅಸ್ಯೇಂದ್ರಸ್ಯ ಚಕ್ರಮಾಯುಧಮಪ್ಸ್ವಂತರಿಕ್ಷೆ ಆ ಸರ್ವತೋ ನಿಷತ್ತಂ ನಿಷಿಣ್ಣಮಾಸೀನ್ಮೇಘಹನನಾರ್ಥಮುತೋ ತದಪಿ ಚಾಸ್ಮಾ ಇಂದ್ರಾಯ ಮಧ್ವಿದುದಕಮಪಿ ಚಚ್ಛದ್ಯಾತ್ ವಶಂ ನಯತಿ । ಪೃಥಿವ್ಯಾಮತಿಷಿತಂ ವಿಮುಕ್ತಂ ಯದೂಧರುದಕಮಸ್ತಿ ತತ್ಪಯೋ ಗೋಷ್ವೋಷಧೀಷು ಚಾದಧಾಃ ಆದಧಾತಿ ॥**

॥ ಸಂಹಿತಾಪಾಠಃ ॥

**ಅಶ್ವಾದಿಯಾಯೇತಿ ಯದ್ವದಂತ್ಯೋಜಸೋ ಜಾತಮುತ ಮನ್ಯ ಏನಂ ।**

**ಮನ್ಯೋರಿಯಾಯ ಹರ್ಮ್ಯೇಷು ತಸ್ಥೌ ಯತಃ ಪ್ರಜಜ್ಞ ಇಂದ್ರೋ ಅಸ್ಯ ವೇದ ॥ ೧೦ ॥**

॥ ಪದಪಾಠಃ ॥

ಅಶ್ವಾತ್ । ಇಯಾಯ । ಇತಿ । ಯತ್ । ವದಂತಿ । ಓಜಸಃ । ಜಾತಂ । ಉತ । ಮನ್ಯೇ । ಏನಂ ।

ಮನ್ಯೋಃ । ಇಯಾಯ । ಹರ್ಮ್ಯೇಷು । ತಸ್ಥೌ । ಯತಃ । ಪ್ರಽಜಜ್ಞೇ । ಇಂದ್ರಃ । ಅಸ್ಯ । ವೇದ ॥

॥ ಸಾಯಣಭಾಷ್ಯಂ ॥

ಇಂದ್ರಸಾಮರ್ಥ್ಯಂ ದೃಷ್ಟ್ವಾ ಕೇಚಿದೇನಮಶ್ವಾದಾದಿತ್ಯಾದಿಯಾಯೋದಿತವಾನಿತಿ ವದಂತಿ ಯದ್ಯದ್ಯಪಿ ಉತ ತಥಾಪ್ಯಹಮೇನಮೋಜಸೋ ಬಲಾಜ್ಜಾತಂ ಮನ್ಯೇ । ಜಾನಾಮಿ । ಅಸ್ಯ ತೇಜಸ್ವಿತ್ವಂ ದೃಷ್ಟ್ವಾ ಸೂರ್ಯಾದುತ್ಪನ್ನ ಇತಿ ತೇಷಾಂ ಮತಿಃ । ಅಹಂ ತ್ವೋಜಃಪದಾರ್ಥಾಜ್ಜಾತ ಇತಿ ಮನ್ಯೇ ಯತೋಽಯಂ ವೃತ್ರಾದೀನ್ಹತವಾನಿತಿ । ಅಥವಾಯಂ ಮನ್ಯೋಃ ಕ್ರೋಧಾದಿಯಾಯ । ಉದಿತವಾನ್ । ಅತೋ ಹರ್ಮ್ಯೇಷು ಶತ್ರುಸಂಬಂಧಿಷು ಯುದ್ಧೇಷು ಹರ್ಮ್ಯೇಷ್ವೇವ ವಾ ತಸ್ಥೌ । ತಿಷ್ಠತಿ । ಯತೋಽಯಂ ಪ್ರಜಜ್ಞ ಉತ್ಪನ್ನ ಇತೀಂದ್ರ ಏವಾಸ್ಯ । ಸ್ವಸ್ಯೇತ್ಯರ್ಥಃ । ಸಾಮರ್ಥ್ಯಂ ವೇದ । ಜಾನಾತಿ । ನ ಹ್ಯನ್ಯೋ ಜ್ಞಾತುಮರ್ಹತೀತಿ ॥

॥ ಪ್ರತಿಪದಾರ್ಥ ॥

**ಅಶ್ವಾತ್**—ಆದಿತ್ಯನಿಂದ । **ಇಯಾಯ ಇತಿ**—ಈ ಇಂದ್ರನು ಆವಿರ್ಭೂತನಾಗಿದ್ದಾನೆಂದು । **ವದಂತಿ ಯದುತ**—ಒಂದು ವೇಳೆ ಹೇಳಿದರೂ ಸಹ । **ಏನಂ**—ಈ ಇಂದ್ರನನ್ನು । **ಓಜಸಃ**—ಶಕ್ತಿಯಿಂದ । **ಜಾತಂ**—ಉತ್ಪನ್ನನಾದವನೆಂದು । **ಮನ್ಯೇ**—ನಾನು ತಿಳಿಯುತ್ತೇನೆ । **ಅಯಂ**—ಈ ಇಂದ್ರನು । **ಮನ್ಯೋಃ**—ಕ್ರೋಧದಿಂದ । **ಇಯಾಯ**—ಉತ್ಪನ್ನನಾಗಿದ್ದಾನೆ । **ಹರ್ಮ್ಯೇಷು**—ಶತ್ರುಸಂಬಧಿಯಾದ ಗೃಹಾದಿಗಳಲ್ಲಿ । **ತಸ್ಥೌ**—ನಿಂತಿದ್ದಾನೆ । **ಇಂದ್ರಃ**—ಇಂದ್ರನು ಮಾತ್ರ । **ಯತಃ ಪ್ರಜಜ್ಞೇ**—ತಾನು ಎಲ್ಲಿಂದ ಉತ್ಪನ್ನನಾದನೆಂಬ । **ಅಸ್ಯ**—ತನ್ನ ಮಹಿಮೆಯನ್ನು । **ವೇದ**—ಅರಿತಿದ್ದಾನೆ.

॥ ಭಾವಾರ್ಥ ॥

ಈ ಇಂದ್ರನು ಆದಿತ್ಯನಿಂದ ಉತ್ಪನ್ನನಾಗಿದ್ದಾನೆಂದು ಜನರು ಹೇಳಿದರೂ ಸಹ, ಇವನು ಶಕ್ತ್ಯುತ್ಪನ್ನನೆಂದು ಮಾತ್ರ ನಾನು ತಿಳಿಯುತ್ತೇನೆ. ಇವನು ಕ್ರೋಧದಿಂದ ಉತ್ಪನ್ನನಾಗಿದ್ದಾನೆ. ಮತ್ತು ಶತ್ರುಗಳ ಗೃಹದಲ್ಲಿ ನಿಂತಿದ್ದಾನೆ.

ತಾನು ಎಲ್ಲಿಂದ ಬಂದನೆಂಬುದು ತನಗೆ ಮಾತ್ರ ತಿಳಿದ ವಿಷಯವಾಗಿದೆ. ಇವನ ಮಹಿಮೆಯನ್ನು ಇತರರಾರೂ ತಿಳಿಯಲಾರರು.

## English Translation

Although (some) say he came from the horse (the sun), I know that he is the offspring of strength ; he came from wrath, he stands in the homes (of his enemies) ; Indra knows whence he was born.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ **ಓಜಸೋ ಜಾತಂ** ಎಂಬ ಶಬ್ದಗಳ ವಿಷಯವಾಗಿ ಯಾಸ್ಕರು ಈ ರೀತಿ ನಿರುಕ್ತವನ್ನು ಹೇಳಿದಾರೆ.

**ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥** (ನಿ. ೪-೭)

ಪ್ರಕೃತ ಋಕ್ಕಿನಲ್ಲಿ **ಓಜಸೋ ಜಾತಂ** ಇತ್ಯಾದಿ ವಿಶೇಷಣಗಳು ಇಂದ್ರನ ಪರವಾಗಿ ಪ್ರಯುಕ್ತವಾಗಿದ್ದರೂ ಸಾಧಾರಣವಾಗಿ **ಓಜಸಾ ಜಾತಂ, ಸಹಸಸ್ಪುತ್ರಂ, ಸಹಸಃ ಸೂನುಂ, ಸಹಸೋ ಯಹುಂ** ಎಂಬ ವಿಶೇಷಣಪದಗಳನ್ನು ಅಗ್ನಿಪರವಾಗಿ ಉಪಯೋಗಿಸುವುದೇ ವಿಶೇಷ ಬಳಕೆಯಲ್ಲಿದೆ. ಓಜಃಶಬ್ದಕ್ಕೆ ಬಲವೆಂದರ್ಥವು. ಅಗ್ನಿಯ ವಿಷಯದಲ್ಲಿ ಶಕ್ತಿಯಿಂದ ಉತ್ಪನ್ನನಾದವನು ಎಂದು ಹೇಳುವಾಗ—ಋತ್ವಿಕ್ಕುಗಳು ಅರಣಿಗಳಲ್ಲಿ ಅಗ್ನಿಯನ್ನು ಕಡೆದು ಉತ್ಪತ್ತಿ ಮಾಡುವಾಗ ಕಡೆಯುವುದಕ್ಕಾಗಿ ಅವರು ಬಹಳವಾಗಿ ತಮ್ಮ ಶಕ್ತಿ ಅಥವಾ ಬಲವನ್ನು ಉಪಯೋಗಿಸಿ ಕಡೆಯಬೇಕಾಗುವುದು. ಈ ರೀತಿ ಬಲಪ್ರಯೋಗದಿಂದ ಕಡೆದು ಉತ್ಪನ್ನಮಾಡುವುದರಿಂದ ಅಗ್ನಿಯನ್ನು **ಓಜಸೋ ಜಾತಂ**—ಶಕ್ತಿಯಿಂದ ಉತ್ಪನ್ನನಾದವನು ; **ಸಹಸಃ ಪುತ್ರಂ**—ಶಕ್ತಿಯ ಪುತ್ರನು, **ಸಹಸಃ ಸೂನುಂ, ಸಹಸೋ ಯಹುಂ**—ಶಕ್ತಿಯ ಪುತ್ರನು ಎಂದು ಕರೆಯುವುದು ರೂಢಿಯಾಗಿದೆ. ಉದಾಹರಣೆಗಾಗಿ ಹೇಳುವುದಾದರೆ ಪ್ರಕೃತಸೂಕ್ತನ್ನೇ **ಓಜಸೋ ಜಾತಂ** ಎಂಬ ಶಬ್ದಗಳ ಪ್ರಯೋಗವಿರುವ ಮಂತ್ರವೆಂದು ಹೇಳಬಹುದು. ಅದರಂತೆ,

**ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ।**

(ಋ. ಸಂ. ೨-೭-೬)

ಎಂಬ ಋಕ್ಕನ್ನು **ಸಹಸಸ್ಪುತ್ರಃ** ಎಂಬ ಪದಗಳ ಪ್ರಯೋಗಕ್ಕಾಗಿಯೂ,

**ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।**
**ಋತಾವಾ ಯಜ್ಞಿಯೋ ಭುವಃ ॥** (ಋ. ಸಂ. ೮-೭೫-೩)

ಎಂಬ ಋಕ್ಕನ್ನು **ಸಹಸಃ ಸೂನುಃ** ಎಂಬ ಪದಗಳ ಪ್ರಯೋಗಕ್ಕಾಗಿಯೂ,

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥** (ಋ. ಸಂ. ೧-೭೯-೪)

ಎಂಬ ಋಕ್ಕನ್ನು **ಸಹಸೋ ಯಹುಃ** ಎಂಬ ಪದಗಳ ಪ್ರಯೋಗಕ್ಕಾಗಿಯೂ ಉದಾಹರಣೆಯಾಗಿ ಕೊಡಬಹುದು.

। ಸಂಹಿತಾಪಾಠಃ ।

ವಯಃ ಸುಪರ್ಣಾ ಉಪ ಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ ।
ಅಪ ಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯಸ್ಮಾನ್ನಿಧಯೇವ ಬದ್ಧಾನ್ ॥ ೧೧ ॥

॥ ಪದಪಾಠಃ ॥

ವಯಃ । ಸುऽಪರ್ಣಾಃ । ಉಪ । ಸೇದುಃ । ಇಂದ್ರಂ । ಪ್ರಿಯऽಮೇಧಾಃ । ಋಷಯಃ । ನಾಧಮಾನಾಃ ।
ಅಪ । ಧ್ವಾಂತಂ । ಊರ್ಣುಹಿ । ಪೂರ್ಧಿ । ಚಕ್ಷುಃ । ಮುಮುಗ್ಧಿ । ಅಸ್ಮಾನ್ । ನಿಧಯಾऽಇವ । ಬದ್ಧಾನ್ ॥ ೧೧ ॥

॥ ಸಾಯಣಭಾಷ್ಯಂ ॥

**ವಯೋ** ಗಂತಾರಃ **ಸುಪರ್ಣಾಃ** ಸುಪತನಾ ಆದಿತ್ಯರಶ್ಮಯ **ಇಂದ್ರಮುಪ ಸೇದುಃ** । ಉಪಸನ್ನಾ ಅಭವನ್ । ಕೀದೃಶಾಃ । **ಪ್ರಿಯಮೇಧಾಃ** ಪ್ರಿಯಯಜ್ಞಾ **ಋಷಯೋ** ದ್ರಷ್ಟಾರೋ **ನಾಧಮಾನಾಃ** ಪ್ರಜ್ಞಾಂ ಯಾಚಮಾನಾಃ । ಯಾಚನಪ್ರಕಾರ ಉಚ್ಯತೇ । ಹೇ ಇಂದ್ರ **ಧ್ವಾಂತ**ಮಂಧಕಾರ**ಮಪೋರ್ಣುಹಿ** । ಪರಿಹರ । **ಪೂರ್ಧಿ** ಪೂರಯ ಚ **ಚಕ್ಷು**ಸ್ತೇಜಃ । **ಮುಮುಗ್ಧಿ** ಮೋಚಯ ಚಾ**ಸ್ಮಾನ್ ನಿಧಯೇವ ಬದ್ಧಾನ್** । ನಿಧಾ ಪಾಶ್ಯಾ ಭವತಿ । ಪಾಶ್ಯಾ ಪಾಶಸಮೂಹಃ । ಪಾಶಸಮೂಹೇನ ಬದ್ಧಾನ್ಯಥಾ ಮುಂಚಂತಿ ತದ್ವತ್ । ಅತ್ರ ವಯೋ ವೇರ್ಬಹುವಚನಮಿತ್ಯಾದಿ ನಿರುಕ್ತಂ ದ್ರಷ್ಟವ್ಯಂ । ನಿ. ೪-೩ ॥ ೪ ॥

॥ ಪ್ರತಿಪದಾರ್ಥ ॥

**ಪ್ರಿಯಮೇಧಾಃ**—ಯಜ್ಞದಲ್ಲಿ ಪ್ರೀತಿಯುಳ್ಳವೂ । **ಋಷಯಃ**—ಅತೀಂದ್ರಿಯಜ್ಞಾನವುಳ್ಳವೂ । **ನಾಧಮಾನಾಃ**—ಪ್ರಜ್ಞೆಯನ್ನು ಹೊಂದಲು ಸಮರ್ಥವೂ । **ವಯಃ**—ಸಂಚಾರಾತ್ಮಕವೂ । **ಸುಪರ್ಣಾ**—ಉತ್ತಮವಾದ ಪ್ರಸಾರವುಳ್ಳವೂ ಆದ ಆದಿತ್ಯರಶ್ಮಿಗಳು । **ಇಂದ್ರಂ**—ಇಂದ್ರನನ್ನು । **ಉಪಸೇದುಃ**—ಸಮೀಪಿಸಿ ಐಕ್ಯವಾಗಿವೆ (ಎಲೈ ಇಂದ್ರನೇ) । **ಧ್ವಾಂತಂ**—ಅಂಧಕಾರವನ್ನು । **ಅಪ ಊರ್ಣುಹಿ**—ದೂರಕ್ಕೆ ಓಡಿಸು । **ಚಕ್ಷುಃ**—ತೇಜಸ್ಸನ್ನು । **ಪೂರ್ಧಿ**—ತುಂಬು । **ನಿಧಯೇವ ಬದ್ಧಾನ್**—ಪಾಶದಿಂದ ಬಂಧಿತರಾಗಿರುವಂತೆ ಇರುವ ನಮ್ಮನ್ನು । **ಮುಮುಗ್ಧಿ**—ಬಿಡಿಸು.

॥ ಭಾವಾರ್ಥ ॥

ಯಜ್ಞದಲ್ಲಿ ಪ್ರೀತಿಯುಳ್ಳವೂ, ಅತೀಂದ್ರಿಯಜ್ಞಾನವುಳ್ಳವೂ, ಪ್ರಜ್ಞೆಯನ್ನು ಹೊಂದಲು ಸಮರ್ಥವೂ ಸಂಚಾರಾತ್ಮಕವೂ, ಉತ್ತಮವಾದ ಪ್ರಸಾರವುಳ್ಳವೂ ಆದ ಆದಿತ್ಯರಶ್ಮಿಗಳು ಇಂದ್ರನನ್ನು ಸಮೀಪಿಸಿ ಐಕ್ಯವಾಗಿವೆ. ಎಲೈ ಇಂದ್ರನೇ, ಅಂಧಕಾರವನ್ನು ದೂರಕ್ಕೆ ಓಡಿಸು. ತೇಜಸ್ಸನ್ನು ತುಂಬು. ಪಾಶದಿಂದ ಬಂಧಿತರಾಗುವಂತೆ ಇರುವ ನಮ್ಮನ್ನು ಬಿಡಿಸು.

## English Translation

The swift-moving well-flying (rays of the sun), loving sacrifices, discerning (the future), diserving knowledge, invested Indra ; dissipate the darkness, fill out the light ; release us like men bound with a net.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಈ ರೀತಿ ಹೇಳಿದಾರೆ—

ವಯೋ ವೇರ್ಬಹುವಚನಂ । ಸುಪರ್ಣಾಃ ಸುಪತನಾ ಆದಿತ್ಯರಶ್ಮಯ ಉಪಸೇದುರಿಂದ್ರಂ ಯಾಚಮಾನಾಃ । ಅಪೋರ್ಣುಹ್ಯಾಧ್ವಸ್ತಂ ಚಕ್ಷುಃ । ಚಕ್ಷುಃ ಖ್ಯಾತೇರ್ವಾ ಚಷ್ಟೇರ್ವಾ । ಪೂರ್ಧಿ ಪೂರಯ ದೇಹೀತಿ ವಾ । ಮುಂಚಾಸ್ಮಾನ್ ಪಾಶೈರಿವ ಬದ್ಧಾನ್ ॥

ವಯಃ ಎಂಬ ಶಬ್ದವು ವಿ (ಪಕ್ಷಿ) ಎಂಬ ಶಬ್ದದ ಬಹುವಚನವು. ಸುಪರ್ಣಾಃ ಎಂದರೆ ಪಕ್ಷಿಗಳ ವಿಷಯದಲ್ಲಿ ಸುಂದರವಾದ ರೆಕ್ಕೆಗಳುಳ್ಳ ಎಂದರ್ಥವು. ಆದರೆ ಇಲ್ಲಿ ಈ ಶಬ್ದವು ಸೂರ್ಯನ ಪರವಾಗಿ ಉಪಯೋಗಿಸಲ್ಪಟ್ಟಿರುವುದರಿಂದ ಈ ಶಬ್ದಕ್ಕೆ ಸುಂದರ ಅಥವಾ ಹಿತಕರವಾದ ಸೂರ್ಯನ ರಶ್ಮಿಗಳು ಎಂದರ್ಥವು. ವಿ ಎಂಬ ಧಾತುವಿಗೆ ಗತ್ಯರ್ಥವಿರುವುದರಿಂದ ವಯಃ ಎಂಬ ಶಬ್ದಕ್ಕೆ ಪ್ರಸಾರವುಳ್ಳ ಎಂದರೆ ಸೂರ್ಯನಿಂದ ನಮ್ಮ ಕಡೆಗೆ ಬರುತ್ತಿರುವ ಸೂರ್ಯರಶ್ಮಿಗಳು ಎಂದು ವಯಃಶಬ್ದಕ್ಕೆ ಅರ್ಥವು. ಇಂತಹ ಸುಂದರವಾದ ಸೂರ್ಯರಶ್ಮಿಗಳು ಇಂದ್ರನನ್ನು ಪ್ರಾರ್ಥಿಸುತ್ತಾ ಸಮೀಪಿಸುವವು. ಸುತ್ತಲೂ ಕವಿದಿರುವ ಕತ್ತಲೆಯನ್ನು ದೂರಕ್ಕೆ ಓಡಿಸು. ಕಣ್ಣುಗಳನ್ನು ಪ್ರಕಾಶದಿಂದ ತುಂಬು ಎಂದರೆ ಕಣ್ಣುಗಳಿಗೆ ನೋಡುವ ಶಕ್ತಿಯನ್ನು ಅನುಗ್ರಹಿಸು. ಪಾಶಗಳಿಂದ ಬಂಧಿತವಾಗಿರುವಂತೆ ಎಂದರೆ ಸ್ವಾತಂತ್ರ್ಯರಹಿತವಾಗಿರುವ ನಮ್ಮನ್ನು ಬಂಧನಗಳಿಂದ ಬಿಡಿಸು ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

# ಎಪ್ಪತ್ತನಾಲ್ಕನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ವಸೂನಾಮಿತಿ ಷಡೃಚಂ ಷಷ್ಠಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ವಸೂನಾಂ ಷಳಿತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥

ಅನುವಾದವು—**ವಸೂನಾಂ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ವಸೂನಾಂ ಷಟ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೪

ಮಂಡಲ—೧೦ । ಅನುವಾಕ—೬ ॥ ಸೂಕ್ತ—೭೪ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಗೌರಿವೀತಿಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಸೂನಾಂ ವಾ ಚರ್ಕೃಷ ಇಯಕ್ಷನ್ಧಿಯಾ ವಾ ಯಜ್ಞೈರ್ವಾ ರೋದಸ್ಯೋಃ ।
ಅರ್ವತೋ ವಾ ಯೇ ರಯಿಮಂತಃ ಸಾತೌ ವನುಂ ವಾ ಯೇ ಸುಶ್ರುಣಂ
ಸುಶ್ರುತೋ ಧುಃ ॥ ೧ ॥

॥ ಪದಪಾಠಃ ॥

ವಸೂನಾಂ । ವಾ । ಚರ್ಕೃಷೇ । ಇಯಕ್ಷನ್ । ಧಿಯಾ । ವಾ । ಯಜ್ಞೈಃ । ವಾ । ರೋದಸ್ಯೋಃ ।
ಅರ್ವಂತಃ । ವಾ । ಯೇ । ರಯಿಽಮಂತಃ । ಸಾತೌ । ವನುಂ । ವಾ । ಯೇ । ಸುಽಶ್ರುಣಂ । ಸುಽಶ್ರುತಃ ।
ಧುರಿತಿ ಧುಃ ॥ ೧ ॥

॥ ಸಾಯಣಭಾಷ್ಯಂ ॥

ಇಯಕ್ಷನ್ ಧನಾನಿ ದಾತುಮಿಚ್ಛನ್ನಿಂದ್ರೋ ವಸೂನಾಂ ಧನಾನಾಂ ಲಾಭಾಯ ವಾ ಚರ್ಕೃಷೇ । ಅಪಕೃಷ್ಯತೇ । ಧಿಯಾ ವಾ । ಧೀಃ ಕರ್ಮ ಧಾರ್ಯಮಾಣತ್ವಾತ್ । ಯುದ್ಧಾದಿಕರ್ಮಣಾ ವಾ ನಿಮಿತ್ತೇನಾಕೃಷ್ಯತೇ । ಯಜ್ಞೈರ್ವಾ ನಿಮಿತ್ತಭೂತೈಃ ಕೃಷ್ಯತೇ । ಕೈರಿತಿ ಉಚ್ಯತೇ । ರೋದಸ್ಯೋರ್ದ್ಯಾವಾಪೃಥಿವ್ಯೋಃ ಸಂಬಂಧಿಭಿರ್ದೇವೈರ್ಮನುಷ್ಯೈಶ್ಚೇತ್ಯರ್ಥಃ । ಸಾತೌ ಸಂಗ್ರಾಮೇ ಜೇತವ್ಯೇ ಸತಿ ಯೇಽರ್ವಂತೋ ವಾ ಗಚ್ಛಂತೋ ರಯಿಮಂತೋ ಭವಂತಿ ತೈರಪ್ಯಾಕೃಷ್ಯತೇ । ಯೇ ವನುಂ ವಾ ಹಿಂಸಾಂ ವಾ ಸುಶ್ರುಣಂ ಸುಪ್ರಸಿದ್ಧಾಮತ್ಯಂತದುರ್ಜಯವಿಷಯಾಂ ಸುಶ್ರುತಃ ಸುಶ್ರವಸಃ ಪ್ರಸಿದ್ಧಾಃ ಕುರ್ವಂತಿ ತೈರಪೀಂದ್ರ ಆಕೃಷ್ಯತ ಇತಿ ॥

॥ ಪ್ರತಿಪದಾರ್ಥ ॥

**ಇಯಕ್ಷನ್**—ಧನವನ್ನು ಕೊಡಲು ಇಚ್ಛೆಯುಳ್ಳ ಇಂದ್ರನು । **ಧಿಯಾ ವಾ**—ಕರ್ಮನಿಮಿತ್ತವಾಗಿಯೂ । **ಯಜ್ಞೈರ್ವಾ**—ಅಥವಾ ಯಜ್ಞನಿಮಿತ್ತವಾಗಿಯೂ । **ರೋದಸ್ಯೋಃ**—ದ್ಯಾವಾಪೃಥಿವಿಗಳೆರಡಕ್ಕೂ ಸೇರಿದ ದೇವಮಾನವರೆಲ್ಲರಿಂದಲೂ । **ವಸೂನಾಂ**—ಧನಲಾಭಾರ್ಥವಾಗಿ । **ಚರ್ಕೃಷೇ**—ಆಕರ್ಷಿಸಲ್ಪಡುತ್ತಾನೆ । **ಸಾತೌ**—ಸಂಗ್ರಾಮದಲ್ಲಿ । **ಯೇ**—ಯಾರು । **ಅರ್ವಂತಃ**—ಸಂಚರಿಸುತ್ತ । **ರಯಿಮಂತಃ**—ಧನಯುಕ್ತರಾಗಿರುವರೋ ಅವರಿಂದಲೂ । **ಯೇ**—ಯಾರು । **ಸುಶ್ರುತಃ**—ಪ್ರಸಿದ್ಧರಾಗಿ । **ಸುಶ್ರುಣಂ**—ಜಯಶಾಲಿಯಾದ । **ವನಂ ವಾ**—ಹಿಂಸೆಯನ್ನುಂಟುಮಾಡುವರೋ ಅವರಿಂದಲೂ ಆಕರ್ಷಿಸಲ್ಪಡುತ್ತಾನೆ.

॥ ಭಾವಾರ್ಥ ॥

ಧನವನ್ನು ಕೊಡಲು ಇಚ್ಛೆಯುಳ್ಳ ಇಂದ್ರನು ಕರ್ಮನಿಮಿತ್ತವಾಗಿಯೂ, ಅಥವಾ ಯಜ್ಞನಿಮಿತ್ತವಾಗಿಯೂ, ದ್ಯಾವಾಪೃಥಿವಿಗಳೆರಡಕ್ಕೂ ಸೇರಿದ ದೇವಮಾನವರೆಲ್ಲರಿಂದಲೂ ಧನಲಾಭಾರ್ಥವಾಗಿ ಆಕರ್ಷಿಸಲ್ಪಡುತ್ತಾನೆ. ಸಂಗ್ರಾಮದಲ್ಲಿ ಸಂಚರಿಸುತ್ತ ಯಾರು ಧನಯುಕ್ತರಾಗಿರುವರೋ, ಯಾರು ಜಯಶಾಲಿಗಳಾಗಿ ಶತ್ರುಗಳಿಗೆ ಹಿಂಸೆಯನ್ನುಂಟುಮಾಡುವರೋ, ಅವರೆಲ್ಲರಿಂದಲೂ ಆಕರ್ಷಿಸಲ್ಪಡುತ್ತಾರೆ.

## English Translation

Indra desiring to bestow (wealth) is attracted by the inhabitants of heaven and earth (for the acquisitiou) of riches, either by pious acts or by sacrifices; (he is attracted) either by those swift-moving (persons) who acquire wealth in battle or by those who beiug successful (inflict) successful iujury.

॥ ಸಂಹಿತಾಪಾಠಃ ॥

ಹವ ಏಷಾಮಸುರೋ ನಕ್ಷತ ದ್ಯಾಂ ಶ್ರವಸ್ಯತಾ ಮನಸಾ ನಿಂಸತ ಕ್ಷಾಂ ।
ಚಕ್ಷಾಣಾ ಯತ್ರ ಸುವಿತಾಯ ದೇವಾ ದ್ಯೌರ್ನ ವಾರೇಭಿಃ ಕೃಣವಂತ ಸ್ವೈಃ ॥

॥ ಪದಪಾಠಃ ॥

ಹವಃ । ಏಷಾಂ । ಅಸುರಃ । ನಕ್ಷತ । ದ್ಯಾಂ । ಶ್ರವಸ್ಯತಾ । ಮನಸಾ । ನಿಂಸತ । ಕ್ಷಾಂ ।
ಚಕ್ಷಾಣಾಃ । ಯತ್ರ । ಸುವಿತಾಯ । ದೇವಾಃ । ದ್ಯೌಃ । ನ । ವಾರೇಭಿಃ । ಕೃಣವಂತ । ಸ್ವೈಃ ॥ ೨॥

॥ ಸಾಯಣಭಾಷ್ಯಂ ॥

ಏಷಾಮನುಷ್ಟ್ಯಾತ್ಮಾನಾಮಂಗಿರಸಾಂ ಹವ ಆಹ್ವಾನಶಬ್ದೋಽಸುರ ಇಂದ್ರಸ್ಯ ಪ್ರೇರಕೋ ದ್ಯಾಂ ದಿವಂ ನಕ್ಷತ । ವ್ಯಾಪ್ನೋತ್ । ತತ್ರತ್ಯಾ ಇಂದ್ರಸಂಬಂಧಿನೋ ದೇವಾಃ ಶ್ರವಸ್ಯತಾನ್ನಮಿಚ್ಛತಾ ಮನಸಾ ಕ್ಷಾಂ ಪೃಥಿವೀಂ ನಿಂಸತ । ಪ್ರಾಪ್ತವಂತಃ । ಯತ್ರ ಯಸ್ಯಾಂ ಪೃಥಿವ್ಯಾಂ ಚಕ್ಷಾಣಾಃ ಪಣಿಭಿರಪಹೃತಾ ಗಾಃ ಪಶ್ಯಂತೋ ದೇವಾಃ ಸುವಿತಾಯ ಸುಷ್ಠು ಹಿತಾಯ ಸ್ವಾತ್ಮನೋಽಭ್ಯುದಯಾಯ ದ್ಯೌರ್ನಾದಿತ್ಯ ಇವ ವಾರೇಭಿರ್ವರಣೀಯೈಃ ಸ್ವೈಸ್ತೇಜೋಭಿಃ ಕೃಣವಂತ ಪ್ರಕಾಶಮಕುರ್ವನ್ । ಗವಾಂ ಪ್ರದಾನಾ-ಯಾಂಧಕಾರಮಪನೇತುಮಿತಿ ಶೇಷಃ । ಅಥವಾ । ಏಷಾಂ ಯಜ್ವಿನಾಮಪಹೃತಾನಾಂ ಗವಾಂ ಹವೋಽಸುರ ಇಂದ್ರಸ್ಯ ಪ್ರೇರಯಿತಾ ಸನ್ನಕ್ಷತ । ಇಂದ್ರಪ್ರೇರಿತಾ ಅಂಗಿರಸಃ ಶ್ರವಸ್ಯತಾನ್ನಂ ಕೀರ್ತಿಂ ವೇಚ್ಛತಾ ಮನಸಾ ಕ್ಷಾಂ ಭೂಮಿಂ ನಿಂಸತ । ಅನುಷ್ಟ್ಯಾತ್ಮಾನಾಂ ಗಾಃ ಪ್ರದರ್ಶಯಿತುಮಿತ್ಯರ್ಥಃ । ಇತರತ್ಸಮಾನಂ ॥

॥ ಪ್ರತಿಪದಾರ್ಥ ॥

**ಏಷಾಂ**—ಈ ಅಂಗಿರಸ್ಸುಗಳ । **ಅಸುರಃ**—ಇಂದ್ರಪ್ರೇರಕವಾದ । **ಹವಃ**—ಈ ಆಹ್ವಾನವು । **ದ್ಯಾಂ**—ದೇವಲೋಕವನ್ನು । **ನಕ್ಷತ**—ವ್ಯಾಪಿಸುತ್ತದೆ । **ದೇವಾಃ**—ದೇವತೆಗಳು । **ಶ್ರವಸ್ಯತಾ**—ಅನ್ನೇಚ್ಛೆಯಿಂದ ಕೂಡಿದ । **ಮನಸಾ**—ಮನಸ್ಸಿನಿಂದ । **ಕ್ಷಾಂ**—ಪೃಥ್ವಿಯನ್ನು । **ನಿಂಸತ**—ಸಮೀಪಿಸಿದ್ದಾರೆ । **ಯತ್ರ**—ಯಾವ ಪೃಥ್ವಿಯಲ್ಲಿ । **ಚಕ್ಷಾಣಾಃ**—ಪಣಿಗಳಿಂದ ಅಪಹೃತವಾದ ಗೋವುಗಳನ್ನು ನೋಡುತ್ತಿರುವರೋ ಅದೇ ದೇವತೆಗಳು । **ಸುವಿತಾಯ**—ತಮ್ಮ ಮತ್ತು ಲೋಕದ ಅಭ್ಯುದಯಕ್ಕಾಗಿ । **ದ್ಯೌಃ ನ**—ಆದಿತ್ಯನಂತೆ । **ವಾರೇಭಿಃ**—ಆಕರ್ಷಕವಾದ । **ಸ್ವೈಃ**—ತಮ್ಮ ತೇಜಸ್ಸುಗಳಿಂದ । **ಕೃಣವಂತ**—ಪ್ರಕಾಶವನ್ನುಂಟುಮಾಡಿದ್ದಾರೆ.

॥ ಭಾವಾರ್ಥ ॥

ಅಂಗಿರಸ್ಸುಗಳ ಇಂದ್ರಪ್ರೇರಕರಾದ ಆಹ್ವಾನವು ದೇವಲೋಕವನ್ನು ವ್ಯಾಪಿಸುತ್ತದೆ. ದೇವತೆಗಳು ಅನ್ನೇಚ್ಛೆಯಿಂದ ಕೂಡಿದ ಮನಸ್ಸಿನಿಂದ ಪೃಥ್ವಿಯನ್ನು ಸಮೀಪಿಸಿದ್ದಾರೆ. ಯಾವ ಪೃಥ್ವಿಯಲ್ಲಿ ಪಣಿಗಳಿಂದ ಅಪಹೃತವಾದ ಗೋವುಗಳನ್ನು ನೋಡುತ್ತಿರುವರೋ, ಅದೇ ದೇವತೆಗಳು ತಮ್ಮ ಮತ್ತು ಲೋಕದ ಅಭ್ಯುದಯಕ್ಕಾಗಿ ಆದಿತ್ಯನಂತೆ ಆಕರ್ಷಕವಾದ ತಮ್ಮ ತೇಜಸ್ಸುಗಳಿಂದ ಪ್ರಕಾಶವನ್ನುಂಟುಮಾಡಿದ್ದಾರೆ.

English Translation

The animating invocation of these (Angirasas) pervaded heaven; (the gods) with minds desirous of food kissed the earth; and there beholding (the lost cattle), the gods for their own benefit made (illumination) like the sun by their own glorious radiance.

॥ ಸಂಹಿತಾಪಾಠಃ ॥

ಇಯಮೇಷಾಮಮೃತಾನಾಂ ಗೀಃ ಸರ್ವತಾತಾ ಯೇ ಕೃಪಣಂತ ರತ್ನಂ।

ಧಿಯಂ ಚ ಯಜ್ಞಂ ಚ ಸಾಧಂತಸ್ತೇ ನೋ ಧಾಂತು ವಸವ್ಯ೧ಮಸಾಮಿ ॥

। ಪದಪಾಠಃ ।

ಇಯಂ । ಏಷಾಂ । ಅಮೃತಾನಾಂ । ಗೀಃ । ಸರ್ವ‌ಽತಾತಾ । ಯೇ । ಕೃಪಣಂತ । ರತ್ನಂ ।

ಧಿಯಂ । ಚ । ಯಜ್ಞಂ । ಚ । ಸಾಧಂತಃ । ತೇ । ನಃ । ಧಾಂತು । ವಸವ್ಯಂ । ಅಸಾಮಿ ॥ ೩ ॥

। ಸಾಯಣಭಾಷ್ಯಂ ।

ಇಯಮೇಷಾಮಮೃತಾನಾಂ ಯಷ್ಟವ್ಯಾನಾಂ ದೇವಾನಾಂ ಗೀಃ ಸ್ತುತಿಃ ಕ್ರಿಯತ ಇತಿ ಶೇಷಃ । ಯೇ ದೇವಾಃ ಸರ್ವತಾತಾ ಸರ್ವತಾತೌ ಯಜ್ಞೇ ಕೃಪಣಂತ ಪ್ರಯಚ್ಛಂತಿ ಯಾಚ್ಯಂತೇ ವಾ ರತ್ನಂ ರಮಣೀಯಂ ಧನಂ । ಧಿಯಂ ಚಾಸ್ಮದೀಯಾಂ ಸ್ತುತಿಂ ಚ ಯಜ್ಞಂ ಸಾಧಂತಃ ಸಾಧಯಂತಸ್ತೇ ನೋಽಸ್ಮಭ್ಯಂ ವಸವ್ಯಂ ವಸುಸಮೂಹಮಸಾಮ್ಯನಲ್ಪಮಸಾಧಾರಣಂ ವಾ ಧಾಂತು । ಪ್ರಯಚ್ಛಂತು ॥

॥ ಪ್ರತಿಪದಾರ್ಥ ।

ಏಷಾಂ ಅಮೃತಾನಾಂ—ಈ ದೇವತೆಗಳನ್ನುದ್ದೇಶಿಸಿ । ಇಯಂ ಗೀಃ—ಈ ಸ್ತುತಿಯು ಅರ್ಪಿತವಾಗುತ್ತದೆ । ಯೇ—ಯಾವ ದೇವತೆಗಳು । ಸರ್ವತಾತಾ—ಯಜ್ಞದಲ್ಲಿ । ಧಿಯಂ—ನಮ್ಮ ಸ್ತುತಿಯನ್ನೂ । ಯಜ್ಞಂ ಚ—ಕರ್ಮವನ್ನೂ । ಸಾಧಂತಃ—ಸಫಲಗೊಳಿಸುತ್ತ । ರತ್ನಂ—ರಮಣೀಯವಾದ ಧನವನ್ನು । ಕೃಪಣಂತ—ಕೊಡುವರೋ । ತೇ—ಅವರು । ನಃ—ನಮಗೆ । ವಸವ್ಯಂ—ಧನಸಮೂಹವನ್ನು । ಅಸಾಮಿ—ಅತ್ಯತಿಶಯವಾಗಿ । ಧಾಂತು—ಒದಗಿಸಲಿ.

॥ ಭಾವಾರ್ಥ ॥

ದೇವತೆಗಳನ್ನುದ್ದೇಶಿಸಿ ಈ ಸ್ತುತಿಯು ಅರ್ಪಿತವಾಗುತ್ತದೆ. ಯಾವ ದೇವತೆಗಳು ಯಜ್ಞದಲ್ಲಿ ನಮ್ಮ ಸ್ತುತಿಯನ್ನೂ, ಕರ್ಮವನ್ನೂ ಸಫಲಗೊಳಿಸುತ್ತ ರಮಣೀಯವಾದ ಧನವನ್ನು ಕೊಡುವರೋ, ಅವರು ನಮಗೆ ಧನಸಮೂಹವನ್ನು ಅತ್ಯತಿಶಯವಾಗಿ ಕೊಡಲಿ.

## English Translation

This (is) the praise of these immortal (gods), who bestow wealth at the sacrifice; perfecting our praise and sacrifice, may they bestow upon us unequalled riches.

॥ ಸಂಹಿತಾಪಾಠಃ ॥

ಆ ತತ್ತ ಇಂದ್ರಾಯವಃ ಪನಂತಾಭಿ ಯ ಊರ್ವಂ ಗೋಮಂತಂ ತಿತೃತ್ಸಾನ್ ।

ಸಕೃತ್ಸ್ವಂ ೧ ಯೇ ಪುರುಪುತ್ರಾಂ ಮಹೀಂ ಸಹಸ್ರಧಾರಾಂ ಬೃಹತೀಂ ದುದುಕ್ಷನ್ ॥ ೪ ॥

॥ ಪದಪಾಠಃ ॥

ಆ । ತತ್ । ತೇ । ಇಂದ್ರ । ಆಯವಃ । ಪನಂತ । ಅಭಿ । ಯೇ । ಊರ್ವಂ । ಗೋಽಮಂತಂ । ತಿತೃತ್ಸಾನ್ ।

ಸಕೃತ್ಽಸ್ವಂ । ಯೇ । ಪುರುಽಪುತ್ರಾಂ । ಮಹೀಂ । ಸಹಸ್ರಽಧಾರಾಂ । ಬೃಹತೀಂ । ದುಧುಕ್ಷನ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವಾಯವೋ ಮನುಷ್ಯಾ ಅಂಗಿರಸಸ್ತತ್ತದಾ ಪನಂತ । ಆ ಸರ್ವತಃ ಪನಂತ । ಸ್ತುವಂತೇ । ಯೇಽಂಗಿರಸೋ ಗೋಮಂತಮೂರ್ವಂ ಸಂಘಂ ಪಣಿಭಿರಪಹೃತಂ ಪ್ರಾಪ್ತಂ ತಿತೃತ್ಸಾನ್ ಹಿಂಸಿತುಮೈಚ್ಛನ್ ॥ ತೃದೇರ್ಹಿಂಸಾರ್ಥಸ್ಯ ಸನಂತಸ್ಯ ಲೇಟ್ಯಾಡಾಗಮಃ । ಯದ್ವೋಗಾದನಿಘಾತಃ । ಅಭ್ಯಸ್ತಸ್ವರಃ ॥ ಯೇ ಚಾಂಗಿರಸಃ ಸಕೃತ್ಸ್ವಂ । ಯಾ ಸಕೃತ್ಸೂತೇ ಸಾ ಸಕೃತ್ಸೂಃ । ತಾಂ ಸಕೃತ್ಪ್ರಜಾತಾಂ ಪುರುಪುತ್ರಾಂ ಬಹ್ವೋಷಧಿವನಸ್ಪತಿರೂಪಪುತ್ರಾಂ ಸಹಸ್ರಧಾರಾಂ ಬಹುಲಕಾಮಾನಾ-ಮುತ್ಪಾದಯಿತ್ರೀಂ ಬೃಹತೀಂ ವಿಸ್ತೃತಾಂ ಮಹೀಂ ಭೂಮಿಂ । ಯದ್ವಾ । ಪುರುಪುತ್ರಾಂ ಬಹ್ವೋಷಧಿ-ವನಸ್ಪತಿರೂಪಪುತ್ರಾಂ ಸಹಸ್ರಧಾರಾಂ ಬಹುಕಾಮವರ್ಷಿತ್ರೀಂ ಮಹೀಂ ಮಹತೀಂ ಪೂಜ್ಯಾಂ ವಾ ಬೃಹತೀಂ ಪರಿಮಾಣರಹಿತಾಂ ದಿವಂ । ದುಧುಕ್ಷನ್ ದುದುಹುಃ । ತೇ ಪನಂತೇತಿ ಸಂಬಂಧಃ ಸಕೃದ್ಧ ದ್ಯೌರಜಾಯತೇತ್ಯಾದ್ಯುಕ್ತಂ । ಋ. ೬-೪೮-೨೨ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯೇ**—ಯಾವ ಅಂಗಿರಸ್ಸುಗಳು । **ಗೋಮಂತಂ**—ಗೋಭರಿತವಾದ । **ಊರ್ವಂ**—ಸಂಘವನ್ನು (ಕೊಟ್ಟಿಗೆಯೊಳಕ್ಕೆ) । **ತಿತೃತ್ಸಾನ್**—ಮುನ್ನುಗ್ಗಿ ಪ್ರವೇಶಿಸಲಿಚ್ಛಿಸಿದರೋ ಅಂತಹವರೂ । **ಯೇ**—ಯಾವ ಅದೇ ಅಂಗಿರಸ್ಸುಗಳು । **ಸಕೃತ್ಸ್ವಂ**—ಒಂದೇ ಬಾರಿ ಉತ್ಪನ್ನವಾದುದೂ । **ಪುರುಪುತ್ರಾಂ**—ಅನೇಕ ರೂಪವಾದ ಪುತ್ರರುಳ್ಳದ್ದೂ । **ಸಹಸ್ರಧಾರಾಂ**—ನಾನಾವಿಧವಾದ ಇಷ್ಟಗಳನ್ನು ಒದಗಿಸುವುದೂ । **ಬೃಹತೀಂ**—ಅತಿವಿಸ್ತೃತವಾದುದೂ ಆದ । **ಮಹೀಂ**—ಭೂಮಿಯನ್ನು । **ದುಧುಕ್ಷನ್**—ಕರೆದರೋ ಅಂತಹವರೂ । **ತೇ**—ನಿನಗೆ ಸೇರಿದವರೂ ಆದ । **ತೇ ಆಯವಃ**—ಅದೇ ಮಾನವರಾದ ಅಂಗಿರಸ್ಸುಗಳು । **ತತ್**—ಆ ಕಾಲದಲ್ಲಿ । **ಆ**—ಸರ್ವತ್ರ । **ಪನಂತ**—ನಿನ್ನನ್ನು ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಅಂಗಿರಸ್ಸುಗಳು ಗೋಭರಿತವಾದ ಕೊಟ್ಟಿಗೆಯೊಳಕ್ಕೆ ಮುನ್ನುಗ್ಗಿ ಪ್ರವೇಶಿಸಲಿಚ್ಛಿಸಿದರೋ, ಅಂತಹವರೂ ಯಾವ ಅದೇ ಅಂಗಿರಸ್ಸುಗಳು ಒಂದೇ ಬಾರಿ ಉತ್ಪನ್ನವಾದುದೂ ಅನೇಕ ರೂಪವಾದ ಓಷಧ್ಯಾದಿ

ಸಂತತಿಯುಳ್ಳದ್ದೂ, ನಾನಾವಿಧವಾದ ಇಷ್ಟಾರ್ಥಗಳನ್ನೊದಗಿಸುವುದೂ, ಅತಿ ವಿಸ್ತೃತವಾದುದೂ ಆದ ಭೂಮಿಯನ್ನು ಕರೆದರೋ ಅಂತಹವರೂ, ನಿನಗೆ ಸೇರಿದವರೂ ಆದ ಅದೇ ಅಂಗಿರಸ್ಸುಗಳು ಪೂಜಾಕಾಲದಲ್ಲಿ ನಿನ್ನನ್ನು ಸರ್ವತ್ರ ಸ್ತುತಿಸುತ್ತಾರೆ.

English Translation

Your men praised (you) then, Indra, (those) who wished to break into the vast (stall) full of cattle ; who milked the extensive once-generating earth, mother of many children, the showerer of thousands (of blessings).

। ಸಂಹಿತಾಪಾಠಃ ।

ಶಚೀವ ಇಂದ್ರಮವಸೇ ಕೃಣುಧ್ವಮನಾನತಂ ದಮಯಂತಂ ಪೃತನ್ಯೂನ್ ।
ಋಭುಕ್ಷಣಂ ಮಘವಾನಂ ಸುವೃಕ್ತಿಂ ಭರ್ತಾ ಯೋ ವಜ್ರಂ ನರ್ಯಂ
ಪುರುಕ್ಷುಃ ॥ ೫ ॥

॥ ಪದಪಾಠಃ ॥

ಶಚೀಽವಃ । ಇಂದ್ರಂ । ಅವಸೇ । ಕೃಣುಧ್ವಂ । ಅನಾನತಂ । ದಮಯಂತಂ । ಪೃತನ್ಯೂನ್ ॥
ಋಭುಕ್ಷಣಂ । ಮಘಽವಾನಂ । ಸುಽವೃಕ್ತಿಂ । ಭರ್ತಾ । ಯಃ । ವಜ್ರಂ । ನರ್ಯಂ । ಪುರುಽಕ್ಷುಃ ।

। ಸಾಯಣಭಾಷ್ಯಂ ॥

**ಹೇ ಶಚೀವಃ ಕರ್ಮವಂತೋ ಯಜಮಾನಾಃ ॥ ವ್ಯತ್ಯಯೇನೈಕವಚನಂ ॥ ಇಂದ್ರಮವಸೇ ರಕ್ಷಣಾಯ ಕೃಣುಧ್ವಂ । ಕುರುಧ್ವಂ। ಕೀದೃಶಮಿಂದ್ರಂ । ಅನಾನತಂ ಕದಾಚಿದಪಿ ಪರೇಷಾಮನವನತಂ ಪೃತನ್ಯೂನ್ಪೃತನಾ ಇಚ್ಛತಃ ಶತ್ರೂನ್ದಮಯಂತಂ ವಶಂ ಪ್ರಾಪಯಂತಂ ಋಭುಕ್ಷಣಂ ಮಹಾಂತಂ ಮಘವಾನಂ ಧನವಂತಂ ಸುವೃಕ್ತಿಂ ಸುಷ್ಟುತಿಂ । ಯಃ ಪುರುಕ್ಷುರ್ಬಹುಶಬ್ದ ಇಂದ್ರೋ ನರ್ಯಂ ನರೇಭ್ಯೋ ಹಿತಂ । ಅಸುರವಿಘಾತಿತ್ವಾತ್ । ತಾದೃಶಂ ವಜ್ರಂ ಭರ್ತಾ ಬಿಭರ್ತಿ ತಮಿಂದ್ರಮವಸೇ ಕೃಣುಧ್ವಮಿತಿ ॥**

॥ ಪ್ರತಿಪದಾರ್ಥ ॥

ಶಚೀವಃ—ಕರ್ಮವಂತರಾದ ಎಲೈ ಯಜಮಾನರೇ । **ಅನಾನತಂ**—ಯಾರಿಗೂ ತಲೆಬಾಗದವನೂ । **ಪೃತನ್ಯೂನ್**—ಶತ್ರುಗಳನ್ನು । **ದಮಯಂತಂ**—ವಶಮಾಡಿಕೊಳ್ಳುವವನೂ । **ಋಭುಕ್ಷಣಂ**—ಮಹಾತ್ಮನೂ । **ಮಘವಂತಂ**—ಧನವಂತನೂ । **ಸುವೃಕ್ತಿಂ**—ಉತ್ತಮವಾದ ಸ್ತುತಿಯುಳ್ಳವನೂ (ಮತ್ತು) । **ಯಃ**—ಯಾರು । **ಪುರುಕ್ಷುಃ**—ಬಹಳ ಶಬ್ದವುಳ್ಳವನಾಗಿಯೂ । **ವಜ್ರಂ**—ವಜ್ರಾಯುಧವನ್ನು । **ಭರ್ತಾ**—ಧರಿಸಿದವನಾಗಿಯೂ

ಇದ್ದು । ನರ್ಯಂ—ಮಾನವರಿಗೆ ಹಿತಕರನೂ ಆದ । ಇಂದ್ರಂ—ಇಂದ್ರನನ್ನು । ಅವಸೇ—ರಕ್ಷಣಾರ್ಥವಾಗಿ । ಕೃಣುಧ್ವಂ—ನಿಮ್ಮ ಪರ ಮಾಡಿಕೊಳ್ಳಿ.

। ಭಾವಾರ್ಥ ।

ಕರ್ಮವಂತರಾದ ಎಲೈ ಯಜಮಾನರೇ, ಯಾರಿಗೂ ತಲೆಬಾಗದವನೂ, ಶತ್ರುಗಳನ್ನು ವಶಮಾಡಿಕೊಳ್ಳುವವನೂ ಮಹಾತ್ಮನೂ, ಧನವಂತನೂ, ಉತ್ತಮವಾದ ಸ್ತುತಿಯುಳ್ಳವನೂ ಬಹು ಶಬ್ದವುಳ್ಳವನೂ, ವಜ್ರಾಯುಧಧಾರಿಯೂ, ಮಾನವರಿಗೆ ಹಿತಕಾರಿಯೂ ಆದ ಇಂದ್ರನನ್ನು ರಕ್ಷಣಾರ್ಥವಾಗಿ ನಿಮ್ಮ ಪರ ಮಾಡಿಕೊಳ್ಳಿರಿ.

English Translation

Celebrators of holy rites, select for your protection Indra the unsubdued, the tamer of hostile hosts; mighty, opulent, much glorified, who, loud-shouting, is the bearer of the thunderbolt, which is friendly to man.

। ಸಂಹಿತಾಪಾಠಃ ।

ಯದ್ವಾವಾನ ಪುರುತಮಂ ಪುರಾಷಾಳಾ ವೃತ್ರಹೇಂದ್ರೋ ನಾಮಾನ್ಯಪ್ರಾಃ ।
ಅಚೇತಿ ಪ್ರಾಸಹಸ್ಪತಿಸ್ತುವಿಷ್ಮಾನ್ಯದೀಮುಶ್ಮಸಿ ಕರ್ತವೇ ಕರತ್ತತ್ ॥ ೬ ॥

। ಪದಪಾಠಃ ।

ಯತ್ । ವವಾನ । ಪುರುಽತಮಂ । ಪುರಃಷಾಟ್ । ಆ । ವೃತ್ರಽಹಾ । ಇಂದ್ರಃ । ನಾಮಾನಿ । ಅಪ್ರಾಃ ।
ಅಚೇತಿ । ಪ್ರಽಸಹಃ । ಪತಿಃ । ತುವಿಷ್ಮಾನ್ । ಯತ್ । ಈಂ । ಉಶ್ಮಸಿ । ಕರ್ತವೇ । ಕರತ್ । ತತ್ ॥ ೬ ॥

। ಸಾಯಣಭಾಷ್ಯಂ ।

ನಿಷ್ಕೇವಲ್ಯೇ ಯದ್ವಾವಾನೇತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಯದ್ವಾವಾನೇತಿ ಧಾಯ್ಯಾ ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ । ಆ. ೫-೧೫ । ಇತಿ ॥ ಮಹಾವ್ರತೇಽಪ್ಯೇಷಾ । ತಥೈವ ಪಂಚಮಾರಣ್ಯಕೇ ಸೂತ್ರಿತಂ ಚ । ಯದ್ವಾವಾನೇತಿ ಧಾಯ್ಯಾ ಸೂದದೋಹಾಃ । ಐ. ಆ. ೫-೨-೨ । ಇತಿ ॥

ಯದ್ಯದಾ ಪುರುತಮಮತ್ಯಂತಂ ಪ್ರವೃದ್ಧತಮಂ ವೃತ್ರಂ ವವಾನ ಹಂತಿ ಪುರಾಷಾಟ್ ಶತ್ರುಪುರಾಣಾಮಭಿಭವಿತೇಂದ್ರಃ ತದಾನೀಮಾನಂತರಮೇವ ವೃತ್ರಹೇಂದ್ರೋ ನಾಮಾನ್ಯುದಕಾನ್ಯಪ್ರಾಃ । ಪೂರಯತಿ ॥ ವ್ಯತ್ಯಯೇನ ಮಧ್ಯಮಃ ॥ ಸೋಽಯಮಿಂದ್ರಃ ಪ್ರಾಸಹಃ ಶತ್ರೂಣಾಂ ಪ್ರಕರ್ಷೇಣಾಭಿಭವಿತಾ ಪತಿಃ ಸರ್ವಸ್ಯ ಸ್ವಾಮೀ ತುವಿಷ್ಮಾನ್ । ತುವೀತಿ ಬಹುನಾಮ ತತ್ಸಾಮರ್ಥ್ಯಾದ್ಧನಂ ಪರಿಗೃಹ್ಯತೇ । ಬಹುಧನ ಇತ್ಯರ್ಥಃ । ಈದೃಶಃ ಸನ್ನಚೇತಿ । ಸರ್ವೈಃ ಪ್ರಜ್ಞಾತಃ । ಸ ಮಹಾನಿಂದ್ರೋ ಯದೀಂ ಯದೇತತ್ಕರ್ಮೋಶ್ಮಸಿ ವಯಂ ಕಾಮಯಾಮಹೇ ತತ್ಕರತ್ । ಕರೋತ್ಯೇವ । ಇದಂ ಭವತ್ವಿದಂ ಭವತ್ವಿತಿ ಯತ್ಕಾಮಯಾಮಹೇ ತತ್ತದಾನೀಮೇವ ಕರೋತ್ಯೇವ ನೋದಾಸ್ತ ಇತ್ಯರ್ಥಃ । ಸೈತದೇವ ಪ್ರತ್ಯಪದ್ಯತ ಯದ್ವಾವಾನ ಪುರುತಮಂ ಪುರಾಷಾಳಿತ್ಯಾದಿಕಂ ಬ್ರಾಹ್ಮಣಮತ್ರ ದ್ರಷ್ಟವ್ಯಂ । ಐ. ಬ್ರಾ- ೩-೨೨ ॥

॥ ಪ್ರತಿಪದಾರ್ಥ ॥

**ಪುರಾಷಾಟ್**—ಶತ್ರುಪಟ್ಟಣಗಳನ್ನು ನಾಶಮಾಡುವ ಇಂದ್ರನು । **ಯತ್**—ಯಾವಾಗ । **ಪುರುತಮಂ**—ಅತ್ಯಂತ ಪುಷ್ಟನಾದ ವೃತ್ರನನ್ನು । **ವಧಾನ**—ನಾಶಮಾಡಿದನೋ । **ಆ**—ಆ ಒಡನೆಯೇ । **ವೃತ್ರಹಾ**—ವೃತ್ರನಾಶಕನಾದ । **ಇಂದ್ರಃ**—ಇಂದ್ರನು । **ನಾಮಾನಿ**—ಉದಕಗಳನ್ನು । **ಅಪ್ರಾಃ**—ತುಂಬಿದನು । **ಪ್ರಾಸಹಃ**—ಶತ್ರುಗಳನ್ನು ಸೋಲಿಸತಕ್ಕವನೂ । **ಪತಿಃ**—ಎಲ್ಲರಿಗೂ ಒಡೆಯನೂ । **ತುವಿಷ್ಮಾನ್**—ಅಧಿಕವಾದ ಧನವುಳ್ಳವನೂ ಆದ ಇಂದ್ರನು । **ಅಚೇತಿ**—ಎಲ್ಲರಿಂದಲೂ ತಿಳಿಯಲ್ಪಡುತ್ತಾನೆ । **ಯದೀಂ**—ಯಾವ ಫಲವನ್ನು । **ಉಶ್ಮಸಿ**—ನಾವು ಆಶಿಸುವೆವೋ । **ತತ್**—ಅದನ್ನು । **ಕರತ್**—ಇಂದ್ರನು ನೆರವೇರಿಸಿಕೊಡುತ್ತಾನೆ.

॥ ಭಾವಾರ್ಥ ॥

ಶತ್ರುಪಟ್ಟಣಗಳನ್ನು ನಾಶಮಾಡತಕ್ಕ ಇಂದ್ರನು ಯಾವಾಗ ಅತ್ಯಂತ ಪುಷ್ಟನಾದ ವೃತ್ರನನ್ನು ನಾಶಮಾಡಿದನೋ, ಆ ಒಡನೆಯೇ, ವೃತ್ರನಾಶಕನಾದ ಅವನು ಉದಕಗಳನ್ನು ತುಂಬಿದನು. ಶತ್ರುಗಳನ್ನು ಸೋಲಿಸತಕ್ಕವನೂ, ಎಲ್ಲರಿಗೂ ಒಡೆಯನೂ, ಅಧಿಕವಾದ ಧನವುಳ್ಳವನೂ ಆದ ಇಂದ್ರನು ಎಲ್ಲರಿಂದಲೂ ತಿಳಿಯಲ್ಪಡುತ್ತಾನೆ. ನಾವು ಯಾವ ಫಲವನ್ನು ಆಶಿಸುವೆವೋ ಅದನ್ನು ಇಂದ್ರನು ನೆರವೇರಿಸಿಕೊಡಲಿ.

## English Translation

When Indra, the destroyer of cities, had slain the most mighty (Vritra), then he the Vritra-slayer filled the waters; he was manifest (to all), the subduer of enemies, the lord of all, the most opulent; may he do that which we desire to have done.

॥ ವಿಶೇಷವಿಷಯಗಳು ॥

ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ **ಯದ್ವಾವಾನ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯದ್ವಾವಾನೇತಿ ಧಾಯ್ಯಾ ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ** ಎಂಬ ಸೂತ್ರದಿಂದ (ಆ. ೫-೧೫) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಈ ಋಕ್ಕಿನ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ **ಯದ್ವಾವಾನೇತಿ ಧಾಯ್ಯಾ ಸೂದದೋಹಾಃ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು.



## ಎಪ್ಪತ್ತೈದನೆಯ ಸೂಕ್ತದ ಪೀಠಿಕೆ.

ಈ ಸೂಕ್ತದಲ್ಲಿ ಸಿಂಧುನದಿಯೇ ಮೊದಲಾದ ಕೆಲವು ನದಿಗಳನ್ನು ಸ್ತುತಿಸಲಾಗಿದೆ. ನದಿಗಳೆಂದರೇನು ಎಂಬ ವಿಷಯವು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದೆ. ಯಾಸ್ಕರು ನದೀಶಬ್ದದ ರೂಪನಿಷ್ಪತ್ತಿಯನ್ನು ಈ ರೀತಿ ವಿವರಿಸಿದಾರೆ—

**ನದ್ಯಃ ಕಸ್ಮಾನ್ನದನಾ ಭವಂತಿ ಶಬ್ದವತ್ಯಃ** ।

(ನಿ. ೨-೨೪)

**ನದ್ಯಃ** ಎಂದರೆ **ನದನಾಃ**— ಇವು ಹರಿಯುವಾಗ ಜಳಜಳನೆ ಶಬ್ದಮಾಡುವುದರಿಂದ ಇವುಗಳಿಗೆ **ನದ್ಯಃ** ಎಂಬ ಹೆಸರು ಬಂದಿದೆ ಎಂದು ಹೇಳಿದಾರೆ.

> **ಬಹುಲಮಾಸಾಂ ನೈಘಂಟುಕಂ ವೃತ್ತಮಾಶ್ಚರ್ಯಮಿವ ಪ್ರಾಧಾನ್ಯೇನ ತತ್ರೇತಿಹಾಸಮಾಚಕ್ಷತೇ । ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ವಿಶ್ವಾಮಿತ್ರಃ । ಸರ್ವಮಿತ್ರಃ । ಸರ್ವಂ ಸಂಸೃತಂ । ಸುದಾಃ ಕಲ್ಯಾಣದಾನಃ । ಪೈಜವನಃ ಪಿಜವನಸ್ಯ ಪುತ್ರಃ । ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀಭಾವಗತಿರ್ವಾ । ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ ನದೀಸ್ತುಷ್ಟಾವ । ಗಾಧಾ ಭವತ ಇತಿ । ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮಃ ॥**
>
> (ನಿ. ೨-೨೪)

ನದಿಗಳ ವಿಷಯದಲ್ಲಿ ಒಂದು ಆಶ್ಚರ್ಯಕರವಾದ ಪೂರ್ವೇತಿಹಾಸವಿರುವುದೆಂದು ಹೇಳಿ ವಿಶ್ವಾಮಿತ್ರಋಷಿಯು ವಿಪಾಟ್ ಮತ್ತು ಶುತುದ್ರೀ ನದಿಗಳನ್ನು ಸ್ತುತಿಸಿ ಅವುಗಳಿಂದ ಅನುಗ್ರಹವನ್ನು ಪಡೆದ ವಿಷಯವನ್ನು ವಿವರಿಸಿದಾರೆ. ಈ ಇತಿಹಾಸವನ್ನೂ ವಿಶ್ವಾಮಿತ್ರಋಷಿಗೂ ಈ ನದಿಗಳಿಗೂ ನಡೆದ ಸಂಭಾಷಣೆಯನ್ನೂ ನಾವು ಈ ಪೀಠಿಕೆಯ ಮುಂದಿನ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

ಋಗ್ವೇದದಲ್ಲಿ ನದೀ ಎಂಬ ಅರ್ಥವನ್ನು ಸೂಚಿಸುವ ೩೭ ಶಬ್ದಗಳಿವೆಯೆಂದು ಅವುಗಳ ಹೆಸರುಗಳನ್ನು ಯಾಸ್ಕರು ಈ ರೀತಿ ವಿವರಿಸಿದಾರೆ—

> **ಅವನಯಃ । ಯಹ್ವ್ಯಃ । ಖಾಃ । ಸೀರಾಃ । ಸ್ರೋತ್ಯಾಃ । ಏನ್ಯಃ । ಧುನಯಃ । ರುಜಾನಾಃ । ವಕ್ಷಣಾಃ । ಖಾದೋಅರ್ಣಾಃ । ರೋಧಚಕ್ರಾಃ । ಹರಿತಃ । ಸರಿತಃ । ಅಗ್ರುವಃ । ನಭನ್ವಃ । ವಧ್ವಃ । ಹಿರಣ್ಯವರ್ಣಾಃ । ರೋಹಿತಃ । ಸುಸ್ರುತಃ । ಅರ್ಣಾಃ । ಸಿಂಧವಃ । ಕುಲ್ಯಾಃ । ವರ್ಯಃ । ಉರ್ವ್ಯಃ । ಇರಾವತ್ಯಃ । ಪಾರ್ವತ್ಯಃ । ಸ್ರವಂತ್ಯಃ । ಊರ್ಜಸ್ವತ್ಯಃ । ಪಯಸ್ವತ್ಯಃ । ಸರಸ್ವತ್ಯಃ । ತರಸ್ವತ್ಯಃ । ಹರಸ್ವತ್ಯಃ । ರೋಧಸ್ವತ್ಯಃ । ಭಾಸ್ವತ್ಯಃ । ಅಜಿರಾಃ । ಮಾತರಃ । ನದ್ಯಃ ॥**
>
> (ನಿ. ೨-೨೪)

ಇವೆಲ್ಲವೂ ನದೀನಾಮಗಳನ್ನು ಸೂಚಿಸುವ ಬಹುವಚನಾಂತಶಬ್ದಗಳು. ಇವುಗಳ ರೂಪನಿಷ್ಪತ್ತಿಯನ್ನೂ ಅವಯವಾರ್ಥಗಳನ್ನೂ ನಾವು ನಿರುಕ್ತಗ್ರಂಥವನ್ನು ಬರೆಯುವಾಗ ವಿವರಿಸುತ್ತೇವೆ.

ಈ ಸೂಕ್ತದಲ್ಲಿ ಎಲ್ಲಾ ನದಿಗಳು ಸ್ತುತಿಸಲ್ಪಟ್ಟಿವೆಯೆಂದು ಹೇಳಿದ್ದರೂ ಮುಖ್ಯವಾಗಿ ಸಿಂಧೂನದಿಯ ಸ್ತೋತ್ರವೇ ಹೆಚ್ಚಾಗಿದೆ. ಋಗ್ವೇದದಲ್ಲಿ ಅನೇಕ ನದಿಗಳ ಹೆಸರುಗಳು ಸೂಚಿತವಾಗಿದ್ದರೂ ಸಿಂಧು ಮತ್ತು ಸರಸ್ವತೀ ನದಿಗಳ ಹೆಸರುಗಳೇ ಬಹಳವಾಗಿ ಪಠಿತವಾಗಿವೆ. ಸರಸ್ವತಿಗೆ ನದಿಯೆಂದೂ ಮಧ್ಯಮಸ್ಥಾನದ (ಅಂತರಿಕ್ಷದಲ್ಲಿರುವ) ವಾಗ್ದೇವತೆಯೆಂದೂ ಎರಡು ವಿಧವಾದ ವ್ಯಕ್ತಿತ್ವ ಇದೆ. ಪ್ರಕೃತಸೂಕ್ತದಲ್ಲಿ ಋಗ್ವೇದದಲ್ಲಿ ಸೂಚಿತವಾಗಿರುವ ಎಲ್ಲಾ ನದಿಗಳ ಹೆಸರುಗಳನ್ನೂ ಹೇಳಿಲ್ಲ. ಇಪ್ಪತ್ತೊಂದಕ್ಕಿಂತಲೂ ಹೆಚ್ಚಾದ ಹೆಸರುಗಳಿವೆ. ಅವುಗಳಲ್ಲಿ ಸಿಂಧು, ಸರಯು

ಮತ್ತು ಸರಸ್ವತಿಗಳೇ ದೊಡ್ಡ ನದಿಗಳು (ಋ. ಸಂ. ೧೦-೬೪-೯) ಎಂದರೆ ಬಹಳವಾಗಿ ನೀರಿರುವ ನದಿಗಳು. ರಸಾ ಎಂಬುದು ಬಹಳ ಆಳವಾದ ನದಿ (೧೦-೧೦೮-೧, ೨). ಸಾಧಾರಣವಾಗಿ ನದಿಗಳನ್ನು ಸ್ತ್ರೀಲಿಂಗವಾಚಕಶಬ್ದಗಳಿಂದಲ್ಲೆ ಕರೆಯುವುದು ರೂಢಿಯು. ಆದರೆ ಕೆಲವು ನದಿಗಳಿಗೆ (ಸರಸ್ವಾನ್ ಇತ್ಯಾದಿ) ನದ ಎಂದು ಪುಲ್ಲಿಂಗಶಬ್ದಗಳಿಂದಲೂ ಕರೆಯುತ್ತಾರೆ. ಸಿಂಧುನದಿಯ ವಿಷಯದಲ್ಲಿ—ಇದರ ಕೆಲವು ಉಪನದಿಗಳ ಹೆಸರುಗಳು, ಹೆಚ್ಚಾಗಿ ನೀರಿರುವ ವಿಷಯ, ದೊಡ್ಡನದಿ—ಇತ್ಯಾದಿ ವರ್ಣನೆಗಳು ಮಾತ್ರ ಇರುವವು. ಆದರೆ ಸರಸ್ವತೀನದಿಯ ವಿಷಯದಲ್ಲಿ ವಿಶೇಷವಾದ ವಿವರಣೆ ಇದೆ. ಆದ್ದರಿಂದ ಅದನ್ನು ನಾವು ಇಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

**ಸರಸ್ವತೀ**—ಸಾಯಣಾಚಾರ್ಯರು ಋಗ್ವೇದಮಂತ್ರಗಳಲ್ಲಿ ಉಪಯೋಗಿಸಲ್ಪಟ್ಟಿರುವ ಸರಸ್ವತೀಶಬ್ದಕ್ಕೆ ಐದುವಿಧವಾದ ಅರ್ಥವಿವರಣೆಯನ್ನು ಕೊಟ್ಟಿದಾರೆ.

(1) **ನದೀ**—ಋ. ಸಂ. ೧-೧೪೨-೯ ; ೧-೧೬೪-೫೨ ; ೨-೩೦-೮ ಇತ್ಯಾದಿ.

(2) **ನದಿಯ ಹೆಸರು**—ಋ. ಸಂ. ೧.೩-೧೨ ; ೨.೪೧-೬ ; ೩-೨೩-೪ ; ೬-೪೧ ರಲ್ಲಿ ೪, ೭, ೧೦; ೧೧, ೧೩ ನೆಯ ಋಕ್ಕುಗಳು ; ೬-೫೨-೬ ; ೬-೬೧-೨ ; ೭-೩೬-೬ ; ೭-೯೫-೧ ಮತ್ತು ೨, ೭-೯೬-೧ ; ೮-೨೧-೧೭, ಮತ್ತು ೧೮ ; ೧೦-೬೪-೯ ; ೧೦-೬೫-೧೩ ; ೧೦-೭೫-೫.

(3) **ದೇವತೆಯ ಹೆಸರು**—ಋ. ಸಂ. ೫-೪೩-೧೧ ; ೫-೪೬-೨ ; ೬-೪೯-೭ ; ೫-೫೦-೧೨ : ೧೦-೧೭-೭ ; ೧೦-೩೦-೧೨ ಇತ್ಯಾದಿ.

(4) **ಆಕಾಶಾಭಿಮಾನಿದೇವತೆ**—(ಇಳಾ, ಭಾರತೀ, ಸರಸ್ವತೀ ಎಂಬ ಮೂವರು ದೇವತೆಗಳಲ್ಲಿ ಒಂದು)—ಋ. ಸಂ. ೧-೧೮೮-೮ ಇತ್ಯಾದಿ

(5) **ವಾಗ್ದೇವೀ**—ಋ. ಸಂ. ೨-೧-೧೧ ; ೩-೪-೮ ; ೩-೫೪-೧೩ ; ೫-೪೨-೧೨ ; ೭-೩೯-೫ ೭-೪೦-೩ ; ೯-೯೭-೩೨ ಇತ್ಯಾದಿ.

ಋಗ್ವೇದದಲ್ಲಿ ಸರಸ್ವತೀ ದೇವಿಯನ್ನು ಸ್ತೋತ್ರಮಾಡುವ ಅನೇಕ ಮಂತ್ರಗಳಿವೆ. ಆದರೆ ಈ ಸರಸ್ವತೀ ದೇವಿಯು ಯಾರು ಅವಳ ಸ್ವರೂಪವೇನು ಎಂಬ ವಿಷಯದಲ್ಲಿ ನಿರುಕ್ತಕಾರರು ಏನನ್ನೂ ಹೇಳಿರುವುದಿಲ್ಲ. **ನದೀವದ್ದೇವತಾ-ವಚ್ಚ ನಿಗಮಾ ಭವಂತಿ** ಎಂದು ಮಾತ್ರ ಹೇಳಿದಾರೆ. ಎಂದರೆ, ಸರಸ್ವತೀ ದೇವತಾಕವಾದ ಕೆಲವು ಮಂತ್ರಗಳಲ್ಲಿ ಸರಸ್ವತಿಯು ನದಿಯೆಂದೂ ಕೆಲವು ಮಂತ್ರಗಳಲ್ಲಿ ಒಂದು ದೇವತೆಯೆಂದೂ ವರ್ಣನೆ ಇದೆ. ಆದರೆ ಸರಸ್ವತಿಯೆಂಬ ನದಿಯೇ ಓರ್ವ ದೇವತೆಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಅಥವಾ ದೇವತೆಯನ್ನೇ ನದಿಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಎನ್ನುವುದು ವಿಶದವಾಗಿಲ್ಲ. ಆದುದರಿಂದ ಸರಸ್ವತೀ ಎನ್ನುವುದು ನದೀ, ಮತ್ತು ದೇವತೆಗಳೆರಡನ್ನೂ ಸೂಚಿಸುವುದೆಂದು ಹೇಳಬೇಕಾಗಿದೆ. ಸರಸ್ವತಿಯು ಒಂದು ದೇವತೆಯೆಂದು ಹೇಳುವ ಪಕ್ಷದಲ್ಲಿ ಆ ದೇವತೆ ಯಾರು ? ಅದರ ಸ್ವರೂಪವೇನು ? ಆ ದೇವತೆಯ ಸ್ಥಾನಮಾನಗಳಾವುವು ? ಇವೇ ಮೊದಲಾದ ವಿಷಯಗಳಿಗೆ ಸಮಂಜಸವಾದ ಉತ್ತರವನ್ನು ಹೇಳುವುದು ಸುಲಭಸಾಧ್ಯವಿಲ್ಲ. ಸರಸ್ವತಿಯು ಒಂದು ನದಿಯೆಂದು ಹೇಳುವ ಪಕ್ಷದಲ್ಲಿ ಆ ಹೆಸರಿನ ಪ್ರಸಿದ್ಧವಾದ ಒಂದು ನದಿಯು ಪೂರ್ವದಲ್ಲಿ ಇತ್ತೆಂದೂ (ಈಗಿನ ಸರಸುತಿ the mordern Sursuti) ಅದನ್ನೇ ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿರುವುದೆಂದೂ ಹೇಳಬಹುದು. ಹೀಗೆ ಹೇಳುವ ಸಂದರ್ಭದಲ್ಲಿ ಕೆಲವು ನಿರ್ದಿಷ್ಟವಾದ ದೇವತೆ

ಗಳನ್ನು ಉದ್ದೇಶಿಸಿ ಮಾಡುವ ಯಜ್ಞಯಾಗಾದಿಗಳಲ್ಲಿ ನದೀ ಮೊದಲಾದ ಅಚೇತನ ವಸ್ತುಗಳ ಪ್ರತಿಪಾದನೆಯು ನಿಷಿದ್ಧವಲ್ಲವೇ ಎಂಬ ಸಂಶಯವು ತಲೆದೋರುವುದು. ಈ ವಿಷಯದಲ್ಲಿ ಜೈಮಿನಿ ಮಹರ್ಷಿಯು ತಮ್ಮ ಮೀಮಾಂಸಾ ಸೂತ್ರದಲ್ಲಿ **ಅಚೇತನೇಽರ್ಥಬಂಧನಾತ್** (ಜೈ.ಸೂ. ೧-೨-೩೫) ಎಂದು ಪೂರ್ವಪಕ್ಷವನ್ನು ಮಾಡಿರುವುದಕ್ಕೆ ಭಾಷ್ಯಕಾರರು **ಅಭಿಮಾನಿವ್ಯಪದೇಶಃ** (ವೇ. ಸೂ. ೨ ೧-೫) ಎಂಬ ವೇದಾಂತಸೂತ್ರವನ್ನು ಉದಹರಿಸಿ ಸಮಾಧಾನವನ್ನು ಹೇಳಿರುವರು. ಎಂದರೆ ವೇದಮಂತ್ರಗಳಲ್ಲಿ ಅನೇಕಕಡೆ ಅಚೇತನವಸ್ತುಗಳನ್ನು ಸಂಬೋಧನೆಮಾಡಿರುವ ಸಂದರ್ಭಗಳಲ್ಲಿ, ಆ ಅಚೇತನವಸ್ತುಗಳ ಅಭಿಮಾನದೇವತೆಗಳನ್ನು ಕುರಿತು ಹೇಳಿರುವುದೆಂದು ತಿಳಿಯಬೇಕೆಂದು ಹೇಳಿರುವರು. (ಭಾಗ ೧. 380-381 ಪೇಜುಗಳನ್ನು ನೋಡಿ). ಆದುದರಿಂದ ನದಿಯೆಂದು ಸ್ತೋತ್ರಮಾಡಿರುವ ಕಡೆಗಳಲ್ಲಿ ಆ ನದ್ಯಭಿಮಾನಿದೇವತೆಯನ್ನು ಸ್ತೋತ್ರಮಾಡಿರುವುದೆಂದು ತಿಳಿಯಬೇಕು. ಈ ಸರಸ್ವತೀದೇವತೆಯ ವಿಷಯದಲ್ಲಿ ಅನೇಕರು ಅನೇಕ ವಿಧವಾಗಿ ಅಭಿಪ್ರಾಯಪಡುವರು—

(1) ಪುರಾಣಾದಿಗಳಲ್ಲಿ ಸರಸ್ವತಿಯೆಂದರೆ **ವಾಗಧಿಷ್ಠಾತ್ರೀ, ಶಾರದಾ, ವಿದ್ಯಾಸ್ವರೂಪಿಣೀ, ಹಂಸವಾಹಿನೀ** —ವಾಗಭಿಮಾನಿದೇವತೆಯೂ, ಶಾರದಾ ಎಂಬ ಹೆಸರಿನಿಂದ ಪ್ರಸಿದ್ಧಳೂ, ವಿದ್ಯಾಸ್ವರೂಪಿಣಿಯೂ ಹಂಸದಮೇಲೆ ಕುಳಿತಿರುವವಳೂ ಆದ ದೇವತಾವಿಶೇಷವೆಂದು ಹೇಳಲ್ಪಟ್ಟಿರುವುದು.

(2) ಅಥವಾ ಈ ಸರಸ್ವತೀದೇವಿಯು ಉಪಾಧಿವಿಶೇಷವಿಶಿಷ್ಟಳಾದ ಆದಿತ್ಯರೂಪಳಾಗಿರುವಳೆಂದೂ ಹೇಳುವರು. ಉಪಾಧಿಯೆಂದರೆ ಸಂಧ್ಯಾಕಾಲವು. ಆದುದರಿಂದ ಸಂಧ್ಯಾಕಾಲಪ್ರಕಾಶಯುಕ್ತನಾದ ಆದಿತ್ಯನೇ ಸರಸ್ವತೀರೂಪದಿಂದ ಇಲ್ಲಿ ಸ್ತುತಿಸಲ್ಪಟ್ಟಿರುವನೆಂದು ಕೆಲವರ ಮತವು.

(3) ಸರಃ ಶಬ್ದವು ಸೃ—**ಸರಿ,** ಸಂಚರಿಸು ಎಂಬ ಧಾತುವಿನಿಂದ ಉತ್ಪನ್ನವಾಗಿದೆ. **ಸರಃ ಅಸ್ಯಾ ಅಸ್ತೀತಿ** ಅಥವಾ **ಸರಃ ತೇಜೋ ಯಸ್ಯಾ ವಿದ್ಯತೇ ಸಾ ಸರಸ್ವತೀತಿ ಭವತಿ** ಎಂದರೆ ತೇಜೋರೂಪಿನಿಂದ ಪ್ರಕಾಶಿಸುವಳಾದುದರಿಂದ ಸರಸ್ವತೀ ಎಂದು ಹೆಸರು.

(4) ಅಥವಾ—**ಪ್ರಾತರ್ವಾಚಾಂ ಪ್ರವರ್ತಿಕಾ, ಪ್ರಾಣಿನಾಂ ಸ್ವಾಪಪರಿತ್ಯಾಗೇನ ಸ್ವೋಚಿತ-ವ್ಯವಹಾರೇಷು ಪ್ರವೃತ್ತೌ ಶಬ್ದಾಯಮಾನತಾಯಾಃ ಪ್ರವೃತ್ತೇಃ, ರಾತ್ರೌ ಚ ವಾಚಾಂ ನಿರೋಧಕಾ ರಾತ್ರೌ ಪ್ರಾಣಿನಾಂ ನಿಲಾಯನಿಲೀನತ್ವೇನ ಸುಪ್ಯಮಾ-ನತಯಾ ಶಬ್ದವಿರಾಮಾತ್ । ಏವಂ ಚ ಶಬ್ದಸ್ಯ ಪ್ರವರ್ತಿಕಾ ನಿವರ್ತಿಕಾ ಏಷೈವ ಲೋಕೇ ಸರಸ್ವತೀತ್ವೇನ ವ್ಯಪದಿಶ್ಯತೇ ನಾನ್ಯಾ ॥** ಎಂದರೆ ಪ್ರಾತಃಕಾಲದಲ್ಲಿ ಪ್ರಾಣಿಗಳು ನಿದ್ರೆಯಿಂದ ಎಚ್ಚರಗೊಂಡು ಮಾತನಾಡುವುದು ಮೊದಲಾದ ತಮ್ಮ ತಮ್ಮ ವ್ಯಾಪಾರವ್ಯವಹಾರಾದಿಗಳಲ್ಲಿ ತೊಡಗಿರುವುವು. ರಾತ್ರಿಕಾಲದಲ್ಲಿ ಪ್ರಾಣಿಗಳು ನಿದ್ರೆಯಲ್ಲಿ ಆಸಕ್ತವಾಗಿರುವಾಗ ಮಾತನಾಡುವುದು ಶಬ್ದಮಾಡುವುದು ಮೊದಲಾದ ಕರ್ಮಗಳಿಲ್ಲದೆ ವ್ಯವಹಾರಾದಿಗಳಿಂದ ವಿರಾಮವನ್ನು ಹೊಂದಿರುವವು. ಆದುದರಿಂದ ಮಾತನಾಡುವ ಅಥವಾ ಶಬ್ದಮಾಡುವ ವಿಚಾರದಲ್ಲಿ ಪ್ರವರ್ತನೆನಿವರ್ತನೆಗಳಿಗೆ ಕಾರಣಭೂತಳಾಗಿರುವುದರಿಂದ ಈ ವಾಗ್ದೇವತೆಗೆ ಸರಸ್ವತೀ ಎಂದು ಹೆಸರು.

(5) ಹಿಂದೆ ಹೇಳಿದಂತೆ ವಾಗ್ರೂಪತ್ವಾದಿಗಳು ಈ ದೇವತೆಗೆ ಇರುವುದರಿಂದ ಈ ಸರಸ್ವತೀದೇವಿಯು ಉಷಾರೂಪಿಣಿಯಾಗಿರುವಳು. ಆದುದರಿಂದಲೇ ಉಷಾದೇವತೆಯ ಹೆಸರುಗಳಾದ **ಸೂನೃತಾ, ಸೂನೃತಾವತೀ, ಸೂನೃತಾವರೀ** ಮೊದಲಾದ ಶಬ್ದಗಳ ಮಧ್ಯದಲ್ಲಿ ಈ ಸರಸ್ವತೀದೇವತೆಯ ಹೆಸರು ಇರುವುದು. ಇಲ್ಲಿ **ಸೂನೃತ** ಶಬ್ದಕ್ಕೆ ಪ್ರಿಯವೂ ಸತ್ಯವೂ ಆದ ಮಾತುಗಳೆಂದರ್ಥವು.

ಇದರಂತೆ ಸರಸ್ವತೀದೇವತಾವಿಚಾರದಲ್ಲಿ ಬೃಹದ್ದೇವತಾಗ್ರಂಥಕರ್ತರಾದ ಶೌನಕರೂ ಇತರ ಗ್ರಂಥಕಾರರೂ ವಿಧವಿಧವಾಗಿ ಅರ್ಥಮಾಡಿರುವರು.

ಈಗ ಋಗ್ವೇದದಲ್ಲಿ ಈ ಸರಸ್ವತೀಶಬ್ದವು ಯಾವಯಾವ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಸ್ವಲ್ಪಮಟ್ಟಿಗೆ ವಿಚಾರಮಾಡೋಣ. ಈ ವಿಷಯದಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸಬೇಕಾಗಿರುವುದು. (1) ಈಗ ನಾವು ವ್ಯಾಖ್ಯಾನಮಾಡುತ್ತಿರುವ ಪ್ರಸಕ್ತವಾದ **ಪ್ರ ಸು ವ** ಎಂಬ ಸೂಕ್ತ. (2) ಸರಸ್ವತೀದೇವತಾಕವಾದ ಇತರ ಋಕ್ಕುಗಳು. (3) ಈ ಋಕ್ಕುಗಳನ್ನು ರಚಿಸಿದ ಋಷಿಗಳು ಮತ್ತು ಅವರ ವಂಶಸ್ಥರು. ಈ ಮೂರು ವಿಷಯಗಳನ್ನೂ ವಿಮರ್ಶೆಮಾಡುವೆವು.—

ಋ. ಸಂ. ೧-೩ನೇ ಸೂಕ್ತದಲ್ಲಿ ೧೦, ೧೧, ೧೨ ನೆಯ ಋಕ್ಕುಗಳು ಸರಸ್ವತೀದೇವತಾಕಮಂತ್ರಗಳು. ೧೦, ೧೧ ನೆಯ ಋಕ್ಕುಗಳಲ್ಲಿ ಸರಸ್ವತೀನದಿಯನ್ನೇ ಒಂದು ದೇವತೆಯನ್ನಾಗಿ ಭಾವಿಸಿ ಸ್ತುತಿಸಲ್ಪಟ್ಟಿರುವುದು. ಭಾಷ್ಯಕಾರರಾದ ಸಾಯಣಾಚಾರ್ಯರು ೧೦-೧೧ ನೇಯ ಋಕ್ಕುಗಳಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೂ, ೧೧ ನೆಯ ಋಕ್ಕಿನಲ್ಲಿ ಸರಸ್ವತೀ ಎಂಬ ನದಿಯ ಅಭಿಮಾನಿದೇವತೆಯೆಂದೂ ವ್ಯಾಖ್ಯಾನಮಾಡಿರುವರು. Griffith ಎಂಬ ಪಂಡಿತರು ಸರಸ್ವತಿಯೆಂದರೆ ವಾಗ್ದೇವತೆಯೆಂದು ಅರ್ಥಮಾಡಿರುವರು. ಆದರೆ **ಪಾವಕಾ** ಎಂಬ ಶಬ್ದಕ್ಕೆ "ನೀರಿನಿಂದ ಶುದ್ಧಿಗೊಳಿಸುವ" ಎಂಬ ಅರ್ಥವನ್ನು ಮಾಡುವಾಗಲೂ **ಅರ್ಣ** ಎಂಬ ಶಬ್ದಕ್ಕೆ ನದಿಯೆಂದು ಅರ್ಥಮಾಡುವಾಗಲೂ, ಸರಸ್ವತಿಯೆಂದರೆ ಒಂದು ನದೀ ಅಥವಾ ನದಿಯ ಅಭಿಮಾನದೇವತೆ ಎಂದು ಹೇಳಬೇಕಾಗುವುದು. ಆಧುನಿಕ ಪಂಡಿತರಲ್ಲಿ ಕೆಲವರು ಸರಸ್ವತಿಯೆಂದರೆ ಸಿಂಧೂನದಿಯೆಂದೂ ಅಭಿಪ್ರಾಯಪಡುವರು. ಆದರೆ ಈ ಋಕ್ಕನ್ನು ರಚಿಸಿದ ವಿಶ್ವಾಮಿತ್ರಪುತ್ರನಾದ ಮಧುಚ್ಛಂದಋಷಿಯ ಆಶ್ರಮವು ಕುರುಕ್ಷೇತ್ರದಲ್ಲಿರುವ ಈಗಿನ ಸರಸುತಿ ಎಂಬ ನದಿಯ ಪಶ್ಚಿಮ ದಡದ ಮೇಲೆ ಇತ್ತೆಂದು ಹೇಳಿರುವುದರಿಂದ (ಮಹಾಭಾರತ, ಶಲ್ಯಪರ್ವ, ಅಧ್ಯಾಯ ೪೩) ಈ ಸುರಸುತಿ ಎಂಬ ನದಿಯನ್ನೇ ಮಧುಚ್ಛಂದಋಷಿಯು ಸ್ತೋತ್ರಮಾಡಿರುವನೆಂದು ಊಹಿಸಲವಕಾಶವಿದೆ. ಏಕೆಂದರೆ ಒಂದು ನದಿಯನ್ನು ಸ್ತೋತ್ರಮಾಡುವಾಗ ತಾನು ವಾಸಿಸುವ ಸ್ಥಳದ ಸಮೀಪದಲ್ಲಿರುವ ಪ್ರಸಿದ್ಧವಾದ ನದಿಯನ್ನು ಬಿಟ್ಟು ಎಲ್ಲಿಯೋ ದೂರದಲ್ಲಿರುವ (ಅದೇ ಹೆಸರಿನ) ಬೇರೊಂದು ನದಿಯನ್ನು ಸ್ತೋತ್ರಮಾಡಿರುವನೆಂದು ಹೇಳುವುದು ನ್ಯಾಯವೆಂದು ತೋರುವುದಿಲ್ಲ. ಎರಡನೆಯ ಮಂಡಲದಲ್ಲಿ ಸರಸ್ವತೀದೇವತಾಕವಾದ ಋ. ಸಂ. ೨-೩೦-೮ ; ೨-೩೨-೮ ; ೨-೪೧-೧೬ ರಿಂದ ೧೮ ಋಕ್ಕುಗಳನ್ನೆಲ್ಲಾ ಶುನಹೋತ್ರನ ಪುತ್ರನಾದ ಗೃತ್ಸಮದ ಎಂಬ ಋಷಿಯೇ ರಚಿಸಿರುವನು. ಈ ಗೃತ್ಸಮದಋಷಿಯು ಅತ್ರಿಋಷಿಯ ವಂಶದಲ್ಲಿ ಅತ್ರಿಯಿಂದ ಆರನೆಯ ತಲೆಯವನೆಂದು ತಿಳಿದುಬರುವುದು. (ಮೈಸೂರು ಗವರ್ನಮೆಂಟು ಓರಿಯಂಟಲ್ ಲೈಬ್ರರಿಯಲ್ಲಿ ಪ್ರಿಂಟಾದ No. 25ನೇ ಪ್ರವರ ಮತ್ತು ಗೋತ್ರ ಎಂಬ ಗ್ರಂಥದ ಪ್ರಕಾರ). ವಿಶ್ವಾಮಿತ್ರನು ಅತ್ರಿಯಿಂದ ಐದನೇ ತಲೆಯವನು. ಒಟ್ಟು ಎಂಟು ಋಕ್ಕುಗಳಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನು

ಸ್ತೋತ್ರಮಾಡಿದಾನೆ. ಋ. ಸಂ. ೨-೧-೧೧ ಮತ್ತು ೨-೩-೮ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ಇಡಾ ಮತ್ತು ಭಾರತಿಯರೊಡನೆ ಸ್ತುತಿಸಿದಾನೆ. ಋ. ಸಂ. ೨-೩-೫೫ ರಲ್ಲಿ ಈ ಮೂವರನ್ನು ಎಂದರೆ, ಇಡಾ, ಸರಸ್ವತೀ, ಭಾರತೀ ಎಂಬುವರನ್ನು ಮೂರು ಮಂದಿ ದೇವತೆಯರೆಂದು ಹೇಳಿದಾನೆ. ಋ. ಸಂ. ೨-೩೦-೮ ರಲ್ಲಿ ಸರಸ್ವತಿಯನ್ನು ಇಂದ್ರ ಮತ್ತು ಮರುತ್ತಗಳೊಡನೆ ಸ್ತೋತ್ರಮಾಡಿದಾನೆ. ಋ. ಸಂ. ೨-೩೨-೮ ರಲ್ಲಿ ಸರಸ್ವತಿಯನ್ನು ಓರ್ವ ದೇವತೆಯನ್ನಾಗಿ ಹೇಳಿದಾನೆ. ಋ. ಸಂ. ೨-೪೧ ನೇಯ ಸೂಕ್ತದ ೧೬ ನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಬಹುದೊಡ್ಡ ನದಿಯೆಂದೂ ಬಹುದೊಡ್ಡ ದೇವತೆಯೆಂದೂ ೧೮ ನೆಯ ಋಕ್ಕಿನಲ್ಲಿ ಋತಾವರೀ ಎಂದರೆ (ಋತ-ನೀರು) ಹೆಚ್ಚಾದ ನೀರುಳ್ಳ ನದಿಯೆಂದೂ ವರ್ಣಿಸಿದಾನೆ. ಇದನ್ನು ನೋಡಿ ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಬಹುದೊಡ್ಡ ನದಿಯೆಂದು ಹೇಳಿರುವುದರಿಂದ ಸಿಂಧುನದಿಯೇ ಇರಬೇಕೆಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಕವಿಯು ಒಂದು ನದಿಯನ್ನಾಗಲಿ ದೇವತೆಯನ್ನಾಗಲಿ ಸ್ತೋತ್ರಮಾಡುವಾಗ (ಅದು ಚಿಕ್ಕದು ಅಥವಾ ಸಾಧಾರಣವಾಗಿದ್ದರೂ) ಅದನ್ನು ಬಹುದೊಡ್ಡದೆಂದು ವರ್ಣಿಸುವುದು ಸಾಧಾರಣವಾಗಿದೆ. ಋ. ಸಂ. ೨-೩೦-೮ ನೆಯ ಋಕ್ಕಿನಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸಿಡಿಲು ಮತ್ತು ಮಿಂಚಿನ ಅಧಿದೇವತೆಯೆಂದು ಭಾವಿಸಿ ಸ್ತೋತ್ರಮಾಡಿರುವನೆಂದು ಕೆಲವರು ಅಭಿಪ್ರಾಯಪಡುವರು. ಆದರೆ ಒಬ್ಬ ಋಷಿಯು ಒಂದೇ ದೇವತೆಯನ್ನು ಬೇರೆ ಬೇರೆ ಅರ್ಥದಲ್ಲಿ ವರ್ಣಿಸಿರುವನೆಂದು ಹೇಳುವುದು ಸಕಾರಣವಾಗಿ ತೋರುವುದಿಲ್ಲ. ಋ. ಸಂ. ೩-೨೩ ನೆಯ ಸೂಕ್ತಕ್ಕೆ ಭರತ ಪುತ್ರರಾದ ದೇವಶ್ರವಾ ಮತ್ತು ದೇವವಾತರೆಂಬುವರು ಋಷಿಗಳು. ಹಿಂದೆ ಹೇಳಿದ ಗೋತ್ರ ಪ್ರವರವೆಂಬ ಗ್ರಂಥದ ಪ್ರಕಾರ ಈ ಋಷಿಗಳು ವಿಶ್ವಾಮಿತ್ರನ ಪುತ್ರರೆಂದು ತಿಳಿದುಬರುವುದು. ಭರತನು ಅತ್ರಿಯಿಂದ ಆರನೆಯ ತಲೆಯವನೆಂದೂ, ವಿಶ್ವಾಮಿತ್ರನು ಏಳನೆಯ ತಲೆಯವನೆಂದೂ, ಇವರಿಬ್ಬರೂ ಅತ್ರಿಯ ಮರಿಮಗನಾದ ಪುರೂರವನ ವಂಶಸ್ಥರೆಂದೂ ಅದೇಗ್ರಂಥದಿಂದ ತಿಳಿದುಬರುವುದು. ಇವರು ಋ. ಸಂ ೩-೨೩-೪ ನೆಯ ಋಕ್ಕಿನಲ್ಲಿ—

**ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಂ ।**
**ದೃಷದ್ವತ್ಯಾಂ ಮಾನುಷಾ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥**

(ಋ.. ಸಂ. ೩-೨೩-೪)

ಸರಸ್ವತೀನದಿಯ ಜತೆಯಲ್ಲಿ **ದೃಷದ್ವತೀ** ಮತ್ತು **ಆಪಯಾ** ಎಂಬ ಬೇರೆ ಎರಡು ನದಿಗಳ ಹೆಸರನ್ನು ಹೇಳಿದಾರೆ. ದೃಷದ್ವತಿಯು ಈಗಿನ ಚಿತ್ರಾಂಗವೆಂಬ ನದಿಯು (the modern Chitrang, Chautag or Chitang) **ಆಪಯಾ** ಎಂಬುವುದು ಈಗಿನ **ಅಪಗಾ** ಎಂಬ ನದಿಯ (the modern Apaga) ಈ ಎರಡು ನದಿಗಳೂ ಸರಸ್ವತಿಯ ನದಿಯ ಸಮೀಪದಲ್ಲಿಯೇ ಇರುವುದರಿಂದ ಸರಸ್ವತಿಯು ಸಿಂಧುನದಿಯಲ್ಲವೆಂದು ಧಾರಾಳವಾಗಿ ಹೇಳಬಹುದು. ವಿಶ್ವಾಮಿತ್ರಋಷಿಯ ಆಶ್ರಮವೂ ಸಹ (ಕುರುಕ್ಷೇತ್ರದಲ್ಲಿರುವ) ಈ ಸರಸ್ವತೀನದಿಯ ಪಶ್ಚಿಮ ದಡದಲ್ಲಿಯೇ ಇತ್ತೆಂದು ಈಚಿನ ಪರಿಶೋಧನೆಗಳಿಂದ ವ್ಯಕ್ತವಾಗಿದೆ. (See Dey's Geographical Dic.) ಇದುವರೆಗೆ ಹೇಳಿದ ವಿಷಯಗಳೆಲ್ಲವೂ ಅತ್ರಿ ಮತ್ತು ವಿಶ್ವಾಮಿತ್ರಋಷಿಗಳ ವಂಶಸ್ಥರ ಸಂಬಂಧವಾದವು.

ಈಗ ಭರದ್ವಾಜ ಮತ್ತು ಅವರ ವಂಶಸ್ಥರ ವಿಷಯವನ್ನು ವಿಮರ್ಶೆಮಾಡೋಣ. ಋ. ಸಂ. ೬-೪೯-೭; ೬-೫೦-೧೫; ೬-೫೨ ೬ ಈ ಮೂರು ಋಕ್ಕುಗಳಿಗೂ ಭರದ್ವಾಜಪುತ್ರನಾದ **ಋಜಿಶ್ವಾ** ಎಂಬುವನೇ ಋಷಿಯು.

ಈ ಮೂರು ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಋಕ್ಕುಗಳಲ್ಲಿ ಸರಸ್ವತಿಯು ಒಂದು ನದಿಯೆಂಬ ವಿಚಾರವು ಸ್ಪಷ್ಟವಾಗಿ ಉಕ್ತವಾಗಿದೆ. ಎರಡನೆಯ ಮಂತ್ರದಲ್ಲಿ ರುದ್ರ, ವಿಷ್ಣು, ವಾಯು, ಪರ್ಜನ್ಯ ಎಂಬ ದೇವತೆಗಳ ಜತೆಯಲ್ಲಿ ಸರಸ್ವತಿಯ ಹೆಸರು ಸೂಚಿಸಲ್ಪಟ್ಟಿದ್ದರೂ ಸರಸ್ವತಿಯು ನದಿಯ ಹೆಸರೆಂದು ಭಾವಿಸಬಹುದಾಗಿದೆ. ಏಕೆಂದರೆ ಆ ಋಷಿಯು ಎರಡು ಋಕ್ಕುಗಳಲ್ಲಿ ಸರಸ್ವತಿಯು ನದಿಯೆಂದು **ಹೇಳಿರುವುದರಿಂದ** ಮತ್ತೊಂದು ಋಕ್ಕಿನಲ್ಲಿ ಅದೇ ಋಷಿಯು ಸರಸ್ವತಿಯನ್ನು ನದಿಯೆಂದೇ ಭಾವಿಸಿ ಸ್ತೋತ್ರಮಾಡಿರುವುದು ಸಹಜವಾಗಿದೆ. ಭರದ್ವಾಜರ ಆಶ್ರಮವು ಪ್ರಯಾಗದಲ್ಲಿ (Allahabad) ಇದ್ದಿತು. ಆದುದರಿಂದ ಭರದ್ವಾಜಪುತ್ರನಾದ **ಋಜಿಶ್ವಾ** ಎಂಬುವನು ತನ್ನ ಆಶ್ರಮಕ್ಕೆ ಸಮೀಪದಲ್ಲಿರುವ ಒಂದು ನದಿಯನ್ನೇ ಸ್ತೋತ್ರಮಾಡಿರಬೇಕು. ಭರದ್ವಾಜಋಷಿಯ ಋ. ಸಂ. ೬-೬೧ನೆಯ ಸೂಕ್ತವೆಲ್ಲಾ (ಒಟ್ಟು ೧೪ ಋಕ್ಕುಗಳು) ಸರಸ್ವತೀ ವಿಷಯವಾಗಿಯೇ ಇದೆ. ಈ ಸೂಕ್ತದಲ್ಲಿರುವ ಹಲವು ಶಬ್ದಗಳ ಅರ್ಥವು ಸಿಂಧೂನದಿಗೆ ಅನ್ವಯಿಸುವುದೆಂದು ಕೆಲವು ಪಾಶ್ಚಾತ್ಯಪಂಡಿತರ ಅಭಿಪ್ರಾಯವು. ಆದರೆ ಆ ಶಬ್ದಗಳು ಸರಸ್ವತೀನದಿಗೂ ಸಹ ಅನ್ವಯಿಸುವುದರಿಂದ ಸಂಶಯಕ್ಕೆ ಅವಕಾಶವಿಲ್ಲ.

ಏಳನೆಯ ಮಂಡಲದಲ್ಲಿರುವ ಋ. ಸಂ. ೭-೯-೫ ; ೭-೩೫-೧೧ ; ೭-೩೬-೬ ; ೭-೪೦-೩ ; ೭-೯೫ ; ೭-೯೬ ಈ ಋಕ್ಕುಗಳಿಗೆಲ್ಲಾ ವಸಿಷ್ಠನೇ ಋಷಿಯು. ವಸಿಷ್ಠಋಷಿಯ ಆಶ್ರಮವು ರಾಜಪುಟಾನಾದಲ್ಲಿರುವ ಆರಾವಳೀಪರ್ವತದ ಅಬು ಎಂಬ ಬೆಟ್ಟದ (Mount Abu) ಸಮೀಪದಲ್ಲಿತ್ತೆಂದು ತಿಳಿದುಬರುವುದು. ಮೊದಲನೆಯ ನಾಲ್ಕುಮಂತ್ರಗಳೂ ಕಡೆಯ ಎರಡು ಸೂಕ್ತಗಳೂ ಸರಸ್ವತಿಯನ್ನು ನದಿಯೆಂದೇ ಹೇಳಿ ಸ್ತುತಿಸಿರುವವು. ಈ ಋಕ್ಕುಗಳಲ್ಲಿರುವ **ಸಿಂಧುಮಾತಾ** ಮತ್ತು **ಆಸಮುದ್ರಾತ್** ಎಂಬ ಶಬ್ದಗಳು ಸಿಂಧುನದಿಗೇ ವಿಶೇಷವಾಗಿ ಅನ್ವಯಿಸುವುದರಿಂದ ಸಿಂಧುನದಿಯೇ ಈ ಮಂತ್ರಗಳಲ್ಲಿ ಸ್ತುತಿಸಲ್ಪಟ್ಟಿರುವುದೆಂದು ಕೆಲವರು ಹೇಳುವರು. ಈ ವಿವಾದವನ್ನು ಸಂಪೂರ್ಣವಾಗಿ ತಳ್ಳಿಹಾಕುವುದಕ್ಕಾಗುವುದಿಲ್ಲ. ಆದರೂ ಒಂದು ನದಿಯ ವಿಷಯವನ್ನು ಹೇಳುವಾಗ ಮತ್ತೊಂದು ನದಿಯನ್ನು ಅದಕ್ಕೆ ಹೋಲಿಸುವುದೂ, ಉತ್ಪ್ರೇಕ್ಷೆಯಿಂದ ಕೂಡಿದ ಪ್ರಶಂಸೆಯನ್ನು ಮಾಡುವುದೂ ಅಸಂಭವವಲ್ಲ.

ಎಂಟನೆಯ ಮಂಡಲದಲ್ಲಿರುವ ಋ. ಸಂ. ೮-೨೧-೧೭ ಮತ್ತು ೧೮ ಋಕ್ಕುಗಳಿಗೆ ಕಣ್ವಋಷಿಯ ಪುತ್ರನಾದ **ಶೋಭರಿ** ಎಂಬುವನು ಋಷಿಯು. ಈ ಋಷಿಯು ಮೇಲೆ ಹೇಳಿದ ಋಕ್ಕುಗಳಲ್ಲಿ ಚಿತ್ರನೆಂಬ ರಾಜನು **ಸರಸ್ವತೀನದಿಯ** ತೀರದಲ್ಲಿ ಮಾಡಿದ ಯಜ್ಞವನ್ನೂ ಆ ರಾಜನ ದಾನಪ್ರಶಂಸೆಯನ್ನೂ ವರ್ಣಿಸಿರುವನು. ಶೌನಕರ ಬೃಹದ್ದೇವತಾಗ್ರಂಥದಲ್ಲಿ (೬-೫೮ ರಿಂದ ೬೨) ಈ ಚಿತ್ರರಾಜನು ಕುರುಕ್ಷೇತ್ರದಲ್ಲಿ ಯಜ್ಞಮಾಡಿದನೆಂದು ಹೇಳಿರುವುದರಿಂದ ಸರಸ್ವತಿಯು ಸಮೀಪದಲ್ಲಿರುವ ನದಿಯೇ ಆಗಿರಬೇಕು ಮತ್ತು,

**ಪೂಷಾ ವಿಷ್ಣುರ್ಹವನಂ ಮೇ ಸರಸ್ವತ್ಯವಂತು ಸಪ್ತ ಸಿಂಧವಃ ।**
**ಆಪೋ ವಾತಃ ಪರ್ವತಾಸೋ ವನಸ್ಪತಿಃ ಶೃಣೋತು ಪೃಥಿವೀ ಹವಂ ॥**

(ಋ. ಸಂ. ೮-೫೪-೯)

ಈ ಋಕ್ಕಿನಲ್ಲಿ **ಪೂಷಾ, ವಿಷ್ಣು, ಸರಸ್ವತೀ, ಸಪ್ತಸಿಂಧವಃ** (ಏಳು ನದಿಗಳು) **ಆಪಃ, ವಾತಃ, ಪರ್ವತಾಸಃ, ವನಸ್ಪತಿಃ ಪೃಥಿವೀ** ಈ ದೇವತೆಗಳ ಮಧ್ಯದಲ್ಲಿ ಸರಸ್ವತಿಯೂ ಸೂಚಿಸಲ್ಪಟ್ಟಿರುವುದು. ಅದರಂತೆಯೇ ಋ. ಸಂ. ೬-೯೭-೩೨ ರಲ್ಲಿ ಆ ಮಂತ್ರದ ಋಷಿಯಾದ **ವಸಿಷ್ಠ** ಅಥವಾ **ಪವಿತ್ರ** ಎಂಬುವರು ಸರಸ್ವತೀಶಬ್ದವನ್ನು ಉಪ

ಯೋಗಿಸಿರುವರು. ಇಲ್ಲಿ ಸರಸ್ವತಿಯು ಒಂದು ದೇವತೆ ಅಥವಾ ನದಿ ಎಂಬ ಎರಡು ಅರ್ಥಗಳಲ್ಲಿ ಯಾವುದಾದರೂ ಆಗಬಹುದು. ಋ. ಸಂ. ೧೦-೩೦-೧೨ ರಲ್ಲಿ ಸರಸ್ವತಿಯೆಂದರೆ ಯಾವ ನದಿಯೆಂದು ನಿರ್ದಿಷ್ಟವಾಗಿ ಹೇಳಿಲ್ಲ. ಋ. ಸಂ. ೧೦-೬೪-೯ ರಲ್ಲಿ ಈ ಮಂತ್ರದ ಋಷಿಯಾದ ಗಯನೆಂಬುವನು (ಅತ್ರಿಋಷಿಯ ವಂಶಸ್ಥ) ಸಿಂಧೂ ಮತ್ತು ಸರಯೂ (Gogra) ನದಿಗಳ ಜತೆಯಲ್ಲಿಯೇ ಸರಸ್ವತಿಯನ್ನು ಹೇಳಿರುವನು. ಮತ್ತು

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।**
**ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥**
(ಋ. ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ಸರಸ್ವತೀ ನದಿಯು, ಗಂಗಾ (the Ganges) ಯಮುನಾ (the Jamna) ಶುತುದ್ರಿ (the Sutlej) ಪರುಷ್ಣಿ (the Ravi) ಅಸಿಕ್ನಿ (the Chinab) ವಿತಸ್ತಾ (the Jhelam) ಮರುದ್ವೃಧಾ (the United Stream of the Jhelam and Chenab) ಆರ್ಜೀಕೀಯಾ (the Bias) ಮತ್ತು ಸುಷೋಮಾ (the Indus) ಎಂಬ ನದಿಗಳ ಜತೆಯಲ್ಲಿ ಹೇಳಲ್ಪಟ್ಟಿರುವುದರಿಂದ ಸರಸ್ವತೀನದಿಯೇ ಒಂದು ಪ್ರತ್ಯೇಕವಾದ ನದಿಯೆಂದೂ ಸಿಂಧೂನದಿಯಲ್ಲವೆಂದೂ ಸ್ಪಷ್ಟವಾಗುವುದು. ಮೇಲಿನ ಋಕ್ಕಿರುವ ಸೂಕ್ತವೆಲ್ಲಾ ನದಿಗಳ ಪರವಾಗಿಯೇ ಇದೆ. ಎಂದರೆ ಈ ಸೂಕ್ತದಲ್ಲಿರುವ ೯ ಋಕ್ಕುಗಳಿಗೂ ನದಿಗಳೇ ದೇವತೆಗಳು ಈ ಸೂಕ್ತಕ್ಕೆ ಪ್ರಿಯಮೇಧಋಷಿಯ ಪುತ್ರನಾದ ಸಿಂಧುಕ್ಷಿತ್ ಎಂಬುವನು ಋಷಿಯು.

ಸರಸ್ವತಿಯು **ತಿಸ್ರೋ ದೇವ್ಯಃ** ಎಂದು ಹೇಳಲ್ಪಡುವ ಮೂರು ಮಂದಿ ದೇವತೆಯರಲ್ಲಿ ಒಬ್ಬಳೆಂದು ಆಪ್ರೀ ಸೂಕ್ತಗಳಲ್ಲಿ ಹೇಳಲ್ಪಟ್ಟಿದೆ. ಋಗ್ವೇದಸಂಹಿತೆಯಲ್ಲಿ ಆಪ್ರೀಸೂಕ್ತಗಳೆಂದು ಹೇಳಲ್ಪಡುವ ೧೦ ಸೂಕ್ತಗಳಿವೆ.

ಈ ಸೂಕ್ತಗಳಲ್ಲಿ **ತಿಸ್ರೋ ದೇವ್ಯಃ** ಎಂದರೆ ಇಳಾ ಸರಸ್ವತೀ ಭಾರತೀ ಎಂಬ ಮೂರು ದೇವತೆಗಳ ಸ್ತೋತ್ರವಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ— ಅಗ್ನಿಯು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಮೂರು ರೂಪಗಳಿಂದ ಆರಾಧಿಸಲ್ಪಡುವನು. ಭಾರತಿಯು ಸೂರ್ಯನ ಕಿರಣಗಳನ್ನು ಸೂಚಿಸುವುದರಿಂದ ಈ ದೇವತೆಯು (ಎಂದರೆ ಸೂರ್ಯನು) ಸ್ವರ್ಗ (ದಿವ) ದಲ್ಲಿರುವ ಅಗ್ನಿಯ ರೂಪವು. ಸರಸ್ವತಿಯು ಸಿಡಿಲುಮಿಂಚುಗಳಿಗೆ ಅಭಿಮಾನಿದೇವತೆಯನ್ನಾಗಿ ಅನೇಕ ಕಡೆ ವರ್ಣಿಸಿರುವುದರಿಂದ ಈ ಸರಸ್ವತಿಯು ಅಂತರಿಕ್ಷದಲ್ಲಿರುವ ಅಗ್ನಿಯ ರೂಪವು. ಇಳಾದೇವಿಯು ಭೂಮಿಯ ಮೇಲಿರುವ ಪ್ರಜೆಗಳಿಗೆ (ಜನಗಳಿಗೆ) ಧನಾದಿಗಳನ್ನೂ ದೀರ್ಘಾಯುವನ್ನೂ ಕೊಡುವವಳಾದುದರಿಂದ ಈ ದೇವತೆಯು ಭೂಮಿಯಲ್ಲಿರುವ ಅಗ್ನಿಯ ರೂಪವು ಎಂದು ಈ ಇಳಾ ಸರಸ್ವತೀ ಭಾರತೀಯರ ಸಂಕೇತವು. ಈ ಮೂವರು ದೇವತೆಗಳೂ ಯಜ್ಞವೇದಿಕೆಗೆ ಬಂದು ಬರ್ಹಿಸ್ತರಣದ (ಹರಡಿರುವ ದರ್ಭೆಗಳ) ಮೇಲೆ ಕುಳಿತುಕೊಳ್ಳಬೇಕೆಂದು ಋಷಿಗಳು ಸ್ತೋತ್ರಮಾಡಿದಾರೆ.

ಸರಸ್ವತಿಯು ನದಿಯಲ್ಲದೆ ಬೇರೆ ದೇವತೆಯೆಂದು ಭಾವಿಸಿ ಋಷಿಗಳು ಸ್ತೋತ್ರಮಾಡಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇವೆ.

(1) **ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।**
**ಅರ್ಯಮಣಂ ವರುಣಂ ಸೋಮಮಶ್ವಿನಾ ಸರಸ್ವತೀ ನಃ ಸುಭಗಾ ಮಯಸ್ಕರತ್ ॥**
(ಋ. ಸಂ. ೧-೮೯-೩)

ಈ ಋಕ್ಕಿನಲ್ಲಿ ಸರಸ್ವತಿಯು ವಾಗ್ದೇವತೆ ಅಥವಾ ಸಿಡಿಲುಮಿಂಚುಗಳ ಅಭಿಮಾನಿದೇವತೆ.

(2) **ಸರಸ್ವತಿ ತ್ವಮಸ್ಮಾಂ ಅವಿಡ್ಢಿ ಮರುತ್ವತೀ ಧೃಷತೀ ಜೇಷಿ ಶತ್ರೂನ್ ।**

(ಋ. ಸಂ. ೨-೩೦-೮)

(3) **ಸರಸ್ವತೀ ಶೃಣವನ್ ಯಜ್ಞಿಯಾಸೋ ಧಾತಾ ರಯಿಂ ಸಹವೀರಂ ತುರಾಸಃ ।**

(ಋ. ಸಂ. ೩-೫೪-೧೩)

ಈ ಋಕ್ಕುಗಳಲ್ಲಿ ಸರಸ್ವತಿಯು ನದೀ ಎಂದಾಗಲೀ ಸಿಡಿಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ ಭಾವಿಸಲ್ಪಟ್ಟಿರುವುದು.

(4) **ದಮೂನಸೋ ಅಪಸೋ ಯೇ ಸುಹಸ್ತಾ ವೃಷ್ಣಃ ಪತ್ನೀರ್ನದ್ಯೋ ವಿಭ್ವತಷ್ಟಾಃ ।**
**ಸರಸ್ವತೀ ಬೃಹದ್ದಿವೋತ ರಾಕಾ ದಶಸ್ಯಂತೀರ್ವರಿವಸ್ಯಂತು ಶುಭ್ರಾಃ ॥**

(ಋ. ಸಂ. ೫-೪೨-೧೨)

(5) **ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಂ ।**

(ಋ. ಸಂ. ೫-೪೩-೧೧)

(6) **ಉಥಾ ನಾಸತ್ಯಾ ರುದ್ರೋ ಅಧ ಗ್ನಾಃ ಪೂಷಾ ಭಗಃ ಸರಸ್ವತೀ ಜುಷಂತ ।**

(ಋ. ಸಂ. ೫-೪೬-೨)

ಈ ಮೂರು ಋಕ್ಕುಗಳಲ್ಲಿಯೂ ಸರಸ್ವತಿಯು ಸಿಡಿಲುಮಿಂಚುಗಳ ಅಭಿಮಾನಿದೇವತೆಯು. Griffith ಎಂಬುವರು ಈ ಮೂರು ಋಕ್ಕುಗಳಲ್ಲಿ ಮೊದಲನೆಯುದರಲ್ಲಿ ಸರಸ್ವತಿಯನ್ನು ಸಿಂಧು ಅಥವಾ ಸರಸ್ವತಿ ಎಂಬ ಯಾವುದಾದರೂ ಒಂದು ನದಿಯೆಂತಲೂ, ೨-೩ ನೆಯ ಋಕ್ಕುಗಳಲ್ಲಿ ದೇವತೆಯೆಂತಲೂ ವ್ಯಕ್ತವಾಗುವುದೆಂದು ಅಭಿಪ್ರಾಯ ಪಡುವರು. K.C. ಚಟ್ಟೊಪಾಧ್ಯಾಯ ಎಂಬುವರು ೧-೨ ನೆಯ ಋಕ್ಕುಗಳು ಸಿಂಧುನದಿಗೆ ಅನ್ವಯಿಸುವುದೆಂದು ಹೇಳುವರು. ಈ ಮೂರು ಋಕ್ಕುಗಳೂ ಅತ್ರಿಋಷಿಯ ವಂಶಸ್ಥರಿಂದಲೇ ಉಕ್ತವಾಗಿದೆ. ಮೊದಲನೆಯ ಋಕ್ಕಿಗೆ ಅತ್ರಿ ಅಥವಾ ಅತ್ರಿಯ ಪುತ್ರನಾದ ಭೌಮನೆಂಬುವನೂ, ಎರಡನೆಯ ಋಕ್ಕಿಗೆ ಆತ್ರೇಯೂ, ಮೂರನೆಯ ಋಕ್ಕಿಗೆ ಅತ್ರಿಯ ವಂಶಸ್ಥನಾದ ಪ್ರತಿಕ್ಷತ್ರನೆಂಬುವನೂ ಋಷಿಗಳು. ಎರಡನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಸ್ವರ್ಗದಿಂದಲೂ (ದಿವಃ) ಮೇಘಮಂಡಲದಿಂದಲೂ (ಪರ್ವತಾದಾ) ಆಹ್ವಾನ ಮಾಡಲಾಗಿದೆ. ಮೊದಲನೆಯ ಋಕ್ಕಿನಲ್ಲಿ **ಪತ್ನೀಃ** ಎಂಬ ಶಬ್ದವಿರುವುದರಿಂದ ಸರಸ್ವತಿಯನ್ನೂ, ಇತರ ನದಿಗಳನ್ನೂ ಇಂದ್ರನ ಪತ್ನಿಯರನ್ನಾಗಿ ಭಾಷ್ಯಕಾರರು ಭಾವಿಸಿರುವರು.

(7) **ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ ವಾಯುಃ ಪೂಷಾ ಸರಸ್ವತೀ**
**ಸಜೋಷಸಃ ।** (ಋ. ಸಂ. ೧೦-೬೫-೧)

(8) **ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ।**

(ಋ. ಸಂ. ೧೦-೬೫-೧೩)

ಈ ಎರಡು ಋಕ್ಕುಗಳಲ್ಲಿಯೂ ಸರಸ್ವತಿಯು ವಾಗ್ದೇವತೆಯು.

(9) **ಯುತ್ಸರಾಮಂ ವ್ಯಪಿಬಃ ಶಚೀಭಿಃ ಸರಸ್ವತೀ ತ್ವಾ ಮಘವನ್ನಭಿಷ್ಣಕ್ ।**
(ಋ. ಸಂ. ೧೦-೧೩೧-೫)

ಈ ಋಕ್ಕಿನಲ್ಲಿ ಸರಸ್ವತಿಯು ಇಂದ್ರನೊಡನೆ ಇರುವಂತೆ ಹೇಳಿರುವುದರಿಂದ ಸರಸ್ವತಿಯು ಸಿಡಿಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ, ವಾಗ್ದೇವತೆಯೆಂದಾಗಲಿ ಭಾವಿಸಬಹುದು.

(10) **ಗರ್ಭಂ ದೇಹಿ ಸಿನೀವಾಲಿ ಗರ್ಭಂ ಧೇಹಿ ಸರಸ್ವತಿ** । (ಋ. ಸಂ. ೧೦-೧೮೪-೨)
ಇಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೇ ಹೇಳುವುದು ಸಮಂಜಸವಾಗಿರುವುದು.

ಸರಸ್ವತೀನದಿಯು ಆ ಕಾಲದಲ್ಲಿ ಎಲ್ಲೆಲ್ಲಿ ಹರಿಯುತ್ತಿತ್ತೆಂಬ ವಿಚಾರದಲ್ಲಿ ತಿಳಿದಮಟ್ಟಿಗೆ ಸೂಕ್ಷ್ಮವಾಗಿ ವಿವರಿಸುವೆವು. ಈ ವಿವರಣೆಯು (1) R. D. Oldham in Journal of Asiatic Society Bengal 1886 page 322 (2) C F. Oldham, Journal of Royal Asiatic Society 1893, page 51 (3) Maps of the Cambridge History of India Vol. I Anciert India (4) Maps of Punjab published by the Surveyor-General of India (5) Ancient India as described by Magasthenesses and Arrian ಎಂಬ ಭಾಷಣಗಳನ್ನನುಸರಿಸಿ ಬರೆಯಲ್ಪಟ್ಟಿರುವುದು. ಸರಸ್ವತೀನದಿಯು ಆ ಕಾಲದಲ್ಲಿ ಒಂದು ದೊಡ್ಡನದಿಯಾಗಿದ್ದಿತು. ಹಿಮಾಲಯಪರ್ವತದಲ್ಲಿರುವ ಸಿರ್‌ಮೂರ್ (Sismur) ಪರ್ವತಶ್ರೇಣಿಯಲ್ಲಿ ಉದ್ಭವಿಸಿ ಅಲ್ಲಿಂದ ಪಶ್ಚಿಮಕ್ಕೂ ಸ್ವಲ್ಪದಕ್ಷಿಣಕ್ಕೂ ಹರಿಯುವುದು. ಇದರ ಉದ್ಭವಸ್ಥಾನದಲ್ಲಿ ಐದು ಸಣ್ಣ ಸಣ್ಣ ತೊರೆಗಳು (ನೀರು ಹರಿಯುವ ಸಣ್ಣ ಹಳ್ಳಗಳು) ಸೇರಿ ಈ ನದಿಯಾಗಿ ಮುಂದಕ್ಕೆ ಹರಿದಿರಬಹುದು. ಆದುದರಿಂದ ಇದಕ್ಕೆ ಪಂಚಜಾತಾ ಎಂಬ ಹೆಸರು ಬಂದಿರಬೇಕು. ಸ್ವಲ್ಪದೂರ ಹರಿದ ಮೇಲೆ ದೃಷದ್ವತೀ ಎಂಬ ನದಿಯು (the modern Chitrang) ಪೂರ್ವದಿಕ್ಕಿನಿಂದ ಹರಿದು ಬಂದು ಇದಕ್ಕೆ ಸೇರುವುದು. ಆಪಯಾ ಎಂಬುದು ದೃಷದ್ವತಿಗೆ ಉಪನದಿಯು. ಆಕಾಲದ ಸರಸ್ವತಿಯು ಈಗಿನ ಸರಸುತಿನದಿಯ ದಕ್ಷಿಣಕ್ಕಿತ್ತು. (ಮರುಳುಭೂಮಿಯಲ್ಲಿ ಹರಿಯುವ ನದಿಗಳು ತಮ್ಮ ಪಾತ್ರಗಳನ್ನು ಅನೇಕವೇಳೆ ಬದಲಾಯಿಸುವುವು.) ಈಗಿನ ಸರಸುತಿನದಿಗೆ ಮಾರ್ಕಂಡಾ (Markand) ಮತ್ತು ಗಗ್ಗರ್ (Ghaggar) ಎಂಬ ಸಣ್ಣ ನದಿಗಳು ಸೇರುವುವು. ಬಳಿಕ ಸರಸ್ವತಿಯು ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಪ್ರವಹಿಸಿ ಕಡೆಗೆ ಸಮುದ್ರವನ್ನು ಸೇರುವುದು. ಈಗಿನ ಹಾಕ್ರ (Hakra) ಎಂಬ ಒಣಗಿಹೋಗಿರುವ ನದಿಯ ಪಾತ್ರವೇ ಆಗಿನ ಸರಸ್ವತೀ ನದಿಯ ಪಾತ್ರವಾಗಿರಬೇಕು. ಅದು ಈಗಿನ (Sutlej) ಎಂಬ ನದಿಯೊಡನೆ ಸಂಗಮವಾಗಿ ಸಿಂಧೂನದಿಯಲ್ಲಿ ಐಕ್ಯವಾಗಿರಬಹುದು. ಅಥವಾ ನೇರವಾಗಿ ಸಿಂಧೂನದಿಗೇ ಹೋಗಿ ಸೇರಿರಬಹುದು. ಆ ಕಾಲದಲ್ಲಿ ಸಿಂಧೂನದಿಯು ಈಗಿರುವುದಕ್ಕಿಂತ ಬಹುದೂರ ಪೂರ್ವದಿಕ್ಕಿನಲ್ಲಿತ್ತು ಮತ್ತು (Rann of Kach) ಎಂಬ ಕೊಲ್ಲಿಯ ಸಮೀಪದಲ್ಲಿ ಸಮುದ್ರವನ್ನು ಸೇರುತ್ತಿತ್ತು. ಮ್ಯಾಕ್ಸ್ ಮುಲ್ಲರ್ (Max Muller) ಪಂಡಿತನು ಋ. ಸಂ. ೭-೯೫-೨ ನೆಯ ಋಕ್ಕಿನಲ್ಲಿ ಹೇಳಿರುವ **ಆಸಮುದ್ರಾತ್** ಎಂಬ ಶಬ್ದದ ಆಧಾರದಮೇಲೆ ಈ ಸರಸ್ವತೀನದಿಯು ನೇರವಾಗಿ ಸಮುದ್ರಕ್ಕೆ ಹೋಗಿ ಸೇರುತ್ತಿತ್ತೆಂದು ಅಭಿಪ್ರಾಯಪಡುತ್ತಾನೆ. ಈ ನದಿಯು ಸಮುದ್ರಕ್ಕೆ ಸೇರುವ ಮೊದಲು ಮರುಳುಕಾಡಿನ ಪ್ರದೇಶದಲ್ಲಿ ಹರಿಯುತ್ತಿದ್ದುದರಿಂದ ನದಿಯು ಸಮುದ್ರಕ್ಕೆ ಸೇರುವ ಮೊದಲೇ ಮರುಭೂಮಿಯಲ್ಲಿ ಇಂಗಿಹೋಗಿರಬಹುದು (See Muir's Sanskrit Texts Vol. II page 393) ಈ ರೀತಿ

ನದಿಯು ಮರುಭೂಮಿಯಲಿ ಇಂಗಿಹೋದ ವಿಚಾರದ ವರ್ಣನೆಯು ಮಹಾಭಾರತದಲ್ಲಿಯೂ (ವನಪರ್ವ ತೀರ್ಥ ಯಾತ್ರಾವರ್ಣಣೆ) ಮತ್ತು ಮನುಸಂಹಿತೆಯಲ್ಲಿಯೂ (೧-೨೧) ಹೇಳಲ್ಪಟ್ಟಿದೆ. ಈ ಎಲ್ಲಾ ಕಾರಣಗಳಿಂದ ಈಗಿನ ಸರಸುತಿನದಿಯೇ ಹಿಂದಿನ ಸರಸ್ವತೀನದಿಯಾಗಿರಬೇಕೆಂದು ಹೇಳಬಹುದು.

ಇತರ ಎಲ್ಲಾ ನದಿಗಳಿಗಿಂತ ಸರಸ್ವತೀನದಿಗೇ ಹೆಚ್ಚು ಪ್ರಾಶಸ್ತ್ಯ. ದೇವತೆಯೆಂಬ ಭಾವನೆ ಈ ಸಂದರ್ಭದಲ್ಲಿ ಬಹಳ ಹೆಚ್ಚಾಗಿದ್ದರೂ, ದೇವತೆ ಮತ್ತು ನದಿಗಳಿಗಿರುವ ನಿಕಟ ಬಾಂಧವ್ಯ ಸರ್ವದಾ ನೆನಪಿನಲ್ಲಿರುತ್ತದೆ. ಈ ನದಿಗೆ ಮೂರು ಸೂಕ್ತಗಳೂ, ಅನೇಕ ಬಿಡಿ ಮಂತ್ರಗಳೂ ಮೀಸಲು. ಸರಸ್ವತೀ, ಸರಯೂ ಮತ್ತು ಸಿಂಧುಗಳು ದೊಡ್ಡ ನದಿಗಳು [೧೦-೬೪-೯], ಗಂಗಾ, ಯಮುನಾ, ಸರಸ್ವತೀ, ಶುತುದ್ರೀ, ಪರುಷ್ಣಿ, ಮತ್ತು ಇನ್ನೂ ಕೆಲವು ಪರಿಚಿತ ಮತ್ತು ಅಪರಿಚಿತವಾದವು ಒಟ್ಟು ೨೧ ನದಿಗಳು ಹೇಳಲ್ಪಟ್ಟಿವೆ [೧೦-೭೫-೫]. ಸರಸ್ವತಿಯ ದಡದಲ್ಲಿರುವ ರಾಜರು ಮತ್ತು ಜನರ ವಿಷಯ ಪ್ರಸ್ತಾಪಿತವಾಗಿದೆ [೭-೯೬-೨ ; ೮-೨೧-೧೮]. ಸರಸ್ವತಿಯು ಇತರ ಎಲ್ಲಾ ನದಿಗಳಿಗಿಂತ ಮಹಿಮೆಯಲ್ಲಿ ಹಿರಿಯದು ; ರಸವತ್ತಾದ ನೀರುಳ್ಳದ್ದು ; ನದಿಗಳಲ್ಲೆಲ್ಲಾ ಇದೊಂದೇ ಪರಿಶುದ್ಧವಾದುದು. ಆಕಾಶದ ಸಾಗರದಿಂದ ಹರಿದು ಬರುತ್ತದೆ [೭-೯೫-೧ ಮತ್ತು ೨, ೫-೪೩-೧೧ನ್ನು ಹೋಲಿಸಿ]. ಪ್ರಚಂಡವಾದ ಅಲೆಗಳಿಂದ ಪರ್ವತಶಿಖರಗಳನ್ನು ಕೊಚ್ಚಿಕೊಂಡು ಹೋಗುತ್ತದೆ. ಅದರ ಅಗಾಧವಾದ ಪ್ರವಾಹವು ಭೋರ್ಗರೆಯುತ್ತಾ, ರಭಸದಿಂದ ನುಗ್ಗುತ್ತದೆ [೬-೬೧-೨ ಮತ್ತು ೮]. ದೊಡ್ಡದರಲ್ಲಿ ಅತಿ ದೊಡ್ಡದೂ, ಚುರುಕಾಗಿರುವುದರಲ್ಲಿ ಅತಿ ಚುರುಕಾದುದೂ ಆದ ಸರಸ್ವತಿಯು ತನ್ನ ಕ್ಷೀರವನ್ನು ಉದಾರವಾಗಿ ಕೊಡಬೇಕೆಂದು ಪ್ರಾರ್ಥಿತವಾಗಿದೆ [೬-೬೧-೧೩]. ಹೊಸ ಜಾಗಗಳಿಗೆ ಸಾಗಿಸಬೇಡವೆಂದು ಮೊರೆಯಿಟ್ಟಿದಾರೆ [೬-೬೧.೧೪]. ಆಕೆಗೆ ಏಳು ಜನ ಸೋದರಿಯರು ಮತ್ತು ಆಕೆಯು ಏಳು ವಿಧವಾಗಿದಾಳೆ [೬-೬೧-೧೦ ಮತ್ತು ೧೨]. ಅವಳು ನದೀ ಮಾತೃ ; ಏಳು ನದಿಗಳಲ್ಲಿ ಒಬ್ಬಳು [೭-೩೬-೬] ನದಿಗಳು ಮತ್ತು ದೇವತೆಗಳಲ್ಲಿ ಅತಿಶ್ರೇಷ್ಠಳಾದ ತಾಯಿಯು [೨-೪೧.೧೬]. ಅವಳಿಗೆ ಪಾವೀರವೀ [ಸಿಡಿಲಿನ ಮಗಳು] ಎಂದು ಹೆಸರು ಮತ್ತು ಒಬ್ಬ ವೀರನ ಪತ್ನಿ [೬-೪೯-೭]. ಭೂಭಾಗಗಳನ್ನೂ, ವಿಸ್ತಾರವಾದ ಆಕಾಶವನ್ನೂ ಮತ್ತು ಮೂರು ಗೃಹಗಳನ್ನೂ ಆಕ್ರಮಿಸುತ್ತಾಳೆ [೬-೬೧-೧೧ ಮತ್ತು ೧೨]. ಆಕಾಶದಿಂದ, ದೊಡ್ಡ ಪರ್ವತದಿಂದ ಯಾಗಶಾಲೆಗೆ ಬರಬೇಕೆಂದು ಆಹ್ವಾನವಿದೆ [೫-೪೩-೧೧] ಈ ಕಡೆಯ ಮೂರು ವಾಕ್ಯಗಳಿಂದ ಸರಸ್ವತಿಗೂ, ಪುರಾಣಾದಿಗಳಲ್ಲಿ ಗಂಗೆಗೆ ಹೇಳಿರುವಂತೆ, ಸ್ವರ್ಗಲೋಕದಲ್ಲಿ ಜನ್ಮವು ಸೂಚಿತವಾಗುತ್ತದೆ. ಒಂದು ಕಡೆ ಅವಳಿಗೆ ಅಸುರ್ಯಾ [ದೇವತಾಸ್ತ್ರೀ ಎಂಬ ಪ್ರಯೋಗವಿದೆ [೭-೯೬-೧]. ಪಿತೃದೇವತೆಗಳ ರಥದಲ್ಲಿ ಅವರ ಜೊತೆಯಲ್ಲಿಯೇ, ಆ ದೇವತೆಯು ಬಂದು, ಕುಶಾಸನದಲ್ಲಿ ಮಂಡಿಸುತ್ತಾಳೆ [೧೦-೧೭-೮ ಮತ್ತು ೯], ಮುಂದಿನ ಎರಡು ಮಂತ್ರಗಳಲ್ಲಿಯೂ [೧೦-೧೭-೧೦ ಮತ್ತು ೧೧] ನದಿಯೇ ಉದ್ದಿಷ್ಟಳಾದುದರಿಂದ ಇಲ್ಲಿಯೂ ನದೀದೇವತೆಯೇ ಅಭಿಪ್ರೇತಳಾಗಿರಬೇಕು.

ಆಕೆಯು ಸ್ವತಃ ಪವಿತ್ರರನ್ನಾಗಿ ಮಾಡುತ್ತಾಳೆ. (೧-೩-೧೦) ಪ್ರವಾಹಗಳಿಂದ ಉಕ್ಕಿ ಹರಿಯುತ್ತಾ ಬಾರೆಂದು ಕರೆಯಲ್ಪಡುತ್ತಾಳೆ. (೬-೫೨-೬) ; ಆ ನೀರುಗಳು ಐಶ್ವರ್ಯ, ಸಂತಾನ ಮತ್ತು ಅಮರತ್ವಗಳನ್ನು ಕೊಡುವುದರ ಜೊತೆಗೆ ಆಕೆಯು ವೀರ್ಯವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿತಳಾಗಿದಾಳೆ. (೧೦-೩೦-೧೨) ಅವಳು ವೀರ್ಯವನ್ನೂ, ಸಂತಾನವನ್ನೂ ಅನುಗ್ರಹಿಸುತ್ತಾಳೆ. (೨-೪೧-೧೭) ಮತ್ತು ಸಂತಾನಪ್ರಾಪ್ತಿಗೆ ಸಹಾಯಕ ರಾದ ದೇವತೆಗಳೊಡನೆ ಸೇರಿಸಲ್ಪಟ್ಟಿದಾಳೆ. (೧೦-೧೮೪-೨) ವಧ್ರ್ಯಶ್ವನಿಗೆ ದಿವೋದಾಸನೆಂಬ ಪುತ್ರನನ್ನನು

ಗ್ರಹಿಸಿದಳು. (೬-೬೧-೧) ಯಾವಾಗಲೂ ವಿಫಲವಾಗದ ಅವಳ ಸ್ತನಗಳು (ಐ. ಬ್ರಾ. ೪-೧ನ್ನು ಹೋಲಿಸಿ). ಸಮಸ್ತ ವಿಧವಾದ ಐಶ್ವರ್ಯವನ್ನೂ ಕೊಡುತ್ತವೆ. (೧-೧೬೪-೪೯) ಐಶ್ವರ್ಯ ಸಮೃದ್ಧಿ ಮತ್ತು ಪುಷ್ಟಿದಾಯಕಳು. (೭-೯೫-೨; ೮-೨೧-೧೭; ೯-೬೭-೩೨; ೧೦-೧೭-೮ ಮತ್ತು ೯) ಮತ್ತು 'ಸುಭಗಾ' (ಸಮೃದ್ಧಳು) ಎನ್ನಿಸಿ ಕೊಂಡಿದಾಳೆ. (೧-೮೯-೩; ೭-೯೫-೪ ಮತ್ತು ೬; ೮-೨೧-೧೭) ತಾಯಿ (ಅಂಬಾ) ಯಾದ ಇವಳು, ಅಪ್ರಸಿದ್ಧರಿಗೆ ಪ್ರಸಿದ್ಧಿಯನ್ನುಂಟುಮಾಡುತ್ತಾಳೆ (೨-೪೧-೧೬) ತನ್ನ ಆರಾಧಕರಲ್ಲಿ ಭಕ್ತಿ ಮೂಡುವಂತೆ ಮಾಡುತ್ತಾಳೆ. ಅದನ್ನು ಹೆಚ್ಚಿಸುತ್ತಾಳೆ. (೧ ೩-೧೦ ಮತ್ತು ೧೧; ೨-೩-೮; ೬-೬೧-೪). ಸ್ತುತಿಗೆ ಸಂಬಂಧಿಸಿದ ದೇವತೆಗಳೊಡನೆ ಅವಳೂ ಆಹೂತಳಾಗಿದಾಳೆ (೭-೩೭-೧೧; ೧೦-೬೫-೧೩). ದೇವತೆಗಳನ್ನು ದೂಷಿಸುವವರನ್ನು ನಾಶಮಾಡುತ್ತಾಳೆ; ಕ್ರೂರಳು ಮತ್ತು ವೃತ್ರನನ್ನು ಕೊಲ್ಲುವವಳು (೬-೬೧-೩ ಮತ್ತು ೭). ಆದರೆ ತನ್ನನ್ನು ಪೂಜಿಸುವವರನ್ನು ರಕ್ಷಿಸಿ, ಅವರ ಶತ್ರುಗಳನ್ನು ನಾಶಪಡಿಸುತ್ತಾಳೆ (೭-೯೫-೪ ಮತ್ತು ೫; ೨-೩೦-೮; ೯-೪೯-೭).

ಇತರ ಅನೇಕ ದೇವತೆಗಳ ಜೊತೆಯಲ್ಲಿ ಸರಸ್ವತಿಯು ಆಹೂತಳಾಗುತ್ತಾಳೆ. ಪೂಷಣ ಮತ್ತು ಇಂದ್ರರನ್ನು ಬಿಟ್ಟರೆ ವಿಶೇಷವಾಗಿ ಮರುದ್ದೇವತೆಗಳ ಜೊತೆಯಲ್ಲಿಯೇ ಆಕೆಯು ಸ್ತುತಳಾಗಿರುವುದು. (೩-೫೪-೧೩; ೭-೯-೫; ೭-೩೯-೫; ೭-೪೦-೩). ಅವರಿಂದ ಅನುಸೃತಳು (೨-೩೦-೮) ಅಥವಾ ಅವರು ಇವಳ ಮಿತ್ರರು, (೭-೯೬-೨) ಅಶ್ವಿನೀದೇವತೆಗಳೊಡನೆಯೂ ಒಂದುಕಡೆ ಸೇರಿಸಲ್ಪಟ್ಟಿದಾಳೆ. ಅಶ್ವಿನೀದೇವತೆಗಳು ಇಂದ್ರನಿಗೆ ಸಹಾಯ ಮಾಡಿದಾಗ ಸರಸ್ವತಿಯು ಅವನ ದಣಿವಾರಿಸಿದ್ದಾಳೆ (೧೦-೧೩೧-೫). ದೇವತೆಗಳು ಯಾಗಮಾಡಿದಾಗ, ಅಶ್ವಿನೀ ದೇವತೆಗಳು ತಮ್ಮ ವೈದ್ಯವೃತ್ತಿಯಿಂದಲೂ ಸರಸ್ವತಿಯು ತನ್ನ ವಾಕ್ಕಿನಿಂದಲೂ ಇಂದ್ರನಿಗೆ ಚೈತನ್ಯವನ್ನುಂಟು ಮಾಡಿದರು. (ವಾ. ಸಂ. ೧೯-೧೨). ಸರಸ್ವತಿಯು ಅಶ್ವಿನೀದೇವತೆಗಳಿಗೆ ಪತ್ನಿ (ವಾ. ಸಂ. ೧೯-೯೪) ಆಪ್ರೀ ಸೂಕ್ತದಲ್ಲಿ ಎಂಟು ಮತ್ತು ಒಂಭತ್ತನೆಯ ಋಕ್ಕುಗಳಲ್ಲಿ ಇಳಾ ಮತ್ತು ಭಾರತಿಗಳೊಡನೆ ಅನೇಕಸಲ ಜೊತೆಗೂಡಿಸಲ್ಪಟ್ಟಿದಾಳೆ; ಮೂರು ಜನರೂ ಸೇರಿ ದೇವತಾತ್ರಯವೆಂದು ಭಾವನೆ; ಒಂದೊಂದುವೇಳೆ ಮಹೀ ಮತ್ತು ಹೋತ್ರಾ ಇವರೊಡನೆಯೂ ಸೇರಿರುವುದುಂಟು. ಈ ಸಂಯೋಜನೆಯು ಸರಸ್ವತಿಯ ಪವಿತ್ರತೆಯನ್ನು ಸೂಚಿಸಬಹುದು. ಸರಸ್ವತಿ ಮತ್ತು ದೃಷದ್ವತಿಗಳ ತೀರದಲ್ಲಿ ಅಗ್ನಿಯು ಉದ್ದೀಪ್ತನಾದನು. (೩-೨೩-೪) ಋಷಿಗಳು ಸರಸ್ವತಿಯ ದಡದಲ್ಲಿ ಯಾಗಮಾಡಿದರು. (ಐ. ಬ್ರಾ. ೨-೧೯)

ಋಗ್ವೇದದಲ್ಲಿ ಸರಸ್ವತಿಯು ನದೀದೇವತೆಯೇ ಹೊರತು, ಬೇರೆ ಯಾವ ಗುಣವೂ ಹೇಳಲ್ಪಟ್ಟಿಲ್ಲ. ಆದರೆ ಬ್ರಾಹ್ಮಣಗಳಲ್ಲಿ ಸರಸ್ವತಿಯು ವಾಗಭಿಮಾನಿದೇವತೆ (ಶ. ಬ್ರಾ. ೩-೯-೧-೭; ಐ. ಬ್ರಾ. ೩.೧.೧೦); ಪುರಾಣಾದಿಗಳಲ್ಲಿ ಜ್ಞಾನ ಮತ್ತು ವಾಕ್ಪಟುತ್ವ ಇವುಗಳಿಗೆ ಅಭಿಮಾನದೇವತೆ ಮತ್ತು ಬ್ರಹ್ಮನ ಪತ್ನಿ.

ಸರಸ್ವತೀನದಿಯು ಯಾವುದೆಂಬುದು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಕೆಲವು ಪಾಶ್ಚಾತ್ಯ ವಿದ್ವಾಂಸರು, ಸರಸ್ವತಿಯು ಒಂದು ದೊಡ್ಡ ನದಿಯಿರಬೇಕು. (ಪ್ರಾಯಶಃ ಸಿಂಧುನದಿ) ಎಂದು ಅಭಿಪ್ರಾಯಪಡುತ್ತಾರೆ. ಮತ್ತೆ ಕೆಲವರು ಮಧ್ಯಪ್ರದೇಶದಲ್ಲಿರುವ ಸಣ್ಣ ನದಿಯೇ ಇದ್ದಿರಬೇಕು. ಈಗ ಅದು ಮರಳಿನಲ್ಲಿ ಇಂಗಿಹೋಗಿ, ಸಮುದ್ರವನ್ನು ಸೇರದಿದ್ದರೂ, ಹಿಂದೆ ದೊಡ್ಡ ನದಿಯಾಗಿದ್ದು, ಸಮುದ್ರವನ್ನು ಸೇರುತ್ತಿತ್ತು ಎಂದು ಹೇಳುತ್ತಾರೆ. ಶುತುದ್ರಿಯ ಉಪನದಿಯೇ ಸರಸ್ವತಿಯೆಂದು ಕೆಲವರು ಹೇಳುತ್ತಾರೆ.

ನದಿಗಳ ಮಹತ್ತ್ವವನ್ನೂ ಋಷಿಗಳು ಅವುಗಳಿಗೆ ಕೊಟ್ಟಿರುವ ಪ್ರಾಶಸ್ತ್ಯವನ್ನೂ ಅನೇಕ ಸೂಕ್ತಗಳಿಂದ ತಿಳಿಯಬಹುದು. ಅವುಗಳಲ್ಲಿ ಒಂದನ್ನು ಇಲ್ಲಿ ಉದಾಹರಣೆಗಾಗಿ ಕೊಟ್ಟಿರುತ್ತೇವೆ. ಹಿಂದೆ ವಿಶ್ವಾಮಿತ್ರಋಷಿಗೂ

ವಿಪಾಟ್ ಮತ್ತು ಶುತುದ್ರಿನದಿಗಳಿಗೂ ನಡೆದ ಸಂವಾದದ ವಿಷಯವಾಗಿ ಋ. ಸಂ. ೩-೩೩ ನೇ ಸೂಕ್ತದ ಭಾಷ್ಯದಲ್ಲಿ ಸಾಯಣರು ಈ ರೀತಿ ಬರೆಯುತ್ತಾರೆ—

> **ಪುರಾ ಕಿಲ ವಿಶ್ವಾಮಿತ್ರಃ ಪೈಜವನಸ್ಯ ಸುದಾಸೋ ರಾಜ್ಞಃ ಪುರೋಹಿತೋ ಬಭೂವ । ಸ ಚ ಪೌರೋಹಿತ್ಯೇನ ಲಬ್ಧಜನಃ ಸರ್ವಂ ಧನಮಾದಾಯ ವಿಪಾಟ್ಛುತದ್ರ್ಯೋಃ ಸಂಭೇದಮಾಯಯೌ ಅನುಯಯುರಿತರೇ । ಅಥೋತ್ತಿತೀರ್ಷುರ್ವಿಶ್ವಾಮಿತ್ರಃ ಅಗಾಧಜಲೇ ತೇ ನದ್ಯೌ ದೃಷ್ಟ್ವಾ ಉತ್ತರಣಾರ್ಥಂ ಆದ್ಯಾಭಿಃ ತಿಸೃಭಿಃ ತುಷ್ಟಾವ ॥**
>
> (ಸಾ. ಭಾ. ಪೀಠಿಕಾ ೩-೩೩)

ಪೂರ್ವದಲ್ಲಿ **ಪಿಜವನನ** ಪುತ್ರನಾದ **ಸುದಾಸ**ನೆಂಬ ದೊರೆಗೆ ವಿಶ್ವಾಮಿತ್ರನು ಕುಲಪುರೋಹಿತನಾಗಿದ್ದನು. ಅವನು ತನ್ನ ಪೌರೋಹಿತ್ಯದಿಂದ ಜನರ ಬೆಂಬಲವನ್ನೆಲ್ಲಾ ಪಡೆದು ಸಕಲಧನವನ್ನೂ ತೆಗೆದುಕೊಂಡು **ವಿಪಾಟ್** ಮತ್ತು **ಶುತುದ್ರೀ** ಎಂಬ ನದಿಗಳ ಸಂಗಮವನ್ನು ಸೇರಿದನು. ಇತರರೂ ಇವನನ್ನು ಅನುಸರಿಸಿದರು. ಆಗ ಅತಿ ಆಳವಾದ ಪ್ರವಾಹಗಳುಳ್ಳ ನದಿಗಳನ್ನು ನೋಡಿ ಋಷಿಯು ಅದನ್ನು ದಾಟಲು ಮೊದಲನೆಯ ಮೂರು ಮಂತ್ರಗಳಿಂದ ಅವನ್ನು ಸ್ತುತಿಸಿದನು. ಎಂದು ಕಥಾಸಂದರ್ಭವನ್ನು ತಿಳಿಸಿದ್ದಾರೆ. ಈ ವಾಕ್ಯಗಳು ಸುದಾಸನಿಗೂ ವಿಶ್ವಾಮಿತ್ರನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಈ ಸುದಾಸನಾರು, ಭರತನಾರು, ಸುದಾಸನಿಗೂ ಭರತನಿಗೂ ಇರುವ ಸಂಬಂಧವೇನು, ಇವರಿಬ್ಬರಿಗೂ ಸಮಾನವಾದ ಪೌರೋಹಿತ್ಯವು ವಿಶ್ವಾಮಿತ್ರನದೇ ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ. ಅದನ್ನು ಮುಂದುವರಿಸಲು ವಿಶ್ವಾಮಿತ್ರನಿಗೂ ನದಿಗಳಿಗೂ ನಡೆದ ಸಂಭಾಷಣೆಯ ವಿವರವೇನೆಂಬುದನ್ನು ಪ್ರಥಮತಃ ತಿಳಿಯಬೇಕಾಗಿದೆ.

ಪರ್ವತಗಳ ಉತ್ಸಂಗಪ್ರದೇಶಗಳಿಂದ ಉತ್ಪನ್ನವಾದವೂ, ಕಡಿವಾಣಗಳನ್ನು ಸಡಲಿಸಿರುವುದರಿಂದ ಶಿಥಿಲವಾದ ಬಂಧನವುಳ್ಳವಾಗಿ ಪರಸ್ಪರ ಸ್ಪರ್ಧಿಸುತ್ತಾ ಓಡುತ್ತಿರುವ ಅಶ್ವಗಳಂತೆಯೂ, ತಮ್ಮ ಕರುಗಳನ್ನು ಸಮೀಪಿಸಲು ಆತುರದಿಂದ ಓಡುತ್ತಿರುವ ಎರಡು ಗೋವುಗಳಂತೆಯೂ ಸಹ **ವಿಪಾಟ್** ಮತ್ತು **ಶುತುದ್ರೀ** ಎಂಬ ಎರಡು ನದಿಗಳೂ ಸಹ ತಮ್ಮ ಸಂಯುಕ್ತವಾದ ಪ್ರವಾಹಗಳೊಡನೆ ವೇಗವಾಗಿ ಹರಿಯುತ್ತವೆ. (೧)

ಎಲೈ ನದಿಗಳೇ, ರಥಿಕನು ತನ್ನ ಲಕ್ಷ್ಯಪ್ರದೇಶಕ್ಕೆ ರಥದೊಡನೆ ಓಡುವಂತೆ ನೀವಿಬ್ಬರೂ ಸಹ ಇಂದ್ರನಿಂದ ಪ್ರೇರಿತರಾಗಿಯೂ ಇಂದ್ರನ ಆಜ್ಞೆಯನ್ನು ಪಾಲಿಸುವವರಾಗಿಯೂ ಸಹ ಸಂಯುಕ್ತರಾಗಿ ಸಾಗರದ ಅಭಿಮುಖವಾಗಿ ಹೋಗುತ್ತಿದ್ದೀರಿ. ಒಟ್ಟಿಗೆ ಪ್ರವಹಿಸುತ್ತಲೂ, ನಿಮ್ಮ ನಿಮ್ಮ ಅಲೆಗಳಿಂದ ವೃದ್ಧಿಯನ್ನು ತೋರ್ಪಡಿಸುತ್ತಲೂ, ಎಲೈ ಪ್ರಕಾಶಮಾನರಾದ ನದಿಗಳೇ, ನಿಮ್ಮಲ್ಲಿ ಒಂದು ಇನ್ನೊಂದನ್ನು ಅನುಸರಿಸುತ್ತದೆ. (೨)

ಅತ್ಯಂತ ಅತಿಶಯವಾದ ಮಾತೃಪ್ರೇಮವುಳ್ಳ **ವಿಪಾಟ್** ನದಿಯನ್ನು ನಾನು ಸಮೀಪಿಸುತ್ತೇನೆ. ವಿಸ್ತೃತವಾದುದೂ, ಶೋಭನಾತ್ಮಕವಾದುದೂ ಆದ ಈ ನದಿಯು ವತ್ಸವನ್ನು ಪ್ರೀತಿಸಲು ವೇಗದಿಂದ ಮುನ್ನುಗ್ಗುವ ಗೋವುಗಳಂತೆ ಶುತುದ್ರಿಯೊಡನೆ ಕೂಡಿ ಇಬ್ಬರಿಗೂ ಸಮಾನವಾದ ಆಶ್ರಯವನ್ನೇ ಹೋಗಿ ಸೇರುತ್ತವೆ (೩)

**ನದಿಗಳು** :—ನಮ್ಮ ಈ ಪ್ರವಾಹದಿಂದ ನಾವು ಪೃಥ್ವಿಯನ್ನು ಫಲವತ್ತನ್ನಾಗಿ ಮಾಡುತ್ತಾ ದೇವನಾದ ಇಂದ್ರನ ನಿಯಮಾನುಸಾರವಾಗಿ ಅವನಿಂದ ಕ್ಲೃಪ್ತವಾದ ಸಾಗರರೂಪವಾದ ನಮ್ಮ ಬೀಡಿಗೆ ಪ್ರವಹಿಸಿ ಹೋಗಿಸೇರು

ತ್ತೇವೆ. ಇಂದ್ರನಿಂದ ನಿರ್ಮಿತವಾದ ಮಾರ್ಗವನ್ನನುಸರಿಸಿ ನಮ್ಮ ಗಂತವ್ಯಪ್ರದೇಶಕ್ಕೆ ಹೋಗಿ ಸೇರಲು ನಮಗೆ ಕಾಲಾತೀತವಾಗಬಾರದು. ನಮ್ಮನ್ನು ಕುರಿತು ಪ್ರಾರ್ಥಿಸುವ ಈ ಋಷಿಯ ಇಷ್ಟಾರ್ಥವೇನಿರಬಹುದು ? ಅದನ್ನು ನಾವು ತಿಳಿಯಲಿಚ್ಛಿಸುತ್ತೇವೆ. (೪)

**ವಿಶ್ವಾಮಿತ್ರ** :—ಎಲೈ ಉದಕಪ್ರವಾಹಪೂರಿತಗಳಾದ ನದಿಗಳೇ, ಸೋಮಾಹರಣಕ್ಕಾಗಿ ಹೊರಟಿರುವ ನನಗಾಗಿ ನಿಮ್ಮ ಪ್ರವಾಹವನ್ನು ಕೊಂಚ ತಡೆಗಟ್ಟಿರಿ. ಅದೇ ನನ್ನ ಪ್ರಾರ್ಥನೆಯು. ಕುಶಿಕಪುತ್ರನಾದ ನಾನು ರಕ್ಷಣೆಯನ್ನಪೇಕ್ಷಿಸಿದವನಾಗಿ ನನ್ನ ಮುಂದಿರತಕ್ಕ ಶುತುದ್ರೀ ನದಿಯನ್ನು ನಮ್ರತೆಯಿಂದ ಪ್ರಾರ್ಥಿಸುತ್ತೇನೆ. (೫)

**ನದಿಗಳು** :—ಉದಕಗಳ ಪ್ರವಾಹಕ್ಕೆಲ್ಲಾ ಅಡ್ಡಲಾಗಿದ್ದ **ಅಹಿ**ಯನ್ನು ಹನನಮಾಡಿದಾಗ ವಜ್ರಬಾಹುವಾದ ಇಂದ್ರನು ನಮ್ಮ ಪ್ರವಾಹಕ್ಕನುಗುಣವಾದ ಕಾಲುವೆಗಳನ್ನೆಲ್ಲಾ ನಿರ್ಮಿಸಿದನು. ಶ್ರೇಷ್ಠವಾದ ಪಾಣಿಯುಳ್ಳವನೂ ಜಗತ್ಪ್ರೇರಕನೂ ಆದ ಇಂದ್ರನ ನಿಯಮನಕ್ಕೆ ಅಧೀನರಾಗಿ ನಾವು ಪ್ರವಹಿಸುತ್ತೇವೆ. (೬)

**ವಿಶ್ವಾಮಿತ್ರ** :—ವೃತ್ರಾಸುರನನ್ನು ತನ್ನ ವಜ್ರಾಯುಧದಿಂದ ಕೊಂದು ಉದಕಗಳ ಸ್ವತಂತ್ರವಾದ ಪ್ರವಾಹಕ್ಕಿದ್ದ ಪ್ರತಿಬಂಧಕವನ್ನು ತಪ್ಪಿಸಿ ಅವುಗಳು ಸ್ವೇಚ್ಛೆಯಿಂದ ಹರಿಯುವಂತೆ ಮಾಡಿದ ಅಸಾಧಾರಣ ಕರ್ಮಗಳುಳ್ಳ ಇಂದ್ರನ ವೀರ್ಯಕರ್ಮಗಳೆಲ್ಲವೂ ಸರ್ವದಾ ಸ್ತುತ್ಯವಾಗಿಯೇ ಇರುತ್ತವೆ. (೭)

**ನದಿಗಳು** :—ಇಂದ್ರನನ್ನು ಸ್ತುತಿಸತಕ್ಕ ಎಲೈ ಋಷಿಯೇ, ನೀನು ಈಗ ಪಠಿಸಿದ ಸ್ತುತಿವಾಕ್ಯಗಳನ್ನು ಮರೆಯಬೇಡ. ಇದೇ ವಾಕ್ಯಗಳಿಂದ ಮುಂದಿನ ಯುಗಗಳಲ್ಲೂ ಇದೇ ಸ್ತುತಿಯು ನೆರವೇರಲ್ಪಡಬೇಕಾಗುತ್ತದೆ. ಉತ್ತಮವಾದ ಕರ್ಮಕರ್ತನಾದ ಎಲೈ ಋಷಿಯೇ, ನಮ್ಮನ್ನು ಇದೇ ಸಂವಾದಾತ್ಮಕವಾದ ಸ್ತುತಿವಾಕ್ಯಗಳಿಂದ ಸೇವಿಸು. ಆದರೆ ಮಾನವರಂತೆ ಪ್ರಗಲ್ಭಾತ್ಮಕವಾದ ರೀತಿಯಲ್ಲಿ ಮಾತ್ರ ನಮ್ಮ ವಿಷಯದಲ್ಲಿ ವ್ಯವಹರಿಸಬೇಡ. ನಿನಗೆ ನಮಸ್ಕಾರವಿರಲಿ. (೮)

**ವಿಶ್ವಾಮಿತ್ರ** :—ನನಗೆ ಒಡಹುಟ್ಟಿದವರಂತಿರುವ ಎಲೈ ನದಿಗಳೇ, ನಿಮ್ಮನ್ನು ಸ್ತುತಿಸುವ ನನ್ನಲ್ಲಿ ಅನುಗ್ರಹವುಳ್ಳವರಾಗಿರಿ, ನಾನು ರಥದೊಂದಿಗೂ ಮತ್ತು ಇತರ ಭಾರಗಳೊಂದಿಗೂ ಬಹುದೂರದಿಂದ ಬಂದಿರುತ್ತೇನೆ. ನನಗೆ ಸಹಾಯಮಾಡುವುದಕ್ಕಾಗಿ ನಿಮ್ಮ ಪ್ರವಾಹಗಳನ್ನು ಕೊಂಚ ಕಡಿಮೆಮಾಡಿರಿ. ನಾನೂ ನನ್ನ ಅನುಚರರೂ ದಾಟಲು ಅನುಕೂಲವಾಗುವಂತೆ ಮಾಡಿರಿ. ನಮ್ಮ ರಥಚಕ್ರದ ಇರುಚಿಯ ಮಟ್ಟಕ್ಕಿಂತಲೂ ಕೊಂಚ ಕಡಿಮೆ ಮಟ್ಟದಲ್ಲಿ ಪ್ರವಾಹವನ್ನು ನಿಯಮನಮಾಡಿರಿ. (೯)

**ನದಿಗಳು** :—ಸ್ತುತಿಕರ್ತನಾದ ಋಷಿಯೇ, ನಾವು ನಿನ್ನ ಪ್ರಾರ್ಥನೆಯನ್ನು ಮನ್ನಿಸುವೆವು ನೀನು ಭಾರವನ್ನು ಹೊತ್ತಿರುವ ರಥದೊಂದಿಗೆ ಬಹುದೂರಪ್ರದೇಶದಿಂದ ಬಂದಿರುವೆಯೆಂಬುದೂ ನಿಜ. ನಾವು ನಿನ್ನ ಮುಂದೆ ಬಾಗಿ ನಡೆಯುವೆವು. ತನ್ನ ಮುದ್ದು ಮಗುವನ್ನು ಎತ್ತಿಕೊಳ್ಳಲು ತಾಯಿಯು ಬಾಗುವಂತೆಯೂ, ತನ್ನ ಪ್ರಿಯನನ್ನು ಆಲಿಂಗಿಸಿಕೊಳ್ಳಲು ಯುವತಿಯು ಬಾಗುವಂತೆಯೂ, ನಾವು ಬಾಗಿ ಹರಿಯುತ್ತೇವೆ. (೧೦)

**ವಿಶ್ವಾಮಿತ್ರ** :—ಎಲೈ ನದಿಗಳೇ, ನಿಮ್ಮನ್ನು ಸುಲಭವಾಗಿ ದಾಟಲು ನೀವು ಬಹಳವಾದ ಅನುಕೂಲಗಳನ್ನು ಕಲ್ಪಿಸಿದ್ದೀರಿ. ನನ್ನೊಡನಿರುವ **ಭರತರೂ** ಸಹ ನಿಮ್ಮ ಸಂಯುಕ್ತಾತ್ಮಕವಾದ ಪ್ರವಾಹವನ್ನು ದಾಟಲಿ. ನಮ್ಮನ್ನು

ಹಿಂಬಾಲಿಸುವ ಸಮಸ್ತ ಗುಂಪೂ ಸಹ ನಿಮ್ಮಿಂದ ಅನುಗ್ರಹಿಸಲ್ಪಟ್ಟವಾಗಿಯೂ ಇಂದ್ರನಿಂದ ಪ್ರೇರಿತರಾಗಿಯೂ ಸಹ ನಿಮ್ಮ ಪ್ರವಾಹವನ್ನು ದಾಟಲಿ. ನಮ್ಮ ಸ್ತುತಿಗೆ ಪಾತ್ರರಾದ ನಿಮ್ಮ ಅನುಗ್ರಹಕ್ಕೆ ಪಾತ್ರರಾಗಿದ್ದೇವೆ. ನಾನು ನಿಮ್ಮನ್ನು ದಾಟಿದ ನಂತರ ನಿಮ್ಮ ಪ್ರವಾಹವನ್ನು ಪೂರ್ವಸ್ಥಿತಿಗೆ ತಂದುಕೊಳ್ಳಿರಿ. (೧೧)

ಗೋವುಗಳ ಅನ್ವೇಷಣ ಮಾಡುತ್ತಾ ಹೊರಟ ಭರತರು ನದಿಗಳನ್ನು ದಾಟಿದರು ಋಷಿಯು ನದಿಗಳ ಅಭಿಮಾನವನ್ನು ಸ್ವೀಕರಿಸಿ ಸಂತುಷ್ಟನಾದನು. "ಎಲೈ ನದಿಗಳೇ, ಅನ್ನಸಂಪತ್ತನ್ನು ಹಂಚುವವರಾಗಿಯೂ, ಅದನ್ನೇ ವೃದ್ಧಿಪಡಿಸುವವರಾಗಿಯೂ ನಿಮ್ಮ ಪ್ರವಾಹವನ್ನು ಮುಂದುವರೆಸಿರಿ. ನಿಮ್ಮ ಪಾತ್ರಗಳನ್ನು ತುಂಬುತ್ತಾ ಪೂರ್ಣಪ್ರವಾಹವುಳ್ಳವರಾಗಿ ಹರಿಯಿರಿ". (೧೨)

ಆದರೂ ಸಹ ನಮ್ಮ ರಥದ ನೊಗದ ಮೂಕಿಯು ಪ್ರವಾಹದ ಮಟ್ಟಕ್ಕಿಂತ ಮೇಲಿರುವಂತಾಗಲಿ. ನೀವು ಆ ಪ್ರಮಾಣದಲ್ಲಿಯೇ ಹರಿಯಿರಿ. ದೋಷರಹಿತರೂ, ಅದೂಷ್ಯರೂ ಆದ ವಿಪಾಟ್ಛುತುದ್ರಿಗಳು ತುಂಬಿ ಹರಿಯಲಿ. (೧೩)

ಈ ರೀತಿಯಾಗಿ ವಿಶ್ವಾಮಿತ್ರನು ನದಿಗಳನ್ನು ಸ್ತುತಿಸಿ ಅವುಗಳನ್ನು ದಾಟಿದನು ಎಂಬುದೇ ಈ ಸೂಕ್ತದ ವಿಷಯವಾಗಿದೆ.

ಋ.ಸಂ. ೫-೫೩-೯ರಲ್ಲಿ **ರಸಾ, ಅನಿತಭಾ, ಕುಭಾ, ಸರಯು** ಎಂಬ ನದಿಗಳ ಹೆಸರುಗಳು ಪಠಿತವಾಗಿವೆ. ಈ ನದಿಗಳಲ್ಲಿ ಅನಿತಭಾ, ಕುಭಾ ಎಂಬ ನದಿಗಳ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರ ಪಠಿತವಾಗಿ ಬೇರೆ ಎಲ್ಲಿಯೂ ಇವುಗಳ ಪ್ರಸ್ತಾಪವೇ ಇಲ್ಲದಿರುವುದರಿಂದ ಇವುಗಳ ವಿಷಯವನ್ನು ಹೆಚ್ಚಾಗಿ ಹೇಳುವಂತಿಲ್ಲ. ಬಹುಶಃ ಈ ಎರಡು ನದಿಗಳು ಯಾವುದಾದರೂ (ಯಮುನಾ ?) ಒಂದು ದೊಡ್ಡ ನದಿಗೆ ಉಪನದಿಗಳಾಗಿರಬಹುದು. ಆದುದರಿಂದ ಅವು ಅಷ್ಟು ಪ್ರಸಿದ್ಧವಾಗಿಲ್ಲ.

**ಸರಯೂ**—ಸರಯೂ ಎಂಬ ನದಿಯು ಪುರಾಣಪ್ರಸಿದ್ಧವಾಗಿದೆ. ರಾಮಾಯಣದಲ್ಲಿ ಅಯೋಧ್ಯಾನಗರವು ಸರಯೂ ನದಿಯ ತೀರದಲ್ಲಿತ್ತೆಂಬ ವರ್ಣನೆ ಇದೆ. ಋಗ್ವೇದದಲ್ಲಿಯೂ ಈ ನದಿಯ ಹೆಸರು ಪ್ರಕೃತ ಋಕ್ಕಿನಲ್ಲಿಯೂ,

**ಉತ ತ್ಯಾ ಸದ್ಯ ಆರ್ಯಾ ಸರಯೋರಿಂದ್ರ ಪಾರತಃ ।**
**ಅರ್ಣಾಚಿತ್ರರಥಾವಧೀಃ ।** (ಋ. ಸಂ. ೪-೩೦-೧೮)

ಎಂಬ ಋಕ್ಕಿನಲ್ಲಿ ಇಂದ್ರನು ಚಿತ್ರರಥನೆಂಬ ರಾಜನನ್ನು ಸರಯು ಎಂಬ ನದೀತೀರದಲ್ಲಿ ಕೊಂದನೆಂಬ ವಿಷಯವು ಉಕ್ತವಾಗಿದೆ.

**ಸರಸ್ವತೀ ಸರಯುಃ ಸಿಂಧುರೂರ್ಮಿಭಿರ್ಮಹೋ ಮಹೀರವಸಾ ಯಂತು ವಕ್ಷಣೀಃ ।**
(ಋ. ಸಂ. ೧೦-೬೪-೯)

ಎಂಬ ಋಕ್ಕಿನಲ್ಲಿ ಸರಸ್ವತೀ, ಸರಯು, ಸಿಂಧೂನದಿಗಳು ತಮ್ಮ ರಕ್ಷಣೆಗಳೊಡನೆ ಬರಲಿ ಎಂಬ ಪ್ರಾರ್ಥನೆ ಇದೆ. ಸರಯು ಎಂಬ ನದಿಯ ವಿಷಯವು ಋಗ್ವೇದದಲ್ಲಿ ಈ ಮೂರು ಋಕ್ಕುಗಳಲ್ಲಿ ಮಾತ್ರವಿರುವುದು. ಇನ್ನೆಲ್ಲಿಯೂ ಇಲ್ಲ.

**ರಸಾ**—ಎಂಬುದು ಒಂದು ಪ್ರಸಿದ್ಧವಾದ ನದಿ ಇರಬೇಕು ಅಥವಾ ಈಗ ಪ್ರಸಿದ್ಧವಾಗಿರುವ ಸಿಂಧ ನದಿಗೇ ಈ ಹೆಸರಿತ್ತೆಂದು ಊಹಿಸಲೂ ಕಾರಣವಿದೆ. ಇದು ದೇವನದಿಯೆಂದು ಪ್ರಸಿದ್ಧವಾಗಿ ಒಂದಾನೊಂದು ಕಾಲದಲ್ಲಿ ಈ ನದಿಯ ನೀರು ಕಾರಣಾಂತರದಿಂದ ಬತ್ತಿಹೋಗಲು ಅದನ್ನು ಅಶ್ವಿನೀದೇವತೆಗಳು ತಮ್ಮ ಸಾಮರ್ಥ್ಯದಿಂದು

ಉದಕಪೂರ್ಣವನ್ನಾಗಿ ಮಾಡಿದರೆಂಬ ಇತಿಹಾಸವು ಋ ಸಂ. ೧-೧೧೨-೧೨ ನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಗುಣವರ್ಣನೆ ಮಾಡುವಾಗ ಉಕ್ತವಾಗಿದೆ.

**ಅತ್ರೇತಿಹಾಸಮಾಚಕ್ಷತೇ । ಪಣಿಭಿರಸುರೈರಪಹ್ರಿಯಮಾಣಾ ಗಾ ಅನುಗಚ್ಛಂತಃ ದೇವಗೋಪಾಲಾ ರಸಾಂ ನಾಮಾಂತರಿಕ್ಷನದೀಮಗಾಧೋದಕಾಂ ನೋತ್ತರಿತುಂ ಶೇಕುಃ । ತದ್ಜ್ಞಾತ್ವಾ ದೇವಾಃ ಸಂಕ್ರುದ್ಧಾಃ ರಸಾಂ ಶೇಪುಃ ನಿರುದಕಾ ಭವೇತಿ । ಸಾ ಪ್ರತ್ಯನೀತಾಸು ಗೋಷು ಅಶ್ವಿನೌ ಪರಿಚಚಾರ । ತಾಮಶ್ವಿನೌ ಗತ್ವಾ ಪುನರಗಾಧೋದಕಾಂ ಚಕ್ರತುರಿತಿ ॥**

ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು ಅಪಹರಿಸಿಕೊಂಡು ಹೋದಾಗ ದೇವಗೋಪಾಲಕರು ಆ ಮಾರ್ಗವನ್ನನುಸರಿಸಿ ಅಸುರರನ್ನಟ್ಟಿಸಿಕೊಂಡು ಹೋಗಲು ದಾರಿಯಲ್ಲಿ ಅಗಾಧವಾದ ಜಲಪ್ರವಾಹದಿಂದ ಕೂಡಿದ ರಸಾ ಎಂಬ ಅಂತರಿಕ್ಷಸ್ಥವಾದ ನದಿಯು ಅಡ್ಡಲಾಗಿದ್ದುದರಿಂದ ಅದನ್ನು ದಾಟಲು ಅವರಿಂದ ಸಾಧ್ಯವಾಗಲಿಲ್ಲ. ಈ ವಿಷಯವು ದೇವತೆಗಳಿಗೆ ತಿಳಿಯಲಾಗಿ ಅವರು ಕೋಪದಿಂದ ಆ ನದಿಯನ್ನು ಒಣಗಿಹೋಗಲೆಂದು ಶಪಿಸಿದರು. ಒಡನೆಯೇ ಆ ನದಿಯ ನೀರೆಲ್ಲಾ ಬತ್ತಿಹೋಯಿತು. ಪುನಃ ಗೋವುಗಳನ್ನು ಹಿಂದಟ್ಟಿಕೊಂಡು ಹೋದನಂತರ ರಸಾ ನದಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಆ ನದಿಯನ್ನು ಸಮೃದ್ಧಿಯಾದ ನೀರಿನಿಂದ ತುಂಬಿದರು ಎಂಬ ಕಥೆಯನ್ನು ಸ್ಕಂದಸ್ವಾಮಿಗಳು ತಮ್ಮ ಭಾಷ್ಯದಲ್ಲಿ ವಿವರಿಸಿದ್ದಾರೆ. ಸಾಯಣರ ವಿವರಣೆಯು ಸ್ವಲ್ಪ ವ್ಯತ್ಯಾಸವಾಗಿದೆ ಅವರ ವಿವರಣೆಯು—

**ರಸಾ ನದೀ ಭವತಿ ರಸತೇಃ ಶಬ್ದಕರ್ಮಣ ಇತಿ ಯಾಸ್ಕಃ । ನಿ. ೧೧-೨೫ । ಹೇ ಅಶ್ವಿನೌ ಯಾಭಿರೂತಿಭಿರ್ಹೇತುಭೂತಾಭೀ ರಸಾಂ ನದೀಮನಾವೃಷ್ಟ್ಯಾ ಜಲರಹಿತಾಂ ಕ್ಷೋದಸಾ ಕೂಲಾನಿ ಸಂಪಿಂಷತೋದ್ನ ಉದಕೇನ ಪಿಪಿನ್ವಥುಃ ಯುವಾಂ ಪೂರಿತವಂತೌ ॥**

(ಸಾ. ಭಾ.)

ಶಬ್ದವನ್ನುಂಟುಮಾಡು ಎಂಬರ್ಥವನ್ನು ಕೊಡುವ ರಸ್ ಧಾತುವಿನಿಂದ ನಿಷ್ಪನ್ನವಾಗಿ ರಸಾ ಎಂದಾಗಿದೆಯೆಂದು ನಿರುಕ್ತಕಾರರ ನಿರ್ವಚನವನ್ನುದಹರಿಸಿ, ನದಿಯ ನೀರು ವೇಗವಾಗಿ ಹರಿಯುವುದರಿಂದ ಶಬ್ದಮಾಡುತ್ತಿರುವುದು. ಆ ಕಾರಣದಿಂದ ಈ ನದಿಗೆ ರಸಾ ಎಂದು ಹೆಸರು. ಆದರೆ ಈ ನದಿಯ ನೀರು ಒಣಗಿಹೋಗುವುದಕ್ಕೆ ಅನಾವೃಷ್ಟಿಯೇ ಕಾರಣವೆಂದು ಹೇಳಿದ್ದಾರೆ. ಈ ನದಿಯ ನೀರು ಅಗಾಧ ಪ್ರವಾಹದಿಂದ ಕೂಡಿ ದಾಟುವುದಕ್ಕೆ ಅಸಾಧ್ಯವಾಗಿರುತ್ತದೆಂದು ಕೆಲವುಕಡೆ ಹೇಳಿದೆ.

**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ।**

(ಋ ಸಂ. ೧೦-೧೦೮-೧)

ಹಿಂದೆ ಪಣಿಗಳು ದೇವತೆಗಳ ಗೋವುಗಳನ್ನು ಅಪಹರಿಸಿಕೊಂಡು ಹೋಗಿ ಯಾರಿಗೂ ತಿಳಿಯದಂತೆ ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದರು. ದೇವತೆಗಳ ಪ್ರಾರ್ಥನೆಯಂತೆ ಇಂದ್ರನು ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಕಂಡುಹಿಡಿಯುವುದಕ್ಕೆ ಸರಮೆಯೆಂಬ ದೇವಶುನಿ (ದೇವಲೋಕದ ಹೆಣ್ಣುನಾಯಿ] ಯನ್ನು ಕಳುಹಿಸಿದನು. ಅದು ಬಹುದೂರ ಸಂಚಾರಮಾಡಿ ಕಾಡುಮೇಡುಗಳನ್ನು ದಾಟಿ ಅನೇಕ ನದಿಗಳನ್ನು ಹಾಯ್ದು ಕೊನೆಗೆ ಪಣಿಗಳಿದ್ದ ಸ್ಥಳಕ್ಕೆ ಬಂದಿತು.

ಆಗ ಗೋವುಗಳನ್ನು ದೇವತೆಗಳಿಗೆ ಹಿಂದಕ್ಕೆ ಕೊಡಬೇಕೆಂಬ ವಿಷಯದಲ್ಲಿ ಪಣಿಗಳಿಗೂ ಸರಮೆಗೂ ಸ್ವಾರಸ್ಯವಾದ ಒಂದು ಸಂಭಾಷಣೆಯು ನಡೆಯಿತು. ಆಗ ಪಣಿಗಳು ಸರಮೆಯನ್ನು ಪ್ರಶ್ನಿಸುತ್ತಾ ಇಲ್ಲಿಗೆ ನೀನು ಬರುವಾಗ ಅಗಾಧವಾದ ಉದಕಪ್ರವಾಹದಿಂದ ಕೂಡಿದ ರಸಾ ನದಿಯನ್ನು ಹೇಗೆ ದಾಟಿ ಇಲ್ಲಿಗೆ ಬಂದೆ ಎಂದು ಕೇಳುತ್ತಾರೆ. ಆದುದರಿಂದ ರಸಾನದಿಯು ಅಗಾಧ ಜಲಪ್ರವಾಹದಿಂದ ಕೂಡಿತ್ತೆಂದು ಹೇಳಬಹುದು. ಈ ಸಂದರ್ಭಗಳಲ್ಲಲ್ಲದೆ—

**ಸಿಷಕ್ತು ಮಾತಾ ಮಹೀ ರಸಾ ನಃ ಸ್ಮತ್ಸೂರಿಭಿರ್ಋಜುಹಸ್ತ ಋಜುವನಿಃ ।**

(ಋ. ಸಂ. ೫-೪೧-೧೫)

ಎಂಬ ಋಕ್ಕಿನಲ್ಲಿ ರಸಾ ಎಂಬ ಶಬ್ದಪ್ರಯೋಗವಿದೆ. ಸಾಯಣರು ಈ ಋಕ್ಕಿಗೆ ಅರ್ಥಮಾಡುವಾಗ **ರಸಾ ಸಾರಭೂತಾ ಭೂಮಿಃ** ಎಂದು ಹೇಳಿದ್ದಾರೆ. ಈದರೆ ಈ ಋಕ್ಕಿನಲ್ಲಿ **ಸಿಷಕ್ತು** ಸೇರಿಯಿಸಲಿ ಎಂಬ ಶಬ್ದವಿರುವುದರಿಂದ ರಸಾ ಶಬ್ದಕ್ಕೆ ರಸಾ ಎಂಬ ನದಿಯೇ ನಿರ್ದಿಷ್ಟವಾಗಿರಬಹುದೆಂಬ ಊಹೆಗೆ ಅವಕಾಶವಿದೆ. ಮತ್ತು ಋ. ಸಂ. ೪-೪೩-೬; ೧೦-೭೫-೬; ೧೦-೧೨೧-೪; ೫-೫೩-೯; ೭-೭೨-೧೩; ಇತ್ಯಾದಿ ಋಕ್ಕುಗಳಲ್ಲಿ ರಸಾನದಿಯ ಹೆಸರು ಸೂಚಿತವಾಗಿದೆ.



## ಎಪ್ಪತ್ತೈದನೆಯ ಸೂಕ್ತವು.

। ಸಾಯಣಭಾಷ್ಯಂ ।

**ಪ್ರ ಸು ವ ಇತಿ ನವರ್ಚಂ ಸಪ್ತಮಂ ಸೂಕ್ತಂ । ಪ್ರಿಯಮೇಧಪುತ್ರಸ್ಯ ಸಿಂಧುಕ್ಷಿತ ಆರ್ಷಂ ಜಾಗತಂ ನದೀದೇವತಾಕಂ । ತಥಾ ಚಾನುಕ್ರಾಂತಂ । ಪ್ರ ಸು ನವ ಸಿಂಧುಕ್ಷಿತ್ಪ್ರೈಯಮೇಧೋ ನದೀಸ್ತುತಿರ್ಜಾಗತಂ ತ್ವಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪ್ರ ಸು ವ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಿಯಮೇಧಋಷಿಯ ಪುತ್ರನಾದ ಸಿಂಧುಕ್ಷಿತ್ ಎಂಬುವನು ಋಷಿಯು; ನದಿಗಳು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ **ಪ್ರ ಸು ನವ ಸಿಂಧುಕ್ಷಿತ್ಪ್ರೈಯ-ಮೇಧೋ ನದೀಸ್ತುತಿರ್ಜಾಗತಂ ತು** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೭೫

ಮಂಡಲ— ೧೦ । ಅನುವಾಕ—೬ । ಸೂಕ್ತ—೭೫ ॥
ಅಷ್ಟಕ—೮ । ಅಧ್ಯಾಯ—೩ । ವರ್ಗ—೬, ೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಸಿಂಧುಕ್ಷಿತ್ಪ್ರೈಯಮೇಧಃ ॥
ದೇವತಾ—ನದ್ಯಃ ॥
ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಪ್ರ ಸು ವ ಆಪೋ ಮಹಿಮಾನಮುತ್ತಮಂ ಕಾರುರ್ವೋಚಾತಿ ಸದನೇ ವಿವಸ್ವತಃ ।

ಪ್ರ ಸಪ್ತಸಪ್ತ ತ್ರೇಧಾ ಹಿ ಚಕ್ರಮುಃ ಪ್ರ ಸೃತ್ವರೀಣಾಮತಿ ಸಿಂಧುರೋಜಸಾ ॥

॥ ಪದಪಾಠಃ ॥

ಪ್ರ । ಸು । ವಃ । ಆಪಃ । ಮಹಿಮಾನಂ । ಉತ್ಽತಮಂ । ಕಾರುಃ । ವೋಚಾತಿ । ಸದನೇ । ವಿವಸ್ವತಃ ।

ಪ್ರ । ಸಪ್ತಽಸಪ್ತ । ತ್ರೇಧಾ । ಹಿ । ಚಕ್ರಮುಃ । ಪ್ರ । ಸೃತ್ವರೀಣಾಂ । ಅತಿ । ಸಿಂಧುಃ । ಓಜಸಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಆಪಃ ವೋ ಯುಷ್ಮಾಕಂ ಮಹಿಮಾನಂ ಮಹತ್ತ್ವಂ ಸ್ತೋತ್ರವುತ್ತಮಮುತ್ಕೃಷ್ಟತಮಂ ಕಾರುಃ ಸ್ತೋತಾ ಸಿಂಧುಕ್ಷಿದಹಂ ವಿವಸ್ವತಃ ಪರಿಚರಣವತೋ ಯಜಮಾನಸ್ಯ ಸದನೇ ಯಜ್ಞಗೃಹೇ ಸು ಸುಷ್ಠು ಪ್ರ ವೋಚಾತಿ । ಪ್ರಬ್ರವೀಮಿ। ತಾ ನದ್ಯಃ ಸಪ್ತಸಪ್ತ ಭೂತ್ವಾ ತ್ರೇಧಾ ಪೃಥಿವ್ಯಾಮಂತರಿಕ್ಷೇ ದಿವಿ ಚೇತಿ ತ್ರಿಧಾ ತ್ರಿಃಪ್ರಕಾರಂ ಚಕ್ರಮುಃ । ಪ್ರಾವಹನ್ । ಸೃತ್ವರೀಣಾಮಾಸಾಂ ಮಧ್ಯೇ ಸಿಂಧುರೇತನ್ನಾಮಿಕಾ ನದ್ಯೋಜಸಾ ಸ್ವಬಲೇನಾತಿ ಸರ್ವಾ ಅಪಿ ನದೀರತಿಕ್ರಮ್ಯ ಪ್ರವಹತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಆಪಃ**—ಎಲೈ ಉದಕಗಳೇ । **ವಃ**—ನಿಮ್ಮ । **ಮಹಿಮಾನಂ**—ಮಹತ್ತ್ವವನ್ನು । **ಉತ್ತಮಂ**—ಅತಿಶಯವಾಗಿ । **ಕಾರುಃ**—ಸ್ತುತಿಕರ್ತನು । **ವಿವಸ್ವತಃ**—ಯಜಮಾನನ । **ಸದನೇ**—ಯಜ್ಞಗೃಹದಲ್ಲಿ । **ಸು**—ಅತಿಶಯವಾಗಿ । **ಪ್ರವೋಚಾತಿ**—ಪ್ರಶಂಸಿಸುತ್ತಾನೆ (ಆ ನದಿಗಳು) । **ಸಪ್ತಸಪ್ತ**—ಏಳೇಳು ಭಾಗಗಳಾಗಿ । **ತ್ರೇಧಾ**—ಪೃಥಿವ್ಯಾದಿ ಮೂರು ಲೋಕಗಳಲ್ಲೂ । **ತ್ರೇಧಾ**—ಮೂರು ಪ್ರಕಾರವಾಗಿ । **ಚಕ್ರಮುಃ**—ಪ್ರವಹಿಸುತ್ತವೆ । **ಸೃತ್ವರೀಣಾಂ**—ಪ್ರವಹಿಸುವ ಈ ನದಿಗಳಲ್ಲಿ । **ಸಿಂಧುಃ**—ಸಿಂಧುವು । **ಓಜಸಾ**—ತನ್ನ ಮಹಿಮೆಯಿಂದ । **ಅತಿ**—ಎಲ್ಲವನ್ನೂ ಮೀರಿ । **ಪ್ರ (ವಹತಿ)**—ಪ್ರವಹಿಸುತ್ತದೆ.

॥ ಭಾವಾರ್ಥ ॥

ಎಲೈ ಉದಕಗಳೇ, ಸ್ತುತಿಕರ್ತನು ನಿಮ್ಮ ಮಹತ್ತ್ವವನ್ನು ಯಜಮಾನನ ಗೃಹದಲ್ಲಿ ಅತಿಶಯವಾಗಿ ಪ್ರಶಂಸಿಸುತ್ತಾನೆ. ನೀವು ಏಳೇಳು ಭಾಗಗಳಾಗಿ ಒಡೆದು, ಪೃಥಿವ್ಯಾದಿ ಮೂರು ಲೋಕಗಳಲ್ಲೂ ಮೂರು ಪ್ರಕಾರವಾಗಿ ಪ್ರವಹಿಸುತ್ತೀರಿ. ಪ್ರವಹಿಸುವ ನದಿಗಳಲ್ಲೆಲ್ಲ ಸಿಂಧುವು ತನ್ನ ಮಹಿಮೆಯಿಂದ ಉಳಿದೆಲ್ಲವನ್ನೂ ಮೀರಿರುತ್ತದೆ.

## English Translation

Waters, the worshipper addresses to you excellent praise in the dwelling of the institutor of the rite; they flowed by sevens through the three (worlds); but the Sindhu surpasses (all) the (other) streams in strength.

|| ವಿಶೇಷವಿಷಯಗಳು ||

**ಸಪ್ತ ಸಪ್ತ**—ಏಳು ಏಳು ನದಿಗಳ ರೂಪದಿಂದ; ಅಂತರಿಕ್ಷದಿಂದ ಭೂಮಿಯ ಮೇಲೆ ವೃಷ್ಟಿರೂಪದಿಂದ ಬೀಳುವ ಉದಕಗಳು (ಮುಖ್ಯವಾದ) ಏಳು ನದಿಗಳಾಗಿ ಪ್ರವಹಿಸಿ ಸಮುದ್ರವನ್ನು ಸೇರುತ್ತವೆ. ಆ ಏಳು ನದಿಗಳಲ್ಲಿ ಸಿಂಧು ಎಂಬ ನದಿಯು ಉಳಿದ ಎಲ್ಲಾ ನದಿಗಳಿಗಿಂತಲೂ ಎಂದರೆ ನೀರಿನ ಪ್ರಮಾಣದಲ್ಲಿಯೂ, ವಿಸ್ತಾರದಲ್ಲಿಯೂ, ಉದ್ದದಲ್ಲಿಯೂ ವೇಗದಲ್ಲಿಯೂ ಅತ್ಯಂತ ಮಹತ್ತ್ವವುಳ್ಳದ್ದಾಗಿದೆ ಎಂದು ಋಷಿಯು ವರ್ಣಿಸಿದಾನೆ. ಭೂಮಿಯ ಮೇಲಿರುವ ಈ ಏಳು ನದಿಗಳಂತೆ ಅಂತರಿಕ್ಷ (ಮಧ್ಯಸ್ಥಾನ) ಮತ್ತು ಸ್ವರ್ಗದಲ್ಲಿಯೂ ಏಳೇಳು ನದಿಗಳಿವೆಯೆಂದು (ಈ ಏಳು ಮುಖ್ಯ ನದಿಗಳ ಹೆಸರುಗಳು ಈ ಸೂಕ್ತದ ಐನೆಯ ಋಕ್ಕಿನಲ್ಲಿ ಪಠಿತವಾಗಿವೆ). **ಸಪ್ತ ಸಪ್ತ ತ್ರೇಧಾ** ಎಂಬ ಶಬ್ದಗಳಿಂದ ಋಷಿಯು ತಿಳಿಸಿದಾನೆ. ಆದರೆ ಅಂತರಿಕ್ಷದಲ್ಲಿಯೂ ಸ್ವರ್ಗದಲ್ಲಿಯೂ ಮೇಘರೂಪದಿಂದಿರುವ ಉದಕಗಳಿಗೆ ಸಪ್ತನದಿಗಳೆಂಬ ವಿಭಾಗವು ಹೇಗೆ ಎಂಬುದು ಸ್ಪಷ್ಟವಾಗಿಲ್ಲ. ಪ್ರಾಯಶಃ ಭೂಮಿಯಮೇಲಿರುವ ಏಳುನದಿಗಳ ಉದಕಗಳೆಲ್ಲವೂ ಸ್ವರ್ಗಾಂತರಿಕ್ಷಗಳಲ್ಲಿದ್ದೇ ಅಲ್ಲಿಂದ ಭೂಮಿಯ ಮೇಲೆ ಬೀಳುವುದರಿಂದ ಈ ಏಳು ನದಿಗಳೂ (ಅಥವಾ ಇವುಗಳ ಉದಕಗಳು) ಸ್ವರ್ಗಾಂತರಿಕ್ಷಗಳಲ್ಲಿದ್ದಂತಾಯಿತು ಎಂಬ ಅಭಿಪ್ರಾಯವು ಸೂಚಿತವಾಗಿರಬಹುದು.

ಈ ಋಕ್ಕಿನಲ್ಲಿ ಋಷಿಯು **ಆಪಃ**—ಎಲೈ ಉದಕಗಳೇ, ಎಂದು ಉದಕಗಳನ್ನು ಸಂಬೋಧನೆಮಾಡಿದಾನೆ. ಆದರೆ ನಿರ್ಜೀವವಸ್ತುಗಳಾದ ಉದಕಗಳಿಗೆ ಚೈತನ್ಯವುಂಟೇ? ಅವುಗಳನ್ನು ಚೇತನಾಯುಕ್ತರಾದ ಮನುಷ್ಯರಂತೆ ಅಥವಾ ದೇವತೆಗಳಂತೆ ಭಾವಿಸಬಹುದೇ? ಎಂಬ ವಿಷಯದಲ್ಲಿ ಯಾಸ್ಕರು ವಿಶೇಷವಾದ ವಿವರಣೆಯನ್ನು ಕೊಟ್ಟಿದಾರೆ—

**ಅಥಾಕಾರಚಿಂತನಂ ದೇವತಾನಾಂ। ಪುರುಷವಿಧಾಃ ಸ್ಯುರಿತ್ಯೇಕಂ। ಚೇತನಾವದ್ವದ್ಧಿ ಸ್ತುತಯೋ ಭವಂತಿ। ತಥಾಭಿಧಾನಾನಿ। ಅಥಾಪಿ ಪುರುಷವಿಧಿಕೈರಂಗೈಃ ಸಂಸ್ತೂಯಂತೇ। ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ। ಯತ್ಸಂಗೃಭ್ಣಾಮಘವನ್ಕಾಶಿರಿತ್ತೇ। ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ। ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ। ಅಥಾಪಿ ಪೌರುಷವಿಧಿಕೈಃ ಕರ್ಮಭಿಃ। ಅದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ। ಆ ಶ್ರುತ್ಕರ್ಣ ಶ್ರುಧೀ ಹವಂ॥** (ನಿ. ೭-೬)

ಋಷಿಗಳು ದೇವತೆಗಳನ್ನು ಸ್ತೋತ್ರಮಾಡುವಾಗ ಅವರಿಗೂ ಮನುಷ್ಯರಿಗಿರುವಂತೆ ಆಕಾರ ಮೊದಲಾದವುಗಳನ್ನು ಆರೋಪಿಸಿ ಅದರಂತೆ ಸ್ತೋತ್ರಮಾಡಿರುವರು. ದೇವತೆಗಳ ಆಕಾರಗಳನ್ನು ಮನುಷ್ಯರು ಹೀಗೆಯೇ ಇರುವುದೆಂದು

ನೋಡಿ ತಿಳಿಯಲು ಸಾಧ್ಯವಿಲ್ಲದಿದ್ದರೂ ಕಣ್ಣಿಗೆ ಪ್ರತಿದಿವಸವೂ ಕಾಣಿಸುತ್ತಿರುವ ಮನುಷ್ಯರಿಗಿರುವಂತೆಯೇ ಅವರಿಗೂ ಕೈಕಾಲುಗಳು, ಇತರ ಇಂದ್ರಿಯಗಳು ಇರುವುದೆಂದು ಭಾವಿಸುವುದು ಸಹಜವಾಗಿದೆ. ಅದರಂತೆಯೇ ದೇವತೆಗಳಲ್ಲಿ ಮನುಷ್ಯರಿಗಿರುವ ಅವಯವಾದಿಗಳನ್ನು ಆರೋಪಿಸಿ ಸ್ತೋತ್ರಮಾಡಿದಾರೆ. **ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ ಉತ್ಸಂಗೃಭ್ಣಾ ಮಘವನ್ನಾಕಿರಿತ್ತೇ** ಎಂಬಲ್ಲಿ ಎಲೈ ಇಂದ್ರನೇ ನಿನ್ನ ಶಕ್ತಿಯುತವಾದ ನಿನ್ನ ಬಾಹುಗಳ ಮುಷ್ಟಿಯು ಭೂಮ್ಯಂತರಿಕ್ಷಗಳನ್ನು ಬಲವಾಗಿ ಹಿಡಿದಿವೆ ಎಂದರ್ಥವಿರುವುದರಿಂದ ಇಂದ್ರನಿಗೆ ಮನುಷ್ಯರಿಗಿರುವಂತೆ ಬಾಹುಗಳೂ ಮುಷ್ಟಿಯೂ ಇರುವವು ಎಂಬುದನ್ನು ವ್ಯಕ್ತಪಡಿಸುವುದು. ಇನ್ನು ಕೆಲವು ಸಂದರ್ಭಗಳಲ್ಲಿ ಪುರುಷರಿಗಿರುವಂತೆ ದೇವತೆಗಳಿಗೂ ದ್ರವ್ಯವನ್ನು (ಸ್ವತ್ತನ್ನು) ಹೊಂದಿರುವ ಶಕ್ತಿ ಇದೆಯೆಂದು ಹೇಳಲಾಗಿದೆ. **ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ** ಎಂಬಲ್ಲಿ ಇಂದ್ರನ ಪತ್ನಿಯ ಮತ್ತು ಗೃಹದ ಪ್ರಸ್ತಾಪವಿದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಮನುಷ್ಯರು ಮಾಡುವ ಕರ್ಮಗಳನ್ನೂ ದೇವತೆಗಳಲ್ಲಿ ಆರೋಪಿಸಿದೆ **ಅದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ! ಅಶ್ರುತ್ಕರ್ಣ ಶ್ರುಧೀ ಹವಂ** . ಎಂಬ ವಾಕ್ಯಗಳಲ್ಲಿ ಎಲೈ ಇಂದ್ರನೇ, ಇಲ್ಲಿ ಸಿದ್ಧಪಡಿಸಿರುವ ಹವಿಸ್ಸನ್ನು ಭಕ್ಷಿಸು, ಸೋಮವನ್ನು ಪಾನಮಾಡು, ನಮ್ಮ ಆಹ್ವಾನವನ್ನು ನಿನ್ನ ಕಿವಿಯಿಂದ ಕೇಳು—ತಿನ್ನುವುದು, ಪಾನ ಮಾಡುವುದು, ಕೇಳುವುದು ಮೊದಲಾದ ಕರ್ಮಗಳ ಪ್ರಸ್ತಾಪವಿದೆ.

ಇನ್ನು ಕೆಲವರು ಈ ರೀತಿ ಹೇಳುತ್ತಾರೆ—

> **ಅಪುರುಷವಿಧಾಃ ಸ್ಯುರಿತ್ಯಪರಂ ।** ಅಪಿ ತು ಯದ್ದೃಶ್ಯತೇಽಪುರುಷವಿಧಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾ ಇತಿ । ಯಥೋ ಏತಚ್ಚೇತನಾವದ್ವದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂತೇ ಯಥಾಕ್ಷಪ್ರಭೃತೀನ್ಯೋಷಧಿಪರ್ಯಂತಾನಿ । ಯಥೋ ಏತತ್ಪೌರುಷವಿಧಿಕೈರಂಗೈಃ ಸಂಸ್ತೂಯಂತ ಇತ್ಯಚೇತನೇಷ್ವಪ್ಯೇತದ್ಭವತ್ಯಭಿಕ್ರಂದತಿ ಹರಿತೇಭಿರಾಸಭಿರಿತಿ ಗ್ರಾವಸ್ತುತಿಃ । ಯಥೋ ಏತತ್ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇತದಪಿ ತಾದೃಶಮೇವ । ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ಇತಿ ನದೀಸ್ತುತಿಃ ! ಯಥೋ ಏತತ್ಪೌರುಷವಿಧಿಕೈಃ ಕರ್ಮಭಿರಿತ್ಯೇತದಪಿ ತಾದೃಶಮೇವ । ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ಇತಿ ಗ್ರಾವಸ್ತುತಿರೇವ । ಅಪಿ ವೋಭಯವಿಧಾಃ ಸ್ಯುಃ ।
>
> (ನಿ. ೭.೭)

ಮತ್ತೆ ಕೆಲವರು ಈ ರೀತಿ ಹೇಳುವರು. ಮನುಷ್ಯರಿಗಿರುವಂತೆ ಅವಯವಾದಿಗಳು, ಕರ್ಮಗಳು ಮುಂತಾದವು ದೇವತೆಗಳಿಗಿಲ್ಲದೇ ಇರಬಹುದು ಆದರೆ ಅವರ ಕರ್ಮಾದಿಗಳು ಕಣ್ಣಿಗೆ ಕಾಣಿಸುತ್ತಿರುವುದರಿಂದ ಆ ದೇವತೆಗಳಲ್ಲಿ ಮನುಷ್ಯರಿಗಿರುವಂತೆ ಅವಯವಾದಿಗಳನ್ನು ಆರೋಪಿಸಿ ಸ್ತುತಿಸಲಾಗಿದೆ. ಇದರಲ್ಲಿ ತಪ್ಪೇನೂ ಇಲ್ಲ. ಹೇಗೆಂದರೆ, ಅಗ್ನಿ, ವಾಯು, ಸೂರ್ಯ, ಭೂಮಿ ಇತ್ಯಾದಿಗಳು ನಮ್ಮ ಕಣ್ಣಿಗೆ ಕಾಣುವುದಲ್ಲದೆ ಅವುಗಳ ಕರ್ಮಗಳು—ಸುಡುವುದು, ಪ್ರಕಾಶಿಸುವುದು ಇತ್ಯಾದಿ ಅನುಭವಕ್ಕೆ ಗೋಚರವಾಗುವುದರಿಂದ ಆ ದೇವತೆಗಳಿಗೆ ಅವಯವಾದಿಗಳ ಮತ್ತು ಕರ್ಮಗಳ ಆರೋಪಣೆಯು ಸಹಜವಾಗಿಯೇ ಇದೆ ಎಂದು ಹೇಳಬೇಕಾಗುವುದು. ಮತ್ತೆ ಕೆಲವು ಸಂದರ್ಭಗಳಲ್ಲಿ ಅಚೇತನವಸ್ತುಗಳಿಗೂ ಈ ರೀತಿ ಹೇಳಬೇಕಾಗಬಹುದು ಹೇಗೆಂದರೆ, ಪಗಡೆಯ ದಾಳಗಳು, ಓಷಧಿವನಸ್ಪತಿಗಳು, ನದಿಗಳು, ಸೋಮರಸವನ್ನು ಹಿಂಡುವ ಕಲ್ಲುಗಳು ಮೊದಲಾದ ನಿರ್ಜೀವ ವಸ್ತುಗಳಲ್ಲಿಯೂ ಚೈತನ್ಯವನ್ನಾರೋಪಿಸಿ ಅವುಗಳು ಮನುಷ್ಯರಂತೆ

ಕರ್ಮಗಳಲ್ಲಿ ಪ್ರವರ್ತಿಸುವುದನ್ನು ಸ್ತುತಿಸಲಾಗಿದೆ. **ಸುಖಂ ರಥಂ ಯುಯುಜೇ ಸಿಂಧುರಶ್ವಿನಂ** ಎಂಬ ಶ್ರುತಿ ವಾಕ್ಯದಲ್ಲಿ ಸಿಂಧೂನದಿಯು ರಥವನ್ನು ಹೂಡಿದಳು ಎಂದು ವರ್ಣಿಸಿ ಸ್ತುತಿಸಲಾಗಿದೆ. **ಅಭಿಕ್ರಂದಂತಿ ಹರಿತೇಭಿ-ರಾಸಭಿಃ** ಎಂಬ ವಾಕ್ಯದಲ್ಲಿ ಸೋಮವನ್ನು ಜಜ್ಜುವ ಕಲ್ಲುಗಳು (ಸೋಮಲತೆಗಳನ್ನು ಜಜ್ಜುವುದರಿಂದ ಉಂಟಾಗಿರುವ) ಹಸಿರುವರ್ಣದ ತಮ್ಮ ಮುಖ (ಬಾಯಿ)ಗಳಿಂದ ಕೂಗಿಕೊಳ್ಳುತ್ತವೆ ಎಂಬ ವಾಕ್ಯದಲ್ಲಿಯೂ ಸಹ ಕಲ್ಲುಗಳಿಗೆ ಮನುಷ್ಯರು ಬಾಯಿಯಿಂದ ಮಾತನಾಡುವಂತೆ ಇವುಗಳೂ ಶಬ್ದಮಾಡುತ್ತವೆ ಎಂಬ ಕರ್ಮವನ್ನು ಆರೋಪಿಸಿ ಸ್ತುತಿಸಲಾಗಿದೆ.

। ಸಂಹಿತಾಪಾಠಃ ।

ಪ್ರ ತೇಽರದದ್ವರುಣೋ ಯಾತವೇ ಪಥಃ ಸಿಂಧೋ ಯದ್ವಾಜಾ ಅಭ್ಯದ್ರ-
ವಸ್ತ್ವಂ ।
ಭೂಮ್ಯಾ ಅಧಿ ಪ್ರವತಾ ಯಾಸಿ ಸಾನುನಾ ಯದೇಷಾಮಗ್ರಂ ಜಗತಾಮಿ-
ರಜ್ಯಸಿ ॥ ೨ ॥

। ಪದಪಾಠಃ ।

ಪ್ರ । ತೇ । ಅರದತ್ । ವರುಣಃ । ಯಾತವೇ । ಪಥಃ । ಸಿಂಧೋ ಇತಿ । ಯತ್ । ವಾಜಾನ್ । ಅಭಿ ।
ಅದ್ರವಃ । ತ್ವಂ ।
ಭೂಮ್ಯಾಃ । ಅಧಿ । ಪ್ರವತಾ । ಯಾಸಿ । ಸಾನುನಾ । ಯತ್ । ಏಷಾಂ । ಅಗ್ರಂ । ಜಗತಾಂ ।
ಇರಜ್ಯಸಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸಿಂಧೋ ದೇವಿ ತೇ ತವ ಯಾತವೇ ಗಮನಾಯ ವರುಣೋ ದೇವಃ ಪಥೋ ಮಾರ್ಗಾನ್ಪ್ರಾರದತ್ । ಪ್ರಾಚೀನಂ ವ್ಯಲಿಖತ್ । ಸಾ ಹಿ ಪ್ರಾಕ್ ಪ್ರವಹತಿ । ಅಥವಾ ಪ್ರಕೃಷ್ಟಮಿತರನದೀಭ್ಯೋಽತ್ಯಂತಂ ವಿಸ್ತೃತಂ ವ್ಯದಾರಯತ್ । ಯದ್ಯಸ್ಮಾದ್ಧೇ ಸಿಂಧೋ ವಾಜಾನನ್ನಾನ್ಯಭಿಲಕ್ಷ್ಯ ತ್ವಮಭ್ಯದ್ರವಃ ಅಭ್ಯಗಚ್ಛಃ । ಕಿಂಚ ತ್ವಂ ಭೂಮ್ಯಾ ಅಧ್ಯುಪರಿ ಸಾನುನಾ ಸಮುಚ್ಛ್ರಿತೇನ ಪ್ರವತಾ ಮಾರ್ಗೇಣ ಯಾಸಿ । ಗಚ್ಛಸಿ । ಸಿಂಧುಃ ಖಲು ಪರ್ವತಾನ್ನಿಭಿದ್ಯ ಗತಾ । ಯದ್ಯೇನ ಸಮುಚ್ಛ್ರಿತೇನ ಮಾರ್ಗೇಣ ಗಚ್ಛಂತೀ ತ್ವಮೇಷಾಂ ಸರ್ವೇಷಾಂ ಜಗತಾಂ ಜಂಗಮಾನಾಂ ಪ್ರಾಣಿನಾಮಗ್ರಂ ಪ್ರತ್ಯಕ್ಷಮಿರಜ್ಯಸಿ ಈಶಿಷೇ ॥

॥ ಪ್ರತಿಪದಾರ್ಥ ॥

**ಸಿಂಧೋ**—ಎಲೈ ಸಿಂಧೂನದಿಯೇ । **ಯತ್**—ಯಾವ ನಿಮಿತ್ತವಾಗಿ । **ವಾಜಾನ್**—ಅನ್ನವನ್ನು ಲಕ್ಷಿಸಿ । **ತ್ವಂ**—ನೀನು । **ಅಭ್ಯದ್ರವಃ**—ವೇಗವಾಗಿ ಚಲಿಸುತ್ತಿದ್ದೀಯೋ ಆದುದರಿಂದಲೇ । **ತೇ**—ನಿನ್ನ । **ಯಾತವೇ**—ಸುಲಭ ಸಂಚಾರಕ್ಕಾಗಿ । **ವರುಣಃ**—ವರುಣದೇವನು । **ಪಥಃ**—ಮಾರ್ಗಗಳನ್ನು । **ಪ್ರಾರದತ್**—ಸೀಳಿ ಸರಿಪಡಿಸಿದ್ದಾನೆ । **ಯತ್**—ಯಾವ ಉನ್ನತಪ್ರದೇಶದಲ್ಲಿ । **ವಿಷಾಂ ಜಗತಾಂ**—ಈ ಸಕಲ ಪ್ರಾಣಿಗಳಿಗೂ । **ಅಗ್ರಂ**—ಪ್ರತ್ಯಕ್ಷವಾಗುವಂತೆ । **ಇರಜ್ಯಸಿ**—ಪ್ರಭುತ್ವವನ್ನು ಹೊಂದುವೆಯೋ ಅಂತಹ । **ಭೂಮ್ಯಾಃ ಅಧಿ**—ಪೃಥ್ವಿಯ ಮೇಲೆ । **ಸಾನುನಾ**—ತಪ್ಪಲು ಪ್ರದೇಶದಲ್ಲಿ । **ಪ್ರವತಾ**—ಇಳಿಜಾರು ಭಾಗದಲ್ಲಿ । **ಯಾಸಿ**—ಪ್ರವಹಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸಿಂಧೂನದಿಯೇ, ಯಾವ ನಿಮಿತ್ತವಾಗಿ ನೀನು ಅನ್ನಾಭಿಮುಖವಾಗಿ ವೇಗವಾಗಿ ಚಲಿಸುತ್ತಿದ್ದೀಯೋ, ಆದುದರಿಂದಲೇ, ನಿನ್ನ ಸುಲಭಸಂಚಾರಕ್ಕಾಗಿ ವರುಣದೇವನು ಮಾರ್ಗಗಳನ್ನು ಸೀಳಿ ಸರಿಪಡಿಸಿದ್ದಾನೆ. ಯಾವ ಉನ್ನತಪ್ರದೇಶದಲ್ಲಿ ಈ ಸಕಲಪ್ರಾಣಿಗಳಿಗೂ ಪ್ರತ್ಯಕ್ಷವಾಗುವಂತೆ ನೀನು ಪ್ರಭುತ್ವವನ್ನು ಹೊಂದುವೆಯೋ, ಅಂತಹ ಪೃಥ್ವಿಯ ಮೇಲೆ, ತಪ್ಪಲು ಪ್ರದೇಶದಲ್ಲಿ, ಇಳಿಜಾರುಭಾಗದಲ್ಲಿ ಪ್ರವಹಿಸುತ್ತೀಯೆ.

English Translation

For your course, Sindhu, Varuna tore open a path, since you hastened towards food; you go by a lofty road down upon the earth, by which (road) you reign in the sight of all worlds.

॥ ವಿಶೇಷವಿಷಯಗಳು ॥

ಎಲೈ ಸಿಂಧುನದಿಯೇ, ನೀನು ಎತ್ತರವಾದ ಪರ್ವತಾದಿಗಳ ಕಡಿದಾದ ಪ್ರದೇಶದಲ್ಲಿ ಪ್ರವಹಿಸುತ್ತೀಯೆ. ನೀನು ಹರಿಯುವ ಇಂತಹ ದುರ್ಗಮವಾದ ಮಾರ್ಗವನ್ನು ವರುಣನು ನಿನಗಾಗಿ ಪರ್ವತಾದಿಗಳನ್ನು ಸೀಳಿ ಸುಲಭವಾಗಿ ಹರಿಯುವಂತೆ ನಿರ್ಮಿಸಿಕೊಟ್ಟಿರುವನು. ನೀನು ಪ್ರವಹಿಸುವುದರಿಂದ ನಿನ್ನ ಉದಕಗಳು ಸಸ್ಯಾಭಿವೃದ್ಧಿಗೆ ಕಾರಣವಾಗಿ ಆ ಮೂಲಕ ಸಮಸ್ತಪ್ರಾಣಿಗಳಿಗೂ ಅನ್ನಾದ್ಯಾಹಾರಗಳನ್ನು ಒದಗಿಸುತ್ತವೆ. ಈ ರೀತಿ ಪ್ರಾಣಿಗಳಿಗೆ ಆಹಾರಾದಿಗಳನ್ನು ಒದಗಿಸುವ ಸಲುವಾಗಿಯೇ ಎಂದರೆ ಲೋಕೋಪಕಾರಾರ್ಥವಾಗಿಯೇ ನೀನು ಪ್ರವಹಿಸುತ್ತಿದ್ದೀಯೆ. ಆದ್ದರಿಂದ ನೀನು ಸಮಸ್ತರಿಗೂ ಪ್ರಭುವಾಗಿರುವೆ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ದಿವಿ ಸ್ವನೋ ಯತತೇ ಭೂಮ್ಯೋಪರ್ಯನಂತಂ ಶುಷ್ಮಮುದಿಯರ್ತಿ ಭಾನುನಾ ।**

ಅಭ್ರಾದಿವ ಪ್ರ ಸ್ತನಯಂತಿ ವೃಷ್ಟಯಃ ಸಿಂಧುರ್ಯದೇತಿ ವೃಷಭೋ ನ ರೋರುವತ್ ॥ ೩ ॥

॥ ಪದಪಾಠಃ ॥

ದಿವಿ। ಸ್ವನಃ। ಯತತೇ । ಭೂಮ್ಯಾ । ಉಪರಿ । ಅನಂತಂ। ಶುಷ್ಮಂ । ಉತ್ । ಇಯರ್ತಿ । ಭಾನುನಾ । ಅಭ್ರಾತ್ऽಇವ । ಪ್ರ । ಸ್ತನಯಂತಿ । ವೃಷ್ಟಯಃ । ಸಿಂಧುಃ । ಯತ್ । ಏತಿ । ವೃಷಭಃ । ನ । ರೋರು-ವತ್ ॥ ೩ ॥

। ಸಾಯಣಭಾಷ್ಯಂ ।

ಭೂಮ್ಯೋಪರಿ ಭೂಮೇರುಪರಿ ಪ್ರವರ್ತಮಾನಃ ಸ್ವನೋ ದಿವಿ ಯತತೇ । ಗಚ್ಛತಿ । ದಿವಂ ಪ್ರಾಪ್ನೋತಿ । ಸೇಯಂ ಸಿಂಧುರನಂತಮಪರ್ಯಂತಂ ಶುಷ್ಮಂ ವೇಗಂ ಭಾನುನಾ ದೀಪ್ತೇನೋರ್ಮಿ-ಣೋದಿಯರ್ತಿ । ಉದ್ಗಮಯತಿ । ಅಭ್ರಾದಿವಾಂತರಿಕ್ಷಾದ್ಯಥಾ ವೃಷ್ಟಯಃ ಪ್ರ ಸ್ತನಯಂತಿ ತದ್ವದಸ್ಯಾಃ ಶಬ್ದಾಃ ಪ್ರಾದುರ್ಭವಂತಿ । ಯದ್ಯದಾ ಸಿಂಧುರಿಯಂ ರೋರುವದ್ಭೃಶಂ ಶಬ್ದಯನ್ ವೃಷಭೋ ನ ವೃಷಭ ಇವೈತಿ ಗಚ್ಛತಿ ತದೈವಂ ಭವತಿ ॥

।ಪ್ರತಿಪದಾರ್ಥ।

**ಭೂಮ್ಯಾಃ**—ಪೃಥ್ವಿಯ । **ಉಪರಿ**—ಮೇಲ್ಭಾಗದಲ್ಲಿ ಪ್ರಕಟಿತವಾದ । **ಸ್ವನಃ**—ಶಬ್ದವು । **ದಿವಿ**—ಮೇಲಿನ ಅಂತರಿಕ್ಷಕ್ಕೆ । **ಯತತೇ**—ಪ್ರಸರಿಸಿ ಹೋಗುತ್ತದೆ (ಎಲೈ ಸಿಂಧುವೇ) । **ಅನಂತಂ**—ಕೊನೆಯಿಲ್ಲದ । **ಶುಷ್ಮಂ**—ನಿನ್ನ ವೇಗವನ್ನು । **ಭಾನುನಾ**—ತೇಜೋರೂಪದಲ್ಲಿ । **ಉದಿಯರ್ತಿ**—ಪ್ರೇರಿಸಿ ಹರಡುತ್ತೀಯೆ । **ಯತ್**—ಯಾವಾಗ । **ಸಿಂಧುಃ**—ಸಿಂಧುವು । **ವೃಷಭೋ ನ**—ವೃಷಭದಂತೆ । **ರೋರುವತ್**—ಶಬ್ದ ಮಾಡುತ್ತ । **ಏತಿ**—ಹರಿಯುವುದೋ ಆಗ । **ಅಭ್ರಾತ್**—ಅಂತರಿಕ್ಷಸ್ಥವಾದ ಮೇಘದಿಂದ । **ವೃಷ್ಟಯ ಇವ**—ವೃಷ್ಟಿಗಳು ಶಬ್ದಮಾಡಿಕೊಂಡು ಬೀಳುವಂತೆ । **ಪ್ರ ಸ್ತನಯಂತಿ**—ಸಿಂಧುವಿನ ಪ್ರವಾಹವು ಶಬ್ದಮಾಡಿಕೊಂಡು ಹರಿಯುತ್ತದೆ.

॥ ಭಾವಾರ್ಥ ॥

ಪೃಥ್ವಿಯ ಮೇಲ್ಭಾಗದಲ್ಲಿ ಪ್ರಕಟಿತವಾದ ನದಿಯ ಶಬ್ದವು ಮೇಲಿನ ಅಂತರಿಕ್ಷಕ್ಕೆ ಪ್ರಸರಿಸಿ ಹೋಗುತ್ತದೆ. ಎಲೈ ಸಿಂಧುವೇ, ಕೊನೆಯಿಲ್ಲದ ನಿನ್ನ ವೇಗವನ್ನು ತೇಜೋರೂಪದಲ್ಲಿ ಪ್ರಸರಿಸಿ ಹರಡುತ್ತೀಯೆ. ಯಾವಾಗ ಸಿಂಧುವು ವೃಷಭದಂತೆ ಶಬ್ದಮಾಡುತ್ತ ಹರಿಯುವುದೋ ಆಗ ಅಂತರಿಕ್ಷಸ್ಥವಾದ ಮೇಘದಿಂದ ವೃಷ್ಟಿಯು ಶಬ್ದಮಾಡಿಕೊಂಡು ಬೀಳುವಂತೆ, ಸಿಂಧುವಿನ ಪ್ರವಾಹವು ಶಬ್ದಮಾಡಿಕೊಂಡು ಹರಿಯುತ್ತದೆ.

## English Translation

The sound goes forth in heaven above the earth; (Sindhu) with shining wave animates his endless speed; as rains issue thundering from the cloud, so Sindhu, (thunders) when it advances roaring like a bull.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಸಿಂಧುನದಿಯು ಹರಿಯುವ ವೇಗವನ್ನೂ ಹರಿಯುವಾಗ ಮಾಡುವ ಶಬ್ದವನ್ನೂ ವರ್ಣಿಸಿದೆ. ಪ್ರವಾಹದ ಭೋರ್ಗರೆಯುವ ಶಬ್ದವನ್ನು ಭಾರಿಯಾದ ಮಳೆಯ ಶಬ್ದಕ್ಕೆ ಹೋಲಿಸಿದೆ.

॥ ಸಂಹಿತಾಪಾಠಃ ॥

ಅಭಿ ತ್ವಾ ಸಿಂಧೋ ಶಿಶುಮಿನ್ನ ಮಾತರೋ ವಾಶ್ರಾ ಅರ್ಷಂತಿ ಪಯಸೇವ ಧೇನವಃ ।
ರಾಜೇವ ಯುಧ್ವಾ ನಯಸಿ ತ್ವಮಿತ್ಸಿಚೌ ಯದಾಸಾಮಗ್ರಂ ಪ್ರವತಾಮಿನಕ್ಷಸಿ ॥ ೪ ॥

॥ ಪದಪಾಠಃ ॥

ಅಭಿ । ತ್ವಾ । ಸಿಂಧೋ ಇತಿ । ಶಿಶುಂ । ಇತ್ । ನ । ಮಾತರಃ । ವಾಶ್ರಾಃ । ಅರ್ಷಂತಿ । ಪಯಸಾಇವ । ಧೇನವಃ ।
ರಾಜಾಇವ । ಯುಧ್ವಾ । ನಯಸಿ । ತ್ವಂ । ಇತ್ । ಸಿಚೌ । ಯತ್ । ಆಸಾಂ । ಅಗ್ರಂ । ಪ್ರವತಾಂ । ಇನಕ್ಷಸಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸಿಂಧೋ ತ್ವಾ ತ್ವಾಂ ಶಿಶುಮಿನ್ನ ಮಾತರಃ ಪುತ್ರಮಿವ ವಾಶ್ರಾಃ ಶಬ್ದಯಂತ್ಯ ಇತರಾ ನದ್ಯೋಽಭ್ಯರ್ಷಂತಿ । ಅಭಿಗಚ್ಛಂತಿ । ಪಯಸೇವ ಧೇನವಃ ಪಯಸಾ ಯುಕ್ತಾ ನವಪ್ರಸೂತಿಕಾ ಗಾವ ಇವ । ಕಿಂಚ ಯುಧ್ವಾ ಯುದ್ಧಕೃದ್ರಾಜೇವ ತ್ವಮಿತ್ತ್ವಮೇವ ಸಿಚೌ ಸಿಚ್ಯಮಾನೌ ತಟೌ ನಯಸ್ಯುದಕಪೂರಂ ಯದ್ಯದಾಸಾಂ ಪ್ರವತಾಂ ತ್ವಯಾ ಸಹ ಗಚ್ಛಂತೀನಾಮಗ್ರಮಗ್ರ ಇನಕ್ಷಸಿ ವ್ಯಾಪ್ನೋಷಿ ಸರ್ವಾಸಾಂ ಪುರತೋ ಗಚ್ಛಸಿ ॥

॥ ಪ್ರತಿಪದಾರ್ಥ ॥

**ಸಿಂಧೋ**—ಎಲೈ ಸಿಂಧುವೇ । **ಮಾತರಃ**—ತಾಯಿಯರು । **ಶಿಶುಮಿನ್ನ**—ತಮ್ಮ ಪುತ್ರರನ್ನು ಕರೆದು ಕೂಗುವಂತೆ । **ವಾಶ್ರಾಃ**—ಶಬ್ದಮಾಡತಕ್ಕ ಇತರ ನದಿಗಳು । **ಪಯಸಾ**—ಕ್ಷೀರದಿಂದ ತುಂಬಿದ । **ಧೇನವ ಇವ**—ಗೋವುಗಳಂತೆ । **ತ್ವಾ ಅಭ್ಯರ್ಷಂತಿ**—ನಿನ್ನ ಕಡೆಗೆ ಬರುತ್ತವೆ । **ಯತ್**—ಯಾವಾಗ । **ಆಸಾಂ ಪ್ರವತಾಂ**—ನಿನ್ನೊಡನೆ ಹರಿಯುವ ಇತರ ನದಿಗಳ । **ಅಗ್ರಂ**—ಮುಂಭಾಗದಲ್ಲಿ । **ಇನಕ್ಷಸಿ**—ನೀನು ವ್ಯಾಪಿಸುತ್ತಾ

ಪ್ರವಹಿಸುವೆಯೋ ಆಗ । **ಯುಧ್ವಾ**—ಯುದ್ಧಕ್ಕಾಗಿ ಹೊರಟಿರುವ । **ರಾಜೇವ**—ರಾಜನಂತೆ । **ಸಿಚೌ**—ತೊಯ್ಯಲ್ಪಟ್ಟ ದಡಗಳನ್ನು । **ನಯಸಿ**—ದಾಟಿ ಮುನ್ನುಗ್ಗುತ್ತೀಯೆ.

॥ ಭಾವಾರ್ಥ ॥

ಎಲೈ ಸಿಂಧುವೇ, ತಾಯಿಯರು ಆದರದಿಂದ ಪುತ್ರರನ್ನು ಕರೆದು ಕೂಗುವಂತೆ ಶಬ್ದಮಾಡತಕ್ಕ ಇತರ ಉಪನದಿಗಳು ಕ್ಷೀರಯುಕ್ತವಾದ ಧೇನುಗಳಂತೆ ನಿನ್ನ ಕಡೆಗೆ ಬರುತ್ತಿವೆ. ನಿನ್ನೊಡನೆ ಹರಿಯುವ ಇತರ ನದಿಗಳಿಗೆ ಮುಖ್ಯವಾಗಿದ್ದು ಯಾವಾಗ ಪ್ರವಹಿಸುವೆಯೋ ಆಗ ನೀನು ರಾಜನಂತೆ ಎರಡು ದಡಗಳನ್ನು ದಾಟಿ ಪ್ರವಹಿಸುತ್ತೀಯೆ.

## English Translation

Like mothers crying for their sons, (the othēr rivers) hasten toward you, Sindhu, like milch cows with their milk ; you lead your two wings like a king going to battle when you march in the van of the streams that are descending (with you).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಉಪನದಿಗಳ ಪ್ರಸ್ತಾಪವಿದೆ. ಆಗತಾನೆ ಕರುವನ್ನು ಹಾಕಿರುವ ಗೋವುಗಳು ಯಾವರೀತಿ ಪ್ರೀತಿಯಿಂದ ಕೂಗುತ್ತಾ ತಮ್ಮ ಕರುಗಳ ಬಳಿಗೆ ಹೋಗುವವೋ ಅದರಂತೆ ನಿನ್ನ ಉಪನದಿಗಳು ಪ್ರವಹಿಸುವಾಗ ಶಬ್ದಮಾಡುತ್ತಾ ನಿನ್ನನ್ನು ಸೇರಿಕೊಳ್ಳುತ್ತವೆ. ಈ ನದಿಗಳಿಗೆಲ್ಲಾ ನೀನೇ ಮುಖ್ಯವಾಗಿದ್ದು ಅವುಗಳ ಉದಕಗಳೊಡನೆ ನಿನ್ನ ದಡಗಳನ್ನು ಅತಿಕ್ರಮಿಸಿ ತುಂಬಿ ಯುದ್ಧಮಾಡುವ ರಾಜನ ಗಮನದಂತೆ ಹರಿಯುತ್ತಾ ಪ್ರವಹಿಸುತ್ತೀಯೆ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥ ೫ ॥

। ಪದಪಾಠಃ ॥

ಇಮಂ । ಮೇ । ಗಂಗೇ । ಯಮುನೇ । ಸರಸ್ವತಿ । ಶುತುದ್ರಿ । ಸ್ತೋಮಂ । ಸಚತ । ಪರುಷ್ಣಿ । ಆ ।
ಕ್ನ್ಯಾ । ಮರುತ್ಽವೃಧೇ । ವಿತಸ್ತಯಾ । ಆರ್ಜೀಕೀಯೇ । ಶೃಣುಹಿ । ಆ । ಸುಽಸೋಮಯಾ ॥ ೫ ॥

॥ ಸಾಯಣಭಾಷ್ಯಂ ॥

ಅತ್ರ ಪ್ರಧಾನಭೂತಾಃ ಸಪ್ತ ನದ್ಯಸ್ತದವಯವಭೂತಾ ನದ್ಯಸ್ತಿಸ್ರಃ ಸ್ತೂಯಂತೇ । ಹೇ ಗಂಗೇ ಹೇ ಯಮುನೇ ಹೇ ಸರಸ್ವತಿ ಹೇ ಶುತುದ್ರಿ ಹೇ ಪರುಷ್ಣಿ । ಹೇ ಅಸಿಕ್ನ್ಯಾವಯವಭೂತಯಾ ಸಹಿತೇ ಮರುದ್ವೃಧೇ ಹೇ ವಿತಸ್ತಯಾ ಸುಷೋಮಯಾ ಚ ಸಹಿತ ಆರ್ಜೀಕೀಯೇ ತ್ವಂ ಚ ಏವಂ ಸಪ್ತ ನದ್ಯಃ ಯೂಯಂ ಮೇ ಸ್ತೋಮಂ ಸ್ತೋತ್ರಮಸ್ಮದೀಯಮಾ ಸಚತ । ಆಸೇವಧ್ವಂ । ಶೃಣುಹಿ । ಶೃಣುತ । ಆರ್ಜೀಕೀಯಯಾಯಾ ವಿತಸ್ತಯಾ ಸುಷೋಮಯಾ ಚ ಸಾಹಿತ್ಯಂ ನಿರುಕ್ತ ಉಕ್ತಂ । ವಿತಸ್ತಯಾ ಚಾರ್ಜೀಕೀಯ ಆ ಶೃಣುಹಿ ಸುಷೋಮಯಾ ಚೇತಿ । ಅತ್ರ ಗಂಗಾ ಗಮನಾದಿತ್ಯಾದಿ ನಿರುಕ್ತಂ ದ್ರಷ್ಟವ್ಯಂ । ೯-೨೬ । ॥ ೬ ॥

। ಪ್ರತಿಪದಾರ್ಥ ।

**ಗಂಗೇ**—ಎಲೈ ಗಂಗಾನದಿಯೇ । **ಯಮುನೇ**—ಎಲೈ ಯಮುನೆಯೇ । **ಸರಸ್ವತಿ**—ಎಲೈ ಸರಸ್ವತಿಯೇ । **ಶುತುದ್ರಿ**—ಎಲೈ ಶುತುದ್ರಿಯೇ । **ಪರುಷ್ಣಿ**—ಎಲೈ ಪರುಷ್ಣಿಯೇ । **ಅಸಿಕ್ನ್ಯಾ**—ಅಸಿಕ್ನೀ ನದಿಯೊಂದಿಗೆ ಕೂಡಿದ । **ಮರುದ್ವೃಧೇ**—ಎಲೈ ಮರುದ್ವೃಧಾನದಿಯೇ । **ವಿತಸ್ತಯಾ**—ವಿತಸ್ತಾನದಿಯಿಂದಲೂ । **ಸುಷೋಮಯಾ**—ಸುಷೋಮಾನದಿಯೊಡನೆಯೂ ಕೂಡಿದ । **ಆರ್ಜೀಕೀಯೇ**—ಎಲೈ ಆರ್ಜೀಕಾನದಿಯೇ । **ಮೇ**—ನನ್ನಿಂದ ಪಠಿತವಾದ । **ಇಮಂ ಸ್ತೋಮಂ**—ಈ ಸ್ತೋತ್ರವನ್ನು । **ಆ ಶೃಣುತ**—ಕೇಳಿರಿ । **ಆ ಸಚತ**—ಸೇವಿಸಿರಿ.

। ಭಾವಾರ್ಥ ।

ಎಲೈ ಗಂಗೆಯೇ, ಎಲೈ ಯಮುನೆಯೇ, ಎಲೈ ಸರಸ್ವತಿಯೇ, ಎಲೈ ಶುತುದ್ರಿಯೇ, ಎಲೈ ಪರುಷ್ಣಿಯೇ, ಅಸಿಕ್ನಿಯೊಡಗೂಡಿದ ಎಲೈ ಮರುದ್ವೃಧೆಯೇ, ವಿತಸ್ತೆಯೊಡನೆಯೂ, ಸುಷೋಮಾನದಿಯೊಡನೆಯೂ ಕೂಡಿದ ಎಲೈ ಆರ್ಜೀಕಾನದಿಯೇ, ನನ್ನಿಂದ ಪಠಿತವಾದ ಈ ಸ್ತೋತ್ರವನ್ನು ಕೇಳಿರಿ. ಮತ್ತು ಸೇವಿಸಿರಿ.

## English Translation

Accept this my praise, Ganga, Yamuna, Sarasvati, Shutudri, Parushni, Marudvridha with Asikni and Vitasta ; listen, Arjikiya with Sushoma.

॥ ವಿಶೇಷವಿಷಯಗಳು ॥

ಈ ಏಳು ಮುಖ್ಯನದಿಗಳ ಹೆಸರುಗಳ ಜತೆಗೆ ಇನ್ನೂ ಕೆಲವು ನದಿ ಅಥವಾ ಉಪನದಿಗಳ ಹೆಸರುಗಳನ್ನು ಹೇಳಿದೆ. **ಗಂಗೆ, ಯಮುನೆ, ಸರಸ್ವತಿ, ಶುತುದ್ರಿ,** ಪರುಷ್ಣಿ, ಅಸಿಕ್ನಿ **ಮರುದ್ವೃಧೇ, ವಿತಸ್ತಿ ಆರ್ಜೀಕೀ ಸುಷೋಮಾ** ಎಂಬ ಹತ್ತು ನದಿಗಳ ಹೆಸರುಗಳು ಇಲ್ಲಿ ಉಕ್ತವಾಗಿವೆ. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಪರುಷ್ಣಿ ಸ್ತೋಮಮಾಸೇವಧ್ವಮಸಿಕ್ನ್ಯಾ ಚ ಸಹ ಮರುದ್ವೃಧೇ ವಿತಸ್ತಯಾ ಚಾರ್ಜೀಕೀಯ ಆಶೃಣುಹಿ ಸುಷೋಮಯಾ ಚೇತಿ ಸಮಸ್ತಾರ್ಥಃ ॥

ಅಥೈಕಪದನಿರುಕ್ತಂ—ಗಂಗಾ ಗಮನಾತ್ ॥

ಯಮುನಾ ಪ್ರಯುವತೀ ಗಚ್ಛತೀತಿ ವಾ ಪ್ರವಿಯುತಂ ಗಚ್ಛತೀತಿ ವಾ ॥

ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ ॥

ಶುತುದ್ರೀ ಶುದ್ರಾವಿಣೀ ಕ್ಷಿಪ್ರದ್ರಾವಿಣ್ಯಾಶು ತುನ್ನೇವ ದ್ರವತೀತಿ ವಾ ॥

ಇರಾವತೀಂ ಪರುಷ್ಣೀತ್ಯಾಹುಃ—ಪರ್ವವತೀ ಭಾಸ್ವತೀ ಕುಟಿಲಗಾಮಿನೀ ॥

ಅಸಿಕ್ನ್ಯಶುಕ್ಲಾಸಿತಾ—ಸಿತಮಿತಿ ವರ್ಣನಾಮ ತತ್ಪ್ರತಿಷೇಧೋಽಸಿತಂ ॥

ಮರುದ್ವೃಧಾಃ ಸರ್ವಾ ನದ್ಯೋ ಮರುತ ಏನಾ ವರ್ಧಯಂತಿ ವಿತಸ್ತಾವಿದಗ್ಧಾ ವಿವೃದ್ಧಾ ಮಹಾಕೂಲಾ ॥

ಆರ್ಜೀಕೀಯಾಂ ವಿಪಾಡಿತ್ಯಾಹುಃ । ಋಜೀಕಪ್ರಭವಾ ವರ್ಜುಗಾಮಿನೀ ವಾ ವಿಪಾಡ್ವಿಪಾಟನಾದ್ವಾ ವಿಪ್ರಾಶನಾದ್ವಾ ವಿಪ್ರಾಪಣಾದ್ವಾ ಪಾಶಾ ಅಸ್ಯಾಂ ವ್ಯಪಾಶ್ಯಂತ ವಸಿಷ್ಠಸ್ಯ ಮುಮೂರ್ಷತಸ್ತಸ್ಮಾದ್ವಿಪಾಡುಚ್ಯತೇ ॥ ಪೂರ್ವಮಾಸೀದುರುಂಜಿರಾ ॥

ಸುಷೋಮಾ ಸಿಂಧುರ್ಯದೇನಾಮಭಿಪ್ರಸುವಂತಿ ನದ್ಯಃ ॥

ಸಿಂಧುಃ ಸ್ಯಂದನಾತ್ ॥

(ನಿ. ೯–೨೬)

ಎಲೈ ಗಂಗೆ, ಯಮುನೇ, ಸರಸ್ವತಿ, ಪರುಷ್ಣಿಯಿಂದ ಕೂಡಿರುವ ಶುತುದ್ರಿ, ಅಸಿಕ್ನಿಯೊಡನಿರುವ ಮರುದ್ವೃಧೆ, ವಿತಸ್ತೆಯೊಡನಿರುವ ಆರ್ಜೀಕೀಯೇ, ನೀವೆಲ್ಲರೂ ನಾನು ಪಠಿಸುತ್ತಿರುವ ಈ ಸ್ತೋತ್ರವನ್ನು ಕೇಳಿ ಎಂದು ಈ ಋಕ್ಕಿನ ಒಟ್ಟರ್ಥವು. ಈ ಗಂಗಾದಿಪ್ರತಿಶಬ್ದಕ್ಕೂ ನಿರುಕ್ತವನ್ನು ಎಂದರೆ ಅವಯವಾರ್ಥವನ್ನು ಹೇಳಲಾಗುವುದು—

**ಗಂಗಾ**—ಹೋಗು (ಪ್ರವಹಿಸು) ಎಂಬರ್ಥವಿರುವ ಗಮ್ಲೃಧಾತುವಿನಿಂದ ನಿಷ್ಪನ್ನವಾದ ಗಮನಾರ್ಥವಾಚಕ ಶಬ್ದದಿಂದ **ಗಂಗಾ** ಎಂಬ ಶಬ್ದವು ನಿಷ್ಪನ್ನವಾಗಿದೆ.

**ಯಮುನಾ**—ಇತರ ನದಿಗಳೊಡನೆ ಮಿಶ್ರಿತವಾಗಿ (ಸೇರಿ) ಹರಿಯುವುದರಿಂದ ಅಥವಾ ನಿಧಾನವಾಗಿ ಅಥವಾ ಶಬ್ದರಹಿತವಾಗಿ ಹರಿಯುವುದರಿಂದ ಈ ನದಿಗೆ ಯಮುನಾ ಎಂದು ಹೆಸರು.

**ಸರಸ್ವತೀ**—**ಸರಃ** ಎಂದರೆ ಉದಕವು. ಉದಕವುಳ್ಳ ಎಂದರೆ ಹೆಚ್ಚಾಗಿ ನೀರಿರುವುದರಿಂದ ಅಥವಾ ನಿಲ್ಲದೆ ಸರಿಯುತ್ತಿರುವುದರಿಂದ (ಪ್ರವಹಿಸುತ್ತಿರುವುದರಿಂದ) ಈ ನದಿಗೆ ಸರಸ್ವತಿಯೆಂದು ಹೆಸರು.

**ಶುತುದ್ರಿ**—ವೇಗವಾಗಿ ಓಡಿಹೋಗುವುದರಿಂದ ಅಥವಾ ವೇಗವಾಗಿ ಪ್ರವಹಿಸುವುದರಿಂದ ಅಥವಾ ಇತರರ ಪ್ರೇರಣೆಯಿಂದ ಓಡುವವರಂತೆ ವೇಗವಾಗಿ ಪ್ರವಹಿಸುತ್ತಿರುವುದರಿಂದ ಈ ನದಿಗೆ ಶುತುದ್ರಿ ಎಂದು ಹೆಸರು.

**ಪರುಷ್ಣೀ**—ಇರಾವತೀನದಿಯನ್ನೇ ಪರುಷ್ಣಿನದಿಯೆಂದು ಕರೆಯುವರು. ಪರುಷ್ಣಿ ಎಂದರೆ ಪರ್ವ ಅಥವಾ ಗಿಣ್ಣು (ಗಂಟು) ಗಳುಳ್ಳದ್ದು ಎಂದರ್ಥವು. ಈ ನದಿಯು ಡೊಂಕುಡೊಂಕಾಗಿ ಹರಿಯುತ್ತಿರುವುದರಿಂದ ಈ ನದಿಗೆ ಪರುಷ್ಣೀ ಎಂಬ ಹೆಸರು ಬಂದಿದೆ.

**ಅಸಿಕ್ನೀ**—ಬೆಳ್ಳಗಿಲ್ಲದಿರುವುದು, ಕಪ್ಪಾಗಿರುವುದು ಎಂದರ್ಥವು. ಸಿತಂ ಎಂದರೆ ಬೆಳ್ಳಗಿರುವುದು. **ಅಸಿತ**ವೆಂದರೆ ಬೆಳ್ಳಗಿಲ್ಲದಿರುವುದು, ಕಪ್ಪಾಗಿರುವುದು ಎಂದರ್ಥವು. ಈ ನದಿಯ ನೀರು ಶುಭ್ರವಾಗಿಲ್ಲದೆ ಸ್ವಲ್ಪ ಕಪ್ಪುಛಾಯೆಯುಳ್ಳದ್ದಾಗಿರುವುದರಿಂದ ಈ ನದಿಗೆ **ಅಸಿಕ್ನೀ** ಎಂಬ ಹೆಸರು ಬಂದಿರುವುದು.

**ಮರುದ್ವೃಧೇ**—ಇತರ ಎಲ್ಲಾ (ಇದರ ಉಪನದಿಗಳು) ನದಿಗಳಿಂದಲೂ, ಗಾಳಿಯಿಂದಲೂ ಈ ನದಿಯು ವೃದ್ಧಿಯನ್ನು ಹೊಂದಿ ಉಕ್ಕಿ ಹರಿಯುತ್ತಿರುವುದರಿಂದ ಇದಕ್ಕೆ ಮರುದ್ವೃಧೆಯೆಂದು ಹೆಸರು.

**ವಿತಸ್ತಾ**—ಸುಟ್ಟಿಲ್ಲದ ಎಂದರೆ ಹಸಿಯ ಜಿಗುಟುಮಣ್ಣಿನಿಂದ ಕೂಡಿದ ಎತ್ತರವಾದ ದಡಗಳುಳ್ಳ ನದಿ ಎಂದರ್ಥವು.

**ಆರ್ಜೀಕೀಯಾ**—ಇದಕ್ಕೆ **ವಿಪಾಡ್** ಎಂದೂ ಹೆಸರು. ಈ ನದಿಯು ಋಜೀಕ ಎಂಬ ದೇಶದಲ್ಲಿ ಹುಟ್ಟಿ ಹರಿಯುತ್ತಿರುವುದರಿಂದಲೂ ಅಥವಾ ಡೊಂಕು (ತಿರುವು) ಗಳಿಲ್ಲದೆ ನೇರವಾಗಿ ಹರಿಯುತ್ತಿರುವುದರಿಂದಲೂ ಈ ನದಿಗೆ **ಆರ್ಜೀಕೀಯಾ** ಎಂದು ಹೆಸರು.

**ವಿಪಾಟ್**—ಈ ನದಿಯು ಹರಿಯುವಾಗ ತನ್ನ ದಡಗಳನ್ನು ಅತಿಕ್ರಮಿಸಿ ಹರಿಯುವುದರಿಂದಲೂ ಅಥವಾ ತನ್ನನ್ನು ಬಂಧಿಸಿರುವ ಎರಡು ದಡಗಳನ್ನು ಮೀರಿ ಹರಿಯುವುದರಿಂದಲೂ ಅಥವಾ ದಡಗಳಿಂದಾಚೆಗೆ ವಿಸ್ತಾರವಾಗಿ ಹಬ್ಬಿ ಹರಿಯುವುದರಿಂದಲೂ ಈ ನದಿಗೆ **ವಿಪಾಡ್** ಎಂದು ಹೆಸರು. ಪೂರ್ವದಲ್ಲಿ ವಸಿಷ್ಠಋಷಿಯ ಪುತ್ರರು ಮೃತರಾಗಲು ಪುತ್ರಶೋಕವನ್ನು ಸಹಿಸಲಾರದೆ ಆ ಋಷಿಯು ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಬಯಸಿ ತನ್ನನ್ನು ಪಾಶ (ಹಗ್ಗ) ಗಳಿಂದ ಕೈಕಾಲುಗಳನ್ನು ಕಟ್ಟಿಕೊಂಡು ಈ ವಿಪಾಟ್ ನದಿಯಲ್ಲಿ ಮುಳುಗಿದನು. ಆದರೆ ಆ ನದಿಯು ಇವನನ್ನು ಕೊಲ್ಲಲಿಚ್ಛಿಸದೆ ಇವನ ಪಾಶಗಳನ್ನು ಕಿತ್ತುಹಾಕಿ ಬದುಕಿಸಿತು. ಈ ರೀತಿ ಪಾಶಗಳನ್ನು ಕಿತ್ತುಹಾಕಿದುದರಿಂದ ಈ ನದಿಗೆ **ವಿಪಾಟ್** ಎಂಬ ಹೆಸರು ಬಂದಿತು. ಪೂರ್ವದಲ್ಲಿ ಈ ನದಿಗೆ ಉರುಂಜಿರಾ—ಬಹಳವಾದ ನೀರುಳ್ಳ ನದಿ ಎಂಬ ಹೆಸರಿದ್ದಿತು.

**ಸುಷೋಮಾ**—ಈ ನದಿಗೇ ಸಿಂಧೂನದಿಯೆಂದೂ ಹೆಸರು. ಏಕೆಂದರೆ ಎಲ್ಲಾ ನದಿಗಳೂ (ಇದರ ಉಪನದಿಗಳೂ) ಇದರೊಡನೆ ಸೇರುವುದಕ್ಕಾಗಿ (ಸಂಗಮಕ್ಕಾಗಿ) ಇದರ ಬಳಿಗೆ ಹರಿದುಹೋಗುವವು. **ಸಿಂಧು** ಶಬ್ದಕ್ಕೆ ಹರಿಯುವುದು ಎಂದರ್ಥವು. ಕೆಲವರು ಈ ನದಿಯ ದಡದಲ್ಲಿ ಉತ್ತಮವಾದ ಸೋಮಲತೆಗಳು ಬೆಳೆಯುತ್ತಿದ್ದುದರಿಂದ ಈ ನದಿಗೆ **ಸುಷೋಮಾ** (ಸು+ಸೋಮ) ಎಂಬ ಹೆಸರು ಬಂದಿರಬಹುದೆಂದು ಅಭಿಪ್ರಾಯಪಡುತ್ತಾರೆ.

॥ ಸಂಹಿತಾಪಾಠಃ ॥

ತೃಷ್ಟಾಮಯಾ ಪ್ರಥಮಂ ಯಾತವೇ ಸಜೂಃ ಸುಸರ್ತ್ವಾ ರಸಯಾ ಶ್ವೇತ್ಯಾ ತ್ಯಾ ।

ತ್ವಂ ಸಿಂಧೋ ಕುಭಯಾ ಗೋಮತೀಂ ಕ್ರುಮುಂ ಮೇಹತ್ನ್ವಾ ಸರಥಂ
ಯಾಭಿರೀಯಸೇ ॥ ೬ ॥

॥ ಪದಪಾಠಃ ॥

ತೃಷ್ಟಽಅಮಯಾ । ಪ್ರಥಮಂ । ಯಾತವೇ । ಸಽಜೂಃ । ಸುಽಸರ್ತ್ವಾ । ರಸಯಾ । ಶ್ವೇತ್ಯಾ । ತ್ಯಾ । ತ್ವಂ । ಸಿಂಧೋ ಇತಿ । ಕುಭಯಾ । ಗೋಽಮತೀಂ । ಕ್ರುಮುಂ । ಮೇಹತ್ನ್ವಾ । ಸಽರಥಂ । ಯಾಭಿಃ । ಈಯಸೇ ॥ ೬ ॥

। ಸಾಯಣಭಾಷ್ಯಂ ॥

ಹೇ ಸಿಂಧೋ ತ್ವಂ ಕ್ರುಮುಂ ಕ್ರಮಣಶೀಲಾಂ ಗೋಮತೀಂ ನದೀಂ ಯಾತವೇ ಪ್ರತಿಯಾತುಂ ಪರ್ವತಾದವರೂಢಾ ಪ್ರಥಮಂ ತೃಷ್ಟಾಮಯಾ ನದ್ಯಾ ಸಜೂಃ ಸಂಗತಾಸಿ । ಪಶ್ಚಾತ್ಸುಸರ್ತ್ವಾ ರಸಯಾ ಶ್ವೇತ್ಯಾ ತ್ಯಾ ಕುಭಯಾ ಮೇಹತ್ನ್ವಾ ಚ ಸಹ ಸಜೂರ್ಭವ ಯಾಭಿಸ್ತ್ವಂ ಸರಥಂ ಸಮಾನಂ ರಥಮಾರುಹ್ಯೇಯಸೇ । ಗಚ್ಛಸಿ ॥

॥ ಪ್ರತಿಪದಾರ್ಥ ॥

**ಸಿಂಧೋ**—ಎಲೈ ಸಿಂಧುನದಿಯೇ । **ತ್ವಂ**—ನೀನು । **ಕ್ರುಮುಂ**—ಪ್ರವಹಿಸತಕ್ಕ । **ಗೋಮತೀಂ**—ಗೋಮತೀನದಿಯೊಂದಿಗೆ । **ಯಾತವೇ**—ಹೋಗಿ ಸೇರಲು । **ಪ್ರಥಮಂ**—ಮೊದಲು । **ತೃಷ್ಟಾಮಯಾ**—ತೃಷ್ಟಾಮಾನದಿಯೊಡನೆ । **ಸಜೂಃ**—ಸೇರಿಕೊಂಡಿದ್ದೀಯೆ (ಮತ್ತು) । **ಯಾಭಿಃ**—ಯಾವ ನದಿಗಳೊಂದಿಗೆ । **ಸರಥಂ**—ಸಮಾನವಾದ ರಥವನ್ನು ಹತ್ತಿ । **ಈಯಸೇ**—ನೀನು ಹೋಗುವೆಯೋ ಅಂತಹ । **ಸುಸರ್ತ್ವಾ**—ಸುಸರ್ತುವಿನೊಂದಿಗೂ । **ರಸಯಾ**—ರಸೆಯೊಂದಿಗೂ । **ಶ್ವೇತ್ಯಾ**—ಶ್ವೇತೆಯೊಂದಿಗೂ । **ಕುಭಯಾ**—ಕುಭೆಯೊಂದಿಗೂ । **ತ್ಯಾ**—ಪ್ರಸಿದ್ಧವಾದ । **ಮೇಹತ್ನ್ವಾ**—ಮೇಹಂತುವಿನೊಂದಿಗೂ ಸೇರಿ ಪ್ರವಹಿಸು.

। ಭಾವಾರ್ಥ ।

ಎಲೈ ಸಿಂಧುನದಿಯೇ, ಪ್ರವಹಿಸುವ ಗೋಮತೀನದಿಯೊಡನೆ ಹೋಗಿ ಸೇರಲು ಮೊದಲು ತೃಷ್ಟಾಮಾ ನದಿಯೊಡನೆ ಸಂಗಮಿಸಿದ್ದೀಯೆ. ಮತ್ತು ಅದರಂತೆಯೇ, ನಿನ್ನೊಡನೆ ಸಮಾನವಾದ ರಥದಲ್ಲಿ ಕುಳಿತುಕೊಳ್ಳಲು ಅರ್ಹವಾದ ಸುಸರ್ತು, ರಸಾ, ಶ್ವೇತಾ, ಕುಭಾ, ಮೇಹಂತು ಈ ನದಿಗಳೊಡನೆಯೂ ಸೇರಿ ಪ್ರವಹಿಸು.

## English Translation

You, Sindhu, in order to reach to swift-moving Gomati, have united yourself first with the Trishtama : (now be united) wfth the Susartu, the Rasa, the Shweti, the Kubha, and the Mehatnu, in conjunction with which ıs you advance.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಸಿಂಧುನದಿಯ ಉಪನದಿಗಳಾದ **ಗೋಮತಿ, ತೃಷ್ಟಾಮಾ,** ಸುಸರ್ತು, ರಸಾ, **ಶ್ವೇತಿ, ಕುಭಾ, ಮೇಹತ್ನು** ಎಂಬ ನದಿಗಳ ಹೆಸರುಗಳು ಉಕ್ತವಾಗಿದೆ. ರಸಾ ಎಂಬ ನದಿಯ ಹೆಸರು ಈ ಮಂಡಲದ ೧೦೮ ನೇ ಸೂಕ್ತದಲ್ಲಿ ಸೂಚಿತವಾಗಿದೆ. ನಾವು ಈ ಸೂಕ್ತದ ಪೀಠಿಕೆಯಲ್ಲಿ ಇದನ್ನು ಪ್ರಸ್ತಾಪಮಾಡಿದೇವೆ. ಇತರ ನದಿಗಳ ವಿಷಯವಾಗಿ ಏನೂ ತಿಳಿದಿರುವುದಿಲ್ಲ.

। ಸಂಹಿತಾಪಾಠಃ ।

ಋಜೀತ್ಯೇನೀ ರುಶತೀ ಮಹಿತ್ವಾ ಪರಿ ಜ್ರಯಾಂಸಿ ಭರತೇ ರಜಾಂಸಿ ।
ಅದಬ್ಧಾ ಸಿಂಧುರಪಸಾಮಪಸ್ತಮಾಶ್ವಾ ನ ಚಿತ್ರಾ ವಪುಷೀವ ದರ್ಶತಾ ॥೭॥

। ಪದಪಾಠಃ ॥

ಋಜೀತೀ । ಏನೀ । ರುಶತೀ । ಮಹಿಽತ್ವಾ । ಪರಿ । ಜ್ರಯಾಂಸಿ । ಭರತೇ । ರಜಾಂಸಿ ।
ಅದಬ್ಧಾ । ಸಿಂಧುಃ । ಅಪಸಾಂ । ಅಪಃಽತಮಾ । ಅಶ್ವಾ । ನ । ಚಿತ್ರಾ । ವಪುಷೀಽಇವ । ದರ್ಶತಾ ॥ ೭ ॥

। ಸಾಯಣಭಾಷ್ಯಂ ।

**ಋಜೀತ್ಯೃಜುಗಾಮಿನ್ಯೇನೀ ಶ್ವೇತವರ್ಣಾ ರುಶತೀ ದೀಪ್ಯಮಾನಾ ಸಿಂಧುರ್ಜ್ರಯಾಂಸಿ ವೇಗವಂತಿ ರಜಾಂಸ್ಯುದಕಾನಿ ಪರಿ ಭರತೇ । ಪ್ರಭರತಿ । ಕಾದೃಶ್ಯದಬ್ಧಾಹಿಂಸಿತಾ ಸಿಂಧುರಪಸಾಂ ಕರ್ಮವತೀನಾಂ ಮಧ್ಯೇಽಪಸ್ತಮಾ ವೇಗಾಖ್ಯಕರ್ಮವತೀ ಭವತಿ । ಅಶ್ವಾ ನ ವಡವೇವ ಚಿತ್ರಾ ಚಾಯನೀಯಾ ವಪುಷೀ ವಪುಷ್ಮತೀ ಯೋಷಿದಿವ ದರ್ಶತಾ ದರ್ಶನೀಯಾ ಭವತಿ ॥**

॥ ಪ್ರತಿಪದಾರ್ಥ ॥

**ಋಜೀತೀ**—ನೇರವಾದ ಗಮನವುಳ್ಳವಳೂ । **ಏನೀ**—ಬಿಳೀ ವರ್ಣವುಳ್ಳವಳೂ । **ರುಶತೀ**—ಪ್ರಕಾಶಮಾನಳೂ ಆದ ಸಿಂಧುವು । **ಮಹಿತ್ವಾ**—ತನ್ನ ಮಹಿಮೆಯಿಂದ । **ಜ್ರಯಾಂಸಿ**—ವೇಗವಾದ ಪ್ರವಾಹಗಳುಳ್ಳ । **ರಜಾಂಸಿ**—ಉದಕಗಳನ್ನು । **ಪರಿ ಭರತೇ**—ಹೊರುತ್ತಾಳೆ । **ಅದಬ್ಧಾ**—ಅಹಿಂಸಿತಳಾದ । **ಸಿಂಧುಃ**—ಸಿಂಧುವು । **ಅಪಸಾಂ**—ಪ್ರವಾಹಾತ್ಮಕವಾದ ಕರ್ಮವುಳ್ಳ ನದಿಗಳ ನಡುವೆ । **ಅಪಸ್ತಮಾ**—ಅತಿಶಯವಾದ ಕರ್ಮವುಳ್ಳವಳಾಗಿ ಇರುತ್ತಾಳೆ । **ಅಶ್ವಾ ನ**—ಕುದುರೆಯಂತೆ । **ಚಿತ್ರಾ**—ಆಕರ್ಷಕಳಾಗಿಯೂ । **ವಪುಷೀ ಇವ**—ಸುಂದರವಾದ ದೇಹವುಳ್ಳ ಸ್ತ್ರೀಯಂತೆ । **ದರ್ಶತಾ**—ಸುಂದರರೂಪವುಳ್ಳವಳಾಗಿಯೂ ಇರುತ್ತಾಳೆ.

॥ ಭಾವಾರ್ಥ ॥

ನೇರವಾದ ಗಮನವುಳ್ಳವಳೂ, ಶುಭ್ರವರ್ಣವುಳ್ಳವಳೂ, ಪ್ರಕಾಶಮಾನಳೂ ಆದ ಸಿಂಧುವು ತನ್ನ ಮಹಿಮೆಯಿಂದ ವೇಗವಾದ ಪ್ರವಾಹಗಳುಳ್ಳ ಉದಕಗಳನ್ನು ಹೊರುತ್ತಾಳೆ. ಅಹಿಂಸಿತಳಾದ ಸಿಂಧುವು ಪ್ರವಾಹಾತ್ಮಕವಾದ

ಕರ್ಮವುಳ್ಳ ನದಿಗಳ ನಡುವೆ ಅತಿಶಯವಾದ ಕರ್ಮವುಳ್ಳವಳಾಗಿ ಇರುತ್ತಾಳೆ. ಹೆಣ್ಣುಕುದುರೆಯಂತೆ ಆಕರ್ಷಕಳಾಗಿಯೂ, ಸುಂದರವಾದ ದೇಹವುಳ್ಳ ಸ್ತ್ರೀಯಂತೆ ದರ್ಶನೀಯಳಾಗಿಯೂ ಇರುತ್ತಾಳೆ.

English Translation

Straight-flowing, white-coloured, bright-shining (Sindhu) bears along in its might the rapid waters; the inviolable Sindhu, the most efficacious, is speckled like a mare, beautiful as a handsome woman.

। ಸಂಹಿತಾಪಾಠಃ ।

ಸ್ವಶ್ವಾ ಸಿಂಧುಃ ಸುರಥಾ ಸುವಾಸಾ ಹಿರಣ್ಯಯೀ ಸುಕೃತಾ ವಾಜಿನೀವತೀ ।
ಊರ್ಣಾವತೀ ಯುವತಿಃ ಸೀಲಮಾವತ್ಯುತಾಧಿ ವಸ್ತೇ ಸುಭಗಾ ಮಧು-
ವೃಧಂ ॥ ೮ ॥

॥ ಪದಪಾಠಃ ॥

ಸುಽಅಶ್ವಾ । ಸಿಂಧುಃ । ಸುಽರಥಾ । ಸುಽವಾಸಾಃ । ಹಿರಣ್ಯಯೀ । ಸುಽಕೃತಾ । ವಾಜಿನೀಽವತೀ ।
ಊರ್ಣಾಽವತೀ । ಯುವತಿಃ । ಸೀಲಮಾಽವತೀ । ಉತ । ಅಧಿ । ವಸ್ತೇ । ಸುಽಭಗಾ । ಮಧುಽವೃಧಂ ॥

। ಸಾಯಣಭಾಷ್ಯಂ ।

ಸೇಯಂ ಸಿಂಧುಃ ಸ್ವಶ್ವಾ ಶೋಭನಾಶ್ವೋಪೇತಾ ಸುರಥಾ ಶೋಭನರಥಾ ಸುವಾಸಾಃ ಶೋಭನವಸ್ತ್ರೋಪೇತಾ ಹಿರಣ್ಯಯೀ ಹಿರಣ್ಮಯಾಭರಣಾ ಸುಕೃತಾ ವಾಜಿನೀವತ್ಯನ್ನವತ್ಯೂರ್ಣಾವತೀ । ತಸ್ಯಾಃ ಸಮೀಪದೇಶೇ ಹಿ ಸಂತ್ಯೂರ್ಣಾ ಯೇಷಾಂ ರೋಮಭಿಃ ಕಂಬಲಾಃ ಕ್ರಿಯಂತೇ । ಯುವತಿರ್ನಿತ್ಯತರುಣೀ ಸರ್ವದಾಹೀನೋದಕಾ ಸೀಲಮಾವತೀ । ಸೀರಾಣಿ ಯಯೌಷಧ್ಯಾ ರಜ್ಜುಭೂತಯಾ ಬಧ್ಯಂತೇ ಸಾ ಸೀಲಮೇತಿ ನಿಗದ್ಯತೇ ಕೃಷೀವಲೈಃ । ತಾದೃಗೋಷಧ್ಯುಪೇತಾ । ಉತಾಪಿ ಚ ಸುಭಗಾ ಸಿಂಧುರ್ಮಧುವೃಧಂ ಮಧುವರ್ಧಕಂ ನಿರ್ಗುಂಡ್ಯಾದಿಕಮಧಿ ವಸ್ತೇ । ಆಚ್ಛಾದಯತಿ । ತಸ್ಯಾಸ್ತೀರೇ ನಿರ್ಗುಂಡ್ಯಾದೀನಿ ಬಹೂನಿ ಸಂತಿ ॥

। ಪ್ರತಿಪದಾರ್ಥ ॥

**ಸಿಂಧುಃ**—ಸಿಂಧುನದಿಯು । **ಸ್ವಶ್ವಾ**—ಉತ್ತಮವಾದ ಅಶ್ವಗಳಿಂದ ಕೂಡಿಯೂ । **ಸುರಥಾ**—ಉತ್ತಮವಾದ ರಥಗಳುಳ್ಳವಳಾಗಿಯೂ । **ಸುವಾಸಾಃ**—ಶ್ರೇಷ್ಠವಾದ ಉಡುಪುಳ್ಳವಳೂ । **ಸುಕೃತಾ**—ಉತ್ತಮ

ವಾದ ಕರ್ಮವುಳ್ಳವಳೂ । **ಹಿರಣ್ಯಯೀ**—ಸುವರ್ಣಾಭರಣವುಳ್ಳವಳೂ । **ವಾಜಿನೀವತೀ**—ಅನ್ನವಂತಳೂ । **ಊರ್ಣಾವತೀ**—ಉಣ್ಣೆಯನ್ನು ಹೊಂದಿದವಳೂ । **ಯುವತಿಃ**—ತಾರುಣ್ಯವನ್ನು ಹೊಂದಿದವಳೂ । **ಸೀಲಮಾವತೀ**—ಸೀಲಮಾಸಂಜ್ಞಕವಾದ ನಾರುಳ್ಳ ಸಸ್ಯಗಳುಳ್ಳವಳೂ ಆಗಿದ್ದಾಳೆ। **ಉತ**—ಮತ್ತು । **ಸುಭಗಾ**—ಮಂಗಳಕಾರಿಣಿಯಾದ ಸಿಂಧುವು । **ಮಧುವೃಧಂ**—ಮಧುವನ್ನು ಹೇರಳವಾಗಿ ಕೊಡುವ ಪುಷ್ಪಗಳನ್ನು । **ಅಧಿವಸ್ತೇ**—ಹೊದ್ದಿರುತ್ತಾಳೆ.

॥ ಭಾವಾರ್ಥ ॥

ಸಿಂಧುನದಿಯು ಉತ್ತಮವಾದ ಅಶ್ವಗಳುಳ್ಳವಳೂ, ರಥಗಳುಳ್ಳವಳೂ, ಉಡುಪುಗಳುಳ್ಳವಳೂ, ಕರ್ಮಗಳುಳ್ಳವಳೂ, ಸುವರ್ಣಾಭರಣಗಳುಳ್ಳವಳೂ, ಅನ್ನವಂತಳೂ, ಉಣ್ಣೆಯನ್ನು ಕೊಡುವ ಪ್ರದೇಶಗಳುಳ್ಳವಳೂ, ತಾರುಣ್ಯವನ್ನು ಹೊಂದಿದವಳೂ, ಸೀಲಮಾಸಂಜ್ಞಕವಾದ ನಾರುಳ್ಳ ಸಸ್ಯಗಳುಳ್ಳವಳೂ ಆಗಿದ್ದಾಳೆ. ಮತ್ತು ಮಂಗಳಕಾರಿಣಿಯಾದ ಸಿಂಧುವು ಮಧುವನ್ನು ಹೇರಳವಾಗಿ ಕೊಡುವ ಪುಷ್ಪಗಳನ್ನು ಹೊದ್ದಿರುತ್ತಾಳೆ.

## English Translation

The Sindhu, is rich in horses, rich in chariots, rich in clothes, rich in gold ornaments, well-made, rich in food, rich in wool, ever fresh, abounding in Silama plants, and the auspieious river wears honey-growing (flowers).

॥ ವಿಶೇಷವಿಷಯಗಳು ॥

ಸಿಂಧುನದಿಗೆ ಮನುಷ್ಯರಿಗೆ ಇರುವಂತೆ ಅಶ್ವ, ರಥ ಮೊದಲಾದವುಗಳನ್ನು ಆರೋಪಿಸಿ ಇಲ್ಲಿ ಸ್ತುತಿಸಲಾಗಿದೆ. ಈ ವಿಷಯದಲ್ಲಿ ನಾವು ಈ ಸೂಕ್ತದ ಮೊದಲನೇ ಋಕ್ಕಿಗೆ ಬರೆದಿರುವ ವಿಶೇಷವಿಷಯಗಳನ್ನು ನೋಡಿ.

॥ ಸಂಹಿತಾಪಾಠಃ ॥

ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ತೇನ ವಾಜಂ ಸನಿಷದಸ್ಮಿನ್ನಾಜೌ।
ಮಹಾನ್ಹ್ಯಸ್ಯ ಮಹಿಮಾ ಪನಸ್ಯತೇಽದಬ್ಧಸ್ಯ ಸ್ವಯಶಸೋ ವಿರಪ್ಶಿನಃ ॥ ೯ ॥

॥ ಪದಪಾಠಃ ॥

ಸುಽಖಂ । ರಥಂ । ಯುಯುಜೇ । ಸಿಂಧುಃ । ಅಶ್ವಿನಂ । ತೇನ । ವಾಜಂ । ಸನಿಷತ್ । ಅಸ್ಮಿನ್ । ಆಜೌ ।
ಮಹಾನ್ । ಹಿ । ಅಸ್ಯ । ಮಹಿಮಾ । ಪನಸ್ಯತೇ । ಅದಬ್ಧಸ್ಯ । ಸ್ವಽಯಶಸಃ । ವಿಽರಪ್ಶಿನಃ ॥ ೯ ॥

॥ ಸಾಯಣಭಾಷ್ಯಂ ॥

**ಸಿಂಧುರ್ದೇವತಾ ಸುಖಂ ಸುಖಕರಂ ಶೋಭನದ್ವಾರಂ ವಾಶ್ವಿನಮಶ್ವವಂತಂ ರಥಂ ಯುಯುಜೇ । ಯುನಕ್ತಿ । ತೇನ ರಥೇನ ವಾಜಮನ್ನಂ ಸನಿಷತ್ ಃ ಪ್ರಯಚ್ಛತು । ಅಸ್ಮಿನ್ನಾಜೌ ಸಂಗ್ರಾಮೇ ಯಜ್ಞೇ ವಾಸ್ಯ ಸಿಂಧುರಥಸ್ಯ ಮಹಿಮಾ ಮಹಾನ್ಹಿ ಪನಸ್ಯತೇ । ಸ್ತೂಯತೇ । ಕೀದೃಶಸ್ಯಾಸ್ಯ । ಅದಬ್ಧಸ್ಯಾನ್ಯೈರಹಿಂಸ್ಯಸ್ಯ ಸ್ವಯಶಸಃ ಸ್ವಾಯತ್ತಕೀರ್ತೇರ್ವಿರಪ್ಶಿನಃ ಮಹನ್ನಾಮೈತತ್ । ಮಹತಃ । ॥ ೭ ॥**

॥ ಪ್ರತಿಪದಾರ್ಥ ॥

**ಸಿಂಧು**—ಸಿಂಧುದೇವತೆಯು । **ಸುಖಂ**—ಸುಖಕರವಾದುದೂ । **ಅಶ್ವಿನಂ**—ಅಶ್ವಯುಕ್ತವಾದುದೂ ಆದ । **ರಥಂ**—ರಥವನ್ನು । **ಯುಯುಜೇ**—ಯೋಜಿಸಿರುತ್ತಾಳೆ । **ತೇನ**—ಅದೇ ರಥದಿಂದ । **ವಾಜಂ**—ಅನ್ನವನ್ನು । **ಸನಿಷತ್**—ನಮಗೆ ಒದಗಿಸಲಿ । **ಅಸ್ಮಿನ್ ಆಜೌ**—ಈ ಯಜ್ಞದಲ್ಲಿ । **ಅದಬ್ಧಸ್ಯ**—ಅಹಿಂಸಿತವೂ । **ಸ್ವಯಶಸಃ**—ಸ್ವಯಂಸಂಪಾದಿತವಾದ ಕೀರ್ತಿಯುಳ್ಳದ್ದೂ । **ವಿರಪ್ಶಿನಃ**—ಮಹತ್ವವುಳ್ಳದ್ದೂ ಆದ । **ಅಸ್ಯ**—ಈ ಸಿಂಧುದೇವತೆಯ ರಥದ । **ಮಹಿಮಾ**—ಮಹಿಮೆಯು । **ಮಹಾನ್ ಹಿ**—ಅತ್ಯಧಿಕವಾಗಿ । **ಪನಸ್ಯತೇ**—ಪ್ರಶಂಸಿಸಲ್ಪಡುತ್ತದೆ.

॥ ಭಾವಾರ್ಥ ॥

ಸಿಂಧುದೇವತೆಯು ಸುಖಕರವಾದುದೂ. ಅಶ್ವಯುಕ್ತವಾದುದೂ ಆದ ರಥವನ್ನು ಹೂಡಿರುತ್ತಾಳೆ. ಅದೇ ರಥದಲ್ಲಿ ನಮಗೆ ಅನ್ನವನ್ನು ಒದಗಿಸಲಿ. ಅಹಿಂಸಿತವೂ, ಸ್ವಯಂಸಂಪಾದಿತವಾದ ಕೀರ್ತಿಯುಳ್ಳದ್ದೂ, ಮಹತ್ವವುಳ್ಳದ್ದೂ ಆದ ಸಿಂಧುದೇವತೆಯ ರಥದ ಮಹಿಮೆಯು ಅತ್ಯಧಿಕವಾಗಿ ಪ್ರಶಂಸಿಸಲ್ಪಡುತ್ತದೆ.

## English Translation

Sindhu has harnessed her easy-going well-horsed chariot, with it may she bring (us) food ; the might of this inviolable, great, renowned (chariot) at this sacrifice is praised as mighty.

॥ ವಿಶೇಷವಿಷಯಗಳು ॥

**ಇಲ್ಲಿ ಸಿಂಧುನದಿಯು ಅಥವಾ ದೇವತೆಯು ತನ್ನ ರಥವನ್ನು ಹೂಡುತ್ತಾಳೆಂದು ಹೇಳಿದೆ. ಅಚೇತನವಾದ ನದಿಗೆ ಈ ಕ್ರಿಯಾಶಕ್ತಿಯನ್ನು ಹೇಳುವುದು ತಪ್ಪಲ್ಲವೇ, ಎಂದರೆ ಇದಕ್ಕೆ ಸಮಾಧಾನವಾಗಿ ಯಾಸ್ಕರು ಹೇಳಿರುವ ವಿವರಣೆಯನ್ನು ನಾವು ಈ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿಸ್ತಾರವಾಗಿ ವಿಮರ್ಶೆಮಾಡಿದೇವೆ. ಅದನ್ನು ಅಲ್ಲಿ ನೋಡಿ ತಿಳಿಯಬಹುದು.**



# ಎಪ್ಪತ್ತಾರನೆಯ ಸೂಕ್ತವು

## ಪೀಠಿಕೆ.

---

ಈ ಸೂಕ್ತಕ್ಕೆ **ಗ್ರಾವಾಣಃ** ಎಂಬುದು ದೇವತೆಯು. ಗ್ರಾವಾಣಃ ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವುದಕ್ಕಾಗಿ ಉಪಯೋಗಿಸುವ ಕಲ್ಲುಗಳು. ಇವುಗಳಿಗೆ ಅದ್ರಿ ಎಂತಲೂ ಬೇರೆ ಹೆಸರಿದೆ. ಈ ಗ್ರಾವಗಳನ್ನು ಈ ಸೂಕ್ತದಲ್ಲಲ್ಲದೆ, ಇದೇ ಮಂಡಲದ ೯೪ ಮತ್ತು ೧೭೫ನೇ ಸೂಕ್ತಗಳಲ್ಲಿಯೂ ಸ್ತುತಿಸಲಾಗಿದೆ. ಈ ಮೂರು ಸೂಕ್ತಗಳಿಗೆ ಗ್ರಾವಗಳೇ ದೇವತೆಯು. ಇತರ ಅನೇಕ ಮಂತ್ರಗಳಲ್ಲಿ ಗ್ರಾವಸ್ತುತಿಯು ವರ್ಣನೆ ಇದೆ. ಈ ಗ್ರಾವಗಳನ್ನು ಬಹಳ ಗೌರವದಿಂದ ಕಾಣುತ್ತಿದ್ದರಲ್ಲದೆ ಈ ಗ್ರಾವಗಳಿಂದ ಸೋಮಲತೆಯನ್ನು ಜಜ್ಜುವಾಗ ಉಂಟಾಗುವ ಶಬ್ದವು ಬಹಳ ಮಧುರವಾಗಿರುವುದೆಂದೂ ಆ ಶಬ್ದವು ಇಂದ್ರನಿಗೆ ಹಿತಕರವಾಗಿರುವುದೆಂದೂ ಆ ಶಬ್ದವಿದ್ದೆಡೆಗೆ ಇಂದ್ರನು ತಪ್ಪದೆ ಬರುತ್ತಿದ್ದನೆಂದೂ ಅನೇಕವಿಧವಾದ ವರ್ಣನೆಗಳಿವೆ. ಋ. ಸಂ. ೧-೨೮ನೆಯ ಸೂಕ್ತದಲ್ಲಿ ಸೋಮಲತೆಯನ್ನು ಕಲ್ಲಿನ ಮೇಲಿಟ್ಟು ಜಜ್ಜಿ ರಸವನ್ನು ಹಿಂಡುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸಲಾಗಿದೆ ಆದ್ದರಿಂದ ಸೋಮಲತೆಗಳಿಂದ ರಸವನ್ನು ಹಿಂಡಿ ತೆಗೆಯುವ ಕ್ರಮವನ್ನೂ, ಇದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ಇಲ್ಲಿ ಪ್ರಸ್ತಾಪಮಾಡುವುದು ಅಪ್ರಕೃತವಾಗಲಾರದು.

ಯಜ್ಞದಲ್ಲಿ ಸೋಮರಸವನ್ನು ಜಜ್ಜಿ ಹಿಂಡುವುದಕ್ಕಾಗಿ ಉಪಯೋಗಿಸುವ ಅಗಲವಾದ ತಳಭಾಗವೂ ಕಯ್ಯಿಂದ ಹಿಡಿದುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಉದ್ದವಾಗಿಯೂ ಇರುವ ಕಲ್ಲನ್ನು ಮೇಲಕ್ಕೆತ್ತಿ ಒರಳಿನಲ್ಲಿರುವ ಸೋಮಲತೆಯನ್ನು ಕುಟ್ಟಿ ಹಿಂಡಿ ರಸವನ್ನು ತೆಗೆಯುವರು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು— ಸೋಮಯಾಗಗಳಲ್ಲಿ ಸೋಮಪಾನಕ್ಕಾಗಿ ಸೋಮಲತೆಯನ್ನು ಜಜ್ಜಿ, ಹಿಂಡಿ, ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನ ಋತ್ವಿಜರು ತಾವೂ ಪಾನಮಾಡುವುದು ರೂಢಿಯಾಗಿದೆ. ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸದಲ್ಲಿ ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲಗಳಲ್ಲಿ ನಡೆಯುವುದು. ಇದಕ್ಕೆ **ಅಭಿಷವಣ** ಅಥವಾ **ಸವನ**ವೆಂದು ಹೆಸರು. ಪ್ರಾತಃಕಾಲದ ಕರ್ಮಕ್ಕೆ **ಪ್ರಾತಃಸವನ**ವೆಂದೂ ಮಧ್ಯಾಹ್ನದಲ್ಲಿ ಮಾಡುವ ಸವನಕ್ಕೆ **ಮಾಧ್ಯಂದಿನಸವನ**ವೆಂದೂ, ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದೂ ಹೆಸರು.

ಸೋಮಲತೆಯು ಈಗಿನ ಕಾಲದಲ್ಲಿ ಸಿಕ್ಕುವುದಿಲ್ಲ. ಹಿಂದೆ ನದೀತೀರಗಳಲ್ಲಿಯೂ ಪರ್ವತದ ಮೇಲೆಯೂ ಬೆಳೆಯುತ್ತಿತ್ತು. ಅದನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು.

ಸೋಮಲತೆಯು (ಬಳ್ಳಿಗಳ) **ಬಭ್ರು**, **ಅರುಣ** (ಮಾಸಲುಕೆಂಪು) ಅಥವಾ ಹಳದಿಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿರುವುದು. ಪರ್ವತಗಳಲ್ಲಿ ಬಹಳ ಎತ್ತರದಲ್ಲಿ ಬೆಳೆದಿರುವ ಲತೆಯು ಶ್ರೇಷ್ಠವೆಂದೂ ಅದರಿಂದ ಹೆಚ್ಚು ರಸವನ್ನು ತೆಗೆಯಬಹುದೆಂದೂ ಹೇಳಿರುವುದರಿಂದ ಸಾಧ್ಯವಾದ ಸಂದರ್ಭಗಳಲ್ಲಿ ಸೋಮಲತೆಯನ್ನು ಪರ್ವತಗಳಿಂದಲೇ

ತರುತ್ತಿದ್ದರು. ಇಂತಹ ಪರ್ವತಗಳಲ್ಲಿ **ಮೂಜವಂತ**ವೆಂಬ ಪರ್ವತವು ಪ್ರಸಿದ್ಧವಾಗಿದ್ದಿತು. ಈ ಸೋಮಲತೆಯ ಕುಡಿಯು **ಅಂಶ**ವೆಂಬ ಹೆಸರಿನಿಂದಲೂ (ಋ. ಸಂ. ೧-೧೬೮-೩; ೩-೪೮-೨ ಇತ್ಯಾದಿ) ಚಿಗುರುಗಳಿಂದ ಕೂಡಿದ ಕುಡಿಗೆ **ವಕ್ಷಣಾ** ಎಂದೂ (ಋ.ಸಂ. ೮-೧-೧೭) **ವಾಣ** ಎಂದೂ (ಋ.ಸಂ. ೪-೨೪-೯ ; ೯-೫೦-೧) ಸೋಮರಸಕ್ಕೆ **ಅಂಧಃ** (ಋ. ಸಂ. ೧-೨೮-೭; ೩-೪೮-೧ ; ೪-೧೬-೧) ಎಂದೂ ಸೋಮಲತೆಯ ದಂಡಕ್ಕೆ (ಬಳ್ಳಿಗೆ) **ಪರ್ವನ್** (ಋ. ಸಂ. ೧-೯-೧) ಎಂದೂ ಹೇಳುವ ರೂಢಿ ಇರುವುದು.

ಸೋಮರಸವನ್ನು ಸಿದ್ಧಪಡಿಸುವ ಕ್ರಮವು— ಸೋಮಲತೆಯಲ್ಲಿರುವ ಅಥವಾ ಬಳ್ಳಿಯಲ್ಲಿರುವ ಎಲೆಗಳನ್ನು ತೆಗೆದುಹಾಕಿ ಅದನ್ನು ಒರಳಿನಲ್ಲಿ ಹಾಕಿ ಕಲ್ಲಿನಿಂದ ಜಜ್ಜುವರು. ಲತೆಯು ಹೊಸದಲ್ಲದಿದ್ದರೆ ಒಂದೆರಡು ದಿನ ನೀರಿನಲ್ಲಿ ನೆನೆಹಾಕಿ ಮೆತ್ತಗಾದ ಮೇಲೆ ರಸವನ್ನು ತೆಗೆಯುವರು. ಸೋಮಲತೆಯನ್ನು ಜಜ್ಜುವ ಒರಳಿಗೆ **ಉಲೂಖಲ**ವೆಂದು ಹೆಸರು. ಇದು ಸಾಧಾರಣವಾಗಿ ಕಲ್ಲಿನಿಂದಲೇ ನಿರ್ಮಿತವಾಗಿರುವುದು, ಮರದಿಂದ ಮಾಡುವುದೂ ಉಂಟು. ಒರಳಿನಲ್ಲಿ ಹಾಕಿ ಮೇಲಿನಿಂದ ಕುಟ್ಟುವ ಕಲ್ಲಿಗೆ **ಗ್ರಾವಾ**, (ಋ. ಸಂ. ೧-೮೩-೬; ೧-೧೩೫-೭) **ಆದ್ರಿ**, (ಋ. ಸಂ. ೧-೧೩೦-೨; ೧-೧೩೫-೫; ೧-೧೩೭-೧) ಎಂಬ ಹೆಸರುಗಳಿರುವವು. **ಉಲೂಖಲ**ವೆಂದರೆ ಈಗ ನಾವು ಉಪಯೋಗಿಸುತ್ತಿರುವ ಒರಳಿನಂತಿರದೆ ಒಂದು ಕಲ್ಲಿನ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳ ಮಾತ್ರವಾಗಿತ್ತೆಂದು ಊಹಿಸಬಹುದು. ಈ ಉಲೂಖಲವೆಂಬ ಒರಳು **ಮುಸಲ** (ಒನಕೆ) ದಿಂದ ಧಾನ್ಯವನ್ನು ಕಟ್ಟುವುದಕ್ಕಾಗಿ ಉಪಯೋಗಿಸಲ್ಪಡುತ್ತಿತ್ತು.

ದೇವತೆಗಳಿಗೆ ಸೋಮವನ್ನು ಅರ್ಪಿಸಲು ಇಡುವ ಪಾತ್ರೆಗೆ **ಚಮೂ** ಎಂದು ಹೆಸರು. ಋತ್ವಿಗ್ಜನರು ಸೋಮಪಾನಮಾಡುವುದಕ್ಕೆ ಉಪಯೋಗಿಸುವ ಪಾತ್ರೆಗಳಿಗೆ **ಕಲಶ, ಚಮಸ** ಎಂದು ಹೆಸರು. ಕೆಲವು ಸಂದರ್ಭಗಳಲ್ಲಿ **ಚಮೂ** ಎಂಬ ಶಬ್ದವು **ಉಲೂಖಲ ಗ್ರಾವಾ** (ಒರಳು ಮತ್ತು ಜಜ್ಜುವಕಲ್ಲು, mortar and pestle) ಇವುಗಳನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಟ್ಟಿರುವುದು. (ಋ. ಸಂ. ೧-೨೮-೯ ; ೪-೧೮-೩ ; ೬-೫೭-೨).

ಸೋಮಲತೆಗಳನ್ನು ಜಜ್ಜುವಾಗ ಸಾಧಾರಣವಾಗಿ ಅವುಗಳನ್ನು ಚರ್ಮಗಳ ಮೇಲೆ ಇಡುವುದು ರೂಢಿಯು ಈ ಚರ್ಮಕ್ಕೆ **ತ್ವಕ್** ಎಂದು ಹೆಸರು. ಇದಕ್ಕಾಗಿ ಗೋಚರ್ಮವನ್ನು ಉಪಯೋಗಿಸುತ್ತಿದ್ದರು (ಋ. ಸಂ. ೧೦-೯೪-೯; ೧೦-೧೧೬-೪) ಸೋಮವನ್ನು ಶೇಖರಿಸಿ ಇಡುವ ಪಾತ್ರೆಗಳಿಗೆ **ಕೋಶ** (ಋ. ಸಂ. ೭-೧೦೧-೪; ೮-೨೦-೮) **ಸದಸ್ಥ** (ಋ. ಸಂ. ೩-೬೨-೧೫ ; ೯-೧-೨; ೯-೧೭-೮) **ದ್ರು** (ಋ. ಸಂ. ೯-೧-೨ ; ೯-೬೫-೬ ; ೯-೯೮-೨) **ವನ** (ಋ. ಸಂ. ೨-೧೪-೯ ; ೯-೬೬-೯) **ದ್ರೋಣ** (ಋ. ಸಂ. ೯-೧೫-೭; ೯-೩೩-೨) ಇತ್ಯಾದಿ ಹೆಸರುಗಳಿವೆ. **ಸ್ರುವ** ಎಂದರೆ ಸೌಟು ladle. (ಋ.ಸಂ. ೧-೧೧೬-೨೪) ಸೋಮರಸವನ್ನು ಸೋಸುವ ಬಟ್ಟೆ ಅಥವಾ ಜಾಲರಿಗೆ **ಪವಿತ್ರ**ವೆಂದು ಹೆಸರು. ಕೆಲವು ಸಂದರ್ಭಗಳಲ್ಲಿ ಬೆರಳಿನ ಸಂದಿಗಳಿಂದಲೂ ಸೋಮವನ್ನು ಸೋಸುತ್ತಿದ್ದರು

ಸೋಮರಸವನ್ನು ಬೇರೆ ಪದಾರ್ಥಗಳ ಮಿಶ್ರಣವಿಲ್ಲದೆ ಉಪಯೋಗಿಸುವುದಕ್ಕೆ **ಶುಕ್ರ** (ಋ. ಸಂ. ..-೧; ೩-೩೨-೨; ೮-೨-೧೦) **ಶುಚಿ** (ಋ. ಸಂ. ೧-೫-೫ ; ೧-೩೦-೨ ; ೮-೨-೯) ಎಂದು ಹೇಳುವರು.

ಈ ರಸದ ವರ್ಣವು **ಬಭ್ರು**, (ಋ. ಸಂ. ೯-೩೩-೨; ೯-೬೩-೪ & ೬) **ಹರಿತ** (ಋ.ಸಂ. ೯-೩-೯; ೯-೬೫-೮) **ಅರುಣ** (ಋ. ಸಂ. ೯-೪೦-೨; ೯-೪೫-೩) **ಅರುಷ** (ಋ. ಸಂ. ೯-೬೧-೨೧) **ಶೋಣ** (ಋ. ಸಂ. ೯-೯೭-೧೩) ಎಂಬ ನಾನಾವಿಧ ವರ್ಣವುಳ್ಳದ್ದಾಗಿರುವುದೆಂದೂ ಸುವಾಸನೆಯಿಂದ ಕೂಡಿರುವುದಾಗಿಯೂ (ಋ. ಸಂ. ೯-೯೭-೯; ೯-೧೦೭-೨) ವಿಧವಿಧವಾದ ವರ್ಣನೆಗಳಿವುವು.

ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು. ಈ ಮಿಶ್ರಣಕ್ಕೆ ಆಶಿರದ್ರವ್ಯಗಳೆಂದು ಹೆಸರು. ಹಾಲನ್ನು ಮಿಶ್ರಮಾಡಿದ ಸೋಮರಸಕ್ಕೆ **ಗವಾಶಿರವೆಂದೂ**, ಮೊಸರನ್ನು ಮಿಶ್ರಮಾಡಿದ ಸೋಮರಸಕ್ಕೆ **ದಧ್ಯಾಶಿರವೆಂದೂ**, ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರವೆಂದೂ**, ಹೇಳುವರು ಸೋಮರಸವು ತೀವ್ರವೆಂದು ಕೆಲವು ವೇಳೆ ಹೇಳಲ್ಪಡುವುದು. ಆಗ ಅದು ತೀಕ್ಷ್ಣವಾದ ವಾಸನೆಯಿಂದ ಅಥವಾ ರುಚಿಯಿಂದ (pungent flavour) ಕೂಡಿರುವುದೆಂದು ತಿಳಿಯಬೇಕು. ಸೋಮರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ಭಾಗಕ್ಕೆ **ಋಜೀಷವೆಂದು** ಹೆಸರು.

**ಗ್ರಾವಾ**—ಸೋಮರಸವನ್ನು ಜಜ್ಜುವ ಕಲ್ಲು. ಈ ಕಲ್ಲು ಈ ಋಕ್ಕಿನಲ್ಲಿ **ಪೃಥುಬುಧ್ನಃ** ಎಂಬ ಶಬ್ದವು ವಿವರಿಸುವಂತೆ ಕೆಳಭಾಗದಲ್ಲಿ ಅಗಲವಾಗಿಯೂ, ಮೇಲೆ ಹಿಡಿಯುಂತಿರುವುದಾಗಿಯೂ ಇರುವ ಗುಂಡುಕಲ್ಲು; ಕಲ್ಬತ್ತಿನಲ್ಲಿರುವ ಅರೆಯುವ ಕಲ್ಲಿನಂತೆ ಆಕಾರವುಳ್ಳ ಕಲ್ಲು. ಸಾಧಾರಣವಾಗಿ ಋಗ್ವೇದದಲ್ಲಿ ಸೋಮಲತೆಯನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು ಗ್ರಾವಾ, ಅದ್ರಿ ಎಂಬ ಶಬ್ದಗಳಿಂದ ಕರೆಯುವರು.

**ಪೃಥುಬುಧ್ನಃ**—**ಸ್ಥೂಲಮೂಲ ಊರ್ಧ್ವ ಉನ್ನತಃ** । ತಳಭಾಗವು ಅಗಲವಾಗಿರುವ ಉದ್ದವಾದ ಕಲ್ಲು; ಕಲ್ಬತ್ತಿನಲ್ಲಿ ಅರೆಯುವ ಗುಂಡುಕಲ್ಲು.

**ಊರ್ಧ್ವೋಭವತಿ ಸೋತವೇ**— ಸೋಮಲತೆಯನ್ನು ಜಜ್ಜುವುದಕ್ಕಾಗಿ ಕಲ್ಲನ್ನು ಕೈಯಿಂದ ಮೇಲಕ್ಕೆತ್ತುವುದು. ಕಲ್ಲಿನ ಅಥವಾ ಒರಳಿನಲ್ಲಿರುವ ಲತೆಯನ್ನು ಕುಟ್ಟಬೇಕಾದರೆ ಬೇರೊಂದು ಕಲ್ಲನ್ನು ಕೈಯಿಂದ ಹಿಡಿದು ಮೇಲಕ್ಕೆ ಎತ್ತಿ ಕುಟ್ಟುವ ವಿಷಯವನ್ನು ಇಲ್ಲಿ ಹೇಳಿರುವುದು.

**ಉಲೂಖಲಸುತಾನಾಂ**—ಉಲೂಖಲವೆಂದರೆ ಮಧ್ಯಭಾಗದಲ್ಲಿ ಹಳ್ಳವಾಗಿರುವ ಕಲ್ಲು ಎಂದರೆ ಒರಳು. ಸೋಮಲತೆಯನ್ನು ಜಜ್ಜಿ ರಸವನ್ನು ತೆಗೆಯುವಾಗ ರಸವು ಹರಿದುಹೋಗದಿರುವುದಕ್ಕಾಗಿ ಕಲ್ಲಿನ ಮಧ್ಯಭಾಗದಲ್ಲಿ ಹಳ್ಳವಿರುವುದು. ಇದು ಒರಳಿನಂತಿರುವುದು. ಈ ಹಳ್ಳವಾದ ಭಾಗದಲ್ಲಿ ಸೋಮಲತೆಗಳನ್ನು ಹಾಕಿ ಗ್ರಾವಾ ಎಂಬ ಮತ್ತೊಂದು ಕಲ್ಲಿನಿಂದ ಜಜ್ಜಿ ರಸವನ್ನು ತೆಗೆಯುವರು. ಲತೆಯನ್ನು ಜಜ್ಜಿದ ಮೇಲೆ ರಸವು ಕಲ್ಲಿನಲ್ಲಿರುವ ಹಳ್ಳ ಭಾಗದಲ್ಲಿ ನಿಲ್ಲುವುದು. ಎಳ್ಳನ್ನು ಗಾಣವಾಡಿದ ಮೇಲೆ ಎಣ್ಣೆಯು ಗಾಣದಲ್ಲಿ ನಿಲ್ಲುವಂತೆ. ಉಲೂಖಲ ಶಬ್ದಕೆ ಯಾಸ್ಕರು—

> **ಉಲೂಖಲಂ । ಉಲೂಖಲಮುರುಕರಂ ವೋರ್ಧ್ವಖಂ ವೋರ್ಕ್ಕರಂ ವೋರು ಮೇ ಕುರ್ವಿತ್ಯಬ್ರವೀತ್ತದುಲೂಖಲಮಭವತ್ । ಉರುಕರಂ ವೈತತ್ತದುಲೂಖಲಮಿತ್ಯಾಚಕ್ಷತೇ ಪರೋಕ್ಷೇಣೇತಿ ಬ್ರಾಹ್ಮಣಂ ॥** (ನಿ. ೯-೨೦).

ಎಂದರೆ **ಉಲೂಖಲ**ವೆಂಬ ಶಬ್ದದಲ್ಲಿ ಲಕಾರಕ್ಕೆ ಬದಲಾಗಿ (ಲಕಾರ ರಕಾರಗಳಿಗೆ ಭೇದವಿಲ್ಲದ್ದರಿಂದ) ರಕಾರವನ್ನು ಇಟ್ಟುಕೊಳ್ಳಬೇಕು. ಆಗ ಉರುಖರಂ ಅಥವಾ ಉರುಕರಂ ಎಂದಾಗುವುದು. ಈಗ **ಉರುಕರಂ— ಉರು ಬಹು ಅಥವಾ ಬಹ್ವನ್ನಂ ಕರೋತಿ ಉರುಕರಂ** ॥ (ಇದರಲ್ಲಿ ಧಾನ್ಯಾದಿಗಳನ್ನು ಕುಟ್ಟುವುದರಿಂದ) ಬಹಳವಾದ ಅನ್ನವು (ಆಹಾರವು) ಉಂಟಾಗುವುದು. ಬಹಳವಾದುದನ್ನು ಉಂಟುಮಾಡುವುದರಿಂದ ಇದಕ್ಕೆ **ಉರುಕರಂ** ಎಂದು ಹೆಸರು. ಅಥವಾ ಊರ್ಧ್ವ+ಖಂ= **ಊರ್ಧ್ವಖಂ= ಉರುಕರಂ** ಎಂದರೆ ಇದರಲ್ಲಿ ಧಾನ್ಯವನ್ನುಹಾಕಿ ಮುಸಲದಿಂದ ಮೇಲಕ್ಕೆತ್ತಿ ಕುಟ್ಟುವುದರಿಂದ (ಖನ್-ಅಗಿ) ಉರುಕರವೆಂದು ಹೆಸರು. ಅಥವಾ **ಊರ್ಕರಂ= ಉರುಕರಂ ಊರ್ಕ್** ಎಂದರೆ ರಸವು, ಅದನ್ನು (ಸೋಮರಸವನ್ನು) ಉಂಟುಮಾಡುವುದರಿಂದ ಎಂದರೆ ಇದರಲ್ಲಿ ಸೋಮಲತೆಯನ್ನು ಜಜ್ಜಿ ಸೋಮರಸವನ್ನು ತೆಗೆಯುವುದರಿಂದ **ಊರ್ಕರಂ** ಅಥವಾ **ಉರುಕರ**ವೆಂದು ಹೆಸರು. ಅಥವಾ **ಉರು ಮೇ ಕುರು ಇತ್ಯಬ್ರವೀತ್** ಎಂಬ ವಾಕ್ಯವನ್ನು ಹೇಳುವಾಗ ಇದರ ಅರ್ಥವನ್ನನುಸರಿಸಿ **ಉರುಕರಂ** ಎಂದು ಹೆಸರು. **ಉರುಕರಂ** ಎಂದರೆ **ಉಲೂಖಲ**ವೆಂದು ಏಕೆ ಹೇಳಬೇಕೆಂದರೆ ಈ ವಿಷಯದಲ್ಲಿ—**ಉರುಕರಂ ವೈತತ್ತ-ದುಲೂಖಲಮಿತ್ಯಾಚಕ್ಷತೇ ಪರೋಕ್ಷೇಣೇತಿ ಚ ಬ್ರಾಹ್ಮಣಂ** ॥ ಎಂದರೆ ಉರುಕರವೆಂದರೆ ಉಲೂಖಲವು ಎಂದು ಬ್ರಾಹ್ಮಣವಾಕ್ಯವಿರುವುದು ಎಂದು ಅದನ್ನು ಇಲ್ಲಿ ಉದಾಹರಿಸಿರುವರು. ಪ್ರಕೃತಸಂದರ್ಭದಲ್ಲಿ **ಉಲೂಖಲ. ಸುತಾನಾಂ** ಎಂಬ ಶಬ್ದಕ್ಕೆ **ಉಲೂಖಲ**ವೆಂದು ಕರೆಯಲ್ಪಡುವ ಒರಳಿನಲ್ಲಿ ಜಜ್ಜಿದ ಸೋಮರಸದ ಭಾಗವನ್ನು ಎಂದರ್ಥವು. ಈ ಉಲೂಖಲವು ಹತ್ತು ಯಜ್ಞಾಯುಧಗಳೆಂದು ಹೇಳಲ್ಪಡುವ ಯಜ್ಞಸಾಧನವಸ್ತುಗಳಲ್ಲಿ ಒಂದಾಗಿರುವುದು. ಈ ವಿಷಯದಲ್ಲಿ—

> **ಯೋ ವೈ ದಶ ಯಜ್ಞಾಯುಧಾನಿ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ ಯ ಏವಂ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ** ॥ (ತೈ. ಸಂ. ೧-೬-೮)

ಎಂದು ಕೃಷ್ಣಯಜುರ್ವೇದ ತೈತ್ತಿರೀಯ ಸಂಹಿತಾ ವಚನವಿರುವುದು ಎಂದರೆ ಯಜ್ಞದಲ್ಲಿ ಉಪಯೋಗಿಸುವ ಮುಖ್ಯಸಾಧನಗಳು ಹತ್ತು—

(೧) **ಸ್ಫ್ಯಃ—ಚ್ಛೇದನಾಧಿಕೃತ್** । ದರ್ಭೆ ಮೊದಲಾದವುಗಳನ್ನು ಕತ್ತರಿಸುವುದಕ್ಕಾಗಿ ಉಪಯೋಗಿಸುವ ಚಾಕು.

(೨) **ಕಪಾಲಾನಿ—ಹವಿರಧಿಶ್ರಯಣಾರ್ಥಾನಿ** । ಹವಿಸ್ಸನ್ನು ಎಂದರೆ ಪುರೋಡಾಶವೆಂಬ ಹವಿಸ್ಸನ್ನು ಬೆಂಕಿಯ ಮೇಲಿಟ್ಟು ಬೇಯಿಸುವ ಮಣ್ಣಿನ ತವೆ.

(೩) **ಅಗ್ನಿಹೋತ್ರಹವಣೀ**—ಹವಿಸ್ಸನ್ನು ಹೋಮಮಾಡುವುದಕ್ಕಾಗಿ ಉಪಯೋಗಿಸುವ ಸೌಟಿನಂತಿರುವ ಮರದ ಪಾತ್ರೆ,

(೪) **ಶೂರ್ಪ**—ಧಾನ್ಯವನ್ನು ಕೇರುವುದಕ್ಕಾಗಿ ಉಪಯೋಗಿಸುವ ಮರ.

(೫) **ಕೃಷ್ಣಾಜಿನಂ**—ಒರಳಿನ ಹತ್ತಿರ ಉಪಯೋಗಿಸುವ ಕೃಷ್ಣಾಜಿನವೆಂಬ ಜಿಂಕೆಯ ಚರ್ಮವು.

(೬) **ಶಮ್ಯಾ**--ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ಉಪಯೋಗಿಸುವ ಆಯುಧ.

(೭) **ಉಲೂಖಲಂ**—ಧಾನ್ಯವನ್ನು ಕುಟ್ಟುವುದಕ್ಕೂ ಸೋಮರಸವನ್ನು ಜಜ್ಜುವುದಕ್ಕೂ ಉಪಯೋಗಿಸುವ ಒರಳು.

(೮) **ಮುಸಲಂ**—ಧಾನ್ಯವನ್ನು ಕುಟ್ಟುವ ಒನಕೆಯು.

(೯) **ದೃಷತ್**—ಸೋಮರಸವನ್ನು ಜಜ್ಜುವಾಗ ಕೆಳಭಾಗದಲ್ಲಿ ಉಪಯೋಗಿಸುವ ಕಲ್ಲು, ಅಥವಾ ಕಲ್ಲುಬತ್ತು. ಇದಕ್ಕೆ ಗ್ರಾವಾ ಎಂದೂ ಹೆಸರು.

(೧೦) **ಉಪಲಾ**—ಮೇಲೆ ಹೇಳಿದ **ದೃಷತ್** ಎಂಬ ಕಲ್ಲಿನ ಮೇಲೆ ಇಡುವ ವಸ್ತುವನ್ನು ಅರೆಯುವುದಕ್ಕೆ ಉಪಯೋಗಿಸುವ ಗುಂಡುಕಲ್ಲು. ಇದಕ್ಕೆ ಗ್ರಾವಾ ಅಥವಾ ಅದ್ರಿಯೆಂದೂ ಹೆಸರು.

ಈ ಹತ್ತು ವಿಧ ಯಜ್ಞಸಾಧನಗಳಲ್ಲಿ ಸೋಮವನ್ನು ಜಜ್ಜುವ ಗ್ರಾವಾ ಎಂಬ ಕಲ್ಲೂ ಸೇರಿದೆ.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆಗಳನ್ನು ಜಜ್ಜುವ ಕಲ್ಲುಕಳಿಗೆ **ಗ್ರಾವಾ- ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು. ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಪ್ಪಟದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ, ಶುಚಿ, ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರುವುದು. ಇಂದ್ರನಿಗೂ, ವಾಯುವಿಗೂ ಶುದ್ಧವಾದ ಎಂದರೆ ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸುವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸುವುದುಂಟು. ಇವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ, ಯವಾಶಿರ** ಎಂಬ ಹೆಸರುಗಳಿವೆ.



। ಸಾಯಣಭಾಷ್ಯಂ ।

ಆ ವ ಇತ್ಯಷ್ಟರ್ಚಮಷ್ಟಮಂ ಸೂಕ್ತಂ । ಇರಾವತಃ ಪುತ್ರಸ್ಯ ಸರ್ಪಜಾತೇರ್ಜರತ್ಕರ್ಣನಾಮ **ಆರ್ಷಂ । ಜಾಗತಂ । ಸೋಮಾಭಿಷವಾರ್ಥಾ ಯೇ ಗ್ರಾವಾಣಸ್ತದ್ದೇವತ್ಯಂ । ತಥಾ ಚಾನುಕ್ರಾಂತಂ ।**

ಆ ವೋಽಷ್ಟೌ ಸರ್ಪ ಐರಾವತೋ ಜರತ್ಕರ್ಣೋ ಗ್ರಾವ್ಣೋಽಸ್ತೌದಿತಿ॥ ಗ್ರಾವಸ್ತೋತ್ರ ಏತತ್ಸೂಕ್ತಂ। ಸೂತ್ರಿತಂ ಚ। ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋರಂತರೋಪರಿಷ್ಟಾತ್ಪರಸ್ತಾದ್ವಾ। ಆ. ೫-೧೨ । ಇತಿ ॥

ಅನುವಾದವು— ಆ ವಃ ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇರಾವತ ಪುತ್ರನಾದ ಸರ್ಪಜಾತಿಯ ಜರತ್ಕರ್ಣ ಎಂಬುವನು ಋಷಿಯು; ಸೋಮಾಭಿಷವಣಕಾಲದಲ್ಲಿ ಉಪಯೋಗಿಸುವ ಗ್ರಾವಾಣಃ ಎಂಬ ಕಲ್ಲುಗಳೇ ದೇವತೆಯು; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— ಆ ವೋಽಷ್ಟೌ ಸರ್ಪ ಐರಾವತೋ ಜರತ್ಕರ್ಣೋ ಗ್ರಾವ್ಣೋಽಸ್ತೌತ್ ಎಂದು ಹೇಳಿರುವುದು. ಆದ್ದರಿಂದ ಈ ಸೂಕ್ತದಲ್ಲಿ ಗ್ರಾವಸ್ತುತಿಯಿರುವುದು. ಆಶ್ವಲಾಯನಶ್ರೌತಸೂತ್ರದಲ್ಲಿ ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋರಂತರೋಪರಿಷ್ಟಾತ್ಪರಸ್ತಾದ್ವಾ (ಆ. ೫.೧೨) ಎಂದು ಹೇಳಿರುವುದು.

## ಸೂಕ್ತ— ೭೬

ಮಂಡಲ— ೧೦ ॥ ಅನುವಾಕ— ೬ ॥ ಸೂಕ್ತ— ೭೬ ॥
ಅಷ್ಟಕ— ೮ ॥ ಅಧ್ಯಾಯ— ೪ ॥ ವರ್ಗ— ೮, ೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ— ೮ ॥
ಋಷಿಃ— ಜರತ್ಕರ್ಣ ಐರಾವತಃ ಸರ್ಪಃ ॥
ದೇವತಾ— ಗ್ರಾವಾಣಃ ॥
ಛಂದಃ— ಜಗತೀ ॥

॥ ಸಂಹಿತಾಪಾಠಃ ॥

ಆ ವ ಋಂಜಸ ಊರ್ಜಾಂ ವ್ಯುಷ್ಟಿಷ್ವಿಂದ್ರಂ ಮರುತೋ ರೋದಸೀ ಅನಕ್ತನ ।
ಉಭೇ ಯಥಾ ನೋ ಅಹನೀ ಸಚಾಭುವಾ ಸದಃಸದೋ ವರಿವಸ್ಯಾತ ಉದ್ಭಿದಾ ॥ ೧ ॥

॥ ಪದಪಾಠಃ ॥

ಆ । ವಃ । ಋಂಜಸೇ । ಊರ್ಜಾಂ । ವಿಽಉಷ್ಟಿಷು । ಇಂದ್ರಂ । ಮರುತಃ । ರೋದಸೀ ಇತಿ । ಅನಕ್ತನ ।
ಉಭೇ ಇತಿ । ಯಥಾ । ನಃ । ಅಹನೀ ಇತಿ । ಸಚಾಽಭುವಾ । ಸದಃಽಸದಃ । ವರಿವಸ್ಯಾತಃ । ಉತ್ಽಭಿದಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಗ್ರಾವಾಣಃ ವೋ ಯುಷ್ಮಾನೂರ್ಜಾಂ ಸಾರಭೂತಾನಾಮನ್ನವತೀನಾಂ ವೋಷಸಾಂ ವ್ಯುಷ್ಟಿಷು ವಿಭಾತೇಷು ಸತ್ಸ್ವ ಋಂಜಸೇ । ಅಪ್ರಸಾಧಯಾಮಿ । ಯೂಯಂ ಸೋಮೇನೇಂದ್ರಂ ಮರುತೋ ರೋದಸೀ ದ್ಯಾವಾಪೃಥಿವ್ಯೌ ಚಾನಕ್ತನ । ವ್ಯಂಜಯತ । ನೋಽಸ್ಮಾನುಭೇ ಸಚಾಭುವಾ ಸಹೋತ್ಪನ್ನೇ ಅಹನೀ ದ್ಯಾವಾಪೃಥಿವ್ಯೌ ಸದಃಸದಃ ಸರ್ವೇಷು ಯಾಗಗೃಹೇಷು ವರಿವಸ್ಯಾತಃ । ಪರಿಚರತಃ ॥ ಉದ್ಭಿದೋದ್ಭೇದಕೇನ ಧನೇನ ಪೂರಯತಾಮಿತಿ ॥

॥ ಪ್ರತಿಪದಾರ್ಥ ॥

(ಸೋಮವನ್ನು ಹಿಂಡುವ ಎಲೈ ಗ್ರಾವಗಳೇ) **ವಃ**—ನಿಮ್ಮನ್ನು । **ಊರ್ಜಾಂ**—ಅನ್ನಯುತರಾದ ಉಷಸ್ಸುಗಳ । **ವ್ಯುಷ್ಟಿಷು**—ಆವಿರ್ಭಾವಕಾಲದಲ್ಲಿ । **ಆ ಋಂಜಸೇ**—ಆರಾಧಿಸುತ್ತೇನೆ । (**ಯೂಯಂ**—ನೀವು) । **ಇಂದ್ರಂ**—ಇಂದ್ರನನ್ನೂ । **ಮರುತಃ**—ಮರುತ್ತುಗಳನ್ನೂ । **ರೋದಸೀ**—ದ್ಯಾವಾಪೃಥಿವಿಗಳನ್ನೂ । **ಅನಕ್ತನ**—ಪ್ರಕಾಶಪಡಿಸುತ್ತೀರಿ । **ನಃ**—ನಮ್ಮನ್ನು । **ಸಚಾಭುವಾ**—ಸಹೋತ್ಪನ್ನಗಳಾದ । **ಉಭೇ ಅಹನೀ**—ದ್ಯಾವಾಪೃಥಿವಿಗಳೆರಡೂ । **ಸದಃಸದಃ**—ಸಕಲ ಯಾಗಗೃಹಗಳಲ್ಲಿಯೂ । **ವರಿವಸ್ಯಾತಃ**—ಉಪಚರಿಸುತ್ತವೆ । **ಉದ್ಭಿದಾ**—ಪುಷ್ಕಲವಾದ ಧನದಿಂದ ನಮ್ಮನ್ನು ಸಂಪದ್ಯುಕ್ತರನ್ನಾಗಿ ಮಾಡಲಿ.

॥ ಭಾವಾರ್ಥ ॥

ಸೋಮವನ್ನು ಹಿಂಡುವ ಎಲೈ ಗ್ರಾವಗಳೇ, ನಿಮ್ಮನ್ನು ಅನ್ನಯುತರಾದ ಉಷಸ್ಸುಗಳ ಆವಿರ್ಭಾವಕಾಲದಲ್ಲಿ ಆರಾಧಿಸುತ್ತೇನೆ. ನೀವು ಇಂದ್ರನನ್ನೂ, ಮರುತ್ತುಗಳನ್ನೂ, ದ್ಯಾವಾಪೃಥಿವಿಗಳನ್ನೂ ಪ್ರಕಾಶಪಡಿಸುತ್ತೀರಿ. ಸಹೋತ್ಪನ್ನಗಳಾದ ದ್ಯಾವಾಪೃಥಿವಿಗಳೆರಡೂ ನಮ್ಮನ್ನು ಸಕಲ ಯಾಗಗೃಹಗಳಲ್ಲಿಯೂ ಉಪಚರಿಸುತ್ತವೆ. ಪುಷ್ಕಲವಾದ ಧನದಿಂದ ನಮ್ಮನ್ನು ಸಂಪದ್ಯುಕ್ತರನ್ನಾಗಿ ಮಾಡಲಿ.

## English Translation

I propitiate you at the commencement of the food-possessing (dawns); you reveal Indra, the Maruts, heaven and earth; both heaven and earth being united attend on us in all the chambers of sacrifice; (may they fill us) with wealth.

॥ ವಿಶೇಷವಿಷಯಗಳು ॥

ಈ ಸೂಕ್ತದಲ್ಲಿ ನಿರ್ಜೀವವಸ್ತುಗಳಾದ ಗ್ರಾವ (ಕಲ್ಲು) ಗಳನ್ನು ದೇವತೆಗಳೆಂದು ಭಾವಿಸಿ ಸ್ತುತಿಸಲಾಗಿರುವ ವಿಷಯದಲ್ಲಿ ಯಾಸ್ಕರು ಹೇಳಿರುವ ಸಮಾಧಾನವನ್ನೂ ವಿಸ್ತಾರವಾದ ವಿವರಣೆಯನ್ನೂ ಇದೇ ಭಾಗದಲ್ಲಿ 100·102 ನೇ ಪೇಜುಗಳಲ್ಲಿ ನೋಡಿ

ಈ ಋಕ್ಕಿನಲ್ಲಿರುವ ಋಂಜಸೇ ಎಂಬ ಶಬ್ದಕ್ಕೆ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ ಯಾಸ್ಕರು—

**ಋಂಜತಿಃ ಪ್ರಸಾಧನಕರ್ಮಾ । ಆ ವ ಋಂಜಸೇ ಊರ್ಜಾಂ ವ್ಯುಷ್ಟಿಷು ಇತ್ಯಪಿ ನಿಗಮೋ ಭವತಿ ।**

ಎಂದು ನಿರ್ವಚನವನ್ನು ಹೇಳಿದಾರೆ. ಋಂಜತಿಃ ಎಂದರೆ ಅಲಂಕರಿಸುವುದು ಎಂದರ್ಥವು ಎಂದರೆ ಗುಣಗಾನದಿಂದ ವಿಶೇಷವಾಗಿ ಸ್ತುತಿಸುವುದು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ತದು ಶ್ರೇಷ್ಠಂ ಸವನಂ ಸುನೋತನಾತ್ಯೋ ನ ಹಸ್ತಯತೋ ಅದ್ರಿಃ ಸೋತರಿ ।
ವಿದದ್ಧ್ಯರ್ಯೋ ಅಭಿಭೂತಿ ಪೌಂಸ್ಯಂ ಮಹೋ ರಾಯೇ ಚಿತ್ತರುತೇ ಯದರ್ವತಃ ॥ ೨ ॥

॥ ಪದಪಾಠಃ ॥

ತತ್ । ಊಂ ಇತಿ । ಶ್ರೇಷ್ಠಂ । ಸವನಂ । ಸುನೋತನ । ಅತ್ಯಃ । ನ । ಹಸ್ತಽಯತಃ । ಅದ್ರಿಃ । ಸೋತರಿ ।
ವಿದತ್ । ಹಿ । ಅರ್ಯಃ । ಅಭಿಽಭೂತಿ । ಪೌಂಸ್ಯಂ । ಮಹಃ । ರಾಯೇ । ಚಿತ್ । ತರುತೇ । ಯತ್ । ಅರ್ವತಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಗ್ರಾವಾಣಃ ಯೂಯಂ ತದು ತಮೇವ ಶ್ರೇಷ್ಠಂ ಪ್ರಶಸ್ಯಂ ಸವನಂ ಸೋಮಂ ಸುನೋತನ । ಅಭಿಷುಣುತ । ಅಥೈಕವದಾಹ । ಅದ್ರಿರಭಿಷವಗ್ರಾವಾ ಹಸ್ತಯತೋ ಹಸ್ತಾಭ್ಯಾಂ ಗೃಹೀತಃ ಸನ್ನತ್ಯೋ ನ ಧೃತೋಽಶ್ವ ಇವ ಭವತಿ ಸೋತರ್ಯಭಿಷವಕರ್ತರ್ಯಧ್ವರ್ಯೌ । ಸ ಯಥಾ ಹಸ್ತಾಭ್ಯಾಂ ದೃಢಗೃಹೀತೋಽಪಿ ಬಲವಾನ್ ತದ್ವತ್ । ಅರ್ಯೋ ಗ್ರಾವ್ಣಾಮಭಿಷವಾಯ ಪ್ರೇರಕೋ ಯಜಮಾನೋಽಭಿಭೂತಿ ಶತ್ರೂಣಾಮಭಿಭಾವುಕಂ ಪೌಂಸ್ಯಂ ಬಲಂ ವಿದದ್ಧಿ । ಲಭತೇ ಖಲು ದೇವೇಭ್ಯಃ । ಯದ್ವಾ । ಅಭಿಷವಾಯಾಧ್ವರ್ಯ್ವಾದೇಃ ಪ್ರೇರಿತೋ ಗ್ರಾವಾಭಿಭೂತಿ ಪೌಂಸ್ಯಂ ವಿದದ್ಯಜಮಾನಾರ್ಥಂ । ಕಿಂಚ ಮಹೇ ಮಹತೇ ರಾಯೇ ಚಿದ್ಧನಾಯಾಪಿ ಯದ್ಯೋ ಗ್ರಾವಾರ್ವತೋಽಶ್ವಾಂಸ್ತರುತೇ ತನುತೇ ಪ್ರಯಚ್ಛತಿ ॥**

॥ ಪ್ರತಿಪದಾರ್ಥ ॥

(ಎಲೈ ಗ್ರಾವಗಳೇ) **ಶ್ರೇಷ್ಠಂ**—ಉತ್ತಮವಾದ । **ತದು ಸವನಂ**—ಅದೇ ಸೋಮವನ್ನು । **ಸುನೋತನ**—ಹಿಂಡಿರಿ । **ಸೋತರಿ**—ಅಧ್ವರ್ಯುವು ಸೋಮವನ್ನು ಹಿಂಡುವ ಸಮಯದಲ್ಲಿ । **ಅದ್ರಿಃ**—ಹಿಂಡುವ ಕಲ್ಲು ।

**ಹಸ್ತಯತಃ**—ಕೈಗಳಿಂದ ಹಿಡಿಯಲ್ಪಟ್ಟು । **ಅತ್ಯೋ ನ**—ಅಶ್ವದಂತೆ ಕಾಣುತ್ತದೆ । **ಮಹೇ**—ಮಹತ್ತಾದ । **ರಾಯೇ ಚಿತ್**—ಧನಕ್ಕಾಗಿ । **ಯತ್**—ಯಾವ ಗ್ರಾವವು । **ಅರ್ವತಃ**—ಅಶ್ವಗಳನ್ನು । **ತರುತೇ**—ಒದಗಿಸುವುದೋ (ಅದರಿಂದ) । **ಅರ್ಯಃ**—ಪ್ರೇರಕನಾದ ಯಜಮಾನನು । **ಅಭಿಭೂತಿ**—ಶತ್ರುಗಳನ್ನು ಸೋಲಿಸಬಲ್ಲ । **ಪೌಂಸ್ಯಂ**—ಬಲವನ್ನು । **ವಿದದ್ಧಿ**—ಹೊಂದುತ್ತಾನೆ.

॥ ಭಾವಾರ್ಥ ॥

ಎಲೈ ಗ್ರಾವಗಳೇ, ಉತ್ತಮವಾದ ಸೋಮವನ್ನು ಹಿಂಡಿರಿ. ಅಧ್ವರ್ಯುವು ಸೋಮವನ್ನು ಹಿಂಡುವ ಸಮಯದಲ್ಲಿ ಹಿಂಡುವ ಕಲ್ಲು ಕೈಗಳಿಂದ ಹಿಡಿಯಲ್ಪಟ್ಟ ಅಶ್ವದಂತೆ ಕಾಣಿಸುತ್ತದೆ. ಮಹತ್ತಾದ ಧನಕ್ಕಾಗಿ ಯಾವ ಗ್ರಾವವು ಅಶ್ವಗಳನ್ನು ಒದಗಿಸುವುದೋ ಅದರಿಂದ ಪ್ರೇರಕನಾದ ಯಜಮಾನನು ಶತ್ರುಗಳನ್ನು ಸೋಲಿಸಬಲ್ಲ ಬಲವನ್ನು ಹೊಂದುತ್ತಾನೆ.

English Translation

Pour forth this excellent libation; the stone grasped by the hand is like a horse when the grinder (effuses the Soma); the animating (worshipper) acquires virile strength overpowering (his foes) when (the stone) bestows horses for the sake of great wealth.

॥ ಸಂಹಿತಾಪಾಠಃ ॥

ತದಿದ್ಧ್ಯಸ್ಯ ಸವನಂ ವಿವೇರಪೋ ಯಥಾ ಪುರಾ ಮನವೇ ಗಾತುಮಶ್ರೇತ್ ।
ಗೋಅರ್ಣಸಿ ತ್ವಾಷ್ಟ್ರೇ ಅಶ್ವನಿರ್ಣಿಜಿ ಪ್ರೇಮಧ್ವರೇಷ್ವಧ್ವರಾಁ ಅಶಿಶ್ರಯುಃ ॥

॥ ಪದಪಾಠಃ ॥

ತತ್ । ಇತ್ । ಹಿ । ಅಸ್ಯ । ಸವನಂ । ವಿವೇಃ । ಅಪಃ । ಯಥಾ । ಪುರಾ । ಮನವೇ । ಗಾತುಂ । ಅಶ್ರೇತ್ ।
ಗೋಽಅರ್ಣಸಿ । ತ್ವಾಷ್ಟ್ರೇ । ಅಶ್ವಽನಿರ್ನಿಜಿ । ಪ್ರ । ಈಂ । ಅಧ್ವರೇಷು । ಅಧ್ವರಾನ್ । ಅಶಿಶ್ರಯುಃ ॥ ೬ ॥

॥ ಸಾಯಣಭಾಷ್ಯಂ ॥

ಇದಿತಿ ಪೂರಣಃ । ಅಸ್ಯ ಗ್ರಾವ್ಣಸ್ತತ್ಸವನಮಭಿಷವೋಪೇತಮಸ್ಮದೀಯಂ ಸೋಮಯಾಗಾಖ್ಯಮಪಃ ಕರ್ಮ ವಿವೇಃ । ವ್ಯಾಪ್ನೋತು ॥ ವಿಪೂರ್ವಸ್ಯ ವೇತೇರ್ಲಙ್ಯದಾದಿತ್ವಾಚ್ಛಪೋ ಲುಕ್ । ವೇತೇರ್ವಿಪೂರ್ವಸ್ಯ ವಾ ಛಾಂದಸೇ ಶ್ಲೌ ವಾಪರರೂಪಮಿತಿ ಸಂದೇಹಾದನವಗ್ರಹಃ । ಸಮಾಸಸ್ವರಃ ॥ ಯಥಾ ಪುರಾ ಮನವೇ ರಾಜ್ಞೇ ಗಾತುಂ ಗಮನಮಶ್ರೇತ್ ಆಜಗಾಮ ತದ್ವದ್ವ್ಯಾಪ್ನೋತು । ಕಿಂಚ

**ಗೋಅರ್ಣಸಿ ಗೋರೂಪೇಽಪಹೃತೈರ್ಗೋಭಿಃ ಪರಿವೃತೇ ತಥಾಶ್ವನಿರ್ಣಿಜಿ। ನಿರ್ಣಗಿತಿ ರೂಪನಾಮ। ಅಶ್ವರೂಪೇ। ಅಪಹೃತೈರಶ್ವೈರ್ವೃತ ಇತ್ಯರ್ಥಃ। ಈದೃಶೇ ತ್ವಾಷ್ಟ್ರೇ ತ್ವಷ್ಟುಃ ಪುತ್ರೇ ಹಂತವ್ಯೇ ಸತೀತಿ ಶೇಷಃ। ಈಮೇತಾನಧ್ವರಾನಸುರೈರಹಿಂಸ್ಯಾನಧ್ವರಸಾಧಕಾನ್ಗ್ರಾವ್ಣೋಽಪಲಾನಧ್ವರೇಷ್ವಶಿಶ್ರಯುಃ। ಆಶ್ರಯಂತಿ ಪೂರ್ವೇ ಯಜಮಾನಾಃ॥**

। ಪ್ರತಿಪದಾರ್ಥ।

**ಯಥಾ**—ಯಾವ ರೀತಿ। **ಪುರಾ**—ಹಿಂದೆ। **ಮನವೇ**—ಮನುವಿನಲ್ಲಿಗೆ। **ಗಾತುಂ**—ಗಮನವನ್ನು। **ಅಶ್ರೇತ್**—ಹೊಂದಿತೋ ಹಾಗೆ। **ಅಸ್ಯ**—ಈ ಗ್ರಾವದ। **ಸವನಂ**—ಸೋಮಾಭಿಷವರೂಪವಾದ। **ಅಪಃ**—ಕರ್ಮವು। **ವಿವೇಃ**—ವ್ಯಾಪಿಸಲಿ। **ಗೋಅರ್ಣಸಿ**—ಅಪಹೃತವಾದ ಗೋವುಗಳಿಂದ ಸುತ್ತುವರಿಯಲ್ಪಟ್ಟವನೂ। **ಅಶ್ವನಿರ್ಣಿಜಿ**—ಅಶ್ವರೂಪವನ್ನು ಧರಿಸಿದವನೂ ಆದ। **ತ್ವಾಷ್ಟ್ರೇ**—ತ್ವಷ್ಟೃಪುತ್ರನು ಕೊಲ್ಲಲ್ಪಡುವ ಕಾಲದಲ್ಲಿ। **ಈಂ ಅಧ್ವರಾನ್**—ಈ ಯಜ್ಞಸಾಧಕಗಳಾದ ಗ್ರಾವಗಳನ್ನು। **ಅಧ್ವರೇಷು**—ಯಜ್ಞಗಳಲ್ಲಿ। **ಪ್ರ ಅಶಿಶ್ರಯುಃ**—ಯಜಮಾನರು ಹಿಡಿದುಕೊಂಡರು.

। ಭಾವಾರ್ಥ।

ಯಾವ ರೀತಿ ಹಿಂದೆ ಮನುವಿನಲ್ಲಿಗೆ ಇದರ ಕರ್ಮವು ವ್ಯಾಪಿಸಿ ಹೋಯಿತೋ, ಅದೇ ರೀತಿ ಈ ಗ್ರಾವದ ಸೋಮಾಭಿಷವರೂಪವಾದ ಕರ್ಮವು ವ್ಯಾಪಿಸಲಿ. ಅಪಹೃತವಾದ ಗೋವುಗಳಿಂದ ಸುತ್ತುವರೆಯಲ್ಪಟ್ಟವನೂ, ಅಶ್ವರೂಪವನ್ನು ಧರಿಸಿದವನೂ ಆದ ತ್ವಷ್ಟೃಪುತ್ರನು ಕೊಲ್ಲಲ್ಪಡುವ ಕಾಲದಲ್ಲಿ ಈ ಯಜ್ಞಸಾಧಕಗಳಾದ ಗ್ರಾವಗಳನ್ನು ಯಜ್ಞಗಳಲ್ಲಿ ಯಜಮಾನರು ಸೋಮಾಭಿಷವಾರ್ಥವಾಗಿ ಹಿಡಿದುಕೊಂಡರು.

English Translation

May this (sacrificial) work of this grinding-stone, the effusion of the Soma, spread as it went formerly along the path to Manu; when the son of Twashtri, hidden by the (stolen) cows, and assuming the form of a horse, (was to be slain), the worshippers had recourse at the sacrifices to the inviolable (upper grinding-stones).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ತ್ವಷ್ಟೃಪುತ್ರನು ಇಂದ್ರನಿಂದ ಸಂಹರಿಸಲ್ಪಟ್ಟ ವಿಷಯದ ಪ್ರಸ್ತಾಪವಿದೆ. ಆ ವಿಷಯವನ್ನು ನಾವು ಭಾಗ ೧೪ ಪುಟ 626-631 ಗಳಲ್ಲಿ ವಿವರಿಸಿದೇವೆ.

॥ ಸಂಹಿತಾಪಾಠಃ ॥

**ಅಪ ಹತ ರಕ್ಷಸೋ ಭಂಗುರಾವತಃ ಸ್ಕಭಾಯತ ನಿರ್ಋತಿಂ ಸೇಧತಾಮತಿಂ।**
**ಆ ನೋ ರಯಿಂ ಸರ್ವವೀರಂ ಸುನೋತನ ದೇವಾವ್ಯಂ ಭರತ ಶ್ಲೋಕಮದ್ರಯಃ ॥ ೪ ॥**

॥ ಪದಪಾಠಃ ॥

ಅಪ । ಹತ । ರಕ್ಷಸಃ । ಭಂಗುರऽವತಃ । ಸ್ಕಭಾಯತ । ನಿಃऽಋತಿಂ । ಸೇಧತ । ಅಮತಿಂ ।

ಆ । ನಃ । ರಯಿಂ । ಸರ್ವऽವೀರಂ । ಸುನೋತನ । ದೇವऽಅವ್ಯಂ । ಭರತ । ಶ್ಲೋಕಂ । ಅದ್ರಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅದ್ರಯಃ ಯೂಯಮಪ ಹತ ವಿನಾಶಯತ ರಕ್ಷಸೋ ರಾಕ್ಷಸಾನ್ । ಕೀದೃಶಾನ್ । ಭಂಗುರಾವತೋ ಭಂಜಕೇನ ಕರ್ಮಣಾ ತದ್ವತಃ । ತಥಾ ಸ್ಕಭಾಯತ ದೂರೇ ಪರಿಹರತ ನಿರ್ಋತಿಂ ಪಾಪದೇವತಾಂ । ಯಥಾಯಂ ಯಜ್ಞಂ ನಾಗಚ್ಛತಿ ತಥಾ । ಕಿಂಚ ಸೇಧತ ನಿಷೇಧತಾಮತಿಂ ಹಿಂಸಾಮತಿಂ ರಕ್ಷಃಪ್ರಭೃತಿಂ । ಕಿಂಚ ನೋऽಸ್ಮಾಕಂ ಸರ್ವವೀರಂ ಬಹುಪುತ್ರಾದ್ಯುಪೇತಂ ರಯಿಂ ಧನಮಾ ಸುನೋತನ । ಅಭಿಷವೇನ ಪುತ್ರಧನಾದೀನಾಂ ಲಾಭಾದೇವಮುಕ್ತಂ । ಕಿಂಚ ದೇವಾವ್ಯಂ ದೇವಪ್ರೀಣನಂ ಶ್ಲೋಕಂ ಭರತ । ಸಂಪಾದಯತ ॥

॥ ಪ್ರತಿಪದಾರ್ಥ ॥

**ಅದ್ರಯಃ**— ಎಲೈ ಕಲ್ಲುಗಳೇ । **ಭಂಗುರಾವತಃ**— ಕರ್ಮಕ್ಕೆ ವಿಘ್ನವನ್ನುಂಟುಮಾಡುವ । **ರಕ್ಷಸಃ**— ರಾಕ್ಷಸರನ್ನು । **ಅಪ ಹತ**— ನಾಶಮಾಡಿರಿ । **ನಿರ್ಋತಿಂ**— ನಾಶಕರವಾದ ಪಾಪದೇವತೆಯನ್ನು । **ಸ್ಕಭಾಯತ**— ದೂರಕ್ಕೆ ಓಡಿಸಿರಿ । **ಅಮತಿಂ**— ದುಷ್ಟಬುದ್ಧಿಯುಳ್ಳಯುಳ್ಳವರನ್ನು । **ಸೇಧತ**— ತಡೆಯಿರಿ । **ನಃ**— ನಮಗೆ । **ಸರ್ವವೀರಂ**— ಅನೇಕ ಪುತ್ರಾದಿಗಳಿಂದ ಕೂಡಿದ । **ರಯಿಂ**— ಧನವನ್ನು । **ಆ ಸುನೋತನ**— ಒದಗಿಸಿಕೊಡಿರಿ । **ದೇವಾವ್ಯಂ**— ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ । **ಶ್ಲೋಕಂ**— ಸ್ತೋತ್ರವನ್ನು । **ಭರತ**— ಸಂಪಾದಿಸಿರಿ.

॥ ಭಾವಾರ್ಥ ॥

ಎಲೈ ಕಲ್ಲುಗಳೇ, ಕರ್ಮಕ್ಕೆ ವಿಘ್ನವನ್ನುಂಟುಮಾಡುವ ರಾಕ್ಷಸರನ್ನು ನಾಶಮಾಡಿರಿ. ನಾಶಕರವಾದ ಪಾಪದೇವತೆಯನ್ನು ದೂರಕ್ಕೆ ಓಡಿಸಿರಿ. ದುಷ್ಟಬುದ್ಧಿಯುಳ್ಳವರನ್ನು ತಡೆಯಿರಿ. ನಮಗೆ ಅನೇಕ ಪುತ್ರಾದಿಗಳಿಂದ ಕೂಡಿದ ಧನವನ್ನು ಒದಗಿಸಿಕೊಡಿರಿ. ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ ಸ್ತೋತ್ರವನ್ನು ಸಂಪಾದಿಸಿರಿ.

English Translation

Drive away the disturbing Rakshasas; keep off Nirriti; prohibit all malignity; effuse for us riches with male progeny; bear, stones, the praise that delights the gods.

॥ ಸಂಹಿತಾಪಾಠಃ ॥

ದಿವಶ್ಚಿದಾ ವೋಽಮವತ್ತರೇಭ್ಯೋ ವಿಭ್ವನಾ ಚಿದಾಶ್ವಪಸ್ತರೇಭ್ಯಃ ।

ವಾಯೋಶ್ಚಿದಾ ಸೋಮರಭಸ್ತರೇಭ್ಯೋऽಗ್ನೇಶ್ಚಿದರ್ಚ ಪಿತುಕೃತ್ತರೇಭ್ಯಃ ॥

॥ ಪದಪಾಠಃ ॥

ದಿವಃ । ಚಿತ್ । ಆ । ವಃ । ಅಮವತ್ಽತರೇಭ್ಯಃ । ವಿಽಭ್ವನಾ । ಚಿತ್ । ಆಶ್ವಪಃಽತರೇಭ್ಯಃ ।
ವಾಯೋಃ । ಚಿತ್ । ಆ । ಸೋಮರಭಃಽತರೇಭ್ಯಃ । ಅಗ್ನೇಃ । ಚಿತ್ । ಅರ್ಚ । ಪಿತುಕೃತ್ಽತರೇಭ್ಯಃ ॥

॥ ಸಾಯಣಭಾಷ್ಯಂ ॥

ದಿವಶ್ಚಿದಾದಿತ್ಯಾದಪ್ಯಮವತ್ತರೇಭ್ಯೋಽತ್ಯಂತಂ ಬಲವದ್ಭ್ಯೋ ವೋ ಯುಷ್ಮಭ್ಯಮಾರ್ಚ । ಅಸ್ತೌದಧ್ವರ್ಯುಃ । ಯದ್ವಾ । ಹೇ ಅಧ್ವರ್ಯ್ವಾದಯಃ ವೋ ಯೂಯಮುಚ್ಯಮಾನಲಕ್ಷಣೇಭ್ಯೋ ಗ್ರಾವಭ್ಯ ಆ ಸರ್ವತೋಽರ್ಚ । ಅರ್ಚತೇತ್ಯೇವಂ ಪ್ರತಿವಾಕ್ಯಂ ಯೋಜ್ಯಂ । ವಿಭ್ವನಾ ಚಿತ್ । ವಿಭ್ವಾ ಸುಧನ್ವನಃ ಪುತ್ರಃ । ತೇನಾಪ್ಯಾಶ್ವಪಸ್ತರೇಭ್ಯಃ । ಶೀಘ್ರಕರ್ಮಭ್ಯ ಇತ್ಯರ್ಥಃ । ವಿಭ್ವಾದೀನಾಂ ತ್ರಯಾಣಾಂ ಚಮಸಾದಿಶೀಘ್ರಕರ್ಮ ಪ್ರಸಿದ್ಧಂ । ವಾಯೋಶ್ಚಿದ್ವಾಯೋರಪಿ ಸೋಮರಭಸ್ತರೇಭ್ಯ। ಸೋಮಾಭಿಷವಾರ್ಥೇನಾತ್ಯಂತೇನ ವೇಗೇನ ಯುಕ್ತೇಭ್ಯಃ। ವಾಯೋರಪಿ ಗ್ರಾವಾಣೋ ವೇಗವಂತೋ ಭವಂತಿ ಸೋಮಾಭಿಷವಾರ್ಥಂ । ಅಗ್ನೇಶ್ಚಿದಗ್ನೇರಪಿ ಪಿತುಕೃತ್ತರೇಭ್ಯೋಽತ್ಯಂತಮನ್ನಸಾಧಕೇಭ್ಯಃ ಈದೃಶೇಭ್ಯೋ ಗ್ರಾವಭ್ಯಃ ಪ್ರೀಣನಾಯ ಯೂಯಮರ್ಚತೇತಿ ॥

॥ ಪ್ರತಿಪದಾರ್ಥ ॥

ದಿವಶ್ಚಿತ್—ಆದಿತ್ಯನಿಗಿಂತಲೂ । ಅಮವತ್ತರೇಭ್ಯಃ—ಅತಿಶಯವಾದ ಬಲವುಳ್ಳವರೂ । ವಿಭ್ವನಾ ಚಿತ್—ವಿಭ್ವನಿಗಿಂತಲೂ । ಆಶ್ವಪಸ್ತರೇಭ್ಯಃ—ಶೀಘ್ರವಾಗಿ ಕೆಲಸಮಾಡುವವರೂ । ವಾಯೋಶ್ಚಿತ್—ವಾಯುವಿಗಿಂತಲೂ । ಸೋಮರಭಸ್ತರೇಭ್ಯಃ—ವೇಗವಾಗಿ ಸೋಮವನ್ನು ಹಿಂಡುವವರೂ । ಅಗ್ನೇಶ್ಚಿತ್—ಅಗ್ನಿಗಿಂತಲೂ ಅಧಿಕವಾಗಿ । ಪಿತುಕೃತ್ತರೇಭ್ಯಃ—ಅನ್ನಸಾಧಕರೂ ಆದ । ವಃ – ನಿಮ್ಮನ್ನುದ್ದೇಶಿಸಿ । ಆ ಅರ್ಚ—ಅಧ್ವರ್ಯುವು ಸ್ತುತಿಸುತ್ತಾನೆ.

। ಭಾವಾರ್ಥ ।

ಎಲೈ ಗ್ರಾವಗಳೇ, ಆದಿತ್ಯನಿಗಿಂತಲೂ ಅತಿಶಯವಾದ ಬಲವುಳ್ಳವರೂ, ವಿಭ್ವನಿಗಿಂತಲೂ ಶೀಘ್ರವಾಗಿ ಕೆಲಸಮಾಡುವವರೂ, ವಾಯುವಿಗಿಂತಲೂ ವೇಗವಾಗಿ ಸೋಮವನ್ನು ಹಿಂಡುವವರೂ, ಅಗ್ನಿಗಿಂತಲೂ ಅಧಿಕವಾಗಿ ಅನ್ನಸಾಧಕರೂ ಆದ ನಿಮ್ಮನ್ನುದ್ದೇಶಿಸಿ ಅಧ್ವರ್ಯುವು ಸ್ತುತಿಸುತ್ತಾನೆ.

## English Translation

(The Adhwaryu) praises you who are stronger even than heaven, quicker in work than Vibhwan, more diffusive of the Soma than Vayu, more bountiful of food than Agni.

। ಸಂಹಿತಾಪಾಠಃ ।

ಭುರಂತು ನೋ ಯಶಸಃ ಸೋತ್ವಂಧಸೋ ಗ್ರಾವಾಣೋ ವಾಚಾ ದಿವಿತಾ ದಿವಿತ್ಮತಾ ।
ನರೋ ಯತ್ರ ದುಹತೇ ಕಾಮ್ಯಂ ಮಧ್ವಾಘೋಷಯಂತೋ ಅಭಿತೋ ಮಿಥಸ್ತುರಃ ॥ ೬ ॥

॥ ಪದಪಾಠಃ ॥

ಭುರಂತು । ನಃ । ಯಶಸಃ । ಸೋತು । ಅಂಧಸಃ । ಗ್ರಾವಾಣಃ । ವಾಚಾ । ದಿವಿತಾ । ದಿವಿತ್ಮತಾ ।
ನರಃ । ಯತ್ರ । ದುಹತೇ । ಕಾಮ್ಯಂ । ಮಧು । ಆಽಘೋಷಯಂತಃ । ಅಭಿತಃ । ಮಿಥಃಽತುರಃ ॥ ೬ ॥

॥ ಸಾಯಣಭಾಷ್ಯಂ ॥

ಯಶಸೋ ಯಶಸ್ವಿನೋ ಗ್ರಾವಾಣೋ ನೋಽಸ್ಮಭ್ಯಂ ಸೋತು ಸುತಮಂಧಸಃ ಸೋಮಸ್ಯ ರಸಂ ಭುರಂತು । ಭರಂತು । ಸಂಪಾದಯಂತು ॥ ಉಕಾರಶ್ಛಾಂದಸಃ ॥ ಕಿಂಚ ದಿವಿತ್ಮತಾ ದೀಪ್ತಿಮತ್ಯಾ ॥ ಲಿಂಗವ್ಯತ್ಯಯಃ ॥ ವಾಚಾ ಸ್ತುತಿವಾಚಾ ದಿವಿತಾ ದಿವಿತಾಯಾಂ ದೀಪ್ತಿಮತ್ಯಾಯಾಂ ವಾಸ್ಮಾನ್ಸ್ಕುರ್ವಂತು । ಸೋಮಯಾಗೇ ಸ್ಥಾಪಯಂತ್ವಿತ್ಯರ್ಥಃ । ತ್ಯೈಷಾ ದೀಪ್ತಿಮತ್ತೀತಿ ಉಚ್ಯತೇ । ನರೋ ನೇತಾರ ಋತ್ವಿಜೋ ಯತ್ರ ಯಾಗೇ ಕಾಮ್ಯಂ ಕಮನೀಯಂ ಮಧು ಸೋಮರಸಂ ದುಹತೇ । ಕಿಂ ಕುರ್ವಂತಃ । ಆಘೋಷಯಂತಃ ಸರ್ವತೋಽಭಿಷವಶಬ್ದಂ ಸ್ತೋತ್ರಶಸ್ತ್ರಾದಿರೂಪಂ ವಾ ಶಬ್ದಂ ಕುರ್ವಂತಃ । ಅಭಿತಃ ಸರ್ವತೋ ಮಿಥಸ್ತುರಸ್ತ್ವರಮಾಣಾಃ । ಸಾ ದೀಪ್ತಿಮತ್ತೀತಿ ॥

। ಪ್ರತಿಪದಾರ್ಥ ।

**ಯಶಸಃ**—ಕೀರ್ತಿಯಿಂದ ಕೂಡಿದ । **ಗ್ರಾವಾಣಃ**—ಗ್ರಾವಗಳು । **ನಃ**—ನಮಗೆ । **ಸೋತು**—ಹಿಂಡಿರುವ । **ಅಂಧಸಃ**—ಸೋಮರಸವನ್ನು । **ಭುರಂತು**—ಸಂಪಾದಿಸಿಕೊಡಲಿ । **ನರಃ**—ಕರ್ಮನೇತೃಗಳಾದ ಋತ್ವಿಕ್ಕುಗಳು । **ಯತ್ರ**—ಯಾವ ಯಾಗದಲ್ಲಿ । **ಆಘೋಷಯಂತಃ**—ಸ್ತುತಿಶಬ್ದವನ್ನು ಮಾಡುತ್ತಲೂ । **ಅಭಿತಃ**—ಸುತ್ತಲೂ । **ಮಿಥಸ್ತುರಃ**—ಕರ್ಮತತ್ಪರರಾಗಿಯೂ ಇದ್ದು । **ಕಾಮ್ಯಂ**—ಆಕರ್ಷಕವಾದ । **ಮಧು**—ಸೋಮರಸವನ್ನು । **ದುಹತೇ**—ಕರೆಯುವರೋ ಅಂತಹ । **ದಿವಿತಾ**—ಕಾಂತಿಯುತವಾದ ಯಜ್ಞಗೃಹದಲ್ಲಿ । **ದಿವಿತ್ಮತಾ**—ಪ್ರಭಾಯುತವಾದ । **ವಾಚಾ**—ಸ್ತುತಿವಾಕ್ಕಿನಿಂದ ಕೂಡಿರುವಂತೆ ಮಾಡಲಿ.

। ಭಾವಾರ್ಥ ।

ಯಶಸ್ಸಿನಿಂದ ಕೂಡಿದ ಕಲ್ಲುಗಳು ನಮಗೆ ಹಿಂಡಿರುವ ಸೋಮರಸವನ್ನು ಸಂಪಾದಿಸಿಕೊಡಲಿ. ಕರ್ಮ ನೇತೃಗಳಾದ ಋತ್ವಿಕ್ಕುಗಳು ಯಾವ ಯಾಗದಲ್ಲಿ ಸ್ತುತಿಶಬ್ದವನ್ನು ಮಾಡುತ್ತಲೂ ಸರ್ವತ್ರ ಕರ್ಮತತ್ಪರರಾಗಿಯೂ ಇದ್ದು ಆಕರ್ಷಕವಾದ ಸೋಮರಸವನ್ನು ಕರೆಯುವರೋ, ಅಂತಹ ಕಾಂತಿಯುತವಾದ ಯಜ್ಞಗೃಹದಲ್ಲಿ ಪ್ರಭಾಯುತವಾದ ಸ್ತುತಿವಾಕ್ಕಿನಿಂದ ಕೂಡಿರುವಂತೆ ಮಾಡಲಿ.

## English Translation

May the renowned stones bring us the effused (juice) of the Soma, (may they establish us) with brilliant praise in the brilliant (Soma-sacrifice), where the priests milk forth the desirable Soma-juice, crying out all around, and racing each other.

। ಸಂಹಿತಾಪಾಠಃ ।

ಸುನ್ವಂತಿ ಸೋಮಂ ರಥಿರಾಸೋ ಅದ್ರಯೋ ನಿರಸ್ಯ ರಸಂ ಗವಿಷೋ ದುಹಂತಿ ತೇ ।
ದುಹಂತ್ಯೂಧರುಪಸೇಚನಾಯ ಕಂ ನರೋ ಹವ್ಯಾ ನ ಮರ್ಜಯಂತ ಆಸಭಿಃ ॥ ೭ ॥

॥ ಪದಪಾಠಃ ॥

ಸುನ್ವಂತಿ । ಸೋಮಂ । ರಥಿರಾಸಃ । ಅದ್ರಯಃ । ನಿಃ । ಅಸ್ಯ । ರಸಂ । ಗೋಽಇಷಃ । ದುಹಂತಿ । ತೇ ।
ದುಹಂತಿ । ಊಧಃ । ಉಪಽಸೇಚನಾಯ । ಕಂ । ನರಃ । ಹವ್ಯಾ । ನ । ಮರ್ಜಯಂತೇ । ಆಸಽಭಿಃ ॥

॥ ಸಾಯಣಭಾಷ್ಯಂ ॥

ರಥಿರಾಸೋ ರಥವಂತೋ ರಂಹಣವಂತೋಽದ್ರಯೋ ಗ್ರಾವಾಣಃ ಸೋಮಂ ಸುನ್ವಂತಿ । ಗ್ರಾವಾಣೋಽಸ್ಯ ಸೋಮಸ್ಯ ರಸಂ ನಿರ್ದುಹಂತಿ । ನಿಃಶೇಷೇಣ ದುಹಂತಿ ಗವಿಷಃ ಸ್ತುತಿವಾಚಮಿಚ್ಛಂತಃ ಸಂತಃ । ದುಹಂತ್ಯೂಧಾ ರಸಂ ಸೋಮಸಂಬಂಧಿನಂ । ಕಿಮರ್ಥಂ । ಉಪಸೇಚನಾಯಾಗ್ನೇಃ । ಕಮಿತಿ ಪಾದಪೂರಣಃ । ನರೋ ನೇತಾರೋಽಭಿಷವಕರ್ತಾರ ಋತ್ವಿಜೋ ಹವ್ಯಾ ಹವೀಂಷಿ ಜಾಗ್ನ್ಯುಪಸೇಚನಾನಂತರಮಾಸಭಿಃ ಸ್ವಾಸ್ಯೈರ್ಮರ್ಜಯಂತೇ । ಶೋಧಯಂತಿ । ಶೇಷಭಕ್ಷಣೇನ ಶುದ್ಧೀಕುರ್ವಂತಿ । ಯದ್ವಾ । ಅಗ್ನ್ಯಾಹೋತುರ್ದರ್ಶಾಪವಿತ್ರಾತ್ತ್ಸರಾಸಭಿರಾಸ್ಯೋಪಲಕ್ಷಿತೈಃ ಸ್ತೋತ್ರೈರ್ಮರ್ಜಯಂತೇ ॥

। ಪ್ರತಿಪದಾರ್ಥ ।

**ರಥಿರಾಸಃ**—ವೇಗಗಾಮಿಗಳಾದ । **ತೇ ಅದ್ರಯಃ**—ಆ ಕಲ್ಲುಗಳು । **ಸೋಮಂ**—ಸೋಮವನ್ನು । **ಸುನ್ವಂತಿ**—ಹಿಂಡುತ್ತವೆ । **ಅಸ್ಯ**—ಈ ಸೋಮದ । **ರಸಂ**—ರಸವನ್ನು । **ನಿಃ ದುಹಂತಿ**—ಪೂರ್ಣವಾಗಿ ಕರೆಯುತ್ತವೆ । **ಗವಿಷಃ**—ಸ್ತುತಿಗಳನ್ನಿಚ್ಛಿಸಿ । **ಉಪಸೇಚನಾಯ**—ಅಗ್ನಿಯ ಮೇಲೆ ಸೇಕಿಸಲು । **ಊಧಃ**—ರಸವನ್ನು । **ದುಹಂತಿ**— ಕರೆಯುತ್ತವೆ । **ನರಃ**—ಋತ್ವಿಕ್ಕುಗಳು । **ಹವ್ಯಾನ**—ಹವಿಸ್ಸುಗಳನ್ನು । **ಆಸಭಿಃ**—ತಮ್ಮ ಮುಖಗಳಿಂದ । **ಮರ್ಜಯಂತೇ**—ಶುದ್ಧಿಗೊಳಿಸುತ್ತಾರೆ.

। ಭಾವಾರ್ಥ ॥

ವೇಗಗಾಮಿಗಳಾದ ಕಲ್ಲುಗಳು ಸೋಮವನ್ನು ಹಿಂಡುತ್ತವೆ. ಈ ಸೋಮದ ರಸವನ್ನು ಪೂರ್ಣವಾಗಿ ಕರೆಯುತ್ತವೆ. ಸ್ತುತಿಗಳನ್ನಿಚ್ಛಿಸಿ ಅಗ್ನಿಯ ಮೇಲೆ ಸೇಕಿಸಲು ರಸವನ್ನು ಕರೆಯುತ್ತವೆ. ಋತ್ವಿಕ್ಕುಗಳು ಹವಿಸ್ಸುಗಳನ್ನು ತಮ್ಮ ಮುಖಗಳಿಂದ (ಸ್ತೋತ್ರಪಠನದಿಂದ) ಶುದ್ಧಿಗೊಳಿಸುತ್ತಾರೆ

English Translation

The swiftly-moving grinding-stones effuse the Soma; desiring praise, they milk forth its juice; they milk forth the juice for the sprinkling (of Agni); the leaders (of rites) purify the oblations with their mouths.

। ಸಂಹಿತಾಪಾಠಃ ।

ಏತೇ ನರಃ ಸ್ವಪಸೋ ಅಭೂತನ ಯ ಇಂದ್ರಾಯ ಸುನುಥ ಸೋಮ-
ಮದ್ರಯಃ ।
ವಾಮಂವಾಮಂ ವೋ ದಿವ್ಯಾಯ ಧಾಮ್ನೇ ವಸುವಸು ವಃ ಪಾರ್ಥಿವಾಯ
ಸುನ್ವತೇ ॥ ೮ ॥

। ಪದಪಾಠಃ ।

ಏತೇ । ನರಃ । ಸುऽಅಪಸಃ । ಅಭೂತನ । ಯೇ । ಇಂದ್ರಾಯ । ಸುನುಥ । ಸೋಮಂ । ಅದ್ರಯಃ ।
ವಾಮಂऽವಾಮಂ । ವಃ । ದಿವ್ಯಾಯ । ಧಾಮ್ನೇ । ವಸುऽವಸು । ವಃ । ಪಾರ್ಥಿವಾಯ । ಸುನ್ವತೇ ॥

। ಸಾಯಣಭಾಷ್ಯಂ ।

ಹೇ ನರೋ ನೇತಾರೋ ಹೇ ಅದ್ರಯಃ ಏತೇ ಯೂಯಂ ಸ್ವಪಸೋऽಭೂತನ । ಶೋಭನಾಭಿಷವಕರ್ಮಾಣೋ ಭವತ । ಯೇ ಯೂಯಮಿಂದ್ರಾಯ ಸೋಮಂ ಸುನುಥ ವೋ ಯೂಯಂ

**ವಾಮಂವಾಮಂ ಯದ್ಯದ್ವನನೀಯಂ ಧನಮಸ್ತಿ ತತ್ತದ್ದಿವ್ಯಾಯ ಧಾಮ್ನೇ ತೇಜಸೇ ಕುರುತ । ತಥಾ ವಸುವಸು ಯದ್ಯದ್ವಾಸಯೋಗ್ಯಂ ಧನಮಸ್ತಿ ತದ್ವೋ ಯೂಯಂ ಪಾರ್ಥಿವಾಯ ಸುನ್ವತೇ ಯಜಮಾನಾಯ ಕುರುತ ॥**

॥ ಪ್ರತಿಪದಾರ್ಥ ॥

**ನರಃ**—ಕರ್ಮನೇತೃಗಳಾದ । **ಅದ್ರಯಃ**—ಎಲೈ ಕಲ್ಲುಗಳೇ । **ಏತೇ**—ನೀವು । **ಸ್ವಪಸಃ** ಅಭೂತನ—ಉತ್ತಮವಾದ ಕರ್ಮವುಳ್ಳವರಾಗಿದ್ದೀರಿ । **ಯೇ**—ಯಾವ ನೀವು । **ಇಂದ್ರಾಯ**—ಇಂದ್ರನಿಗಾಗಿ । **ಸೋಮಂ**—ಸೋಮವನ್ನು । **ಸುನುಥ**—ಕರೆಯುವಿರೋ ಅಂತಹ । **ವಃ**—ನೀವು । **ವಾಮಂವಾಮಂ**—ಅತ್ಯಾಕರ್ಷಕವಾದ ಧನವನ್ನು । **ದಿವ್ಯಾಯ**—ದೇವಲೋಕದ । **ಧಾಮ್ನೇ**—ತೇಜಸ್ಸಿಗಾಗಿ ಉತ್ಪನ್ನಮಾಡಿರಿ । **ವಃ**—ನೀವು । **ಪಾರ್ಥಿವಾಯ**—ಪೃಥ್ವಿಯಲ್ಲಿ ಹುಟ್ಟಿರುವ । **ಸುನ್ವತೇ**—ಸೋಮವನ್ನು ಹಿಂಡುವ ಯಜಮಾನನಿಗೆ । **ವಸುವಸು**—ಸಕಲ ಧನವನ್ನೂ ಕೊಡಿರಿ.

॥ ಭಾವಾರ್ಥ ॥

ಕರ್ಮನೇತೃಗಳಾದ ಎಲೈ ಕಲ್ಲುಗಳೇ, ನೀವು ಉತ್ತಮವಾದ ಕರ್ಮನೇತೃಗಳಾಗಿದ್ದೀರಿ, ಇಂದ್ರನಿಗಾಗಿ ಸೋಮವನ್ನು ಕರೆಯತಕ್ಕ ನೀವು ಅತ್ಯಾಕರ್ಷಕವಾದ ಧನವನ್ನು ದೇವಲೋಕದ ತೇಜಸ್ಸಿಗಾಗಿ ಉತ್ಪನ್ನಮಾಡಿರಿ. ನೀವು ಪೃಥ್ವಿಯಲ್ಲಿ ಸೋಮವನ್ನು ಹಿಂಡುವ ಯಜಮಾನನಿಗೆ ಸಕಲಧನವನ್ನೂ ಕೊಡಿರಿ.

## English Translation

You stones, leaders (of rites), you are the doers of good work; you who express the Soma for Indra, (make) all desirable wealth for the glory of heaven; you (give) all treasures to the earthly effuser.



## ಎಪ್ಪತ್ತೇಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಅಭ್ರಪ್ರುಷ ಇತ್ಯಷ್ಟರ್ಚಂ ನವಮಂ ಸೂಕ್ತಂ ಭೃಗುಗೋತ್ರಸ್ಯ ಸ್ಯೂಮರಶ್ಮೇರಾರ್ಷಂ ಮರುದ್ದೇವತಾಕಂ । ಪಂಚಮೀ ಜಗತೀ ಶಿಷ್ಟಾಃ ಸಪ್ತ ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಅಭ್ರಪ್ರುಷಃ ಸ್ಯೂಮರಶ್ಮಿರ್ಭಾರ್ಗವೋ ಮಾರುತಂ ತು ಪಂಚಮೀ ಜಗತೀತಿ ॥ ಗತೋ ವಿನಿಯೋಗಃ ॥**

ಅನುವಾದವು—**ಅಭ್ರಪ್ರುಷಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಗುಗೋತ್ರದ ಸ್ಯೂಮರಶ್ಮಿ ಎಂಬುವನು ಋಷಿಯು; ಮರುತ್ತುಗಳು ದೇವತೆಯು; ಈ ಸೂಕ್ತದ ಐದನೆಯ ಋಕ್ಕು ಜಗತೀಛಂದಸ್ಸುವು. ಉಳಿದ ಏಳು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಅಭ್ರಪ್ರುಷಃ ಸ್ಯೂಮರಶ್ಮಿರ್ಭಾರ್ಗವೋ ಮಾರುತಂ ತು ಪಂಚಮೀ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೭

ಮಂಡಲ—೧೦ । ಅನುವಾಕ—೬ । ಸೂಕ್ತ—೭೭ ॥
ಅಷ್ಟಕ—೮ । ಅಧ್ಯಾಯ—೩ । ವರ್ಗ—೧೦, ೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ಸ್ಯೂಮರಶ್ಮಿರ್ಭಾರ್ಗವಃ ॥
ದೇವತಾ—ಮರುತಃ ।
ಛಂದಃ—೧-೪, ೬-೮ ತ್ರಿಷ್ಟುಪ್ । ೫. ಜಗತೀ ॥

। ಸಂಹಿತಾಪಾಠಃ ।

ಅಭ್ರಪ್ರುಷೋ ನ ವಾಚಾ ಪ್ರುಷಾ ವಸು ಹವಿಷ್ಮಂತೋ ನ ಯಜ್ಞಾ ವಿಜಾನುಷಃ ।
ಸುಮಾರುತಂ ನ ಬ್ರಹ್ಮಾಣಮರ್ಹಸೇ ಗಣಮಸ್ತೋಷ್ಯೇಷಾಂ ನ ಶೋಭಸೇ ॥

। ಪದಪಾಠಃ ।

ಅಭ್ರಽಪ್ರುಷಃ । ನ । ವಾಚಾ । ಪ್ರುಷಃ । ವಸು । ಹವಿಷ್ಮಂತಃ । ನ । ಯಜ್ಞಾಃ । ವಿಽಜಾನುಷಃ ।
ಸುಽಮಾರುತಂ । ನ । ಬ್ರಹ್ಮಾಣಂ । ಅರ್ಹಸೇ । ಗಣಂ । ಅಸ್ತೋಷಿ । ಏಷಾಂ । ನ । ಶೋಭಸೇ ॥ ೧ ॥

। ಸಾಯಣಭಾಷ್ಯಂ ।

ಅಭ್ರಪ್ರುಷೋ ನ ಮೇಘಾನ್ನಿರ್ಗಚ್ಛಂತ ಉದಕಬಿಂದವ ಇವ ವಾಚಾ ಸ್ತುತ್ಯಾ ಪ್ರೀತಾ ಮರುತೋ ವಸು ಧನಂ ಪ್ರುಷ । ಸಿಂಚಂತಿ ॥ ವ್ಯತ್ಯಯೇನ ಬಹುವಚನಂ ॥ ಕಿಂಚ ಹವಿಷ್ಮಂತೋ ನ ಯಜ್ಞಾ ಹವಿರ್ಭಿರ್ಯುಕ್ತಾ ಯಾಗಾ ಇವ ವಿಜಾನುಷೋ ಜಗತೋ ವಿಜನಯಿತಾರೋ ಭವಂತಿ । ಅಥ ಪಮುದಾಯೇನಾಹ । ತೇಷಾಮೇಷಾಂ ಸುಮಾರುತಂ ಶೋಭಮಾನಾನಾಂ ಮರುತಾಂ ಬ್ರಹ್ಮಾಣಂ ಮಹಾಂತಂ ಗಣಮರ್ಹಸೇ ಪೂಜಾರ್ಥಂ ನಾಸ್ತೋಷಿ । ನಾಸ್ತೋಷಂ । ನ ಸ್ತುತವಾನಸ್ಮೀತಃ ಪೂರ್ವಂ । ತಥಾ ಶೋಭಸೇ ಶೋಭಾರ್ಥಮಪಿ ಮಾರುತಂ ಗಣಂ ನಾಸ್ತೌಷಿ । ಅತ ಇದಾನೀಂ ನೂತನೇನ ಸ್ತೋತ್ರೇಣ ಸ್ತೌಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಾಚಾ**—ನಮ್ಮ ಸ್ತುತಿಯಿಂದ ಪ್ರೀತರಾದ ಮರುತ್ತುಗಳು । **ಅಭ್ರಪ್ರುಷೋ ನ**—ಮೇಘವು ಸುರಿಸುವ ವೃಷ್ಟಿಯಂತೆ । **ವಸು**—ಧನವನ್ನು । **ಪ್ರುಷ**—ಸುರಿಸುತ್ತಾರೆ । **ಹವಿಷ್ಮಂತಃ**—ಹವಿಸ್ಸುಗಳಿಂದ ತುಂಬಿದ । **ಯಜ್ಞಾಃ ನ**—ಯಜ್ಞಗಳಂತೆ । **ವಿಜಾನುಷಃ**—ಜಗತ್ತಿಗೆ ಉತ್ಪಾದಕರಾಗುತ್ತಾರೆ । **ಏಷಾಂ ಸುಮಾರುತಂ**—

ಉತ್ತಮರಾದ ಮರುತ್ತುಗಳ । **ಬೃಹನ್ತಂ**—ಮಹತ್ವದಿಂದ ಕೂಡಿದ । **ಗಣಂ**—ಸಂಘವನ್ನು । **ಅರ್ಹಸೇ**—ಅವರ ಯೋಗ್ಯತೆಗೆ ಅನುಗುಣವಾಗಿ । **ನ ಅಸ್ತೋಷಿ**—ನಾನು ಸ್ತುತಿಸಿಲ್ಲ । **ಶೋಭಸೇ**—ಅವರ ಘನತೆಗೆ ತಕ್ಕಂತೆ । **ನ**—ಸ್ತುತಿಸಿಲ್ಲ.

॥ ಭಾವಾರ್ಥ ॥

ನಮ್ಮ ಸ್ತುತಿಯಿಂದ ಪ್ರೀತರಾದ ಮರುತ್ತುಗಳು ಮೇಘವು ಸುರಿಸುವ ವೃಷ್ಟಿಯಂತೆ ಧನವನ್ನು ಸುರಿಸುತ್ತಾರೆ. ಹವಿಸ್ಸುಗಳಿಂದ ತುಂಬಿದ ಯಜ್ಞಗಳಂತೆ ಜಗತ್ತಿಗೆ ಉದ್ಪಾದಕರಾಗುತ್ತಾರೆ. ಉತ್ತಮರಾದ ಮರುತ್ತುಗಳ ಮಹತ್ವದಿಂದ ಕೂಡಿದ ಸಂಘವನ್ನು ಅವರ ಯೋಗ್ಯತೆಗೆ ಅನುಗುಣವಾಗಿ ನಾನು ಸ್ತುತಿಸಿಲ್ಲ. ಅವರ ಘನತೆಗೆ ತಕ್ಕಂತೆ ಸ್ತುತಿಸಿಲ್ಲ.

English Translation

(The Maruts), pleased with our praise like waterdrops sent down by clouds, shower wealth; they are the generators (of the world) like sacrifices abounding with oblations; I have not praised the mighty band of Maruts (adequately) for their honour or for their glory.

॥ ಸಂಹಿತಾಪಾಠಃ ॥

ಶ್ರಿಯೇ ಮರ್ಯಾಸೋ ಅಂಜೀರಕೃಣ್ವತ ಸುಮಾರುತಂ ನ ಪೂರ್ವೀರತಿ
ಕ್ಷಪಃ ।
ದಿವಸ್ಪುತ್ರಾಸ ಏತಾ ನ ಯೇತಿರ ಆದಿತ್ಯಾಸಸ್ತೇ ಅಕ್ರಾ ನ ವಾವೃಧುಃ ॥ ೨ ॥

। ಪದಪಾಠಃ ॥

ಶ್ರಿಯೇ । ಮರ್ಯಾಸಃ । ಅಂಜೀನ್ । ಅಕೃಣ್ವತ । ಸುಽಮಾರುತಂ । ನ । ಪೂರ್ವೀಃ । ಅತಿ । ಕ್ಷಪಃ ।

ದಿವಃ । ಪುತ್ರಾಸಃ । ಏತಾಃ । ನ । ಯೇತಿರೇ । ಆದಿತ್ಯಾಸಃ । ತೇ । ಅಕ್ರಾಃ । ನ । ವವೃಧುಃ ॥ ೨ ॥

। ಸಾಯಣಭಾಷ್ಯಂ ।

ಶ್ರಿಯೇ ಶೋಭಾರ್ಥಂ ಮರ್ಯಾಸೋ ಮಾರಕಾ ಮನುಷ್ಯರೂಪಾ ವಾ ಮರುತಃ । ಪೂರ್ವಂ ಮನುಷ್ಯಾಃ ಸಂತಃ ಪಶ್ಚಾತ್ಸುಕೃತವಿಶೇಷೇಣ ಹ್ಯಮರಾ ಆಸನ್ । ತೇಽಞ್ಜೀನ್ ಅಂಜಕಾನ್ಯಾಭರಣಾನ್ಯ-ಕೃಣ್ವತ । ಕುರ್ವಂತಿ । ಕಿಮರ್ಥಂ । ಶ್ರಿಯೇ ಸ್ವಶರೀರಶೋಭನಾರ್ಥಂ । ಸುಮಾರುತಂ ಶೋಭಮಾನಾನಾಂ ಮರುತಾಂ ಗಣಂ ಪೂರ್ವೀರ್ಬಹ್ವ್ಯಃ ಕ್ಷಪಃ ಕ್ಷಪಯಿತ್ರ್ಯಃ ಸೇನಾ ನಾತಿ । ನ ಪರಾಭಾವಯಂತೀತಿ

ಶೇಷಃ । ಕಿಂಚ ದಿವೋ ದ್ಯುದೇವತಾಯಾಃ ಪುತ್ರಾಸಃ ಪುತ್ರಾ ಏತಾ ಗಂತಾರೋ ನ ಯೇತಿರೇ । ನಿರ್ಗಚ್ಛಂತಿ । ತ ಆದಿತ್ಯಾಸೋಽದಿತೇಃ ಪುತ್ರಾ ಅಕ್ರಾ ಆಕ್ರಮಣಶೀಲಾ ಮರುತೋ ನ ವಾವೃಧುಃ । ನ ವರ್ಧಂತೇ । ಯತೋಽಸ್ಮಾಭಿರ್ನ ಸ್ತುತಾ ಅತ ಇತಿ ಭಾವಃ ॥

। ಪ್ರತಿಪದಾರ್ಥ ।

**ಮರ್ತ್ಯಾಸಃ**—ಮಾನವರೂಪರಾದ ಮರುತ್ತುಗಳು । **ಅಂಜೀನ್**—ಆಭರಣಗಳನ್ನು । **ಶ್ರಿಯೇ**—ತನು ದೇಹದ ಅಲಂಕಾರಕ್ಕಾಗಿ । **ಅಕೃಣ್ವತ**—ನಿರ್ಮಿಸಿಕೊಳ್ಳುತ್ತಾರೆ । **ಸುಮಾರುತಂ**—ಉತ್ತಮವಾದ ಮರುತ್ತುಗಳ ಸಂಘವನ್ನು । **ಪೂರ್ವೀಃ**—ಬಹುಸಂಖ್ಯಾಕವಾದ । **ಕ್ಷಪಃ**—ಸೇನೆಯೂ । **ನ ಅತಿ**—ಸೋಲಿಸಲಾರದು । **ದಿವಃ ಪುತ್ರಾಸಃ**—ದ್ಯುಲೋಕಕ್ಕೆ ಪುತ್ರರೂಪರಾದ । **ಏತಾಃ**—ಈ ಮರುತ್ತುಗಳು । **ನ ಯೇತಿರೇ**—(ನಮ್ಮ ಸ್ತುತಿಯಿಲ್ಲದೇ) ಹೊರಡುವುದಿಲ್ಲ । **ಆದಿತ್ಯಾಸಃ**—ಅದಿತಿಪುತ್ರರೂ । **ಅಕ್ರಾಃ**—ವ್ಯಾಪನಶೀಲರೂ ಆದ **ತೇ**—ಅವರು । **ನ ವಾವೃಧುಃ**—(ನಮ್ಮ ಸ್ತುತಿಯಿಲ್ಲದೇ) ಪುಷ್ಟಿಯನ್ನೂ ಹೊಂದುವುದಿಲ್ಲ.

। ಭಾವಾರ್ಥ ।

ಮಾನವರೂಪರಾದ ಮರುತ್ತುಗಳು ತಮ್ಮ ದೇಹದ ಅಲಂಕಾರಕ್ಕಾಗಿ ಆಭರಣಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಉತ್ತಮವಾದ ಮರುತ್ತುಗಳ ಸಂಘವನ್ನು ಬಹುಸಂಖ್ಯಾಕವಾದ ಸೇನೆಯೂ ಸೋಲಿಸಲಾರದು. ದ್ಯುಲೋಕಕ್ಕೆ ಪುತ್ರರೂಪರಾದ ಈ ಮರುತ್ತುಗಳು ನಮ್ಮ ಸ್ತುತಿಯಿಲ್ಲದೇ ಹೊರಡುವುದಿಲ್ಲ. ಅದಿತಿಪುತ್ರರೂ ವ್ಯಾಪನಶೀಲರೂ ಆದ ಇವರು ನಮ್ಮ ಸ್ತುತಿಯಿಲ್ಲದೆ ಪುಷ್ಟಿಯನ್ನೂ ಹೊಂದುವುದಿಲ್ಲ.

English Translation

The destructive (Maruts) made ornaments for their decoration: many hostile hosts cannot overcome the band of Maruts; the moving sons of heaven do not issue forth, the swift-going sons of Aditi do not increase (in glory).

। ಸಂಹಿತಾಪಾಠಃ ।

ಪ್ರ ಯೇ ದಿವಃ ಪೃಥಿವ್ಯಾ ನ ಬರ್ಹಣಾ ತ್ಮನಾ ರಿರಿಚ್ರೇ ಅಭ್ರಾನ್ನ ಸೂರ್ಯಃ ।
ಪಾಜಸ್ವಂತೋ ನ ವೀರಾಃ ಪನಸ್ಯವೋ ರಿಶಾದಸೋ ನ ಮರ್ಯಾ ಅಭಿ-
ದ್ಯವಃ ॥ ೩ ॥

। ಪದಪಾಠಃ ।

ಪ್ರ । ಯೇ । ದಿವಃ । ಪೃಥಿವ್ಯಾಃ । ನ । ಬರ್ಹಣಾ । ತ್ಮನಾ । ರಿರಿಚ್ರೇ । ಅಭ್ರಾತ್ । ನ । ಸೂರ್ಯಃ ।
ಪಾಜಸ್ವಂತಃ । ನ । ವೀರಾಃ । ಪನಸ್ಯವಃ । ರಿಶಾದಸಃ । ನ । ಮರ್ಯಾಃ । ಅಭಿಽದ್ಯವಃ ॥ ೩ ॥

॥ ಸಾಯಣಭಾಷ್ಯಂ ॥

ಯೇ ಮರುತೋ ದಿವಃ ಪೃಥಿವ್ಯಾ ನ ಪೃಥಿವ್ಯಾಶ್ಚ । ನೇತಿ ಚಾರ್ಥೇ । ಬರ್ಹಣಾ ಮಹತ್ತ್ವೇನ ತ್ಮನಾತ್ಮನೈವ ರಿರಿಚ್ರೇ ಅತಿರಿಕ್ತಾ ಅಭವನ್ಸ್ವಶರೀರೇಣ ಅಭ್ರಾನ್ನಾಭ್ರಾದಿವ ಸೂರ್ಯಃ । ಕಿಂಚ ಪಾಜಸ್ವಂತೋ ನ ವೀರಾ ಬಲವಂತೋ ವೀರಾ ಇವ ಪನಸ್ಯವಃ ಸ್ತುತಿಕಾಮಾ ಭವಂತಿ । ಕಿಂಚ ರಿಶಾದಸೋ ನ ಮರ್ಯಾ ರಿಶತಾಮಸಿತಾರೋ ಮನುಷ್ಯಾ ಇವಾಭಿದ್ಯವೋಽಭಿಗತದೀಪ್ತಯೋ ಭವಂತಿ ॥

॥ ಪ್ರತಿಪದಾರ್ಥ ॥

**ಅಭ್ರಾತ್**—ಮೇಘದಿಂದ ಹೊರಕ್ಕೆ ಹೊರಡುವ । **ಸೂರ್ಯಃ ನ**—ಸೂರ್ಯನಂತೆ । **ಯೇ**—ಯಾವ ಮರುತ್ತುಗಳು । **ದಿವಃ**—ದ್ಯುಲೋಕದಿಂದಲೂ । **ಪೃಥಿವ್ಯಾಃ ನ**—ಪೃಥ್ವಿಯಿಂದಲೂ । **ಬರ್ಹಣಾ**—ಮಹತ್ವವುಳ್ಳವರಾಗಿಯೂ । **ತ್ಮನಾ**—ಸ್ವಯಂಪ್ರೇರಿತರಾಗಿಯೂ । **ಪ್ರ ರಿರಿಚ್ರೇ**—ಆವಿರ್ಭೂತರಾದರೋ ಅವರು । **ಪಾಜಸ್ವಂತಃ**—ಬಲಯುತರಾದ । **ವೀರಾಃ ನ**—ವೀರರಂತೆ । **ಪನಸ್ಯವಃ**—ಸ್ತುತಿಕಾಮರಾಗುತ್ತಾರೆ । **ರಿಶಾದಸಃ**—ಶತ್ರುನಾಶಕರಾದ । **ಮರ್ಯಾಃ ನ**—ವೀರಪುರುಷರಂತೆ । **ಅಭಿದ್ಯವಃ**—ಕಾಂತಿಯುತರಾಗುತ್ತಾರೆ.

॥ ಭಾವಾರ್ಥ ॥

ಸೂರ್ಯನು ಮೇಘದಿಂದ ಪ್ರಕಾಶಮಾನನಾಗಿ ಹೊರಕ್ಕೆ ಹೊರಡುವಂತೆ ಯಾವ ಮರುತ್ತುಗಳು ಮಹತ್ವವುಳ್ಳವರಾಗಿಯೂ ಸ್ವಯಂಪ್ರೇರಿತರಾಗಿಯೂ, ದ್ಯುಲೋಕದಿಂದಲೂ, ಪೃಥ್ವಿಯಿಂದಲೂ ಆವಿರ್ಭೂತರಾಗುವರೋ ಅವರು ಬಲಯುತರಾದ ವೀರರಂತೆ ಸ್ತುತಿಯನ್ನಿಚ್ಛಿಸುತ್ತಾರೆ. ಶತ್ರುನಾಶಕರಾದ ವೀರಪುರುಷರಂತೆ ಕಾಂತಿಯುತರಾಗುತ್ತಾರೆ.

English Translation

(The Maruts), who through the might of heaven and earth have emerged from their own persons as the sun emerges from the cloud, (are) desirous of praise like powerful heroes, and radiant like men who overpower their enemies.

॥ ಸಂಹಿತಾಪಾಠಃ ॥

ಯುಷ್ಮಾಕಂ ಬುಧ್ನೇ ಅಪಾಂ ನ ಯಾಮನಿ ವಿಥುರ್ಯತಿ ನ ಮಹೀ ಶ್ರಥರ್ಯತಿ ।

ವಿಶ್ವಪ್ಸುರ್ಯಜ್ಞೋ ಅರ್ವಾಗಯಂ ಸು ವಃ ಪ್ರಯಸ್ವಂತೋ ನ ಸತ್ರಾಚ ಆ ಗತ ॥ ೪ ॥

॥ ಪದಪಾಠಃ ॥

ಯುಷ್ಮಾಕಂ । ಬುಧ್ನೇ । ಅಪಾಂ । ನ । ಯಾಮನಿ । ವಿಥುರ್ಯತಿ । ನ । ಮಹೀ । ಶ್ರಥರ್ಯತಿ ।
ವಿಶ್ವಽಪ್ಸುಃ । ಯಜ್ಞಃ । ಅರ್ವಾಕ್ । ಅಯಂ । ಸು । ವಃ । ಪ್ರಯಸ್ವಂತಃ । ನ । ಸತ್ರಾಚಃ । ಆ ।
ಗತ ॥ ೪ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯುಷ್ಮಾಕಂ ಬುಧ್ನೇ ಪರಸ್ಪರಸಂಘಾತೇಽಪಾಂ ನ ಯಾಮನಿ ಪ್ರವೃದ್ಧಾನಾಮುದಕಾನಾಂ ಗಮನ ಇವ ಮಹೀ ಮಹತೀ ಭೂರ್ನ ವಿಥುರ್ಯತಿ । ನ ವ್ಯಥತೇ । ನಾಪಿ ಶ್ರಥರ್ಯತಿ । ನ ವಿಶೀರ್ಣಾ ಭವತಿ । ಶೀಘ್ರಗತಯೋಽಪಿ ಯೂಯಮೇನಾಂ ನ ಪೀಡಯಧ್ವಮಿತ್ಯರ್ಥಃ । ವಿಶ್ವಪ್ಸುರ್ವಿಶ್ವರೂಪೋಽಯಂ ಯಜ್ಞೋ ಯಾಗಸಾಧನಂ ಹವಿರ್ವೋ ಯುಷ್ಮಾಕಮರ್ವಾಗಭಿಮುಖಂ ಸು ಸುಷ್ಠು ಗಚ್ಛತಿ । ಪ್ರಯಸ್ವಂತೋ ನಾನ್ನವಂತಃ ಪರಿಷ್ಕರ್ತಾರ ಇವ ಸುಖಪ್ರದಾಃ ಸಂತಃ ಸತ್ರಾಚಃ ಸಹಾಂಚನಾ ಆ ಗತ । ಆಗಚ್ಛತ । ಸಂಘಾತಕಾರೇಣಾಗಚ್ಛತೇತ್ಯರ್ಥಃ । ಸಪ್ತಗಣಾ ವೈ ಮರುತಃ । ತೈ. ಸಂ. ೨-೨-೫-೭ । ಇತಿ ಶ್ರುತೇಃ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) **ಅಪಾಂ**—ಉದಕಸಂಘಗಳ । **ಯಾಮನಿ ನ**—ಪ್ರವಾಹಕಾಲದಲ್ಲಿರುವಂತೆಯೇ । **ಯುಷ್ಮಾಕಂ**—ನಿಮ್ಮ । **ಬುಧ್ನೇ**—ಸಂಘವು ಚಲಿಸುವಾಗಲೂ । **ಮಹೀ**—ಮಹತ್ತಾದ ಪೃಥ್ವಿಯು । **ನ ವಿಥುರ್ಯತಿ**—ಚಲಿಸುವುದಿಲ್ಲ । **ನ ಶ್ರಥರ್ಯತಿ**—ಕುಂಠಿತವಾಗುವುದಿಲ್ಲ । **ವಿಶ್ವಪ್ಸುಃ**—ಅನೇಕ ವಿಧವಾದ ರೂಪವುಳ್ಳ । **ಅಯಂ ಯಜ್ಞಃ**—ಈ ಯಜ್ಞವು । **ವಃ ಅರ್ವಾಕ್**—ನಿಮಗಭಿಮುಖವಾಗಿ । **ಸು**—ಅತಿಶಯವಾಗಿ ಬರುತ್ತದೆ । **ಪ್ರಯಸ್ವಂತೋ ನ**—ಅನ್ನಭರಿತರಾದ ಪುರುಷರಂತೆ (ಸುಖಕಾರಕರಾಗಿ) । **ಸತ್ರಾಚಃ**—ಒಟ್ಟುಗೂಡಿದವರಾಗಿ । **ಆ ಗತ**—ಬನ್ನಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಉದಕಸಂಘಗಳು ಪ್ರವಹಿಸುತ್ತಿದ್ದರೂ, ಪೃಥ್ವಿಯು ಚಲಿಸದೆಯೂ, ಶೀರ್ಣವಾಗದೆಯೂ ಇರುವಂತೆ, ನಿಮ್ಮ ಸಂಘವು ಚಲಿಸುತ್ತಿದ್ದರೂ ಸಹ ಪೃಥ್ವಿಯು ಕಂಪಿತವಾಗುವುದಿಲ್ಲ. ಅನೇಕ ರೂಪವುಳ್ಳ ಈ ಯಜ್ಞವು ನಿಮ್ಮನ್ನು ಸಮೀಪಿಸುತ್ತದೆ. ಅನ್ನಭರಿತರಾದ ಪುರುಷರಂತೆ ಸುಖಕಾರಕವಾಗಿ ಒಟ್ಟುಗೂಡಿ ಬನ್ನಿರಿ.

## English Translation

In your collision, as in the transit of waters, the earth is not shaken, is not shattered; this manifold sacrifice comes towards you; approach united as if laden with food.

॥ ಸಂಹಿತಾಪಾಠಃ ॥

ಯೂಯಂ ಧೂರ್ಷು ಪ್ರಯುಜೋ ನ ರಶ್ಮಿಭಿರ್ಜ್ಯೋತಿಷ್ಮಂತೋ ನ ಭಾಸಾ ವ್ಯುಷ್ಟಿಷು ।
ಶ್ಯೇನಾಸೋ ನ ಸ್ವಯಶಸೋ ರಿಶಾದಸಃ ಪ್ರವಾಸೋ ನ ಪ್ರಸಿತಾಸಃ ಪರಿಪ್ರುಷಃ ॥ ೫ ॥

॥ ಪದಪಾಠಃ ॥

ಯೂಯಂ । ಧೂಃऽಸು । ಪ್ರऽಯುಜಃ । ನ । ರಶ್ಮಿऽಭಿಃ । ಜ್ಯೋತಿಷ್ಮಂತಃ । ನ । ಭಾಸಾ । ವಿऽಉಷ್ಟಿಷು ।
ಶ್ಯೇನಾಸಃ । ನ । ಸ್ವऽಯಶಸಃ । ರಿಶಾದಸಃ । ಪ್ರವಾಸಃ । ನ । ಪ್ರऽಸಿತಾಸಃ । ಪರಿऽಪ್ರುಷಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯೂಯಂ ಧೂರ್ಷು ರಥಸಂಬಂಧಿನೀಷು ರಶ್ಮಿಭಿರ್ಯೋಕ್ತ್ರೈಃ ಪ್ರಯುಜಃ ಪ್ರಯುಕ್ತಾ ಬದ್ಧಾ ಅಶ್ವಾ ಇವ ಪರಿಪ್ರುಷಃ ಪರಿತೋ ಗಂತಾರಃ ಸ್ಥ । ತಥಾ ಜ್ಯೋತಿಷ್ಮಂತೋ ನ ತೇಜೋವಂತ ಆದಿತ್ಯಾದಯ ಇವ ಭಾಸಾ ಯುಕ್ತಾ ಭವಥ ವ್ಯುಷ್ಟಿಷೂಷಃಸೂದಿತಾಸು । ಕಿಂಚ ಶ್ಯೇನಾಸೋ ನ ಶ್ಯೇನಾ ಇವ ಸ್ವಯಶಸಃ ಸ್ವಾಯತ್ತಯಶಸಃ ತೇ ಯಥಾ ರಿಶಾದಸೋ ರಿಶತಾಮುಪಸಿತಾರಸ್ತದ್ವದ್ರಿಶಾದಸಃ ಸ್ವಾಯತ್ತಯಶಸಶ್ಚ । ಕಿಂಚ ಪ್ರವಾಸೋ ನ ಪ್ರವಾಸಿನ ಇವ ಪಥಿಕಾ ಇವ ಪ್ರಸಿತಾಸಃ ಪ್ರಸಿದ್ಧಯಾನಾಃ । ಉಕ್ತರೂಪಾ ಮರುತಃ ಪರಿಪ್ರುಷಃ ಪರಿತೋ ಗಂತಾರೋ ಭವಥ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ), ಯೂಯಂ—ನೀವು । ರಶ್ಮಿಭಿಃ—ಕಡಿವಾಣಗಳಿಂದ । ಧೂರ್ಷು—ರಥದ ನೊಗಗಳಿಗೆ । ಪ್ರಯುಜಃ ನ—ಯೋಜಿತವಾದ ಅಶ್ವಗಳಂತೆ । ಪರಿಪ್ರುಷಃ—ಸಂಚರಿಸುವವರಾಗಿದ್ದೀರಿ । ವ್ಯುಷ್ಟಿಷು—ಉಷಃಕಾಲಗಳಲ್ಲಿ । ಜ್ಯೋತಿಷ್ಮಂತೋ ನ—ತೇಜೋಯುಕ್ತರಾದ ಆದಿತ್ಯರಂತೆ । ಭಾಸಾ—ಕಾಂತಿಯಿಂದ ಕೂಡಿದವರಾಗಿದ್ದೀರಿ । ಶ್ಯೇನಾಸೋ ನ—ಶ್ಯೇನಪಕ್ಷಿಗಳಂತೆ । ಸ್ವಯಶಸಃ—ಸ್ವಯಂಸಂಪಾದಿತವಾದ ಕೀರ್ತಿಯುಳ್ಳವರಾಗಿ । ರಿಶಾದಸಃ—ಶತ್ರುನಾಶಕರಾಗಿದ್ದೀರಿ । ಪ್ರವಾಸೋ ನ—ಪಥಿಕರಂತೆ । ಪ್ರಸಿತಾಸಃ—ಉತ್ತಮವಾದ ಸಂಚಾರವುಳ್ಳವರಾಗಿಇದ್ದೀರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಕಡಿವಾಣಗಳಿಂದ ರಥದ ನೊಗಗಳಿಗೆ ಯೋಜಿತವಾದ ಅಶ್ವಗಳಂತೆ ನೀವು ಸಂಚರಿಸುವವರಾಗಿದ್ದೀರಿ. ಉಷಃಕಾಲದಲ್ಲಿ ತೇಜೋಯುತರಾದ ಆದಿತ್ಯರಂತೆ ಕಾಂತಿಯಿಂದ ಕೂಡಿದ್ದೀರಿ. ಶ್ಯೇನಪಕ್ಷಿಗಳಂತೆ

ಸ್ವಯಂಸಂಪಾದಿತವಾದ ಕೀರ್ತಿಯುಳ್ಳವರಾಗಿ ಶತ್ರುನಾಶಕರಾಗಿದ್ದೀರಿ. ಪಥಿಕರಂತೆ ಉತ್ತಮವಾದ ಸಂಚಾರವುಳ್ಳವರಾಗಿದ್ದೀರಿ.

## English Translation

You (move along) like horses harnessed to the chariot-poles with reins; at break of day you (are endowed) with radiance like the luminaries (of heaven); you are like hawks, like the destroyers of foes, desirous of renown; you cover the ground like travellers, you move everywhere.

॥ ಸಂಹಿತಾಪಾಠಃ ॥

ಪ್ರ ಯದ್ವಹಧ್ವೇ ಮರುತಃ ಪರಾಕಾದ್ಯೂಯಂ ಮಹಃ ಸಂವರಣಸ್ಯ ವಸ್ವಃ ।
ವಿದಾನಾಸೋ ವಸವೋ ರಾಧ್ಯಸ್ಯಾರಾಚ್ಚಿದ್ದ್ವೇಷಃ ಸನುತರ್ಯುಯೋತ ॥

॥ ಪದಪಾಠಃ ॥

ಪ್ರ । ಯತ್ । ವಹಧ್ವೇ । ಮರುತಃ । ಪರಾಕಾತ್ । ಯೂಯಂ । ಮಹಃ । ಸಂऽವರಣಸ್ಯ । ವಸ್ವಃ ।
ವಿದಾನಾಸಃ । ವಸವಃ । ರಾಧ್ಯಸ್ಯ । ಆರಾತ್ । ಚಿತ್ । ದ್ವೇಷಃ । ಸನುತಃ । ಯುಯೋತ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯೂಯಂ ಯದ್ಯದಾ ಪರಾಕಾದತ್ಯಂತಂ ದೂರದೇಶಾತ್ಪ್ರವಹಧ್ವೇ ಆಗಚ್ಛಥ ತದಾನೀಂ ಮಹೋ ಮಹತ್ಸಂವರಣಸ್ಯ ಸಂವರಣೀಯಂ ರಾಧ್ಯಸ್ಯ ಸಂರಾಧನೀಯಂ ವಸ್ವೋ ವಸು ಧನಂ ವಿದಾನಾಸಃ ಪ್ರಯಚ್ಛಂತೋ ಹೇ ವಸವಃ ಯೂಯಮಾರಾಚ್ಚಿದ್ದೂರಾದೇವ ಯುಯೋತ । ಪೃಥಕ್ಕುರುತ । ಕಾನಿತಿ ಉಚ್ಯತೇ । ದ್ವೇಷೋ ದ್ವೇಷ್ಟ್ರೂನ್ ಸನುತರಂತರ್ಹಿತಾನ್ । ನಿಗೂಢಾನಿತ್ಯರ್ಥಃ । ಸನುತರಿತ್ಯಂತರ್ಹಿತನಾಮ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ಯೂಯಂ—ನೀವು । ಯತ್—ಯಾವಾಗ । ಪರಾಕಾತ್—ಅತ್ಯಂತ ದೂರದೇಶದಿಂದ । ಪ್ರ ವಹಧ್ವೇ—ಬರುವಿರೋ ಆಗಲೇ । ಮಹಃ—ಮಹತ್ತಾದುದೂ । ಸಂವರಣಸ್ಯ—ಅಪೇಕ್ಷಿತವಾದುದೂ । ರಾಧ್ಯಸ್ಯ—ಪೂಜ್ಯವಾದುದೂ ಆದ । ವಸ್ವಃ—ಧನವನ್ನು । ವಿದಾನಾಸಃ—ಕೊಡುತ್ತ । ವಸವಃ—ವಸತಿದಾಯಕರಾದ ನೀವು । ಆರಾತ್ಚಿತ್—ದೂರದಿಂದಲೇ । ಸನುತಃ—ಗೂಢವಾಗಿ ಅಡಗಿರುವ । ದ್ವೇಷಃ—ಶತ್ರುಗಳನ್ನು । ಯುಯೋತ—ದೂರಕ್ಕೆ ಓಡಿಸಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನೀವು ಯಾವಾಗ ಅತ್ಯಂತ ದೂರದೇಶದಿಂದ ಬರುವಿರೋ, ಆಗಲೇ, ಮಹತ್ತಾದುದೂ, ಅಪೇಕ್ಷಿತವೂ, ಪೂಜ್ಯವೂ ಆದ ಧನವನ್ನು ನಮಗೆ ಕೊಡುತ್ತ ವಸತಿದಾಯಕರಾದ ನೀವು ಗೂಢವಾಗಿ ಅಡಗಿರುವ ನಮ್ಮ ಶತ್ರುಗಳನ್ನು ದೂರದಿಂದಲೇ ಓಡಿಸಿರಿ.

## English Translation

When, Maruts, you come from a distance, then, Vasus, distributors of abundant, desirable, coveted wealth, you scatter afar our concealed foes.

। ಸಂಹಿತಾಪಾಠಃ ।

ಯ ಉದೃಚಿ ಯಜ್ಞೇ ಅಧ್ವರೇಷ್ಠಾ ಮರುದ್ಭ್ಯೋ ನ ಮಾನುಷೋ ದದಾಶತ್ ।

ರೇವತ್ಸ ವಯೋ ದಧತೇ ಸುವೀರಂ ಸ ದೇವಾನಾಮಪಿ ಗೋಪೀಥೇ ಅಸ್ತು ॥

॥ ಪದಪಾಠಃ ॥

ಯಃ । ಉತ್ऽಋಚಿ । ಯಜ್ಞೇ । ಅಧ್ವರೇऽಸ್ಥಾಃ । ಮರುತ್ऽಭ್ಯಃ । ನ । ಮಾನುಷಃ । ದದಾಶತ್ ।

ರೇವತ್ । ಸಃ । ವಯಃ । ದಧತೇ । ಸುऽವೀರಂ । ಸಃ । ದೇವಾನಾಂ । ಅಪಿ । ಗೋಪೀಥೇ । ಅಸ್ತು ॥೭॥

। ಸಾಯಣಭಾಷ್ಯಂ ।

ಅಧ್ವರೇಷ್ಠಾ ಯಾಗೇ ಸೀದನ್ಮಾನುಷೋ ಯೋ ಯಜಮಾನೋ ಯಜ್ಞ ಉದೃಚಿ ಸತಿ । ಋಕ್ಶಬ್ದೇನ ಸ್ತೋತ್ರಮುಪಲಕ್ಷ್ಯತೇ । ಯಜ್ಞೇ ಸಮಾಪ್ತಸ್ತುತಿಕೇ ಸತಿ ಸಂಪೂರ್ಣೇ ಸತಿ ಮರುದ್ಭ್ಯೋ ನ ಮರುದ್ಭ್ಯ ಇವಾನ್ಯೇಷಾಮಧ್ವರ್ಯುರ್ಭ್ಯ ಋತ್ವಿಗಾದಿಭ್ಯೋ ದದಾಶತ್ ಪ್ರದದ್ಯಾತ್ । ಯದ್ವಾ । ಯಜ್ಞ ಉದೃಚ್ಯುಪಕ್ರಾಂತ ಇತ್ಯರ್ಥಃ । ತಸ್ಮಿನ್ಯಜ್ಞೇ ಮರುದ್ಭ್ಯ ಇವಾನ್ಯಸ್ಮಾ ಇಂದ್ರಾಯ ದದಾಶತ್ ದದಾತಿ । ಸ ಯಜಮಾನೋ ರೇವದ್ಧನವತ್ಸುವೀರಂ ಶೋಭನಪುತ್ರಾದ್ಯುಪೇತಂ ವಯೋऽನ್ನಂ ದಧತೇ । ಧಾರಯತಿ ॥ ವ್ಯತ್ಯಯೇನೈಕವಚನಂ ॥ ಸ ದೇವಾನಾಮಿಂದ್ರಾದೀನಾಮಪಿ ಗೋಪೀಥೇ ಸೋಮಪಾನೇऽಸ್ತು । ಭವತು ॥

॥ ಪ್ರತಿಪದಾರ್ಥ ॥

ಅಧ್ವರೇಷ್ಠಾಃ—ಯಾಗದಲ್ಲಿ ಕುಳಿತಿರುವ । ಯಃ ಮಾನುಷಃ—ಯಾವ ಯಜಮಾನನು । ಯಜ್ಞೇ—ದಲ್ಲಿ । ಉದೃಚಿ—ಸಮಾಪ್ತಿಕಾಲದ ಸ್ತುತಿಯು ಪಠಿತವಾದಾಗ । ಮರುದ್ಭ್ಯೋ ನ—ಮರುತ್ತುಗಳಿಗೆ

ಹವಿಸ್ಸನ್ನು ಅರ್ಪಿಸುವಂತೆ । ದದಾಶತ್—ಋತ್ವಿಕ್ಕುಗಳಿಗೆ ಧನವನ್ನು ಕೊಡುವನೋ । ಸಃ—ಅದೇ ಯಜಮಾನನು । ರೇವತ್—ಧನಯುಕ್ತವಾದುದೂ । ಸುವೀರಂ—ವೀರಪುತ್ರರಿಂದ ಕೂಡಿದುದೂ ಆದ । ವಯಃ—ಅನ್ನವನ್ನು । ದಧತೇ—ಹೊಂದುತ್ತಾನೆ । ಸಃ—ಅವನು । ದೇವಾನಾಂ—ಇತರ ದೇವತೆಗಳ । ಗೋಪೀಥೇ ಅಪಿ—ಸೋಮಪಾನಕಾಲಗಳಲ್ಲೂ ಸಹ । ಅಸ್ತು—ಕರ್ಮನಿರತನಾಗಿರಲಿ.

। ಭಾವಾರ್ಥ ।

ಯಾಗದಲ್ಲಿ ಕುಳಿತಿರುವ ಯಾವ ಯಜಮಾನನು, ಯಜ್ಞದಲ್ಲಿ ಸಮಾಪ್ತಿಕಾಲದ ಸ್ತುತಿಯು ಪಠಿತವಾದಾಗ ಮರುತ್ತುಗಳಿಗೆ ಹವಿಸ್ಸನ್ನು ಅರ್ಪಿಸುವಂತೆ ಋತ್ವಿಕ್ಕುಗಳಿಗೆ ಧನವನ್ನು ಕೊಡುವನೋ, ಅದೇ ಯಜಮಾನನು ಧನಯುಕ್ತವಾದುದೂ, ವೀರಪುತ್ರರಿಂದ ಕೂಡಿದುದೂ ಆದ ಅನ್ನವನ್ನು ಹೊಂದುತ್ತಾನೆ. ಅವನು ಇತರ ದೇವತೆಗಳ ಸೋಮಪಾನಕಾಲಗಳಲ್ಲೂ ಸಹ ಕರ್ಮನಿರತನಾಗಿರಲಿ.

## English Translatian

The worshipper who engaged in worship at the sacrifice, accompanied with praise, presents donations (to the priests) as if to the Maruts, he enjoys food with riches, and male progeny; may he be present at the god's Soma-drinking.

॥ ಸಂಹಿತಾಪಾಠಃ ॥

ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾ ಆದಿತ್ಯೇನ ನಾಮ್ನಾ ಶಂಭ-
ವಿಷ್ಠಾಃ ।
ತೇ ನೋಽವಂತು ರಥತೂರ್ಮನೀಷಾಂ ಮಹಶ್ಚ ಯಾಮನ್ನಧ್ವರೇ ಚಕಾನಾಃ ॥

॥ ಪದಪಾಠಃ ॥

ತೇ । ಹಿ । ಯಜ್ಞೇಷು । ಯಜ್ಞಿಯಾಸಃ । ಊಮಾಃ । ಆದಿತ್ಯೇನ । ನಾಮ್ನಾ । ಶಂऽಭವಿಷ್ಠಾಃ ।

ತೇ । ನಃ । ಅವಂತು । ರಥऽತೂಃ । ಮನೀಷಾಂ । ಮಹಃ । ಚ । ಯಾಮನ್ । ಅಧ್ವರೇ । ಚಕಾನಾಃ ॥

। ಸಾಯಣಭಾಷ್ಯಂ ।

ತೇ ಹಿ ತೇ ಖಲು ಯಜ್ಞೇಷು ಯಾಗೇಷು ಯಜ್ಞಿಯಾಸೋ ಯಜ್ಞಾರ್ಹಾ ಯಷ್ಟವ್ಯಾಃ ಊಮಾ ಅವಿತಾರ ಆದಿತ್ಯೇನ ನಾಮ್ನಾದಿತ್ಯಸಂಬಂಧಿನೋದಕೇನ ಶಂಭವಿಷ್ಠಾಃ ಸುಖಸ್ಯ ಭಾವಯಿತಾರಃ । ಯದ್ವಾ । ಆದಿತ್ಯಾಖ್ಯೇನ ನಾಮ್ನಾದಿತ್ಯನಾಮಕೇನ ದೇವೇನ ಸಹ ಶಂಭವಿಷ್ಠಾಃ । ತೇ ಮರುತೋ

**ನೋಽಸ್ಮಾನವಂತು । ರಥತೂ ರಥೆತುರೋ ರಥಸ್ಯ ಯಜ್ಞಗಮನಸಾಧನಸ್ಯ ತ್ವರಯಿತಾರಃ ಸಂತೋ ಮನೀಷಾಂ ಸ್ತುತಿಮವಂತು । ರಕ್ಷಂತು । ಕೀದೃಶಾಸ್ತೇ । ಅಧ್ವರೇ ಯಾಮನ್ಯಾಗಗಮನೇ ಮಹೋ ಮಹದ್ಧವಿಶ್ಚಕಾನಾಃ ಕಾಮಯಮಾನಾಃ ॥**

॥ ಪ್ರತಿಪದಾರ್ಥ ॥

ತೇ ಹಿ—ಅದೇ ಮರುತ್ತುಗಳು । **ಯಜ್ಞೇಷು**—ಯಾಗಕಾಲಗಳಲ್ಲಿ । **ಯಜ್ಞಿಯಾಸಃ**—ಪೂಜಾರ್ಹರಾಗಿಯೂ । **ಊಮಾಃ**—ರಕ್ಷಕರಾಗಿಯೂ । **ಆದಿತ್ಯೇನ ನಾಮ್ನಾ**—ಆದಿತ್ಯ ಸಂಬಂಧವಾದ ಉದಕದೊಡನೆ ಕೂಡಿ । **ಶಂಭವಿಷ್ಠಾಃ**—ಸುಖಕರರಾಗಿಯೂ ಇರುತ್ತಾರೆ । **ತೇ**—ಅದೇ ಮರುತ್ತುಗಳು । **ನಃ**—ನಮ್ಮನ್ನು । **ಅವಂತು**—ರಕ್ಷಿಸಲಿ । **ರಥತೂಃ**—ಯಜ್ಞಕ್ಕಾಗಿ ರಥವನ್ನು ಓಡಿಸುವವರೂ । **ಅಧ್ವರೇ**—ಯಾಗದಲ್ಲಿ । **ಯಾಮನ್**—ಹವಿಸ್ಸನ್ನು ಅರ್ಪಿಸುವಾಗ । **ಮಹಃ**—ಮಹತ್ತಾದ ಹವಿಸ್ಸನ್ನು । **ಚಕಾನಾಃ**—ಅಪೇಕ್ಷಿಸುವವರೂ ಆದ ಮರುತ್ತುಗಳು । **ಮನೀಷಾಂ**—ನಮ್ಮ ಸ್ತುತಿಯನ್ನು ಸಫಲಗೊಳಿಸಲಿ.

॥ ಭಾವಾರ್ಥ ॥

ಮರುತ್ತುಗಳು ಯಾಗಕಾಲಗಳಲ್ಲಿ ಪೂಜಾರ್ಹರಾಗಿಯೂ, ರಕ್ಷಕರಾಗಿಯೂ, ಆದಿತ್ಯಸಂಬಂಧವಾದ ಉದಕದೊಡನೆ ಕೂಡಿ ಸುಖಕರರಾಗಿಯೂ ಇರುತ್ತಾರೆ. ಅದೇ ಮರುತ್ತುಗಳು ನಮ್ಮನ್ನು ರಕ್ಷಿಸಲಿ. ಯಜ್ಞಕ್ಕಾಗಿ ರಥವನ್ನು ಓಡಿಸುವವರೂ, ಯಾಗಕಾಲದಲ್ಲಿ ಹವಿಸ್ಸನ್ನು ಅಪೇಕ್ಷಿಸುವವರೂ ಆದ ಅದೇ ಮರುತ್ತುಗಳು ನಮ್ಮ ಸ್ತುತಿಯನ್ನು ಸಫಲಗೊಳಿಸಲಿ.

English Translation

May those protecting deities who are entitled to be worshipped at sacrifices, who under the name of Adityas are the bestowers of felicity, may they (the Maruts) accelerating their chariots, and desirous of the ample (oblation), upon their arrival at the sacrifice protect our praise.



## ಎಪ್ಪತ್ತೆಂಟನೆಯ ಸೂಕ್ತವು.

॥ ಸಾಯಣಭಾಷ್ಯ ॥

**ವಿಪ್ರಾಸ ಇತ್ಯಷ್ಟರ್ಚಂ ದಶಮಂ ಸೂಕ್ತಂ । ಪಂಚಮ್ಯಾದ್ಯಾಸ್ತಿಸ್ರೋ ದ್ವಿತೀಯಾ ಚೇತಿ ಚತಸ್ರೋ ಜಗತ್ಯಃ । ಶಿಷ್ಟಾಶ್ಚತಸ್ರಸ್ತ್ರಿಷ್ಟುಭಃ । ಪೂರ್ವವದೃಷಿದೇವತೇ । ತಥಾ ಚಾನುಕ್ರಾಂತಂ । ವಿಪ್ರಾಸೋ ದ್ವಿತೀಯಾ ಪಂಚಮ್ಯಾದ್ಯಾಶ್ಚ ತಿಸ್ರೋ ಜಗತ್ಯ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—**ವಿಪ್ರಾಸಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆಯೇ ಋಷಿದೇವತೆಗಳು. ಈ ಸೂಕ್ತದಲ್ಲಿ ಐದು,

ಆರು, ಏಳು ಮತ್ತು ಎರಡನೆಯ ಋಕ್ಕುಗಳು ಜಗತೀಛಂದಸ್ಕವು. ಉಳಿದ ನಾಲ್ಕು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ವಿಪ್ರಾಸೋ ದ್ವಿತೀಯಾ ಪಂಚಮ್ಯಾದ್ಯಾಶ್ಚ ತಿಸ್ರೋ ಜಗತ್ಯ: ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೮

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೭೮ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೨, ೧೩ ॥
ಸೂಕ್ತದಲ್ಲಿರುವಋಕ್ಸಂಖ್ಯೆ—೮ ॥
ಋಷಿಃ—ಸ್ಯೂಮರಶ್ಮಿರ್ಭಾರ್ಗವಃ॥
ದೇವತಾ—ಮರುತಃ॥
ಛಂದಃ—೧, ೩, ೪, ೮. ತ್ರಿಷ್ಟುಪ್ । ೨, ೫-೭. ಜಗತೀ ॥

॥ ಸಂಹಿತಾಪಾಠಃ ॥

ವಿಪ್ರಾಸೋ ನ ಮನ್ಮಭಿಃ ಸ್ವಾಧ್ಯೋ ದೇವಾವ್ಯೋ೩ ನ ಯಜ್ಞೈಃ ಸ್ವಪ್ನಸಃ ।
ರಾಜಾನೋ ನ ಚಿತ್ರಾಃ ಸುಸಂದೃಶಃ ಕ್ಷಿತೀನಾಂ ನ ಮರ್ಯಾ ಅರೇಪಸಃ ॥

॥ ಪದಪಾಠಃ ॥

ವಿಪ್ರಾಸಃ । ನ । ಮನ್ಮऽಭಿಃ । ಸುऽಆಧ್ಯಃ । ದೇವऽಅವ್ಯಃ । ನ । ಯಜ್ಞೈಃ । ಸುऽಅಪ್ನಸಃ ।
ರಾಜಾನಃ । ನ । ಚಿತ್ರಾಃ । ಸುऽಸಂದೃಶಃ । ಕ್ಷಿತೀನಾಂ । ನ । ಮರ್ಯಾಃ । ಅರೇಪಸಃ ॥ ೧ ॥

॥ ಸಾಯಣಭಾಷ್ಯಂ ॥

ವಿಪ್ರಾಸೋ ನ ವಿಪ್ರಾ ಬ್ರಾಹ್ಮಣಾ ಇವ ತೇ ಯಥಾ ಮನ್ಮಭಿಃ ಸ್ತುತಿಭಿಃ ಸ್ವಾಧ್ಯಃ ಶೋಭನಾಧ್ಯಾನಾ ಭವಂತಿ ಏವಂ ಮರುತೋಽಪ್ಯಸ್ಮದೀಯೈರ್ಮನ್ಮಭಿರ್ಮನನೀಯೈಃ ಸ್ತೋತ್ರೈಃ ಸ್ವಾಧ್ಯಃ ಸುಮನಸೋ ಭವಂತಿ । ಅಥವಾ ಮನ್ಮಭಿಃ ಸ್ತೋತ್ರೈರ್ಯುಕ್ತಾ ವಿಪ್ರಾಸೋ ನ ಮೇಧಾವಿನಃ ಸ್ತೋತಾರ ಇವ ಸ್ವಾಧ್ಯೋ ಯಜ್ಞೇ ಯಜಮಾನೇ ವಾ ಸುಧ್ಯಾನಾ ಇತ್ಯರ್ಥಃ । ತಥಾ ಯಜ್ಞೈರ್ಯಾಗೈರ್ದೇವಾವ್ಯೋ ನ ದೇವಾನಾಂ ತರ್ಪಯಿತಾರೋ ಯೇ ಯಜಮಾನಾ ಇವ ಸ್ವಪ್ನಸಃ । ಅಪ್ನ ಇತಿ ಕರ್ಮನಾಮ । ಶೋಭನಕರ್ಮಾಣಃ । ತೇ ಯಥಾ ಕರ್ಮಸು ವ್ಯಾಪೃತಾ ಭವಂತಿ ತದ್ವದ್ವೃಷ್ಟಿಪ್ರದಾನಾದಿಕರ್ಮಸು ವ್ಯಾಪೃತಾ ಭವಂತಿ । ರಾಜಾನೋ ನ ಮೂರ್ಧಾಭಿಷಿಕ್ತಾಃ ಕ್ಷಿತಿಪತಯ ಇವ ಚಿತ್ರಾಶ್ಚಾಯನೀಯಾಃ ಪೂಜನೀಯಾಃ । ಯದ್ವಾ ಚಿತ್ರಾಭರಣಾಃ । ತಥಾ ಸುಸಂದೃಶಃ ಸುಷ್ಠು ದರ್ಶನೀಯಾಃ । ತಥಾ ಕ್ಷಿತೀನಾಂ ನಿವಾಸಾನಾಂ ಸ್ವಾಮಿನೋ ಮರ್ಯಾ ನ ಮನುಷ್ಯಾ ಇವಾರೇಪ-

**ಸೋಽಪಾಪಾಃ । ಯಥಾ ಪ್ರತಿಗ್ರಹಾರ್ಥಮನ್ಯತ್ರಾಗತ್ವಾ ಸ್ವಗೃಹ ಏವಾನುತಿಷ್ಠಂತೋ ನಿರ್ದೋಷಾ ಭವಂತಿ ತಾದೃಶಾ ಇತ್ಯರ್ಥಃ । ಈದೃಶಾಃ ಶೋಭಂತ ಇತ್ಯರ್ಥಃ ।**

। ಪ್ರತಿಪದಾರ್ಥ ।

(ಮರುತಃ—ಮರುತ್ತುಗಳು) । **ವಿಪ್ರಾಸೋ ನ**—ಮೇಧಾವಿಗಳಾದ ಋಷಿಗಳಂತೆ । **ಮನ್ಮಭಿಃ**—ಸ್ತುತಿಗಳಿಂದ ಕೂಡಿ । **ಸ್ವಾಧ್ಯಃ**—ಉತ್ತಮವಾದ ಧ್ಯಾನವುಳ್ಳವರಾಗಿದ್ದಾರೆ । **ಯಜ್ಞೈಃ**—ಯಾಗಗಳಿಂದ । **ದೇವಾವ್ಯೋ ನ**—ದೇವತೆಗಳನ್ನು ತೃಪ್ತಿಪಡಿಸುವ ಯಜಮಾನರಂತೆ । **ಸ್ವಪ್ನಸಃ**—ಉತ್ತಮವಾದ ಕರ್ಮವುಳವರಾಗಿದ್ದಾರೆ । **ರಾಜಾನೋ ನ**—ರಾಜರುಗಳಂತೆ । **ಚಿತ್ರಾಃ**—ವಿಚಿತ್ರವಾದ ಆಭರಣಗಳುಳ್ಳವರೂ । **ಸುಸಂದೃಶಃ**—ಆಕರ್ಷಕವಾದ ರೂಪವುಳ್ಳವರೂ ಆಗಿದ್ದಾರೆ । **ಕ್ಷಿತೀನಾಂ**—ಗೃಹಗಳಿಗೆ ಒಡೆಯರಾದ । **ಮರ್ಯಾಃ ನ**—ಮಾನವರಂತೆ । **ಅರೇಪಸಃ**—ಪಾಪರಹಿತರಾಗಿದ್ದಾರೆ.

।। ಭಾವಾರ್ಥ ।

ಮರುತ್ತುಗಳು ಮೇಧಾವಿಗಳಾದ ಋಷಿಗಳಂತೆ ಸ್ತುತಿಗಳಿಂದ ಕೂಡಿದ ಉತ್ತಮಧ್ಯಾನವುಳ್ಳವರಾಗಿದ್ದಾರೆ. ಯಾಗಗಳಿಂದ ದೇವತೆಗಳನ್ನು ತೃಪ್ತಿಪಡಿಸುವ ಯಜಮಾನರಂತೆ ಉತ್ತಮವಾದ ಕರ್ಮವುಳ್ಳವರಾಗಿದ್ದಾರೆ. ರಾಜರುಗಳಂತೆ ವಿಚಿತ್ರವಾದ ಆಭರಣಗಳುಳ್ಳವರೂ, ಆಕರ್ಷಕವಾದ ರೂಪವುಳ್ಳವರೂ ಆಗಿದ್ದಾರೆ. ಗೃಹಗಳಿಗೆ ಒಡೆಯರಾದ ಮಾನವರಂತೆ ಪಾಪರಹಿತರಾಗಿದ್ದಾರೆ.

## English Translation

They (the Maruts) are like Brahmans sanctified by pious praises, they are institutors of holy rites like the propitiators of the gods by sacrifices; decked with various ornaments, and handsome like kings, devoid of sin like men (who are the lords) of habitations.

॥ ಸಂಹಿತಾಪಾಠಃ ॥

ಅಗ್ನಿರ್ನ ಯೇ ಭ್ರಾಜಸಾ ರುಕ್ಮವಕ್ಷಸೋ ವಾತಾಸೋ ನ ಸ್ವಯುಜಃ ಸದ್ಯ-
ಊತಯಃ ।
ಪ್ರಜ್ಞಾತಾರೋ ನ ಜ್ಯೇಷ್ಠಾಃ ಸುನೀತಯಃ ಸುಶರ್ಮಾಣೋ ನ ಸೋಮಾ
ಋತಂ ಯತೇ ॥ ೨ ॥

॥ ಪದಪಾಠ ॥

ಅಗ್ನಿಃ । ನ । ಯೇ । ಭ್ರಾಜಸಾ । ರುಕ್ಮऽವಕ್ಷಸಃ । ವಾತಾಸಃ । ನ । ಸ್ವऽಯುಜಃ । ಸದ್ಯಃऽಊತಯಃ । ಪ್ರऽಜ್ಞಾತಾರಃ । ನ । ಜ್ಯೇಷ್ಠಾಃ । ಸುऽನೀತಯಃ । ಸುऽಶರ್ಮಾಣಃ । ನ । ಸೋಮಾಃ । ಋತಂ । ಯತೇ ॥ ೨ ॥

॥ ಸಾಯಣಭಾಷ್ಯಂ ॥

ಯೇ ಮರುತೋಽಗ್ನಿರ್ನಾಗ್ನಿರಿವ ಸ ಯಥಾ ಭ್ರಾಜಸಾ ತೇಜಸಾ ಶೋಭತೇ ತದ್ವದ್ಭ್ರಾಜಸಾ ಯುಕ್ತಾಃ ಕಿಂಚ ರುಕ್ಮವಕ್ಷಸೋ ರುಕ್ಮಾಲಂಕೃತವಕ್ಷಸ್ಕಾ ವಾತಾಸೋ ನ ಪ್ರತ್ಯಕ್ಷವಾತಾ ಇವ ಸ್ವಯುಜಃ ಸ್ವಯಂಯುಜ್ಯಮಾನಾಃ ಸದ್ಯಊತಯಃ ಸದ್ಯೋಗಮನಾಃ ಪ್ರಜ್ಞಾತಾರೋ ನ ಪ್ರಕರ್ಷೇಣ ಜ್ಞಾತಾರೋ ಜ್ಞಾನಿನ ಇವ ಜ್ಯೇಷ್ಠಾಃ ಪೂಜ್ಯಾಃ ಸುನೀತಯಃ ಸುನಯನಾಃ ಸುಶರ್ಮಾಣೋ ನ ಸೋಮಾಃ ಸುಸುಖಾಃ ಸೋಮಾ ಇವ ತೇ ಯೂಯಮೃತಂ ಯತೇ ಯಜ್ಞಂ ಗಚ್ಛತೇ ಯಜಮಾನಾಯ ಗಚ್ಛತೇತಿ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) ಅಗ್ನಿರ್ನ—ಅಗ್ನಿಯಂತೆ । ಭ್ರಾಜಸಾ—ತೇಜಸ್ಸಿನಿಂದ ಕೂಡಿದವರೂ । ರುಕ್ಮವಕ್ಷಸಃ—ಹೊಂಬಣ್ಣದ ಅಲಂಕಾರಗಳಿಂದ ಕೂಡಿದ ವಕ್ಷಸ್ಸುಳ್ಳವರೂ । ವಾತಾಸೋ ನ—ವಾಯುಗಳಂತೆ ಸ್ವಯುಜಃ—ಸ್ವಯಂಪ್ರೇರಿತರೂ । ಸದ್ಯಊತಯಃ—ಶೀಘ್ರವಾದ ರಕ್ಷಕರೂ । ಪ್ರಜ್ಞಾತಾರೋ ನ—ಜ್ಞಾನಿಗಳಂತೆ । ಜ್ಯೇಷ್ಠಾಃ—ಪೂಜ್ಯರೂ । ಸುನೀತಯಃ—ಉತ್ತಮವಾದ ಮಾರ್ಗದರ್ಶಕರೂ । ಸುಶರ್ಮಾಣಃ—ಉತ್ತಮವಾದ ಸುಖವನ್ನು ಕೊಡತಕ್ಕ । ಸೋಮಾಃ ನ—ಸೋಮಗಳಂತೆ ಇರುವವರೂ ಆದ ನೀವು । ಋತಂ ಯತೇ—ಯಜ್ಞವನ್ನು ನಿರ್ವಹಿಸುವ ಯಜಮಾನನಲ್ಲಿಗೆ ಬನ್ನಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಅಗ್ನಿಯಂತೆ ತೇಜಸ್ಸಿನಿಂದ ಕೂಡಿದವರೂ, ಹೊಂಬಣ್ಣದ ಅಲಂಕಾರದಿಂದ ಕೂಡಿದ ವಕ್ಷಸ್ಸುಳ್ಳವರೂ, ವಾಯುಗಳಂತೆ ಸ್ವಯಂಪ್ರೇರಿತರೂ, ಶೀಘ್ರವಾದ ರಕ್ಷಕರೂ, ಜ್ಞಾನಿಗಳಂತೆ ಪೂಜ್ಯರೂ ಮತ್ತು ಮಾರ್ಗದರ್ಶಕರೂ, ಸೋಮಗಳಂತೆ ಉತ್ತಮವಾದ ಸುಖಪ್ರದರೂ ಆದ ನೀವು ಯಜ್ಞವನ್ನು ನಿರ್ವಹಿಸತಕ್ಕ ಯಜಮಾನನಲ್ಲಿಗೆ ಬನ್ನಿರಿ.

English Translation

(You) who like Agni (are endowed) with splendour, who have golden ornaments upon your breasts, who like the winds (are) self-yoked, swift-moving, who like the extremely wise (are) venerable and able guides, and like the Soma-juices the givers of delight, (you come) to the (worshipper) going to the sacrifice.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ—**ಅಗ್ನಿರ್ನಯೇ ಭ್ರಾಜಸಾ ರುಕ್ಮವಕ್ಷಸಃ** ಎಂಬ ವಾಕ್ಯಕ್ಕೆ ಯಾಸ್ಕರು—**ಅಗ್ನಿರಿವ ಯೇ ಮರುತೋ ಭ್ರಾಜಮಾನಾ ರೋಚಿಷ್ಣೂರಸ್ಕಾ ಭ್ರಾಜಸ್ವಂತೋ ರುಕ್ಮವಕ್ಷಸಃ** (ನಿ. ೩.೧೫) ಎಂದರೆ ಮರುದ್ದೇವತೆಗಳು ಅಗ್ನಿಯಂತೆ ಪ್ರಕಾಶಿಸುವವರು, ಎದೆಯಲ್ಲಿರುವ ಪ್ರಕಾಶಮಾನವಾದ ಚಿನ್ನದ ಆಭರಣಗಳಿಂದಲೂ ಅತ್ಯಂತ ಕಾಂತಿಯಿಂದಲೂ ಬೆಳಗುತ್ತಿರುವವರು ಎಂದು ನಿರ್ವಚನವನ್ನು ಹೇಳಿದಾರೆ.

॥ ಸಂಹಿತಾಪಾಠಃ ॥

ವಾತಾಸೋ ನ ಯೇ ಧುನಯೋ ಜಿಗತ್ನವೋಽಗ್ನೀನಾಂ ನ ಜಿಹ್ವಾ ವಿರೋ-
ಕಿಣಃ ।
ವರ್ಮಣ್ವಂತೋ ನ ಯೋಧಾಃ ಶಿಮೀವಂತಃ ಪಿತ್ರ್ಯಾಣಾಂ ನ ಶಂಸಾಃ ಸುರಾ-
ತಯಃ ॥ ೩ ॥

॥ ಪದಪಾಠಃ ॥

ವಾತಾಸಃ । ನ । ಯೇ । ಧುನಯಃ । ಜಿಗತ್ನವಃ । ಅಗ್ನೀನಾಂ । ನ । ಜಿಹ್ವಾಃ । ವಿಽರೋಕಿಣಃ ।
ವರ್ಮಣ್ಽವಂತಃ । ನ । ಯೋಧಾಃ । ಶಿಮೀವಂತಃ । ಪಿತ್ರ್ಯಾಣಾಂ । ನ । ಶಂಸಾಃ । ಸುಽರಾತಯಃ ॥ ೩ ॥

। ಸಾಯಣಭಾಷ್ಯಂ ।

ಯೇ ಮರುತೋ ವಾತಾಸೋ ನ ವಾಯವ ಇವ ಧುನಯಃ ಶತ್ರೂಣಾಂ ಕಂಪಯಿತಾರೋ ಜಿಗತ್ನವೋ ಗಮನಶೀಲಾಃ । ಅತ್ರ ಮಾರುತೇ ಸೂಕ್ತೇ ಮರುತಾಮೇವ ದೃಷ್ಟಾಂತಕಥನಂ ಸಂಚರಣಸ್ವಭಾವವಾಯುಪದಾರ್ಥತದಭಿಮಾನಿದೇವತಾಭೇದೇನಾವಿರುದ್ಧಂ । ತಥಾಗ್ನೀನಾಂ ನ ಜಿಹ್ವಾ ಅಗ್ನೀನಾಂ ಜ್ವಾಲಾ ಇವ ವಿರೋಕಿಣೋ ವಿರೋಚನಶೀಲಮುಖಾಃ । ತಥಾ ವರ್ಮಣ್ವಂತೋ ನ ಯೋಧಾಃ ಕವಚಿನೋ ಯೋದ್ಧಾರ ಇವ ಶಿಮೀವಂತಃ ಶೌರ್ಯಕರ್ಮವಂತಃ । ತಥಾ ಪಿತ್ರ್ಯಾಣಾಂ ನ ಶಂಸಾಃ ಪಿತ್ರ್ಯಾಣಾಂ ಜನಕಾನಾಂ ಶಂಸಾ ವಾಚ ಇವ ಸುರಾತಯಃ ಸುದಾನಾಃ । ಏವಂಮಹಾನುಭಾವಾ ಏತೇ ಮರುತೋಽಸ್ಮದ್ಯಜ್ಞಮಾಗಚ್ಛಂತು ॥

। ಪ್ರತಿಪದಾರ್ಥ ।

**ಯೇ**—ಯಾವ ಮರುತ್ತುಗಳು । **ವಾತಾಸೋ ನ**—ವಾಯುಗಳಂತೆ । **ಧುನಯಃ**—ಶತ್ರುಗಳನ್ನು ನಡಗಿಸುವವರೂ । **ಜಿಗತ್ನವಃ**—ಗಮನಶೀಲರಾದ । **ಅಗ್ನೀನಾಂ**—ಅಗ್ನಿಗಳ । **ಜಿಹ್ವಾ ನ**—ಜ್ವಾಲೆಗಳಂತೆ ।

ವಿರೋಕಿಣಃ—ತೇಜೋಯುತರೂ । ವರ್ಮಣ್ವಂತಃ—ಕವಚವನ್ನು ಧರಿಸಿರುವ । ಯೋಧಾಃ ನ—ಯೋಧರಂತೆ । ಶಿಮೀವಂತಃ—ಶೌರ್ಯಕರ್ಮವುಳ್ಳವರೂ । ಪಿತ್ರ್ಯಾಣಾಂ—ಪಿತೃಗಳ । ಶಂಸಾಃ ನ—ಸ್ತುತಿಗಳಂತೆ । ಸುರಾತಯಃ—ಉತ್ತಮವಾದ ದಾನವಂತರೂ ಆಗಿರುವವರೋ ಆ ಮರುತ್ತುಗಳು ದಯಮಾಡಲಿ.

। ಭಾವಾರ್ಥ ।

ವಾಯುಗಳಂತೆ ಶತ್ರುಗಳನ್ನು ನಡಗಿಸುವವರೂ, ಗಮನಶೀಲರೂ, ಅಗ್ನಿಗಳ ಜ್ವಾಲೆಗಳಂತೆ ತೇಜೋಯುತರೂ, ಕವಚವನ್ನು ಧರಿಸಿರುವ ಯೋಧರಂತೆ ಶೌರ್ಯಕರ್ಮವುಳ್ಳವರೂ, ಪಿತೃಗಳ ಸ್ತುತಿಗಳಂತೆ ಉತ್ತಮವಾದ ದಾನವಂತರೂ ಆಗಿರುವ ಆ ಮರುತ್ತುಗಳು ದಯಮಾಡಲಿ

English Translation

(The Maruts), who like the winds cause (the foes) to tremble and move swift ; blazing like the flames of fires, (who are) the achievers of heroic deeds like warriors clad in mail ; munificent donors like the praises of ancestors.

। ಸಂಹಿತಾಪಾಠಃ ।

ರಥಾನಾಂ ನ ಯೇ೭ರಾಃ ಸನಾಭಯೋ ಜಿಗೀವಾಂಸೋ ನ ಶೂರಾ ಅಭಿದ್ಯವಃ ।
ವರೇಯವೋ ನ ಮರ್ಯಾ ಘೃತಪ್ರುಷೋ೭ಭಿಸ್ವರ್ತಾರೋ ಅರ್ಕಂ ನ ಸುಷ್ಟುಭಃ ॥ ೪ ॥

। ಪದಪಾಠಃ ।

ರಥಾನಾಂ । ನ । ಯೇ । ಅರಾಃ । ಸ೭ನಾಭಯಃ । ಜಿಗೀವಾಂಸಃ । ನ । ಶೂರಾಃ । ಅಭಿ೭ದ್ಯವಃ ।
ವರೇ೭ಯವಃ । ನ । ಮರ್ಯಾಃ । ಘೃತ೭ಪ್ರುಷಃ । ಅಭಿ೭ಸ್ವರ್ತಾರಃ । ಅರ್ಕಂ । ನ । ಸು೭ಸ್ತುಭಃ ॥೪॥

॥ ಸಾಯಣಭಾಷ್ಯಂ ।

ರಥಾನಾಂ ನ ರಥಚಕ್ರಾಣಾಮಿವಾರಾಃ ತೇ ಯಥಾ ಬಹವೋ೭ಪಿ ಸನಾಭಯಃ ಸಮಾನನಾಭಯೋ ಭವಂತಿ ತದ್ವದ್ಯೇ ಪರಸ್ಪರಂ ಸನಾಭಯಃ ಸಮಾನಬಂಧನಾ ಏಕಸ್ಮಿನ್ನೇವಾಂತರಿಕ್ಷೇ ವರ್ತಮಾನಾಃ । ಪರಸ್ಪರಂ ಬಂಧುಭೂತಾ ಇತ್ಯರ್ಥಃ । ಜಿಗೀವಾಂಸೋ ನ ಶೂರಾ ಜಯಶೀಲಾಃ

ಶೂರಾ ಇವಾಭಿದ್ಯವೋಽಭಿಗತದೀಪ್ತಯಃ ಕಿಂಚ ವರೇಯವೋ ನ ಮರ್ಯಾ ವೃತಂ ವರಂ ಪರಸ್ಮೈ ಪ್ರದಾತುಮಿಚ್ಛಂತೋ ಮನುಷ್ಯಾ ಇವ ಘೃತಪ್ರುಷ ಉದಕಸೇಕ್ತಾರಃ । ಉದಕಪೂರ್ವಂ ಹಿ ವರಾಣಿ ವಸೂನಿ ದೀಯಂತೇ ನಿಯಮೇನ । ವೃಷ್ಟ್ಯುದಕಪ್ರದಾ ಇತ್ಯರ್ಥಃ । ಕಿಂಚಾಭಿಸ್ವರ್ತಾರೋಽರ್ಕಂ ನಾರ್ಕಮರ್ಚನೀಯಂ ಸ್ತೋತ್ರಮಭಿಸ್ವರ್ತಾರೋಽಭಿತಃ ಶಬ್ದಯಿತಾರೋ ವಂದಿನ ಇವ ಸುಷ್ಟುಭಃ ಸುಶಬ್ದಾಃ ॥

॥ ಪ್ರತಿಪದಾರ್ಥ ॥

ರಥಾನಾಂ—ರಥಗಳ ಚಕ್ರಗಳ । ಅರಾಃ ನ—ಆರೆಯ ಕಡ್ಡಿಗಳಿಗಿರುವಂತೆ । ಸನಾಭಯಃ—ಸಮಾನವಾದ ಮಧ್ಯಸ್ಥಾನವುಳ್ಳವರೂ । ಯೇ—ಯಾರು । ಶೂರಾಃ ನ—ಶೂರರಂತೆ । ಜಿಗೀವಾಂಸಃ—ಜಯಶೀಲರೂ । ಅಭಿದ್ಯವಃ—ಪ್ರಕಾಶಯುತರೂ ಆಗಿರುವರೋ ಅವರೂ । ವರೇಯವಃ—ಉದಾರಿಗಳಾದ । ಮರ್ಯಾಃ ನ—ಮಾನವರಂತೆ । ಘೃತಪ್ರುಷಃ—ಅಧಿಕವಾಗಿ ವೃಷ್ಟಿಯನ್ನು ಸುರಿಸುವವರೂ । ಅರ್ಕಂ—ಸ್ತೋತ್ರವನ್ನು । ಅಭಿಸ್ವರ್ತಾರೋ ನ—ಪಠಿಸತಕ್ಕ ಸ್ತುತಿಕರ್ತರಂತೆ । ಸುಷ್ಟುಭಃ—ಉತ್ತಮವಾದ ಸ್ತುತಿಯುಳ್ಳವರೂ ಆಗಿರುವರೋ ಆ ಮರುತ್ತುಗಳು ದಯಮಾಡಲಿ.

॥ ಭಾವಾರ್ಥ ॥

ಯಾವ ಮರುತ್ತುಗಳು ರಥ ಚಕ್ರಗಳ ಆರೆಯ ಕಡ್ಡಿಗಳಿಗಿರುವಂತೆ ಒಂದೇ ನಾಭಿಸ್ಥಾನವುಳ್ಳವರೂ (ಸಮಾನವಾದ ಬಂಧುತ್ವಯುಕ್ತರೂ) ಶೂರರಂತೆ ಜಯಶೀಲರೂ ಪ್ರಕಾಶಯುತರೂ, ಉದಾರಿಗಳಾದ ಮಾನವರಂತೆ ಅಧಿಕವಾಗಿ ವೃಷ್ಟ್ಯುದಕವನ್ನು ಸುರಿಸುವವರೂ, ಸ್ತುತಿಯನ್ನು ಪಠಿಸತಕ್ಕ ಸ್ತುತಿಕರ್ತರಂತೆ ಉತ್ತಮವಾದ ಸ್ತುತಿಯುಳ್ಳವರೂ ಆಗಿರುವರೋ, ಆ ಮರುತ್ತುಗಳು ದಯಮಾಡಲಿ.

## English Translation

Who (are) united to a common centre like the spokes (of the wheels) of chariots, brilliant like victorious heroes, sprinkling water like benevolent men, sweet-voiced like men who recite praise.

॥ ಸಂಹಿತಾಪಾಠಃ ॥

ಅಶ್ವಾಸೋ ನ ಯೇ ಜ್ಯೇಷ್ಠಾಸ ಆಶವೋ ದಿಧಿಷವೋ ನ ರಥ್ಯಃ ಸುದಾನವಃ ।
ಆಪೋ ನ ನಿಮ್ನೈರುದಭಿರ್ಜಿಗತ್ನವೋ ವಿಶ್ವರೂಪಾ ಅಂಗಿರಸೋ ನ
ಸಾಮಭಿಃ ॥ ೩ ॥

॥ ಪದಪಾಠಃ ॥

ಅಶ್ವಾಸಃ । ನ । ಯೇ । ಜ್ಯೇಷ್ಠಾಸಃ । ಆಶವಃ । ದಿಧಿಷವಃ । ನ । ರಥ್ಯಃ । ಸುಽದಾನವಃ ।
ಆಪಃ । ನ । ನಿಮ್ನೈಃ । ಉದಽಭಿಃ । ಜಿಗತ್ನವಃ । ವಿಶ್ವಽರೂಪಾಃ । ಅಂಗಿರಸಃ । ನ । ಸಾಮಽಭಿಃ ॥ ೩ ॥

॥ ಸಾಯಣಭಾಷ್ಯಂ ।

**ಯೇ ಮರುತೋಽಶ್ವಾಸೋ ನಾಶ್ವಾ ಇವ ಜ್ಯೇಷ್ಠಾಃ ಪ್ರಶಸ್ಯತಮಾ ಆಶವಃ ಶೀಘ್ರಗಮನಾಃ । ತಥಾ ದಿಧಿಷವೋ ನ ವಸೂನಾಂ ಧಾರಕಾ ಇವ ರಥ್ಯೋ ರಥಸ್ವಾಮಿನಃ ಸುದಾನವಃ ಸುದಾನಾಃ । ತಥಾಪೋ ನಾಪ ಇವ ನಿಮ್ನೈಃ ಪ್ರವಣೈರುದಭಿರುದಕೈಃ ಸಹ ಜಿಗತ್ನವೋ ಗಮನಶೀಲಾಃ । ತಥಾ ವಿಶ್ವರೂಪಾ ನಾನಾರೂಪಾಃ ಸಾಮಭಿರ್ಯುಕ್ತಾ ಅಂಗಿರಸೋ ನಾಂಗಿರಸ ಇವ । ಸರ್ವದಾ ಸಾಮಗಾ ಇತ್ಯರ್ಥಃ ॥**

॥ ಪ್ರತಿಪದಾರ್ಥ ।

**ಯೇ**—ಯಾವ ಮರುತ್ತುಗಳು । **ಅಶ್ವಾಸೋ ನ**—ಅಶ್ವಗಳಂತೆ । **ಜ್ಯೇಷ್ಠಾಸಃ**—ಪ್ರಶಸ್ಯರೂ । **ಆಶವಃ**—ಶೀಘ್ರಗಾಮಿಗಳೂ । **ದಿಧಿಷವೋ ನ**—ಧನಿಕರಂತೆ । **ರಥ್ಯಃ**—ರಥಕ್ಕೆ ಯಜಮಾನರೂ । **ಸುದಾನವಃ**—ಉತ್ತಮವಾದ ದಾನವುಳ್ಳವರೂ । **ನಿಮ್ನೈಃ**—ತಗ್ಗುಪ್ರದೇಶಗಳಲ್ಲಿ ಹರಿಯುವ । **ಉದಭಿಃ**—ಉದಕಗಳಿಂದ ಕೂಡಿದ । **ಆಪೋ ನ**—ನದಿಗಳಂತೆ । **ಜಿಗತ್ನವಃ**—ಗಮನಶೀಲರೂ । **ವಿಶ್ವರೂಪಾಃ**—ನಾನಾ ರೂಪವುಳ್ಳವರೂ । **ಅಂಗಿರಸೋ ನ**—ಅಂಗಿರಸ್ಸುಗಳಂತೆ । **ಸಾಮಭಿಃ**—ಸಾಮಗಾನದಿಂದ ಕೂಡಿದವರೂ ಆಗಿರುವರೋ, ಆ ಮರುತ್ತುಗಳು ದಯಮಾಡಲಿ.

॥ ಭಾವಾರ್ಥ ॥

ಅಶ್ವಗಳಂತೆ ಪ್ರಶಸ್ಯರೂ, ಶೀಘ್ರಗಾಮಿಗಳೂ, ಧನಿಕರಂತೆ ರಥಕ್ಕೆ ಯಜಮಾನರೂ, ಉತ್ತಮವಾದ ದಾನವುಳ್ಳವರೂ, ತಗ್ಗುಪ್ರದೇಶಗಳಲ್ಲಿ ಹರಿಯುವ ಪ್ರವಾಹಗಳಿಂದ ಕೂಡಿದ ನದಿಗಳಂತೆ ಗಮನಶೀಲರೂ, ನಾನಾರೂಪವುಳ್ಳವರೂ, ಅಂಗಿರಸ್ಸುಗಳಂತೆ ಸಾಮಗಾನದಿಂದ ಕೂಡಿದವರೂ ಆದ ಮರುತ್ತುಗಳು ನಮ್ಮ ಯಜ್ಞಕ್ಕೆ ದಯಮಾಡಲಿ.

## English Translation

Who (are) most excellent and swift like horses, lords of cars and munificent like the possessors of wealth, swiftly moving like rivers with water flowing from a height, (accompanied) everywhere with hymns like the multiform Angirasas.

॥ ಸಂಹಿತಾಪಾಠಃ ॥

ಗ್ರಾವಾಣೋ ನ ಸೂರಯಃ ಸಿಂಧುಮಾತರ ಆದರ್ದಿರಾಸೋ ಅದ್ರಯೋ ನ ವಿಶ್ವಹಾ ।
ಶಿಶೂಲಾ ನ ಕ್ರೀಳಯಃ ಸುಮಾತರೋ ಮಹಾಗ್ರಾಮೋ ನ ಯಾಮನ್ನುತ ತ್ವಿಷಾ ॥ ೬ ॥

॥ ಪದಪಾಠಃ ॥

ಗ್ರಾವಾಣಃ । ನ । ಸೂರಯಃ । ಸಿಂಧುಽಮಾತರಃ । ಆಽದರ್ದಿರಾಸಃ । ಅದ್ರಯಃ । ನ । ವಿಶ್ವಹಾ ।
ಶಿಶೂಲಾಃ । ನ । ಕ್ರೀಳಯಃ । ಸುಽಮಾತರಃ । ಮಹಾಽಗ್ರಾಮಃ । ನ । ಯಾಮನ್ । ಉತ । ತ್ವಿಷಾ ॥

॥ ಸಾಯಣಭಾಷ್ಯಂ ॥

ಸೂರಯ ಉದಕಸ್ಯ ಪ್ರೇರಕಾ ಗ್ರಾವಾಣೋ ನ ಮೇಘಾ ಇವ ಸಿಂಧುಮಾತರೋ ನದೀನಿರ್ಮಾತಾರಃ । ಆದರ್ದಿರಾಸ ಆದರಣಶೀಲಾ ಅನ್ಯದ್ರಯೋ ನ ವಜ್ರಾದ್ಯಾಯುಧಾನೀವ ವಿಶ್ವಹಾ ಸರ್ವದಾ ಶತ್ರೂಣಾಂ ಹಂತಾರ ಇತ್ಯರ್ಥಃ । ಯದ್ವಾ । ಸರ್ವದಾದ್ರಯೋ ನ ವಜ್ರಾ ಇವ ಶತ್ರೂಣಾಮಾದರ್ದಿರಾಸ ಆದರಣಶೀಲಾಃ । ಸುಮಾತರಃ ಶೋಭನಮಾತೃಕಾಃ ಶಿಶೂಲಾ ನ ಶಿಶವ ಇವ ಕ್ರೀಳಯೋ ವಿಹರ್ತಾರಃ । ಉತಾಪಿ ಚ ಮಹಾಗ್ರಾಮೋ ನ ಮಹಾಜ್ಜನಸಂಘ ಇವ ಯಾಮನ್ಯಾಮನಿ ಗಮನೇ ತ್ವಿಷಾ ದೀಪ್ತ್ಯಾ ಯುಕ್ತಾ ಭವಂತಿ । ತೇಽಸ್ಮದ್ಯಜ್ಞಮಾಗಚ್ಛಂತು ॥

। ಪ್ರತಿಪದಾರ್ಥ ।

**ಸೂರಯಃ**—ಉದಕಕ್ಕೆ ಪ್ರೇರಕಗಳಾದ । **ಗ್ರಾವಾಣೋ ನ**—ಮೇಘಗಳಂತೆ । **ಸಿಂಧುಮಾತರಃ**—ನದೀನಿರ್ಮಾತೃಗಳೂ । **ಆದರ್ದಿರಾಸಃ**—ಶತ್ರುಚ್ಛೇದಕವಾದ । **ಅದ್ರಯೋ ನ**—ವಜ್ರಾಯುಧದಂತೆ । **ವಿಶ್ವಹಾ**—ಸಕಲ ಶತ್ರುಗಳನ್ನು ನಾಶಮಾಡುವವರೂ । **ಸುಮಾತರಃ**—ಉತ್ತಮವಾದ ಮಾತೃಗಳುಳ್ಳವರೂ । **ಕ್ರೀಳಯಃ**—ಆಟದಲ್ಲಿ ಆಸಕ್ತಿಯುಳ್ಳವರೂ ಆದ । **ಶಿಶೂಲಾ ನ**—ಶಿಶುಗಳಂತಿರುವವರೂ । **ಉತ**—ಮತ್ತು । **ಮಹಾಗ್ರಾಮೋ ನ**—ದೊಡ್ಡ ಜನಸಮೂಹದಂತೆ । **ಯಾಮನ್**—ಸಂಚಾರಕಾಲದಲ್ಲಿ । **ತ್ವಿಷಾ**—ಕಾಂತಿಯಿಂದ ಕೂಡಿದವರೂ ಆದ ಮರುತ್ತುಗಳು ದಯಮಾಡಲಿ.

॥ ಭಾವಾರ್ಥ ॥

ಉದಕಕ್ಕೆ ಪ್ರೇರಕಗಳಾದ ಮೇಘಗಳಂತೆ ನದೀನಿರ್ಮಾತೃಗಳೂ, ಶತ್ರುಚ್ಛೇದಕವಾದ ವಜ್ರಾಯುಧದಂತೆ ಸಕಲ ಶತ್ರುಗಳನ್ನು ನಾಶಮಾಡುವವರೂ, ಉತ್ತಮವಾದ ಮಾತೃಗಳುಳ್ಳವರೂ, ಆಟದಲ್ಲಿ ಆಸಕ್ತಿಯುಳ್ಳವರೂ ಆದ ಶಿಶುಗಳಂತಿರುವವರೂ, ಮತ್ತು ದೊಡ್ಡ ಜನಸ್ತೋಮದಂತೆ ಸಂಚಾರಕಾಲದಲ್ಲಿ ಕಾಂತಿಯಿಂದ ಕೂಡಿದವರೂ ಆದ ಮರುತ್ತುಗಳು ದಯಮಾಡಲಿ.

English Translation

Having streams for mothers like the grinding-stones which send forth moisture; ever destroying (enemies) like destructive thunderbolts; having tender mothers like sportive infants; (endowed) with splendour like a great crowd of men in a procession.

॥ ಸಂಹಿತಾಪಾಠಃ ॥

ಉಷಸಾಂ ನ ಕೇತವೋಽಧ್ವರಶ್ರಿಯಃ ಶುಭಂಯವೋ ನಾಂಜಿಭಿರ್ವ್ಯ-
ಶ್ವಿತನ್ ।
ಸಿಂಧವೋ ನ ಯಯಿಯೋ ಭ್ರಾಜದೃಷ್ಟಯಃ ಪರಾವತೋ ನ ಯೋಜ-
ನಾನಿ ಮಮಿರೇ ॥ ೭ ॥

॥ ಪದಪಾಠಃ ॥

ಉಷಸಾಂ । ನ । ಕೇತವಃ । ಅಧ್ವರಽಶ್ರಿಯಃ । ಶುಭಂಽಯವಃ । ನ । ಅಂಜಿಽಭಿಃ । ವಿ । ಅಶ್ವಿತನ್ ।
ಸಿಂಧವಃ । ನ । ಯಯಿಯಃ । ಭ್ರಾಜತ್ಽಋಷ್ಟಯಃ । ಪರಾಽವತಃ । ನ । ಯೋಜನಾನಿ । ಮಮಿರೇ ॥

॥ ಸಾಯಣಭಾಷ್ಯಂ ॥

ಯೇ ಮರುತ ಉಷಸಾಂ ನ ಕೇತವ ಉಷಸಾಂ ರಶ್ಮಯ ಇವಾಧ್ವರಶ್ರಿಯೋ ಯಜ್ಞಸ್ಯಾಶ್ರಯಿತಾರೋ ಭವಂತಿ । ತಥಾ ಶುಭಂಯವೋ ನ ಕಲ್ಯಾಣಕಾಮಾ ವರಾ ಇವಾಂಜಿಭಿರಾಭರಣೈರ್ವ್ಯಶ್ವಿತನ್ ದೀಪ್ಯಂತೇ ॥ ಶ್ವಿತಾ ವರ್ಣೇ । ಲಙಿ ರೂಪಂ ॥ ತಥಾ ಸಿಂಧವೋ ನ ನದ್ಯ ಇವ ಯಯಿಯೋ ಗಮನಶೀಲಾ ಭ್ರಾಜದೃಷ್ಟಯೋ ದೀಪ್ಯಮಾನಾಯುಧಾ: ಪರಾವತೋ ನ ದೂರಾಧ್ವನೀನಾ ವಡವಾ ಇವ ಯೋಜನಾನಿ ದೂರದೇಶಾನ್ಮಮಿರೇ । ಪರಿಚ್ಛಿಂದಂತಿ । ತೇಽಸ್ಮದ್ಯಜ್ಞಮಾಗಚ್ಛಂತ್ವಿತಿ ॥

॥ ಪ್ರತಿಪದಾರ್ಥ ॥

**ಉಷಸಾಂ**—ಉಷಸ್ಸುಗಳ । **ಕೇತವಃ ನ**—ರಶ್ಮಿಗಳಂತೆ । **ಅಧ್ವರಶ್ರಿಯಃ**—ಯಜ್ಞಕಾಂತಿಯುಳ್ಳ ಮರುತ್ತುಗಳು । **ಶುಭಂಯವೋ ನ**—ಕಲ್ಯಾಣಾತ್ಮಕರಾದ ವರರಂತೆ । **ಅಂಜಿಭಿಃ**—ಆಭರಣಗಳಿಂದ । **ವ್ಯಶ್ವಿತನ್**—ಪ್ರಕಾಶಿಸುತ್ತಾರೆ । **ಸಿಂಧವೋ ನ**—ನದಿಗಳಂತೆ । **ಯಯಿಯಃ**—ಗಮನಶೀಲರೂ । **ಭ್ರಾಜದೃಷ್ಟಯಃ**—ಪ್ರಕಾಶಮಾನವಾದ ಆಯುಧವುಳ್ಳವರೂ ಆದ ಮರುತ್ತುಗಳು । **ಪರಾವತೋ ನ**—ದೂರ ಪ್ರಯಾಣಕ್ಕೆ ಯೋಗ್ಯವಾದ ಅಶ್ವಗಳಂತೆ । **ಯೋಜನಾನಿ**—ಬಹುದೂರಪ್ರದೇಶಗಳನ್ನು । **ಮಮಿರೇ**—ಸಂಚರಿಸುತ್ತಾರೆ.

॥ ಭಾವಾರ್ಥ ॥

ಉಷಸ್ಸುಗಳ ರಶ್ಮಿಗಳಂತೆ ಯಜ್ಞಕಾಂತಿಯುಳ್ಳ ಮರುತ್ತುಗಳು ಕಲ್ಯಾಣಾತ್ಮಕರಾದ ವರರಂತೆ ಆಭರಣಗಳಿಂದ ಪ್ರಕಾಶಿಸುತ್ತಾರೆ. ನದಿಗಳಂತೆ ಗಮನಶೀಲರೂ, ಪ್ರಕಾಶಮಾನವಾದ ಆಯುಧವುಳ್ಳವರೂ ಆದ ಮರುತ್ತುಗಳು ದೂರಪ್ರಯಾಣಕ್ಕೆ ಯೋಗ್ಯವಾದ ಅಶ್ವಗಳಂತೆ ಬಹುದೂರಪ್ರದೇಶಗಳನ್ನು ಸಂಚರಿಸುತ್ತಾರೆ.

## English Translation

Who, radiant in sacrifices like the rays of the dawn, shine with their ornaments like those expectant of good fortune, (who) swift-moving like rivers, having bright weapons, have traversed leagues like mares who have journeyed from far, (may they come to our sacrifice).

। ಸಂಹಿತಾಪಾಠಃ ।

ಸುಭಾಗಾನ್ನೋ ದೇವಾಃ ಕೃಣುತಾ ಸುರತ್ನಾನಸ್ಮಾನ್ತ್ಸ್ತೋತೄನ್ಮರುತೋ ವಾವೃಧಾನಾಃ ।
ಅಧಿ ಸ್ತೋತ್ರಸ್ಯ ಸಖ್ಯಸ್ಯ ಗಾತ ಸನಾದ್ಧಿ ವೋ ರತ್ನಧೇಯಾನಿ ಸಂತಿ ॥ ೮ ॥

। ಪದಪಾಠಃ ॥

ಸುಽಭಾಗಾನ್ । ನಃ । ದೇವಾಃ । ಕೃಣುತ । ಸುಽರತ್ನಾನ್ । ಅಸ್ಮಾನ್ । ಸ್ತೋತೄನ್ । ಮರುತಃ । ವಾವೃಧಾನಾಃ ।
ಅಧಿ । ಸ್ತೋತ್ರಸ್ಯ । ಸಖ್ಯಸ್ಯ । ಗಾತ । ಸನಾತ್ । ಹಿ । ವಃ । ರತ್ನಽಧೇಯಾನಿ । ಸಂತಿ ॥ ೮ ॥

॥ ಸಾಯಣಭಾಷ್ಯಂ ॥

ಅನಯಾ ಸ್ತುತಿಮುಪಸಂಹರತಿ । ಹೇ ಮರುತೋ ದೇವಾಃ ವವೃಧಾನಾಃ ಸ್ತುತ್ಯಾ ವರ್ಧಮಾನಾ ಯೂಯಂ ಸ್ತೋತೄನ್ನೋಽಸ್ಮಾನ್ಸುಭಾಗಾನ್ಸುಧನಾನ್ಕೃಣುತ । ಕುರುತ । ತಥಾ ಸುರತ್ನಾಞ್ಛೋಭನರತ್ನಾನ್ಕೃಣುತ । ಯದ್ವಾ । ಸುರತ್ನಾಞ್ಛೋಭನರಮಣೀಯಸ್ತೋತ್ರಾನಸ್ಮಾನಿತಿ ಸಂಬಂಧನೀಯಂ । ಕಿಂಚ ಯೂಯಂ ಸಖ್ಯಸ್ಯ ಸ್ತೋತ್ರಸ್ಯ ಸಖಿಭೂತಂ ಸ್ತೋಮಮಧಿ ಗಾತ । ಅಧಿಗಚ್ಛತ । ವೋ ಯುಷ್ಮಾಕಂ ರತ್ನಧೇಯಾನಿ ರತ್ನದಾನಾನ್ಯಸ್ಮದ್ವಿಷಯಾಣಿ ಸನಾದ್ಧಿ ಚಿರಕಾಲಾದಾರಭ್ಯ ಖಲು ಸಂತಿ ॥

। ಪ್ರತಿಪದಾರ್ಥ ।

**ದೇವಾಃ**—ದೇವತಾತ್ಮರಾದ । **ಮರುತಃ**—ಎಲೈ ಮರುತ್ತುಗಳೇ । **ವವೃಧಾನಾಃ**—ಸ್ತುತಿಯಿಂದ ಪುಷ್ಟಿಗೊಳ್ಳುವ ನೀವು । **ಸ್ತೋತೄನ್**—ಸ್ತುತಿಕರ್ತರಾದ । **ನಃ**—ನಮ್ಮನ್ನು । **ಸುಭಗಾನ್**—ಉತ್ತಮವಾದ ಧನವುಳ್ಳವರನ್ನಾಗಿ । **ಕೃಣುತ**—ಮಾಡಿರಿ । **ಅಸ್ಮಾನ್ ಸುರತ್ನಾನ್**—ನಮ್ಮನ್ನು ಉತ್ತಮವಾದ ರತ್ನಸಂಪತ್ತುಳ್ಳವರನ್ನಾಗಿ ಮಾಡಿರಿ । **ಸಖ್ಯಸ್ಯ**—ನಿಮಗೆ ಪ್ರಿಯವಾದ । **ಸ್ತೋತ್ರಸ್ಯ**—ನಮ್ಮ ಸ್ತುತಿಗಭಿಮುಖವಾಗಿ । **ಅಧಿ**

**ಗಾತ**—ಬನ್ನಿರಿ | **ವಃ**—ನಿಮ್ಮಲ್ಲಿ | **ರತ್ನಧೇಯಾನಿ**—ನಮಗೆ ಕೊಡಬೇಕಾದ ಸಂಪತ್ತುಗಳು | **ಸನಾದ್ಧಿ ಸಂತಿ**—ಅನೇಕ ಕಾಲದಿಂದ ಇವೆ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಮರುತ್ತುಗಳೇ, ಸ್ತುತಿಯಿಂದ ಪುಷ್ಟಿಗೊಳ್ಳುವ ನೀವು ಸ್ತುತಿಕರ್ತರಾದ ನಮ್ಮನ್ನು ಉತ್ತಮ ಧನಸಂಪತ್ತುಳ್ಳವರನ್ನಾಗಿ ಮಾಡಿರಿ. ನಿಮಗೆ ಪ್ರಿಯವಾದ ನಮ್ಮ ಸ್ತುತಿಗಭಿಮುಖವಾಗಿ ಬನ್ನಿರಿ. ನಿಮ್ಮಲ್ಲಿ ನಮಗೆ ಕೊಡಬೇಕಾದ ಸಂಪತ್ತುಗಳು ಅನೇಕ ಕಾಲದಿಂದಲೂ ಇವೆ.

English Translation

Divine Maruts, magnified (by our praise), render us, your praisers, prosperous and opulent; come this friendly laudation, for your precious bounties have been long (bestowed upon us).



## ಎಪ್ಪತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಪಶ್ಯಮಿತಿ ಸಪ್ತರ್ಚಮೇಕಾದಶಂ ಸೂಕ್ತಮಾಗ್ನೇಯಂ ತ್ರೈಷ್ಟುಭಂ | ಸೌಚೀಕಗುಣೋಽಗ್ನಿರ್ಋಷಿರ್ವೈಶ್ವಾನರಗುಣೋ ವಾಥವಾ ಸಪ್ತಿರ್ನಾಮ ವಾಜಂಭರಪುತ್ರಃ | ತಥಾಚಾನುಕ್ರಾಂತಂ | ಅಪಶ್ಯಂ ಸಪ್ತ ಸೌಚೀಕೋಽಗ್ನಿರ್ವೈಶ್ವಾನರೋ ವಾ ಸಪ್ತಿರ್ವಾ ವಾಜಂಭರ ಆಗ್ನೇಯಂ ತ್ವಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸೀದಮಾದಿಕೇ ದ್ವೇ ಸೂಕ್ತೇ | ಸೂತ್ರಿತಂ ಚ | ಅಪಶ್ಯಮಸ್ಯ ಮಹತ ಇತಿ ಸೂಕ್ತೇ | ಆ. ೪–೧೩ | ಇತಿ ॥**

ಅನುವಾದವು—**ಅಪಶ್ಯಂ** ಎಂಬ ಸೂಕ್ತವು ಆರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೌಚೀಕಗುಣಯುಕ್ತನಾದ ಅಗ್ನಿಯು ಋಷಿಯು; ಅಥವಾ ವೈಶ್ವಾನರಗುಣಯುಕ್ತನಾದ ಅಗ್ನಿಯು ಋಷಿಯು; ಅಥವಾ ವಾಜಂಭರಋಷಿಯ ಪುತ್ರನಾದ ಸಪ್ತಿ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಪಶ್ಯಂ ಸಪ್ತ ಸೌಚೀಕೋಽಗ್ನಿರ್ವೈಶ್ವಾನರೋ ವಾ ಸಪ್ತಿರ್ವಾ ವಾಜಂಭರ ಆಗ್ನೇಯಂ ತು** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಅಪಶ್ಯಮಸ್ಯ ಮಹತ ಇತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

# ಸೂಕ್ತ—೭೯

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೭೯ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಅಗ್ನಿಃ ಸೌಚೀಕೋ ವೈಶ್ವಾನರೋ ವಾ ಸಪ್ತಿರ್ವಾ ವಾಜಂಭರಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಪಶ್ಯಮಸ್ಯ ಮಹತೋ ಮಹಿತ್ವಮಮರ್ತ್ಯಸ್ಯ ಮರ್ತ್ಯಾಸು ವಿಕ್ಷು ।
ನಾನಾ ಹನೂ ವಿಭೃತೇ ಸಂ ಭರೇತೇ ಅಸಿನ್ವತೀ ಬಪ್ಸತೀ ಭೂರ್ಯತ್ತಃ ॥೧॥

॥ ಪದಪಾಠಃ ॥

ಅಪಶ್ಯಂ । ಅಸ್ಯ । ಮಹತಃ । ಮಹಿಽತ್ವಂ । ಅಮರ್ತ್ಯಸ್ಯ । ಮರ್ತ್ಯಾಸು । ವಿಕ್ಷು ।
ನಾನಾ । ಹನೂ ಇತಿ । ವಿಭೃತೇ ಇತಿ ವಿಽಭೃತೇ । ಸಂ । ಭರೇತೇ ಇತಿ । ಅಸಿನ್ವತೀ ಇತಿ । ಬಪ್ಸತೀ ಇತಿ ।
ಭೂರಿ । ಅತ್ತಃ ॥ ೧ ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇರ್ಮಹತೋ ಮಂಹನೀಯಸ್ಯ ಮಹಿತ್ವಂ ಮಹತ್ತ್ವಮಪಶ್ಯಂ। ಪಶ್ಯಾಮಿ। ಕೀದೃಶಸ್ಯಾಸ್ಯ। ಮರ್ತ್ಯಾಸು ವಿಕ್ಷು ಮನುಷ್ಯರೂಪಾಸು ಪ್ರಜಾಸು ತಾಸಾಂ ಹೃದಯೇಽಮರ್ತ್ಯಸ್ಯಾಮರಣಸ್ವಭಾವಸ್ಯ ವೈಶ್ವಾನರರೂಪೇಣ ವರ್ತಮಾನಸ್ಯ । ಯದ್ವಾ। ಮರ್ತ್ಯಾಸು ವಿಕ್ಷ್ವೃತ್ವಿಗ್ಯಜಮಾನರೂಪಾಸು ಪ್ರಜಾಸ್ವಮರ್ತ್ಯಸ್ಯ ಸರ್ವದಾ ಜಾಗರಿತಸ್ಯ । ಅಥ ದಾವಾಗ್ನಿರೂಪೋಽಗ್ನಿರುಚ್ಯತೇ । ಅಸ್ಯಾಗ್ನೇರ್ಹನೂ ಶಿಪ್ರೇ ನಾನಾ ವಿಭೃತೇ ವಿಭಿನ್ನೇ ಸಂ ಭರೇತೇ। ಸಂಭರತೋ ದಂತೈಃ। ತಥಾ ಕೃತ್ವಾಸಿನ್ವತೀ ಅಸಂಖಾದಂತ್ಯೌ ಸ್ತೋತಾರಂ ಬಪ್ಸತೀ ಭಕ್ಷಯಂತ್ಯೌ ಭೂರಿ ಪ್ರಭೂತಂ ಕಾಷ್ಠಮರಣ್ಯೇ ವರ್ತಮಾನಮತ್ತಃ। ಭಕ್ಷಯತಃ।

॥ ಪ್ರತಿಪದಾರ್ಥ ॥

ಮರ್ತ್ಯಾಸು—ಮಾನವರಾದ । ವಿಕ್ಷು—ಪ್ರಜೆಗಳ ಹೃದಯದಲ್ಲಿ ಸ್ಥಿತನೂ। ಅಮರ್ತ್ಯಸ್ಯ—ಮರಣ ರಹಿತನೂ । ಮಹತಃ—ಪೂಜ್ಯನೂ ಆದ । ಅಸ್ಯ—ಈ ಅಗ್ನಿಯ । ಮಹಿತ್ವಂ—ಮಾಹಾತ್ಮ್ಯವನ್ನು । ಅಪಶ್ಯಂ—ನೋಡುತ್ತೇನೆ । ನಾನಾ—ಅನೇಕ ಬಗೆಯಲ್ಲಿ । ವಿಭೃತೇ—ಭಿನ್ನವಾಗಿರುವ । ಹನೂ—ಅಗ್ನಿಯ

ಎರಡು ಕೆನ್ನೆಗಳೂ । ಸಂಭರೇತೇ—ದಂತಗಳಿಂದ ವಹಿಸಲ್ಪಡುತ್ತವೆ । ಅಸಿನ್ವತೀ—ಸ್ತುತಿಕರ್ತನನ್ನು ಹಿಂಸಿಸದೆಯೂ । ಬಪ್ಸತೀ—ಹವಿಸ್ಸನ್ನು ಭಕ್ಷಿಸುತ್ತಲೂ । ಭೂರಿ—ಅಧಿಕವಾದ ಕಾಷ್ಠಗಳನ್ನು। ಅತ್ತಃ—ಭಕ್ಷಿಸುತ್ತವೆ.

॥ ಭಾವಾರ್ಥ ॥

ಮಾನವರಾದ ಪ್ರಜೆಗಳ ಹೃದಯದಲ್ಲಿ ಇರುವವನೂ, ಪೂಜ್ಯನೂ, ಮರಣರಹಿತನೂ ಆದ ಅಗ್ನಿಯ ಮಾಹಾತ್ಮ್ಯವನ್ನು ನೋಡುತ್ತೇನೆ. ಅನೇಕ ವಿಧವಾಗಿ ಭಿನ್ನವಾಗಿರುವ ಅಗ್ನಿಯ ಎರಡು ಕೆನ್ನೆಗಳೂ ದಂತಗಳಿಂದ ವಹಿಸಲ್ಪಡುತ್ತವೆ. ಸ್ತುತಿಕರ್ತನನ್ನು ಹಿಂಸಿಸದೆಯೂ, ಹವಿಸ್ಸನ್ನು ಭಕ್ಷಿಸುತ್ತಲೂ ಅಧಿಕವಾದ ಕಾಷ್ಠಗಳನ್ನು ಭಕ್ಷಿಸುತ್ತವೆ.

English Translation

I have beheld might of the adorable (Agni) immortal in (the hearts of) mortal beings; his two jaws, divided asunder, shut together; devouring without masticating consume much (fuel).

॥ ವಿಶೇಷವಿಷಯಗಳು ॥

**ಅಸಿನ್ವತೀ**— ಅಸಂಖಾದಂತ್ಯೌ । ಯಾಸ್ಕರು ಈ ಶಬ್ದಕ್ಕೆ **ಅಸಿನ್ವತೀ ಅಸಂಖಾದಂತ್ಯೌ । ಅಸಿನ್ವತೀ ಬಪ್ಸತೀ ಭೂರ್ಯತ್ತಃ ಇತ್ಯಪಿ ನಿಗಮೋ ಭವತಿ** (ನಿ. ೬-೪)ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, ಹೆಚ್ಚುಹೆಚ್ಚಾಗಿಯೂ, ಆತುರವಾಗಿಯೂ ಚೆನ್ನಾಗಿ ಅಗಿಯದೆ ಬೇಗಬೇಗ ಭಕ್ಷಿಸುತ್ತವೆ ಎಂದರ್ಥವು. ನಿಧಾನವಾಗಿ ಅಗಿದು ತಿನ್ನದೆ ಬೇಗಬೇಗನೆ ಸುಮ್ಮನೆ ನುಂಗುತ್ತವೆ ಎಂದಭಿಪ್ರಾಯವು. ಮುಂದಿನ ಋಕ್ಕಿನಲ್ಲಿಯೂ **ಅಸಿನ್ವನ್ ಅತ್ತಿ** ಎಂಬ ಶಬ್ದಗಳ ಪ್ರಯೋಗವಿದೆ ಅಲ್ಲಿಯೂ ಇದೇ ಅರ್ಥವು.

॥ ಸಂಹಿತಾಪಾಠಃ ॥

ಗುಹಾ ಶಿರೋ ನಿಹಿತಮೃಧಗಕ್ಷೀ ಅಸಿನ್ವನ್ನತ್ತಿ ಜಿಹ್ವಯಾ ವನಾನಿ ।
ಅತ್ರಾಣ್ಯಸ್ಮೈ ಪಡ್ಭಿಃ ಸಂ ಭರಂತ್ಯುತ್ತಾನಹಸ್ತಾ ನಮಸಾಧಿ ವಿಕ್ಷು ॥ ೨ ॥

॥ ಪದಪಾಠಃ ॥

ಗುಹಾ । ಶಿರಃ । ನಿऽಹಿತಂ । ಋಧಕ್ । ಅಕ್ಷೀ ಇತಿ । ಅಸಿನ್ವನ್ । ಅತ್ತಿ । ಜಿಹ್ವಯಾ । ವನಾನಿ ।
ಅತ್ರಾಣಿ । ಅಸ್ಮೈ । ಪಟ್ऽಭಿಃ । ಸಂ । ಭರಂತಿ । ಉತ್ತಾನऽಹಸ್ತಾಃ । ನಮಸಾ । ಅಧಿ । ವಿಕ್ಷು ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇಃ ಶಿರೋ ಮೂರ್ಧಾ ಗುಹಾಯಾಂ ನಿಹಿತಂ ಮನುಷ್ಯೋದರೇಷು ವರ್ತತೇ । ಅಸ್ಯಾಕ್ಷೀ ಅಕ್ಷಿಣೀ ಋಧಕ್ ಪೃಥಗ್ನಿಹಿತಂ ನಿಹಿತೇ ಚಂದ್ರಸೂರ್ಯಾತ್ಮನಾ । ತಾವೇವಾಕ್ಷಿಣೀ ಇತ್ಯರ್ಥಃ ।

ಈದೃಶೋ ಯೋಽಗ್ನಿರಸಿನ್ವನ್ದಂತೈರಸಂಖಾದಞ್ಜಿಹ್ವಯಾ ವನಾನ್ಯತ್ತಿ ಕಾಷ್ಠಾನಿ ಭಕ್ಷಯತಿ ದಾಹಭೂತಃ ಅಸ್ಮಾ ಅಗ್ನಯೇಽಧ್ವರ್ಯ್ವಾದಯಃ ಪದ್ಭಿಃ ಪಾದೈರಭಿಗತ್ಯಾತ್ರಾಣಿ ಸಂ ಭರಂತಿ । ಸಂಪಾದಯಂತಿ ಹವೀಂಷಿ । ಕಥಂಭೂತಾ । ಉತ್ತಾನಹಸ್ತಾಃ ಪಾತ್ರಧಾರಣಾರ್ಥಮುನ್ನತಕರಾ ನಮಸಾ ನಮಸ್ಕಾರೇಣ ಯುಕ್ತಾಃ । ಕುತ್ರ । ಅಧಿ ವಿಕ್ಷು ಪ್ರಜಾಸ್ವೃತ್ವಿಕ್ಷು ಮಧ್ಯೇ ॥

॥ ಪ್ರತಿಪದಾರ್ಥ ॥

**ಶಿರಃ**— ಈ ಅಗ್ನಿಯ ಶಿರಸ್ಸು । **ಗುಹಾ**—ಮಾನವರ ಉದರದಲ್ಲಿ । **ನಿಹಿತಂ**—ಸ್ಥಾಪಿತವಾಗಿದೆ । **ಅಕ್ಷೀ**—ಅಗ್ನಿಯ ಕಣ್ಣುಗಳು । **ಋಧಕ್**—ಚಂದ್ರ ಮತ್ತು ಸೂರ್ಯರೂಪದಲ್ಲಿ ಬೇರೆಬೇರೆಯಾಗಿವೆ । **ಅಸಿನ್ವನ್**—ದಂತಗಳಿಂದ ಅಗಿಯದೇ । **ಜಿಹ್ವಯಾ**—ಜ್ವಾಲಾರೂಪವಾದ ಜಿಹ್ವೆಯಿಂದಲೇ । **ವನಾನಿ**—ಕಾಷ್ಠಗಳನ್ನು । **ಅತ್ತಿ**—ಭಕ್ಷಿಸುತ್ತಾನೆ । **ಉತ್ತಾನಹಸ್ತಾಃ**—ಕೈಗಳನ್ನು ಮೇಲಕ್ಕೆತ್ತಿದವರೂ । **ನಮಸಾ**—ನಮಸ್ಕಾರಗಳಿಂದ ಕೂಡಿದವರೂ ಆದ ಋತ್ವಿಕ್ಕುಗಳು । **ವಿಕ್ಷು ಅಧಿ**—ಮಾನವರ ನಡುವೆ । **ಅಸ್ಮೈ**—ಈ ಅಗ್ನಿಯನ್ನುದ್ದೇಶಿಸಿ । **ಪದ್ಭಿಃ**—ಕಾಲುಗಳಿಂದ ನಡೆದುಹೋಗಿ । **ಅತ್ರಾಣಿ**—ಹವಿಸ್ಸುಗಳನ್ನು । **ಸಂಭರಂತಿ**—ಅರ್ಪಿಸುತ್ತಾರೆ.

॥ ಭಾವಾರ್ಥ ॥

ಈ ಅಗ್ನಿಯ ಶಿರಸ್ಸು ಮಾನವರ ಉದರದಲ್ಲಿ ಸ್ಥಾಪಿತವಾಗಿದೆ. ಅಗ್ನಿಯ ಕಣ್ಣುಗಳು ಚಂದ್ರ ಮತ್ತು ಸೂರ್ಯರೂಪದಲ್ಲಿ ಬೇರೆಬೇರೆಯಾಗಿವೆ. ಈ ಅಗ್ನಿಯು ಹಲ್ಲುಗಳಿಂದ ಅಗಿಯದೇ ಜ್ವಾಲಾರೂಪವಾದ ಜಿಹ್ವೆಯಿಂದಲೇ, ಕಾಷ್ಠಗಳನ್ನು ಭಕ್ಷಿಸುತ್ತಾನೆ. ಕೈಗಳನ್ನು ಮೇಲಕ್ಕೆತ್ತಿದವರೂ, ನಮಸ್ಕಾರಗಳಿಂದ ಕೂಡಿದವರೂ ಆದ ಋತ್ವಿಕ್ಕುಗಳು ಕಾಲುಗಳಿಂದ ನಡೆದುಹೋಗಿ ಅಗ್ನಿಯನ್ನು ಸಮೀಪಿಸಿ ಮಾನವರ ನಡುವೆ ಈ ಅಗ್ನಿಗೆ ಹವಿಸ್ಸನ್ನರ್ಪಿಸುತ್ತಾರೆ.

English Translation

His head is deposited in a cavern; his eyes are vide apart; with his tongue he devours the wood without masticating; (the priests) approaching on foot reverently offer him oblations among the people with uplifted hands.

॥ ಸಂಹಿತಾಪಾಠಃ ॥

ಪ್ರ ಮಾತುಃ ಪ್ರತರಂ ಗುಹ್ಯಮಿಚ್ಛನ್ಕುಮಾರೋ ನ ವೀರುಧಃ ಸರ್ಪ-
ದುರ್ವೀಃ ।
ಸಸಂ ನ ಪಕ್ವಮವಿದಚ್ಛುಚಂತಂ ರಿರಿಹ್ವಾಂಸಂ ರಿಪ ಉಪಸ್ಥೇ ಅಂತಃ ॥ ೩ ॥

॥ ಪದಪಾಠಃ ॥

ಪ್ರ । ಮಾತುಃ । ಪ್ರಽತರಂ । ಗುಹ್ಯಂ । ಇಚ್ಛನ್ । ಕುಮಾರಃ । ನ । ವೀರುಧಃ । ಸರ್ಪತ್ । ಉರ್ವೀಃ ।
ಸಸಂ । ನ । ಪಕ್ವಂ । ಅವಿದತ್ । ಶುಚಂತಂ । । ರಿರಿಹ್ವಾಂಸಂ । ರಿಪಃ । ಉಪಽಸ್ಥೇ । ಅಂತರಿತಿ ॥ ೩ ॥

। ಸಾಯಣಭಾಷ್ಯಂ ॥

ಅಯಮಗ್ನಿರ್ಮಾತುಃ ಪೃಥಿವ್ಯಾಃ ಸಂಬಂಧಿನೀರುರ್ವೀರ್ಬಹ್ವೀರ್ವೀರುಧೋ ಲತಾ ಇಚ್ಛನ್ ತಥಾ ಪ್ರತರಂ ಪ್ರಕೃಷ್ಟತರಂ ಗುಹ್ಯಂ ಗೋಪ್ಯಂ ತಾಸಾಂ ವೀರುಧಾಂ ಮೂಲಮಪೀಚ್ಛನ್ಕಾಮಯಮಾನಃ ಪ್ರ ಸರ್ಪತ್ । ಪ್ರಸರ್ಪತಿ । ಪ್ರಸರತಿ । ಕಿಮಿವ । ಕುಮಾರೋ ನ ಕುಮಾರ ಇವ । ಸ ಯಥಾ ಸ್ತನ್ಯಂ ಪಾತುಂ ಜಾನುಭ್ಯಾಂ ಸರ್ಪತಿ ತದ್ವತ್ । ಸಸಂ ನ ಪಕ್ವಂ ಪಕ್ವಮನ್ನಮಿವ ಶುಚಂತಂ ದೀಪ್ಯಮಾನಂ ನೀರಸಂ ವೃಕ್ಷಂ ರಿಪಃ ಪೃಥಿವ್ಯಾಃ ಉಪಸ್ಥೇಽನ್ತರುತ್ಸಂಗೇಽಂತರವಿದತ್ । ವಿಂದತಿ । ಪುನಃ ಕೀದೃಶಂ । ರಿರಿಹ್ವಾಂಸಮಾಕಾಶಮಾಸ್ವಾದಯಂತಂ । ಯದ್ವಾ । ಮೂಲೈರ್ಮಾತರಂ ಪೃಥಿವೀಂ ರಿರಿಹ್ವಾಂಸಂ ॥

। ಪ್ರತಿಪದಾರ್ಥ ।

( ಅಗ್ನಿಃ—ಅಗ್ನಿಯು) । ಮಾತುಃ—ಪೃಥ್ವಿಗೆ ಸಂಬಂಧಿಸಿದ । ಊರ್ವೀಃ—ಬಹುವಾದ । ವೀರುಧಃ—ಲತೆಗಳನ್ನೂ । ಪ್ರತರಂ—ಉತ್ಕೃಷ್ಟವಾಗಿ । ಗುಹ್ಯಂ—ಭೂಮಿಯೊಳಗೆ ಅಡಗಿರುವ ಆ ಲತೆಗಳ ಬೇರುಗಳನ್ನೂ । ಇಚ್ಛನ್—ಅಪೇಕ್ಷಿಸುತ್ತ । ಕುಮಾರೋ ನ—ಎಳೆಯ ಮಗುವಿನಂತೆ । ಪ್ರ ಸರ್ಪತ್—ತೆವಳುತ್ತಾನೆ । ಪಕ್ವಂ—ಪಕ್ವವಾದ । ಸಸಂ ನ—ಅನ್ನದಂತೆ । ಶುಚಂತಂ—ಪ್ರಕಾಶಿಸುವುದೂ । ರಿರಿಹ್ವಾಂಸಂ—ಅಂತರಿಕ್ಷವನ್ನು ಅಪ್ಪುತ್ತಿರುವುದೂ ಆದ ವೃಕ್ಷವನ್ನು । ರಿಪಃ—ಪೃಥ್ವಿಯ । ಉಪಸ್ಥೇ ಅಂತಃ—ತೊಡೆಯ ಮೇಲೆ । ಅವಿದತ್—ಹೊಂದುತ್ತಾನೆ.

॥ ಭಾವಾರ್ಥ ॥

ಅಗ್ನಿಯು ಪೃಥ್ವಿಗೆ ಸಂಬಂಧಿಸಿದ ಬಹುವಾದ ಲತೆಗಳನ್ನೂ ಉತ್ಕೃಷ್ಟವಾಗಿ ಭೂಮಿಯೊಳಗೆ ಅಡಗಿರುವ ಆ ಲತೆಗಳ ಬೇರುಗಳನ್ನೂ ಅಪೇಕ್ಷಿಸುತ್ತ ಎಳೆಯ ಮಗುವಿನಂತೆ ತೆವಳುತ್ತಾನೆ. ಪಕ್ವವಾದ ಅನ್ನದಂತೆ ಪ್ರಕಾಶಿಸುವುದೂ, ಅಂತರಿಕ್ಷವನ್ನು ಅಪ್ಪುತ್ತಿರುವುದೂ ಆದ ವೃಕ್ಷವನ್ನು ಪೃಥ್ವಿಯ ತೊಡೆಯ ಮೇಲೆ ಹೊಂದುತ್ತಾನೆ. ಎಂದರೆ ಭೂಮಿಯ ಮೇಲೆ ಒಣಗಿ ನಿಂತಿರುವ ವೃಕ್ಷವನ್ನು ತಕ್ಷಣವೇ ದಹಿಸುತ್ತಾನೆ.

## English Translation

Longing for the abundant creepers of the maternal (earth, longing for) their more excellent concealed (root), he creeps like a child ; he has found the tree shining like ripe grain, upon the lap of the earth, tasting (the ether).

॥ ವಿಶೇಷವಿಷಯಗಳು ॥

ಸಸಂ ನ ಪಕ್ವಂ ಅವಿದತ್ ಶುಚಂತಂ—ಈ ವಾಕ್ಯಕ್ಕೆ ಯಾಸ್ಕರು ಸ್ವಪನಮೇತನ್ಮಾಧ್ಯಮಿಕಂ ಜ್ಯೋತಿರನಿತ್ಯದರ್ಶನಂ ತದಿವಾವಿದಜ್ಜಾಜ್ವಲ್ಯಮಾನಂ । (ನಿ. ೫.೩) ಎಂದು ನಿರ್ವಚನವನ್ನು ಹೇಳಿದಾರೆ. ಪ್ರಕಾಶಮಾನವಾದ ಮತ್ತು ಪಕ್ವವಾದ ಅನ್ನದಂತೆ ಇರುವುದೂ, ಭೂಮಿಯಮೇಲೆ ಒಣಗಿ ನಿಂತಿರುವುದೂ ಆದ ವೃಕ್ಷವನ್ನು ಅಗ್ನಿಯು ತಕ್ಷಣವೇ ಗಬಕ್ಕನೆ ತಿನ್ನುತ್ತಾನೆ. ಹೇಗೆಂದರೆ ಸ್ವಪ್ನದಲ್ಲಿ ಕಾಣುವ ವಸ್ತುವು ಒಂದು ಕ್ಷಣಕಾಲ ಮಾತ್ರ ಇರುವುದು. ಅನಂತರ ಅದೃಶ್ಯವಾಗುವುದು ಹಾಗೆಯೇ ಅಂತರಿಕ್ಷದಲ್ಲಿ ಮೇಘಗಳ ಮಧ್ಯದಲ್ಲಿ ತೋರುವ ಮಿಂಚೂ ಒಂದು ಕ್ಷಣಕಾಲಮಾತ್ರ ಕಾಣಿಸುತ್ತಿದ್ದು ತಕ್ಷಣವೇ ಅದೃಶ್ಯವಾಗುವುದು. ಅದರಂತೆ ಅಗ್ನಿಯು ಒಣಗಿ ನಿಂತಿರುವ ವೃಕ್ಷವೆಂಬ ಪಕ್ವಾನ್ನವನ್ನು ತಕ್ಷಣವೇ ಎಂದರೆ ಕಣ್ಣುಮುಚ್ಚಿ ತೆಗೆಯುವುವರೊಳಗೆ, ಅತ್ಯಲ್ಪಕಾಲದಲ್ಲಿಯೇ ಭಕ್ಷಿಸುವನು ಎಂದರೆ ದಹಿಸುವನು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ತದ್ವಾಮೃತಂ ರೋದಸೀ ಪ್ರ ಬ್ರವೀಮಿ ಜಾಯಮಾನೋ ಮಾತರಾ ಗರ್ಭೋ ಅತ್ತಿ ।
ನಾಹಂ ದೇವಸ್ಯ ಮರ್ತ್ಯಶ್ಚಿಕೇತಾಗ್ನಿರಂಗ ವಿಚೇತಾಃ ಸ ಪ್ರಚೇತಾಃ ॥ ೪ ॥

॥ ಪದಪಾಠಃ ॥

ತತ್ । ವಾಂ । ಋತಂ । ರೋದಸೀ ಇತಿ । ಪ್ರ । ಬ್ರವೀಮಿ । ಜಾಯಮಾನಃ । ಮಾತರಾ । ಗರ್ಭಃ । ಅತ್ತಿ ।
ನ । ಅಹಂ । ದೇವಸ್ಯ । ಮರ್ತ್ಯಃ । ಚಿಕೇತ । ಅಗ್ನಿಃ । ಅಂಗ । ವಿಽಚೇತಾಃ । ಸಃ । ಪ್ರಽಚೇತಾಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ರೋದಸೀ ದ್ಯಾವಾಪೃಥಿವ್ಯೌ ವಾಂ ಯುವಾಂ ತದೃತಂ ಸತ್ಯಂ ಪ್ರ ಬ್ರವೀಮಿ ಯದರಣೀಭ್ಯಾಂ ಜಾಯಮಾನ ಉತ್ಪನ್ನೋ ಗರ್ಭೋ ಗರ್ಭಸ್ಥಾನೀಯೋಽಗ್ನಿರ್ಮಾತರಾವರಣೀ ಅತ್ತಿ ಭಕ್ಷಯತಿ । ದೇವಸ್ಯ ದ್ಯೋತನಾದಿಗುಣಸ್ಯಾಗ್ನೇರ್ವರ್ತನಂ ಮರ್ತ್ಯೋ ಮನುಷ್ಯೋಽಹಂ ನ ಚಿಕೇತ । ನ ಜಾನಾಮಿ । ಹೇ ಅಂಗ ವೈಶ್ವಾನರ ಅಗ್ನಿರರಣೀಭ್ಯಾಮುತ್ಪನ್ನೋ ವಿಚೇತಾ ವಿವಿಧಜ್ಞಾನವಾನ್ ಸ ಪ್ರಚೇತಾಃ ಪ್ರಕೃಷ್ಟಜ್ಞಾನಃ । ಅತೋ ನ ಜಾನಾಮೀತ್ಯರ್ಥಃ । ಅಥವಾಂಗೇತ್ಯಾತ್ಮಾನಮೇವ ಸಂಬೋಧ್ಯ ಬ್ರವೀಮಿ । ಅಗ್ನಿರೇವ ವಿಚೇತಾ ಬಹುಧಾ ಜಾನಾತಿ ಸ ಪ್ರಚೇತಾಃ ಸ ಏವ ಜಾನಾತಿ । ಸ್ವಮಹಿಮಾನಂ ನಾಹಂ ಸ್ತೋತುಂ ಪ್ರಭವಾಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

ರೋದಸೀ—ಎಲೈ ದ್ಯಾವಾಪೃಥಿವಿಗಳೇ । ವಾಂ—ನಿಮಗೆ । ತತ್ ಋತಂ—ಈ ಸತ್ಯವನ್ನು । ಪ್ರ ಬ್ರವೀಮಿ—ಹೇಳುತ್ತೇನೆ । ಜಾಯಮಾನಃ—ಉತ್ಪನ್ನನಾಗುವಾಗಲೇ । ಗರ್ಭಃ—ಗರ್ಭರೂಪನಾದ ಅಗ್ನಿಯು । ಮಾತರಾ—ತನ್ನ ಮಾತೃಗಳಾದ ಅರಣಿಗಳನ್ನು । ಅತ್ತಿ—ಭಕ್ಷಿಸುತ್ತಾನೆ । ದೇವಸ್ಯ—ದೇವತಾತ್ಮನಾದ ಅಗ್ನಿಯ ಸ್ವರೂಪವನ್ನು । ಮರ್ತ್ಯಃ—ಮಾನವನಾದ । ಅಹಂ—ನಾನು । ನ ಚಿಕೇತ—ತಿಳಿಯಲಾರೆನು । ಅಂಗ—ಎಲೈ ಯಜಮಾನನೇ । ಅಗ್ನಿಃ—ಅರಣಿಯಿಂದ ಉತ್ಪನ್ನನಾದ ಅಗ್ನಿಯು । ವಿಚೇತಾಃ—ಅನೇಕವಿಧವಾದ ಜ್ಞಾನವುಳ್ಳವನೂ । ಸ ಪ್ರಚೇತಾಃ—ಅತ್ಯುತ್ಕೃಷ್ಟವಾದ ಜ್ಞಾನವುಳ್ಳವನೂ ಆಗಿದ್ದಾನೆ.

॥ ಭಾವಾರ್ಥ ॥

ಎಲೈ ದ್ಯಾವಾಪೃಥಿಗಳೇ, ನಿಮಗೆ ಈ ಸತ್ಯವನ್ನು ಹೇಳುತ್ತೇನೆ. ಉತ್ಪನ್ನನಾಗುವಾಗಲೇ, ಗರ್ಭರೂಪನಾದ ಅಗ್ನಿಯು ತನ್ನ ಮಾತೃಗಳಾದ ಅರಣಿಗಳನ್ನು (ವೃಕ್ಷಗಳನ್ನು) ಭಕ್ಷಿಸುತ್ತಾನೆ. ದೇವತಾತ್ಮನಾದ ಅಗ್ನಿಯ ಸ್ವರೂಪವನ್ನು ಮಾನವನಾದ ನಾನು ತಿಳಿಯಲಾರೆನು. ಎಲೈ ಯಜಮಾನನೇ, ಅರಣಿಯಿಂದ ಉತ್ಪನ್ನನಾದ ಅಗ್ನಿಯು ಅನೇಕ ವಿಧವಾದ ಜ್ಞಾನವುಳ್ಳವನೂ, ಅತ್ಯುತ್ಕೃಷ್ಟವಾದ ಜ್ಞಾನವುಳ್ಳವನೂ ಆಗಿದ್ದಾನೆ.

English Translation

This (that) I declare unto you, heaven and earth, (is) the truth; as soon as born, the embryo devours the parents; I who am a mortal know not (the condition) of the deity; Agni, (O Vaishwanara), is discriminating he is exceedingly wise.

॥ ಸಂಹಿತಾಪಾಠಃ ॥

ಯೋ ಅಸ್ಮಾ ಅನ್ನಂ ತೃಷ್ವಾ೩ದಧಾತ್ಯಾಜ್ಯೈರ್ಘೃತೈರ್ಜುಹೋತಿ ಪುಷ್ಯತಿ ।
ತಸ್ಮೈ ಸಹಸ್ರಮಕ್ಷಭಿರ್ವಿ ಚಕ್ಷೇಽಗ್ನೇ ವಿಶ್ವತಃ ಪ್ರತ್ಯಙ್ಙಸಿ ತ್ವಂ ॥ ೫ ॥

॥ ಪದಪಾಠಃ ॥

ಯಃ । ಅಸ್ಮೈ । ಅನ್ನಂ । ತೃಷು । ಆಽದಧಾತಿ । ಆಜ್ಯೈಃ । ಘೃತೈಃ । ಜುಹೋತಿ । ಪುಷ್ಯತಿ ।
ತಸ್ಮೈ । ಸಹಸ್ರಂ । ಅಕ್ಷಽಭಿಃ । ವಿ । ಚಕ್ಷೇ । ಅಗ್ನೇ । ವಿಶ್ವತಃ । ಪ್ರತ್ಯಙ್ । ಅಸಿ । ತ್ವಂ ॥ ೫ ॥

॥ ಸಾಯಣಭಾಷ್ಯಂ ॥

ಯೋ ಯಜಮಾನೋಽಸ್ಮಾ ಅಗ್ನಯೇ ತೃಷು ಕ್ಷಿಪ್ರಮನ್ನಮಾದಧಾತಿ ಕರೋತ್ಯಾಜ್ಯೈರ್ಘೃತೈಃ ಕ್ಷರದ್ಭಿರ್ಘೃತೈರ್ದೀಪ್ತೈರ್ವಾ ಸೋಮರಸೈರ್ಜುಹೋತಿ ಪುಷ್ಯತಿ ಪುಷ್ಣಾತಿ ಚೈನಂ ಕಾಷ್ಠೈಃ ತಸ್ಮೈ ।

ತನಿಮಿತ್ಯರ್ಥಃ । ತಂ ಸಹಸ್ರಂ ಸಹಸ್ರಸಂಖ್ಯಾಕೈರಕ್ಷಭಿರಕ್ಷಿಸ್ಥಾನೀಯಾಭಿರಪರಿಮಿತಾಭಿರ್ಜ್ವಾಲಾಭಿರ್ವಿ ಚಷ್ಟೇ । ವಿಚಷ್ಟೇ । ವಿಪಶ್ಯತಿ । ಅಥ ಪ್ರತ್ಯಕ್ಷಕೃತಃ । ಹೇ ಅಗ್ನೇ ತ್ವಂ ವಿಶ್ವತಃ ಸರ್ವತಃ ಪ್ರತ್ಯಙ್ಙಸಿ । ಪ್ರತ್ಯಗಂಚನೋ ಭವಸಿ । ಅಸ್ಮದಾನುಕೂಲ್ಯೇನ ಪ್ರವರ್ತಮಾನೋ ಭವಸಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಯಜಮಾನನು । ಅಸ್ಮೈ—ಈ ಅಗ್ನಿಯನ್ನುದ್ದೇಶಿಸಿ । ತೃಷು—ಕ್ಷಿಪ್ರವಾಗಿ । ಅನ್ನಂ—ಅನ್ನವನ್ನು । ಆ ದಧಾತಿ—ಅರ್ಪಿಸುವನೋ । ಆಜ್ಯೈಃ ಘೃತೈಃ—ಸ್ರವಿಸುವ ಘೃತಗಳಿಂದ ಅಥವಾ ಸ್ರವಿಸುವ ಸೋಮರಸಗಳಿಂದ । ಜುಹೋತಿ—ಆಹುತಿಯನ್ನರ್ಪಿಸುವನೇ । ಪುಷ್ಯತಿ—ಕಾಷ್ಠಾದಿಗಳನ್ನರ್ಪಿಸಿ ಪುಷ್ಟಿಗೊಳಿಸುವನೋ । ತಸ್ಮೈ—ಆ ಯಜಮಾನನನ್ನು । ಸಹಸ್ರಂ—ಸಹಸ್ರಸಂಖ್ಯಾಕವಾದ । ಅಕ್ಷಭಿಃ—ಕಣ್ಣುಗಳಿಂದ । ವಿ ಚಷ್ಟೇ—ಅಗ್ನಿಯು ನೋಡುತ್ತಾನೆ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ವಿಶ್ವತಃ—ಎಲ್ಲಾ ಭಾಗದಲ್ಲಿಯೂ । ಪ್ರತ್ಯಙ್ ಅಸಿ—ನಮಗೆ ಅನುಕೂಲನಾಗಿರುತ್ತೀಯೆ.

॥ ಭಾವಾರ್ಥ ॥

ಯಾವ ಯಜಮಾನನು ಈ ಅಗ್ನಿಯನ್ನುದ್ದೇಶಿ ಕ್ಷಿಪ್ರವಾಗಿ ಅನ್ನವನ್ನು ಅರ್ಪಿಸುವನೋ, ಮತ್ತು ಸ್ರವಿಸುವ ಸೋಮರಸರೂಪವಾದ ಆಹುತಿಯನ್ನರ್ಪಿಸುವನೋ ಮತ್ತು ಕಾಷ್ಠಾದಿಗಳಿಂದ ಪುಷ್ಟಿಗೊಳಿಸುವನೋ, ಆ ಯಜಮಾನನನ್ನು ಅಗ್ನಿಯು ಸಹಸ್ರಸಂಖ್ಯಾಕವಾದ ಕಣ್ಣುಗಳಿಂದ (ಅನುಗ್ರಹಬುದ್ಧಿಯಿಂದ) ನೋಡುತ್ತಾನೆ. ಎಲೈ ಅಗ್ನಿಯೇ, ನೀನು ನಮಗೆ ಎಲ್ಲಾ ವಿಷಯಗಳಲ್ಲಿಯೂ ಅನುಕೂಲನಾಗಿರುತ್ತೀಯೆ.

English Translation

He who quickly offers him food, makes oblations to him with dripping Soma-juices, and delights him (with food); (Agni) looks upon him with a thousand eyes; you Agni, are everywhere present.

॥ ಸಂಹಿತಾಪಾಠಃ ॥

ಕಿಂ ದೇವೇಷು ತ್ಯಜ ಏನಶ್ಚಕರ್ಥಾಗ್ನೇ ಪೃಚ್ಛಾಮಿ ನು ತ್ವಾಮವಿದ್ವಾನ್ ।
ಅಕ್ರೀಳನ್ ಕ್ರೀಳನ್ಹರಿರತ್ತವೇಽದನ್ವಿ ಪರ್ವಶಶ್ಚಕರ್ತ ಗಾಮಿವಾಸಿಃ ॥ ೬ ॥

॥ ಪದಪಾಠಃ ॥

ಕಿಂ । ದೇವೇಷು । ತ್ಯಜಃ । ಏನಃ । ಚಕರ್ಥ । ಅಗ್ನೇ । ಪೃಚ್ಛಾಮಿ । ನು । ತ್ವಾಂ । ಅವಿದ್ವಾನ್ ।
ಅಕ್ರೀಳನ್ । ಕ್ರೀಳನ್ । ಹರಿಃ । ಅತ್ತವೇ । ಅದನ್ । ವಿ । ಪರ್ವಽಶಃ । ಚಕರ್ತ । ಗಾಂಽಇವ । ಅಸಿಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ನು ಕ್ಷಿಪ್ರಂ ದೇವೇಷು ಕಿಂ ತ್ಯಜಃ ಕ್ರೋಧನಮೇನಃ ಪಾಪಂ ಚ ಚಕರ್ಥ ಕೃತವಾನಸೀತ್ಯವಿದ್ವಾನಹಂ ಪೃಚ್ಛಾಮಿ । ಖಾಂಡವಂ ದಹಂತಮಗ್ನಿಂ ಪೃಚ್ಛಾಮಿ । ಕಿಂಚಾಕ್ರೀಳನ್ ಕ್ವಚಿದ್ದೇಶೇಽವಿಹರನ್ ಕ್ರೀಳನ್ ಕ್ವಚಿದ್ದೇಶೇ ವಿನೋದಯಲ್ಲೀಲಯಾ ದಹನ್ಹರಿರ್ಹರಿತವರ್ಣಃ ಸನ್ನತ್ತವೇಽತ್ತವ್ಯಮದನ್ನನ್ನಕಾಷ್ಠಾದಿಕಂ ಪರ್ವಶಃ ಸಂಧೌ ಸಂಧೌ ವಿ ಚಕರ್ಥ । ವಿವಿಧಂ ಕರೋಷಿ । ಗಾಮಿವಾಸಿಃ ಗಾಂ ಯಥಾಸಿಃ ಸ್ವಧಿತಿಃ ಪರ್ವಶಶ್ಛಿನತ್ತಿ ತದ್ವತ್ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತ್ವಾಂ—ನಿನ್ನನ್ನು । ನು—ಕ್ಷಿಪ್ರವಾಗಿ । ದೇವೇಷು—ದೇವತೆಗಳಲ್ಲಿ । ಕಿಂ ತ್ಯಜಃ—ಯಾವ ಕೋಪಕರವಾದ ಕಾರ್ಯವನ್ನೂ । ಏನಃ—ಪಾಪವನ್ನೂ । ಚಕರ್ಥ—ಮಾಡಿದ್ದೀಯೆ ಎಂದು । ಅವಿದ್ವಾನ್—ತಿಳಿಯದ ನಾನು । ಪೃಚ್ಛಾಮಿ—ಕೇಳುತ್ತೇನೆ । ಅಕ್ರೀಳನ್—ಕೆಲವೆಡೆಗಳಲ್ಲಿ ಕ್ರೀಡಿಸದೆಯೂ । ಕ್ರೀಳನ್—ಕೆಲವೆಡೆಗಳಲ್ಲಿ ಕ್ರೀಡಿಸುತ್ತಲೂ । ಹರಿಃ—ಹರಿತವರ್ಣವುಳ್ಳವನಾಗಿ ಅಗ್ನಿಯು । ಅತ್ತವೇ—ಭಕ್ಷಿಸಬೇಕಾದುದನ್ನು । ಅದನ್—ಭಕ್ಷಿಸುತ್ತ । ಗಾಂ—ಗೋವನ್ನು । ಅಸಿಃ—ಕತ್ತಿಯು ಕುಯ್ಯುವಂತೆ । ಪರ್ವಶಃ—ಗಿಣ್ಣುಪ್ರದೇಶಗಳಲ್ಲಿ । ವಿ ಚಕರ್ಥ—ಸೀಳುತ್ತಾನೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳಲ್ಲಿ ಯಾವ ಕೋಪಕರವಾದ ಕಾರ್ಯವನ್ನೂ, ಪಾಪವನ್ನೂ ಮಾಡಿದ್ದೀಯೆ ಎಂದು ಅರಿಯದ ನಾನು ನಿನ್ನನ್ನು ಕೇಳುತ್ತೇನೆ. ಹರಿತವರ್ಣವುಳ್ಳವನಾಗಿ ಅಗ್ನಿಯು ಕೆಲವೆಡೆಗಳಲ್ಲಿ ಕ್ರೀಡಿಸುತ್ತಲೂ, ಕೆಲವೆಡೆಗಳಲ್ಲಿ ಕ್ರೀಡಿಸದೆಯೂ, ಭಕ್ಷಿಸಬೇಕಾದುದನ್ನು ಭಕ್ಷಿಸುತ್ತ ಕತ್ತಿಯು ಪಶುವನ್ನು (ಮಾಂಸಕ್ಕಾಗಿ) ಕುಯ್ಯುವಂತೆ ಗಿಣ್ಣುಪ್ರದೇಶಗಳಲ್ಲಿ ಸೀಳುತ್ತಾನೆ.

English Translation

What wrathful act, what sin have you committed among the gods? Ignorant I ask you, Agni, sporting (here) not sporting (there), golden-hued; eating what is to be eaten, you cut (your food) into pieces as the knife (cuts up) the cow.

॥ ಸಂಹಿತಾಪಾಠಃ ॥

ವಿಷೂಚೋ ಅಶ್ವಾನ್ಯುಯುಜೇ ವನೇಜಾ ಋಜೀತಿಭೀ ರಶನಾಭಿರ್ಗೃಭೀ-
ತಾನ್ ।
ಚಕ್ಷದೇ ಮಿತ್ರೋ ವಸುಭಿಃ ಸುಜಾತಃ ಸಮಾನೃಧೇ ಪರ್ವಭಿರ್ವಾವೃಧಾನಃ ॥

॥ ಪದಪಾಠಃ ॥

ವಿಷೂಚಃ । ಅಶ್ವಾನ್ । ಯುಯುಜೇ । ವನೇಽಜಾಃ । ಋಜೀತಿಽಭಿಃ । ರಶನಾಭಿಃ । ಗೃಭೀತಾನ್ ।
ಚಕ್ಷದೇ । ಮಿತ್ರಃ । ವಸುಽಭಿಃ । ಸುಽಜಾತಃ । ಸಂ । ಆನೃಧೇ । ಪರ್ವಽಭಿಃ । ವವೃಧಾನಃ ॥ ೭ ॥

। ಸಾಯಣಭಾಷ್ಯಂ ।

ಅಯಮಗ್ನಿರ್ವಿಷೂಚೋ ವಿಷ್ವಗಂಚನಾನಶ್ವಾನ್ವ್ಯಾಪ್ತಾನ್ಮಹತೋ ವೃಕ್ಷಾನ್ಸರ್ವತೋ ಗಂತ್ರ್ಯಾನಶ್ವಾನೇವ ವಾ ಯುಯುಜೇ ಯುಂಕ್ತೇ ವನೇಜಾ ವನೇ ಪ್ರವೃದ್ಧಃ ಸಂಪನ್ನಃ ಸನ್ । ಕೀದೃಶಾನಶ್ವಾನ್ । ಋಜೀತಿಭಿರ್ಋಜುಗಾಮಿನೀಭೀ ರಶನಾಭೀ ರಶನಾಸ್ಥಾನೀಯಾಭಿರ್ಲತಾಭಿರ್ಗೃಭೀತಾನ್ಪರಿಗೃಹೀತಾನ್ವೇಷ್ಟಿತಾನ್ । ಸಾಕ್ಷಾದಶ್ವಪಕ್ಷ ಋಜುಗತಿಭಿಃ ಪ್ರಸಿದ್ಧಾಭೀ ರಶನಾಭಿರ್ಗೃಭೀತಾನ್ಗೃಹೀತಾನ್ಸ್ವಕೀಯಾನಶ್ವಾ ಇತ್ಯೇಷ್ಪ್ರದಾಹಾಯ ರಥೇ ಯೋಜಿತವಾನಿತ್ಯರ್ಥಃ । ತಾದೃಶೋಽಗ್ನಿಶ್ಚಕ್ಷದೇ ಚಕ್ಷಾದ ಶಕಲೀಕರೋತಿ ವಸೂನಿ ಮಿತ್ರೋಽಸ್ಮಾಕಂ ಮಿತ್ರಭೂತೋ ವಸುಭಿರ್ವಾಸಕ್ಕೈ ರಶ್ಮಿಭಿಃ ಸುಜಾತಃ ಸುಷ್ಠು ಪ್ರವೃದ್ಧಃ ಸನ್ । ಕಿಂಚ ಸಮಾನೃಧೇ ಸಮ್ಯಗ್ವರ್ಧತೇ ಪರ್ವಭಿಃ ಕಾಷ್ಠಖಂಡೈರ್ವಾವೃಧಾನೋ ವರ್ಧಮಾನಃ ॥

॥ ಪ್ರತಿಪದಾರ್ಥ ॥

**ವನೇಜಾಃ**—ವನದಲ್ಲಿ ಉತ್ಪನ್ನನಾದ ಅಗ್ನಿಯು । **ಋಜೀತಿಭಿಃ**—ನೇರವಾದ ಮಾರ್ಗದಲ್ಲಿ ಒಯ್ಯುವ । **ರಶನಾಭಿಃ**—ಕಡಿವಾಣಗಳಿಂದ । **ಗೃಭೀತಾನ್**—ಹಿಡಿಯಲ್ಪಟ್ಟವೂ । **ವಿಷೂಚಃ**—ಸರ್ವತ್ರ ಸಂಚರಿಸತಕ್ಕವೂ ಆದ । **ಅಶ್ವಾನ್**—ಅಶ್ವಗಳನ್ನು । **ಯುಯುಜೇ**—ಹೂಡುತ್ತಾನೆ । **ಮಿತ್ರಃ**—ನಮಗೆ ಪ್ರಿಯಕರನೂ । **ವಸುಭಿಃ**—ಧನಗಳಿಂದ । **ಸುಜಾತಃ**—ಪುಷ್ಟನೂ ಆದ ಅಗ್ನಿಯು । **ಚಕ್ಷದೇ**—ನಮಗೆ ಧನಗಳನ್ನು ಒದಗಿಸುತ್ತಾನೆ । **ಪರ್ವಭಿಃ**—ಕಟ್ಟಿಗೆಗಳ ತುಂಡುಗಳಿಂದ । **ವಾವೃಧಾನಃ**—ವೃದ್ಧಿಯನ್ನು ಹೊಂದಿ । **ಸಮಾನೃಧೇ**—ಪುಷ್ಟನಾಗುತ್ತಾನೆ.

। ಭಾವಾರ್ಥ ।

ವನದಲ್ಲಿ ಉತ್ಪನ್ನನಾದ ಅಗ್ನಿಯು ನೇರವಾದ ಮಾರ್ಗದಲ್ಲಿ ಒಯ್ಯುವ ಕಡಿವಾಣಗಳಿಂದ ಹಿಡಿಯಲ್ಪಟ್ಟವೂ, ಸರ್ವತ್ರ ಸಂಚರಿಸತಕ್ಕವೂ ಆದ ಅಶ್ವಗಳನ್ನು ಹೂಡುತ್ತಾನೆ. ನಮಗೆ ಪ್ರಿಯಕರನೂ, ಧನಗಳಿಂದ ಪುಷ್ಟನೂ ಆದ ಅಗ್ನಿಯು ನಮಗೆ ಧನಗಳನ್ನು ಒದಗಿಸುತ್ತಾನೆ. ಕಟ್ಟಿಗೆಗಳ ತುಂಡುಗಳಿಂದ ವೃದ್ಧಿಯನ್ನು ಹೊಂದಿ ಪುಷ್ಟನಾಗುತ್ತಾನೆ.

## English Translation

Born in the woods, he has harnessed his steeds which move everywhere held in by straight-guiding reins; friendly and augmented by rays, he has distributed (wealth); he grows in strength nourished with logs of wood.

## ಎಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಅಗ್ನಿಃ ಸಪ್ತಿಮಿತಿ ಸಪ್ತರ್ಚಂ ದ್ವಾದಶಂ ಸೂಕ್ತಂ ಸೌಚೀಕಸ್ಯ ವೈಶ್ವಾನರಸ್ಯಾಗ್ನೇರಾರ್ಷಂ ತ್ರೈಷ್ಟುಭಮಾಗ್ನೇಯಂ ॥ ಅಗ್ನಿಃ ಸಪ್ತಿಮಿತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥

ಅನುವಾದವು— **ಅಗ್ನಿಃ ಸಪ್ತಿಂ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆ ಸೌಚೀಕೋಽಗ್ನಿಯು ಅಥವಾ ವೈಶ್ವಾನರಾಗ್ನಿಯು ಅಥವಾ ವಾಜಂಭರಪುತ್ರನಾದ ಸಪ್ತಿ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಗ್ನಿಃ ಸಪ್ತಿಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೮೦

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೮೦ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೫ ॥
ಸೂಕ್ತದಲ್ಲಿರುವಋಕ್ಸಂಖ್ಯೆ—೭ ॥
ಋಷಿಃ—ಅಗ್ನಿಃ ಸೌಚೀಕೋ ವೈಶ್ವಾನರೋ ವಾ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥

॥ ಪದಪಾಠಃ ॥

ಅಗ್ನಿಃ । ಸಪ್ತಿಂ । ವಾಜಂಽಭರಂ । ದದಾತಿ । ಅಗ್ನಿಃ । ವೀರಂ । ಶ್ರುತ್ಯಂ । ಕರ್ಮನಿಃಽಸ್ಥಾಂ ।
ಅಗ್ನಿಃ । ರೋದಸೀ ಇತಿ । ವಿ । ಚರತ್ । ಸಂಽಅಂಜನ್ । ಅಗ್ನಿಃ । ನಾರೀಂ । ವೀರಽಕುಕ್ಷಿಂ ಪುರಂಽಧಿಂ ॥

॥ ಸಾಯಣಭಾಷ್ಯಂ ॥

ಅಯಮಗ್ನಿಃ ಸಪ್ತಿಂ ಸರ್ಪಣಸ್ವಭಾವಮಶ್ವಂ ವಾಜಂಭರಂ ಯುದ್ಧೇ ಶತ್ರೂಣಾಂ ಜೇತಾರಮನ್ನಸಂಪಾದಕಂ ದದಾತಿ ಸ್ತೋತೃಭ್ಯಃ । ತಥಾಗ್ನಿರ್ವೀರಂ ವೀರ್ಯವಂತಂ ಪುತ್ರಂ ಶ್ರುತ್ಯಂ ಪಿತ್ರ್ಯವ್ಯಪದೇಶಕಂ

ಕರ್ಮಣಿಃಷ್ಠಾಂ ಯಾಗೇऽನನ್ಯಚಿತ್ತಂ ದದಾತಿ । ಅಗ್ನೀ ರೋದಸೀ ದ್ಯಾವಾಪೃಥಿವ್ಯೌ ಸಮಂಜನ್ ಸಮ್ಯಗಂಜಯನ್ವಿ ಚರತ್ । ವಿವಿಧಂ ಚರತಿ । ಅಯಮಗ್ನಿರ್ನಾರೀಂ ಯೋಷಿತಂ ವೀರಕುಕ್ಷಿಂ ವೀರಪ್ರಸವಕುಕ್ಷಿಂ ಪುರಂಧಿಂ ಚ ಕರೋತಿ ॥

॥ ಪ್ರತಿಪದಾರ್ಥ ॥

**ಅಗ್ನಿಃ**—ಅಗ್ನಿಯು । **ವಾಜಂಭರಂ**—ಯುದ್ಧದಲ್ಲಿ ಅನ್ನವನ್ನು ಸಂಪಾದಿಸಿಕೊಡುವ । **ಸಪ್ತಿಂ**—ಅಶ್ವವನ್ನು । **ದದಾತಿ**—ಯಜಮಾನನಿಗೆ ಕೊಡುತ್ತಾನೆ । **ಅಗ್ನಿಃ**—ಅಗ್ನಿಯು । **ವೀರಂ**—ಪರಾಕ್ರಮಿಯೂ । **ಶ್ರುತ್ಯಂ**—ಪ್ರಸಿದ್ಧನೂ । **ಕರ್ಮಣಿಃಷ್ಠಾಂ**—ಕರ್ಮದಲ್ಲಿ ತೀವ್ರಾಸಕ್ತಿಯುಳ್ಳವನೂ ಆದ ಪುತ್ರನನ್ನು ಕೊಡುತ್ತಾನೆ । **ಅಗ್ನಿಃ**—ಅಗ್ನಿಯು । **ರೋದಸೀ**—ದ್ಯಾವಾಪೃಥಿವಿಗಳೆರಡನ್ನು । **ಸಮಂಜನ್**—ವ್ಯಾಪಿಸುತ್ತ । **ವಿಚರತ್**—ಅನೇಕ ವಿಧದಲ್ಲಿ ಸಂಚರಿಸುತ್ತಾನೆ । **ಅಗ್ನಿಃ**—ಅಗ್ನಿಯು । **ನಾರೀಂ**—ಉತ್ತಮಸ್ತ್ರೀಯನ್ನು । **ವೀರಕುಕ್ಷಿಂ**—ವೀರಪುತ್ರನನ್ನು ಪ್ರಸವಿಸುವಂತೆಯೂ । **ಪುರಂಧಿಂ**—ಪ್ರಜ್ಞೆಯಿಂದ ಕೂಡಿದವಳನ್ನಾಗಿಯೂ ಮಾಡುತ್ತಾನೆ.

॥ ಭಾವಾರ್ಥ ॥

ಅಗ್ನಿಯು ಯುದ್ಧದಲ್ಲಿ ಅನ್ನವನ್ನು ಸಂಪಾದಿಸಿಕೊಡುವ ಅಶ್ವವನ್ನು ಯಜಮಾನನಿಗೆ ಕೊಡುತ್ತಾನೆ. ಅಗ್ನಿಯು ಪರಾಕ್ರಮಿಯೂ, ಪ್ರಸಿದ್ಧನೂ, ಕರ್ಮದಲ್ಲಿ ತೀವ್ರಾಸಕ್ತಿಯುಳ್ಳವನೂ ಆದ ಪುತ್ರನನ್ನು ಕೊಡುತ್ತಾನೆ. ಅಗ್ನಿಯು ದ್ಯಾವಾಪೃಥಿವಿಗಳೆರಡನ್ನು ವ್ಯಾಪಿಸುತ್ತ ಅನೇಕ ವಿಧದಲ್ಲಿ ಸಂಚರಿಸುತ್ತಾನೆ. ಅಗ್ನಿಯು ಉತ್ತಮಸ್ತ್ರೀಯನ್ನು ವೀರಪುತ್ರನನ್ನು ಹೊಂದುವಂತೆಯೂ, ಪ್ರಜ್ಞೆಯಿಂದ ಕೂಡಿದವಳನ್ನಾಗಿಯೂ ಮಾಡುತ್ತಾನೆ.

## English Translation

Agni gives (his worshipper) a food-acquiring steed, Agni gives (him) a valiant son, renowned, assiduous in pious works; Agni travels beautifying heaven and earth; Agni (makes) a woman the bearer of male off-spring (and) intelligent.

॥ ಸಂಹಿತಾಪಾಠಃ ॥

**ಅಗ್ನೇರಪ್ನಸಃ ಸಮಿದಸ್ತು ಭದ್ರಾಗ್ನಿರ್ಮಹೀ ರೋದಸೀ ಆ ವಿವೇಶ ।**
**ಅಗ್ನಿರೇಕಂ ಚೋದಯತ್ಸಮತ್ಸ್ವಗ್ನಿರ್ವೃತ್ರಾಣಿ ದಯತೇ ಪುರೂಣಿ ॥ ೨ ॥**

॥ ಪದಪಾಠಃ ॥

ಅಗ್ನೇಃ । ಅಪ್ನಸಃ । ಸಂಽಇತ್ । ಅಸ್ತು । ಭದ್ರಾ । ಅಗ್ನಿಃ । ಮಹೀ ಇತಿ । ರೋದಸೀ ಇತಿ । ಆ । ವಿವೇಶ ।

ಅಗ್ನಿಃ । ಏಕಂ । ಚೋದಯತ್ । ಸಮತ್ಽಸು । ಅಗ್ನಿಃ । ವೃತ್ರಾಣಿ । ದಯತೇ । ಪುರೂಣಿ ॥ ೨ ॥

॥ ಸಾಯಣಭಾಷ್ಯಂ ॥

ಅಪ್ನಸಃ ಕರ್ಮವತೋಽಗ್ನೇಃ ಸಮಿದ್ಭದ್ರಾಸ್ತು । ಅಯಮಗ್ನಿರ್ಮಹೀ ಮಹತ್ಯೌ ರೋದಸೀ ದ್ಯಾವಾಪೃಥಿವ್ಯಾವಾ ವಿವೇಶ । ಆವಿಷ್ಟವಾನ್ಸ್ವತೇಜಸಾ । ತಥಾಯಮಗ್ನಿರೇಕಮಸಹಾಯಮೇವ ಚೋದಯತ್ ಚೋದಯತಿ ಪ್ರೇರಯತಿ ಸಮತ್ಸು ಸಂಗ್ರಾಮೇಷು । ಯುದ್ಧೇ ಸ್ವಭಕ್ತಂ ಸ್ವಯಂ ಸಹಾಯಃ ಸಞ್ಜಯಿನಂ ಕರೋತೀತ್ಯರ್ಥಃ । ತಥಾಗ್ನಿರ್ವೃತ್ರಾಣಿ ಪುರೂಣಿ ಬಹೂಞ್ಛತ್ರೂನ್ದಯತೇ । ಹಂತಿ ॥

॥ ಪ್ರತಿಪದಾರ್ಥ ॥

ಅಪ್ನಸಃ—ಕರ್ಮವಂತನಾದ । ಅಗ್ನೇಃ—ಅಗ್ನಿಯ । **ಸಮಿತ್**—ಸಮಿತ್ತು । **ಭದ್ರಾ**—ಮಂಗಳಕರವಾಗಿ । **ಅಸ್ತು**—ಆಗಿರಲಿ । **ಅಗ್ನಿಃ**—ಅಗ್ನಿಯು । **ಮಹೀ**—ಮಹತ್ತಾದ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ವಿವೇಶ**—ಪ್ರವೇಶಿಸಿದ್ದಾನೆ । **ಅಗ್ನಿಃ**—ಅಗ್ನಿಯು । **ಏಕಂ**—ಅದ್ವಿತೀಯನಾಗಿ । **ಚೋದಯತ್**—ಪ್ರೇರಿಸುತ್ತಾನೆ । **ಸಮತ್ಸು**—ಯುದ್ಧಗಳಲ್ಲಿ । **ಅಗ್ನಿಃ**—ಅಗ್ನಿಯು । **ಪುರೂಣಿ**—ಅತ್ಯಧಿಕವಾದ । **ವೃತ್ರಾಣಿ**—ಶತ್ರುಗಳನ್ನು । **ದಯತೇ**—ಕೊಲ್ಲುತ್ತಾನೆ.

॥ ಭಾವಾರ್ಥ ॥

ಕರ್ಮವಂತನಾದ ಅಗ್ನಿಯ ಸಮಿತ್ತು ಮಂಗಳಕರವಾಗಿ ಆಗಲಿ. ಅಗ್ನಿಯು ಮಹತ್ತಾದ ದ್ಯಾವಾಪೃಥಿವಿಗಳನ್ನು ಪ್ರವೇಶಿಸಿದ್ದಾನೆ. ಅಗ್ನಿಯು ಅದ್ವಿತೀಯನಾಗಿ ಯಜಮಾನನನ್ನು ಪ್ರೇರಿಸುತ್ತಾನೆ ಯುದ್ಧಗಳಲ್ಲಿ ಅಗ್ನಿಯು ಅಧಿಕವಾಗಿ ಶತ್ರುಗಳನ್ನು ಕೊಲ್ಲುತ್ತಾನೆ.

## English Translation

May the fuel of the efficient Agni be auspicious; Agni has penetrated the vast heaven and earth; Agni animates (the worshipper) alone in battles; Agni destroys numerous enemies.

॥ ಸಂಹಿತಾಪಾಠಃ ॥

ಅಗ್ನಿರ್ಹ ತ್ಯಂ ಜರತಃ ಕರ್ಣಮಾವಾಗ್ನಿರದ್ಭ್ಯೋ ನಿರದಹಜ್ಜರೂಥಂ ।
ಅಗ್ನಿರತ್ರಿಂ ಘರ್ಮ ಉರುಷ್ಯದಂತರಗ್ನಿರ್ನೃಮೇಧಂ ಪ್ರಜಯಾಸೃಜತ್ಸಂ ॥೨॥

॥ ಪದಪಾಠ ॥

ಅಗ್ನಿಃ । ಹ । ತ್ಯಂ । ಜರತಃ । ಕರ್ಣಂ । ಆವ । ಅಗ್ನಿಃ । ಅತ್ಽಭ್ಯಃ । ನಿಃ । ಅದಹತ್ । ಜರೂಥಂ । ಅಗ್ನಿಃ । ಅತ್ರಿಂ । ಘರ್ಮೇ । ಉರುಷ್ಯತ್ । ಅಂತಃ । ಅಗ್ನಿಃ । ನೃಽಮೇಧಂ । ಪ್ರಽಜಯಾ । ಅಸೃಜತ್ । ಸಂ ॥ ೨ ॥

। ಸಾಯಣಭಾಷ್ಯಂ ।

ಅಗ್ನಿರ್ಹಾಯಮಗ್ನಿಃ ಖಲು ತ್ಯಂ ತಂ ಪ್ರಸಿದ್ಧಂ ಜರತಃ ಕರ್ಣಂ ಜರತ್ಕರ್ಣನಾಮಾನಮೃಷಿಮಾವ। ರರಕ್ಷ। ತಥಾಯಮಗ್ನಿರದ್ಭ್ಯಃ ಜರೂಥಮೇತನ್ನಾಮಾನಮಸುರಂ ನಿರದಹತ್। ನಿರ್ದಗ್ಧವಾನ್। ತಥಾಗ್ನಿರತ್ರಿಂ ಮಹರ್ಷಿಂ ಘರ್ಮೇಽಂತರ್ಋಬೀಸೇಽವಸ್ಥಿತಮುರುಷ್ಯತ್। ರರಕ್ಷ। ತಥಾಯಮಗ್ನಿರ್ನೃಮೇಧಮೇತನ್ನಾಮಕಮೃಷಿಂ ಪ್ರಜಯಾ ಪುತ್ರಾದಿಲಕ್ಷಣಯಾ ಸಮಸೃಜತ್। ಸಂಯುಯೋಜ॥

। ಪ್ರತಿಪದಾರ್ಥ ।

ಅಗ್ನಿಃ—ಅಗ್ನಿಯು। ತ್ಯಂ—ಪ್ರಸಿದ್ಧನಾದ। ಜರತಃ ಕರ್ಣಂ—ಜರತ್ಕರ್ಣನೆಂಬ ಋಷಿಯನ್ನು। ಆವ—ರಕ್ಷಿಸಿದ್ದಾನೆ। ಅಗ್ನಿಃ—ಅಗ್ನಿಯು। ಅದ್ಭ್ಯಃ—ಜ್ವಾಲೆಗಳಿಂದ। ಜರೂಥಂ—ಜರೂಥನೆಂಬ ಅಸುರನನ್ನು। ನಿರದಹತ್—ದಹಿಸಿದ್ದಾನೆ। ಅಗ್ನಿಃ—ಅಗ್ನಿಯು। ಅತ್ರಿಂ—ಅತ್ರಿಮಹರ್ಷಿಯನ್ನು। ಘರ್ಮೇ ಅಂತಃ—ದಹಿಸುವ ಕುಂಡದಿಂದ। ಉರುಷ್ಯತ್—ರಕ್ಷಿಸಿದನು। ಅಗ್ನಿಃ—ಅಗ್ನಿಯು। ನೃಮೇಧಂ—ನೃಮೇಧನೆಂಬ ಋಷಿಯನ್ನು। ಪ್ರಜಯಾ—ಸಂತಾನದೊಂದಿಗೆ। ಸಮಸೃಜತ್—ಸೇರಿಸಿದನು.

। ಭಾವಾರ್ಥ ।

ಅಗ್ನಿಯು ಪ್ರಸಿದ್ಧನಾದ ಜರತ್ಕರ್ಣನೆಂಬ ಋಷಿಯನ್ನು ರಕ್ಷಿಸಿದ್ದಾನೆ. ಅಗ್ನಿಯು ತನ್ನ ಜ್ವಾಲೆಗಳಿಂದ ಜರೂಥನೆಂಬ ಅಸುರನನ್ನು ದಹಿಸಿದ್ದಾನೆ. ಅತ್ರಿಮಹರ್ಷಿಯನ್ನು ದಹಿಸುವ ಅಗ್ನಿಕುಂಡದಿಂದ ರಕ್ಷಿಸಿದ್ದಾನೆ. ನೃಮೇಧನೆಂಬ ಋಷಿಗೆ ಸಂತಾನಪ್ರಾಪ್ತಿಯಾಗುವಂತೆ ಮಾಡಿದ್ದಾನೆ.

## English Translation

Agni verily has protected Jaratkarna; he has consumed Jarutha with his flames; Agni rescued Atri in the hot fissure; Agni furnished Nrimedha with progeny.

। ಸಂಹಿತಾಪಾಠಃ ।

ಅಗ್ನಿರ್ದಾದ್ದ್ರವಿಣಂ ವೀರಪೇಶಾ ಅಗ್ನಿರೃಷಿಂ ಯಃ ಸಹಸ್ರಾ ಸನೋತಿ।
ಅಗ್ನಿರ್ದಿವಿ ಹವ್ಯಮಾ ತತಾನಾಗ್ನೇರ್ಧಾಮಾನಿ ವಿಭೃತಾ ಪುರುತ್ರಾ ॥ ೪ ॥

॥ ಪದಪಾಠಃ ॥

ಅಗ್ನಿಃ। ದಾತ್। ದ್ರವಿಣಂ। ವೀರಽಪೇಶಾಃ। ಅಗ್ನಿಃ। ಋಷಿಂ। ಯಃ। ಸಹಸ್ರಾ। ಸನೋತಿ।
ಅಗ್ನಿಃ। ದಿವಿ। ಹವ್ಯಂ। ಆ। ತತಾನ। ಅಗ್ನೇಃ। ಧಾಮಾನಿ। ವಿಽಭೃತಾ। ಪುರುಽತ್ರಾ ॥ ೪ ॥

॥ ಸಾಯಣಭಾಷ್ಯಂ ॥

ಅಯಮಗ್ನಿರ್ವೀರಪೇಶಾಃ ಪ್ರೇರಕಜ್ವಾಲಾರೂಪೋ ದ್ರವಿಣಂ ಧನಂ ದಾತ್ । ದದಾತಿ । ತಥಾಗ್ನಿರ್ಋಷಿಂ ಮಂತ್ರದ್ರಷ್ಟಾರಂ ಪುತ್ರಂ ಪ್ರಯಚ್ಛತೀತಿ ಶೇಷಃ । ಋಷಿರ್ವಿಶೇಷ್ಯತೇ । ಯ ಋಷಿಃ ಸಹಸ್ರಾ ಗವಾಂ ಸಹಸ್ರಾಣಿ ಸನೋತಿ ಭಜತೇ ದಕ್ಷಿಣಾತ್ವೇನ ತಮೃಷಿಂ ದದಾತೀತಿ । ತಥಾಗ್ನಿರ್ದಿವಿ ದ್ಯುಲೋಕೇ ಹವ್ಯಂ ಯಜಮಾನೈರ್ಹುತಮಾ ತತಾನ । ದೇವೇಷು ವಿಸ್ತಾರಯತಿ । ತಥಾಗ್ನೇರ್ಧಾಮಾನಿ ಶರೀರಾಣಿ ವಿಭೃತಾ ವಿಭೃತಾನಿ ಪುರುತ್ರಾ ಬಹುಷು ಸ್ಥಾನೇಷ್ವಾಹವನೀಯಧಿಷ್ಣ್ಯಾದಿಷು ಕ್ಷೇತ್ರಾದಿಷು ವಾ ॥

॥ ಪ್ರತಿಪದಾರ್ಥ ॥

**ಅಗ್ನಿಃ**—ಅಗ್ನಿಯು । **ವೀರಪೇಶಾಃ**—ಪ್ರಸರಿಸುವ ಜ್ವಾಲೆಯುಳ್ಳವನಾಗಿ । **ದ್ರವಿಣಂ**—ಧನವನ್ನು । **ದಾತ್**—ಕೊಡುತ್ತಾನೆ । **ಯಃ**—ಯಾವ ಋಷಿಯು । **ಸಹಸ್ರಾ**—ಸಹಸ್ರಸಂಖ್ಯೆಯಲ್ಲಿ ಗೋವುಗಳನ್ನು । **ಸನೋತಿ**—ಹೊಂದಲು ಯೋಗ್ಯನಾಗಿರುವನೋ । **ಋಷಿಂ**—ಅಂತಹ ಋಷಿಗೆ । **ಅಗ್ನಿಃ**—ಅಗ್ನಿಯು ಪುತ್ರಾದಿಗಳನ್ನು ಕೊಡುತ್ತಾನೆ । **ಅಗ್ನಿಃ**—ಅಗ್ನಿಯು । **ದಿವಿ**—ದ್ಯುಲೋಕದಲ್ಲಿ । **ಹವ್ಯಂ**—ಹವಿಸ್ಸನ್ನು । **ಆ ತತಾನ**—ವಿಸ್ತರಿಸುವಂತೆ ಮಾಡಿದ್ದಾನೆ । **ಅಗ್ನೇಃ**—ಅಗ್ನಿಯ । **ಧಾಮಾನಿ**—ಶರೀರಗಳು । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ವಿಭೃತಾ**—ಆವಿರ್ಭೂತವಾಗುತ್ತವೆ.

॥ ಭಾವಾರ್ಥ ॥

ಅಗ್ನಿಯು ಪ್ರಸರಿಸುವ ಜ್ವಾಲೆಯುಳ್ಳವನಾಗಿ ಧನವನ್ನು ಕೊಡುತ್ತಾನೆ. ಯಾವ ಋಷಿಯು ಸಹಸ್ರ ಸಂಖ್ಯೆಯಲ್ಲಿ ಗೋವುಗಳನ್ನು ಹೊಂದಲು ಯೋಗ್ಯನಾಗಿರುವನೋ, ಅಂತಹ ಋಷಿಗೆ ಅಗ್ನಿಯು ಪುತ್ರಾದಿಗಳನ್ನು ಕೊಡುತ್ತಾನೆ. ಅಗ್ನಿಯು ದ್ಯುಲೋಕದಲ್ಲಿ ಹವಿಸ್ಸನ್ನು ವಿಸ್ತರಿಸುವಂತೆ ಮಾಡಿದ್ದಾನೆ. ಅಗ್ನಿಯ ಶರೀರಗಳು ಅನೇಕ ಪ್ರದೇಶಗಳಲ್ಲಿ ಪ್ರಾದುರ್ಭೂತವಾಗುತ್ತವೆ.

English Translation

Agni sending forth flames bestows wealth ; Agni (gives a son to) the Rishi who acquires a thousand cows; Agni spreads the oblation through heaven, the forms of Agni are manifested in many places.

॥ ಸಂಹಿತಾಪಾಠಃ ॥

ಅಗ್ನಿಮುಕ್ಥೈರ್ಋಷಯೋ ವಿ ಹ್ವಯಂತೇಽಗ್ನಿಂ ನರೋ ಯಾಮನಿ ಬಾಧಿತಾಸಃ ।

ಅಗ್ನಿಂ ವಯೋ ಅಂತರಿಕ್ಷೇ ಪತಂತೋಽಗ್ನಿಃ ಸಹಸ್ರಾ ಪರಿ ಯಾತಿ ಗೋನಾಂ ॥

॥ ಪದಪಾಠಃ ॥

ಅಗ್ನಿಂ । ಉಕ್ಥೈಃ । ಋಷಯಃ । ವಿ । ಹ್ವಯಂತೇ । ಅಗ್ನಿಂ । ನರಃ । ಯಾಮನಿ । ಬಾಧಿತಾಸಃ ।

ಅಗ್ನಿಂ । ವಯಃ । ಅಂತರಿಕ್ಷೇ । ಪತಂತಃ । ಅಗ್ನಿಃ । ಸಹಸ್ರಾ । ಪರಿ । ಯಾತಿ । ಗೋನಾಂ ॥ ೫ ೫

। ಸಾಯಣಭಾಷ್ಯಂ ।

ಅಗ್ನಿಮುಕ್ಥೈಃ ಶಸ್ತ್ರೈರ್ಋಷಯಃ ಪೂರ್ವೇ ವಿ ಹ್ವಯಂತೇ । ವಿವಿಧಮಾಹ್ವಯಂತಿ ಯಜ್ಞೇಷ್ವಿಯೋ । ಅಗ್ನಿಂ ನರೋ ಮನುಷ್ಯಾ ಯಾಮನಿ ಸಂಗ್ರಾಮೇ । ಯಾತಿರ್ವಧಕರ್ಮಸು ಪಠಿತಃ । ಬಾಧಿತಾಸಃ ಶತ್ರುಭ್ಯೋ ಬಾಧಿತಾಃ ಪ್ರಾಪ್ನುವಂತಿ ಜಯಾರ್ಥಂ । ತಥಾಗ್ನಿಂ ವಯಃ ಪಕ್ಷಿಣೋಽಂತರಿಕ್ಷೇ ಪತಂತಃ ಪಶ್ಯಂತಿ ರಾತ್ರಿಷು । ತಸ್ಮಾದಿಮಾಂ ವಯಾಂಸಿ ನಕ್ತಂ ನಾಧ್ಯಾಸತೇ । ತೈ. ಸಂ. ೫-೬-೪-೪ । ಇತಿ ಬ್ರಾಹ್ಮಣಂ । ಯದ್ವಾ । ದಾವಭೂತಮಗ್ನಿಮಂತರಿಕ್ಷಗಾ ವಯಃ ಪತಂತಿ । ತಥಾಗ್ನಿರ್ಗೋನಾಂ ಸಹಸ್ರಾ ಸಹಸ್ರಾಣಿ ಪರಿ ಪರಿತೋ ಯಾತಿ । ಗಚ್ಛತಿ ॥

। ಪ್ರತಿಪದಾರ್ಥ ।

**ಋಷಯಃ**—ಋಷಿಗಳು । **ಅಗ್ನಿಂ**—ಅಗ್ನಿಯನ್ನು । **ಉಕ್ಥೈಃ**—ಶಸ್ತ್ರಮಂತ್ರಗಳಿಂದ । **ವಿ ಹ್ವಯಂತೇ**—ಅನೇಕ ವಿಧವಾಗಿ ಕರೆಯುತ್ತಾರೆ । **ಯಾಮನಿ**—ಸಂಗ್ರಾಮದಲ್ಲಿ । **ಬಾಧಿತಾಸಃ**—ಅಧಿಕವಾಗಿ ಹಿಂಸಿತರಾದಾಗ । **ನರಃ**—ಮಾನವರು । **ಅಗ್ನಿಂ**—ಅಗ್ನಿಯನ್ನು ಕರೆಯುತ್ತಾರೆ । **ಅಂತರಿಕ್ಷೇ**—ಆಕಾಶದಲ್ಲಿ । **ಪತಂತಃ**—ಹಾರಾಡುತ್ತಿರುವ । **ವಯಃ**—ಪಕ್ಷಿಗಳು । **ಅಗ್ನಿಂ**—ಅಗ್ನಿಯನ್ನು ಕರೆಯುತ್ತವೆ । **ಅಗ್ನಿಃ**—ಅಗ್ನಿಯು । **ಗೋನಾಂ ಸಹಸ್ರಾ**—ಅನೇಕ ಸಂಖ್ಯೆಯ ಗೋವುಗಳನ್ನು । **ಪರಿ ಯಾತಿ**—ಸುತ್ತುವರಿದಿರುತ್ತಾನೆ.

॥ ಭಾವಾರ್ಥ ॥

ಋಷಿಗಳು ಅಗ್ನಿಯನ್ನು ಶಸ್ತ್ರಮಂತ್ರಗಳಿಂದ ಅನೇಕ ವಿಧವಾಗಿ ಕರೆಯುತ್ತಾರೆ. ಸಂಗ್ರಾಮದಲ್ಲಿ ಅಧಿಕವಾಗಿ ಹಿಂಸಿತರಾದಾಗ ಮಾನವರು ಅಗ್ನಿಯನ್ನು ಕರೆಯುತ್ತಾರೆ. ಆಕಾಶದಲ್ಲಿ ಹಾರಾಡುತ್ತಿರುವ ಪಕ್ಷಿಗಳು ಅಗ್ನಿಯನ್ನು ಕರೆಯುತ್ತವೆ. ಅಗ್ನಿಯು ಅನೇಕ ಸಂಖ್ಯೆಯ ಗೋವುಗಳನ್ನು ಸುತ್ತುವರೆದಿರುತ್ತಾನೆ.

## English Translatian

The Rishis variously invoke Agni with hymns; men when hard pressed in battle (invoke) Agni; the birds flying in mid-heaven (invoke) Agni; Agni circumambulates thousands of cattle.

॥ ಸಂಹಿತಾಪಾಠಃ ॥

ಅ॒ಗ್ನಿಂ ವಿಶ॑ ಈಳತೇ॒ ಮಾನು॑ಷೀ॒ರ್ಯಾ ಅ॒ಗ್ನಿಂ ಮನು॑ಷೋ॒ ನಹು॑ಷೋ॒ ವಿ ಜಾ॒ತಾಃ ।

ಅ॒ಗ್ನಿರ್ಗಾಂಧ॑ರ್ವೀಂ ಪ॒ಥ್ಯಾ॑ಮೃ॒ತಸ್ಯಾ॒ಗ್ನೇರ್ಗವ್ಯೂ॑ತಿರ್ಘೃ॒ತ ಆ ನಿಷ॑ತ್ತಾ ॥೬॥

। ಪದಪಾಠಃ ।

ಅ॒ಗ್ನಿಂ । ವಿಶಃ॑ । ಈ॒ಳ॒ತೇ॒ । ಮಾನು॑ಷೀಃ । ಯಾಃ । ಅ॒ಗ್ನಿಂ । ಮನು॑ಷಃ । ನಹು॑ಷಃ । ವಿ । ಜಾ॒ತಾಃ ।

ಅ॒ಗ್ನಿಃ । ಗಾಂಧ॑ರ್ವೀಂ । ಪ॒ಥ್ಯಾ॑ಂ । ಋ॒ತಸ್ಯ॑ । ಅ॒ಗ್ನೇಃ । ಗವ್ಯೂ॑ತಿಃ । ಘೃ॒ತೇ । ಆ । ನಿಃಸ॑ತ್ತಾ ॥ ೬ ॥

। ಸಾಯಣಭಾಷ್ಯಂ ।

ಅಗ್ನಿಂ ವಿಶಃ ಪ್ರಜಾ ಋತ್ವಿಗ್ಯಜಮಾನಲಕ್ಷಣಾ ಈಳತೇ । ಸ್ತುವಂತಿ । ಯಾ ಮಾನುಷೀ-ರ್ಮಾನುಷ್ಯೋ ಮನುಷ್ಯಾಜ್ಜಾತಾಃ ತಾ ಈಳತೇ । ತಥಾಗ್ನಿಂ ಮನುಷೋ ಮನುಷ್ಯಾ ನಹುಷೋ ರಾಜ್ಞಃ ಸಕಾಶಾಜ್ಜಾತಾಃ ಪ್ರಜಾ ವಿವಿಧಂ ಸ್ತುವಂತೀತಿ । ಅಗ್ನಿರ್ಗಾಂಧರ್ವೀಂ । ವಾಚ್ಯಾನ್ಯೈತತ್ । ವಾಚಂ ಶೃಣೋತಿ । ಕೀದೃಶೀಂ ಗಾಂಧರ್ವೀಂ । ಋತಸ್ಯ ಯಜ್ಞಸ್ಯ ಪಥ್ಯಾಂ ಪಥಿ ಹಿತಾಂ । ಅಗ್ನೇರ್ಮಹಾತ್ಮನೋ ಗವ್ಯೂತಿರ್ಮಾರ್ಗೋ ಘೃತ ಆಜ್ಯ ಆ ನಿಷತ್ತಾ ಸರ್ವತೋ ನಿಷಣ್ಣೋ ಭವತಿ ॥

॥ ಪ್ರತಿಪದಾರ್ಥ ।

**ಯಾಃ**—ಯಾರು । **ಮಾನುಷೀಃ**—ಮಾನವರಾಗಿದ್ದಾರೆಯೋ । **ವಿಶಃ**—ಅಂತಹ ಪ್ರಜೆಗಳು । **ಅಗ್ನಿಂ**—ಅಗ್ನಿಯನ್ನು । **ಈಳತೇ**—ಸ್ತುತಿಸುತ್ತಾರೆ । **ನಹುಷಃ ರಾಜ್ಞಃ**—ನಹುಷರಾಜನಿಂದ । **ಜಾತಾಃ**—ಉತ್ಪನ್ನರಾದ ಪ್ರಜೆಗಳೂ । **ಅಗ್ನಿಂ**—ಅಗ್ನಿಯನ್ನು ಸ್ತುತಿಸುತ್ತಾರೆ । **ಋತಸ್ಯ**—ಯಜ್ಞಕ್ಕೆ । **ಪಥ್ಯಾಂ**—ಹಿತಕರವಾದ । **ಗಾಂಧರ್ವೀಂ**—ಸ್ತುತಿವಾಕ್ಯನ್ನು । **ಅಗ್ನಿಃ**—ಅಗ್ನಿಯು ಕೇಳುತ್ತಾನೆ । **ಅಗ್ನೇಃ**—ಅಗ್ನಿಯ । **ಗವ್ಯೂತಿಃ**—ಮಾರ್ಗವು । **ಘೃತೇ**—ಆಜ್ಯದಲ್ಲಿ । **ಆ ನಿಷತ್ತಾ**—ಸ್ಥಾಪಿತವಾಗಿದೆ.

। ಭಾವಾರ್ಥ ।

ಮಾನವ ಪ್ರಜೆಗಳೆಲ್ಲರೂ ಅಗ್ನಿಯನ್ನು ಸ್ತುತಿಸುತ್ತಾರೆ. ನಹುಷನಿಂದ ಉತ್ಪನ್ನರಾದ ಪ್ರಜೆಗಳೆಲ್ಲರೂ ಅಗ್ನಿಯನ್ನು ಸ್ತುತಿಸುತ್ತಾರೆ. ಯಜ್ಞಕ್ಕೆ ಹಿತಕರವಾದ ಸ್ತುತಿವಾಕ್ಯನ್ನು ಅಗ್ನಿಯು ಕೇಳುತ್ತಾನೆ. ಅಗ್ನಿಯ ಮಾರ್ಗವು ಆಜ್ಯದಲ್ಲಿ ಸ್ಥಾಪಿತವಾಗಿದೆ.

## English Translation

The races who are of human birth praise Agni, so do the men descended from king Nahush ; Agni, (hears) the voice which is fit for the path of sacrifice ; Agni's path lies eyerywhere in ghi.

। ಸಂಹಿತಾಪಾಠಃ ।

ಅಗ್ನಯೇ ಬ್ರಹ್ಮ ಋಭವಸ್ತತಕ್ಷುರಗ್ನಿಂ ಮಹಾಮವೋಚಾಮಾ ಸುವೃಕ್ತಿಂ।
ಅಗ್ನೇ ಪ್ರಾವ ಜರಿತಾರಂ ಯವಿಷ್ಠಾಗ್ನೇ ಮಹಿ ದ್ರವಿಣಮಾ ಯಜಸ್ವ ॥೭॥

। ಪದಪಾಠಃ ॥

ಅಗ್ನಯೇ । ಬ್ರಹ್ಮ । ಋಭವಃ । ತತಕ್ಷುಃ । ಅಗ್ನಿಂ । ಮಹಾಂ । ಅವೋಚಾಮ । ಸುऽವೃಕ್ತಿಂ ।
ಅಗ್ನೇ । ಪ್ರ । ಅವ । ಜರಿತಾರಂ । ಯವಿಷ್ಠ । ಅಗ್ನೇ । ಮಹಿ । ದ್ರವಿಣಂ । ಆ । ಯಜಸ್ವ ॥ ೭ ॥

। ಸಾಯಣಭಾಷ್ಯಂ ।

ಅಗ್ನಯೇ ಬ್ರಹ್ಮ ಸ್ತೋತ್ರಮೃಭವೋ ಮೇಧಾವಿನಸ್ತತಕ್ಷುಃ । ಅಕುರ್ವನ್ । ವಯಂ ಚ ಮಹಾಂ ಮಹಾಂತಮಗ್ನಿಂ ಪ್ರತಿ ಸುವೃಕ್ತಿಂ ಸ್ತುತಿಮವೋಚಾಮ । ಹೇ ಯವಿಷ್ಠ ಯುವತಮಾಗ್ನೇ ಜರಿತಾರಂ ಸ್ತೋತಾರಂ ಪ್ರಾವ । ಪ್ರರಕ್ಷ । ಹೇ ಅಗ್ನೇ ಮಹಿ ಮಹದ್ದ್ರವಿಣಂ ಧನಮಾ ಯಜಸ್ವ । ಪ್ರಯಚ್ಛೇತ್ಯರ್ಥಃ । ಅತ್ರ ಪ್ರತಿವಾಕ್ಯಮಗ್ನ್ಯಭಿಧಾನಂ ತಸ್ಯ ಸ್ತುತ್ಯತ್ವಪ್ರದರ್ಶನಾರ್ಥಂ ॥

। ಪ್ರತಿಪದಾರ್ಥ ।

ಋಭವಃ—ಮೇಧಾವಿಗಳಾದ ಋಭುಗಳು । ಅಗ್ನಯೇ—ಅಗ್ನಿಯನ್ನು ಉದ್ದೇಶಿಸಿ । ಬ್ರಹ್ಮ—ಸ್ತೋತ್ರವನ್ನು । ತತಕ್ಷುಃ—ನಿರ್ಮಿಸಿದ್ದಾರೆ । ಮಹಾಂ—ಮಹತ್ತಾದ । ಅಗ್ನಿಂ—ಅಗ್ನಿಯನ್ನುದ್ದೇಶಿಸಿ । ಸುವೃಕ್ತಿಂ—ಉತ್ತಮವಾದ ಸ್ತುತಿಯನ್ನು । ಅವೋಚಾಮ—ನಾವು ಪಠಿಸಿದ್ದೇವೆ । ಯವಿಷ್ಠ—ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ । ಜರಿತಾರಂ—ನಿನ್ನ ಸ್ತುತಿಕರ್ತನನ್ನು । ಪ್ರಾವ—ರಕ್ಷಿಸು । ಅಗ್ನೇ—ಎಲೈ ಅಗ್ನಿಯೇ । ಮಹಿ—ಮಹತ್ತಾದ । ದ್ರವಿಣಂ—ಧನವನ್ನು । ಆ ಯಜಸ್ವ—ಒದಗಿಸು.

। ಭಾವಾರ್ಥ ।

ಮೇಧಾವಿಗಳಾದ ಋಭುಗಳು ಅಗ್ನಿಯನ್ನುದ್ದೇಶಿಸಿ ಸ್ತೋತ್ರವನ್ನು ನಿರ್ಮಿಸಿದ್ದಾರೆ. ಮಹತ್ತಾದ ಅಗ್ನಿಯನ್ನುದ್ದೇಶಿಸಿ ನಾವು ಉತ್ತಮವಾದ ಸ್ತುತಿಯನ್ನು ಪಠಿಸಿದ್ದೇವೆ. ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನಿನ್ನ ಸ್ತುತಿಕರ್ತನನ್ನು ರಕ್ಷಿಸು. ಎಲೈ ಅಗ್ನಿಯೇ, ಮಹತ್ತಾದ ಧನವನ್ನು ಒದಗಿಸು.

## English Translation

The Ribhus have fabricated praise for Agni ; we have recited pious praise to the mighty Agni ; Agni, youngest (of the gods), protect your worshipper ; Agni, bestow (on him) abundant wealth.



# ಎಂಭತ್ತೊಂದನೆಯ ಸೂಕ್ತವು.

## ಪೀಠಿಕೆ.

೧೦ನೇ ಮಂಡಲದ ೮೧ ಮತ್ತು ೮೨ನೇ ಸೂಕ್ತಗಳು ವಿಶ್ವಕರ್ಮಋಷಿಯಿಂದ ನಿರ್ಮಿತವಾಗಿ ವಿಶ್ವಕರ್ಮಸಂಜ್ಞಕವಾದ ದೇವತಾಪ್ರಶಂಸೆಯನ್ನೊಳಗೊಂಡಿವೆ, ಈ ಸೂಕ್ತಗಳ ಮಂತ್ರಗಳನ್ನು ಯಜ್ಞಪರವಾಗಿಯೂ ಮತ್ತು ಆಧ್ಯಾತ್ಮಪರವಾಗಿಯೂ ಸಾಯಣಾದಿಗಳು ವಿವರಿಸಿದ್ದಾರೆ. **ಅಘಮರ್ಷಣ, ಪ್ರಜಾಪತಿ, ಪರಮೇಷ್ಠಿ, ಬ್ರಹ್ಮಣಸ್ಪತಿ, ದೀರ್ಘತಮಸ್, ಹಿರಣ್ಯಗರ್ಭ** ಇತ್ಯಾದಿ ಋಷಿಗಳಿಂದ ಪ್ರಣೀತವಾದ ಸೂಕ್ತಗಳೆಲ್ಲವೂ ಜಗತ್ತಿನ ಸೃಷ್ಟಿ ಮತ್ತು ಸ್ಥಿತ್ಯಾದಿಗಳ ವಿಷಯದಲ್ಲಿ ವಿವರಣೆಯನ್ನು ಹೇಳುತ್ತವೆ. ಆದರೆ ಈ ಸೂಕ್ತಗಳೆಲ್ಲವೂ ಒಂದೇ ಅಭಿಪ್ರಾಯವನ್ನು ತಿಳಿಸುವುದಿಲ್ಲ. ವಿಶ್ವಕರ್ತನ ವಿಷಯಲ್ಲಾಗಲಿ, ಅವನ ಸಂಕಲ್ಪದ ಸ್ವರೂಪದಲ್ಲಾಗಲಿ, ಜಗತ್ತಿನ ಮೂಲಕಾರಣದ ವಿಷಯದಲ್ಲಾಗಲಿ, ಎಲ್ಲ ಋಷಿಗಳೂ ಒಂದೇ ಅಭಿಪ್ರಾಯವನ್ನು ಹೊಂದಿಲ್ಲ. ಒಂದೊಂದು ಸೂಕ್ತದಲ್ಲಿ ಒಂದೊಂದು ವಿಧವಾದ ವಿವರಣೆಯಿರುತ್ತದೆ ಆದರೆ, ಮುಖ್ಯ ವಿಷಯಗಳಲ್ಲಿ ಕೆಲವು ಮಾತ್ರ ಸಮಾನವಾಗಿರುತ್ತವೆ. **ತಮಿದ್ಗರ್ಭಂ ಪ್ರಥಮಂ ದಧ್ರ ಆಪಃ** (ಋ. ಸಂ. ೧೦-೮೨-೬) ಎಂಬ ವಿವರಣವು ವಿಶ್ವಕರ್ಮ ಋಷಿಯ ಮತವನ್ನು ತಿಳಿಸುತ್ತದೆ. ಸೃಷ್ಟಿ ಮತ್ತು ಅದರ ಕ್ರಮ ಇವುಗಳ ವಿವರಣವನ್ನು ಆಯಾ ಋಕ್ಕುಗಳ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ. **ಪ್ರಥಮತಃ,** ವಿಶ್ವಕರ್ಮನ ಸ್ವರೂಪವೇನು ಸೃಷ್ಟವಾದ ಜಗತ್ತಿಗೂ ಅವನಿಗೂ ಇರುವ ಸಂಬಂಧವೇನು ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಪರಿಶೀಲಿಸ ಬೇಕಾಗಿರುತ್ತದೆ.

**ವಿಶ್ವಕರ್ಮಾ ಸರ್ವಸ್ಯ ಕರ್ತಾ** (ನಿ. ೧೦-೨೬)

ಸಕಲವನ್ನೂ ನಿರ್ಮಿಸಿ ಪರಿಷ್ಕರಿಸುವುದರಿಂದ ಎಂದರೆ ಸಕಲವನ್ನೂ ಸೃಷ್ಟಿಸಿರುವುದರಿಂದ **ವಿಶ್ವಕರ್ಮ**ನೆಂದು ಹೆಸರು ಎಂದು ನಿರುಕ್ತಕಾರರ ನಿರ್ವಚನವಿರುತ್ತದೆ. ದುರ್ಗಾಚಾರ್ಯರು ಇದನ್ನು ವಿವರಿಸುತ್ತ,

**ಯದಿದಂ ಕಿಂಚಿದ್ಭೂತಂ ಭವಿಷ್ಯಮಾಣಂ, ಕ್ರಿಯಮಾಣಂ ಚ ತಸ್ಯ ಸರ್ವಸ್ಯ ಕರ್ತಾ ।**

(ನಿ. ಭಾ ೧೦-೨೬)

ಹಿಂದೆ ಇದ್ದುದು, ಮುಂದೆ ಸಂಭವಿಸುವುದು, ಇನ್ನು ಮೇಲೆ ನಿರ್ಮಿತವಾಗತಕ್ಕದ್ದು ಇವೆಲ್ಲವನ್ನು ಉತ್ಪನ್ನಮಾಡಿ-

ಸಂಸ್ಕರಿಸುವುದರಿಂದ ಈ ಹೆಸರು ಎಂದು ತಿಳಿಸಿದ್ದಾರೆ. ಇದನ್ನೇ ಬೃಹದ್ದೇವತಾವಾಕ್ಯಗಳಲ್ಲೂ ತಿಳಿಸುತ ಈ ಪದದ ನಿರ್ವಚನವನ್ನು ವಿವರಿಸಿದೆ.

**ನಿದಾಘಮಾಸಾತಿಗಮೇ ಯದ್ವೃತೇನಾವತಿ ಕ್ಷಿತಿಂ ।**
**ವಿಶ್ವಸ್ಯ ಜನಯನ್ಕರ್ಮ ವಿಶ್ವಕರ್ಮೈಷ ತೇನ ಸಃ ॥**

(ಬೃ. ದೇ. ೨-೫೦)

ನಿದಾಘ (ಉಷ್ಣ) ಕಾಲವು ಕಳೆದನಂತರ ಉದಕದಿಂದ ಭೂಮಿಯನ್ನು ಫಲವತ್ತನ್ನಾಗಿ ಮಾಡಿ ವಿಶ್ವದಲ್ಲಿ ಸಕಲ ವಿಧವಾದ ಕರ್ಮವನ್ನೂ ಆರಂಭಿಸುವಂತೆ ಮಾಡುತ್ತಾನೆ. ಆದುದರಿಂದ **ವಿಶ್ವಕರ್ಮ**ನೆಂದು ಹೆಸರು

ವಿಶ್ವಕರ್ಮನಿಗೆ **ಭೌವನ**ನೆಂಬ ವಿಶೇಷಣವೂ ಇರುತ್ತದೆ. ಭುವನನ ಪುತ್ರನೆಂದು ಕೆಲವರ ತಾತ್ಪರ. ಆಧ್ಯಾತ್ಮಿಕವಾದ ತಾತ್ಪರ್ಯವನ್ನು ಪರಿಶೀಲಿಸಿದರೆ ಈ ಅರ್ಥವಾಗುವುದಿಲ್ಲ.

**ವಿಶ್ವಕರ್ಮಾ ಭುವನಾನಾಂ ಭೂತಾನಾಮಾತ್ಮನಿ ಹೋತಾ ಭೂತೇಷು ಚಾತ್ಮಾನಂ ; ತಥಾ ಹಿ ವಿಜ್ಞಾಯತೇ ; ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನಿ ।**

(ಶ. ಬ್ರಾ. ೧೩-೭.೧-೧)

ಸಕಲ ಭುವನಗಳಲ್ಲಿಯೂ, ಸಕಲ ಭೂತಜಾತಗಳಲ್ಲಿಯೂ ತಾನೇ ಪ್ರವೇಶಿಸಿ, ಅವೆಲ್ಲವನ್ನು ತನ್ನಲ್ಲೇ ಅಡಗಿಸಿ ಕೊಂಡುದರಿಂದ ವಿಶ್ವಕರ್ಮನಿಗೆ **ಭೌವನ** ಎಂಬ ವಿಶೇಷಣವು ಪ್ರಸಿದ್ಧವಾಗಿದೆಯೆಂದು ಶತಪಥ ಬ್ರಾಹ್ಮಣದ ವಾಕ್ಯವು ಈ ವಿಶೇಷಣದ ಅರ್ಥವನ್ನು ತಿಳಿಸುತ್ತದೆ. ಸಕಲಲೋಕಕ್ಕೂ ಪ್ರಭುವಾಗಿರುವುದರಿಂದ ಇವನೇ **ಇಂದ್ರನು**, ಮೂರು ಲೋಕಗಳಲ್ಲೂ ವ್ಯಾಪ್ತಿಯಿರುವುದರಿಂದ ಇವನೇ **ಅಗ್ನಿಯು**, ಇತ್ಯಾದಿ ಪ್ರಶಂಸೆಗಳೂ ಅನೇಕ ವಾಗಿರುತ್ತವೆ. ಇಂದ್ರನೇ ವಿಶ್ವಕರ್ಮರೂಪದಿಂದ ತನ್ನ ಕರ್ತವ್ಯವನ್ನು ನೆರವೇರಿಸಿದನು ಎಂಬುದಕ್ಕೆ ಐತರೇಯ ಬ್ರಾಹ್ಮಣದಲ್ಲಿ ಐತಿಹಾಸಿಕವಾದ ಸಂದರ್ಭವು ಹೇಳಲ್ಪಟ್ಟಿದೆ. ಈ ಸಂದರ್ಭದಲ್ಲಿ ವಿಶ್ವಕ್ಕೆಲ್ಲ ಸೃಷ್ಟಿಕರ್ತನಾದ ಪ್ರಜಾಪತಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವನ್ನು ತಿಳಿಸಿದೆ. ಹೇಗೆಂದರೆ ;—

**ಇಂದ್ರೋ ವೈ ವೃತ್ರಂ ಹತ್ವಾ ವಿಶ್ವಕರ್ಮಾಭವತ್ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವಿಶ್ವಕರ್ಮಾ-ಭವತ್ಸಂವತ್ಸರೋ ವಿಶ್ವಕರ್ಮೇಂದ್ರಮೇವ ತದಾತ್ಮಾನಂ ಪ್ರಜಾಪತಿಂ ಸಂವತ್ಸರಂ ವಿಶ್ವಕರ್ಮಾಣಮಾಪ್ನುವಂತೀಂದ್ರ ಏವ ತದಾತ್ಮನಿ ಪ್ರಜಾಪತೌ ಸಂವತ್ಸರೇ ವಿಶ್ವ-ಕರ್ಮಣ್ಯಂ ತತಃ ಪ್ರತಿತಿಷ್ಠಂತಿ…. … …. ॥**

(ಐ. ಬ್ರಾ. ೪-೨೨)

ಇಂದ್ರನು ವೃತ್ರನನ್ನು ಕೊಂದು ವಿಶ್ವಕರ್ಮರೂಪವನ್ನು ಪಡೆದನು. ಪ್ರಜಾಪತಿಯು ಪ್ರಜೆಗಳನ್ನು ಸೃಜಿಸಿ ವಿಶ್ವಕರ್ಮನಾದನು. ವಿಶ್ವಕರ್ಮನೇ ಸಂವತ್ಸರಾತ್ಮಕನು. ಇಂದ್ರನೂ ಸಂವತ್ಸರಾತ್ಮಕನು. ಆದುದರಿಂದ ಇಂದ್ರನ ಅನುಸಂಧಾನದಿಂದ, ಸಂವತ್ಸರ, ಪ್ರಜಾಪತಿ ಮತ್ತು ವಿಶ್ವಕರ್ಮ ಇವರ ಸಾಕ್ಷಾತ್ಕಾರವಾಗುತ್ತದೆ. ಕೊನೆಯಲ್ಲಿ ಇವರ ಆಶ್ರಯವೇ ಯಜಮಾನನನ್ನು ರಕ್ಷಿಸುತ್ತದೆ. ಈ ತತ್ತ್ವವನ್ನರಿತವನಿಗೆ ದೃಢವಾದ ಆಶ್ರಯವು ಖಂಡಿತ ಎಂದು ಸಾರಿದೆ. ಸಕಲಜಗತ್ತಿಗೂ ಮೂಲವಾದ ಪ್ರಜಾಪತಿಯೇ ಈ ವಿಶ್ವಕರ್ಮನು.

**ರಸೋ ವಾ ಊರ್ಮಿರ್ವಿಶ್ವಕರ್ಮಾ ತೇ ಋಷಿರಿತಿ ಪ್ರಜಾಪತಿರ್ವೈ ವಿಶ್ವಕರ್ಮಾ ಪ್ರಜಾಪತಿ–ಸೃಷ್ಟಾಸಿ**

(ಶ. ಬ್ರಾ. ೮-೨-೧-೧೦)

**ವಿಷ್ಟಂಭೋ ವಯ ಇತಿ । ಪ್ರಜಾಪತಿರ್ವೈ ವಿಷ್ಟಂಭಃ ಸ ವಯೋಽಭವದಧಿಪತಿಶ್ಛಂದ ಇತಿ ಪ್ರಜಾಪತಿರ್ವಾ ಅಧಿಪತಿಃ ಪ್ರಜಾಪತಿರೇವಛಂದೋಽಭವತ್ । ವಿಶ್ವಕರ್ಮಾ ವಯ ಇತಿ । ಪ್ರಜಾಪತಿರ್ವೈ ವಿಶ್ವಕರ್ಮಾ ಸ ವಯೋಽಭವತ್ ॥**

(ಶ. ಬ್ರಾ. ೮-೨-೩-೧೨)

**ಪ್ರಜಾಪತಿರ್ವೈ ವಿಶ್ವಕರ್ಮೇತಿ । ಪ್ರಜಾಪತಿರ್ವೈ ವಿಶ್ವಕರ್ಮಾ । ಸ ಹೀದಗ್ಂ ಸರ್ವಮ–ಕರೋನ್ಮನೋ ಗಂಧರ್ವಸ್ತಸ್ಯ ಋಕ್ಸಾಮಾನ್ಯಪ್ಸರಸಃ................ ॥**

(ಶ. ಬ್ರಾ. ೯-೪-೧-೧೨)

ಇತ್ಯಾದಿ ವಾಕ್ಯಗಳಲ್ಲಿ ಪ್ರಜಾಪತಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವನ್ನು ತಿಳಿಸಿದೆ. ವಿಶ್ವಕ್ಕೆ ನಾಭಿರೂಪವಾದ ಯಜ್ಞಕ್ಕೆ ವಿಶ್ವಕರ್ಮರೂಪನಾದ ಪ್ರಜಾಪತಿಯೇ ಅವಷ್ಟಂಭಕನು. (ಆಶ್ರಯವು). ವಿಶ್ವವ್ಯವಹಾರಕ್ಕೆ ಆಧಾರಭೂತ ವಾದ ಯಜ್ಞಕ್ಕೆ ವಿಶ್ವಕರ್ಮನೇ ಆಶ್ರಯನೆಂದಂತಾಯಿತು. ಈ ಆಧಾರವೇ ಶಕ್ತಿರೂಪವು. (ಶಕ್ತಿಯಿಲ್ಲದಿದ್ದರೆ ಆಶ್ರಯವಿಲ್ಲ). ಆದುದರಿಂದ ಯಜ್ಞತತ್ತ್ವಕ್ಕೆ ಆಧಾರನಾದ ಪ್ರಜಾಪತಿಯೇ ಈ ಶಕ್ತಿಸ್ವರೂಪನು. ಪ್ರಜಾಪತಿಯು ಸಕಲವನ್ನೂ ನಿರ್ಮಿಸುವುದರಿಂದ ಇವನಿಗೆ ವಿಶ್ವಕರ್ಮಾ ಎಂದೂ ಹೆಸರು. ಇತ್ಯಾದಿಯಾಗಿ ವಿಶ್ವಕರ್ಮನ ಸ್ವರೂಪವನ್ನು ಪ್ರಶಂಶಿಸಿದೆ. ತೈತ್ತಿರೀಯಬ್ರಾಹ್ಮಣದಲ್ಲಿ ಯಾವ ದೇವತೆಗಳನ್ನು **ವಿಶ್ವಸೃಜಃ** ಎಂದು ವರ್ಣಿಸಿದೆಯೋ, ಆ ದೇವತೆಗಳ ಸ್ವರೂಪಗಳೆಲ್ಲವೂ ವಿಶ್ವಕರ್ಮನಲ್ಲಿಯೇ ಅಡಕವಾಗಿವೆ. (ತೈ. ಬ್ರಾ. ೩-೧೨-೯) ಈ ವಿವರಣವನ್ನು **ವಿಶ್ವತಶ್ಚಕ್ಷುಃ** ಎಂಬ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಸಕಲ ಜಗದ್ವ್ಯವಹಾರಗಳಿಗೂ ಮೂಲವಾದ ವಾಕ್ತತ್ತ್ವವು ಪ್ರಜಾಪತಿಯಿಂದ ಸ್ಪಷ್ಟವಾಗಿ ಪ್ರಜಾಪತಿರೂಪ ದಲ್ಲಿಯೇ ಜಗದಾಧಾರವಾಗಿರುತ್ತದೆ. (ಈ ವಿಷಯವನ್ನು ಋ. ಸಂ. ೧೦-೮೧-೭ ಎಂಬ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗುತ್ತದೆ.) **ವಾಚಸ್ಪತಿ**ಯೆಂದು ಪ್ರಶಂಸಿತನಾಗಿರುವ ವಿಶ್ವಕರ್ಮನೂ ವಾಕ್ಕಿನ ಆಧಾರದ ಮೇಲೆಯೇ ಜಗತ್ತನ್ನು ಸೃಜಿಸಿದ್ದಾನೆ. ಮತ್ತು ಅಗ್ನಿರೂಪನೂ ಆಗಿದ್ದಾನೆ.

**ಅಗ್ನಿರ್ವಾ ಏಷೋಽಗ್ನೇರಧ್ಯಜಾಯತ । ಶೋಕಾತ್ಪೃಥಿವ್ಯಾ ಉತ ವಾ ದಿವಸ್ಪರೀತಿ ಯದ್ವೈ ಪ್ರಜಾಪತೇಃ ಶೋಕಾದಜಾಯತ ತದ್ದಿವಶ್ಚ ಪೃಥಿವ್ಯೈ ಚ ಶೋಕಾದಜಾಯತ ಯೇನ ಪ್ರಜಾ ವಿಶ್ವಕರ್ಮಾ ಜಜಾನೇತಿ ವಾಗ್ವಾ ಅಜೋ ವಾಚೋ ವೈ ಪ್ರಜಾ ವಿಶ್ವಕರ್ಮಾ ಜಜಾನ ತಮಗ್ನೇ ಹೇಡಃ ಪರಿ ತೇ ವೃಣಕ್ತು ॥**

(ಶ. ಬ್ರಾ. ೭-೫-೨-೨೧)

ಅಗ್ನಿಯು ಅಗ್ನಿಯಿಂದಲೇ ಉತ್ಪನ್ನನಾದವನು. ಪ್ರಜಾಪತಿಯ ತಪಸ್ಸಿನ ಫಲವಾಗಿ ಉತ್ಪನ್ನವಾದವೆಲ್ಲವೂ ದ್ಯಾವಾ ಪೃಥಿವಿಗಳ ಶೋಕದ (ತಪಸ್ಸಿನ) ಫಲವಾಗಿ ಉತ್ಪನ್ನವಾದವು ಎಂದು ಹೇಳಬೇಕು. ಆದುದರಿಂದ ದ್ಯಾವಾಪೃಥಿವಿಗಳ ಶೋಕದ (ತಪಸ್ಸಿನ) ಫಲವಾಗಿ ಅಗ್ನಿಯು ಉತ್ಪನ್ನನಾದನು. ವಿಶ್ವಕರ್ಮನ ಸೃಷ್ಟಿಗೆ ಆಧಾರವೇ ಇದು. ಜನ್ಮರಹಿತ

ವಾಗಿ ಅಜಸಂಜ್ಞಕವಾದ ಯಾವ **ವಾಕ್**ತತ್ತ್ವವಿದೆಯೋ ಆ ತತ್ತ್ವದ ಆಧಾರದಿಂದಲೇ ವಿಶ್ವಕರ್ಮರೂಪನಾದ ಪ್ರಜಾಪತಿಯು ಜಗತ್ತನ್ನು ನಿರ್ಮಿಸಿದನು. ಇಲ್ಲಿ ಸೃಷ್ಟಿಗೆ ಮೂಲವೂ ಅಗ್ನಿರೂಪವು. ಸೃಷ್ಟವಾದುದೂ ಅಗ್ನಿರೂಪವು. ಸಕಲವೂ ಅಗ್ನಿತೇಜಸ್ಸಿನಿಂದಲೇ ವ್ಯಾಪ್ತವಾಗಿದೆ. ಆದುದರಿಂದಲೇ " ಅಗ್ನಿಯಿಂದ ಅಗ್ನಿಯ ಉತ್ಪತ್ತಿ " ಎಂದು ತಿಳಿಸಿದೆಯೆಂದು ವಿವರಿಸಿದೆ.

**ವಿಶ್ವಕರ್ಮಾ ಋಷಿರಿತಿ । ವಾಗ್ವೈ ವಿಶ್ವಕರ್ಮರ್ಷಿರ್ವಾಚಾ ಹೀದಗ್ಂ ಸರ್ವಂ ಕೃತಂ ತಸ್ಮಾದ್ವಾಗ್ವಿಶ್ವಕರ್ಮರ್ಷಿಃ ಪ್ರಜಾಪತಿಗೃಹೀತಯಾ ತ್ವಯೇತಿ ಪ್ರಜಾಪತಿಸೃಷ್ಟಯಾ ತ್ವಯೇತ್ಯೇತದ್ವಾಚಂ ಗೃಹ್ಣಾಮಿ ಪ್ರಜಾಭ್ಯ ಇತಿ........ ॥**

(ಶ. ಬ್ರಾ. ೮-೧-೨-೯)

ಸಕಲವನ್ನೂ ನಿರ್ಮಿಸತಕ್ಕ ವಿಶ್ವಕರ್ಮನೇ ಋಷಿಯು. ನಿರ್ಮಿತವಾದ ಸಕಲ ಭೂತಗಳ ವ್ಯವಹಾರಕ್ಕೂ ವಾಕ್ಕೇ ಮೂಲವಾದುದರಿಂದ ವಿಶ್ವಕರ್ಮನೇ ವಾಗ್ರೂಪನು. ವಿಶ್ವಕರ್ಮರೂಪನಾದ ಪ್ರಜಾಪತಿಯಿಂದ ಸೃಷ್ಟನಾದ ನಿನಗೂ ನಿನ್ನ ಸಂತತಿಗೂ ವಾಕ್ಕನ್ನು ಒದಗಿಸುತ್ತೇನೆ. ಇತ್ಯಾದಿ ವರ್ಣನೆಗಳಿರುವ ಸನ್ನಿವೇಶಗಳಲ್ಲಿ ವಾಕ್ಕಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವಿರುತ್ತದೆ. ಈ ವಾಕ್ಕಿನ ಆಧಾರದ ಮೇಲೆಯೇ ವಿಶ್ವವು ವಿಶ್ವಕರ್ಮನಿಂದ ನಿರ್ಮಿತವಾಯಿತು ಎಂಬ ವಿವರಣವನ್ನು ಮೇಲೆ ತಿಳಿಸಿದೆ. ಇವನಿಂದ ನಿರ್ಮಿತವಾದ ಜಗತ್ತಿನ ಸೃಷ್ಟಿಗೂ ಯಜ್ಞವೇ ಆಧಾರ; ಪ್ರಳಯವೂ ಯಜ್ಞರೂಪವಾಗಿಯೇ, ಇದೆ. ಆದುದರಿಂದ ವಿಶ್ವಕರ್ಮನು ಯಜ್ಞಾಗ್ನಿರೂಪದಲ್ಲಿದ್ದಾನೆ. ಪತಿಪತ್ನಿಯರೊಡಗೂಡದೆ ಯಜ್ಞವಿಲ್ಲ. ಆದುದರಿಂದ ಅಗ್ನಿ ಮತ್ತು ತತ್ಪತ್ನಿಯೂ ಕೂಡಿ ಈ ಯಜ್ಞಕ್ರಿಯೆಯಲ್ಲಿ ಭಾಗವನ್ನು ವಹಿಸುತ್ತಾರೆ. ಹೇಗೆಂದರೆ—

**ಅಥಾಹಾತ್ಪತ್ನೀವತಸ್ಯ ಯಜೇತಿ । ವೃಷಾ ವಾ ಅಗ್ನೀದ್ಯೋಷಾ ಪತ್ನೀ ಮಿಥುನಮೇವೈತತ್ಪ್ರಜನನಂ ಕ್ರಿಯತೇ ಸ ಜುಹೋತ್ಯಗ್ನಾ೩ ಪತ್ನೀವನ್ನಿತಿ ವೃಷಾ ವಾ ಅಗ್ನಿರ್ಯೋಷಾ ಪತ್ನೀ ಮಿಥುನಮೇವೈತತ್ಪ್ರಜನನಂ ಕುರುತೇ ।........ಏತದಂತತೋ ಯಜ್ಞಸ್ಯ ಮಿಥುನಾತ್ಪ್ರಜನನಾತ್ಪ್ರಜನಯತಿ ॥**

(ಶ. ಬ್ರಾ. ೪-೪-೨-೮)

ಪತ್ನೀವಂತನನ್ನುದ್ದೇಶಿಸಿ ಯಜ್ಞಾಹುತಿಯನ್ನರ್ಪಿಸು ಎಂಬುದೇ ವಿಧಿ. **ಆಗ್ನೀಧ್ರ**ಸಂಜ್ಞಕವಾದ ತತ್ತ್ವವೇ ಪುಂರೂಪವು. ಪತ್ನಿಯೇ ಸ್ತ್ರೀರೂಪವು. ಈ ಪತಿಪತ್ನಿಯರ ಸಂಯೋಗದಿಂದ ಪ್ರಜೋತ್ಪತ್ತಿಯು. ಎಲೈ **ಪತ್ನಿವಂತನಾದ ಅಗ್ನಿಯೇ** ಎಂದು ಸಂಬೋಧಿಸಿ ಆಹುತಿಯನ್ನರ್ಪಿಸಬೇಕು. ಅಗ್ನಿಯೇ **ಪುಮಾನ್** ; **ಪತ್ನಿಯೇ ಸ್ತ್ರೀ** (**ಅಗ್ನೇ ವಾಕ್ ಪತ್ನೀ** ಎಂಬ ವಾಕ್ಯವು ಇದೇ ಸಂದರ್ಭದಲ್ಲಿ ಶತಪಥಬ್ರಾಹ್ಮಣದ ಕಾಣ್ವ ಪಾಠದಲ್ಲಿರುತ್ತದೆ). ಈ ರೀತಿ ಪತಿರೂಪನಾದ ಅಗ್ನಿಗೂ ಪತ್ನೀರೂಪದ (ವಾಕ್) ಸ್ತ್ರೀಗೂ ಸಂಭವಿಸಿದ ಸಂಯೋಗದಿಂದ ಪ್ರಜೋತ್ಪತ್ತಿಯೆಂದು ವರ್ಣಿಸಿದೆ. ಯಜ್ಞಪುರುಷನಾದ ಈ ಅಗ್ನಿಯೇ ವಿಶ್ವಕರ್ಮಾಖ್ಯನು. ಯಾರನ್ನು ವಾಚಸ್ಪತಿಯೆಂದು ನಿರ್ದೇಶಿಸಿ, ಯಾರ ಯಜ್ಞಕ್ರಿಯೆಯಿಂದ ಜಗತ್ತಿನ ಉತ್ಪನ್ನವಾಯಿತೆಂದು ಹೇಳಿದೆಯೋ, ಆ ಅಗ್ನಿಯೇ, ವಿಶ್ವಕರ್ಮರೂಪನು. ಈ ವಿಷಯವನ್ನು ನಿಸ್ಪಷ್ಟವಾಗಿ ಈ ರೀತಿ ತಿಳಿಸಿದೆ.

**ಪ್ರತ್ಯೇತ್ಯ ವೈಶ್ವಕರ್ಮಾಣಿ ಜುಹೋತಿ । ವಿಶ್ವಾನಿ ಕರ್ಮಾಣ್ಯಯಮಗ್ನಿಸ್ತಾಸ್ಯಸ್ಮಾತ್ಸರ್ವಾಣಿ ಕರ್ಮಾಣಿ ಕೃತಾನಿ ಭವಂತಿ ತಾನ್ಯೇತತ್ಪ್ರೀಣಾತಿ ತಾನಿ ಹವಿಷಾ ದೇವತಾಂ**

**ಕರೋತಿ ... ... ... ... ಸಾ ದೇವತಾ ನ ಸಾ ಯಸ್ಯೈ ನ ಗೃಹ್ಯತೇಽಥೋ ವಿಶ್ವಕರ್ಮಾಯ-ಮಗ್ನಿಸ್ತಮೇವೈತತ್ಪ್ರೀಣಾತಿ ॥**

(ಶ. ಬ್ರಾ. ೯-೫-೧-೪೨)

ಇಲ್ಲಿ ವಿಹಿತವಾಗಿರುವ ಅಗ್ನಿಯು (ಅಗ್ನಿಚಯನವು) ಸಕಲಕರ್ಮಗಳನ್ನೂ ಒಳಗೊಂಡಿದೆ. ಸರ್ವಕರ್ಮಗಳನ್ನೂ ಒಳಗೊಂಡಿರುವುದರಿಂದಲೇ ವಿಶ್ವಕರ್ಮನಿಗೆ ಇಲ್ಲಿ ಆಹುತ್ಯರ್ಪಣೆಯೆಂಬ ವಿಧಿಯಿದೆ. ಅಗ್ನಿಯೇ ವಿಶ್ವಕರ್ಮನಾದುದರಿಂದ, ಅಗ್ನಿಯಲ್ಲಿ ಅರ್ಪಿತವಾದ ಆಹುತಿಯು ಸಕಲ ದೇವತೆಗಳಿಗೂ ಅರ್ಪಿತವಾದಂತೆಯೇ.

**ಯದ್ದತ್ತಂ ಯತ್ಪರಾದಾನಂ । ಯತ್ಪೂರ್ತಂ ಯಾಶ್ಚ ದಕ್ಷಿಣಾಃ । ತದಗ್ನಿರ್ವೈಶ್ವಕರ್ಮಣಃ ಸ್ವರ್ದೇವೇಷು ನೋ ದಧದಿತಿ ಯಚ್ಚೈವ ಸಂಪ್ರತಿ ದದ್ಮೋ ಯಚ್ಚಾಸಂಪ್ರತಿ ತನ್ನೋಽಯಮಗ್ನಿರ್ವೈಶ್ವಕರ್ಮಣಃ ಸ್ವರ್ಗೇ ಲೋಕೇ ದಧಾತ್ವಿತ್ಯೇತತ್ ॥**

(ಶ. ಬ್ರಾ. ೯-೫-೧-೪೯)

ನಮ್ಮಿಂದ ಯಾವ ದಾನವು ಅಗ್ನಿಯನ್ನುದ್ದೇಶಿಸಿ ದತ್ತವಾಗುವುದೋ, ಯಾವ ಸಂಕಲ್ಪವು ನೆರವೇರಲ್ಪಡುವುದೋ, ಯಾವ ಹವಿರಾದಿಗಳು ಅರ್ಪಿತವಾಗುವುವೋ, ಅವೆಲ್ಲವನ್ನೂ ಅಗ್ನಿರೂಪನಾದ ವಿಶ್ವಕರ್ಮನು ದೇವತೆಗಳಲ್ಲಿ ಸ್ಥಾಪಿಸುತ್ತಾನೆ. ವಿಧ್ಯುಕ್ತವಾದ ಋತುಕಾಲಗಳಲ್ಲಾಗಲಿ, ಅಥವಾ ಬೇರೆ ಕಾಲಗಳಲ್ಲಾಗಲಿ, ನಾವು ಯಾವುದನ್ನು ಅರ್ಪಿಸುವೆವೋ, ಅವೆಲ್ಲವನ್ನೂ ದೇವಲೋಕದಲ್ಲಿ ಸ್ಥಾಪಿಸುತ್ತಾನೆ.

**ಯತ್ರ ಧಾರಾ ಅನಪೇತಾಃ । ಮಧೋರ್ಘೃತಸ್ಯ ಚ ಯಾಃ ತದಗ್ನಿರ್ವೈಶ್ವಕರ್ಮಣಃ ಸ್ವರ್ದೇ-ವೇಷು ನೋ ದಧದಿತಿ ಯಚ್ಚೈವ ಯಜಸ್ತಥಾ ಬಂಧುಃ ॥**

(ಶ. ಬ್ರಾ. ೯-೫-೧-೫೦)

ಯಾವ ದೇವಲೋಕದಲ್ಲಿ ವಿಚ್ಛಿತ್ತಿಯಿಲ್ಲದೆ, ಅನುಸ್ಯೂತವಾಗಿ ಮಧುವಿನ ಧಾರೆಗಳೂ, ಘೃತದ ಧಾರೆಗಳೂ ಪ್ರವಹಿಸುವುವೋ, ಆ ಲೋಕದಲ್ಲಿ ಅಗ್ನಿರೂಪನಾದ ವಿಶ್ವಕರ್ಮನು ನಮ್ಮನ್ನು ಸ್ಥಾಪಿಸಲಿ. ನಮ್ಮ ವಿಧ್ಯುಕ್ತವಾದ ಕರ್ಮಕ್ಕೆ ತಕ್ಕ ಫಲವು ಲಭಿಸುವಂತೆ ಮಾಡಲಿ, ಇತ್ಯಾದಿಯಾಗಿ ಅಗ್ನಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವನ್ನು ತೋರಿಸಿ ಅಗ್ನಿಯಲ್ಲಿ (ಅಗ್ನಿಚಯನದಲ್ಲಿ) ಅರ್ಪಿತವಾದ ಸಕಲ ಹೋಮವೂ ವಿಶ್ವಕರ್ಮರೂಪನಾದ ಅಗ್ನಿಗೆ ತೃಪ್ತಿಯನ್ನುಂಟುಮಾಡಿ ತತ್ಫಲವನ್ನು ಕೊಡುತ್ತದೆ ಎಂದು ಪ್ರಶಂಸಿಸಿದೆ.

ವಿಶ್ವಕರ್ಮಪದವು ಆಯಾ ಸಂದರ್ಭಗಳಿಗನುಗುಣವಾಗಿ ಇಂದ್ರ ಮತ್ತು ಆದಿತ್ಯ ಇವರುಗಳ ಸ್ವರೂಪವನ್ನು ಪ್ರಶಂಸಿಸುವ ವಿಶೇಷಣವಾಗಿರುತ್ತದೆ. ಸಕಲವನ್ನೂ ನಿರ್ಮಾಣಮಾಡುವ ಶಕ್ತಿಯೆಂದೇ ಅರ್ಥ. **ಅಗ್ನಿ, ಇಂದ್ರ, ಆದಿತ್ಯ** ಎಂಬ ಹೆಸರುಗಳು ಆಯಾ ಲೋಕಕ್ಕೂ, ಆಯಾ ಕರ್ಮಕ್ಕೂ ಅನುರೂಪಗಳಾದ ಹೆಸರುಗಳೇ ವಿನಾ ಅವು ಮೂಲತತ್ತ್ವದ ತಾತ್ತ್ವಿಕವಾದ ವ್ಯತ್ಯಾಸಭಾವವನ್ನು ತೋರಿಸುವುದಿಲ್ಲ ಎಂದು ಹಿಂದೆ ಅಗ್ನಿಪ್ರಶಂಸಾಕಾಲದಲ್ಲಿ ಅಗ್ನಿಯ ಮೂರುವಿಧವಾದ ರೂಪಗಳ ವಿವರವನ್ನು ಹೇಳುವಾಗ ತಿಳಿಸಿದೆ. ಆದುದರಿಂದ ಅಗ್ನಿಯು ವಿಶ್ವಕರ್ಮನಾದರೆ, ಇಂದ್ರ ಮತ್ತು ಆದಿತ್ಯರೂ ಅದೇ ಸಂಜ್ಞೆಯಿಂದ ನಿರ್ದೇಶಿಸಲ್ಪಡಲು ಯಾವ ಅನೌಚಿತ್ಯವೂ ಇರುವುದಿಲ್ಲ. ಇಂದ್ರನನ್ನು ಇದೇ ವಿಶೇಷಣದಿಂದ ವರ್ಣಿಸುತ್ತ ಋಕ್ಸಂಹಿತೆಯಲ್ಲಿ ಈ ರೀತಿ ತಿಳಿಸಿದೆ—

**ತ್ವಮಿಂದ್ರಾಭಿಭೂರಸಿ ತ್ವಂ ಸೂರ್ಯಮರೋಚಯಃ ।**
**ವಿಶ್ವಕರ್ಮಾ ವಿಶ್ವದೇವೋ ಮಹಾँ ಅಸಿ ॥**
(ಋ. ಸಂ. ೮-೯೮-೨)

ಎಲೈ ಇಂದ್ರನೇ, ನೀನು ಶತ್ರುಗಳನ್ನೆಲ್ಲ ಸೋಲಿಸುವವನಾಗಿದ್ದೀಯೆ. ನೀನು ಆದಿತ್ಯನನ್ನು ಪ್ರಭಾಯುತನನ್ನಾಗಿ ಮಾಡಿದ್ದೀಯೆ. ನೀನು ಸಕಲಕರ್ಮಗಳನ್ನೂ ಮಾಡುತ್ತ (ಸಕಲ ದೇವತೆಗಳ ಕರ್ಮವನ್ನು ನೀನೊಬ್ಬನೇ ಮಾಡುತ್ತ) ಆಯಾ ದೇವತಾಸಂಜ್ಞೆಯಿಂದ ನಿರ್ದಿಷ್ಟನಾಗುತ್ತೀಯೆ ಎಂದು ಇಂದ್ರನ ವಿಶ್ವಕರ್ಮತ್ವವು ಪ್ರಶಂಸಿಸುವ ಸಂದರ್ಭದಲ್ಲಿ ಅವನ ಮಹಿಮೆಯನ್ನು ಈ ವಿಶೇಷಣವು ವಿವರಿಸುತ್ತದೆ.

**ವಿಭ್ರಾಜಞ್ಜ್ಯೋತಿಷಾ ಸ್ವ೧ರಗಚ್ಛೋ ರೋಚನಂ ದಿವಃ ।**
**ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ ವಿಶ್ವದೇವ್ಯಾವತಾ ॥**
(ಋ. ಸಂ. ೧೦-೧೭೦-೪)

ಎಲೈ ಆದಿತ್ಯನೇ, ನೀನು ಸಕಲ ಜಗತ್ತನ್ನೂ ನಿನ್ನ ತೇಜಸ್ಸಿನಿಂದ ಪ್ರಕಾಶಿಸುವಂತೆ ಮಾಡುತ್ತ, ನೀನು ದ್ಯುಲೋಕದಲ್ಲಿ ನಿನ್ನ ಸ್ಥಾನವನ್ನು ಹೊಂದಿದ್ದೀಯೆ. ನಿನ್ನ ತೇಜಸ್ಸುಗಳ ಸಹಾಯದಿಂದ ನೀನು ಸಕಲ ವ್ಯವಹಾರಗಳನ್ನು ನಡೆಸಲು ಶಕ್ತನಾಗಿದ್ದೀಯೆ. ಆದುದರಿಂದಲೇ ನೀನು ವಿಶ್ವಕರ್ಮನು. ಮತ್ತು ಸಕಲ ದೇವತೆಗಳಿಗೂ ಹಿತಕರವಾದ ಯಜ್ಞಕ್ಕೆ ಸಾಧನವಾದ ಉದಕವನ್ನು ನಿನ್ನ ತೇಜಸ್ಸಿನಿಂದಲೇ ಹೀರಿ ಲೋಕಕ್ಕೆ ಹರಡುತ್ತೀಯೆ. ಆದುದರಿಂದಲೇ ಸರ್ವಶಕ್ತನು, ಸರ್ವಕರ್ಮಕುಶಲನು ಇತ್ಯಾದಿಯಾಗಿ ಆದಿತ್ಯನ ಪ್ರಶಂಸೆಯಿರುತ್ತದೆ.

ಹೀಗೆ, ಅಗ್ನಿ, ಇಂದ್ರ, ಆದಿತ್ಯರೂಪಗಳಲ್ಲಿ ಮೂರು ಲೋಕಗಳಲ್ಲೂ ವ್ಯಾಪಿಸಿ ಸಕಲ ಜಗತ್ತಿಗೂ ಕಾರಣವೂ, ಆಧಾರವೂ, ಆಶ್ರಯವೂ ಆದ ಒಂದೇ ತತ್ತ್ವವು ವಿಶ್ವಕರ್ಮನೆಂದು ವ್ಯವಹರಿಸಲ್ಪಡುತ್ತದೆ. ಈ ವಿಷಯವನ್ನೇ ದುರ್ಗಾಚಾರ್ಯರು ತಮ್ಮ ನಿರುಕ್ತಭಾಷ್ಯದಲ್ಲಿ ವಿವರಿಸುತ್ತ ಈ ರೀತಿ ತಿಳಿಸಿದ್ದಾರೆ.

**ಪಾರ್ಥಿವಾಪ್ಯೌ ಧಾತೂ ತೇಜಸಾ ಪರಿಪಚ್ಯಮಾನೌ ವಾಯುಃ ವ್ಯೂಹೇನ ವಿ ಚರನ್ ಸರ್ವಭಾವಾನುಪ್ರವೇಶಂ ಸರ್ವಮಿದಮತ್ಯದ್ಭುತಮಚಿಂತ್ಯಮಕೃತಾತ್ಮಭಿರ್ಜಗತ್ ಕರೋತೀತಿ ಸ ಮಧ್ಯಮಃ । ವಿಶ್ವಕರಣಾದ್ವಿಶ್ವಕರ್ಮಾ ।**
(ನಿ. ಭಾ. ೧೦-೨೫)

ತೇಜಸ್ಸಿನಿಂದ ಪರಿಪಕ್ವವಾಗಿ ಮಾಡಲ್ಪಟ್ಟ ಪೃಥಿವ್ಯಂತರಿಕ್ಷಗಳ ಧಾತುಗಳನ್ನು ವಿಭಾಗಮಾಡಿ ಆಯಾ ಸಂದರ್ಭಾನುಸಾರವಾಗಿ ಹರಡಿ, ತಾನೂ ಅವುಗಳಲ್ಲಿ ಪ್ರವೇಶಿಸಿ ವೈವಿಧ್ಯವನ್ನು ಹೊಂದಿರುವುದೂ, ಅದ್ಭುತವಾದುದೂ ಆದ ಜಗತ್ತನ್ನು ನಿರ್ಮಿಸುತ್ತಾನೆ. ಸಕಲವನ್ನೂ ತನ್ನ ಪ್ರಭಾವದಿಂದಲೇ ನಿರ್ಮಿಸುವುದರಿಂದ ಇವನಿಗೆ ವಿಶ್ವಕರ್ಮನೆಂದು ಹೆಸರು. ಶ್ರುತಿವಾಕ್ಯಗಳೂ ಇದನ್ನೇ ಪ್ರಶಂಸಿಸುತ್ತವೆ. ಉದಾಹರಣೆಗೆ—

**ಅಥೈಷ ವೈಶ್ವಕರ್ಮಣೋ ವಿಶ್ವಾನಿ ಮೇ ಕರ್ಮಾಣಿ ಕೃತಾನ್ಯಾಸನ್ನಿತಿ ವಿಶ್ವಕರ್ಮಾ ಹಿ ಸೋಽಭವತ್ ॥**
(ಮೈ. ಸಂ. ೧-೧೦-೧೬)

ಇತ್ಯಾದಿ ವಿವರಣೆಗಳು ಆದಿತತ್ತ್ವದ ವಿಶ್ವಕರ್ಮತ್ವನ್ನು ಸ್ತುತಿಸುತ್ತವೆ.

ಹೀಗೆ ವರ್ಣಿತವಾಗಿರುವ ವಿಶ್ವಕರ್ಮನು ಜಗತ್ತನ್ನು ಸೃಷ್ಟಿಮಾಡುವ ಸಂಕಲ್ಪಮಾಡಿ, ತನ್ನ ಯಜ್ಞರೂಪವಾದ ಕ್ರಿಯೆಯಿಂದ ಜಗತ್ಸೃಷ್ಟಿಯನ್ನು ಮಾಡಿದನು ಎಂದಿರುತ್ತದೆ. ಈ ವಿಷಯವು ಒಂದು ಇತಿಹಾಸರೂಪದಲ್ಲಿ ಕೆಲವೆಡೆಗಳಲ್ಲಿ ಉಕ್ತವಾಗಿರುತ್ತದೆ.

**ತೇನ ಹೌತೇನ ವಿಶ್ವಕರ್ಮಾ ಭೌವನ ಈಜೇ । ತೇನೇಷ್ಟ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವಮಭವದತಿತಿಷ್ಠತಿ ಸರ್ವಾಣಿ ಭೂತಾನೀದಗ್ಂ ಸರ್ವಂ ಭವತಿ ಯ ಏವಂ ವಿದ್ವಾನ್ತ್ಸ-ರ್ವಮೇಧೇನ ಯಜತೇ ಯೋವೈತದೇವಂ ವೇದ ॥**

(ಶ. ಬ್ರಾ. ೧೩-೭-೧-೧೪)

ವಿಶ್ವಕರ್ಮಭೌವನನು ಈ ಸರ್ವಮೇಧಯಾಗವನ್ನಾಚರಿಸಿದನು. ಇದರ ಫಲವಾಗಿ ಅವನು ಸಕಲ ಭೂತಗಳನ್ನೂ-ಮೀರಿದ ಸ್ಥಾನವನ್ನಾಕ್ರಮಿಸಿದನು. ಮತ್ತು ತಾನೇ ಎಲ್ಲರೂಪಗಳನ್ನೂ ಹೊಂದಿದನು. ಯಾವನು ಈ ಸರ್ವಮೇಧ ಯಾಗವನ್ನಾಚರಿಸುವನೋ, ಅವನೂ ಸಹ ವಿಶ್ವಕರ್ಮನ ಅನುಗ್ರಹದಿಂದ ಅದೇ ರೀತಿ ಸಕಲಭೂತಗಳನ್ನೂ ಆಕ್ರಮಿಸಿದ ಸ್ಥಾನವನ್ನಾಕ್ರಮಿಸಿ ತಾನೂ ಅವೆಲ್ಲದರ ರೂಪಗಳನ್ನೂ ಪಡೆಯುತ್ತಾನೆ ಎಂದಿದೆ.

ಈ ಸಂದರ್ಭದಲ್ಲಿ ಇನ್ನೊಂದು ಪ್ರಕರಣವು ಉಕ್ತವಾಗಿದೆ ಆದರೆ, ಅದರ ತಾತ್ಪರ್ಯವೇನೆಂಬುದನ್ನು ಖಚಿತವಾಗಿ ಹೇಳಲಾಗುವುದಿಲ್ಲ.

**ತಗ್ಂ ಹ ಕಶ್ಯಪೋ ಯಾಜಯಾಂಚಕಾರ। ತದಪಿ ಭೂಮಿಃ ಶ್ಲೋಕಂ ಜಗೌ ನ ಮಾ ಮರ್ತ್ಯಃ ಕಶ್ಚನ ದಾತುಮರ್ಹತಿ ವಿಶ್ವಕರ್ಮನ್ ಭೌವನ ಮಂದ ಆಸಿಥ ಉಪಮಂಕ್ಷ್ಯತಿ ಸ್ಯಾ ಸಲಿ-ಲಾಸ್ಯ ಮಧ್ಯೇ ಮೃಷೈಷ ತೇ ಸಂಗಃ ತೇ ಕಶ್ಯಪಾಯೇತಿ ॥**

(ಶ. ಬ್ರಾ. ೧೩-೭-೧-೧೫)

ಈ ಯಾಗದಲ್ಲಿ ಕಶ್ಯಪನು ವಿಶ್ವಕರ್ಮನಿಗೆ ಸಹಾಯವನ್ನು ಮಾಡಿದನು. ಆಗ ಪೃಥ್ವಿಯು ಈ ಮಾತನ್ನು ಹೇಳುತ್ತದೆ ಎಲೈ ವಿಶ್ವಕರ್ಮಭೌವನನೇ ; ನನ್ನನ್ನು ಯಾವ ಮಾನವನೂ ದಾನಮಾಡಲು ಸಮರ್ಥನಲ್ಲ. ನೀನು ಈ ರೀತಿ ಸಂಕಲ್ಪಿಸಿರುದು ನಿನ್ನ ಮೌಢ್ಯವನ್ನು ಪ್ರದರ್ಶಿಸುತ್ತದೆ. ಈ ಪೃಥ್ವಿಯು ಉದಕದ ಮಧ್ಯೇ ಮುಳುಗುತ್ತದೆ. ನೀನು ಕಶ್ಯಪನಿಗೆ ಮಾಡಿರುವ ಪ್ರತಿಜ್ಞೆಯು ವ್ಯರ್ಥವಾದುದು ಮತ್ತು ಫಲಕಾರಿಯಾಗುವುದಿಲ್ಲ. ಹೀಗೆ ಹೇಳುವುದರ ಸಂದರ್ಭವು ಮೂಲವಾಕ್ಯಗಳಲ್ಲಿ ಅಷ್ಟು ವಿಶದವಾಗಿರುವುದಿಲ್ಲ. ಆದಕ್ಕಾಗಿ ಸಾಯಣರು ತಮ್ಮ ಭಾಷ್ಯದಲ್ಲಿ ಅದನ್ನು ವಿಶದಪಡಿಸಿದ್ದಾರೆ.

**ಅಸ್ಮೈ ಚ ವಿಶ್ವಕರ್ಮಾ ಭೂಮಿಂ ದಾತುಮಿಯೇಷ। ತತ್ರ ಚ ಕಾಲೇ ಭೂಮಿರಪೀಮಂ ಶ್ಲೋಕಂ ಗೀತವತೀ ॥**

(ಶ. ಬ್ರಾ. ೧೩-೭-೧-೧೫)

ತನ್ನ ಯಾಗಕರ್ಮದಲ್ಲಿ ಸಹಾಯಮಾಡಿದ ಕಶ್ಯಪನಿಗೆ ವಿಶ್ವಕರ್ಮನು ಪೃಥ್ವಿಯನ್ನೇ ದಾನಮಾಡಲಿಚ್ಛಿಸಿದನು. ಆಗ ಪೃಥ್ವಿಯು ಅದನ್ನು ಸಹಿಸದೆ ವಿಶ್ವಕರ್ಮನಿಗೆ ಈ ರೀತಿ ಹೇಳಿತು ಎಂದು ಈ ಪೃಥ್ವೀವಾಕ್ಯಕ್ಕೆ ಸಂದರ್ಭವನ್ನು ಸಾಯಣರು ತಿಳಿಸಿದ್ದಾರೆ. ಇದೇ ವಿಷಯವನ್ನು ಐತರೇಯ ಬ್ರಾಹ್ಮಣದಲ್ಲೂ ತಿಳಿಸುತ್ತ :—

**ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಕಶ್ಯಪೋ ವಿಶ್ವಕರ್ಮಾಣಂ ಭೌವನಮಭಿಷಿಷೇಚ ತಸ್ಮಾದು ವಿಶ್ವಕರ್ಮಾ ಭೌವನಃ ಸಮಂತಂ ಸರ್ವತಃ ಪೃಥಿವೀಂ ಜಯನ್ ಪರೀಯಾಯಾಶ್ವೇನ ಚ ಮೇಧ್ಯೇನೇಜೇ ಭೂಮಿರ್ಹ ಜಗಾವಿತ್ಯುದಾಹರಂತಿ ನ ಮಾ ಮರ್ತ್ಯಃ ಕಶ್ಚನ ದಾತುಮರ್ಹತಿ............... ||**

(ಐ. ಬ್ರಾ. ೮-೨೧)

ಮೇಲೆ (ಐ. ಬ್ರಾ. ೮-೨೧) ಪ್ರಶಂಸಿತವಾದ ಐಂದ್ರಾಭಿಷೇಕದಿಂದ ಕಶ್ಯಪನು ವಿಶ್ವಕರ್ಮಭೌವನನ್ನೂ ಸಂಸ್ಕರಿಸಿದನು. ಇದರ ಫಲವಾಗಿ ವಿಶ್ವಕರ್ಮಭೌವನನು ಸಾರ್ವಭೌಮತ್ವವನ್ನು ಹೊಂದಿ ಸಕಲವಾದ ಪೃಥ್ವಿಯನ್ನೂ ಸಂಚರಿಸಿ ಜಯಿಸಿ ಅಶ್ವಮೇಧಯಾಗವನ್ನಾಚರಿಸಿದನು. ಆಗ ಪೃಥ್ವಿಯು (ಕಶ್ಯಪನಿಗೆ ತನ್ನನ್ನು ದಾನಮಾಡುತ್ತಿದ್ದ ವಿಶ್ವಕರ್ಮನನ್ನು ಕುರಿತು) "ಎಲೈ ವಿಶ್ವಕರ್ಮನೇ, ನನ್ನನ್ನು ಯಾರೂ ದಾನಮಾಡಲಾರರು" ಇತ್ಯಾದಿಯಾಗಿ ಹೇಳಿತು ಎಂದು ಕೊಂಚ ವ್ಯತ್ಯಸ್ತವಾದ ರೀತಿಯಲ್ಲಿ ಈ ವಿಷಯವನ್ನು ತಿಳಿಸಿದೆ.

**ವಿಶ್ವಕರ್ಮಾ ಋಷಿರಿತಿ | ವಾಗ್ವೈ ವಿಶ್ವಕರ್ಮಾ ಋಷಿಃ........... ||**

(ಶ. ಬ್ರಾ. ೮-೧-೨-೯)

ಎಂಬ ಮೇಲೆ ಉದಾಹೃತವಾಗಿರುವ ವಾಕ್ಯದಲ್ಲಿಯೂ ಇತರ ಸನ್ನಿವೇಶಗಳಲ್ಲೂ ಸಹ ವಿಶ್ವಕರ್ಮನೇ, ಋಷಿಯೆಂದೂ ತಿಳಿಸಿದೆ. ಋಷಿಶಬ್ದಕ್ಕೆ ಇಲ್ಲಿ ಸರ್ವಜ್ಞನೆಂದರ್ಥ. ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ, ಸರ್ವಕರ್ಮಕುಶಲನೂ ಆದ ವಿಶ್ವಕರ್ಮದೇವನೇ ವಿಶ್ವಕರ್ಮಋಷಿಯು. ಪ್ರಕೃತವಾದ (೧೦-೮೧,೮೨) ಸೂಕ್ತಗಳ ನಿರ್ಮಾತೃವಾದ ಋಷಿಯೂ ಸಹ ಈ ವಿಶ್ವಕರ್ಮಾಖ್ಯನಾಗಿಯೇ ಇದ್ದಾನೆ. ಈ ಮಹರ್ಷಿಯು ಮತದ ಪ್ರಕಾರ ಜಗತ್ತತ್ತ್ವವೇನೆಂಬುದನ್ನು ಸೂಕ್ಷ್ಮವಾಗಿ ಪ್ರಕೃತದಲ್ಲಿ ಪರಿಶೀಲಿಸಬಹುದು.

ಈ ಮಹರ್ಷಿಯ ಮತದ ಪ್ರಕಾರ ಸಕಲ ಜಗತ್ತಿಗೂ ಉದಕವೇ ಮೂಲಾಧಾರವು. **ತಮಿದ್ಗರ್ಭಂ ಪ್ರಥಮಂ ದಧ್ರ ಆಪಃ** || (೧೦-೮೨-೬)

ಆದರೆ, ಈ ಉದಕವೂ ಸಹ ಉತ್ಪನ್ನವಾದ ವಸ್ತುವೇ ಆಗಿರುವುದರಿಂದ; ಇದಕ್ಕೆ ಮೂಲವಾವುದು ಎಂಬ ಪ್ರಶ್ನೆಯೂ ಸಹಜವಾಗಿದೆ. ಆದುದರಿಂದಲೇ, **ಕಂಸ್ವಿದ್ಗರ್ಭಂ ಪ್ರಥಮಂ ದಧ್ರ ಆಪಃ** (೧೦-೮೨-೫) ಎಂಬ ಪ್ರಶ್ನೆಯೂ ಇರುತ್ತದೆ. ಜಗತ್ತಿಗೆಲ್ಲ ಪ್ರಥಮಕಾರಣನು ಈಶ್ವರನು. ಅವನನ್ನೇ **ವಿಶ್ವತಶ್ಚಕ್ಷುಃ** ಇತ್ಯಾದಿ ವಿಶೇಷಣಗಳಿಂದ ವರ್ಣಿಸಿದೆ. ಅವನೊಬ್ಬನೇ ದೇವನು. **ಜನಯನ್ ದೇವ ಏಕಃ** ಅವನೇ ಎಲ್ಲಕ್ಕೂ ಉತ್ಪಾದಕನು. **ಯೋ ನಃ ಪಿತಾ** ಸಕಲ ದೇವತೆಗಳಿಗೂ ಅವನೇ ಆಶ್ರಯನು. **ಯತ್ರ ದೇವಾಃ ಸಮಪಶ್ಯಂತ ವಿಶ್ವೇ.**

ಹೀಗೆ ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ಈಶ್ವರನನ್ನು ಲೌಕಿಕವಾದ ಚಕ್ಷುಸ್ಸಿನಿಂದ ನೋಡಲಾಗುವುದಿಲ್ಲ, **ನ ತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ** ಅವನ ರೂಪವು ಲೋಕದ ಇತರ ರೂಪಗಳಿಂದಲೂ ಭಿನ್ನವು. ಅಜ್ಞಾನದಿಂದ ಆವೃತರಾದ ನಮಗೆ ಅವನ ದರ್ಶನವು ಸಾಧ್ಯವಿಲ್ಲ. ಆದರೆ, ಅವನ ದರ್ಶನವು ಅತ್ಯವಶ್ಯ.

ಯಜ್ಞಕರ್ತೃತ್ವ ಮತ್ತು ಸೃಷ್ಟಿಶಕ್ತಿ ಇವೆರಡೂ ಈ ವಿಶ್ವಕರ್ಮನಲ್ಲಿ ಸೇರಿವೆ. ಅಗ್ನಿಯಲ್ಲಿ ಈ ಎರಡು ಶಕ್ತಿಗಳೂ ಸೇರಿ ಸಾಮರಸ್ಯವನ್ನು ಹೊಂದಿರುವ ವಿಷಯವನ್ನು ಹಿಂದೆ ಪರಿಶೀಲಿಸಿದೆ. ಇದರಂತೆಯೇ, ಆದಿತ್ಯನ ರೂಪಾಂತರವಾದ ಹಿರಣ್ಯಗರ್ಭನಲ್ಲೂ ಈ ಅಂಶಗಳಿರುತ್ತವೆಯೆಂದು ಮುಂದೆ ಹಿರಣ್ಯಗರ್ಭಸೂಕ್ತದಲ್ಲಿ ವಿವೃತವಾಗಿರುತ್ತದೆ. ಅಗ್ನಿಯಲ್ಲಿಯೂ, ಹಿರಣ್ಯಗರ್ಭನಲ್ಲಿಯೂ ಯಾವ ಶಕ್ತಿಗಳು ಸಾಮರಸ್ಯವನ್ನು ಹೊಂದಿವೆಯೋ ಅದೇ ಶಕ್ತಿಗಳು ವಿಶ್ವಕರ್ಮನಲ್ಲೂ ಸಾಮರಸ್ಯವನ್ನು ಹೊಂದಿರುತ್ತವೆ. **ಸ್ವಯಂ ಯಜಸ್ವ ತನ್ವಂ** (೧೦-೮೧-೫) ಎಂಬ ಯಜ್ಞಕರ್ತೃತ್ವಾಂಶವು ಮಾತ್ರ ಅಗ್ನಿಯ ವೈಶಿಷ್ಟ್ಯವನ್ನು ತೋರಿಸುತ್ತದೆ. **ವಿಶ್ವತಶ್ಚಕ್ಷುಃ** ಇತ್ಯಾದಿ ವಿಶೇಷಣಗಳು ಆದಿತ್ಯನ ವೈಶಿಷ್ಟ್ಯವನ್ನು ತೋರಿಸುತ್ತವೆ. ೮೨ನೇ ಸೂಕ್ತದ ೫. ಮತ್ತು ೬ನೇ ಋಕ್ಕುಗಳು ಹಿರಣ್ಯಗರ್ಭಸೂಕ್ತದ ೭ ಮತ್ತು ೮ನೇ ಋಕ್ಕುಗಳಲ್ಲಿ ವಿವೃತವಾಗಿರುವ ಅಂಶಗಳನ್ನು ತಿಳಿಸುತ್ತವೆ. ಈ ಎರಡು ಸನ್ನಿವೇಶಗಳೂ ಸಹ ಆದಿತ್ಯರೂಪದ ಆದಿತತ್ತ್ವವನ್ನೇ ಪ್ರಶಂಸಿಸುವುದಾಗಿದೆ.

ಇದೇ ವಿಧವಾದ ವಿವರಣವು ತೈತ್ತಿರೀಯ ಸಂಹಿತೆಯಲ್ಲಿಯೂ ಇರುತ್ತದೆ. ಮುಖ್ಯವಾದ ಅಂಶಗಳೆಲ್ಲವೂ ಋಕ್ಸಂಹಿತೆಯಲ್ಲಿರುವಂತೆಯೇ ಇರುತ್ತವೆ. ಆದರೆ, ಋಕ್ಸಂಹಿತೆಯಲ್ಲಿಲ್ಲದ ವಿವರಣವನ್ನು ಮಾತ್ರ ಇಲ್ಲಿ ಉದಾಹರಿಸಿ ವಿವರಿಸಲಾಗುತ್ತದೆ.

**ವಿಶ್ವಕರ್ಮಾಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ । ತೃತೀಯಃ ಪಿತಾ ಜನಿತೌಷಧೀನಾಮಪಾಂ ಗರ್ಭಂ ವ್ಯದಧಾತ್ ಪುರುತ್ರಾ ॥**

(ತೈ. ಸಂ. ೪-೬-೨-೩)

ದೇವತಾತ್ಮನಾದ ವಿಶ್ವಕರ್ಮನು ಮೊದಲು ಉತ್ಪನ್ನನಾದನು. ಎರಡನೆಯದಾಗಿ ಗಂಧರ್ವನೂ ಮೂರನೆಯದಾಗಿ ಓಷಧಿಗಳಿಗೆ ಉತ್ಪಾದಕನಾದ ಪಿತೃವೂ ಜನಿಸಿದರು. ಮತ್ತು ಅನೇಕ ಕಡೆಗಳಲ್ಲಿ ಉದಕರೂಪವಾದ ಗರ್ಭವು ಸ್ಥಾಪಿತವಾಯಿತು, ಎಂಬ ಈ ವಿವರಣವು ವಿಶ್ವಕರ್ಮನ ಜನ್ಮವನ್ನು ತಿಳಿಸುತ್ತದೆ. ಅಲ್ಲದೇ,

**ವಿಶ್ವಕರ್ಮನ್ ಹವಿಷಾ ವರ್ಧನೇನ ತ್ರಾತಾರಮಿಂದ್ರಮಕೃಣೋರವಧ್ಯಂ । ತಸ್ಮೈ ವಿಶಃ ಸಮನಮಂತ ಪೂರ್ವೀರಯಮುಗ್ರೋ ವಿಹವ್ಯೋ ಯಥಾಸತ್ ॥**

(ತೈ. ಸಂ. ೪-೬-೩-೬)

ಎಲೈ ವಿಶ್ವಕರ್ಮನೇ, ಶಕ್ತಿದಾಯಕವಾದ ಹವಿಸ್ಸಿನಿಂದ ಉತ್ಸಾಹವನ್ನು ಹೊಂದಿ ಲೋಕಪಾಲಕನಾದ ಇಂದ್ರನನ್ನು ಹಾನಿಯಿಂದ ತಪ್ಪಿಸಿದೆ. ಅವನಿಗೆ ಪುರಾತನರಾದ ಋಷಿಗಳೆಲ್ಲರೂ ತಮ್ಮ ಭಕ್ತಿಯುತವಾದ ಪ್ರಣಾಮಗಳನ್ನರ್ಪಿಸಿದರು. ಅವನಿಗೆ ಎಲ್ಲರೂ ಭಕ್ತಿಯನ್ನು ತೋರಿಸಿ ಅವನನ್ನು ಆಹ್ವಾನಕ್ಕೆ ಪಾತ್ರನನ್ನಾಗಿ ಮಾಡಿದರು. ಅವೆಲ್ಲವೂ ನಿನ್ನ ಪ್ರಭಾವ, ಎಂಬುದು ವಿಶ್ವಕರ್ಮನ ಅತಿಶಯವಾದ ಶಕ್ತಿಯನ್ನು ತೋರಿಸುತ್ತದೆ. ಆದುದರಿಂದಲೇ,

**ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಹಾಮರ್ತ್ಯಗ್ಂ ಹವಿಃ ॥**

(ತೈ. ಸಂ. ೪-೬-೨-೬)

ನದಿಗಳ ಪ್ರಭುವೂ ಚಲನಾತ್ಮಕವೂ ಆದ ಸಮುದ್ರಕ್ಕೆ ಪ್ರಣಾಮವು, ನದಿಗಳಿಗೆ ಪ್ರಭುವಾದ ವಿಶ್ವಕರ್ಮನನ್ನುದ್ದೇಶಿಸಿ ನಿತ್ಯವಾದ ಆಹುತಿಯನ್ನರ್ಪಿಸಿರಿ ಎಂದು ವಿಶ್ವಕರ್ಮನ ಮಹತ್ತ್ವಕ್ಕನುಗುಣವಾದ ಪೂಜೆಯನ್ನು ವಿಧಿಸಿದೆ.

ಋಕ್ಸಂಹಿತೆಯಲ್ಲಿ ವರ್ಣಿತವಾಗದೇ ಇರುವ ವಿಶ್ವಕರ್ಮನ ಕೆಲವು ವಿಶೇಷಾಂಶಗಳು ತೈತ್ತಿರೀಯಸಂಹಿತೆಯಲ್ಲಿ ಪಠಿತವಾಗಿರುವ ಈ ಭಾಗಗಳಿಂದ ತಿಳಿಯುತ್ತದೆ.

ವಿಶ್ವಕರ್ಮರೂಪನಾದ ಪ್ರಜಾಪತಿಯು ಯಜ್ಞ ರೂಪದಲ್ಲಿ ವಿಶ್ವವನ್ನು ಸಂಹರಿಸುವುದು ; ಆಹುತಿರೂಪದಲ್ಲಿ ತನ್ನಲ್ಲೇ ಅರ್ಪಿತವಾದ ವಿಶ್ವವನ್ನು ಪುನಃ ವಿಸ್ತರಿಸಬೇಕೆಂದು ಆಶಿಸುವುದು ಮತ್ತು ವಿಸ್ತೃತವಾದ ವಿಶ್ವದ ಸಕಲ ವಸ್ತುಗಳೊಂದಿಗೂ ತಾನೂ ವ್ಯಾಪಿಸುವುದು ಈ ವಿಷಯಗಳು ಪ್ರಥಮ ಋಕ್ಕಿನಲ್ಲಿ (೧೦-೮೧-೧) ವರ್ಣಿತವಾಗಿವೆ. **ಪ್ರತಮತಃ** ಈ ಅಂಶಗಳನ್ನು ಪರಿಶೀಲಿಸುವುದು ಪ್ರಕೃತವಾಗಿರುತ್ತದೆ. ಈ ವಿಷಯಗಳನ್ನು ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ.

ಕೆಲವು ಭಾವನಾರೂಪದೇವತೆಗಳು ಅಂದರೆ ಮನಸ್ಸಿನ ಕೆಲವು ಭಾವನೆಗಳಿಗೆ ದೇವತೆಗಳೆಂಬ ವ್ಯವಹಾರವು ಕಂಡುಬರುತ್ತದೆ. ಈ ಕ್ರಿಯೆಗಳೆಲ್ಲವೂ ಸರ್ವೋತ್ತಮನಾದ ಒಬ್ಬದೇವನಿಗೆ ಸೇರಿವೆ. ವಿಶ್ವಕರ್ಮಾ ಎಂಬುದು ಇಂತಹ ನಾಮಗಳಲ್ಲಿ ಒಂದು. ಹತ್ತನೆಯ ಮಂಡಲ ಒಂದರಲ್ಲಿ ಮಾತ್ರ, ಕೇವಲ ಐದುಸಲ ಈ ಹೆಸರು ಬಂದಿದೆ. ಈ ದೇವತೆಯನ್ನು ಸ್ತುತಿಸುವ ಎರಡು ಸೂಕ್ತಗಳು (೧೦–೮೧ ; ೧೦-೮೨) ಇವೆ. ಇದೇ ವಿಶ್ವಕರ್ಮಾ ಎಂಬುದು ಒಂದು ಸಲ ಇಂದ್ರನಿಗೆ (೪.೮೭–೨) ವಿಶೇಷಣವಾಗಿಯೂ ಒಂದು ಸಲ (೧೦–೧೭೦-೪) ಸಮಸ್ತವನ್ನೂ ಸೃಜಿಸುವ ಸೂರ್ಯನಿಗೆ ವಿಶೇಷಣವಾಗಿಯೇ ಪ್ರಯೋಗಿಸಿದೆ. ಇತರ ವೇದಗಳಲ್ಲಿ ವಿಶೇಷಣವಾಗಿ ಪ್ರಯೋಗವು ಸಾಮಾನ್ಯವಾಗಿದೆ. ಪ್ರಜಾಪತಿಗೂ ವಿಶೇಷಣವಾಗಿದೆ (ವಾ.ಸಂ. ೧೨.೬೧) ಋಗ್ವೇದದ ಎರಡು ಸೂಕ್ತಗಳಲ್ಲಿ ವಿಶ್ವಕರ್ಮನು ಈ ರೀತಿ ವರ್ಣಿತನಾಗಿದಾನೆ. ಅವನು ಸರ್ವದರ್ಶಿ ; ಅವನಿಗೆ ಎಲ್ಲಾ ಪಾರ್ಶ್ವಗಳಲ್ಲೂ ಕಣ್ಣುಗಳು, ಒಂದುಮುಖ, ಬಾಹುಗಳು, ಪಾದಗಳು ಇವೆ. ಈ ವರ್ಣನೆಯಂತೆ, ವಿಶ್ವಕರ್ಮನು ಚತುರ್ಮುಖನೂ, ಚತುರ್ಬಾಹುವೂ ಆದ ಬ್ರಹ್ಮನನ್ನು ಹೋಲುತ್ತಾನೆ. ಅವನಿಗೆ ರೆಕ್ಕೆಗಳೂ ಇವೆ. ಆತನು ಒಬ್ಬ ಋಷಿ, ಪುರೋಹಿತ ಮತ್ತು ಜನಕ ಅವನು ವಾಚಸ್ಪತಿ : ಮನೋವೇಗವುಳ್ಳವನು ; ಉಪಕಾರಿ ; ಸಮಸ್ತವಿಧವಾದ ಅಭಿವೃದ್ಧಿಗೂ ಮೂಲಭೂತನು. ಅವನಿಗೆ ಎಲ್ಲಾ ಪ್ರದೇಶಗಳೂ, ಎಲ್ಲಾ ಪ್ರಾಣಿಗಳೂ ಪರಿಚಿತವಾಗಿವೆ ; ಅವನೇ ದೇವತೆಗಳಿಗೆಲ್ಲಾ ಅವುಗಳ ಹೆಸರನ್ನು ತಿಳಿಸುವವನು. ಜ್ಞಾನಿ ಮತ್ತು ಸಮರ್ಥ ; ಅತಿಮಾನುಷ ವ್ಯಕ್ತಿಗಳಲ್ಲಿ ಪರಮೋತ್ತಮನು. ಸಮಸ್ತಕ್ಕೂ ಆಧಾರಭೂತನು ಮತ್ತು ಭಯಾನಕನು ; ಅವನೇ ಭೂಮಿಯನ್ನು ಸೃಜಿಸಿ, ಆಕಾಶವನ್ನು ಪ್ರಕಾಶಕ್ಕೆ ತಂದವನು. ಪ್ರಾಯಶಃ, ಈ ಪದವು ಮೊದಲು ಮುಖ್ಯವಾಗಿ ಸೂರ್ಯನ ವಿಶೇಷಣವಾಗಿ ಪ್ರಯೋಗಿಸಲ್ಪಡುತ್ತಿದ್ದು, ಮುಂದೆ ಬೇರೆ ಒಂದು ದೇವತೆಯೆಂದು ಪರಿಗಣಿತವಾಗಿರಬಹುದು. ಶಿಲ್ಪಕಲೆಯೇ ಈ ದೇವತೆಯ ವೈಶಿಷ್ಟ್ಯ. ಬ್ರಾಹ್ಮಣಗಳಲ್ಲಿ ವಿಶ್ವಕರ್ಮಾ ಮತ್ತು ಪ್ರಜಾಪತಿಗಳು ಒಂದೇ ಎಂದು ಸ್ಪಷ್ಟವಾಗಿ ಹೇಳಿದೆ. (ಶ. ಬ್ರಾ- ೮-೨-೧-೧೦ ; ೮-೨-೨-೧೩ ; ಐ. ಬ್ರಾ. ೪-೨೨ನ್ನು ಹೋಲಿಸಿ)- ಪುರಾಣಾದಿಗಳಲ್ಲಿ ವಿಶ್ವಕರ್ಮನು ದೇವತೆಗಳ ಬಡಗಿ ಇತ್ಯಾದಿ ವಿವರಣೆಗಳಿವೆ.

**। ಸಾಯಣಭಾಷ್ಯಂ ।**

**ಯ ಇಮೇತಿ ಸಪ್ತರ್ಚಂ ತ್ರಯೋದಶಂ ಸೂಕ್ತಂ ಭುವನಪುತ್ರಸ್ಯ ವಿಶ್ವಕರ್ಮಣ ಆರ್ಷಂ ತ್ರೈಷ್ಟುಭಂ ವಿಶ್ವಕರ್ಮದೈವತ್ಯಂ । ತಥಾ ಚಾನುಕ್ರಾಂತಂ । ಯ ಇಮಾ ವಿಶ್ವಕರ್ಮಾ ಭೌವನೋ**

ವೈಶ್ವಕರ್ಮಣಂ ತ್ವಿತಿ ॥ ಗತಃ ಸೂಕ್ತವಿನಿಯೋಗಃ ॥ ಅತ್ರ ವಾಜಸನೇಯಕಂ । ಬ್ರಹ್ಮ ವೈ ಸ್ವಯಂಭೂಸ್ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವೇತ್ಯಾದಿ । ಶತ. ೧೩-೭-೧ ॥

ಅನುವಾದವು—**ಯ ಇಮಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭುವನಪುತ್ರನಾದ ವಿಶ್ವಕರ್ಮಾ ಎಂಬುವನು ಋಷಿಯು ; ವಿಶ್ವಕರ್ಮನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯ ಇಮಾ ಭೌವನೋ ವೈಶ್ವಕರ್ಮಣಂ ತು** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ವಾಜಸನೇಯಿಶ್ರುತಿಯ ಶತಪಥಬ್ರಾಹ್ಮಣದಲ್ಲಿ—**ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವಾ ।** (ಶ. ಬ್ರಾ. ೧೩-೭-೧) ಇತ್ಯಾದಿಯಾಗಿ ಹೇಳಿರುವುದು.

## ಸೂಕ್ತ—೮೧

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೮೧ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಿಶ್ವಕರ್ಮಾ ಭೌವನಃ ॥
ದೇವತಾ—ವಿಶ್ವಕರ್ಮಾ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನ್ಯಸೀದತ್ಪಿತಾ ನಃ ।
ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾಁ ಆ ವಿವೇಶ ॥ ೧ ॥

॥ ಪದಪಾಠಃ ॥

ಯಃ । ಇಮಾ । ವಿಶ್ವಾ । ಭುವನಾನಿ । ಜುಹ್ವತ್ । ಋಷಿಃ । ಹೋತಾ । ನಿ । ಅಸೀದತ್ । ಪಿತಾ । ನಃ ।
ಸಃ । ಆಽಶಿಷಾ । ದ್ರವಿಣಂ । ಇಚ್ಛಮಾನಃ । ಪ್ರಥಮಽಛತ್ । ಅವರಾನ್ । ಆ । ವಿವೇಶ ॥ ೧ ॥

॥ ಸಾಯಣಭಾಷ್ಯಂ ॥

ಅತ್ರ ನಿರುಕ್ತಂ । ವಿಶ್ವಕರ್ಮಾ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ ಸ ಆತ್ಮಾನಮಪ್ಯಂತತೋ ಜುಹವಾಂಚಕಾರ । ತದಭಿವಾದಿನ್ಯೇಷರ್ಗ್ಭವತಿ ಯ ಇಮಾ ವಿಶ್ವಾ ಭುವನಾನಿ

ಜುಹ್ವದಿತಿ । ನಿ. ೧೦-೨೬ । ಇತಿ ॥ ಯೋ ವಿಶ್ವಕರ್ಮೈತನ್ನಾಮಕ ಋಷಿರ್ಭುವನಪುತ್ರೋ ಹೋತಾ ಹೋಮನಿಷ್ಪಾದಕಃ ಸನ್ವಿಶ್ವಾ ಸರ್ವಾಣಿ ಭುವನಾನಿ ಜುಹ್ವದ್ಧೋಮಂ ಕುರ್ವನ್ । ಪ್ರಥಮಂ ಸರ್ವಂ ಜಗದ್ಧುತ್ವೇತ್ಯರ್ಥಃ । ಪಶ್ಚಾದಗ್ನೌ ನ್ಯಸೀದತ್ ಪಿತಾ ಜನಕಃ । ಆತ್ಮಕೃತೇನ ಕರ್ಮಣಾ ದೇಹೋತ್ಪತ್ತೇಃ । ನ ಚೈಕಸ್ಯ ಜನ್ಯಜನಕಭಾವೋ ವಿರುಧ್ಯತೇ ತಪೋಬಲೇನ ಶರೀರದ್ವಯಸ್ವೀಕಾರಾತ್ । ಸ ಏಕಧಾ ಭವತಿ । ಛಾಂ. ಉ. ೭-೨೬-೨ । ಇತ್ಯಾದಿಶ್ರುತೇಃ । ಸ ಋಷಿರಾಶಿಷಾಶಿಷ್ಪ್ರತಿಪಾದಕೇನ ಸೂಕ್ತವಾಕಾದಿನಾ ದ್ರವಿಣಂ ಧನಂ ಸ್ವರ್ಗಾಖ್ಯಮಿಚ್ಛಮಾನಃ ಕಾಮಯಮಾನಃ ಪ್ರಥಮಚ್ಛತ್ಪ್ರಥಮಮಗ್ನೇರ್ಭುವನೈರಾಚ್ಛಾದಯಿತಾವರಾನ್ವಿಪ್ರಕೃಷ್ಟಾನ್ಭೂತಾನ್ಸ್ವಾತ್ಮನಾಹುತಾನಾ ವಿವೇಶ । ಆವಿಷ್ಟವಾನಗ್ನಿಮಿತ್ಯುಕ್ತಾರ್ಥ ಏವ ಪುನರ್ವಿಶೇಷೇಣೋಕ್ತಃ । ಏವಮುತ್ತರತ್ರಾಧಿಯಜ್ಞಪರತಯಾ ಯೋಜ್ಯಂ॥ ಅಥಾಧ್ಯಾತ್ಮಪ್ರಸಿದ್ಧ್ಯೋಚ್ಯತೇ । ಯೋ ವಿಶ್ವಕರ್ಮಾ ಪರಮೇಶ್ವರ ಇಮಾ ವಿಶ್ವಾ ಭುವನಾನಿ ಜುಹ್ವತ್ಪ್ರಲಯಕಾಲೇ ಪೃಥಿವ್ಯಾದೀನಿಮಾನ್ಸಪ್ತ ಲೋಕಾನ್ಸ್ವಾತ್ಮನ್ಯಾಹುತಿಪ್ರಕ್ಷೇಪವತ್ಸಂಹರನ್ನೃಷಿರತೀಂದ್ರಿಯದ್ರಷ್ಟಾ ಸರ್ವಜ್ಞೋ ಹೋತಾ ಸಂಹಾರರೂಪಸ್ಯ ಹೋಮಸ್ಯ ಕರ್ತಾ ನೋಽಸ್ಮಾಕಂ ಪಿತಾ ಜನಕೋ ನಿಷಸಾದ ಸ್ವಯಂ ಸ್ಥಿತವಾನ್ । ಅಯಮರ್ಥಃ । ಪ್ರಲಯಕಾಲೇ ಪ್ರಾಪ್ತೇ ಸತಿ ಸರ್ವಾಲ್ಲೋಕಾನ್ಸಂಹೃತ್ಯಾಸ್ಮಾಕಮಪಿ ಸಂಹರ್ತಾ ಪುನಃ ಸ್ರಷ್ಟಾ ಚ ಸನ್ ಸರ್ವಜ್ಞೋ ಯಃ ಪರಮೇಶ್ವರಃ ಸ್ವಯಮೇಕ ಏವಾಸೀತ್ । ತಥಾ ಹಿ ಶ್ರುತಯಃ । ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ಐ. ಆ. ೨-೪-೧ । ಸದೇವ ಸೋಮ್ಯೇದಮಗ್ರ ಆಸೀತ್ । ಛಾಂ. ಉ. ೬-೨-೧ । ಇತ್ಯಾದಿಕಾಃ । ಸ ತಾದೃಶಃ ಪರಮೇಶ್ವರ ಆಶಿಷಾ ಬಹುಃ ಸ್ಯಾಂ ಪ್ರಜಾಯೇಯೇತ್ಯೇವಂರೂಪಯಾ ಪುನಃಪುನಃ ಸಿಸೃಕ್ಷಯಾ ದ್ರವಿಣಮಿಚ್ಛಮಾನಃ ಧನೋಪಲಕ್ಷಿತಂ ಜಗದ್ಭೋಗಮಾಕಾಂಕ್ಷಮಾಣಃ ಪ್ರಥಮಚ್ಛತ್ಪ್ರಥಮಂ ಮುಖ್ಯಂ ನಿಷ್ಪ್ರಪಂಚಂ ಪಾರಮಾರ್ಥಿಕಂ ರೂಪಮಾವೃಣ್ವನ್ನವರಾನ್ಸ್ವಸೃಷ್ಟಾನ್ಪ್ರಾಣಿಹೃದಯಪ್ರದೇಶಾನಾ ವಿವೇಶ । ಆವಿಷ್ಟವಾಞ್ಜೀವರೂಪೇಣ । ತಥಾ ಚ ಶ್ರೂಯತೇ । ಸೋಽಕಾಮಯತ ಬಹುಃ ಸ್ಯಾಂ ಪ್ರಜಾಯೇಯೇತಿ ಸ ತಪೋಽತಪ್ಯತ ಸ ತಪಸ್ತಪ್ತ್ವೇದಂ ಸರ್ವಮಸೃಜತ ಯದಿದಂ ಕಿಂಚ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ । ತೈ. ಆ. ೮-೬ । ಇತಿ । ಏವಮನ್ಯಾ ಅಪ್ಯುಪನಿಷದ ಉದಾಹಾರ್ಯಾಃ ॥

। ಪ್ರತಿಪದಾರ್ಥ ।

ಋಷಿಃ—ಸರ್ವಜ್ಞನೂ । **ಹೋತಾ**— ಹೋಮಸಂಪಾದಕನೂ ಆದ । **ಯಃ**—ಯಾವ ವಿಶ್ವಕರ್ಮನು । ವಿಶ್ವಾ—ಸಮಸ್ತವಾದ । **ಇಮಾ ಭುವನಾನಿ**—ಈಲೋಕಗಳನ್ನು । **ಜುಹ್ವತ್**—ಆಹುತಿರೂಪದಲ್ಲಿ ಅರ್ಪಿಸಿ । ನ್ಯಸೀದತ್—ತನ್ನ ದಿವ್ಯಸ್ಥಾನದಲ್ಲಿ ಕುಳಿತನೋ । **ಸಃ**—ಅಂತಹ । **ನಃ ಪಿತಾ**—ನಮಗೆಲ್ಲಾ ಉತ್ಪಾದಕನಾದ ಅದೇ ವಿಶ್ವಕರ್ಮನು । **ಆಶಿಷಾ**— ಆಶೀರ್ವಾದಪೂರ್ವಕವಾದ । **ದ್ರವಿಣಂ**—ಧನವನ್ನು । **ಇಚ್ಛಮಾನಃ**— ಅಪೇಕ್ಷಿಸಿಯೂ । **ಪ್ರಥಮಚ್ಛತ್**—ಪ್ರಥಮದಲ್ಲಿ ಸರ್ವವನ್ನೂ ಅಗ್ನಿರೂಪದಲ್ಲಿ ವ್ಯಾಪಿಸಿದವನಾಗಿಯೂ । **ಅವರಾನ್**— ತನ್ನಿಂದ ಅರ್ಪಿತವಾದ ಸಕಲ ಭೂತಗಳನ್ನೂ । **ಆ ವಿವೇಶ**—ಪ್ರವೇಶಿಸಿದನು.

॥ ಭಾವಾರ್ಥ ॥

ಸರ್ವಜ್ಞನೂ, ಹೋಮಸಂಪಾದಕನೂ ಆದ ಯಾವ ವಿಶ್ವಕರ್ಮನು ಸಕಲವಾದ ಲೋಕಗಳನ್ನೂ ಆಹುತಿ ರೂಪದಲ್ಲಿ ಅರ್ಪಿಸಿ ತನ್ನ ದಿವ್ಯಸ್ಥಾನದಲ್ಲಿ ಕುಳಿತನೋ, ಅಂತಹ ನಮಗೆಲ್ಲ ಉತ್ಪಾದಕನಾದ ಅದೇ ವಿಶ್ವಕರ್ಮನು ಆಶೀರ್ವಾದಪೂರ್ವಕವಾದ ಧನವನ್ನು ಅಪೇಕ್ಷಿಸಿಯೂ, ಪ್ರಥಮದಲ್ಲಿ ಸರ್ವವನ್ನೂ ಅಗ್ನಿರೂಪದಲ್ಲಿ ವ್ಯಾಪಿಸಿಯೂ, ತನ್ನಿಂದ ಆರ್ಪಿತವಾದ ಸಕಲ ಭೂತಗಳನ್ನೂ ಪ್ರವೇಶಿಸಿದನು.

## English Translation

The Rishi, the Hotri, our father who offering all these worlds has taken has seat ; desiring wealth by pious benedictions, the first inventor has entered inferior (beings).

## ॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವಿಶ್ವಕರ್ಮನ ಮುಖ್ಯವಾದ ನಾಲ್ಕು ಕ್ರಿಯೆಗಳು ವರ್ಣಿತವಾಗಿವೆ. ಅವುಗಳಲ್ಲಿ ಮೊದಲನೆಯದಾಗಿ ;—

೧) **ಯಃ ಇಮಾ ವಿಶ್ವಾ ಭುವನಾನಿ ಜುಹ್ವತ್** ;—ವಿಶ್ವಕರ್ಮನು ಈ ಸಕಲವಿಶ್ವವನ್ನೂ ಯಜ್ಞಾಹುತಿ ರೂಪದಲ್ಲಿ ಅರ್ಪಿಸಿದನು ಎಂಬ ವಿಷಯ. ಎರಡನೆಯದಾಗಿ,

೨) **ಸ ಆಶಿಷಾ ದ್ರವಿಣಮಿಚ್ಛಮಾನಃ**—ಆಹುತಿರೂಪದಲ್ಲಿ ಅರ್ಪಿಸಿದ ಈ ಜಗತ್ತನ್ನೇ ಪುನಃಪುನಃ ಸೃಷ್ಟಿಮಾಡಬೇಕೆಂಬ ಅಪೇಕ್ಷೆ. ಮೂರನೆಯದಾಗಿ,

೩) **ಪ್ರಥಮಚ್ಛತ್** ;—ನಿಷ್ಪ್ರಪಂಚವೂ ಪಾರಮಾರ್ಥಿಕವೂ ಆದ ರೂಪವನ್ನು ಹೊಂದಿರುವುದು. ಮತ್ತು ಕೊನೆಯದಾಗಿ,

೪) **ಅವರಾನ್ ಆ ವಿವೇಶಃ** :—ತನ್ನ ಇಚ್ಛೆಯಿಂದಲೇ ಸೃಷ್ಟವಾದ ಸಕಲ ಭೂತಗಳ ಹೃದಯಗಳಲ್ಲೂ ಪ್ರವೇಶಿಸಿ ಸರ್ವಾಂತರ್ಯಾಮಿಯಾಗಿರುವುದು ಹೀಗೆ ಸೃಷ್ಟಿಸ್ಥಿತಿಲಯಕಾರ್ಯಗಳು ವರ್ಣಿತವಾಗಿವೆ. ಇಲ್ಲಿ ಇನ್ನೊಂದು ವಿಷಯವು ಗಮನಾರ್ಹ. ಸೃಷ್ಟ್ಯಾದಿಕಾರ್ಯಗಳಲ್ಲಿ ಪ್ರಥಮತಃ ಸೃಷ್ಟಿಯು ವರ್ಣಿತವಾಗಿಲ್ಲ. ಮೊದಲು ಪ್ರಳಯರೂಪವಾದ ಕ್ರಿಯೆ ; ಅನಂತರ ಸೃಷ್ಟಿಯ ಇಚ್ಛೆ, ತದನಂತರ ಸೃಷ್ಟಿ ; ಕೊನೆಯಲ್ಲಿ ಸೃಷ್ಟಿಸಿದ ಜಗತ್ತಿನಲ್ಲಿ ತನ್ನ ವ್ಯಾಪಕತ್ವ; ಈ ಕ್ರಮದಲ್ಲಿ ವಿಶ್ವಕರ್ಮನ ಕ್ರಿಯೆಗಳು ಪ್ರಶಂಸಿತವಾಗಿವೆ.

೧

ಸೃಷ್ಟವಾದ ಜಗತ್ತನ್ನು ಪ್ರಳಯಕಾಲದಲ್ಲಿ ತನ್ನಲ್ಲೇ ಅಡಗಿಸಿಕೊಂಡು ತಾನು ಮಾತ್ರ ಅದ್ವಿತೀಯನಾಗಿರತಕ್ಕದ್ದು ಈಶ್ವರನ ಲೀಲೆಗಳಲ್ಲೊಂದು. ಈ ಕಾರ್ಯವು ಜಗತ್ತಿನ ದೃಷ್ಟಿಯಿಂದ ನಾಶರೂಪವಾದರೂ, ಈಶ್ವರನ ದೃಷ್ಟಿಯಿಂದ ಕೇವಲ ಅವಸ್ಥಾವಿಶೇಷವೆಂದು ಪರಿಗಣಿತವಾಗುತ್ತದೆ. ಪ್ರಳಯರೂಪವಾದ ಈ ಆಹುತ್ಯರ್ಪಣವು ಅನೇಕ ಸನ್ನಿವೇಶಗಳಲ್ಲಿ ವಿವೃತವಾಗಿರುತ್ತದೆ. ನಿರುಕ್ತಕಾರರು ಇಂತಹ ಒಂದು ಸಂದರ್ಭವನ್ನು ತಿಳಿಸುತ್ತ,

**ತತ್ರೇತಿಹಾಸಮಾಚಕ್ಷತೇ । ವಿಶ್ವಕರ್ಮಾ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹ. ವಾಂಚಕಾರ । ಸ ಆತ್ಮಾನಮಪ್ಯಂತತೋ ಜುಹವಾಂಚಕಾರ । ತದಭಿವಾದಿನ್ಯೇಷರ್ಗ್ಭ. ವತಿ । ಯ ಇಮಾ ವಿಶ್ವಾ ಇತಿ ॥**

(ನಿ. ೧೦-೨೬)

ಈ ಸಂದರ್ಭವನ್ನು ಇತಿಹಾಸರೂಪದಲ್ಲಿ ಹೇಳಿದೆ. ಭುವನಪುತ್ರನಾದ ವಿಶ್ವಕರ್ಮನು ಸರ್ವಮೇಧಯಾಗದಲ್ಲಿ ಸಕಲ ಭೂತಗಳನ್ನೂ ಆಹುತಿರೂಪದಲ್ಲಿ ಅರ್ಪಿಸಿದನು. ಕೊನೆಯಲ್ಲಿ ತನ್ನನ್ನೂ ಆಹುತಿರೂಪದಲ್ಲಿ ಅರ್ಪಿಸಿದನು ಎಂಬುದನ್ನು **ಯ ಇಮಾ ವಿಶ್ವಾ** (೧೦-೮೧-೧) ಎಂಬ ಮಂತ್ರವು ಸ್ಪಷ್ಟಪಡಿಸುತ್ತದೆ ಎಂದಿದ್ದಾರೆ. ಈ ಆಹುತ್ಯರ್ಪಣಕ್ರಿಯೆಯನ್ನೇ ಶತಪಥಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ.

**ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಗ್ಂ ಹುತ್ವಾ ಭೂತಾನಿ ಚಾತ್ಮನಿ ಸರ್ವೇಷಾಂ ಭೂತಾನಾಗ್ ಶ್ರೈಷ್ಠ್ಯಗ್ಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ॥**

(ಶ ಬ್ರಾ. ೧೩-೭-೧-೧)

**ತೇನೈತೇನ ವಿಶ್ವಕರ್ಮಾ ಭೌವನ ಈಜೇ । ತೇನೇಷ್ಟ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವಮಭವತ್ .... ...... ...... .... ಯ ಏವಂ ವಿದ್ವಾನ್ .... .... .... ॥**

(ಶ. ಬ್ರಾ. ೧೩-೭-೧-೧೪)

ಸ್ವಯಂಭುಸಂಜ್ಞಕನಾದ ಬ್ರಹ್ಮನು ತಪಸ್ಸನ್ನಾಚರಿಸುತ್ತಿದ್ದನು. ಆಗ ಈ ರೀತಿ ಯೋಚಿಸಿದನು. ತಪಸ್ಸು ಅನಂತವಾಗಿರತಕ್ಕದ್ದಲ್ಲ. ಇದರ ಪರ್ಯಾಯವಾಗಿ ನಾನು ಸರ್ವಮೇಧವನ್ನಾಚರಿಸುತ್ತೇನೆ. ನಾನು ನನ್ನನ್ನೇ ಭೂತಗಳಲ್ಲಿ ಆಹುತಿರೂಪದಲ್ಲಿ ಅರ್ಪಿಸುತ್ತೇನೆ. ಮತ್ತು ಭೂತಗಳನ್ನು ನನ್ನಲ್ಲೇ ಆಹುತಿರೂಪದಲ್ಲಿ ಅರ್ಪಿಸಿಕೊಳ್ಳುತ್ತೇನೆ. ಈ ರೀತಿ ತನ್ನನ್ನು ಭೂತಗಳಲ್ಲೂ, ಸಕಲಭೂತಗಳನ್ನೂ ತನ್ನಲ್ಲೂ ಅರ್ಪಿಸಿಕೊಳ್ಳುವುದರಿಂದ ಅವನು ತನ್ನದೇ ಆದ ಸ್ವಾರಾಜ್ಯವನ್ನೂ, ವಿಶ್ವಗಳಿಗೆಲ್ಲ ಆಧಿಪತ್ಯವನ್ನೂ ಹೊಂದಿದನು.

ಈ ವಿಧವಾದ ಸರ್ವಮೇಧವನ್ನು ಭುವನಪುತ್ರನಾದ ವಿಶ್ವಕರ್ಮನೂ ಆಚರಿಸಿದನು. ಇದರ ಫಲವಾಗಿ ಸಕಲ ಭೂತಗಳಿಗಿಂತಲೂ ಅಧಿಕವಾದ ಸ್ಥಾನವನ್ನು ಪಡೆದನು. ಮತ್ತು ತಾನೇ ಸಕಲ ಭೂತಗಳ ರೂಪವನ್ನೂ ಪಡೆದನು ಎಂಬ ವಿಷಯವು ಉಕ್ತವಾಗಿದೆ. ಈ ವಿಧವಾದ ಸರ್ವಮೇಧವು ವಿಧಾತನ ಕಾರ್ಯಗಳಲ್ಲೊಂದು. ಯಾವನು ಸೃಷ್ಟಿಕರ್ತನೋ ಅವನೇ ಸಂಹಾರಕರ್ತೃವು. ತನಗೆ ತನ್ನಿಂದ ಸೃಷ್ಟವಾದ ವಿಶ್ವವೇ ಆಹುತಿಯು, ತನಗೆ ತಾನೇ ಆಹುತಿಯು. ಇದೊಂದು ಯಜ್ಞಪ್ರಭೇದ. ಜಗತ್ತಿನ ಸೃಷ್ಟಿಗೆ ಯಜ್ಞವು ಯಾವ ರೀತಿ ಆದಿಕಾರಣವಾಗಿದೆಯೋ ಅದೇ ರೀತಿ ವಿಶ್ವದ ಲಯವೂ ಯಜ್ಞರೂಪವಾಗಿಯೇ ಇರುತ್ತದೆ. ಯಾವ ಯಜ್ಞವನ್ನು **ಸರ್ವೇಷಾಂ ಭೂತಾನಾ-, ಮಾತ್ಮಾ ಯಜ್ಞಃ** (ಶ. ಬ್ರಾ. ೧೪-೩-೨-೧) ಎಂದು ಪ್ರಶಂಸಿಸಿದೆಯೋ, ಅದೇ ಯಜ್ಞವು ಸಕಲಭೂತಗಳನ್ನೂ ಕಬಳಿಸುವುದೂ ಆಗಿರುತ್ತದೆ.

**ಯಜ್ಞೋ ವೈ ಭುಜ್ಯುರ್ಯಜ್ಞೋ ಹಿ ಸರ್ವಾಣಿ ಭೂತಾನಿ ಭುನಕ್ತಿ**

(ಶ. ಬ್ರಾ. ೯-೪-೧-೧೧)

ಯಜ್ಞವೇ ಸಕಲಭೂತಗಳನ್ನೂ ಭುಜಿಸುವುದರಿಂದ ಯಜ್ಞಕ್ಕೆ ಭುಜ್ಯುವೆಂಬ ಹೆಸರು ಪ್ರಸಿದ್ಧವಾಗಿದೆ. ಯಾವ ಲೋಕಗಳನ್ನು ಪ್ರಜಾಪತಿಯು ಉತ್ಪನ್ನಮಾಡುವನೋ, ಅದನ್ನೇ ಭುಜಿಸುವುದೂ ಅವನ ಸ್ವಭಾವವಾಗಿದೆ. ಉತ್ಪನ್ನವಾದ ವಸ್ತುಗಳಲ್ಲಿ ಯಾವುದೂ ಶಾಶ್ವತವಾಗಿರಲು ಸಾಧ್ಯವೇ ಇಲ್ಲ. ಪ್ರತಿಯೊಂದೂ ಲಯವನ್ನು ಹೊಂದಲೇ ಬೇಕಾಗಿರುತ್ತದೆ ಸೃಷ್ಟಿಕರ್ತನಾದ ಪ್ರಜಾಪತಿಯೇ ಈ ಲಯಕರ್ತನು.

**ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾನ್ ಲೋಕಾನೀಶತ ಈಶನೀಭಿಃ ।**
**ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ ಭುವನಾನಿ ಗೋಪಾಃ ॥**

(ಶ್ವೇ. ಉ. ೩-೨)

ಯಾವ ಅದ್ವಿತೀಯನಾದ ರುದ್ರನು ಜಗತ್ತನ್ನು ನಿಯಮಿಸುತ್ತಲೂ ರಕ್ಷಿಸುತ್ತಲೂ ಇರುವನೋ, ಅವನು ಸಕಲ ಜಗತ್ತನ್ನು ವ್ಯಾಪಿಸಿ ಸರ್ವಾಂತರ್ಯಾಮಿಯಾಗಿರುತ್ತಾನೆ. ಸೂಕ್ಷ್ಮರೂಪವಾದ ಜಗತ್ತನ್ನು ವಿಸ್ತರಿಸಿ ಜಗದ್ವ್ಯವಹಾರವು ಮುಗಿಯಿತೆಂದು ತನಗೆ ತಿಳಿದೊಡನೆಯೇ ಸಕಲ ವಿಶ್ವವನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುತ್ತಾನೆ. ಇದೇ ಪ್ರಳಯವು. **ಅಸ್ಯ ವಾಮಸ್ಯ ಪಲಿತಸ್ಯ ಹೋತುಃ** (ಋ. ಸಂ. ೧-೧೬೪-೧) ಎಂಬ ವಾಕ್ಯದಲ್ಲಿ ಹೋತುಃ ಎಂಬುದಕ್ಕೂ **ಸಂಹರ್ತುಃ** ಎಂಬ ಅರ್ಥವನ್ನು ಹೇಳಿ ಈ ಪ್ರಳಯಕಾರ್ಯವನ್ನೇ ವಿವರಿಸಿದೆ.

**ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ.......ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ।**

(ಬೃ. ಉ. ೧-೨-೫)

ಪ್ರಜಾಪತಿಯು ತಾನು ಉತ್ಪನ್ನಮಾಡಿದುದನ್ನೆಲ್ಲ ಪುನಃ ತಾನೇ ಭಕ್ಷಿಸತೊಡಗಿದನು. ವಿಶ್ವವೆಲ್ಲವೂ ಅವನಿಗೆ ಅನ್ನವಾಗಿದೆ. ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆಯೇ ಪ್ರಕೃತದಲ್ಲಿಯೂ ತಿಳಿಸಲ್ಪಟ್ಟಿದೆ. ಜಗತ್ತನ್ನು ಆಹುತಿರೂಪದಲ್ಲಿ ತನಗೆ ಅರ್ಪಿಸಿಕೊಂಡ ಕಾಲವೇ ಪ್ರಳಯಕಾಲವು. ಈ ಕಾಲದಲ್ಲಿ ವಿಶ್ವವನ್ನೆಲ್ಲ ಮೃತ್ಯುವು ಆವರಿಸಿಕೊಳ್ಳುತ್ತದೆ. ಆಗ ಈಶ್ವರನು ಅದ್ವಿತೀಯನು. ಪುನಃ ಸದ್ವಿತೀಯನಾಗಲು ಆಶಿಸುತ್ತಾನೆ. ಜಗತ್ತಿನ ಸಂಕೋಚಕಾಲವೂ ಶಾಶ್ವತವಲ್ಲ. ಅದು ವಿಕಾಸವನ್ನು ಹೊಂದಲೇ ಬೇಕು. ಮೃತ್ಯುವಿನಿಂದ ಆವೃತವಾದ ಜಗತ್ತು ವಿಕಾಸವನ್ನು ಹೊಂದಬೇಕಾದರೆ ಅದಕ್ಕೆ ಈಶ್ವರಸಂಕಲ್ಪವೂ ಅತ್ಯವಶ್ಯವಾಗಿರುತ್ತದೆ. ಈ ಸಂಕಲ್ಪವಾದೊಡನೆಯೇ ಪುನಃ ವಿಕಾಸವು. **ಆಶಿಷಾ ದ್ರವಿಣ ಮಿಚ್ಛಮಾನಃ** ಎಂಬುದರಿಂದ ಈಶ್ವರನ ಈ ಸಂಕಲ್ಪವೂ ನಿರ್ದಿಷ್ಟವಾಗಿದೆ. ಮೃತ್ಯುವಿನಿಂದ ಆವೃತವಾದ ಜಗದ್ವಿಕಾಸವನ್ನೂ ಅದರ ಕ್ರಮಗಳನ್ನೂ ಒಂದೊಂದೆಡೆಯಲ್ಲಿ ಒಂದೊಂದು ವಿಧವಾಗಿ ವರ್ಣಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಈ ರೀತಿಯಾದ ವಿವರಣೆಯಿರುತ್ತದೆ.

**ನೈವೇಹ ಕಿಂಚನಾಗ್ರ ಆಸೀನ್ಮೃತ್ಯುನೈವೇದಮಾವೃತಮಾಸೀತ್ । ಅಶನಾಯಯಾಶನಾಯಾ ಹಿ ಮೃತ್ಯುಸ್ತನ್ಮನೋಽಕುರುತಾತ್ಮನ್ವೀ ಸ್ಯಾಮಿತಿ । ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಕಮಭೂದಿತಿ........... ॥** (ಬೃ. ಉ. ೧-೨-೧)

ಆರಂಭಕಾಲದಲ್ಲಿ ಸರ್ವಶೂನ್ಯವಾಗಿದ್ದಿತು. ಸಕಲವೂ ಮೃತ್ಯುವಿನಿಂದಲೇ ಆವೃತವಾಗಿದ್ದಿತು. ಈ ಮೃತ್ಯುವು ಕ್ಷುದ್ರೂಪವಾದ ಬಯಕೆಯಾಗಿದ್ದಿತು, ಆಗ ಅದು ಸಚೇತನವಾಗಲಿಚ್ಛಿಸಿತು. ಈ ಇಚ್ಛೆಯೊಡನೆ ಚಲಿಸುವಾಗ ಉದಕದ ಆವಿರ್ಭಾವವಾಯಿತು. ಅದು ಪೂಜ್ಯವಾದ ವಸ್ತುವಾಯಿತು.

**ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮನಸಾ ವಾಚಂ ಮಿಥುನಂ ಸಮಭವದಶನಾಯಾ ಮೃತ್ಯುಸ್ತದ್ಯದ್ರೇತ ಆಸೀತ್ಸ ಸಂವತ್ಸರೋಽಭವತ್ । ನ ಹ ಪುರಾ ತತಃ ಸಂವತ್ಸರ ಆಸ । ತಮೇತಾವಂತಂ ಕಾಲಮಬಿಭಃ । ಯಾವತ್ಸಂವತ್ಸರಸ್ತಮೇತಾವತಃ ಕಾಲಸ್ಯ ಪರಸ್ತಾದಸೃಜತ । ತಂ ಜಾತಮಭಿವ್ಯಾದದಾತ್ಸ ಭಾಣಕರೋತ್ಸೈವ ವಾಗಭವತ್ ॥**

(ಬೃ. ಉ. ೧-೨-೪)

ನನ್ನಿಂದ ಎರಡನೆಯ ರೂಪವೂ ಉತ್ಪನ್ನವಾಗಲಿ ಎಂದು ಆ ಮೃತ್ಯುವು ಆಶಿಸಿತು. ಆಗ ಅದೇ ಮೃತ್ಯುವು ವಾಕ್ಕಿಗೂ ಮನಸ್ಸಿಗೂ ಸಂಯೋಗವನ್ನುಂಟುಮಾಡಿತು. ಈ ವಾಙ್ಮನಃಸಂಯೋಗದ ಫಲವಾಗಿ ಜನಿಸಿದ ರೇತಸ್ಸು ಸಂವತ್ಸರ ರೂಪವನ್ನು ತಾಳಿತು. ಇದಕ್ಕಿಂತ ಪೂರ್ವಭಾವಿಯಾಗಿ ಸಂವತ್ಸರವೆಂಬ ತತ್ತ್ವವೇ ಇರಲಿಲ್ಲ. ಆಗ ಒಂದು ಸಂವತ್ಸರದವರೆಗೆ ಅದನ್ನು ಭರಿಸಿತು. ಈ ಸಂವತ್ಸರದ ಉತ್ಪನ್ನವಾಗುವಾಗ ಅದನ್ನು ಕಬಳಿಸಬೇಕೆಂದು ಮೃತ್ಯುವು ಬಾಯನ್ನು ತೆರೆಯಿತು. ಆಗ ಶಿಶುರೂಪದ ಸಂವತ್ಸರವು ಭಾಣ್ ಎಂಬ ಶಬ್ದವನ್ನು ಮಾಡಿತು. ಇದೇ ವಾಕ್ಕಾಯಿತು. (**ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ**—ತಾನು ಉತ್ಪನ್ನಮಾಡಿದುದನ್ನೆಲ್ಲಾ ಭಕ್ಷಿಸ ತೊಡಗಿತು. ಉತ್ಪನ್ನವಾದ ಲೋಕವೆಲ್ಲವೂ ಇದಕ್ಕೆ ಅನ್ನವಾಯಿತು).

**ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ**

(ಬೃ. ಉ. ೧-೨-೫)

ಈ ವಾಙ್ಮನಃಸಂಯೋಗದಿಂದಲೇ ಜಗತ್ತಿನ ಸಕಲ ತತ್ತ್ವಗಳೂ ಉತ್ಪನ್ನವಾದವು ಎಂಬುದಾಗಿ ಮೃತ್ಯುವಿನಿಂದ ಆವೃತವಾದ ಜಗತ್ತಿನ ವಿಕಾಸಸ್ವರೂಪವು ವರ್ಣಿತವಾಗಿರುತ್ತದೆ. ಯಾವ ಮೃತ್ಯುವು ಜಗತ್ತನ್ನು ವ್ಯಾಪಿಸಿರುವುದೋ ಅದೂ ಸಹ ಪರಬ್ರಹ್ಮನಿಂದಲೇ ಸೃಷ್ಟವಾಗಿದೆ. ಹೇಗೆಂದರೆ;—

**ಪ್ರಜಾಪತಿಃ ಪ್ರಜಾ ಅಸೃಜತ । ಸ ಊರ್ಧ್ವೇಭ್ಯ ಏವ ಪ್ರಾಣೇಭ್ಯೋ ದೇವಾನಸೃಜತ । ಯೇಽವಾಂಚಃ ಪ್ರಾಣಾಸ್ತೇಭ್ಯೋ ಮರ್ತ್ಯಾಃ ಪ್ರಜಾ ಅಥೋರ್ಧ್ವಮೇವ ಮೃತ್ಯುಂ ಪ್ರಜಾಭ್ಯೋಽತ್ತಾರಮಸೃಜತ ।**

(ಶ. ಬ್ರಾ. ೧೦-೧-೩-೧)

ಪ್ರಜಾಪತಿಯು ಪ್ರಜೆಗಳನ್ನು ಸೃಜಿಸದನು. ಊರ್ಧ್ವಭಾಗದ ಪ್ರಾಣಗಳಿಂದ ದೇವತೆಗಳನ್ನೂ, ಅಧೋಭಾಗದ ಪ್ರಾಣಗಳಿಂದ ಮಾನವರನ್ನೂ ನಿರ್ಮಿಸಿದನು. ಅನಂತರ ತನ್ನಿಂದ ಸೃಷ್ಟವಾದ ಪ್ರಜೆಗಳನ್ನು ಕಬಳಿಸಲು ಕೂಡಲೇ ಮೃತ್ಯುವನ್ನೂ ಉತ್ಪನ್ನಮಾಡಿದನು. ಹೀಗೆ ಸೃಷ್ಟಿ ಮತ್ತು ಲಯಗಳು ಪರ್ಯಾಯರೂಪವಾಗಿಯೂ ಅವಿಚ್ಛಿನ್ನರೂಪವಾಗಿಯೂ ನಡೆಯುತ್ತಿವೆ. ಈ ಪ್ರಲಯವನ್ನೇ ಆಹುತಿರೂಪವಾದ ಯಜ್ಞವೆಂದು ಪ್ರಕೃತದಲ್ಲಿ ವರ್ಣಿಸಿದೆ. ಇದನ್ನೇ ಸಾಯಣರು ವಿವರಿಸುತ್ತಾ **ಯೋ ವಿಶ್ವಕರ್ಮಾ ಪರಮೇಶ್ವರ ಇಮಾ ವಿಶ್ವಾ**

**ಭುವನಾನಿ ಜುಹ್ವತ್—ಪ್ರಳಯಕಾಲೇ ಪೃಥಿವ್ಯಾದೀನಿಮಾನ್ ಸಪ್ತಲೋಕಾನ್ ಸ್ವಾತ್ಮನ್ಯಾಹುತಿ ಪ್ರಕ್ಷೇಪವತ್ಸಂಹರನ್ನೃಷಿರಾಸೀದತೀಂದ್ರಿಯದ್ರಷ್ಟಾ ಹೋತಾ ಸಂಹಾರರೂಪಸ್ಯ ಹೋಮಸ್ಯ ಕರ್ತಾ ।** ವಿಶ್ವಕರ್ಮಾಖ್ಯನಾದ ಪರಮೇಶ್ವರನು ತನ್ನಿಂದ ಸೃಷ್ಟವಾದ ಈ ಸಕಲ ಜಗತ್ತನ್ನೂ (ಪೃಥಿವ್ಯಾದಿ ಸಪ್ತಲೋಕಗಳನ್ನೂ ಆಹುತಿರೂಪದಿಂದ ತನ್ನಲ್ಲೇ ಅರ್ಪಿಸಿ ಸಂಹಾರರೂಪವಾದ ಹೋಮದ ಕರ್ತನಾಗಿಯೂ ಸರ್ವಜ್ಞನಾಗಿಯೂ ಅದ್ವಿತೀಯನಾಗಿಯೂ ಇರುತ್ತಾನೆ ಎಂಬುದೇ ಈ ವಾಕ್ಯದ ತಾತ್ಪರ್ಯವು ಎಂದು ತಿಳಿಸಿದ್ದಾರೆ.

೨

ಅದ್ವಿತೀಯನಾದ ಈಶ್ವರನು ನಿತ್ಯವಾಗಿ ಈ ರೀತಿಯಲ್ಲಿರಲು ಸಾಧ್ಯವಿಲ್ಲ. ಸದ್ವಿತೀಯನಾಗಲು ಅವನಲ್ಲೂ ಕಾಮವು ಉದ್ಭವಿಸುತ್ತದೆ. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಆಶಿಷಾ ದ್ರವಿಣಮಿಚ್ಛಮಾನಃ । ಪುನಃ ಪುನಃ ಸಿಸೃಕ್ಷಯಾ ಜಗದ್ಭೋಗಮಾಕಾಂಕ್ಷಮಾಣಃ ।** ತಿರುಗಿಯೂ ಜಗತ್ತಿನ ಭೋಗವನ್ನು ಆಶಿಸಿ ಸೃಷ್ಟಿಗೆ ಆರಂಭಿಸಲಿಚ್ಛಿಸುತ್ತಾನೆಂದೂ ಮತ್ತು ತನ್ನಿಂದ ಸೃಷ್ಟವಾದ ಸಕಲ ವಸ್ತುಗಳಲ್ಲೂ ತಾನೂ ಪ್ರವೇಶಿಸುತ್ತಾನೆ (**ಪ್ರಥಮಚ್ಛದವರಾನ್ ಆವಿವೇಶ**) ಎಂದೂ ತಿಳಿಸಿದೆ.

ಈಶ್ವರನು ಸದ್ವಿತೀಯನಾಗಲು ಅವನು ಬಯಸಿದ (ಕಾಮ) ಕ್ರಮ, ಜಗತ್ತನ್ನು ವಿಸ್ತರಿಸಿ ಅದರಲ್ಲಿ ತಾನೂ ಅದರೊಂದಿಗೆ ವಿಸ್ತೃತಿಯನ್ನು ಹೊಂದಿ ಸರ್ವಾಂತರ್ಯಾಮಿಯಾದುದರ ಕ್ರಮ, ಇವುಗಳನ್ನು ತೈತ್ತಿರೀಯಾರಣ್ಯಕದಲ್ಲಿ ಈ ರೀತಿ ತಿಳಿಸಿದೆ.

**ಆಪೋ ವಾ ಇದಮಾಸನ್ಸ್ಸಲಿಲಮೇವ । ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ । ತಸ್ಯಾಂತರ್ಮನಸಿ ಕಾಮಸ್ಸಮವರ್ತತ । ಇದಗ್ಂ ಸೃಜೇಯಮಿತಿ । ತಸ್ಮಾದ್ಯತ್ಪುರುಷೋ ಮನಸಾಭಿಗಚ್ಛತಿ । ತದ್ವಾಚಾ ವದತಿ । ತತ್ಕರ್ಮಣಾ ಕರೋತಿ । ತದೇಷಾಭ್ಯನೂಕ್ತಾ ।**

(ತೈ. ಆ. ೧-೨೩-೧)

ಸೃಷ್ಟಿಗಿಂತಲೂ ಪೂರ್ವದಲ್ಲಿ ವಿಶ್ವವೆಲ್ಲವೂ ಉದಕದಿಂದ ಆವೃತವಾಗಿದ್ದಿತು ಆ ಉದಕದ ಮೇಲೆ ಪುಷ್ಕರಪರ್ಣದಲ್ಲಿ ಪ್ರಜಾಪತಿಯೊಬ್ಬನೇ ಸ್ಥಿತನಾಗಿದ್ದನು. ಆಗ ಅವನ ಮನಸ್ಸಿನಲ್ಲಿ ವಿಶ್ವವನ್ನು ಸೃಜಿಸಬೇಕು ಎಂಬ ಕಾಮವುಂಟಾಯಿತು. ಇದು ಲೌಕಿಕವಾದ ಕ್ರಮವನ್ನೇ ಅನುಸರಿಸಿತು. ಪುರುಷನಿಗೆ ಕಾಮ (ಇಚ್ಛೆ) ವುಂಟಾದಾಗ ಅವನು ಆ ಇಚ್ಛೆಯನ್ನು ಮಾತಿನಿಂದ ಪ್ರಕಟಿಸುತ್ತಾನೆ. ಮತ್ತು ತನ್ನ ಕಾರ್ಯದಲ್ಲಿ ಆ ಇಚ್ಛೆಯನ್ನು ಪರ್ಯವಸಾನಗೊಳಿಸುತ್ತಾನೆ. ಪ್ರಜಾಪತಿಯೂ ಸಹ ಇದೇ ಲೌಕಿಕವಾದ ಕ್ರಮವನ್ನನುಸರಿಸಿದನು.

**ಕಾಮಸ್ತದಗ್ರೇ ಸಮವರ್ತತಾಧಿ । ಮನಸೋ ರೇತಃ ಪ್ರಥಮಂ ಯದಾಸೀತ್ । ಸತೋ ಬಂಧುಮಸತಿ ನಿರವಿಂದನ್ । ಹೃದಿ ಪ್ರತೀಷ್ಯಾ ಕವಯೋ ಮನೀಷೇತಿ । ಉಪೈನಂ ತದುಪನಮತಿ । ಯತ್ಕಾಮೋ ಭವತಿ । ಯ ಏವಂ ವೇದ ।**

(ತೈ. ಆ. ೧-೨೩-೨)

ಪ್ರಜಾಪತಿಗೆ ಪ್ರಥಮತಃ ಕಾಮವುಂಟಾಯಿತು.(ಜಗತ್ಸೃಷ್ಟಿಯ ಇಚ್ಛೆ). ಅದು ಮನಸ್ಸಿನ ಪ್ರಥಮ ರೇತಸ್ಸಾಯಿತು. ಮೇಧಾವಿಗಳಾದ ಕವಿಗಳು (ಪ್ರಜಾಪತಿಯ ಪ್ರಾಣಗಳು) ಈ ರೇತಸ್ಸಿನ ರಹಸ್ಯವನ್ನು ತಮ್ಮ ಅಂತಶ್ಶಕ್ತಿ

ಯಿಂದ ತಿಳಿಯಲು ಪ್ರಯತ್ನಿಸಿ ಕಾಮರೂಪವಾದ ಈ ರೇತಸ್ಸೇ ಸತ್ತಿಗೂ ಅಸತ್ತಿಗೂ ಇರುವ ಬಂಧಕಸಾಮಗ್ರಿ ಯೆಂದು ತಿಳಿದರು. ಈ ರೀತಿ ತಿಳಿಯಲಿಚ್ಛೆಯುಳ್ಳವರೆಲ್ಲರೂ ಇಂತಹ ತತ್ತ್ವರಹಸ್ಯವನ್ನರಿತವರಲ್ಲಿಗೆ ಹೋಗಿ ಆಶ್ರಯಿಸುತ್ತಾರೆ.

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಶರೀರಮಧೂನುತ । ತಸ್ಯ ಯನ್ಮಾಗ್ಂಸಮಾಸೀತ್ ।**
ಆಗ ಆ ಇಚ್ಛೆಯು ಉದ್ಭವಿಸಿದೊಡನೆಯೇ ಪ್ರಜಾಪತಿಯು ಗಭೀರವಾದ ತಪಸ್ಸನ್ನಾಚರಿಸಿದನು. ಅನಂತರ ತನ್ನ ಶರೀರವನ್ನು ಅಲುಗಾಡಿಸಿದನು

**ತತೋಽರುಣಾಃ ಕೇತವೋ ವಾತರಶನಾ ಋಷಯ ಉದತಿಷ್ಠನ್ । ಯೇ ನಖಾಃ । ತೇ ವೈಖಾನಸಾಃ । ಯೇ ವಾಲಾಃ । ತೇ ವಾಲಖಿಲ್ಯಾಃ । ಯೋ ರಸಃ । ಸೋಽಪಾಂ । ಅಂತರತಃ ಕೂರ್ಮಂಭೂತಗ್ಂ ಸರ್ಪಂತಂ ।** (ತೈ. ಆ. ೧-೨೩-೨,೩)

ಅಲುಗಿಸಿದ ಪ್ರಜಾಪತಿಯ ಈ ದೇಹದಿಂದ ಅರುಣ, ಕೇತು ಮತ್ತು ವಾತರಶನಸಂಜ್ಞಕರಾದ ಋಷಿಗಳ ಮೂರು ಗುಂಪುಗಳು ಉದ್ಭವಿಸಿದವು, ಅವನ ನಖಗಳೇ ವೈಖಾನಸಋಷಿಗಳೆಂದೂ, ಮತ್ತು ರೋಮಗಳು ವಾಲಖಿಲ್ಯರೆಂದೂ ಪ್ರಸಿದ್ಧವಾದವು. ಅವನ ದೇಹದ ರಸವು ಉದಕಾಂತರ್ವರ್ತಿಯಾಗಿ ಸಂಚರಿಸುವ ಕೂರ್ಮರೂಪವನ್ನು ಹೊಂದಿತು.

**ತಮಬ್ರವೀತ್ । ಮಮ ವೈ ತ್ವಙ್ಮಾಗ್ಂಸಾ । ಸಮಭೂತ್ । ನೇತ್ಯಬ್ರವೀತ್ । ಪೂರ್ವಮೇವಾಹಮಿಹಾಸಮಿತಿ । ತತ್ಪುರುಷಸ್ಯ ಪುರುಷತ್ವಂ । ಸ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ । ಭೂತ್ವೋದತಿಷ್ಠತ್ ।** (ತೈ. ಆ ೧-೨೩-೩,೪)

ಉದಕಾಂತಃಸಂಚಾರಿಯಾದ ಆ ಕೂರ್ಮವನ್ನು ಕುರಿತು ಪ್ರಜಾಪತಿಯು "ನೀನು ನನ್ನ ತ್ವಕ್ಕಿನಿಂದಲೂ ಮತ್ತು ಮಾಂಸದಿಂದಲೂ ಉದ್ಭೂತನಾಗಿದ್ದೀಯೆ" ಎಂದು ಹೇಳಿದನು. ಅದಕ್ಕೆ ಉತ್ತರವಾಗಿ ಕೂರ್ಮವು "ನಾನು ಹೊಸದಾಗಿ ಉದ್ಭೂತನಾಗಿಲ್ಲ ನಾನು ಅನಾದಿಕಾಲದಿಂದಲೂ ಇಲ್ಲಿಯೇ ಇದ್ದೇನೆ" ಎಂದಿತು. ಅದು ಪೂರ್ವದಿಂದಲೂ ಇದ್ದುದರಿಂದಲೇ ಅದು ಪುರುಷಸಂಜ್ಞಕವಾಯಿತು. ಆಗ ಸಹಸ್ರಸಂಖ್ಯಾತವಾದ ಶಿರಸ್ಸುಳ್ಳ, ಸಹಸ್ರಸಂಖ್ಯಾತವಾದ ಚಕ್ಷುಸ್ಸುಳ್ಳ ಮತ್ತು ಸಹಸ್ರ ಸಂಖ್ಯಾಕವಾದ ಪಾದಗಳುಳ್ಳ ಪುರುಷನು ಆವಿರ್ಭೂತನಾಗಿ ಎದ್ದು ನಿಂತನು.

**ತಮಬ್ರವೀತ್ । ತ್ವಂ ವೈ ಪೂರ್ವಗ್ಂ ಸಮಭೂಃ । ತ್ವಮಿದಂ ಪೂರ್ವಃ ಕುರುಷ್ವೇತಿ । ಸ ಇತ ಆದಾಯಾಪಃ । ಅಂಜಲಿನಾ ಪುರಸ್ತಾದುಪಾದಧಾತ್ । ಏವಾಹ್ಯೇವೇತಿ । ತತ ಆದಿತ್ಯ ಉದತಿಷ್ಠತ್ । ಸಾ ಪ್ರಾಚೀ ದಿಕ್ । ಅಥಾರುಣಃ ಕೇತುರ್ದಕ್ಷಿಣತ ಉಪಾದಧಾತ್ । ಏವಾಹ್ಯಗ್ನ ಇತಿ । ತತೋ ವಾ ಅಗ್ನಿರುದತಿಷ್ಠತ್ । ಸಾ ದಕ್ಷಿಣಾ ದಿಕ್ । ಅಥಾರುಣಃ ಕೇತುಃ ಪಶ್ಚಾದುಪಾದಧಾತ್ । ಏವಾ ಹಿ ವಾಯೋ ಇತಿ । ತತೋ ವಾಯುರುದತಿಷ್ಠತ್ । ಸಾ ಪ್ರತೀಚೀ ದಿಕ್ । ಅಥಾರುಣಃ । ಕೇತುರುತ್ತರತ ಉಪಾದಧಾತ್ । ಏವಾಹೀಂದ್ರೇತಿ । ತತೋ ವಾ ಇಂದ್ರ ಉದತಿಷ್ಠತ್ । ಸೋದೀಚೀ ದಿಕ್ । ಅಥಾರುಣಃ ಕೇತುರ್ಮಧ್ಯ ಉಪಾದಧಾತ್ । ಏವಾ ಹಿ ಪೂಷನ್ನಿತಿ । ತತೋ ವೈ ಪೂಷೋದತಿಷ್ಠತ್ । ಸೇಯಂ ದಿಕ್ । ಅಥಾರುಣಃ ಕೇತುರುಪರಿಷ್ಟಾದುಪಾದಧಾತ್ । ಏವಾ ಹಿ ದೇವಾ ಇತಿ । ತತೋ ದೇವ-**

**ಮನುಷ್ಯಾಃ ಪಿತರಃ । ಗಂಧರ್ವಾಪ್ಸರಸಶ್ಚೋದತಿಷ್ಠನ್ । ಸೋರ್ಧ್ವಾ ದಿಕ್ । ಯಾ ವಿಪ್ರುಷೋ ವಿಪರಾಪತನ್ । ತಾಭ್ಯೋಽಸುರಾ ರಕ್ಷಾಗ್ಂಸಿ ಪಿಶಾಚಾಶ್ಚೋದತಿಷ್ಠನ್ । ತಸ್ಮಾತ್ತೇ ಪರಾಭವನ್ । ವಿಪ್ರುಡ್ಭ್ಯೋ ಹಿ ತೇ ಸಮಭವನ್ । ತದೇಷಾಭ್ಯನೂಕ್ತಾ ॥**

(ತೈ. ಆ. ೧-೨೩-೪, ೫, ೬, ೭,

ಎಲೈ ಪುರುಷನೇ, ನೀನು ನನಗಿಂತಲೂ ಪೂರ್ವಭಾವಿಯಾಗಿಯೇ ಉತ್ಪನ್ನನಾಗಿದ್ದರೆ, ನೀನೇ ನನಗೂ ಈಶ್ವರನು. ನೀನೇ ಈ ಸೃಷ್ಟಿಕರ್ಮವನ್ನು ಮಾಡು ಎಂದು ಹೇಳಿ ತನ್ನ ಬೊಗಸೆಯಿಂದ ಉದಕವನ್ನು ತೆಗೆದುಕೊಂಡು ಮುಂಭಾಗದಲ್ಲಿ ಅರ್ಪಿಸಿದನು. (ಏವಾ ಹಿ ದೇವಾ ಎಂಬಲ್ಲಿ ಮೊದಲನೆಯ ಏವ ಶಬ್ದಕ್ಕೆ ಇಷ್ಟಾರ್ಥ--ಕಾಮ— ಎಂದೂ, ಎರಡನೆಯ ಏವ ಶಬ್ದಕ್ಕೆ ಆದಿತ್ಯನೆಂದೂ ತಾತ್ಪರ್ಯವೆಂಬುದಾಗಿ ಭಾಷ್ಯಕಾರರ ಮತವಾಗಿದೆ) ಅನಂತರ **ಏವಾಹ್ಯೇವ** ಎಂಬ ಮಂತ್ರವನ್ನು ಪಠಿಸಿದೊಡನೆಯೇ ಆದಿತ್ಯನು ಉದ್ಭವಿಸಿದನು. ಅದೇ ಪೂರ್ವದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ಅಂಜಲಿಯಿಂದ ತೆಗೆದು ದಕ್ಷಿಣಭಾಗದಲ್ಲಿ ಸ್ಥಾಪಿಸಿದನು. **"ಏವಾಹ್ಯಗ್ನೇ"** ಎಂದು ಮಂತ್ರವನ್ನು ಉಚ್ಚರಿಸಿದೊಡನೆಯೇ ಅಗ್ನಿಯು ಆವಿರ್ಭವಿಸಿದನು. ಅದೇ ದಕ್ಷಿಣದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ಅಂಜಲಿಯಿಂದ ತೆಗೆದು ಪಶ್ಚಿಮಭಾಗದಲ್ಲಿ ಸ್ಥಾಪಿಸಿದನು. **ಏವಾ ಹಿ ವಾಯೋ** ಎಂಬ ಮಂತ್ರವನ್ನು ಪಠಿಸಿದೊಡನೆಯೇ ವಾಯುವು ಉದ್ಭವಿಸಿದನು. ಅದೇ ಪಶ್ಚಿಮದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ತೆಗೆದು ಉತ್ತರಭಾಗದಲ್ಲಿ ಸ್ಥಾಪಿಸಿ ಏವಾಹೀಂದ್ರ ಎಂದುಚ್ಚರಿಸಿದೊಡನೆಯೇ ಇಂದ್ರನು ಆವಿರ್ಭವಿಸಿದನು. ಅದೇ ಉತ್ತರದಿಕ್ಕಾಯಿತು. ಮಧ್ಯಭಾಗದಲ್ಲಿ ಉದಕವನ್ನು ಸ್ಥಾಪಿಸಿ **ಏವಾಹಿ ಪೂಷನ್** ಎಂದು ಪಠಿಸಿದಾಗ ಪೂಷನು ಆವಿರ್ಭವಿಸಿದನು. ಅನಂತರ ಊರ್ಧ್ವಭಾಗದಲ್ಲಿ ಉದಕವನ್ನು ಸ್ಥಾಪಿಸಿ **ಏವಾ ಹಿ ದೇವಾ** ಎಂದು ಉಚ್ಚರಿಸಿದಾಗ ಅದರಿಂದ ದೇವತೆಗಳೂ, ಮಾನವರೂ, ಪಿತೃಗಳೂ ಉದ್ಭವಿಸಿದರು. ಅದರೊಡನೆ ಗಂಧರ್ವರೂ, ಅಪ್ಸರಸ್ಸುಗಳೂ ಉದ್ಭವಿಸಿದರು ಅದೇ ಊರ್ಧ್ವದಿಕ್ಕಾಯಿತು. ಈ ಸಂದರ್ಭಗಳಲ್ಲಿ ಬಿಂದುರೂಪದಲ್ಲಿ ಬಿದ್ದ ಉದಕರಾಶಿಗಳಿಂದ ರಾಕ್ಷಸರೂ ಪಿಶಾಚಿಗಳೂ ಆವಿರ್ಭವಿಸಿದರು. ಧಾರಾರೂಪವಲ್ಲದ ಬಿಂದುಗಳಿಂದ ಉತ್ಪನ್ನರಾದುದರಿಂದ ಇವರು ಶಾಶ್ವತಸ್ಥಿತಿಯನ್ನು ಹೊಂದಲಿಲ್ಲ. ಪರಾಜಿತರಾದರು. ಈ ವಿಷಯದಲ್ಲಿ ಶ್ರುತಿಯು ಈ ರೀತಿ ಪಠಿಸಿದೆ.

ಆ ಪೋ ಹ ಯದ್ಬೃಹತೀರ್ಗರ್ಭಮಾಯನ್ । ದಕ್ಷಂ ದಧಾನಾ ಜನಯಂತೀಸ್ಸ್ವಯಂಭುಂ । ತತ ಇಮೇಽಧ್ಯಸೃಜ್ಯಂತ ಸರ್ಗಾಃ । ಅದ್ಭ್ಯೋ ವಾ ಇದಗ್ಂ ಸಮಭೂತ್ । ತಸ್ಮಾದಿದಗ್ಂ ಸರ್ವಂ ಬ್ರಹ್ಮಸ್ವಯಂಭ್ವಿತಿ। ತಸ್ಮಾದಿದಗ್ಂ ಸರ್ವಗ್ಂ ಶಿಥಿಲಮಿವಾ ಧ್ರುವಮಿವಾಭವತ್। ಪ್ರಜಾಪತಿರ್ವಾವ ತತ್ । ಆತ್ಮನಾತ್ಮಾನಂ ವಿಧಾಯ । ತದೇವಾನು ಪ್ರಾವಿಶತ್ । ತದೇಷಾಭ್ಯನೂಕ್ತಾ । ವಿಧಾಯ ಲೋಕಾನ್ ವಿಧಾಯ ಭೂತಾನಿ । ವಿಧಾಯ ಸರ್ವಾಃ ಪ್ರದಿಶೋ ದಿಶಶ್ಚ । ಪ್ರಜಾಪತಿಃ ಪ್ರಥಮಜಾ ಋತಸ್ಯ । ಆತ್ಮನಾತ್ಮಾನಮಭಿಸಂವಿವೇಶೇತಿ। ಸರ್ವಮೇವೇದಮಾಪ್ತ್ವಾ । ಸರ್ವಮವರುಧ್ಯ । ತದೇವಾನುಪ್ರವಿಶತಿ । ಯ ಏವಂ ವೇದ ॥

(ತೈ. ಆ. ೧-೨೩.೮,೯)

ಬೃಹತ್ಸ್ವರೂಪವನ್ನು ಹೊಂದಿದ ಉದಕಗಳು ಪ್ರವೃದ್ಧವಾದ ಶಕ್ತಿಯನ್ನು ಹೊಂದಿ ಉತ್ತಮವಾದ ಗರ್ಭವನ್ನು ಧರಿಸಿ, ಸ್ವಯಂಭುವನ್ನು ಉತ್ಪನ್ನಮಾಡಿದಾಗ **ತಮಿದ್ಗರ್ಭಂ ಪ್ರಥಮಂ ದಧ್ರ ಆಪಃ ಯತ್ರ ದೇವಾಃ**

**ಸಮಗಚ್ಛಂತ ವಿಶ್ವೇ.** ೧೦-೮೨-೬)-ಸಕಲ ಸೃಷ್ಟಿಯೂ ಅಲ್ಲಿಂದಲೇ ಪ್ರಾದುರ್ಭೂತವಾಯಿತು. ಯಾವ ಒಂದೇ ಮೂಲದಿಂದ ಇವೆಲ್ಲವೂ ಉತ್ಪನ್ನವಾದುವೋ, ಆದುದರಿಂದಲೇ, ಇದೆಲ್ಲವೂ ಸ್ವಯಂಭುಸಂಜ್ಞಕನಾದ ಬ್ರಹ್ಮರೂಪವುಳ್ಳವೇ ಆದವು. ಲೋಕದಲ್ಲಿ ಉದಕಗಳು ಶಿಥಿಲವೂ ಅಧ್ರುವಗಳೂ ಆದುದರಿಂದ ಅದರಿಂದ ಉತ್ಪನ್ನವಾದ ಸಕಲ ಭೂತಗಳೂ ಅಶಿಥಿಲವೂ ಅಧ್ರುವಗಳೂ ಆದವು. ಪ್ರಜಾಪತಿಯೂ ಇದೇ ರೂಪವನ್ನು ಹೊಂದಿದನು. ತನ್ನಿಂದಲೇ ಉತ್ಪನ್ನವಾದ ಈ ಲೋಕಗಳನ್ನೆಲ್ಲಾ ಪ್ರವೇಶಿಸಿದನು. **ಅವರೌ ಆವಿವೇಶ** (೧-೮೧-೧) ಈ ಕಾರಣದಿಂದಲೇ ಶ್ರುತಿವಾಕ್ಯವು **ವಿಧಾಯ ಲೋಕಾನ್** ಇತ್ಯಾದಿಯಾಗಿರುತ್ತದೆ. ಇದರ ತಾತ್ಪರ್ಯವು ಪ್ರಜಾಪತಿಯು ಸಕಲ ಲೋಕಗಳನ್ನೂ ಸಕಲ ದಿಗ್ದಿಗಂತರಗಳನ್ನೂ ಸೃಜಿಸಿದರು. ಉದಕೋತ್ಪನ್ನನಾದ ಈ ಪ್ರಜಾಪತಿಯು ಜಗದ್ರೂಪವಾದ ತನ್ನ ಶರೀರವನ್ನೇ ಪ್ರವೇಶಿಸಿ ತದಾತ್ಮನಾದನು ಎಂದಿರುತ್ತದೆ.

ಯಾವ ಮೂಲತತ್ತ್ವವು ಪ್ರಥಮತಃ ಅದ್ವಿತೀಯವಾಗಿದ್ದು ಅನಂತರ ಸದ್ವಿತೀಯವಾಗಬೇಕೆಂದು ಆಶಿಸಿ **ಆಶಿಷಾ ದ್ರವಿಣಮಿಚ್ಛಮಾನಃ** (೧-೮೧-೧) ವೈವಿಧ್ಯವನ್ನು ಹೊಂದಿದ ಜಗತ್ತನ್ನು ಸೃಜಿಸಿ ಅದರೊಳಗೆ ತಾನೂ ಪ್ರವೇಶಿಸುವುದೋ ಅದನ್ನು ಕೆಲವೆಡೆಗಳಲ್ಲಿ ಪ್ರಜಾಪತಿಯೆಂದೂ, ಕೆಲವೆಡೆಗಳಲ್ಲಿ ಕೇವಲ ಆತ್ಮ (ಪರಮಾತ್ಮ) ನೆಂದೂ, ಇನ್ನು ಕೆಲವೆಡೆಗಳಲ್ಲಿ ಹಿರಣ್ಯಗರ್ಭನೆಂದೂ ಮತ್ತು ಕೆಲವೆಡೆಗಳಲ್ಲಿ ವಿಶ್ವಕರ್ಮನೆಂದೂ ನಿರ್ದೇಶಿಸಿದೆ. ಆದರೆ, ಸೃಷ್ಟಿಯ ಇಚ್ಛೆ, ಸೃಷ್ಟಿಯ ಕ್ರಮ ಇವುಗಳು ಮಾತ್ರ ಮುಖ್ಯ ವಿಷಯಗಳಲ್ಲಿ ಒಂದೇ ರೀತಿಯಲ್ಲಿರುತ್ತವೆ. ಕೆಲವು ವಿಷಯಗಳಲ್ಲಿ ಮಾತ್ರ ವ್ಯತ್ಯಸ್ತವಾಗಿರುತ್ತವೆ.

ಯಾವ ವಿಶ್ವಕರ್ಮಾಖ್ಯವಾದ ತತ್ತ್ವವು ತಾನು ಸಂಹಾರರೂಪವಾದ ಹೋಮವನ್ನು ಸಂಪಾದಿಸಿ, ಪ್ರಳಯದ ನಂತರ ಅದ್ವಿತೀಯವಾಗಿದ್ದಿತೆಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆಯೋ ಅದರ ಅದ್ವಿತೀಯತ್ವ, ಸೃಷ್ಟಿಯಲ್ಲಿ ಅದರ ಇಚ್ಛೆ, ತನ್ನ ತಪಃಫಲವಾದ ಸೃಷ್ಟಿ ಮತ್ತು ಸೃಷ್ಟವಾದ ಜಗತ್ತಿನೊಡನೆ ಅದರ ತಾದಾತ್ಮ್ಯ ಇವೆಲ್ಲವೂ ಬೃಹದಾರಣ್ಯಕೋಪನಿಷತ್ತಿನಲ್ಲಿ ಈ ರೀತಿ ಸ್ತುತಿಸಿದೆ. ಸೃಷ್ಟಿಗಿಂತಲೂ ಪೂರ್ವಭಾವಿಯಾಗಿದ್ದು ಯಾವ ಕೂರ್ಮವು ತನ್ನ ಪೂರ್ವಭಾವಿತ್ವದಿಂದ ಪುರುಷಶಬ್ದವಾಚ್ಯವಾದುದೆಂದು ಮೇಲೆ ಉದಾಹೃತವಾದ ತೈತ್ತಿರೀಯಾರಣ್ಯಕದ ವಾಕ್ಯಗಳಿಂದ ಪ್ರಶಂಸಿಸಿದೆಯೋ, ಅದೇ ಅಭಿಪ್ರಾಯವು ಈ ವಿವರಣೆಯಲ್ಲಿಯೂ ಇರುತ್ತದೆ. (ತೈ. ಆ. ೧-೨೩).

> **ಆತ್ಮೈವೇದಮಗ್ರ ಆಸೀತ್ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ಸೋಽಹಮಸ್ಮೀತ್ಯಗ್ರೇ ವ್ಯಾಹರತ್ತತೋಽಹಂ ನಾಮಾಭವತ್ತಸ್ಮಾದಪ್ಯೇತರ್ಹ್ಯಾಮಂತ್ರಿತೋಽಹಮಯಮಿತ್ಯೇವಾಗ್ರ ಉಕ್ತ್ವಾಥಾನ್ಯನ್ನಾಮ ಪ್ರಬ್ರೂತೇ ಯದಸ್ಯ ಭವತಿ ಸ ಯತ್ಪೂರ್ವೋಽಸ್ಮಾತ್ಸರ್ವಸ್ಮಾತ್ಸರ್ವಾನ್ಪಾಪ್ಮನ ಔಷತ್ತಸ್ಮಾತ್ಪುರುಷ ಓಷತಿ ಹ ವೈ ಸ ತಂ ಯೋಽಸ್ಮಾತ್ಪೂರ್ವೋ ಬುಭೂಷತಿ ಯ ಏವಂ ವೇದ ।**
>
> (ಬೃ. ಉ. ೧-೪-೧)

ಜಗತ್ತಿನಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಕೇವಲ ಶುದ್ಧಚೈತನ್ಯರೂಪಿಯಾದ ಆತ್ಮತತ್ತ್ವವು ಮಾತ್ರವಿದ್ದಿತು. ಸುತ್ತಲೂ ನೋಡಿದಾಗ ತನ್ನನ್ನು ಬಿಟ್ಟು ಇತರ ಯಾವ ತತ್ತ್ವವೂ ಕಾಣಲಿಲ್ಲ. ಆಗ ಅದಕ್ಕೆ ನಾನು ಮಾತ್ರ ಇದ್ದೇನೆ ಎಂಬ **ಅಹಂ** ಶಬ್ದವಾಚ್ಯವಾದ ಸ್ವಾತ್ಮಾಸ್ತಿತ್ವವು ಗೋಚರವಾಯಿತು. **ಅಹಂ** ಶಬ್ದವಾಚ್ಯವಾದ ಈ ಪರಮಾತ್ಮನು ಸಕಲ

ವಾದ ದೋಷಗಳನ್ನೂ ದಹಿಸಿದುದರಿಂದ (**ಪಾಪ್ಮನಂ ಔಷತ್—ಪೂರ್ವಮೌಷದಿತಿ ಪುರುಷಃ**:—ಶ. ಭಾ.) ಇದು ಪುರುಷಶಬ್ದವಾಚ್ಯವಾಯಿತು.

> **ಸೋಽಬಿಭೇತ್ತಸ್ಮಾದೇಕಾಕೀ ಬಿಭೇತಿ ಸ ಹಾಯಮೀಕ್ಷಾಂ ಚಕ್ರೇ ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮೀತಿ ತತ ಏವಾಸ್ಯ ಭಯಂ ವೀಯಾಯ ಕಸ್ಮಾದ್ಧ್ಯಭೇಷ್ಯದದ್ವಿತೀಯಾದ್ವೈ ಭಯಂ ಭವತಿ ।**
>
> (ಬೃ. ಉ. ೧-೪-೨)

ಜೊತೆಯಲ್ಲಿ ಯಾವುದೂ ಇಲ್ಲದೆ, ತಾನು ಮಾತ್ರ ಒಂದೇ ಇರುವುದೋ ಅದಕ್ಕೆ ಭಯವು ಖಂಡಿತ. ಆದುದರಿಂದ ಏಕಮಾತ್ರವಾದ ಈ ಆತ್ಮವು ನನಗೆ ಭೀತಿಯನ್ನುಂಟುಮಾಡುವ ವಸ್ತುವು ಬೇರೊಂದಾವುದೂ ಇಲ್ಲ. ನಾನು ಯಾವುದನ್ನು ನೋಡಿ ಭಯಪಡಬೇಕು ಎಂದು ಯೋಚಿಸಿತು. ಆದರೆ ಭೀತಿಯು ತಪ್ಪಿದರೂ ಇನ್ನೊಂದು ವಿಧವಾದ ಚಿಂತೆಗೆ ಅವಕಾಶವಾಯಿತು.

> **ಸ ವೈ ನೈವ ರೇಮೇ । ತಸ್ಮಾದೇಕಾಕೀ ನ ರಮತೇ, ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಯಮೇವಾತ್ಮಾನಂ ದ್ವೇಧಾಪಾತಯತ್ತತಃ ಪತಿಶ್ಚ ಪತ್ನೀಚಾಭವತಾಂ.........ಮನುಷ್ಯಾ ಅಜಾಯಂತ ॥**
>
> (ಬೃ. ಉ. ೧-೪-೩)

ಜೊತೆಗೆ ಯಾರೂ ಇಲ್ಲದೆ, ಕೇವಲ ಒಬ್ಬನೇ ಇದ್ದರೆ ಅದರಲ್ಲಿ ಹರ್ಷವಿರುವುದಿಲ್ಲ. ಅದರಂತೆ ಈ ಆತ್ಮನೂ ಸಹ ತನ್ನ ಜೊತೆಗೆ ಯಾರೂ ಇಲ್ಲದ್ದುದರಿಂದ ಇದಕ್ಕೆ ಹರ್ಷವಿಲ್ಲವಾಯಿತು. ತನ್ನ ಜೊತೆಗೆ ಒಂದು ವ್ಯಕ್ತಿಯನ್ನು ಹೊಂದಬೇಕೆಂದಿಚ್ಛಿಸಿ ಸ್ತ್ರೀಪುರುಷಸಂಯೋಗರೂಪವಾದ ವಿಸ್ತೃತಿಯನ್ನು ಹೊಂದಿತು. ಆಗ ಆ ಪ್ರಮಾಣದಿಂದ ಈ ಆತ್ಮವು ಎರಡು ಭಾಗವಾಗಿ ವಿಭಕ್ತವಾಯಿತು. ಅದೇ ಸ್ತ್ರೀ, ಪುಮಾನ್ (ಪತ್ನಿ ಮತ್ತು ಪತಿ) ಎಂಬ ಎರಡು ರೂಪವನ್ನು-ತಾಳಿತು. ಇದರಿಂದ ಮಾನವಾದಿ ಸಕಲಪ್ರಾಣಿಸಮೂಹವೂ ಉತ್ಪನ್ನವಾಯಿತು.

> **......................ಏವಮೇವ ಯದಿದಂ ಕಿಂಚ ಮಿಥುನಮಾ ಪಿಪೀಲಿಕಾಭ್ಯಸ್ತತ್ಸರ್ವಮಸೃಜತ ॥**
>
> (ಬೃ. ಉ. ೧-೧-೪)

ಸ್ತ್ರೀಪುರುಷರೂಪದ ದ್ವಂದ್ವಗಳನ್ನು ಈ ರೀತಿ ಮಾನವ ಮಿಥುನವೇ ಆದಿಯಾಗಿ ಪಿಪೀಲಿಕಾದಿ ಸಕಲ ಜೀವಜಂತುಗಳನ್ನೂ ನಿರ್ಮಿಸಿತು.

> **ಸೋಽವೇದಹಂ ವಾವ ಸೃಷ್ಟಿರಸ್ಮ್ಯಹಂ ಹೀದಂ ಸರ್ವಮಸೃಕ್ಷೀತಿ ತತಃ ಸೃಷ್ಟಿರಭವತ್ಸೃಷ್ಟ್ಯಾಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ॥**
>
> (ಬೃ. ಉ. ೧-೪-೫)

"ನಾನೇ ನನ್ನ ಸ್ವಂತ ಸೃಷ್ಟಿಯಿಂದಲೇ ಈ ನಾನಾರೂಪಗಳನ್ನೂ ಹೊಂದಿದ್ದೇನೆ." ಎಂದು ಈ ಆತ್ಮನಿಗೆ ಗೋಚರವಾಯಿತು. ಸೃಷ್ಟವಾದ ಯಾವ ಯಾವ ಭೂತಗಳಿವೆಯೋ ಅವೆಲ್ಲವೂ ಇದರ ವಿಕಾರರೂಪವೇ ಎಂಬ ಅರಿವೂ ಉಂಟಾಯಿತು. ಇದನ್ನರಿತವನು ಈ ಶಕ್ತಿಯನ್ನು ಹೊಂದುತ್ತಾನೆ. (ತನ್ನಿಂದ ಸೃಷ್ಟವಾದ ವಸ್ತುವಿನಲ್ಲಿ ತನ್ನ ಪ್ರತಿಬಿಂಬವನ್ನೇ ನೋಡುತ್ತಾನೆ). ಇತ್ಯಾದಿ ವರ್ಣನಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ ವಿವೃತವಾಗಿರುವ "**ಆಶಿಷಾ ಇಚ್ಛಮಾನಃ; ಅವರಾನ್ ಆ ವಿವೇಶ**" ಎಂಬ ವಿಶ್ವಕರ್ಮನ ಕ್ರಿಯಾವಿಶೇಷಗಳು ವರ್ಣಿತವಾಗಿವೆ.

**ಪ್ರಜಾಪತಿರ್ಹ ವಾ ಇದಮಗ್ರ ಏಕ ಏವಾಸ । ಸ ಐಕ್ಷತ ಕಥಂ ನು ಪ್ರಜಾಯೇಯೇತಿ । ಸೋಽಶ್ರಾಮ್ಯತ್ಸ ತಪೋಽತಪ್ಯತ ಸೋಽಗ್ನಿಮೇವ ಮುಖಾಜ್ಜನಯಾಂಚಕ್ರೇ । ತದ್ಯದೇನಂ ಮುಖಾದಜನಯತ ತಸ್ಮಾದನ್ನಾದೋಽಗ್ನಿಃ ।**

(ಶ. ಬ್ರಾ. ೨-೨-೪.೧)

ಅದ್ವಿತೀಯನಾಗಿದ್ದ ಪ್ರಜಾಪತಿಯು ಸದ್ವಿತೀಯನಾಗಲು ಜಗತ್ಸೃಷ್ಟಿಯನ್ನಿಚ್ಛಿಸಿ ತನ್ನಿಂದ ಸೃಷ್ಟವಾದ ತತ್ತ್ವದಿಂದಲೇ ಭೀತನಾದ ಪ್ರಕರಣವೂ ಕೆಲವೆಡೆಗಳಲ್ಲಿ ವರ್ಣಿತವಾಗಿದೆ. ಉದಾಹರಣೆಗೆ—ಸೃಷ್ಟಿಗೆ ಪೂರ್ವಭಾವಿಯಾಗಿ ಪ್ರಜಾಪ್ರತಿಯೊಬ್ಬನೇ ಇದ್ದನು. ಆಗ ತನ್ನ ಸೃಷ್ಟಿಯಿಂದಲೇ ತನ್ನನ್ನು ವೃದ್ಧಿಪಡಿಸಿಕೊಳ್ಳಲಾಶಿಸಿ ತಪಸ್ಸನ್ನಾಚರಿಸಿದನು. ಆ ತಪಃಫಲವಾಗಿ ಅವನ ಮುಖದಿಂದ ಅಗ್ನಿಯು ಉತ್ಪನ್ನನಾದನು. ಮುಖದಲ್ಲಿ ಉತ್ಪನ್ನನಾದುದರಿಂದ ಅಗ್ನಿಯು ಅನ್ನಭಕ್ಷಕನಾದನು.

**ಅಥೈನಮಗ್ನಿರ್ವ್ಯಾತ್ತೇನೋಪ ಪರ್ಯಾವವರ್ತ । ತಸ್ಯ ಭೀತಸ್ಯ ಸ್ವೋ ಮಹಿಮಾ ಪಚಕ್ರಾಮ । ……………ಸ ಹುತ್ವಾ ಪ್ರಜಾಪತಿಃ । ಪ್ರ ಚಾಜಾಯತಾತ್ಸ್ಯತಶ್ಚಾಗ್ನೇರಾತ್ಮಾನಮತ್ರಾಯತ ಸ ಯೋ ಹೈವಂ ವಿದ್ವಾನಗ್ನಿಹೋತ್ರಂ ಜುಹೋತಿ…………………… ಅಗ್ನೇರ್ಮೃತ್ಯೋರಾತ್ಮಾನಂ ತ್ರಾಯತೇ ॥**

(ಶ. ಬ್ರಾ. ೨.೨-೪.೫)

ಅನ್ನಭಕ್ಷಕನಾದ ಅಗ್ನಿಗೆ ಪ್ರಜಾಪತಿಯಲ್ಲದೆ ಬೇರೆಯಾವ ವಸ್ತುವೂ ಭಕ್ಷಣಕ್ಕೆ ಸಿಕ್ಕಲಿಲ್ಲ. ಆಗ ತನ್ನ ಮುಖವನ್ನು ತೆರೆದು ಪ್ರಜಾಪತಿಯನ್ನೇ ನುಂಗಲು ಯತ್ನಿಸಿದನು. ಪ್ರಜಾಪತಿಯು ಇದಕ್ಕೆ ಬೆದರಿ ಓಷಧ್ಯಾದಿಗಳನ್ನು ಒಡನೆಯೇ ಉತ್ಪನ್ನಮಾಡಿ ಅಗ್ನಿಗೆ ಆಹುತಿರೂಪದಲ್ಲಿ ಅರ್ಪಿಸಿದನು. ಈ ತತ್ತ್ವವನ್ನರಿತವನು ಅಗ್ನಿಹೋತ್ರವನ್ನಾಚರಿಸಿ ಮೃತ್ಯುರೂಪನಾದ ಅಗ್ನಿಯಿಂದ ಪ್ರಜಾಪತಿಯು ಪಾರಾದಂತೆ ತಾನೂ ಪಾರಾಗುತ್ತಾನೆ ಇತ್ಯಾದಿಯಾಗಿ ಇತಿಹಾಸರೂಪವಾದ ಸನ್ನಿವೇಶವೂ ವಿವೃತವಾಗಿದೆ. ಈ ಸಂದರ್ಭವು ಅಗ್ನಿಹೋತ್ರದ ಮಹಿಮೆಯನ್ನು ತಿಳಿಸುವುದಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ವಿವೃತವಾಗಿರುವ **ಋಷಿರ್ಹೋತಾ ನ್ಯಸೀದತ್ ಪಿತಾ ನಃ** ಇತ್ಯಾದಿ ವಿವರಗಳು ಐತರೇಯೋಪನಿಷತ್ತಿನಲ್ಲಿ ವಿಶದವಾಗಿ ತಿಳಿಸಲ್ಪಟ್ಟಿವೆ.

**ಓಂ ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥**

(ಐ. ಉ. ೧.೧)

ಆದಿಯಲ್ಲಿ ಕೇವಲ ಶುದ್ಧರೂಪವಾದ ಆತ್ಮತತ್ತ್ವವೊಂದು ಮಾತ್ರವಿದ್ದಿತು. ಇದನ್ನುಳಿದು ಇನ್ನಾವ ತತ್ತ್ವವೂ ಇರಲಿಲ್ಲ. ಆಗ ಈ ವಿಶ್ವಾತ್ಮವು ನಾನು ನಾಮರೂಪಗಳಿಂದ ಯುಕ್ತವಾದ ಜಗತ್ತನ್ನು ನಿರ್ಮಿಸಬೇಕು ಎಂದು ಇಚ್ಛಿಸಿತು.

**ಸ ಇಮಾಁಲ್ಲೋಕಾನಸೃಜತ । ಅಂಭೋ ಮರೀಚೀರ್ಮರಮಾಪೋಽದೋಽಂಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾಂತರಿಕ್ಷಂ ಮರೀಚಯಃ ಪೃಥಿವೀ ಮರೋ ಯಾ ಅಧಸ್ತಾತ್ತಾ ಆಪಃ ॥**

(ಐ. ಉ. ೧-೨)

ಆಗ ತದಿಚ್ಛಾನುಸಾರವಾಗಿ ಈ ಲೋಕಗಳನ್ನು ಸೃಜಿಸಿದನು. ಇವುಗಳೊಂದಿಗೆ, ತೇಜಸ್ಸು, ಸಲಿಲ, ಮೃತ್ಯು ಇವುಗಳನ್ನೂ ಉತ್ಪನ್ನಮಾಡಿದನು. ಇದರಿಂದ ಸೃಷ್ಟವಾದ ಸಲಿಲವು ದ್ಯುಲೋಕದ ಮೇಲಿರುತ್ತದೆ. ದ್ಯುಲೋಕವೇ ಇದರ ಆಧಾರ. ತೇಜೋರಶ್ಮಿಗಳೇ ಅಂತರಿಕ್ಷವು. ಪೃಥ್ವಿಯೇ ಮೃತ್ಯುರೂಪವು. ಇದಕ್ಕಿಂತಲೂ ಕೆಳಭಾಗದಲ್ಲಿರುವುದೂ ಉದಕವೇ ಆಗಿದೆ.

**ಸ ಈಕ್ಷತೇಮೇ ನು ಲೋಕಾ ಲೋಕಪಾಲಾನ್ನು ಸೃಜಾ ಇತಿ । ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಮೂರ್ಛಯತ್ ॥**

(ಐ. ಉ. ೧-೩)

ಈ ಮೂರು ಲೋಕಗಳನ್ನು ಈಗ ನಿರ್ಮಿಸಿದ್ದಾಯಿತು. ಇನ್ನು ಈ ಲೋಕಗಳನ್ನು ರಕ್ಷಿಸುವ ಲೋಕಪಾಲಕರನ್ನು ನಿರ್ಮಿಸಬೇಕು ಎಂದು ಇಚ್ಛಿಸಿ ತನ್ನಿಂದ ಸೃಷ್ಟವಾದ ಉದಕದಿಂದಲೇ ಒಂದು ಪುರುಷರೂಪವನ್ನು ನಿರ್ಮಿಸಿ ಅದಕ್ಕೆ ಒಂದು ಆಕಾರವನ್ನು ಕೊಟ್ಟಿತು.

**ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ಮಹತ್ಯರ್ಣವೇ ಪ್ರಾಪತನ್ । ತಮಶನಾಪಿಪಾಸಾಭ್ಯಾಮನ್ವವಾರ್ಜತ್ । ತಾ ಏನ ಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ಪ್ರತಿಷ್ಠಿತಾ ಅನ್ನಮದಾಮೇತಿ ।**

(ಐ. ಉ. ೨-೧)

ಈ ಆತ್ಮನಿಂದ ಸೃಷ್ಟರಾದ ಸಕಲದೇವತೆಗಳೂ ಮಹಾಸಾಗರದಲ್ಲಿ ಬಿದ್ದರು. ಆಗ ಅವರನ್ನು ಕ್ಷುತ್ಪಿಪಾಸೆಯು ಆವರಿಸಿತು. ದೇವತೆಗಳು ಈ ಆತ್ಮನನ್ನು ಕುರಿತು ನಮಗೆ ಒಂದು ವಸತಿಯನ್ನು ಕಲ್ಪಿಸು. ನಾವು ಅಲ್ಲಿ ಸುಖವಾಗಿದ್ದು ಅನ್ನವನ್ನು ಭುಜಿಸುವ ಸೌಕರ್ಯವನ್ನು ಕಲ್ಪಿಸು ಎಂದು ಯಾಚಿಸಿದರು.

**ತಮಶನಾಪಿಪಾಸೇ ಅಬ್ರೂತಾಮಾವಾಭ್ಯಾಮಭಿಪ್ರಜಾನೀಹೀತಿ । ತೇ ಅಬ್ರವೀದೇತಾಸ್ವೇವ ವಾಂ ದೇವತಾಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ । ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾಮಶನಾಪಿಪಾಸೇ ಭವತಃ ॥**

(ಐ. ಉ. ೨-೫)

ದೇವತೆಗಳು ಪ್ರಾರ್ಥಿಸಿದಂತೆಯೇ ಅವರಿಗೆ ಅನ್ನವನ್ನು ಕಲ್ಪಿಸಲು ಹಸಿವು ಮತ್ತು ದಾಹ ಇವೆರಡೂ ಸಹ ಈ ಪರಮಾತ್ಮನನ್ನು ಸಮೀಪಿಸಿ "ನಮಗೂ ಉತ್ತಮವಾದ ವಸತಿಯನ್ನು ಕಲ್ಪಿಸು" ಎಂದು ಪ್ರಾರ್ಥಿಸಿದವು. ಆಗ ಆ ಆತ್ಮನು ಇವನ್ನು ಕುರಿತು "ನಿಮಗೂ ಈ ದೇವತೆಗಳಲ್ಲಿಯೇ ವಸತಿಯನ್ನು ಕಲ್ಪಿಸುತ್ತೇನೆ. ದೇವತೆಗಳಿಗೆ ಯಾವ ಆಹುತಿಯು ಅರ್ಪಿತವಾಗುತ್ತದೆಯೋ, ಹಸಿವು ಮತ್ತು ದಾಹ ಇವೆರಡಕ್ಕೂ ಇದರಲ್ಲಿ ಭಾಗವಿರುತ್ತದೆ ಎಂದಿತು".

ಈ ಪ್ರಕರಣದ ಮುಖ್ಯ ತಾತ್ಪರ್ಯವೇನೆಂದರೆ, ಎಲ್ಲಿ ಅನ್ನಸಮೃದ್ಧಿಯಿರುವುದೋ, ಅಲ್ಲಿ ಕ್ಷುತ್ತು (ಹಸಿವು) ಮತ್ತು ಬಾಯಾರಿಕೆ ಇವು ಇರುತ್ತವೆ. ಎಲ್ಲಿ ಸೃಷ್ಟಿಯಿದೆಯೋ ಅಲ್ಲಿ ಮೃತ್ಯು ವಿರುತ್ತದೆ. ಎಲ್ಲಿ ಲೋಕದ ವಿಸ್ತೃತಿಯೂ ವ್ಯಾಪ್ತಿಯೂ ಇರುವುದೋ, ಅಲ್ಲಿ ಸಂಕೋಚವೂ ಇರುತ್ತದೆ. ಸಮೃದ್ಧಿ, ಅಭಾವ; ಸೃಷ್ಟಿ, ಲಯ; ವಿಕಾಸ ಮತ್ತು ಸಂಕೋಚ ಇವು ಈಶ್ವರನ ಲೀಲೆಯಲ್ಲಿ ನಿತ್ಯವಾಗಿರುವ ದ್ವಂದ್ವಗಳು. ಇವೆಲ್ಲವೂ ಈಶ್ವರನ ಅಧೀನ. ಒಟ್ಟಿನಲ್ಲಿ **"ಅಸ್ಯ ವಾಮಸ್ಯ ಪಲಿತಸ್ಯ ಹೋತುಃ"** ಎಂಬ (೧-೧೬೪-೧) ಋಕ್ಕಿನಲ್ಲಿ ಯಾವ ಸೃಷ್ಟಿಸ್ಥಿತಿಲಯಕಾರಕನಾದ ಈಶ್ವರನ ತ್ರಿವಿಧವಾದ ಶಕ್ತಿಯು ವರ್ಣಿತವಾಗಿದೆಯೋ, ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಶಕ್ತಿತ್ರಯವು ವರ್ಣಿತವಾಗಿದೆ. ಇದನ್ನೇ ತೈತ್ತಿರೀಯೋಪನಿಷತ್ತಿನಲ್ಲಿ ವರ್ಣಿಸುತ್ತ;

**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂಚ । ತತ್ಸತ್ಯಮಿತ್ಯಾಚಕ್ಷತೇ । ತದಪ್ಯೇಷ ಶ್ಲೋಕೋ ಭವತಿ ।**

(ತೈ. ಉ. ೨-೬)

ಅದ್ವಿತೀಯನಾದ ನಾನು ಅನೇಕ ರೂಪಗಳನ್ನು ಹೊಂದಬೇಕು. ಆದುದರಿಂದ ಅಜನಾದರೂ ನಾನು ಜಗದ್ರೂಪದಲ್ಲಿ ಉತ್ಪನ್ನನಾಗಬೇಕು, ಎಂದು ಪರಮಾತ್ಮನು ಆಶಿಸಿ ತಪಸ್ಸನ್ನಾಚರಿಸಿದನು. ಅದರ ಫಲವಾಗಿ ಈ ಜಗತ್ತನ್ನೆಲ್ಲ ನಿರ್ಮಿಸಿದನು. ಅನಂತರ ತಾನು ನಿರ್ಮಿಸಿದ ಸಕಲಭೂತಗಳಲ್ಲಿಯೂ ಪ್ರವೇಶಿಸಿದನು. ಅನಂತರ ತಾನು ಅಪರಿಚ್ಛಿನ್ನವಾದ ತತ್ತ್ವ (ವಸ್ತು) ವೆನಿಸಿದರೂ (ಪ್ರಾಣಿಗಳ ಶರೀರಗಳಲ್ಲಿ ಪ್ರವೇಶಿಸಿದ್ದರಿಂದ) ಪರಿಚ್ಛಿನ್ನನಾದನು. ಎಂದರೆ, ಒಂದೇ ವಸ್ತುವಾಗಿದ್ದ ಆತ್ಮನು ನಾನಾರೂಪಗಳಲ್ಲಿ ಗೋಚರಿಸಿದನು. ಅಪರಿಮಿತ, ಅನಂತ ಎಂಬ ಗುಣವಿಶಿಷ್ಟನಾಗಿದ್ದರೂ ಪರಿಮಿತಿಗೊಳಪಟ್ಟನು. ಅನಿರ್ವಾಚ್ಯನಾಗಿದ್ದರೂ ವರ್ಣನೆಗೊಳಪಟ್ಟನು. ನಿರಾಧಾರನಾಗಿದ್ದರೂ ಆಧಾರ ಅಥವಾ ಆಶ್ರಯಕ್ಕೊಳಗಾದನು. ಅಚೇತನನಾದರೂ ಚೈತನ್ಯವುಳ್ಳವನಾದನು (ಅಹಂಭಾವಯುಕ್ತನಾದನು) ಸತ್ಯಾತ್ಮಕನಾದರೂ ಅಸತ್ಯರೂಪನಾದನು ಎಂದರೆ ನಿತ್ಯಸ್ವರೂಪನಾದರೂ ಲಯವನ್ನು ಹೊಂದುವ ಅನಿತ್ಯವಸ್ತುವಾದನು. ಎಲ್ಲಕ್ಕಿಂತ ಅತಿರಿಕ್ತನಾಗಿದ್ದರೂ ಸಕಲಪ್ರಾಣಿಗಳಲ್ಲಿಯೂ ಪ್ರವೇಶಿಸಿದ್ದನು ಇತ್ಯಾದಿ ವಿವರಣೆಗಳಿವೆ. ಈ ರೀತಿಯಾದ ಪರಸ್ಪರ ವಿರುದ್ಧಸ್ವರೂಪವು ಹೇಗೆ ಎಂದರೆ, ಅವ್ಯಕ್ತನೂ, ನಿರ್ಗುಣನೂ, ಸರ್ವವ್ಯಾಪಕನೂ, ನಿತ್ಯನೂ ಆದ ಆತ್ಮನು (ಪರಮಾತ್ಮನು) ಒಂದು ವಿಧವಾದ ವಸ್ತುವು. ಈ ಪರಮಾತ್ಮನು ತಾನು ಸೃಷ್ಟಿಮಾಡಿದ ಚರಾಚರವಸ್ತುಗಳಲ್ಲಿ ಪ್ರವೇಶಮಾಡಿದ ಮೇಲೆ ಅವನಿಗಿದ್ದ ಅವ್ಯಕ್ತತ್ವ, ನಿರ್ಗುಣತ್ವ, ಸರ್ವವ್ಯಾಪಕತ್ವ ನಿತ್ಯತ್ವ, ಎಂಬ ಗುಣಗಳೆಲ್ಲವೂ ತಾತ್ಕಾಲಿಕವಾಗಿ ಕಣ್ಮರೆಯಾಗಿ ಅವುಗಳ ಸ್ಥಾನದಲ್ಲಿ ಸಾಧಾರಣ ಪ್ರಾಣಿಗಳಲ್ಲಿರುವ ಪರಿಮಿತಿ, ಅನಿತ್ಯತ್ವ ಇತ್ಯಾದಿ ಗುಣಗಳು ಗೋಚರಿಸಿದವು ಎಂದಭಿಪ್ರಾಯವು.

---

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಭುವನಪುತ್ರನಾದ ವಿಶ್ವಕರ್ಮಾ ಎಂಬುವನು ಋಷಿಯು. ದೇವತೆಯೂ ವಿಶ್ವಕರ್ಮಾ ಎಂತಲೇ ಇದೆ. ಆದರೆ ಇವರಿಬ್ಬರೂ ಒಂದೇ ವ್ಯಕ್ತಿಯೋ ಅಥವಾ ಬೇರೆಬೇರೆ ವ್ಯಕ್ತಿಗಳೇ ಎಂಬುದು ಸ್ಪಷ್ಟವಾಗಿಲ್ಲ. ಈ ಸೂಕ್ತಗಳಲ್ಲಿರುವ ಗಹನವಾದ ವೇದಾಂತತತ್ತ್ವಗಳನ್ನು ಗಮನಿಸಿದರೆ ಇಬ್ಬರೂ ಒಂದೇ ವ್ಯಕ್ತಿಯೆಂದು ಹೇಳುವುದೇ ಸಮಂಜಸವಾಗುವುದು. ಈ ಋಕ್ಕಿನ ವಿಷಯದಲ್ಲಿ ಸಾಯಣರು ಶತಪಥಬ್ರಾಹ್ಮಣ ವಾಕ್ಯವನ್ನು—**ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವಾ** (ಶ. ಬ್ರಾ. ೧೩-೭-೧) ಎಂದು ಉದಾಹರಿಸಿದಾರೆ. ಪೂರ್ವದಲ್ಲಿ ಸ್ವಯಂಭುವೆನಿಸಿದ ಬ್ರಹ್ಮನು (ಎಂದರೆ ಪ್ರಜಾಪತಿಯು) ತಪಸ್ಸನ್ನು ಮಾಡಿದನು. ಈ ತಪಸ್ಸಿಗೆ ಕೊನೆಮೊದಲಿಲ್ಲ. ಎಷ್ಟು ಮಾಡಿದರೂ ಮುಗಿಯುವಂತಿಲ್ಲ. ಇದು ಅನಂತವಾಗಿದೆ. ಈ ತಪಸ್ಸನ್ನು ಮುಗಿಸಿ ಅದರಿಂದ ಅಭೀಷ್ಟವನ್ನು ಹೊಂದಲಾಗುವುದಿಲ್ಲ. ಆದ್ದರಿಂದ ಸರ್ವಮೇಧವೆಂಬ ಯಾಗವನ್ನು ಮಾಡುವೆನು. ಸಮಸ್ತಭೂತಗಳಲ್ಲಿಯೂ ತನ್ನನ್ನು ಆಹುತಿಯಾಗಿ ಅರ್ಪಿಸುವುದೂ, ಎಲ್ಲಾ ಭೂತಜಾತಗಳನ್ನೂ ತನ್ನಲ್ಲಿಯೇ ಅರ್ಪಿಸುವುದೂ ಈ ಯಾಗದ ವೈಶಿಷ್ಟ್ಯವು ಎಂದು ಯೋಚಿಸಿ ಅದರಂತೆ ಮಾಡಿದನು. ಎಂದು ಈ ಬ್ರಾಹ್ಮಣವಾಕ್ಯದ ತಾತ್ಪರ್ಯವು.

ಈ ವಿಷಯವನ್ನು ಇನ್ನೂ ಸ್ಪಷ್ಟವಾಗುವಂತೆ ವಿವರಿಸುವುದಕ್ಕಾಗಿ ಭಾಷ್ಯಕಾರರು ಯಾಸ್ಕರ ನಿರುಕ್ತವನ್ನು ಇಲ್ಲಿ ವಿವರಿಸಿದಾರೆ.

**ವಿಶ್ವಕರ್ಮಾ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ ಸ ಆತ್ಮಾನಮಪ್ಯಂತತೋ ಜುಹವಾಂಚಕಾರ । ತದಭಿವಾದಿನ್ಯೇಷರ್ಗ್ಭವತಿ ಯ ಇಮಾ ವಿಶ್ವಾ ಭುವನಾನಿ ಜುಹ್ವದಿತಿ ॥**

(ನಿ. ೧೦-೨೬)

ವಿಶ್ವಕರ್ಮಾ ಎಂಬ ಋಷಿಯು ಸರ್ವಮೇಧವೆಂಬ ಯಾಗವನ್ನು ಮಾಡಲುಪಕ್ರಮಿಸಿ ಅದರಲ್ಲಿ ಸರ್ವಭೂತಗಳನ್ನೂ ಹೋಮಮಾಡಿ ಕಡೆಗೆ ತನ್ನನ್ನೇ ಅಗ್ನಿಯಲ್ಲಿ ಆಹುತಿಯನ್ನಾಗಿ ಅರ್ಪಿಸಿದನು. ಈ ವಿಷಯವೇ **ಯ ಇಮಾ ವಿಶ್ವಾ ಭುವನಾನಿ ಜುಹ್ವತ್** ಎಂಬ ಋಕ್ಕಿನಲ್ಲಿ ಪ್ರತಿಪಾದಿತವಾಗಿದೆ ಎಂದು ನಿರ್ವಚನದ ಅಭಿಪ್ರಾಯವು.

ಈ ಸೂಕ್ತದಲ್ಲಿ ಸರ್ವೇಶ್ವರನು ಮಾಡುವ ಸೃಷ್ಟಿಸ್ಥಿತಿಲಯಗಳ ವರ್ಣನೆ ಇದೆ. ಪ್ರಾರಂಭದ ಈ ಮೊದಲನೆಯ ಋಕ್ಕಿನಲ್ಲಿ ಲಯದ ವಿವರಣೆ ಇದೆ. ಸೃಷ್ಟಿಸ್ಥಿತಿಲಯಗಳು ಒಂದಾಗುತ್ತಲೊಂದು ಪರ್ಯಾಯಕ್ರಮದಲ್ಲಿ ಎಡಬಿಡದೆ ನಡೆಯುತ್ತಲೇ ಇರುವುದರಿಂದ ಈ ಸೃಷ್ಟಿಸ್ಥಿತಿಲಯಗಳಲ್ಲಿ ಯಾವುದು ಮೊದಲು, ಯಾವುದು ಕೊನೆ ಎಂದು ಹೇಳುವ ಹಾಗಿಲ್ಲ. ಯಾವುದನ್ನಾದರೂ ಮೊದಲು ಹೇಳಬಹುದು. ಆದ್ದರಿಂದ ಇಲ್ಲಿ ಲಯದ ವಿಷಯವನ್ನೇ ಮೊದಲು ಪ್ರಸ್ತಾಪಮಾಡಲಾಗಿದೆ.

**ಯ ಇಮಾ ವಿಶ್ವಾ ಭುವನಾನಿ ಜುಹ್ವತ್ .... ಸ ಆವರಾನ್ ಆ ವಿವೇಶ**—ಹಿಂದೆ ಈ ಸೂಕ್ತಕ್ಕೆ ವಿಶ್ವಕರ್ಮನೆಂಬುವನೇ ದೇವತೆಯೆಂದು ಹೇಳಿದೆಯಷ್ಟೆ. ಈ ವಿಶ್ವಕರ್ಮನೆಂಬುವನು ಯಾರು ? ಅವನ ಸ್ವರೂಪವೇನು ? ಎಂದು ಸೂಕ್ಷ್ಮವಾಗಿ ವಿಮರ್ಶೆಮಾಡುವುದು ಅವಶ್ಯಕವಾಗಿದೆ. ಯಾಸ್ಕರು ಹೇಳಿರುವಂತೆ **ವಿಶ್ವಕರ್ಮಾ-ವಿಶ್ವಸ್ಯ ಕರ್ತಾ** ಎಂದರೆ ವಿಶ್ವವನ್ನೇ ನಿರ್ಮಾಣಮಾಡಿದವನು ಎಂದರ್ಥವನ್ನು ಹೇಳಬಹುದು. ವಿಶ್ವವೆಂದರೆ ಎಲ್ಲವೂ ಎಂದರೆ, ನಾವು ವಾಸಿಸುತ್ತಿರುವ ಜಗತ್ತೇ ಮೊದಲಾದ ಅಖಿಲಾಂಡಕೋಟಿಬ್ರಹ್ಮಾಂಡಗಳು ಎಂದರ್ಥವು. ಈ ವಿಶ್ವವು

ಅನಂತವಾಗಿರುವುದರಿಂದ ಇದಕ್ಕೆ ಪರಿಮಿತಿಯೇ ಇಲ್ಲ. ಇವುಗಳನ್ನೆಲ್ಲಾ ತನ್ನ ಅದ್ಭುತವಾದ ಮಹಾಶಕ್ತಿಯಿಂದ ಸೃಷ್ಟಿಮಾಡಿದವನೇ ವಿಶ್ವಕರ್ಮನೆಂದು ಹೇಳಲ್ಪಡುವನು. ಇವನನ್ನು ಪರಬ್ರಹ್ಮ, ಸರ್ವೇಶ್ವರ, ಪರಮಾತ್ಮಾ ಎಂದು ಮೊದಲಾದ ಯಾವ ಶಬ್ದದಿಂದಲಾದರೂ ಕರೆಯಬಹುದು. ಏಕೆಂದರೆ ವಿಶ್ವನಿರ್ಮಾಣಮಾಡುವ ಶಕ್ತಿ ಇತರ ಸಾಧಾರಣದೇವತಗಳಿಗಿರುವುದಿಲ್ಲ. ಎಲ್ಲರಿಗಿಂತಲೂ ಶ್ರೇಷ್ಠನಾದ ಮತ್ತು ಸರ್ವವ್ಯಾಪಕನಾದ ಪರಮೇಶ್ವರನೇ ಈ ಕಾರ್ಯವನ್ನು ಮಾಡಲು ಸಮರ್ಥನಾದ್ದರಿಂದ ಈ ಪರಮೇಶ್ವರನೇ ವಿಶ್ವಕರ್ಮನೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಈ ದೃಷ್ಟಿಯಿಂದಲೇ ಈ ಸೂಕ್ತ ಮತ್ತು ಮುಂದಿನ ಸೂಕ್ತಗಳನ್ನು ವಿಮರ್ಶೆಮಾಡಿ ಅರ್ಥಾನುಸಂಧಾನಮಾಡಬೇಕು. ಪ್ರಕೃತ **ಯ ಇಮಾ ವಿಶ್ವಾ ಭುವನಾನಿ ಜುಹ್ವತ್ ಋಷಿರ್ಹೋತಾ** ಎಂಬ ವಾಕ್ಯದಲ್ಲಿ ಈ ಸಮಸ್ತವಾದ ವಿಶ್ವವನ್ನು ಎಂದರೆ ಅಖಿಲಾಂಡಕೋಟಿಬ್ರಹ್ಮಾಂಡಗಳನ್ನು ಈ ಸರ್ವೇಶ್ವರನು ಹೋಮ ಮಾಡಿದನು ಅಥವಾ ಆಹುತಿರೂಪದಲ್ಲಿ ಅರ್ಪಿಸಿದನು ಎಂದಿದೆ. **ಜುಹ್ವತ್**-ಹೋಮಮಾಡಿದನು ಎಂದರೆ ಇಲ್ಲಿ ನಾಶಮಾಡಿದನು ಎಂದಭಿಪ್ರಾಯವು. ಅಗ್ನಿಯಲ್ಲಿ ಹೋಮಮಾಡುವ ಆಜ್ಯಾದಿದ್ರವ್ಯವು ಯಾವರೀತಿ ಅಗ್ನಿಯಲ್ಲಿಯೇ ಸೇರಿಹೋಗಿ ಪುನಃ ಅದರ ಅಸ್ತಿತ್ವವಿರುವುದಿಲ್ಲವೋ ಅದರಂತೆ ಹೋಮಮಾಡಿದ ವಸ್ತುವು ಹಿಂದಕ್ಕೆ ಬರುವುದಿಲ್ಲ. ಎಂದರೆ ಆ ವಸ್ತುವು ತನ್ನ ಪೂರ್ವಸ್ಥಿತಿಯನ್ನು ಕಳೆದುಕೊಂಡು ಬೇರೆವಿಧವಾದ ಸ್ಥಿತಿಯನ್ನು ಹೊಂದುವುದು. ಎಂದರೆ ಪೂರ್ತನಾಶವೇ ಆಗುವುದೆಂದಲ್ಲ, ವಸ್ತುವು ವ್ಯತ್ಯಸ್ತವಾದ ಪರಿಸ್ಥಿತಿಯನ್ನು ಹೊಂದುವುದು. ಎಂದರೆ ಅಗ್ನಿಯಲ್ಲಿ ಹೋಮಮಾಡಿದ ಆಜ್ಯವು ನಾಶವಾಗುವುದಿಲ್ಲ. ಅದು ತೇಜೋರೂಪದಲ್ಲಿ ಪರಿವರ್ತಿತವಾಗುವುದು. ನಮ್ಮ ಕಣ್ಣಿಗೆ ಕಾಣುತ್ತಿದ್ದ ಆಜ್ಯವು ಜ್ಯೋತಿ ಅಥವಾ ಔಷ್ಣ್ಯವೆಂದು ಹೇಳಲಾಗುವ ರೂಪಾಂತರಸ್ಥಿತಿಯನ್ನು ಹೊಂದುವುದು. ಅದರಂತೆಯೇ, ವಿಶ್ವಕರ್ಮನು ಈ ವಿಶ್ವವನ್ನು ಎಂದರೆ ಅನೇಕ ಲೋಕಗಳನ್ನೂ, ಅದರಲ್ಲಿ ಇರುವ ಸಕಲ ಚರಾಚರವಸ್ತುಗಳನ್ನೂ ಹೋಮಮಾಡಿದನು ಎಂದು ಹೇಳುವಾಗ ಆ ಭುವನಗಳೆಲ್ಲವೂ ನಾಶವಾಗಿ ಎಂದರೆ ಈಗಿರುವ ಸ್ಥಿತಿಯಲ್ಲಿರದೆ ರೂಪಾಂತರವನ್ನು ಹೊಂದುವವು. ಎಂದರೆ ಸೂಕ್ಷ್ಮರೂಪದಿಂದ ಪರಮಾತ್ಮನಲ್ಲಿಯೇ ಐಕ್ಯವಾಗಿರುವವು. ಏಕೆಂದರೆ ಪರಮಾತ್ಮನಿಂದಲೇ ಉತ್ಪನ್ನವಾಗುವ ಸಕಲ ಲೋಕಗಳೂ ಪರಮಾತ್ಮನಲ್ಲಿಯೇ ಲಯವನ್ನು ಹೊಂದುವವು. ಪುನಃ ಸೃಷ್ಟಿಕಾಲದಲ್ಲಿ ಆ ಪರಮಾತ್ಮನಿಂದಲೇ ಉತ್ಪನ್ನವಾಗುವವು.

**ನಿ ಅಸೀದತ್ ಪಿತಾ ನಃ—ಪಿತಾ ನಃ** ಎಂಬ ಶಬ್ದಗಳು ನಮಗೆ ಪಾಲಕನೂ ಉತ್ಪತ್ತಿಗೆ ಕಾರಣನೂ ಆದ ವಿಶ್ವಕರ್ಮಾ ಅಥವಾ ಸರ್ವೇಶ್ವರನೆಂಬರ್ಥವನ್ನು ಸೂಚಿಸುವವು. ಮೇಲಿನ ವಾಕ್ಯದಲ್ಲಿ ಹೇಳಿದಂತೆ ಸಕಲ ಭುವನಗಳನ್ನು ಹೋಮಮಾಡಿದನಂತರ ಎಂದರೆ ಲಯ (ಸಂಹಾರ) ಮಾಡಿದನಂತರ ಆ ಸರ್ವೇಶ್ವರನು **ನಿ ಅಸೀದತ್** ತಾನೂ ಯಾರಿಗೂ ಗೋಚರವಿಲ್ಲದವನಾಗಿ ಗೂಢನಾಗಿದ್ದನು. ಎಂದರೆ ಲೋಕಗಳನ್ನು ಅರ್ಪಿಸಿದಂತೆ ತಾನೂ ತನ್ನನ್ನರ್ಪಿಸಿದನು. ಪ್ರತ್ಯಕ್ಷಗೋಚರತ್ವವನ್ನು ತ್ಯಜಿಸಿ ನಿರಾಕಾರನಾಗಿ ಸೂಕ್ಷ್ಮಾವಸ್ಥೆಯಲ್ಲಿದ್ದನು. ಆ ಕಾಲದಲ್ಲಿ ಪರಮಾತ್ಮನು ಯಾರು, ಲೋಕಗಳು ಯಾವವು ಎಂಬ ಯಾವವಿಧವಾದ ಭೇದಗಳೂ ಇರಲಿಲ್ಲ. ಸರ್ವವೂ ನಾಮರೂಪರಹಿತವಾಗಿ ಬ್ರಹ್ಮಸ್ವರೂಪವೊಂದೇ ಆಗಿದ್ದಿತು. ಪರಬ್ರಹ್ಮದ ಈ ಸ್ಥಿತಿಯನ್ನು ಅಸತ್ ಎಂದು ಕರೆಯಬಹುದು. ಅಸತ್ ಎಂದರೆ ಏನೂಇಲ್ಲದ ಶೂನ್ಯವೆಂದರ್ಥವಲ್ಲ, ನಾಮರೂಪರಹಿತವಾದ ಎಂದರೆ ನಿರ್ವಿಕಾರವಾದ, ಸರ್ವತ್ರ ವ್ಯಾಪ್ತವಾದ ಆತ್ಮನ (ಪರಮಾತ್ಮನ) ಸೂಕ್ಷ್ಮಾವಸ್ಥೆಯು. ಪುನಃ ಸೃಷ್ಟಿಕಾಲದಲ್ಲಿ ಈ ಅಸತ್ ಎಂಬ ನಿರ್ವಿಕಾರ ಬ್ರಹ್ಮನಿಂದಲೇ ಸತ್ ಎಂದು ಹೇಳಲ್ಪಡುವ ನಾಮರೂಪಸಹಿತವಾದ ಜಗತ್ತುಗಳು ಆವಿರ್ಭವಿಸುವವು.

ಇಲ್ಲಿ ಭಾಷ್ಯಕಾರರು— **ಆತ್ಮಕೃತೇನ ಕರ್ಮಣಾ ದೇಹೋತ್ಪತ್ತೇಃ । ನ ಚೈಕಸ್ಯ ಜನ್ಯಜನಕಭಾವೋ ವಿರುಧ್ಯತೇ ತಪೋಬಲೇನ ಶರೀರದ್ವಯಸ್ವೀಕಾರಾತ್ ।** ಎಂದು ಹೇಳಿದಾರೆ. ಎಂದರೆ ತಾನು ಮಾಡುವ ಕರ್ಮಗಳಿಗೆಅನುಸಾರವಾಗಿ ಆಯಾಪ್ರಾಣಿಗಳಿಗೆ ಅವರವರ ಶರೀರೋತ್ಪತ್ತಿಯು ಉಂಟಾಗುವುದು. ಇಲ್ಲಿ ಸರ್ವೇಶ್ವರನು ಸೃಷ್ಟಿಮಾಡುವನು, ಅವನೇ ನಾಶಮಾಡುವನು. ಮತ್ತು ತಾನೇ ಒಂದು ವಸ್ತುವಿಗೆ ಉತ್ಪತ್ತಿಗೆ ಕಾರಣನೂ, ಉತ್ಪತ್ತಿಯಾದ ವಸ್ತುವೂ ಈ ಎರಡೂ ಆಗುವುದು ಹೇಗೆ ? ಇದು ಪರಸ್ಪರವಿರುದ್ಧವಲ್ಲವೇ ಎಂದರೆ ತಪೋಬಲದಿಂದ ಜನ್ಯಜನಕಭಾವವು ಸಾಧ್ಯವೆಂದೂ ಎರಡು ಶರೀರಗಳನ್ನು ಏಕಕಾಲದಲ್ಲಿ ತಪೋಬಲದಿಂದ ಹೊಂದುವುದು ಸಾಧ್ಯವೆಂದೂ ಹೇಳಿದಾರೆ. ಛಾಂದೋಗ್ಯೋಪನಿಷತ್ತಿನಲ್ಲಿ **ಸ ಏಕಧಾ ಭವತಿ** (ಛಾ. ಉ. ೭-೨೬-೨) ಬಹುವಿಧರೂಪಗಳಿಂದಿದ್ದ ಆ ಪರಮಾತ್ಮನು ಒಂದೇ ರೂಪವುಳ್ಳವನಾಗುವನು ಎಂದಿದೆ. ಮತ್ತು ತೈತ್ತಿರೀಯೋಪನಿಷತ್ತಿನಲ್ಲಿ **ಬಹು ಸ್ಯಾಂ ಪ್ರಜಾಯೇಯೇತಿ** ನಾನು ಅನೇಕರೂಪಗಳಾಗಿ ಆಗಬೇಕೆಂದು ಬಯಸುತ್ತೇನೆ ಎಂಬ ಪರಮಾತ್ಮನ ವಚನವಿದೆ. ಎಂದರೆ ಸೃಷ್ಟಿಕಾಲದಲ್ಲಿ ಆ ಪರಮಾತ್ಮನೇ ಅನೇಕಬಗೆಯ ರೂಪಗಳಿಂದಿದ್ದು ಲಯಕಾಲದಲ್ಲಿ ಒಂದೇ ಆಗುವನೆಂಬ ಅರ್ಥವು ಈ ಉಪನಿಷದ್ವಾಕ್ಯಗಳಲ್ಲಿ ಅಡಕವಾಗಿದೆ. ಏಕೆಂದರೆ, ಲೋಕದಲ್ಲಿ ಕಾಣುವ ಸಮಸ್ತಚರಾಚರವಸ್ತುಗಳೂ ಪ್ರಾಣಿಗಳೂ ಎಲ್ಲವೂ ಪರಬ್ರಹ್ಮನ ರೂಪಗಳೇ ಆಗಿವೆ. ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲ. ಆದ್ದರಿಂದ ಆ ಬ್ರಹ್ಮವೇ ಸೃಷ್ಟಿಕಾಲದಲ್ಲಿ ಅನೇಕರೂಪಗಳಿಂದಲೂ ಲಯಕಾಲದಲ್ಲಿ ಒಂದೇ ಸ್ವರೂಪದಿಂದಲೂ ಇರುವುದು. ಈ ಲಯಾವಸ್ಥೆಯಲ್ಲಿರುವ ಬ್ರಹ್ಮವನ್ನೇ ಈ **ನಿ ಅಸೀದತ್ ಪಿತಾ ನಃ** ಎಂಬ ವಾಕ್ಯವು ವಿವರಿಸುವುದು. ಈ ವಾಕ್ಯದಲ್ಲಿ ಪ್ರಳಯಾನಂತರ ಸೃಷ್ಟಿಗೆ ಪೂರ್ವದಲ್ಲಿ ಇರುವ ಸ್ಥಿತಿಯ ವರ್ಣನೆ ಇದೆ. ಆ ಕಾಲದಲ್ಲಿ ಇದ್ದ ಸ್ಥಿತಿಯನ್ನು ಋ. ಸಂ. ೧೦ನೇ ಮಂಡಲದ ೧೨೯ನೇ ಸೂಕ್ತವು ಚೆನ್ನಾಗಿ ವಿವರಿಸುತ್ತದೆ.

**ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।**
**ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ।**
**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ।**
**ತಮ ಆಸೀತ್ತಮಸಾ ಗೂಳ್ಹಮಗ್ರೇSಪ್ರಕೇತಂ ಸಲಿಲಂ ಸರ್ವಮಾ ಇದಂ ॥**

(ಋ. ಸಂ. ೧೦-೧೨೯-೧,೨,೩)

ಸೃಷ್ಟಿಗೆ ಪೂರ್ವದಲ್ಲಿ ಸತ್, ಅಸತ್ ಎಂದು ಹೇಳಲ್ಪಡುವ ವ್ಯಕ್ತಾವ್ಯಕ್ತವಸ್ತುಗಳೊಂದೂ ಇರಲಿಲ್ಲ. ಲೋಕಗಳಾಗಲಿ ಅಂತರಿಕ್ಷವಾಗಲಿ, ಬೇರೆ ಗುರುತಿಸಬಹುದಾದ ಯಾವ ವಸ್ತುವೂ ಇರಲಿಲ್ಲ. ಆವರಕವಾದ ಮತ್ತಾವ ವಸ್ತುವೂ ಇರಲಿಲ್ಲ. ಸುಖದುಃಖಾದಿಗಳಾಗಲಿ ಅವುಗಳನ್ನು ಅನುಭವಿಸಲು ಅರ್ಹಗಳಾದ ಪ್ರಾಣಿಗಳಾಗಲಿ ಇರಲಿಲ್ಲ. ಇನ್ನೇನಿತ್ತು ? ಅಗಾಧವಾದ ಎಲ್ಲೆಲ್ಲಿಯೂ ವ್ಯಾಪಿಸಬಹುದಾದ ಸಮುದ್ರದಂತಿರುವ ನೀರು ತುಂಬಿತ್ತೇ ? ಎಂದರೆ ಅದೂ ಇರಲಿಲ್ಲ. ಪ್ರಾಣಿಗಳೇ ಇರಲಿಲ್ಲವೆಂದಮೇಲೆ ಮೃತ್ಯುವೂ ಇರಲಿಲ್ಲ ಅಮೃತವೆಂದು ಹೇಳಲ್ಪಡುವ ಭೋಗ್ಯವಸ್ತುವೂ ಇರಲಿಲ್ಲ. ಹಗಲಾಗಲಿ, ರಾತ್ರಿಯಾಗಲಿ ಇರಲಿಲ್ಲ. ಸೂರ್ಯಚಂದ್ರರೇ ಇಲ್ಲದಿರುವಾಗ ರಾತ್ರಿಹಗಲುಗಳೆಲ್ಲಿ ಬಂತು? ಆದ್ದರಿಂದ ರಾತ್ರಿಹಗಲುಗಳಾಗಲಿ ಕಾಲವಿಭಾಗವಾಗಲಿ. ಯಾವುದೂ ಇರಲಿಲ್ಲ ಹಾಗಾದರೆ ಮತ್ತೇನಿದ್ದಿತು? ಬ್ರಹ್ಮ ಮಾತ್ರ ಇದ್ದಿತು. ಆ ಪರಬ್ರಹ್ಮವಸ್ತುವಲ್ಲದೆ ಬೇರೆ ಯಾವುದೂ ಇರಲಿಲ್ಲ. ಅದು ವ್ಯಕ್ತರೂಪದಲ್ಲಿರಲಿಲ್ಲ.

ಕತ್ತಲೆಯು ಹೇಗೆ ಕಾಣಿಸುವುದಿಲ್ಲವೋ ಹಾಗೆ ಆ ಬ್ರಹ್ಮವು ದೃಷ್ಟಿಗೆ ಅಗೋಚರವಾಗಿಯೂ ನೀರಿನಂತೆ ಸರ್ವತ್ರವ್ಯಾಪಕವಾಗಿಯೂ ಇದ್ದಿತು. ಇತ್ಯಾದಿ ವರ್ಣನೆ ಇದೆ. ಈ ವಿಷಯವನ್ನು ನಾವು ಆ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸುತ್ತೇವೆ.

**ಸ ಆಶಿಷಾ ದ್ರವಿಣಂ ಇಚ್ಛಮಾನಃ ಪ್ರಥಮಚ್ಛತ್ ಅವರಾನ್ ಆ ವಿವೇಶ**— ಹಿಂದೆ ವಿವರಿಸಿದಂತೆ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯು ಯಾವಾಗಲೂ ಇರುವುದೇ ? ಹಾಗಿಲ್ಲದಿದ್ದರೆ ಈಗ ಕಾಣುತ್ತಿರುವ ಈ ಜಗದಾದಿಗಳ ಸೃಷ್ಟಿಯು ಹೇಗಾಯಿತು ? ಎಂಬ ವಿಷಯವು ಈ ಋಕ್ಕಿನ ಉತ್ತರಾರ್ಧವಾದ **ಸ ಆಶಿಷಾ** ಎಂಬ ವಾಕ್ಯದಿಂದ ನಿವಾರಿಸಲಾಗಿದೆ. ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯಲ್ಲಿ ಅವ್ಯಕ್ತಸ್ವರೂಪದಿಂದಿದ್ದ ಪರಬ್ರಹ್ಮಮಾತ್ರವಿದ್ದಿತೆಂದೂ ಬೇರೆ ಏನೂಇರಲಿಲ್ಲವೆಂದೂ ಹಿಂದೆ ಹೇಳಿದೆಯಷ್ಟೆ? **ಆತ್ಮಾವಾ ಇದಮೇಕ ಏವಾಗ್ರ ಆಸೀತ್** । **ಸದೇವ ಸೋಮ್ಯೇ-ದಮಗ್ರ ಆಸೀತ್** । ಇತ್ಯಾದಿ ಶ್ರುತಿವಾಕ್ಯಗಳಲ್ಲಿ ವಿವರಿಸಿರುವಂತೆ ಆ ಕಾಲದಲ್ಲಿ ಬ್ರಹ್ಮ ಅಥವಾ ಆತ್ಮವೆಂಬ ವಸ್ತು ಮಾತ್ರವೇ ಇದ್ದಿತು ಬೇರೇನೂ ಇರಲಿಲ್ಲ. ಕೆಲವು ಕಾಲದ ಮೇಲೆ ಆ ಬ್ರಹ್ಮದಲ್ಲಿ ಸೃಷ್ಟಿಯನ್ನು ಮಾಡಬೇಕೆಂಬ ಇಚ್ಛೆಯುಂಟಾಯಿತು. ಆಗ ಆ ಆತ್ಮನು ಅಥವಾ ಪರಮೇಶ್ವರನು **ಬಹು ಸ್ಯಾಂ ಪ್ರಜಾಯೇಯ**— ಅನೇಕ ರೂಪಗಳನ್ನು ತಾಳಬೇಕೆಂದು ಬಯಸಿದನು ಎಂದರೆ ಅನೇಕ ವಿಧವಾದ ಜಗದಾದಿಗಳನ್ನು ಸೃಷ್ಟಿಸಬೇಕೆಂದು ಇಚ್ಛಿಸಿದನು. ಇದನ್ನು ತೈತ್ತಿರೀಯ ಉಪನಿಷತ್ತಿನಲ್ಲಿ ಈರೀತಿ ವಿವರಿಸಿದೆ- **ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ ।** ಸ ತಪೋಽತಪ್ಯತ । **ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ ।** ತದೇವಾನುಪ್ರಾವಿಶತ್ । (ತೈ. ಉ. ೮-೬). ಆಗ ಪರಮೇಶ್ವರನು ಬಹುರೂಪಗಳನ್ನು ಹೊಂದಬೇಕೆಂದು ಇಚ್ಛಿಸಿದನು. ಅದಕ್ಕಾಗಿ ಅವನು ತಪಸ್ಸನ್ನು ಮಾಡಿ ಈ ಜಗತ್ತನ್ನು ಸೃಷ್ಟಿಸಿದನು. ಸೃಷ್ಟಿಮಾಡಿದ ನಂತರ ಜಗತ್ತಿನ ಸಮಸ್ತ ಚರಾಚರವಸ್ತು ಮತ್ತು ಪ್ರಾಣಿಗಳಲ್ಲಿಯೂ ಪ್ರವೇಶಿಸಿದನು ಎಂದರೆ ಆತ್ಮವಸ್ತುವೇ (ಬ್ರಹ್ಮವೇ) ನಾನಾರೂಪಗಳಲ್ಲಿ ವ್ಯಕ್ತವಾಯಿತು ಅಥವಾ ಪರಿವರ್ತಿತವಾಯಿತು ಎಂದಭಿಪ್ರಾಯವು. ಸೃಷ್ಟಿಮಾಡಿದ ವಸ್ತುಗಳಲ್ಲಿ ಪ್ರವೇಶಿಸಿದನು ಎಂದರೆ ಸಮಸ್ತ ವಸ್ತುಗಳಲ್ಲಿಯೂ ಚೈತನ್ಯವನ್ನು ತುಂಬಿದನು. ಪರಮಾತ್ಮನ ಅಂಶವಾದ ಚೈತನ್ಯವಿಲ್ಲದಿರುವ ಯಾವ ವಸ್ತುವೂ ಈ ಜಗತ್ತಿನಲ್ಲಿಲ್ಲ. ಇರುವುದಕ್ಕೆ ಸಾಧ್ಯವೂ ಇಲ್ಲ. ಪರಮಾತ್ಮನೇ ಅನೇಕ ರೂಪಗಳಲ್ಲಿ ವ್ಯಕ್ತನಾದಾಗ (ಎಂದರೆ ಜಗತ್ತು ಸೃಷ್ಟಿಸಲ್ಪಟ್ಟಾಗ) ಪರಮಾತ್ಮನ ಅಂಶಗಳೇ ಆದ ಈ ಸಮಸ್ತ ಜಗತ್ತೂ ಆ ಆತ್ಮನ ಚೈತನ್ಯದಿಂದ ಕೂಡಿರುವುದು ಸಹಜವೇ ಆಗಿದೆ.

ಮುಖ್ಯಸಾರಾಂಶವೇನೆಂದರೆ— ಈ ಋಕ್ಕಿನಲ್ಲಿ ಪರಮೇಶ್ವರನು (ಇಲ್ಲಿ ವಿಶ್ವಕರ್ಮನೆಂದು ಹೇಳಿದೆ) ದೃಷ್ಟಿಗೆ ಗೋಚರವಾಗಿರುವ ಈ ಸಮಸ್ತ ಜಗತ್ತುಗಳನ್ನು ಉಪಸಂಹರಿಸಿದನು (ನಾಶಮಾಡಿದನು) ಇದೇ ಪ್ರಳಯವು. ಅನಂತರ ಬಹುಕಾಲದವರೆಗೆ ಅವ್ಯಕ್ತಸ್ವರೂಪದಿಂದಿದ್ದ ಆತ್ಮ ಅಥವಾ ಬ್ರಹ್ಮವಸ್ತು ಮಾತ್ರ ಇದ್ದಿತು. ಬೇರೆ ಏನೂ ಇರಲಿಲ್ಲ. ಆಗ ಬ್ರಹ್ಮನಲ್ಲಿ ಸೃಷ್ಟಿಮಾಡಬೇಕೆಂಬ ಎಂದರೆ ತಾನೇ ಅನೇಕರೂಪಗಳಲ್ಲಿ ವ್ಯಕ್ತನಾಗಬೇಕೆಂಬ ಇಚ್ಛೆಯುಂಟಾಯಿತು. ಆದರಂತೆ ಜಗತ್ತನ್ನೂ ಅದರಲ್ಲಿರುವ ನಾನಾವಿಧವಾದ ಚರಾಚರಾತ್ಮಕವಸ್ತುಗಳನ್ನೂ ಪ್ರಾಣಿಗಳನ್ನೂ ಸೃಷ್ಟಿಸಿ ಅವುಗಳಲ್ಲಿ ತಾನು ಅಂತರ್ಯಾಮಿರೂಪವಾಗಿ ಪ್ರವೇಶಿಸಿದನು ಎಂಬ ವಿಷಯವು ಈ ಋಕ್ಕಿನಲ್ಲಿ ವಿವೃತವಾಗಿದೆ.



॥ ಸಂಹಿತಾಪಾಠಃ ॥

ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಸೀತ್ ।
ಯತೋ ಭೂಮಿಂ ಜನಯನ್ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ
ವಿಶ್ವಚಕ್ಷಾಃ ॥ ೨ ॥

॥ ಪದಪಾಠಃ ॥

ಕಿಂ । ಸ್ವಿತ್ । ಆಸೀತ್ । ಅಧಿऽಸ್ಥಾನಂ । ಆऽರಂಭಣಂ । ಕತಮತ್ । ಸ್ವಿತ್ । ಕಥಾ । ಆಸೀತ್ ।
ಯತಃ । ಭೂಮಿಂ । ಜನಯನ್ । ವಿಶ್ವऽಕರ್ಮಾ । ವಿ । ದ್ಯಾಂ । ಔರ್ಣೋತ್ । ಮಹಿನಾ । ವಿಶ್ವಚಕ್ಷಾಃ ॥

॥ ಸಾಯಣಭಾಷ್ಯಂ ॥

ವೈಶ್ವದೇವಸ್ಯ ಪಶೋರ್ವಪಾಯಾ ಅನುವಾಕ್ಯಾ ಕಿಂ ಸ್ವಿದಿತ್ಯೇಷಾ । ಸೂತ್ರಿತಂ ಚ । ಕಿಂ ಸ್ವಿದಾಸೀದಧಿಷ್ಠಾನಂ ಯೋ ನಃ ಪಿತಾ ಜನಿತಾ । ಆ. ೩-೮ । ಇತಿ ॥

ಪೂರ್ವಮಂತ್ರೇ ಜಗತ್ಪ್ರಲಯಕಾಲೇ ಸಂಹೃತ್ಯ ಪಶ್ಚಾತ್ಸಿಸೃಕ್ಷಾಯಾಂ ಸರ್ವಂ ಸೃಷ್ಟ್ವಾ ತತ್ರ ಪ್ರವಿಷ್ಟ ಇತ್ಯುಕ್ತಂ । ತತ್ರ ತಸ್ಯ ದ್ವಿತೀಯಸ್ಯಾಧಿಷ್ಠಾನಜಗದುಪಾದಾನಕಾರಣಾದ್ಯಸಂಭವಾತ್ಸೃಷ್ಟಿರನುಪಪನ್ನೇತ್ಯಾಕ್ಷಿಪತಿ । ಲೋಕೇ ಹಿ ಘಟಂ ಚಿಕೀರ್ಷುಃ ಕುಲಾಲೋ ಗೃಹಾದಿಕಂ ಕಿಂಚಿತ್ಸ್ಥಾನಮಧಿಷ್ಠಾಯ ಮೃದ್ರೂಪೇಣಾರಂಭದ್ರವ್ಯೇಣ ಚಕ್ರಾದಿರೂಪೈರುಪಕರಣೈರ್ಘಟಂ ನಿಷ್ಪಾದಯತಿ । ತದ್ವದೀಶ್ವರಸ್ಯ ಜಗದಾಶ್ರಯದ್ಯಾವಾಪೃಥಿವ್ಯೋರುತ್ಪಾದನವೇಲಾಯಾಮಧಿಷ್ಠಾನಂ ಕಿಂ ಸ್ವಿದಾಸೀತ್ । ಕಿಂ ನಾಮಾಭೂತ್ । ನ ಕಿಂಚಿದಿತ್ಯರ್ಥಃ । ತಥಾ ತಯೋರಾರಂಭಣಂ ಕತಮತ್ಸ್ವಿತ್ । ಆರಭ್ಯತೇಽನೇನೇತ್ಯಾರಂಭಣಮುಪಾದಾನಕಾರಣಂ । ತದಪಿ ಕತಮದ್ಭವೇತ್ । ತದಪಿ ನೇತ್ಯರ್ಥಃ । ಯದ್ಯಪಿ ಸಂಭವೇದಾರಂಭಣಂ ಕಥಾಸೀತ್ । ಕಥಮಭೂತ್ । ಕಿಂ ಸ್ವಯಂ ಸದಸದ್ವಾ ಭವೇದಿತ್ಯರ್ಥಃ । ಉಭಯಮಪಿ ನೋಪಪದ್ಯತೇ । ಸಚ್ಚೇತ್ ಅದ್ವೈತಭಂಗಪ್ರಸಂಗಃ । ಅಸಚ್ಚೇತ್ ಸದಾತ್ಮಕಯೋರ್ದ್ಯಾವಾಪೃಥಿವ್ಯೋರುಪಾದಾನಾನರ್ಹತ್ವಾತ್ । ನಾನ್ಯತ್ಕಿಂಚನ ಮಿಷತ್ । ಐ. ಆ. ೨-೪-೧ । ಇತಿ ಶ್ರುತೇಶ್ಚೇತ್ಯಭಿಪ್ರಾಯಃ । ಯತೋ ಯಸ್ಮಾದಧಿಷ್ಠಾನಾದಾರಂಭಣಾಚ್ಚ ವಿಶ್ವಚಕ್ಷಾಃ ಸರ್ವದ್ರಷ್ಟಾ ವಿಶ್ವಕರ್ಮಾ ಪರಮೇಶ್ವರೋ ಭೂಮಿಂ ಜನಯನ್ವರ್ತತೇ ತಥಾ ದ್ಯಾಂ ದಿವಂ ವ್ಯೌರ್ಣೋತ್ ವ್ಯವೃಣೋತ್ ಸೃಷ್ಟವಾನ್ ಮಹಿನಾ ಸ್ವಮಹತ್ತ್ವೇನ । ಕಿಂ ಸ್ವಿದಾಸೀದಿತಿ ॥

॥ ಪ್ರತಿಪದಾರ್ಥ ॥

ಯತಃ—ಯಾವ ಆಧಾರ ಮತ್ತು ಮೂಲಕಾರಣಗಳಿಂದ । ವಿಶ್ವಚಕ್ಷಾಃ—ಸಕಲವನ್ನೂ ನೋಡಬಲ್ಲ । ವಿಶ್ವಕರ್ಮಾ—ಲೋಕೇಶ್ವರನು । ಭೂಮಿಂ—ಭೂಮಿಯನ್ನು । ಜನಯನ್—ಉತ್ಪನ್ನಮಾಡುತ್ತ । ಮಹಿನಾ—ತನ್ನ ಮಾಹಾತ್ಮ್ಯದಿಂದ । ದ್ಯಾಂ—ದ್ಯುಲೋಕವೆಲ್ಲವನ್ನೂ । ವ್ಯೌರ್ಣೋತ್—ನಿರ್ಮಿಸಿದನೋ

ಅಂತಹ | **ಅಧಿಷ್ಠಾನಂ**— ಈ ಲೋಕನಿರ್ಮಾಣಕ್ಕೆ ಆಧಾರಸ್ಥಾನವು | **ಕಿಂ ಸ್ವಿತ್ ಆಸೀತ್**—ಯಾವುದಿದ್ದಿತು | **ಆರಂಭಣಂ**— ಉತ್ಪಾದನಕ್ಕೆ ಮೂಲಕಾರಣವು | **ಕತಮತ್ ಸ್ವಿತ್**— ಯಾವುದಾಗಿದ್ದಿತು | **ಕಥಾ ಆಸೀತ್**— ಯಾವ ಪ್ರಕಾರವಾಗಿದ್ದಿತು ?

॥ ಭಾವಾರ್ಥ ॥

ಸಕಲವನ್ನೂ ನೋಡಬಲ್ಲ ಲೋಕೇಶ್ವರನು ಯಾವ ಆಧಾರ ಮತ್ತು ಮೂಲಕಾರಣಗಳಿಂದ ಭೂಮಿಯನ್ನು ಉತ್ಪನ್ನಮಾಡುತ್ತ ತನ್ನ ಮಾಹಾತ್ಮ್ಯದಿಂದ ದ್ಯುಲೋಕವೆಲ್ಲವನ್ನೂ ನಿರ್ಮಿಸಿದನೋ, ಅಂತಹ ಈ ಲೋಕನಿರ್ಮಾಣದ ಆಧಾರಸ್ಥಾನವಾವುದು ? ಇದರ ಉತ್ಪತ್ತಿಗೆ ಮೂಲಕಾರಣವಾವುದು ? ಅದರ ಪ್ರಕಾರವೇನು ? ಸ್ವರೂಪವೇನು ?

## English Translation

What was the station ? what was the material ? how was (it done) ? so that the beholder of all, Vishwakarman (was) generating and disclosed heaven by his might.

॥ ವಿಶೇಷವಿಷಯಗಳು ॥

ವಿಶ್ವೇದೇವತೆಗಳನುದ್ದೇಶಿಸಿ ಮಾಡುವ ಪಶುಯಾಗದ ವಪಾಹೋಮವನ್ನು ಮಾಡುವಾಗ **ಕಿಂ ಸ್ವಿತ್** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಕಿಂಸ್ವಿದಾಸೀದಧಿಷ್ಠಾನಂ ಯೋ ನಃ ಪಿತಾ ಜನಿತಾ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

ಹಿಂದಿನ ಋಕ್ಕಿನಲ್ಲಿ ಜಗತ್ಪ್ರಳಯದ ಸ್ವರೂಪವನ್ನು ತಿಳಿಸಿ ಕೆಲವು ಕಾಲಾನಂತರ ಪುನಃ ಸೃಷ್ಟಿಮಾಡಬೇಕೆಂದು ಪರಮೇಶ್ವರನು ಇಚ್ಛಿಸಿ ಅದರಂತೆ ಸೃಷ್ಟಿಮಾಡಿ ಅನಂತರ ಸೃಷ್ಟಿಮಾಡಿದ ಚರಾಚರಾತ್ಮಕವಾದ ಸರ್ವವಸ್ತುಗಳಲ್ಲಿಯೂ ಪರಮಾತ್ಮನು ಪ್ರವೇಶಿಸಿದನೆಂದು ಹೇಳಲಾಗಿದೆಯಷ್ಟೆ. ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವಸ್ತು ಒಂದು ಮಾತ್ರ ಇದ್ದಿತೆಂದೂ ಬೇರೆ ಏನೂ ಇರಲಿಲ್ಲವೆಂದೂ ಸಹ ತಿಳಿಸಿದೆ. ಒಂದು ವಸ್ತುವನ್ನು ಸೃಷ್ಟಿಮಾಡಬೇಕಾದರೆ ಸೃಷ್ಟಿಮಾಡಲು ಬೇಕಾದಸ್ಥಳ, ಮೂಲವಸ್ತು ಮತ್ತು ಸೃಷ್ಟಿಮಾಡುವ ಪುರುಷನು ಇವು ಅವಶ್ಯಕವಾಗಿ ಬೇಕೇಬೇಕೆಂದು ಲೋಕವ್ಯವಹಾರದಲ್ಲಿ ಎಲ್ಲರಿಗೂ ತಿಳಿದ ವಿಷಯವಾಗಿದೆ. ಪ್ರಳಯಕಾಲದಲ್ಲಿ ಪರಮೇಶ್ವರನೊಬ್ಬನೇ ಇದ್ದು ಬೇರಾವ ವಸ್ತುವೂ ಇಲ್ಲದಿದ್ದುದರಿಂದ ಈ ಸೃಷ್ಟಿಯು ಹೇಗೆ ಸಾಧ್ಯ ಎಂಬ ವಿಷಯವನ್ನು ಈ ಋಕ್ಕಿನಲ್ಲಿ ತಿಳಿಸಲಾಗುವುದು.

ಇದಕ್ಕೆ ಒಂದು ಉದಾಹರಣೆಯನ್ನು ಕೊಟ್ಟರೆ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಲು ಅನುಕೂಲವಾಗುವುದು. ಒಬ್ಬ ಕುಂಬಾರನು ಒಂದು ಮಡಕೆಯನ್ನು ಮಾಡುತ್ತಾನೆಂದು ಭಾವಿಸೋಣ. ಮಡಕೆಯನ್ನು ನಿರ್ಮಿಸುವುದಕ್ಕೆ ಸ್ಥಳಬೇಕು. ಮಡಕೆಗೆ ಬೇಕಾದ ಮೂಲವಸ್ತುವು ಎಂದರೆ ಮಣ್ಣು ಬೇಕು. ಸಾಧನವಾದ ಚಕ್ರ, ನೀರು, ಕೋಲು ಇವುಗಳು ಬೇಕು. ಇವುಗಳನ್ನೆಲ್ಲಾ ಉಪಯೋಗಿಸಿ ತನ್ನ ಬುದ್ಧಿವಂತಿಕೆಯಿಂದ ಮಡಕೆಯನ್ನು ನಿರ್ಮಿಸಬಲ್ಲ ಕರ್ತೃವು ಎಂದರೆ ಕುಂಬಾರನು ಬೇಕು. ಇವಿಷ್ಟು ಇದ್ದರೆ ಮಾತ್ರ ಮಡಕೆಯನ್ನು ನಿರ್ಮಿಸಲು ಸಾಧ್ಯವು. ಇಲ್ಲದಿದ್ದರೆ ಇಲ್ಲ. ಈಗ ಪ್ರಳಯ ಕಾಲದಲ್ಲಿ ಸೃಷ್ಟಿಮಾಡುವುದಕ್ಕೆ ಕರ್ತೃವಾದ ಪರಮಾತ್ಮನೇನೋ ಇದ್ದನು. ಆದರೆ ಸ್ಥಳವೆಲ್ಲಿದ್ದಿತು ? ಜಗತ್ಸೃಷ್ಟಿಗೆ ಬೇಕಾದ ಮೂಲವಸ್ತುವು Raw Materials ಎಲ್ಲಿದ್ದಿತು ? ಸಾಧನಸಾಮಗ್ರಿಗಳೆಲ್ಲಿತ್ತು ? ಯಾವುದೂ ಇರಲಿಲ್ಲ. ಆದರೂ ಪರಮಾತ್ಮನು ಜಗತ್ತನ್ನು ಸೃಷ್ಟಿಮಾಡಿದನು. ಅದನ್ನೇ ಈ ಋಕ್ಕಿನಲ್ಲಿ ಋಷಿಯು ಪ್ರಶ್ನೋತ್ತರಮೂಲಕ ವಿಮರ್ಶಿಸಿ ಸೃಷ್ಟಿಯು ಹೇಗೆ ನಡೆಯಿತೆಂಬುವುದನ್ನು ವಿವರಿಸುವನು.

**ಅಧಿಷ್ಠಾನಂ ಕಿಂ ಸ್ವಿತ್ ಆಸೀತ್**—ಜಗತ್ಸೃಷ್ಟಿಕಾಲದಲ್ಲಿ ಈ ಲೋಕನಿರ್ಮಾಣಕ್ಕೆ ಆಧಾರಸ್ಥಾನವು ಯಾವುದಿದ್ದಿತು ? ಈಗ ನಾವು ನೋಡುತ್ತಿರುವ ದ್ಯಾವಾಪೃಥಿವೀ ಎಂದರೆ ಭೂಮಿ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳು ಆಗ ಇರಲಿಲ್ಲವಾದ್ದರಿಂದ, ಈ ಲೋಕಗಳನ್ನು ಸೃಷ್ಟಿಮಾಡಲು ಆ ಪರಮಾತ್ಮನು ಎಲ್ಲಿ ನಿಂತುಕೊಂಡು ಹೇಗೆ ಮಾಡಿದನು ? ಎಂದರೆ ಲೋಕಸೃಷ್ಟಿಗೆ ಆಧಾರಸ್ಥಾನವು ಆಗ ಯಾವುದೂ ಇರಲಿಲ್ಲ.

**ಆರಂಭಣಂ ಕತಮತ್ಸ್ವಿತ್**—ಇದಲ್ಲದೆ ವಸ್ತುನಿರ್ಮಾಣಮಾಡುವುದಕ್ಕೆ ಪ್ರಾರಂಭದಲ್ಲಿ ಅದಕ್ಕೆ ಬೇಕಾಗುವ ಮೂಲವಸ್ತು (Raw Materials) ಯಾವುದಿತ್ತು ? ಯಾವುದೂ ಇರಲಿಲ್ಲ. ಮೂಲವಸ್ತುವೆಂದರೆ ಮಡಕೆಯನ್ನು ಮಾಡುವುದಕ್ಕೆ ಮಣ್ಣೇ ಮೂಲವಸ್ತುವು. ಬಟ್ಟೆಯನ್ನು ಮಾಡುವುದಕ್ಕೆ ಹತ್ತಿಯೇ ಮೂಲವಸ್ತುವು. ಪಾತ್ರೆಗಳನ್ನು ಮಾಡುವುದಕ್ಕೆ ಲೋಹವೇ ಮೂಲವಸ್ತುವು. ಮೇಜು, ಕುರ್ಚಿ, ಮಂಚ ಮೊದಲಾದವನ್ನು ಮಾಡುವುದಕ್ಕೆ ಮರವೇ (ವೃಕ್ಷವೇ) ಮೂಲವಸ್ತುವು ಇತ್ಯಾದಿ. ಹೀಗಿರುವಲ್ಲಿ ಈ ದ್ಯಾವಾಪೃಥಿವಿಗಳನ್ನು ನಿರ್ಮಿಸುವುದಕ್ಕೆ ಆ ಕಾಲದಲ್ಲಿ ಯಾವ ಮೂಲವಸ್ತುವಿದ್ದಿತು ? ಯಾವುದೂ ಇರಲಿಲ್ಲ.

**ಕಥಾ ಆಸೀತ್**—ಮೇಲೆ ಹೇಳಿದಂತೆ, ಸ್ಥಳವೂ, ಮೂಲವಸ್ತುವೂ ಇಲ್ಲದಿರುವಾಗ ಈ ಸೃಷ್ಟಿಕಾರ್ಯವು ಹೇಗಾಯಿತು ಎಂದು ಋಷಿಯು ಪ್ರಶ್ನೆಮಾಡುತ್ತಾನೆ. ಉಪನಿಷದಾದಿಗಳಲ್ಲಿ—**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ**—ಎಂದು ಹೇಳಿರುವುದು. ಎಂದರೆ ಸೃಷ್ಟಿಗೆ ಮೊದಲು ಅಸತ್—ಏನೂ ಇಲ್ಲದಿರುವುದು ಇದ್ದಿತು. ಆದರಿಂದ ಸತ್-ಇರುವುದು ಅಥವಾ ಸ್ಥಿತಿಯು ಉಂಟಾಯಿತು ಎಂದು ಹೇಳಿದೆ. ಸೃಷ್ಟಿಗೆ ಪೂರ್ವದಲ್ಲಿ ಸತ್ ಎಂಬ ವಸ್ತುವಿದ್ದು ಅದರಿಂದ (ಆ ಮೂಲವಸ್ತುವಿನಿಂದ) ಜಗತ್ಸೃಷ್ಟಿಯಾಯಿತೆಂದರೆ ಆಗ ಪರಮಾತ್ಮನು ಮತ್ತು ಸತ್ ಎಂಬ ಎರಡು ವಸ್ತುಗಳಿದ್ದಂತಾಯಿತು. ಎರಡು ವಸ್ತುಗಳಿದ್ದರೆ ಅದ್ವೈತವೆಲ್ಲಿ ಬಂತು ? ಆದ್ದರಿಂದ ಅದು ಸರಿಯಲ್ಲ. ಒಳ್ಳೇದು, ಅಸತ್ತೇ ಇತ್ತು ಎಂದರೆ ಅಸತ್ತಿನಿಂದ (ಶೂನ್ಯದಿಂದ) ಸತ್ ಎಂದು ಹೇಳಲ್ಪಡುವ ದ್ಯಾವಾಪೃಥಿವಿಗಳ ಉತ್ಪತ್ತಿಯು ಹೇಗೆ ಸಾಧ್ಯ ? ಎಂದರೆ ಏನೂ ಇಲ್ಲದೆ ಒಂದು ಹೊಸವಸ್ತುವನ್ನು ಸೃಷ್ಟಿಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆಯು ಸಹಜವಾಗಿಯೇ ಉದ್ಭವಿಸುವುದು. ಆಧುನಿಕವಿಜ್ಞಾನಿಗಳು ಹೇಳುವಂತೆ Nothing can be lost or nothing can be created ಯಾವವಸ್ತುವನ್ನೂ ಸಂಪೂರ್ಣವಾಗಿ ನಾಶಮಾಡಲು ಸಾಧ್ಯವಿಲ್ಲ ಅದರಂತೆ ಮೂಲವಸ್ತುವಿನ ಸಹಾಯವಿಲ್ಲದೆ ಯಾವ ಹೊಸವಸ್ತುವನ್ನೂ ನಿರ್ಮಿಸಲು ಸಾಧ್ಯವಿಲ್ಲ ಎಂಬ ವಚನವು ವೇದಾಂತತತ್ತ್ವಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇ ಆಗಿದೆ. ಈ ವಾಕ್ಯದ ಆಧಾರದಮೇಲೆಯೇ ಜಗತ್ಸೃಷ್ಟಿಸ್ಥಿತಿಪ್ರಳಯಗಳ ಸ್ವರೂಪವನ್ನು ವೇದಾಂತತತ್ತ್ವಗಳಲ್ಲಿ ಎಂದರೆ ಉಪನಿಷದಾದಿಗಳಲ್ಲಿ ವಿಮರ್ಶೆಪೂರ್ವಕವಾಗಿ ವಿವರಿಸಲಾಗಿದೆ. ಅವುಗಳನ್ನೆಲ್ಲಾ ನಾವು ಬೇರೆ ಸಂದರ್ಭದಲ್ಲಿ ವಿವರಿಸುತ್ತೇವೆ. ಆದ್ದರಿಂದ ಪರಮಾತ್ಮನಿಗೆ ಸೃಷ್ಟಿಕಾರ್ಯದಲ್ಲಿ ಸತ್, ಅಸತ್ ಯಾವುದೂ ಸಹಕಾರಿಯಾಗಲಿಲ್ಲ ಎಂದು ಇಲ್ಲಿ ತಿಳಿಸಿದೆ.

ಹಾಗಾದರೆ—**ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ ದ್ಯಾಮೌರ್ಣೋತ್**—ಈ ದ್ಯಾವಾಪೃಥಿವಿಗಳನ್ನು ಪರಮೇಶ್ವರನಾದ ವಿಶ್ವಕರ್ಮನು ಹೇಗೆ ಉತ್ಪತ್ತಿಮಾಡಿದನು ? ಎಂದು ಋಷಿಯು ಪ್ರಶ್ನೆಮಾಡಿದಾನೆ. ಇದಕ್ಕೆ ಉತ್ತರವಾಗಿ–

**ಮಹಿನಾ ವಿಶ್ವಚಕ್ಷಾಃ**—ಎಂಬ ಕೊನೆಯ ವಾಕ್ಯವನ್ನು ಅಲ್ಲಿಯೇ ಹೇಳಿದಾನೆ. ಎಂದರೆ ವಿಶ್ವಕರ್ಮನು ತನ್ನ ಮಹಾಮಹಿಮೆಯಿಂದ ಈ ಜಗತ್ತನ್ನು ಸೃಷ್ಟಿಮಾಡಿದಾನೆ. ಇಲ್ಲಿ **ವಿಶ್ವಚಕ್ಷಾಃ** ಎಂಬ ಶಬ್ದವು ವಿಶ್ವಕರ್ಮನ ಅಗಾಧವಾದ ಮಹಿಮೆಯನ್ನು ವರ್ಣಿಸುವ ವಿಶೇಷಣಪದವಾಗಿದೆ. ಈ ಪರಮೇಶ್ವರನು ಸಮಸ್ತವನ್ನೂ ನೋಡ ಬಲ್ಲವನು ಎಂದರೆ ತಿಳಿಯಬಲ್ಲವನು. ಇವನೇ ಸಕಲ ಚರಾಚರವಸ್ತುಗಳಾಗಿ ಪರಿವರ್ತಿತನಾಗಿರುವುದರಿಂದ ಅಥವಾ ಸೃಷ್ಟವಾದ ಸಮಸ್ತವಸ್ತುವಿನಲ್ಲಿಯೂ ಇವನು ಅಂತರ್ಯಾಮಿಯಾಗಿ ಪ್ರವೇಶಿಸಿ ಪ್ರಾಣಿಗಳ ಚಲನವಲನ ಗಳಿಗೆ ಪ್ರೇರಕನಾಗಿರುವುದರಿಂದ ಈ ಪರಮೇಶ್ವರನಿಗೆ ಎಂದರೆ ವಿಶ್ವಕರ್ಮನಿಗೆ ಕಾಣಿಸದ ಅಥವಾ ತಿಳಿಯದ ವಿಷಯವು ಯಾವುದೂ ಇಲ್ಲ. ಆದ್ದರಿಂದಲೇ ಇಲ್ಲಿ **ವಿಶ್ವಚಕ್ಷಾಃ** ಮತ್ತು **ಮಹಿನಾ** ಎಂಬ ವಿಶ್ವಕರ್ಮನ ಅಗಾಧ ವಾದ ಮಹಿಮೆಯನ್ನು ವರ್ಣಿಸುವ ವಿಶೇಷಣಪದಗಳ ಪ್ರಯೋಗವಿದೆಯೆಂದು ತಿಳಿಯಬೇಕು. ಇಲ್ಲಿ ಸುಮ್ಮನೇ ವಿಶ್ವಕರ್ಮನ ಮಹಾಮಹಿಮೆ ಎಂದು ಹೇಳಿದಮಾತ್ರಕ್ಕೆ ಅದರಿಂದ ಅವನ ಮಹಿಮೆಯ ಸ್ವರೂಪವು ಏನು ತಿಳಿದಂತಾ ಯಿತು ? ಆ ಮಹಿಮೆಯ ಸ್ವರೂಪವೇನು ? ಇತರರಲ್ಲಿಯೂ ಆ ಮಹಿಮೆಯಿರಲೂ ಸಾಧ್ಯವೇ ? ಈ ವಿಷಯ ಗಳನ್ನು ಋಷಿಯು ಮುಂದಿನ ಋಕ್ಕಿನಲ್ಲಿ ವಿಶದವಾಗಿ ವರ್ಣಿಸಿದಾನೆ.

ಈಶ್ವರನಿಂದ ನಿರ್ಮಿತವಾದ ಜಗತ್ತಿನ ಸೃಷ್ಟಿಯನ್ನು ಲೌಕಿಕವಾದ ದೃಷ್ಟಿಯಿಂದ ಪರಿಶೀಲಿಸಿದರೆ, ಒಂದು ಪ್ರಶ್ನೆಯು ಸಹಜವಾಗಿ ತೋರುತ್ತದೆ. ಲೌಕಿಕವಾದ ಸೃಷ್ಟಿಗೆ ಬೇಕಾದ ಸಾಧನಸಾಮಗ್ರಿಗಳು ಇಲ್ಲಿರುವುದಿಲ್ಲ. ಉದಾಹರಣೆಗೆ ; ಘಟ (ಮಡಕೆ)ವನ್ನು ಮಾಡಲಿಚ್ಛೆಯುಳ್ಳ ಕುಂಬಾರನಿಗೆ **ಅಧಿಷ್ಠಾನ, ಆರಂಭಣ** ಇತ್ಯಾದಿ ಸಾಧನಸಾಮಗ್ರಿಗಳಿರಬೇಕು. **ಅಧಿಷ್ಠಾನ**ವೆಂದರೆ, ಘಟದ ನಿರ್ಮಾಣಕ್ಕೆ ಅವಶ್ಯವಾದ ಒಂದು ಸ್ಥಾನ. **ಆರಂಭಣ** ವೆಂದರೆ, ಉಪಾದಾನಕಾರಣ. ಘಟದ ನಿರ್ಮಾಣಕ್ಕೆ ಮಣ್ಣು ಉಪಾದಾನಕಾರಣ. (ಕುಂಬಾರನು ನಿಮಿತ್ತ ಕಾರಣ). ಮಣ್ಣಿಲ್ಲದೆ ಯಾವರೀತಿ ಘಟವು ಸಾಧ್ಯವಿಲ್ಲವೋ, ಹಾಗೆ ಜಗತ್ತಿನ ಸೃಷ್ಟಿಯೂ ಉಪಾದಾನಕಾರಣ ವಿಲ್ಲದೆ ಸಾಧ್ಯವಿಲ್ಲ. ಈಶ್ವರನು (ಪ್ರಜಾಪತಿ, ವಿಶ್ವಕರ್ಮ ಇದೆಲ್ಲವೂ ಪರ್ಯಾಯನಾಮಗಳೆಂದು ಮೇಲೆ ತಿಳಿಸಿದೆ) ಪ್ರಳಯಕಾಲದಲ್ಲಿ ಸಂಹಾರ ರೂಪವಾದ ಹೋಮಸಂಪಾದಕನಾಗಿ ಸಕಲ ಜಗತ್ತನ್ನೂ ಈ ಹೋಮದಲ್ಲಿ ಆಹುತಿ ಯನ್ನಾಗಿ ಅರ್ಪಿಸಿ ಸರ್ವಪ್ರಳಯವಾದನಂತರ ತಾನೊಬ್ಬನು ಮಾತ್ರ ಉಳಿದಿರುತ್ತಾನೆ. ಅದ್ವಿತೀಯನಾಗಿ ಉಳಿದಿರುವಾಗ ಇವನಿಗೆ ಸಿಸೃಕ್ಷೆಯು (ಸೃಷ್ಟಿಮಾಡುವ ಇಚ್ಛೆ) ಉಂಟಾಗುತ್ತದೆ. ಆಗ ಸೃಷ್ಟಿಗೆ ಬೇಕಾದ ಪ್ರದೇಶ (ಅಧಿಷ್ಠಾನ) ರೂಪವಾದ ಆಶ್ರಯವಾಗಲಿ, ಉಪಾದಾನಕಾರಣವಾಗಲಿ ಯಾವುದೂ ಇರುವುದಿಲ್ಲ. ಜಗತ್ ಸೃಷ್ಟಿಯು ಹೇಗೆ ಸಾಧ್ಯ ಎಂಬ ಆಕ್ಷೇಪವು ಇಲ್ಲಿ ಸಹಜವಾಗಿರುತ್ತದೆ, ಆದುದರಿಂದ ಈ ಋಕ್ಕಿನಲ್ಲಿ ಈ ರೀತಿ ಪ್ರಶ್ನೆಯನ್ನು ಕೇಳಲಾಗಿದೆ.

ಯಾವ ಅಧಿಷ್ಠಾನ ಮತ್ತು ಆರಂಭಣಗಳಿಂದ ಈಶ್ವರನು (ವಿಶ್ವಕರ್ಮನು) ದ್ಯಾವಾಪೃಥಿವಿಗಳನ್ನು ಸೃಜಿಸಿದ್ದಾನೆ? ಈ ಉಪಾದಾನಕಾರಣದ ಸ್ವರೂಪವೇನು ? ಎಂಬುದೇ ಪ್ರಶ್ನೆ. ಒಂದು ವೇಳೆ, ಉಪಾದಾನ ಕಾರಣವಾವುದಾದರೂ ಇದ್ದರೆ, ಅದರ ಸ್ವರೂಪವೇನು ? ಈಶ್ವರನ ವಿನಾ ಉಳಿದ ಸತ್ಪದಾರ್ಥವು ಇನ್ನಾವುದೂ ಇರಲಿಲ್ಲ. ಸದಾತ್ಮಕವಾದ ಜಗನ್ನಿರ್ಮಾಣಕ್ಕೆ ಸದಾತ್ಮಕವಾದ ಆರಂಭಣವೇ ಅತ್ಯವಶ್ಯವಾಗಿರುತ್ತದೆ. ಅದ್ರೂಪ ವಾದ ವಸ್ತುವಿನಿಂದ ಸದ್ರೂಪವಾದ ಜಗತ್ತನ್ನು ನಿರ್ಮಿಸಲು ಸಾಧ್ಯವಿಲ್ಲ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥**

(ಭ. ಗೀ. ೨-೧೬)

ಅಭಾವರೂಪವಾದ ತತ್ತ್ವದಿಂದ ಭಾವರೂಪವಾದ ತತ್ತ್ವವು ಉತ್ಪನ್ನವಾಗುವುದಿಲ್ಲ. ಭಾವರೂಪವಾದ ವಸ್ತುವಿನಿಂದ ಅಭಾವವು ಉತ್ಪನ್ನವಾಗುವುದಿಲ್ಲ. ಏನೂ ಇಲ್ಲದಿರುವಿಕೆಯಿಂದ ಸದ್ರೂಪವಾದ ಇರುವಿಕೆಯು ಹೇಗೆ ಸಾಧ್ಯವಿಲ್ಲವೋ ಹಾಗೆ ಏನೂ ಇಲ್ಲದಿರುವಾಗ ಸದ್ರೂಪವಾದ ಜಗತ್ತಿನ ಸೃಷ್ಟಿಯು ಹೇಗೆ ? ಎಂಬುದು ಎರಡನೆಯ ಪ್ರಶ್ನೆ. ಉಳಿದಾವುದೂ ಇಲ್ಲದೆ, ಈಶ್ವರನೊಬ್ಬನೇ ಪ್ರಳಯದನಂತರ ಉಳಿಯುತ್ತಾನೆ ಎಂಬುದಕ್ಕೆ ಪ್ರಮಾಣವೇನೆಂದರೆ, **ಯ ಇಮಾ ವಿಶ್ವಾ ಭುವನಾನಿ ಜುಹ್ವತ್** ಎಂದು ಮೇಲಿನ ಋಕ್ಕಿನಲ್ಲಿ ತಿಳಿಸಿದೆ. ಅಲ್ಲದೇ ;—

**ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ನಾನ್ಯತ್ ಕಿಂಚನ ಮಿಷತ್**

(ಐ ಆ. ೨-೪-೧)

**ಸದೇವ ಸೋಮ್ಯ ಇದಮಗ್ರ ಆಸೀತ್ । ಏಕಮೇವಾದ್ವಿತೀಯಂ**

(ಛಾ. ಉ. ೬-೨-೧)

**ಪ್ರಜಾಪತಿರ್ಹ ವಾ ಇದಮಗ್ರ ಏವಾಸ**

(ಶ ಬ್ರಾ. ೭-೨-೪-೧)

ಇತ್ಯಾದಿ ಶ್ರುತಿವಾಕ್ಯಗಳು ಜಗತ್ತಿನ ಅಭಾವವನ್ನೂ, ಈಶ್ವರನ ಅದ್ವಿತೀಯತ್ವವನ್ನು ಪ್ರತಿಪಾದಿಸುತ್ತವೆ. ಅದ್ವಿತೀಯತ್ವವಿದ್ದರೂ ಇನ್ನೊಂದು ಪ್ರಶ್ನೆಯೂ ಉದ್ಭವಿಸುತ್ತದೆ. ಏಕಮಾತ್ರವಾದ ಈ ತತ್ತ್ವವು ಸದ್ರೂಪವೇ, ಅಸದ್ರೂಪವೇ ಎಂಬುದೇ ಪ್ರಶ್ನೆ. **ನಾಸದಾಸೀನ್ನೋ ಸದಾಸೀತ್** (ಋ. ಸಂ. ೧೦-೧೨೯-೧) ಇತ್ಯಾದಿ ವಾಕ್ಯಗಳು ಅಸತ್ತೂ ಇರಲಿಲ್ಲ; ಸತ್ತೂ ಇರಲಿಲ್ಲ. ಕೇವಲ ತಮೋವ್ಯಾಪ್ತವಾಗಿತ್ತು ಎಂದು ತಿಳಿಸುತ್ತವೆ. ಎರಡೂ ಇಲ್ಲದ ಅವಸ್ಥೆಯಿಂದ ಸದ್ರೂಪವಾದ ಜಗತ್ತು ಹೇಗೆ ಉತ್ಪನ್ನವಾಗಲು ಸಾಧ್ಯ ಎಂಬ ಪ್ರಶ್ನೆಗೆ ಆ ಋಕ್ಕನ್ನು ವಿವರಿಸುವಾಗ ಉತ್ತರವನ್ನು ಹೇಳಬೇಕಾಗುತ್ತದೆ. ಆದರೆ ಇನ್ನು ಕೆಲವೆಡೆಗಳಲ್ಲಿ ಸದ್ರೂಪನಾದ ಈಶ್ವರನೇ ಜಗತ್ಕಾರಣನು ಎಂಬುದನ್ನು ನಿಸ್ಸಂದಿಗ್ಧವಾಗಿ ತಿಳಿಸಿದೆ. ಉದಾಹರಣೆಗೆ—

**ತದ್ಧೈಕ ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾಯತ**

(ಛಾ, ಉ. ೬-೨-೧)

ಸೃಷ್ಟಿಗೆ ಪೂರ್ವಭಾವಿಯಾಗಿ ಸದ್ರೂಪವಾದ ವಸ್ತುವು ಯಾವುದೂ ಇರಲಿಲ್ಲ. ಕೇವಲ ಅಸತ್ತುಮಾತ್ರವಿದ್ದಿತು. ಅದರಿಂದ ಸದ್ರೂಪವಾದ ಜಗನ್ನಿರ್ಮಾಣವಾಯಿತು ಎಂದು ಹೇಳುವ ಶ್ರುತಿವಾಕ್ಯಗಳೂ ಇವೆ ಎಂಬುದು ಇನ್ನೊಂದು ಪೂರ್ವಪಕ್ಷ. ಆದರೆ ಇದಕ್ಕೆ ಆಧಾರವೇನು ಎಂದು ಕೇಳಿದರೆ:—

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ** (ತೈ. ಉ. ೨-೭)

ಸೃಷ್ಟಿಗೆ ಪೂರ್ವದಲ್ಲಿ ಅಸದ್ರೂಪವಾದ ತತ್ತ್ವಮಾತ್ರವಿದ್ದಿತು. ಈ ಅಸತ್ತಿನಿಂದ ಸದ್ರೂಪವಾದ ಜಗತ್ತು ಉಂಟಾಯಿತು. ಅನಂತರ ಜಗದ್ವ್ಯವಹಾರವಾರಂಭವಾಯಿತು. ಎಂದು ತೈತ್ತಿರೀಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ ತಿಳಿಸಿರುತ್ತದೆ. ಇದೇ ಭಾವವನ್ನೇ ಛಾಂದೋಗ್ಯದಲ್ಲಿಯೂ ತಿಳಿಸುತ್ತ,

**ಆದಿತ್ಯೋ ಬ್ರಹ್ಮೇತ್ಯಾದೇಶಸ್ತಸ್ಯೋಪವ್ಯಾಖ್ಯಾನಮಸದೇವೇದಮಗ್ರ ಆಸೀತ್ । ತತ್ಸ-
ದಾಸೀತ್ತತ್ಸಮಭವತ್ತದಾಂಡಂ ನಿರವರ್ತತ........... ॥** (ಛಾ. ಉ. ३.೧೯-೧)

ಆದಿತ್ಯನೇ ಬ್ರಹ್ಮನು ಎಂಬುದೇ ಸಿದ್ಧಾಂತರೂಪವಾದ ಉಪದೇಶ. ಇದರ ವಿವರವು ಈ ರೀತಿಯಿದೆ. ಆರಂಭದಲ್ಲಿ ಅಸದ್ರೂಪವಾದ ಅಭಾವದಿಂದ ಸದ್ರೂಪವಾದ ಭಾವವು ಉತ್ಪನ್ನವಾಯಿತು. ಅದು ಬೆಳೆದು ವೃದ್ಧಿಯಾಗಿ ಅಂಡರೂಪದಲ್ಲಿ ಪರಿವರ್ತಿತವಾಯಿತು ಇತ್ಯಾದಿ ವಾಕ್ಯಗಳೇ ಆಧಾರವೆಂದು ಹೇಳಿದರೆ, ಅದೇ ಛಾಂದೋಗ್ಯದಲ್ಲಿ ಈ ಅಭಿಪ್ರಾಯವು ನಿರಾಕೃತವಾಗಿರುತ್ತದೆ. ಮೇಲೆ, ಉದಾಹೃತವಾಗಿರುವ ೬-೨-೧ನೇ ವಾಕ್ಯದಲ್ಲಿ ತಿಳಿಸಿರುವ ಪೂರ್ವಪಕ್ಷಕ್ಕೆ ಉತ್ತರವಾಗಿ ಅದರ ಮುಂದಿನ ವಾಕ್ಯದಲ್ಲಿ ಈ ರೀತಿ ಸಿದ್ಧಾಂತವಿರುತ್ತದೆ.

**ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ ಕಥಮಸತಃ ಸಜ್ಜಾಯೇತೇತಿ ।
ಸತ್ತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ॥**
(ಛಾ. ಉ. ೬.೨-೨)

ಎಲೈ ಮಗುವೇ, ಇದು ಹೇಗೆ ಸಾಧ್ಯವಾದೀತು? ಅಸತ್ತಿನಿಂದ ಸದ್ರೂಪವಾದ ವಸ್ತುವಿನ ಉತ್ಪತ್ತಿಯು ಹೇಗೆ ? ಪೂರ್ವದಲ್ಲಿದ್ದುದು ಸದ್ರೂಪವಾದ ತತ್ತ್ವವಲ್ಲದೇ ಬೇರೆ ಅಲ್ಲ. ಏಕ, ಅದ್ವಿತೀಯ. ಇಂತಹ ಸದ್ರೂಪವಾದ ತತ್ತ್ವಮಾತ್ರವಿದ್ದಿತು ಎಂದು ನಿಸ್ಸ್ಪಷ್ಟವಾದ ಸಿದ್ಧಾಂತವನ್ನು ತಿಳಿಸಿದೆ.

ಪ್ರಕೃತದಲ್ಲಿ, ಅಭಾವರೂಪವಾದ ಅವಸ್ಥೆಯಿಂದ ಭಾವರೂಪವಾದ ಜಗತ್ತು ಹೇಗೆ ಸಂಭವಿಸಿತು ಎಂಬ ಪ್ರಶ್ನೆಗೂ ಉತ್ತರವು ಸಾಧ್ಯವಾಗುತ್ತದೆ. ಲೌಕಿಕವಾದ ದೃಷ್ಟಿಯಿಂದ **ಅಭಾವ** ಎಂಬುದನ್ನು ನಾಲ್ಕು ವಿಧವಾಗಿ ಹೇಳಬಹುದು. **ಅಭಾವ** ಎಂದರೆ ಇಲ್ಲದಿರುವಿಕೆ ಎಂದರ್ಥ. ಈ ಇಲ್ಲದಿರುವಿಕೆಯು ನಾಲ್ಕು ಬಗೆಯಾಗಿದೆ. ಮೊದಲನೆಯದಾಗಿ:—

೧) **ಅತ್ಯಂತಾಭಾವಃ**—ಶುದ್ಧ ಶೂನ್ಯವಾದುದು. ಉದಾಹರಣೆಗೆ ಬಂಜೆಯ ಮಗ. ಇದು ಆತ್ಯಂತಿಕವಾದ ವಿರುದ್ಧಸ್ಥಿತಿಯನ್ನು ತೋರಿಸುತ್ತದೆ. ಪ್ರಳಯಕಾಲದಲ್ಲಿ ಜಗತ್ತಿನ ಸ್ಥಿತಿಯು ಈ ವಿಧವಾದ ಅತ್ಯಂತಾಭಾವ ಹೊಂದಿರುವುದಿಲ್ಲ. ಲೋಕದೃಷ್ಟಿಗೆ ಕಾಣಿಸದಿರುವಷ್ಟು ಸೂಕ್ಷ್ಮರೂಪದಲ್ಲಿ ಈಶ್ವರನಲ್ಲಿ ಲಯವನ್ನು ಹೊಂದಿರುತ್ತದೆ. ಎರಡನೆಯದಾಗಿ:—

೨) **ಪ್ರಾಗಭಾವಃ**—ಅಭಾವವೆಂದರೆ, ಶುದ್ಧಶೂನ್ಯವಲ್ಲ. ಉತ್ಪನ್ನವಾಗುವುದಕ್ಕೆ ಮೊದಲು ಈ ಅವಸ್ಥೆಯಲ್ಲಿ ಇಲ್ಲದಿರುವುದು ಎಂದು ಮಾತ್ರ ಅರ್ಥ. ಎಂದರೆ ಪ್ರಕಾಶಕ್ಕೆ ಬರುವ ಸ್ವರೂಪಯೋಗ್ಯತೆ ಮತ್ತು ಸಾಮರ್ಥ್ಯವಿರುವುದು ಎಂದರ್ಥ. (Potentiality). ಇದಕ್ಕೆ ಉದಾಹರಣೆಯಾಗಿ, ಛಾಂದೋಗ್ಯೋಪನಿಷತ್ತಿನಲ್ಲಿಯೇ ಒಂದು ಪ್ರಕರಣವಿರುತ್ತದೆ. ಈ ಪ್ರಾಗಭಾವವನ್ನು ತೋರಿಸುವ ಉದಾಹರಣೆಯು ಯಾವುದೆಂದರೆ:—

**ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ ಭಿಂದೀತಿ ಭಿನ್ನಂ ಭಗವ ಇತಿ ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾ ಧಾನಾ ಭಗವ ಇತ್ಯಾಸಾಮಂಗೈಕಾಂ ಭಿಂಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ॥**

(ಛಾ. ಉ. ೬.೧೨-೧)

ಒಂದು ನ್ಯಗ್ರೋಧವೃಕ್ಷದ ಫಲವನ್ನು ತೆಗೆದುಕೊಂಡು ಬಾ ಎಂದು ಗುರುವು ಶಿಷ್ಯನಿಗೆ ಹೇಳಲು ಶಿಷ್ಯನು ತಂದನು. (ಆಲ, ಅಶ್ವತ್ಥ ಇತ್ಯಾದಿ ಎತ್ತರವೂ ವಿಸ್ತೃತವೂ ಆದ ಮರಗಳಲ್ಲಿ ಒಂದು) ಆಗ ಆ ಫಲವನ್ನು ಬಿಚ್ಚು ಎಂದಾಗ ಬಿಚ್ಚಿದನು. ಅದರಲ್ಲೇನಿದೆ ನೋಡು ಎಂದಾಗ ಅದರಲ್ಲಿಸೂಕ್ಷ್ಮವಾದ ಬೀಜಗಳಿವೆ ಎಂದನು. ಆ ಸಣ್ಣ ಬೀಜವನ್ನೂ ಒಡೆ ಎಂದಾಗ ಅದನ್ನೂ ಒಡೆದನು. ಅದರಲ್ಲಿ ಏನಿದೆ ನೋಡು ಎಂದಾಗ ಏನೂ ಇಲ್ಲ ಗುರು ಎಂದನು.

**ತಂ ಹೋವಾಚ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯೈಷೋಽಣಿಮ್ನ ಏವಂ ಮಹಾನ್ಯಗ್ರೋಧಸ್ತಿಷ್ಠತಿ ಶ್ರದ್ಧತ್ಸ್ವ ಸೋಮ್ಯೇತಿ ।**
(ಛಾ. ಉ. ೬-೧೨-೨)

ಎಲೈ ಮಗುವೇ, ಸೂಕ್ಷ್ಮವಾದ ಬೀಜವನ್ನು ಒಡೆದನಂತರ ಅದರಲ್ಲಿರುವ ಇನ್ನೂ ಅತ್ಯಂತ ಸೂಕ್ಷ್ಮವಾದ ಸಾರವನ್ನು ನೀನು ನೋಡಲಾರೆ. ಆದರೆ ನಿನ್ನ ಕಣ್ಣಿಗೆ ಬೀಳದಿರುವ ಈ ಸಾರದಿಂದಲೇ ಅತ್ಯುನ್ನತವೂ ಅತಿವಿಸ್ತೃತವೂ ಆದ ನ್ಯಗ್ರೋಧವೃಕ್ಷವು ಬೆಳೆದು ನಿಂತಿರುತ್ತದೆ. ಅದರಂತೆಯೇ,

**ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತ-ಕೇತೋ .... .... .... ॥**
(ಛಾ. ಉ. ೬-೧೨-೩)

ಎಲೈ ಮಗುವೆ, ನಿನ್ನ ಕಣ್ಣಿಗೆ ಕಾಣದಿರುವ ಸೂಕ್ಷ್ಮವಸ್ತುವಿನಲ್ಲಿ ವಿಶ್ವವೈಶಾಲ್ಯವನ್ನು ಪಡೆದಿರುವ ಈ ಜಗತ್ತು ಅಡಗಿದ್ದಿತು. ಈ ಜಗತ್ತನ್ನು ವಿಸ್ತಾರಗೊಳಿಸುವ ಸ್ವರೂಪಸತ್ತ್ವವು ಆ ಸೂಕ್ಷ್ಮವಸ್ತುವಿನಲ್ಲಿದ್ದಿತು. ಎಂದು ಉಪದೇಶಮಾಡುವಾಗ ಜಗತ್ತಿನ **ಪ್ರಾಗಭಾವವನ್ನು** ಗುರುವು ತೋರಿಸುತ್ತಾನೆ. ಈ ರೂಪದಲ್ಲಿ ಜಗತ್ತಿನ ಅಭಾವ ವಿದ್ದಿತೇ ಹೊರತು ಅತ್ಯಂತಾಭಾವವಿರಲಿಲ್ಲ.

೩) ಮೂರನೆಯದಾಗಿ, **ಪ್ರಧ್ವಂಸಾಭಾವಃ**—ಮೊದಲಿದ್ದು ಅನಂತರ ಇಲ್ಲದಿರುವಿಕೆ. ಇದಕ್ಕೆ ಆದಿಯಿದೆ. ಅಂತ್ಯವಿಲ್ಲ. ಮಡಕೆ ಇದೆ. ಅದನ್ನೂ ಒಡೆದ ಮೇಲೆ ಮಡಕೆ ಇರುವುದಿಲ್ಲ.

೪) ನಾಲ್ಕನೆಯದಾಗಿ, **ಅನ್ಯೋನ್ಯಾಭಾವಃ**—ಘಟವು ಪಟವಲ್ಲ. ಪಟವು ಘಟವಲ್ಲ. ಇತ್ಯಾದಿ. ಪ್ರಕೃತದಲ್ಲಿ ಈ ವಿವರಣವು ಅನವಶ್ಯ.

ಈ ರೀತಿ, (ಪ್ರಾಗಭಾವ) ಅಭಾವವೆಂದರೆ ಅತ್ಯಂತಾಭಾವವೆಂದರ್ಥವಲ್ಲ. ಜಗತ್ತು ಸ್ಥೂಲರೂಪದಲ್ಲಿಲ್ಲದೆ ಸೂಕ್ಷ್ಮರೂಪದಲ್ಲಿ ಅಡಗಿದ್ದಿತು ಎಂದರ್ಥವಾಗಬೇಕು. ಆದರೆ ಅದು ಈಶ್ವರನಲ್ಲಿಯೇ ಲೀನವಾಗಿದ್ದುದರಿಂದ ಅವನಿಗಿಂತಲೂ ಭಿನ್ನವಾದ ವಸ್ತುವಾಗಿರದೇ ಅವನಲ್ಲೇ ಐಕ್ಯವಾಗಿದ್ದಿತು. ಆದುದರಿಂದ ಈಶ್ವರನು ಬೇರೆ ಜಗತ್ತು ಬೇರೆ ಎಂಬ ಭೇದಭಾವವಿರಲಿಲ್ಲ. ಆದುದರಿಂದಲೇ, **ಪ್ರಜಾಪತಿರ್ವಾ ಇದಮಗ್ರ ಏವಾಸ** ಇತ್ಯಾದಿಯಾಗಿ ತಿಳಿಸಿದೆ. ಅಣುವಿಗಿಂತಲೂ ಸೂಕ್ಷ್ಮವಾದ ಯಾವ ನ್ಯಗ್ರೋಧಬೀಜದ ಸಾರವು ಅತ್ಯದ್ಭುತವಾದ ವೃಕ್ಷವನ್ನೆಲ್ಲ ತನ್ನಲ್ಲೇ ಅಡಗಿಸಿಕೊಂಡಿರುವ ಶಕ್ತಿಯನ್ನು ಹೊಂದಿರುವುದೋ, ಅದರಂತೆಯೇ ಅಣುವಿಗಿಂತಲೂ ಸಣ್ಣವನಾದ ಈಶ್ವರನೂ ಸಹ ಸಕಲವಿಶ್ವವನ್ನೂ ತನ್ನಲ್ಲೇ ಅಡಗಿಸಿಕೊಳ್ಳಬಲ್ಲನು. ಈ ಶಕ್ತಿಯನ್ನು ಮಹಿನಾ ಎಂಬ ಪದದಿಂದ ಸೂಚಿಸಿದೆ.

ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪೂರ್ವಪಕ್ಷರೂಪವಾದ ಪ್ರಶ್ನೆಯನ್ನು ಹಾಕುವಾಗಲೇ **ಮಹಿನಾ** ಎಂಬ ಈಶ್ವರನ ಮಹತ್ತ್ವಸೂಚಕವಾದ ಪದವನ್ನು ಪ್ರಯೋಗಿಸಿದೆ. ಈಶ್ವರನ ಮಹತ್ಕಾರ್ಯಗಳು ಲೌಕಿಕವಾದ ವ್ಯವಹಾರಗಳಿಗೂ ಅಳತೆಗಳಿಗೂ ಒಳಪಡುವುದಿಲ್ಲ. ಕೇವಲ ಸಂಕಲ್ಪದಿಂದಲೇ ಮಹತ್ಕಾರ್ಯಗಳು ಸಾಧ್ಯ ಎಂದು ಈ ಪದವು ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಪ್ರಯೋಗಿಸಿರುವ ಈ ಪದದಿಂದ ಸೂಚಿತವಾಗುವ ಮಹತ್ತ್ವವೇನೆಂದರೆ;—

**ಅಣೋರಣೀಯಾನ್ಮಹತೋ ಮಹೀಯಾನಾತ್ಮಾಸ್ಯ ಜಂತೋರ್ನಿಹಿತಂ ಗುಹಾಯಾಂ ।**
(ಕಠ. ಉ. ೨-೨೦)

**ಏಷ ಮ ಆತ್ಮಾಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ, ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕತಂಡುಲಾದ್ವಾ ಏಷ ಆತ್ಮಾಂತರ್ಹೃದಯೇ ಜ್ಯಾಯಾನ್ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾಯಾನ್ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ।**
(ಛಾ. ಉ. ೩-೧೪-೩)

ಸೃಷ್ಟ್ಯನಂತರ ಯಾವ ಈಶ್ವರನು ಅವರಾನ್ ಆ ವಿವೇಶ (೧೦-೮೧-೧) ಸೃಷ್ಟವಾದ ಸಕಲ ಜಗತ್ತನ್ನೂ ಆವರಿಸಿ ಸರ್ವಾಂತರ್ಯಾಮಿಯಾಗಿರುವನೆಂದು ವರ್ಣಿತವಾಗಿದೆಯೋ ಅದೇ ಈಶ್ವರನ ಮಹಿಮೆಯನ್ನು ಉಪನಿಷದಾದಿಗಳಲ್ಲಿ ಈ ರೀತಿ ವರ್ಣಿಸಿದೆ. ಈಶ್ವರನು ಅಣುವಿಗಿಂತಲೂ ಚಿಕ್ಕವನು. ಅದಕ್ಕಿಂತಲೂ ಸೂಕ್ಷ್ಮರೂಪನು. ಗುಹೆಯಂತಿರುವ ಸಕಲ ಹೃದಯಗಳಲ್ಲಿಯೂ ಸೂಕ್ಷ್ಮರೂಪದಲ್ಲಿ ಅಡಗಿದ್ದಾನೆ. ಈ ಸೂಕ್ಷ್ಮರೂಪದ ಈಶ್ವರನು ಪೃಥ್ವಿಗಿಂತಲೂ ದೊಡ್ಡವನು. ಅಂತರಿಕ್ಷಕ್ಕಿಂತಲೂ ದೊಡ್ಡವನು. ದ್ಯುಲೋಕಕ್ಕಿಂತಲೂ ದೊಡ್ಡವನು. ಅತ್ಯಂತ ಸಣ್ಣದಕ್ಕಿಂತಲೂ ಸಣ್ಣವನು. ಸಕಲಲೋಕಗಳಿಗಿಂತಲೂ ಅಧಿಕನು. ಇದು ಇವನ ಮಹತ್ತ್ವವು. ಸಕಲಲೋಕಗಳನ್ನೂ ತನ್ನಲ್ಲೇ ಅಡಗಿಸಿಕೊಳ್ಳಬಲ್ಲ ಶಕ್ತಿಯುಳ್ಳವನು.

**ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥**

(ಈಶ. ಉ. ೫)

ಈಶ್ವರನು ಚಲನಾತ್ಮಕನು ಹಾಗೆಯೇ ಅಚಲನು. ಅತ್ಯಂತ ದೂರದೇಶಸ್ಥನು ಹಾಗೆಯೇ ಸಕಲ ವಸ್ತುಗಳಲ್ಲಿಯೂ ಅಡಗಿಯೂ ತದತಿರಿಕ್ತನಾಗಿಯೂ ಇರುತ್ತಾನೆ. ಇದು ಈಶ್ವರನ ವಿರುದ್ಧಗುಣಗಳಲ್ಲ, ಲೋಕದ ದೃಷ್ಟಿಗೆ ವಿರುದ್ಧವಾಗಿ ತೋರುವ ಈ ಗುಣಗಳು ಅವನಲ್ಲಿ ಸಾಮರಸ್ಯವನ್ನು ಹೊಂದುತ್ತವೆ.

ಆದುದರಿಂದ ಸದಸದಾತ್ಮಕನೂ ತದತಿರಿಕ್ತನೂ ಆದ ಈಶ್ವರನಿಗೆ ಜಗತ್ಸೃಷ್ಟಿಯ ಕಾಲದಲ್ಲಿ ಅವನೇ ಅಧಿಷ್ಠಾನವು, ಅವನೇ ಆರಂಭಣವು, ಸೃಷ್ಟವಾದ ಜಗತ್ತೂ ಅವನೇ, ಸೃಷ್ಟಿಕರ್ತನೂ ಅವನೇ. ಅದೇ ಅವನ ಮಹತ್ತ್ವವು. ಇದನ್ನೇ **ಮಹಿನಾ ವಿಶ್ವಚಕ್ಷಾಃ** ಎಂಬ ಪದಗಳಿಂದ ತಿಳಿಸಿದೆ. **ವಿಶ್ವಚಕ್ಷಾಃ** ಎಂಬ ಪದದ ತಾತ್ಪರ್ಯವೇನು ಎಂಬುದನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.



॥ ಸಂಹಿತಾಪಾಠಃ ॥

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್।
ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್ದ್ಯಾವಾಭೂಮೀ ಜನಯನ್ದೇವ ಏಕಃ॥

॥ ಪದಪಾಠಃ ॥

ವಿಶ್ವತಃಽಚಕ್ಷುಃ । ಉತ । ವಿಶ್ವತಃಽಮುಖಃ । ವಿಶ್ವತಃಽಬಾಹುಃ । ಉತ । ವಿಶ್ವತಃಽಪಾತ್ ।
ಸಂ । ಬಾಹುಽಭ್ಯಾಂ । ಧಮತಿ । ಸಂ । ಪತತ್ರೈಃ । ದ್ಯಾವಾಭೂಮೀ ಇತಿ । ಜನಯನ್ । ದೇವಃ । ಏಕಃ ॥

। ಸಾಯಣಭಾಷ್ಯಂ ।

ಅನಯಾ ಸರ್ವಾತ್ಮಕತ್ವೇನ ಕುಲಾಲಾದಿವಿಲಕ್ಷಣತ್ವಾದಧಿಷ್ಠಾನಾದ್ಯಭಾವೇಽಪಿ ಸ್ರಷ್ಟುಂ ಶಕ್ನೋತೀತ್ಯಾಹ । ವಿಶ್ವತಶ್ಚಕ್ಷುಃ ಸರ್ವತೋ ವ್ಯಾಪ್ತಚಕ್ಷುಃ । ಉತಾಪಿ ಚ ವಿಶ್ವತೋ ಮುಖಃ । ತಥಾ ವಿಶ್ವತೋ ಬಾಹುಃ । ಉತಾಪಿ ಚ ವಿಶ್ವತಸ್ಪಾತ್ । ಸ ಏವಂವಿಧಃ ಪರಮೇಶ್ವರಃ ಸ್ವಸ್ಮಿಂಸ್ತ್ರೈಲೋಕ್ಯಮುತ್ಪಾದಯತೀತ್ಯರ್ಥಃ । ಕಥಮಿತಿ ಉಚ್ಯತೇ । ಬಾಹುಭ್ಯಾಂ ದಿವಂ ಸಂ ಧಮತಿ । ಧಮತಿರ್ಗತಿಕರ್ಮಾ । ಸಮ್ಯಕ್ ಪ್ರೇರಯತಿ । ತಥಾ ಪತತ್ರೈರ್ಗಮನಶೀಲೈಃ ಪಾದೈಃ ಪೃಥಿವೀಂ ಸಂ ಧಮತೀತಿ । ಉಭಯೋರೇವ ಶ್ರವಣಂ ಪ್ರಾಧಾನ್ಯಾಭಿಪ್ರಾಯಂ । ಏವಂ ದ್ಯಾವಾಭೂಮೀ ಜನಯನ್ ದಿವಂ ಚ ಪೃಥಿವೀಂ ಚೋತ್ಪಾದಯನ್ದೇವೋ ದ್ಯೋತಮಾನಃ ಸ್ವಯಂಪ್ರಕಾಶಃ ಪರಮೇಶ್ವರ ಏಕೋಽಸಹಾಯ ಏವ ವರ್ತತೇ ॥

॥ ಪ್ರತಿಪದಾರ್ಥ ॥

**ವಿಶ್ವತಶ್ಚಕ್ಷುಃ**—ಸರ್ವತ್ರ ಪ್ರಸರಿಸಿದ ಕಣ್ಣುಗಳುಳ್ಳವನೂ । **ಉತ**—ಮತ್ತು । **ವಿಶ್ವತೋಮುಖಃ**—ಸರ್ವತ್ರ ಹೊಂದಿರತಕ್ಕ ಮುಖವುಳ್ಳವನೂ । **ವಿಶ್ವತೋಬಾಹುಃ**—ಸರ್ವತ್ರ ಪ್ರಸರಿಸಿದ ಬಾಹುಗಳುಳ್ಳವನೂ । **ಉತ**—ಮತ್ತು । **ವಿಶ್ವತಸ್ಪಾತ್**—ಎಲ್ಲ ಕಡೆಯೂ ನೀಡಿದ ಪಾದಗಳುಳ್ಳವನೂ ಆದ ಈಶ್ವರನು । **ಬಾಹುಭ್ಯಾಂ**—ತನ್ನ ಬಾಹುಗಳಿಂದ । **ಸಂ ಧಮತಿ**—ದ್ಯುಲೋಕವನ್ನು ಪ್ರೇರಿಸುತ್ತಾನೆ । **ಪತತ್ರೈಃ**—ಚಲಿಸುವ ಪಾದಗಳಿಂದ । **ಸಂ**—ಪೃಥ್ವಿಯನ್ನು ಪ್ರೇರಿಸುತ್ತಾನೆ । **ದ್ಯಾವಾಭೂಮೀ**—ದ್ಯಾವಾಪೃಥ್ವಿಗಳನ್ನು । **ಜನಯನ್**—ಉತ್ಪನ್ನ ಮಾಡುತ್ತ । **ಏಕಃ**—ಅಸಹಾಯನಾಗಿಯೂ (ಅದ್ವಿತೀಯನಾಗಿಯೂ) । **ದೇವಃ**—ಪ್ರಕಾಶಿಸುತ್ತಲೂ ಸ್ಥಿತನಾಗಿದ್ದಾನೆ.

॥ ಭಾವಾರ್ಥ ॥

ಸರ್ವತ್ರ ಪ್ರಸರಿಸಿದ ಕಣ್ಣುಗಳುಳ್ಳವನೂ, ಸರ್ವತ್ರ ಹೊಂದಿರತಕ್ಕ ಮುಖಗಳುಳ್ಳವನೂ, ಸರ್ವತ್ರ ಪ್ರಸರಿಸಿದ ಬಾಹುಗಳುಳ್ಳವನೂ, ಎಲ್ಲ ಕಡೆಯೂ ನೀಡಿದ ಪಾದಗಳುಳ್ಳವನೂ ಆದ ಈಶ್ವರನು ತನ್ನ ಬಾಹುಗಳಿಂದ

ದ್ಯುಲೋಕವನ್ನು ಪ್ರೇರಿಸುತ್ತಾನೆ. ಚಲಿಸುವ ಪಾದಗಳಿಂದ ಪೃಥ್ವಿಯನ್ನು ಪ್ರೇರಿಸುತ್ತಾನೆ. ದ್ಯಾವಾಪೃಥಿವಿಗಳನ್ನು ಉತ್ಪನ್ನಮಾಡುತ್ತ ಅದ್ವಿತೀಯನಾಗಿ ಪ್ರಕಾಶಿಸುತ್ತಿದ್ದಾನೆ.

## English Translatian

Having eyes everywhere, and having a face everywhere, having arms everywhere, and having feet everywhere, he traverses (heaven) with his arms, (earth) with his swift-moving (feet), and exists a god without companion generating heaven and earth.

## || ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ವಿಶ್ವಕರ್ಮನ (ಪರಮೇಶ್ವರನ) ಮಹತ್ಸ್ವರೂಪವನ್ನು ವರ್ಣಿಸಲಾಗಿದೆ. ಈ ಋಕ್ಕಿನಲ್ಲಿರುವ ಅಭಿಪ್ರಾಯವೇ ಇದೇ ಮಂಡಲದ ೯೦ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಸಹಸ್ರಶೀರ್ಷಾ ಪುರುಷಃ ಎಂಬ ಋಕ್ಕಿನಲ್ಲಿ ಸೂಚಿತವಾಗಿದೆ. ಈ ಋಕ್ಕಿನಲ್ಲಿರುವ ವಿಶ್ವತಃ ಎಂಬ ಶಬ್ದಕ್ಕೆ ಬದಲಾಗಿ ಅಲ್ಲಿ ಸಹಸ್ರ ಎಂಬ ಶಬ್ದದ ಪ್ರಯೋಗವಿದೆ. ಈ ಎರಡುಶಬ್ದಗಳ ಅರ್ಥಗಳೂ ಒಂದೇ, ಏನೂ ವ್ಯತ್ಯಾಸವಿಲ್ಲ. ಪ್ರಕೃತಋಕ್ಕಿನಲ್ಲಿ ಆ ವಿಶ್ವಕರ್ಮನ ಕಣ್ಣುಗಳು ಎಲ್ಲೆಲ್ಲಿಯೂ ವ್ಯಾಪಿಸಿವೆ ಎಂದು ಹೇಳಿದೆ. ಇಲ್ಲಿ ಒಂದು ಸಂದೇಹವು ಉತ್ಪನ್ನವಾಗುತ್ತವೆ. ಸಾಮಾನ್ಯ ಪುರುಷರಿಗಿರುವಂತೆ ಪರಮೇಶ್ವರನಿಗೆ ಕಣ್ಣು, ಮುಖ, ಬಾಹುಗಳು ಕಾಲುಗಳು ಇವೆಯೋ ? ಅವುಗಳ ಸಹಾಯದಿಂದ ಇತರ ಮನುಷ್ಯರಂತೆ ಜಗತ್ಸೃಷ್ಟ್ಯಾದಿಕಾರ್ಯಗಳನ್ನು ನಿರ್ವಹಿಸುತ್ತಾನೆಯೋ ? ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳಬೇಕಾದರೆ ಪರಮೇಶ್ವರನ ಮಹತ್ಸ್ವರೂಪವನ್ನೇ ವರ್ಣಿಸಬೇಕು.

ಸಾಮಾನ್ಯ ಮನುಷ್ಯನು ತನ್ನ ಕಣ್ಣುಗಳಿಂದ ನೋಡುತ್ತಾನೆ. ಕಣ್ಣುಗಳಿಲ್ಲದಿದ್ದರೆ ನೋಡಲು ಸಾಧ್ಯವಿಲ್ಲ. ಅದರಂತೆ ಬಾಹುಗಳಿಂದ ಕೆಲಸಕಾರ್ಯಗಳನ್ನೂ ಪಾದಗಳಿಂದ ಸಂಚಾರವನ್ನೂ ನಿರ್ವಹಿಸುತ್ತಾನೆ. ಆದರೆ ಪರಮಾತ್ಮನ ವಿಷಯದಲ್ಲಿ ಈ ನಿಯಮವಿಲ್ಲ. ಅವನು ನಿರವಯವನು ಅವನಿಗೆ ಅವಯವಗಳ ಅವಶ್ಯಕತೆ ಇಲ್ಲ ಲೋಕದಲ್ಲಿರುವ ಸಮಸ್ತವಸ್ತುಗಳೂ ಪ್ರಾಣಿಗಳೂ ಪರಮಾತ್ಮನ ಅಂಶಗಳೇ ಆಗಿ ಅವುಗಳಲ್ಲಿ ಪರಮಾತ್ಮನ ಚೈತನ್ಯವು ತುಂಬಿರುವುದರಿಂದಲೂ ಈ ಪರಮಾತ್ಮನು ವ್ಯಾಪಿಸದಿರುವ ವಸ್ತುವೇ ಇಲ್ಲದಿರುವುದರಿಂದಲೂ ಪರಮಾತ್ಮನು ನೋಡದ ಅಥವಾ ತಿಳಿಯದಿರುವ ವಸ್ತುಗಳಿರುವುದಿಲ್ಲ. ಇದಲ್ಲದೆ ನೋಡುವ ಶಕ್ತಿ, ಚಲಿಸುವ ಶಕ್ತಿ ಮೊದಲಾದ ಎಲ್ಲಾ ವಿಧಶಕ್ತಿಗಳೂ ಪರಮಾತ್ಮನ ಚೈತನ್ಯದ ಅಂಶಗಳೇ ಆಗಿರುವುದರಿಂದ ಎಲ್ಲರಂತೆ ಪರಮಾತ್ಮನು ತನ್ನ ಕಣ್ಣುಗಳನ್ನೇ ಉಪಯೋಗಿಸಿ ನೋಡಬೇಕಾಗಿಲ್ಲ, ಬಾಹುಗಳನ್ನೇ ಉಪಯೋಗಿಸಿ ಕೆಲಸಮಾಡಬೇಕಾಗಿಲ್ಲ, ಪಾದಗಳನ್ನೇ ಉಪಯೋಗಿಸಿ ಸಂಚರಿಸಬೇಕಾಗಿಲ್ಲ, ಎಂದರೆ ಈ ಪರಮತ್ಮನಿಗೆ ಕಣ್ಣು, ಮುಖ, ಬಾಹು ಪಾದಗಳ ಅವಶ್ಯಕತೆಯೇ ಇರುವುದಿಲ್ಲ. ಇವುಗಳು ಇಲ್ಲದೆ ಯಾವ ಕಾರ್ಯವನ್ನು ಬೇಕಾದರೂ ಮಾಡಬಲ್ಲನು. ಏಕೆಂದರೆ ಚೈತನ್ಯವೇ ಅವನು ಯಾವ ಕೆಲಸಮಾಡಬೇಕಾದರೂ ಚೈತನ್ಯದ ಪ್ರೇರಣೆ ಇರಬೇಕು. ಇಲ್ಲದಿದ್ದರೆ ಆಗುವುದಿಲ್ಲ. ಲೋಕದಲ್ಲಿ ಪ್ರಾಣಿಗಳಲ್ಲಿ ವ್ಯಕ್ತವಾಗುವ ಸಮಸ್ತ ಚೈತನ್ಯಕ್ಕೂ ಪರಮಾತ್ಮನೇ ಮೂಲವಾಗಿರುವುದರಿಂದ ಅವನಿಗೆ ತಿಳಿಯದ ವಸ್ತುವಿಲ್ಲ. ಇಲ್ಲಿ ಹೇಳಿರುವ ಕಣ್ಣು, ಮುಖ, ಬಾಹು, ಪಾದಗಳು ಎಂಬ ಶಬ್ದಗಳನ್ನು ಆಯಾ

ಇಂದ್ರಿಯಗಳು ಮಾಡುವ ಕಾರ್ಯಗಳನ್ನು ಸೂಚಿಸುವುದಕ್ಕಾಗಿ ಇಲ್ಲಿ ಉಪಯೋಗಿಸಲಾಗಿದೆ. ಈ ಇಂದ್ರಿಯಗಳು ನೆರವೇರಿಸಬೇಕಾದ ಕಾರ್ಯಗಳನ್ನು ಪರಮಾತ್ಮನು ಇಂದ್ರಿಯಗಳ ಸಹಾಯವಿಲ್ಲದೇನೇ ಮಾಡಬಲ್ಲನು. ಆದ್ದರಿಂದ ಎಲ್ಲೆಲ್ಲಿಯೂ ಇವನಿಗೆ ಕಣ್ಣುಗಳಿವೆ ಎಂದರೆ ಎಲ್ಲಾ ಕಡೆಯಲ್ಲಿಯೂ ಪರಮಾತ್ಮನು ವ್ಯಾಪಿಸಿರುವುದರಿಂದ (ಸರ್ವ ವ್ಯಾಪಿಯಾಗಿರುವುದರಿಂದ) ಎಲ್ಲವನ್ನೂ ನೋಡಿ ತಿಳಿದುಕೊಳ್ಳಬಲ್ಲನು ಎಂದಭಿಪ್ರಾಯವು. **ಚಕ್ಷುಃ**— ಕಣ್ಣುಗಳು ಎಂಬ ಶಬ್ದವು ಕೇವಲ ವರ್ಣನೆಗಾಗಿ ಮಾತ್ರ. ನಮಗಿರುವಂತೆ ಪರಮಾತ್ಮನಿಗೆ ಕಣ್ಣುಗಳು ಎಂಬ ಪ್ರತ್ಯೇಕ ಇಂದ್ರಿಯಗಳ ಅವಶ್ಯಕತೆಯಿಲ್ಲ. ಅದರಂತೆ ಬಾಹುಮುಂತಾದವುಗಳೂ ಕೂಡ. ಹಾಗಿದ್ದರೂ ಇಲ್ಲಿ ಈ ಅವಯವಗಳ ಹೆಸರುಗಳನ್ನು ಹೇಳಬೇಕಾದ ಅವಶ್ಯಕತೆ ಏನು ಎಂದರೆ, ಪರಮಾತ್ಮನ ಅಗಾಧವಾದ ಶಕ್ತಿಯನ್ನು ಮನಸ್ಸಿಗೆ ತಿಳಿಯುವಂತೆ ಸ್ಪಷ್ಟವಾಗಿ ವಿವರಿಸುವುದಕ್ಕಾಗಿಯೇ ಇಂದ್ರಿಯಗಳ ಸಾದೃಶ್ಯವನ್ನು ಹೇಳಿದೆ. ಈ ವಿಷಯವನ್ನೇ ಒಂದು ಉದಾಹರಣೆಯಮೂಲಕ ಈ ಋಕ್ಕಿನ ಉತ್ತರಾರ್ಧದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ.

**ಬಾಹುಭ್ಯಾಂ ಪತತ್ರೈಃ ಸಂ ಧಮತಿ ದ್ಯಾವಾಭೂಮೀ**— ಈ ಪರಮೇಶ್ವರನ ಬಾಹುಗಳು ಅಂತರಿಕ್ಷ ಅಥವಾ ಸ್ವರ್ಗವನ್ನು ಪ್ರೇರಿಸುತ್ತವೆ. ಇವನ ಪಾದಗಳು ಭೂಮಿಯನ್ನು ವ್ಯಾಪಿಸಿ ಅದನ್ನು ಪ್ರೇರಿಸುತ್ತವೆ. ಇಲ್ಲಿ ಭೂಮಿಗೂ ಸ್ವರ್ಗಾಂತರಿಕ್ಷಗಳಿಗೂ ಮಧ್ಯದಲ್ಲಿ ಅತ್ಯಧಿಕವಾದ ಅಂತರ (ದೂರ) ವಿರುವುದೆಂಬುದನ್ನೂ ಹಾಗಿದ್ದರೂ ಸಹ ಪರಮೇಶ್ವರನು ತನ್ನ ಮಹಾಶಕ್ತಿಯಿಂದ ಏಕಕಾಲದಲ್ಲಿ ಅಷ್ಟು ದೂರಗಳಲ್ಲಿರುವ ಲೋಕತ್ರಯಗಳನ್ನು ವ್ಯಾಪಿಸಿ ಅವುಗಳನ್ನು ಪ್ರೇರಿಸುವನೆಂದೂ ತಿಳಿಸುವುದಕ್ಕಾಗಿಯೇ ಈ ವಿವರಣೆ ಇರುತ್ತದೆ. ಇದಲ್ಲದೆ ಈ ದ್ಯಾವಾಪೃಥಿವಿಗಳು ಎಷ್ಟು ದೊಡ್ಡವಾಗಿವೆ, ಇವುಗಳಿಗೆ ಮಧ್ಯದಲ್ಲಿರುವ ದೂರವು ಎಷ್ಟು ಅಗಾಧವಾದದ್ದು, ಹೀಗಿದ್ದರೂ ಇವುಗಳನ್ನು ತನ್ನ ಶಕ್ತಿಯಿಂದ ಏಕಕಾಲದಲ್ಲಿ ವ್ಯಾಪಿಸಿ ಪ್ರೇರಿಸುತ್ತಾನೆ ಇವೆಲ್ಲವೂ ಈ ಪರಮೇಶ್ವರನ ಅತ್ಯಧಿಕವಾದ ಶಕ್ತಿ ಸಾಮರ್ಥ್ಯಗಳನ್ನು ಸೂಚಿಸುವವು. ಆದ್ದರಿಂದ ಇಂತಹ ಅಪರಿಮಿತ ಶಕ್ತಿಸಾಮರ್ಥ್ಯಗಳುಳ್ಳ ಪರಮೇಶ್ವರನು ಮೂಲವಸ್ತು, ಸಾಧನಸಾಮಗ್ರಿ ಮುಂತಾದ ಯಾವ ಉಪಕರಣಗಳ ಸಹಾಯವಿಲ್ಲದಿದ್ದರೂ ತನ್ನ ಅಸಾಧಾರಣ ಮಹಿಮೆಯಿಂದಲೇ ಸಮಸ್ತ ಜಗತ್ತನ್ನೂ ನಿರ್ಮಿಸಿ ಪಾಲಿಸುತ್ತಾನೆ ಎಂಬಭಿಪ್ರಾಯವು

**ದೇವ ಏಕಃ**—ಇದುವರೆಗೆ ಉಪಾದಾನಕಾರಣಗಳು ಎಂದರೆ ಸಾಧನಸಾಮಗ್ರಿಗಳೊಂದೂ ಇಲ್ಲದೆ ಜಗತ್ತನ್ನು ತನ್ನ ಮಹಾಶಕ್ತಿಯಿಂದಲೇ ಪರಮೇಶ್ವರನು ನಿರ್ಮಿಸಬಲ್ಲನೆಂದು ಹೇಳಿದೆಯಷ್ಟೆ. ಆದರೆ ಈ ಸೃಷ್ಟಿ ಕಾರ್ಯದಲ್ಲಿ ಈ ಪರಮೇಶ್ವರನಿಗೆ ಯಾರಾದರೂ ಸಹಾಯಕರಿದ್ದರೇ ? ಸಾಧನಸಾಮಗ್ರಿಗಳ ಸಹಾಯವಿದ್ದಿತೇ ? ಎಂದರೆ ಯಾವುದೂ ಇಲ್ಲ ಎಂದು ತಿಳಿಸುವುದಕ್ಕಾಗಿಯೇ **ದೇವ ಏಕಃ** ಎಂಬ ವಾಕ್ಯದ ಪ್ರಯೋಗವಿದೆ. ಈ ಪರಮಾತ್ಮನು ಒಬ್ಬನೇ ಇದ್ದು ಯಾವ ವಿಧವಾದ ಸಹಾಯವಾಗಲಿ, ಸಾಧನಗಳಾಗಲಿ ಇಲ್ಲದೆ ಈ ಸಮಸ್ತ ಸೃಷ್ಟಿಕಾರ್ಯವನ್ನೂ ತಾನೊಬ್ಬನೇ ತನ್ನ ಮಹಿಮೆಯಿಂದ ನಿರ್ವಹಿಸಿದನು. ಈ ವಿಷಯದಲ್ಲಿ—

**ಇದಗ್ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ।**
**ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ ।**

(ತೈ. ಉ. ೮-೬)

ಇತ್ಯಾದಿ ಉಪನಿಷದ್ವಾಕ್ಯಗಳು ಜಗತ್ಸೃಷ್ಟಿಯನ್ನು ಪರಮಾತ್ಮನು ಹೇಗೆ ಮಾಡಿದನು ಎಂಬ ವಿಷಯವನ್ನು ತಿಳಿಸುತ್ತವೆ. ಅವ್ಯಕ್ತಸ್ವರೂಪದಿಂದ (**ಅಸತ್**)ಇದ್ದ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಿ ಅದರಲ್ಲಿ ತಾನು ಅಂತರ್ಯಾಮಿಯಾಗಿ ಪ್ರವೇಶಿಸಿದನು. ಹೀಗೆ ಮಾಡಿದ್ದರಿಂದ ಅವ್ಯಕ್ತರೂಪದಿಂದಿದ್ದ ಪರಮೇಶ್ವರನು ವ್ಯಕ್ತರೂಪನಾದನು

ಎಂದರೆ ಅವ್ಯಕ್ತವೂ ವ್ಯಕ್ತವೂ ಎರಡೂ ಇದ್ದಂತಾಯಿತು. ಒಂದೇ ಆಗಿದ್ದ ಆತ್ಮತತ್ತ್ವವು ಅನೇಕ ವಿಧವಾದ ಚರಾಚರವಸ್ತುಗಳಾಗಿ ಪರಿವರ್ತಿತವಾಯಿತು. ಪರಮಾತ್ಮನಲ್ಲಿ ಕೇಂದ್ರೀಕೃತವಾಗಿದ್ದ ಚೈತನ್ಯವು ಸರ್ವಪ್ರಾಣಿಗಳಲ್ಲಿಯೂ ಸಣ್ಣಸಣ್ಣ ಅಂಶಗಳಿಂದ ವ್ಯಕ್ತವಾಯಿತು. ಈ ಎಲ್ಲಾ ಕಾರ್ಯಗಳನ್ನೂ ಪರಮಾತ್ಮನು ಯಾರ ಸಹಾಯವೂ ಇಲ್ಲದೆ ತನ್ನ ಮಹಿಮೆಯಿಂದಲೇ ನಿರ್ಮಿಸಿದನು ಎಂದು ಮುಖ್ಯಾಭಿಪ್ರಾಯವು

ಅಧಿಷ್ಠಾನವೂ ಆರಂಭಣವೂ ಇಲ್ಲದೆ ಜಗತ್ಸೃಷ್ಟಿಯು ಹೇಗೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲವೆಂದು ಮೇಲೆ ತಿಳಿಸಿದೆ. **ಅಣೋರಣೀಯಾನ್ ಮಹತೋ ಮಹೀಯಾನ್** ಎಂಬ ಪ್ರಶಂಸೆಯು ಈಶ್ವರನ ಮಹತ್ತ್ವವನ್ನು ತಿಳಿಸುತ್ತದೆ. ಈ ಈಶ್ವರನೇ ಅಧಿಷ್ಠಾನವು ಮತ್ತು ಇವನೇ, ಆರಂಭಣವು, ಉಪಾದಾನಕಾರಣನೂ ಇವನೇ, ಜಗತ್ತೆಲ್ಲವೂ ಇವನ ಅವಸ್ಥಾವಿಶೇಷಗಳೇ ಆಗಿರುವುದರಿಂದ ಇವನಲ್ಲದೇ ಬೇರೆ ಉಪಾದಾನಕಾರಣವೇ ಇಲ್ಲ. ಅದನ್ನೇ "ಬಾಹುಭ್ಯಾಂ ಧಮತಿ; ಪತತ್ರೈಃ ಧಮತಿ" ಎಂಬುದರಿಂದ ನಿಮಿತ್ತಕಾರಣವನ್ನು ತಿಳಿಸಿದಂತಾಯಿತು. **ವಿಶ್ವತಶ್ಚಕ್ಷುಃ** ಇತ್ಯಾದಿಗಳಿಂದ ವಿಶ್ವವ್ಯಾಪಕತ್ವವನ್ನು ತಿಳಿಸಿದೆ. ಮೃತ್ತಿನಿಂದ ಘಟಾದಿಗಳು ರೂಪಾಂತರಗಳನ್ನು ಹೊಂದಿ ಪರಿವರ್ತಿತವಾಗುವಂತೆ, ಅದ್ವಿತೀಯನಾಗಿದ್ದ ಈಶ್ವರನು ರೂಪಾಂತರಗಳನ್ನು ಹೊಂದಿ ನಾನಾ ವಿಧವಾಗಿ ಪರಿಣಮಿಸುತ್ತಾನೆ. ಅಗ್ನಿ, ವಾಯು, ಆದಿತ್ಯ ಇವರೆಲ್ಲರೂ ಇವನ ರೂಪಾಂತರಗಳೇ ಆಗಿದ್ದಾರೆ. ಈ ಋಕ್ಕನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಉದಾಹರಿಸಿದೆ. ಇದೇ ಮಂತ್ರವು ತೈತ್ತಿರೀಯ ಸಂಹಿತೆಯಲ್ಲಿಯೂ (೪-೬-೨-೪) ತೈತ್ತಿರೀಯ ಆರಣ್ಯಕದಲ್ಲಿಯೂ (ನಾ. ಉ. ೧೦-೧-೩) ಪಠಿಸಿದೆ. **ಬಾಹುಭ್ಯಾಂ** ಎಂಬುದಕ್ಕೆ ಧರ್ಮ ಮತ್ತು ಅಧರ್ಮ ಎಂಬ ಎರಡು ತೋಳುಗಳೆಂದು ಕೆಲವೆಡೆಗಳಲ್ಲಿ ಅರ್ಥಮಾಡಿದೆ. **ಧಮತಿ** ಎಂಬುದಕ್ಕೆ ಶಂಕರಾಚಾರ್ಯರು **ಸಂಯೋಜಯತಿ** ಎಂದರ್ಥಮಾಡಿದ್ದಾರೆ. ಪುರುಷರನ್ನು ಬಾಹುಗಳೊಡನೆಯೂ ಪಕ್ಷಿಗಳನ್ನು ರೆಕ್ಕೆಗಳೊಡನೆಯೂ ಯೋಜಿಸುತ್ತಾನೆಂದು ತಾತ್ಪರ್ಯ. ಹೀಗೆಯೇ ಇನ್ನೂ ತಾತ್ಪರ್ಯಭೇದಗಳಿರುತ್ತವೆ. ಒಟ್ಟಿನಲ್ಲಿ ಸಕಲ ಜಗದ್ವ್ಯವಹಾರಗಳೂ ಈಶ್ವರ ಪ್ರೇರಿತವೆಂದು ತಾತ್ಪರ್ಯ. ಹೇಗೆಂದರೆ—

**ಯ ಏಕೋ ಜಾಲವಾನೀಶತ ಈಶನೀಭಿಃ ಸರ್ವಾಁಲ್ಲೋಕಾನೀಶತ ಈಶನೀಭಿಃ ।**
**ಯ ಏವೈಕ ಉದ್ಭವೇ ಸಂಭವೇ ಚ ಏತದ್ವಿದುರಮೃತಾಸ್ತೇ ಭವಂತಿ ॥**

(ಶ್ವೇ. ಉ. ೩-೧)

ಯಾವ ಪರಮಪುರುಷನು ತನ್ನ ಶಕ್ತಿರೂಪವಾದ ಬಲೆಯನ್ನು ಹರಡುವನೋ, ಯಾವನು ತನ್ನ ಪ್ರಭಾವದಿಂದ ಸಕಲ ಜಗತ್ತಿಗೂ ಪ್ರಭುವಾಗಿರುವನೋ ಅವನು ಶಾಶ್ವತನು. ಸೃಷ್ಟವಾದ ಮತ್ತು ಸ್ಥಿತಿಯನ್ನು ಹೊಂದಿದ ಜಗತ್ತಿನೊಡನೆ ಐಕ್ಯತೆಯನ್ನು ಹೊಂದುತ್ತಾನೆ.

**ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿ ಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥**

(ಋ. ಸಂ. ೬-೪೭-೧೮)

ಇತ್ಯಾದಿ ಸನ್ನಿವೇಶಗಳಲ್ಲಿ ಹಿಂದೆ ವಿವರಿಸಿರುವಂತೆ ಈಶ್ವರನು ತನ್ನ ಪ್ರಭುತ್ವಶಕ್ತಿಯಿಂದ ವಿಶ್ವರೂಪನಾಗಿರುತ್ತಾನೆ. ಇದನ್ನು ಕಠೋಪನಿಷತ್ತಿನಲ್ಲಿ ಇನ್ನೂ ವಿಶದವಾಗಿ ಈರೀತಿ ವಿವರಿಸಿದೆ.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥**

(ಕಠ. ೨-೨-೧೧)

ಪೃಥ್ವಿಯನ್ನು ವ್ಯಾಪಿಸುವ ಅಗ್ನಿಯು ತಾನು ಯಾವ ವಸ್ತುವನ್ನು ಆಕ್ರಮಿಸುವುದೋ ಅದೂ ಅಗ್ನಿಯಾಗುವಂತೆ ಈ ಪರಮಾತ್ಮನು ಯಾವ ವಸ್ತುವನ್ನು ಸೃಜಿಸುವನೋ ಅದೇ ರೂಪವನ್ನು ಹೊಂದುತ್ತಾನೆ. ಇದರಂತೆಯೇ,

**ವಾಯುರ್ಯಥೈಕೋ ಭುವನಂ ಪ್ರವಿಷ್ಟಃ ರೂಪಂ ರೂಪಂ ಪ್ರತಿರೂಪೋ ಬಭೂವ ।**

(ಕ. ೨-೨-೧೨)

ವಾಯುವು ಯಾವರೀತಿ ಲೋಕದಲ್ಲಿ ಸಂಚರಿಸುತ್ತ ತಾನು ಯಾವ ವಸ್ತುವನ್ನು ಪ್ರವೇಶಿಸಿದರೆ ಆ ರೂಪವನ್ನು ಹೊಂದುವುದೋ ಹಾಗೆ ಈ ಪರಮಾತ್ಮನೂ ಸಕಲ ರೂಪಗಳನ್ನು ಹೊಂದುತ್ತಾನೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥**

(ಪ್ರಶ್ನ. ೧-೮)

ಸರ್ವರೂಪವನ್ನು ಹೊಂದಿರುವವನೂ, ಸುವರ್ಣರೂಪನೂ, ಸರ್ವಜ್ಞನೂ, ಸಕಲ ಜಗತ್ತಿಗೂ ಅಂತಿಮ ಆಶ್ರಯನೂ, ಸಹಸ್ರರಶ್ಮಿಗಳುಳ್ಳವನೂ ಸಹಸ್ರಾರು ರೂಪಗಳಲ್ಲಿ ಸ್ಥಿತನೂ, ಜಗತ್ತಿಗೆಲ್ಲ ಜೀವರೂಪನೂ ಆದ ಆದಿತ್ಯನು ಉದಯಿಸುತ್ತಾನೆ. ಇವನೇ ಪರಮಾತ್ಮನು.

**ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುಃ ।**
**ಏಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥**

(ಪ್ರಶ್ನ. ೨-೫)

ಅಗ್ನಿರೂಪದಲ್ಲಿ ಇವನು ದಹಿಸುತ್ತಾನೆ. ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಾನೆ. ಇವನೇ ಪ್ರಭೂತವಾಗಿ ಮಳೆಯನ್ನು ಸುರಿಸುವ ಪರ್ಜನ್ಯನು. ಇವನೇ ವಾಯುವು. ಇವನೇ ಪೃಥ್ವಿಯು. ಇವನೇ ಸದ್ರೂಪನು ಮತ್ತು ಅಸದ್ರೂಪನು. ಅಮೃತತ್ವವೂ ಇವನೇ.

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ।**
**ಋಚೋ ಯಜೂಗ್ಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥**

(ಪ್ರಶ್ನ- ೨-೬)

ಚಕ್ರದ ಕಡ್ಡಿಗಳೆಲ್ಲವೂ ನಾಭಿರೂಪದ ಮಧ್ಯಪ್ರದೇಶವನ್ನು ಸೇರಿರುವಂತೆ ಜಗತ್ತಿನ ಪ್ರತಿವಸ್ತುವೂ ಈ ವಿಶ್ವಪ್ರಾಣವನ್ನವಲಂಬಿಸಿದೆ. ಋಗ್ವೇದ, ಯಜುರ್ವೇದ, ಸಾಮವೇದ ಯಜ್ಞ, ಕ್ಷತ್ರ ಮತ್ತು ಪ್ರಾಜ್ಞತೆ ಇವೆಲ್ಲವೂ ಇದನ್ನೇ ಆಶ್ರಯಿಸಿವೆ.

ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ ।
ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥

(ಪ್ರಶ್ನ. ೨-೯)

ಎಲೈ ಜಗತ್ತಿಗೆಲ್ಲ ಆಧಾರವಾದ ಪರಮಾತ್ಮರೂಪನಾದ ಪ್ರಾಣನೇ, ನಿನ್ನ ಅಸಾಧಾರಣವಾದ ಶಕ್ತಿಯಿಂದ ನೀನೇ ಇಂದ್ರನು. ರಕ್ಷಕನಾದುದರಿಂದ ನೀನೇ ರುದ್ರನು. ಅಂತರಿಕ್ಷದಲ್ಲಿಯೂ ನೀನೇ ಸೂರ್ಯರೂಪದಲ್ಲಿ ಸಂಚರಿಸುತ್ತೀಯೆ. ನೀನೇ ಸಕಲ ಜ್ಯೋತಿರ್ಮಂಡಲಕ್ಕೂ ಒಡೆಯನು ಇತ್ಯಾದಿ ವಾಕ್ಯಗಳಿಂದ ಪರಮಾತ್ಮನ ವಿಶ್ವತೋಮುಖವನ್ನು ವಿಶ್ವತಶ್ಚಕ್ಷುತ್ವವನ್ನೂ ವರ್ಣಿಸಿ ಪ್ರಶಂಸಿಸಿದೆ. ಈ ಪ್ರಕರಣವನ್ನು ಮುಂದೆ ಪುರುಷಸೂಕ್ತದ ವಿಶೇಷವಿಷಯಗಳಲ್ಲಿ (೧೦-೯೦) ವಿವರಿಸಲಾಗುತ್ತದೆ.

॥ ಸಂಹಿತಾಪಾಠಃ ॥

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।
ಮನೀಷಿಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ಭುವನಾನಿ ಧಾರ-
ಯನ್ ॥ ೪ ॥

॥ ಪದಪಾಠಃ ॥

ಕಿಂ । ಸ್ವಿತ್ । ವನಂ । ಕಃ । ಊಂ ಇತಿ । ಸಃ । ವೃಕ್ಷಃ । ಆಸ । ಯತಃ । ದ್ಯಾವಾಪೃಥಿವೀ ಇತಿ । ನಿಃ-ತತಕ್ಷುಃ ।
ಮನೀಷಿಣಃ । ಮನಸಾ । ಪೃಚ್ಛತ । ಇತ್ । ಊಂ ಇತಿ । ತತ್ । ಯತ್ । ಅಧಿಽಅತಿಷ್ಠತ್ । ಭುವ-ನಾನಿ । ಧಾರಯನ್ ॥ ೪ ॥

॥ ಸಾಯಣಭಾಷ್ಯಂ ॥

ಪೂರ್ವಸ್ಯಾಮೃಚ್ಯುಕ್ತಂ ಬ್ರಹ್ಮೈವ ಭೂಮ್ಯಾದಿಕಾರಣಮಿತಿ । ತದೇವಾನಯಾ ಪ್ರಶ್ನಕಥನ-ವ್ಯಾಜೇನೋಚ್ಯತೇ । ಲೋಕೇ ಹಿ ಪ್ರೌಢಂ ಪ್ರಾಸಾದಂ ನಿರ್ಮಿಮಾಣಃ ಕಸ್ಮಿಂಶ್ಚಿತ್ಪ್ರಾಢೇ ವನೇ ಕಂಚಿ-ನ್ಮಹಾಂತಂ ವೃಕ್ಷಂ ಛಿತ್ತ್ವಾ ತಕ್ಷಣಾದಿನಾ ಸ್ತಂಭಾದಿಕಂ ಸಂಪಾದಯತಿ । ಇಹ ತು ಪರಮೇಶ್ವರಪ್ರೇರಿತಾ ಜಗತ್ಸ್ರಷ್ಟಾರೋ ಯತೋ ಯಸ್ಮಾದ್ವನಾದ್ಯಂ ವೃಕ್ಷಮಾದಾಯ ದ್ಯಾವಾಪೃಥಿವೀ ನಿಷ್ಟತಕ್ಷುಃ ತಕ್ಷಣೇನ ದ್ಯಾವಾಪೃಥಿವ್ಯೌ ನಿಷ್ಪಾದಿತವಂತಃ ತದ್ವನಂ ಕಿಂ ಸ್ವಿತ್ ಕಿಂ ನಾಮ ಸ್ಯಾತ್ । ತಥಾ ಕ ಉ ಸ ವೃಕ್ಷ ಆಸ । ಕಸ್ತಾದೃಶೋ ಮಹಾನ್ವೃಕ್ಷೋಽಭೂತ್ । ಹೇ ಮನೀಷಿಣೋ ಮನಸ ಈಶ್ವರಾಃ ತದುಭಯಂ ಮನಸಾ ಜಿಜ್ಞಾಸಾಯುಕ್ತೇನ ಪೃಚ್ಛತೇದು । ಪೃಚ್ಛತೈವ । ಕಿಂಚೇಶ್ವರೋ ಭುವನಾನಿ ಧಾರಯನ್ನ-

**ತ್ಸ್ಥಾನಮಧ್ಯತಿಷ್ಠತ್ ತದಪಿ ಪೃಚ್ಛತ । ಏತಸ್ಯ ಸರ್ವಸ್ಯಾಪ್ಯುತ್ತರಂ ಬ್ರಹ್ಮ ಸ ವೃಕ್ಷ ಆಸೀದಿತ್ಯಾದಿಕ-ಮುತ್ತರಂ ॥**

॥ ಪ್ರತಿಪದಾರ್ಥ ॥

**ಯತಃ**—ಯಾವ ವನವೃಕ್ಷಾದಿಗಳಿಂದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ನಿಷ್ಟತಕ್ಷುಃ**—ಜಗನ್ನಿರ್ಮಾಪಕರು ನಿರ್ಮಿಸಿದರೋ । **ವನಂ**—ಆ ವನವು । **ಕಿಂ ಸ್ವಿತ್**—ಯಾವುದು ? । **ಸಃ ವೃಕ್ಷಃ**—ಆ ವೃಕ್ಷವು । **ಕ ಉ ಆಸ**—ಯಾವುದು ? । **ಮನೀಷಿಣಃ**—ಎಲೈ ಪ್ರಾಜ್ಞರೇ । **ಮನಸಾ**—ಧ್ಯಾನರೂಪದಲ್ಲಿ । **ಪೃಚ್ಛತೇದು**—ಆ ವಿಷಯವನ್ನು ವಿಮರ್ಶಿಸಿ ತಿಳಿಯಿರಿ । **ಯತ್**—ಯಾವ ಸತ್ತ್ವವು । **ಭುವನಾನಿ**—ಸಕಲ ಲೋಕಗಳನ್ನೂ । **ಧಾರಯನ್**—ಧರಿಸುತ್ತ । **ಅಧ್ಯತಿಷ್ಠತ್**—ಸ್ಥಿತವಾಗಿದ್ದಿತೋ । **ತತ್**—ಅದರ ವಿಷಯವನ್ನು ವಿಮರ್ಶಿಸಿ ತಿಳಿಯಿರಿ.

॥ ಭಾವಾರ್ಥ ॥

ಯಾವ ವನವೃಕ್ಷಾದಿಗಳಿಂದ ಜಗನ್ನಿರ್ಮಾಪಕರು ದ್ಯಾವಾಪೃಥಿವಿಗಳನ್ನು ನಿರ್ಮಿಸಿದರೋ, ಆ ವನವು ಯಾವುದು ? ಆ ವೃಕ್ಷವು ಯಾವುದು ? ಎಲೈ ಪ್ರಾಜ್ಞರೇ, ಧ್ಯಾನರೂಪದಲ್ಲಿ ಆ ವಿಷಯವನ್ನು ವಿಮರ್ಶಿಸಿ ತಿಳಿಯಿರಿ. ಯಾವ ಸತ್ತ್ವವು ಸಕಲ ಲೋಕಗಳನ್ನೂ ಧರಿಸುತ್ತ ಸ್ಥಿತವಾಗಿದ್ದಿತೋ, ಅದರ ವಿಷಯವನ್ನು ವಿಮರ್ಶಿಸಿರಿ.

## English Translation

Which was the forest, which the tree, from which they fabricated heaven and earth ? Inquire, sages, in your minds what (place) he was stationed in when holding the worlds.

॥ ವಿಶೇಷವಿಷಯಗಳು ॥

ದ್ಯಾವಾಪೃಥಿವಿಗಳ ನಿರ್ಮಾಣಕ್ಕೆ ವಿಶ್ವಕರ್ಮನು (ಅಥವಾ ಇಂದ್ರಾದಿದೇವತೆಗಳು) ಉಪಯೋಗಿಸಿದ ವೃಕ್ಷವಾವುದು ? ಆ ವೃಕ್ಷವನ್ನು ಯಾವ ವನದಿಂದ ತಂದು ಉಪಯೋಗಿಸಿದರು ಎಂಬುದೇ ಪ್ರಕೃತ ಋಕ್ಕಿನಲ್ಲಿರುವ ಪ್ರಶ್ನೆಯಾಗಿದೆ. ಗೃಹನಿರ್ಮಾಣಕ್ಕೆ ಯಾವ ರೀತಿ ವೃಕ್ಷಾದಿಗಳು ಅತ್ಯವಶ್ಯವೋ ಅದರಂತೆಯೇ ದ್ಯಾವಾಪೃಥಿವಿಗಳೆಂಬ ಗೃಹ ನಿರ್ಮಾಣಕ್ಕೂ ಅವು ಅತ್ಯವಶ್ಯವೆಂಬ ಭಾವನೆಯು ಸಹಜವಾಗಿರುತ್ತದೆ. ಈ ವಿಧವಾದ ರೂಪಕವನ್ನು (ದ್ಯಾವಾಪೃಥಿವಿಗಳ ನಿರ್ಮಾಣವನ್ನು ಗೃಹನಿರ್ಮಾಣಕ್ಕೆ ಹೋಲಿಸುವುದು. ಮತ್ತು ಅವುಗಳಿಗೆ ಬೇಕಾದ ಉಪಕರಣಗಳನ್ನು ವೃಕ್ಷಾದಿಗಳೆಂದು ಕರೆಯುವುದು) ವೈದಿಕವಾಕ್ಯಗಳಲ್ಲಿ ಅನೇಕ ಸನ್ನಿವೇಶಗಳಲ್ಲಿ ಕಾಣಬಹುದು. ಗೃಹನಿರ್ಮಾಣಕಾಲದಲ್ಲಿಯೂ ಇರಲೇಬೇಕು. ಪ್ರಥಮತಃ ಮರಗಳನ್ನು ಕಡಿದು ಸಿದ್ಧಪಡಿಸಿ ಕೊಳ್ಳುವುದು, ನಿರ್ಮಾಣಪ್ರದೇಶವನ್ನು ಅಳೆದು ಸರಿಪಡಿಸಿಕೊಳ್ಳುವುದು, ಒಳ್ಳೆಯ ಆಸರೆಯೊಡನೆ ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಕಂಬಗಳನ್ನು ನೆಡುವುದು ಮತ್ತು ಮುಂಭಾಗದಲ್ಲಿ ಎರಡು ಮಹಾದ್ವಾರಗಳನ್ನು ರಚಿಸುವುದು, ಅಡ್ಡತೊಲೆ, ಜಾವಣಿ, ಜಂತಿಗಳು ಇತ್ಯಾದಿಗಳನ್ನು ಸಂಪಾದಿಸುವುದು, ಈ ಹಂತಗಳೆಲ್ಲವೂ ವಿಶ್ವನಿರ್ಮಾಣಕ್ರಿಯೆಯಲ್ಲಿ ವರ್ಣಿತವಾಗಿರುವುದನ್ನು ಸಂಹಿತಾವಾಕ್ಯಗಳಲ್ಲಿ ಪರಿಶೀಲಿಸಬಹುದು.

**ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ ಕಿಂಚನ ಮಿಷತ್** ಇತ್ಯಾದಿಯಾಗಿ ಸೃಷ್ಟಿಗೆ ಪೂರ್ವಭಾವಿಯಾದ ಈಶ್ವರನ ಅದ್ವಿತೀಯತ್ವವನ್ನು ಅನೇಕ ಕಡೆಗಳಲ್ಲಿ ತಿಳಿಸಿದ್ದರೂ ಸಹ, ಭಾವರೂಪವಾದ ವಿಶ್ವಕ್ಕೆ ಅತ್ಯಂತಾಭಾವವಿರಲಿಲ್ಲವೆಂದೂ, ಅಸದ್ರೂಪದಿಂದ ಸದ್ರೂಪವು ಉತ್ಪನ್ನವಾಗಲು ಸಾಧ್ಯವಿಲ್ಲವೆಂದೂ ತಿಳಿಸುವ ವೈದಿಕವಾಕ್ಯಗಳನ್ನು ಮೇಲೆ ಉದಾಹರಿಸಿ, ಸದ್ರೂಪವಾದ ವಿಶ್ವಕ್ಕೆ ಸದ್ರೂಪವಾದ ಉಪಾದಾನ ಕಾರಣಗಳೇ ಮೂಲವೆಂದೂ ತಿಳಿಸಿದೆ. ಭಾವರೂಪವಾದ ಉಪಾದಾನಕಾರಣಗಳ ಅಸ್ತಿತ್ವವನ್ನು ನಂಬಿದ್ದರೂ ಸಹ, ಈ ಕಾರಣವಸ್ತುಗಳ ಸ್ವರೂಪವೇನು ? ಅವುಗಳು ಲಭಿಸುವ ಪ್ರದೇಶಗಳಾವುವು ಇತ್ಯಾದಿ ವಿಷಯಗಳನ್ನು ತಿಳಿಯಲು ತಮ್ಮ ಜಿಜ್ಞಾಸೆಯನ್ನು ಋಷಿಗಳು ಅನೇಕ ಕಡೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

**ಪಾಕಃ ಪೃಚ್ಛಾಮಿ ಮನಸಾ ವಿಜಾನನ್ದೇವಾನಾಮೇನಾ ನಿಹಿತಾ ಪದಾನಿ ।**
**ವತ್ಸೇ ಬಷ್ಕಯೇಽಧಿ ಸಪ್ತ ತಂತೂನ್ವಿ ತತ್ನಿರೇ ಕವಯ ಓತವಾ ಉ ॥**

(ಋ. ಸಂ. ೧-೧೬೪-೫)

ವಿಶ್ವಕ್ಕೆಲ್ಲ ನಿವಾಸಭೂತನಾದ ಆದಿತ್ಯನಲ್ಲಿ ಕವಿಗಳು ಜಗದ್ರೂಪವಾದ ಹಾಸುಹೊಕ್ಕುಗಳನ್ನು ರಚಿಸುವುದಕ್ಕಾಗಿ ಸಪ್ತಸಂಖ್ಯಾಕವಾದ ತಂತುಗಳನ್ನು ಹರಡಿದ್ದಾರೆ. ಅವು ಯಾವುವು ? ಪಾರಮಾರ್ಥಿಕವಾದ ತತ್ತ್ವವನ್ನರಿಯಲು ದೇವತೆಗಳಿಂದಲೂ ಸಾಧ್ಯವಿಲ್ಲ. ಆದುದರಿಂದ ಅಲ್ಪಮತಿಯುಳ್ಳವನೂ, ಪರಿಪಕ್ವವಿಲ್ಲದ ಬುದ್ಧಿಯುಳ್ಳವನೂ, ರಹಸ್ಯತತ್ತ್ವಗಳನ್ನರಿಯಲಶಕ್ತನೂ ಆದ ನಾನು ಇವನ್ನು ತಿಳಿಯಲು ಆಶಿಸುತ್ತೇನೆ.

**ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।**
**ಸಂತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋ ಜರಂತ ॥**

(ಋ. ಸಂ. ೧೦.೩೧-೭)

ಯಾವ ವೃಕ್ಷದಿಂದ ದೇವತೆಗಳು ದ್ಯಾವಾಪೃಥಿವಿಗಳನ್ನು ನಿರ್ಮಿಸಿದರೋ ಆ ವೃಕ್ಷದ ಸ್ವರೂಪವೇನು ? ಆ ವೃಕ್ಷವು ಲಭಿಸುವ ಅರಣ್ಯವಾವುದು ? ಇಂತಹ ವಿಶ್ವನಿರ್ಮಾಣಕ್ಕಾಗಿ ಸ್ತುತಿಕರ್ತರು ದೇವತೆಗಳಿಗೆ ಕೃತಜ್ಞರಾಗಿದ್ದಾರೆ ಮತ್ತು ಅವರನ್ನು ಸರ್ವದಾ ಪ್ರಶಂಸಿಸುತ್ತಾರೆ. ಮತ್ತು ಈ ಮೂಲತತ್ತ್ವಗಳನ್ನು ಅರಿಯಲೂ ಆಶಿಸುತ್ತಾರೆ ಇತ್ಯಾದಿ ಜಿಜ್ಞಾಸಾ (ತಿಳಿಯಲು ಕುತೂಹಲವುಳ್ಳ) ವಾಕ್ಯಗಳು ಹೇರಳವಾಗಿವೆ. ಪುರಾತನನಿವಾಸಸ್ಥಾನಗಳಾದ ದ್ಯಾವಾಭೂಮಿಗಳನ್ನು ಅಳೆಯುವ ಕ್ರಿಯೆಯೂ ವರ್ಣಿತವಾಗಿರುತ್ತದೆ.

**ಇಮಾಮೂ ಷ್ವಾಸುರಸ್ಯ ಶ್ರುತಸ್ಯ ಮಹೀಂ ಮಾಯಾಂ ವರುಣಸ್ಯ ಪ್ರ ವೋಚಂ ।**
**ಮಾನೇನೇವ ತಸ್ಥಿವಾँ ಅಂತರಿಕ್ಷೇ ವಿ ಯೋ ಮಮೇ ಪೃಥಿವೀಂ ಸೂರ್ಯೇಣ ॥**

(ಋ. ಸಂ. ೫-೮೫-೫)

ಯಾವ ವರುಣನು ಅಂತರಿಕ್ಷಸ್ಥನಾಗಿದ್ದು ಅಳೆಯುವ ಕೋಲಿನಂತಿರುವ ಸೂರ್ಯನಿಂದ ದ್ಯುಲೋಕವನ್ನೂ ಪೃಥಿವಿಯನ್ನೂ ಬೇರೆ ಮಾಡಿ ಅಳೆಯುವನೋ ಅವನ ಅತಿಶಯವಾದ ಪ್ರಜ್ಞೆಯನ್ನು ಪ್ರಶಂಸಿಸುತ್ತೇವೆ ಇತ್ಯಾದಿ ವಾಕ್ಯಗಳು ವರುಣಾದಿಗಳು ತಾವು ನಿರ್ಮಿಸುವ ಪ್ರಪಂಚಗಳಿಗೆ ಪರಿಮಾಣಗಳನ್ನು ಕಲ್ಪಿಸುವ ಕ್ರಿಯೆಯನ್ನು ತಿಳಿಸುತ್ತವೆ.

ಹೀಗೆಯೇ, ಅಯಂ ಷಳುರ್ವೀರಮಿಮೀತ (೬-೪೭-೩) ಇತ್ಯಾದಿ ಸನ್ನಿವೇಶಗಳಲ್ಲಿ ಇದೇ ಪರಿಮಾಣನಿರ್ದೇಶ ಮತ್ತು ನಿರ್ಮಾಣಕ್ರಿಯೆಗಳು ವರ್ಣಿತವಾಗಿವೆ. ವಿಷ್ಣುವು ತನ್ನ ವಿಕ್ರಮಣದಿಂದ ಲೋಕಗಳನ್ನು ಪರಿಚ್ಛಿನ್ನಮಾಡಿ ವಿಭಾಗಿಸಿರುವುದೂ ಪ್ರಸಿದ್ಧವಾಗಿದೆ.

ಗೃಹಾದಿಗಳ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಪೂರ್ವದಿಕ್ಕಿನಿಂದ ಕಾರ್ಯವನ್ನು ಆರಂಭಿಸುವುದು ಸಂಪ್ರದಾಯವಾಗಿದೆ. ಅದರಂತೆಯೇ ಇಂದ್ರಾದಿಗಳೂ ಸಹ ಆ ಸಂಪ್ರದಾಯವನ್ನನುಸರಿಸುತ್ತಾರೆ.

**ಸದ್ಮೇವ ಪ್ರಾಚೋ ವಿ ಮಿಮಾಯ ಮಾನೈರ್ವಜ್ರೇಣ ಖಾನ್ಯತೃಣನ್ನದೀನಾಂ ।**
**ವೃಥಾಸೃಜತ್ಪಥಿಭಿರ್ದೀರ್ಘಯಾಥೈಃ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥**

(ಋ. ಸಂ. ೨-೧೫-೩)

ಯಾವ ರೀತಿ ಯಜ್ಞಗೃಹಗಳನ್ನು ಪೂರ್ವದಿಕ್ಕಿನಿಂದ ಅಳತೆಮಾಡಿ ನಿರ್ಮಿಸುವರೋ, ಅದರಂತೆ ಇಂದ್ರನೂ ಪ್ರಾಗ್ದಿಕ್ಕಿನಿಂದಲೇ ಅಳೆದು ಪೃಥಿವ್ಯಾದಿಗಳನ್ನು ನಿರ್ಮಿಸಿದನು. ನದಿಗಳ ಪ್ರವಾಹದ್ವಾರಗಳನ್ನೂ ನಿರ್ಮಿಸಿದನು ಇತ್ಯಾದಿ ಪರಿಮಾಣಕ್ರಿಯೆಗಳು ವರ್ಣಿತವಾಗಿವೆ. ಈ ಪರಿಮಾಣನಿರ್ದೇಶಕ್ರಿಯೆಯಂತೆಯೇ ಲೋಕಗಳನ್ನು ವಿಸ್ತರಿಸಿ ಹರಡುವುದು, ಮಾನವನ ಗೋಚರಕ್ಕೆ ಬೀಳುವಂತೆ ಮಾಡುವುದು, ಇತ್ಯಾದಿ ಕಾರ್ಯಗಳೂ ಸಹ ಇಂದ್ರ, ಅಗ್ನಿ, ವರುಣ ಮುಂತಾದವರ ಅನುಗ್ರಹದಿಂದ ಸಾಧ್ಯ.

ವಿಶ್ವರೂಪವಾದ ಗೃಹಕ್ಕೆ ದ್ವಾರವೂ ಪೂರ್ವಾಭಿಮುಖವಾಗಿಯೇ ಇರಬೇಕು. ಈ ಮಹಾದ್ವಾರದಿಂದಲೇ ಆದಿತ್ಯರಶ್ಮಿಯು ಪ್ರವೇಶಿಸಬೇಕು.

**ವಿದಾ ದಿವೋ ವಿಷ್ಯನ್ನದ್ರಿಮುಕ್ಥೈರಾಯತ್ಯಾ ಉಷಸೋ ಅರ್ಚಿನೋ ಗುಃ ।**
**ಅಪಾವೃತ ವ್ರಜಿನೀರುತ್ಸ್ವರ್ಗಾದ್ವಿ ದುರೋ ಮಾನುಷೀರ್ದೇವ ಆವಃ ॥**

(ಋ. ಸಂ. ೫-೪೫-೧)

ಇಂದ್ರನು ಸ್ತುತಿಗಳಿಂದ ಪ್ರೇರಿತನಾದನು. ವಜ್ರಾಯುಧವನ್ನು ಪ್ರಯೋಗಿಸಿದನು. ಉಷಸ್ಸಿನ ರಶ್ಮಿಗಳು ಸರ್ವತ್ರ ಪ್ರಸರಿಸಿದವು. ಆದಿತ್ಯನು ಉದಯಿಸಿದನು. ಮಾನವರ ಸಂಚಾರಕ್ಕೆ ಯೋಗ್ಯವಾದ ಮಹಾದ್ವಾರಗಳನ್ನು ಆದಿತ್ಯನ್ನ ತೆರೆದನು.

**ವಿ ಶ್ರಯಂತಾಮೃತಾವೃಧಃ ಪ್ರಯೈ ದೇವೇಭ್ಯೋ ಮಹೀಃ ।**
**ಪಾವಕಾಸಃ ಪುರುಸ್ಪೃಹೋ ದ್ವಾರೋ ದೇವೀರಸಶ್ಚತಃ ॥** (ಋ. ಸಂ. ೧-೧೪೨-೬)

ಯಜ್ಞದ ವೃದ್ಧಿಗೆ ಕಾರಣರೂ, ಮಹತ್ಸ್ವರೂಪವುಳ್ಳವರೂ, ಜಗತ್ತನ್ನು ಶೋಧಿಸುವ ಶಕ್ತಿಯುತರೂ, ಪ್ರತ್ಯೇಕವಾದ ಸ್ಥಿತಿಯುಳ್ಳವರೂ ಆದ ದ್ವಾರಾಭಿಮಾನಿದೇವತೆಗಳು ದೇವತೆಗಳ ಪ್ರವೇಶಕ್ಕಾಗಿ ದೂರ ಸರಿದು ಉತ್ತಮವಾದ ಪ್ರವೇಶಕ್ಕೆ ಅವಕಾಶಮಾಡಿಕೊಡಲಿ ಎಂಬ ಸ್ತುತಿಯಿದೆ. ಈ ದ್ವಾರದೇವತೆಗಳು ಯಾರೆಂದರೆ—

**ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ ।**

(ಬೃ.ದೇ. ೩.೬)

ಈ ದ್ವಾರದೇವತೆಗಳು ದೇವಪತ್ನಿಯರೆಂದೂ, ಅಗ್ನಿಯಲ್ಲೇ ಸ್ಥಿರವಾಗಿ ನೆಲಸಿರುವವರೆಂದೂ, ವಿಶ್ವವ್ಯವಹಾರಕ್ಕೆ ಮೂಲವಾದ ಯಜ್ಞರಕ್ಷಕರೆಂದೂ ತಿಳಿಸಿದೆ.

**ವಿರಾಟ್ಸಮ್ರಾಡ್ವಿಭ್ವೀಃ ಪ್ರಭ್ವೀರ್ಬಹ್ವೀಶ್ಚ ಭೂಯಸೀಶ್ಚ ಯಾಃ । ದುರೋ ಘೃತಾನ್ಯಕ್ಷರನ್ ॥**
(ಋ. ಸಂ. ೧.೧೮೮-೫)

ವಿರಾಟ್ಸಮ್ರಾಡ್ವಿಭ್ವೀಃ ಎಂಬಿವೆರಡೂ ಪ್ರಕಾಶಮಾನವಾದ ದ್ವಾರಗಳು. ಇವು ದೇವತೆಗಳು ಯಜ್ಞಕ್ಕೆ ಬರುವ ದಾರಿಗಳು. ಈ ದ್ವಾರಗಳು ಪೃಥ್ವಿಯಷ್ಟು ವಿಶಾಲವಾಗಿವೆ. ಬಹುಸಂಖ್ಯಾಕವಾಗಿದೆ. ಈ ದ್ವಾರಗಳು ಘೃತ್ನ ಪ್ರವಾಹವನ್ನು ಸುರಿಸುತ್ತವೆ. ಈ ದ್ವಾರಗಳನ್ನು ಆಪ್ರೀಸೂಕ್ತಗಳಲ್ಲಿ ಬಹುವಾಗಿ ಪ್ರಶಂಸಿಸಿದೆ. ಹೀಗೆಯೇ ಗೃಹದ ತೊಲೆಗಳು, ಚಾವಣಿ ಇತ್ಯಾದಿಗಳನ್ನು ಪ್ರತಿಬಿಂಬಿಸುವ ತತ್ತ್ವಗಳೂ ವರ್ಣಿತವಾಗಿವೆ. ಆದರೆ ಕೆಲವೆಡೆ ಗಳಲ್ಲಿ ವಿಶ್ವರೂಪವಾದ ಗೃಹನಿರ್ಮಾಪಕನ ಕೌಶಲ್ಯವು ಈ ರೀತಿ ಪ್ರಶಂಸಿತವಾಗಿದೆ—

**ಸ ಇತ್ಸ್ವಪಾ ಭುವನೇಷ್ವಾಸ ಯ ಇಮೇ ದ್ಯಾವಾಪೃಥಿವೀ ಜಜಾನ ।**
**ಉರ್ವೀ ಗಭೀರೇ ರಜಸೀ ಸುಮೇಕೇ ಅವಂಶೇ ಧೀರಃ ಶಚ್ಯಾ ಸಮೈರತ್ ॥**
(ಋ. ಸಂ. ೪-೫೬-೩)

ಪ್ರಜಾಪತಿಯ ಕರ್ಮಗಳು ಅತಿಶಯವಾದ ಕೌಶಲ್ಯವನ್ನು ತೋರಿಸುತ್ತವೆ. ಅವನು ದ್ಯಾವಾಪೃಥಿವಿಗಳನ್ನು ಉತ್ಪನ್ನ ಮಾಡಿದನು. ಮತ್ತು ವಿಸ್ತೃತವಾದ ಅಂತರಿಕ್ಷವನ್ನು (ವಂಶ) ಆಧಾರರಹಿತವಾಗಿ ನಿಲ್ಲಿಸಿದನು ಎಂದಿರುವ ಈ ಸನ್ನಿವೇಶದಲ್ಲಿ ವಂಶಶಬ್ದಕ್ಕೆ ಗೃಹಕ್ಕೆ ಉಪಯುಕ್ತವಾದ ಆಧಾರಸ್ತಂಭ ಅಥವಾ ತೊಲೆ ಇತ್ಯಾದ್ಯರ್ಥವಾಗಬಹುದು. ಇದನ್ನೇ ಛಾಂದೋಗ್ಯದಲ್ಲಿ ವಿಸ್ತೃತವಾಗಿ ವಿವರಿಸುತ್ತ ಈ ರೀತಿ ವರ್ಣಿಸಿದೆ.

**ಅಸೌ ವಾದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ ।**
(ಛಾ. ಉ. ೩-೧-೧)

ಅಂತರಿಕ್ಷದಲ್ಲಿ ಸ್ಥಿತನಾಗಿರುವ ಆದಿತ್ಯನೇ ದೇವಮಧು. ಈ ದ್ಯುಲೋಕವೇ ಅಡ್ಡತೊಲೆ ಮತ್ತು ಚಾವಣಿ ಅಂತರಿಕ್ಷವೇ ಜೇನುಗೂಡು ಇತ್ಯಾದಿ. ಈ ರೀತಿ ಕಂಭ ಮತ್ತು ಚಾವಣಿಗಳಿಲ್ಲದೇ ಅಂತರಿಕ್ಷಾದಿಗಳನ್ನು ನಿರ್ಮಿಸಿ ನಿಲ್ಲಿಸಿರುವುದೂ ಒಂದು ಕುಶಲತೆ. ಹೇಗೆಂದರೆ—

**ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।**
**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥**
(ಋ. ಸಂ. ೧೦-೧೪೯-೧)

ಸವಿತೃವು ಪೃಥ್ವಿಯನ್ನು ಬಂಧಕಸಾಮಗ್ರಿಗಳಿಂದ ಭದ್ರವಾಗಿ ಸ್ಥಾಪಿಸಿದ್ದಾನೆ. ಆಧಾರಸ್ತಂಭವಿಲ್ಲದೆಯೇ ಅಂತರಿಕ್ಷ ದೃಢವಾಗಿ ನಿಲ್ಲುವಂತೆ ಮಾಡಿದ್ದಾನೆ. ಇವೆಲ್ಲವೂ ಅವನ ಮಹಿಮೆ.

ದ್ಯಾವಾಪೃಥಿವೀ, ಅಂತರಿಕ್ಷ ಇವೆಲ್ಲವೂ ಸೇರಿ ವಿಶ್ವಗೃಹವಾಗಿದೆ. ಇವುಗಳಿಗೆಲ್ಲ ಪೃಥ್ವಿಯು ಆಧಾರವು. (ಭೂಮಿ, ಕ್ಷ್ಮಾ, ಗ್ಮಾ) ಇದು ಅತ್ಯಂತ ವಿಸ್ತೃತವಾದುದು. **ಪೃಥ್ವೀ, ಉರ್ವೀ, ಉತ್ತಾನ, ಅಪಾರ** ಇವು

ಪೃಥ್ವೀ ಮತ್ತು ದ್ಯುಲೋಕಗಳ ವಿಸ್ತೃತಿಯನ್ನು ತೋರಿಸುತ್ತವೆ. ಪೃಥ್ವಿಗೆ ಮಾತ್ರ ದ್ಯುಲೋಕ ಮತ್ತು ಅಂತರಿಕ್ಷಗಳಿಂದ ವ್ಯತ್ಯಾಸವನ್ನು ತೋರಿಸಲು ಇಷಂ ಎಂಬ ವಿಶೇಷಣವನ್ನು ಹೇಳಿದೆ. **ಭೂವನ್ಯಾಶ್ಚತಸ್ರಃ ಪ್ರದಿಶಃ** (೧೦-೧೯-೮) ಇತ್ಯಾದಿ ಸ್ಥಳಗಲ್ಲಿ ಈ ಪೃಥ್ವಿಯ ನಾಲ್ಕು ದಿಕ್ಕುಗಳನ್ನು ತಿಳಿಸಿವೆ. ಈ ವಿಶ್ವಗೃಹದಲ್ಲಿ ಲೋಕತ್ರಯವನ್ನೂ ಒಳಗೊಂಡ ಈ ವಿಶ್ವಗೃಹದಲ್ಲಿ ವಾಸಿಸುವವರು ಪಂಚಜನರು. ಇವರನ್ನು ಪಂಚಕ್ಷಿತಿಗಳೆಂದೂ ಕರೆಯುವುದುಂಟು. ಪಂಚಜನರೆಂದರೆ ಕೇವಲ ಪೃಥ್ವಿಯಲ್ಲಿರುವ ಮಾನವರು ಮಾತ್ರವೆಂದಲ್ಲ. ದೇವಗಂಧರ್ವಾದಿಗಳೆಲ್ಲರೂ ಈ ಗುಂಪಿನಲ್ಲಿ ಸೇರುತ್ತಾರೆ. ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವ ಈ ಪಂಚಜನರಿಗೆ ವಿಶ್ವಗೃಹದಲ್ಲಿ ದೀಪವು ಅತ್ಯವಶ್ಯವಾಗಿರುತ್ತದೆ. ಎಲ್ಲರಿಗೂ ಸಮಾನವಾದ ಜ್ಯೋತಿಯನ್ನು ಆದಿತ್ಯನು ಒದಗಿಸುತ್ತಾನೆ.

**ಮಹತ್ತನ್ನಾಮ ಗುಹ್ಯಂ ಪುರುಸ್ಪೃಗ್ಯೇನ ಭೂತಂ ಜನಯೋ ಯೇನ ಭವ್ಯಂ ।**
**ಪ್ರತ್ನಂ ಜಾತಂ ಜ್ಯೋತಿರ್ಯದಸ್ಯ ಪ್ರಿಯಂ ಪ್ರಿಯಾಃ ಸಮವಿಶಂತ ಪಂಚ ॥**

(ಋ. ಸಂ. ೧೦.೫೫-೨)

ಆದಿತ್ಯರೂಪನಾದ ಈ ಇಂದ್ರನ ರೂಪವು ಮಹತ್ತಾದುದು. ರಹಸ್ಯಾತ್ಮಕವಾದುದು. ಸಕಲರಿಂದಲೂ ಅಪೇಕ್ಷಿತವಾದುದು. ಈ ಮಹತ್ತ್ವದಿಂದ ಭೂತ ಮತ್ತು ಭವಿಷ್ಯತ್ಕಾಲಗಳನ್ನೆಲ್ಲ ಉತ್ಪನ್ನಮಾಡಿದ್ದಾನೆ. ಮೂರು ಲೋಕಗಳಲ್ಲೂ ವ್ಯಾಪಿಸಿ ವಾಸಮಾಡತಕ್ಕ ದೇವಗಂಧರ್ವಾದಿ ಪಂಚಜನರೂ ವಿಶ್ವವ್ಯಾಪಿಯಾದ ಈ ಆದಿತ್ಯನ ತೇಜಸ್ಸನ್ನು ಆರಾಧಿಸಿ ವಾಸಿಸುತ್ತಾರೆ ಎಂದಿರುತ್ತದೆ. ಹೀಗೆ ಸರ್ವಸಮಾನವಾದ ತೇಜಸ್ಸಲ್ಲದೇ, ವಿಶ್ವಗೃಹದ ಆಯಾ ಭಾಗಕ್ಕೂ ಪ್ರತ್ಯೇಕವಾದ ಜ್ಯೋತಿಯು ಅವಶ್ಯಕವಾದುದರಿಂದ ಒಂದೇ ಮೂಲಜ್ಯೋತಿಯು ಮೂರು ವಿಭಾಗವಾಗಿ ವ್ಯಾಪಿಸಿವೆ. ವಿಶ್ವಗೃಹವನ್ನು ನಿರ್ಮಿಸಿದನಂತರ ಈ ವಿಶ್ವಜ್ಯೋತಿಯು ಉತ್ಪನ್ನವಾಯಿತು. ಅದರ ರೂಪಾಂತರವಾದ ಅಗ್ನಿಯು

**ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಅಥಾಭವದರತೀ ರೋದಸ್ಯೋಃ ।**
**ತಂ ತ್ವಾ ದೇವಾಸೋಽಜನಯಂತ ದೇವಂ ವೈಶ್ವಾನರ ಜ್ಯೋತಿರಿದಾರ್ಯಾಯ ॥**

(ಋ. ಸಂ. ೧-೫೯-೨)

ದ್ಯುಲೋಕಕ್ಕೆ ಶಿರಃಪ್ರಾಯನು, ಪೃಥ್ವಿಗೆ ನಾಭಿಯು. ಈ ಅಗ್ನಿಯನ್ನು ಆರ್ಯ(ಪೂಜ್ಯ)ರಾದ ದೇವಮಾನವಾದಿಗಳಿಗಾಗಿ ದೇವತೆಗಳು ಉತ್ಪನ್ನಮಾಡಿದರು.

**ವಿ ಸೂರ್ಯೋ ಅಮತಿಂ ನ ಶ್ರಿಯಂ ಸಾದೋರ್ವಾದ್ಗವಾಂ ಮಾತಾ ಜಾನತೀ ಗಾತ್ ।**
**ಧನ್ವರ್ಣಸೋ ನದ್ಯಃ ಖಾದೋಅರ್ಣಾಃ ಸ್ಥೂಣೇವ ಸುಮಿತಾ ದೃಂಹತ ದ್ಯೌಃ ॥**

(ಋ. ಸಂ. ೫-೪೫-೨)

ಸೂರ್ಯನು ಉದಯಿಸುತ್ತಾನೆ. ಪ್ರಕಾಶವನ್ನು ಹರಡುತ್ತಾನೆ. ದ್ಯುಲೋಕವು ಗೃಹದ ಆಧಾರಸ್ತಂಭದಂತೆ ವಿಶ್ವವನ್ನು ಧರಿಸಿ ದೃಢವಾಗಿರುತ್ತದೆ. ಇವೆಲ್ಲವೂ ವಿಶ್ವಜ್ಯೋತಿಯಾದ ಸೂರ್ಯನ ಆಜ್ಞೆಯು. ವಿಶ್ವಗೃಹಕ್ಕೆ ಸಂಬಂಧಿಸಿದ ಅಗ್ನಿಯ ಸಾರ್ವತ್ರಿಕವಾದ ಕಾರ್ಯವು ಆಪ್ರೀಸೂಕ್ತಗಳಲ್ಲಿ ವರ್ಣಿತವಾಗುವ ವನಸ್ಪತಿಯಲ್ಲಿ ಪ್ರತಿಬಿಂಬಿತವಾಗಿದೆ. ಅವನು ಗೃಹಪತಿಯೆಂದು ಪ್ರಸಿದ್ಧನಾಗಿದ್ದಾನೆ.

ಈ ವಿಧವಾದ ವಿಶ್ವಗೃಹದ ನಿರ್ಮಾಣಕಾರ್ಯವು ಇಂದ್ರ, ವರುಣ, ಮಿತ್ರ ಇತ್ಯಾದಿ ದೇವತೆಗಳಿಗೆ ಸಂಬಂಧಿಸಿವೆ. ಆದರೆ, ಅದೇ ಕಾರ್ಯದಲ್ಲಿ ಕೌಶಲ್ಯವನ್ನು ಹೊಂದಿರುವ ತ್ವಷ್ಟೃ, ಋಭುಗಳು ಈ ಕಾರ್ಯದಲ್ಲಿ ವಿಶಿಷ್ಟವಾದ ಕುಶಲತೆಯನ್ನು ಹೊಂದಿದ್ದಾರೆಂದು ಪ್ರಸಿದ್ಧರಾಗಿದ್ದಾರೆ. ಋಭುಗಳ ಕ್ರಿಯಾಕುಶಲತೆಯನ್ನು ಹಿಂದೆ ವಿವರಿಸಿ ತಿಳಿಸಿದೆ.

ವಿಶ್ವಸೃಷ್ಟಿಯ ಉದ್ದಿಶ್ಯವು ಕೇವಲ ಮಾನವನ ಶ್ರೇಯಸ್ಸಾಧನೆಗಾಗಿ ಮಾತ್ರವಲ್ಲ. ದೇವಮಾನವಾದಿಗಳು ಉಭಯತ್ರ ಪರಸ್ಪರ ಸಹಾಯಕರಾಗಿ (**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ—ಭ. ಗೀ**) ಮಾನವರು ಯಜ್ಞದಿಂದ ದೇವತೆಗಳನ್ನು ಪುಷ್ಟಿಗೊಳಿಸುತ್ತಲೂ, ದೇವತೆಗಳು ವೃಷ್ಟ್ಯಾದಿಗಳಿಂದ ಮಾನವರನ್ನು ಪುಷ್ಟಿಗೊಳಿಸುತ್ತಲೂ ವಿಶ್ವವ್ಯವಹಾರದಲ್ಲಿ ಸಾಮರಸ್ಯವನ್ನು ಉಂಟುಮಾಡಿದರೆ ಆಗ ಸಮಗ್ರವಿಶ್ವಸೃಷ್ಟಿಯ ಉದ್ದಿಶ್ಯವು ಸಾರ್ಥಕವಾಗುತ್ತದೆ. ಆದುದರಿಂದ ಮಾನವನಿಗೆ ಗೃಹಾದಿಗಳ ಅಪೇಕ್ಷೆಯು ಹೇಗಿರುತ್ತದೆಯೋ, ದೇವತೆಗಳಿಗೂ ಅದೇ ಅಪೇಕ್ಷೆಯಿರುತ್ತದೆ. ಈ ಗೃಹದ ನಿರ್ಮಾಣಕ್ಕೆ ವೃಕ್ಷವೆಲ್ಲಿಂದ ಬಂದಿತು, ಯಾವ ವನದಿಂದ ಎಂಬ ಪ್ರಶ್ನೆಯು ಪ್ರಕೃತವಾದ ಋಕ್ಕಿನ ವಿಶೇಷವಿಷಯವಾಗಿರುತ್ತದೆ.

ಈ ಪ್ರಶ್ನೆಗೆ ಉತ್ತರವಾಗಿ ವೈದಿಕವಾಕ್ಯಗಳಲ್ಲೇ ಈ ರೀತಿಯಾದ ಉತ್ತರವಿರುತ್ತದೆ. ತೈತ್ತಿರೀಯ ಬ್ರಾಹ್ಮಣದಲ್ಲಿ ಇದೇ ಪ್ರಶ್ನೆಯನ್ನು ಉದ್ಧರಿಸಿ ಅನಂತರ ಅದಕ್ಕೆ ಉತ್ತರವನ್ನೂ ತಿಳಿಸಿದೆ. ಪ್ರಶ್ನೆಯು ಮಾತ್ರ ಋಕ್ಸಂಹಿತಾ ವಾಕ್ಯಗಳಲ್ಲಿರುವ ಪ್ರಶ್ನೆಯೇ ಆಗಿದೆ. ಆದರೆ ಉತ್ತರವು ಮಾತ್ರ ಬ್ರಾಹ್ಮಣದ ವಾಕ್ಯಗಳು.

> **ಕೋ ಅದ್ಧಾ ವೇದ ಕ ಇಹ ಪ್ರವೋಚತ್ । ಕುತ ಆ ಜಾತಾ ಕುತ ಇಯಂ ವಿಸೃಷ್ಟಿಃ । ಅರ್ವಾಗ್ದೇವಾ ಅಸ್ಯ ವಿಸರ್ಜನಾಯ । ಅಥಾ ಕೋ ವೇದ ಯತ ಆ ಬಭೂವ । ಇಯಂ ವಿಸೃಷ್ಟಿರ್ಯತ ಆ ಬಭೂವ । ಯದಿ ವಾ ದಧೇ ಯದಿ ವಾ ನ । ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ । ಸೋ ಅಂಗ ವೇದ ಯದಿ ವಾ ನ ವೇದ । ಕಿಗ್ಂ ಸ್ವಿದ್ವನಂ ಕ ಉ ಸ ವೃಕ್ಷ ಆಸೀತ್ । ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ಪೃಚ್ಛತೇದು ತತ್ । ಯದಧ್ಯತಿಷ್ಠದ್ಭುವನಾನಿ ಧಾರಯನ್ । ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್ । ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ವಿಬ್ರವೀಮಿ ವಃ । ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್ ॥**
>
> (ತೈ. ಬ್ರಾ. ೨-೮-೯-೫, ೬, ೭)

ಮೇಲಿನ ೧೦-೮೧-೧ರಿಂದ ೭ನೇ ಋಕ್ಕುಗಳಲ್ಲಿ ಅಡಕವಾಗಿರುವ ಅಭಿಪ್ರಾಯಗಳೆಲ್ಲವೂ ಈ ಬ್ರಾಹ್ಮಣವಾಕ್ಯಗಳಲ್ಲಿ ಅಡಕವಾಗಿರುತ್ತವೆ. ಜಗತ್ಸೃಷ್ಟಿಗೆ ಮೂಲಕಾರಣವಾವುದೆಂಬುದು ಮೊದಲನೆಯ ಪ್ರಶ್ನೆ. ಅನಂತರ ಈ ವಿಶ್ವಗೃಹಕ್ಕೆ ವೃಕ್ಷವಾವುದು, ವನವಾವುದು ಎಂಬುದು ಎರಡನೆಯ ಪ್ರಶ್ನೆ. ಈ ವಿಶ್ವಗೃಹಕ್ಕೆ ಅಧ್ಯಕ್ಷನು ಯಾರು ಎಂಬುದು ಮೂರನೆಯ ಪ್ರಶ್ನೆ. ಈ ಮೂರಕ್ಕೂ ಉತ್ತರವು ಇಲ್ಲಿಯೇ ಸ್ಪಷ್ಟವಾಗಿರುತ್ತದೆ.

೧) ವಿಶ್ವಸೃಷ್ಟಿಗೆ ಮೂಲಕಾರಣವಾವುದು ಎಂಬುದಕ್ಕೆ ಆಗಮಪ್ರಾಮಾಣ್ಯವನ್ನು ನಂಬದಿರುವ ಅಥವಾ ಅದಕ್ಕೆ ಅಧಿಕವಾದ ಪ್ರಾಶಸ್ತ್ಯವನ್ನು ಕೊಡದಿರುವ ಮತಗಳೂ ಇವೆ. ಬ್ರಹ್ಮನೇ ವಿಶ್ವಸೃಷ್ಟಿಗೆ ಪ್ರಧಾನಕಾರಣನು. ಇವನೇ ನಿಮಿತ್ತಕಾರಣನು ಮಾತ್ರ ; ಉಪಾದಾನಕಾರಣಗಳು ಬೇರೆ ಎಂದು ಹೇಳುವ ಮತಗಳೂ ಇರುತ್ತವೆ.

(ಕುಂಭವನ್ನು ನಿರ್ಮಿಸಲು ಕುಂಬಾರನು ನಿಮಿತ್ತಕಾರಣನು. ಮಣ್ಣು ಉಪಾದಾನಕಾರಣವು) ಅಥವಾ ಎಲ್ಲವೂ ಸ್ವಾಭಾವಿಕವಾದ ಪರಿಣಾಮವನ್ನೇ ಹೊಂದುತ್ತವೆ. ಬ್ರಹ್ಮನ ನಿಮಿತ್ತವೇ ಬೇಕಿಲ್ಲ ಎನ್ನುವ ಮತಗಳೂ ಇರುತ್ತವೆ. ಉದಾಹರಣೆಗೆ ಪರಮಾಣುಗಳೇ ಮೂಲಕಾರಣವೆಂದು ನ್ಯಾಯ ಮತ್ತು ವೈಶೇಷಿಕಮತವು. ಸ್ವತಂತ್ರವೂ, ಅಚೇತನವೂ ಆದ ಮೂಲಪ್ರಕೃತಿಯೇ ಉಪಾದಾನಕಾರಣವೆಂದು ಸಾಂಖ್ಯರು ಹೇಳುತ್ತಾರೆ. ಶೂನ್ಯದಿಂದಲೇ ಜಗದುತ್ಪತ್ತಿಯೆಂದು ಮಾಧ್ಯಮಿಕರು (ಬೌದ್ಧರಲ್ಲಿ ಒಂದು ಗುಂಪು) ಹೇಳುತ್ತಾರೆ. ಎಲ್ಲವೂ ಸ್ವಾಭಾವಿಕವಾಗಿಯೇ ಪರಿಣಮಿತವಾಗುತ್ತದೆ. ಬ್ರಹ್ಮನ ಅಧ್ಯಕ್ಷತೆಯೇ ಬೇಡ ಎಂದು ಲೋಕಾಯತಿಕರು ಹೇಳುತ್ತಾರೆ. (ಇವರೂ ಬೌದ್ಧರಲ್ಲಿ ಒಂದು ಪಂಗಡ) ಆದರೆ ಇವುಗಳಲ್ಲಿ ಯಾರ ಮತವೂ ಸರಿಯಲ್ಲ. **ವಿಶ್ವತಶ್ಚಕ್ಷುಃ, ವಿಶ್ವತೋಮುಖಃ** ಇತ್ಯಾದಿಯಾಗಿ ಯಾವ ಬ್ರಹ್ಮತತ್ತ್ವವನ್ನು ಪ್ರಜಾಪತಿ, ವಿಶ್ವಕರ್ಮಾ, ಹಿರಣ್ಯಗರ್ಭ ಇತ್ಯಾದಿ ವಿಶೇಷಣಗಳಿಂದ ಪ್ರಶಂಸಿಸಿದೆಯೋ, ಆ ಬ್ರಹ್ಮತತ್ತ್ವವೇ ಸಕಲ ಜಗತ್ಸೃಷ್ಟಿಗೂ, ವ್ಯವಹಾರಕ್ಕೂ ನಿಮಿತ್ತಕಾರಣವು ಮತ್ತು ಉಪಾದಾನಕಾರಣವು.

೨) **ಎರಡನೆಯದಾಗಿ** ; ವಿಶ್ವಗೃಹದ ನಿರ್ಮಾಣ. ಈ ಪ್ರಕರಣದಲ್ಲಿ ಭಾಷ್ಯಕಾರರು ಈ ರೀತಿ ವಿವರಿಸುತ್ತಾರೆ.

> **ಲೋಕೇ ಹಿ ಗೃಹಂ ಚಿಕೀರ್ಷುಃ ಪುಮಾನ್ ವನಂ ಗತ್ವಾ ತತ್ರ ಕಂಚಿದ್ವೃಕ್ಷಂ ಛಿತ್ವಾ ತದೀಯೈಃ ಕಾಷ್ಠೈರ್ಗೃಹಂ ನಿರ್ಮಿಮೀತೇ । ತದ್ದೃಷ್ಟಾಂತೇನಾತ್ರಾಪಿ ಯತಃ ಯಸ್ಮಾದ್ವನಜನ್ಯಾತ್ ದ್ಯಾವಾಪೃಥಿವೀ ದ್ಯುಲೋಕಭೂಲೋಕೌ ತಕ್ಷಣೇನ ನಿರ್ಮಿತವಂತಃ । ತಾದೃಶಂ ವನಂ ಕಿಂಸ್ವಿದ್ಭವೇತ್ । ಕಶ್ಚ ತಾದೃಶಃ ಸ ವೃಕ್ಷ ಆಸೀತ್ ॥**

ಲೋಕದಲ್ಲಿ ಗೃಹವನ್ನು ನಿರ್ಮಿಸುವವನು ವನಕ್ಕೆ ಹೋಗಿ ಅಲ್ಲಿ ಯಾವುದಾದರೂ ಒಂದು ಅನುಕೂಲವಾದ ವೃಕ್ಷವನ್ನು ಕತ್ತರಿಸಿ ಅದರ ಕಾಷ್ಠಗಳಿಂದ ಗೃಹವನ್ನು ನಿರ್ಮಿಸುತ್ತಾನೆ. ಅದೇ ದೃಷ್ಟಾಂತದಿಂದ ಇಲ್ಲಿಯೂ ಸಹ ಯಾವ ವನವೃಕ್ಷದಿಂದ ದ್ಯಾವಾಪೃಥಿವಿಗಳನ್ನು ನಿರ್ಮಿಸಿದ್ದಾರೆ ? ಅಂತಹ ವನವು ಯಾವುದು ಎಂಬುದೇ ಪ್ರಶ್ನೆ.

ಬ್ರಹ್ಮವೇ ಆ ವನವು. ಬ್ರಹ್ಮವೇ ಆ ವೃಕ್ಷವು. ಇದು ಸರ್ವಶಕ್ತವಾಗಿದೆ ಎಂಬುದೇ ಉತ್ತರ.

೩) **ಯಃ ಅಸ್ಯ ಅಧ್ಯಕ್ಷಃ** ಎಂಬ ಪ್ರಶ್ನೆಗೂ ಇದೇ ಉತ್ತರ. ಸಕಲ ಜಗತ್ತನ್ನೂ ಈ ಬ್ರಹ್ಮವೇ ಧರಿಸಿರುವುದರಿಂದ ಇದೇ ಸಕಲ ಜಗತ್ತಿಗೂ ಅಧ್ಯಕ್ಷಸ್ಥಾನದಲ್ಲಿರುತ್ತದೆ. ಸಕಲ ಜಗದ್ವ್ಯವಹಾರಗಳಿಗೂ ಇದೇನಿಯಾಮಕವಾಗಿದೆ. ಲೌಕಿಕವಾದ ದೃಷ್ಟಾಂತವನ್ನು ಉಪಯೋಗಿಸುವುದರಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು. ಗೃಹವನ್ನು ನಿರ್ಮಿಸಬೇಕಾದರೆ ಪೂರ್ಣವಾದ ವೃಕ್ಷವನ್ನು ಉಪಯೋಗಿಸುವುದಿಲ್ಲ. ಗೃಹಕ್ಕೆ ಅವಶ್ಯವಾದ ಭಾಗಗಳು ಮಾತ್ರ ಉಪಯೋಗಿಸಲ್ಪಡುತ್ತದೆ. ಅಲ್ಲದೇ—ಗೃಹವನ್ನು ಪೂರ್ಣವಾಗಿ ಮರದಿಂದಲೇ ನಿರ್ಮಿಸುವುದಿಲ್ಲ. ಅದಕ್ಕೆ ಉಳಿದ ಸಾಮಗ್ರಿಗಳೂ ಅವಶ್ಯವಾಗಿರುತ್ತವೆ. ಆದರೆ ವೈದಿಕವಾಕ್ಯಗಳಲ್ಲಿ ವರ್ಣಿತವಾಗಿರುವ ಈ ವೃಕ್ಷರೂಪವಾದ ಸಂಕೇತವು ಸಕಲ ಜಗತ್ತನ್ನೂ ಒಳಗೊಂಡಿರುವುದಾಗಿರುತ್ತದೆ. ಸ್ಥಾವರಜಂಗಮಾತ್ಮಕಗಳಾದ ಸಕಲ ಜಗತ್ತೂ ಈ ಬ್ರಹ್ಮರೂಪವಾದ ಈ ವೃಕ್ಷದಲ್ಲಿ ಅಡಕವಾಗಿವೆ ಮತ್ತು ಈ ವೃಕ್ಷವೇ ವಿಶ್ವರೂಪದಲ್ಲಿ ಪ್ರಸರಿಸಿದೆ. ಈ ವಿಶ್ವವೃಕ್ಷದ ಸ್ವರೂಪವು ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ರೀತಿ ವಿವರಿಸಲ್ಪಟ್ಟಿದೆ.

**ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಂ ಚ । ಅಥ ಯನ್ಮೂರ್ತಂ ತದಸತ್ಯಂ, ಯದಮೂರ್ತಂ ತತ್ಸತ್ಯಂ ತದ್ಬ್ರಹ್ಮ, ತಜ್ಜ್ಯೋತಿಃ, ಯಜ್ಜ್ಯೋತಿಃ ಸ ಆದಿತ್ಯಃ............ ಪ್ರಣೇತಾರಂ ಭಾರೂಪಂ ವಿಗತನಿದ್ರಂ ವಿಜರಂ ವಿಮೃತ್ಯುಂ ತ್ರಿ ಪದಂ, ತ್ರ್ಯಕ್ಷರಂ, ಪುನಃ ಪಂಚಧಾ ಜ್ಞೇಯಂ ನಿಹಿತಂ ಗುಹಾಯಾಮಿತ್ಯೇವಂ ಹ್ಯಾಹೋರ್ಧ್ವಮೂಲಂ ತ್ರಿಪಾದ್ಬ್ರಹ್ಮ ಶಾಖಾ ಆಕಾಶವಾಯ್ವಗ್ನ್ಯುದಕಭೂಮ್ಯಾದಯ ಏಕೋಽಶ್ವತ್ಥನಾಮೈತದ್ಬ್ರಹ್ಮೈತಸ್ಯೈತ-ತ್ತೇಜೋ ಯದಸಾವಾದಿತ್ಯಃ ॥**

(ಮೈ. ಉ. ೬-೩, ೪)

ಬ್ರಹ್ಮನಿಗೆ ಮೂರ್ತ ಮತ್ತು ಅಮೂರ್ತ ಎಂಬ ಎರಡು ರೂಪಗಳು. ವ್ಯವಹಾರಾತ್ಮಕವಾಗಿ ಮೂರ್ತರೂಪವಾಗಿರುವುದು ಅಸತ್ಯ. ಅಮೂರ್ತವಾದುದು ಸತ್ಯ. ಅದೇ ತೇಜೋರೂಪವಾದುದು. ಈ ತೇಜಸ್ಸೇ ಆದಿತ್ಯನು. ಇವನೇ ಉದ್ಗೀಥರೂಪನು ಮತ್ತು ಪ್ರಣವರೂಪನು. ಇವನು ಅಜರನು, ಅಮರ್ತ್ಯನು, ಮೂರು ಪಾದಗಳುಳ್ಳವನು, ಮೂರು ಅಕ್ಷರಗಳುಳ್ಳವನು. ಹೃದಯರೂಪವಾದ ಗುಹೆಯಲ್ಲಿ ಗುಹ್ಯನಾಗಿರತಕ್ಕವನು. ಈ ಪರಮಾತ್ಮನನ್ನು ಶ್ರುತಿಗಳು ಈ ರೀತಿ ಪ್ರಶಂಸಿಸಿವೆ. ಮೂರು ಪಾದಗಳುಳ್ಳ ಈ ಪರಬ್ರಹ್ಮನಿಗೆ ಮೂಲವು ಊರ್ಧ್ವಭಾಗದಲ್ಲಿರುತ್ತದೆ. ಬ್ರಹ್ಮರೂಪವಾದ ಈ ವೃಕ್ಷಕ್ಕೆ ಆಕಾಶ, ವಾಯು, ಅಗ್ನಿ, ಉದಕ, ಪೃಥ್ವೀ ಇವೇ ಶಾಖೆಗಳು. ಈ ಪರಬ್ರಹ್ಮನಿಗೆ ಅಶ್ವತ್ಥವೆಂದು ಹೆಸರು ಪ್ರಸಿದ್ಧವಾಗಿದೆ. ತೇಜೋರೂಪನಾದ ಆದಿತ್ಯನೆಂದೂ ಕರೆಯುತ್ತಾರೆ. ಈ ತೇಜಸ್ಸೇ ಪ್ರಣವವು

ಹೀಗೆ ವಿಶ್ವವೃಕ್ಷಕ್ಕೂ ಪರಬ್ರಹ್ಮರೂಪನಾದ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿರುವುದು ಅನೇಕ ಕಡೆಗಳಲ್ಲಿವೆ. ಋಕ್ಸಂಹಿತೆಯಲ್ಲಿಯೂ ಇದೇ ಆದಿತ್ಯರೂಪದ ವೃಕ್ಷದ ಮಾಹಾತ್ಮ್ಯವನ್ನು ಪ್ರಶಂಸಿಸುತ್ತ ಈ ರೀತಿ ತಿಳಿಸಿದೆ.

**ಯಸ್ಮಿನ್ ವೃಕ್ಷೇ ಮಧ್ವದಃ ಸುಪರ್ಣಾ ನಿವಿಶಂತೇ ಸುವತೇ ಚಾಧಿ ವಿಶ್ವೇ ।**
**ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋನ್ನಶದ್ಯಃ ಪಿತರಂ ನ ವೇದ ॥**

(ಋ. ಸಂ. ೧-೧೬೪-೨೨)

ಯಾವ ಪರಮಾತ್ಮರೂಪವಾದ ವೃಕ್ಷದಲ್ಲಿ ಸುಲಭಸಂಚಾರಿಗಳೂ, ಜ್ಞಾನದ ಆಸ್ವಾದನೆಯನ್ನು ಅನುಭವಿಸುವುವೂ ಆದ ಇಂದ್ರಿಯರೂಪವಾದ ಪಕ್ಷಿಗಳು ತಮ್ಮ ಸ್ವಾಪಕಾಲದಲ್ಲಿ ತಮ್ಮ ವಿಷಯಗಳಿಂದ ಹಿಂತಿರುಗಿ ಆತ್ಮನಲ್ಲೇ ಲೀನವಾಗಿ ಅನಂತರ ಜಾಗೃತ್ಕಾಲದಲ್ಲಿ ಪುನಃ ತಮ್ಮ ವಿಷಯರೂಪವಾದ ಫಲಗಳೊಡನೆ ಸಂಪರ್ಕವನ್ನು ಹೊಂದುವುವೋ ಅಂತಹ ಪರಮಾತ್ಮನ ಸ್ವರೂಪವು ಎಂದರೆ ಪರಮಾತ್ಮರೂಪವಾದ ಈ ವೃಕ್ಷದ ಫಲದ ರುಚಿಯು ಉಳಿದ ಎಲ್ಲಾ ಫಲಗಳ ರುಚಿಗಿಂತಲೂ ಅತಿಶಯವಾಗಿರುತ್ತದೆ ಕೇವಲ ರುಚಿಕರವಾದ ಫಲವನ್ನು ಹೊಂದಿರುವುದು ಮಾತ್ರವಲ್ಲದೇ,

**ಧರ್ತಾ ದಿವೋ ವಿಭಾತಿ ತಪಸಸ್ಪೃಥಿವ್ಯಾಮಿತಿ । ಧರ್ತಾ ಹ್ಯೇಷ ದಿವೋ ವಿಭಾತಿ ತಪಸಸ್ಪೃಥಿವ್ಯಾಂ ಧರ್ತಾ ದೇವೋ ದೇವಾನಾಮಮರ್ತ್ಯಸ್ತಪೋಜಾ ॥**

(ಶ. ಬ್ರಾ. ೧೪-೧-೪-೭)

ಇದೇ ಆದಿತ್ಯನು ಸಕಲ ಲೋಕಗಳ ಧಾರಕನು ಮತ್ತು ಸಕಲ ಲೋಕಗಳಿಗೂ ಫಲದಾಯಕನು. ಈ ಆದಿತ್ಯರೂಪದ ವೃಕ್ಷದ ಫಲವು ಪಾಲಕವೂ ರಸವತ್ತಾದುದೂ ಆಗಿದೆ. (**ಪಿಪ್ಪಲಂ ಸ್ವಾದು**) ಈ ವೃಕ್ಷವು ಲೋಕಧಾರಕವಾಗಲು ಮತ್ತು ಉತ್ತಮವಾದ ಫಲವನ್ನು ಕೊಡಲು ನಿಮಿತ್ತರಾರು ಎಂದರೆ;—

**ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ। ಊರ್ಧ್ವಪವಿತ್ರೋ ವಾಜಿನೀವ-ಸ್ವಮೃತಮಸ್ಮಿ। ದ್ರವಿಣಗ್ಂ ಸವರ್ಚಸಂ । ಸುಮೇಧಾ ಅಮೃತೋಕ್ಷಿತಃ ।**

(ತೈ. ಉ. ೧.೧೦.೧)

ಈ ವೃಕ್ಷದ ಪ್ರೇರಕನು ನಾನೇ. ನನ್ನ ಕೀರ್ತಿಯು ಪರ್ವತಶಿಖರದಂತೆ ಪ್ರಸಿದ್ಧವಾಗಿದೆ. ನಿತ್ಯನಾದ ಆದಿತ್ಯನು ಪ್ರಭಾನಿಧಿಯು ಇತ್ಯಾದಿಯಾಗಿ ಆದಿತ್ಯರೂಪನಾದ ಪರಮಾತ್ಮನು ಪ್ರಕಟಿಸುತ್ತಾನೆ. (ಪರಮಾತ್ಮನನ್ನು ಸಾಕ್ಷತ್ಕರಿಸಿದ ತ್ರಿಶಂಕುವಿನ ವಾಕ್ಯವು). ನಾನೇ ವೃಕ್ಷರೂಪನೂ ಆಗಿದ್ದೇನೆ. ಅದರ ಸ್ವರೂಪವಿವರವೇನೆಂದರೆ;—

**ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಸ್ಸನಾತನಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ॥ ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ।**

(ಕಠ. ಉ. ೬ ೧)

ಪುರಾತನವಾದ ಈ ಅಶ್ವತ್ಥವೃಕ್ಷದ ಬುಡವು ಮೇಲಕ್ಕಿದೆ. ಇದರ ಕೊಂಬೆಗಳು ಅಧೋಮುಖವಾಗಿ ಹರಡಿವೆ. ಇದು ಅತ್ಯಂತ ಶುದ್ಧವಾದುದು. ಇದೇ ಪರಬ್ರಹ್ಮವು. ಇದು ಅಮೃತವು. ಇದರಲ್ಲಿಯೇ ಸಕಲವಿಶ್ವಗಳೂ ಸ್ಥಾಪಿತವಾಗಿವೆ. ಇದನ್ನು ಮೀರಿ ಯಾವುದೂ ಇಲ್ಲ. ಇದೇ ಸತ್ಯ.

॥ ಸಂಹಿತಾಪಾಠಃ ॥

ಯಾ ತೇ ಧಾಮಾನಿ ಪರಮಾಣಿ ಯಾವಮಾ ಯಾ ಮಧ್ಯಮಾ ವಿಶ್ವಕರ್ಮ-ನ್ನುತೇಮಾ ।

ಶಿಕ್ಷಾ ಸಖಿಭ್ಯೋ ಹವಿಷಿ ಸ್ವಧಾವಃ ಸ್ವಯಂ ಯಜಸ್ವ ತನ್ವಂ ವೃಧಾನಃ ॥

॥ ಪದಪಾಠಃ ॥

ಯಾ । ತೇ । ಧಾಮಾನಿ । ಪರಮಾಣಿ । ಯಾ । ಅವಮಾ । ಯಾ । ಮಧ್ಯಮಾ । ವಿಶ್ವಽಕರ್ಮನ್ । ಉತ । ಇಮಾ ।

ಶಿಕ್ಷ । ಸಖಿಽಭ್ಯಃ । ಹವಿಷಿ । ಸ್ವಧಾಽವಃ । ಸ್ವಯಂ । ಯಜಸ್ವ । ತನ್ವಂ । ವೃಧಾನಃ ॥ ೩ ॥

॥ ಸಾಯಣಭಾಷ್ಯಂ ॥

ಸಾಕಮೇಧೇಷು ವೈಶ್ವಕರ್ಮಣ ಏಕಕಪಾಲಸ್ಯ ಯಾ ತೇ ಧಾಮಾನೀತ್ಯೇಷಾ ಯಾಜ್ಯಾ । ಸೂತ್ರಿತಂ ಚ । ವಿಶ್ವಕರ್ಮನ್ಹವಿಷಾ ವಾವೃಧಾನೋ ಯಾ ತೇ ಧಾಮಾನಿ ಪರಮಾಣಿ ಯಾವಮಾ । ಆ. ೨-೧೮ । ಇತಿ ॥ ಪೂರ್ವೋಕ್ತಸ್ಯ ಪಶೋರ್ಹವಿಷ ಏಷೈವ ಯಾಜ್ಯಾ । ಸೂತ್ರಿತಂ ಚ । ಯಾ ತೇ ಧಾಮಾನಿ ಪರಮಾಣಿ ಯಾವಮಾ ಯ ಇಮೇ ದ್ಯಾವಾಪೃಥಿವೀ ಜನಿತ್ರೀ । ಆ. ೩-೮ । ಇತಿ ॥

ಅನಯಾ ಭೌವನೋ ವಿಶ್ವಕರ್ಮಾ ಜಗತ್ಕಾರಣಂ ವಿಶ್ವಕರ್ಮದೇವಂ ಸ್ತೌತಿ । ಹೇ ವಿಶ್ವಕರ್ಮನ್ ಯಾ ಯಾನಿ ತೇ ತವ ಪರಮಾಣಿ ಧಾಮಾನಿ ಶರೀರಾಣಿ ಸಂತಿ ಯಾ ಯಾನಿ ಚ ಮಧ್ಯಮಾನಿ ಶರೀರಾಣಿ ಸಂತಿ ಉತಾಪಿ ಚ ಯಾ ಯಾನ್ಯವಮಾವಮಾನಿ ಧಾಮಾನಿ ಶರೀರಾಣಿ ಸಂತಿ ಉತಾಪಿ ಚ ತಾನೀಮಾನಿ ಸರ್ವಾಣಿ ಶರೀರಾಣಿ ಸಖಿಭ್ಯೋಽಸ್ಮಭ್ಯಂ ಯುಷ್ಟುಂ ಹವಿಷಿ ಮಯಿ ಹವಿರ್ಭೋತೇ ಸತಿ ಶಿಕ್ಷ । ದೇಹಿ । ಹೇ ಸ್ವಧಾವೋ ಹವಿರ್ಲಕ್ಷಣಾನ್ನವನ್ ಸ್ವಯಮೇವ ತ್ವಂ ತನ್ವಂ ಸ್ವಕೀಯಂ ಪೂರ್ವೋಕ್ತಂ ತ್ರಿವಿಧಂ ಶರೀರಂ ವೃಧಾನೋ ಹವಿಷಾ ವರ್ಧಮಾನಃ ಸನ್ । ಅನೇನ ಧಾಮತ್ರೈವಿಧ್ಯೋಪನ್ಯಾಸೇನೋತ್ತಮಭೂತಾನಿ ದೇವಾದಿಶರೀರಾಣಿ ಮಧ್ಯಮಭೂತಾನಿ ಮನುಷ್ಯಾದಿಶರೀರಾಣಿ ನಿಕೃಷ್ಟಭೂತಾನಿ ಕೃಮಿಕೀಟಾದಿಶರೀರಾಣಿ ಚ ಪರಿಗೃಹೀತಾನಿ । ಕಿಂ ಬಹುನಾ ಸರ್ವಂ ಜಗದುಪಾತ್ತಂ ಭವತಿ । ಉಕ್ತವ್ಯತಿರೇಕೇಣ ನಿರವಯವಸ್ಯ ಪರಮೇಶ್ವರಸ್ಯ ವಿಗ್ರಹಾಭಾವಾತ್ ತದೈಕ್ಷತ ಬಹುಃ ಸ್ಯಾಂ ಪ್ರಜಾಯೇಯ । ಛಾಂ. ಉ. ೬-೨-೩ । ಇತ್ಯಾದಿಶ್ರುತಿಭ್ಯಃ ಪರಮೇಶ್ವರಸ್ಯೈವ ದೇವಾದಿಭೇದೇನ ಬಹುಭಾವಾವಗಮಾತ್ ॥

॥ ಪ್ರತಿಪದಾರ್ಥ ॥

**ವಿಶ್ವಕರ್ಮನ್**—ಎಲೈ ವಿಶ್ವಕರ್ಮನೇ । **ತೇ**—ನಿನ್ನ । **ಯಾ**—ಯಾವ । **ಪರಮಾಣಿ ಧಾಮಾನಿ**—ಅತ್ಯುತ್ಕೃಷ್ಟವಾದ ಶರೀರವುಂಟೋ । **ಯಾ**—ಯಾವುದು । **ಮಧ್ಯಮಾ**—ಮಧ್ಯಮರೂಪದ್ದಾಗಿರುವುದೂ । **ಉತ**—ಮತ್ತು । **ಯಾ**—ಯಾವುದು । **ಅವಮಾ**—ನಿಕೃಷ್ಟವಾಗಿರುವುದೋ । **ತಾ ಇಮಾ**—ಆ ಎಲ್ಲಾವಿಧವಾದ ಶರೀರ ವಿಶೇಷಗಳನ್ನೂ । **ಹವಿಷಿ**—ಹವಿಸ್ಸನ್ನು ಅರ್ಪಿಸುವ ಕಾಲದಲ್ಲಿ । **ಸಖಿಭ್ಯಃ**—ಮಿತ್ರರಾದ ನಮಗೆ । **ಶಿಕ್ಷ**—ಕೊಡು । **ಸ್ವಧಾವಃ**—ಅನ್ನವಂತನಾದ ಎಲೈ ವಿಶ್ವಕರ್ಮನೇ । **ಸ್ವಯಂ**—ನೀನೂ ಸಹ । **ತನ್ವಂ**—ನಿನ್ನ ಈ ಎಲ್ಲ ರೂಪದ ಶರೀರವನ್ನೂ । **ವೃಧಾನಃ**—ಪುಷ್ಟಿಗೊಳಿಸುತ್ತ । **ಯಜಸ್ವ**—ಪೂಜಿಸು.

॥ ಭಾವಾರ್ಥ ॥

ಹವಿಸ್ಸಿನ ರೂಪದ ಅನ್ನವಂತನಾದ ಎಲೈ ವಿಶ್ವಕರ್ಮನೇ, ನಿನ್ನ ಯಾವ ಉತ್ಕೃಷ್ಟವಾದ, ಮಧ್ಯಮರೂಪದ ಮತ್ತು ನಿಕೃಷ್ಟವಾದ ಶರೀರಪ್ರಭೇದಗಳುಂಟೋ ಆ ಎಲ್ಲ ವಿಧವಾದ ಶರೀರವಿಶೇಷಗಳನ್ನೂ ಸಹ ಹವಿಸ್ಸನ್ನು ಅರ್ಪಿಸುವ ಕಾಲದಲ್ಲಿ ಮಿತ್ರರಾದ ನಮಗೆ ಕೊಡು. ಅನ್ನವಂತನಾದ ಎಲೈ ವಿಶ್ವಕರ್ಮನೇ, ನೀನೂ ಸಹ ನಿನ್ನ ಈ ಎಲ್ಲ ರೂಪದ ಶರೀರವನ್ನೂ ಪುಷ್ಟಿಗೊಳಿಸುತ್ತ ಪೂಜಿಸು.

## English Translation

Grant to your friends, Vishwakarman, at the oblation, your best, your worst and your intermediate forms, and to these do you yourself,

possessor of the oblation, becoming augmented in person (by oblations), offer worship.

॥ ವಿಶೇಷವಿಷಯಗಳು ॥

ವಿಶ್ವಕರ್ಮನ ವಿಶ್ವರೂಪವಾದ ಶರೀರವಿಸ್ತರಣವು ಪ್ರಕೃತನಾದ ಋಕ್ಕಿನಲ್ಲಿ ನಿರ್ದೇಶಿಸಲ್ಪಟ್ಟಿದೆ. ಈ ವಿಸ್ತರಣದಲ್ಲಿ ಮೂರು ಪ್ರಭೇದಗಳಿರುತ್ತದೆ. ಪರಮ, ಮಧ್ಯಮ ಮತ್ತು ಅವಮ. ಇವು ದ್ಯುಲೋಕ, ಅಂತರಿಕ್ಷ ಮತ್ತು ಪೃಥ್ವೀರೂಪವೆಂದಾಗಬಹುದು. ಅಥವಾ, ದೇವತಾರೂಪ, ಮನುಷ್ಯರೂಪ ಅಥವಾ ಕ್ರಿಮಿಕೀಟಾದಿರೂಪ ಎಂಬ ಮೂರು ವಿಧವಾಗಬಹುದು. ಎಂದರೆ ವಿಶ್ವದ ಸಕಲ ಚಿದಚಿದ್ರೂಪವಾದ ಸಕಲವೂ ಈಶ್ವರನ ದಿವ್ಯವಿಭೂತಿ ವಿಶೇಷಗಳೆಂದೇ ತಾತ್ಪರ್ಯ. ವಿಶ್ವರೂಪವಾದ ಈ ವಿಸ್ತರಣವು ಯಜ್ಞದ ಫಲವು. ಈ ವಿಸ್ತರಣ ಕ್ರಮವೇನೆಂಬುದನ್ನು ಪ್ರಕೃತವಾದ ಋಕ್ಕಿನಲ್ಲಿ ವಿವರಿಸಿ, ಆತ್ಮಯಜ್ಞದ ಸ್ವರೂಪವೇನು ? ಅದರ ಫಲವಾಗಿ ವಿಶ್ವವ್ಯಾಪಕತ್ವವು ಹೇಗೆ ಎಂಬ ವಿಷಯವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

**ತದೈಕ್ಷತ ಬಹು ಸ್ಯಾಂ ಪ್ರಜಾಯೇಯ ।**　　(ಛಾ. ಉ. ೬-೨-೩)

ಅದ್ವಿತೀಯನಾದ ನಾನು ಬಹುರೂಪದಲ್ಲಿ ವಿಸ್ತೃತನಾಗಬೇಕು ಎಂದು ಈಶ್ವರನು ಇಚ್ಛಿಸಿದೊಡನೆಯೇ, ಬಹುತ್ವವನ್ನು ಹೊಂದಿದನು. ಸೂಕ್ಷ್ಮರೂಪದಿಂದಿದ್ದ ಈ ತತ್ತ್ವವು ಮೂರುವಿಧವಾದ ಶರೀರವನ್ನು ಹೊಂದಿ ಮೂರು ಲೋಕಗಳನ್ನೂ ಸೃಜಿಸಿ ಆ ಮೂರು ಲೋಕಗಳಲ್ಲಿಯೂ ವಿಸ್ತೃತಿಯನ್ನು ಹೊಂದಿತು, ಅದು ಹೇಗೆಂದರೆ:—

**ಹಿರಣ್ಯಮಾಂಡಂ ವ್ಯರುಜನ್ನಾಹ ತರ್ಹಿ ಕಾ ಚನ ಪ್ರತಿಷ್ಠಾಸ ತದೇನಮಿದಮೇವ ಹಿರಣ್ಮಯ-**
**ಮಾಂಡಂ ಯಾವತ್ಸಂವತ್ಸರಸ್ಯ ವೇಲಾಸೀ ತಾವದ್ಬಿಭ್ರತ್ಪರ್ಯಪ್ಲವತ ।**

(ಶ. ಬ್ರಾ. ೧೧-೧-೬-೨)

ಸಲಿಲದ ಮೇಲೆ ಹಿರಣ್ಯಗರ್ಭವು ಒಂದು ಸಂವತ್ಸರ ಕಾಲ ತೇಲಾಡುತ್ತಿತ್ತು. ಒಂದು ಸಂವತ್ಸರವಾದನಂತರ ಪ್ರಜಾಪತಿಯ ಆವಿರ್ಭಾವವಾಯಿತು. ಆಗ ಪ್ರಜಾಪತಿಗೆ ಆಧಾರಸ್ಥಾನವು ಯಾವುದೂ ಇರಲಿಲ್ಲ. ಅವನೂ ಒಂದು ಸಂವತ್ಸರಕಾಲ ಹಿರಣ್ಯಗರ್ಭರೂಪವಾದ ಅಂಡವನ್ನೇ ಆಶ್ರಯಿಸಿಕೊಂಡಿದ್ದು ಅನಂತರ ವಾಕ್ಕನ್ನುಚ್ಚರಿಸಿದನು. ಅದು ಹೇಗೆಂದರೆ;—

**ಸ ಭೂರಿತಿ ವ್ಯಾಹರತ್ಸೇಯಂ ಪೃಥಿವ್ಯಭವದ್ಭುವ ಇತಿ ತದಿದಮಂತರಿಕ್ಷಮಭವತ್ಸ್ವರಿತಿ ಸಾಸೌ**
**ದ್ಯೌರಭವತ್ತಸ್ಮಾದು...............**　　(ಶ. ಬ್ರಾ. ೧೧-೧-೬-೩)

ಒಂದು ಸಂವತ್ಸರವಾದನಂತರ ಪ್ರಜಾಪತಿಯು **ಭೂಃ** ಎಂದು ಉಚ್ಚರಿಸಿದನು. ಇದೇ ಭೂಲೋಕವಾಯಿತು (ಪೃಥ್ವಿಯು) **ಭುವಃ** ಎಂದುಚ್ಚರಿಸಿದ ಶಬ್ದವು ಅಂತರಿಕ್ಷವಾಯಿತು. ಮತ್ತು **ಸ್ವಃ** ಎಂದುಚ್ಚರಿಸಿದ ಶಬ್ದವೇ ಸ್ವರ್ಲೋಕವಾಯಿತು. ಈ ಮೂರು ಲೋಕಗಳನ್ನು ವ್ಯಾಪಿಸಿ ತದತಿರಿಕ್ತನಾದವನೇ ಈಶ್ವರನು. ಈ ಮೂರು ಲೋಕಗಳೂ ಮೂರು ಶರೀರಗಳು. ಇವು ದೇಶರೂಪವಾದ ವಿಸ್ತೃತಿಯಾಯಿತು. ಉಳಿದ ರೂಪಗಳಲ್ಲೂ ಈ ಮೂರು ವಿಧವಾದ ವಿಸ್ತೃತಿಯ ವ್ಯಾಪಕತ್ವವೂ ಮತ್ತು ಮೂರನ್ನುಳಿದು ಇನ್ನೂ ತದರಿಕ್ತವಾದ ಮಹತ್ತ್ವವೂ ಸಾಧ್ಯವೆಂದ ತೈತ್ತಿರೀಯಾದಿಗಳಲ್ಲಿ ಈ ರೀತಿ ಪ್ರಶಂಸಿಸಿದೆ.

**ಭೂರ್ಭುವಸ್ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮುಹಸ್ಮೈತಾಂ ಚತುರ್ಥೀಂ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ ॥**

**ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ । ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ ॥**
(ತೈ. ಉ. ೧-೫-೧, ೨)

ಭೂಃ, ಭುವಃ ಸುವಃ ಎಂಬುದು ಪ್ರಜಾಪತಿಯಿಂದ ಪ್ರಕಟಿತವಾದ ಮೂರು ವ್ಯಾಹೃತಿಗಳು. ಇವು ಲೋಕಗೋಚರಗಳು. ಇವನ್ನೂ ಮೀರಿದ ನಾಲ್ಕನೆಯ ಮಹತ್ತತ್ತ್ವವನ್ನು ಮಾಹಾಚಮಸ್ಯನು ಸಾಕ್ಷಾತ್ಕರಿಸಿ ಅದರ ಮಹತ್ತ್ವವನ್ನರಿತನು, ಅದೇ ದಿವ್ಯಾತ್ಮವು. ಉಳಿದ ದೇವತೆಗಳೆಲ್ಲ ಇದರ ರೂಪಾಂತರಗಳು. ಇದೇ ಪರಬ್ರಹ್ಮವು.

**ಭೂಃ** ಎಂಬುದು ಈ ಪೃಥ್ವೀಲೋಕವು. **ಭುವಃ** ಎಂಬುದು ಅಂತರಿಕ್ಷವು. **ಸುವಃ** ಎಂಬುದು ದ್ಯುಲೋಕವು. **ಮಹಃ** ಎಂಬುದೇ ಆದಿತ್ಯನು. ಈ ಆದಿತ್ಯನಿಂದಲೇ, ಈ ಮೂರು ಲೋಕಗಳೂ ಮಹತ್ತ್ವವನ್ನು ಹೊಂದಿವೆವು. ಭೂರಾದಿಲೋಕರೂಪದಲ್ಲಿಲ್ಲದೇ, ಪ್ರಜಾಪತಿಯ ದಿವ್ಯಶರೀರವು ಇನ್ನೂ ಯಾವ ಯಾವ ರೂಪಾಂತರಗಳಲ್ಲಿ ವಿಸ್ತೃತವಾಗಿದೆಯೆಂದರೆ ;—

**ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯಂತೇ ।**
(ತೈ. ಉ. ೧-೫-೨)

**ಭೂಃ** ಎಂಬುದೇ ಅಗ್ನಿಯು. **ಭುವಃ** ಎಂಬುದೇ ವಾಯುವು. **ಸುವಃ** ಎಂಬುದು ಆದಿತ್ಯನು. **ಮಹಃ** ಎಂಬುದೇ ಚಂದ್ರನು. ಚಂದ್ರನ ಪ್ರಭಾವದಿಂದಲೇ ಸಕಲ ಜ್ಯೋತಿರ್ಮಂಡಲಗಳೂ ಮಹತ್ತ್ವವನ್ನು ಪಡೆಯುತ್ತವೆ.

**ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । (ತೈ. ಉ. ೧-೫-೨)**

**ಭೂಃ** ಎಂಬುದು ಋಗ್ವೇದವು. **ಭುವಃ** ಎಂಬುದು ಸಾಮವು. **ಸುವಃ** ಎಂಬುದು ಯಜುರ್ವೇದವು. **ಮಹಃ** ಎಂಬುದೇ ಬ್ರಹ್ಮ. ಬ್ರಹ್ಮನಿಂದಲೇ ಸಕಲ ವೇದಗಳೂ ಮಹತ್ತ್ವವನ್ನು ಪಡೆಯುತ್ತವೆ.

**ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಂ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ ।** (ತೈ. ಉ. ೧-೫-೪)

**ಭೂಃ** ಎಂಬುದೇ ಪ್ರಾಣವು. **ಭುವಃ** ಎಂಬುದೇ ಅಪಾನವು. **ಸುವಃ** ಎಂಬುದೇ ವ್ಯಾನವು. **ಮಹಃ** ಎಂಬುದೇ ಅನ್ನವು. ಅನ್ನದಿಂದಲೇ ಸಕಲ ಪ್ರಾಣಗಳೂ ಮಹತ್ತ್ವವನ್ನು ಹೊಂದುತ್ತವೆ. ಇತ್ಯಾದಿಯಾಗಿ ಮೂರುವ್ಯಾಹೃತಿಗಳನ್ನು ಈಶ್ವರನ ಮೂರು ಶರೀರಪ್ರಭೇದಗಳೆಂದೂ, ನಾಲ್ಕನೆಯದು ತದತಿರಿಕ್ತವಾದ ಮಹತ್ತತ್ತ್ವವೆಂದೂ ಪ್ರಶಂಸಿಸಿದೆ. ಈ ಲೋಕತ್ರಯದಿಂದ ಉತ್ಪನ್ನವಾದ ಮೂರು ವಿಧವಾದ ತತ್ತ್ವಗಳಾವುವು ? ಇವು ಈಶ್ವರನನ್ನು ಹೇಗೆ ಪ್ರತಿಬಿಂಬಿಸುತ್ತವೆ ಎಂದರೆ,

**ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಂ ರಸಾನ್ ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ||** (ಛಾ. ಉ. ೪-೧೭-೧)

ಪ್ರಜಾಪತಿಯು ಲೋಕಗಳನ್ನುದ್ದೇಶಿಸಿ ಅವುಗಳ ಸಾರವನ್ನು ಪಡೆಯಲು ಧ್ಯಾನಾತ್ಮಕವಾದ ತಪಸ್ಸನ್ನಾಚರಿಸಿದನು. ಆಗ ಪೃಥ್ವಿಯಿಂದ ಅಗ್ನಿಯನ್ನೂ, ಅಂತರಿಕ್ಷದಿಂದ ವಾಯುವನ್ನೂ, ದ್ಯುಲೋಕದಿಂದ ಆದಿತ್ಯನನ್ನೂ ಹೊರಕ್ಕೆ ಆವಿರ್ಭೂತವಾಗಿ ಪ್ರಕಾಶಿಸುವಂತೆ ಮಾಡಿದನು,

**ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾನಾಂ ರಸಾನ್ ಪ್ರಾವೃಹದಗ್ನೇರ್ಋಚೋ ವಾಯೋರ್ಯಜೂಂಷಿ ಸಾಮಾನ್ಯಾದಿತ್ಯಾತ್ |** (ಛಾ. ಉ. ೪-೧೭-೨)

ಈ ಮೂರು ದೇವತೆಗಳನ್ನು ಉದ್ದೇಶಿಸಿ ತಪಸ್ಸನ್ನಾಚರಿಸಿದನು. ಆಗ ಆ ದೇವತೆಗಳ ಸಾರವನ್ನು ಹಿಂಡಿದನು. ಅಗ್ನಿಯಿಂದ ಋಕ್ಕುಗಳೂ, ವಾಯುವಿನಿಂದ ಯಜುಸ್ಸುಗಳೂ, ಆದಿತ್ಯನಿಂದ ಸಾಮವೂ ಪ್ರಕಾಶಿತವಾದವು.

**ಸ ಏತಾಂ ತ್ರಯೀಂ ವಿದ್ಯಾಮಭ್ಯತಪತ್ತಸ್ಯಾಸ್ತಪ್ಯಮಾನಾಯಾ ರಸಾನ್ ಪ್ರಾವೃಹದ್ಭೂರಿತ್ಯೃಗ್ಭ್ಯೋ ಭುವರಿತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ ||** (ಛಾ. ಉ. ೪-೧೭-೩)

ಈ ತ್ರಯೀರೂಪವಾದ ಜ್ಞಾನವನ್ನುದ್ದೇಶಿಸಿ ತಪಸ್ಸನ್ನಾಚರಿಸಿದಾಗ ಋಙ್ಮಂತ್ರಗಳಿಂದ **ಭೂಃ** ಎಂಬ ವ್ಯಾಹೃತಿಯನ್ನೂ ಯಜುರ್ಮಂತ್ರಗಳಿಂದ **ಭುವಃ** ಎಂಬುದನ್ನೂ, ಸಾಮಗಳಿಂದ **ಸ್ವಃ** ಎಂಬುದನ್ನೂ ಪ್ರಕಾಶಪಡಿಸಿದನು.

ಈ ರೀತಿ ವರ್ಣಿತವಾಗಿರುವ ಹೊಸತತ್ತ್ವಗಳ ಆವಿರ್ಭಾವಗಳೆಲ್ಲವೂ ಪ್ರಜಾಪತಿಯ ಶರೀರವಿಸ್ತರಣವೇ ಆಗಿವೆ. ಈ ವಿಸ್ತರಣವೂ, ವ್ಯಾಪಕತ್ವವೂ ಸಹ ತಪೋರೂಪವಾದ ಯಜ್ಞದ ಫಲವೇ ಆಗಿರುತ್ತದೆ. ಆದುದರಿಂದಲೇ, **ಹವಿಷಾ ತನ್ವಂ ವಾವೃಧಾನಃ** ಎಂದು ಮುಂದಿನ ಋಕ್ಕಿನಲ್ಲಿ ತಿಳಿಸಿದೆ. ಈ ರೀತಿ ಪ್ರಜಾಪತಿಯು ಶರೀರವಿಸ್ತರಣಕ್ಕೆ ಯಜ್ಞವು ಹೇಗೆ ಮೂಲಕಾರಣವಾಗಿರುತ್ತದೆ ಎಂಬುದನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಸಾಕಮೇಧೇಷ್ಟಿಗಳಲ್ಲಿ ವಿಶ್ವಕರ್ಮದೇವತೆಯನ್ನುದ್ದೇಶಿಸಿ ಮಾಡುವ ಏಕಕಪಾಲಹೋಮದಲ್ಲಿ **ಯಾ ತೇ ಧಾಮಾನಿ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವಿಶ್ವಕರ್ಮನ್ಹವಿಷಾ ವಾವೃಧಾನೋ ಯಾ ತೇ ಧಾಮಾನಿ ಪರಮಾಣಿ ಯಾವಮಾ** ಎಂಬ ಸೂತ್ರದಿಂದ (ಆ. ೨-೧೮) ವಿಸ್ತೃತವಾಗಿರುವುದು. ಮತ್ತು ಅದೇ ಇಷ್ಟಿಯಲ್ಲಿ ಪಶುಹೋಮದಲ್ಲಿ ಹವಿಸ್ಸನ್ನು ಹೋಮಮಾಡುವಾಗಲೂ ಇದೇ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಯಾ ತೇ ಧಾಮಾನಿ ಪರಮಾಣಿ ಯಾವಮಾ ಯ ಇಮೇ ದ್ಯಾವಾಪೃಥಿವೀ ಜನಿತ್ರೀ** ಎಂಬ ಸೂತ್ರದಿಂದ (ಆ. ೩-೮) ವಿಸ್ತೃತವಾಗಿರುವುದು.



॥ ಸಂಹಿತಾಪಾಠಃ ॥

ವಿಶ್ವಕರ್ಮನ್ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಂ ।
ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ॥೬॥

॥ ಪದಪಾಠಃ ॥

ವಿಶ್ವಽಕರ್ಮನ್ । ಹವಿಷಾ । ವವೃಧಾನಃ । ಸ್ವಯಂ । ಯಜಸ್ವ । ಪೃಥಿವೀಂ । ಉತ । ದ್ಯಾಂ ।
ಮುಹ್ಯಂತು । ಅನ್ಯೇ । ಅಭಿತಃ । ಜನಾಸಃ । ಇಹ । ಅಸ್ಮಾಕಂ । ಮಘಽವಾ । ಸೂರಿಃ । ಅಸ್ತು ॥ ೬ ॥

॥ ಸಾಯಣಭಾಷ್ಯಂ ॥

ತಸ್ಮಿನ್ನೇವ ವೈಶ್ವಕರ್ಮಣಪಶೌ ವಪಾಪುರೋಡಾಶಯೋರ್ವಿಶ್ವಕರ್ಮನ್ಹವಿಷೇತಿ ಕ್ರಮೇಣ ದ್ವೇ ಅನುವಾಕ್ಯೇ । ಸೂತ್ರಿತಂ ಚ । ವಿಶ್ವಕರ್ಮನ್ಹವಿಷಾ ವಾವೃಧಾನ ಇತಿ ದ್ವೇ ವಿಶ್ವಕರ್ಮಾ ವಿಮನಾ ಆದ್ವಿಹಾಯಾಃ । ಆ. ೩-೮ । ಇತಿ ॥ ಸಾಕಮೇಧೇಷು ವೈಶ್ವಕರ್ಮಣಸ್ಯ ವಿಶ್ವಕರ್ಮನ್ಹವಿಷೇತ್ಯೇಷೈವಾನುವಾಕ್ಯಾ । ಸೂತ್ರಂ ತು ಪೂರ್ವಮುದಾಹೃತಂ ॥

ಹೇ ವಿಶ್ವಕರ್ಮನ್ವಿಶ್ವವಿಷಯಕರ್ಮನ್ನೇತನ್ನಾಮಕ ಪರಮೇಶ್ವರ ಹವಿಷಾ ಹವಿರ್ಭೂತೇನ ಮಯಾ ವಿಶ್ವಕರ್ಮಣಾ ಮಯಾ ದತ್ತೇನ ವಾ ಹವಿಷಾ ವಾವೃಧಾನೋ ವರ್ಧಮಾನಃ । ವಿಶ್ವಕರ್ಮಾ ಸರ್ವಾಣಿ ಭೂತಾನಿ ಜುಹವಾಂಚಕಾರ ಸ ಆತ್ಮಾನಮಪ್ಯಂತತೋ ಜುಹವಾಂಚಕಾರೇತಿ ಹಿ ನಿರುಕ್ತಂ ಪೂರ್ವಮುದಾಹೃತಂ । ಸ್ವಯಮೇವ ಪೃಥಿವೀಮುತಾಪಿ ಚ ದ್ಯಾಂ ದಿವಂ ಚ ಸ್ವಸೃಷ್ಟೇ ದ್ಯಾವಾಪೃಥಿವ್ಯೌ ಸ್ವಯಂ ಪ್ರವೃದ್ಧಃ ಸನ್ಯಜಸ್ವ । ಪೂಜಯ । ಅನ್ಯೇ ಮತ್ತೋಽನ್ಯೇ ಜನಾಸೋ ಜನಾ ಅಯಷ್ಟಾರೋಽಸ್ಮದ್ಯಾಗವಿರೋಧಿನೋ ವಾ ಮುಹ್ಯಂತು ಮುಗ್ಧಾ ಭವಂತ್ವಭಿತಃ ಸರ್ವತಃ । ಅಥ ಪರೋಕ್ಷಕೃತಃ । ಇಹಾಸ್ಮಿನ್ಯಾಗೇಽಸ್ಮಾಕಂ ಮಘವಾಸ್ಮತ್ಪ್ರದತ್ತೇನ ಹವಿರ್ಲಕ್ಷಣೇನ ಧನೇನ ಧನವಾನ್ ಸ ಸೂರಿಃ ಸ್ವರ್ಗಾದಿಫಲಸ್ಯ ಪ್ರೇರಕೋಽಸ್ತು । ಭವತು । ಅತ್ರ ವಿಶ್ವಕರ್ಮನ್ಹವಿಷಾ ವರ್ಧಮಾನ ಇತ್ಯಾದಿ ನಿರುಕ್ತಮನುಸಂಧೇಯಂ । ೧೦-೨೬ ॥

॥ ಪ್ರತಿಪದಾರ್ಥ ॥

**ವಿಶ್ವಕರ್ಮನ್**—ಎಲೈ ವಿಶ್ವಕರ್ಮನೇ । **ಹವಿಷಾ**—ಹವಿಸ್ಸಿನಿಂದ । **ವಾವೃಧಾನಃ**—ವೃದ್ಧಿಯನ್ನು ಹೊಂದಿ । **ಸ್ವಯಂ**—ನೀನಾಗಿಯೇ । **ಪೃಥಿವೀಂ**—ಪೃಥ್ವಿಯನ್ನೂ । **ಉತ**—ಮತ್ತು । **ದ್ಯಾಂ**—ದ್ಯುಲೋಕವನ್ನು । **ಯಜಸ್ವ**—ಪೂಜಿಸು । **ಅನ್ಯೇ ಜನಾಸಃ**—ಕರ್ಮರಹಿತರಾದ ಉಳಿದ ಜನರು । **ಅಭಿತಃ**—ಸರ್ವತ್ರ । **ಮುಹ್ಯಂತು**—ಮೋಹದಿಂದ ಆವೃತರಾಗಲಿ । **ಮಘವಾ**—ಧನವಂತನಾದ ಈಶ್ವರನು । **ಇಹ**—ನಮ್ಮ ಈ ಯಜ್ಞದಲ್ಲಿ । **ಅಸ್ಮಾಕಂ**—ನಮಗೆ । **ಸೂರಿಃ**—ಸ್ವರ್ಗಾದಿ ಪ್ರೇರಕನಾಗಿ । **ಅಸ್ತು**—ಆಗಿರಲಿ.

॥ ಭಾವಾರ್ಥ ॥

ಎಲೈ ವಿಶ್ವಕರ್ಮನೇ, ನಮ್ಮ ಹವಿಸ್ಸಿನಿಂದ ನೀನು ವೃದ್ಧಿಯನ್ನು ಹೊಂದಿ ನೀನಾಗಿಯೇ ದ್ಯಾವಾಪೃಥಿವಿಗಳನ್ನು ಪೂಜಿಸು. ಕರ್ಮರಹಿತರಾದ ಉಳಿದ ಜನರು ಸರ್ವತ್ರ ಮೋಹದಿಂದ ಆವೃತರಾಗಲಿ. ಧನವಂತನಾದ ವಿಶ್ವಕರ್ಮನು ನಮ್ಮ ಈ ಯಜ್ಞದಲ್ಲಿ ನಮಗೆ ಸ್ವರ್ಗಕ್ಕೆ ಪ್ರೇರಕನಾಗಿರಲಿ.

## English Translation

Vishwakarman, magnified by the oblation, do you of yourself worship earth and heaven; let other men (who offer no oblations) be everywhere confounded; may he, rich in oblations, be the granter of heaven at this our (sacrifice).

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿದಾರೆ—

**ವಿಶ್ವಕರ್ಮನ್ ಹವಿಷಾ ವರ್ಧಯಮಾನಃ ಸ್ವಯಂ ಯಜಸ್ವ ಪೃಥಿವೀಂ ಚ ದಿವಂ ಚ**
**ಮುಹ್ಯಂತ್ವನ್ಯೇ ಅಭಿತೋ ಜನಾಃ ಸಪತ್ನಾ ಇಹಾಸ್ಮಾಕಂ ಮಘವಾ ಸೂರಿರಸ್ತು ಪ್ರಜ್ಞಾತಾ॥**

(ನಿ. ೧೦-೨೭)

ಈ ಋಕ್ಕಿನಲ್ಲಿ ವಿಶ್ವಕರ್ಮನು ಮಾಡುವ ಕ್ರಿಯೆಯನ್ನೂ ಅದರಿಂದ ಲಭಿಸುವ ಫಲವನ್ನೂ ಪ್ರಶಂಸಿಸಲಾಗಿದೆ—ಎಲೈ ವಿಶ್ವಕರ್ಮನೇ, ಸರ್ವಮೇಧವೆಂಬ ಯಾಗದಲ್ಲಿ ಅರ್ಪಿಸಲ್ಪಡುವ ಹವಿಸ್ಸಿನಿಂದ ಅಭಿವೃದ್ಧಿಯನ್ನು ಹೊಂದುವ ನೀನು ಪೃಥಿವಿಯನ್ನೂ ಸ್ವರ್ಗವನ್ನೂ ಯಜ್ಞದಲ್ಲಿ ಅರ್ಪಿಸು ಎಂದರೆ ನೀನೇ ದ್ಯಾವಾಪೃಥಿವಿಗಳಲ್ಲೆಲ್ಲಾ ವ್ಯಾಪಿಸಿ ನೆಲಸಿರು. ಇತರ ಜನರು ಎಂದರೆ ನಿನ್ನನ್ನು ಆರಾಧಿಸದೆ ಇರುವ ನಿನ್ನ ಪ್ರತಿಸ್ಪರ್ಧಿಗಳೆಲ್ಲರೂ ವಿವೇಕಜ್ಞಾನವಿಲ್ಲದವರಾಗಿ ಮೋಹಪರವಶರಾಗಿರಲಿ. ಅನಂತರ ಸಮಸ್ತ ಧನಕ್ಕೂ ಸ್ವಾಮಿಯಾಗಿಯೂ, ಅಪ್ರತಿಹತಜ್ಞಾನಯುಕ್ತನೂ ಆದ ಸರ್ವೇಶ್ವರನು (ವಿಶ್ವಕರ್ಮನು) ಈ ಯಜ್ಞಕರ್ಮದಲ್ಲಿ ಅಥವಾ ವಿಶ್ವಕರ್ಮನ ಆರಾಧನಾರೂಪವಾದ ಕರ್ಮದಲ್ಲಿ ನಮಗೆ ಪ್ರೇರಕನಾಗಿರಲಿ.

**ಸಪತ್ನಾಃ—ಯೇ ಸಮಾನಂ ಪತಿತ್ವಮಿಚ್ಛಂತಿ ತೇ ಸಪತ್ನಾಃ ।** ಪರಸ್ಪರ ತಮಗೇ ಪ್ರಭುತ್ವವು ಬೇಕೆಂದು ಬಯಸುವವರು ಎಂದರೆ ಇಬ್ಬರೂ ಸಮಾನಾಧಿಕಾರಕ್ಕಾಗಿ ಹೋರಾಡುವವರು, ಪ್ರತಿಸ್ಪರ್ಧಿಗಳು, ಶತ್ರುಗಳು ಎಂದಭಿಪ್ರಾಯವು.

ವಿಶ್ವಕರ್ಮದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ವಪಾ ಮತ್ತು ಪುರೋಡಾಶಗಳನ್ನು ಹೋಮ ಮಾಡುವಾಗ **ವಿಶ್ವಕರ್ಮನ್ ಹವಿಷಾ** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಿಶ್ವಕರ್ಮನ್ ಹವಿಷಾ ವಾವೃಧಾನ ಇತಿ ದ್ವೇ ವಿಶ್ವಕರ್ಮಾ ವಿಮನಾ ಆದ್ವಿಹಾಯಾಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು ಮತ್ತು ಸಾಕಮೇ-

ಥೇಷ್ಟಿಗಳಲ್ಲಿಯೂ ವಿಶ್ವಕರ್ಮದೇವತೆಯ ಪರವಾಗಿ **ವಿಶ್ವಕರ್ಮನ್ ಹವಿಷಾ** ಎಂಬ ಈ ಋಕ್ಕನ್ನು ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವ ಆಶ್ವಲಾಯನಶ್ರೌತಸೂತ್ರದ ವಾಕ್ಯವನ್ನು ಹಿಂದೆಯೇ ಉದಹರಿಸಲಾಗಿದ.

ಯಜ್ಞಮಯನೂ ಯಜ್ಞಮೂಲನೂ ಆದ ವಿಶ್ವಕರ್ಮನ ಪ್ರಶಂಸೆಯೇ ಈ ಸೂಕ್ತದ ವಿಶೇಷ ವಿಷಯವು. ವಿಶ್ವಕರ್ಮನು ಯಜ್ಞಕರ್ತನು ಮತ್ತು ಯಜ್ಞಭೋಕ್ತೃವು. ಸೃಷ್ಟಿಗೆ ಮೊದಲು ತಾನೇ ಯಜ್ಞಭೂಮಿ, ಸೃಷ್ಟಿಯ ನಂತರ ವಿಶ್ವವೇ ಯಜ್ಞಭೂಮಿ. ಸೂಕ್ಷ್ಮರೂಪನಾದ ವಿಶ್ವಕರ್ಮನು ಸ್ಥೂಲರೂಪದಲ್ಲಿ ಆವಿರ್ಭವಿಸುವುದೇ ಸೃಷ್ಟಿ. ಈ ಸೃಷ್ಟಿಗೂ ಯಜ್ಞವೇ ಮೂಲ. ಈ ಯಜ್ಞದಲ್ಲಿ ಹವಿಸ್ಸೂ ವಿಶ್ವಕರ್ಮನೇ, ಹವಿರ್ಭೋಕ್ತೃವೂ ಅವನೇ. ವಿಶ್ವ ರೂಪದಿಂದ ತನ್ನ ವಿಸ್ತೃತವಾದ ಪ್ರಕಾಶನವೇ ಯಜ್ಞದ ಫಲ. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಹವಿಷಾ ನಾವೃಧಾನಃ** ಎಂದು ತಿಳಿಸಿದೆ.

ಇದು ಬಹಳ ಗಭೀರವಾದ ವಿಷಯ. ಆಧ್ಯಾತ್ಮಿಕ ಮತ್ತು ಆಧಿದೈವಿಕವಾದ ತತ್ತ್ವಗಳನ್ನೊಳಗೊಂಡುದು. ವಿಶ್ವದ ಸೃಷ್ಟಿ, ಸ್ಥಿತಿ ಮತ್ತು ಲಯ ಇವೆಲ್ಲವೂ ಚಕ್ರಾಕಾರ. ಎಲ್ಲವೂ ಈಶ್ವರನ ಅವಸ್ಥಾವಿಶೇಷಗಳೇ ಆಗಿವೆ. ಇವೆಲ್ಲವೂ ಯಜ್ಞಮಯ. ಎಲ್ಲಕ್ಕೂ ಯಜ್ಞವೇ ಮೂಲ, ಎಲ್ಲವೂ ಯಜ್ಞರೂಪ. ಸೃಷ್ಟಿಸ್ಥಿತಿಲಯರೂಪವಾದ ಯಜ್ಞವು ಅನುಸ್ಯೂತವಾಗಿ ನಡೆಯುತ್ತಲೇ ಇರಬೇಕು. ಇವು ಚಲನಾತ್ಮಕಗಳಾದ ಅವಸ್ಥಾವಿಶೇಷಗಳು. ಈ ಅಂಶವು **ಯಜ್ಞ**ಶಬ್ದದ ನಿರ್ವಚನದಿಂದಲೇ ತಿಳಿಯುತ್ತದೆ.

> **ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯನ್ ಜಾಯತೇ ತಸ್ಮಾದ್ಯಜ್ಞೋ ಯಂಜೋ ಹ ವೈ ನಾಮೈತದ್ಯದ್ಯಜ್ಞ ಇತಿ ॥**
>
> (ಶ. ಬ್ರಾ. ೩–೯–೪–೨೩)

ಯಾವಾಗ ಯಜ್ಞದಲ್ಲಿ ಸೋಮವನ್ನು ಹಿಂಡುವರೋ ಆಗ ಯಜ್ಞದ ಹನನವಾದಂತೆ. ಯಾವಾಗ ಯಜ್ಞವನ್ನು ವಿಸ್ತರಿ ಸುವಂತೆ ಮಾಡುವರೋ ಆಗ ಪುನಃ ಅದರ ಜನನ. ಈ ರೀತಿಯಲ್ಲಿ ಚಲನಾತ್ಮಕವಾದ ವಿಸ್ತೃತಿಯೂ ಸಂಕೋಚವೂ ಇರುವುದರಿಂದ (**ಯನ್ ಜಾಯತೇ**) ಅದಕ್ಕೆ ಯಜ್ಞವೆಂದು ಹೆಸರು. **ಯಞ್** ಎನ್ನುವುದು ಯಜ್ಞವಾಗಿದೆ.

> **ಸರ್ವೇಷಾಂ ವಾ ಏಷ ಭೂತಾನಾಗ್ಂ ಸರ್ವೇಷಾಂ ದೇವಾನಾಮಾತ್ಮಾ ಯದ್ಯಜ್ಞಸ್ತಸ್ಯ ಸಮೃದ್ಧಿಮನು ಯಜಮಾನಃ ಪ್ರಜಯಾ ಪಶುಭಿರ್ಋಧ್ಯತೇ ॥**
>
> (ಶ. ಬ್ರಾ. ೧೪–೩–೨–೧)

ಸಕಲ ದೇವಮಾನವಾದಿಗಳಿಗೆಲ್ಲ ಈ ಯಜ್ಞವೇ ಆತ್ಮ. ಈ ಯಜ್ಞವನ್ನಾಚರಿಸುವ ಯಜಮಾನನು ಸಕಲ ಸಂಪದ್ವೃದ್ಧಿಗಳನ್ನೂ ಹೊಂದುತ್ತಾನೆ ಎಂದು ಯಜ್ಞದ ವೈಶಿಷ್ಟ್ಯವು ಪ್ರಶಂಸಿತವಾಗಿದೆ. ವಿಶ್ವಕರ್ಮನು ಹೇಗೆ ಸಕಲ ದೇವಮಾನವಾದಿಗಳಿಗೆಲ್ಲ ಆತ್ಮನೋ ಹಾಗೆಯೇ ಯಜ್ಞವೂ ಸರ್ವಾತ್ಮಕವಾಗಿದೆ. ಇವೆರಡೂ ಭಿನ್ನವಲ್ಲ, ವಿಶ್ವಕರ್ಮನೇ ಯಜ್ಞವು ; ಯಜ್ಞವೇ ವಿಶ್ವಕರ್ಮಾತ್ಮಕವು. ವಿಶ್ವಕರ್ಮರೂಪನಾದ ಪ್ರಜಾಪತಿಯ ಪ್ರತಿಬಿಂಬವೇ ಯಜ್ಞವು.

**ಸ ದೇವೇಭ್ಯ ಆತ್ಮಾನಂ ಪ್ರದಾಯ । ಅಥೈತಮಾತ್ಮನಃ ಪ್ರತಿಮಾಮಸೃಜತ ಯದ್ಯಜ್ಞಂ ತಸ್ಮಾದಾಹುಃ ಪ್ರಜಾಪತಿರ್ಯಜ್ಞ ಇತ್ಯಾತ್ಮನೋ ಹ್ಯೇತಂ ಪ್ರತಿಮಾಮಸೃಜತ ॥**

(ಶ. ಬ್ರಾ- ೧೧-೧-೮-೩)

ಪ್ರಜಾಪತಿಯು ತನ್ನನ್ನೇ ದೇವತೆಗಳಿಗೆ ಅರ್ಪಿಸಿದನಂತರ ಯಜ್ಞರೂಪವಾದ ತನ್ನ ಪ್ರತಿಬಿಂಬವನ್ನು ನಿರ್ಮಿಸಿದನು. "ಯಜ್ಞರೂಪವಾದ ಪ್ರತಿಬಿಂಬವನ್ನು ನಿರ್ಮಿಸಿದುದರಿಂದಲೇ, ಪ್ರಜಾಪತಿಯೇ ಯಜ್ಞರೂಪನು" ಎಂದು ತಿಳಿದವರು ಹೇಳುತ್ತಾರೆ ಎಂದು ತಾದಾತ್ಮ್ಯಬೋಧಕವಾದ ವಾಕ್ಯವಿರುತ್ತದೆ. ಪ್ರಜಾಪತಿಯು (ಅಥವಾ ವಿಶ್ವಕರ್ಮನು) ಯಾವ ರೀತಿ ವಿಶ್ವಾತ್ಮಕನು ಎಂದು ಇದೇ ಸೂಕ್ತದ ಮೇಲಿನ ಋಕ್ಕುಗಳಲ್ಲಿ ಯಾವ ರೀತಿ ವರ್ಣಿತವಾಗಿದೆಯೋ, ಅದೇ ರೀತಿ, ಪ್ರಜಾಪ್ರತಿಬಿಂಬವಾದ ಯಜ್ಞವೂ ಆಗಿರುತ್ತದೆ. **ಹವಿಷಾ ವಾವೃಧಾನಃ** ಎಂಬ ಪ್ರಕರಣದಲ್ಲಿ ಪ್ರಜಾಪತಿಯ ವೃದ್ಧ್ಯಂಶವನ್ನು ನಿರ್ದೇಶಿಸಿದೆ. ದ್ಯಾವಾಪೃಥಿವೀ ಮತ್ತು ಅಂತರಿಕ್ಷರೂಪಗಳಲ್ಲೂ, ಅಗ್ನಿ, ವಾಯು ಮತ್ತು ಆದಿತ್ಯರೂಪಗಳಲ್ಲೂ ವಿಶ್ವಕರ್ಮರೂಪನಾದ ಪ್ರಜಾಪತಿಯು ವಿಸ್ತೃತನಾಗಿರುವ ವಿಷಯವನ್ನು ಮೇಲೆ ವಿವರಿಸಿದೆ. ಅವನ ಪ್ರತಿಬಿಂಬರೂಪವಾದ ಯಜ್ಞವೂ ಸಹ ವಿಶ್ವಾತ್ಮಕವಾಗಿದೆ. ಅಗ್ನಿ, ಯಜ್ಞ ಇವುಗಳಿಗೆ ತಾದಾತ್ಮ್ಯವನ್ನು ತಿಳಿಸಿ, ಯಜ್ಞವನ್ನು ಪ್ರತಿಬಿಂಬಿಸುವ ಯಜ್ಞವೇದಿಕೆಯೇ ವಿಶ್ವವನ್ನು ವ್ಯಾಪಿಸಿರುವುದು ಮತ್ತು ವಿಶ್ವದ ಸಕಲ ತೇಜೋರಾಶಿಗಳೂ, ಉಳಿದ ಚರಚರಾತ್ಮಕಗಳಾದ ಭೂತಗಳೂ ಇದರ ಅವಯವಗಳೇ ಆಗಿರುತ್ತವೆ ಎಂಬುದನ್ನು ತಿಳಿಸಿರುತ್ತದೆ.

**ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಮನುಷ್ಯಾ ಯಜುಷ್ಮತ್ಯಃ ॥**

**ಅಂತರಿಕ್ಷಗ್ಂ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದ್ಯಾವಾಪೃಥಿವ್ಯೋರೇವ ಸಂಧಿಃ………… ಪರಿಶ್ರಿತಃ ಪರೇಣ ಹಾಂತರಿಕ್ಷಂ……… ॥**

**ದ್ಯೌರ್ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಯಥಾ ಹ ವಾ ಇದಂ ಕೋಶಃ ಸಮುಚ್ಚಿತ ಏವಮಿಮೇ ಲೋಕಾ ಅಪ್ಸ್ವಂತಃ……………… ॥**

(ಶ. ಬ್ರಾ. ೧೦-೫-೪-೧-೩)

ಯಜ್ಞವನ್ನು ಪ್ರತಿಬಿಂಬಿಸುವ ಈ ಯಜ್ಞವೇದಿಕೆಯೇ ಪಾರ್ಥಿವಲೋಕವು. ಇದನ್ನು ಸುತ್ತುವರಿದಿರುವ ಇಷ್ಟಕಗಳೇ (ಇಟ್ಟಿಗೆಗಳೇ) ಉದಧಿಗಳು. ಯಜುಷ್ಮತಿಗಳೇ ಮಾನವರು, ಸಂದೋಹಗಳೇ ಪಶುಗಳು. ಲೋಕಂಪೃಣವೇ ಅಗ್ನಿಯು. ಈ ತತ್ತ್ವವನ್ನರಿತವನು ಲೋಕಾಧಿಷ್ಠಾತೃತ್ವವನ್ನು ಪಡೆಯುತ್ತಾನೆ.

ಯಜ್ಞವನ್ನು ಪ್ರತಿಬಿಂಬಿಸುವ ಈ ಯಜ್ಞವೇದಿಕೆಯೇ ಅಂತರಿಕ್ಷವು. ದ್ಯಾವಾಪೃಥಿವಿಗಳ ಸಂಧಿಯು ಅಂತರಿಕ್ಷಕ್ಕೂ ಮೀರಿದ ಪ್ರದೇಶದಲ್ಲಾಗುವುದರಿಂದ ಈ ವೇದಿಕೆಯ ಪರಿಶ್ರಿತಗಳೇ ದ್ಯಾವಾಪೃಥಿವಿಗಳ ಸಂಧಿಯು ಯಜುಷ್ಮತಿಗಳೆಂಬ ಇಷ್ಟಕಗಳೇ ಪಕ್ಷಿಗಳು. ಇಷ್ಟಕಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ರಶ್ಮಿಗಳು. ಆಹುತಿಗಳೇ ಸಮಿತ್ತುಗಳು, ಲೋಕಂಪೃಣವೇ ವಾಯುವು. ಈ ತತ್ತ್ವವನ್ನರಿತವನು ಅಗ್ನಿಯಲ್ಲಿ ತಾದಾತ್ಮ್ಯವನ್ನು ಹೊಂದುತ್ತಾನೆ.

ಈ ಯಜ್ಞವೇದಿಕೆಯೇ ದ್ಯುಲೋಕವು. ಸುತ್ತುವರಿದಿರುವ ಇಷ್ಟಕೆಗಳೇ ಈ ಲೋಕವನ್ನಾವರಿಸುವ ಉದಧಿಗಳು. ಯಜುಷ್ಮತಿಯೆಂಬ ಇಷ್ಟಕೆಗಳೇ ದೇವತೆಗಳು. ಸೂದದೋಹಗಳೇ ಈ ಲೋಕದ ಅನ್ನವು. ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ನಕ್ಷತ್ರಗಳು.

**ಆದಿತ್ಯೋ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದಿಶ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ದಿಶಃ ಸಮಂತಂ ಪರಿಯಂತಿ ................ ॥**
**ನಕ್ಷತ್ರಾಣಿ ಹ ತ್ವೇವೈಷೋಽಗ್ನಿಶ್ಚಿತಃ । ತಾನಿ ವಾ ಏತಾನಿ ಸಪ್ತವಿಗ್ಂಶತಿರ್ನಕ್ಷತ್ರಾಣಿ....... ॥**
**ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಃ ಸರ್ವಾಣಿ ಭೂತಾನಿ ತಾ ಹ್ಯೇತಾ ಆಪ ಏವೈಷೋಽಗ್ನಿಶ್ಚಿತಃ....... ಆತ್ಮಾಯಮೇವ ಸೋಽಯಂ ಹಿರಣ್ಮಯಃ ಪುರುಷಃ ॥**

(ಶ. ಬ್ರಾ. ೧೦–೫–೪–೬ ರಿಂದ ೧೪)

ಯಜ್ಞಪ್ರತಿಬಿಂಬಿಯಾದ ಈ ಯಜ್ಞವೇದಿಕೆಯೇ ಆದಿತ್ಯನು. ಆದಿತ್ಯನನ್ನು ಮುನ್ನೂರು ಅರವತ್ತು ದಿಕ್ಕುಗಳೂ ಅವಾಂತರ ದಿಕ್ಕುಗಳೂ ಸುತ್ತುವರೆದಿವೆ. ಮುನ್ನೂರ ಅರವತ್ತು ಸಂಖ್ಯಾಕಗಳಾದ ಯಜುಷ್ಮತಿಗಳೇ ಆದಿತ್ಯನ ಮುನ್ನೂರ ಅರವತ್ತು ರಶ್ಮಿಗಳಾಗಿವೆ. ಸೂದದೋಹಗಳೇ ಆದಿತ್ಯರಶ್ಮಿಗಳಿಗೂ ದಿಕ್ಕುಗಳಿಗೂ ಮಧ್ಯದಲ್ಲಿರುವ ತತ್ತ್ವವಿಶೇಷಗಳು.

ಈ ಯಜ್ಞವೇದಿಕೆಯೇ ಸಮಸ್ತ ನಕ್ಷತ್ರಗಳು. ಸಪ್ತಚ್ಛಂದಸ್ಸುಗಳು. ಇದೇ ಸಂವತ್ಸರವು, ಇದೇ ಸಕಲ ಭೂತಗಳೂ ಆಗಿದೆ. ಆದಿತ್ಯನ ಸುತ್ತಲೂ ಮುನ್ನೂರ ಅರವತ್ತು ರಶ್ಮಿರೂಪಗಳಾದ ನಾವೆಗಳು ಸುತ್ತುವರಿದಿರುವಂತೆ ಈ ವೇದಿಯ ಸುತ್ತಲೂ ಯಜುಷ್ಮತೀರೂಪದ ದೇವಮಾನವಾದಿಗಳು ಸುತ್ತುವರಿದಿದ್ದಾರೆ. ಈ ವೇದಿಯ ದೇಹವೇ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನು ; ಇತ್ಯಾದಿಯಾಗಿ, ವಿಶ್ವರೂಪಾತ್ಮಕನಾದ ವಿಶ್ವಕರ್ಮ (ಅಥವಾ ಪ್ರಜಾಪತಿ) ಮತ್ತು ಯಜ್ಞ ಇವೆರಡೂ ಒಂದೇ ತತ್ತ್ವವನ್ನು ಪ್ರತಿಬಿಂಬಿಸುವ ಕರ್ತೃಕಾರ್ಯರೂಪಗಳು ಎಂದು ತೋರಿಸಿದೆ. ಯಜ್ಞವೇದಿಯ ದೇಹರೂಪಿಯಾದ ಈ ಹಿರಣ್ಮಯಪುರುಷನ ಸ್ವರೂಪವು ಎಷ್ಟು ಆಕರ್ಷಕವಾದುದು ಮತ್ತು ಎಷ್ಟು ಮಹತ್ವವುಳ್ಳದ್ದು ಎಂದರೆ,

**ತಸ್ಯೈತೇ ಪ್ರತಿಷ್ಠೇ । ರುಕ್ಮಶ್ಚ ಪುಷ್ಕರಣಪರ್ಣಂ ಚಾಪಶ್ಚಾದಿತ್ಯಮಂಡಲಂ ಚ ಸ್ರುಚೌ ಬಾಹೂ ತಾವಿಂದ್ರಾಗ್ನೀ ದ್ವೇ ಸ್ವಯಮಾತೃಣ್ಣೇ ಇಯಂ ಚಾಂತರಿಕ್ಷಂ ಚ ತಿಸ್ರೋ ವಿಶ್ವ-ಜ್ಯೋತಿಷ ಏತಾ ದೇವತಾ ಅಗ್ನಿರ್ವಾಯುರಾದಿತ್ಯ ಏತಾ ಹ್ಯೇವ ದೇವತಾ ವಿಶ್ವಂ ಜ್ಯೋತಿಃ................ ॥**

(ಶ. ಬ್ರಾ. ೧೦-೫-೪-೧೫)

ಸ್ವರ್ಣಪಾತ್ರವೂ, ಪುಷ್ಕರಪರ್ಣವೂ, ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಎರಡು ಪಾದಗಳೂ, ಯಜ್ಞವೇದಿಕೆಯಲ್ಲಿರುವ ಎರಡು ಸ್ರುಕ್ಪಾತ್ರೆಗಳೂ ಇವನ ಬಾಹುಗಳು. ಇವರೇ ಇಂದ್ರಾಗ್ನಿಗಳು. ಸ್ವಾಭಾವಿಕವಾಗಿಯೇ

ನಾಗಿರುವ ಈ ಎರಡು ಇಷ್ಟಕೆಗಳು ಪೃಥಿವ್ಯಂತರಿಕ್ಷಗಳು. ವಿಶ್ವಜ್ಯೋತೀರೂಪವಾದ ಇಷ್ಟಕೆಗಳೇ ಸಕಲ

ಇವುಗಳ ಸಂಖ್ಯೆಯು ಮೂರು. ಈ ಮೂರೂ **ಅಗ್ನಿ, ವಾಯು** ಮತ್ತು **ಆದಿತ್ಯ**ರನ್ನು ಪ್ರತಿಬಿಂಬಿ

ಸುತ್ತವೆ. ಈ ವೇದಿಯ ದೇಹವೇ ಸಕಲಕ್ಕೂ ಅಂತವಾಗಿದೆ. ಈ ವೇದಿರೂಪವಾದ ಆದಿತ್ಯಾಂತರ್ಗತನಾದ ಹಿರಣ್ಮಯ ಪುರುಷನು ಸರ್ವಕಾಮುಗಳನ್ನೂ ಪಡೆದಿರುವುದರಿಂದ ಕಾಮರಹಿತನಾಗಿಯೂ, ಪೂರ್ಣತೃಪ್ತನಾಗಿಯೂ ಇದ್ದಾನೆ. ಈ ರೀತಿಯಾಗಿ ವಿಶ್ವಾತ್ಮನೂ, ವಿಶ್ವಕರ್ಮನೂ ಆದ ಪ್ರಜಾಪತಿಗೂ, ಸಕಲ ವಿಶ್ವವ್ಯಾಪಿಯೂ, ವಿಶ್ವಪಾಲಕವೂ ಆದ ಯಜ್ಞಕ್ಕೂ ತಾದಾತ್ಮ್ಯವನ್ನು ತೋರಿಸಿದೆ. ಈ ಪ್ರಜಾಪತಿಯು ತನ್ನ ಯಜ್ಞದಲ್ಲಿ ತನ್ನನ್ನೇ ಆಹುತಿಯನ್ನಾಗಿ ಸಮರ್ಪಿಸಿ ಸೃಷ್ಟಿಕರ್ಮವನ್ನು ಸಂಕಲ್ಪಿಸಿ ಜಗತ್ತನ್ನು ವಿಸ್ತಾರಗೊಳಿಸುತ್ತಾನೆ.

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।**
**ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**
(ಋ. ಸಂ. ೧೦-೧೨೧-೨)

ಈ ಕ ಸಂಜ್ಞಕನಾದ ಪ್ರಜಾಪತಿಯು ಸೃಷ್ಟಿಕಾಲದಲ್ಲಿ ಸಕಲ ಭೂತಗಳಿಗೂ ಚೈತನ್ಯದಾಯಿಯು (ಅಥವಾ ತನ್ನನ್ನೇ ಆಹುತಿರೂಪದಲ್ಲಿ ಅರ್ಪಿಸುವವನು) ಶಕ್ತಿದಾಯಕನು. ದೇವತೆಗಳೂ ಇವನ ಆಜ್ಞೆಯನ್ನು ಪಾಲಿಸುತ್ತಾರೆ ಇತ್ಯಾದಿ ಯಾಗಿ ವರ್ಣಿತವಾಗಿದೆ. ಈ ಪ್ರಜಾಪತಿಯು ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಸೃಷ್ಟಿಕಾರ್ಯವನ್ನು ನೆರ ವೇರಿಸಿದನು ಎಂದರ್ಥ.

ವಿಶ್ವವ್ಯಾಪಕನಾದ ವಿಶ್ವಕರ್ಮನು ಯಾವ ರೀತಿ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಕಾರಣನೋ ಹಾಗೆಯೇ, ಅವನ ಸಂಕಲ್ಪವನ್ನನುಸರಿಸಿ ಅವನ ಕ್ರಿಯೆಯಾದುದೂ, ವಿಶ್ವವ್ಯಾಪಕವೂ ಆದ ಯಜ್ಞವೂ ಸಹ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಮೂಲಕಾರಣವಾಗಿರುತ್ತದೆ.

ಹಿಂದೆ **ಯಜ್ಞೇನ ಯಜ್ಞಮಯಜಂತ ದೇವಾಃ** (೧-೧೬೪-೫೦) ಎಂಬ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಪ್ರಾಪಂಚಿಕವಾದ ಧರ್ಮಗಳೆಲ್ಲ ಈ ಯಜ್ಞವೇ ಮೂಲವೆಂಬ ವಿಷಯವನ್ನು ತಿಳಿಸಲಾಗಿದೆ. ಈ ಯಜ್ಞದ ಧರ್ಮಗಳೇ ಅಂತರಿಕ್ಷದಲ್ಲಿ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನ ಗಳಲ್ಲಿರಿಸುತ್ತವೆ. ಯಜ್ಞದಿಂದಲೇ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಭೂತಗಳೂ ತಮ್ಮ ಸ್ಥಿತಿ ಹೇತುವಾದ ಅನ್ನವನ್ನೂ ಶಕ್ತಿಯನ್ನೂ ಪಡೆಯುತ್ತವೆ.

**ಇಹಾಸ್ಮಾಕಂ ಮಘವಾ ಸೂರಿರಸ್ತು** ಎಂಬ ಆಕಾಂಕ್ಷಾರೂಪವಾದ ಪ್ರಾರ್ಥನೆಯು ಲೌಕಿಕ ಮತ್ತು ಆಮುಷ್ಮಿಕವಾದ ಸಂಪತ್ಸಮೃದ್ಧಿಯ ಆವಶ್ಯಕತೆಗಳನ್ನು ತಿಳಿಸುತ್ತದೆ. ಸೃಷ್ಟ್ಯನಂತರ ಸ್ಥಿತಿಕಾಲದಲ್ಲಿ ಉತ್ತಮವಾದ ವೃದ್ಧಿಯನ್ನು ಹೊಂದಲು ಅತ್ಯವಶ್ಯವಾದ ಸಾಧನಸಂಪತ್ತುಗಳು ಯಾವುವು ಅಪೇಕ್ಷಿತವೋ ಅವೆಲ್ಲವನ್ನೂ ಇಲ್ಲಿ ಪ್ರಾರ್ಥಿಸ ಲಾಗಿದೆ. ಸೃಷ್ಟ್ಯನಂತರ, **ಪ್ರಥಮತಃ** ಅವಶ್ಯವಾದದು ಅನ್ನ. ಈ ಅನ್ನಸಂಪಾದನೆಗೆ ಯಜ್ಞವೇ ಮುಖ್ಯ.

**ಪ್ರಜಾಪತಿಃ ಪ್ರಜಾ ಅಸೃಜತ ತಾಸ್ಸೃಷ್ಟಾಃ ಕ್ಷುಧಂ ನ್ಯಾಯನ್ತ್ಸ ಏತಂ ನವರಾತ್ರಮಪಶ್ಯತ್ತ- ಮಾಹರತ್ತೇನಾಯಜತ ತತೋ ವೈ ಪ್ರಜಾಭ್ಯೋಽಕಲ್ಪತ ಯರ್ಹಿ ಪ್ರಜಾಃ ಕ್ಷುಧಂ ನಿಗಚ್ಛೇ- ಯುಸ್ತರ್ಹಿ ನವರಾತ್ರೇಣ ಯಜೇತೇನೋ ಹಿ ವಾ ಏತಾಸಾಂ ಲೋಕಾ ಅಕ್ಳೃಪ್ತಾ ಅಥೈತಾಃ ಕ್ಷುಧಂ ನಿಗಚ್ಛಂತಿ ॥** (ತೈ. ಸಂ. ೭-೨-೪-೧)

ಜಗತ್ಕಾರಣನಾದ ಪ್ರಜಾಪತಿಯಿಂದ ಉತ್ಪನ್ನರಾದ ಪ್ರಜೆಗಳೆಲ್ಲರೂ ಹಸಿವಿನಿಂದ ಪೂರಿತವಾದವು. ಆಗ ಹಸಿವನ್ನು ಹೋಗಲಾಡಿಸಲು ನವರಾತ್ರರೂಪವಾದ ಯಜ್ಞವನ್ನು ಚಿಂತಿಸಿ ಅದರಿಂದ ಯಜ್ಞವನ್ನಾಚರಿಸಿದನು. ಅದು ಪ್ರಜೆಗಳ ಹಸಿವೆಯನ್ನು ಹೋಗಲಾಡಿಸಿತು. ಆದುದರಿಂದ ಹಸಿವೆಯನ್ನು ಹೋಗಲಾಡಿಸಲು ಯಜ್ಞವೇ ಮೂಲವು. ಇದೇ ಯಜ್ಞವು ಮೂರು ಲೋಕಗಳನ್ನು ಒಂದು ಸ್ಥಿತಿಯಲ್ಲಿಯೂ ನಿಯಮದಲ್ಲಿಯೂ ಇಡುತ್ತದೆ. ಓತಪ್ರೋತ ರೂಪದಿಂದ ತಂತುವಿನೊಡನೆ ತಂತು (ನೂಲು) ವನ್ನು ಸೇರಿಸಿ ಪಟ (ಬಟ್ಟೆ) ವನ್ನು ನಿರ್ಮಿಸುವಂತೆ ಶೈಥಿಲ್ಯವನ್ನು ತಪ್ಪಿಸುವುದಕ್ಕೂ ವಿಶ್ವಕ್ಕೆಲ್ಲ ಒಂದೇ ಸಂಬಂಧರೂಪವಾದ ಶಕ್ತಿಯನ್ನು ಉತ್ಪನ್ನಮಾಡಿ ಮೂರು ಲೋಕಗಳೂ ಅವುಗಳ ನಿಯತವಾದ ಸ್ಥಿತಿಯಲ್ಲಿರುವುದಕ್ಕೂ ಈ ಯಜ್ಞವು ಮೂಲವಾಯಿತು.

ಆದರೆ, ಇಲ್ಲಿಗೆ ವಿಶ್ವವ್ಯಾಪಾರವು ಮುಗಿದಂತಲ್ಲ. ವಿಶ್ವಕರ್ಮನು ಯಜ್ಞಮೂಲವಾದ ಸೃಷ್ಟಿಯನ್ನು ಉಂಟುಮಾಡಿದೊಡನೆಯೇ ಐಕ್ಯವನ್ನು ಹೊಂದಿದ್ದ ತತ್ತ್ವವು ಬಹುತ್ವವನ್ನು ಪಡೆಯಿತು. ಈ ಬಹುತ್ವವೂ ವೃದ್ಧಿಯನ್ನು ಹೊಂದಬೇಕು. ಪ್ರಜಾಪತಿರೂಪನಾದ ವಿಶ್ವಕರ್ಮನು ತನ್ನ ವೃದ್ಧಿಗೆ ಯಾವ ರೀತಿ ಯಜ್ಞವನ್ನಾಚರಿಸಿದನೋ, ಉತ್ಪನ್ನವಾದ ಈ ನಾನಾ ಪ್ರಕೃತಿಗಳೂ ಸಹ ತಮ್ಮ ವೃದ್ಧಿಗಾಗಿ ಯಜ್ಞವನ್ನಾಚರಿಸಬೇಕು. ವಿಶ್ವಕರ್ಮನು ಯಾವ ಮಾರ್ಗವನ್ನು ತೋರಿಸಿದನೋ ಅದೇ ಮಾರ್ಗವನ್ನನುಸರಿಸಬೇಕು. ಅವನು ತನ್ನ ಯಜ್ಞರೂಪದಿಂದ ತನ್ನನ್ನೇ ಯಾವ ರೀತಿ ಪೂಜಿಸಿಕೊಂಡನೋ, ಅದೇ ರೀತಿ ಪ್ರತಿಯೊಂದು ಪ್ರಜೆಯೂ ವಿಶ್ವಕರ್ಮನ ಪ್ರತಿಬಿಂಬರೂಪವಾದ ಯಜ್ಞದ ಮೂಲಕ ಅದೇ ವಿಶ್ವಕರ್ಮನನ್ನು ಆರಾಧಿಸಬೇಕು. ಉತ್ಪನ್ನವಾದ ವಿಶ್ವದ ಬೆಳವಣಿಗೆಯು ಅಪೇಕ್ಷಿತವಾದರೆ, ಸ್ಥಿತಿಕಾಲದಲ್ಲಿರುವವರೆಗೆ ಯಜ್ಞಾಚರಣೆಯೇ ಜೀವನದ ಮುಖ್ಯಗುರಿಯಾಗಿರಬೇಕು. ಯಜ್ಞವು ಉತ್ಪನ್ನನಾದ ಮಾನವನ ಕರ್ತವ್ಯ.

**ಋಣಗ್ಂ ಹ ವೈ ಜಾಯತೇ ಯೋಽಸ್ತಿ ಸ ಜಾಯಮಾನ ಏವ ದೇವೇಭ್ಯ ಋಷಿಭ್ಯಃ ಪಿತೃಭ್ಯೋ ಮನುಷ್ಯೇಭ್ಯಃ ||**

(ಶ. ಬ್ರಾ. ೧-೭-೨-೧)

ಇತ್ಯಾದಿ ವಾಕ್ಯಗಳನ್ನುದಾಹರಿಸಿ ಹಿಂದೆ ಮಾನವನ ಋಣತ್ರಯದ ವಿಷಯವನ್ನು ವಿವರಿಸಿದೆ. ಈ ಋಣದಿಂದ ಮುಕ್ತನಾಗಿ ಪ್ರಜೆಯು ವಿಶ್ವದ ಸ್ಥಿತಿಯಲ್ಲಿ ತಾನೂ ಭಾಗವಹಿಸುವಂತೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾದರೆ ಪ್ರತಿವ್ಯಕ್ತಿಯೂ ವಿಶ್ವಕರ್ಮಪ್ರತಿಬಿಂಬಿಯಾದ ಈ ಯಜ್ಞವನ್ನು ಆಚರಿಸಬೇಕು.

"**ಹವಿಷಾ ವರ್ಧಮಾನಃ**" ಎಂಬ ವಾಕ್ಯದಲ್ಲಿರುವ ವಿಶ್ವಕರ್ಮನ ವೃದ್ಧಿಸ್ವರೂಪವೇನು ? ಅದರ ಕ್ರಮವೇನು ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕು.

**ಪ್ರಜಾಪತಿಃ ಪ್ರಜಾ ಅಸೃಜತ | ತಾಸ್ಸೃಷ್ಟಾಸ್ಸಮಶ್ಲಿಷ್ಯನ್ | ತಾ ರೂಪೇಣಾನು ಪ್ರಾವಿಶತ್ | ತಸ್ಮಾದಾಹುಃ | ರೂಪಂ ವೈ ಪ್ರಜಾಪತಿರಿತಿ | ತಾ ನಾಮ್ನಾನುಪ್ರಾವಿಶತ್ | ತಸ್ಮಾದಾಹುಃ | ನಾಮ ವೈ ಪ್ರಜಾಪತಿರಿತಿ ||**

(ತೈ. ಬ್ರಾ. ೨-೨-೭-೧)

ಪ್ರಜಾಪತಿಯಿಂದ ಸೃಷ್ಟವಾದ ಪ್ರಜೆಗಳು ವೈಯಕ್ತಿಕವಾದ ಸ್ಥಿತಿಯನ್ನು ಹೊಂದದೆ ಎಲ್ಲವೂ ಒಟ್ಟಿಗೆ ಸೇರಿಕೊಂಡಿದ್ದವು. ಆಗ ಅವುಗಳನ್ನು ವೈಯಕ್ತಿಕವಾಗಿ ವಿಂಗಡಿಸಲು ಅವುಗಳಿಗೆ ನಾಮ ಮತ್ತು ರೂಪಗಳನ್ನು ಕೊಟ್ಟು ಆ ನಾಮ ರೂಪಗಳಿಂದ ಒಟ್ಟಿಗಿದ್ದ ಅವುಗಳನ್ನು ವಿಭಾಗಮಾಡಿ ತಾನೂ ಅವುಗಳಲ್ಲಿ ಪ್ರವೇಶಿಸಿದನು. ಈ ನಾಮರೂಪಗಳು ಲೋಕವಿಸ್ತರಣಕ್ಕೆ ಮೂಲವಾದವು.

ವಿಶ್ವಕರ್ಮನ ಬೆಳೆವಣಿಗೆಗೆ ಯಜ್ಞವು ಹೇಗೆ ಸಾಧಕವೋ, ಹಾಗೆಯೇ, ನಾಮರೂಪಗಳಿಂದ ವಿಭಕ್ತವಾದ ವೈಯಕ್ತಿಕವಾದ ಪ್ರಜೆಯ ಬೆಳವಣಿಗೆಗೂ ಈ ಯಜ್ಞವೇ ಸಾಧಕವು. ವಿಶ್ವಕರ್ಮನಿಗೂ ಯಜ್ಞಕ್ಕೂ ಹೇಗೆ ಐಕ್ಯವನ್ನು ತೋರಿಸಿದೆಯೋ, ಹಾಗೆಯೇ ವೈಯಕ್ತಿವಾದ ಪ್ರಜೆಗೂ ಅವನಿಂದ ಆಚರಿಸಲ್ಪಡುವ ಯಜ್ಞಕ್ಕೂ ತಾದಾತ್ಮ್ಯವಿರಬೇಕು. ವಿಶ್ವಕರ್ಮನು ತನ್ನನ್ನೇ ಆಹುತಿಯನ್ನಾಗಿ ಅರ್ಪಿಸಿಕೊಳ್ಳುವಂತೆ (**ಸ್ವಯಂ ಯಜಸ್ವ ತನ್ವಂ ವೃಧಾನಃ**) ಅವನಿಂದ ಸೃಷ್ಟನಾದ ಪ್ರಜೆಯೂ ತನ್ನನ್ನೇ ಈ ವೈಯಕ್ತಿಕವಾದ ಯಜ್ಞದಲ್ಲಿ ಆಹುತಿರೂಪದಲ್ಲಿ ಅರ್ಪಿಸಬೇಕು. ಹೇಗೆಂದರೆ :—

**ಅಥ ಯದ್ಯಜ್ಞಂ ತನುತೇ । ಯಜ್ಞೋ ವೈ ವೈ ತದ್ದೇವೇಭ್ಯ ಆತ್ಮಾನಂ ನಿಷ್ಕ್ರೀಣೀತೇ ಯಥೈವ ತತ್ಪ್ರಜಾಪತಿರ್ನಿರಕ್ರೀಣೀತೈವಮು ಥ ಯದ್ಧವಿರ್ನಿರ್ವಪತಿ ಹವಿಷೈವೈತದ್ಯಜ್ಞಂ ನಿಷ್ಕ್ರೀಣಾತಿ ಹವಿರನುವಾಕಯಾನುವಾಕ್ಯಾಮವದಾನೇನಾವದಾನಂ ಯಾಜ್ಯಯಾ ಯಾಜ್ಯಾಂ ವಷಟ್ಕಾರೇಣ ವಷಟ್ಕಾರಮಾಹುತ್ಯಾ ತಸ್ಯಾಹುತಿರೇವಾನಿಷ್ಕ್ರೀತಾ ಭವತಿ ॥**

(ಶ. ಬ್ರಾ. ೧೧.೧-೮-೧)

ಈ ಯಜ್ಞದಿಂದ ಯಜಮಾನನು ತನ್ನ ದೇವಋಣವನ್ನು ತೀರಿಸುತ್ತಾನೆ. ಪ್ರಜಾಪತಿಯು ತನ್ನಿಂದ ಆಚರಿಸಲ್ಪಟ್ಟ ಯಜ್ಞದಲ್ಲಿ ತನ್ನನ್ನೇ ಆಹುತಿರೂಪದಲ್ಲಿ ಅರ್ಪಿಸಿ ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದಂತೆ, ಈಗಲೂ ಯಜಮಾನನು ದೇವತೆಗಳಿಗೆ ಆಹುತಿರೂಪದಲ್ಲಿ ಅರ್ಪಿಸಬೇಕು. (ಉಪವಾಸಾದಿ ವ್ರತಗಳೇ ಇದರ ತಾತ್ಪರ್ಯ). ದೀಕ್ಷಾಕಾಲವನ್ನು ಯಜಮಾನನು ಉತ್ತಮವಾದ ನಿಯಮಪಾಲನೆಗಳಿಂದಲೂ, ಜಿತೇಂದ್ರಿಯನಾಗಿಯೂ ಕಳೆದರೆ, ಆಗ ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದಂತೆ. ಇತ್ಯಾದಿಯಾಗಿ ಆತ್ಮಯಜ್ಞದ ಆವಶ್ಯಕತೆಯು ತಿಳಿಸಲ್ಪಟ್ಟಿದೆ. ಆತ್ಮಯಜ್ಞವೆಂದರೆ ಆತ್ಮಹತ್ಯವಲ್ಲ, ಆತ್ಮತ್ಯಾಗವೇ ಗುರಿ.

ಸೃಷ್ಟ್ಯನಂತರ, ಸ್ಥಿತಿಕಾಲದಲ್ಲಿ, ನಾಮರೂಪಪ್ರಭೇದಗಳಿರುವಂತೆಯೇ, ದೇಶಕಾಲಾದಿಗಳ ಪ್ರಭೇದವೂ ಅವಶ್ಯವಾಗಿರುತ್ತದೆ. ವಿಶ್ವಕರ್ಮನು ಸಕಲದೇಶ (ಪ್ರದೇಶ-Space) ಗಳನ್ನೂ ವ್ಯಾಪಿಸಿರುವಂತೆ, ಯಜ್ಞವೂ ಸಹ ದ್ಯಾವಾಪೃಥಿವೀ ಮತ್ತು ಅಂತರಿಕ್ಷಗಳೊಂದಿಗೆ ಐಕ್ಯತೆಯನ್ನು ಹೊಂದಿ ತಾದಾತ್ಮ್ಯವನ್ನು ಹೊಂದಿರುವ ವಿಷಯವನ್ನು ಕೆಳಗೆ ಉದಾಹೃತವಾಗಿರುವ ವಾಕ್ಯವು ತಿಳಿಸುತ್ತದೆ.

**ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ ಪ್ರಾಣೋ ವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ । ದ್ಯೌಃ ಪೃಷ್ಠಮಂತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇ ಅವಾಂತರದಿಶಃ ಪರ್ಶವ ಋತವೋಽಙ್ಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಂಸಾನಿ ।**

**ಊವಧ್ಯಂ ಸಿಕತಾಃ ಸಿಂಧವೋ ಗುದಾ..................ಯದ್ವಿಜೃಂಭತೇ ತದ್ವಿದ್ಯೋತತೇ ಯದ್ವಿಧೂನುತೇ ತತ್ಸ್ತನಯತಿ ಯನ್ಮೇಹತಿ ತದ್ವರ್ಷತಿ ವಾಗೇವಾಸ್ಯ ವಾಕ್ ॥**

(ಬೃ. ಉ ೧-೧)

ಜಗತ್ತಿಗೆ ಚೈತನ್ಯದಾಯಿಯೂ, ಪ್ರಭಾದಾಯಕಳೂ ಆದ ಉಷಸ್ಸೇ ಈ ಯಜ್ಞಾಶ್ವದ ಶಿರಸ್ಸು, ಸೂರ್ಯನೇ ಚಕ್ಷುಸ್ಸು, ವಾತವೇ ಉಚ್ಛ್ವಾಸನಿಶ್ವಾಸಗಳು, ವೈಶ್ವಾನರಾಗ್ನಿಯೇ ಬಿಚ್ಚಿದ ಬಾಯಿ, ಸಂವತ್ಸರವೇ ಇದರ ದೇಹ, ದ್ಯುಲೋಕವೇ ಪೃಷ್ಠವು, ಅಂತರಿಕ್ಷವೇ ಉದರವು, ಪೃಥ್ವಿಯೇ ಗೊರಸು, ದಿಕ್ಕುಗಳೇ ಇದರ ಪಾರ್ಶ್ವಗಳು, ದಿಗಂತರಗಳೇ ಎಲುಬುಗಳು, ಅಯನ ಮತ್ತು ಋತುಗಳೇ ಇದ್ದರ ಅವಯವಗಳು, ಮಾಸ ಮತ್ತು ಪಕ್ಷಗಳೇ ಸಂಧಿಸ್ಥಾನಗಳು, ಅಹೋರಾತ್ರಗಳೇ ಪಾದಗಳು, ನಕ್ಷತ್ರಗಳೇ ಮೂಳೆಗಳು, ನದಿಗಳೇ ರಕ್ತನಾಳಗಳು, ವೃಕ್ಷಗಳೇ ರೋಮಗಳು, ಅದು ಆಕಳಿಕೆ ಬಿಟ್ಟಾಗ ಪ್ರಕಾಶವು, ಕೆನೆಯುವಾಗಲೇ ಗುಡುಗು, ಈ ರೀತಿ ಯಜ್ಞಾಶ್ವದ ಅವಯವಗಳೇ ಸಕಲ ದೇಶಕಾಲಗಳು ಎಂದು ತಿಳಿಸಿದೆ. ಎಂದರೆ, ನಾಮರೂಪಗಳಿಂದ ವಿಭಕ್ತವಾದ ಸಕಲ ವಿಶ್ವವೂ ಯಜ್ಞತತ್ತ್ವದ ಅಂಶವೇ ಆಗಿದೆಯೆಂದು ತಿಳಿಸಿದೆ. ಆದುದರಿಂದ ಉತ್ಪನ್ನವಾದ ಸಕಲವೂ ಯಜ್ಞರೂಪದಲ್ಲಿಯೇ ವೃದ್ಧಿಯನ್ನು ಹೊಂದುತ್ತದೆ. ಸೃಷ್ಟಿ ನಂತರ ಲಯದವರೆಗೂ ಉತ್ಪನ್ನವಾದ ಸಕಲವಸ್ತುಗಳೂ ಮೂರು ಅವಸ್ಥೆಗಳನ್ನು ಹೊಂದುತ್ತವೆ. ಪ್ರಾತಃಕಾಲದ ಅವಸ್ಥೆ ಮಧ್ಯಾಹ್ನದ ಅವಸ್ಥೆ, ಮತ್ತು ಸಂಧ್ಯಾಕಾಲದ ಸ್ಥಿತಿ. ಪ್ರತಿಜೀವನದಲ್ಲಿಯೂ ಈ ಮೂರು ಅವಸ್ಥೆಗಳುಂಟು. ಇವೆಲ್ಲವೂ ಯಜ್ಞ ರೂಪವುಳ್ಳವಾಗಿಯೇ ಇರುತ್ತವೆ. ಇವು ಮೂರೂ ಪುಷ್ಕಳವಾಗಿದ್ದರೇ ಆಗ ಮಾತ್ರ ಜೀವನದ ಪೌಷ್ಕಳ್ಯ. ಹೇಗೆಂದರೆ,

**ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ ತತ್ಪ್ರಾತಃಸವನಂ ಚತುರ್ವಿಂಶತ್ಯಕ್ಷರಾ ಗಾಯತ್ರೀ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವ ಏತೇ ಹೀದಂ ಸರ್ವಂ ವಾಸಯಂತಿ ॥**

(ಛಾ. ಉ. ೩-೧೬-೧)

ಪುರುಷನೇ ಯಜ್ಞವು. ಅವನ ಮೊದಲನೆಯ ಇಪ್ಪತ್ತುನಾಲ್ಕು ವರ್ಷಗಳು ಪ್ರಾತಃಸವನರೂಪವು. ಗಾಯತ್ರಿಯು ಇಪ್ಪತ್ತುನಾಲ್ಕು ಮಾತ್ರೆಗಳುಳ್ಳದ್ದು. ಆದುದರಿಂದ ಪ್ರಾತಃಸವನವು ಗಾಯತ್ರ್ಯಾತ್ಮಕವಾದ ಮಂತ್ರದ ಸಹಾಯದಿಂದ ಆಚರಿಸಲ್ಪಡಬೇಕು. ವಸುಗಳು ಈ ಪ್ರಾತಃಸವನಕ್ಕೆ ಸಂಬಂಧಿಸಿದವರು. ಪುರುಷನ ಪ್ರಾಣಗಳೇ ಈ ವಸುಗಳು. ಇಹದಲ್ಲಿ ಸಕಲವನ್ನೂ ವಾಸಕ್ಕೆ ಯೋಗ್ಯವಾಗಿ ಮಾಡುವುದರಿಂದ ಪ್ರಾಣಗಳೇ ವಸುಸಂಜ್ಞಕಗಳಾಗಿವೆ.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಂ ಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ॥**

(ಛಾ. ಉ. ೩-೧೬-೨)

ಜೀವನದ ಈ ವಯಸ್ಸಿನಲ್ಲಿ ಪುರುಷನು ಒಂದುವೇಳೆ ವ್ಯಾಧಿಯಿಂದ ಪೀಡಿತನಾದರೆ, ಆಗ, ಅವನು "ಎಲೈ ವಸುರೂಪಗಳಾದ ಪ್ರಾಣಗಳೇ, ನನ್ನ ಈ ಪ್ರಾತಃಸವನರೂಪವಾದ ಜೀವನವು ಇಲ್ಲಿಗೆ ಕುಂಠಿತವಾಗದಿರಲಿ. ಇದು ಮಾಧ್ಯಂದಿನ ಸವನರೂಪವಾದ ಮಧ್ಯವಯಸ್ಸಿಗೂ ಮುಂದುವರಿಯಲಿ. ನನ್ನ ಈ ಜೀವನರೂಪವಾದ ಯಜ್ಞವು ಮುಂದುವರಿಯಲಿ" ಎಂದು ಪ್ರಾರ್ಥಿಸಿದರೆ ಆಗ ಅವನು ವ್ಯಾಧಿಯಿಂದ ಮುಕ್ತನಾಗುತ್ತಾನೆ.

**ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನಂ ಸವನಂ ಚತುಶ್ಚತ್ವಾರಿಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಂ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾ ವಾವ ರುದ್ರಾ ಏತೇ ಹೀದಂ ಸರ್ವಂ ರೋದಯಂತಿ ॥** (ಛಾ. ಉ. ೩-೧೬-೩)

ಪ್ರಾತಃಸವನಕಾಲವಾದನಂತರ ಮುಂದಿನ ನಲವತ್ತುನಾಲ್ಕು ವರ್ಷಗಳೂ ಮಾಧ್ಯಂದಿನಸವನರೂಪವುಳ್ಳದ್ದಾಗಿದೆ. ತ್ರಿಷ್ಟುಪ್‌ಛಂದಸ್ಸು ನಲವತ್ತುನಾಲ್ಕು ಮಾತ್ರೆಗಳುಳ್ಳದ್ದು. ಆದುದರಿಂದ ಮಾಧ್ಯಂದಿನಸವನವನ್ನು ತ್ರಿಷ್ಟುಪ್‌ಛಂದಾತ್ಮಕವಾದ ಮಂತ್ರದ ಸಹಾಯದಿಂದ ಆಚರಿಸಬೇಕು. ಈ ಕಾಲದಲ್ಲಿ ಪುರುಷನ ಪ್ರಾಣಗಳೇ ರುದ್ರರೂಪಾತ್ಮಕವಾಗಿವೆ. ಕಷ್ಟಕಾಲದಲ್ಲಿ ಎಲ್ಲರನ್ನೂ ಅಳುವಂತೆ ಮಾಡುವುದರಿಂದ (ರೋದಯಂತಿ) ಇವು ರುದ್ರಸಂಜ್ಞಕವಾಗಿವೆ.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ ಪ್ರಾಣಾ ರುದ್ರಾ ಇದಂ ಮೇ ಮಾಧ್ಯಂದಿನಂ ಸವನಂ ತೃತೀಯಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ॥**

(ಛಾ. ಉ. ೩-೧೬-೪)

ಒಂದು ವೇಳೆ ಪುರುಷನು ತನ್ನ ಜೀವಿತದ ಈ ಕಾಲದಲ್ಲಿ ವ್ಯಾಧಿಯಿಂದ ಪೀಡಿತನಾದರೆ, ಆಗ ಎಲೈ ರುದ್ರರೂಪರಾದ ಪ್ರಾಣಗಳೇ, ನನ್ನ ಮಾಧ್ಯಂದಿನಸವನರೂಪವಾದ ಈ ಯಜ್ಞವು ಸಾಯಂಸವನದ ವರೆಗೆ ಮುಂದುವರಿಯಲಿ ಇದು ಇಲ್ಲೇ ಕೊನೆಯಾಗದಿರಲಿ. ಎಂದು ಪ್ರಾರ್ಥಿಸಿದರೆ ಆಗ ಪುರುಷನು ವ್ಯಾಧಿಯಿಂದ ಮುಕ್ತನಾಗುತ್ತಾನೆ.

**ಅಥ ಯಾನ್ಯಷ್ಟಾಚತ್ವಾರಿಂಶದ್ವರ್ಷಾಣಿ ತತ್ತೃತೀಯಸವನಮಷ್ಟಾಚತ್ವಾರಿಂಶದಕ್ಷರಾ ಜಗತೀ ಜಾಗತಂ ತೃತೀಯಸವನಂ ತದಸ್ಯಾದಿತ್ಯಾ ಅನ್ವಾಯತ್ತಾಃ ಪ್ರಾಣಾ ವಾವಾದಿತ್ಯಾ ಏತೇ ಹೀದಂ ಸರ್ವಮಾದದತೇ ।**

(ಛಾ. ಉ. ೩-೧೬-೫)

ಮುಂದಿನ ನಲವತ್ತೆಂಟುವರ್ಷಗಳೂ ಸಾಯಂಸವನರೂಪಾತ್ಮಕವು. ಜಗತೀಛಂದಸ್ಸು ನಲವತ್ತೆಂಟು ಮಾತ್ರೆಗಳುಳ್ಳದ್ದು. ಆದುದರಿಂದ ಸಾಯಂಸವನವು ಜಗತೀರೂಪವಾದ ಮಂತ್ರದ ಸಹಾಯದಿಂದ ಆಚರಿಸಲ್ಪಡಬೇಕಾದುದು. ಆದಿತ್ಯರು ಈ ಸವನಕ್ಕೆ ಸಂಬಂಧಿಸಿದವರು. ಈ ಕಾಲದಲ್ಲಿ ಪ್ರಾಣರೂಪವಾದ ಆದಿತ್ಯರು ಎಲ್ಲವನ್ನು ಗ್ರಹಿಸುವುದರಿಂದ ಆದಿತ್ಯಸಂಜ್ಞಕವಾಗಿವೆ.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನುಸಂತನುತೇತಿ ಮಾಹಂ ಪ್ರಾಣಾನಾಂ ಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹೈವ ಭವತಿ ॥**

(ಛಾ. ಉ. ೩-೧೬-೬)

ಪುರುಷನ ಜೀವಿತದ ಈ ಕಾಲದಲ್ಲಿ ಒಂದು ವೇಳೆ ವ್ಯಾಧಿಯಿಂದ ತೊಂದರೆಯಾದರೆ, ಆಗ ಅವನು ಎಲೈ ಆದಿತ್ಯಾತ್ಮಕರಾದ ಪ್ರಾಣಗಳೇ ನನ್ನ ಈ ಜೀವರೂಪವಾದ ಆಹುತಿಯು ನನ್ನ ಪೂರ್ಣಾಯುಸ್ಸಿರುವವರೆಗೆ ನಡೆಯಲಿ. ಅರ್ಧಾಯುಸ್ಸಿನಲ್ಲಿ ಇದು ನಿಲ್ಲದಿರಲಿ ಇತ್ಯಾದಿಯಾಗಿ ಪ್ರಾರ್ಥಿಸಿ ವ್ಯಾಧಿಯಿಂದ ಮುಕ್ತನಾಗುತ್ತಾನೆ. ಅಲ್ಲದೇ—

**ಸ ಯದಶಿಶಿಷತಿ ಯತ್ಪಿಪಾಸತಿ ಯನ್ನ ರಮತೇ ತಾ ಅಸ್ಯ ದೀಕ್ಷಾಃ ।**

(ಛಾ. ಉ. ೩-೧೭-೧)

ಪುರುಷನು ಹಸಿವು ಮತ್ತು ದಾಹಗಳಿಂದ ಕೂಡಿ ಎಲ್ಲಿಯವರೆಗೆ ತಾನು ಸೌಖ್ಯವನ್ನನುಭವಿಸದೆ ನಿಯಮವನ್ನು ಪಾಲಿಸುವನೋ, ಅದು ಇವನ ಜೀವಯಜ್ಞದಲ್ಲಿ ದೀಕ್ಷಾಕಾಲವು.

**ಅಥ ಯದಶ್ನಾತಿ ಯತ್ಪಿಬತಿ ಯದ್ರಮತೇ ತದುಪಸದೈರೇತಿ ॥**

(ಛಾ. ಉ. ೩-೧೭-೨)

ಯಾವಾಗ ಪುರುಷನು ಅಶನಪಾನಾದಿಗಳನ್ನು ಹೊಂದಿ ಸೌಖ್ಯವನ್ನನುಭವಿಸುವನೋ, ಆಗ ಉಪಸದ ಸಂಜ್ಞಕವಾದ ಕರ್ಮದೊಂದಿಗೆ ಸೇರಿಕೊಳ್ಳುತ್ತಾನೆ. (ಕೇವಲ ಕ್ಷೀರಾದಿಗಳನ್ನೇ ಸೇವಿಸತಕ್ಕ ಒಂದು ವ್ರತ. **ಉಪಸದಾಂ ಚ ಪಯೋವ್ರತತ್ವನಿಮಿತ್ತಂ ಸುಖಮಸ್ತಿ** ಎಂದು ಶ್ರೀ ಶಂಕರಾಚಾರ್ಯರು ವಿವರಿಸಿದ್ದಾರೆ).

**ಅಥ ಯದ್ಧಸತಿ ಯಜ್ಜಕ್ಷತಿ ಯನ್ಮೈಥುನಂ ಚರತಿ ಸ್ತುತಶಸ್ತ್ರೈರೇವ ತದೇತಿ ॥**

(ಛಾ. ಉ. ೩-೧೭-೩)

ಯಾವಾಗ ಪುರುಷನು ಸಂತೋಷದಿಂದ ನಗುತ್ತ, ಭೋಗಗಳನ್ನು ಅನುಭವಿಸುತ್ತ ಇರುವನೋ ಆಗ ಶಸ್ತ್ರಾದಿ ಸ್ತುತಿ ಕರ್ಮಕ್ಕೆ ಸಮಾನವಾದ ಸ್ಥಿತಿಯನ್ನು ಹೊಂದುತ್ತಾನೆ.

**ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾಃ ॥**

(ಛಾ. ಉ ೩-೧೭-೪)

ತಪಸ್ಸು, ದಾನ, ಪ್ರಾಮಾಣಿಕತೆ, ಅಹಿಂಸೆ, ಸತ್ಯಪರತಾ, ಇವೇ ಈ ಪುರುಷ ಯಜ್ಞದಲ್ಲಿ ಪುರುಷನು ಅರ್ಪಿಸಬೇಕಾದ ಉತ್ತಮವಾದ ದಕ್ಷಿಣೆಗಳು.

**ತಸ್ಮಾದಾಹುಃ ಸೋಷ್ಯತ್ಯಸೋಷ್ಟೇತಿ ಪುನರುತ್ಪಾದನಮೇವಾಸ್ಯ ತನ್ಮರಣಮೇವಾವಭೃಥಃ ॥**

(ಛಾ. ಉ. ೩-೧೭-೫)

ಆದುದರಿಂದಲೇ, ಅವನು ಉತ್ಪನ್ನನಾಗುತ್ತಾನೆ, ಉತ್ಪನ್ನನಾಗಿದ್ದಾನೆ. ಅವನ ತಾಯಿಯು ಅವನನ್ನು ಹಡೆಯುತ್ತಾಳೆ ಅಥವಾ ಹಡೆದಿದ್ದಾಳೆ ಎಂದು ಹೇಳುವುದು ಜನನ, ಉತ್ಪನ್ನನಾಗಿ ಪುರುಷಯಜ್ಞವು ಮುಗಿದು ಕೊನೆಯ ಕಾಲದಲ್ಲಿ ಮರಣವೇ ಈ ಯಜ್ಞದ ಅವಭೃಥವು. (ದೇವಕೀಪುತ್ರನಾದ ಕೃಷ್ಣನಿಗೆ ಘೋರ ಆಂಗಿರಸನು ಉಪದೇಶಿಸಿದ ತತ್ತ್ವವು).

ಹೀಗೆ ಉಪನಿಷತ್ತುಗಳಲ್ಲಿ ವರ್ಣಿತವಾದ ವೈಯಕ್ತಿಕವಾದ ಪುರುಷಯಜ್ಞವು ಅನಾದ್ಯನಂತವಾದ ವಿಶ್ವಕರ್ಮನ ವಿಶ್ವಯಜ್ಞದ ಪ್ರತಿಬಿಂಬವಾಗಿರುತ್ತದೆ. ವಿಶ್ವಕರ್ಮನ ಯಜ್ಞಕ್ಕೆ ಆದಿಯಿಲ್ಲ; ಅಂತ್ಯವಿಲ್ಲ. ಅದು ಅನುಸ್ಯೂತವಾಗಿ ಮುಂದುವರಿಯುತ್ತಿದೆ. ಈ ಯಜ್ಞದ ಫಲವಾಗಿ ಸೃಷ್ಟಿ, ಸ್ಥಿತಿ ಮತ್ತು ಲಯಗಳೂ ಅನುಸ್ಯೂತವಾಗಿರುತ್ತವೆ. ಆದುದರಿಂದ, ಅನಾದ್ಯನಂತವಾದರೂ, ಸಹ, ಪ್ರತಿಯೊಂದು ಸೃಷ್ಟಿಯೂ ಆಯಾ ಯಜ್ಞಫಲವಾಗಿರುವುದರಿಂದ, ಪ್ರತಿಯೊಂದು ಯಜ್ಞಕ್ಕೂ ಕಾಲರೂಪವಾದ ಅಥವಾ ದೇಶರೂಪವಾದ (Time and Space) ಒಂದು ಪ್ರಮಾಣವು ಅವಶ್ಯವಾಗಿರುತ್ತದೆ. ಕಾಲರೂಪವಾದ ಈ ಅವಧಿಗೆ ಸಂವತ್ಸರವೇ ಪ್ರಮಾಣವು (Unit) ಸಂವತ್ಸರಕ್ಕೆ

ವಸಂತ, ಗ್ರೀಷ್ಮ ಮತ್ತು ಶರತ್ತುಗಳು ಅವಯವಗಳಾಗಿರುವಂತೆ ಸಂವತ್ಸರಾತ್ಮಕವಾದ ಯಜ್ಞಕ್ಕೂ ಈ ಮೂರು ಅವಯವಗಳಿರುತ್ತವೆ. ಆಜ್ಯಾಹುತಿ, ಸಮಿತ್ತಿನ ಅರ್ಪಣ ಮತ್ತು ಹವಿರರ್ಪಣ ಎಂಬ ಈ ಮೂರೂ ಈ ಅವಯವಗಳನ್ನು ಪ್ರತಿಬಿಂಬಿಸುತ್ತವೆ.

ಮುಂದೆ ಪ್ರಜಾಪತಿ, ಪುರುಷ, ಇತ್ಯಾದಿ ಸಂಜ್ಞೆಗಳಿಂದ ನಿರ್ದಿಷ್ಟನಾಗಿರುವವನೂ ವಿಶ್ವರೂಪಿಯೂ ಆದ ವಿಶ್ವಕರ್ಮನು ಹಿಂದಿನ ಮಾದರಿಯನ್ನೇ ಅನುಸರಿಸಿ ತನ್ನ ಸೃಷ್ಟಿರೂಪವಾದ ಪ್ರತಿಯೊಂದು ಯಜ್ಞದಲ್ಲಿಯೂ ತನ್ನನ್ನೇ ಪೂರ್ಣವಾದ ಆಹುತಿಯನ್ನಾಗಿ ಅರ್ಪಿಸಿಕೊಳ್ಳುತ್ತಾನೆ. (**ಸ್ವಯಂ ಯಜಸ್ವ** ಇತ್ಯಾದಿ ವಾಕ್ಯಗಳು ಈ ಅಂಶವನ್ನು ತಿಳಿಸುತ್ತವೆ). ಆದುದರಿಂದ ಆವೃತ್ತಿರೂಪದಲ್ಲಿ ಅನುಸ್ಯೂತವಾಗಿ ನಡೆಯುವ ಸೃಷ್ಟ್ಯಾದಿಗಳೇ ಯಜ್ಞವು.

**ತಸ್ಮಾತ್ಸ್ವಿಶ್ವಾದ್ವರೀಯಸಃ ಪ್ರಜನನಾದಿಮಾಃ ಪ್ರಜಾಃ ಪ್ರಜಾಯಂತೇ ||**

(ಶ. ಬ್ರಾ. ೩-೫-೧-೧೧)

ಅತಿ ವಿಸ್ತೃತವಾದ, ಯಜ್ಞರೂಪವಾದ ಈ ಸ್ತ್ರೀಯೋನಿಯಿಂದ ಪ್ರಜೆಗಳು ಉತ್ಪನ್ನರಾಗುತ್ತಾರೆ ಎಂದು ಯಜ್ಞವನ್ನು, ಒಬ್ಬ ಪ್ರಸವಿಸುವ ಸ್ತ್ರೀಗೆ ಹೋಲಿಸಿದೆ. ದೇವತೆಗಳು ಮತ್ತು ಅಸುರರಾದಿಯಾಗಿ, ಅಣುರೂಪದ ಮೃತ್ತಿನವರೆಗೆ ಉತ್ಪನ್ನವಾದ ಸಕಲವೂ ಈ ಯಜ್ಞದ ಫಲ. ಈ ಯಜ್ಞಕರ್ತರು ಮೂವರು—(೧) ಪ್ರಜಾಪತಿ, (೨) ಅಗ್ನಿ, (೩) ಮತ್ತು ಮಾನವರೂಪನಾದ ಯಜಮಾನ. ಈ ಮೂವರ ಕರ್ಮವೂ ಒಂದೇ ನಿಯಮವನ್ನನುಸರಿಸಬೇಕು. ಮಾನವನು ತನ್ನ ವೈಯಕ್ತಿಕವಾದ ಪುರುಷಯಜ್ಞಕಾಲದಲ್ಲಿ ಈ ವಿಶ್ವಕರ್ಮನ (ಪ್ರಜಾಪತಿಯ) ಯಜ್ಞಕರ್ಮವನ್ನನುಸರಿಸಬೇಕು. ಅದಕ್ಕೆ ಅಗ್ನಿಯ ಸಹಾಯವು ಅತ್ಯವಶ್ಯ. ಈ ವಿಶ್ವವ್ಯವಹಾರವು ಅಕುಂಠಿತವಾಗಿ ಸರಿಯಲು ಈ ಪರಸ್ಪರ ಸಾಹಾಯ್ಯಕವಾದ ಕರ್ಮವು ಅತ್ಯಾವಶ್ಯವಾಗಿರುತ್ತದೆ. ಈ ವಿಷಯವನ್ನು ತೈತ್ತಿರೀಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಪುರುಷಸಂಮಿತೋ ಯಜ್ಞಃ | ಯಜ್ಞಃ ಪುರುಷಸಮ್ಮಿತಃ | ಅಗ್ನೇ ತದಸ್ಯ ಕಲ್ಪಯ | ತ್ವಗ್ಂಹಿ ವೇತ್ಥ ಯಥಾತಥಂ | ಯತ್ಪಾಕತ್ರಾ ಮನಸಾ ದೀನದಕ್ಷಾ ನ ||**

(ತೈ. ಬ್ರಾ. ೩-೭-೧೧-೫)

ಯಜ್ಞವು ಪುರುಷಪ್ರಮಾಣವುಳ್ಳದ್ದು. ಎಲೈ ಅಗ್ನಿಯೇ, ನೀನು ಸಕಲವಾದ ಯಜ್ಞತತ್ತ್ವವನ್ನು ತಿಳಿದವನು. ಆದುದರಿಂದ, ಮಾನವನಿಗೂ ಈ ಯಜ್ಞಾಚರಣೆಯಲ್ಲಿ ಸಹಾಯಮಾಡಿ ಅವನನ್ನು ಉದ್ಧರಿಸು. ಇತ್ಯಾದಿಯಾಗಿ ಪ್ರಾರ್ಥಿಸಿದೆ. ಪುರುಷನು (ಯಜಮಾನನು) ಈ ಯಜ್ಞತತ್ತ್ವವನ್ನರಿತು ತನ್ನ ಕ್ರಿಯೆಯನ್ನು ಆಚರಿಸಿದರೆ ಆಗ ತಾನೂ ಸಹ ಈ ಮೂಲಪುರುಷನ ಪ್ರಮಾಣವನ್ನೇ ಹೊಂದುತ್ತಾನೆ ಎಂದರೆ, ಸಂಕುಚಿತರೂಪವುಳ್ಳವನು ತನ್ನ ಯಜ್ಞಕ್ರಿಯೆಯಿಂದ ವಿಕಾಸವನ್ನು ಹೊಂದಿ ಸಂಕೋಚದಿಂದ ಮುಕ್ತನಾಗುತ್ತಾನೆ. ಈ ವಿಧವಾದ ವಿಸ್ತೃತಿಯನ್ನೇ ಯಜ್ಞದ ಉದ್ದಿಶ್ಯವನ್ನಾಗಿಟ್ಟುಕೊಳ್ಳಬೇಕು. ಸಂಕೋಚವನ್ನು ಹೊಂದಿದ ವಿಶ್ವಕರ್ಮನೂ ಈ ಯಜ್ಞದಿಂದಲೇ ತನ್ನ ವಿಶ್ವಪ್ರಕಟನರೂಪವಾದ ವಿಸ್ತೃತಿಯನ್ನು ಹೊಂದಿದನು ಎಂಬುದೇ ಪ್ರಕೃತವಾದ ಋಕ್ಕಿನ ತಾತ್ಪರ್ಯ.

॥ ಸಂಹಿತಾಪಾಠಃ ॥

ವಾಚಸ್ಪತಿಂ ವಿಶ್ವಕರ್ಮಾಣಮೂತಯೇ ಮನೋಜುವಂ ವಾಜೇ ಅದ್ಯಾ
ಹುವೇಮ ।
ಸ ನೋ ವಿಶ್ವಾನಿ ಹವನಾನಿ ಜೋಷದ್ವಿಶ್ವಶಂಭೂರವಸೇ ಸಾಧುಕರ್ಮಾ ॥

॥ ಪದಪಾಠಃ ॥

ವಾಚಃ । ಪತಿಂ । ವಿಶ್ವಽಕರ್ಮಾಣಂ । ಊತಯೇ । ಮನಃಽಜುವಂ । ವಾಜೇ । ಅದ್ಯ । ಹುವೇಮ ।
ಸಃ । ನಃ । ವಿಶ್ವಾನಿ । ಹವನಾನಿ । ಜೋಷತ್ । ವಿಶ್ವಽಶಂಭೂಃ । ಅವಸೇ । ಸಾಧುಽಕರ್ಮಾ ॥ ೭ ॥

॥ ಸಾಯಣಭಾಷ್ಯಂ ॥

ವಾಚಸ್ಪತಿಂ ಮಂತ್ರಾತ್ಮಕಸ್ಯ ವಚಸಃ ಸ್ವಾಮಿನಂ ವಿಶ್ವಕರ್ಮಾಣಂ ವಿಶ್ವಕರ್ತಾರಂ ಮನೋಜುವಂ ಮನೋವೇಗಗಮನಂ ವಾಜೇ ಯಜ್ಞೇಽದ್ಯಾಸ್ಮಿನ್ದಿನ ಊತಯೇ ತರ್ಪಣಾಯ ಹುವೇಮ । ಆಹ್ವಯಾಮ । ಸ ದೇವೋ ನೋಽಸ್ಮಾಕಂ ವಿಶ್ವಾನಿ ಸರ್ವಾಣಿ ಹವನಾನಿ ಜೋಷತ್ । ಸೇವತಾಂ । ಕಿಮರ್ಥಂ । ಅವಸೇಽಸ್ಮಾಕಂ ರಕ್ಷಣಾಯ । ಸ ವಿಶೇಷ್ಯತೇ । ವಿಶ್ವಶಂಭೂರ್ವಿಶ್ವಸ್ಯ ಸುಖಸ್ಯೋತ್ಪಾದಕಃ ಸಾಧುಕರ್ಮಾ ಚ ॥

।ಪ್ರತಿಪದಾರ್ಥ।

**ವಾಚಸ್ಪತಿಂ**—ಮಂತ್ರರೂಪವಾದ ವಾಕ್ಕುಗಳಿಗೆ ಒಡೆಯನೂ । **ವಿಶ್ವಕರ್ಮಾಣಂ**—ಸಕಲಜಗತ್ತಿಗೂ ನಿರ್ಮಾಪಕನೂ । **ಮನೋಜುವಂ**—ಮನಸ್ಸಿನಂತೆ ವೇಗವುಳ್ಳವನೂ ಆದ ವಿಶ್ವಕರ್ಮನನ್ನು । **ವಾಜೇ**—ಯಜ್ಞದಲ್ಲಿ । **ಅದ್ಯ**—ಈಗ । **ಊತಯೇ**—ರಕ್ಷಣಾರ್ಥವಾಗಿ । **ಹುವೇಮ**—ಕರೆಯುತ್ತೇವೆ । **ವಿಶ್ವಶಂಭೂಃ**—ಎಲ್ಲರಿಗೂ ಮಂಗಳವನ್ನುಂಟುಮಾಡುವವನೂ । **ಸಾಧುಕರ್ಮಾ**—ಉತ್ತಮವಾದ ಕರ್ಮವುಳ್ಳವನೂ ಆದ । **ಸಃ**—ವಿಶ್ವಕರ್ಮದೇವನು । **ನಃ**—ನಮ್ಮ । **ವಿಶ್ವಾನಿ ಹವನಾನಿ**—ಸಕಲ ಆಹ್ವಾನಗಳನ್ನೂ । **ಅವಸೇ**—ನಮ್ಮ ರಕ್ಷಣಾರ್ಥವಾಗಿ । **ಜೋಷತ್**—ಸೇವಿಸಲಿ.

॥ ಭಾವಾರ್ಥ ॥

ಮಂತ್ರರೂಪವಾದ ವಾಕ್ಕುಗಳಿಗೆ ಒಡೆಯನೂ, ಸಕಲ ಜಗತ್ತಿಗೂ ನಿರ್ಮಾಪಕನೂ, ಮನಸ್ಸಿನಂತೆ ವೇಗವುಳ್ಳವನೂ ಆದ ವಿಶ್ವಕರ್ಮನನ್ನು ಈಗ ಯಜ್ಞದಲ್ಲಿ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಎಲ್ಲರಿಗೂ ಮಂಗಳವನ್ನುಂಟುಮಾಡುವವನೂ, ಉತ್ತಮವಾದ ಕರ್ಮವುಳ್ಳವನೂ ಆದ ವಿಶ್ವಕರ್ಮದೇವನು ನಮ್ಮ ಸಕಲ ಆಹ್ವಾನಗಳನ್ನು ನಮ್ಮ ರಕ್ಷಣಾರ್ಥವಾಗಿ ಸೇವಿಸಲಿ (ಕೇಳಲಿ).

## English Translation

Let us this day invoke for our protection the lord of speech, the creator of all, who is swift as thought; may he, the bestower of all happiness, the doer of good works, be propitiated by all our oblations, (so as) to grant us his protection.

|| ವಿಶೇಷವಿಷಯಗಳು ||

ಜಗತ್ತಿನ ಸೃಷ್ಟಿಗೂ, ಪೌಷ್ಕಲ್ಯಕ್ಕೂ, ಜಗದ್ವೃದ್ಧಿಗೂ ವಿಶ್ವಕರ್ಮನ ಆತ್ಮಯಜ್ಞವೇ ಮೂಲಕಾರಣವೆಂದು ಹಿಂದಿನ ಋಕ್ಕುಗಳು ಪ್ರಶಂಸಿಸಿವೆ. ಅದೇ ವಿಶ್ವಕರ್ಮನನ್ನು ಪ್ರಕೃತವಾದ ಋಕ್ಕಿನಲ್ಲಿ–**ವಾಚಸ್ಪತಿಂ ವಿಶ್ವಕರ್ಮಾಣಂ** ಎಂದು ಸ್ತುತಿಸಿದೆ. ಯಜ್ಞರೂಪನೂ, ಸೃಷ್ಟಿಸ್ಥಿತಿಲಯಗಳಿಗೆ ಮೂಲಕಾರಣನೂ ಆದ ವಿಶ್ವಕರ್ಮನನ್ನು ಈ ವಿಶೇಷಣದಿಂದ ಪ್ರಕಟಿಸಿರುವುದು ಪ್ರಕೃತದಲ್ಲಿ ಅತ್ಯುಚಿತವಾಗಿರುತ್ತದೆ. ಈ ವಿಶೇಷಣದ ನಿಜವಾದ ತಾತ್ಪರ್ಯವನ್ನು ಇಲ್ಲಿ ಪರಿಶೀಲಿಸುವುದು ಅತ್ಯವಶ್ಯವಾಗಿರುತ್ತದೆ. ಸೃಷ್ಟಿ, ಸೃಷ್ಟಿಗೆ ಮೂಲವಾದ ಯಜ್ಞ, ಇವೆರಡಕ್ಕೂ ಕಾರಣನಾದ ವಿಶ್ವಕರ್ಮ, ಇವೇ ಪ್ರಕೃತವಾದ ಸೂಕ್ತದ ಮುಖ್ಯ ವಿಷಯ.

ಈ ಸಂದರ್ಭದಲ್ಲಿ **ವಾಚಸ್ಪತಿಂ** ಎಂಬ ವಿಶೇಷಣವು ಮೂರು ಅಂಶಗಳನ್ನು ತಿಳಿಸುವದಾಗಿದೆ. ಮೊದಲನೆಯದಾಗಿ,

೧) ವಾಕ್ಕಿಗೂ ವಿಶ್ವಕರ್ಮನಿಗೂ ಇರುವ ಸಂಬಂಧ.

೨) ಯಜ್ಞಾತ್ಮನಾದ ವಿಶ್ವಕರ್ಮನ ವಿಶ್ವಯಜ್ಞಕ್ಕೂ ವಾಕ್ಕಿಗೂ ಇರುವ ಕಾರ್ಯಕಾರಣಸಂಬಂಧ.

೩) ವಾಕ್ಕಿಗೂ ಮತ್ತು ಸೃಷ್ಟಿಸ್ಥಿತ್ಯಾದಿ ವಿಶ್ವಕರ್ಮನ ಕ್ರಿಯೆಗಳಿಗೂ ಇರುವ ನಿಯತವಾದ ಸಂಬಂಧ.

ಪ್ರಕೃತದಲ್ಲಿ ಈ ಮೂರು ಅಂಶಗಳನ್ನು ತಿಳಿಸುವ ವೈದಿಕವಾಕ್ಯಗಳ ಆಧಾರದ ಮೇಲೆ ಈ ವಿಷಯವನ್ನು ಪರಿಶೀಲಿಸಲಾಗುತ್ತದೆ. **ಚತ್ವಾರಿ ವಾಕ್ಪರಿಮಿತಾ ಪದಾನಿ**....... ||—(ಋ. ಸಂ. ೧-೧೬೪-೪೫) ಎಂಬ ಋಕ್ಕಿನ ವಿಶೇಷವಿಷಯಗಳನ್ನು ವಿವರಿಸುವಾಗ ನಾವು, ಆಖ್ಯಾತ ಇತ್ಯಾದಿ ವಾಗ್ವಿಭಾಗಗಳನ್ನು ವಿಸ್ತಾರವಾಗಿ ತಿಳಿಸಿದೆ. ಭೂಃ ಭುವಃ, ಸುವಃ ಎಂಬ ವ್ಯಾಹೃತ್ಯಾತ್ಮಕವಾದ ವಾಕ್ಸ್ವರೂಪವನ್ನು ವಿವರಿಸಿದೆ. (ಋಗ್ವೇದಸಂಹಿತಾ ಭಾಗ ೧೨ ಪು. 615-624) ಪ್ರಕೃತವಾದ ಅಂಶಗಳನ್ನು ಅಲ್ಲಿ ವಿವರಿಸಲು ಪ್ರಸಕ್ತಿಯಿರಲಿಲ್ಲ. ಆದುದರಿಂದ ಸಂದರ್ಭೋಚಿತವಾಗಿ ಮೇಲಿನ ಅಂಶಗಳನ್ನು ಈ ಪ್ರಕರಣದಲ್ಲಿ ಪರಿಶೀಲಿಸಲಾಗುತ್ತದೆ.

ತ್ರಿಲೋಕವ್ಯಾಪಕನಾಗಿಯೂ, ತ್ರಿಲೋಕಾತ್ಮಕನಾಗಿಯೂ ಇರುವ ವಿಶ್ವಕರ್ಮನಂತೆಯೇ ವಾಗ್ದೇವಿಯೂ, ವಿಶ್ವಾತ್ಮಕಳು ಮತ್ತು ವಿಶ್ವರೂಪಳು. ಇವಳ ಪತಿಯಾದುದರಿಂದಲೇ ವಿಶ್ವಕರ್ಮನಿಗೆ ವಾಚಸ್ಪತಿಯೆಂಬ ಹೆಸರೂ ಪ್ರಸಿದ್ಧಿಯಾಗಿದೆ. ಹೇಗೆಂದರೆ—

**ವಾಚಾ ವೇದಾಃ ಕ್ರಿಯಂತೇ ವಾಚಾ ಛಂದಾಂಸಿ ತತ್ರ ಹ |**
**ಅಥೋ ವಾಕ್ಸರ್ವಮೇವೇದಂ ತೇನ ವಾಚಸ್ಪತಿಸ್ಸ್ಮೃತಃ ||** (ಬೃ. ದೇ. ೨-೪೫)

ವಾಕ್ಕಿನ ಸಹಾಯದಿಂದಲೇ ವೇದಗಳು ಪಠಿಸಲ್ಪಡುತ್ತವೆ. ಛಂದಸ್ಸುಗಳೂ ವಾಕ್ಕಿನ ಆಧಾರದ ಮೇಲೆಯೇ ನಿರ್ಮಿತವಾಗಿರುತ್ತವೆ. ಸಕಲ ವಿಶ್ವವೂ ವಾಗ್ರೂಪವಾಗಿಯೇ ಇದೆ. ಆದುದರಿಂದಲೇ ವಾಚಸ್ಪತಿಯೆಂದು ಹೆಸರು. ಈ ವಾಕ್ಕೇ ಸರಸ್ವತಿಯೆಂದೂ ಕರೆಯಲ್ಪಡುತ್ತದೆ.

**ಸರಾಂಸಿ ಘೃತವಂತ್ಯಸ್ಯ ಸಂತಿ ಲೋಕೇಷು ಯತ್ರಿಷು ।**
**ಸರಸ್ವಂತಮಿತಿ ಪ್ರಾಹ ವಾಚಂ ಪ್ರಾಹುಃ ಸರಸ್ವತೀಂ ॥**

(ಬೃ. ದೇ. ೨-೫೧)

(ಬೃ. ದೇ. ೨-೫೦) ಹಿಂದಿನ ಶ್ಲೋಕದಲ್ಲಿ ವಿಶ್ವಕರ್ಮಶಬ್ದದ ನಿರ್ವಚನವಿರುತ್ತದೆ. ಅದೇ ವಿಶ್ವಕರ್ಮನು **ಸರಸ್ವಾನ್** ಎಂದೂ ಪ್ರಸಿದ್ಧನಾಗಿದ್ದಾನೆ. ಮೂರು ಲೋಕಗಳಲ್ಲಿಯೂ ಘೃತಪೂರ್ಣವಾದ ಸರಸ್ಸನ್ನು ಹೊಂದಿರುವುದರಿಂದ ಈ ಹೆಸರು. ವಿಶ್ವಕರ್ಮನು ಸರಸ್ವಾನ್ ಎಂದು ಪ್ರಸಿದ್ಧನಾಗಿದ್ದರೆ, **ವಾಗ್ದೇವಿಯು ಸರಸ್ವತೀ** ಎಂದು ಪ್ರಸಿದ್ಧಳಾಗಿದ್ದಾಳೆ. (ಸರಸ್ವಾನ್ ಎಂಬ ವಿಶೇಷಣವು ಕೇವಲ ವಿಶ್ವಕರ್ಮಪರವಾಗಿ ಮಾತ್ರವಿಲ್ಲ. ಮಧ್ಯಮಲೋಕವರ್ತಿಯಾದ ಇಂದ್ರನನ್ನಾಗಲಿ ಅಥವಾ ವೈದ್ಯುತಾಗ್ನಿಯನ್ನಾಗಲಿ ನಿರ್ದೇಶಿಸಬಹುದು ಎಂಬ ವಿಷಯವನ್ನು ಹಿಂದೆ ತಿಳಿಸಿದೆ).

ವಿಶ್ವಕರ್ಮಾ ಮತ್ತು ಪ್ರಜಾಪತಿ ಇವರಿಗಿರುವ ತಾದಾತ್ಮ್ಯವನ್ನು ಹಿಂದೆ ತಿಳಿಸಿದೆ. ಹೀಗೆಯೇ, ವಿಶ್ವಕರ್ಮಾ ಮತ್ತು ಬೃಹಸ್ಪತಿ ಈ ಎರಡು ವಿಶೇಷಣಗಳೂ ಒಂದೇ ತತ್ತ್ವವನ್ನು ಪ್ರತಿಪಾದಿಸುವುವು ಎಂಬುದೂ ಅನೇಕ ವಾಕ್ಯಗಳಿಂದ ತಿಳಿಯುತ್ತದೆ. ಬೃಹಸ್ಪತಿಯು ಬೇರೆಯಲ್ಲ ಮತ್ತು ಬ್ರಹ್ಮಣಸ್ಪತಿಯು ಬೇರೆಯಲ್ಲ. ಹೇಗೆಂದರೆ—

**ಬೃಹಂತೌ ಪಾತಿ ಯಲ್ಲೋಕಾವೇಷ ದ್ವೌ ಮಧ್ಯಮೋತ್ತಮೌ ।**
**ಬೃಹತಾ ಕರ್ಮಣಾ ತೇನ ಬೃಹಸ್ಪತಿರಿತೀಳಿತಃ ॥**

(ಬೃ. ದೇ. ೨-೩೯)

ಅತ್ಯಂತ ಬೃಹತ್ಸ್ವರೂಪವುಳ್ಳ ಮಧ್ಯಮಲೋಕ ಮತ್ತು ದ್ಯುಲೋಕಗಳನ್ನು ಪಾಲಿಸುವುದರಿಂದ ಬೃಹಸ್ಪತಿಯೆಂದು ಹೆಸರು. ಅಲ್ಲದೇ ಬೃಹತ್ತಾದ ಕರ್ಮವುಳ್ಳವನಾದುದರಿಂದಲೂ ಬೃಹಸ್ಪತಿಯೆಂದೇ ಹೆಸರು ಎಂದು **ಬೃಹಸ್ಪತಿ** ಶಬ್ದದ ನಿರ್ವಚನವು ವಿಶ್ವಕರ್ಮನ ಮಹತ್ಕರ್ಮಕ್ಕನುಗುಣವಾಗಿದೆ. ಹಾಗೆಯೇ—

**ಬ್ರಹ್ಮ ವಾಗ್ಬ್ರಹ್ಮ ಸತ್ಯಂ ಚ ಬ್ರಹ್ಮ ಸರ್ವಮಿದಂ ಜಗತ್।**
**ಪಾತಾರಂ ಬ್ರಹ್ಮಣಸ್ತೇನ ಶೌನಹೋತ್ರಸ್ತುವನ್ ಜಗೌ ॥** (ಬೃ. ದೇ. ೨-೪೦)

ವಾಕ್ಕೇ ಬ್ರಹ್ಮರೂಪವು. ಬ್ರಹ್ಮವೇ ಸತ್ಯಸ್ವರೂಪವು. ಈ ಸಕಲ ಜಗತ್ತೂ ಬ್ರಹ್ಮಮಯ. (ಆದುದರಿಂದಲೇ ವಾಙ್ಮಯ). ಈ ಕಾರಣದಿಂದ ಶುನಹೋತ್ರನ ಪುತ್ರನಾದ ಗೃತ್ಸಮದನು ಬ್ರಹ್ಮಣಸ್ಪತಿಯೆಂದು ಈ ಆದಿತತ್ತ್ವವನ್ನು ಪ್ರಶಂಸಿಸಿದನು.

ಜಗತ್ಕಾರಣನಾದ ವಿಶ್ವಕರ್ಮನು ಯಾವ ರೀತಿ ತ್ರಿಲೋಕವ್ಯಾಪಿಯೋ, ಹಾಗೆಯೇ ತತ್ಸ್ವರೂಪಗಳೇ ಆದ (**ಬ್ರಹ್ಮ ವಾಕ್**) ವಾಗ್ದೇವಿಯು ತ್ರಿಲೋಕವ್ಯಾಪಕಳಾಗಿದ್ದಾಳೆ. **ಉಷಸ್ಸೇ** ಮುಂತಾದ ಉಳಿದ ಸಕಲದೇವತೆಗಳೂ ಈ ವಾಗ್ದೇವಿಯ ರೂಪಾಂತರಗಳೇ ಆಗಿದ್ದಾರೆ. ಹೇಗೆಂದರೆ—

**ಪಾರ್ಥಿವೀ ಮಧ್ಯಮಾ ದಿವ್ಯಾ ವಾಗಪಿ ತ್ರಿವಿಧಾ ತು ಯಾ ।**
**ತಸ್ಯಾಃ ಸೂಕ್ತಾನಿ ನಾಮಾನಿ ಯಥಾಸ್ಥಾನಂ ನಿಬೋಧತ ॥**

(ಬೃ. ದೇ. ೨-೭೨)

ವಾಗ್ದೇವಿಯು ಮೂರು ಲೋಕಗಳನ್ನು ವ್ಯಾಪಿಸಿದಾಳೆ. ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರಕ್ಕೂ ಅಧಿದೇವತೆಯು ಇವಳೇ ಅಲ್ಲದೇ ಬೇರೆಯಿಲ್ಲ. ಆದರೆ, ಆಯಾ ಲೋಕಕ್ಕನುಗಣವಾದ ಕ್ರಿಯಾವಿಶೇಷಕ್ಕನುಗುಣವಾಗಿ ಅವಳ ನಾಮನಿರ್ದೇಶವೂ ಪ್ರಶಂಸೆಯೂ ಇರುತ್ತದೆ. ಅದರ ಕ್ರಮವು ಈ ರೀತಿಯಿದೆ.

**ಕೃತ್ಸ್ನಂ ತು ಭಜತೇ ಸೂಕ್ತಂ ಏಷಾ ನದ್ಯಃ ಸ್ತುತಾ ಭುವಿ ।**
**ಯದಾ ಚೈನಂ ಭಜಂತ್ಯಾಪೋ ಯದಾ ಚೌಷಧಯೋ ಯದಾ ॥**

(ಬೃ, ದೇ. ೨-೭೩)

ಪೃಥ್ವಿಯ ಮೇಲಿರುವ ನದಿಗಳಾಗಲಿ, ಇತರ ರೂಪವಾದ ಸಲಿಲಗಳಾಗಲಿ ಅಥವಾ ಓಷಧಿಗಳಾಗಲಿ ಋಕ್ಕುಗಳಿಂದ ಪ್ರಶಂಸಿಸಲ್ಪಡುವಾಗ, ಆ ಸೂಕ್ತದ ಸಕಲ ಋಕ್ಕುಗಳೂ ಈ ವಾಗ್ದೇವಿಯನ್ನೇ ಪ್ರಶಂಸಿಸುವುವಾಗಿವೆ.

**ಅರಣ್ಯಾನೀ ಚ ರಾತ್ರೀ ಚ ಶ್ರದ್ಧಾ ಚೋಷಾಃ ಸರಸ್ವತೀ ।**
**ಪೃಥಿವೀ ಚೈವ ನಾಮ್ನೈಷಾ ಭೂತ್ವಾಪೃಥಕ್ತ್ವಂ ಭಜಂತಿ ಚ ॥**

(ಬೃ. ದೇ. ೨-೭೪)

ಅರಣ್ಯಾನೀ, ರಾತ್ರಿಃ, ಶ್ರದ್ಧಾ, ಉಷಾಃ, ಪೃಥ್ವೀ ಇತ್ಯಾದಿ ನಾಮಯುಕ್ತಳಾದ ಈ ಸರಸ್ವತಿಯು (ವಾಗ್ದೇವಿಯು) ಋಕ್ಕುಗಳ ಪ್ರಶಂಸೆಗೆ ಪಾತ್ರಳಾಗಿದ್ದಾರೆ.

**ಅಗ್ನಾಯೀ ನಾಮತೋಽಪ್ಯೇಷಾ ಭೂತ್ವಾಗ್ನೇಯೇಷು ಕೇಷುಚಿತ್ ।**
**ಸ್ತುತಾ ನಿಪಾತಮಾತ್ರೇಣ ತತ್ರ ತತ್ರೇಹ ದೃಶ್ಯತೇ ॥**

(ಬೃ. ದೇ. ೭- ೭೫)

ಇವಳಿಗೆ ಅಗ್ನಾಯೀ ಎಂಬ ನಾಮಧೇಯವೂ ಉಂಟು. ಅಗ್ನಿಗೆ ಸಂಬಂಧಿಸಿದ ಕೆಲವು ಸೂಕ್ತಗಳಲ್ಲಿ (೧-೨೨-೧೨ ; ೫-೪೬-೮) ಈ ದೇವತೆಯು ಪ್ರಶಂಸೆಯಿರುತ್ತದೆ.

**ಮಧ್ಯೇ ಸತ್ಯದಿತಿರ್ವಾಕ್ ಚ ಭೂತ್ವಾ ಚೈಷಾ ಸರಸ್ವತೀ ।**
**ಸಮಗ್ರಂ ಭಜತೇ ಸೂಕ್ತಂ ತ್ರಿಭಿರೇವ ತು ನಾಮಭಿಃ ॥**

(ಬೃ. ದೇ. ೭-೭೬)

ಮಧ್ಯಲೋಕ ವರ್ತಿಯಾಗಿದ್ದಾಗ ವಾಗ್ದೇವಿಯು, **ವಾಕ್**, **ಅದಿತಿ** ಮತ್ತು **ಸರಸ್ವತೀ** ಎಂಬ ನಾಮಾಂಕಿತಳಾಗಿ ಸೂಕ್ತಭಾಕ್ಕಾಗುತ್ತಾಳೆ.

**ಏಷೈವ ದುರ್ಗಾ ಭೂತ್ವೈಕಂ ಕೃತ್ವಾ ಸ್ಯಾತ್ಸೂಕ್ತಭಾಗಿನೀ ।**
**ತನ್ನಾಮಾನಿ ಯಮೀಂದ್ರಾಣೀ ಸರಮಾ ರೋಮಶೋರ್ವಶೀ ।**
**ಭವತ್ಯಗ್ರ್ಯಾ ಸಿನೀವಾಲೀ ರಾಕಾ ಚಾನುಮತಿಃ ಕುಹೂಃ ।**

**ಗೌರ್ಧೇನುರ್ದೇವಪತ್ನ್ಯೋಽಘ್ನ್ಯಾ ಪಥ್ಯಾ ಸ್ವಸ್ತಿಶ್ಚ ರೋದಸೀ ।**
**ನೌಪಾತಿಕಾನಿ ಖುಗ್ಬಾಂಜಿ ಯೇಷಾಂ ನಾಮಾನಿ ಕಾನಿಚಿತ್ ॥**

(ಬೃ. ದೇ. ೨-೭೭,೭೮)

ಯಮಿಾ, ಇಂದ್ರಾಣೀ, ಸರಮಾ, ರೋಮಶಾ, ಉರ್ವಶೀ ಎಂಬುವೂ ಇವಳ ನಾಮಧೇಯಗಳು. ಪ್ರಥಮತಃ ಈ ವಾಗ್ದೇವಿಯು ಸಿನೀವಾಲೀ, ರಾಕಾ, ಅನುಮತಿ, ಕುಹೂಃ, ಗೌಃ, ಧೇನು, ದೇವಪತ್ನೀ, ಅಘ್ನ್ಯಾ, ಪಥ್ಯಾಸ್ವಸ್ತಿ, ರೋದಸೀ ಇತ್ಯಾದಿ ನಾಮಗಳಿಂದ ನಿರ್ದಿಷ್ಟಳಾಗುತ್ತಾಳೆ.

**ಯದಾ ತು ವಾಗ್ಭವತ್ಯೇಷಾ ಸೂರ್ಯಾಮುಂ ಲೋಕಮಾಶ್ರಿತಾ ।**
**ತಥಾ ಸೂಕ್ತಮುಷಾ ಭೂತ್ವಾ ಸೂರ್ಯಾ ಚ ಭಜತೇಽಖಿಲಂ ॥**

(ಬೃ. ದೇ. ೨-೭೯)

ಈ ವಾಗ್ದೇವಿಯು ಸೂರ್ಯಾಭಿಧಾನದಿಂದ ಕರೆಯಲ್ಪಡುವಾಗ ದ್ಯುಲೋಕಸ್ಥಳಾಗಿರುತ್ತಾಳೆ. ದ್ಯುಲೋಕಸ್ಥಳಾಗಿ ಸೂರ್ಯಾರೂಪದಲ್ಲಿಯೂ, ಉಷಸ್ಸಿನ ರೂಪದಲ್ಲಿಯೂ ಪ್ರಕಾಶಿಸುವಾಗ ಇವಳನ್ನು ಪ್ರಶಂಸಿಸುವ ಪೂರ್ಣವಾದ ಸೂಕ್ತಗಳೇ ಇರುತ್ತವೆ. (೧೦-೮೫ ನೇ ಸೂಕ್ತವು ಸೂರ್ಯಾಪರವಾದುದು. ಉಷಸ್ಸನ್ನುದ್ದೇಶಿಸಿ ನಿರ್ಮಿತವಾಗಿರುವ ಸೂಕ್ತಗಳು ಬಹಳ). ಹೀಗೆಯೇ, ವೃಷಾಕಪಾಯಿಾ, ಸರಣ್ಯೂ, ಗೌರೀ ಇತ್ಯಾದಿ ನಾಮಗಳಿಂದಲೂ ಪ್ರಸಿದ್ಧಳಾಗಿದ್ದಾಳೆ. ಆದುದರಿಂದ ಮೂರು ಲೋಕಗಳಲ್ಲೂ ಯಾವಯಾವ ಸ್ತ್ರೀದೇವತೆಗಳು ಪ್ರಶಂಸಿತರಾಗಿದ್ದಾರೆಯೋ, ಅವರೆಲ್ಲರೂ ಈ ವಾಗ್ದೇವಿಯ ರೂಪಾಂತರಗಳು.

**ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತ್ರಿಸ್ಥಾನೈವೇಹ ಸಾ ತು ವಾಕ್ ।**
**ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತಿನೀ ॥** (ಬೃ. ದೇ. ೩-೧೨)

ಹಿಂದೆ ಹೇಳಿದುದೇ (೨-೭೨) ಇಲ್ಲಿಯೂ ಪುನರುಕ್ತವಾಗಿದೆ. ಆದರೆ ಮೂರು ಜ್ಯೋತೀರೂಪಗಳೆಂಬುದು ಇಲ್ಲಿಯ ವಿಶೇಷಾಂಶ. ಮೂರು ಲೋಕಗಳಲ್ಲಿಯೂ ಇರುವ ಅಗ್ನಿ, ವಾಯು ಅಥವಾ ಇಂದ್ರ ಮತ್ತು ಆದಿತ್ಯ ಎಂಬ ಈ ಮೂರು ಲೋಕಾಧಿದೇವತೆಗಳ ಸಂಬಂಧಿಯಾದ ತೇಜೋರೂಪಾಂತರಗಳೇ ಈ ವಾಕ್ಕಿನ ಸ್ವರೂಪವಿಶೇಷಗಳು. ಈ ಮೂರು ರೂಪಗಳೂ ಹೇಗಿರುತ್ತಾರೆಂದರೆ—

**ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।**
**ಅಮುಂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥** (ಬೃ. ದೇ. ೩-೧೩)

ಪಾರ್ಥಿವಾಗ್ನಿಯನ್ನು **ಇಳಾ**ರೂಪದಿಂದ ಅನುಸರಿಸುತ್ತಾಳೆ. **ಸರಸ್ವತೀ**ರೂಪದಿಂದ ಮಧ್ಯಮಲೋಕದ ಇಂದ್ರ ಅಥವಾ ವೈದ್ಯುತಾಗ್ನಿಯನ್ನೂ, ದ್ಯುಲೋಕಸ್ಥಳಾಗಿ **ಭಾರತೀ**ರೂಪದಲ್ಲಿ ಆದಿತ್ಯನನ್ನೂ ಹಿಂಬಾಲಿಸುತ್ತಾಳೆ.

**ಸೈಷಾ ತು ತ್ರಿವಿಧಾ ವಾಗ್ಸ್ಯೈ ದಿವಿ ಚ ವ್ಯೋಮ್ನಿ ಚೇಹ ಚ ।**
**ವ್ಯಸ್ತಾ ಚೈವ ಸಮಸ್ತಾ ಚ ಭಜತ್ಯಗ್ನೀನಿಮಾನಪಿ ॥**

(ಬೃ. ದೇ. ೩-೧೪)

ಒಂದೇ ವಾಕ್ತತ್ತ್ವವು ಮೂರು ಲೋಕಗಳಲ್ಲೂ (ವಿಶ್ವಕರ್ಮನ ರೂಪವಿಶೇಷಗಳನ್ನನುಸರಿಸಿ) ಮೂರು ರೂಪಗಳಿಂದ ವ್ಯಾಪಿಸಿದೆ. ಅಗ್ನಿಯು ಮೂರುರೂಪಗಳನ್ನು ಸಹ ವ್ಯಸ್ತವಾಗಿಯಾಗಲಿ (ಬೇರೆಬೇರೆಯಾದ ರೂಪಗಳಿಂದಾಗಲಿ) ಅಥವಾ ಒಟ್ಟುಗೂಡಿದ ಸಮಸ್ತರೂಪದಿಂದಾಗಲಿ ಸೇವಿಸುತ್ತಾಳೆ ಮತ್ತು ತಾದಾತ್ಮ್ಯವನ್ನೇ ಹೊಂದುತ್ತಾಳೆ.

ವರುಣ ಮತ್ತು ಪ್ರಜಾಪತಿಗಳ ರೇತಸ್ಸಿನಿಂದ ಉತ್ಪನ್ನರಾದ **ಭೃಗು, ಅಂಗಿರಸ್ಸು** ಮತ್ತು **ಅತ್ರಿ** ಈ ಮೂರು ಋಷಿಗಳೂ ವಾಗ್ದೇವಿಯ ಪುತ್ರರೆಂದು ಹಿಂದೆ ತಿಳಿಸಿದೆ, (ಬೃ. ದೇ. ೫-೯೮-೧೦೦) ಈ ಮೂರು ಋಷಿಗಳೂ ಅಗ್ನಿಯ ದಿವ್ಯಾಂಶವನ್ನೇ ಹೊಂದಿರುವರೆಂದೂ ಸಹ ಆಯಾ ಋಷಿಗಳ ದಿವ್ಯಚರಿತ್ರವನ್ನು ವಿವರಿಸುವಾಗ ತಿಳಿಸಿದೆ. ಎಂದರೆ, ಅಗ್ನಿಯ ದಿವ್ಯಾಂಶಗಳೂ ಸಹ ವಾಗ್ದೇವಿಯ ಪ್ರಭಾವದಿಂದಲೇ ಜನಿಸಿದವು ಎಂದು ಹೇಳಿದರೂ ತಪ್ಪಾಗಲಾರದು, ಈ ರೀತಿ ವಿಶ್ವವ್ಯಾಪಕತ್ವವಿರುವುದರಿಂದಲೇ **ಯದ್ವಾಗ್ವದಂತೀ ; ದೇವೀಂ ವಾಚಮಜನಯಂತ** (ಋ. ಸಂ. ೮-೧೦೦-೧೦, ೧೧) ಎಂಬ ಮಂತ್ರಗಳಿಂದ ಸರ್ವವ್ಯಾಪಕಳಾದ ವಾಗ್ದೇವಿಯು ಸ್ತುತಳಾಗಿದ್ದಾಳೆಂದ ತಿಳಿಸಿದೆ,

**ವಾಚಂ ಸರ್ವಗತಾಂ ದೇವೀಂ ಸ್ತೌತಿ ಯದ್ವಾಗಿತಿ ದ್ವ್ಯೃಚೇ ॥**

(ಬೃ. ದೇ. ೬-೧೨೧)

ಎಂದು ಬೃಹದ್ದೇವತೆಯಲ್ಲಿಯೂ ವಾಕ್ಕಿನ ಮಹಿಮೆಯು ಪ್ರಶಂಸಿಸಲ್ಪಟ್ಟಿದೆ. ಈ ವಾಗ್ದೇವಿಯು ಪ್ರತ್ಯೇಕವಾದ ದೇವತೆಯೋ ಅಥವಾ ವಿಶ್ವಕರ್ಮನ ದಿವ್ಯಾಂಶವೇ, ಎಂದರೆ ಅದಕ್ಕೆ ಉತ್ತರವಾಗಿ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ವಿಶ್ವಕರ್ಮಋಷಿರಿತಿ । ವಾಗ್ವೈ ವಿಶ್ವಕರ್ಮಋಷಿರ್ವಾಚಾ ಹೀದಗ್ಂ ಸರ್ವಂ ಕೃತಂ ತಸ್ಮಾದ್ವಾಗ್ವಿಶ್ವಕರ್ಮರ್ಷಿಃ ಪ್ರಜಾಪತಿಗೃಹೀತಯಾ ತ್ವಯೇತಿ ಪ್ರಜಾಪತಿಸೃಷ್ಟಯಾ ತ್ವಯೇತ್ಯೇತದ್ವಾಚಂ ಗೃಹ್ಣಾಮಿ ಪ್ರಜಾಭ್ಯ ಇತಿ ವಾಚಮುಪರಿಷ್ಟಾತ್ಪ್ರಾಸಾದಯತ...... ॥**

(ಶ. ಬ್ರಾ. ೮-೧-೨-೯)

ಸಕಲ ಕರ್ಮವನ್ನು ಮಾಡತಕ್ಕ ವಿಶ್ವಕರ್ಮನೇ ವಾಕ್ಕಲ್ಲದೇ ಬೇರೆಯಿಲ್ಲ. ಜಗತ್ತಿನಲ್ಲಿರುವ ಯಾವ ವಸ್ತುವಾಗಲಿ ವಿಶ್ವಕರ್ಮನಿಂದ ಕೃತವಾದುದಲ್ಲದೇ ಬೇರಿಲ್ಲ. ಉತ್ಪನ್ನವಾದ ಸಕಲವೂ ವಾಗ್ರೂಪವಾದ ವ್ಯವಹಾರಕ್ಕೆ ಸೇರಿರುತ್ತದೆ. ಆದುದರಿಂದ ವಿಶ್ವಕರ್ಮನಿಗೂ ವಾಕ್ಕಿಗೂ ಅಭೇದವಿರುತ್ತದೆ. ಪ್ರಜಾಪತಿಯಿಂದ ನಿರ್ಮಿತವಾದ ಈ ವಾಕ್ಕನ್ನು ನನ್ನ ಪ್ರಜೆಗಳ ಶ್ರೇಯಸ್ಸಿಗಾಗಿ ಪ್ರತಿಗ್ರಹಿಸುತ್ತೇನೆ ಎಂದು ಯಜಮಾನನು ಸಂಕಲ್ಪಿಸುತ್ತಾನೆ. ಅಲ್ಲದೇ

**ಸಾ ವಾ ಏಷಾ ವಾಕ್ತ್ರೇಧಾ ವಿಹಿತಾ । ಋಚೋ ಯಜೂಗ್ಂಷಿ ಸಾಮಾನಿ ಮಂಡಲಮೇವರ್ಚೋಽರ್ಚಿಃ ಸಾಮಾನಿ ಪುರುಷೋ ಯಜೂಗ್ಂಷ್ಯಥೈತದಮೃತಂ ಯದೇತದರ್ಚಿ-ರ್ದೀಪ್ಯತ ಇದಂ ತತ್ಪುಷ್ಕರಪರ್ಣಂ ...... ...... ॥**

(ಶ. ಬ್ರಾ. ೧೦-೫-೧-೫)

ಋಕ್, ಯಜುಸ್ ಮತ್ತು **ಸಾಮ** ಎಂಬ ಪ್ರಭೇದಗಳುಳ್ಳದ್ದಾಗಿ ವಾಕ್ಕು ಮೂರು ವಿಭಾಗಾತ್ಮಕವಾಗಿದೆ. ಪೂರ್ಣವಾದ ವಾಕ್ತತ್ತ್ವವು ವಿಶ್ವಾತ್ಮಕನಾದ ಆದಿತ್ಯಾಂತರ್ಗತನಾದ ಪುರುಷನನ್ನು ಪ್ರತಿಬಿಂಬಿಸಿದರೆ, ಋಙ್ಮಂತ್ರವು ಆದಿತ್ಯನ ಮಂಡಲವನ್ನೂ, ಸಾಮವು ತೇಜಸ್ಸನ್ನೂ, ಯಜುರ್ಮಂತ್ರಗಳು ಆದಿತ್ಯಾಂತರ್ಗತನಾದ ಪುರುಷನನ್ನೂ ಪ್ರತಿಬಿಂಬಿಸುತ್ತವೆ. ಹೀಗೆ ವಿಶ್ವಕರ್ಮಪ್ರತಿಬಿಂಬಿಯಾದ ವಾಕ್ತತ್ತ್ವವು ಸರ್ವವ್ಯಾಪಕನೂ ಸರ್ವಶಕ್ತವೂ ಆಗಿರುತ್ತದೆ.

೨

## ಸೃಷ್ಟಿಗೆ ಮೂಲವಾದ ಯಜ್ಞತತ್ತ್ವಕ್ಕೂ ವಾಕ್ಕಿಗೂ ಇರುವ ಪರಸ್ಪರ ಸಂಬಂಧ

ಹಿಂದೆ ಋ. ಸಂ. ೧-೧೬೪-೩೫ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಾಕ್ಕಿಗೂ, ವಿಶ್ವನಾಭಿಯಾದ ಯಜ್ಞವೇದಿಕೆಗೂ ಇರುವ ಸಂಬಂಧವನ್ನು ವಿವರಿಸಿದೆ. **ಬ್ರಹ್ಮಾಯಂ ವಾಚಃ ಪರಮಂ ವ್ಯೋಮ** ಎಂಬ ವಾಕ್ಯದ ತಾತ್ಪರ್ಯವನ್ನು ವಿವರಿಸಿದೆ. ವಾಕ್ಕಿಗೆ ಪ್ರಜಾಪತಿಯೇ ವಾಗ್ರೂಪನು. ವಾಗ್ರೂಪಿಯಾದ ಇವನಿಗೆ ಜಿಹ್ವೆಯೇ ಆಯತನವು. ಆಕಾಶವೇ ಪ್ರತಿಷ್ಠಾಸ್ಥಾನವು ಇತ್ಯಾದ್ಯಂಶಗಳನ್ನು ವಿವರಿಸಿದೆ (ಋಗ್ವೇದಸಂಹಿತಾ ಭಾಗ ೧೨).

ಸೃಷ್ಟಿಗೆ ಸ್ತ್ರೀಪುರುಷರ ಸಂಬಂಧವೇ ಮೂಲಕಾರಣವು. ಯಜ್ಞವು ಜಗತ್ಸೃಷ್ಟಿಗೆ ಮೂಲಕಾರಣವಾಗಬೇಕಾದರೆ ಅದಕ್ಕೂ ಸ್ತ್ರೀಸಂಬಂಧದಿಂದ ಮಾತ್ರ ಸಾಧ್ಯ. ವಾಕ್ಕೇ ಆ ಸ್ತ್ರೀ ಎಂಬ ವಿಷಯವು ಪ್ರಸಿದ್ಧವಾಗಿದೆ. ಪುಂರೂಪವಾದ ಯಜ್ಞಕ್ಕೂ ಸ್ತ್ರೀರೂಪಿಯಾದ ವಾಕ್ಕಿಗೂ ಸಂಭವಿಸಿದ ಸಂಬಂಧವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> **ದೇವಾಶ್ಚ ವಾಸುರಾಶ್ಚೋಭಯೇ ಪ್ರಾಜಾಪತ್ಯಾಃ ಪ್ರಜಾಪತೇಃ ಪಿತುರ್ದಾಯಮುಪೇಯು-ರ್ಮನ ಏವ ದೇವಾ ಉಪಾಯನ್ವಾಚಮಸುರಾ ಯಜ್ಞಮೇವ ತದ್ದೇವಾ ಉಪಾಯನ್ವಾಚ-ಮಸುರಾಃ ॥**
>
> (ಶ. ಬ್ರಾ. ೩-೨-೧-೧೮)

ಪ್ರಜಾಪತಿಯಿಂದ ಉತ್ಪನ್ನರಾದ ದೇವತೆಗಳೂ ಮತ್ತು ಅಸುರರೂ ಸಹ ತಮ್ಮ ಪಿತೃವಿನ ಸ್ವತ್ತನ್ನು ಹಂಚಿಕೊಳ್ಳಬೇಕೆಂದಾಶಿಸಿ, ಪ್ರಜಾಪತಿಯ ಅಂಶವಾದ ಮನಸ್ಸು, ವಾಕ್ಕು, ಯಜ್ಞ ಇವುಗಳನ್ನು ಪಡೆಯಲು ಯತ್ನಿಸಿದರು. ದೇವತೆಗಳು ಮನಸ್ಸು ಮತ್ತು ಯಜ್ಞವನ್ನು ಪಡೆದರು. ಅಸುರರು ವಾಕ್ಕನ್ನು ಹೊಂದಿದರು.

> **ತೇ ದೇವಾ ಯಜ್ಞಮಬ್ರುವನ್ । ಯೋಷಾ ವಾ ಇಯಂ ವಾಗುಪಮಂತ್ರಯಸ್ವ ಹ್ವಯಿಷ್ಯತೇ ವೈ ತ್ವೇತಿ ಸ್ವಯಂ ವಾ ಹೈವೈಕ್ಷತ ಯೋಷಾ ವಾ ಇಯಂ ವಾಗುಪಮಂತ್ರಯೈ............ ॥**
>
> (ಶ. ಬ್ರಾ. ೩-೨-೧-೧೯)

"ಎಲೈ ಯಜ್ಞವೇ, ನೀನು ಪುಂರೂಪನು. ನಿನಗೆ ಸ್ತ್ರೀರೂಪಿಯಾದ ವಾಕ್ಕಿನ ಸಂಬಂಧವು ದೊರೆತರೆ ಆಗ ಶೋಭಿಸುತ್ತದೆ. ನೀನು ಅವಳಿಗೆ ನಿನ್ನ ಇಚ್ಛೆಯನ್ನು ತೋರಿಸಿ ಕರೆದರೆ ಅವಳು ನಿನ್ನನ್ನು ತನ್ನ ಸಮೀಪಕ್ಕೆ ಕರೆಯುವಳು" ಎಂದು ದೇವತೆಗಳು ಹೇಳಿದಾಗ ಯಜ್ಞವೂ ಸಹ ಇದಕ್ಕೆ ಅನುಮೋದಿಸಿತು. ಅದರಂತೆಯೇ ವಾಕ್ಕನ್ನು ಕರೆದಾಗ ಪ್ರಥಮತಃ ವಾಕ್ಕು ಈ ಆಹ್ವಾನವನ್ನು ನಿರಾಕರಿಸಿತು. ಈ ವಿಷಯವನ್ನು ಯಜ್ಞವು ದೇವತೆಗಳಿಗೆ ತಿಳಿಸಿದಾಗ,

**ತೇ ಹೋಚುಃ । ಉಪೈವ ಭಗವೋ. ಮಂತ್ರಯಸ್ವ । ಹ್ವಯಿಷ್ಯತೇ ನ್ವೈ ತ್ವೇತಿ ತ್ವಾಮುಪಾ-ಮಂತ್ರಯತ ॥**

(ಶ. ಬ್ರಾ. ೩-೨-೧-೨೦)

“ನೀನು ವಾಕ್ಕನ್ನು ಸಮಿಾಪಿಸಿ ಕರೆ. ಸ್ತ್ರೀಸ್ವಭಾವವೇ ಅಂತಹುದು. ಪ್ರಥಮತಃ ನಿರಾಕರಿಸುತ್ತಾಳೆ” ಎನ್ನಲು ಯಜ್ಞವು ಹಾಗೆಯೇ ಸ್ತ್ರೀರೂಪಿಯಾದ ವಾಕ್ಕನ್ನು ಸಮಿಾಪಿಸಿ ಕರೆದಾಗ ವಾಕ್ಕು ತನ್ನ ತಲೆಯನ್ನು ಮಾತ್ರ ಅಲ್ಲಾಡಿಸಿ ತನ್ನ ಅನುಮತಿಯನ್ನು ಸೂಚಿಸಿತು. ಹಾಗೆಯೇ ಪುನಃ ಕರೆಯಲು ವಾಕ್ಕು ಪೂರ್ಣವಾಗಿ ಸಮ್ಮತಿಸಿತು. ಆಗ ವಾಕ್ಕಿಗೂ ಅಸುರರಿಗೂ ವಿಚ್ಛೇದವುಂಟಾಯಿತು. ಯಜ್ಞವು ವಾಕ್ಕಿನೊಡನೆ ಸೇರಿಕೊಂಡಿತು.

**ಸೋಽಯಂ ಯಜ್ಞೋ ವಾಚಮಭಿದಧ್ಯೌ । ಮಿಥುನ್ಯೇನಯಾ ಸ್ಯಾಮಿತಿ ತಾಗ್ಂ ಸಂಬಭೂವ**

(ಶ. ಬ್ರಾ- ೩-೨-೧-೨೫)

ವಾಕ್ಕಿನ ಸಮ್ಮತಿಯು ದೊರೆತೊಡನೆಯೇ ಯಜ್ಞಕ್ಕೆ ವಾಕ್ಕಿನೊಡನೆ ಸೇರಿ ಭೋಗವನ್ನನುಭವಿಸಬೇಕೆಂದಿ ಚೆ ಯುಂಟಾಯಿತು. ಅದರಂತೆಯೇ ಇಬ್ಬರೂ ಸೇರಿಕೊಂಡರು. ಆಗ—

**ಇಂದ್ರೋ ಹ ವಾ ಈಕ್ಷಾಂಚಕ್ರೇ । ಮಹದ್ವಾ ಇತೋಽಭ್ವಂ ಜನಿಷ್ಯತೇ ಯಜ್ಞಸ್ಯ ಚ ಮಿಥುನಾದ್ವಾಚಶ್ಚ ಯನ್ಮಾ ತನ್ನಾಭಿಭವೇದಿತಿ ಸ ಇಂದ್ರ ಏವ ಗರ್ಭೋ ಭೂತ್ವೈತ-ನ್ಮಿಥುನಂ ಪ್ರವಿವೇಶ ॥**

(ಶ. ಬ್ರಾ. ೩-೨-೧-೨೬)

ವಾಗ್ಯಜ್ಞಗಳ ಮಿಥುನವನ್ನು ಇಂದ್ರನು ತಿಳಿದೊಡನೆಯೇ ಇವುಗಳು ಜೊತೆಯಲ್ಲಿ ಸೇರಿರುವುದರ ಫಲವಾಗಿ ಒಂದು ದೊಡ್ಡ ಆಸುರೀಶಕ್ತಿಯು ಉತ್ಪನ್ನವಾಗುವುದು ಖಂಡಿತ. ಅದು ಖಂಡಿತ ನನ್ನನ್ನು ಸೋಲಿಸುವ ಶಕ್ತಿಯುಳ್ಳದ್ದಾಗುತ್ತದೆ. ಅದಕ್ಕೆ ಅವಕಾಶವನ್ನು ಕೊಡದೆ ನಾನೇ ಇದರ ಗರ್ಭವನ್ನು ಪ್ರವೇಶಿಸುತ್ತೇನೆ ಎಂದು ಆ ಮಿಥುನವನ್ನು ಗರ್ಭರೂಪದಲ್ಲಿ ಪ್ರವೇಶಿಸಿದನು. ಇದೇ ಜಗತ್ಸೃಷ್ಟಿಯ ಮೂಲವು ಎಂದು ತಿಳಿಸಿದೆ. ಹೇಗೆಂದರೆ—

**ಸ ಪ್ರಜಾಪತಿರಿಂದ್ರಂ ಪುತ್ರಮಬ್ರವೀತ್ । ಅನೇನ ತ್ವಾ ಕಾಮಪ್ರೇಣ ಯಜ್ಞೇನ ಯಾಜಯಾನಿ ಯೇನ ತ್ವಮಿದಂ ಪರಮೇಷ್ಠ್ಯಯಿನಾಯಮಿದಿತಿ ತಥೇತಿ ತಮಯಾಜಯತ್ಸ ಇಷ್ಟ್ವಾ-ಕಾಮಯತಾಹಮೇವೇದಗ್ಂ ಸರ್ವಂ ಸ್ಯಾಮಿತಿ ಸ ವಾಗಭವದ್ವಾಗ್ವಾ ಇದಗ್ಂ ಸರ್ವಂ ತಸ್ಮಾದಾಹುರಿಂದ್ರೋ ವಾಗಿತಿ ॥**

(ಶ. ಬ್ರಾ. ೧೧-೧-೬-೧೮)

ಪ್ರಜಾಪತಿಯು ತನ್ನ ಪುತ್ರನಾದ ಇಂದ್ರನಿಗೆ ಈ ರೀತಿ ತಿಳಿಸಿದ್ದಾನೆ.

ಎಲೈ ಇಂದ್ರನೇ, ಪರಮೇಷ್ಠಿಯು ನನ್ನನ್ನುದ್ದೇಶಿಸಿ ನೆರವೇರಿಸಿದ ಇಷ್ಟಾರ್ಥಪ್ರದವಾದ ಈ ಯಜ್ಞವನ್ನು ನಿನ್ನ ಶ್ರೇಯಸ್ಸಿಗಾಗಿ ನೆರವೇರಿಸಲು ಇಚ್ಛಿಸುತ್ತೇನೆ ಎಂದಾಗ ಇಂದ್ರನು ಅನುಮೋದಿಸಿದನು. ಆ ಯಜ್ಞವು ನೆರವೇರಿಸಲ್ಪಟ್ಟೊಡನೆಯೇ ಇಂದ್ರನು ತಾನೇ ಸರ್ವಾತ್ಮಕನೂ ಸರ್ವವ್ಯಾಪಿಯೂ ಆಗಬೇಕೆಂದಪೇಕ್ಷಿಸಿದನು. ಆ ಒಡನೆಯೇ, ಸರ್ವವ್ಯಾಪಿಯೂ ಮತ್ತು ಸರ್ವಾತ್ಮಕವೂ ಆದ ವಾಗ್ರೂಪವನ್ನು ಹೊಂದಿದನು. ಇಂದ್ರನೇ ವಾಕ್ಕಲ್ಲದೆ ಬೇರೆಯಲ್ಲ ಎಂದು ತಾದಾತ್ಮ್ಯವನ್ನು ತೋರಿಸಿದೆ.

೩

## ಜಗತ್ಸೃಷ್ಟಿಗೆ ವಾಕ್ಕೇ ಆಧಾರವು. ವಾಚಸ್ಪತಿಯಾದ ವಿಶ್ವಕರ್ಮನೇ ಮೂಲಕಾರಣನು.

---

**ವಾಚೋ ವೈ ಪ್ರಜಾ ವಿಶ್ವಕರ್ಮಾ ಜಜಾನ** (ಶ. ಬ್ರಾ. ೨-೫-೭-೨೧)

ವಿಶ್ವಕರ್ಮನು ವಾಕ್ಕಿನ ಸಹಾಯದಿಂದಲೇ ಸಕಲ ಪ್ರಜೆಗಳನ್ನೂ ಸೃಜಿಸಿದನು. ಎಂದು ವಾಗಾಧಾರತ್ವವನ್ನು ತೋರಿಸಿದೆ. ಈ ಸೃಷ್ಟಿಯ ಕ್ರಮವೇನೆಂಬುದನ್ನು ಈ ರೀತಿ ತಿಳಿಸಿದೆ.

**ಸ ಮನಸಾ ವಾಚಂ ಮಿಥುನಗ್ಂ ಸಮಭವತ್ । ಸೋಽಷ್ಟೌ ದ್ರಪ್ಸಾನ್ ಗರ್ಭ್ಯಭವತ್ತೇಽಷ್ಟೌ ವಸವೋಽಸೃಜ್ಯಂತ ತಾನಸ್ಯಾಮುಪಾದಧಾತ್ ॥** (ಶ. ಬ್ರಾ. ೬-೧-೨-೬)

ಪ್ರಜಾಪತಿರೂಪನಾದ ವಿಶ್ವಕರ್ಮನು ಧ್ಯಾನರೂಪದಿಂದ ವಾಕ್ಕಿನೊಂದಿಗೆ ಸೇರಿಕೊಂಡನು. ಆಗ ಅವನ ರೇತಸ್ಸಿನ ಎಂಟು ಬಿಂದುವಿನೊಡನೆ ಗರ್ಭವನ್ನು ಹೊಂದಿದನು. ಆದರ ಫಲವಾಗಿ ಅಷ್ಟ (ಎಂಟು) ವಸುಗಳು ಉತ್ಪನ್ನರಾದರು. ಅವರನ್ನು ಪೃಥ್ವಿಯಲ್ಲಿ ಸ್ಥಾಪಿಸಿದನು.

**ಸ ಮನಸೈವ ವಾಚಂ ಮಿಥುನಗ್ಂ ಸಮಭವತ್ಸ ಏಕಾದಶ ದ್ರಪ್ಸಾನ್ಗರ್ಭ್ಯಭವತ್ತ ಏಕಾದಶ ರುದ್ರಾ ಅಸೃಜ್ಯಂತ ತಾನಂತರಿಕ್ಷ ಉಪಾದಧಾತ್ ॥** (ಶ. ಬ್ರಾ. ೬-೧-೨-೭)

ಪುನಃ ಧ್ಯಾನರೂಪದಲ್ಲಿ ವಾಕ್ಕಿನೊಂದಿಗೆ ಸೇರಿಕೊಂಡು ಯೋಜಿತನಾದನು. ಆಗ ತನ್ನ ರೇತಸ್ಸಿನ ಹನ್ನೊಂದು ಬಿಂದುಗಳೊಡಗೂಡಿ ಗರ್ಭವನ್ನು ಹೊಂದಿದನು. ಅದರಿಂದ ಹನ್ನೊಂದು ಜನ ರುದ್ರರು ಉತ್ಪನ್ನರಾದರು ಈ ಏಕಾದಶ ರುದ್ರರನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು.

**ಸ ಮನಸೈವ ವಾಚಂ ಮಿಥುನಗ್ಂ ಸಮಭವತ್ಸ ದ್ವಾದಶ ದ್ರಪ್ಸಾನ್ಗರ್ಭ್ಯಭವತ್ತೇ ದ್ವಾದಶಾದಿತ್ಯಾ ಅಸೃಜ್ಯಂತ ತಾನ್ ದಿವ್ಯುಪಾದಧಾತ್ ॥** (ಶ. ಬ್ರಾ. ೬-೧-೨-೮)

ಪುನಃ ಧ್ಯಾನರೂಪದಲ್ಲಿ ವಾಕ್ಕಿನೊಂದಿಗೆ ಸಂಬಂಧವನ್ನು ಹೊಂದಿದನು. ಆಗ ತನ್ನ ರೇತಸ್ಸಿನ ಹನ್ನೆರಡು ಬಿಂದುವಿನೊಡನೆ ಗರ್ಭವನ್ನು ಹೊಂದಿದನು. ಅದರಿಂದ ಹನ್ನೆರಡು ಮಂದಿ ಆದಿತ್ಯರು ಉತ್ಪನ್ನರಾದರು. ಈ ದ್ವಾದಶಾದಿತ್ಯರನ್ನೂ ದ್ಯುಲೋಕದಲ್ಲಿ ಸ್ಥಾಪಿಸಿದನು.

**ಸ ಮನಸೈವ ವಾಚಂ ಮಿಥುನಗ್ಂ ಸಮಭವತ್ಸ ಗರ್ಭ್ಯಭವತ್ಸ ವಿಶ್ವಾನ್ದೇವಾನಸೃಜತ ತಾನ್ ದಿಕ್ಷೂಪಾದಧಾತ್ ॥**

(ಶ. ಬ್ರಾ. ೬-೧-೨-೯)

ಪುನಃ ಧ್ಯಾನರೂಪದಲ್ಲಿ ವಾಕ್ಕಿನೊಂದಿಗೆ ಸಂಯೋಗವನ್ನು ಹೊಂದಿದನು. ಆಗಲೂ ಗರ್ಭವನ್ನು ಹೊಂದಿದನು. ಆದರ ಫಲವಾಗಿ ವಿಶ್ವೇದೇವತೆಗಳು ಉತ್ಪನ್ನರಾದರು. ಅವರನ್ನು ದಿಗ್ರಕ್ಷಕರನ್ನಾಗಿ ಸ್ಥಾಪಿಸಿದನು.

ಸೃಷ್ಟಿಕಾರ್ಯದಲ್ಲೂ, ಜಗದ್ವೃದ್ಧಿಕಾರ್ಯದಲ್ಲೂ ಸಹ ವಿಶ್ವಕರ್ಮನು ವಾಕ್ಕಿನ ಸಹಾಯದಿಂದಲೇ ತನ್ನ ಯಜ್ಞರೂಪವಾದ ಕ್ರಿಯೆಯನ್ನು ನೆರವೇರಿಸುವುದರಿಂದ ಪ್ರಕೃತದಲ್ಲಿ **ವಾಚಸ್ಪತಿಂ** ಎಂಬ ವಿಶೇಷಣವು ಉಚಿತ ವಾಗಿರುತ್ತದೆ.



## ಎಂಭತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಚಕ್ಷುಷ ಇತಿ ಸಪ್ತರ್ಚಂ ಚತುರ್ದಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಚಕ್ಷುಷ ಇತ್ಯನುಕ್ರಾಂತಂ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—**ಚಕ್ಷುಷಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ಚಕ್ಷುಷಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೮೨

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೮೨ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಿಶ್ವಕರ್ಮಾ ಭೌವನಃ ॥
ದೇವತಾ—ವಿಶ್ವಕರ್ಮಾ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಚಕ್ಷುಷಃ ಪಿತಾ ಮನಸಾ ಹಿ ಧೀರೋ ಘೃತಮೇನೇ ಅಜನನ್ನಮ್ನಮಾನೇ ।
ಯದೇದಂತಾ ಅದದೃಹಂತ ಪೂರ್ವ ಆದಿದ್ದ್ಯಾವಾಪೃಥಿವೀ ಅಪ್ರಥೇತಾಂ॥

॥ ಪದಪಾಠಃ ॥

**ಚಕ್ಷುಷಃ** । ಪಿತಾ । ಮನಸಾ । ಹಿ । ಧೀರಃ । ಘೃತಂ । ಏನೇ ಇತಿ । ಅಜನನ್ । ನಮ್ನಮಾನೇ ಇತಿ । ಯದಾ । ಇತ್ । ಅಂತಾಃ । ಅದದೃಹಂತ । ಪೂರ್ವೇ । ಆತ್ । ಇತ್ । ದ್ಯಾವಾಪೃಥಿವೀ ಇತಿ । ಅಪ್ರಥೇತಾಂ ॥ ೧ ॥

॥ ಸಾಯಣಭಾಷ್ಯಂ ॥

ಚಕ್ಷುಷಶ್ಚಕ್ಷುರುಪಲಕ್ಷಿತಸ್ಯೇಂದ್ರಿಯಸಂಘಾತ್ಮಕಸ್ಯ ಶರೀರಸ್ಯ ಪಿತೋತ್ಪಾದಯಿತಾ । ಯದ್ವಾ । ಚಕ್ಷುಃ ಖ್ಯಾಪಕಂ ತೇಜಃ । ತಸ್ಯೋತ್ಪಾದಯಿತಾ । ಮನಸಾ ನ ಹಿ ಮತ್ಸಮೋಽಸ್ತಿ ಕಶ್ಚಿದಿತಿ ಬುದ್ಧ್ಯಾ ಹಿ ಖಲು ಧೀರೋ ಧೃಷ್ಟೋ ವಿಶ್ವಕರ್ಮಾ ಪ್ರಥಮಂ ಘೃತಮುದಕಮಜನತ್ । ಅಜನಯತ್ । ಆಪೋ ವಾ ಇದಮಗ್ರೇ । ತೈ. ಸಂ. ೭-೧-೫-೧ । ಅಪ ಏವ ಸಸರ್ಜಾದೌ । ಮನು-೧-೮ । ಇತ್ಯಾದಿಶ್ರುತಿಸ್ಮೃತೀ ಸ್ಯಾತಾಂ । ಪಶ್ಚಾದೇನೇ ದ್ಯಾವಾಪೃಥಿವ್ಯೌ ನಮ್ನಮಾನೇ ತಸ್ಮಿನ್ನುದಕ ಇತಸ್ತತಶ್ಚಲಂತ್ಯೌ ಯೋಽಜನಯತ್ । ಅಥ ಯದೇದ್ಯದೈವಾಂತಾಃ ಪರ್ಯಂತಪ್ರದೇಶಾಃ ಪೂರ್ವೇ ಪುರಾಣಾ ದ್ಯಾವಾಪೃಥಿವ್ಯೋಃ ಸಂಬಂಧಿನೋಽದದೃಹಂತ ದೃಢಾ ಅಭವನ್ । ವಿಶ್ವಕರ್ಮಣಾ ದೃಢಾಃ ಸಂಪಾದಿತಾ ಇತ್ಯರ್ಥಃ । ಆದಿದನಂತರಮೇವ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಪ್ರಥೇತಾಂ । ಯಥಾಕಾಮಂ ಪ್ರಥಿತೇ ಅಭೂತಾಂ ॥

॥ ಪ್ರತಿಪದಾರ್ಥ ॥

**ಚಕ್ಷುಷಃ**—ಚಕ್ಷುರಾದಿ ಇಂದ್ರಿಯಗಳಿಗೆ । **ಪಿತಾ**—ಪಾಲಕನೂ । **ಮನಸಾ**—ಆತ್ಮಾಭಿಮಾನದಿಂದ । **ಧೀರಃ**—ಧೀರನೂ ಆದ ವಿಶ್ವಕರ್ಮನು । **ಘೃತಂ**—ಉದಕವನ್ನು । **ಅಜನತ್**—ಉತ್ಪನ್ನಮಾಡಿದನು (ಅನಂತರ)। **ನಮ್ನಮಾನೇ**—ಇದೇ ಉದಕದಲ್ಲಿ ತೇಲಾಡುತ್ತಿರುವ । **ಏನೇ**—ದ್ಯಾವಾಪೃಥಿವಿಗಳನ್ನು ಉತ್ಪನ್ನಮಾಡಿದನು । **ಯದೇತ್**—ಯಾವಾಗ । **ಪೂರ್ವೇ**—ಅತ್ಯಂತ ಪ್ರಾಚೀನವಾದ । **ಅಂತಾಃ**—ದ್ಯಾವಾಪೃಥಿವಿಗಳಿಗೆ ಸೇರಿದ ದಿಗಂತಗಳು । **ಅದದೃಹಂತ**—ದೃಢವಾಗಿ ನಿಯಮಿತವಾದವೋ । **ಆದಿತ್**—ಆ ಒಡನೆಯೇ । **ದ್ಯಾವಾ-ಪೃಥಿವೀ**—ದ್ಯಾವಾಪೃಥಿವಿಗಳೆರಡೂ । **ಅಪ್ರಥೇತಾಂ**—ವಿಸ್ತಾರವನ್ನು ಹೊಂದಿದವು.

॥ ಭಾವಾರ್ಥ ॥

ಚಕ್ಷುರಾದಿ ಇಂದ್ರಿಯಗಳಿಗೆ ಪಾಲಕನೂ, ಆತ್ಮಾಭಿಮಾನದಿಂದ ಧೀರನೂ ಆದ ವಿಶ್ವಕರ್ಮನು ಉತ್ಪನ್ನ ಮಾಡಿದನು. ಅನಂತರ, ಇದೇ ಉದಕದಲ್ಲಿ ತೇಲಾಡುತ್ತಿರುವ ದ್ಯಾವಾಪೃಥಿವಿಗಳನ್ನು ಉತ್ಪನ್ನಮಾಡಿದನು. ಯಾವಾಗ ಅತ್ಯಂತ ಪ್ರಾಚೀನವಾದ ದ್ಯಾವಾಪೃಥಿವಿಗಳಿಗೆ ಸೇರಿದ ದಿಗಂತಗಳು ದೃಢವಾಗಿ ನಿಯಮಿತವಾದವೋ ಆ ಒಡನೆಯೇ, ದ್ಯಾವಾಪೃಥಿವಿಗಳೆರಡೂ ವಿಸ್ತಾರವನ್ನು ಹೊಂದಿದವು.

## English Translation

The maker of the senses, resolute in mind, engendered the water, (and then) these two (heaven and earth) floating (on the waters); when those ancient boundaries were fixed, then the heaven and earth were expanded.

॥ ವಿಶೇಷವಿಷಯಗಳು ॥

**ಚಕ್ಷುಷಃ ಪಿತಾ—ಚಕ್ಷುರುಪಲಕ್ಷಿತಸ್ಯೇಂದ್ರಿಯಸಂಘಾತ್ಮಕಸ್ಯ ಶರೀರಸ್ಯ ಪಿತಾ ಉತ್ಪಾದಯಿತಾ । ಯದ್ವಾ ಚಕ್ಷುಃ ಖ್ಯಾಪಕಂ ತೇಜಃ । ತಸ್ಯೋತ್ಪಾದಯಿತಾ ॥** ಚಕ್ಷುಸ್ಸೆಂದರೆ ಕಣ್ಣು. ಇಲ್ಲಿ

ಚಕ್ಷುಸ್ಸನ್ನು ಎಂದರೆ ಕಣ್ಣನ್ನುಒಳಗೊಂಡ ಶರೀರವೆಂದೂ **ಪಿತಾ** ಎಂದರೆ ಈ ಶರೀರದ ಉತ್ಪಾದಕನೆಂದೂ ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ. ಶರೀರದಲ್ಲಿ ಅನೇಕ ಅವಯವಗಳಿರುವಾಗ ಎಲ್ಲವನ್ನೂ ಬಿಟ್ಟು ಚಕ್ಷುಸ್ಸೆಂಬ ಶಬ್ದವನ್ನು ಮಾತ್ರ ಉಪಯೋಗಿಸಿರುವುದು ಏಕೆ ? ಎಂದರೆ **ಸರ್ವಸ್ಯ ಗಾತ್ರಸ್ಯ ಶಿರಃ ಪ್ರಧಾನಂ** ಎಂಬ ಉಕ್ತಿಯಲ್ಲಿ ಶರೀರದಲ್ಲಿರುವ ನಾನಾ ಅವಯವಗಳಲ್ಲಿ ಶಿರಸ್ಸಿಗೇ ಪ್ರಾಧಾನ್ಯತೆ ಇದೆ. ಏಕೆಂದರೆ—ಶರೀರವು ಆತ್ಮನ ಪ್ರೇರಣೆಯಿಂದ ವ್ಯವಹರಿಸಲು ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳೂ ಅವಶ್ಯಕವು. ಹಸ್ತಪಾದಾದಿಕರ್ಮೇಂದ್ರಿಯಗಳು ಶಿರಸ್ಸಿನಲ್ಲಿ ಇಲ್ಲದಿದ್ದರೂ ಅವುಗಳ ಪ್ರೇರಣೆಯು ಜ್ಞಾನೇಂದ್ರಿಯಗಳ ಮೂಲಕವೇ ಆಗಬೇಕು. ಎಂದರೆ, ಜ್ಞಾನೇಂದ್ರಿಯಗಳ ಸಹಾಯವಿಲ್ಲದೆ (ಜ್ಞಾನೇಂದ್ರಿಯಗಳಿಗೆ ಮನಸ್ಸಿನ ಸಹಾಯವಿಲ್ಲದೆ) ಕರ್ಮೇಂದ್ರಿಯಗಳ ವ್ಯಾಪಾರವು ಸಾಧ್ಯವಿಲ್ಲ. ಆದ್ದರಿಂದ ಕರ್ಮೇಂದ್ರಿಯಗಳಿಗಿಂತ ಜ್ಞಾನೇಂದ್ರಿಯಗಳಿಗೆ ಹೆಚ್ಚು ಪ್ರಾಶಸ್ತ್ಯವಿದೆ. ಈ ಜ್ಞಾನೇಂದ್ರಿಯಗಳು ಎಂದರೆ, ಕಣ್ಣು, ಕಿವಿ, ನಾಸಿಕೆ. ನಾಲಿಗೆ, ತ್ವಕ್ (ಸ್ಪರ್ಶೇಂದ್ರಿಯ) ಎಂಬ ಐದು ಜ್ಞಾನೇಂದ್ರಿಯಗಳೂ ಶಿರಸ್ಸೆಂಬ ಅಂಗದಲ್ಲಿಯೇ ಸ್ಥಾಪಿತವಾಗಿವೆ. ಈ ಐದು ಜ್ಞಾನೇಂದ್ರಿಯಗಳಲ್ಲಿಯೂ ಚಕ್ಷುಸ್ಸಿಗೇ (ಕಣ್ಣಿಗೇ) ಪ್ರಾಧಾನ್ಯತೆ ಇದೆ. ಆದ್ದರಿಂದ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಲ್ಲೆಲ್ಲಾ ಪ್ರಧಾನಭೂತವಾದ ಚಕ್ಷುಸ್ಸನ್ನು ಹೇಳುವುದರಿಂದ ಶರೀರದ ಎಲ್ಲಾ ಅಂಗಗಳನ್ನೂ ಎಂದರೆ ಶರೀರವನ್ನೇ ಹೇಳಿದಂತಾಯಿತು ಎಂಬ ಭಾವನೆಯಿಂದ ಭೌವನ ಋಷಿಯು ಈ ಋಕ್ಕಿನಲ್ಲಿ **ಚಕ್ಷುಷಃ ಪಿತಾ**—ಸಮಸ್ತ ಶರೀರದ ಉತ್ಪಾದಕನಾಗಿದ್ದಾನೆ ಎಂದು ವರ್ಣಿಸಿರುವನು.

**ಮನಸಾ ಹಿ ಧೀರಃ ಘೃತಂ ಅಜನತ್—ಮನಸಾ ನ ಹಿ ಮತ್ಸಮೋಽಸ್ತಿ ಕಶ್ಚಿದಿತಿ ಬುದ್ಧ್ಯಾ ಹಿ ಖಲು ಧೃಷ್ಟೋ ವಿಶ್ವಕರ್ಮಾ ಪ್ರಥಮಂ ಉದಕಂ ಅಜನಯತ್** । ಮನೋಧೈರ್ಯದಲ್ಲಿ ನನ್ನ ಸಮನಾದವನು ಯಾರೂ ಇಲ್ಲವೆಂಬ ಬುದ್ಧಿಯಿಂದ ಯುಕ್ತನಾದ ಆ ವಿಶ್ವಕರ್ಮನು ಎಲ್ಲಕ್ಕೂ ಮೊದಲು ಉದಕವನ್ನು (ನೀರನ್ನು) ಉತ್ಪತ್ತಿಮಾಡಿದನು. ಸರ್ವವನ್ನೂ ಸೃಷ್ಟಿಮಾಡಿದ ಆ ವಿಶ್ವಕರ್ಮನು ಮೊದಲು ಉದಕವನ್ನು ಸೃಷ್ಟಿಸಿದನು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಸೃಷ್ಟಿವಿಚಾರವಾದ ಈ ವಿವರಣೆ ಇದೆ.

> **ಆಪೋ ವಾ ಇದಮಗ್ರೇ ಸಲಿಲಮಾಸೀತ್ತಸ್ಮಿನ್ಪ್ರಜಾಪತಿರ್ವಾಯುರ್ಭೂತ್ವಾಚರತ್ಸ ಇಮಾಮಪಶ್ಯತ್ತಾಂ ವರಾಹೋ ಭೂತ್ವಾಹರತ್ತಾಂ ವಿಶ್ವಕರ್ಮಾ ಭೂತ್ವಾ ವ್ಯಮಾರ್ಟ್ಸಾ ಪ್ರಥತ ಸಾ ಪೃಥಿವ್ಯಭವತ್ತತ್ಪೃಥಿವ್ಯೈ ಪೃಥಿವಿತ್ವಂ ತಸ್ಯಾಮಶ್ರಾಮ್ಯತ್ಪ್ರಜಾಪತಿಃ ಸ ದೇವಾನಸೃಜತ ವಸೂನ್ರುದ್ರಾನಾದಿತ್ಯಾನ್ತೇ ದೇವಾಃ ಪ್ರಜಾಪತಿಮಬ್ರುವನ್ಪ್ರಜಾಯಾಮಹಾ ಇತಿ ಸೋಽಬ್ರವೀದ್ಯಥಾಹಂ ಯುಷ್ಮಾಗ್ಂಸ್ತಪಸಾಸೃಕ್ಷ್ಯೇವಂ ತಪಸಿ ಪ್ರಜನನಮಿಚ್ಛಧ್ವಮಿತಿ ತೇಭ್ಯೋಽಗ್ನಿಮಾಯತನಂ ಪ್ರಾಯಚ್ಛದೇತೇನಾಯತನೇನ ಶ್ರಾಮ್ಯತೇತಿ ॥**
>
> (ತೈ. ಸಂ. ೭-೧.೫.೧, ೨)

ಸೃಷ್ಟಿಗೆ ಪೂರ್ವದಲ್ಲಿ ಪೃಥಿವೀ ಮೊದಲಾದ ಯಾವ ವಸ್ತುಗಳೂ ಇರಲಿಲ್ಲ. ಎಲ್ಲೆಲ್ಲಿಯೂ ನೀರೇ ತುಂಬಿದ್ದಿತು. ಎಂದರೆ ಎಲ್ಲವೂ ಜಲಮಯವಾಗಿದ್ದಿತು. ಆಗ ಪ್ರಜಾಪತಿಯು ವಾಯುರೂಪವನ್ನು ತಾಳಿ ಆ ಉದಕರಾಶಿಯಲ್ಲಿ ಸಂಚರಿಸಿದನು. ಅದರಿಂದ ಅವನಿಗೆ ಈ ನೀರಿನಲ್ಲಿ ಪೃಥಿವಿಯು ಅಂತರ್ಗತವಾಗಿರುವುದು ಕಂಡುಬಂದಿತು. ಅನಂತರ ಪ್ರಜಾಪ್ರತಿಯು ವಾಯುರೂಪವನ್ನು ತ್ಯಜಿಸಿ ವರಾಹರೂಪವನ್ನು ಕೈಗೊಂಡು ಆ ಪೃಥಿವಿಯನ್ನು ನೀರಿನಿಂದ

ಮೇಲಕ್ಕೆ ತಂದು ವಿಶ್ವಕರ್ಮಾ (ಸರ್ವವನ್ನೂ ಸೃಷ್ಟಿಮಾಡುವವನು) ಎಂಬ ದೇವತೆಯ ರೂಪವನ್ನು ತಾಳಿ ಆ ಪೃಥಿವಿಯನ್ನು ವಿಸ್ತಾರವಾಗುವಂತೆ ಹರಡಿದನು. ಹೀಗೆ ವಿಸ್ತಾರವಾಗುವಂತೆ ಹರಡಿದ್ದರಿಂದ ಭೂಮಿಗೆ ಪೃಥಿವಿಯೆಂದು ಹೆಸರು ಬಂದಿತು. ಅನಂತರ ಆ ಪ್ರಜಾಪತಿಯು ಅಥವಾ ವಿಶ್ವಕರ್ಮನು ಆ ಪೃಥಿವಿಯ ಮೇಲೆ ಕುಳಿತು ತಪಸ್ಸನ್ನಾಚರಿಸಿ ಆ ತಪಸ್ಸಾಮರ್ಥ್ಯದಿಂದ ವಸುಗಳು, ರುದ್ರರು, ಆದಿತ್ಯರು ಎಂಬ ದೇವತೆಗಳನ್ನು ಸೃಷ್ಟಿಮಾಡಿದನು. ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟ ಆ ದೇವತೆಗಳು ಪ್ರಜಾಪತಿಯನ್ನು ಕುರಿತು, ನಾವೂ ನಿನ್ನಂತೆ ಸೃಷ್ಟಿಕಾರ್ಯವನ್ನು ಮಾಡಬೇಕೆಂದು ಅಪೇಕ್ಷಿಸುತ್ತೇವೆ ಎಂದು ಕೇಳಲು ಅದಕ್ಕೆ ಪ್ರಜಾಪತಿಯು—ನಾನು ಯಾವ ರೀತಿ ತಪಸ್ಸನ್ನು ಮಾಡಿ ಅದರ ಸಾಮರ್ಥ್ಯದಿಂದ ನಿಮ್ಮನ್ನು ಸೃಷ್ಟಿಮಾಡಿದೆನೋ ನೀವೂ ಅದರಂತೆಯೇ ತಪಸ್ಸನ್ನು ಮಾಡಿ ಸೃಷ್ಟಿಮಾಡಬಹುದು ಎಂದು ಹೇಳಿ ಅದಕ್ಕಾಗಿ ಒಂದು ಅಗ್ನ್ಯಾಯತನವನ್ನು ಅವರಿಗೆ ಕೊಟ್ಟನು ಎಂದು ಹೇಳಿದೆ.

ಇದಲ್ಲದೆ ಸೃಷ್ಟಿಗೆ ಪೂರ್ವದಲ್ಲಿ ಸರ್ವವೂ ಜಲಮಯವಾಗಿದ್ದಿತೆಂದೂ, ಆಗ ಪ್ರಜಾಪತಿಯು ಸೃಷ್ಟಿಯನ್ನು ಹೇಗೆ ಮಾಡಿದನೆಂಬ ವಿಚಾರವೂ ಸಹ ತೈತ್ತಿರೀಯಾರಣ್ಯಕದಲ್ಲಿ (ತೈ. ಆ. ೧–೨೩) ಈ ರೀತಿ ಹೇಳಿದೆ—

**ಆಪೋ ವಾ ಇದಮಾಸನ್ತ್ಸಲಿಲಮೇವ । ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ । ತಸ್ಯಾಂತರ್ಮನಸಿ ಕಾಮಃ ಸಮವರ್ತತ । ಇದಗ್‌ಂ ಸೃಜೇಯಮಿತಿ । ತಸ್ಮಾದ್ಯತ್ಪುರುಷೋ ಮನಸಾಭಿಗಚ್ಛತಿ । ತದ್ವಾಚಾ ವದತಿ । ತತ್ಕರ್ಮಣಾ ಕರೋತಿ । ತದೇಷಾಭ್ಯನೂಕ್ತಾ । ಕಾಮಸ್ತದಗ್ರೇ ಸಮವರ್ತತಾಧಿ । ಮನಸೋ ರೇತಃ ಪ್ರಥಮಂ ಯದಾಸೀತ್ । ಸತೋ ಬಂಧುಮಸತಿ ನಿರವಿಂದನ್ । ಹೃದಿ ಪ್ರತೀಷ್ಯಾ ಕವಯೋ ಮನೀಷೇತಿ । ಉಪೈನಂ ತದುಪ ನಮತಿ । ಯತ್ಕಾಮೋ ಭವತಿ । ಯ ಏವಂ ವೇದ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಶರೀರಮಧೂನುತ**

(ತೈ. ಆ. ೧–೨೩-೧,೨)

ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಜಗತ್ತಿನ ಸೃಷ್ಟಿಗೆ ಪೂರ್ವದಲ್ಲಿ ಎಲ್ಲೆಲ್ಲಿಯೂ ನೀರು ಮಾತ್ರ ತುಂಬಿಕೊಂಡಿದ್ದಿತು. ಇನ್ನೇನೂ ಇರಲಿಲ್ಲ. ದೇವತೆಗಳು, ಮನುಷ್ಯರು, ಇತರ ಭೌತಿಕವಸ್ತುಗಳು ಯಾವವೂ ಇರಲಿಲ್ಲ. ಎಲ್ಲೆಲ್ಲಿಯೂ ಆವರಿಸಿದ ಆ ನೀರಿನ ಮಧ್ಯದಲ್ಲಿ ಒಂದು ಪುಷ್ಕರಪರ್ಣದ (ಎಲೆಯ) ಮೇಲೆ ಪ್ರಜಾಪತಿಯೊಬ್ಬನು ಮಾತ್ರ ಸ್ಥಿತನಾಗಿದ್ದನು. ಆಗ ಆ ಪ್ರಜಾಪತಿಯ ಮನಸ್ಸಿನಲ್ಲಿ ಈ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯುಂಟಾಯಿತು. ಆದ್ದರಿಂದ ಪ್ರಜಾಪತಿಯಿಂದ ಸೃಷ್ಟರಾದ ಮನುಷ್ಯಾದಿಗಳಲ್ಲಿ ಯಾವುದಾದರೂ ಒಂದು ಕಾರ್ಯವನ್ನು ಮಾಡುವುದಕ್ಕೆ ಮೊದಲು ಆ ಕಾರ್ಯವನ್ನು ಮಾಡಬೇಕೆಂಬ ಕಾಮವು ಅಥವಾ ಇಚ್ಛೆಯುಂಟಾಗುವುದು. ಆ ಇಚ್ಛೆಯನ್ನು ಆ ಪುರುಷನು ಮಾತಿನಲ್ಲಿ ಹೇಳುವನು. ಅನಂತರ ಆ ಕಾರ್ಯವನ್ನು ಮಾಡಲು ಪ್ರವೃತ್ತನಾಗುವನು ಈ ಲೋಕವ್ಯವಹಾರದಂತೆಯೇ ಪ್ರಜಾಪತಿಗೆ ಸಹ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯುಂಟಾದಾಗ ಅದನ್ನು ವಾಕ್ಯದಿಂದ ಉಚ್ಚರಿಸಿ ಕಾರ್ಯದಲ್ಲಿ ಪ್ರವೃತ್ತನಾದನು. ಈ ವಿಷಯವು—

**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್ ।**
**ಸತೋ ಬಂಧುಮಸತಿ ನಿರವಿಂದನ್ ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥**
(ಋ. ಸಂ. ೧೦-೧೨೯-೪)

ಎಂಬ ಋಕ್ಕಿನಲ್ಲಿ ಹೇಳಿರುವುದು--ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯು ಮೊದಲು ಪರಮೇಶ್ವರನ (ಪ್ರಜಾಪತಿಯ) ಮನಸ್ಸಿನಲ್ಲಿ ಅಂಕುರಿಸಿತು. ಪ್ರಜೋತ್ಪತ್ತಿಗೆ ಪುರುಷನ ವೀರ್ಯವು ಅಥವಾ ರೇತಸ್ಸು ಹೇಗೆ ಮೊದಲು ಕಾರಣವಾಗುವುದೋ ಅದರಂತೆ ಪರಮೇಶ್ವರನ ಜಗತ್ಸೃಷ್ಟಿಗೆ ಸೃಷ್ಟಿಮಾಡಬೇಕೆಂಬ ಅವನ ಇಚ್ಛೆಯೇ ರೇತಸ್ಸಾಗುವುದು ಅಂದರೆ ಕಾರಣ ವಾಗುವುದು. ಈ ಇಚ್ಛೆಯು ಮೊದಲು ಪ್ರಜಾಪತಿಯಲ್ಲಿ ಉತ್ಪನ್ನವಾಯಿತು. ಆ ಇಚ್ಛೆಯೇ ಕಾರ್ಯರೂಪವಾಗಿ ಪರಿಣಮಿಸಿ ಜಗತ್ಸೃಷ್ಟಿಯಾಯಿತು. ಹಿಂದಿನ ಕಲ್ಪದಲ್ಲಿ ಪ್ರಾಣಿಗಳು ಮಾಡಿದ ಕರ್ಮಾದಿಗಳಿಂದ ಬಂಧನಭೂತವಾದ ಜನ್ಮಾಂತರಪ್ರಾಪ್ತಿ ಮೊದಲಾದ ವಿಷಯಗಳನ್ನು ಕ್ರಾಂತಪ್ರಜ್ಞರೂ ಮೇಧಾವಿಗಳೂ ಆದ ಪ್ರಾಜ್ಞರು ಮನಸ್ಸಿನಲ್ಲಿ ಚೆನ್ನಾಗಿ ವಿಮರ್ಶೆಮಾಡಿ ಅದರ ರಹಸ್ಯವನ್ನು ತಿಳಿಯಬಲ್ಲರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಆದ್ದರಿಂದ ಕಾಮದ (ಇಚ್ಛೆಯ) ಮಹತ್ತನ್ನು ತಿಳಿದ ಪುರುಷನು ಅದನ್ನು ಹೊಂದುತ್ತಾನೆ. ಈರೀತಿ ಪ್ರಜಾಪತಿಯು ಸೃಷ್ಟಿ ಮಾಡಬೇಕೆಂಬ ಇಚ್ಛೆಯಿಂದ ತಪಸ್ಸನ್ನಾಚರಿಸಿದನು. ಋಷಿಗಳು, ಮನುಷ್ಯರು ಮೊದಲಾದವರು ತಪಸ್ಸನ್ನು ಮಾಡುವಾಗ ದೇಹಶೋಷಣೆ, ವ್ರತಾಚರಣೆ ಮೊದಲಾದ ಕ್ಲಿಷ್ಟಕರ್ಮಗಳಿಂದ ಶರೀರವನ್ನು ಶ್ರಮದಿಂದ ಬಳಲಿಸುವರು. ಆದರೆ ಪ್ರಜಾಪತಿಯು ತಪಸ್ಸುಮಾಡುವ ವಿಚಾರದಲ್ಲಿ ಈ ವಿಧವಾದ ಶರೀರಶೋಷಣೆ ಮೊದಲಾದವುಗಳಿಲ್ಲ. ಕೇವಲ ಪರ್ಯಾಲೋಚನೆ ಅಥವಾ ಧ್ಯಾನವೊಂದೇ ಇರುವುದು. ಏಕೆಂದರೆ ಇವನು ಸತ್ಯಸಂಕಲ್ಪನು. ಹೀಗೆ ಆಗಬೇಕೆಂದು ಧ್ಯಾನಮಾಡಿದರೆ ಸಾಕು ಹಾಗೇ ಆಗುವುದು. ಇತರರಂತೆ ಶರೀರದಿಂದ ಅಥವಾ ಹಸ್ತಾದ್ಯವಯವಗಳಿಂದ ಕಾರ್ಯಗಳಲ್ಲಿ ಪ್ರವೃತ್ತಿಸಬೇಕಾಗಿಲ್ಲ. ಪ್ರಜಾಪತಿಯು ಈರೀತಿ ಧ್ಯಾನರೂಪವಾದ ತಪಸ್ಸನ್ನು ಮಾಡಿ ತನ್ನ ಶರೀರವನ್ನು ಒಂದುಸಲ ಕಂಪನಮಾಡಿದನು (ಅಲುಗಾಡಿಸಿದನು).

**ತಸ್ಯ ಯನ್ಮಾಗ್ಂಸಮಾಸೀತ್ । ತತೋಽರುಣಾಃ ಕೇತವೋ ವಾತರಶನಾ ಋಷಯ ಉದತಿಷ್ಠನ್ । ಯೇ ನಖಾಃ । ತೇ ವೈಖಾನಸಾಃ । ಯೇ ವಾಲಾಃ । ತೇ ವಾಲಖಿಲ್ಯಾಃ । ಯೋ ರಸಃ । ಸೋಽಪಾಂ । ಅಂತರತಃ ಕೂರ್ಮಂ ಭೂತಗ್ಂ ಸರ್ಪಂತಂ । ತಮಬ್ರವೀತ್ । ಮಮ ವೈ ತ್ವಙ್ಮಾಗ್ಂಸಾ । ಸಮಭೂತ್ । ನೇತ್ಯಬ್ರವೀತ್ । ಪೂರ್ವಮೇವಾಹಮಿಹಾಸಮಿತಿ । ತತ್ಪುರುಷಸ್ಯ ಪುರುಷತ್ವಂ । ಸ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ । ಭೂತ್ವೋದತಿಷ್ಠತ್ । ತಮಬ್ರವೀತ್ । ತ್ವಂ ವೈ ಪೂರ್ವಗ್ಂ ಸಮಭೂಃ । ತ್ವಮಿದಂ ಪೂರ್ವಃ ಕುರುಷ್ವೇತಿ । ಸ ಇತ ಆದಾಯಾಪಃ । ಅಂಜಲಿನಾ ಪುರಸ್ತಾದುಪಾದಧಾತ್ । ಏವಾ ಹ್ಯೇವೇತಿ । ತತ ಆದಿತ್ಯ ಉದತಿಷ್ಠತ್ । ಸಾ ಪ್ರಾಚೀದಿಕ್ । ಅಥಾರುಣಃ ಕೇತುರ್ದಕ್ಷಿಣತ ಉಪಾದಧಾತ್ । ಏವಾಹ್ಯಗ್ನ ಇತಿ । ತತೋ ವಾ ಅಗ್ನಿರುದತಿಷ್ಠತ್ । ಸಾ ದಕ್ಷಿಣಾದಿಕ್ । ಅಥಾರುಣಃ ಕೇತುಃ ಪಶ್ಚಾದುಪಾದಧಾತ್ । ಏವಾ ಹಿ ವಾಯೋ ಇತಿ । ತತೋ ವಾಯುರುದತಿಷ್ಠತ್ । ಸಾ ಪ್ರತೀಚೀದಿಕ್ । ಅಥಾರುಣಃ ಕೇತುರುತ್ತರತ ಉಪಾದಧಾತ್ । ಏವಾಹೀಂದ್ರೇತಿ । ತತೋ ವಾ ಇಂದ್ರ ಉದತಿಷ್ಠತ್ ।**

**ಸೋದೀಚೀ ದಿಕ್ । ಅಥಾರುಣಾಃ ಕೇತುರ್ಮಧ್ಯ ಉಪಾದಧಾತ್ । ಏವಾ ಹಿ ಪೂಷನ್ನಿತಿ । ತತೋ ವೈ ಪೂಷೋದತಿಷ್ಠತ್ । ಸೇಯಂ ದಿಕ್ । ಅಥಾರುಣಃ ಕೇತುರುಪರಿಷ್ಟಾದುಪಾದಧಾತ್ । ಏವಾ ಹಿ ದೇವಾ ಇತಿ । ತತೋ ದೇವಮನುಷ್ಯಾಃ ಪಿತರಃ । ಗಂಧರ್ವಾಪ್ಸರಸಶ್ಚೋದತಿಷ್ಠನ್ । ಸೋರ್ಧ್ವಾ ದಿಕ್ । ಯಾ ವಿಪ್ರುಷೋ ವಿ ಪರಾಪತನ್ । ತಾಭ್ಯೋಽಸುರಾ ರಕ್ಷಾಗ್ಂಸಿ ಪಿಶಾಚಾಶ್ಚೋದತಿಷ್ಠನ್ । ತಸ್ಮಾತ್ತೇ ಪರಾಭವನ್ । ವಿಪ್ರುಡ್ಭ್ಯೋ ಹಿ ತೇ ಸಮಭವನ್ ॥**

(ತೈ. ಆ. ೧-೨೩-೨, ೩, ೪, ೫, ೬, ೭)

ಹಾಗೆ ಅಲುಗಾಡಿಸಿದಾಗ ಅವನ ಮಾಂಸದಿಂದ ಅರುಣರು, ಕೇತುಗಳು, ವಾತರಶನರು ಎಂಬ ಮೂರು ವಿಧವಾದ ಋಷಿಗಳ ಉತ್ಪತ್ತಿಯಾಯಿತು. ನಖ (ಉಗುರು) ದಿಂದ ವೈಖಾನಸರೆಂಬ ಮುನಿಗಳೂ ಕೇಶದಿಂದ ವಾಲಖಿಲ್ಯ ನಾಮಕಋಷಿಗಳೂ ಉತ್ಪನ್ನರಾದರು. ಶರೀರದ ಸಾರಾಂಶವಾದ ರಸ (ರಕ್ತ) ದಿಂದ ಒಂದು ಕೂರ್ಮವು (ಆಮೆಯು) ಜನಿಸಿತು. ನೀರಿನ ಮಧ್ಯದಲ್ಲಿ ಸಂಚರಿಸುತ್ತಿರುವ ಆ ಆಮೆಯನ್ನು ಪ್ರಜಾಪತಿಯು ನೋಡಿ ಇಂತೆಂದನು— ಎಲೈ ಕೂರ್ಮವೇ, ನೀನು ನನ್ನ ಮಾಂಸ ಮತ್ತು ಚರ್ಮದಿಂದ ಉತ್ಪನ್ನನಾಗಿದ್ದೀಯೆ ಎನ್ನಲು, ಆ ಕೂರ್ಮವು—ಹಾಗಲ್ಲ, ನಾನು ನಿನ್ನ ಮಾಂಸದಿಂದ ಉತ್ಪನ್ನನಾದವನಲ್ಲ. ನನ್ನ ಶರೀರವಾದ ಈ ಕೂರ್ಮಾಕಾರವು ಮಾತ್ರ ಉತ್ಪನ್ನವಾಯಿತು. ಸಮಸ್ತ ವಸ್ತುಗಳಲ್ಲಿಯೂ ಚೈತನ್ಯರೂಪದಿಂದ ಇರುವ ನಾನು ಕೂರ್ಮದ ಉತ್ಪತ್ತಿಗೆ ಮೊದಲೇ ನೀರಿನಲ್ಲಿದ್ದೆನು. ಪೂರ್ವದಿಂದಲೂ ಇದ್ದುದ್ದರಿಂದ ನನಗೆ ಪುರುಷನೆಂಬ ಹೆಸರು ಬಂದಿದೆ ಎಂದು ಹೇಳಿ ತನ್ನ ಸ್ವಸಾಮರ್ಥ್ಯವನ್ನು ಪ್ರಕಟಿಸುವುದಕ್ಕಾಗಿ ವಿರಾಡ್ರೂಪವನ್ನು (ದೊಡ್ಡ ರೂಪವನ್ನು) ತಾಳಿ ಸಾವಿರಾರು ಶಿರಸ್ಸುಗಳು, ಸಾವಿರಾರು ಕಣ್ಣುಗಳು, ಸಾವಿರಾರು ಪಾದಗಳು ಮೊದಲಾದ ಅಸಂಖ್ಯಾತ ಅವಯವಗಳಿಂದ ಅಲ್ಲಿ ಪ್ರಾದುರ್ಭೂತವಾಯಿತು. ಆಗ ಪ್ರಜಾಪತಿಯು ವಿರಾಡ್ರೂಪದಿಂದಿರುವ ಪರಮಾತ್ಮನನ್ನು ನೋಡಿ—ಜಗತ್ತನ್ನು ನೀನೇ ನಿರ್ಮಾಣಮಾಡು ಎಂದನು. ಅದರಂತೆ ಆ ಪರಮಾತ್ಮನು ತನ್ನ ಕೈಯಿಂದ (ಬೊಗಸೆಯಿಂದ) ನೀರನ್ನು ತುಂಬಿಕೊಂಡು ಪೂರ್ವಾಭಿಮುಖವಾಗಿ **ಏವಾಹ್ಯೇವ** ಎಂಬ ಶಬ್ದಗಳನ್ನುಚ್ಚರಿಸಿ ಆ ನೀರನ್ನು ಮೇಲಕ್ಕೆರಚಿದನು. ಅದರಿಂದ ಆದಿತ್ಯನು ಉತ್ಪನ್ನನಾದನು. ಮತ್ತು ಆ ದಿಕ್ಕಿಗೆ ಪೂರ್ವದಿಕ್ಕೆಂದು ಹೆಸರಾಯಿತು. ಅದರಂತೆ ಮತ್ತೊಂದು ದಿಕ್ಕಿಗೆ **ಏವಾಹ್ಯಗ್ನೇ** ಎಂದು ನೀರನ್ನು ಎರಚಿದಾಗ ಅಲ್ಲಿ ಅಗ್ನಿಯ ಉತ್ಪತ್ತಿಯಾಗಿ ಅದು ದಕ್ಷಿಣ ದಿಕ್ಕಾಯಿತು. ಮತ್ತೊಂದಾವರ್ತಿ **ಏವಾ ಹಿ ವಾಯೋ** ಎಂದು ನೀರನ್ನು ಎರಚಿದಾಗ ವಾಯುವಿನ ಉತ್ಪತ್ತಿಯಾಗಿ ಅದು ಪಶ್ಚಿಮ ದಿಕ್ಕಾಯಿತು. ಬಳಿಕ **ಏವಾಹೀಂದ್ರ** ಎಂದು ಎರಚಿದಾಗ ಇಂದ್ರನ ಉತ್ಪತ್ತಿಯಾಗಿ ಅದು ಉತ್ತರ ದಿಕ್ಕಾಯಿತು. ಮಧ್ಯಭಾಗದಲ್ಲಿ **ಏವಾ ಹಿ ಪೂಷನ್** ಎಂದು ನೀರನ್ನೆರಚಿದಾಗ ಪೂಷದೇವನ ಉತ್ಪತ್ತಿಯಾಯಿತು. ಅದುಕೆಳಭಾಗವು. ಮೇಲುಭಾಗದಲ್ಲಿ **ಏವಾ ಹಿ ದೇವಾಃ** ಎಂದು ನೀರನ್ನೆರಚಿದಾಗ ಅಲ್ಲಿ ಇತರ ದೇವತೆಗಳು, ಮನುಷ್ಯರು, ಪಿತೃಗಳು, ಗಂಧರ್ವರು, ಅಪ್ಸರಸ್ಸುಗಳು ಇವರ ಉತ್ಪತ್ತಿಯಾಯಿತು. ಅದೇ ಊರ್ಧ್ವದಿಕ್ಕೆಂದು ಪ್ರಸಿದ್ಧಿಯಾಯಿತು. ಹೀಗೆ ಪರಮಾತ್ಮನು ಸುತ್ತಲೂ ನೀರನ್ನು ಎರಚುತ್ತಿರುವಾಗ ಆ ನೀರಿನಿಂದ ದೂರ ಸಿಡಿದುಬಿದ್ದ ಕೆಲವು ಜಲಬಿಂದುಗಳಿಂದ ಅಸುರರು, ರಕ್ಷೋಗಣಗಳು, ಪಿಶಾಚಿಗಳು ಇವರ ಉತ್ಪತ್ತಿಯಾಯಿತು. ದೂರ ಸಿಡಿದುಬಿದ್ದ ಜಲಬಿಂದುಗಳಿಂದ ಉತ್ಪನ್ನರಾದ ಕಾರಣ ಈ ಅಸುರಾದಿಗಳು ದೇವತೆಗಳಿಂದ ಪರಾಜಿತರಾದರು.

ತದೇಷಾಭ್ಯನೂಕ್ತಾ । ಆಪೋ ಹ ಯದ್ಬೃಹತೀರ್ಗರ್ಭಮಾಯನ್ । ದಕ್ಷಂ ದಧಾನಾ ಜನಯಂತೀಃ ಸ್ವಯಂಭುಂ । ತತ ಇಮೇಽಧ್ಯಸೃಜ್ಯಂತ ಸರ್ಗಾಃ । ಅದ್ಭ್ಯೋ ವಾ ಇದಗ್ಂ ಸಮಭೂತ್ । ತಸ್ಮಾದಿದಗ್ಂ ಸರ್ವಂ ಬ್ರಹ್ಮ ಸ್ವಯಂಭ್ವಿತಿ । ತಸ್ಮಾದಿದಗ್ಂ ಸರ್ವಗ್ಂ ಶಿಥಿಲಮಿವಾಧ್ರುವಮಿವಾಭವತ್ । ಪ್ರಜಾಪತಿರ್ವಾವ ತತ್ । ಆತ್ಮನಾತ್ಮಾನಂ ವಿಧಾಯ । ತದೇವಾನು ಪ್ರಾವಿಶತ್ ।

(ತೈ. ಆ. ೧-೨೩-೮)

ನೀರಿನಿಂದ ಈ ರೀತಿ ದೇವಮನುಷ್ಯಾದಿಗಳು ಸೃಷ್ಟಿಯಾದ ವಿವರವು ಋಗ್ವೇದದ....

ಆಪೋ ಹ ಯದ್ಬೃಹತೀರ್ವಿಶ್ವಮಾಯನ್ಗರ್ಭಂ ದಧಾನಾ ಜನಯಂತೀರಗ್ನಿಂ ।
ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ ॥

(ಋ ಸಂ. ೧೦-೧೨೧-೭ ; ಅಥರ್ವ ೪-೨-೬ ; ವಾಜಸನೇಯ ಸಂ ೨೭,-೨೫,-೩೨-೭ ;
ತೈ. ಸಂ. ೨-೨-೧೧-೧ ; ೪-೧-೮-೫ ; ತೈ. ಆ. ೧-೨೩-೮)

ಎಂಬ ಋಕ್ಕಿನಲ್ಲಿ ಸ್ಪಷ್ಟವಾಗಿ ಹೇಳಿದೆ. ಸೃಷ್ಟಿಗೆ ಪೂರ್ವದಲ್ಲಿ ಎಲ್ಲೆಲ್ಲಿಯೂ ಆವರಿಸಿದ್ದ ಉದಕವು ಗರ್ಭವನ್ನು ಧರಿಸಿತು. ಆ ಗರ್ಭವು ವೃದ್ಧಿಯನ್ನೈದಿ ಕೂರ್ಮರೂಪನಾದ ಸ್ವಯಂಭುವೆಂಬ ನಾಮಧೇಯನಾದ ಪರಮಾತ್ಮ (ಪ್ರಜಾಪತಿ) ಯನ್ನು ಉತ್ಪತ್ತಿಮಾಡಿತು. ಎಂದರೆ ಪರಮಾತ್ಮನೇ ನೀರಿನಿಂದ ಕೂರ್ಮರೂಪನಾಗಿ ಆವಿರ್ಭೂತನಾದನು. ಅನಂತರ ಆ ಕೂರ್ಮರೂಪಪ್ರಜಾಪತಿಯಿಂದ ಇತರ ಸೃಷ್ಟಿಗಳೆಲ್ಲವೂ ಮುಂದುವರೆದವು. ಆದ್ದರಿಂದ ಈ ಉದಕಗಳಿಂದಲೇ ಸರ್ವವೂ ಉತ್ಪನ್ನವಾಯಿತು. ಆದ್ದರಿಂದ ಉತ್ಪನ್ನವಾದ ಸಕಲ ಜಗತ್ತು ಸಹ ಸ್ವಯಂಭು ಎಂಬ ಬ್ರಹ್ಮಸ್ವರೂಪವೇ ಆಗಿದೆ. ನೀರಿನಿಂದ ಉತ್ಪನ್ನವಾದುದರಿಂದ ಜಗತ್ತೆಲ್ಲವೂ ಒಂದು ದೃಢವಾದ ನೆಲೆಯಿಲ್ಲದೆ ನೀರಿನ ಮಧ್ಯದಲ್ಲಿ ಅಲೆಗಳಂತೆ ಅಲ್ಲಾಡುತ್ತಿದ್ದವು. ಆದ್ದರಿಂದ ಸಚ್ಚಿದಾನಂದಸ್ವರೂಪನಾದ ಪ್ರಜಾಪತಿಯು ತನ್ನ ಸಾಮರ್ಥ್ಯದಿಂದ ಆಯಾ ವಸ್ತುಗಳ ಆಕಾರಕ್ಕನುಸಾರವಾಗಿ ತನ್ನ ಅಂಶವನ್ನು ಅವುಗಳಲ್ಲಿ ಹೊಂದಿಸಿ ಎಂದರೆ ತಾನೇ ತನ್ನ ಚೈತನ್ಯಾಂಶದಿಂದ (ಚಿದ್ರೂಪದಿಂದ) ಅವುಗಳಲ್ಲಿ ಪ್ರವೇಶಿಸಿ ಅವುಗಳು ಅಲ್ಲಾಡದಂತೆ ದೃಢವಾಗಿ ಸ್ಥಾಪಿಸಿದನು.

**ತದೇಷಾಭ್ಯನೂಕ್ತಾ । ವಿಧಾಯ ಲೋಕಾನ್ವಿಧಾಯ ಭೂತಾನಿ । ವಿಧಾಯ ಸರ್ವಾಃ ಪ್ರದಿಶೋ ದಿಶಶ್ಚ । ಪ್ರಜಾಪತಿಃ ಪ್ರಥಮಜಾ ಋತಸ್ಯ । ಆತ್ಮಾನಾತ್ಮಾನಮಭಿಸಂವಿವೇಶೇತಿ । ಸರ್ವಮೇವೇದಮಾಪ್ತ್ವಾ । ಸರ್ವಮವರುಧ್ಯ । ತದೇವಾನುಪ್ರವಿಶತಿ । ಯ ಏವಂ ವೇದ ॥**

(ತೈ. ಆ. ೧-೨೩-೯)

ಈ ವಿವರವು ಋಗ್ವೇದದಲ್ಲಿ ಈ ರೀತಿ ತಿಳಿಸಿದೆ—

**ವಿಧಾಯ ಲೋಕಾನ್ವಿಧಾಯ ಭೂತಾನಿ ವಿಧಾಯ ಸರ್ವಾಃ ಪ್ರದಿಶೋ ದಿಶಶ್ಚ ।**
**ಪ್ರಜಾಪತಿಃ ಪ್ರಥಮಜಾ ಋತಸ್ಯ ಆತ್ಮನಾತ್ಮಾನಮಭಿಸಂವಿವೇಶ ॥**

ಪ್ರಜಾಪತಿಯು ಎಲ್ಲಕ್ಕೂ ಮೊದಲಿದ್ದ ನೀರಿನಿಂದಲೇ ಸೃಷ್ಟಿಕಾರ್ಯವನ್ನು ಮುಂದುವರೆಸಿದನು. ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಲೋಕಗಳನ್ನೂ ಅವುಗಳಲ್ಲಿ ವಾಸಿಸುವ ಸಮಸ್ತ ಭೂತಜಾತಗಳನ್ನೂ ಎಂದರೆ ಪ್ರಾಣಿಗಳನ್ನೂ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ನಿರ್ಮಿಸಿ ಅವುಗಳಲ್ಲಿ ತಾನು ಚೈತನ್ಯರೂಪದಿಂದ ಪ್ರವೇಶಿಸಿದನು ಎಂದು ಈ

ಮಂತ್ರದ ಮುಖ್ಯಾಭಿಪ್ರಾಯವು. (ಈ ಮಂತ್ರವು ಋಗ್ವೇದದಲ್ಲಿ ಇರುವುದಿಲ್ಲ. ಶಾಖಾಂತರದಲ್ಲಿರುವುದೆಂದು ಭಾಷ್ಯಕಾರರು ಹೇಳಿದಾರೆ. ಯಾವ ಶಾಖೆಯೆಂಬುವುದು ಗೊತ್ತಾಗುವುದಿಲ್ಲ). ಪ್ರಜಾಪತಿಯು ಈರೀತಿ ಸಮಸ್ತವಾದ ಸೃಷ್ಟಿಕಾರ್ಯವನ್ನು ಮುಗಿಸಿ, ಸೃಷ್ಟವಾದ ವಸ್ತುಗಳಲ್ಲಿ ತಾನು ಚಿದ್ರೂಪದಿಂದ ಪ್ರವೇಶಿಸಿ, ಅವುಗಳ ಮಧ್ಯದಲ್ಲಿ ಅಂತಃಸ್ಥಿತನಾಗಿದ್ದು ಜಗದ್ವ್ಯವಹಾರಗಳನ್ನು ನಡೆಸುತ್ತಿರುವನು. ಪರಮಾತ್ಮನ ಈ ಸೃಷ್ಟಿಕ್ರಮವನ್ನು ತಿಳಿಯುವ ಪುರುಷನು ಈ ಜಗತ್ತಿನಲ್ಲಿ ಪುರುಷನು ಪಡೆಯಬೇಕಾದ ಫಲಗಳನ್ನು ಪಡೆದು ಅನುಭವಿಸಿ ಸುಖಿಸುವನು.

ವೇದಮಂತ್ರಗಳಲ್ಲಲ್ಲದೆ ಮನುಸ್ಮೃತಿಯಲ್ಲಿಯೂ ಪುರಾಣಾದಿಗಳಲ್ಲಿಯೂ ಪರಮೇಶ್ವರನು ಮೊದಲು ಉದಕವನ್ನೇ ಸೃಷ್ಟಿಸಿ ಅದರಂತೆ ಇತರ ಜಗದಾದಿಗಳನ್ನು ಸೃಷ್ಟಿಸಿದನೆಂಬ ವಿಚಾರವು—

**ಅಪ ಏವ ಸಸರ್ಜಾದೌ ತಾಸು ವೀರ್ಯಮವಾಕಿರತ್ ।**
**ತದಂಡಮಭವದ್ಧೈಮಂ ಸೂರ್ಯಕೋಟಿಸಮಪ್ರಭಂ ॥**

(ಮನುಸ್ಮೃತಿ ೧-೮-೯)

ಇತ್ಯಾದಿ ಸ್ಥಳಗಳಲ್ಲಿ ಉಕ್ತವಾಗಿದೆ.

**ಚಕ್ಷುಷಃ ಪಿತಾ** ಎಂಬ ವಿಶೇಷಣದಿಂದ ವಿಶ್ವಕರ್ಮನನ್ನು ಈ ಋಕ್ಕಿನಲ್ಲಿ ಪ್ರಶಂಸಿಸಿದೆ. ಈ ವಿಶೇಷಣಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ತಿಳಿಸಿದ್ದಾರೆ. **ಚಕ್ಷುಸ್** ಶಬ್ದಕ್ಕೆ **ಚಕ್ಷುರುಪಲಕ್ಷಿತಸ್ಯ ಇಂದ್ರಿಯಸಂಘಾತ್ಮಕಸ್ಯ ಶರೀರಸ್ಯ ಪಿತಾ ಉತ್ಪಾದಯಿತಾ** । ಚಕ್ಷುರಿಂದ್ರಿಯವೇ ಮುಂತಾದ ಸಕಲ ಇಂದ್ರಿಯಸಮೂಹರೂಪವಾದ ಶರೀರಕ್ಕೂ ಉತ್ಪಾದಕನೆಂಬ ಒಂದರ್ಥವೂ ಅಥವಾ **ಚಕ್ಷುಃ ಖ್ಯಾಪಕಂ ತೇಜಃ । ತಸ್ಯ ಉತ್ಪಾದಯಿತಾ** । ಜ್ಞಾನಸಾಧಕವಾದ ತೇಜಸ್ಸಿಗೆ ಉತ್ಪಾದಕನೆಂಬ ಇನ್ನೊಂದರ್ಥವೂ ಸಾಧ್ಯವೆಂದು ತಿಳಿಸಿದೆ. ಈ ಎರಡು ವಿಧವಾದ ತಾತ್ಪರ್ಯಗಳೂ ವೈದಿಕವಾಕ್ಯಗಳ ಆಧಾರದ ಮೇಲೆಯೇ ಹೇಳಲ್ಪಟ್ಟಿವೆ. ಹೇಗೆಂದರೆ—

**ಚಕ್ಷುಸ್** ಶಬ್ದಕ್ಕೆ ಚಕ್ಷುರಾದೀಂದ್ರಿಯಗಳೆಂದರ್ಥಮಾಡಿದರೆ, ಆಗ ವಿಶ್ವಕರ್ಮನು ಆ ಇಂದ್ರಿಯಸಮೂಹರೂಪವಾದ ಶರೀರಕ್ಕೆ ಉತ್ಪಾದಕನೆಂದರ್ಥ ಅಥವಾ ಪಿತೃಶಬ್ದಕ್ಕೆ ಪಾಲಕನೆಂದಾಗಲಿ ಅಥವಾ ಒಡೆಯನೆಂದಾಗಲಿ ಅರ್ಥವಾಗಬಹುದು. ಪೋಷಕನಾದುದರಿಂದಲೇ ಒಡೆಯನು. ಚಕ್ಷುರಾದೀಂದ್ರಿಯಗಳಿಗೆ ಪ್ರಾಣವು ಪೋಷಕವು ಮತ್ತು ಪ್ರಾಣವಿರುವುದರಿಂದಲೇ ಇಂದ್ರಿಯಗಳ ಸ್ಥಿತಿಯಿರುತ್ತದೆ. ಇಲ್ಲದಿದ್ದರೆ ಅವಕ್ಕೆ ಸುಸ್ಥಿತಿಯಿಲ್ಲ. ಈ ಪ್ರಾಣವೇ ಪರಬ್ರಹ್ಮರೂಪವು. ಸಕಲ ಇಂದ್ರಿಯಗಳೂ ಪ್ರಾಣರೂಪಿಯಾದ ಬ್ರಹ್ಮನಿಂದಲೇ ರಕ್ಷಿತವಾಗುತ್ತವೆ.

**ಆದಿತ್ಯೋ ಹ ವೈ ಪ್ರಾಣಃ ।**

(ಪ್ರ. ಉ. ೧-೫)

**ಸ ಹೋವಾಚ । ವಿಜಾನ್ಯಾಮಹಂ ಯತ್ಪ್ರಾಣೋ ಬ್ರಹ್ಮ ॥**

(ಛಾ. ಉ. ೪-೧೦-೫)

ಆದಿತ್ಯನೇ ಪ್ರಾಣರೂಪನು. ಯಾವುದು ಪ್ರಾಣವೆಂದು ಪ್ರಸಿದ್ಧವಾಗಿದೆಯೋ ಅದೇ ಪರಬ್ರಹ್ಮನು. ಇಂದ್ರಿಯಾದಿಗಳಿಗೆ ಇದೇ ಪೋಷಕವು ಇತ್ಯಾದಿಯಾಗಿ ಸ್ತುತಿಸಿದೆ.

**ಅಥಾದಿತ್ಯ ಉದಯನ್ ಯತ್ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ । ಯದ್ದಕ್ಷಿಣಾಂ ಯತ್ಪ್ರತೀಚೀಂ ಯದುದೀಚೀಂ ಯದಧೋ**

**ಯದೂರ್ಧ್ವಂ ಯದಂತರಾ ದಿಶೋ ಯತ್ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ ॥**

(ಪ್ರಶ್ನ. ೧-೬)

ಜಗತ್ತಿಗೆ ಪ್ರಾಣರೂಪನಾದ ಈ ಆದಿತ್ಯನು ಉದಯಿಸಿ ಪ್ರಾಗ್ದಿಕ್ಕನ್ನು ಪ್ರವೇಶಿಸಿದೊಡನೆಯೇ, ಆ ದಿಕ್ಕಿನ ಪ್ರಾಣಗಳೆಲ್ಲವನ್ನೂ ತನ್ನ ರಶ್ಮಿಗಳಿಂದ ಚೈತನ್ಯಗೊಳಿಸುತ್ತಾನೆ. ಹಾಗೆಯೇ, ಉಳಿದ ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಮತ್ತು ಅವಾಂತರ ದಿಕ್ಕುಗಳು ಇವೆಲ್ಲವನ್ನೂ ತನ್ನ ರಶ್ಮಿಗಳಿಂದ ಪ್ರವೇಶಿಸಿ ಅವೆಲ್ಲವೂ ಪ್ರಾಣಯುಕ್ತವಾಗುವಂತೆ ಮಾಡುತ್ತಾನೆ.

**ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತದೃಚಾಭ್ಯುಕ್ತಂ ।**

(ಪ್ರ. ೧-೭)

ವೈಶ್ವಾನರಾಗ್ನಿಸಂಜ್ಞಕನಾದ ಈ ಪರಬ್ರಹ್ಮನೇ ಸಕಲರೂಪಗಳನ್ನು ಹೊಂದುತ್ತಾನೆ ಮತ್ತು ವಿಶ್ವಕ್ಕೆಲ್ಲ ಪ್ರಾಣರೂಪನು. ಈ ಜಗತ್ಪ್ರಾಣನನ್ನು ಈ ರೀತಿ ಪ್ರಶಂಸಿಸಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥**

(ಪ್ರ. ೧-೮)

ಈ ಪರಬ್ರಹ್ಮನು ವಿಶ್ವರೂಪಿಯು. ಸುವರ್ಣಾತ್ಮಕವಾದ ರೂಪವುಳ್ಳವನು, ಸರ್ವಜ್ಞನು, ಸಕಲರ ಜೀವನಕ್ಕೂ ಗುರಿ. ವಿಶ್ವಕ್ಕೆಲ್ಲ ಅದ್ವಿತೀಯನಾದ ತೇಜೋರೂಪನು. ಅನೇಕ ರಶ್ಮಿಯುತನು ಅನೇಕ ರೂಪಗಳಲ್ಲಿರತಕ್ಕವನು. ಸಕಲ ಜಗತ್ತಿಗೂ ಪ್ರಾಣರೂಪನು. ಈ ಜಗತ್ಪ್ರಾಣರೂಪಿಯಾದ ಆದಿತ್ಯನು ಉದಯಿಸಿ ವಿಶ್ವವೆಲ್ಲವೂ ಚೈತನ್ಯಯುಕ್ತವಾಗುವಂತೆ ಮಾಡುತ್ತಾನೆ. ಈ ಪ್ರಾಣವೇ ಸಕಲ ಇಂದ್ರಿಯಗಳಿಗೂ ಪೋಷಕವಾದುದರಿಂದ, ದೇಹದ ಸಕಲ ಇಂದ್ರಿಯಗಳೂ ಈ ಪ್ರಾಣಕ್ಕೆ ಅಧೀನವಾಗಿದ್ದು ಇದರ ನಿಯಮಗಳನ್ನು ಪಾಲಿಸುತ್ತವೆ. ಹೇಗೆಂದರೆ ;—

**ಪ್ರಾಣೋ ಬ್ರಹ್ಮೇತಿ ಹ ಸ್ಮಾಹ ಕೌಷೀತಕಿಃ—ತಸ್ಯ ಹ ವಾ ಏತಸ್ಯ ಪ್ರಾಣಸ್ಯ ಬ್ರಹ್ಮಣೋ ಮನೋ ದೂತಂ ಚಕ್ಷುರ್ಗೋಪ್ತೃ, ಶ್ರೋತ್ರಂ ಸಂಶ್ರಾವಯಿತೃ ವಾಕ್ಪರಿವೇಷ್ಟ್ರೀ ............ ............ ತಸ್ಮೈ ವಾ ಏತಸ್ಮೈ ಪ್ರಾಣಾಯ ಬ್ರಹ್ಮಣ ಏತಾಸ್ಸರ್ವಾ ದೇವತಾ ಯಾಚಮಾನಾಯ ಬಲಿಂ ಹರಂತಿ ............ ॥**

(ಕೌಷೀತಕೀ. ೨-೧)

ಪ್ರಾಣವೇ ಬ್ರಹ್ಮವೆಂದು ಕೌಷೀತಕಿಯ ಮತವು. ಬ್ರಹ್ಮರೂಪಿಯಾದ ಈ ಪ್ರಾಣಕ್ಕೆ ಮನಸ್ಸೇ ಸೇವಕನು. ಚಕ್ಷುಸ್ಸೇ ರಕ್ಷಕವು. ಶ್ರೋತ್ರವೇ ಪ್ರಕಾಶಕರೂಪವಾದ ಸಾಧನವು. ವಾಕ್ಕೇ ಗೃಹಪಾಲಕವಾದ ಶಕ್ತಿಯು. ಈ ತತ್ತ್ವವನ್ನರಿತ ಪುರುಷನಿಗೆ ಸೇವಕಾದಿಸಾಧನಸಂಪತ್ತೆಲ್ಲವೂ ಲಭಿಸುತ್ತದೆ. ಮನಸ್ಸು, ಚಕ್ಷಸ್ಸು, ಶ್ರೋತ್ರ ಮತ್ತು ವಾಕ್ಕೂ ಈ ಶಕ್ತಿಗಳು ಪ್ರಾಣರೂಪಿಯಾದ ಈ ಬ್ರಹ್ಮನಿಗೆ ಅವನಿಂದ ಯಾವ ವಿಧವಾದ ಪ್ರಾರ್ಥನೆಯಿಲ್ಲದಿದ್ದರೂ, ಅವನಿಗೆ ತಮ್ಮ ಸೇವಾರೂಪವ ಹವಿಸ್ಸನ್ನು ಅರ್ಪಿಸುತ್ತವೆ. ಎಂದರೆ, ಪ್ರಾಣರೂಪನಾದ ಬ್ರಹ್ಮನು ಇಂದ್ರಿಯಗಳ

ಸಹಾಯವಿಲ್ಲದೆಯೇ ಇರಬಲ್ಲನು ಎಂದೂ ಆದರೆ ಇಂದ್ರಿಯಗಳು ಮಾತ್ರ ಈ ಪ್ರಾಣದ ಸಹಾಯವಿಲ್ಲದೆ ಬದುಕ ಲಾರವು ಎಂದೂ ತಾತ್ಪರ್ಯ. ಪ್ರಾಣವು ಸ್ವತಂತ್ರವಾಗಿರಬಲ್ಲುದೆಂದೂ, ಪ್ರಾಣವಿಲ್ಲದೆ ಇಂದ್ರಿಯಗಳಾವೂ ಜೀವಿಸ ಲಾರವೆಂದೂ ತಿಳಿಸಲು ಬೃಹದಾರಣ್ಯಕೋಪನಿಷತ್ತಿನಲ್ಲಿ ಇತಿಹಾಸರೂಪವಾದ ಒಂದು ಸನ್ನಿವೇಶವು ಈ ರೀತಿ ವಿವೃತವಾತದೆ.

**ತೇ ಹೇಮೇ ಪ್ರಾಣಾ ಅಹಂಶ್ರೇಯಸೇ ವಿವದಮಾನಾ ಬ್ರಹ್ಮ ಜಗ್ಮುಸ್ತದ್ಧೋಚುಃ ಕೋ ನೋ ವಸಿಷ್ಠ ಇತಿ ತದ್ಧೋವಾಚ ಯಸ್ಮಿನ್ವ ಉತ್ಕ್ರಾಂತ ಇದಂ ಶರೀರಂ ಪಾಪೀಯೋ ಮನ್ಯತೇ ಸ ವೋ ವಸಿಷ್ಠ ಇತಿ ।**

(ಬೃ. ಉ. ೬-೧-೭)

ಒಂದು ಸಲ ವಾಗಾದೀಂದ್ರಿಯಗಳಿಗೂ ಪ್ರಾಣಕ್ಕೂ ತಮ್ಮ ವೈಯಕ್ತಿಕವಾದ ಶ್ರೇಷ್ಠತೆಯ ವಿಷಯದಲ್ಲಿ ಒಂದು ಚರ್ಚೆಯುಂಟಾಯಿತು. ಆಗ ಅವು ಪ್ರಜಾಪತಿಯನ್ನು ಸಮೀಪಿಸಿ ತಮ್ಮಲ್ಲೆಲ್ಲ ಯಾರು ಶ್ರೇಷ್ಠರೆಂದು ತಿಳಿಸಬೇಕೆಂದು ಪ್ರಜಾಪತಿಯನ್ನು ಪ್ರಾರ್ಥಿಸಿದವು. ಅದಕ್ಕೆ ಉತ್ತರವಾಗಿ ಪ್ರಜಾಪತಿಯು ನಿಮ್ಮಲ್ಲಿ ಯಾರು ದೇಹವನ್ನು ಬಿಟ್ಟು ಹೊರಟುಹೋದರೆ ಉಳಿದವರ ಸ್ಥಿತಿಗಳೆಲ್ಲವೂ ಕ್ಷಯಿಸುವುವೋ ಅವನೇ ನಿಮ್ಮಲ್ಲೆಲ್ಲ ಶ್ರೇಷ್ಠನು ಎಂದು ತಿಳಿಸಿದನು. ಇದನ್ನು ಪರೀಕ್ಷಿಸಲು ಅವು ಈ ರೀತಿ ಪ್ರಯತ್ನಿಸಿದರು

**ವಾಗ್ಘೋಚ್ಚಕ್ರಾಮ । ಸಾ ಸಂವತ್ಸರಂ ಪ್ರೋಷ್ಯಾಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾಽಕಲಾ ಅವದಂತೋ ವಾಚಾ ಪ್ರಾಣಂತಃ ಪ್ರಾಣೇನ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ ವಿದ್ವಾಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ವಾಕ್ ॥**

(ಬೃ. ಉ. ೬-೧-೮)

ಆಗ ವಾಕ್ಕು ಶರೀರವನ್ನು ತ್ಯಜಿಸಿ ಹೊರಟುಹೋಯಿತು. ಒಂದು ವರ್ಷಕಾಲ ಹೊರಗಡೆ ಇದ್ದು ಅನಂತರ ಹಿಂತಿರುಗಿ ದೇಹದ ಉಳಿದ ಇಂದ್ರಿಯಗಳನ್ನು ಕುರಿತು ಈ ಒಂದು ವರ್ಷಕಾಲವೂ ನಾನಿಲ್ಲದೆ ಹೇಗೆ ಜೀವಿಸಿದಿರಿ ಎಂದು ಕೇಳಿತು. ಅದಕ್ಕೆ ಉತ್ತರವಾಗಿ ನಾವು ವಾಕ್ಕಿನ ಸಹಾಯವಿಲ್ಲದ ಮೂಕರಾಗಿಯೂ ಮತ್ತು ಉಚ್ಛ್ವಾಸನಿಃಶ್ವಾಸರೂಪವಾದ ಪ್ರಾಣಗಳಿಂದ ಜೀವಿಸುತ್ತಲೂ, ಕಣ್ಣುಗಳಿಂದ ನೋಡುತ್ತಲೂ, ಕಿವಿಗಳಿಂದ ಕೇಳುತ್ತಲೂ, ಮನಸ್ಸಿನಿಂದ ಸಕಲವನ್ನೂ ತಿಳಿಯುತ್ತಲೂ, ರೇತಸ್ಸಿನಿಂದ ಸಂತಾನವನ್ನುತ್ಪನ್ನಮಾಡುತ್ತಲೂ ಜೀವಿಸಿದ್ದೆವು ಎಂದು ತಿಳಿಸಿದನಂತರ ವಾಕ್ಕು ಗಂಭೀರವಾಗಿ ಶರೀರವನ್ನು ಪ್ರವೇಶಿಸಿತು.

ಹೀಗೆಯೇ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಇವೂ ಸಹ ಒಂದೊಂದು ವರ್ಷ ಶರೀರವನ್ನು ತ್ಯಜಿಸಿ ಹೊರಟು ಹೋದಾಗಲೂ ಸಹ ಆ ಒಂದು ಇಂದ್ರಿಯವಿಲ್ಲದೇ, ಉಳಿದ ಇಂದ್ರಿಯಗಳು ತಮ್ಮ ಕೆಲಸವನ್ನು ನಿರ್ವಹಿಸುತ್ತಿದ್ದವು. ಪುರುಷನು ಜೀವಿಸಿಯೇ ಇದ್ದನು. ಅವುಗಳಲ್ಲಿ ಯಾವುವು ದೇಹವನ್ನು ತ್ಯಜಿಸಿದರೂ ದೇಹದ ಉಳಿದ ಇಂದ್ರಿಯಗಳಿಗೆ ಯಾವ ವಿಧವಾದ ಕ್ಷಯವೂ ಉಂಟಾಗುತ್ತಿರಲಿಲ್ಲ. ಅನಂತರ ಪ್ರಾಣವು ತನ್ನ ವೈಶಿಷ್ಟ್ಯವನ್ನು ಪರೀಕ್ಷಿಸಲಿಚ್ಛಿಸಿತು.

**ಅಥ ಹ ಪ್ರಾಣ ಉತ್ಕ್ರಮಿಷ್ಯನ್ಯಥಾ ಮಹಾಸುಹಯಃ ಸೈಂಧವಃ ಪಡ್ವೀಶಶಂಕೂನ್ ಸಂವೃಹೇ-**

ದೇವಂ ಹೈವೇಮಾನ್ ಪ್ರಾಣಾನ್ ಸಂವವರ್ಹ ತೇ ಹೋಚುರ್ಮಾ ಭಗವ ಉತ್ಕ್ರಮೀರ್ನ ವೈ ಶಕ್ಷ್ಯಾಮಸ್ತ್ವದೃತೇ ಜೀವಿತುಮಿತಿ ತಸ್ಯೋ ಮೇ ಬಲಿಂ ಕುರುತೇತಿ ತಥೇತಿ ||

(ಬೃ. ಉ. ೬-೧-೧೩)

ಪ್ರಾಣವು ತನ್ನ ವೈಶಿಷ್ಟ್ಯವನ್ನೂ, ಶಕ್ತಿಯನ್ನೂ ಪರೀಕ್ಷಿಸಲಿಚ್ಛಿಸಿದಾಗ ದೇಹವನ್ನು ತ್ಯಜಿಸಲು ಆರಂಭಿಸಿತು. ಆ ಒಡನೆಯೇ ಉಳಿದ ಎಲ್ಲ ಇಂದ್ರಿಯಗಳೂ ಶಿಥಿಲವಾದವು. ಸಿಂಧೂಪ್ರದೇಶದ ಉತ್ತಮವಾದ ಅಶ್ವವು ತಾನು ಓಡಲು ಯತ್ನಿಸಿ ತನ್ನ ಹಗ್ಗವನ್ನು ಅಲ್ಲಾಡಿಸಿ ಎಳೆದಾಗ ತನ್ನ ಕಾಲುಗಳನ್ನು ಬಂಧಿಸಲು ಸಹಾಯಕವಾದ ಸಕಲ ಗೂಟಗಳನ್ನೂ ಒಟ್ಟಿಗೆ ಕಿತ್ತುಕೊಂಡು ಹೊರಡುವಂತೆ ಈ ಪ್ರಾಣವು ತನ್ನನ್ನೇ ಅವಲಂಬಿಸಿದ್ದ ಸಕಲವಾದ ಇಂದ್ರಿಯಗಳನ್ನೂ ತನ್ನೊಡನೆಯೇ ದೇಹತ್ಯಾಗಮಾಡುವಂತೆ ಶಿಥಿಲಗೊಳಿಸಿತು. ಆಗ ಇಂದ್ರಿಯಗಳು ಎಲೈ ಪ್ರಾಣವೇ, ನೀನು ನಮ್ಮನ್ನು ಬಿಟ್ಟು ಹೋಗಬೇಡ. ನಿನ್ನನ್ನುಳಿದು ಜೀವಿಸಲಾರೆವು. ನೀನೇ ನಮಗೆಲ್ಲ ಶ್ರೇಷ್ಠನು ಎಂದು ಯಾಚಿಸಿದವು. ಆಗ ಪ್ರಾಣವು ಅದನ್ನು ಕುರಿತು ಶ್ರೇಷ್ಠನಾದರೆ ನನಗೆ ನಿಮ್ಮ ಸೇವಾರೂಪವಾದ ಹವಿಸ್ಸನ್ನರ್ಪಿಸಿರಿ ಎಂದು ಕೇಳಿದೊಡನೆಯೇ ಅವು ಆಗಲೆಂದು ಒಪ್ಪಿಕೊಂಡವು. ಪರಬ್ರಹ್ಮನೇ ಇಂದ್ರಿಯಾಧಿಪತಿಯೂ ಇಂದ್ರಿಯಪೋಷಕನೂ ಆದ ಈ ಪ್ರಾಣರೂಪದಲ್ಲಿದ್ದಾನೆ. ಇದಿಲ್ಲದೇ ಉಳಿದ ಇಂದ್ರಿಯಗಳು ಅಪ್ರಯೋಜಕವು ಎಂಬ ಇದೇ ವಿಷಯವನ್ನು ಪ್ರಶ್ನೋಪನಿಷತ್ತಿನಲ್ಲಿಯೂ ಈ ರೀತಿ ತಿಳಿಸಿದೆ. ಈ ವಿವರಣವು ಮೇಲೆ ತಿಳಿಸಿದ ವಿವರಣೆಗಿಂತ ಕೊಂಚ ವ್ಯತ್ಯಸ್ತವಾಗಿದೆ. ಹೇಗೆಂದರೆ—

ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಭಗವನ್ ಕತ್ಯೇವ ದೇವಾಃ ಪ್ರಜಾಂ ವಿಧಾರಯಂತೇ ? ಕತರ ಏತತ್ಪ್ರಕಾಶಯಂತೇ । ಕಃ ಪುನರೇಷಾಂ ವರಿಷ್ಠ ಇತಿ ||

(ಪ್ರಶ್ನ. ೨-೧)

ಎಲೈ ಪೂಜ್ಯರೇ, ಸ್ಪಷ್ಟವಾದ ಈ ಜಗತ್ತನ್ನು ಯಾವಯಾವ ಶಕ್ತಿಗಳು ಧರಿಸಿವೆ ? ಈ ಜಗತ್ತಿಗೆ ತೇಜಸ್ಸನ್ನು ಕೊಡತಕ್ಕ ಶಕ್ತಿಗಳು ಯಾವುವು ? ಅವುಗಳಲ್ಲಿ ಯಾವುದು ಶ್ರೇಷ್ಠ ? ಎಂಬುದಾಗಿ ವಿದರ್ಭದೇಶದ ಭಾರ್ಗವನು ಪಿಪ್ಪಲಾದನನ್ನು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಪಿಪ್ಪಲಾದನು ಈರೀತಿ ತಿಳಿಸಿದನು.

ತಸ್ಮೈ ಸ ಹೋವಾಚ ಆಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಶ್ಶ್ರೋತ್ರಂ ಚ । ತೇ ಪ್ರಕಾಶ್ಯಾಭಿವದಂತಿ ವಯಮೇತದ್ಬಾಣಮವಷ್ಟಭ್ಯ ವಿಧಾರಯಾಮಃ ||

(ಪ್ರಶ್ನ. ೨-೨)

ಆಕಾಶವೇ ಈ ಶಕ್ತಿಯು. ಅಲ್ಲದೆ ವಾಯು, ಅಗ್ನಿ, ಸಲಿಲ, ಪೃಥ್ವಿ, ವಾಕ್, ಮನಸ್ಸು, ಚಕ್ಷುಸ್, ಶ್ರೋತ್ರ, ಇವೆಲ್ಲವೂ ಸಹಕಾರಿಗಳು. ಅವೆಲ್ಲವೂ ಜಗತ್ತಿಗೆ ಶಕ್ತಿದಾಯಕಗಳು. ಆದುದರಿಂದಲೇ ಅವೆಲ್ಲವೂ ಸೇರಿ ನಾವೇ ಈ ದೇಹವನ್ನು ಭದ್ರವಾಗಿಟ್ಟಿರುತ್ತೇವೆ. ನಮ್ಮಿಂದಲೇ ಇದರ ಧಾರಣವು ಎಂದು ಹೇಳಿಕೊಂಡವು. ಆದರೆ, ಪ್ರಾಣವು ಆ ಪ್ರಕಟಣವನ್ನು ವಿರೋಧಿಸಿ ಈರೀತಿ ಪ್ರತ್ಯುತ್ತರವನ್ನು ಹೇಳಿತು.

ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥ ಅಹಮೇವೈತತ್ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮೀತಿ ತೇಽಶ್ರದ್ಧಧಾನಾ ಬಭೂವುಃ ||

(ಪ್ರಶ್ನ. ೨-೩)

ಅವುಗಳಿಗೆಲ್ಲ ಅತ್ಯಂತ ಶ್ರೇಷ್ಠವಾದ ಪ್ರಾಣವು ಅವನ್ನು ಕುರಿತು ಎಲೈ ಇಂದ್ರಿಯಗಳೇ, ನೀವೇ ದೇಹಧಾರಕರೆಂದೂ ನಿಮ್ಮಿಂದಲೇ ದೇಹದ ಸುಸ್ಥಿತಿಯಿದೆಯೆಂದೂ ತಿಳಿದಿರುವ ನಿಮ್ಮ ದುರಭಿಮಾನವನ್ನು ಬಿಡಿ. ನಾನೇ ನಿಮ್ಮ ರೂಪಗಳಲ್ಲಿ ಐದು ಭಾಗಗಳಿಂದ ನನ್ನ ರೂಪವನ್ನು ವಿಂಗಡಿಸಿ ಶರೀರಧಾರಣವನ್ನು ಮಾಡುತ್ತಿರುವೆನು ಎಂದಾಗ ಅವುಗಳಲ್ಲಿ ಯಾವುದೂ ಈ ಮಾತನ್ನು ನಂಬಲಿಲ್ಲ. ಅವುಗಳಿಗೆ ನಂಬಿಕೆಯನ್ನುಂಟುಮಾಡಲು ಪ್ರಾಣವು ಈ ರೀತಿ ಪ್ರಯತ್ನಿಸಿತು.

**ಸೋಽಭಿಮಾನಾದೂರ್ಧ್ವಮುತ್ಕ್ರಮತ ಇವ । ತಸ್ಮಿನ್ನುತ್ಕ್ರಾಮತ್ಯಥೇತರೇ ಸರ್ವ ಏವೋ-ತ್ಕ್ರಾಮಂತೇ । ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವ ಏವ ಪ್ರಾತಿಷ್ಠಂತೇ । ತದ್ಯಥಾ ಮಕ್ಷಿಕಾ ಮಧುಕರರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಾಮಂತೇ । ತಸ್ಮಿಂಶ್ಚ ಪ್ರತಿಷ್ಠ-ಮಾನೇ ಸರ್ವಾ ಏವ ಪ್ರಾತಿಷ್ಠಂತ ಏವಂ ವಾಙ್ಮನಶ್ಚಕ್ಷುಃಶ್ರೋತ್ರಂ ಚ ತೇ ಪ್ರೀತಾಃ ಪ್ರಾಣಂ ಸ್ತುವಂತಿ ॥**

(ಪ್ರಶ್ನ. ೨-೪)

ಆಗ ಪ್ರಾಣವು ತನ್ನ ಪರಾಕ್ರಮವನ್ನು ತೋರಿಸಲು ದೇಹವನ್ನು ತ್ಯಜಿಸಿಬಿಡಲು ಮೇಲಕ್ಕೆದ್ದಿತು. ಅದರೊಡನೆ ಉಳಿದ ಇಂದ್ರಿಯಗಳೂ ಮೇಲಕ್ಕೆದ್ದವು. ಅದು ದೇಹದಲ್ಲಿ ಪುನಃ ಸ್ಥಾಪಿತವಾದಾಗ ಉಳಿದ ಇಂದ್ರಿಯಗಳೂ ಸ್ಥಾಪಿತವಾದವು. ಮಧುಕರ ರಾಜನು ಎದ್ದಾಗ ಯಾವ ರೀತಿ ಉಳಿದ ಮಧುಕರಗಳು ಕುಳಿತುಕೊಳ್ಳುವುವೋ ಹಾಗೆ ಪ್ರಾಣರೂಪನಾದ ರಾಜನ ಗಮನಾಗಮನಗಳನ್ನೆಲ್ಲವೂ ಪ್ರಾಣದ ಶ್ರೇಷ್ಠತೆಯನ್ನರಿತು ಅದನ್ನು ಪ್ರಶಂಸಿಸಿದವು.

ಇದೇ ವಿಷಯವನ್ನು ಬೃಹದಾರಣ್ಯಕದಲ್ಲಿ ವಿವರಿಸುತ್ತ ಪ್ರಾಣದ ಮಹತ್ವವನ್ನು ಈ ರೀತಿ ತಿಳಿಸಿದೆ.

**ಅಥಾತೋ ವ್ರತಮೀಮಾಂಸಾ ಪ್ರಜಾಪತಿರ್ಹ ಕರ್ಮಾಣಿ ಸಸೃಜೇ ತಾನಿ ಸೃಷ್ಟಾನ್ಯನ್ಯೋನ್ಯೇ-ನಾಸ್ಪರ್ಧಂತ ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ ದ್ರಕ್ಷ್ಯಾಮ್ಯಹಮಿತಿ ಚಕ್ಷುಃ ಶ್ರೋಷ್ಯಾ-ಮ್ಯಹಮಿತಿ ಶ್ರೋತ್ರಮೇವಮನ್ಯಾನಿ ಕರ್ಮಾಣಿ ಯಥಾ ಕರ್ಮ ತಾನಿ ಮೃತ್ಯುಃ ಶ್ರಮೋ ಭೂತ್ವಾ ಉಪಯೇಮೇ ತಾನ್ಯಾಪ್ನೋತ್ತಾನ್ಯಾಪ್ತ್ವಾ ಮೃತ್ಯುರವಾರುಂಧ ತಸ್ಮಾಚ್ಛ್ರಾಮ್ಯ-ತ್ಯೇವ ವಾಕ್ ಶ್ರಾಮ್ಯತಿ ಚಕ್ಷುಃ ಶ್ರಾಮ್ಯತಿ ಶ್ರೋತ್ರಮಥೇಮಮೇವ ನಾಪ್ನೋ-ದ್ಯೋಽಯಂ ಮಧ್ಯಮಃ ಪ್ರಾಣಸ್ತಾನಿ ಜ್ಞಾತುಂ ದಧ್ರಿರೇ । ಅಯಂ ವೈ ನಃ ಶ್ರೇಷ್ಠೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇಽಥೋ ನ ರಿಷ್ಯತಿ ಹಂತಾಸ್ಯೈವ ಸರ್ವೇ ರೂಪಮಸಾಮೇತಿ ತ ಏತಸ್ಯೈವ ಸರ್ವೇ ರೂಪಮಭವಂಸ್ತಸ್ಮಾದೇತ ಏತೇನಾಖ್ಯಾಯಂತೇ ಪ್ರಾಣಾ ಇತಿ ತೇನ ಹ ವಾವ ತತ್ಕುಲಮಾಚಕ್ಷತೇ ಯಸ್ಮಿನ್ ಕುಲೇ ಭವತಿ ಯ ಏವಂ ವೇದ ಯ ಉ ಹೈವಂ ವಿದಾ ಸ್ಪರ್ಧತೇಽನುಶುಷ್ಯತ್ಯನುಶುಷ್ಯ ಹೈವಾಂತತೋ ಮ್ರಿಯತ ಇತ್ಯಧ್ಯಾತ್ಮಂ ॥**

(ಬೃ. ಉ. ೧-೫-೨೧)

ಪ್ರಜಾಪತಿಯು ಕರ್ಮಸಾಧಕಗಳಾದ ಇಂದ್ರಿಯಗಳನ್ನು ಉತ್ಪನ್ನಮಾಡಿದನು. ಉತ್ಪನ್ನವಾದೊಡನೆಯೇ ಅವುಗಳಲ್ಲಿ ಪರಸ್ಪರ ಸ್ಪರ್ಧೆಯುಂಟಾಯಿತು. ನೋಡತಕ್ಕವನು ನಾನೇ ಎಂದು ಚಕ್ಷುಸ್ಸೂ, ಮಾತನಾಡತಕ್ಕವನು ನಾನೇ ಎಂದು ವಾಕ್ಕೂ ಕೇಳತಕ್ಕವನು ನಾನೇ ಎಂದು ಶ್ರೋತ್ರವೂ, ಹೀಗೆಯೇ ಉಳಿದ ಇಂದ್ರಿಯಗಳೂ ತಮ್ಮ ತಮ್ಮ

ಪ್ರೌಢಿಮೆಯನ್ನು ಪ್ರಕಟಿಸುತ್ತ ದುರಭಿಮಾನವನ್ನು ತೋರಿಸಿದವು. ಆಗ ಶ್ರಮಕಾರಕವಾದ ಮೃತ್ಯುವು ಅವುಗಳನ್ನು ತನ್ನ ಹಿಡಿತದಲ್ಲಿ ಸಿಕ್ಕಿಸಿಕೊಂಡು ಅವುಗಳ ಸ್ವಾತಂತ್ರ್ಯವನ್ನಪಹರಿಸಿತು. ಆಗ ಚಕ್ಷುರಾದೀಂದ್ರಿಯಗಳೆಲ್ಲವೂ ವೀರ್ಯಹೀನತೆಯನ್ನು ಹೊಂದಿ ತಮ್ಮ ಕರ್ಮಗಳನ್ನು ನಡೆಸಲಾರದಾದವು. ಮೃತ್ಯುವು ಮಧ್ಯಭಾಗಸ್ಥವಾದ ಪ್ರಾಣವನ್ನು ಮಾತ್ರ ಹಿಡಿದು ಅಸ್ವತಂತ್ರವನ್ನಾಗಿ ಮಾಡಲಾಗಲಿಲ್ಲ. ಆಗ ಇಂದ್ರಿಯಗಳೆಲ್ಲವೂ ಸೇರಿ ತಮ್ಮ ಅಶಕ್ತಿಯನ್ನೂ ಪ್ರಾಣದ ಪ್ರಭಾವವನ್ನೂ ಅರಿತು ಈ ಪ್ರಾಣವೇ ನಮ್ಮೆಲ್ಲರಿಗಿಂತಲೂ ಉತ್ಕೃಷ್ಟವು. ಇದು ಮೃತ್ಯುವಿನ ಹಿಂಸೆಗೆ ಅಧೀನವಾಗಿರುವುದಿಲ್ಲ ಎಂದು ಹೇಳಿ ಎಲ್ಲವೂ ಆ ಪ್ರಾಣದ ರೂಪಾಂತರಗಳೆಂದೇ ಭಾವಿಸಿದವು. ಇವೆಲ್ಲಕ್ಕೂ ಪ್ರಾಣವೇ ಪ್ರಧಾನವಾದುದರಿಂದ ಸಕಲೇಂದ್ರಿಯಗಳ ಸಮೂಹವೂ ಪ್ರಾಣಸಂಜ್ಞಕವಾಯಿತು.

**ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುಃ ।**
**ಏಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥**

ಈ ಪ್ರಾಣವೇ ಅಗ್ನಿಯು. ಅಗ್ನಿರೂಪದಲ್ಲಿ ದಹಿಸುತ್ತದೆ. ಇದೇ ಸೂರ್ಯನು. ಇದೇ ಸಂಪತ್ಪ್ರದನಾದ ಪರ್ಜನ್ಯದೇವನು ಇದೇ ಪೃಥ್ವಿಯು. ಇದೇ ಪಾರ್ಥಿವಸಂಪತ್ತು. ಸದಾತ್ಮಕವೂ ಅಸದಾತ್ಮಕವೂ ಆದ ಸಕಲ ತತ್ತ್ವಗಳೂ ಇದೇ ಆಗಿದೆ. ಇದು ನಿತ್ಯವು.

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ।**
**ಋಚೋ ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥**

(ಪ್ರಶ್ನ. ೨-೬)

ಚಕ್ರದ ಅರೆಕೋಲುಗಳೆಲ್ಲವೂ ಚಕ್ರದ ನಾಭಿಸ್ಥಾನದಲ್ಲಿ ಸೇರಿರುವಂತೆ, ವಿಶ್ವದ ಸಮಸ್ತತತ್ತ್ವಗಳೂ ಈ ಪ್ರಾಣದಲ್ಲಿ ಪ್ರತಿಷ್ಠಾಪಿತವಾಗಿವೆ. ಋಕ್ಕು, ಯಜುಸ್ಸು, ಸಾಮ, ಯಜ್ಞ, ಕ್ಷತ್ರ, ಮತ್ತು ಬ್ರಹ್ಮಸಂಜ್ಞಕಗಳಾದ ಸಕಲ ವಾಕ್ಕುಗಳೂ ಸಕಲ ಶಕ್ತಿಗಳೂ ಈ ಪ್ರಾಣವನ್ನೇ ಆಶ್ರಯಿಸಿ ಇಲ್ಲೇ ಪ್ರತಿಷ್ಠಿತವಾಗಿವೆ.

**ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ ।**
**ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥**

(ಪ್ರಶ್ನ. ೨-೯)

ಪ್ರಾಣರೂಪನಾದ ಎಲೈ ಪ್ರಜಾಪತಿಯೇ, ನೀನೇ ಲೋಕಕ್ಕೆಲ್ಲ ಪ್ರಭುವು (ಸೃಷ್ಟಿಕರ್ತನು), ನೀನೇ ರುದ್ರನು ಮತ್ತು ತೇಜೋಯುತನು ನೀನೇ ರಕ್ಷಕನು. ನೀನೇ ಅಂತರಿಕ್ಷದಲ್ಲಿ ಸೂರ್ಯರೂಪದಲ್ಲಿ ಸಂಚರಿಸುತ್ತೀಯೆ. ನೀನೇ ಸಕಲ ಜ್ಯೋತಿಗಳಿಗೂ ಮೂಲರೂಪನಾದ ವಿಶ್ವಜ್ಯೋತಿಯು.

ಹೀಗೆ ಯಾವ ವಿಶ್ವಾತ್ಮಕವಾದ ತತ್ತ್ವವನ್ನು ಇಂದ್ರಿಯಸಂಘಾತರೂಪವಾದ ಶರೀರಕ್ಕೆಲ್ಲ ಉತ್ಪಾದಕವೂ ಪೋಷಕವೂ ಆಗಿದೆಯೆಂದು ವರ್ಣಿತವಾಗಿದೆಯೋ ಅದೇ ತತ್ತ್ವವು ವಿಶ್ವವ್ಯಾಪಕವಾದ ಜ್ಯೋತಿಸ್ತತ್ತ್ವವೆಂದೂ ಉಪನಿಷದಾದಿಗಳಲ್ಲಿ ವರ್ಣಿತವಾಗಿದೆ. ಅದನ್ನೇ ಸಾಯಣರು **ಚಕ್ಷುಷಃ ಪಿತಾ** ಎಂಬ ವಿಶೇಷಣಕ್ಕೆ ಎರಡನೆಯ ತಾತ್ಪರ್ಯವನ್ನು ವಿವರಿಸುವಾಗ ತಿಳಿಸಿದ್ದಾರೆ.

**ಚಕ್ಷುಃ ಖ್ಯಾಪಕಂ ತೇಜಃ । ತಸ್ಯ ಉತ್ಪಾದಯಿತಾ।** ಜ್ಞಾನಸಾಧನವೂ ಪ್ರಕಾಶಕವೂ ಆದ ತೇಜಸ್ಸೇ

**ಚಕ್ಷುಸ್** ಶಬ್ದದಿಂದ ನಿರ್ದಿಷ್ಟವಾಗಿದೆ. ಈ ತೇಜಸ್ಸಿಗೆ ಉತ್ಪಾದಕನೇ ವಿಶ್ವಕರ್ಮರೂಪನಾದ ಪರತತ್ತ್ವವು ಎಂಬುದು ಎರಡನೆಯ ತಾತ್ಪರ್ಯ. ಈ ತಾತ್ಪರ್ಯವೂ ಸನ್ನಿವೇಶಕ್ಕನುಗುಣವಾಗಿರುತ್ತದೆ.

**ಚಕ್ಷುಃ—ಖ್ಯಾತೇರ್ವಾ ಚಷ್ಟೇರ್ವಾ ।** ಜ್ಞಾನಾರ್ಥವಾದ **ಖ್ಯಾ** ಧಾತುವಿನಿಂದಾಗಲಿ ಅಥವಾ ದರ್ಶನಾರ್ಥಕವಾದ **ಚಕ್ಷ್** ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸಿದ್ದಾರೆ (ನಿ. ೪-೩).

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ ।**

(ಕಠ. ೫.೧೧)

ಸೂರ್ಯನೇ ಸಕಲ ಲೋಕಕ್ಕೂ ಚಕ್ಷೂರೂಪನು ಎಂದು ಉಪನಿಷದಾದಿಗಳಲ್ಲಿ ವರ್ಣಿತವಾಗಿರುವುದರಿಂದ ಅದೇ ಅರ್ಥವು ಪ್ರಕೃತವಾದ ಋಕ್ಕಿನಲ್ಲಿಯೂ ಸಮಂಜಸವಾಗಿರುತ್ತದೆ. ಈ ಲೋಕಚಕ್ಷುಸ್ಸು ತಾನು ತೇಜೋಮಯವಾಗಿದ್ದು ಉಳಿದ ತೇಜಸ್ಸುಗಳಿಗೂ ಉತ್ಪಾದಕವೂ ಪೋಷಕವೂ ಆಗಿರುತ್ತದೆ.

**ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥**

(ಮುಂಡಕ. ೨-೨-೯)

ಅತ್ಯಂತ ಶ್ರೇಷ್ಠವಾದ ಹಿರಣ್ಮಯಕೋಶದಲ್ಲಿ ನಿಷ್ಕಲ್ಮಷನೂ, ಪರಿಪೂರ್ಣನೂ, ಶುಭ್ರನೂ ಆದ ಬ್ರಹ್ಮನು ಸ್ಥಿತನಾಗಿದ್ದಾನೆ. ಈ ಪರಬ್ರಹ್ಮತತ್ತ್ವವೇ ಸಕಲ ಜ್ಯೋತಿಗಳಿಗೂ ಮೂಲರೂಪವಾದ ಜ್ಯೋತಿಯು ಎಂದು ಯಾವ ಪರಂಜ್ಯೋತಿಯು ವರ್ಣಿತವಾಗಿದೆಯೋ ಅದೇ ಇಲ್ಲಿ **ಚಕ್ಷುಷಃ ಪಿತಾ** ಎಂದು ವರ್ಣಿತವಾಗಿದೆಯೆಂದು ಸಾಯಣರ ತಾತ್ಪರ್ಯ. ಈ ಜ್ಯೋತಿಯ ಮಹತತ್ತ್ವವೇನೆಂದರೆ—

**ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

(ಮುಂಡಕ. ೨-೨-೧೦)

ಈ ಪರಂಜ್ಯೋತಿಯು ಪರಬ್ರಹ್ಮಸ್ವರೂಪದಿಂದ ವಿಶ್ವದಲ್ಲೆಲ್ಲಾ ವ್ಯಾಪಿಸಿರುವಾಗ ಎಂದರೆ ಬ್ರಹ್ಮವು ಅವ್ಯಾಕೃತಾವಸ್ಥೆಯಲ್ಲಿ ಜ್ಯೋತೀರೂಪದಿಂದಿರುವಾಗ ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ, ವಿದ್ಯುತ್ತುಗಳಾಗಲಿ ಪಾರ್ಥಿವಾಗ್ನಿಯಾಗಲಿ ಪ್ರಕಾಶಿಸಲು ಸಾಧ್ಯವಿಲ್ಲ. ಏಕೆಂದರೆ ಸೂರ್ಯಾದಿಗಳು ಆ ಕಾಲದಲ್ಲಿ ಸೃಷ್ಟರಾಗಿರುವುದಿಲ್ಲ. ಆ ದಿವ್ಯ ಜ್ಯೋತಿಯ ತೇಜಸ್ಸಿನಿಂದಲೇ ಉಳಿದ ಸಕಲ ಜ್ಯೋತಿಗಳೂ ಬೆಳಗುತ್ತವೆ. ಯಾವ ಮಹಾಜ್ಯೋತಿಯನ್ನು ಋಕ್ಸಂಹಿತೆಯಲ್ಲಿ—

**ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ । ವಿಶ್ವಮಾಭಾಸಿ ರೋಚನಂ ॥**

(ಋ. ಸಂ. ೧-೫೦-೪)

ಎಲೈ ಸೂರ್ಯನೇ, ನೀನು ಸಕಲ ಜ್ಯೋತಿಗೂ ನಿರ್ಮಾಪಕನು. ನಿನ್ನಿಂದಲೇ ಸಕಲವೂ ಪ್ರಕಾಶಗೊಳ್ಳುತ್ತವೆ ಎಂದು ವರ್ಣಿಸಿದೆಯೋ ಅದನ್ನೇ ಇಲ್ಲಿಯೂ ಸಹ ವರ್ಣಿಸಿದೆ.

ಹೀಗೆ ಸಕಲ ವಿಶ್ವವೂ ಈ ವಿಶ್ವಕರ್ಮನ ಅಧೀನಕ್ಕೆ ಒಳಪಟ್ಟಿರುವುದರಿಂದಲೇ **ಮನಸಾ ಹಿ ಧೀರಃ** ಎಂದು ಇವನನ್ನು ವರ್ಣಿಸಿದೆ. **ನ ಹಿ ಮತ್ತನ್ಯೋಽಸ್ತಿ ಕಶ್ಚಿದಿತಿ ಬುದ್ಧ್ಯಾ ಧೃಷ್ಟೋ ವಿಶ್ವಕರ್ಮಾ** ನನಗೆ ಸಮನಾದವನು ಯಾರೂ ಇಲ್ಲ. ಉಳಿದವರೆಲ್ಲರೂ ನನ್ನ ಅಧೀನಕ್ಕೆ ಒಳಪಟ್ಟವರು ಎಂಬ ಧೀರತ್ವವನ್ನು ಪ್ರಕಟಿಸುತ್ತಿರುವ ವಿಶ್ವಕರ್ಮನ ಧಾರ್ಷ್ಟ್ಯವೂ ಸಹ ವರ್ಣಿತವಾಗಿದೆ. ಇದೇ ಅಂಶವನ್ನು ಉಪನಿಷತ್ತುಗಳೂ ಸಹ ಈ ರೀತಿ ವರ್ಣಿಸಿದೆ.

> **ಭೀಷಾಸ್ಮಾದ್ವಾತಃ ಪವತೇ। ಭೀಷೋದೇತಿ ಸೂರ್ಯಃ। ಭೀಷಾಸ್ಮಾದಗ್ನಿಶ್ಚೇಂದ್ರಶ್ಚ। ಮೃತ್ಯುರ್ಧಾವತಿ ಪಂಚಮ ಇತಿ ॥**
>
> (ತೈ. ಉ. ೨-೮-೧)

ಈ ಪರತತ್ತ್ವಕ್ಕೆ ಬೆದರಿ ವಾಯುವು ಬೀಸುತ್ತದೆ. ಸೂರ್ಯನೂ ಇದರ ಅಧೀನಕ್ಕೆ ಒಳಪಟ್ಟು ಉದಯಿಸುತ್ತಾನೆ. ಅಗ್ನಿ, ಇಂದ್ರ ಇವರೆಲ್ಲರೂ ಈ ಪರತತ್ತ್ವದ ನಿಯಮಕ್ಕೆ ಬೆದರಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಆದುದರಿಂದಲೇ ಇವನು ಸಕಲರಿಗೂ ಪ್ರಭುವಾಗಿಯೂ, ತಾನು ಮಾತ್ರ ಯಾರ ಪ್ರಭುತ್ವಕ್ಕೂ ಒಳಪಡದೆಯೂ, ತನ್ನ ಸಾಮ್ರಾಜ್ಯಪದವಿಯನ್ನು ಅನುಭವಿಸುತ್ತಿದ್ದಾನೆ ಎಂಬಂಶವು **ಮನಸಾ ಹಿ ಧೀರಃ** ಎಂಬುದರಿಂದ ನಿರ್ದಿಷ್ಟವಾಗಿದೆ.

**ಯದೇದಂತಾ ಅದದೃಹಂತ ಪೂರ್ವೇ**—ಈ ವಿಶ್ವಕರ್ಮನ ಪ್ರಭಾವದಿಂದಲೇ ದ್ಯಾವಾಪೃಥಿವಿಗಳ ಸಕಲ ಪರ್ಯಂತಪ್ರದೇಶಗಳೂ ದೃಢವಾಗಿ ಸ್ಥಾಪಿತವಾದವು. ದ್ಯಾವಾಪೃಥಿವಿಗಳೇ ವಿಶ್ವಕರ್ಮನ ಅವಯವರೂಪಗಳಂತಿರುವುದರಿಂದ ಈ ಪರ್ಯಂತಪ್ರದೇಶಗಳಾವುವು ? ಇವುಗಳಿಗೂ ವಿಶ್ವಕರ್ಮನಿಗೂ ಇರುವ ಸಂಬಂಧವೇನು ಎಂದರೆ ಅದಕ್ಕೆ ಉತ್ತರವಾಗಿ ಉಪನಿಷತ್ತುಗಳಲ್ಲಿ ಈ ಪರ್ಯಂತಪ್ರದೇಶಗಳ ವರ್ಣನವು ವಿಸ್ತೃತವಾಗಿರುತ್ತದೆ. ಈ ಪರ್ಯಂತಗಳನ್ನೊಳಗೊಂಡಿರುವುದರಿಂದಲೇ ಬ್ರಹ್ಮನು ಚತುಷ್ಕಲನೆಂದೂ ವರ್ಣಿತನಾಗಿದ್ದಾನೆ. ಅವು ಯಾವುವೆಂದರೆ ಮೊದಲನೆಯದಾಗಿ—

> **ಬ್ರಹ್ಮಣಶ್ಚ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಚೀ ದಿಕ್ಕಲಾ ಪ್ರತೀಚೀ ದಿಕ್ಕಲಾ ದಕ್ಷಿಣಾ ದಿಕ್ಕಲೋದೀಚೀ ದಿಕ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ನಾಮ ॥**
>
> (ಛಾ. ಉ. ೪-೫-೨)

ಬ್ರಹ್ಮನು ಚತುಷ್ಕಲನು. ಅವನಿಗೆ ನಾಲ್ಕು ಪಾದಗಳು. ಪೂರ್ವದಿಕ್ಕೇ ಒಂದು ಪಾದ. ದಕ್ಷಿಣದಿಕ್ಕು ಎರಡನೆಯ ಪಾದ. ಪಶ್ಚಿಮವು ಮೂರನೆಯದು. ಉತ್ತರವು ನಾಲ್ಕನೆಯದು. ಹೀಗೆ ಈ ನಾಲ್ಕೂ ಬ್ರಹ್ಮನ ನಾಲ್ಕು ಪಾದಗಳು. ಇವು ಅತ್ಯಂತ ಪ್ರಕಾಶಮಾನವಾದವು. ಇವನ್ನೇ ಪ್ರಕೃತವಾದ ಋಕ್ಕಿನಲ್ಲಿ **ಅಂತಾ ಅದದೃಹಂತ** ಎಂದು ವರ್ಣಿಸಲಾಗಿದೆ. ಇದಲ್ಲದೇ, ಅಗ್ನಿಯು ಸತ್ಯಕಾಮನಿಗೆ ಉಪದೇಶಿಸಿದ ಬ್ರಹ್ಮನ ಕಲೆಗಳು ಇನ್ನೊಂದು ವಿಧವಾಗಿದೆ.

> **ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪೃಥಿವೀ ಕಲಾಂತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋಽನಂತವಾನ್ನಾಮ ॥**
>
> (ಛಾ. ಉ. ೪-೬-೩)

ಬ್ರಹ್ಮನಿಗೆ ಪೃಥ್ವಿಯು ಒಂದು ಪಾದ, ಅಂತರಿಕ್ಷವು ಎರಡನೆಯದು, ದ್ಯುಲೋಕವು ಮೂರನೆಯದು, ಮತ್ತು ಸಮುದ್ರವು

ನಾಲ್ಕನೆಯದು. ಎಲೈ ಸತ್ಯಕಾಮನೇ, ಇವೆಲ್ಲವೂ ಅನಂತವೆಂಬ ಹೆಸರನ್ನು ಪಡೆದಿವೆ. ಇದಲ್ಲದೇ ಹಂಸವೂ ಸತ್ಯಕಾಮನಿಗೆ ಇನ್ನೊಂದುವಿಧದಲ್ಲಿ ಬ್ರಹ್ಮನ ಪಾದಗಳ ಸ್ವರೂಪಗಳನ್ನು ತಿಳಿಸಿದೆ.

**ತಸ್ಮೈ ಹೋವಾಚಾಗ್ನಿಃ ಕಲಾ ಸೂರ್ಯಃ ಕಲಾ ಚಂದ್ರಃ ಕಲಾ ವಿದ್ಯುತ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋ ಜ್ಯೋತಿಷ್ಮಾನ್ನಾಮ ॥** (ಛಾ. ಉ. ೪-೬-೩)

ಅಗ್ನಿ, ಸೂರ್ಯ, ಚಂದ್ರ ಮತ್ತು ವಿದ್ಯುತ್ ಈ ನಾಲ್ಕೂ ನಾಲ್ಕುವಿಧವಾದ ಪಾದಗಳು. ಇವುಗಳಿಗೆ ಜ್ಯೋತಿಷ್ಮತ್ತುಗಳೆಂದು ಹೆಸರು. ಇವುಗಳ ಸ್ವರೂಪವನ್ನರಿತವನು ಜ್ಯೋತಿಷ್ಮಂತನಾಗುತ್ತಾನೆ. ಹೀಗೆ ಸಕಲ ದಿಗ್ದಿಗಂತರಗಳೂ ಬ್ರಹ್ಮನ ಅಂಶಗಳೇ ಆಗಿರುವುದರಿಂದ ಅವೆಲ್ಲವೂ ಬ್ರಹ್ಮನ ಪಾದಗಳೆಂದು ಪ್ರಸಿದ್ಧವಾಗಿವೆ. ಮೇಲೆ ಹೇಳಿದವಲ್ಲದೇ, ಮದ್ಗುಸಂಜ್ಞಕವಾದ ಜಲಚರಪಕ್ಷಿಯು ಸತ್ಯಕಾಮನಿಗೆ ಬೇರೊಂದು ರೀತಿಯಲ್ಲಿ ಈ ಬ್ರಹ್ಮನ ಪಾದಗಳನ್ನು ವರ್ಣಿಸುತ್ತದೆ.

**ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಣಃ ಕಲಾ ಚಕ್ಷುಃ ಕಲಾ ಶ್ರೋತ್ರಂ ಕಲಾ ಮನಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣ ಆಯತನವಾನ್ನಾಮ ॥** (ಛಾ. ಉ. ೪-೮-೩)

ಎಲೈ ಸತ್ಯಕಾಮನೇ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಮತ್ತು ಪ್ರಾಣ ಇವೆಲ್ಲವೂ ಬ್ರಹ್ಮನ ನಾಲ್ಕು ಪಾದಗಳು. ಇವುಗಳು ಆಧಾರಭೂತವಾದವು. ಇವುಗಳನ್ನು ಹೊಂದಿರುವುದರಿಂದಲೇ, ಬ್ರಹ್ಮನಿಗೆ **ಆಯತನವಾನ್** ಎಂಬ ಹೆಸರು.

ಹೀಗೆ **ಚಕ್ಷುಸ್** ಶಬ್ದಕ್ಕೆ ಇಂದ್ರಿಯಗಳೆಂದು ಅರ್ಥಮಾಡಿದರೂ ಬ್ರಹ್ಮನು ಇಂದ್ರಿಯಜನಕನು ಮತ್ತು ಇಂದ್ರಿಯಸಂಘಾತರೂಪವಾದ ದೇಹದ ಪೋಷಕನೆಂದೂ ಅರ್ಥವಾಗುತ್ತದೆ. ಜ್ಯೋತಿಯೆಂದರ್ಥಮಾಡಿದರೂ ಸಹ ಜ್ಯೋತೀರೂಪದ ನಾಲ್ಕು ಅಂತಗಳನ್ನು ಹೊಂದಿರುವುದರಿಂದ ಈ ಅರ್ಥವೂ ಸಮಂಜಸವಾಗುತ್ತವೆ. ಈ ಚಕ್ಷುಸ್ಸುಗಳಿಗೆ ಪಿತೃವಾದ ವಿಶ್ವಕರ್ಮನ ಸಂಕಲ್ಪದ ಮೇರೆಗೆ ಸಕಲ ದಿಗ್ದಿಗಂತಗಳೂ ಸ್ಥೈರ್ಯವನ್ನು ಪಡೆದವು ಮತ್ತು ಅವುಗಳಿಗೆಲ್ಲ ಪೂರ್ಣಧಾರಕನೂ, ಪೋಷಕನೂ ಆಗಿದ್ದಾನೆ ಎಂಬುದೇ ಋಕ್ಕಿನ ಮುಖ್ಯ ತಾತ್ಪರ್ಯ.

॥ ಸಂಹಿತಾಪಾಠಃ ॥

**ವಿಶ್ವಕರ್ಮಾ ವಿಮನಾ ಆದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ ।**

**ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರಾ ಸಪ್ತಋಷೀನ್ಪರ ಏಕಮಾಹುಃ ॥**

॥ ಪದಪಾಠಃ ॥

**ವಿಶ್ವಽಕರ್ಮಾ । ವಿಽಮನಾಃ । ಆತ್ । ವಿಽಹಾಯಾಃ । ಧಾತಾ । ವಿಽಧಾತಾ । ಪರಮಾ । ಉತ । ಸಂಽದೃಕ್ ।**

**ತೇಷಾಂ । ಇಷ್ಟಾನಿ । ಸಂ । ಇಷಾ । ಮದಂತಿ । ಯತ್ರ । ಸಪ್ತಽಋಷೀನ್ । ಪರಃ । ಏಕಂ । ಆಹುಃ ॥**

॥ ಸಾಯಣಭಾಷ್ಯಂ ॥

ವೈಶ್ವಕರ್ಮಣಸ್ಯ ಪಶೋರ್ಹವಿಷ ಏಷಾನುವಾಕ್ಯಾ । ವಿಶ್ವಕರ್ಮಾ ವಿಮನಾ ಆದ್ವಿಹಾಯಾಃ ಕಿಂ ಸ್ವಿದಾಸೀದಧಿಷ್ಠಾನಂ । ಅ. ೩-೮ ಇತಿ ಸೂತ್ರಿತಂ ॥

ಅಯಂ ಮಂತ್ರೋಽಧಿಯಜ್ಞಾಧ್ಯಾತ್ಮಯೋರ್ಭೇದೇನ ದ್ವಿಧಾ ವ್ಯಾಖ್ಯೇಯಃ । ತತ್ರ ಪ್ರಥಮಂ ದೈವತಮಧಿಕೃತ್ಯೋಚ್ಯತೇ । ವಿಶ್ವಕರ್ಮಾ ಬಹುವಿಧಪ್ರಕಾರವೃಷ್ಟಿಪ್ರದಾನಾದಿಕರ್ಮಣಾಂ ಕರ್ತಾದಿತ್ಯಃ ಸ ಚ ವಿಮನಾ ವಿಭೂತಮನಾಃ । ಆದಿತ್ಯನರ್ಥಕಃ ಸರ್ವತ ಇತ್ಯರ್ಥೋ ವಾ । ವಿಹಾಯಾ ವಿವಿಧಮಾಪ್ತಾ । ಮಹಾನಿತ್ಯರ್ಥಃ । ಧಾತಾ ವೃಷ್ಟ್ಯಾದಿಕರ್ತಾ ಚ ವಿಧಾತಾ ಜಗತಃ ಕರ್ತಾ ಚ ಪರಮಾ ಪರಮಃ ಸಂದೃಕ್ ಸಂದ್ರಷ್ಟಾ ಚ ಭೂತಾನಾಂ । ತೇಷಾಂ ಸಪ್ತರ್ಷೀಣಾಂ । ಜ್ಯೋತಿಷಾಂ ರಶ್ಮೀನಾಮಿತ್ಯರ್ಥಃ । ಚರಮಪಾದೇ ವಕ್ಷ್ಯಮಾಣತ್ವಾತ್ । ಇಷ್ಟಾನಿ ಸ್ಥಾನಾನಿ ಶರೀರಾಣಿ ವೇಷೋದಕೇನ ಸಂ ಮದಂತಿ ಸಂಮೋದಂತೇ ಯತ್ರ ಯಸ್ಮಿನ್ನಾದಿತ್ಯೇ ತಂ ದೇವಂ ಸಪ್ತರ್ಷೀನ್ । ಸಪ್ತರ್ಷಿಭ್ಯ ಇತ್ಯರ್ಥಃ । ತೇಭ್ಯಃ ಪರಃ ಪರಸ್ತಾದೇಕಮೇವಾದಿತ್ಯಮಾಹುರ್ಮಂತ್ರವಿದಃ ॥ ಅಧ್ಯಾತ್ಮಪಕ್ಷ ಉಚ್ಯತೇ । ವಿಶ್ವಕರ್ಮಾ-ಯಃ ಪರಮಾತ್ಮಾ ಪ್ರಾಣಪ್ರಕಾಶಾಭ್ಯಾಮುಪೇತಃ ಸನ್ ಬಹುಕರ್ಮಾ ಭವತಿ ಸ ಚ ವಿಮನಾ ವಿಭೂತಮನಾ ವಿಹಾಯಾ ವಸ್ತುತೋ ಮಹಾನ್ ವಿಶೇಷೇಣ ಸುಕೃತದುಷ್ಕೃತಫಲಸ್ಯಾಪ್ತಾ ಧಾತಾ ವಿಧಾತಾ ಚ ಪರಮೋತ ಸಂದೃಕ್ ಪರಮಶ್ಚ ಸಂದ್ರಷ್ಟೇಂದ್ರಿಯಾಣಾಂ । ತೇಷಾಂ ಸಪ್ತರ್ಷೀಣಾಂ ದ್ರಷ್ಟೄಣಾಮಿಂದ್ರಿಯಾಣಾಮಿಷ್ಟಾನಿ ಸ್ವರೂಪಾಣೀಷಾನ್ನೇನ ಸಹ ಸಂ ಮದಂತಿ ಸಂಮೋದಂತೇ ಯತ್ರ ಯಸ್ಮಿನ್ನಾತ್ಮನಿ ತಮಾತ್ಮಾನಂ ಸಪ್ತರ್ಷೀನ್ಸಪ್ತಸಂಖ್ಯಾಕೇಭ್ಯಃ ಸರ್ಪಣಸ್ವಭಾವೇಭ್ಯೋ ವಾ ಪರಃ ಪರಸ್ತಾದ್ವರ್ತಮಾನಮಿಂದ್ರಿಯಾದ್ಯತೀತಮೇಕಂ ಪರಮಾತ್ಮಾನಮಾಹುಸ್ತತ್ತ್ವವಿದಃ ॥ ಅತ್ರ ವಿಶ್ವಕರ್ಮಾ ವಿಭೂತಮನಾ ವ್ಯಾಪ್ತೇತ್ಯಾದಿ ನಿರುಕ್ತಮನುಸಂಧೇಯಂ । ೧೦-೨೬ ॥

॥ ಪ್ರತಿಪದಾರ್ಥ ॥

**ವಿಶ್ವಕರ್ಮಾ**—ವಿಶ್ವಕರ್ಮದೇವನು । **ವಿಮನಾಃ**—ವಿಶೇಷಪ್ರಜ್ಞೆಯುಳ್ಳ ಮನಸ್ಸುಳ್ಳವನೂ । **ವಿಹಾಯಾಃ**—ಮಹಾತ್ಮನೂ । **ಧಾತಾ**—ವೃಷ್ಟ್ಯಾದಿಗಳ ಕರ್ತನೂ । **ವಿಧಾತಾ**—ಸಕಲ ಜಗತ್ತಿಗೂ ನಿರ್ಮಾಪಕನೂ । **ಪರಮಾ**—ಶ್ರೇಷ್ಠನೂ । **ಸಂದೃಕ್**—ಎಲ್ಲವನ್ನೂ ಸೂಕ್ಷ್ಮವಾಗಿ ನೋಡುವವನೂ ಆಗಿದ್ದಾನೆ । **ಯತ್ರ**—ಯಾವ ಈ ವಿಶ್ವಕರ್ಮನಲ್ಲಿ । **ತೇಷಾಂ**—ಸಕಲ ಜ್ಯೋತಿಗಳ । **ಇಷ್ಟಾನಿ**—ಸ್ವರೂಪ ಮತ್ತು ಸಂಕಲಗಳೂ । **ಇಷಾ**—ಉದಕದೊಡನೆ ಕೂಡಿ । **ಸಂ ಮದಂತಿ**—ಒಟ್ಟಿಗೆ ತೃಪ್ತಿಯನ್ನು ಹೊಂದುವುವೋ ಆ ವಿಶ್ವಕರ್ಮನನ್ನು । **ಸಪ್ತರ್ಷೀನ್ ಪರಃ**—ಸಪ್ತರ್ಷಿಗಿಂತಲೂ ಅಧಿಕನೂ । **ಏಕಂ**—ಅದ್ವಿತೀಯನೂ ಆದ ಆದಿತ್ಯನೆಂದು । **ಆಹುಃ**—ತಿಳಿದವರು ಹೇಳುತ್ತಾರೆ.

॥ ಭಾವಾರ್ಥ ॥

ವಿಶ್ವಕರ್ಮದೇವನು ವಿಶೇಷವಾದ ಪ್ರಜ್ಞೆಯುಳ್ಳ ಮನಸ್ಸುಳ್ಳವನೂ, ಮಹಾತ್ಮನೂ, ವೃಷ್ಟ್ಯಾದಿಗಳ ಕರ್ತನೂ, ಸಕಲ ಜಗತ್ತಿಗೂ ನಿರ್ಮಾಪಕನೂ, ಶ್ರೇಷ್ಠನೂ, ಎಲ್ಲವನ್ನೂ ಸೂಕ್ಷ್ಮವಾಗಿ ನೋಡುವವನೂ ಆಗಿದ್ದಾನೆ. ಯಾವ ಈ ವಿಶ್ವಕರ್ಮನಲ್ಲಿ ಸಕಲ ಜ್ಯೋತಿಗಳ ಸ್ವರೂಪ ಮತ್ತು ಸಂಕಲ್ಪಗಳೂ ಉದಕದೊಡನೆ ಕೂಡಿ ಒಟ್ಟಿಗೆ

ತೃಪ್ತಿಯನ್ನು ಹೊಂದುವುವೋ ಆ ವಿಶ್ವಕರ್ಮನನ್ನು ಸಪ್ತರ್ಷಿಗಿಂತಲೂ ಅಧಿಕನೂ, ಅದ್ವಿತೀಯನೂ ಆದ ಆದಿತ್ಯನೆಂದು ತಿಳಿದವರು ಹೇಳುತ್ತಾರೆ.

English Translation

Vishwakarman, of comprehensive mind and manifold greatness, is all-pervading, the creator, the arranger and the supreme supervisor ; him in whom the desires of their (senses) are satisfied with food, they call (him) supreme beyond the seven Rishis.

|| ವಿಶೇಷವಿಷಯಗಳು ||

ವಿಶ್ವಕರ್ಮನೆಂಬ ದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ **ಹವಿಸ್ಸ**ನ್ನು ಹೋಮಮಾಡುವಾಗ **ವಿಶ್ವಕರ್ಮಾ ವಿಮನಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ವಿಶ್ವಕರ್ಮಾ ವಿಮನಾ ಅದ್ವಿಹಾಯಾಃ ಕಿಂ ಸ್ವಿದಾಸೀದಧಿಷ್ಠಾನಂ** ಎಂಬ ಸೂತ್ರದಿಂದ (ಆ. ೩-೮) ವಿನ್ಯತವಾಗಿರುವುದು.

**ವಿಶ್ವ**ಕರ್ಮನು ಯಾರು, ಈ ದೇವತೆಯ ಸ್ವರೂಪವೇನು ಎಂಬುದನ್ನು ವಿವರಿಸುವಾಗ ಯಾಸ್ಕರು ಈ ಋಕ್ಕಿಗೆ ಅಧಿದೈವತ ಮತ್ತು ಅಧ್ಯಾತ್ಮಪಕ್ಷಗಳೆರಡರಲ್ಲಿಯೂ ನಿರ್ವಚನವನ್ನು ಹೇಳಿದಾರೆ—

> **ವಿಶ್ವಕರ್ಮಾ ವಿಭೂತಮನಾ ವ್ಯಾಪ್ತಾ ಧಾತಾ ಚ ವಿಧಾತಾ ಚ ಪರಮಶ್ಚ ಸಂದ್ರಷ್ಟಾ ಭೂತಾನಾಂ ತೇಷಾಮಿಷ್ಟಾನಿ ವಾ, ಕಾಂತಾನಿ ವಾ ಕ್ರಾಂತಾನಿ ವಾ, ಗತಾನಿ ವಾ, ಮತಾನಿ ವಾ, ನತಾನಿ ವಾದ್ಭಿಃ ಸಹ ಸಂಮೋದಂತೇ ಯತ್ರೈತಾನಿ ಸಪ್ತಋಷೀಣಾನಿ ಜ್ಯೋತೀಂಷಿ ತೇಭ್ಯಃ ಪರ ಆದಿತ್ಯಸ್ತಾನ್ಯೇತಸ್ಮಿನ್ನೇಕಂ ಭವಂತೀತ್ಯಧಿದೈವತಂ ||**
>
> (ನಿ. ೧೦-೨೬)

ಇಲ್ಲಿ **ವಿಮನಾಃ** ಎಂಬ ಶಬ್ದಕ್ಕೆ **ವಿಭೂತಮನಾಃ** ಎಂದು ಅರ್ಥಮಾಡಿದಾರೆ. ಎಂದರೆ—**ವಿಭೂತಪ್ರಜ್ಞಾನಃ, ಸರ್ವತ್ರಾಪ್ರತಿಹತಮಸ್ಯ ಪ್ರಜ್ಞಾನಂ ।** ಇಲ್ಲಿ ವಿಶ್ವಕರ್ಮಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿದಾರೆ. ಆದ್ದರಿಂದ **ಈ ಋ**ಕ್ಕಿನಲ್ಲಿ ಪ್ರತಿಪಾದಿತನಾಗಿರುವ ವಿಶ್ವಕರ್ಮನ ಅಥವಾ ಆದಿತ್ಯನ ಪ್ರಜ್ಞೆಯು ಸರ್ವತ್ರ ಅಪ್ರತಿಹತವಾದುದು. ಸಮಸ್ತ ಸ್ಥಳಗಳಲ್ಲಿಯೂ, ಸಮಸ್ತ ವಿಷಯಗಳಲ್ಲಿಯೂ ಆ ವಿಶ್ವಕರ್ಮನ (ಆದಿತ್ಯನ) ಪ್ರಜ್ಞೆಗೆ (ಜ್ಞಾನಕ್ಕೆ) ತಡೆಯೆಂಬುದೇ ಇಲ್ಲ. ಅವನ ಪ್ರಜ್ಞೆಯು ಎಲ್ಲೆಡೆಯಲ್ಲಿಯೂ ವ್ಯಾಪಿಸಿ ಪ್ರಸರಿಸಿರುವುದು. ಈ ವಿಶ್ವಕರ್ಮನಿಗೆ ಇಂತಹ ಜ್ಞಾನಮಾತ್ರವಿರುವುದೇ ? ಬೇರೆ ಶಕ್ತಿ ಯಾವುದೂ ಇಲ್ಲವೇ ? ಎಂದರೆ **ಧಾತಾ ಚ ವಿಧಾತಾ ಚ**—ಇವನು ಸರ್ವ ಪ್ರಕಾರದಿಂದಲೂ ಸಮಸ್ತ ಜಗತ್ತನ್ನೂ ವ್ಯಾಪಿಸಿರುವವನು ಮಾತ್ರವೇ ಅಲ್ಲ. ಆದರೆ ಸಮಸ್ತ ಭೂತಜಾತಗಳ ಸೃಷ್ಟಿಕರ್ತನಾಗಿರುವನು. ಸಮಸ್ತ ಪ್ರಾಣಿಗಳನ್ನೂ ಇವನೇ ಉತ್ಪತ್ತಿಮಾಡುವವನು ಮತ್ತು ತಾನು ಉತ್ಪತ್ತಿಮಾಡಿದ **ಈ** ಪ್ರಾಣಿಗಳೆಲ್ಲಾ ತಮ್ಮ ತಮ್ಮ ಕರ್ಮಾನುಸಾರವಾಗಿ ಉತ್ತಮಾಧಮಕರ್ಮಗಳಲ್ಲಿ ಪ್ರವೃತ್ತವಾಗಿರುವುದನ್ನು ನೋಡುವವನು (ಸರ್ವಸಾಕ್ಷಿಯು) ಎಂದರೆ ಅವರವರ ಕರ್ಮಗಳಿಗೆ ನಿಯಾಮಕನಾಗಿ ಉತ್ತಮವಾದ ಮಾರ್ಗದರ್ಶಿಯಾಗಿರುವನು. ಮತ್ತು ತಾನು ಸೃಷ್ಟಿಮಾಡಿದ **ಈ** ಪ್ರಾಣಿಗಳಿಗೆ ಇಷ್ಟವಾದ ಅಭೀಪ್ಸಿತಫಲಗಳನ್ನು ಕೊಟ್ಟು

ಅವುಗಳಿಗೆ ಸಾಧನಭೂತವಾದ ಉದಕಗಳಿಂದ ಸಂತೋಷಪಡಿಸುವನು. ಇಲ್ಲಿ **ಇಷ್ಟಾನಿ** ಎಂಬ ಶಬ್ದಕ್ಕೆ ಇಷ್ಟವಾದ ಅಭಿಲಾಷೆಗಳು, ಪ್ರೀತಿಪಾತ್ರವಾದ ವಸ್ತುಗಳು, ತಾವು ಬಯಸುವ ಪದಾರ್ಥಗಳು, ಹೋಗಿಸೇರುವ ಅಥವಾ ಬೇಕೆಂದು ಆಶಿಸುವ ಅಥವಾ ತಮ್ಮ ಗುರಿಗೆ ಸಾಧನಭೂತವಾಗಿರುವ ಅಭಿಲಾಷೆಗಳು ಎಂದು ನಾನಾವಿಧ ಅರ್ಥಗಳನ್ನು ಹೇಳಿರುವರು. ಮತ್ತು **ಸಂ ಇಷಾ ಮದಂತಿ—ಇಷಾ ಉದಕೇನ ಸಹ ಮೋದಂತೇ** ಎಂಬ ವಾಕ್ಯಕ್ಕೆ—ಸರ್ವಪ್ರಾಣಿಗಳಿಗೂ ಬೇಕಾದ ಸುಖಸಾಮಗ್ರಿಗಳು ಎಂದರೆ ಆಹಾರ, ವಸ್ತ್ರ, ಇತರ ಭೋಗಸಾಮಗ್ರಿಗಳು ಇವೆಲ್ಲಕ್ಕೂ ವೃಷ್ಟಿಯೇ (ಮಳೆಯೇ) ಸಾಧನಭೂತವಾಗಿರುವುದು. ಕಾಲಕಾಲಗಳಲ್ಲಿ ಮಳೆಯಾದರೆ ಸಸ್ಯಾಭಿವೃದ್ಧಿಯಿಂದ ಸಕಲಸಂಪತ್ತುಗಳೂ ಲಭಿಸುವವು ಎಂಬುದು ಲೋಕವ್ಯವಹಾರದಲ್ಲಿ ಪ್ರಸಿದ್ಧವಾದ ಅನುಭವವಾಗಿದೆ. ಆದ್ದರಿಂದ, ವೃಷ್ಟಿಪ್ರದಾನದಿಂದಲೇ ಆದಿತ್ಯನು ಸಕಲಪ್ರಾಣಿಗಳನ್ನೂ ಸಂತೋಷಪಡಿಸುವನು ಎಂಬುದು ನಿರ್ವಿವಾದವು. **ಯತ್ರಾ ಸಪ್ತಋಷೀನ್ ಪರ ಏಕಮಾಹುಃ**—ಎಂಬವಾಕ್ಯಕ್ಕೆ **ಯತ್ರೈತಾನಿ ಸಪ್ತಋಷೀಣಾನಿ ಜ್ಯೋತೀಂಷಿ ತೇಭ್ಯಃ ಪರ ಆದಿತ್ಯಸ್ತಾನ್ಯೇತಸ್ಮಿನ್ನೇಕಂ ಭವಂತೀತ್ಯಧಿದೈವತಂ** । ಏಳು ವಿಧವಾದ ಜ್ಯೋತಿಗಳು ಅಥವಾ ರಶ್ಮಿವಿಶೇಷಗಳು, ಅವುಗಳಿಂದಾಚೆಗೆ ಇರುವ ಯಾವಆದಿತ್ಯನಲ್ಲಿ ಅಥವಾ ಆದಿತ್ಯಮಂಡಲದಲ್ಲಿ ಒಂದಾಗಿ ಸೇರಿ ಬೆಳಗುತ್ತಿರುವವೋ ಅಂತಹ ಆದಿತ್ಯನು ಸಮಸ್ತಪ್ರಾಣಿಗಳ ಸುಖಸಂತೋಷಗಳಿಗೆ ಸಾಧನಭೂತವಾದ ವೃಷ್ಟಿಗೆ ಕಾರಣನಾಗಿರುವನು. ಅವನೇ ಯಜ್ಞದಾನತಪಸ್ಸುಗಳ ಭೋಕ್ತೃವು. ನಖ (ಉಗುರು) ದಿಂದ ಹಿಡಿದು ಶ್ಮಶ್ರು, ಕೇಶ ಮೊದಲಾದ ಆ ಆದಿತ್ಯನ ಸರ್ವಾಂಗಗಳೂ ಹಿರಣ್ಮಯವಾದವು. ಇಂತಹ ಆದಿತ್ಯನನ್ನು **ಪರಃ** ಎಂದರೆ ಸಮಸ್ತಕ್ಕಿಂತಲೂ ಶ್ರೇಷ್ಠನಾದ ಪರದೇವತೆಯೆಂದು (ಪರಮಾತ್ಮನೆಂದು) ಹೇಳುವರು. ಇದು ಅಧಿದೈವತಪಕ್ಷದ ಅರ್ಥವಿವರಣೆಯು. ಇನ್ನು ಎರಡನೆಯ ಅಧ್ಯಾತ್ಮಪಕ್ಷದ ಅರ್ಥವಿವರಣೆಯನ್ನು ಈ ರೀತಿ ಮಾಡಿದಾರೆ—.

> **ವಿಶ್ವಕರ್ಮಾ ವಿಭೂತಮನಾ ವ್ಯಾಪ್ತಾ ಧಾತಾ ಚ ವಿಧಾತಾ ಚ ಪರಮಶ್ಚ ಸಂದರ್ಶಯಿತೇಂದ್ರಿಯಾಣಾಮೇಷಾಮಿಷ್ಟಾನಿ ವಾ, ಕಾಂತಾನಿ ವಾ, ಕ್ರಾಂತಾನಿ ವಾ, ಗತಾನಿ ವಾ, ಮತಾನಿ ವಾ, ನತಾನಿ ವಾನ್ನೇನ ಸಹ ಸಂಮೋದಂತೇ ಯತ್ರೇಮಾನಿ ಸಪ್ತಋಷೀಣಾನೀಂದ್ರಿಯಾಣ್ಯೇಭ್ಯಃ ಪರ ಆತ್ಮಾ ತಾನ್ಯೇತಸ್ಮಿನ್ನೇಕಂ ಭವಂತೀತ್ಯಾತ್ಮಗತಿಮಾಚಷ್ಟೇ ||**
>
> (ನಿ. ೧೦-೨೬)

ಇಲ್ಲಿ ಪರಮಾತ್ಮ ಅಥವಾ ಆತ್ಮಪರವಾದ ಅರ್ಥವನ್ನು ವಿವರಿಸುತ್ತಾರೆ. ಇಲ್ಲಿ **ವಿಶ್ವಕರ್ಮಾ** ಎಂದರೆ ಸರ್ವವನ್ನೂ ಸೃಷ್ಟಿಮಾಡಲು ಸಾಮರ್ಥ್ಯವುಳ್ಳ ಪರಮಾತ್ಮನೆಂದರ್ಥವು. ಅವನಿಗೆ ಕ್ಷೇತ್ರಜ್ಞನೆಂದೂ ಹೆಸರು. ಎಂದರೆ ಸರ್ವಪ್ರಾಣಿಗಳ ಶರೀರದಲ್ಲಿ ಅಂತರಾತ್ಮನಾಗಿದ್ದು ಅವುಗಳ ಕರ್ಮಗಳನ್ನೂ, ಬುದ್ಧಿಯನ್ನೂ ಪ್ರೇರಿಸುವವನು. ಇವನ ಪ್ರೇರಣೆ ಇಲ್ಲದೆ ವಾಯುವಿನ ಚಲನೆಯು ಸಹ ಆಗಲಾರದು. ಈ ಆತ್ಮನು ಕೇವಲ ಶಕ್ತಿಯುತನು ಮಾತ್ರವೇ ಅಲ್ಲ, ಜ್ಞಾನಯುತನೂ ಹೌದು. ಆದ್ದರಿಂದಲೇ **ವಿಮನಾಃ—ವಿಭೂತಮನಾಃ । ಸರ್ವಪ್ರಜ್ಞಾನಃ ।** ಸರ್ವತೋಮುಖವಾದ ವಿಶೇಷಜ್ಞಾನಶಕ್ತಿಗಳಿಂದ ಕೂಡಿರುವವನು ಎಂದು ಹೇಳಲ್ಪಡುವನು. ಈ ಗುಣಗಳಿರುವುದರಿಂದ ಇವನನ್ನು **ಮಹಾನ್** ಮಹತ್ತ್ವರೂಪವುಳ್ಳವನೆಂದು ಹೇಳುವರು. ಈ ಮಹತ್ತ್ವರೂಪಗುಣವಿಶಿಷ್ಟನಾದ ಆತ್ಮನು ಸಮಸ್ತ ಪ್ರಾಣಿಗಳನ್ನೂ ಸೃಷ್ಟಿಸುವವನು, ಸೃಷ್ಟಿಸಿದ ಪ್ರಾಣಿಗಳನ್ನು ಅವರವರ ಯೋಗ್ಯವಾದ ಕರ್ಮಗಳಲ್ಲಿ ನಿಯಮಿಸುವವನು. ಮತ್ತು ಈ ಆತ್ಮನು ಇಂದ್ರಿಯಗಳಿಗೆ ವಿಷಯೋಪಭೋಗಗಳಲ್ಲಿ ಮಾರ್ಗದರ್ಶಿಯಾಗಿಯೂ ಇರುವನು ಅಥವಾ ಪ್ರಾಣಿಗಳು ಮಾಡುವ ಸ್ವವ್ಯಾಪಾರಗಳನ್ನು ನಿರ್ಲಿಪ್ತತೆಯಿಂದ ನೋಡುವ ವೀಕ್ಷಕನಾಗಿರುವನು. ಆ ಇಂದ್ರಿಯಗಳಿಗೆ (ಶರೀರ

ದಲ್ಲಿರುವ ಚಕ್ಷುರಾದೀಂದ್ರಿಯಗಳಿಗೆ) ಇಷ್ಟವಾದ, ಅಥವಾ ಆ ಇಂದ್ರಿಯಗಳು ಅಪೇಕ್ಷಿಸುವ, ಬಯಸುವ, ಬೇಕೆಂದು ಆಶಿಸುವ ಅನ್ನಾದಿವಸ್ತುಗಳನ್ನು ಒದಗಿಸಿಕೊಟ್ಟು ಆ ಇಂದ್ರಿಯಗಳೂ ಸಂತೋಷದಿಂದಿರುವಂತೆ ಮಾಡುವನು. ಇಂತಹ ಕಾರ್ಯಗಳನ್ನು ಮಾಡುವ ಆ ಆತ್ಮನು ಯಾರು ಎಂದರೆ, ಯಾವನಲ್ಲಿ ಏಳುವಿಧವಾದ ಇಂದ್ರಿಯಗಳು (ಈ ಇಂದ್ರಿಯಗಳನ್ನು ಜ್ಯೋತಿಗಳೆಂದು ಹೇಳುವರು) ಸಂಮಿಳಿತವಾಗಿ ಎಂದರೆ ಒಂದಾಗಿ ಸೇರಿರುವವೋ, ಆದರೆ ಇಂದ್ರಿಯಗಳಿಗಿಂತಲೂ ಯಾವನು ಭಿನ್ನವಾಗಿ ಎಂದರೆ ಅತೀತನಾಗಿ ಇರುವನೋ ಅವನೇ ಆತ್ಮನು. ಈ ಆತ್ಮನು ಸಮಸ್ತವಸ್ತುಗಳಿಗಿಂತಲೂ ಪರತರನಾದವನು, ಇವನು ನಿತ್ಯತೃಪ್ತನು, ಇವನಿಗೆ ಅನ್ನಾದ್ಯಾಹಾರಗಳ ಅವಶ್ಯಕತೆ ಇಲ್ಲ. ಆದರೆ ಶರೀರದ ಇಂದ್ರಿಯಾದಿಗಳು ಮಾತ್ರ ಶಕ್ತಿಪ್ರದವಾದ ಅನ್ನಾದಿಗಳನ್ನು ಸೇವಿಸಿ ಶರೀರಾಂತರ್ಗತನಾಗಿರುವ ಆತ್ಮನೊಡನೆ ಸಂತೃಪ್ತಿಯನ್ನು ಹೊಂದುತ್ತವೆ. ಈ ಆತ್ಮನಿಗೆ ಶೋಕ, ಮೋಹ, ಜರಾಮೃತ್ಯುಗಳೆಂಬುದಿಲ್ಲ. ಈ ಆತ್ಮನನ್ನೇ ಪರಬ್ರಹ್ಮನೆಂದು ಆತ್ಮತತ್ತ್ವವನ್ನು ಬಲ್ಲವರು ಹೇಳುತ್ತಾರೆ. ಪರಬ್ರಹ್ಮನೆಂದರೆ ಇವನಿಗಿಂತ ಉತ್ಕೃಷ್ಟರಾದವರು (ಅಥವಾ ಇವನಿಗಿಂತ ವ್ಯತಿರಿಕ್ತವಾದ ವಸ್ತುವು) ಇಲ್ಲದಿರುವುದರಿಂದ ಈ ಆತ್ಮನಿಗೆ ಪರಮಾತ್ಮ ಅಥವಾ ಪರಬ್ರಹ್ಮನೆಂಬ ಹೆಸರು ಬಂದಿದೆ. ಇದನ್ನೇ **ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ** (ಋ. ಸಂ. ೧೦-೧೨೯-೨) ಎಂಬ ಶ್ರುತಿವಾಕ್ಯವು ಸಮರ್ಥಿಸುತ್ತದೆ. ಇದು ಆತ್ಮಗತಿಯನ್ನು ವಿವರಿಸುವ ಅಧ್ಯಾತ್ಮಪಕ್ಷದ ಅರ್ಥವಿವರಣೆಯು.

ಈ ಋಕ್ಕಿಗೆ ನಿರುಕ್ತಕಾರರೂ, ಅವರನ್ನೇ ಅನುಸರಿಸಿವ ಸಾಯಣರೂ, ಎರಡು ವಿಧವಾದ ತಾತ್ಪರ್ಯವನ್ನು ತಿಳಿಸಿದ್ದಾರೆ. ಅಧಿದೈವತಪಕ್ಷವೊಂದು, ಅಧ್ಯಾತ್ಮಪಕ್ಷವೊಂದು. ಮೊದಲನೆಯ ಪ್ರಕಾರ ;—

ವಿಮನಸೂ, ವಿಹಾಯಸೂ, ಧಾತೃವೂ, ವಿಧಾತೃವೂ ಆದ ಆದಿತ್ಯನ ವರ್ಣನವಾಗಿರುತ್ತದೆ. ಎರಡನೆಯ ತಾತ್ಪರ್ಯದಂತೆ, ಇದೇ ವಿಶೇಷಣಗಳುಳ್ಳ ಪರಮಾತ್ಮನ ವರ್ಣನವಾಗಿರುತ್ತದೆ. ಸಪ್ತರ್ಷಿಗಳು ಅವರ ಇಷ್ಟಗಳನ್ನು ಪಡೆದು ಹರ್ಷಿಸುತ್ತಾರೆ ಎಂಬಲ್ಲಿ, ಆದಿತ್ಯಪರವಾದರೆ ಸಪ್ತರಶ್ಮಿಗಳೆಂದರ್ಥ. ಆದಿತ್ಯನು ಈ ಸಪ್ತರ್ಷಿಗಳಿಗಿಂತಲೂ ಪರನು ಮತ್ತು ಇವುಗಳನ್ನು ಹೊಂದಿ ಇವುಗಳಿಂತಲೂ ಅತೀತನು ಎಂದು ತಾತ್ಪರ್ಯವಾಗುತ್ತದೆ. ಪರಮಾತ್ಮಪರವಾದರೆ, ಇಂದ್ರಿಯಗಳೆಂದರ್ಥ. ಇಂದ್ರಿಯಾದ್ಯತಿರಕ್ತನಾದ ಪರಮಾತ್ಮನು ಎಂದು ತಾತ್ಪರ್ಯವಾಗುತ್ತದೆ. ಈ ಎರಡು ತಾತ್ಪರ್ಯಗಳನ್ನು ಹೇಳುವಾಗಲೂ **ವಿಮನಾಃ** ಇತ್ಯಾದಿ ವಿಶೇಷಣಗಳ ವಿಶೇಷಾರ್ಥವೇನು ಎಂಬುದನ್ನು ಪರಿಶೀಲಿಸಬೇಕು.

ಆದಿತ್ಯಪರವಾದ ಅರ್ಥವನ್ನು ಹೇಳುವಾಗ ದುರ್ಗಾಚಾರ್ಯರು ಈ ರೀತಿ ಈ ವಿಶೇಷಣಗಳಿಗೆ ಅರ್ಥವನ್ನು ಹೇಳಿದ್ದಾರೆ.

**ವಿಮನಾಃ— ವಿಭೂತಮನಾಃ ; ವಿಭೂತಪ್ರಜ್ಞಾನಃ । ಸರ್ವತ್ರ ಅಪ್ರತಿಹತಂ ಅಸ್ಯ ಪ್ರಜ್ಞಾನಂ ।** ಈ ಆದಿತ್ಯನ ಪ್ರಜ್ಞಾನವು ಸರ್ವವ್ಯಾಪಿಯಾದುದು. ಅಕುಂಠಿತವೂ, ಅಪ್ರತಿಹತವೂ ಆಗಿರುತ್ತದೆ.

**ವಿಹಾಯಾಃ— ಅಪ್ಯಸೌ ಆತ್ಮನಾ ವಿಹಾಯಾಃ । ಆತ್ಮನಾಪಿ ಸರ್ವಪ್ರಕಾರಂ ಮಹಾನ್** ತನ್ನ ವೈಯಕ್ತಿಕವಾದ ಪ್ರಭಾವವನ್ನು ಅಥವಾ ಮಾಹಾತ್ಮ್ಯವನ್ನು ಹೊಂದಿರುವವನು.

**ಧಾತಾ**—ಸಕಲ ಭೂತಗಳನ್ನು ಉತ್ಪನ್ನಮಾಡತಕ್ಕವನು.

**ವಿಧಾತಾ**—ಭೂತಗಳ ಜೀವನೋಪಯುಕ್ತವಾದ ಇತರ ಪದಾರ್ಥಗಳನ್ನು ಆಯಾ ದೇಶಕಾಲಾನುಗುಣವಾಗಿ ಉತ್ಪನ್ನಮಾಡತಕ್ಕವನು.

**ಪರಮೋತ ಸಂದೃಕ್**—ಸಕಲ ಭೂತಗಳ ವ್ಯವಹಾರಗಳನ್ನು ಪರೀಶೀಲಿಸಿ ನೋಡತಕ್ಕವನು, ಇತ್ಯಾದಿಯಾಗಿರುತ್ತದೆ. ಆದಿತ್ಯನ ಈ ಮಹದ್ಗುಣಗಳೆಲ್ಲವನ್ನೂ ಹಿಂದೆ ವಿವರಿಸಿ ತಿಳಿಸಿರುತ್ತದೆ. ಸಪ್ತರ್ಷಿಗಳಿಗೆ ಸಪ್ತರಶ್ಮಿಗಳೆಂದರ್ಥಮಾಡಿರುವುದನ್ನು ಪ್ರಕೃತದಲ್ಲಿ ವಿಶದವಾಗಿ ವಿವರಿಸಬೇಕಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ಸಪ್ತಶಬ್ದಕ್ಕೆ ಇನ್ನೂ ವಿಸ್ತೃತವಾದ ಅರ್ಥವೂ ಇರುತ್ತದೆ. ಉದಾಹರಣೆಗೆ—**ಅಯನ, ಋತು, ಮಾಸ, ಪಕ್ಷ, ಅಹಸ್ಸು,** ರಾತ್ರಿ ಮತ್ತು **ಮುಹೂರ್ತ** ಇವು ಆದಿತ್ಯನ ಸಪ್ತ ಅವಯವಗಳಾಗಬಹುದು. ಹೀಗೆಯೇ—

**ಸಪ್ತವಿಧಮಭಿಸಂಪದ್ಯತ ಏಕಶತಧಾ ವಾಸಾವಾದಿತ್ಯೋ ವಿಹಿತಃ ಸಪ್ತಸು ದೇವಲೋಕೇಷು ಪ್ರತಿಷ್ಠಿತಃ ಸಪ್ತ ವೈ ದೇವಲೋಕಾಶ್ಚತಸ್ರೋ ದಿಶಸ್ತ್ರಯ ಇಮೇ ಲೋಕಾ ಏತೇ ವೈ ಸಪ್ತ ದೇವಲೋಕಾಸ್ತೇಷ್ವೇವ ಪ್ರತಿಷ್ಠಿತಃ ||**

(ಶ. ಬ್ರಾ. ೧೦-೨-೪-೪)

ಆದಿತ್ಯನ ರಶ್ಮಿಗಳು ನೂರುವಿಧವಾಗಿರುತ್ತವೆ. ಅವನ ದಿವ್ಯರೂಪವನ್ನು ಸೇರಿಸಿದರೆ ನೂರೊಂದು ಸಂಖ್ಯೆಯುಳ್ಳದ್ದಾಗುತ್ತದೆ. ಇವಿಷ್ಟನ್ನೂ ಏಳುವಿಧಗಳಾದ ಗುಂಪಿನಲ್ಲಿ ಸೇರಿಸಬಹುದು. **ಹೇಗೆಂದರೆ,** ಏಳು ವಿಭಾಗಗಳುಳ್ಳ ಈ ವಿಶ್ವದಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ. ನಾಲ್ಕು ದಿಕ್ಕುಗಳೂ, **ಪೃಥಿವೀ, ಅಂತರಿಕ್ಷ, ಮತ್ತು** ದ್ಯುಲೋಕ **ಈ ಮೂರು** ಲೋಕಗಳೂ ಸೇರಿ ಏಳು ವಿಭಾಗಗಳು. ಈ ಏಳುವಿಧವಾದ ವಿಶ್ವದ ನಡುವೆ ಆದಿತ್ಯನು ಪ್ರಕಾಶಿಸುತ್ತಿದ್ದಾನೆ. ಇವನನ್ನು ಸಪ್ತರಶ್ಮಿಗಳೂ ಆಶ್ರಯಿಸಿ ತಮ್ಮ ರಸಸಂಗ್ರಹರೂಪವಾದ ಆನಂದವನ್ನು ಅನುಭವಿಸುತ್ತವೆ ಎಂದು ಒಂದರ್ಥವಾಗಬಹುದು. ಅಥವಾ—

**ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಸ್ವೃತುಷು ಸಪ್ತಸು ಸ್ತೋಮೇಷು ಸಪ್ತಸು ಪೃಷ್ಠೇಷು ಸಪ್ತಸು ಛಂದಸ್ಸು ಸಪ್ತಸು ಪ್ರಾಣೇಷು ಸಪ್ತಸು ದಿಕ್ಷು ಪ್ರತಿಷ್ಠಿತಃ ||**

(ಶ. ಬ್ರಾ. ೧೦-೨-೪-೫)

ಏಳುಪ್ರಕಾರವಾದ ಈ ವಿಶ್ವದಲ್ಲಿ ಆದಿತ್ಯನು ಏಳುವಿಧವಾಗಿ ಸ್ಥಾಪಿತನಾಗಿದ್ದಾನೆ. ಇವು ಏಳು ಋತುಗಳು. (ಅಧಿಕಮಾಸವೂ ಒಂದು ಋತುವೆಂದು ಪರಿಗಣಿತವಾದರೆ ಆಗ ಏಳು ಋತುಗಳಾಗುತ್ತದೆ). ಸಪ್ತಸ್ತೋಮಗಳು, ಸಪ್ತ ಪೃಷ್ಠಗಳು, ಸಪ್ತಛಂದಸ್ಸುಗಳು, ಸಪ್ತಪ್ರಾಣಗಳು ಮತ್ತು ಸಪ್ತದಿಕ್ಕುಗಳು ಇವೆಲ್ಲವೂ ಆದಿತ್ಯನನ್ನು ಆಶ್ರಯಿಸಿ ಸುತ್ತುವರಿದು ನಿಂತಿವೆ. ಅಲ್ಲದೇ—

**ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಾಕ್ಷರೇ ಬ್ರಹ್ಮನ್ ಪ್ರತಿಷ್ಠಿತಃ ಸಪ್ತಾಕ್ಷರಂ ವೈ ಬ್ರಹ್ಮರ್ಗಿತ್ಯೇಕಮಕ್ಷರಂ ಯಜುರಿತಿ ದ್ವೇ ಸಾಮೇತಿ ದ್ವೇಽಥ ಯದತೋಽನ್ಯದ್ಬ್ರಹ್ಮೈವ ತದ್ವ್ಯಕ್ಷರಂ ವೈ ಬ್ರಹ್ಮ ತದೇತತ್ಸರ್ವಸಪ್ತಾಕ್ಷರಂ ಬ್ರಹ್ಮ ತದೇತತ್ಸರ್ವಸಪ್ತಾಕ್ಷರಂ ಬ್ರಹ್ಮ ತಸ್ಮಿನ್ನೇಷ ಪ್ರತಿಷ್ಠಿತಃ ||**

(ಶ. ಬ್ರಾ. ೧೦-೨-೪-೬)

ನೂರೊಂದು ರೂಪವುಳ್ಳ ಆದಿತ್ಯನು ಸಪ್ತಾಕ್ಷರಗಳುಳ್ಳ ಬ್ರಹ್ಮನಲ್ಲಿ ಪ್ರತಿಷ್ಠಿತನಾಗಿದ್ದಾನೆ. ಬ್ರಹ್ಮನು ಸಪ್ತಾಕ್ಷರರೂಪನೇ ಆಗಿರುವನು. ಋಗ್ರೂಪವಾದುದು ಒಂದು, ಯಜೂರೂಪವಾದುದು ಎರಡು, ಸಾಮವೆರಡು, ಬ್ರಹ್ಮಾತ್ಮಕವಾದುದೇ

ಎರಡು. ಹೀಗೆ ಒಟ್ಟು ಸಪ್ತಾಕ್ಷರಸ್ವರೂಪನಾದ ಬ್ರಹ್ಮನೇ ವಿಶ್ವವು. ಈ ವಿಶ್ವವ್ಯಾಪಿಯಾದ ಬ್ರಹ್ಮನಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ, ಇತ್ಯಾದಿಯಾಗಿ ಸಪ್ತಪ್ರಕಾರಗಳ್ನು ವರ್ಣಿಸಿದೆ. ಏಳು ರಶ್ಮಿಗಳೂ ಏಳುವಿಧವಾಗಿ ಜಗತ್ತಿನ ಸಾರವನ್ನು ಹಿಂಡಿ ಆದಿತ್ಯನಲ್ಲಿ ಸೇರುತ್ತವೆ.

**ಇಷ್ಟಾನಿ ಸಮಿಷಾ ಮದಂತಿ** ಎಂಬ ವಾಕ್ಯದ ತಾತ್ಪರ್ಯವೇ ಇದು. **ಇಷ** ಶಬ್ದಕ್ಕೆ ಉದಕವೆಂದರ್ಥಮಾಡಿದೆ. ಆದಿತ್ಯನ ಉತ್ತಮವಾದ ಸ್ಥಾನದಿಂದ ಹೊರಡುವ ಆದಿತ್ಯರಶ್ಮಿಗಳು ನಾನಾಕಡೆಗಳಿಗೂ ಪ್ರಸರಿಸಿ ಲೋಕಕ್ಕೆಲ್ಲ ಉದಕ ವನ್ನು ಹರಡುತ್ತವೆ. ಪುನಃ ಅದೇ ಉದಕವನ್ನು ಸಂಗ್ರಹಿಸಿ ತೃಪ್ತಿಯನ್ನು ಹೊಂದುತ್ತವೆ. ಉದಕಪೂರ್ಣವಾದ ಈ ರಶ್ಮಿಗಳ ಮಧ್ಯೆ ಆದಿತ್ಯನು ಪ್ರತಿಷ್ಠಾಪಿತನಾಗಿದ್ದಾನೆಂದರ್ಥ. ಇದೇ ವಿಷಯವನ್ನು ಶತಪಥಬ್ರಾಹ್ಮಣದಲ್ಲಿ ಈರೀತಿ ವರ್ಣಿಸಿದೆ. ಆಯಾ ರಶ್ಮಿಗಳಿಗೆ ಅಭಿಮತವಾದ ರಸವೆಂದಾದರೆ, ಕೇವಲ ಉದಕವೆಂದೇ ಇಲ್ಲಿ ಅರ್ಥವಾಗಬೇಕಾಗಿಲ್ಲ. ರಸರೂಪವಾದ ಉದಕವನ್ನು ಸಂಗ್ರಹಿಸಿ ರಶ್ಮಿಗಳು ತೃಪ್ತಿಪಡುತ್ತವೆಯೆಂದರ್ಥ. ಹೇಗೆಂದರೆ—

> **ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಃ । ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾ ವಾ ಏತಾ ಋಚಃ । ಏತ-ಮೃಗ್ವೇದಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ । ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ ॥**
>
> (ಛಾ. ಉ, ೩-೧)

ಪೂರ್ವದಿಕ್ಕಿಗೆ ಪ್ರಸರಿಸುವ ಆದಿತ್ಯನ ರಶ್ಮಿಗಳು ಪೂರ್ವದಿಕ್ಕಿನ ಮಧುನಾಡಿಗಳು. ಋಕ್ಕುಗಳೇ ಭ್ರಮರಗಳು. ಋಗ್ವೇದವೇ ಪುಷ್ಪವು. ಯಜ್ಞದಲ್ಲಿ ಅರ್ಪಿತವಾದ ಆಜ್ಯಪಯೋರೂಪಗಳಾದ ಆಹುತಿಗಳೇ ಅಮೃತಬಿಂದುಗಳು. ಋಙ್ಮಂತ್ರಗಳು ಪಕ್ವವಾದನಂತರ ಯಶಸ್ಸೂ, ತೇಜಸ್ಸೂ, ಇಂದ್ರಿಯವೂ, ವೀರ್ಯವೂ, ಶಕ್ತಿಯೂ, ರಸವೂ ಯಾಗಾದಿ ಕರ್ಮಗಳಿಂದ ಉತ್ಪನ್ನವಾದವು. ಅನಂತರ ಈ ಫಲರೂಪವಾದ ರಸಾದಿಗಳೆಲ್ಲವೂ ಆದಿತ್ಯನ ಅಭಿಮುಖವಾಗಿ ಪ್ರಸರಿಸಿ ಅವನನ್ನೇ ಸೇರಿದವು. ಆದಿತ್ಯನ ರಶ್ಮಿಗಳು ಈ ರಸಾನುಭವದ ಆನಂದವನ್ನನುಭವಿಸುತ್ತವೆ. ಇತ್ಯಾದಿಯಾಗಿ ಆದಿತ್ಯ ರಶ್ಮಿಗಳ ನಾನಾ ಪ್ರಸರಣದ ಮತ್ತು ನಾನಾವಿಧವಾದ ರಸಗ್ರಹಣದ ಮತ್ತು ಆನಂದಾನುಭವದ ವಿವರಣವನ್ನು ಹಿಂದೆ ಋಗ್ವೇದಸಂಹಿತಾ ಭಾಗ ೧೨, ಪುಟ 333-334 ಗಳಲ್ಲಿ ವಿವರಿಸಿ ತಿಳಿಸಿದೆ.

ಈ ರಸಾನುಭವವನ್ನೇ ಪ್ರಕೃತವಾದ ಋಕ್ಕಿನಲ್ಲಿ **ತೇಷಾಮಿಷ್ಟಾನಿ ಸಮಿಷಾ ಮದಂತಿ** ಎಂದು ತಿಳಿಸಿವೆ. ಈ ರಸಗಳೇ ಆದಿತ್ಯರಶ್ಮಿಗಳಿಗೆ ಇಷ್ಟವಾದವು, ಅಭಿಮತವಾದವು, ಕಾಂತವಾದವು ಮತ್ತು ಪ್ರಿಯವಾದವು.

ಇದಲ್ಲದೇ, ಮೇಲೆ ನಿರ್ದಿಷ್ಟವಾದ, (೧೨) ಭಾಗದಲ್ಲಿ **ಪುರೀಷೀ** ಎಂಬ ಆದಿತ್ಯನ ವಿಶೇಷಣವನ್ನು ವಿವರಿಸು ವಾಗಲೂ ಸಹ ಆದಿತ್ಯರಶ್ಮಿಗಳಿಗೂ, ಉದಕಕ್ಕೂ ಇರುವ ಸಂಬಂಧವನ್ನು ತಿಳಿಸಿದೆ.

ಆದಿತ್ಯರಶ್ಮಿಗಳು ಈ ರಸಾನುಭವವನ್ನು ಪಡೆಯುತ್ತವೆ ಎಂಬುದು ಅಧಿದೈವತರೂಪವಾದ ತಾತ್ಪರ್ಯ. ಇದು ಆದಿತ್ಯಪರವಾದ ಅರ್ಥ.

ಅಧ್ಯಾತ್ಮಪಕ್ಷದಲ್ಲಿ ಹೇಳಿರುವ ತಾತ್ಪರ್ಯವು ಪರಮಾತ್ಮಪರವಾಗಿದೆ. **ವಿಮನಾಃ ವಿಭೂತಮನಾಃ ಸರ್ವ-ಪ್ರಜ್ಞಾನಃ ಸರ್ವತೋಮುಖಾಭಿಃ ವಿಶೇಷವಿಜ್ಞಾನಶಕ್ತಿಭಿಃ** । ಸರ್ವವನ್ನೂ ತಿಳಿಯಬಲ್ಲ ಮತ್ತು ಸರ್ವತೋಮುಖ

ವಾದ ವಿಶೇಷವಿಜ್ಞಾನಶಕ್ತಿಯುಳ್ಳವನು. **ಪ್ರಜ್ಞೇತ್ಯೇನಮುಪಾಸೀತ** (ಬೃ. ಉ. ೪-೩-೨) **ಪ್ರಜ್ಞಾನಘನಃ** ಇತ್ಯಾದಿ ವಿಶೇಷಣಗಳಿಂದ ವರ್ಣಿತನಾದವನು ಎಂದರ್ಥ. ಅಲ್ಲದೆ, ಈ ಪರಮಾತ್ಮನನ್ನು

**ಸ ವಾ ಏಷ ಮಹಾನಾತ್ಮಾ ಅನ್ನಾದೋ ವಸುದಾನಃ ॥**

(ಬೃ. ಉ. ೪-೪-೨೪)

ಈ ಪರಮಾತ್ಮನು ಸಕಲ ಅನ್ನವನ್ನು ತಾನೇ ಭುಜಿಸತಕ್ಕವನು ಮತ್ತು ಲೋಕಕ್ಕೆಲ್ಲ ಅನ್ನಪ್ರದನು. ಈ ಎರಡು ಶಕ್ತಿಗಳಿರುವುದರಿಂದಲೇ ಇವನು ಮಹಾತ್ಮನು,

**ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥**

(ತೈ. ಉ. ೩-೬-೧)

ಇವನು ಅನ್ನವಂತನು, ಅನ್ನವನ್ನು ಭುಜಿಸುವವನು, ಪಶು ಮತ್ತು ಪ್ರಜೆಗಳನ್ನು ಹೊಂದಿರುವುದರಿಂದಲೇ ಇವನು ಮಹಾತ್ಮನು. ತೇಜಸ್ಸಿನಿಂದಲೂ, ಬ್ರಹ್ಮವರ್ಚಸ್ಸಿನಿಂದಲೂ ಕೂಡಿರುವುದರಿಂದಲೇ ಮಹಾತ್ಮನು. ಕೀರ್ತಿಯಿಂದಲೂ ಮಹಾತ್ಮನು ಇತ್ಯಾದಿಯಾಗಿ ಯಾವ ಪರಮಾತ್ಮನನ್ನು ಉಪನಿಷದಾದಿಗಳಲ್ಲಿ ಪ್ರಶಂಸಿಸಿದೆಯೋ, ಅವನನ್ನೇ ಪ್ರಕೃತದಲ್ಲಿ **ವಿಹಾಯೋಃ** ಎಂಬ ವಿಶೇಷಣದಿಂದ ಪ್ರಶಂಸಿಸಿದೆ.

**ಧಾತಾ ; ವಿಧಾತಾ** ಎಂಬಿವು ಸೃಷ್ಟಿಶಕ್ತಿಯನ್ನೂ, ಸೃಷ್ಟಿಯ ವೈವಿಧ್ಯವನ್ನೂ ತೋರಿಸುತ್ತವೆ.

**ತೇಷಾಮಿಷ್ಟಾನಿ ಸಮಿಷಾ ಮದಂತಿ; ಯತ್ರಾ ಸಪ್ತರ್ಷೀನ್ ಪರ ಏಕಮಾಹುಃ** ಎಂಬುದಕ್ಕೆ ಮಾತ್ರ ವಿಶೇಷಾರ್ಥವು ಹೇಳಲ್ಪಟ್ಟಿದೆ- ಸಪ್ತರ್ಷಿಗಳೆಂದರೆ ಸಪ್ತ ಇಂದ್ರಿಯಗಳೆಂದು ತಾತ್ಪರ್ಯ. ಈ ಇಂದ್ರಿಯಗಳು ತಮ್ಮ ಪ್ರಿಯವಾದ ಅನ್ನದೊಡನೆ (ವಿಷಯಗಳೊಡನೆ) ಸೇರಿ ಆನಂದವನ್ನನುಭವಿಸುತ್ತವೆ. ಪರಮಾತ್ಮಜ್ಞಾನರೂಪವಾದ ಅನುಭವವೆಂದರ್ಥ. ಈ ಇಂದ್ರಿಯಗಳಿಗೆ ಪರಮಾತ್ಮನೇ ವಿಷಯವು. ಮತ್ತು ಈ ಪರಮಾತ್ಮನು ಆ ಇಂದ್ರಿಯ ಸಂಘಾತಕ್ಕಿಂತಲೂ ಅತಿರಿಕ್ತನು, ಈ ಸಂದರ್ಭದಲ್ಲಿ ದುರ್ಗಾಚಾರ್ಯರ ವಿವರಣವು ಈ ರೀತಿಯಿರುತ್ತದೆ.

**ನ ಯತಃ ಪರತರಮಸ್ತಿ ತಸ್ಮಿನ್ ಪರತರೇ ವಿಶ್ವಕರ್ಮಣಿ ಯದನ್ನಂ ಶಕ್ತಿಮಾತ್ರಂ ಯದುಪ- ವಿಷ್ಟಂಭಾತ್ ಪರಮಾತ್ಮಾ ನಿತ್ಯತೃಪ್ತಃ ತೇನಾನ್ನೇನ ಪರಮಾತ್ಮನಿ ತದ್ವಿಜ್ಞಾನೋಪಾಸನಾತ್ ತೇನ ಸಹಭೂತಾ ಮೋದಂತೇ । ಯಥಾ ಚ ಅನುಪಕ್ಷೀಣಸ್ವಧಾಶಕ್ತಿ ನಿತತೃಪ್ತಂ ಸರ್ವ- ಭಾವಪರಂ ತತ್ಪರಂ ಬ್ರಹ್ಮ ಯದಾತ್ಮವಿದಃ ಪ್ರತಿಪದ್ಯಂತೇ—**

(ನಿ. ಪ. ೧೦-೨೬)

ಯಾವ ಪರಮಾತ್ಮನಿಗಿಂತಲೂ ಬೇರೆಯಾದುದೂ, ಅಧಿಕವಾದುದೂ ಆದ ಬೇರೊಂದು ತತ್ತ್ವವಿಲ್ಲವೋ, ಅಂತಹ ಪರಮಾತ್ಮನಲ್ಲಿ, ಯಾವ ಅತಿಶಯವಾದ ಅನ್ನದಿಂದ ಅವನು ತೃಪ್ತಿಯನ್ನು ಹೊಂದಿರುವನೋ ಅದೇ ಅನ್ನದಿಂದ ಎಂದರೆ, ಅವನನ್ನು ವಿಷಯವನ್ನಾಗಿ ಮಾಡಿಕೊಂಡು ಅವನನ್ನು ಉಪಾಸನೆಮಾಡುವುದರಿಂದ, ಇಂದ್ರಿಯಗಳು ತೃಪ್ತಿಯನ್ನು ಹೊಂದುತ್ತವೆ. ನಾಶರಹಿತವಾದ ಸಂಪತ್ತುಳ್ಳವನೂ, ಅನ್ನವಂತನೂ, ನಿತ್ಯತೃಪ್ತನೂ, ಪರರಹಿತನೂ ಆದ ಪರಮಾತ್ಮನೇ ಇಲ್ಲಿ ವರ್ಣನೆಗೆ ವಿಷಯನು ಎಂದು ತಿಳಿಸಿದೆ. ಇದೇ ಪರತತ್ತ್ವವನ್ನು ಋಕ್ಸಂಹಿತೆಯಲ್ಲಿಯೂ ವರ್ಣಿಸಿದೆಯೆಂದು ದುರ್ಗಾಚಾರ್ಯರು ಕೆಳಗೆ ಉದಾಹೃತವಾಗಿರುವ ಮಂತ್ರವನ್ನು ನಿರೂಪಿಸಿದ್ದಾರೆ.

**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥**

(ಋ. ಸಂ. ೧-೧೨೯-೨)

ಮೃತ್ಯುವಿಗೂ ಅತಿರಿಕ್ತನಾದುದೂ, ಅಹೋರಾತ್ರಗಳ ನಿರ್ಬಂಧಕ್ಕೆ ಸಿಲುಕದುದೂ, ತನ್ನ ಸ್ವಮಹಿಮೆಯಿಂದಲೇ ಪ್ರತಿಷ್ಠಾಪಿತವಾದುದೂ ಆದ ಯಾವ ಪರತತ್ತ್ವವುಂಟೋ ಅದಕ್ಕೆ ಮೀರಿದ ತತ್ತ್ವವಿನ್ನಾವುದೂ ಬೇರೆಯಿಲ್ಲ ಇತ್ಯಾದಿಯಾಗಿ ಋಙ್ಮಂತ್ರಗಳೂ ಯಾವ ಪರತತ್ತ್ವವನ್ನು ಸ್ತುತಿಸಿವೆಯೋ ಅದೇ ಇಲ್ಲಿಯೂ ಪ್ರತಿಪಾದ್ಯಮಾನವಾದ ವಿಷಯವೆಂದು ತಿಳಿಸಿವೆ. ಪ್ರಕೃತದಲ್ಲಿ, ಋಷಿಗಳಿಗೆ ಇಂದ್ರಿಯವೆಂಬ ಅರ್ಥವು ಹೇಗೆ ಸಾಧ್ಯ ? ಅವುಗಳು ತಮ್ಮ ಅಭೀಷ್ಟವನ್ನು ಹೊಂದಿ ಸಂತೃಪ್ತಿಯನ್ನು ಹೊಂದುವುದು ಎಂದರೇನು? ಅವುಗಳಿಗಿಂತಲೂ ಪರಮಾತ್ಮನು ಭಿನ್ನನು ಎಂಬುದರ ತಾತ್ಪರ್ಯವೇನು ಎಂಬುದನ್ನು ಪರಿಶೀಲಿಸಬೇಕು. ಪರಮಾತ್ಮದರ್ಶನಕ್ಕೆ ಯಾವ ಇಂದ್ರಿಗಯಗಳು ಪ್ರತಿಬಂಧಕವೆಂದು ಪ್ರಸಿದ್ಧವಾಗಿದೆಯೋ, ಅದೇ ಇಂದ್ರಿಯಗಳಿಗೆ ಪರಮಾತ್ಮನು ವಿಷಯನು ಎಂಬುದು ಹೇಗೆ ಎಂಬುದೂ ತಿಳಿಯಬೇಕಾದ ವಿಷಯವಾಗಿರುತ್ತದೆ. ಸಪ್ತೇಂದ್ರಿಯಗಳನ್ನು ಪ್ರತಿಬಿಂಬಿಸುವ ಸಪ್ತರ್ಷಿಗಳ ವಿವರವು ಬೃಹದಾರಣ್ಯಕದಲ್ಲಿ ವಿಶದವಾಗಿ ವಿವೃತವಾಗಿರುತ್ತದೆ. ಪ್ರಥಮತಃ ಅದನ್ನು ಪರಿಶೀಲಿಸಿ ಅನಂತರ ಅದರ ನಿಷ್ಕೃಷ್ಟಾರ್ಥವನ್ನು ತಿಳಿಯಬಹುದು.

**ಯೋ ಹ ವೈ ಶಿಶುಂ ಸಾಧಾನಂ ಸಪ್ರತ್ಯಾಧಾನಂ ಸಸ್ಥೂಣಂ ಸದಾಮಂ ವೇದ ಸಪ್ತ ಹ ದ್ವಿಷತೋ ಭ್ರಾತೃವ್ಯಾನವರುಣದ್ಧಿ । ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಸ್ತಸ್ಯೇದಮೇವಾಧಾನಮಿದಂ ಪ್ರತ್ಯಾಧಾನಂ ಪ್ರಾಣಃ ಸ್ಥೂಣಾನ್ನಂ ಧಾಮ ॥**

(ಬೃ. ಉ. ೨-೨-೧)

ಇಲ್ಲಿ ಪುರುಷ ಜೀವನವನ್ನು ಉತ್ತಮಾಂಗ (ಶಿರಸ್ಸು) ದಿಂದ ಪೋಷಿತವಾಗುವ ಒಂದು ಶಿಶುವಿಗೆ ಹೋಲಿಸಿದೆ. ಈ ಶಿಶುವು ಉತ್ತಮವಾದ ನಿವಾಸಸ್ಥಾನವುಳ್ಳದ್ದು. ಒಳ್ಳೆಯ ಹೊದ್ದಿಕೆಯುಳ್ಳದ್ದು, ಅವಲಂಬನಕ್ಕೆ ಯೋಗ್ಯವಾದ ಸ್ಥೂಣ (ಸ್ತಂಭ) ವುಳ್ಳದ್ದು. ಮತ್ತು ಉತ್ತಮವಾದ ಹಗ್ಗವುಳ್ಳದ್ದು ಈ ತತ್ತ್ವವನ್ನರಿತವನು ತನ್ನ ಏಳು ಜನ ಅಮಿತ್ರರನ್ನೂ ದೂರದಲ್ಲಿಡುತ್ತಾನೆ

ದೇಹದ ಮಧ್ಯಭಾಗದಲ್ಲಿ ಸ್ಥಾಪಿತವಾಗಿರುವ ಪ್ರಾಣವೇ ಈ ಶಿಶುವು. ದೇಹವೇ ಇದರ ಗೃಹ. ಶಿರಸ್ಸೇ ಆಚ್ಛಾದಕವು. ಪ್ರಾಣವೇ ಆಧಾರಸ್ತಂಭವು. ಅನ್ನವೇ ಬಂಧಕವಾದ ರಜ್ಜುವು, ಎಂಬಲ್ಲಿ, ಪ್ರಾಣಕ್ಕೆ ಅಥವಾ ಪುರುಷನಿಗೆ ಅಮಿತ್ರರು ಏಳು ಮಂದಿಯೆಂದು ತಿಳಿಸಿದೆ. ಈ ಏಳು ಜನ ಅಮಿತ್ರರಾರೆಂದರೆ—

**ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ ಪಶ್ಯತಿ ನಾಂತರಾತ್ಮನ್ ।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ ॥**

(ಕಠ. ೪-೧)

ಪುರುಷನು ಇಂದ್ರಿಯಗಳನ್ನು ದಾಟಿ ಅವುಗಳ ಹಿಡಿತದಿಂದ ಮುಕ್ತನಾಗಿ ಅವುಗಳಿಂದ ಅತಿರಿಕ್ತವಾದ ಪರತತ್ತ್ವವನ್ನು ಅರಿಯಬೇಕು. ಪರತತ್ತ್ವವು ಇಂದ್ರಿಯಗಳ ಸಹಾಯದಿಂದ ಲಬ್ಧವಾಗತಕ್ಕದ್ದಲ್ಲ. ಇಂದ್ರಿಯಗಳು ಈ ಜ್ಞಾನಕ್ಕೆ

ಪ್ರತಿಬಂಧಕಗಳು. ಆದುದರಿಂದ ಧೀರನು ಇಂದ್ರಿಯಗಳನ್ನು ಆತ್ಮಸಾಕ್ಷಾತ್ಕಾರಕ್ಕೆ ಸಾಹಾಯ್ಯಕವನ್ನಾಗಿ ಹೊಂದುವುದಿಲ್ಲ ಇತ್ಯಾದಿಯಾಗಿ ಇಂದ್ರಿಯಗಳ ಪ್ರತಿಬಂಧಕತ್ವವನ್ನು ನಿರ್ದೇಶಿಸಿದೆ. ಹೀಗೆ ಯಾವ ಪ್ರತಿಬಂಧಕವಾದ ಇಂದ್ರಿಯಗಳಿವೆಯೋ ಅವನ್ನೇ ಇಲ್ಲಿ ಸಪ್ತ ಭ್ರಾತೃವ್ಯರು ಎಂದರೆ ಏಳುಜನ ಶತ್ರುಗಳು ಎಂದು ಹೇಳಿದೆಯೋ ಎಂಬುದು ತಿಳಿಯಬೇಕಾದ ವಿಷಯ. ಈ ಪ್ರಕರಣದಲ್ಲಿ ಶ್ರೀ ಶಂಕರಾಚಾರ್ಯರ ವಿವರಣವು ಈರೀತಿ ಇರುತ್ತದೆ—

**ಸಪ್ತ ಯೇ ಶೀರ್ಷಣ್ಯಾಃ ಪ್ರಾಣಾ ವಿಷಯೋಪಲಬ್ಧಿದ್ವಾರಾಣಿ ತತ್ಪ್ರಭವಾ ವಿಷಯರಾಗಾಃ ಸಹಜತ್ವಾತ್ ಭ್ರಾತೃವ್ಯಾಃ । ತೇ ಹ್ಯಸ್ಯ ಸ್ವಾತ್ಮಸ್ಥಾಂ ದೃಷ್ಟಿಂ ವಿಷಯವಿಷಯಾಂ ಕುರ್ವಂತಿ । ತೇನ ತೇ ದ್ವೇಷ್ಟಾರೋ ಭ್ರಾತೃವ್ಯಾಃ । ಪ್ರತ್ಯಗಾತ್ಮೇಕ್ಷಣಪ್ರತಿಷೇಧಕರತ್ವಾತ್ ॥**

(ಬೃ. ಉ. ಶಂ. ಭಾ. ೨-೨-೧)

ಚಕ್ಷುರಾದೀಂದ್ರಿಯಗಳು ರಾಗಪ್ರಭವಕ್ಕೆ ಕಾರಣಗಳಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಪ್ರತಿಬಂಧಕಗಳಾಗುತ್ತವೆ ಅವು ಪುರುಷನ ದೃಷ್ಟಿಯನ್ನು ಮಲಿನಗೊಳಿಸುತ್ತವೆ. ದಿವ್ಯದೃಷ್ಟಿಗೆ ಅವಕಾಶವನ್ನು ಕೊಡುವುದಿಲ್ಲ. ಆದುದರಿಂದಲೇ ಅವು ದ್ವೇಷಿಗಳೆಂದು ತಿಳಿಯತಕ್ಕದ್ದು ಎಂದು ಸಪ್ತೇಂದ್ರಿಯಗಳ ಸ್ವರೂಪವು ವರ್ಣಿತವಾಗಿದೆ.

ಆದುದರಿಂದ, ಪ್ರಕೃತದಲ್ಲಿ ಉಕ್ತವಾಗಿರುವುದು ಆ ಸ್ಥೂಲರೂಪವಾದ ಇಂದ್ರಿಯಗಳಲ್ಲ. ಅವು ಯಾವವೆಂದರೆ–

**ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ ತದ್ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯ- ಸ್ತಾಭಿರೇನಂ ರುದ್ರೋಽನ್ವಾಯತ್ತೋಽಥ ಯಾ ಅಕ್ಷನ್ನಾಪಸ್ತಾಭಿಃ ಪರ್ಜನ್ಯೋ ಯಾ ಕನೀನಕಾ ತಯಾದಿತ್ಯೋ ಯತ್ಕೃಷ್ಣಂ ತೇನಾಗ್ನಿರ್ಯಚ್ಛುಕ್ಲಂ ತೇನೇಂದ್ರೋಽಧರಯೈನಂ ವರ್ತನ್ಯಾ ಪೃಥಿವ್ಯನ್ವಾಯತ್ತಾ ದ್ಯೌರುತ್ತರಯಾ ನಾಸ್ಯಾನ್ನಂ ಕ್ಷೀಯತೇ ಯ ಏವಂ ವೇದ ॥**

(ಬೃ. ಉ. ೨-೨-೨)

ಸೂಕ್ಷ್ಮರೂಪವಾದ ದೇಹಕ್ಕೆ ಅನ್ನವನ್ನು ಒದಗಿಸುವ ಏಳು ಸೂಕ್ಷ್ಮ ಕರಣಗಳು ಈ ಪುರುಷನನ್ನು (ಪ್ರಾಣವನ್ನು) ಸೇವಿಸುತ್ತವೆ. ಚಕ್ಷುಸ್ಸಿನಲ್ಲಿರುವ ಕೆಂಪುಗೆರೆಗಳು ಈ ಪ್ರಾಣರೂಪನಾದ ಪುರುಷನಿಗೂ, ರುದ್ರನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಅದೇ ಚಕ್ಷುಸ್ಸಿನಲ್ಲಿರುವ ಸಲಲಿತತ್ತ್ವವು ಪುರುಷನಿಗೂ, ಪರ್ಜನ್ಯನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಅದರ ಗೊಂಬೆಯು ಪುರುಷನಿಗೂ, ಆದಿತ್ಯನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಹೀಗೆಯೇ, ಕಣ್ಣಿನ ಕಪ್ಪುಪ್ರದೇಶವೂ ಅಗ್ನಿಯೊಡನಿರುವ ಸಂಬಂಧವನ್ನೂ, ಬಿಳೀವರ್ಣದ ಪ್ರದೇಶವು ಇಂದ್ರನೊಡನಿರುವ ಐಕ್ಯವನ್ನೂ, ಕೆಳಭಾಗದ ರೆಪ್ಪೆಯು ಪೃಥ್ವೀಸಂಬಂಧವನ್ನೂ, ಮೇಲ್ಭಾಗದ ರೆಪ್ಪೆಯು ಅಂತರಿಕ್ಷಸಂಬಂಧವನ್ನೂ ತಿಳಿಸುತ್ತವೆ. ಇವೆಲ್ಲವೂ ಕ್ಷಯರಹಿತವಾದ ಸೂಕ್ಷ್ಮತತ್ತ್ವಗಳಾದುದರಿಂದ ಇವನ್ನರಿತವನು ಕ್ಷಯರಹಿತವಾದ ಅನ್ನವನ್ನು ಹೊಂದುತ್ತಾನೆ. ಈ ಪ್ರಕರಣವು ಒಂದು ಆರ್ಷೇಯವಾದ ಮಂತ್ರದಿಂದ ಈ ರೀತಿ ವರ್ಣಿತವಾಗಿದೆ.

**ತದಪ್ಯೇಷ ಶ್ಲೋಕೋ ಭವತಿ ।**

**ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ಯಶೋ ನಿಹಿತಂ ವಿಶ್ವರೂಪಂ ।**
**ತಸ್ಯಾಸತ ಋಷಯಃ ಸಪ್ತ ತೀರೇ ವಾಗಷ್ಟಮೀ ಬ್ರಹ್ಮಣಾ ಸಂವಿದಾನಾ । ಇತಿ ।**

ಕೆಳಭಾಗಕ್ಕೆ ತಿರುಗಿಸಿದ ತಲೆಯ ಪ್ರದೇಶವುಳ್ಳದ್ದೂ, ಮೇಲ್ಗಡೆಗೆ ತಿರುಗಿಸಿದ ಅಡಿಭಾಗವುಳ್ಳದ್ದೂ ಆದ ಚಮಸಪಾತ್ರೆ (ಶಿರಸ್ಸು) ಯಿರುತ್ತದೆ. ಇದರಲ್ಲಿ ವಿಶ್ವರೂಪದ ಯಶಸ್ಸೂ ಸ್ಥಾಪಿತವಾಗಿದೆ. ಅದರ ಪರಿಧಿಯ ಸುತ್ತಲೂ ಸಪ್ತರ್ಷಿಗಳೂ ಪ್ರತಿಷ್ಠಿತರಾಗಿದ್ದಾರೆ. ಎಂಟನೆಯದಾದ ವಾಕ್ತತ್ತ್ವವು ಬ್ರಹ್ಮರೂಪವಾದ ಮಂತ್ರದೊಡನೆ ಐಕ್ಯವನ್ನು ಹೊಂದಿರುತ್ತದೆ, ಎಂಬ ಅರ್ಥವುಳ್ಳ ಈ ಮಂತ್ರದ ತಾತ್ಪರ್ಯವೇ ಉಪನಿಷತ್ತಿನಲ್ಲಿಯೂ ಈ ರೀತಿ ವಿವೃತವಾಗಿದೆ.

**ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನ ಇತೀದಂ ಶಚ್ಛಿರ ಏಷ ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮಿತಿ ಪ್ರಾಣಾ ವೈ ಯಶೋ ವಿಶ್ವರೂಪಂ ಪ್ರಾಣಾನೇತದಾಹ ತಸ್ಯಾಸತ ಋಷಯಃ ಸಪ್ತ ತೀರ ಇತಿ ಪ್ರಾಣಾ ವಾ ಋಷಯಃ ಪ್ರಾಣಾನೇತದಾಹ ವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ ವಾಗ್ಘ್ಯಷ್ಟಮೀ ಬ್ರಹ್ಮಣಾ ಸಂವಿತ್ತೇ ॥**

(ಬೃ. ಉ. ೨-೨-೩)

ಕೆಳಕ್ಕೆ ತಿರುಗಿಸಿರುವ ತಲೆಯುಳ್ಳದ್ದೂ, ಮೇಲ್ಗಡೆಗೆ ತಿರುಗಿಸಿರುವ ಅಡೀಭಾಗವುಳ್ಳದ್ದೂ ಆದ ಚಮಸಪಾತ್ರೆಯೇ ಪುರುಷನ ಶಿರಸ್ಸು. ಪ್ರಾಣಗಳಲ್ಲಿಯೇ ವಿಶ್ವರೂಪದ ಯಶಸ್ಸೂ ಸ್ಥಾಪಿತವಾಗಿರುವುದರಿಂದಲೂ, ಈ ಪ್ರಾಣವೇ ಶಿರಸ್ಸಿನಲ್ಲಿ ಸ್ಥಾಪಿತವಾಗಿರುವುದರಿಂದಲೂ ಈ ವರ್ಣನವಿರುತ್ತದೆ. ಸಪ್ತಪ್ರಾಣಗಳೇ ಸಪ್ತರ್ಷಿಸಂಜ್ಞಕವಾಗಿವೆ. ಎಂಟನೆಯದಾದ ವಾಕ್ಕು ಮಂತ್ರರೂಪಿಯಾದ ಬ್ರಹ್ಮನೊಂದಿಗೆ ಐಕ್ಯವನ್ನು ಹೊಂದಿರುತ್ತದೆ. ಈ ಋಷಿಸಂಜ್ಞಕವಾದ ಸಪ್ತಪ್ರಾಣಗಳು ಯಾವುವು ಅಥವಾ ಪ್ರಾಣರೂಪರಾದ ಈ ಸಪ್ತರ್ಷಿಗಳು ಯಾರೆಂದರೆ—

**ಇಮಾವೇವ ಗೋತಮಭರದ್ವಾಜಾವಯಮೇವ ಗೋತಮೋಽಯಂ ಭರದ್ವಾಜ ಇಮಾವೇವ ವಿಶ್ವಾಮಿತ್ರಜಮದಗ್ನೀ ಅಯಮೇವ ವಿಶ್ವಾಮಿತ್ರೋಽಯಂ ಜಮದಗ್ನಿರಿಮಾವೇವ ವಸಿಷ್ಠಕಶ್ಯಪಾವಯಮೇವ ವಸಿಷ್ಠೋಽಯಂ ಕಶ್ಯಪೋ ವಾಗೇವಾತ್ರಿರ್ವಾಚಾ ಹ್ಯನ್ನಮದ್ಯತೇಽತ್ತಿರ್ಹ ವೈ ನಾಮೈತದ್ಯದತ್ರಿರಿತಿ ಸರ್ವಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಂ ವೇದ ।**

(ಬೃ. ಉ. ೨-೨-೪)

ಈ ಎರಡು ಶ್ರೋತ್ರಗಳಲ್ಲಿ ಒಂದು ಗೋತಮ, ಇನ್ನೊಂದು ಭರದ್ವಾಜ; ಈ ಎರಡು ಚಕ್ಷುಸ್ಸುಗಳಲ್ಲಿ ಒಂದು ವಿಶ್ವಾಮಿತ್ರ, ಇನ್ನೊಂದು ಜಮದಗ್ನಿ ; ಈ ಎರಡು ನಾಸಿಕಗಳಲ್ಲಿ (ನಾಸಿಕಾವಯವಗಳಲ್ಲಿ) ಒಂದು ವಸಿಷ್ಠ ಇನ್ನೊಂದು ಕಶ್ಯಪ; ಅನ್ನಭಕ್ಷಕವಾದುದರಿಂದ ನಾಲಿಗೆಯೇ (ವಾಕ್) ಅತ್ರಿಋಷಿಯು. ಈ ತತ್ತ್ವಗಳನ್ನರಿತವನು ಅನ್ನಸಂಪತ್ತನ್ನನು ಭವಿಸುವವನೂ ಅಮರ್ತ್ಯನೂ ಆಗುತ್ತಾನೆ.

ಒಟ್ಟಿನಲ್ಲಿ ಪ್ರಾಣತತ್ತ್ವವು ಪ್ರಧಾನ, ಉಳಿದ ಇಂದ್ರಿಯಗಳು ಅದರ ಆಶ್ರಯವನ್ನು ಪಡೆದಿವೆ ಎಂಬ ವಿಷಯವನ್ನು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಮತ್ತು ಈ ಪ್ರಾಣವನ್ನೇ ಆಶ್ರಯಿಸಿ ತಮ್ಮ ಭೋಗಗಳನ್ನೂ ಅನುಭವಿಸುತ್ತವೆ. ಜಗದೀಶ್ವರನೇ ಈ ಪ್ರಾಣರೂಪನು ಎಂಬ ವಿಷಯವನ್ನು ಹಿಂದೆ ತಿಳಿಸಿದೆ. ಈ ಪ್ರಾಣದ ಆಶ್ರಯವನ್ನು ಹೊಂದಿ ಸಕಲ ಇಂದ್ರಿಯಗಳೂ ತಮ್ಮ ತಮ್ಮ ವಿಷಯಗಳನ್ನು ಹೊಂದುತ್ತವೆ ಮತ್ತು ತತ್ಫಲವಾದ ಸುಖಾನುಭವವನ್ನೂ ಹೊಂದುತ್ತವೆ ಎಂಬುದೇ ತಾತ್ಪರ್ಯ. ಅಲ್ಲದೇ,

**ತಾನ್ಯಸ್ಮಿನ್ನೇಕಂ ಭವಂತೀತ್ಯಾತ್ಮಗತಿಮಾಚಷ್ಟೇ ।**

(ನಿ. ೧೦-೨೬)

ಈ ಸಕಲ ಇಂದ್ರಿಯಗಳೂ ಪ್ರಾಣರೂಪನಾದ ಆತ್ಮನಲ್ಲಿ ಒಂದಾಗುತ್ತವೆ. ಇದು ಆತ್ಮನ ಗತಿಯನ್ನು ತಿಳಿಸುತ್ತದೆ, ಎಂದು ನಿರುಕ್ತಕಾರರ ತಾತ್ಪರ್ಯ.

ಇಂದ್ರಿಯರೂಪರಾದ ಋಷಿಗಳೆಲ್ಲರೂ ಪ್ರಾಣರೂಪನಾದ ಆತ್ಮನಲ್ಲಿ ಐಕ್ಯರಾಗುತ್ತಾರೆ ಎಂಬುದಕ್ಕೆ ತಾತ್ಪರ್ಯ ವೇನು ? ಇಂದ್ರಿಯಗಳೊಡಗೂಡಿದ ದೇಹಕ್ಕೆ ಈ ಆತ್ಮನು ಇಂದ್ರಿಯರೂಪಗಳಿಂದ ಹೇಗೆ ಪೋಷಕನು ? ಇತ್ಯಾದ್ಯಂಶಗಳನ್ನು ಐತರೇಯಾರಣ್ಯಕದಲ್ಲಿ ಈ ರೀತಿ ತಿಳಿಸಿದೆ.

**ಏಷ ಇಮಂ ಲೋಕಮಭ್ಯಾರ್ಚತ್ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾವ ತದಭ್ಯಾರ್ಚತ್ಪ್ರಾಣೋ ಹ್ಯೇಷ ಯ ಏಷ ತಪತಿ । ತಂ ಶತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ ತಸ್ಮಾಚ್ಛ-ತರ್ಚಿನಃ ಇತ್ಯಾಚಕ್ಷತೇ ।**

(ಐ. ಆ. ೨-೨-೧)

ಪ್ರಕಾಶಮಾನನಾದ ವಿಶ್ವಾತ್ಮನೇ ಪುರುಷರೂಪದಿಂದ ಪ್ರಪಂಚಕ್ಕೆ ಪ್ರವೇಶಿಸಿದನು. ಅವನೇ ಪ್ರಾಣರೂಪನು. ಪ್ರಾಣರೂಪನಾಗಿಯೇ ಇಲ್ಲಿಯೂ ಪ್ರಕಾಶಿಸುತ್ತಿದ್ದಾನೆ. ಒಂದು ನೂರು ವರ್ಷಗಳ ಕಾಲ ಪ್ರಕಾಶಿಸುವುದರಿಂದ ಪುರುಷನಿಗೆ ನೂರು ವರ್ಷಗಳ ಆಯುಸ್ಸು ನಿಯಮಿತವಾಗಿರುತ್ತದೆ. ಆದುದರಿಂದಲೇ ಪ್ರಾಣಕ್ಕೆ **ಶತರ್ಚಿನಃ** ಎಂಬ ನಾಮಧೇಯವು ಪ್ರಸಿದ್ಧವಾಗಿದೆ.

**ಯ ಇದಂ ಸಂತಂ ಮಧ್ಯತೋ ದಧೇ ಯದಿದಂ ಕಿಂಚ ಸ ಯದಿದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ ತಸ್ಮಾನ್ಮಾಧ್ಯಮಾಸ್ತಸ್ಮಾನ್ಮಾಧ್ಯಮಾ ಇತ್ಯಾಚಕ್ಷತ ಏತಮೇವ ಸಂತಂ । ಪ್ರಾಣೋ ವೈ ಗೃತ್ಸಃ ಅಪಾನೋ ಮದಃ................ತಸ್ಮಾದ್ಗೃತ್ಸಮದ ಇತ್ಯಾಚಕ್ಷತೇತ ॥**

(ಐ. ಆ. ೨-೨-೧)

ಈ ಪ್ರಾಣರೂಪನಾದ ಆತ್ಮನು ಪುರುಷದೇಹದ ಮಧ್ಯದಲ್ಲಿ ಸ್ಥಾಪಿತನಾದನು. ಆದುದರಿಂದಲೇ ಮಧ್ಯಮನೆಂಬ ವ್ಯವಹಾರವು. ಪ್ರಾಣರೂಪನಾಗಿ ಎಲ್ಲವನ್ನೂ ಕಬಳಿಸುತ್ತಾನೆ. ಅಪಾನರೂಪನಾಗಿ ಹರ್ಷಕಾರಕನು (ಮದಃ). ಆದುದರಿಂದಲೇ ತತ್ತ್ವಜ್ಞರು ಪ್ರಾಣಾಪಾನರೂಪದಲ್ಲಿರುವ ಇವನನ್ನು **ಗೃತ್ಸಮದ** ಎಂದೂ ಕರೆಯುತ್ತಾರೆ.

**ತಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂಚ.... ..........ತಸ್ಮಾದ್ವಿಶ್ವಾಮಿತ್ರ ಇತ್ಯಾಚಕ್ಷತೇ ॥**

ಜಗತ್ತಿನಲ್ಲಿ ಸಕಲವೂ ಈ ಪ್ರಾಣನಿಗೆ ಮಿತ್ರರೂಪವು. ಆದುದರಿಂದಲೇ ಇವನಿಗೆ ವಿಶ್ವಾಮಿತ್ರನೆಂಬ ಹೆಸರು ಪ್ರಸಿದ್ಧವಾಗಿದೆ.

**ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾ ಇತಿ ತಂ ಯದ್ದೇವಾ........ತಸ್ಮಾದ್ವಾಮ-ದೇವ ಇತ್ಯಾಚಕ್ಷತೇ ॥**

ಇವನು ನಮಗೆಲ್ಲ ಪ್ರಿಯವನ್ನುಂಟುಮಾಡುವವನು ಎಂದು ದೇವತೆಗಳು ಅಪೇಕ್ಷಿಸಿದರು. ಅವರಿಗೆಲ್ಲರಿಗೂ ಪ್ರಿಯ (ವಾಮ) ನಾದುದರಿಂದ ಇವನು ವಾಮದೇವನೆಂದು ಪ್ರಸಿದ್ಧನು.

**ಯ ಇದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂಚ.........ತಸ್ಮಾದತ್ರಯ ಇತ್ಯಾಚಕ್ಷತ ಏತಮೇವ ಸಂತಂ ॥**

ಇದೇ ಪ್ರಾಣರೂಪನಾದ ಆತ್ಮನು ಸಕಲವನ್ನೂ ಪಾಪದಿಂದ ರಕ್ಷಿಸಿದುದರಿಂದ (ತ್ರಾಣ) ಇವನಿಗೆ **ಅತ್ರಿ**ಯೆಂಬ ಹೆಸರು. ಪ್ರಾಣಾಪಾನಾದಿಗಳು **ಅತ್ರಯಃ** ಎಂದು ಪ್ರಸಿದ್ಧವಾದವು.

**ಏಷ ಉ ಏವ ಬಿಭ್ರದ್ವಾಜಃ ಪ್ರಜಾ ವೈ ವಾಜಃ ತಾ ಏಷ ಬಿಭರ್ತಿ ಯದ್ಬಿಭರ್ತಿ ತಸ್ಮಾದ್ಭರದ್ವಾಜಃ ।**

ಪ್ರಜೆ (ಸಂತತಿ) ಗಳು ವಾಜ (ಅನ್ನ) ಸಂಜ್ಞಕವು. ಪ್ರಾಣರೂಪನಾದ ಆತ್ಮನು ಈ ವಾಜಗಳನ್ನು ಧರಿಸಿ ಪೋಷಿಸುವುದರಿಂದ ಇವನೇ ಭರದ್ವಾಜನು.

**ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಸಿಷ್ಠ ಇತಿ........ತಸ್ಮಾದ್ವಸಿಷ್ಠ ಇತ್ಯಾಚಕ್ಷತ ಏತಮೇವ ಸಂತಂ ।**

ಇವನೇ ನಮ್ಮೆಲ್ಲಿಲ್ಲ ಶ್ರೇಷ್ಠನೂ, ಅತಿಶಯವಾದ ಸಂಪದ್ಯುಕ್ತನೂ ಆಗಿರಲಿ ಎಂದು ದೇವತೆಗಳು ಇಚ್ಛಿಸಿದರು. ಅವರಲ್ಲೆಲ್ಲ ಅತ್ಯಂತ ಶ್ರೇಷ್ಠ (ವಸಿಷ್ಠ) ನಾದುದರಿಂದ ಇವನೇ ವಸಿಷ್ಠನೆಂದು ಪ್ರಸಿದ್ಧನಾದನು. ಇತ್ಯಾದಿಯಾಗಿ ಋಷಿಶಬ್ದಾರ್ಥವು ವಿವೃತವಾಗಿರುತ್ತದೆ. ಪ್ರಾಣರೂಪನಾದ ಆತ್ಮನು ಈ ಇಂದ್ರಿಯಗಳಿಗೆಲ್ಲ ಅಧಿಪತಿಯು, ಇಂದ್ರಿಯಗಳು ಈ ಅಧಿಪತಿಯಿಂದ ಪೋಷಿತವಾಗಿ, ಅವನ ಸೇವೆಯನ್ನು ಮಾಡುತ್ತ ಸೌಖ್ಯವನ್ನನುಭವಿಸುತ್ತವೆ ಎಂಬುದೇ ತಾತ್ಪರ್ಯ.

**ತೇಷಾಂ ಇಷ್ಟಾನಿ ಸಮಿಷಾ ಮದಂತಿ** ಎಂಬ ವಾಕ್ಯದ ತಾತ್ಪರ್ಯವನ್ನು ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿ ವಿವರವಾಗಿ ತಿಳಿಸಿದೆ. ಇಂದ್ರಿಯರೂಪರಾದ ಋಷಿಗಳು ಯಜ್ಞವನ್ನಾಚರಿಸಿದುದು, ಆ ಯಜ್ಞದಿಂದ ಪ್ರಾಣರೂಪನಾದ ಪ್ರಜಾಪತಿಯ ತೃಪ್ತಿ ಇವೆಲ್ಲವೂ ಇದೇ ಸೂಕ್ತದ ೪ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

। ಸಂಹಿತಾಪಾಠಃ ।

ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।
ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥ ೩ ॥

॥ ಪದಪಾಠಃ ॥

ಯಃ । ನಃ । ಪಿತಾ । ಜನಿತಾ । ಯಃ । ವಿಽಧಾತಾ । ಧಾಮಾನಿ । ವೇದ । ಭುವನಾನಿ । ವಿಶ್ವಾ ।

ಯಃ । ದೇವಾನಾಂ । ನಾಮಽಧಾಃ । ಏಕಃ । ಏವ । ತಂ । ಸಂಽಪ್ರಶ್ನಂ । ಭುವನಾ । ಯಂತಿ । ಅನ್ಯಾ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತ ಏವ ಪಶೌ ಪುರೋಡಾಶಸ್ಯ ಯೋ ನಃ ಪಿತೇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಯೋ ನಃ ಪಿತಾ ಜನಿತಾ ಯೋ ವಿಧಾತಾ ಯಾ ತೇ ಧಾಮಾನಿ ಪರಮಾಣಿ ಯಾವಮಾ । ಆ. ೩.೮ ॥ ಇತಿ ॥

ಯೋ ವಿಶ್ವಕರ್ಮಾ ನೋಽಸ್ಮಾಕಂ ಪಿತಾ ಪಾಲಯಿತಾ । ನ ಕೇವಲಂ ಪಾಲಕಃ ಕಿಂತು ಜನಿತೋತ್ಪಾದಕಃ । ಕಿಮನೇನಾಸ್ಮಾಕಮುತ್ಪಾದಕ ಇತಿ ಸಂಕೋಚೇನ । ಯೋ ವಿಧಾತಾ ಸರ್ವಸ್ಯ ಜಗತ ಉತ್ಪಾದಕೋ ಯೋ ವಿಶ್ವಕರ್ಮಾ ನೋಽಸ್ಮಾಕಮುತ್ಪನ್ನಾನಿ ಧಾಮಾನಿ ದೇವಾನಾಂ ತೇಜಃಸ್ಥಾನಾನಿ ವೇದ ವೇತ್ತಿ । ಕಿಂ ಬಹುನಾ । ವಿಶ್ವಾ ವಿಶ್ವಾನಿ ಭುವನಾ ಭೂತಜಾತಾನಿ ವೇದ ವೇತ್ತಿ । ಯಶ್ಚ ದೇವಾನಾಮಗ್ನಿವಾಯ್ವಾದೀನಾಂ ನಾಮಧಾ ನಾಮ್ನಾಂ ಧಾತಾ ಇಂದ್ರಾದೀನ್ನಿರ್ಮಾಯ ತೇಷಾಮಿಂದ್ರಾದಿ ನಾಮ ಕೃತ್ವಾ ತತ್ರತ್ಯದೇವೇಷು ಸ್ಥಾಪಯಿತಾ ಏಕ ಏವ । ತಂ ದೇವಮನ್ಯಾನ್ಯಾನಿ ಭುವನಾ ಭೂತಜಾತಾನಿ ಪ್ರಶ್ನಂ ಕಃ ಪರಮೇಶ್ವರ ಇತಿ ಪೃಚ್ಛಾಂ ಯಂತಿ । ಪ್ರಾಪ್ನುವಂತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ ದೇವನು । **ನಃ**—ನಮಗೆ । **ಪಿತಾ**—ಪಾಲಕನೂ । **ಜನಿತಾ**—ಉತ್ಪಾದಕನೂ ಆಗಿರುವನೋ । **ಯಃ**—ಯಾರು । **ವಿಧಾತಾ**—ಸಕಲ ಜಗತ್ತಿಗೂ ನಿರ್ಮಾಪಕನೋ । **ಧಾಮಾನಿ**—ಸಕಲ ತೇಜಃಸ್ಥಾನಗಳನ್ನೂ । **ವೇದ**—ತಿಳಿದಿರುವನೋ । **ವಿಶ್ವಾ ಭುವನಾ**—ಸಕಲ ಜಗತ್ತನ್ನೂ ತಿಳಿದಿರುವನೋ । **ಯಃ**—ಯಾರು । **ದೇವಾನಾಂ**—ಅಗ್ನ್ಯಾದಿದೇವತೆಗಳಿಗೆ । **ನಾಮಧಾಃ**—ನಾಮನಿರ್ದೇಶವನ್ನು ಮಾಡುವನೋ ಆ ದೇವನು । **ಏಕ ಏವ**—ಅದ್ವಿತೀಯನಾಗಿದ್ದಾನೆ । **ತಂ**—ಆ ವಿಶ್ವಕರ್ಮನನ್ನು । **ಅನ್ಯಾ ಭುವನಾ**—ಇತರ ಭೂತಜಾತಗಳು । **ಪ್ರಶ್ನಂ**—ಈಶ್ವರಸ್ವರೂಪವನ್ನು ತಿಳಿಯುವ ಪ್ರಶ್ನೆಯೊಡನೆ । **ಯಂತಿ**—ಸಮೀಪಿಸುತ್ತವೆ.

॥ ಭಾವಾರ್ಥ ॥

ಯಾವ ದೇವನು ನಮಗೆ ಪಾಲಕನೂ, ಉತ್ಪಾದಕನೂ ಆಗಿರುವನೋ, ಯಾರು ಸಕಲ ಜಗತ್ತಿಗೂ ನಿರ್ಮಾಪಕನೋ, ಯಾರು ಸಕಲ ತೇಜಃಸ್ಥಾನಗಳನ್ನು ತಿಳಿದಿರುವನೋ, ಯಾರು ಅಗ್ನ್ಯಾದಿದೇವತೆಗಳಿಗೆ ನಾಮನಿರ್ದೇಶವನ್ನು ಕೊಡುವನೋ, ಆ ದೇವನು ಅದ್ವಿತೀಯನಾಗಿದ್ದಾನೆ. ಇತರ ಭೂತಜಾತಗಳೆಲ್ಲವೂ ಈಶ್ವರನ ಸ್ವರೂಪವನ್ನು ತಿಳಿಯುವ ಪ್ರಶ್ನೆಯೊಡನೆ ಅವನನ್ನು ಸಮೀಪಿಸುತ್ತವೆ.

## English Translation

He who is our preserver, our parent, the creator (of all), who knows

our abodes (and knows) all beings, who is the name-giver of the gods—he is one; other beings come to him to inquire.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ವಿಶ್ವಕರ್ಮಸಂಬಂಧವಾದ ಪಶುಯಾಗದ ಪುರೋಡಾಶಹೋಮದಲ್ಲಿ **ಯೋ ನಃ ಪಿತಾ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯೋ ನಃ ಪಿತಾ ಜನಿತಾ ಯೋ ವಿಧಾತಾ ಯಾ ತೇ ಧಾಮಾನಿ ಪರಮಾಣಿ ಯಾವಮಾ** ಎಂಬ ಸೂತ್ರದಿಂದ (ಆ. ೩–೮) ವಿವೃತವಾಗಿರುವುದು.

**ಅಸೂರ್ತೇ ಸೂರ್ತೇ ರಜಸಿ ನಿಷತ್ತೇ ಯೇ ಭೂತಾನಿ ಸಮಕೃಣ್ವನ್ನಿಮಾನಿ**—ಇಲ್ಲಿ **ಅಸೂರ್ತೇ ಸೂರ್ತೇ** ಎಂಬ ಶಬ್ದಗಳಿಗೆ ಭಾಷ್ಯಕಾರರು ಒಂದು ವಿಧವಾಗಿಯೂ, ಯಾಸ್ಕರು ಮತ್ತೊಂದು ವಿಧವಾಗಿಯೂ ಅರ್ಥವಿವರಣೆಮಾಡಿದಾರೆ—ಭಾಷ್ಯಕಾರರ ವಿವರಣೆಯಂತೆ—**ಅಸೂರ್ತೇ ಸರಣವರ್ಜಿತೇ ಸೂರ್ತೇ ಸರಣಸಹಿತೇ ಸ್ಥಾವರಜಂಗಮಾತ್ಮಕೇ ರಜಸಿ ಲೋಕೇ ।** ಚರಾಚರಾತ್ಮಕವಾದ ಎಂದರೆ ಸಂಚರಿಸುವ ಸ್ವಭಾವವುಳ್ಳ ಪ್ರಾಣಿಗಳಿಂದಲೂ, ಸಂಚರಿಸದ (ಎಂದರೆ ನಿಶ್ಚಲವಾದ) ಪರ್ವತಾದಿಗಳಿಂದಲೂ ಸಹಿತವಾದ ಈ ಲೋಕದಲ್ಲಿ ಎಂದರ್ಥವು. ಆದರೆ ಯಾಸ್ಕರು—

> **ಅಸೂರ್ತೇ ಸೂರ್ತೇ । ಅಸುಸಮೀರಿತಾಃ ಸುಸಮೀರಿತೇ ವಾತಸಮೀರಿತಾ ಮಾಧ್ಯಮಿಕಾ ದೇವಗಣಾಸ್ತೇ ರಸೇನ ಪೃಥಿವೀಂ ತರ್ಪಯಂತೋ ಭೂತಾನಿ ಚ ಕುರ್ವಂತಿ ತ ಆಯಜಂತೇತ್ಯತಿಕ್ರಾಂತಂ ಪ್ರತಿವಚನಂ ॥**
>
> (ನಿ. ೬–೧೫)

ಅಸು ಅಥವಾ ಪ್ರಾಣವಾಯುವಿನಿಂದ ಪ್ರೇರಿತರಾದ ಅಥವಾ ವಾಯುವಿನಿಂದ ಪ್ರೇರಿತರಾದ ಮಧ್ಯಸ್ಥಾನದಲ್ಲಿರುವ ದೇವಗಣಗಳು (ಅಂತರಿಕ್ಷಸ್ಥರಾದ ಮರುದಾದಿ ದೇವತೆಗಳು) ವಾಯುವಿನಿಂದ ಪ್ರೇರಿತವಾದ ಅಂತರಿಕ್ಷಲೋಕದಲ್ಲಿದ್ದು ಉದಕದಿಂದ ಪೃಥಿವಿಯನ್ನು ನೆನೆಯಿಸಿ ಅದರಲ್ಲಿರುವ ಭೂತಜಾತಗಳನ್ನು ಎಂದರೆ ಪ್ರಾಣಿಗಳನ್ನು ತೃಪ್ತಿಪಡಿಸುತ್ತಾರೆ. ಅಂತಹ ಆ ದೇವತೆಗಳನ್ನು ಯಜಿಸಿ ಎಂದು ಋಷಿಯು ಯಜಮಾನರನ್ನು ಸಂಬೋಧನೆಮಾಡಿದಾನೆ.

ಪ್ರಕೃತವಾದ ಋಕ್ಕಿನಲ್ಲಿ ಎರಡು ಮುಖ್ಯವಾದ ಅಭಿಪ್ರಾಯಗಳು. ಮೊದಲನೆಯದಾಗಿ—

(೧) ಸಕಲ ಉತ್ಪತ್ತಿಸ್ಥಿತಿಗೂ ಕಾರಣನೂ, ಅದ್ವಿತೀಯನೂ ಆದ ವಿಶ್ವಕರ್ಮನೊಬ್ಬನೇ ಸಕಲ ದೇವತೆಗಳಿಗೂ ನಿರ್ಮಾಪಕನು ಮತ್ತು ನಾಮನಿರ್ದೇಶಮಾಡತಕ್ಕವನು. ಹಾಗೆಯೇ ನಾಮಪ್ರಭೇದಗಳನ್ನೂ ಹೊಂದಿದವನು.

(೨) ಎರಡನೆಯದಾಗಿ—ಉತ್ಪನ್ನವಾದ ಸಕಲ ಜಗತ್ತಿಗೂ ಇವನು ಅತಿರಿಕ್ತನಾಗಿರುವುದರಿಂದ ಇವನ ಸ್ವರೂಪವು ಗ್ರಾಹ್ಯಾತೀತವಾದುದು. ದೇವತೆಗಳ ಜ್ಞಾನಕ್ಕೂ ಮೀರಿದ ಸ್ವರೂಪವುಳ್ಳವನಾದುದರಿಂದ, ಸಕಲರೂ ಇವನ ಸ್ವರೂಪವೇನೆಂದರಿಯಲು ಪ್ರಶ್ನಿಸುವರೇ ವಿನಾ, ಇವನನ್ನು ಅರಿತವರಾರೂ ಇಲ್ಲ ಎಂಬುದು.

೧

ವಿಶ್ವಕರ್ಮಸಂಜ್ಞಕನಾದ ಈಶ್ವರನು ಸರ್ವವ್ಯಾಪಿ ಮತ್ತು ಸೂರ್ಯಚಂದ್ರಾದಿ ಸಕಲ ಗ್ರಹಗಳೂ, ಸಕಲ ದೇವತೆಗಳೂ ಇವನಲ್ಲೇ ಅಡಗಿದ್ದಾರೆ. ಸರ್ವರೂ ಇವನ ನಿಯಮಕ್ಕೆ ಒಳಪಟ್ಟಿದ್ದಾರೆ.

**ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।**
**ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥**

(ಮು. ಉ. ೨-೧-೭)

ಈ ಪರಮಪುರುಷನಿಂದಲೇ, ದೇವತೆಗಳೂ, ಸಾಧ್ಯರೂ, ಮನುಷ್ಯರೂ, ಪಶುಪಕ್ಷ್ಯಾದಿಗಳೂ, ತಪಸ್ಸು, ಶ್ರದ್ಧೆ, ಸತ್ಯ, ಬ್ರಹ್ಮಚರ್ಯ ಇವೆಲ್ಲವೂ ಉತ್ಪನ್ನವಾಗಿವೆ. ಅಲ್ಲದೆ, **ದೇವಾನಾಂ ನಾಮಧಾ ಏಕ ಏವ** ಎಂದರೇನು ಎಂಬುದಕ್ಕೆ ಉತ್ತರವಾಗಿ ಹೀಗಿರುತ್ತದೆ—

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತ್ಯೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ॥**

ಅಕ್ಷರನೂ, ಅದ್ವಿತೀಯನೂ ಆದ ಈ ಈಶ್ವರನ (ವಿಶ್ವಕರ್ಮನ) ಆಜ್ಞೆಗೆ ಒಳಪಟ್ಟು ಸೂರ್ಯನೂ, ಚಂದ್ರನೂ ಅವರವರ ನಿಯತವಾದ ಸಂಜ್ಞೆಗಳನ್ನು ಪಡೆದು ತಮ್ಮ ಸ್ಥಿರವಾದ ಚಲನವಲನಗಳನ್ನು ಇಟ್ಟುಕೊಂಡಿದ್ದಾರೆ. ಈ ಆಜ್ಞಾನುಸಾರ ವಾಗಿಯೇ ದ್ಯಾವಾಪೃಥಿವಿಗಳೂ ತಮ್ಮತಮ್ಮ ನಿಯತವಾದ ಸ್ಥಾನಗಳಲ್ಲಿ ಸ್ಥಿರವಾಗಿವೆ. ಇವನ ಅನುಶಾಸನದಿಂದಲೇ, ಸಕಲ ಕಾಲಾವಯವಗಳೂ ತಮ್ಮ ಗಮನಾಗಮನಗಳನ್ನು ಯಥಾಕ್ರಮವಾಗಿ ನಡೆಸುತ್ತಿವೆ. ಆದುದರಿಂದ ದೇವ ಮಾನವರ ನಡುವೆ ಸಕಲ ವ್ಯವಹಾರಗಳಿಗೂ ಈ ಈಶ್ವರನೇ ಕಾರಣನು.

ಅಲ್ಲದೇ, ಪ್ರಕಾಶವನ್ನು ಹೊಂದಿರುವ ಸಕಲ ಜಗತ್ತೂ ಈಶ್ವರನ ಅಂಶವೇ ಆಗಿರುವುದರಿಂದ, ಸಕಲ ಇಂದ್ರಾದಿದೇವತೆಗಳ ಹೆಸರೂ ಇವನ ನಾಮಾಂತರಗಳೇ ಆಗಿವೆ. ಆಯಾ ಕರ್ಮಾನುಸಾರವಾಗಿ ಇವನಿಗೆ ಆಯಾ ಸಂಜ್ಞೆಗಳಿಂದ ವ್ಯವಹಾರವಿರುತ್ತದೆ. **ಪಿತಾ, ಜನಿತಾ, ವಿಧತಾ** ಇತ್ಯಾದ್ಯನೇಕವಿಶೇಷಣಗಳು ಇವನ ಜಗದುತ್ಪತ್ತಿ ಕಾರಕವಾದ ಕ್ರಿಯೆಗಳನ್ನು ತಿಳಿಸುತ್ತವೆ.

**ಯಾದೃಗೇವ ದದೃಶೇ ತಾದೃಗುಚ್ಯತೇ ಸಂ ಛಾಯಯಾ ದಧಿರೇ ಸಿಧ್ರಯಾಪ್ಸ್ವಾ ।**
**ಮಹೀಮಸ್ಮಭ್ಯಮುರುಷಾಮುರು ಜ್ರಯೋ ಬೃಹತ್ಸುವೀರಮನಪಚ್ಯುತಂ ಸಹಃ ॥**

(ಋ. ಸಂ. ೫-೪೪-೬)

ಈಶ್ವರನು ಒಬ್ಬನೇ. ಆದರೆ ಅವನು ವಿಶ್ವರೂಪನು. ಯಾವ ರೂಪವನ್ನು ಧರಿಸಿದರೆ ಅದಕ್ಕನುಗುಣವಾದ ಸಂಜ್ಞೆ ಯಿಂದ ವ್ಯವಹೃತನಾಗುತ್ತಾನೆ. ಇವನ ಪ್ರಭಾವವಿರುವುದರಿಂದಲೇ, ಇವನ ರೂಪಾಂತರಗಳಾದ ದೇವತೆಗಳೂ ಸಹ

ಅವರವರ ಸ್ವರೂಪಕ್ಕನುಗುಣವಾದ ಸಂಪತ್ತನ್ನು ಲೋಕಕ್ಕೆ ಒದಗಿಸುತ್ತಾರೆ. ಆದರೆ, ವೈಯಕ್ತಿಕವಾದ ದೇವತೆಗಳು ಸ್ವತಂತ್ರರಲ್ಲ. ಎಲ್ಲರೂ ಇವನ ನಿಯಮಾನುವರ್ತಿಗಳು. ಇವನ ಸಂಕಲ್ಪವೇ ಮೂಲ. ಉಳಿದವರು ಇದರ ಅನುಯಾಯಿಗಳು. ಆಯಾ ಕರ್ಮಾನುರೋಧವಾದ ವಿಶೇಷಣಗಳು ಹೇಗೆಂದರೆ—

**ಯಜುರಿತ್ಯೇಷ ಹೀದಗ್ಂ ಸರ್ವಂ ಯುನಕ್ತಿ ಸಮಿತಿ ಛಂದೋಗಾ ಏತಸ್ಮಿನ್ ಹೀದಗ್ಂ ಸರ್ವಂ ಸಮಾನಮುಕ್ಥಮಿತಿ ಬಹ್ವೃಚಾ ಏಷ ಹೀದಗ್ಂ ಸರ್ವಮುತ್ಥಾಪಯತಿ ಯಾತುರಿತಿ ಯಾತುವಿದ ಏತೇನ ಹೀದಗ್ಂ ಸರ್ವಂ ಯತಂ ವಿಷಮಿತಿ ಸರ್ಪಾಃ ಸರ್ಪ ಇತಿ ಸರ್ಪವಿದ ಊರ್ಗಿತಿ ದೇವಾ ರಯಿರಿತಿ ಮನುಷ್ಯಾ ಮಾಯೇತ್ಯಸುರಾಃ ಸ್ವಧೇತಿ ಪಿತರೋ ದೇವಜನ ಇತಿ ದೇವಜನವಿದೋ ರೂಪಮಿತಿ ಗಂಧರ್ವಾ ಗಂಧ ಇತ್ಯಪ್ಸರಸಸ್ತಂ ಯಥಾಯಥೋ-ಪಾಸತೇ ತದೇವ ಭವತಿ ॥**

(ಶ. ಬ್ರಾ. ೧೦-೫-೨-೨೦)

ಅಧ್ವರ್ಯುಗಳು ಇವನನ್ನು **ಯಜುಃ** ಎಂದು ನಿರ್ದೇಶಿಸುತ್ತಾರೆ. ಸಕಲವಾದ ವಿಶ್ವವನ್ನೂ ಒಂದಾಗಿ ಯೋಜಿಸುವುದರಿಂದ ಇವನಿಗೆ ಈ ಹೆಸರು. ಇವನಲ್ಲಿ ಎಲ್ಲವೂ ಅಡಕವಾಗಿದ್ದು ವಿಶ್ವದ ಸಕಲ ವಸ್ತುಗಳೂ ಸಮಾನವಾದ ಸ್ಥಿತಿಯನ್ನು ಹೊಂದಿರುವುದರಿಂದ ಇವನನ್ನು ಸಾಮವೇದಿಗಳು **ಸಾಮನ್** ಎಂದು ನಿರ್ದೇಶಿಸುತ್ತಾರೆ. ಸಕಲವೂ ಉತ್ಪನ್ನವಾಗುವಂತೆ ಮಾಡುವುದರಿಂದ ಬಹ್ವೃಚರು ಇವನನ್ನು **ಉಕ್ಥ**ವೆಂದು ಕರೆಯುತ್ತಾರೆ. ಈ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವನ್ನೂ ನಿಯಮಿತವಾದ ಬಂಧನದಲ್ಲಿಟ್ಟಿರುವುದರಿಂದ ಮಂತ್ರವಾದಿಗಳು (**ಯಾತುವಿತ್ತುಗಳು**) ಇವನನ್ನು **ಯಾತು**ವೆಂದು ಕರೆಯುತ್ತಾರೆ. ಸರ್ಪಗಳ ನಡುವೆ ವಿಷವೆಂದೂ, ಸರ್ಪಗಳನ್ನು ಹಿಡಿಯುವವರಲ್ಲಿ ಸರ್ಪವೆಂದೂ, ದೇವತೆಗಳ ಗುಂಪಿನಲ್ಲಿ ಊರ್ಜವೆಂದೂ, ಮಾನವರಲ್ಲಿ ಸಂಪತ್ತೆಂದೂ, ಅಸುರರಲ್ಲಿ **ಮಾಯೆಯೆಂದೂ,** ಪಿತೃಗಳಲ್ಲಿ ಸ್ವಧೆಯೆಂದೂ, ಪ್ರಸಿದ್ಧನಾಗಿದ್ದಾನೆ. ಗಂಧರ್ವರು ಇವನನ್ನು ಸುರೂಪಿಯೆಂದೂ, ಅಪ್ಸರಸ್ಸುಗಳು ಸುಗಂಧವೆಂದೂ ಕರೆಯುತ್ತಾರೆ. ಆದುದರಿಂದ ಯಾವ ರೂಪಕ್ರಿಯೆಗಳಿರುವುವೋ ಆಯಾ ಪ್ರಭೇದಗಳಿಗನುಗುಣವಾಗಿಯೂ ಆಯಾ ವ್ಯಕ್ತಿಗಳ ಜ್ಞಾನಶಕ್ತಿಗಳಿಗನುಗುಣವಾಗಿಯೂ ಸಹ ಅನೇಕವಿಧವಾಗಿ ನಿರ್ದಿಷ್ಟನಾಗಿದ್ದಾನೆ. ಇವೇ ವಿಶ್ವರೂಪತ್ವವು ಹಿಂದಿನ ಋಕ್ಕಿನಲ್ಲಿ **ವಿಶ್ವಕರ್ಮಾ ವಿಮನಾಃ ಆದ್ವಿಹಾಯಾಃ ಪರಮೋತಸಂದೃಕ್** ಇತ್ಯಾದಿ ವಿಶೇಷಣಗಳಿಂದ ವರ್ಣಿತವಾಗಿವೆ. ಯಾವರೀತಿ ಇಂದ್ರಾದಿ ದೇವತೆಗಳಿಗೂ, ಉಳಿದ ಯಕ್ಷ, ಗಂಧರ್ವರು ಮತ್ತು ಮಾನವರಾದಿಯಾಗಿ ಸಕಲ ಭೂತಗಳಿಗೂ ಇವನು ನಾಮನಿರ್ದೇಶನವನ್ನು ಮಾಡಿದನೋ ಅದೇರೀತಿ ಆಯಾ ಭೂತಗಳೂ ಅವುಗಳ ಸ್ಥಾನಾನುಗುಣವಾಗಿಯೂ, ಸ್ವರೂಪಾನುಗುಣವಾಗಿಯೂ ಸಹ ಸರ್ವೇಶ್ವರನಾದ ವಿಶ್ವಕರ್ಮನಿಗೂ ನಾಮನಿರ್ದೇಶವನ್ನು ಮಾಡಿವೆ.

ಹೀಗೆ ವಿಶ್ವಕರ್ಮನಿಂದ ನಿರ್ಮಿತವಾದ ಇಂದ್ರಾದಿಗಳಿಗೆ ವೈಯಕ್ತಿಕವಾದ ನಾಮಧೇಯವನ್ನು ಕೊಟ್ಟರೂ ಅಥವಾ ದೇವಮಾನವಾದಿಗಳು ತಮ್ಮ ಜ್ಞಾನಶಕ್ತಿಗಳಿಗನುಸಾರವಾಗಿ ಒಂದೇ ತತ್ತ್ವಕ್ಕೆ ಬೇರೆಬೇರೆ ಹೆಸರುಗಳನ್ನು ಕೊಟ್ಟರೂ ಸಹ ಈ ವೈವಿಧ್ಯವು ಕೇವಲ ವ್ಯಾವಹಾರಿಕವೇ ವಿನಾ ಸತ್ಯವಲ್ಲ. ಹೇಗೆಂದರೆ—

**ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ॥**

(ಛಾ ಉ. ೬.೧-೪)

ಎಲೈ ಶ್ವೇತಕೇತುವೇ, ಯಾವ ರೀತಿ ಒಂದೇ ಮೃತ್ಪಿಂಡದಿಂದ ಘಟಾದಿ ಅನೇಕ ವಿಧವಾದ ಪಾತ್ರೆಗಳನ್ನು ಮಾಡಿದರೂ, ಘಟಾದಿವ್ಯವಹಾರಗಳು ಕೇವಲ ಹೆಸರಿಗೆ ಮಾತ್ರವಲ್ಲದೆ, ಮೂಲಕಾರಣವಾದ ಮೃತ್ತಿಕೆಯೇ ಸತ್ಯವು, ಉಳಿದುದಕ್ಕೆ ವ್ಯಾವಹಾರಿಕವಾದ ಸತ್ಯವು. ಹಾಗೆಯೇ, ಈಶ್ವರನಿಂದ ಉತ್ಪನ್ನವಾದ ಜಗತ್ತಿನ ವ್ಯಕ್ತಿಗಳು ನಾಮವ್ಯತ್ಯಾಸದಿಂದ ವ್ಯಾವಹಾರಿಕವಾದ ಸತ್ಯತ್ವವನ್ನು ಹೊಂದಿವೆ. ಮೂಲಕಾರಣನಾದ ಈಶ್ವರನು ಮಾತ್ರ ಅದ್ವಿತೀಯನು, ನಿತ್ಯನು, ಸತ್ಯಸ್ವರೂಪನು, ಇದಕ್ಕೆ ಇನ್ನೂ ಅನೇಕ ಉದಾಹರಣೆಯನ್ನು ಕೊಡಬಹುದು ಹೇಗೆಂದರೆ—

**ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾದ್ವಾ-ಚಾರಂಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಂ ॥**

(ಛಾ. ಉ. ೬-೧-೫)

ಎಲೈ ಪ್ರಿಯಪುತ್ರನೇ, ಒಂದೇ ಚಿನ್ನದ ಗಟ್ಟಿಯಿಂದ ಅನೇಕ ವಿಧವಾದ ಆಭರಣಗಳನ್ನು ಹೇಗೆ ಮಾಡಬಹುದೋ, ಆಗ ಅವು ಬೇರೆ ಬೇರೆಯಾಗಿ ಕಂಡರೂ ಮೂಲರೂಪವಾದ ಚಿನ್ನವು ಮಾತ್ರ ಹೇಗೆ ಸತ್ಯವೋ ಹಾಗೆಯೇ ಈಶ್ವರನಿಂದ ಉತ್ಪನ್ನವಾದ ಸಕಲ ದೇವಾದಿಗಳೂ ನಾಮನಿರ್ದೇಶದಿಂದ ಭಿನ್ನರು. ವಸ್ತುತಃ ಈಶ್ವರನು ಮಾತ್ರ ಸತ್ಯನು. ಇತ್ಯಾದಿಯಾಗಿ ವಿವರಿಸಿದೆ. **ಯೋ ದೇವಾನಾಂ ನಾಮಧಾ ಏಕ ಏವ** ಎಂಬ ಅಭಿಪ್ರಾಯವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.

**ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।**
**ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥**

(ಶ್ವೇ. ಉ. ೬-೧೧)

ಈಶ್ವರನು ಒಬ್ಬನೇ. ಆದರೆ, ಸಕಲ ಭೂತಗಳಲ್ಲಿಯೂ ಅಡಗಿರುತ್ತಾನೆ. ಅವನು ಸರ್ವಪ್ರದೇಶವನ್ನೂ ವ್ಯಾಪಿಸಿರುವವನು. ಸಕಲ ಭೂತಗಳಿಗೂ ಅಂತರಾತ್ಮನು. ಸಕಲ ಕರ್ಮಗಳಿಗೂ ಅಧ್ಯಕ್ಷನು. ಸಕಲ ಭೂತಗಳೂ ಇವನಲ್ಲೇ ವಾಸಿಸುತ್ತವೆ. ಅವನೇ ಸಕಲ ವ್ಯವಹಾರಗಳಿಗೂ ಸಾಕ್ಷಿಯು. ಅವನೇ ಕೇವಲನು. ಸತ್ತ್ವರಜಸ್ತಮೋಗುಣಗಳಿಂದ ವಿಮುಕ್ತನು.

**ಏಕೋ ವಶೀ ನಿಷ್ಕ್ರಿಯಾಣಾಂ ಬಹೂನಾಮೇಕಂ ಬೀಜಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥**

(ಶ್ವೇ. ಉ. ೬-೧೨)

ಸಕಲ ಭೂತಗಳಿಗೂ ಇವನೊಬ್ಬನೇ ನಿಯಾಮಕನು. ಒಂದೇ ಬೀಜವನ್ನು ಅನೇಕ ರೂಪದಲ್ಲಿ ಪರಿವರ್ತಿತವಾಗುವಂತೆ ಮಾಡುತ್ತಾನೆ. ತಮ್ಮ ಆತ್ಮದಲ್ಲೇ ಇರುವ ಈ ಪರಮಾತ್ಮನನ್ನು ಯಾವ ಮಹರ್ಷಿಗಳು ಸಾಕ್ಷಾತ್ಕರಿಸುವರೋ ಅವರಿಗೆ ನಿತ್ಯಸುಖವು ಲಭಿಸುತ್ತದೆ. ಇತರರಿಗೆ ಇಲ್ಲ.

**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।**
**ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥**

(ಶ್ವೇ. ಉ. ೬-೧೩)

ನಿತ್ಯವಾದ ವಸ್ತುಗಳಿಗಿಂತಲೂ ಅಧಿಕವಾದ ಶಾಶ್ವತಸ್ಥಿತಿಯುಳ್ಳವನೂ, ಪ್ರಾಜ್ಞರಲ್ಲೆಲ್ಲ ಅಧಿಕವಾದ ಪ್ರಜ್ಞೆಯುಳ್ಳವನೂ ಆದ ಈ ಈಶ್ವರನು ಸಕಲರ ಇಚ್ಛೆಯನ್ನು ನೆರವೇರಿಸುವ ಒಬ್ಬನೇ ಪ್ರಭುವಾಗಿರುತ್ತಾನೆ. ವಿವೇಕಯುತವಾದ ಅನುಭವ ದಿಂದಲೂ, ನಿಯಮಯುಕ್ತವಾದ ಧ್ಯಾನದಿಂದಲೂ ಇವನನ್ನು ಅರಿತರೆ ಸಕಲ ಬಂಧನವೂ ನಾಶವಾಗುತ್ತದೆ. ಇತ್ಯಾದಿ ಯಾದಿ ಈಶ್ವರನ ಅದ್ವಿತೀಯತ್ವವು ವರ್ಣಿತವಾಗಿದೆ. **ಯೋ ನಃ ಪಿತಾ ಜನಿತಾ** ಇತ್ಯಾದಿ ವಿಶೇಷಣಗಳಿಂದ ವರ್ಣಿತ ನಾದ ವಿಶ್ವಕರ್ಮನನ್ನು (ಪರಮಪುರುಷನನ್ನು) ಶ್ವೇತಾಶ್ವತರದಲ್ಲಿ ಈ ರೀತಿ ವರ್ಣಿಸಿದೆ.

**ಸ ವಿಶ್ವಕೃದ್ವಿಶ್ವವಿದಾತ್ಮಯೋನಿರ್ಜ್ಞಃ ಕಾಲಕಾಲೋ ಗುಣೀ ಸರ್ವವಿದ್ಯಃ ।**
**ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ ।**

(ಶ್ವೇ. ಉ. ೬-೧೬)

ಈ ಪರಮಾತ್ಮನು ಸಕಲವನ್ನೂ ನಿರ್ಮಾಣಮಾಡತಕ್ಕವನು. ಸಕಲವನ್ನೂ ಅರಿತವನು. ಕಾಲವನ್ನು (ಸಾಕ್ಷಾತ್ಕಾರ ಕಾಲದಲ್ಲಿ) ನಶಿಸುವಂತೆ ಮಾಡುವವನು. ಸಕಲ ಶಾಸ್ತ್ರಗಳಿಗೂ ಪ್ರಭುವು ಮತ್ತು ಸದ್ಗುಣಗಳಿಗೆ ಋಷಿಯು. ಪ್ರಕೃತಿ ಪುರುಷರ ನಿಯಾಮಕನು. (ಸತ್ತ್ವರಜಸ್ತಮಸ್ಸುಗಳೆಂಬ) ಮೂರು ಗುಣಗಳಿಗೂ ಪ್ರಭುವು. ಸಂಸಾರದಿಂದ ಮುಕ್ತಿ ಯನ್ನು ಹೊಂದುವುದಕ್ಕೂ ಅಥವಾ ಪುನಃ ಬಂಧನಕ್ಕೆ ಸಿಕ್ಕುವುದಕ್ಕೂ ಇವನ ಸಂಕಲ್ಪಗಳೇ ಕಾರಣವು. ಇಂತಹ ಅದ್ವಿತೀಯನಾದ ಪರಮೇಶ್ವರನ ಸ್ವರೂಪವು ಸುಲಭವಾಗಿ ತಿಳಿಯತಕ್ಕದ್ದಲ್ಲ. ಆದುದರಿಂದ **ತಂ ಸಂಪ್ರಶ್ನಂ ಭುವನಾ ಯಂತಿ** ಸಕಲ ಭೂತಗಳೂ ಇವನ ಸ್ವರೂಪವೇನು ಎಂದು ಪ್ರಶ್ನಿಸುತ್ತವೆಯೆಂದು ತಿಳಿಸಿದೆ. ಅಗ್ನಿಯೇ ಮುಂತಾದ ದೇವತೆಗಳಿಗೂ ಇವನ ಸ್ವರೂಪವು ಏನೆಂದು ನಿಷ್ಕೃಷ್ಟವಾಗಿ ತಿಳಿಯಲಿಲ್ಲವೆನ್ನುವುದಕ್ಕೆ ಕೇನೋಪನಿಷತ್ತಿನಲ್ಲಿ ಒಂದು ಕಥೆಯಿರುತ್ತದೆ. ಇದನ್ನು ಹಿಂದೆ ತಿಳಿಸಿರುತ್ತೆ. ಅಲ್ಲದೆ—**ಕಿಂ ಸ್ವಿದಾಸೀದಧಿಷ್ಠಾನಂ** ಇತ್ಯಾದಿಯಾಗಿಯೂ (೧೦-೮-೧೨). ದೇವತೆಗಳೇ ಅಲ್ಲದೆ ಅನೇಕ ಋಷಿಗಳೂ ಈ ಪ್ರಶ್ನೆಯನ್ನು ಕೇಳಿರುವ ಸನ್ನಿವೇಶಗಳೂ ಅನೇಕವಿರುತ್ತವೆ. ಉದಾಹರಣೆಗೆ—

**ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪಂತಿ ಕಾನ್ಯಸ್ಮಿನ್ ಜಾಗ್ರತಿ ಕತರ ಏಷ ದೇವಃ ಸ್ವಪ್ನಾನ್ ಪಶ್ಯತಿ ಕಸ್ಯೈತತ್ಸುಖಂ ಭವತಿ ಕಸ್ಮಿನ್ನು ಸರ್ವೇ ಸಂಪ್ರತಿಷ್ಠಿತಾ ಭವಂತೀತಿ ॥**

(ಪ್ರಶ್ನ. ೪-೧)

ಎಲೈ ಪೂಜ್ಯನೇ, ಈ ಪುರುಷನಲ್ಲಿ ನಿದ್ರಿಸತಕ್ಕವರಾರು ? ಇವನಲ್ಲಿ ಅಂತರ್ಗತವಾಗಿ ಎಚ್ಚರವಾಗತಕ್ಕವರಾರು ? ಮತ್ತು ಸ್ವಪ್ನವನ್ನು ಕಾಣತಕ್ಕವರು (ದೇವತೆಗಳು) ಯಾರು ? ಈ ಸೌಖ್ಯವು ಯಾರಿಗೆ ? ಯಾರಲ್ಲಿ ಇವೆಲ್ಲವೂ ಪ್ರತಿಷ್ಠಿತ ವಾಗಿವೆ ? ಎಂದು ಸೂರ್ಯನ ಪೌತ್ರನಾದ ಗಾರ್ಗ್ಯನು ಪಿಪ್ಪಲಾದನನ್ನು ಪ್ರಶ್ನಿಸಿದಾಗ ಪಿಪ್ಪಲಾದನು **ಯಥಾ ಗಾರ್ಗ್ಯ** ಎಲೈ ಗಾರ್ಗ್ಯನೇ ಎಂದು ಪ್ರೀತಿಯಿಂದ ಸಂಬೋಧಿಸಿ ಸಮಯಕ್ಕೆ ಸರಿಯಾದ ಉತ್ತರವನ್ನು ಕೊಡುತ್ತಾನೆ. ಅಲ್ಲದೇ, ಬ್ರಹ್ಮಜ್ಞಾನವನ್ನು ಪಡೆಯಲಿಚ್ಛಿಸುವ ಗಾರ್ಗಿಯು ಯಾಜ್ಞವಲ್ಕ್ಯನನ್ನು ಪ್ರಶ್ನಿಸುವ ಸಂದರ್ಭವು ಅವಳ ಪ್ರಶ್ನೆಯ ಮತ್ತು ಅವನ ಉತ್ತರದ ಮಹತ್ತ್ವವನ್ನು ಸೂಚಿಸುವುದಾಗಿದೆ. ಆ ಪ್ರಶ್ನೋತ್ತರಗಳು ಈ ರೀತಿಯಿದೆ—

**ಅಥ ಹೈನಂ ಗಾರ್ಗೀ ವಾಚಕ್ನವೀ ಪಪ್ರಚ್ಛ**

**ಪ್ರಶ್ನೆ—ಯದಿದಂ ಸರ್ವಮಪ್ಸ್ವೋತಂ ಚ ಪ್ರೋತಂ ಚ ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚ ಇತಿ**—ಸಕಲವೂ ಅಪ್ಪಿನಲ್ಲಿ (ನೀರಿನಲ್ಲಿ) ಹಾಸುಹೊಕ್ಕುಗಳಂತೆ ಅಡಕವಾಗಿದ್ದರೆ, ನೀರು ಯಾವುದರಲ್ಲಿ ಅಡಕವಾಗಿದೆ.

ಉತ್ತರ—**ವಾಯೌ ಗಾರ್ಗಿ**—ಎಲೈ ಗಾರ್ಗಿಯೇ, ವಾಯುವಿನಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚ**—ವಾಯುವು ಯಾವುದರಲ್ಲಿ ಹಾಸುಹೊಕ್ಕುಗಳಂತೆ ಅಡಕವಾಗಿದೆ.

ಉತ್ತರ—**ಅಂತರಿಕ್ಷಲೋಕೇಷು**—ಅಂತರಿಕ್ಷಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಅಂತರಿಕ್ಷಲೋಕಾ ಓತಾಶ್ಚ ಪ್ರೋತಾಶ್ಚ**—ಅಂತರಿಕ್ಷಲೋಕಗಳು ಯಾವುದರಲ್ಲಿ ಅಡಕವಾಗಿವೆ (ಸೇರಿಕೊಂಡಿವೆ).

ಉತ್ತರ—**ಗಂಧರ್ವಲೋಕೇಷು**—ಗಂಧರ್ವಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಗಂಧರ್ವಲೋಕಾ ಓತಾಶ್ಚ ಪ್ರೋತಾಶ್ಚ**—ಗಂಧರ್ವಲೋಕಗಳು ಯಾವುದರಲ್ಲಿ ಸೇರಿಕೊಂಡಿವೆ.

ಉತ್ತರ—**ಆದಿತ್ಯಲೋಕೇಷು**—ಆದಿತ್ಯಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲ್ವಾದಿತ್ಯಲೋಕಾ ಓತಾಶ್ಚ ಪ್ರೋತಾಶ್ಚ**-ಆದಿತ್ಯಲೋಕಗಳು ಯಾವುದರಲ್ಲಿ ಸೇರಿಕೊಂಡಿವೆ ?

ಉತ್ತರ—**ಚಂದ್ರಲೋಕೇಷು**—ಚಂದ್ರಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಚಂದ್ರಲೋಕಾ ಓತಾಶ್ಚ ಪ್ರೋತಾಶ್ಚ**—ಚಂದ್ರಲೋಕಗಳು ಯಾವುದರಲ್ಲಿ ಸೇರಿಕೊಂಡಿವೆ.

ಉತ್ತರ—**ನಕ್ಷತ್ರಲೋಕೇಷು**—ನಕ್ಷತ್ರಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ನಕ್ಷತ್ರಲೋಕಾ ಓತಾಶ್ಚ ಪ್ರೋತಾಶ್ಚ**—ನಕ್ಷತ್ರಲೋಕಗಳು ಎಲ್ಲಿ ಸೇರಿಕೊಂಡಿವೆ ?

ಉತ್ತರ—**ದೇವಲೋಕೇಷು**—ದೇವಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ದೇವಲೋಕಾ ಓತಾಶ್ಚ ಪ್ರೋತಾಶ್ಚ**—ದೇವಲೋಕಗಳು ಯಾವುದರಲ್ಲಿ ಸೇರಿಕೊಂಡಿವೆ ?

ಉತ್ತರ—**ಇಂದ್ರಲೋಕೇಷು**—ಇಂದ್ರಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಇಂದ್ರಲೋಕಾ ಓತಾಶ್ಚ ಪ್ರೋತಾಶ್ಚ**—ಇಂದ್ರಲೋಕಗಳು ಹಾಸುಹೊಕ್ಕುಗಳಂತೆ ಎಲ್ಲಿ ಸೇರಿಕೊಂಡಿವೆ ?

ಪ್ರಶ್ನೆ—**ಪ್ರಜಾಪತಿಲೋಕೇಷು**—ಪ್ರಜಾಪತಿಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಪ್ರಜಾಪತಿಲೋಕಾ ಓತಾಶ್ಚ ಪ್ರೋತಾಶ್ಚ**—ಪ್ರಜಾಪತಿಲೋಕಗಳು ಯಾವುದರಲ್ಲಿ ಅಡಕವಾಗಿವೆ ?

ಉತ್ತರ—**ಬ್ರಹ್ಮಲೋಕೇಷು**—ಬ್ರಹ್ಮಲೋಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಬ್ರಹ್ಮಲೋಕಾ ಓತಾಶ್ಚ ಪ್ರೋತಾಶ್ಚ**—ಬ್ರಹ್ಮಲೋಕಗಳು ಯಾವುದರಲ್ಲಿ ಓತಪ್ರೋತಗಳಂತೆ ಸೇರಿಕೊಂಡಿವೆ ?

ಉತ್ತರ—**ಗಾರ್ಗಿ ಮಾತಿಪ್ರಾಕ್ಷೀಃ ಮಾ ತೇ ಮೂರ್ಧಾ ವ್ಯಪಪ್ತದನತಿಪ್ರಶ್ನ್ಯಾಂ ವೈ ದೇವತಾ-ಮತಿಪೃಚ್ಛಸಿ** ॥

(ಬೃ. ಉ. ೩–೬)

ಕೊನೆಯ ಪ್ರಶ್ನೆಗೆ ಸಮಾಧಾನವಿಲ್ಲ. ಬ್ರಹ್ಮವಿಷಯಕವಾದ ಪ್ರಶ್ನೆಗೂ ಒಂದು ರೀತಿಯುಂಟು. ಕೇವಲ ಚರ್ಚಾ ರೂಪದಿಂದ ತಿಳಿಯುವ ಅಂಶಗಳನ್ನು ಪ್ರಶ್ನೋತ್ತರಗಳ ಮೂಲಕ ತಿಳಿಯಬಹುದು. ಆದರೆ, **ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ** ವಾಕ್ಕಿನಿಂದ ನಿರ್ಧರಿಸಲು ಸಾಧ್ಯವಿಲ್ಲ. ಈ ಆತ್ಮನ ಸ್ವರೂಪವೂ, ಮನಸ್ಸಿನಿಂದಲೂ ತಿಳಿಯಲ್ಪಡುವುದಿಲ್ಲ. ಇವೆರಡರ ಎಲ್ಲೆಗೂ ಮೀರಿದುದು. ಕೇವಲ ಧ್ಯಾನರೂಪದಿಂದ ಮಾತ್ರ ತಿಳಿಯಲ್ಪಡತಕ್ಕದ್ದು. ಅದು ಪ್ರಶ್ನೋತ್ತರಗಳ ಎಲ್ಲೆಯನ್ನು ಮೀರಿದುದು ಎಂದು ತಿಳಿಸಲು ಯಾಜ್ಞ್ಯವಲ್ಕ್ಯನು ಗಾರ್ಗಿಗೆ ಈರೀತಿ ಉತ್ತರವನ್ನು ಕೊಡುತ್ತಾನೆ. ಎಲೈ ಗಾರ್ಗಿಯೇ, ನಿನ್ನ ಪ್ರಶ್ನೆಯು ಸಾಕು, ನಿಲ್ಲಿಸು. ಇಲ್ಲಿಂದ ಮುಂದಕ್ಕೆ ನೀನು ಪ್ರಶ್ನೆಯನ್ನು ಹಾಕಿದರೆ ನಿನ್ನ ತಲೆಯು ಸೀಳಿಹೋಗುತ್ತದೆ.

ಗಾರ್ಗಿ ಮತ್ತು ಯಾಜ್ಞ್ಯವಲ್ಕ್ಯರಿಗೆ ನಡೆದ ಪ್ರಶ್ನೋತ್ತರರೂಪವಾದ ಸಂಭಾಷಣೆಯಂತೆಯೇ, ಯಾಜ್ಞ್ಯವಲ್ಕ್ಯನಿಗೂ ಶಾಕಲ್ಯನಿಗೂ ಅದೇರೀತಿಯಾದ ಪ್ರಶ್ನೋತ್ತರರೂಪವಾದ ಸಂಭಾಷಣೆಯಿರುತ್ತದೆ. ಅದೂ ಪರಬ್ರಹ್ಮವಿಷಯಕವಾಗಿರುತ್ತದೆ. ವಿಶ್ವಕರ್ಮನಿಂದ ವ್ಯಾಪ್ತವಾದ ದಿಕ್ಕು ಮತ್ತು ದಿಗ್ದೇವತೆಗಳ ವಿಷಯಕವಾಗಿರುತ್ತದೆ.

೧

**ಪ್ರಶ್ನೆ—ಯದಿದಂ ಕುರುಪಂಚಾಲಾನಾಂ ಬ್ರಾಹ್ಮಣಾನಾಮತ್ಯವಾದೀಃ ಕಿಂ ಬ್ರಹ್ಮ ವಿದ್ವಾನ್ ಇತಿ**—ಎಲೈ ಯಾಜ್ಞವಲ್ಕ್ಯನೇ, ನೀನು ಕುರುಪಾಂಚಾಲರಿಗೆ ವಿವರಿಸಿದ ಬ್ರಹ್ಮಸ್ವರೂಪವೇನು?

**ಉತ್ತರ—ದಿಶೋ ವೇದ ಸದೇವಾಃ ಸಪ್ರತಿಷ್ಠಾಃ**—ಸ್ಥಿರವಾದ ಸ್ಥಿತಿಯುಕ್ತವಾದ ದೇವತೆಗಳೊಡಗೂಡಿದ ದಿಕ್ಕುಗಳು.

ಪ್ರಶ್ನೆ—**ಕಿಂ ದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸಿ**—ಪೂರ್ವದಿಕ್ಕಿನ ದೇವತೆಯಾವುದು ?

ಉತ್ತರ—**ಸ ಆದಿತ್ಯಃ**—ಅವನು ಆದಿತ್ಯನು.

**ಪ್ರಶ್ನೆ—ಕಸ್ಮಿನ್ ಪ್ರತಿಷ್ಠಿತಃ**—ಆದಿತ್ಯನು ಯಾವುದರಲ್ಲಿ ಸ್ಥಾಪಿತನಾಗಿದ್ದಾನೆ ?

**ಉತ್ತರ—ಚಕ್ಷುಸಿ**—ಚಕ್ಷುಸ್ಸುಗಳಲ್ಲಿ. (ಕಣ್ಣುಗಳಲ್ಲಿ)

**ಪ್ರಶ್ನೆ—ಕಸ್ಮಿನ್ನು ಚಕ್ಷುಃ ಪ್ರತಿಷ್ಠಿತಂ**—ಚಕ್ಷುಸ್ಸು ಯಾವುದರಲ್ಲಿ ಸ್ಥಾಪಿತವಾಗಿದೆ ?

**ಉತ್ತರ—ರೂಪೇಷು**—(ರೂಪಗಳಲ್ಲಿ). **ಚಕ್ಷುಷಾ ಹಿ ರೂಪಾಣಿ ಪಶ್ಯತಿ**—ಕಣ್ಣುಗಳಿಂದಲೇ ರೂಪಗಳನ್ನು ನೋಡುತ್ತೇವೆ

ಪ್ರಶ್ನೆ—**ಕಸ್ಮಿನ್ನು ರೂಪಾಣಿ ಪ್ರತಿಷ್ಠಿತಾನಿ**—ರೂಪಗಳು ಯಾವುದರಲ್ಲಿ ಪ್ರತಿಷ್ಠಿತವಾಗಿವೆ ?

**ಉತ್ತರ—ಹೃದಯ ಇತಿ ಹೋವಾಚ ಹೃದಯೇನ ಹಿ ರೂಪಾಣಿ ಜಾನಾತಿ**—ಹೃದಯದಿಂದಲೇ ರೂಪಗಳನ್ನು ಅರಿಯುವುದರಿಂದ ಅವು ಹೃದಯದಲ್ಲಿ ಪ್ರತಿಷ್ಠಾಪಿತವಾಗಿವೆ.

(ಬೃ.ಉ. ೩.೯-೧೯-೨೦)

೨

**ಪ್ರಶ್ನೆ—ಕಿಂ ದೇವತೋಽಸ್ಯಾಂ ದಕ್ಷಿಣಾಯಾಂ ದಿಶ್ಯಸಿ**—ದಕ್ಷಿಣದಿಕ್ಕಿನ ದೇವತೆಯಾವುದು ?

**ಉತ್ತರ—ಯಮದೇವತ ಇತಿ**—ಅದು ಯಮಸಂಜ್ಞಕವಾದ ದೇವತೆ.

ಪ್ರಶ್ನೆ—**ಸ ಯಮಃ ಕಸ್ಮಿನ್ ಪ್ರತಿಷ್ಠಿತಃ**—ಆ ಯಮನು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ?

ಉತ್ತರ—**ಯಜ್ಞೇ**—ಯಜ್ಞದಲ್ಲಿ.

ಪ್ರಶ್ನೆ—**ಕಸ್ಮಿನ್ನು ಯಜ್ಞಃ ಪ್ರತಿಷ್ಠಿತಃ**—ಯಜ್ಞವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ?

ಉತ್ತರ—**ದಕ್ಷಿಣಾಯಾಂ**—ದಕ್ಷಿಣೆಯಲ್ಲಿ.

ಪ್ರಶ್ನೆ—**ಕಸ್ಮಿನ್ನು ದಕ್ಷಿಣಾ ಪ್ರತಿಷ್ಠಿತಾ**—ದಕ್ಷಿಣೆಯು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ?

ಉತ್ತರ—**ಶ್ರದ್ಧಾಯಾಂ**—ಶ್ರದ್ಧೆಯಲ್ಲಿ.

ಪ್ರಶ್ನೆ—**ಕಸ್ಮಿನ್ನು ಶ್ರದ್ಧಾ ಪ್ರತಿಷ್ಠಿತಾ**—ಶ್ರದ್ಧೆಯು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ?

ಉತ್ತರ—**ಹೃದಯೇ ಹೃದಯೇನ ಹಿ ಶ್ರದ್ಧಾಂ ಜಾನಾತಿ**—ಹೃದಯದಿಂದಲೇ ಶ್ರದ್ಧೆಯನ್ನು ಅರಿಯುವುದರಿಂದ ಇದು ಹೃದಯದಲ್ಲಿ ಪ್ರತಿಷ್ಠಿತವಾಗಿದೆ.

೩

ಪ್ರಶ್ನೆ—**ಕಿಂ ದೇವತೋಽಸ್ಯಾಂ ಪ್ರತೀಚ್ಯಾಂ ದಿಶ್ಯಸಿ**—ಪಶ್ಚಿಮದಿಕ್ಕಿನ ದೇವತೆಯಾವುದು ?

ಉತ್ತರ—**ವರುಣದೇವತ ಇತಿ**—ಪಶ್ಚಿಮದಿಕ್ಕಿನ ದೇವತೆಯು ವರುಣನು.

ಪ್ರಶ್ನೆ—**ಸ ವರುಣಃ ಕಸ್ಮಿನ್ ಪ್ರತಿಷ್ಠಿತಃ**—ವರುಣನು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ ?

ಉತ್ತರ—**ಅಪ್ಸು**—ಉದಕಗಳಲ್ಲಿ.

ಪ್ರಶ್ನೆ—**ಕಸ್ಮಿನ್ನ್ವಾಪಃ ಪ್ರತಿಷ್ಠಿತಾಸಃ**—ಉದಕಗಳ ಸ್ಥಿತಿಯಾವುದು ?

ಉತ್ತರ—**ರೇತಸಿ**—ರೇತಸ್ಸುಗಳಲ್ಲಿ.

೪

ಪ್ರಶ್ನೆ—**ಕಿಂ ದೇವತೋಽಸ್ಯಾಮುದೀಚ್ಯಾಂ ದಿಶ್ಯಸೀತಿ**—ಉತ್ತರದಿಕ್ಕಿನ ದೇವತೆಯಾವುದು ?

ಉತ್ತರ—**ಸೋಮದೇವತ ಇತಿ**—ಸೋಮದೇವನು

ಪ್ರಶ್ನೆ—**ಸ ಸೋಮಃ ಕಸ್ಮಿನ್ ಪ್ರತಿಷ್ಠಿತಃ**—ಸೋಮನ ಪ್ರತಿಷ್ಠಾಸ್ಥಾನವಾವುದು ?

ಉತ್ತರ—**ದೀಕ್ಷಾಯಾಂ**—ದೀಕ್ಷೆಯಲ್ಲಿ

ಪ್ರಶ್ನೆ—**ಕಸ್ಮಿನ್ನು ದೀಕ್ಷಾ ಪ್ರತಿಷ್ಠಿತಾ**—ದೀಕ್ಷೆಯು ಯಾವುದರಲ್ಲಿ ಸ್ಥಾಪಿತವಾಗಿದೆ ?

ಉತ್ತರ—**ಸ ್ಯೇ**—ಸತ್ಯದಲ್ಲಿ.

ಪ್ರಶ್ನೆ—**ಕಸ್ಮಿನ್ನು ಖಲು ಸತ್ಯಂ ಪ್ರತಿಷ್ಠಿತಂ**—ಸತ್ಯವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ?

ಉತ್ತರ—**ಹೃದಯೇ**—ಹೃದಯದಲ್ಲಿ.

ಪ್ರಶ್ನೆ—**ಹೃದಯೇನ ಹಿ ಸತ್ಯಂ ಜಾನಾತಿ ಹೃದಯೇ ಹ್ಯೇವ ಸತ್ಯಂ ಪ್ರತಿಷ್ಠಿತಂ ।**

ಉತ್ತರ—ಹೃದಯವು ಮಾತ್ರ ಸತ್ಯವನ್ನು ತಿಳಿಯಬಲ್ಲುದು. ಆದುದರಿಂದ ಸತ್ಯವು ಹೃದಯದಲ್ಲಿ ಸ್ಥಾಪಿತವಾಗಿದೆ.

೫

ಪ್ರಶ್ನೆ—**ಕಿಂ ದೇವತೋಽಸ್ಯಾಂ ಧ್ರುವಾಯಾಂ ದಿಶ್ಯಸಿ**—ಧ್ರುವದಿಕ್ಕಿನ ದೇವತೆಯಾವುದು ?

ಉತ್ತರ—**ಅಗ್ನಿದೇವತ ಇತಿ**—ಅಗ್ನಿಯು ಈ ದಿಕ್ಕಿನ ದೇವತೆ.

**ಸೋಽಗ್ನಿಃ ಕಸ್ಮಿನ್ ಪ್ರತಿಷ್ಠಿತಃ**—ಅಗ್ನಿಯು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ ?

ಉತ್ತರ—**ವಾಚಿ**—ವಾಕ್ಕಿನಲ್ಲಿ

ಪ್ರಶ್ನೆ—**ಕಸ್ಮಿನ್ನು ವಾಕ್ಪ್ರತಿಷ್ಠಿತಾ**—ವಾಕ್ಕು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ?

ಉತ್ತರ—**ಹೃದಯೇ**—ಹೃದಯದಲ್ಲಿ.

೬

ಪ್ರಶ್ನೆ—**ಕಸ್ಮಿನ್ನು ತ್ವಂ ಚಾತ್ಮಾ ಚ ಪ್ರತಿಷ್ಠಿತಾ**—ನೀನು ಎಂದರೆ ನಿನ್ನ ಶರೀರ ಮತ್ತು ನಿನ್ನ ಆತ್ಮ ಇವೆರಡೂ ಯಾವುದರಲ್ಲಿ ಸ್ಥಾಪಿತವಾಗಿವೆ ?

ಉತ್ತರ—**ಪ್ರಾಣೇ**—ಪ್ರಾಣದಲ್ಲಿ.

ಪ್ರಶ್ನೆ—**ಕಸ್ಮಿನ್ನು ಪ್ರಾಣಃ ಪ್ರತಿಷ್ಠಿತಃ**—ಪ್ರಾಣವು ಏತರಲ್ಲಿ ಸ್ಥಾಪಿತವಾಗಿದೆ ?

ಉತ್ತರ—**ಅಪಾನ ಇತಿ**—ಅಪಾನದಲ್ಲಿ.

ಪ್ರಶ್ನೆ—**ಕಸ್ಮಿನ್ನಪಾನಃ**—ಅಪಾನವು ಯಾವುದರಲ್ಲಿ ?

ಉತ್ತರ—**ವ್ಯಾನೇ**—ವ್ಯಾನದಲ್ಲಿ.

ಪ್ರಶ್ನೆ—**ಕಸ್ಮಿನ್ನು ವ್ಯಾನಃ**—ವ್ಯಾನವು ಯಾವುದರಲ್ಲಿ ?

ಉತ್ತರ—**ಉದಾನೇ**—ಉದಾನದಲ್ಲಿ.

ಪ್ರಶ್ನೆ—**ಕಸ್ಮಿನ್ನುದಾನಃ**—ಉದಾನವು ಯಾವುದರಲ್ಲಿ ?

ಉತ್ತರ—**ಸಮಾನೇ**—ಸಮಾನದಲ್ಲಿ.

ಹಾಗಾದರೇ ಇದೇ ಆತ್ಮನೇ ? ಎಂದರೆ, ಅಲ್ಲ. ಇದು ಆತ್ಮನಲ್ಲ.

**ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇ ಅಶೀರ್ಯೋ ನ ಹಿ ಶೀರ್ಯತೇಽಸಂಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತಿ ।** (ಬೃ. ಉ. ೩-೯)

ಈ ಆತ್ಮನು ಇದಾವುದೂ ಅಲ್ಲ. ಅದು ಗೋಚರಾತೀತವಾದುದು. ಪ್ರತ್ಯಕ್ಷಕ್ಕೆ ವಿಷಯವಾದುದಲ್ಲ. ಅದು ನಾಶರಹಿತವಾದುದು. ಅದು ನಿರಾಸಕ್ತವಾದುದು. ಅದು ವಿಷಯಸಂಗರಹಿತವು. ಬಂಧರಹಿತವಾಗಿ ಮುಕ್ತಾವಸ್ಥೆಯುಳ್ಳದ್ದು. ಅದಕ್ಕೆ ದುಃಖವೆಂಬುದೇ ಇಲ್ಲ. ಇದರ ಅರಿವಿಲ್ಲದಿದ್ದರೆ ಶಿರಃಪಾತವಾಗುತ್ತದೆ, ಎಂಬುದಾಗಿ ಗೋಚರಾತೀತವಾದ ಪರಮಾತ್ಮನ ಪ್ರಶಂಸೆಯಿರುತ್ತದೆ.

**ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಗ್ಂಸ್ವಾಂ ॥**
(ಕಠ. ೧-೨-೨೩)

**ತಂ ಸಂಪ್ರಶ್ನಂ ಭುವನಾ ಯಾಂತ್ಯನ್ಯಾ ।** ಎಂಬ ಯಾವ ವಿಷಯವನ್ನು ಪ್ರಕೃತವಾದ ಮಂತ್ರದಲ್ಲಿ ತಿಳಿಸಿದೆಯೋ ಅದಕ್ಕೆ ಕೆಲವು ಉದಾಹರಣೆಗಳನ್ನು ಮೇಲೆ ತಿಳಿಸಿದೆ. ಅನೇಕ ವಿಧವಾದ ಪ್ರಶ್ನೆಗಳು ಕೇಳಲ್ಪಟ್ಟರೂ ಅದಕ್ಕೆ ಉತ್ತರವು ಮಾತ್ರ ನಿಷ್ಕೃಷ್ಟವಾಗಿ ಸಾಧ್ಯವಿಲ್ಲವೆಂಬುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಆದುದರಿಂದಲೇ—

ಈ ಆತ್ಮನು ಉಪದೇಶಗಳಿಂದಾಗಲಿ, ಮೇಧಾಶಕ್ತಿಯಿಂದಾಗಲಿ, ಅಥವಾ ಇದರ ವರ್ಣನವನ್ನು ಕೇಳುವುದರಿಂದಾಗಲಿ ತಿಳಿಯಲ್ಪಡುವುದಿಲ್ಲ. ಯಾರು ಧ್ಯಾನಪೂರ್ವಕವಾಗಿ ಈ ಆತ್ಮನನ್ನು ಅರಸುವರೋ ಅವರಿಂದ ಮಾತ್ರ ತಿಳಿಯಲ್ಪಡುತ್ತದೆ. ಅವನಿಗೆ ತನ್ನ ಸ್ವರೂಪವನ್ನು ತೋರಿಸುತ್ತದೆ ಎಂದು ಪ್ರಶ್ನಾದಿಗಳ ವೈಯರ್ಥ್ಯವನ್ನು ತಿಳಿಸಿದೆ.

॥ ಸಂಹಿತಾಪಾಠಃ ॥

ತ ಆಯಜಂತ ದ್ರವಿಣಂ ಸಮಸ್ಮಾ ಋಷಯಃ ಪೂರ್ವೇ ಜರಿತಾರೋ ನ ಭೂನಾ ।

ಅಸೂರ್ತೇ ಸೂರ್ತೇ ರಜಸಿ ನಿಷತ್ತೇ ಯೇ ಭೂತಾನಿ ಸಮಕೃಣ್ವನ್ನಿಮಾನಿ ॥

॥ ಪದಪಾಠಃ ॥

**ತೇ । ಆ । ಆಯಜಂತ । ದ್ರವಿಣಂ । ಸಂ । ಅಸ್ಮೈ । ಋಷಯಃ । ಪೂರ್ವೇ । ಜರಿತಾರಃ । ನ । ಭೂನಾ ।**

**ಅಸೂರ್ತೇ । ಸೂರ್ತೇ । ರಜಸಿ । ನಿऽಸತ್ತೇ । ಯೇ । ಭೂತಾನಿ । ಸಂऽಅಕೃಣ್ವನ್ । ಇಮಾನಿ ॥ ೪ ॥**

॥ ಸಾಯಣಭಾಷ್ಯಂ ॥

**ತೇ ಪೂರ್ವ ಋಷಯೋಽಸ್ಮೈ ವಿಶ್ವಕರ್ಮಣೇ ದ್ರವಿಣಂ ಚರುಪುರೋಡಾಶಾದಿಲಕ್ಷಣಂ ಧನಂ ಸಂ ಸಮ್ಯಗಾಯಜಂತ । ಸರ್ವತೋ ಯಜಂತೇ । ಜರಿತಾರೋ ನ ಭೂನಾ ಸ್ತೋತಾರೋ ಯಥಾ ಭೂಮ್ನಾ ಮಹತಾ ಸ್ತೋತ್ರೇಣ ಯಜಂತಿ ತದ್ವತ್ । ಯೇ ಮಹರ್ಷಯೋಽಸೂರ್ತೇ ಸರಣವರ್ಜಿತೇ ಸೂರ್ತೇ ಸರಣಸಹಿತೇ ಸ್ಥಾವರಜಂಗಮಾತ್ಮಕೇ ರಜಸಿ ಲೋಕೇ ನಿಷತ್ತೇ ನಿಷಣ್ಣೇ ನಿಶ್ಚಲಮವಸ್ಥಿತ ಇಮಾನಿ ಭೂತಾನಿ ಭುವನಾನಿ । ಪ್ರಾಣಿನ ಇತ್ಯರ್ಥಃ । ಸಮಕೃಣ್ವನ್ ಸಮ್ಯಗ್ಧನಾದಿನಾ ಪೂಜಯನ್ । ಅಥವಾಯಮರ್ಥಃ । ಯೇ ಸ್ಥಾವರಜಂಗಮಾತ್ಮಕೇ ಜಗತಿ ವರ್ತಮಾನಾನೇತಾನ್ಪ್ರಾಣಿನಸ್ತೇಜಸಾ ಸಮಕೃಣ್ವನ್ ತೇ ಪೂರ್ವ ಋಷಯೋ ದ್ರಷ್ಟಾರೋ ರಶ್ಮಯೋಽಸ್ಮಾ ಆದಿತ್ಯಾತ್ಮಕಾಯ ವಿಶ್ವಕರ್ಮಣೇ ದ್ರವಿಣಂ ತೇಜ ಆಯಜಂತ ॥**

॥ ಪ್ರತಿಪದಾರ್ಥ ॥

**ಯೇ**—ಯಾವ ಮಹರ್ಷಿಗಳು । **ಅಸೂರ್ತೇ**—ಚೈತನ್ಯರಹಿತವಾದುದೂ । **ಸೂರ್ತೇ**—ಚೈತನ್ಯಯುಕ್ತವಾದುದೂ ಆದ । **ರಜಸಿ**—ಲೋಕದಲ್ಲಿ । **ನಿಷತ್ತೇ**—ಇರತಕ್ಕ । **ಇಮಾನಿ ಭೂತಾನಿ**—ಈ ಸಕಲ ಪ್ರಾಣಿಗಳನ್ನೂ । **ಸಮಕೃಣ್ವನ್**—ಸಂಸ್ಕರಿಸಿದರೋ । **ತೇ**—ಅಂತಹ । **ಪೂರ್ವೇ ಋಷಯಃ**—ಪ್ರಾಚೀನರಾದ ಋಷಿಗಳು । **ಭೂನಾ**—ಅಧಿಕವಾದ ಸ್ತೋತ್ರದಿಂದ । **ಜರಿತಾರೋ ನ**—ಸ್ತುತಿಕರ್ತರು ಪೂಜಿಸುವಂತೆ **ಅಸ್ಮೈ**—ವಿಶ್ವಕರ್ಮನನ್ನುದ್ದೇಶಿಸಿ । **ದ್ರವಿಣಂ**—ಚರುಪುರೋಡಾಶಾದಿಗಳಿಂದ । **ಸಮಾಯಜಂತ**—ಸರ್ವತ್ರ ಪೂಜಿಸುತ್ತಾರೆ.

**। ಭಾವಾರ್ಥ ।**

ಯಾವ ಮಹರ್ಷಿಗಳು ಚೈತನ್ಯರಹಿತವಾದುದೂ, ಚೈತನ್ಯಯುಕ್ತವಾದುದೂ ಆದ ಲೋಕದಲ್ಲಿ ಇರತಕ್ಕ ಸಕಲ ಪ್ರಾಣಿಗಳನ್ನು ಸಂಸ್ಕರಿಸಿದರೋ, ಅಂತಹ ಪ್ರಾಚೀನರಾದ ಋಷಿಗಳು ಅಧಿಕವಾದ ಸ್ತೋತ್ರದಿಂದ ಸ್ತುತಿ ಕರ್ತರು ಪೂಜಿಸುವಂತೆ ವಿಶ್ವಕರ್ಮನನ್ನುದ್ದೇಶಿಸಿ ಚರುಪುರೋಡಾಶಾದಿಗಳಿಂದ ಸರ್ವತ್ರ ಪೂಜಿಸುತ್ತಾರೆ.

## English Translation

Those ancient Rishis who adorned with light these beings in the animate and inanimate world, offer to him wealth (of sacrifice) as praisers with abundant (laudation).

॥ ವಿಶೇಷವಿಷಯಗಳು ॥

ಇದೇ ಸೂಕ್ತದಲ್ಲಿ ಮೇಲೆ ೨ನೇ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಇಂದ್ರಿಯರೂಪರಾದ ಋಷಿಗಳು ಪ್ರಾಣರೂಪನಾದ ಪ್ರಜಾಪತಿಯ ಸೇವೆಯನ್ನು ಮಾಡಿ, ಆ ಸೇವೆಯ ಫಲವಾಗಿ ತಾವೇ ತೃಪ್ತಿಯನ್ನು ಹೊಂದಿದ ಮತ್ತು ಹೊಂದುವ ಕ್ರಮವನ್ನು ತಿಳಿಸಿ, ಅದರ ವಿವರಣವನ್ನು ಈ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸುವುದಾಗಿ ಹೇಳಿದೆ ಇಂದ್ರಿಯರೂಪವಾದ ಋಷಿಗಳು ಯಜ್ಞಮಾಡುವ ಕ್ರಮ ಅದರಿಂದ ಲಭಿಸುವ ತೃಪ್ತಿ ಇವರ ಸ್ವರೂಪವೇನು ಇತ್ಯಾದಿಗಳನ್ನು ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿ ವಿವರಿಸಿದೆ.

ಋಷಿಗಳು ಯಜ್ಞರೂಪವಾದ ಸೇವೆಯನ್ನಾಚರಿಸಿದಾಗ ವಿಶ್ವಕರ್ಮರೂಪನಾದ ಪ್ರಜಾಪತಿಗೆ ತೃಪ್ತಿಯುಂಟಾಯಿತು ಎಂಬುದು ಒಂದರ್ಥ. ಅಥವಾ ಋಷಿಸಂಜ್ಞಕವಾದ ಇಂದ್ರಿಯಗಳ ಸೇವೆಯಿಂದ ಪ್ರಾಣರೂಪನಾದ ಆತ್ಮನಿಗೆ ತೃಪ್ತಿಯೆಂಬುದು ಇನ್ನೊಂದರ್ಥ. ಯಜ್ಞಫಲವಾದ ತೃಪ್ತಿಯು ಹೇಗೆ ಮತ್ತು ಸಕಲ ಜಗತ್ತನ್ನೂ ವ್ಯಾಪಿಸಿರುವ ಪ್ರಾಣರೂಪನಾದ ಆತ್ಮನಿಗೆ ಪರಿಪೂರ್ಣವಾದ ತೃಪ್ತಿಯು ಹೇಗೆ ಎಂಬ ವಿಷಯವನ್ನು ಛಾಂದೋಗ್ಯದಲ್ಲಿ ಈ ರೀತಿ ತಿಳಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ **ದ್ರವಿಣ** ಶಬ್ದಕ್ಕೆ ಚರುಪುರೋಡಾಶಾದ್ಯನ್ನವೆಂದು ಅರ್ಥಮಾಡಿದೆ.

**ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ ಸ ಯಾಂ ಪ್ರಥಮಾಮಾಹುತಿಂ ಜುಹುಯಾ-
ತ್ಪ್ರಾಣಾಯ ಸ್ವಾಹೇತಿ ಪ್ರಾಣಸ್ತೃಪ್ಯತಿ ।** (ಛಾ. ಉ. ೫-೧೯-೧)

ಯಾವ ಚರುಪುರೋಡಾಶಾದಿರೂಪವಾದ ಅನ್ನಾಹುತಿಯನ್ನು ಪ್ರಕೃತವಾದ ಋಕ್ಕಿನಲ್ಲಿ **ದ್ರವಿಣ**ವೆಂದು ನಿರ್ದೇಶಿಸಿದ್ದಾರೆಯೋ ಅದೇ ಪ್ರಥಮತಃ ಅರ್ಪಿತವಾದ ಆಹುತಿಯನ್ನು ಪ್ರಾಣವನ್ನುದ್ದೇಶಿಸಿ ಅರ್ಪಿಸಬೇಕು. ಆಗ ಪ್ರಾಣಕ್ಕೆ ತೃಪ್ತಿಯು. ಇಲ್ಲಿ ಪ್ರಾಣವೆಂದರೆ ಕೇವಲ ವೈಯಕ್ತಿಕವಾದ ಒಂದು ಪ್ರಾಣದ ತೃಪ್ತಿಮಾತ್ರವಲ್ಲ. ಪ್ರಾಣಕ್ಕೂ ಪ್ರಾಣಸಂಬಂಧಿಯಾದ ವಿಶ್ವದ ಇತರ ವಸ್ತುಗಳಿಗೂ ತೃಪ್ತಿಯೆಂದರ್ಥ. ಅದು ಹೇಗೆಂದರೆ—

**ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾದಿತ್ಯೇ ತೃಪ್ಯತಿ ದ್ಯೌಸ್ತೃ-
ಪ್ಯತಿ ದಿವಿ ತೃಪ್ಯಂತ್ಯಾಂ ಯತ್ಕಿಂಚ ದ್ಯೌಶ್ಚಾದಿತ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ
ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೧೯-೨)

ಪ್ರಾಣಕ್ಕೆ ತೃಪ್ತಿಯುಂಟಾದರೆ, ಚಕ್ಷುಸ್ಸಿಗೆ ತೃಪ್ತಿ. ಚಕ್ಷುಸ್ಸಿನ ತೃಪ್ತಿಯ ಫಲವಾಗಿ ಆದಿತ್ಯನಿಗೆ ತೃಪ್ತಿ. ಆದಿತ್ಯನಿಗೆ ತೃಪ್ತಿಯಾದುದರಿಂದ ದ್ಯುಲೋಕಕ್ಕೆ ತುಷ್ಟಿ. ಆಗ ದ್ಯುಲೋಕದ ಆಶ್ರಯದಲ್ಲಿಯೂ ಮತ್ತು ಆದಿತ್ಯನ ಆಶ್ರಯದಲ್ಲಿಯೂ ಯಾವ ವಸ್ತುಗಳಿರುವುವೋ ಅವೆಲ್ಲವೂ ಸಂತುಷ್ಟಿಯನ್ನು ಹೊಂದುತ್ತವೆ. ಇವುಗಳ ಜೊತೆಯಲ್ಲಿ ಪ್ರಾಣರೂಪನಾದ ಆತ್ಮನೂ ಸಹ, ಪ್ರಜಾಪಶುಸಂಪತ್ತುಗಳೊಡನೆ ವೃದ್ಧಿಯನ್ನು ಹೊಂದುವುದಲ್ಲದೆ ಉತ್ತಮವಾದ ಜ್ಞಾನವನ್ನೂ ಹೊಂದುತ್ತಾನೆ.

**ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ ಸ್ವಾಹೇತಿ ವ್ಯಾನಸ್ತೃಪ್ಯತಿ । ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚಂದ್ರಮಾಸ್ತೃಪ್ಯತಿ ಚಂದ್ರಮಸಿ ತೃಪ್ಯತಿ ದಿಶಸ್ತೃಪ್ಯಂತಿ ದಿಕ್ಷು ತೃಪ್ಯಂತೀಷು ಯತ್ಕಿಂಚ ದಿಶಶ್ಚ ಚಂದ್ರಮಾಶ್ಚಾಧಿತಿಷ್ಠಂತಿ ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ।**

(ಛಾ.ಉ. ೫-೨೧)

ಅನಂತರ ಎರಡನೆಯ ಆಹುತಿಯು ವ್ಯಾನಕ್ಕೆ ಅರ್ಪಿತವಾಗತಕ್ಕದ್ದು. ವ್ಯಾನಕ್ಕೂ ಶ್ರೋತ್ರೇಂದ್ರಿಯಕ್ಕೂ ನಿಕಟವಾದ ಸಂಬಂಧವಿರುವುದರಿಂದ ಶ್ರೋತ್ರೇಂದ್ರಿಯವು ತೃಪ್ತಿಗೊಳ್ಳುತ್ತದೆ. ಅದರ ಫಲವಾಗಿ ಚಂದ್ರನಿಗೆ ತೃಪ್ತಿ. ಚಂದ್ರನಿಗೆ ಹರ್ಷವುಂಟಾದುದರಿಂದ ದಿಕ್ಕುಗಳೆಲ್ಲವೂ ತುಷ್ಟಿಗೊಳ್ಳುತ್ತವೆ. ದಿಕ್ಕುಗಳ ತೃಪ್ತಿಯ ಫಲವಾಗಿ ಚಂದ್ರನನ್ನೂ ದಿಕ್ಕುಗಳನ್ನೂ ಆಶ್ರಯಿಸಿರುವ ಸಕಲ ವಸ್ತುಗಳಿಗೂ ಸಂತೃಪ್ತಿಯು. ತತ್ಫಲವಾಗಿ ಆಹುತಿಕರ್ತನಾದ ಆತ್ಮನಿಗೆ ಪಶುಪುತ್ರಾದಿಸಂಪದ್ವೃದ್ಧಿಯೂ ಉತ್ತಮವಾದ ಜ್ಞಾನಲಾಭವೂ ಆಗುತ್ತದೆ.

**ಅಥ ಯಾಂ ತೃತೀಯಾಂ ಜುಹುಯಾತ್ತಾಂ ಜುಹುಯಾದಪಾನಾಯ ಸ್ವಾಹೇತ್ಯಪಾನಸ್ತೃಪ್ಯತಿ। ಅಪಾನೇ ತೃಪ್ಯತಿ ವಾಕ್ ತೃಪ್ಯತಿ ವಾಚಿ ತೃಪ್ಯಂತ್ಯಾಮಗ್ನಿಸ್ತೃಪ್ಯತ್ಯಗ್ನೌ ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯಂತ್ಯಾಂ ಯತ್ಕಿಂಚ ಪೃಥಿವೀ ಚಾಗ್ನಿಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೨೧)

ಮೂರನೆಯ ಆಹುತಿಯು ಅಪಾನವನ್ನುದ್ದೇಶಿಸಿ ಅರ್ಪಿತವಾಗತಕ್ಕದ್ದು. ಅದರಿಂದ ಅಪಾನಕ್ಕೆ ತೃಪ್ತಿಯು. ಅಪಾನಕ್ಕೆ ತೃಪ್ತಿಯಾದುದರಿಂದ ವಾಕ್ಕಿಗೆ ಸಂತುಷ್ಟಿಯು ಲಭಿಸುತ್ತದೆ. ವಾಕ್ಕಿನ ತೃಪ್ತಿಯ ಫಲವಾಗಿ ಅಗ್ನಿಗೆ ತೃಪ್ತಿಯು ಲಭಿಸುತ್ತದೆ. ಆಗ ಪೃಥ್ವಿಗೆ ತೃಪ್ತಿ. ಅದರ ಫಲವಾಗಿ ಆಹುತಿಯನ್ನರ್ಪಿಸುವ ಆತ್ಮನಿಗೆ ಪಶುಪುತ್ರರೂಪವಾದ ಸಂಪದ್ವೃದ್ಧಿ ಮತ್ತು ಉತ್ತಮವಾದ ಜ್ಞಾನವೃದ್ಧಿ.

**ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ಸಮಾನಾಯ ಸ್ವಾಹೇತಿ ಸಮಾನಸ್ತೃಪ್ಯತಿ। ಸಮಾನೇ ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯಂತ್ಯಾಂ ಯತ್ಕಿಂಚ ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೨೧)

ನಾಲ್ಕನೆಯ ಆಹುತಿಯು ಸಮಾನವನ್ನುದ್ದೇಶಿಸಿ ಅರ್ಪಿಸಲ್ಪಡತಕ್ಕದ್ದು. ಅದರಿಂದ ಸಮಾನಕ್ಕೆ ತೃಪ್ತಿಯು ಲಭಿಸುತ್ತದೆ. ಸಮಾನದ ತೃಪ್ತಿಯಿಂದ ಮನಸ್ಸಿಗೆ ತೃಪ್ತಿ. ಮನಸ್ಸಿನ ತೃಪ್ತಿಯಿಂದ ಪರ್ಜನ್ಯನಿಗೆ ತೃಪ್ತಿ. ಪರ್ಜನ್ಯನ ತೃಪ್ತಿಯಿಂದ ವಿದ್ಯುತ್ತಿಗೆ ಸಂತುಷ್ಟಿ. ಈ ತೃಪ್ತಿಯ ಫಲವಾಗಿ ಪರ್ಜನ್ಯ ಮತ್ತು ವಿದ್ಯುತ್ತನ್ನು ಆಶ್ರಯಿಸಿರುವ ಸಕಲವಸ್ತುಗಳಿಗೂ ಸಂತೃಪ್ತಿಯು. ಇದರ ಫಲವಾಗಿ, ಈ ಆಹುತಿಯನ್ನರ್ಪಿಸುವ ಆತ್ಮನು ಪಶುಪುತ್ರಾದಿಸಂಪತ್ತನ್ನೂ ಉತ್ತಮವಾದ ಜ್ಞಾನವನ್ನೂ ಹೊಂದುತ್ತಾನೆ.

**ಅಥ ಯಾಂ ಪಂಚಮೀಂ ಜುಹುಯಾತ್ತಾಂ ಜುಹುಯಾದುದಾನಾಯ ಸ್ವಾಹೇತ್ಯುದಾನಸ್ತೃಪ್ಯತಿ । ಉದಾನೇ ತೃಪ್ಯತಿ ತ್ವಕ್‌ತೃಪ್ಯತಿ ತ್ವಚಿ ತೃಪ್ಯಂತ್ಯಾಂ ವಾಯುಸ್ತೃಪತಿ ವಾಯೌ ತೃಪ್ಯತ್ಯಾಕಾಶಸ್ತೃಪ್ಯತಿ ಆಕಾಶೇ ತೃಪ್ಯತಿ ಯತ್ಕಿಂಚ ವಾಯುಶ್ಚಾಕಾಶಶ್ಚಾಧಿತಿಷ್ಠತಸ್ತತ್ತೃಪತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನ ॥**

(ಛಾ. ಉ. ೫-೨೩)

ಐದನೆಯ ಆಹುತಿಯು ಉದಾನವನ್ನುದ್ದೇಶಿಸಿ ಅರ್ಪಿತವಾಗತಕ್ಕದ್ದು. ಅದರಿಂದ ಉದಾನಕ್ಕೆ ತೃಪ್ತಿಯು. ಉದಾನದ ತೃಪ್ತಿಯಿಂದ ತ್ವಕ್ಕಿನ (ಚರ್ಮಾವಯವದ) ಸಂತೃಪ್ತಿಯುಂಟಾಗುತ್ತದೆ. ತ್ವಕ್ಕಿನ ತೃಪ್ತಿಯಿಂದ ವಾಯುವಿಗೆ ತುಷ್ಟಿಯು. ಅದರಿಂದ ಆಕಾಶಕ್ಕೆ ತೃಪ್ತಿಯು. ಇದರ ಫಲವಾಗಿ ವಾಯು ಮತ್ತು ಆಕಾಶಗಳನ್ನು ಆಶ್ರಯಿಸಿರುವ ಸಕಲ ವಸ್ತುಗಳಿಗೂ ತೃಪ್ತಿ. ತತ್ಫಲವಾಗಿ ಈ ಆಹುತಿಯನ್ನರ್ಪಿಸಿದ ಆತ್ಮನು ಪಶುಪುತ್ರಾದಿಸಂಪತ್ತನ್ನೂ, ತೇಜಸ್ಸನ್ನೂ, ಬ್ರಹ್ಮವರ್ಚಸ್ಸನ್ನೂ ಹೊಂದುತ್ತಾನೆ. ಇತ್ಯಾದಿಯಾಗಿ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಆಹುತ್ಯರ್ಪಣದ ಕ್ರಮವನ್ನೂ, ಹಿಂದೆ ಇದೇ ಸೂಕ್ತದ ಎರಡನೆಯ ಋಕ್ಕಿನಲ್ಲಿ ಹೇಳಿರುವ ತೃಪ್ತಿಯ ಕ್ರಮವನ್ನೂ ವಿವರಿಸಿದೆ.

**ಅಸೂರ್ತೇ ಸೂರ್ತೇ ರಜಸಿ** ಎಂಬ ವಾಕ್ಯಕ್ಕೆ ಎರಡುವಿಧವಾದ ಅರ್ಥವನ್ನು ತಿಳಿಸಿದೆ. **ಸೂರ್ತ** ಶಬ್ದಕ್ಕೆ ಚಲನಸ್ವರೂಪವುಳ್ಳದ್ದೆಂದರ್ಥ. ಚಲನಾತ್ಮಕವಾದ ಎಂದರೆ ಜಂಗಮಾತ್ಮಕವಾದ ಪ್ರಪಂಚ ಮತ್ತು ಚಲನವಿಲ್ಲದ ಸ್ಥಾವರಾತ್ಮಕವಾದ ಪ್ರಪಂಚ. ಇವು **ಸೂರ್ತ** ಮತ್ತು **ಅಸೂರ್ತ** ಶಬ್ದಗಳಿಂದ ನಿರ್ದೇಶಿಸಲ್ಪಡುತ್ತವೆ. ಋಷಿಗಳು ಸ್ಥಾವರ ಮತ್ತು ಜಂಗಮಾತ್ಮಕವಾದ ಸಕಲ ಲೋಕಗಳನ್ನೂ ವಿಶ್ವಕರ್ಮನ ಸ್ಥಾನವೆಂದರಿತು ಸರ್ವತ್ರ ವಿಶ್ವಕರ್ಮನ ವ್ಯಾಪಕತ್ವವನ್ನು ಸಾಕ್ಷಾತ್ಕರಿಸಿ ಅವನನ್ನು ಪೂಜಿಸಿದರು ಎಂದು ಒಂದರ್ಥ.

ಎರಡನೆಯದಾಗಿ ಋಷಿರೂಪರಾದರಶ್ಮಿಗಳ ಆದಿತ್ಯಪೂಜೆ. ಋಷಿ ಶಬ್ದಕ್ಕೆ ಅತೀಂದ್ರಿಯಜ್ಞಾನಶಕ್ತಿಯುಳ್ಳ ಸೂರ್ಯರಶ್ಮಿಗಳು ಎಂದರ್ಥ. ಈ ರಶ್ಮಿಗಳು ಆದಿತ್ಯರೂಪನಾದ ವಿಶ್ವಕರ್ಮನಿಗೆ ಪೂಜೆಯನ್ನರ್ಪಿಸುತ್ತವೆ. ಹೇಗಂದರೆ, ಪ್ರಥಮತಃ ಆದಿತ್ಯನಿಂದ ಪ್ರಸರಿಸಿದ ರಶ್ಮಿಗಳು ಸ್ಥಾವರಜಂಗಮಾತ್ಮಕವಾದ ಸಕಲ ಲೋಕಗಳನ್ನೂ ತಮ್ಮ ತೇಜಸ್ಸಿನಿಂದ ವ್ಯಾಪಿಸುತ್ತವೆ. ಅನಂತರ ಪುನಃ ಅದೇ ಲೋಕಗಳ ಸಾರಗಳನ್ನು ಹೀರಿ ಆ ಸಾರರೂಪವಾದ ದ್ರವ್ಯದಿಂದ ಆದಿತ್ಯನಿಗೆ ಪೂಜೆಯನ್ನರ್ಪಿಸುತ್ತವೆ ಎಂದು ತಾತ್ಪರ್ಯ.

ಹೀಗೆ ಪ್ರಥಮತಃ ಪ್ರಸರಿಸಿ ಸಕಲ ಲೋಕಗಳನ್ನೂ ವ್ಯಾಪಿಸಿ ತೇಜಸ್ಸನ್ನು ಹರಡುವ ಕಾರ್ಯವೊಂದು. ಅದು ಹೇಗೆಂದರೆ—

**ಆಸಾವಾದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ । ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧು-ನಾಡ್ಯಃ । ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾವಾ ಏತಾ ಋಚಃ ।..................ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಂ ರೂಪಂ ॥**

(ಛಾ. ಉ. ೩-೧)

ಸಕಲ ದೇವತೆಗಳನ್ನೂ ಒಳಗೊಂಡ ಆದಿತ್ಯನೇ ದೇವಮಧುವು. ಈ ಮಧುವಿಗೆ ವೃಕ್ಷವಾವುದೆಂದರೆ, ದ್ಯುಲೋಕವು. ಅಂತರಿಕ್ಷವೇ ಗೂಡು. ರಶ್ಮಿಗಳೇ ಪುತ್ರರು. ಪೂರ್ವದಿಕ್ಕಿಗೆ ಹರಡುವ ರಶ್ಮಿಗಳು ಪೂರ್ವದಿಕ್ಕಿನ ಮಧುನಾಡಿಗಳು. ಋಕ್ಕುಗಳೇ ಭ್ರಮರಗಳು. ಋಗ್ವೇದವೇ ಪುಷ್ಪ. ಯಜ್ಞದಲ್ಲಿ ಅರ್ಪಿತವಾದ ಆಜ್ಯಪಯೋರೂಪಗಳಾದ ಆಹುತಿಗಳೇ ಅಮೃತಬಿಂದುಗಳು. ಋಙ್ಮಂತ್ರಗಳು ಪಕ್ವವಾದನಂತರ ಯಶಸ್ಸೂ, ತೇಜಸ್ಸೂ, ಇಂದ್ರಿಯವೂ, ವೀರ್ಯವೂ, ಶಕ್ತಿಯೂ, ರಸವೂ ಯಾಗಾದಿಕರ್ಮಗಳಿಂದ ಉತ್ಪನ್ನವಾಗಿ ಅನಂತರ ಫಲರೂಪವಾದ ರಸಗಳೆಲ್ಲವೂ ಆದಿತ್ಯನಿಗೆ ಅಭಿಮುಖವಾಗಿ ಪ್ರಸರಿಸಿ ಅವನನ್ನೇ ಪುನಃ ಸೇರುತ್ತವೆ. ಇದೇ ಆದಿತ್ಯನ ರಕ್ತಬಿಂಬದ ಆಕರ್ಷಕವಾದ ರೂಪಕ್ಕೆ ಹೇತುಗಳು. (ಇಲ್ಲಿ ಲೋಕಕ್ಕೆ ಗೋಚರನಾದ ಆದಿತ್ಯನ ಮತ್ತು ಅಗೋಚರನಾದ ಮತ್ತು ವಿಶ್ವಕರ್ಮರೂಪನಾದ ಪರೋಕ್ಷರೂಪದ ಆದಿತ್ಯನ ಮಾರ್ನೆಗಳೆರಡೂ ಸೇರಿವೆ).

**ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯಃ । ಯಜೂಂಷ್ಯೇವ ಮಧುಕೃತಃ .... ...... .... ...... ...... .... .... .... ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ, ಏತದ್ಯದೇತದಾದಿತ್ಯಸ್ಯ ಶುಕ್ಲಂ ರೂಪಂ ।** (ಛಾ. ಉ. ೩-೨)

ಆದಿತ್ಯನ ಯಾವ ರಶ್ಮಿಗಳು ದಕ್ಷಿಣದಿಕ್ಕಿಗೆ ಪ್ರಸರಿಸುವುವೋ ಅವು ದಕ್ಷಿಣದ ಮಧುನಾಡಿಗಳು. ಯಜುರ್ಮಂತ್ರಗಳೇ ಭ್ರಮರಗಳು. ಯಜುರ್ವೇದವೇ ಪುಷ್ಪವು. ಯಜ್ಞಾಹುತಿಗಳಾದ ಆಜ್ಯಪಯಸ್ಸುಗಳೇ ಅಮೃತಬಿಂದುಗಳು. ಇದರಿಂದ ರಸಾದಿಗಳು ಉತ್ಪನ್ನವಾಗಿ ಪುನಃ ಆದಿತ್ಯನಿಗೆ ಅಭಿಮುಖವಾಗಿ ಪ್ರಸರಿಸಿ ಆದಿತ್ಯನನ್ನೇ ಸೇರುತ್ತವೆ. ಇದೇ ಆದಿತ್ಯನಿಗೆ ಶುಕ್ಲರೂಪವನ್ನು ಒದಗಿಸುತ್ತವೆ.

**ಅಥ ಯೇಽಸ್ಯ ಪ್ರತ್ಯಂಚೋ ರಶ್ಮಯಃ ...... .... .... ಸಾಮಾನ್ಯೇವ ಮಧುಕೃತಃ .... ...... ...... .... ಏತದಾದಿತ್ಯಸ್ಯ ಕೃಷ್ಣಂ ರೂಪಂ ।** (ಛಾ. ಉ. ೩-೩)

ಪಶ್ಚಿಮಾಭಿಮುಖವಾಗಿ ಪ್ರಸರಿಸುವ ರಶ್ಮಿಗಳು ಪಶ್ಚಿಮದ ಮಧುನಾಡಿಗಳು. ಸಾಮರೂಪವಾದ ಭ್ರಮರಗಳು ಸಾಮವೇದರೂಪವಾದ ಪುಷ್ಪದಲ್ಲಿ ಆಹುತಿರೂಪವಾದ ಅಮೃತಬಿಂದುಗಳನ್ನು ಸೃಜಿಸಿ ಆದಿತ್ಯನನ್ನು ಸೇರುತ್ತವೆ. ಇವೇ ಆದಿತ್ಯನ ಕೃಷ್ಣರೂಪವನ್ನು ಸಂಪಾದಿಸುವುವು.

(ಛಾ. ಉ. ೩-೪)

**ಅಥ ಯೇಽಸ್ಯೋದಂಚೋ ರಶ್ಮಯಃ । .... ...... ಅಥರ್ವಾಂಗಿರಸ ಏವ ಮಧುಕೃತ ಇತಿಹಾಸ-ಪುರಾಣಂ ಪುಷ್ಪಂ .... ....ಏತದಾದಿತ್ಯಸ್ಯ ಪರಂ ಕೃಷ್ಣಂ ರೂಪಂ ॥**

(ಛಾ. ಉ. ೩-೪)

ಉತ್ತರ ದಿಕ್ಕಿಗೆ ಹರಡುವ ರಶ್ಮಿಗಳು ಉತ್ತರದ ಮಧುನಾಡಿಗಳು. ಅಥರ್ವರೂಪವಾದ ಭ್ರಮರವು ಇತಿಹಾಸಪುರಾಣ ರೂಪವಾದ ಪುಷ್ಪದಿಂದ ರಸಾದಿರೂಪವಾದ ಅಮೃತಬಿಂದುವನ್ನು ಸೃಜಿಸಿ ಆದಿತ್ಯನನ್ನು ಸೇರುತ್ತವೆ. ಇದೇ ಆದಿತ್ಯನ ಗಹನಾತ್ಮಕವಾದ ಕೃಷ್ಣರೂಪವನ್ನು ಸಂಪಾದಿಸುತ್ತವೆ.

**ತೇ ವಾ ಏತೇ ರಸಾನಾಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾ-**
**ನಾಮಮೃತಾನಿ ವೇದಾ ಹ್ಯಮೃತಾಸ್ತೇಷಾಮೇತಾನ್ಯಮೃತಾನಿ ।**

(ಛಾ. ಉ. ೩-೫)

ಸಕಲ ದಿಕ್ಕುಗಳಿಗೂ ಸಕಲ ಲೋಕಗಳಿಗೂ ಹರಡುವ ಆದಿತ್ಯನ ರಶ್ಮಿಗಳೇ ಸಕಲ ವರ್ಣಗಳಿಗೂ ಕಾರಣವಾಗಿ ಸರ್ವರಸಗಳಿಗೂ ಸಾರಗಳಾಗಿರುತ್ತದೆ. ರಸಗಳ ಸಾರಗಳು ಎಂದರೆ, ಸಕಲ ಲೋಕಗಳಲ್ಲಿಯೂ ಇರುವ ಉತ್ತಮವಾದ ವಸ್ತುಗಳ ಸಾರವೇ ವೇದವು. ಅವು ಯಜ್ಞರೂಪಕ್ಕೆ ಪರಿಣಾಮವನ್ನು ಹೊಂದಿದನಂತರ ಅದರ ರಸದ ಫಲವಾಗಿ ಉತ್ಪನ್ನವಾದ ಸೂರ್ಯನ ವರ್ಣಗಳು ಯಜ್ಞಾದಿಗಳ ಸಾರವು. ಅಮೃತಾತ್ಮಕವಾದ ವೇದಾದಿಗಳಿಂದ ದೀಪ್ತವಾದ ಆದಿತ್ಯನ ನಾನಾವರ್ಣಾತ್ಮಕವಾದ ತೇಜಸ್ಸು ಎಲ್ಲ ಅಮೃತಕ್ಕೂ ಅಮೃತಪ್ರಾಯವಾಗಿದೆ.

ಹೀಗೆ ರಶ್ಮಿಪ್ರಸರಣದ ಫಲವನ್ನು ವರ್ಣಿಸಿ, ಅನಂತರ ಆದಿತ್ಯರೂಪನಾದ ವಿಶ್ವಕರ್ಮನಲ್ಲಿ ಸಕಲ ವಿಧವಾದ ದೇವತೆಗಳೂ ಅಂತರ್ಗತರಾಗಿದ್ದಾರೆ ಎಂಬ ವಿಷಯವನ್ನೂ ಸಹ ಈ ರೀತಿಯಲ್ಲಿ ವಿವರಿಸಿ ತಿಳಿಸಿದೆ.

**ಯದ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ನ ವೈ ದೇವಾ ಅಶ್ನಂತಿ**
**ನ ಪಿಬಂತಿ ಏತದೇವಾಮೃತಂ ದೃಷ್ಟ್ವಾ ತೃಪ್ಯಂತಿ ।**

**ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವಂತಿ ।**
**ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ।**
**ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ।**
**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ॥**

(ಛಾ. ಉ. ೩-೬-೧೦)

ಅಮೃತರೂಪವೂ, ಪಂಚವಿಧಾತ್ಮಕವೂ ಆದ ಆದಿತ್ಯನ ರಸಾತ್ಮಕವಾದ ರೂಪಗಳಲ್ಲಿ ವಸುಗಳೂ, ರುದ್ರರೂ, ಆದಿತ್ಯರೂ, ಮರುತ್ತುಗಳೂ ಸಾಧ್ಯರೂ ವಾಸಿಸುತ್ತಾರೆ. ಅವರೇ ರೋಹಿತಾದಿವರ್ಣಗಳನ್ನೂ ಪ್ರವೇಶಿಸುತ್ತಾರೆ. ಈ ಅಮೃತಗಳ ಸಾರಗಳನ್ನು ತಿಳಿದವನು ವಸುರುದ್ರಾದಿಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ. ಆದಿತ್ಯನೂ ಸಹ ಈ ವಸುಗಳ, ರುದ್ರರ, ಆದಿತ್ಯರ ಲೋಕಗಳಲ್ಲಿ ಸಂಚರಿಸುತ್ತಲೂ ಅವರ ಸ್ವಾರಾಜ್ಯಮಹಿಮೆಯನ್ನು ವೀಕ್ಷಿಸುತ್ತಲೂ ಸ್ಥಾಪಿತನಾಗಿದ್ದಾನೆ. ಈ ಆದಿತ್ಯನು ಏಕಶತವಿಧನು, ಎಂದರೆ ಪರಬ್ರಹ್ಮರೂಪನಾಗಿಯೇ ಇದ್ದಾನೆ ಎಂಬ ವಿಷಯವನ್ನು ಹಿಂದೆ ಹನ್ನೆರಡನೆಯ ಭಾಗದ ೩೬೬ ನೇ ಪುಟದಲ್ಲಿ ವಿವರಿಸಿದೆ.

ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇದೇ ಆದಿತ್ಯರೂಪನಾದ ವಿಶ್ವಕರ್ಮನ ಪ್ರಶಂಸೆಯಿರುತ್ತದೆ.



॥ ಸಂಹಿತಾಪಾಠಃ ॥

ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಯದಸ್ತಿ ।
ಕಂ ಸ್ವಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಪಶ್ಯಂತ
ವಿಶ್ವೇ ॥ ೫ ॥

॥ ಪದಪಾಠಃ ॥

ಪರಃ । ದಿವಾ । ಪರಃ । ಏನಾ । ಪೃಥಿವ್ಯಾ । ಪರಃ । ದೇವೇಭಿಃ । ಅಸುರೈಃ । ಯತ್ । ಅಸ್ತಿ ।
ಕಂ । ಸ್ವಿತ್ । ಗರ್ಭಂ । ಪ್ರಥಮಂ । ದಧ್ರೇ । ಆಪಃ । ಯತ್ರ । ದೇವಾಃ । ಸಂऽಅಪಶ್ಯಂತ । ವಿಶ್ವೇ ॥೫॥

॥ ಸಾಯಣಭಾಷ್ಯಂ ॥

ಯದೀಶ್ವರತತ್ತ್ವಂ ದಿವಾ ಪರೋ ದ್ಯುಲೋಕಾದಪಿ ಪರಸ್ತಾದ್ವರ್ತಮಾನಂ ತಥೈನಾಸ್ಯಾಃ ಪೃಥಿವ್ಯಾಃ ಪರಃ ಪರಸ್ತಾದ್ವರ್ತಮಾನಂ ತಥಾ ದೇವೇಭಿರ್ದೇವೈಃ ಪರಸ್ತಾದ್ವರ್ತಮಾನಮಸುರೈಃ ಪರಸ್ತಾದ್ವರ್ತಮಾನಂ ಚ ಯದಸ್ತಿ ತದ್ಗುಹಾಯಾಮವಸ್ಥಿತಂ ಕಂ ಸ್ವಿದ್ಗರ್ಭಂ ಗರ್ಭವತ್ಸರ್ವಸ್ಯ ಗ್ರಾಹಕಂ ತತ್ತ್ವಮಾಪಃ ಪ್ರಥಮಂ ದಧ್ರೇ ॥ ಧೃತವತ್ಯಃ । ಯತ್ರ ಯಸ್ಮಿನ್ಗರ್ಭೇ ದೇವಾ ಇಂದ್ರಾದಯೋ ವಿಶ್ವೇ ಸರ್ವೇಽಪಿ ಸಮಪಶ್ಯಂತ ಸಂಗತಾಃ ಪರಸ್ಪರಂ ಪಶ್ಯಂತಿ । ಏವಂ ಜಾನನ್ನೇವ ಕಶ್ಚಿತ್ತತ್ತ್ವವಿತ್ಪ್ರಶ್ನಂ ಕರೋತಿ ॥

। ಪ್ರತಿಪದಾರ್ಥ ।

**ದಿವಾ ಪರಃ**—ದ್ಯುಲೋಕಕ್ಕಿಂತಲೂ ಅಧಿಕವೂ । **ಏನಾ ಪೃಥಿವ್ಯಾಃ ಪರಃ**—ಈ ಪೃಥ್ವಿಗಿಂತಲೂ ಅಧಿಕವೂ । **ದೇವೇಭಿಃ**—ದೇವತೆಗಳಿಗಿಂತಲೂ ಅಧಿಕವೂ । **ಅಸುರೈಃ**—ಅಸುರರಿಗಿಂತಲೂ ಅಧಿಕವೂ ಆದ । **ಯತ್‌ಗರ್ಭಂ ಅಸ್ತಿ**—ಯಾವ ರಹಸ್ಯತತ್ತ್ವವುಂಟೋ । **(ಯತ್)**—ಯಾವುದನ್ನು । **ಆಪಃ**—ಉದಕಗಳು । **ಪ್ರಥಮಂ**—ಎಲ್ಲಕ್ಕಿಂತಲೂ ಮೊದಲು । **ದಧ್ರೇ**—ಧರಿಸಿದವೋ । **ಯತ್ರ**—ಯಾವ ಗರ್ಭತತ್ತ್ವದಲ್ಲಿ । **ವಿಶ್ವೇ ದೇವಾಃ**—ಇಂದ್ರಾದಿ ಸಕಲ ದೇವತೆಗಳೂ । **ಸಮಪಶ್ಯಂತ**—ಪರಸ್ಪರ ದರ್ಶನವನ್ನು ಹೊಂದಿದರೋ (ಆ ರಹಸ್ಯತತ್ತ್ವವು) । **ಕಂ ಸ್ವಿತ್**—ಯಾವುದು ? ಅದರ ಸ್ವರೂಪವೇನು ?

॥ ಭಾವಾರ್ಥ ॥

ದ್ಯುಲೋಕಕ್ಕಿಂತಲೂ ಅಧಿಕವೂ, ಈ ಪೃಥ್ವಿಗಿಂತಲೂ ಅಧಿಕವೂ, ದೇವತೆಗಳಿಗಿಂತಲೂ ಅಧಿಕವೂ, ಅಸುರರಿಗಿಂತಲೂ ಅಧಿಕವೂ ಆದ ಗರ್ಭರೂಪವಾದ ಯಾವ ರಹಸ್ಯತತ್ತ್ವವಿದೆಯೋ, ಯಾವುದನ್ನು ಉದಕಗಳು ಎಲ್ಲಕ್ಕಿಂತಲೂ ಮೊದಲು ಧರಿಸಿದವೋ, ಯಾವ ಗರ್ಭತತ್ತ್ವದಲ್ಲಿ ಇಂದ್ರಾದಿ ಸಕಲ ದೇವತೆಗಳೂ ಪರಸ್ಪರ ದರ್ಶನವನ್ನು ಹೊಂದಿದರೋ ಆ ರಹಸ್ಯತತ್ತ್ವವು ಯಾವುದು ? ಅದರ ಸ್ವರೂಪವೇನು ?

## English Translation

What was that embryo which was beyond the heaven, beyond this earth, beyond the gods, beyond the Asuras, which the waters first retained, in which all the gods contemplated each other ?

|| ವಿಶೇಷವಿಷಯಗಳು ||

ಜಗತ್ತಿಗೆಲ್ಲ ಗರ್ಭರೂಪನಾದ ವಿಶ್ವಕರ್ಮನ ಅನಂತವಾದ ರೂಪವನ್ನೂ, ಶಕ್ತಿಯನ್ನೂ ಈ ಋಕ್ಕಿನಲ್ಲಿ ವರ್ಣಿಸಿದೆ. ಇಲ್ಲಿ ಮೂರು ಅಂಶಗಳು ನಿರ್ದಿಷ್ಟವಾಗಿವೆ. ಮೊದಲನೆಯದಾಗಿ,

(೧) ವಿಶ್ವಕರ್ಮರೂಪನಾದ ಈಶ್ವರನು ದ್ಯಾವಾಪೃಥಿವ್ಯಾದಿಗಳನ್ನೂ ಮೀರಿದ ಸ್ವರೂಪವುಳ್ಳವನು.

(೨) ಎರಡನೆಯದಾಗಿ, ಇವನು ಸಕಲ ಜಗತ್ತಿಗೂ ಗರ್ಭರೂಪನಾದುದರಿಂದ ಇವನಲ್ಲಿ ಎಲ್ಲವೂ ಅಡಗಿದೆ. ಆದುದರಿಂದ ಸಕಲ ದೇವತೆಗಳೂ ಇವನಲ್ಲೇ ಅಂತರ್ಗತರಾಗಿದ್ದಾರೆ.

(೩) ಮೂರನೆಯದಾಗಿ, ಜಗತ್ತಿಗೆ ಗರ್ಭರೂಪನಾದ ಇವನನ್ನು ಪ್ರಥಮತಃ ಉದಕಗಳು ಧರಿಸಿದವು. ಈ ಅಂಶಗಳು ಈಶ್ವರನ ಸ್ವರೂಪವನ್ನು ವಿವರಿಸುತ್ತವೆ.

ಈಶ್ವರನು ಎಲ್ಲಕ್ಕಿಂತ ಚಿಕ್ಕವನು (ಸೂಕ್ಷ್ಮನು) ಮತ್ತು ಎಲ್ಲಕ್ಕಿಂತ ದೊಡ್ಡವನು. ಹೇಗೆಂದರೆ—

**ಏಷ ಮ ಆತ್ಮಾಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕತಂಡುಲಾದ್ವಾ | ಏಷ ಮ ಆತ್ಮಾ ಅಂತರ್ಹೃದಯೇ ಜ್ಯಾಯಾನ್ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ||**

(ಛಾ. ಉ. ೩-೧೪-೩)

ಈ ಆತ್ಮನು ಅಂತರ್ಹೃದಯದಲ್ಲಿ ಅಡಕವಾಗಿದ್ದಾನೆ. ಇವನು ವ್ರೀಹಿಧಾನ್ಯಕ್ಕಿಂತಲೂ ಸಣ್ಣವನು. ಯವಧಾನ್ಯಕ್ಕಿಂತಲೂ ಸೂಕ್ಷ್ಮನು. ಸಾಸುವೆಕಾಳಿಗಿಂತಲೂ ಸೂಕ್ಷ್ಮನು ಅಥವಾ ಶ್ಯಾಮಾಕಾದ ತಿರುಳಿಗಿಂತಲೂ ಚಿಕ್ಕವನು. ಅದರಂತೆಯೇ, ವಿಶ್ವವ್ಯಾಪಕನಾದ ಇದೇ ಈಶ್ವರನು ಪೃಥ್ವಿಗಿಂತಲೂ ಅಧಿಕನು, ಅಂತರಿಕ್ಷಕ್ಕಿಂತಲೂ ಮೀರಿದವನು. ದ್ಯುಲೋಕವನ್ನು ಮೀರಿ ವಿಸ್ತೃತನಾದವನು. ಸಕಲ ಚರಾಚರ ಲೋಕಗಳಿಗಿಂತಲೂ ಅಧಿಕನು ಎಂದು ವರ್ಣಿಸಿದೆ. ಅಲ್ಲದೇ, ಮೇಲಿನ ಎಲ್ಲಾ ಅಂಶಗಳೂ ಕಠೋಪನಿಷತ್ತಿನಲ್ಲಿ ಈರೀತಿ ವಿವರಿಸಲ್ಪಟ್ಟಿವೆ.

**ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ |**
**ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತ ||**

(ಕಠ. ೨-೧-೬)

ತಪಸ್ಸಿನಿಂದ ಪ್ರಥಮತಃ ಉತ್ಪನ್ನನೂ, ಪ್ರಥಮತಃ ಸಲಿಲದಿಂದ ಉತ್ಪನ್ನನೂ, ಅತ್ಯಂತ ಗೂಢವಾದ ಪ್ರದೇಶವನ್ನು ಆಶ್ರಯಿಸಿರುವವನೂ, ಸಕಲ ಭೂತಗಳ ಮೂಲಕ ವೀಕ್ಷಿಸುವವನೂ ಆದ ಆತ್ಮನೇ ಇವನು. ಈ ಆತ್ಮನೇ ಅದಿತಿ ರೂಪನೂ ಆಗಿರುತ್ತಾನೆ. ಹೇಗೆಂದರೆ—

**ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।**
**ಗುಹಾಂ ಪ್ರವಿಶ್ಯ ತಿಷ್ಠಂತೀಂ ಯಾ ಭೂತೇಭಿರ್ವ್ಯಜಾಯತ ॥**
(ಕಠ. ೨-೧-೭)

ದೇವತೆಗಳಿಗೆಲ್ಲಾ ಆತ್ಮರೂಪಳೂ, ಪ್ರಾಣಯುಕ್ತಳಾಗಿ ಉದ್ಭವಿಸಿರುವವಳೂ, ಹೃದಯದ ಗುಹ್ಯಪ್ರದೇಶದಲ್ಲಿ ಸ್ಥಾಪಿತಳಾಗಿರುವವಳೂ, ಸಕಲ ಭೂತಗಳೊಂದಿಗೂ ಆವಿರ್ಭವಿಸಿರುವವಳೂ ಆದ **ಅದಿತಿಯೇ** ಈ ಆತ್ಮನು.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।**
**ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**
(ಕಠ- ೨-೧-೮)

ಸರ್ವಜ್ಞನೂ, ಗರ್ಭಿಣಿಯರ ಗರ್ಭದಲ್ಲಿ ಸ್ಥಾಪಿತವಾಗಿರುವ ಶಿಶುವಿನಂತೆ ಅರಣಿಗಳಲ್ಲಿ ಅಂತರ್ಹಿತನೂ ಆದ ಅಗ್ನಿಯು ಸಕಲ ಜಗತ್ತಿನಿಂದಲೂ ಪೂಜಿತನಾಗಿ ಈ ಆತ್ಮರೂಪನಾಗಿರುತ್ತಾನೆ. ಈ ಆತ್ಮನಲ್ಲಿಯೇ ಸಕಲ ದೇವತೆಗಳೂ ಅಂತರ್ಗತರಾಗಿದ್ದಾರೆ. **ದೇವಾಃ ಸಮಪಶ್ಯಂತ ವಿಶ್ವೇ** ಎಂದು ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ವಿಷಯವನ್ನು ಕಠದಲ್ಲಿ ಈ ರೀತಿ ತಿಳಿಸಿದೆ.

**ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।**
**ತಂ ದೇವಾಃ ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ ॥**
(ಕಠ. ೨-೧-೯)

ಯಾವ ಮಹಾತತ್ತ್ವದಿಂದ ಸೂರ್ಯನು ಉದಯಿಸುವನೋ, ಎಲ್ಲಿ ಅಸ್ತನಾಗುವನೋ ಅಂಥ ವಿಶ್ವಾತ್ಮನಲ್ಲಿ ಸಕಲ ದೇವತೆಗಳೂ ಪ್ರತಿಷ್ಠಿತರಾಗಿದ್ದಾರೆ. ಈ ವಿಶ್ವಾತ್ಮನನ್ನು ಮೀರಿ ದೇವತೆಗಳಾಗಲಿ, ಮಾನವರಾಗಲಿ, ಯಾರೂ ಹೋಗುವಂತಿಲ್ಲ. ಇದೇ ಈ ಪರಮಾತ್ಮನ ಮಾಹಾತ್ಮ್ಯ. ಇದನ್ನೇ ಋಕ್ಸಂಹಿತೆಯಲ್ಲಿಯೂ ಸಹ ವಿವರಿಸುತ್ತ,

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**
(ಋ. ಸಂ. ೧-೮೯-೧೦)

ಅಖಂಡಸ್ವರೂಪವುಳ್ಳ ಅದಿತಿಯು ವಿಶ್ವಕ್ಕೆಲ್ಲ ಉತ್ಪಾದಕಳು. ಜಗಜ್ಜನನೀ, ಜಗಜ್ಜನಕ ಎಲ್ಲವೂ ಅವಳೇ. ಉತ್ಪನ್ನವಾದ ಸಕಲ ವಸ್ತುವೂ ಅವಳೇ. ಅವಳೇ ಉತ್ಪತ್ತಿಗೆ ಮೂಲವು. ದೇವಾದಿ ಪಂಚಜನರೂ ಅವಳೇ. ಸಕಲ ದೇವತೆಗಳೂ ಅವಳಲ್ಲೇ ಅಂತರ್ಗತರಾಗಿದ್ದಾರೆ. ಅವಳೇ ಪ್ರಕಾಶಮಾನವಾದ ಸ್ವರ್ಗವು. ಅವಳೇ ಅಂತರಿಕ್ಷವು. ಅವಳೇ ಸಕಲ ವಿಶ್ವವು. ಅವಳೇ ವಿಶ್ವನಿಯಾಮಕಳು ಎಂದು ತಿಳಿಸಿದೆ. ಅದಿತಿಯೆಂದರೆ ಅನಂತವೆಂದರ್ಥ. ವಿಶ್ವವೆಲ್ಲವನ್ನೂ ವ್ಯಾಪಿಸಿ ವಿಶ್ವವನ್ನು ಮೀರಿರತಕ್ಕ ತತ್ತ್ವ. ಸಕಲ ದೇವತೆಗಳೂ ಈ ವಿಶ್ವರೂಪವಾದ ದೇಹದ ಒಂದೊಂದವಯವಗಳು.

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ದೇವಾಃ ।**
**ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥**
(ಕಠ. ೨-೧-೧೦)

ಅಗ್ನಿಯೇ ಈ ವಿಶ್ವಾತ್ಮನ ಶಿರಸ್ಸು. ಸೂರ್ಯ ಮತ್ತು ಚಂದ್ರರೇ ಇವನ ಚಕ್ಷುಸ್ಸುಗಳು. ದಿಕ್ಕುಗಳೇ ಶ್ರೋತ್ರಗಳು. ಅವನ ವಾಕ್ಕೇ ವೇದಗಳು. ವಾಯುವೇ ಪ್ರಾಣವು. ಸಕಲ ಜಗತ್ತೂ ಅವನ ಹೃದಯ. ಅವನ ಪಾದದಿಂದಲೇ ವಿಸ್ತೃತವಾದ ಈ ಪೃಥ್ವಿಯು ಉದ್ಭೂತವಾಗಿದೆ. ಸಕಲ ಭೂತಗಳ ಅಂತರಾತ್ಮನೂ ಇವನೇ, ಇತ್ಯಾದಿಯಾಗಿ ಈ ಆತ್ಮನ ಅನಂತತ್ವದ ವರ್ಣನವನ್ನು ಪುರುಷಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಸಲಿಲವೇ ಈ ವಿಶ್ವಗರ್ಭಕ್ಕೆ ಪ್ರಥಮಧಾರಕವಾದ ಆಶ್ರಯವು ಎಂಬ ವಿಷಯವೂ ಈ ಋಕ್ಕಿನಲ್ಲಿ ತಿಳಿಸಲ್ಪಟ್ಟಿದೆ. ಸಲಿಲವೇ ಈ ಬ್ರಹ್ಮರೂಪನೆಂದೂ ಅನೇಕಕಡೆ ಎರಡಕ್ಕೂ ತಾದಾತ್ಮ್ಯವನ್ನು ತಿಳಿಸಿದೆ. ವಿಶ್ವಜಗತ್ತೂ ಬ್ರಹ್ಮನಿಂದ ವ್ಯಾಪ್ತವಾಗಿರುವಂತೆ ಸಲಿಲದಿಂದಲೂ ವ್ಯಾಪ್ತವಾಗಿದೆ. ಹೇಗೆಂದರೆ—

**ಆಪ ಏವೇಮಾ ಮೂರ್ತಾ ಯೇಯಂ ಪೃಥಿವೀ ಯದಂತರಿಕ್ಷಂ ಯದ್ಯೌರ್ಯತ್ಪರ್ವತಾ ಯದ್ದೇವಮನುಷ್ಯಾ ಯತ್ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟಪತಂಗಪಿಪೀಲಿಕಮಾಪ ಏವೇಮಾ ಮೂರ್ತಾ ಅಪ ಉಪಾಸ್ಸ್ವೇತಿ ॥**

(ಛಾ. ಉ. ೭-೧೦-೧)

ವಿಶ್ವವ್ಯಾಪಿಯಾದ ಉದಕವೇ ವಿಶ್ವದ ಸಕಲ ಮೂರ್ತರೂಪಗಳನ್ನೂ ಹೊಂದುತ್ತದೆ. ಪೃಥ್ವೀ, ಅಂತರಿಕ್ಷ, ದ್ಯುಲೋಕ, ಪರ್ವತ, ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ತೃಣ, ವನಸ್ಪತಿ, ಶ್ವಾಪದ, ಕ್ರಿಮಿ, ಕೀಟ, ಪಿಪೀಲಕ ಇತ್ಯಾದಿಯಾಗಿ ಮಹತ್ಪರಿಣಾಮವುಳ್ಳ ವಸ್ತುಗಳಿಂದ ಹಿಡಿದು ಅತ್ಯಲ್ಪಪ್ರಮಾಣವುಳ್ಳ ವಸ್ತುಗಳೆಲ್ಲವೂ ಉದಕದ ಪರಿಣಾಮಗಳೇ ಆಗಿವೆ. ಉದಕವೇ ಈ ಸಕಲರೂಪಗಳನ್ನೂ ಹೊಂದಿದೆ. ಆದ್ದರಿಂದ ಉದಕವನ್ನು ಧ್ಯಾನಿಸು.

**ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಕಾಮಾಂಸ್ತೃಪ್ತಿಮಾನ್ಭವತಿ ।**

(ಛಾ.ಉ. ೭-೧೦-೨)

ಈ ಉದಕವೇ ಬ್ರಹ್ಮನೆಂದು ಯಾರು ಅನುಸಂಧಾನಪೂರ್ವಕವಾಗಿ ಉಪಾಸಿಸುವರೋ ಅವರು ಸಕಲಇಷ್ಟಾರ್ಥಗಳನ್ನು ಪಡೆದು ತೃಪ್ತಿಯನ್ನು ಹೊಂದುತ್ತಾರೆ. ಈ ಉದಕದಿಂದ ಸಕಲವಾದ ಜಗತ್ತೂ ಉತ್ಪನ್ನವಾದ ಕ್ರಮವೇನು, ಅದರ ವಿವರವೇನು ಎಂಬುನ್ನು ಬೃಹದಾರಣ್ಯಕದಲ್ಲಿ ಈ ರೀತಿ ತಿಳಿಸಿದೆ.

**ಆಪ ಏವೇದಮಗ್ರ ಆಸುಸ್ತಾ ಆಪಃ ಸತ್ಯಮಸೃಜಂತ ಸತ್ಯಂ ಬ್ರಹ್ಮ ಬ್ರಹ್ಮ ಪ್ರಜಾಪತಿಂ ಪ್ರಜಾಪತಿರ್ದೇವಾಂಸ್ತೇ ದೇವಾಃ ಸತ್ಯಮೇವೋಪಾಸತೇ ತದೇತತ್ತ್ರ್ಯಕ್ಷರಂ ಸತ್ಯಂ ॥**

(ಬೃ. ಉ. ೫-೫-೧)

ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಪ್ರಥಮತಃ ಉದಕವೇ ಸರ್ವತ್ರ ವ್ಯಾಪಿಸಿದ್ದಿತು. ಉದಕದಿಂದ ಸತ್ಯವು ಆವಿರ್ಭವಿಸಿತು. ಸತ್ಯದಿಂದ ಬ್ರಹ್ಮನೂ, ಬ್ರಹ್ಮನಿಂದ ಪ್ರಜಾಪತಿಯೂ, ಪ್ರಜಾಪತಿಯಿಂದ ಸಕಲ ದೇವತೆಗಳೂ ಉತ್ಪನ್ನರಾದರು. ದೇವತೆಗಳು ಈ ಸತ್ಯವನ್ನೇ ಉಪಾಸಿಸುತ್ತಾರೆ. **ಸ, ತಿ, ಯಂ** ಎಂಬ ಮೂರು ಅಕ್ಷರಗಳನ್ನು ಹೊಂದಿರುವ ಈ ಸತ್ಯವೇ ವಿಶ್ವಾತ್ಮನು. ಈ ಮೂರು ಅಕ್ಷರಗಳೂ ಹೇಗೆ ವಿಶ್ವವನ್ನು ಪ್ರತಿಬಿಂಬಿಸುವುವು ಎಂಬ ವಿಷಯವನ್ನು ಮುಂದೆ ತಿಳಿಸಲಾಗುತ್ತದೆ. ಜಗತ್ತಿಗೆ ಆಧಾರವಾದ ಸತ್ಯಕ್ಕೂ ಉದಕವೇ ಆಧಾರವಾಗಿರುತ್ತದೆಂದು ತಾತ್ಪರ್ಯ.

ಅಪ ಏವೈನದಭ್ಯವಹರಾಮಾಪೋ ವಾ ಅಸ್ಯ ಸರ್ವಸ್ಯ ಪ್ರತಿಷ್ಠಾ ತದ್ಯತ್ರಾಸ್ಯ ಸರ್ವಸ್ಯ ಪ್ರತಿಷ್ಠಾ ತದೇನತ್ಪ್ರತಿಷ್ಠಾಪ್ಯ ಯದತ್ರಾಗ್ನೇಯಂ ತದದ್ಭ್ಯೋಽಧಿ ಜನಯಿಷ್ಯಾಮ ॥

(ಶ. ಬ್ರಾ. ೬-೮-೨-೨)

ಉದಕವೇ ಸಕಲವಾದ ವಿಶ್ವಕ್ಕೂ ಮೂಲವು ಮತ್ತು ಆಧಾರವು. ಅದರಲ್ಲಿ ಈ ಭಸ್ಮವನ್ನು ಸ್ಥಾಪಿಸುವುದರಿಂದ ಅಗ್ನಿಯು ನಿಜರೂಪವನ್ನು ಉದಕದಲ್ಲಿ ಸ್ಥಾಪಿಸಿದಂತಾಗುತ್ತದೆ.

ತದ್ಯತ್ತತ್ಸತ್ಯಂ । ಆಪ ಏವ ತದಾಪೋ ಹಿ ವೈ ಸತ್ಯಂ ತಸ್ಮಾದ್ಯೇನಾಪೋ ಯಂತಿ ತತ್ಸತ್ಯಸ್ಯ ರೂಪಮಿತ್ಯಾಹುರಾಪ ಏವ ತಸ್ಯ ಸರ್ವಸ್ಯಾಗ್ರಮಕುರ್ವಂಸ್ತಸ್ಮಾದ್ಯದೈವಾಪೋ ಯನ್ತ್ಯಥೇದಗ್ಂ ಸರ್ವಂ ಜಾಯತೇ ಯದಿದಂ ಕಿಂಚ ॥

(ಶ. ಬ್ರಾ. ೭-೪-೧-೬)

ಜಗತ್ತಿಗೆಲ್ಲ ಮುಖ್ಯಕಾರಣವಾದ ಉದಕವೇ ಸಕಲ ಸತ್ಯಸ್ವರೂಪವು ಎಂದು ಮೇಲೆ ಉದಾಹೃತವಾದ ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾವ ವಿವರಣೆಯಿದೆಯೋ ಅದನ್ನೇ ಇಲ್ಲಿ ಇನ್ನೂ ವಿಶದಪಡಿಸಿ ಹೇಳಿದೆ. ಎಲ್ಲೆಲ್ಲಿ ಉದಕವು ಪ್ರವಹಿಸುವುದೋ ಅಲ್ಲೆಲ್ಲ ಸತ್ಯದ ಅಂಶವೂ, ರೂಪವೂ ಪ್ರವಹಿಸುವುದೆಂದು ತಾತ್ಪರ್ಯ. ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಉದಕವಿದ್ದಿತು. ಅದರಿಂದ ವೃಷ್ಟಿಯು ಪ್ರಸರಿಸಿ ತತ್ಫಲವಾಗಿ ಸಕಲ ವಸ್ತುಗಳೂ ಉತ್ಪನ್ನವಾದವು. ಅದು ಹೇಗೆ? ಯಾವ ಕ್ರಮ? ವಿಶ್ವಕರ್ಮರೂಪವಾದ ಗರ್ಭವನ್ನು ಹೇಗೆ ಧರಿಸಿತು? ಇಲ್ಲಿಯೇ ಸಕಲ ದೇವತೆಗಳೂ ಅಂತರ್ಗತರಾಗಿದ್ದಾರೆ ಎಂದರೇನು ಎಂಬುದರ ವಿವರಣವು ಈರೀತಿಯಿರುತ್ತದೆ—

ಆಪೋ ಹ ವಾ ಇದಮಗ್ರೇ ಸಲಿಲಮೇವಾಸ । ತಾ ಅಕಾಮಯಂತ ಕಥಂ ನು ಪ್ರಜಾಯೇಮಹೀತಿ ತಾ ಅಶ್ರಾಮ್ಯಂಸ್ತಾಸ್ತಪೋಽತಪ್ಯಂತ ತಾಸು ತಪಸ್ತಪ್ಯಮಾನಾಸು ಹಿರಣ್ಮಯಮಾಂಡಗ್ಂ ಸಂಬಭೂವಾಜಾತೋ ಹ ತರ್ಹಿ ಸಂವತ್ಸರ ಆಸ ತದಿದಗ್ಂ ಹಿರಣ್ಮಯಮಾಂಡಂ ಯಾವತ್ಸಂವತ್ಸರಸ್ಯ ವೇಲಾ ತಾವತ್ಪರ್ಯಪ್ಲವತ ।

(ಶ. ಬ್ರಾ. ೧೧-೧-೬-೧)

ಸೃಷ್ಟಿಗೆ ಪೂರ್ವದಲ್ಲಿ ಸಲಿಲವಲ್ಲದೆ ಉಳಿದಿನ್ನಾವುದೂ ಇರಲಿಲ್ಲ. ಆಗ ಆ ಸಲಿಲಗಳು ತಮ್ಮ ವೃದ್ಧಿಯಾಗುವಿಕೆಯನ್ನಪೇಕ್ಷಿಸಿ ನಾವು ಯಾವ ರೀತಿ ಸಂತತಿಯನ್ನು ಹೊಂದಿ ವೃದ್ಧಿಯನ್ನು ಪಡೆಯೋಣ ಎಂದು ಯೋಚಿಸಿದವು. ಆಗ ಪ್ರಯತ್ನಪಟ್ಟು ತಪಸ್ಸನ್ನಾಚರಿಸಿದವು. ಆ ತಪಸ್ಸಿನ ಫಲವಾಗಿ ಒಂದು ಸುವರ್ಣರೂಪವಾದ ಅಂಡವು (ಮೊಟ್ಟೆಯು) ಉದ್ಭೂತವಾಯಿತು. ಆಗ ಸಂವತ್ಸರವೆಂಬ ಕಾಲವಿಭಾಗವಿರಲಿಲ್ಲ. ಈ ಸುವರ್ಣಮಯವಾದ ಅಂಡವು ಸಲಿಲದಲ್ಲಿ ಒಂದು ಸಂವತ್ಸರಕಾಲ ತೇಲುತ್ತಿತ್ತು.

ತತಃ ಸಂವತ್ಸರೇ ಪುರುಷಸ್ಸಮಭವತ್ । ಸ ಪ್ರಜಾಪತಿಸ್ತಸ್ಮಾದು ಸಂವತ್ಸರ ಏವ ಸ್ತ್ರೀ ವಾ ಗೌರ್ವಾ ವಡಬಾ ವಾ ವಿಜಾಯತೇ ಸಂವತ್ಸರೇ ಹಿ ಪ್ರಜಾಪತಿರಜಾಯತ ಸ ಇದಗ್ಂ ಹಿರಣ್ಮಯಮಾಂಡಂ ವ್ಯರುಜನ್ನಾಹ ತರ್ಹಿ ಕಾಚನ ಪ್ರತಿಷ್ಠಾಸ ತದೇನಮಿದಮೇವ ಹಿರಣ್ಮಯಮಾಂಡಂ ಯಾವತ್ಸಂವತ್ಸರಸ್ಯ ವೇಲಾಸೀತ್ತಾವದ್ಬಿಭ್ರತ್ಪರ್ಯಪ್ಲವತ ।

(ಶ. ಬ್ರಾ. ೧೧-೧-೬-೨)

ಒಂದು ಸಂವತ್ಸರದ ಕಾಲಾನಂತರ ಪ್ರಜಾಪತಿರೂಪನಾದ ಪುರುಷನು ಉತ್ಪನ್ನನಾದನು. [ಈ ನಿಯಮವನ್ನನು ಸರಿಸಿಯೇ, ಸ್ತ್ರೀ, ಪಶು ಮತ್ತು ಅಶ್ವ ಇವೂ ಸಂವತ್ಸರಾವಧಿಯಲ್ಲಿ ಪ್ರಸರಿಸುತ್ತವೆ]. ಸಂವತ್ಸರಾನಂತರ ಉತ್ಪನ್ನನಾದ ಪ್ರಜಾಪತಿಯು ಈ ಸುವರ್ಣಾಂಡವನ್ನು ಸೀಳಿದನು. ಆಗ ಪೃಥ್ವೀರೂಪವಾಗಿಯಾಗಲಿ ಅಥವಾ ಇನ್ನಾವ ವಿಧವಾಗಿಯಾಗಲಿ, ಯಾವ ಆಧಾರವೂ ಇಲ್ಲದುದರಿಂದ ಈ ಸುವರ್ಣಾಂಡವು ತಾನೇ ಈ ಪ್ರಜಾಪತಿಯನ್ನು ಸಂವತ್ಸರಕಾಲ ವಹಿಸಿದ್ದಿತು.

**ಚತುರಕ್ಷರಃ ಸಂವತ್ಸರಶ್ಚತುರಕ್ಷರಃ ಪ್ರಜಾಪತಿಸ್ತೇನೋ ಹ್ಯೈವಾಸ್ಯೈಷ ಪ್ರತಿಮಾ ॥**
(ಶ. ಬ್ರಾ. ೧೧-೧-೬-೧೩)

ಪ್ರಜಾಪತಿ, ಸಂವತ್ಸರ ಇವು ನಾಲ್ಕು ಅಕ್ಷರಗಳ ಪ್ರಮಾಣಗಳುಳ್ಳವು. ಆದುದರಿಂದಲೇ ಸಂವತ್ಸರವು ಪ್ರಜಾಪತಿಯ ಪ್ರತಿಬಿಂಬದಂತಿದೆ. ಅಲ್ಲದೇ—

**ತಾ ವಾ ಏತಾಃ । ಪ್ರಜಾಪತೇರಧಿದೇವತಾ ಅಸೃಜ್ಯಂತಾಗ್ನಿರಿಂದ್ರಃ ಸೋಮಃ ಪರಮೇಷ್ಠೀ ಪ್ರಾಜಾಪತ್ಯಃ ॥ ತಾಃ ಸಹಸ್ರಾಯುಷೋ ಜಜ್ಞಿರೇ ॥** (ಶ. ಬ್ರಾ. ೧೧-೧-೬-೧೪)

ಇಂದ್ರ, ಅಗ್ನಿ, ಸೋಮ ಮತ್ತು ಪರಮೇಷ್ಠಿ ಪ್ರಾಜಾಪತ್ಯ ಈ ನಾಲ್ಕು ದೇವತೆಗಳೂ ಪ್ರಜಾಪತಿಯಿಂದ ಉತ್ಪನ್ನರಾಗಿ ಪ್ರಜಾಪತಿಯೆಂಬ ನಾಲ್ಕು ಅಕ್ಷರಗಳನ್ನು ಪ್ರತಿಬಿಂಬಿಸುತ್ತಾರೆ, ಇತ್ಯಾದಿಯಾಗಿ ವಿವೃತವಾಗಿದೆ. ಅಲ್ಲದೇ, **ಯತ್ರ ದೇವಾಃ ಸಮಗಚ್ಛಂತ ವಿಶ್ವೇ**—ಎಂಬ ವಾಕ್ಯದ ವಿವರವನ್ನೂ ಬೃಹದಾರಣ್ಯಕದಲ್ಲಿ ಈ ರೀತಿ ತಿಳಿಸಿದೆ. (ಸಕಲ ದೇವತೆಗಳೂ ಬ್ರಹ್ಮನಲ್ಲೇ ಐಕ್ಯವಾಗಿ ಬ್ರಹ್ಮರೂಪವೇ ಆಗಿದ್ದಾರೆ).

**ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ ಕತಿ ದೇವಾ ಯಾಜ್ಞವಲ್ಕ್ಯೇತಿ ಸ ಹೈತಯೈವ ನಿವಿದಾ ಪ್ರತಿಪೇದೇ ಯಾವಂತೋ ವೈಶ್ವದೇವಸ್ಯ ನಿವಿದ್ಯುಚ್ಯಂತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತ್ಯೋಮಿತಿ ಹೋವಾಚ॥ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯಸ್ತ್ರಿಂಶದಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ಷಡಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ದ್ವಾವಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯಧ್ಯರ್ಧಮಿತ್ಯೋಂ ಇತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯೇಕ ಇತ್ಯೋಮಿತಿ ಹೋವಾಚ ಕತಮೇ ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತಿ ॥**
(ಬೃ. ಉ. ೩-೯-೧)

ವಿದಗ್ಧಶಾಕಲ್ಯನು ಯಾಜ್ಞವಲ್ಕ್ಯನನ್ನು ಕುರಿತು ಪ್ರಶ್ನಿಸುತ್ತಾನೆ—ಎಲೈ ಯಾಜ್ಞವಲ್ಕ್ಯನೇ, ದೇವತೆಗಳ ಸಂಖ್ಯೆಯೆಷ್ಟು ? ಉತ್ತರ—ವಿಶ್ವದೇವತೆಗಳನ್ನುದ್ದೇಶಿಸಿ ಪಠಿಸಿದ ನಿವಿನ್ಮಂತ್ರಗಳಲ್ಲಿ ನಿರ್ದಿಷ್ಟವಾದ ಸಂಖ್ಯೆಯೆಷ್ಟೋ ಅಷ್ಟು ಎಂದರೆ—ಮುನ್ನೂರಮೂರು ; ಮೂರುಸಾವಿರದ ಮೂರು.

ಅದು ಸರಿ. ದೇವತೆಗಳ ಸಂಖ್ಯೆಯೆಷ್ಟು ಎಂದು ಕೇಳುತ್ತಲೇ ಇರುತ್ತಾನೆ. ಅದಕ್ಕೆ ಉತ್ತರವಾಗಿ ಯಾಜ್ಞ್ಯವಲ್ಕ್ಯನು ಈ ರೀತಿ ಯಥಾಕ್ರಮವಾದ ಸಂಖ್ಯೆಯನ್ನು ತೋರಿಸುತ್ತಾನೆ.

ಎರಡನೆಯ ಪ್ರಶ್ನೆಗೆ ಉತ್ತರವಾಗಿ ಮೂವತ್ತುಮೂರು ಸಂಖ್ಯೆಯೆಂದೂ, ಮೂರನೆಯ ಪ್ರಶ್ನೆಗೆ ಆರೆಂದೂ, ನಾಲ್ಕನೆಯ ಸಲ ಮೂರೆಂದೂ, ಐದನೆಯ ಪ್ರಶ್ನೆಗೆ ಎರಡೆಂದೂ, ನಂತರ ಒಂದೂವರೆಯೆಂದೂ ಕೊನೆಗೆ ಒಂದೇ ಎಂದೂ ತಿಳಿಸಿದನು.

ಮುನ್ನೂರಮೂರು ಮತ್ತು ಮೂರುಸಾವಿರದ ಮೂರು ಎಂದೆಯಲ್ಲ, ಅದು ಯಾರು ಯಾರು ? ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರರೂಪವಾಗಿ,

**ಸ ಹೋವಾಚ ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಂಶತ್ತ್ವೇವ ದೇವಾ ಇತಿ ಕತಮೇ ತೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ॥**

(ಬೃ. ಉ. ೩-೯-೨)

ಯಾವ ಮುನ್ನೂರಮೂರು ಮತ್ತು ಮೂರುಸಾವಿರದ ಮೂರು ಎಂದು ಹೇಳಿದೆನೋ, ಅವರೆಲ್ಲರೂ ಮೂವತ್ತುಮೂರು ಮುಖ್ಯದೇವತೆಗಳ ವಿಭೂತಿವಿಶೇಷಗಳೇ ಆಗಿದ್ದಾರೆ ಎಂದು ಯಾಜ್ಞ್ಯವಲ್ಕ್ಯನು ಹೇಳಿದಾಗ ಆ ಮೂವತ್ತುಮೂರು ದೇವತೆಗಳಾರು ? ಎಂದು ಪ್ರಶ್ನಿಸಿದನು. ಆಗ ಯಾಜ್ಞ್ಯವಲ್ಕ್ಯರು ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ಇಷ್ಟೂ ಸೇರಿ ಮೂವತ್ತೊಂದು. ಇಂದ್ರ ಮತ್ತು ಪ್ರಜಾಪತಿಗಳು ಸೇರಿದರೆ ಮೂವತ್ತುಮೂರು ಎಂದನು

**ಕತಮೇ ತೇ ವಸವ ಇತ್ಯಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚ ಚಂದ್ರಮಾಶ್ಚ ನಕ್ಷತ್ರಾಣಿ ಚೈತೇ ವಸವ ಏತೇಷು ಹೀದಂ ಸರ್ವಂ ಹಿತಮಿತಿ ತಸ್ಮಾದ್ವಸವ ಇತಿ ॥**

(ಬೃ. ಉ. ೩-೯-೩)

ವಸುಗಳು ಯಾರು ? ಅಗ್ನಿ, ಪೃಥ್ವೀ, ವಾಯು, ಅಂತರಿಕ್ಷ, ಆದಿತ್ಯ, ದ್ಯುಲೋಕ, ಚಂದ್ರ, ನಕ್ಷತ್ರಗಳು, ಇವೆಲ್ಲ ವಸುಗಳು. ಸಕಲ ಭೂತಗಳೂ ಇವುಗಳಲ್ಲಿ ವಾಸಮಾಡುವುದಕ್ಕಾಗಿ ಸ್ಥಾಪಿತವಾಗಿರುವುದರಿಂದ ಇವಕ್ಕೆಲ್ಲ ವಸುಗಳೆಂದು ಹೆಸರು.

**ಕತಮೇ ರುದ್ರಾ ಇತಿ ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಸ್ತೇ ಯದಾಸ್ಮಾಚ್ಛರೀರಾನ್ಮರ್ತ್ಯಾದುತ್ಕ್ರಾಮಂತ್ಯಥ ರೋದಯಂತಿ ತದ್ಯದ್ರೋದಯಂತಿ ತಸ್ಮಾದ್ರುದ್ರಾ ಇತಿ ॥**

(ಬೃ. ಉ. ೩-೯-೪)

ರುದ್ರರು ಯಾರು ? ಪುರುಷನ ಹತ್ತು ಪ್ರಾಣಗಳು ಮತ್ತು ಮನಸ್ಸು (ಆತ್ಮ) ಇವು ಸೇರಿ ಹನ್ನೊಂದು ರುದ್ರರು. ಅವು ದೇಹವನ್ನು ಬಿಟ್ಟು ಹೋಗುವಾಗ (ಬಂಧುಗಳನ್ನು) ರೋದಿಸುವಂತೆ ಮಾಡುತ್ತವೆ. ಆದುದರಿಂದಲೇ ಅವು ರುದ್ರಸಂಜ್ಞಕಗಳಾಗಿವೆ.

**ಕತಮ ಆದಿತ್ಯಾ ಇತಿ ದ್ವಾದಶ ವೈ ಮಾಸಾಃ ಸಂವತ್ಸರಸ್ಯೈತ ಆದಿತ್ಯಾ ಏತೇ ಹೀದಂ ಸರ್ವಮಾದದಾನಾ ಯಂತಿ ತೇ ಯದಿದಂ ಸರ್ವಮಾದದಾನಾ ಯಂತಿ ತಸ್ಮಾದಾದಿತ್ಯಾ ಇತಿ ॥**

(೩-೯-೫)

ಆದಿತ್ಯರು ಯಾರು ? ಸಂವತ್ಸರದ ಹನ್ನೆರಡು ಮಾಸಗಳೇ ಹನ್ನೆರಡು ಆದಿತ್ಯರೆಂದು ಪ್ರಸಿದ್ಧವಾಗಿವೆ. ಸಕಲವನ್ನೂ ತಮ್ಮಲ್ಲೇ ಪ್ರತಿಗ್ರಹಿಸಿ ಸಂಚರಿಸುವುದರಿಂದ ಅವು ಆದಿತ್ಯಸಂಜ್ಞಕವಾಗಿವೆ ಎಂದನು.

**ಕತಮ ಇಂದ್ರಃ ಕತಮಃ ಪ್ರಜಾಪತಿರಿತಿ ಸ್ತನಯಿತ್ನುರೇವೇಂದ್ರೋ ಯಜ್ಞಃ ಪ್ರಜಾಪತಿರಿತಿ ಕತಮಃ ಸ್ತನಯಿತ್ನುರಿತ್ಯಶನಿರಿತಿ ಕತಮೋ ಯಜ್ಞ ಇತಿ ಪಶವ ಇತಿ ||**

(ಬೃ. ಉ. ೩-೯-೬)

ಇಂದ್ರನು ಯಾರು ? ಪ್ರಜಾಪತಿಯು ಯಾರು ? ಗರ್ಜಿಸುವ ಮೇಘವೇ ಇಂದ್ರನು. ಯಜ್ಞವೇ ಪ್ರಜಾಪತಿಯು. ಮೇಘದ ಗರ್ಜನವು ಯಾವುದು ? ವಜ್ರಾಯುಧ. ಯಜ್ಞವಾವುದು ? ಪಶುಗಳು.

**ಕತಮೇ ಷಡಿತ್ಯಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚೈತೇ ಷಡೇತೇ ಹೀದಂ ಸರ್ವಂ ಷಡಿತಿ ||**

(ಬೃ. ಉ. ೩-೯-೭)

ಆರು ಎಂಬ ಸಂಖ್ಯೆಯು ಯಾರನ್ನು ನಿರ್ದೇಶಿಸುತ್ತದೆ ? ಅಗ್ನಿ, ಪೃಥ್ವೀ, ವಾಯು, ಅಂತರಿಕ್ಷ, ಆದಿತ್ಯ ಮತ್ತು ದ್ಯುಲೋಕ ಇವೇ ಆರು.

**ಕತಮೇ ತೇ ತ್ರಯೋ ದೇವಾ ಇತೀಮ ಏವ ತ್ರಯೋ ಲೋಕಾ ಏಷು ಹೀಮೇ ಸರ್ವೇ ದೇವಾ ಇತಿ ಕತಮೌ ತೌ ದ್ವೌ ದೇವಾವಿತ್ಯನ್ನಂ ಚೈವ ಪ್ರಾಣಶ್ಚೇತಿ ಕತಮೋಽಧ್ಯರ್ಧ ಇತಿ ಯೋಽಯಂ ಪವತ ಇತಿ ||**

(ಬೃ. ಉ. ೩.೯-೮)

ಮೂರು ದೇವತೆಗಳು ಯಾರು ? ಸಕಲ ದೇವತೆಗಳೂ ವಾಸಮಾಡುವ ಮೂರು ಲೋಕಗಳೇ ಮೂರು ದೇವತೆಗಳು. ಇಬ್ಬರು ಯಾರು ? ಅನ್ನ ಮತ್ತು ಪ್ರಾಣ. ಒಂದೂವರೆ ಯಾರು ? ಇಲ್ಲಿ ಬೀಸತಕ್ಕ ವಾಯುವು.

**ತದಾಹುರ್ಯದಯಮೇಕ ಇವೈವ ಪವತೇಽಥ ಕಥಮಧ್ಯರ್ಧ ಇತಿ ಯಸ್ಮಿನ್ನಿದಂ ಸರ್ವಮಧ್ಯಾರ್ಧ್ನೋತ್ತೇನಾಧ್ಯರ್ಧ ಇತಿ ಕತಮ ಏಕೋ ದೇವ ಇತಿ ಪ್ರಾಣ ಇತಿ ಸ ಬ್ರಹ್ಮ ತ್ಯದಿತ್ಯಾಚಕ್ಷತೇ||**

(ಬೃ. ಉ. ೩-೯-೯)

ಇಲ್ಲಿ ಬೀಸತಕ್ಕ ವಾಯುವೇ ಒಂದು ಸಂಖ್ಯೆಯಿಂದ ನಿರ್ದಿಷ್ಟವಾದ ದೇವತೆ. ಅದು ಬೀಸುವಾಗಲೇ ಸಕಲವೂ ಬೆಳೆದು ದರಿಂದ ಅದಕ್ಕೆ ಒಂದೂವರೆ ಎಂಬ ಸಂಖ್ಯೆಯು ನಿರ್ದೇಶಕವಾಯಿತು. ಒಂದು ಎಂಬ ಸಂಖ್ಯೆಯಿಂದ ನಿರ್ದಿಷ್ಟವಾದ ದೇವತೆ ಯಾರು ? ಪ್ರಾಣ. ಅದೇ ಬ್ರಹ್ಮ, ಅದೇ ಸತ್ಯಾತ್ಮಕವು. ಹೀಗೆ ಸಕಲ ದೇವತೆಗಳನ್ನೂ ಬ್ರಹ್ಮನಲ್ಲೇ ಅಂತರ್ಗತಮಾಡಿಕೊಂಡಿರುವುದರಿಂದ ವಿಶ್ವಕರ್ಮರೂಪನಾದ ಬ್ರಹ್ಮನಲ್ಲಿ ಸಕಲರೂ ಒಟ್ಟಿಗೆ ಸೇರಿರುವರೆಂದು ತಿಳಿಸಿದೆ.



॥ ಸಂಹಿತಾಪಾಠಃ ॥

ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಗಚ್ಛಂತ ವಿಶ್ವೇ।
ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ ॥ ೬ ॥

॥ ಪದಪಾಠಃ ॥

ತಂ । ಇತ್ । ಗರ್ಭಂ । ಪ್ರಥಮಂ । ದಧ್ರೇ । ಆಪಃ । ಯತ್ರ । ದೇವಾಃ । ಸಂಽಅಗಚ್ಛಂತ । ವಿಶ್ವೇ ।
ಅಜಸ್ಯ । ನಾಭೌ । ಅಧಿ । ಏಕಂ । ಅರ್ಪಿತಂ । ಯಸ್ಮಿನ್ । ವಿಶ್ವಾನಿ । ಭುವನಾನಿ । ತಸ್ಥುಃ ॥ ೬ ॥

॥ ಸಾಯಣಭಾಷ್ಯಂ ॥

ಅನಯಾ ಪೂರ್ವಮಂತ್ರೋಕ್ತಸ್ಯ ಪ್ರಶ್ನಸ್ಯೋತ್ತರಮಭಿಧೀಯತೇ । ತಮಿತ್ತಮೇವ ವಿಶ್ವಕರ್ಮಾಣಂ ಗರ್ಭಂ ಗರ್ಭಸ್ಥಾನೀಯಂ ಪ್ರಥಮಮಿತರಸೃಷ್ಟೇಃ ಪೂರ್ವಮಾಪೋ ದಧ್ರೇ । ಧೃತವತ್ಯಃ । ಯತ್ರ ಗರ್ಭೇ ವಿಶ್ವೇ ಸರ್ವೇ ದೇವಾ ಇಂದ್ರಾದಯಃ ಸಮಗಚ್ಛಂತ ಸಂಗತಾ ಭವಂತಿ । ತಸ್ಯಾಜಸ್ಯ ನಾಭಾವಧಿ ನಾಭೌ । ಅಧೀತಿ ಸಪ್ತಮ್ಯರ್ಥಾನುವಾದೀ । ಏಕಮರ್ಪಿತಮಿತ್ಯಂಡಾಭಿಪ್ರಾಯೇಣೋಕ್ತಂ । ಅಂಡಂ ಹಿ ಪ್ರಾಕ್ಸರ್ಗಾನ್ನಾಭಿಸ್ಥಾನೇ ತಿಷ್ಠತಿ । ಯಸ್ಮಿನ್ನಂಡೇ ವಿಶ್ವಾನಿ ಭುವನಾನಿ ಸರ್ವಾಣಿ ಭೂತಜಾತಾನಿ ತಸ್ಥುಃ ತಿಷ್ಠಂತಿ । ಅಥವಾಜಸ್ಯ ಜನ್ಮರಹಿತಸ್ಯ ಬ್ರಹ್ಮಣಃ ಸ್ವಸೃಷ್ಟೇ ಜಲೇ ಶಯಾನಸ್ಯ ನಾಭೌ ಸರ್ವಜಗದ್ಬಂಧಕ ಉದಕ ಏಕಂ ಬ್ರಹ್ಮಾಂಡಮರ್ಪಿತಂ ಸ್ಥಾಪಿತಂ । ಶಿಷ್ಟಂ ಸಮಾನಂ । ಅಥಾಸ್ಮಿನ್ನರ್ಥೇ ಸ್ಮೃತಿಃ । ಅಪ ಏವ ಸಸರ್ಜಾದೌ ತಾಸು ವೀರ್ಯಮವಾಕಿರತ್ । ತದಂಡಮಭವದ್ಧೈಮಂ ಸೂರ್ಯಕೋಟಿಸಮಪ್ರಭಮಿತಿ ॥

॥ ಪ್ರತಿಪದಾರ್ಥ ॥

ಯತ್ರ—ಯಾವ ಗರ್ಭದಲ್ಲಿ । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಸಮಗಚ್ಛಂತ**—ಒಟ್ಟಿಗೆ ಸೇರಿಕೊಂಡಿರುವರೋ । **ತಮಿತ್**—ಅಂತಹ । **ಗರ್ಭಂ**—ವಿಶ್ವಕರ್ಮರೂಪವಾದ ಗರ್ಭವನ್ನು । **ಆಪಃ**—ಉದಕಗಳು । **ಪ್ರಥಮಂ**—ಸೃಷ್ಟಿಗೆ ಪೂರ್ವದಲ್ಲಿ । **ದಧ್ರೇ**—ಧರಿಸಿದವು । **ಯಸ್ಮಿನ್**—ಯಾವ ಈ ಸುವರ್ಣಾಂಡದಲ್ಲಿ । **ವಿಶ್ವಾನಿ ಭುವನಾನಿ**—ಸಕಲ ಭೂತಗಳೂ । **ತಸ್ಥುಃ**—ಸ್ಥಾಪಿತವಾಗಿವೆಯೋ ಅಂತಹ । **ಏಕಂ**—ಅದ್ವಿತೀಯವಾದ ಈ ಬ್ರಹ್ಮಾಂಡವು । **ಅಜಸ್ಯ ನಾಭೌ**—ಜನ್ಮರಹಿತವಾದ ಮೂಲತತ್ತ್ವದ ನಾಭಿಯಲ್ಲಿ । **ಅರ್ಪಿತಂ**—ಅರ್ಪಿತವಾಗಿದೆ. (ಸ್ಥಾಪಿತವಾಗಿದೆ).

॥ ಭಾವಾರ್ಥ ॥

ಯಾವ ಗರ್ಭದಲ್ಲಿ ಸಕಲ ದೇವತೆಗಳೂ ಒಟ್ಟಿಗೆ ಸೇರಿಕೊಂಡಿರುವರೋ ಅಂತಹ ವಿಶ್ವಕರ್ಮರೂಪವಾದ ಗರ್ಭವನ್ನು ಉದಕಗಳು ಸೃಷ್ಟಿಗೆ ಪೂರ್ವದಲ್ಲಿ ಧರಿಸಿದವು. ಯಾವ ಈ ಸುವರ್ಣಾಂಡದಲ್ಲಿ ಸಕಲ ಭೂತಗಳೂ

ಸ್ಥಾಪಿತವಾಗಿವೆಯೋ ಅಂತಹ ಅದ್ವಿತೀಯವಾದ ಈ ಬ್ರಹ್ಮಾಂಡವು ಜನ್ಮರಹಿತವಾದ ಮೂಲತತ್ತ್ವದ ನಾಭಿಯಲ್ಲಿ ಸ್ಥಾಪಿತವಾಗಿದೆ. (ಅಥವಾ; ಸಕಲ ಜಗದ್ಬಂಧಕವಾದ ಉದಕದಲ್ಲಿ ಅದ್ವಿತೀಯವಾದ ಈ ಬ್ರಹ್ಮಾಂಡವು ಸ್ಥಾಪಿತವಾಗಿದೆ.

## English Translation

The waters verily first retained the embryo in which all the gods were aggregated, single, deposited on the navel of the unborn (creator), in which all beings abode.

|| ವಿಶೇಷವಿಷಯಗಳು ||

ಸೃಷ್ಟಿಗೆ ಪೂರ್ವಭಾವಿಯಾಗಿದ್ದ ಸಲಿಲದಲ್ಲಿ ಬ್ರಹ್ಮಾಂಡವನ್ನು ತನ್ನಲ್ಲೇ ಅಡಗಿಸಿಕೊಂಡಿದ್ದ ಹಿರಣ್ಯಗರ್ಭನು ಸ್ಥಾಪಿತನಾಗಿದ್ದನು ಎಂಬ ಹಿಂದಿನ ಋಕ್ಕಿನಲ್ಲಿ ತಿಳಿಸಿರುವ ವಿಷಯವನ್ನು ಇಲ್ಲಿ ಇನ್ನೂ ವಿವರಿಸಿ ತಿಳಿಸಿದೆ. ಇಲ್ಲಿ **ಅಜಸ್ಯ ನಾಭೌ** ಎಂಬ ಪದಗಳು ಮುಖ್ಯತಾತ್ಪರ್ಯವನ್ನು ತಿಳಿಸುವುವಾಗಿವೆ.

**ಅಜ** ಶಬ್ದಕ್ಕೆ ಜನ್ಮರಹಿತವಾದುದು ಎಂದರ್ಥ. **ಭುವನ** ಶಬ್ದವು ಉತ್ಪನ್ನವಾದ ಸಕಲಭೂತಗಳನ್ನೂ ನಿರ್ದೇಶಿಸುತ್ತದೆ. ಈ ಪರಬ್ರಹ್ಮನಿಂದ ಸೃಷ್ಟವಾದ ಸಕಲ ಭೂತಗಳೂ ಈ ಜನ್ಮರಹಿತನಾದ ಹಿರಣ್ಯಗರ್ಭನ ನಾಭಿಯಲ್ಲಿ ಅಂತರ್ಗತವಾಗಿವೆಯೆಂದರ್ಥ. ಸೃಷ್ಟಿಗೆ ಪೂರ್ವಭಾವಿಯಾಗಿ ಸೂಕ್ಷ್ಮಾವಸ್ಥೆಯಲ್ಲಿಯೂ, ಸೃಷ್ಟ್ಯನಂತರ ಸ್ಥೂಲರೂಪದಲ್ಲಿಯೂ ಜನ್ಮರಹಿತನಾದ ಹಿರಣ್ಯಗರ್ಭದಲ್ಲಿ ಅಡಕವಾಗಿರುತ್ತದೆ. ಸರ್ವಜಗದ್ಬಂಧಕವಾದ ಉದಕದಲ್ಲಿ ಬ್ರಹ್ಮಾಂಡವನ್ನು ಅಡಗಿಸಿಕೊಂಡಿರುವ ಹಿರಣ್ಯಗರ್ಭನ ವರ್ಣನೆ. ಈ **ಅಜವು** ಯಾವುದು ಎಂಬ ವಿಷಯದಲ್ಲಿ ಮಾತ್ರ ವಿಮರ್ಶೆಯಿರುತ್ತದೆ. ಹಿರಣ್ಯಗರ್ಭನೆಂಬುದು ಪುರುಷನೇ, ಅಥವಾ ಆದಿತತ್ತ್ವದ ಸ್ವರೂಪವರ್ಣನವೇ ಎಂದರೆ, ಈ ವಿಷಯದಲ್ಲಿ ಪ್ರಶ್ನೋತ್ತರಗಳು ಈ ರೀತಿಯಿರುತ್ತವೆ.

**ಕಿಂ ಕಾರಣಂ ಬ್ರಹ್ಮ? ಕುತಃ ಸ್ಮ ಜಾತಾ ಜೀವಾಮ ಕೇನ, ಕ್ವ ಚ ಸಂಪ್ರತಿಷ್ಠಾಃ।**
**ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ||**

(ಶ್ವೇ. ಉ. ೧.೧)

ಜಗತ್ತಿನ ಮೂಲಕಾರಣವಾವುದು ? ಅದು ಬ್ರಹ್ಮವೇ ? ಅಥವಾ ಬ್ರಹ್ಮವೆಂಬುದು ಯಾವುದು ? ಅದರ ಸ್ವರೂಪವೇನು ? ನಮ್ಮ ಉತ್ಪತ್ತಿಯು ಎಲ್ಲಿಂದ ? ನಮ್ಮ ಸ್ಥಿತಿಗೆ ಆಧಾರವಾವುದು ? ನಮ್ಮ ಸುಖದುಃಖಗಳು ಎಲ್ಲಿಂದ ಸಂಭವಿಸುತ್ತವೆ ? ಎಂಬ ಪ್ರಶ್ನೆಗಳಿಗೆ ಉತ್ತರವು ಈ ರೀತಿಯಿರುತ್ತದೆ.

**ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾ ||**

(ಶ್ವೇ. ಉ. ೧-೨)

ಜಗತ್ತಿನ ಮೂಲವೂ ಜನ್ಮರಹಿತವೂ (**ಅಜ**) ಆದ ಈ ಮಹಾತತ್ತ್ವವನ್ನು **ಕಾಲವೆಂದು** ಕೆಲವರೂ, **ನಿಯತಿಯೆಂದು** ಕೆಲವರೂ, **ಸ್ವಭಾವನೆಂದು** ಕೆಲವರೂ ಹೀಗೆಯೇ ಇನ್ನೂ ಕೆಲವು ಹೆಸರುಗಳಿಂದಲೂ ಬೇರೆ ಬೇರೆ ತತ್ತ್ವಜ್ಞರೂ ಕರೆಯುತ್ತಾರೆ. ಅದರೆ,

**ಸ್ವಭಾವಮೇಕೇ ಕವಯೋ ವದಂತಿ ಕಾಲಂ ತಥಾನ್ಯೇ ಪರಿಮುಹ್ಯಮಾನಾಃ ।**
**ದೇವಸ್ಯೈಷ ಮಹಿಮಾ ತು ಲೋಕೇ ಯೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಂ ॥**
(ಶ್ವೇ. ಉ. ೬-೧)

ಈ ಮಹಾತತ್ತ್ವವನ್ನು ಕೆಲವು ಋಷಿಗಳು **ಸ್ವಭಾವ**ವೆಂದೂ ಹೀಗೆಯೇ ಇನ್ನೂ ಅನೇಕ ನಾಮಧೇಯಗಳಿಂದಲೂ ಕರೆಯುತ್ತಾರೆ. ಆದರೂ, ಇದರ ಸ್ವರೂಪವನ್ನು ಪೂರ್ಣವಾಗಿ ವರ್ಣಿಸಿದಂತಾಗುವುದಿಲ್ಲ. ಸಕಲಲೋಕವನ್ನು ತನ್ನ ಶಕ್ತಿಯಿಂದ ಸ್ಥಾಪಿಸಿ ತನ್ನ ನಾಭಿಯಲ್ಲಿಯೇ ಅಂತರ್ಗತಮಾಡಿಕೊಂಡು ವಿಶ್ವದವ್ಯವಹಾರಕ್ಕೆಲ್ಲ ಪ್ರಭುವಾಗಿರುವ ಈಶ್ವರನು ಚೇತನಾತ್ಮಕವಾದ ವ್ಯಕ್ತಿಯೇ ಆಗಿರಬೇಕು. ಯಾವ ತತ್ತ್ವಜ್ಞನಾಗಲಿ, ಯಾವ ಹೆಸರಿನಿಂದ ಈ ಆದಿತತ್ತ್ವವನ್ನು ಕರೆದರೂ ಅದನ್ನು ರಥಚಕ್ರಕ್ಕೆ ಹೋಲಿಸಿದೆ ಇದಕ್ಕೆ ಬೇರೆ ಅನುರೂಪವಾದ ಸಾಮ್ಯವನ್ನು ಹೇಳಲಾಗುವುದಿಲ್ಲ. ಆತ್ಮನೆಂದು ಕರೆಯಲಿ, ಬ್ರಹ್ಮನೆಂದು ಕರೆಯಲಿ, ನಿಯತಿಯೆಂದು ಕರೆಯಲಿ, ಚೇತನ ರೂಪವಾದ ಈ ತತ್ತ್ವಕ್ಕೂ ವ್ಯವಹಾರಜಗತ್ತಿಗೂ ಇರುವ ಸಂಬಂಧವನ್ನು ರಥಚಕ್ರಕ್ಕೂ ಅದರ ಅರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಬೇಕಾಗಿದೆ. ಈ ರೀತಿ ಚಕ್ರದ ಉಪಮಾನದಲ್ಲಿರುವ ವಿಶೇಷವಿಷಯಗಳನ್ನು ಹಿಂದೆ ಆದಿತ್ಯ ಚಕ್ರದ ಸ್ವರೂಪವನ್ನು ವಿವರಿಸುವಾಗ ವಿಶದವಾಗಿ ತಿಳಿಸಿದೆ. ಆದರೂ **ನಾಭಿ**ಶಬ್ದಪ್ರಯೋಗವಿರುವುದರಿಂದ ಇಲ್ಲಿ ಅದೇ ಉಪಮಾನವನ್ನು ಸೂಕ್ಷ್ಮವಾಗಿ ತಿಳಿಸಲಾಗುತ್ತದೆ.

**ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏವಾತ್ಮನಃ ಸಮರ್ಪಿತಾಃ ॥** (ಬೃ. ಉ. ೨-೫-೧೫)

ಈ ಆತ್ಮನು ಸಕಲಭೂತಗಳಿಗೂ ಪ್ರಭುವು. ರಥಚಕ್ರದ ನಾಭಿಯಲ್ಲಿಯೂ ನೇಮಿಯಲ್ಲಿಯೂ ಅರಗಳೆಲ್ಲವೂ ಯಾವ ರೀತಿ ಅಂತರ್ಗತವಾಗಿಯೂ ನಿಯತವಾದ ಸ್ಥಿತಿಗಳುಳ್ಳವಾಗಿಯೂ ಇರುತ್ತವೆಯೋ ಅದರಂತೆ ಸಕಲ ಭೂತಗಳೂ ಈ ಆತ್ಮನಲ್ಲಿ ಅಂತರ್ಗತವಾಗಿಯೂ, ಈ ಆತ್ಮನ ನಿಯಮಕ್ಕೆ ಅಧೀನವಾಗಿಯೂ ಇವೆ. ಸಕಲ ಭೂತಗಳೂ ಸಕಲ ದೇವತೆಗಳೂ, ಸಕಲ ಲೋಕಗಳೂ ಸಕಲ ಪ್ರಾಣಗಳೂ ಸಮಸ್ತವೂ ಈ ಆತ್ಮನ ನಿಯಮನಕ್ಕೆ ಅರ್ಪಿತವಾಗಿ ತದಾಯತ್ತವಾಗಿದೆಯೆಂದು ಈ ಜಗದಾತ್ಮನಿಗೂ ರಥಚಕ್ರಕ್ಕೂ ಸಾಮ್ಯವನ್ನೂ ಹೇಳಿದೆ ಹೀಗೆಯೇ ಮುಂಡಕೋಪನಿಷತ್ತಿನಲ್ಲಿಯೂ ಮತ್ತು ಪ್ರಶ್ನೋಪನಿಷತ್ತಿನಲ್ಲಿಯೂ

**ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ॥** (ಮು. ೨-೨-೬)

ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ।
ಋಚೋ ಯಜೂಗ್ಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥ (ಪ್ರಶ್ನ. ೨-೬)

ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ ।
ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥
(ಪ್ರಶ್ನ. ೬-೬)

ಇತ್ಯಾದಿಯಾಗಿ ಆದಿಪುರುಷನಿಗೂ ಸಕಲ ಜಗತತ್ತ್ವಗಳಿಗೂ ಇರುವ ಸಂಬಂಧಕ್ಕೆ ಹೋಲಿಸಿದೆ. ಈ ವಿವರಗಳನ್ನು ಹಿಂದೆ ತಿಳಿಸಿದೆ (ಭಾಗ ೧೨).

ಹೀಗೆ ಸಕಲ ವಿಶ್ವಗಳೂ ಹಿರಣ್ಯಗರ್ಭರೂಪವಾದ ಅಂಡದಲ್ಲಿ ಅಂತರ್ಗತವಾಗಿದ್ದು, ಇವುಗಳನ್ನೆಲ್ಲ ಒಳಗೊಂಡ ಈ ಅಂಡವು ಉದಕದ ಆಶ್ರಯವನ್ನು ಹೊಂದಿ ತೇಲುತ್ತಿದೆ ಎನ್ನುವ ವರ್ಣನೆಯಲ್ಲಿ ಈಶ್ವರನು ವಿಶ್ವವ್ಯಾಪಕನು ಮತ್ತು ವಿಶ್ವವನ್ನೂ ಮೀರತಕ್ಕವನು ಎಂಬ ತಾತ್ಪರ್ಯವಿರುತ್ತದೆ. ಇವನಲ್ಲಿ ಐಕ್ಯವನ್ನು ಹೊಂದಿದಾಗ ಮಾತ್ರ ಜಗತ್ತಿನ ಭೂತಗಳು ವೈಯಕ್ತಿಕವಾದ ಸ್ವರೂಪವನ್ನು ಹೊಂದಿರುವುದಿಲ್ಲ. ಜಗದ್ವ್ಯವಹಾರಕಾಲದಲ್ಲಿ ಮಾತ್ರ ವೈಯಕ್ತಿಕವಾದ ಸ್ವರೂಪವನ್ನು ಹೊಂದಿರುತ್ತವೆ. ಸೃಷ್ಟಿಗೆ ಪೂರ್ವದಲ್ಲಿ ಆ ವೈಯಕ್ತಿಕ ಸ್ವರೂಪವನ್ನು ಮರೆತು ಎಲ್ಲವೂ ಈಶ್ವರನ ನಾಭಿಯಲ್ಲಿಯೇ ಅಂತರ್ಗತವಾಗಿ ಎಲ್ಲವೂ ಈಶ್ವರರೂಪವನ್ನೇ ಹೊಂದುತ್ತವೆ. ಈ ವಿಷಯವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿರುತ್ತದೆ.

**ಇಮಾಃ ಸೋಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ ಪ್ರತೀಚ್ಯಃ ತಾಃ ಸಮುದ್ರಾತ್ ಸಮುದ್ರಮೇವಾಪಿಯಂತಿ ಸ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ ॥**

(ಛಾ. ಉ. ೬-೧೦-೧)

ಎಲೈ ಪ್ರಿಯಪುತ್ರನೇ, ಯಾವ ರೀತಿ ಪೂರ್ವದಿಕ್ಕಿನ ನದಿಗಳು ಪೂರ್ವದಿಕ್ಕಿಗೆ ಅಭಿಮುಖವಾಗಿಯೂ, ಪಶ್ಚಿಮದಿಕ್ಕಿನ ನದಿಗಳು ಪಶ್ಚಿಮಾಭಿಮುಖವಾಗಿಯೂ ಹರಿದು ಸಮುದ್ರದಿಂದ ಹೊರಟು ಪುನಃ ಸಮುದ್ರಕ್ಕೇ ಸೇರುತ್ತವೆ. ಮಧ್ಯಭಾಗದ ಕಾಲದಲ್ಲಿ ಮಾತ್ರ ತಮ್ಮ ವೈಯಕ್ತಿಕವಾದ ಸ್ವರೂಪವನ್ನು ಹೊಂದಿರುತ್ತವೆ. ಇದಕ್ಕೆ ಪೂರ್ವದಲ್ಲಾಗಲಿ, ಅನಂತರದಲ್ಲಾಗಲಿ ತಮ್ಮ ವೈಯಕ್ತಿಕಸ್ವರೂಪವನ್ನು ಹೊಂದಿರುವುದಿಲ್ಲ. ಎಲ್ಲವೂ ಸಮುದ್ರರೂಪದಲ್ಲಿಯೇ ಐಕ್ಯವಾಗಿರುತ್ತದೆ. ಇದು ನಾನು; ನನ್ನ ಹೆಸರು ಇದು, ಇತ್ಯಾದಿಯಾಗಿ ಪೃಥಕ್ಕಾದ ನಿರ್ದೇಶವೇ ಇರುವುದಿಲ್ಲ.

**ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತದಾ ಭವಂತಿ ॥**

(ಛಾ. ಉ. ೬-೧೦-೨)

ಇದೇ ರೀತಿಯಲ್ಲಿ, ಈ ಲೋಕದ ಸಕಲಭೂತಗಳೂ ಒಂದೇ ಮೂಲತತ್ತ್ವದಿಂದ ಉತ್ಪನ್ನವಾಗಿ ತಮ್ಮ ವೈಯಕ್ತಿಕವಾದ ಸ್ವರೂಪವನ್ನು ಹೊಂದಿದ್ದರೂ, ತಮ್ಮ ಮೂಲವು ಒಂದೇ, ತಮ್ಮಲ್ಲೆಲ್ಲ ಒಂದೇ ಚೈತನ್ಯವು ವ್ಯಾಪಿಸಿದೆ ಎಂದು ತಿಳಿಯುವುದಿಲ್ಲ. ಆದರೆ ಅವು ಪ್ರಪಂಚದಲ್ಲಿ, ವ್ಯಾಘ್ರದ ರೂಪವನ್ನು ಹೊಂದಿರಲಿ, ಅಥವಾ ಸಿಂಹ, ತೋಳ, ಕರಡಿ, ಕ್ರಿಮಿ ಮಶಕ, ಕೀಟ, ಸೊಳ್ಳೆ, ಇತ್ಯಾದಿ ಅನೇಕ ರೂಪಗಳನ್ನು ಹೊಂದಿದ್ದರೂ ಸಹ ಕೊನೆಯಲ್ಲಿ ಯಾವ ಮೂಲತತ್ತ್ವದಿಂದ ಉತ್ಪನ್ನವಾದವೋ ಅದರಲ್ಲೇ ಐಕ್ಯವಾಗುತ್ತವೆ, ಇತ್ಯಾದಿಯಾಗಿ ಹಿರಣ್ಯಗರ್ಭರೂಪನಾದ ಪರಮಾತ್ಮನಲ್ಲಿ ಅಡಗಿರುವ ಸಕಲ ಭೂತಗಳಿಗೂ ಜನ್ಮರಹಿತನಾದ ಈಶ್ವರನೂ ಇರುವ ಸಬಂಧವನ್ನು ತಿಳಿಸಿದೆ. ಅದೇ ವಿಷಯವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ವಿವರಿಸಿದೆ.

॥ ಸಂಹಿತಾಪಾಠಃ ॥

ನ ತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ ।
ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥ ೭ ॥

॥ ಪದಪಾಠಃ ॥

ನ । ತಂ । ವಿದಾಥ । ಯಃ । ಇಮಾ । ಜಜಾನ । ಅನ್ಯತ್ । ಯುಷ್ಮಾಕಂ । ಅಂತರಂ । ಬಭೂವ ।
ನೀಹಾರೇಣ । ಪ್ರಾವೃತಾಃ । ಜಲ್ಪ್ಯಾ । ಚ । ಅಸುಽತೃಪಃ । ಉಕ್ಥಽಶಸಃ । ಚರಂತಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ನರಾಃ ತಂ ವಿಶ್ವಕರ್ಮಾಣಂ ನ ವಿದಾಥ ನ ಜಾನೀಥ ಯ ಇಮೇಮಾನಿ ಭೂತಾನಿ ಜಜಾನ ಉತ್ಪಾದಿತವಾನ್ । ದೇವದತ್ತೋಽಹಂ ಯಜ್ಞದತ್ತೋಽಸ್ಮೀತಿ ವಯಮಾತ್ಮಾನಂ ವಿಶ್ವಕರ್ಮಾಣಂ ಜಾನೀಮ ಇತಿ ಯದುಚ್ಯೇತ ತದಸತ್‌। ನ ಹ್ಯಹಂಪ್ರತ್ಯಯಗಮ್ಯಂ ಜೀವರೂಪಂ ವಿಶ್ವಕರ್ಮಣಃ ಪರಮೇಶ್ವರಸ್ಯ ತತ್ತ್ವಂ ಕಿಂತು ಯುಷ್ಮಾಕಮಹಂಪ್ರತ್ಯಯಗಮ್ಯಾನಾಂ ಜೀವಾನಾಮಂತರಮನ್ಯದಹಂ-ಪ್ರತ್ಯಯಗಮ್ಯಾದತಿರಿಕ್ತಂ ಸರ್ವವೇದಾಂತವೇದ್ಯಮೀಶ್ವರತತ್ತ್ವಂ ಬಭೂವ । ಭವತಿ । ವಿದ್ಯತೇ । ಜೀವರೂಪವತ್ತದಪಿ ಕುತೋ ನ ವಿದ್ಮ ಇತಿ ಚೇತ್ ಶ್ರೂಯತಾಂ । ನೀಹಾರೇಣ ಪ್ರಾವೃತಾ ಯೂಯಂ ನೀಹಾರಸದೃಶೇನಾಜ್ಞಾನೇನಾಚ್ಛನ್ನಾಃ । ಅತೋ ನ ಜಾನೀಥ । ಯಥಾ ನೀಹಾರೋ ನಾತ್ಯಂತ-ಮಸದ್ದೃಷ್ಟೇರಾವರಕತ್ವಾತ್ ನಾತ್ಯಂತಂ ಸತ್ಸೂರ್ಯಪ್ರಕಾಶಾದಿವತ್ಸಂಬೋಧ್ಯಮಯೋಗ್ಯತ್ವಾತ್ ಏವಮಜ್ಞಾನಮಪಿ ನಾತ್ಯಂತಮಸದೀಶ್ವರತತ್ತ್ವಾವರಕತ್ವಾತ್ ನಾಪಿ ಸದ್ಬೋಧಮಾತ್ರನಿವರ್ತ್ಯತ್ವಾತ್ । ಈದೃಶೇನಾಜ್ಞಾನೇನ ಸರ್ವೇ ಜೀವಾಃ ಪ್ರಾವೃತಾಃ । ನ ಕೇವಲಂ ಪ್ರಾವೃತತ್ವಂ ಕಿಂತು ಜಲ್ಪ್ಯಾ ಚ ದೇವೋಽಹಂ ಮನುಷ್ಯೋಽಹಮಿತ್ಯಾದ್ಯನೃತಜಲ್ಪನೇನ ಪ್ರಾವೃತಾಃ । ಕಿಂಚಾಸುತೃಪಃ ಕೇನಾಪ್ಯುಪಾ-ಯೇನಾಸೂನ್ಪ್ರಾಣಾಂಸ್ತೃಪ್ಯಂತಃ । ಉದರಂಭರಾ ಇತ್ಯರ್ಥಃ । ನ ತು ಪಾರಮೇಶ್ವರಂ ತತ್ತ್ವಂ ವಿಚಾರಿತವಂತಃ । ನ ಕೇವಲಮಿಹಲೋಕಭೋಗಮಾತ್ರತೃಪ್ತಾ ಉಕ್ಥಶಾಸೋ ನಾನಾವಿಧೇಷು ಯಜ್ಞೇಷೂಕ್ಥ್ಯಂ ಪ್ರಉಗನಿಷ್ಕೇವಲ್ಯಾದಿಕಂ ಶಂಸಂತಶ್ಚರಂತಿ । ಪೃಥಿವ್ಯಾಂ ವರ್ತಂತೇ । ಕೇವಲ-ಮೈಹಿಕಾಮುಷ್ಮಿಕಭೋಗಪರಾ ವರ್ತಧ್ವೇಽತೋ ವಿಶ್ವಕರ್ಮಾಣಂ ದೇವಂ ನ ಜಾನೀಥೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ವಿಶ್ವಕರ್ಮನು । **ಇಮಾ**—ಈ ಭೂತಗಳನ್ನು । **ಜಜಾನ**—ಉತ್ಪನ್ನಮಾಡಿದನೋ । **ತಂ**—ಆ ವಿಶ್ವಕರ್ಮನನ್ನು । **ನ ವಿದಾಥ**—ನೀವು ಅರಿಯಲಾರಿರಿ । **ಯುಷ್ಮಾಕಂ**—ಪ್ರತ್ಯೇಕತೆಯನ್ನು ಹೊಂದಿರುವ ಅನಂತ ಜೀವರುಗಳಿಗಿಂತಲೂ । **ಅಂತರಂ**—ಬೇರೆಯಾದ । **ಅನ್ಯತ್**—ಪರತತ್ತ್ವವು । **ಬಭೂವ**—

ಇರುತ್ತದೆ (ಈ ಪರತತ್ತ್ವಜ್ಞಾನವಿಲ್ಲದೆ) । **ನೀಹಾರೇಣ**—ಮಂಜಿನ ಗಡ್ಡೆಯಂತಿರುವ ಅಜ್ಞಾನದಿಂದ । **ಪ್ರಾವೃತಾಃ**— ಮುಚ್ಚಲ್ಪಟ್ಟಿರುವವರೂ । **ಜಲ್ಪ್ಯಾ**—ಅಭಿಮಾನಪೂರ್ವಕವಾಗಿ ವ್ಯವಹಾರಗಳಲ್ಲಿ ನಿರತರಾಗಿರುವವರೂ । **ಅಸುತೃಪಃ**—ಕೇವಲ ಭೋಗವನ್ನೇ ಪ್ರಧಾನವಾಗಿಟ್ಟುಕೊಂಡಿರುವವರೂ । **ಉಕ್ಥಶಾಸಃ**—ಕಾಮ್ಯಕರ್ಮಕ್ಕೆ ಪ್ರಧಾನವಾದ ಶಸ್ತ್ರಾದಿಮಂತ್ರಗಳನ್ನೇ ಪಠಿಸುತ್ತಲಿರುವ ಭೋಗಾಸಕ್ತರೂ ಆದ ಅಜ್ಞಾನಿಗಳು । **ಚರಂತಿ**—ಅಧಿಕವಾಗಿರುತ್ತಾರೆ.

**। ಭಾವಾರ್ಥ ।**

ಯಾವ ವಿಶ್ವಕರ್ಮನು ಈ ಭೂತಗಳನ್ನು ಉತ್ಪತ್ತಿಮಾಡಿದನೋ ಆ ವಿಶ್ವಕರ್ಮನನ್ನು ನೀವು ಅರಿಯಲಾರಿರಿ. ಪ್ರತ್ಯೇಕತೆಯನ್ನು ಹೊಂದಿರುವ ಅನಂತ ಜೀವರುಗಳಿಗಿಂತಲೂ ಬೇರೆಯಾದ ಪರತತ್ತ್ವವು ಇರುತ್ತದೆ. ಈ ಪರತತ್ತ್ವಜ್ಞಾನವಿಲ್ಲದೆ ಮಂಜಿನ ಗಡ್ಡೆಯಂತಿರುವ ಅಜ್ಞಾನದಿಂದ ಮುಚ್ಚಲ್ಪಟ್ಟಿರುವವರೂ, ಅಭಿಮಾನಪೂರ್ವಕವಾದ ವ್ಯವಹಾರಗಳಲ್ಲಿ ನಿರತರಾಗಿರುವವರೂ, ಕೇವಲ ಭೋಗವನ್ನೇ ಪ್ರಧಾನವಾಗಿಟ್ಟುಕೊಂಡಿರುವವರೂ, ಕಾಮ್ಯಕರ್ಮಕ್ಕೆ ಪ್ರಧಾನವಾದ ಶಸ್ತ್ರಾದಿಮಂತ್ರಗಳನ್ನೇ ಪಠಿಸುತ್ತಲಿರುವ ಭೋಗಾಸಕ್ತರೂ ಆದ ಅಜ್ಞಾನಿಗಳೇ ಅಧಿಕವಾಗಿರುತ್ತಾರೆ.

## English Translation

You know not him who has generated these (beings); (his life) is another, different from yours; wrapped in fog, and foolish speech (do they) wander (who are) gluttonous and engaged in devotion.

॥ ವಿಶೇಷವಿಷಯಗಳು ॥

ವಿಶ್ವಕರ್ಮರೂಪನಾದ ಈಶ್ವರನಿಂದ ಸಕಲ ಭೂತಗಳೂ ಉತ್ಪನ್ನವಾಗುತ್ತವೆ. ಆದರೆ, ಅವನಿಂದ ಉತ್ಪನ್ನವಾದ ಯಾವ ಪ್ರಾಣಿಯೂ ಅವನ ಮಹಿಮೆಯನ್ನು ತಿಳಿಯಲು ಶಕ್ತವಾಗುವುದಿಲ್ಲ. ಇದಕ್ಕೆ ಎರಡು ಕಾರಣಗಳು. ಮೊದಲನೆಯದಾಗಿ—

(೧) ಈಶ್ವರನು ವಿಶ್ವಕ್ಕಿಂತಲೂ ಅತೀತನು. ಇಂದ್ರಿಯಾದಿ ಉಪಕರಣಗಳಿಗೆ ಗೋಚರನಾಗತಕ್ಕವನಲ್ಲ. ತಪೋಮಹಿಮರಾದ ಮಹರ್ಷಿಗಳೂ ಕೇವಲ ಈಶ್ವರನ ಒಂದೊಂದಂಶವನ್ನು ಸಾಕ್ಷಾತ್ಕರಿಸಬಲ್ಲರೇ ವಿನಾ ಅವರಿಗೆ ಪೂರ್ಣನಾದ ಈಶ್ವರನ ಸಾಕ್ಷಾತ್ಕಾರವಾಗುವುದಿಲ್ಲ. ಎರಡನೆಯದಾಗಿ—

(೨) ಉತ್ಪನ್ನವಾದ ಸಕಲ ಪ್ರಾಣಿಗಳೂ ಸಹ ತಮ್ಮ ಉತ್ಪತ್ತಿಯು ಈಶ್ವರನಿಂದ ಎಂಬ ಜ್ಞಾನವಿಲ್ಲದೆ ಕೇವಲ ಸ್ವಾರ್ಥಾಹಂಕಾರಗಳಿಂದಲೂ, ಭೋಗಲಾಲಸೆಗಳಿಂದಲೂ ಕೂಡಿ ಅಜ್ಞಾನಪೂರಿತರಾಗುವುದರಿಂದ ಈಶ್ವರನ ಸಾಕ್ಷಾತ್ಕಾರಕ್ಕೆ ಯೋಗ್ಯತೆಯನ್ನು ಹೊಂದಿರುವುದಿಲ್ಲ ಎಂಬ ಈ ಎರಡು ವಿಷಯಗಳೂ ಈ ಋಕ್ಕಿನಲ್ಲಿ ತಿಳಿಸಲ್ಪಟ್ಟಿವೆ.

(೧) ಜಗತ್ತಿಗೆಲ್ಲ ಕಾರಣನಾದ ಈಶ್ವರನು ಸಕಲ ವಿಶ್ವಕ್ಕೂ ಸಂಬಂಧವನ್ನು ಉಂಟುಮಾಡಿ ವೈವಿಧ್ಯದಲ್ಲಿ ಏಕತ್ವವನ್ನು ಪ್ರತಿಪಾದಿಸುವ ಸೂತ್ರಾತ್ಮಕನಾಗಿದ್ದಾನೆ. ಇವನು ಸರ್ವಾಂತರ್ಯಾಮಿ. ಸಕಲವನ್ನೂ ತಿಳಿದವನು. ಸಕಲವಾದ ವಸ್ತುಗಳಲ್ಲಿಯೂ ಇವನು ವ್ಯಾಪಿಸಿದ್ದರೂ, ಇವನ ಮಹಿಮೆಯು ಯಾರಿಗೂ ತಿಳಿಯದು. ಹೇಗೆಂದರೆ—

**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾ ಅಂತರ್ಯಾಮ್ಯಮೃತಃ ||**

(ಬೃ. ಉ. ೩-೭-೩)

ಯಾವ ಸೂತ್ರಾತ್ಮನು ಪೃಥ್ವಿಯಲ್ಲಿ ಸ್ಥಾಪಿತನಾಗಿ ಯಾರಿಗೆ ಪೃಥ್ವಿಯೇ ಶರೀರವಾಗಿದೆಯೋ, ಆ ಪರಮಾತ್ಮನ ಸ್ವರೂಪವನ್ನು ಪೃಥ್ವಿಯು ಅರಿಯಲು ಸಾಧ್ಯವಿಲ್ಲ. ಆ ಸೂತ್ರಾತ್ಮನೇ ಪೃಥ್ವಿಯಲ್ಲಿ ಅಂತರ್ಗತನಾಗಿ ಪೃಥ್ವಿಯ ವ್ಯವಹಾರಗಳನ್ನೆಲ್ಲ ನಿಯಮಿಸುತ್ತಾನೆ. ಅವನೇ ನಿತ್ಯನಾದ ಈಶ್ವರನು.

**ಯಃ ಅಪ್ಸು ತಿಷ್ಠನ್ನದ್ಭ್ಯೋಽನ್ತರೋ ಯಮಾಪೋ ನ ವಿದುಃ ಯಸ್ಯಾಪಃ ಶರೀರಂ .... .... ||**
**ಯೋಽಗ್ನೌ ತಿಷ್ಠನ್ನಗ್ನೇರಂತರೋ ಯಮಗ್ನಿರ್ನವೇದ ಯಸ್ಯಾಗ್ನಿಃಶರೀರಂ .... ...... .... || ೫ ||**
**ಯೋಽನ್ತರಿಕ್ಷೇ ತಿಷ್ಠನ್ ಅಂತರಿಕ್ಷಾದಂತರಃ ಯಮಂತರಿಕ್ಷಂ ನ ವೇದ .... ...... ...... .... || ೬ ||**
**ಯೋ ವಾಯೌ ತಿಷ್ಠನ್ ವಾಯೋರಂತರೋ ಯಂ ವಾಯುರ್ನ ವೇದ .... .... .... .... || ೭ ||**
**ಯೋ ದಿವಿ ತಿಷ್ಠನ್ ದಿವೋಽಂತರೋ ಯಂ ದ್ಯೌರ್ನವೇದ .... .... .... .... .... .... .... || ೮ ||**
**ಯ ಆದಿತ್ಯೇ ತಿಷ್ಠನ್ನಾದಿತ್ಯಾದಂತರೋ ಯಮಾದಿತ್ಯೋ ನ ವೇದ ...... ...... ...... ...... ...... || ೯ ||**
**ಯೋ ದಿಕ್ಷು ತಿಷ್ಠನ್ ದಿಗ್ಭ್ಯೋಽಂತರೋ ಯಂ ದಿಶೋ ನ ವಿದುಃ ...... .... ...... ...... ...... || ೧೦ ||**
**ಯಶ್ಚಂದ್ರತಾರಕೇ ತಿಷ್ಠನ್ ಚಂದ್ರತಾರಕಾದಂತರೋ ಯಂ ಚಂದ್ರತಾರಕಂ ನ ವೇದ...... || ೧೧ ||**
**ಯ ಆಕಾಶೇ ತಿಷ್ಠನ್ ಆಕಾಶಾದಂತರೋ ಯಮಾಕಾಶೋ ನ ವೇದ .... ...... .... ...... || ೧೨ ||**
**ಯಸ್ತಮಸಿ ತಿಷ್ಠನ್ ತಮಸೋಽಂತರೋ ಯಂ ತಮೋ ನ ವೇದ ...... ...... .... ...... .... || ೧೩ ||**
**ಯಸ್ತೇಜಸಿ ತಿಷ್ಠಂಸ್ತೇಜಸೋಽಂತರೋ ಯಂ ತೇಜೋ ನ ವೇದ ...... ...... .... ...... ...... || ೧೪ ||**
**ಯಃ ಸರ್ವೇಷು ಭೂತೇಷು ತಿಷ್ಠನ್ತ್ಸರ್ವೇಭ್ಯೋ ಭೂತೇಭ್ಯೋಽಂತರೋ ಯಂ ಸರ್ವಾಣಿ ಭೂತಾನಿ ನ ವಿದುಃ .... ...... .... .... || ೧೫ ||**

(ಬೃ. ಉ. ೩-೭-೪ ರಿಂದ ೨೩)

ಈ ಸೂತ್ರಾತ್ಮನು ಉದಕದಲ್ಲಿ ಅಂತರ್ವರ್ತಿಯಾಗಿದ್ದಾನೆ. ಉದಕವೇ ಇವನ ದೇಹವು. ಆದರೆ ಉದಕವು ಇವನ ಮಹಿಮೆಯನ್ನು ತಿಳಿಯದು. ಉದಕಕ್ಕೆ ಇವನು ನಿಯಾಮಕನು.

ಇವನು ಅಗ್ನಿಯಲ್ಲಿ ಅಂತರ್ವರ್ತಿಯಾಗಿದ್ದಾನೆ. ಅಗ್ನಿಯೇ ಇವನ ದೇಹವು. ಆದರೆ ಅಗ್ನಿಯು ಇವನ ಮಹಿಮೆಯನ್ನು ತಿಳಿಯಲಾರದು ಅಗ್ನಿಗೆ ಇವನು ನಿಯಾಮಕನು.

ಇದೇ ಈಶ್ವರನು ಅಂತರಿಕ್ಷದಲ್ಲಿ ಅಂತರ್ಗತನಾಗಿದ್ದಾನೆ. ಅಂತರಿಕ್ಷವೇ ಇವನ ಶರೀರವು ಆದರೆ ಇವನ ಮಹಿಮೆಯನ್ನು ಅಂತರಿಕ್ಷವು ಅರಿಯಬಾಗುವುದಿಲ್ಲ. ಇವನು ಅಂತರಿಕ್ಷಕ್ಕೆ ನಿಯಾಮಕನು.

ಈ ಸೂತ್ರಾತ್ಮನು ವಾಯುವಿನಲ್ಲಿ ಅಂತರ್ಗತನಾಗಿದ್ದಾನೆ. ವಾಯುವೇ ಇವನ ಶರೀರವು. ಆದರೆ ವಾಯುವು ಇವನ ಮಹಿಮೆಯನ್ನು ತಿಳಿಯಲಾರದು. ವಾಯುವಿನ ಗತಿಗೆ ಇವನು ನಿಯಾಮಕನು. ಈ ಪರಮಾತ್ಮನು ದ್ಯುಲೋಕದಲ್ಲಿ ಅಂತರ್ಗತನಾಗಿದ್ದಾನೆ. ದ್ಯುಲೋಕವೇ ಇವನ ಶರೀರವು. ಆದರೆ ದ್ಯುಲೋಕವು ಇವನ ಮಹಿಮೆಯನ್ನು ಅರಿಯಲಾಗುವುದಿಲ್ಲ.

ಹೀಗೆಯೇ, ಆದಿತ್ಯ, ಚಂದ್ರ, ನಕ್ಷತ್ರಗಳು, ಆಕಾಶ, ಸಕಲದಿಕ್ಕುಗಳು ಪ್ರತಿಯೊಂದರಲ್ಲೂ ಈ ಸೂತ್ರಾತ್ಮನು ವ್ಯಾಪಿಸಿದ್ದಾನೆ. ಅವೆಲ್ಲವೂ ಇವನಿಗೆ ದೇಹಗಳು. ಆದರೂ ಅವುಗಳಲ್ಲಿ ಯಾವುವೂ ಈ ಪರಮಾತ್ಮನ ಮಹಿಮೆಯನ್ನು ಅರಿಯಲು ಶಕ್ತವಾಗಿಲ್ಲ. ತಮಸ್ಸಿನಲ್ಲಿಯೂ ಇವನೇ ಅಡಗಿದ್ದಾನೆ. ತಮಸ್ಸಿಗೂ ಇವನು ಗೋಚರಾತೀತನು. ಅತ್ಯಧಿಕವಾದ ತೇಜಸ್ಸೂ ಇವನ ರೂಪವನ್ನು ಅರಿಯಲಾರದು. ಆದಿತ್ಯಾದಿ ಸಕಲ ಗ್ರಹಗಳಿಗೂ, ಸಕಲ ದಿಕ್ಕುಗಳಿಗೂ ಇವನೇ ನಿಯಾಮಕನು.

ಸಕಲ ಭೂತಗಳೂ ಇವನ ದೇಹವು ಇವನೇ ಭೂತಗಳಿಗೆಲ್ಲ ನಿಯಾಮಕನು. ಆದರೆ ಯಾವ ಪ್ರಾಣಿಯೂ ಇವನ ಮಹಿಮೆಯನ್ನು ತಿಳಿಯಲು ಶಕ್ತವಾಗಿಲ್ಲ. ಪ್ರಾಣ, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಿಜ್ಞಾನ, ತ್ವಕ್ಕು, ಈ ರೀತಿ ದೇಹದ ಸಕಲ ಅವಯವಗಳಲ್ಲೂ ಈ ಸೂತ್ರಾತ್ಮನು ಅಂತರ್ಯಾಮಿಯಾಗಿದ್ದಾನೆ. ಯಾವ ಅವಯವವೂ ಇವನನ್ನು ಅರಿಯಲಾಗುವುದಿಲ್ಲ.

> ಏಷ ತ ಆತ್ಮಾಂತರ್ಯಾಮ್ಯಮೃತೋಽದೃಷ್ಟೋ ದ್ರಷ್ಟಾ ಅಶ್ರುತಃ ಶ್ರೋತಾಽಮತೋ ಮಂತಾಽವಿಜ್ಞಾತೋ ವಿಜ್ಞಾತಾ ನಾನ್ಯೋಽತೋಽಸ್ತಿ ದ್ರಷ್ಟಾ ನಾನ್ಯೋಽತೋಽಸ್ತಿ ಶ್ರೋತಾ ನಾನ್ಯೋಽತೋಽಸ್ತಿ ಮಂತಾ ನಾನ್ಯೋಽತೋಽಸ್ತಿ ವಿಜ್ಞಾತಾ ಏಷ ತ ಆತ್ಮಾಂತರ್ಯಾಮ್ಯಮೃತೋಽತೋಽನ್ಯದಾರ್ತಂ ತತೋ ಹೋದ್ದಾಲಕ ಆರುಣಿರುಪರರಾಮ ॥
>
> (ಬೃ. ಉ. ೩-೭-೨೩)

ಸರ್ವಾಂತರ್ಯಾಮಿಯಾದ ಈ ಸೂತ್ರಾತ್ಮನನ್ನು ನೋಡುವವರಾರೂ ಇಲ್ಲ. ಇವನು ಸಕಲವನ್ನು ನೋಡತಕ್ಕವನು. ಇವನ ದಿವ್ಯಗಾನವನ್ನು ಕೇಳುವವರು ಯಾರೂ ಇಲ್ಲ ಆದರೆ ಇವನು ಸಕಲವನ್ನು ಕೇಳಬಲ್ಲವನು ಇವನನ್ನು ಅರಿಯುವವರು ಯಾರೂ ಇಲ್ಲ, ಇವನು ಮಾತ್ರಸಕಲವನ್ನೂ ತಿಳಿಯತಕ್ಕವನು. ಈ ಪರಮಾತ್ಮನು ಸರ್ವವ್ಯಾಪಿಯು ಮತ್ತು ಅಮೃತನು. ವಿಶ್ವಪ್ರೇರಕನು ಎಂದು ಯಾಜ್ಞವಲ್ಕ್ಯನು ಉಪದೇಶಿಸಿದೊಡನೆಯೇ ಉದ್ದಾಲಕ ಆರುಣಿಯು ಶಾಂತನಾದನು. ಗೋಚರಾತೀತನಾದುದರಿಂದಲೇ ಇವನನ್ನು ಉಪನಿಷತ್ತುಗಳಲ್ಲಿ ಈ ರೀತಿ ವರ್ಣಿಸಿವೆ.

> ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ ಯತ್ ।
> ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯುಮುಖಾತ್ಪ್ರಮುಚ್ಯತೇ ॥
>
> (ಕಠ ೧-೩-೧೫)

ಈ ಪರಮಾತ್ಮನು ಶಬ್ದರಹಿತನು, ಸ್ಪರ್ಶರಹಿತನು, ರೂಪರಹಿತನು, ಅವ್ಯಯನು, ಗಂಧರಹಿತನು, ಅನಾದಿ ಮತ್ತು ಅನಂತನು, ಧ್ರುವನು. ಇಂತಹ ಪರತತ್ತ್ವವನ್ನರಿಯಬೇಕಾದರೆ ಅತ್ಯಂತ ಕಠಿನವಾದ ಸಾಧನೆಯು ಬೇಕು. ಆದರೂ ಪೂರ್ಣವಾದ ಸಾಕ್ಷಾತ್ಕಾರವು ಲಭಿಸುವುದಿಲ್ಲ. ಆದುದರಿಂದಲೇ ಈ ಆತ್ಮನನ್ನು ನಿಷೇಧರೂಪದಲ್ಲಿ ವರ್ಣಿಸಿವೆ.

> ಅಸ್ಯ ಶ್ರೀರ್ಭವತಿ ಯ ಏವಂ ವೇದಾಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತ್ಯಥ ನಾಮಧೇಯಂ ಸತ್ಯಸ್ಯ ಸತ್ಯ ಇತಿ.................. ॥
>
> (ಬೃ. ಉ. ೨-೩-೬)

ದೇಹಾತಿರಿಕ್ತನಾದ ಈ ಪರಮಾತ್ಮನನ್ನು ಹೀಗೆಂದು ವರ್ಣಿಸುವುದಕ್ಕಾಗುವುದಿಲ್ಲ. ವಿಶ್ವದ ಸಕಲ ವಸ್ತುಗಳನ್ನೂ ತೆಗೆದುಕೊಂಡು ಇದು ಆ ಪರಮಾತ್ಮನಲ್ಲ, ಅದೂ ಅಲ್ಲ ಇತ್ಯಾದಿ ನಿಷೇಧವಾಕ್ಯಗಳಿಂದಲೇ ಅವನ ಸ್ವರೂಪವನ್ನು ವರ್ಣಿಸಬೇಕಾಗಿದೆ. ಆದುದರಿಂದಲೇ **ನೇತಿ ನೇತಿ** ಎಂಬ ಶ್ರುತಿವಾಕ್ಯದಿಂದ ಆ ಸೂತ್ರಾತ್ಮನ ಸ್ವರೂಪವು ವರ್ಣಿತವಾಗಿದೆ. ಇವನ ರೂಪವನ್ನು ಅರಿಯಲು ಪ್ರಯತ್ನಿಸುವವರು ಅಂಧಕಾರವನ್ನೇ ಪ್ರವೇಶಿಸುವಂತಾಗುತ್ತದೆ. ಹೇಗೆಂದರೆ—

**ಅಂಧಂ ತಮಃ ಪ್ರವಿಶಂತಿ ಯೇ ಅವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್‌ಂ ರತಾಃ ॥**
(ಈಶ. ೯)

ಈಶ್ವರನ ಸ್ವರೂಪವನ್ನರಿಯಲು ಪೂರ್ಣವಾದ ಸಾಧನಗಳಿಲ್ಲದೇ ಕೇವಲ ಅಂಧಶ್ರದ್ಧೆಯಿಂದ ಪೂಜಿಸುವವರು ಕತ್ತಲಲ್ಲಿಯೇ ಕುಳಿತಿರುತ್ತಾರೆ, ಆದರೆ, ಇವನ ಸ್ವರೂಪವನ್ನು ಅರಿಯುವ ಸಾಧನೆಗಳಿಂದ ಪ್ರಯತ್ನಿಸುವ ಜ್ಞಾನಿಗಳೂ ಇವನ ಅನಂತವಾದ ಮಹಿಮೆಯನ್ನು ಅರಿಯಲಾರದವರಾಗಿ ಇನ್ನೂ ಅಧಿಕವಾದ ಅಂಧಕಾರದಲ್ಲಿ ಪ್ರವೇಶಿಸುತ್ತಾರೆ. ಹೇಗೆಂದರೆ, ಈಶ್ವರನ ಅನಂತವಾದ ಗುಣಗಳನ್ನು ಅರಿಯುವ ಪ್ರಯತ್ನದಲ್ಲಿ ಒಂದು ಹೊಸ ಅಂಶವನ್ನು ಅರಿತರೆ ಅದರಿಂದ ಇನ್ನೂ ಅಧಿಕವಾದ ಸಮಸ್ಯೆಗಳು ಉತ್ಪನ್ನವಾಗುತ್ತವೆ- (ಅವಿದ್ಯೆಯೆಂದರೆ **ಕರ್ಮ**ವೆಂದೂ ಅರ್ಥ. ಜ್ಞಾನರಹಿತರಾಗಿ ಕೇವಲ ಕರ್ಮನಿರತರೂ ಎಂದು ತಾತ್ಪರ್ಯ).

(೨) ಎರಡನೆಯದಾಗಿ—ಕೇವಲ ಈಶ್ವರನು ಗೋಚರಾತೀತನು ಎಂಬುದು ಮಾತ್ರವಲ್ಲ. ಸಕಲ ಭೂತಗಳೂ ಅಜ್ಞಾನದಿಂದ ಆವೃತವಾಗಿ ಈಶ್ವರನನ್ನು ಸಾಕ್ಷಾತ್ಕರಿಸುವ ಯೋಗ್ಯತೆಯನ್ನು ಹೊಂದಿರುವುದಿಲ್ಲ ಎಂಬುದೂ ಒಂದು ಕಾರಣವಾಗಿರುತ್ತದೆ. ಅದಕ್ಕೆ ಉತ್ತಮವಾದ ಒಂದು ಉದಾಹರಣೆಯನ್ನು ಪ್ರಕೃತವಾದ ಋಕ್ಕಿನಲ್ಲಿ ಹೇಳಿರುತ್ತದೆ. ಮಂಜಿನಂತಿರುವ ಅಜ್ಞಾನದಿಂದ ಆವೃತರಾಗಿ ತಾವೇ ಸರ್ವಜ್ಞರೆಂದು ಮಾತ್ರ ಅಭಿಮಾನವನ್ನು ಹೊಂದಿರುತ್ತಾರೆ ಎಂದಿರುತ್ತದೆ. ಇದೇ ರೀತಿ ಅಜ್ಞಾನಿಗಳ ಸ್ವರೂಪವನ್ನು ಭಗವದ್ಗೀತೆಯಲ್ಲಿ ಈ ರೀತಿ ವಿವರಿಸಿರುತ್ತದೆ.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ ॥**
(ಭ. ಗೀ. ೩-೩೮)

ಬೆಂಕಿಯನ್ನು ಹೊಗೆಯು ಮುಚ್ಚುವಂತೆಯೂ, ಕೊಳಕು ಕನ್ನಡಿಯ ಪ್ರಕಾಶವನ್ನು ಮುಚ್ಚುವಂತೆಯೂ, ಪರೆಯು ಗರ್ಭವನ್ನು ಮುಚ್ಚುವಂತೆಯೂ ಕಾಮರೂಪವಾದ ವೈರಿಯಿಂದ ಆತ್ಮನ ಪ್ರಕಾಶವು ಮುಚ್ಚಲ್ಪಡುತ್ತದೆ.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥**
(ಭ. ಗೀ. ೩-೩೯)

ಈ ಕಾಮವು ಶುದ್ಧಾತ್ಮನಿಗೆ ಶಾಶ್ವತವಾದ ವೈರಿರೂಪದಲ್ಲಿದೆ. ತೃಪ್ತಿಯನ್ನೇ ಅರಿಯದ ಅಗ್ನಿಯಂತೆ ಕಾಮಾತುರವು ಆತ್ಮನನ್ನು ದಹಿಸಲು ಯತ್ನಿಸುತ್ತದೆ. ಆದುದರಿಂದ ಜ್ಞಾನವು ಈ ಕೊಳೆಯಿಂದ ಆವೃತವಾಗಿದೆ. ಈ ಕಾಮದಿಂದ ಆವೃತರಾದ ಅಜ್ಞಾನಿಗಳು ತಮ್ಮ ಮಾರ್ಗವೇ ಉತ್ತಮವಾದ ಮಾರ್ಗವೆಂದು ಜಲ್ಪಿಸುತ್ತಾರೆ. ಹೇಗೆಂದರೆ—

**ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥**

(ಮುಂಡಕ. ೧-೨-೮)

ಅಜ್ಞಾನರೂಪವಾದ ಕತ್ತಲೆಯಲ್ಲಿ ಮುಳುಗಿದ್ದರೂ ಸಹ ತಾವೇ ಜ್ಞಾನಿಗಳೆಂದು ತಿಳಿದು, ಅವಿವೇಕಿಗಳು ಅನೇಕ ವಿಧವಾದ ಕ್ಲೇಶಗಳಿಗೆ ಭಾಗಿಗಳಾಗುತ್ತಾರೆ. ಅಂಧರು ಇತರ ಅಂಧರಿಗೆ ಮಾರ್ಗದರ್ಶಿಗಳಾದರೆ ಹೇಗೋ ಹಾಗೆ ಇವರೂ ತಮ್ಮ ಅಭಿಮಾನಾಹಂಕಾರಗಳಿಂದ ಇತರರಿಗೂ ಉಪದೇಶವನ್ನೀಯುತ್ತ ಅವರನ್ನೂ ಅಜ್ಞಾನಕೂಪದಲ್ಲಿ ತಳ್ಳುತ್ತಾರೆ.

**ಅವಿದ್ಯಾಯಾಂ ಬಹುಧಾ ವರ್ತಮಾನಾ ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ ।**
**ಯತ್ ಕರ್ಮಿಣೋ ನ ಪ್ರವೇದಯಂತಿ ರಾಗಾತ್ ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥**

(ಮುಂಡಕ. ೧-೨-೯)

ಪರಿಪಕ್ವವಾದ ಜ್ಞಾನವಿಲ್ಲದಿರುವುದರಿಂದ ಇವರು ಅಜ್ಞಾನಿಗಳಾಗಿರುತ್ತಾರೆ. ಆದರೂ ತಮ್ಮ ಅಲ್ಪವಾದುದೂ, ಪರಿಷ್ಕೃತವಾದುದೂ ಆದ ಅಶುದ್ಧವಾದ ಭ್ರಮೆಯಿಂದ ತಾವೇ ಕೃತಾರ್ಥರೆಂಬ ದುರಭಿಮಾನವನ್ನಿಟ್ಟಿರುತ್ತಾರೆ. ಕರ್ಮದಲ್ಲಿ ಅಧಿಕವಾದ ಆಸಂಗವಿದ್ದರೆ ಅದು ಕಾಮರೂಪವಾಗಿಯೇ ಇರುತ್ತದೆ. ಅದರಿಂದ ಅನೇಕ ವಿಧವಾದ ಆತ್ಮಾಭಿಮಾನಕ್ಕೆ ಅವಕಾಶವಿರುತ್ತದೆ. ಅದು ಮೋಕ್ಷಮಾರ್ಗವಾಗುವುದಿಲ್ಲ. ಈಶ್ವರನ ಸಾಕ್ಷಾತ್ಕಾರಕ್ಕೆ ಅವಕಾಶ ವನ್ನು ಕೊಡುವುದಿಲ್ಲ. ಅಂತಹ ಕಾಮಾತುರರು ತಮ್ಮ ಮತ್ತು ಇಳಿದನಂತರ ತತ್ಫಲವಾಗಿ ಪಾತಾಳಲೋಕಕ್ಕೆ ಬೀಳುತ್ತಾರೆ.

**ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ ।**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥**

(ಕಠ. ೧-೨-೬)

ತನ್ನ ಇಂದ್ರಿಯಕ್ಕೆ ಮೀರಿದ ವಸ್ತುವು ಯಾವುದಿದೆಯೋ ಅದು ಈ ಅಜ್ಞಾನಿಗೆ ತಿಳಿಯುವುದಿಲ್ಲ. ಇವನು ತನ್ನ ಪಾರ್ಥಿವವಾದ ಐಶ್ವರ್ಯದಿಂದ ಮತ್ತನಾಗಿದ್ದಾರೆ. ಈ ಲೋಕವು ಮಾತ್ರ ಸತ್ಯ, ಶಾಶ್ವತ, ಇದನ್ನುಳಿದು ಬೇರೆಯಿಲ್ಲ ಈ ರೀತಿಯಾಗಿ ಅಜ್ಞಾನದಿಂದ ಕೂಡಿದ ಅವಿವೇಕಿಯು ಪುನಃ ಪುನಃ ಸಂಸಾರದುಃಖವನ್ನು ಅನುಭವಿಸುತ್ತಾನೆ. ಆದುದರಿಂದ ಅವನಿಗೆ ಈಶ್ವರಸಾಕ್ಷಾತ್ಕಾರವು ಲಭಿಸಲವಕಾಶವಿಲ್ಲ ಇತ್ಯಾದಿಯಾಗಿ ಕಶ್ಮಲದಿಂದ ಆವೃತವಾದ ಬುದ್ಧಿಯುಳ್ಳ ಪುರುಷನ ಸ್ವರೂಪವು ವರ್ಣಿತವಾಗಿದೆ.

ಅಂತಹ ಪುರುಷನು ದುರಭಿಮಾನವೇ ಮುಂತಾದ ಅನೇಕ ದೋಷಗಳಿಂದಲೂ ಕೂಡಿರುತ್ತಾನೆ ಎಂದೂ ಈ ಋಕ್ಕಿನಲ್ಲಿ ವಿವರಿಸಿದೆ. ಈಶ್ವರಜ್ಞಾನವು ಸುಲಭವಲ್ಲ ಎಂಬುದೇ ತಾತ್ಪರ್ಯ. ಅಲ್ಲದೇ, ಕೇವಲ ಕರ್ಮಪರರಾಗಿರು ವುದೂ ಜ್ಞಾನಲಾಭಕ್ಕೆ ಕುಂದನ್ನುಂಟುಮಾಡುತ್ತದೆ ಎಂಬುದೂ ತಾತ್ಪರ್ಯ.

**ಅಸುತೃಪಃ, ಉಕ್ಥಶಾಸಃ ಚರಂತಿ** ಎಂಬ ವಾಕ್ಯದಿಂದ ಈ ತಾತ್ಪರ್ಯವು ನಿರ್ದಿಷ್ಟವಾಗಿದೆ. ಕರ್ಮವು ಕೇವಲ ಭೋಗಸಾಧನವೇ ವಿನಾ ಜ್ಞಾನಸಾಧನವಾಗುವುದಿಲ್ಲ ಎಂದು ತಾತ್ಪರ್ಯ. ಹೇಗೆಂದರೆ—

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥**

(ಭ. ಗೀ. ೨-೪೨)

ಕರ್ಮವು ಕಾಮ್ಯ ಸಂಕಲ್ಪಾತ್ಮಕವಾದುದು. ಈ ಸಂಕಲ್ಪದಲ್ಲಿ ಕೇವಲ ಭೋಗವೇ ಧ್ಯೇಯವಾಗಿರುತ್ತದೆ. ಪ್ರಉಗ, ನಿಷ್ಕೇವಲ್ಯಾದಿಶಸ್ತ್ರಮಂತ್ರಗಳು ಕೇವಲ ಈ ಭೋಗಸಾಧನವಾಗಿರುತ್ತವೆ. ಈ ಫಲಶ್ರುತಿಯ ವಾಕ್ಯಗಳಿಗೆ ಮರುಳಾಗಿ ಅದನ್ನುಳಿದು ಮತ್ತಾವವಿಧವಾದ ಶ್ರೇಯಸ್ಸೂ ಇಲ್ಲವೆಂದು ಹೇಳುವವರು ಅಪಂಡಿತರು. ಅವರ ಸ್ವರೂಪವೇನೆಂದರೆ,

**ಕಾಮಾತ್ಮಾನಃ ಸ್ವರ್ಗಪರಾಃ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥**

(ಭ. ಗೀ. ೨-೪೩)

ಸ್ವರ್ಗಭೋಗವನ್ನೇ ಅಪೇಕ್ಷಿಸುವ ಈ **ವೇದವಾದರತ**ರು ಕೇವಲ ಕಾಮ್ಯಬುದ್ಧಿಯುಳ್ಳವರಾಗಿರುತ್ತಾರೆ. ಮತ್ತು ಭೋಗಕ್ಕೆ ಮನಸೋತು ಅದರಲ್ಲೇ ನೆಟ್ಟಮನಸ್ಸುಳ್ಳವರಾಗಿರುತ್ತಾರೆ. ಆದರೆ, ಯಜ್ಞಫಲವಾದ ಸ್ವರ್ಗಭೋಗವು ಶಾಶ್ವತವಾದುದಲ್ಲವೆಂದು ಅವರಿಗೆ ತಿಳಿಯದು. ಭೋಗಕಾಲವು ಕಳೆದನಂತರ ಪುನಃ ಜನನಮರಣಾದಿಗಳಿಗೆ ಸಿಕ್ಕುವರೆಂಬ ಅರಿವೂ ಇರುವುದಿಲ್ಲ.

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥**

(ಭ. ಗೀ. ೨-೪೪)

ಏಕೆಂದರೆ, ಈ ಬುದ್ಧಿಯು ವ್ಯವಸಾಯಾತ್ಮಿಕವಾದುದು. ಭೋಗಪರವಾದ ಗುಣಿತ, ಕಾರ್ಯಾಕಾರ್ಯಗಳ ಲೆಕ್ಕಾಚಾರ ಈ ರೀತಿ ಬಾಹ್ಯವಾದ ವ್ಯವಹಾರಗಳಲ್ಲೇ ನಿರತರಾಗಿರುವುದರಿಂದ ಅವರು ಸಮಾಧಿಸ್ಥರಾಗಲಾರರು, ಎಂದರೆ ಏಕಾಗ್ರತೆಯನ್ನು ಹೊಂದಿ ಸ್ಥಿರಚಿತ್ತರಾಗಲಾರರು. ಇದನ್ನೇ ಸಾಯಣರು ಪ್ರಕೃತವಾದ ಋಕ್ಕನ್ನು ವಿವರಿಸುವಾಗ **ಉದರಂಭರಾಃ । ನ ತು ಪಾರಮೇಶ್ವರಂ ತತ್ತ್ವಂ ವಿಚಾರಿತವಂತಃ** ಕೇವಲ ಭೋಗಪರರು. ಈಶ್ವರತತ್ತ್ವವನ್ನು ವಿಚಾರಮಾಡಲರಿಯದ ಮೂಢರು ಎಂದು ತಿಳಿಸಿದ್ದಾರೆ. ಈ ಅಭಿಪ್ರಾಯವು ಉಪನಿಷತ್ತುಗಳಲ್ಲಿಯೂ ಈ ರೀತಿ ತಿಳಿಸಿರುತ್ತದೆ. ಉದಾಹರಣೆಗೆ—

**ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।**
**ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವೇಮಂ ಲೋಕಂ ಹೀನತರಂ ವಾ ವಿಶಂತಿ ॥**

(ಮುಂಡಕ. ೧-೨-೧೦)

ಕಾಮ್ಯವಾದಿಗಳೂ, ಭೋಗಪರರೂ ಆದ ಈ ಸ್ವಾರ್ಥಿಗಳು ಇಷ್ಟಾಪೂರ್ತ್ಯಾದಿ ಕರ್ಮಗಳೇ ಅಧಿಕವೆಂದೂ, ಉಳಿದ ಯಾವುದೂ ಶ್ರೇಯಸ್ಕರವಲ್ಲವೆಂದೂ ನಂಬುತ್ತಾರೆ. ಈ ಮೂಢರು ತಮ್ಮ ಕರ್ಮಫಲವಾದ ಸ್ವರ್ಗಭೋಗವನ್ನು ಅನುಭವಿಸಿ ಆ ಕರ್ಮವನ್ನು ಸವೆಸಿ ಅನಂತರ ಈ ಲೋಕಕ್ಕೆ ಪುನಃ ಹಿಂತಿರುಗಿ ದುಃಖಭಾಗಿಗಳಾಗುತ್ತಾರೆ. ಪರತತ್ತ್ವದ ಜ್ಞಾನಸಂಪಾದನೆಯಿಲ್ಲದೆ ಕೇವಲ ಕರ್ಮದಲ್ಲೇ ಮುಳುಗಿದ ಜನರಿಗೆ ದುಃಖವು ತಪ್ಪಿದ್ದಲ್ಲ ಎಂಬುದೇ ಅಭಿಪ್ರಾಯ. ಇದೇ ಅಭಿಪ್ರಾಯವನ್ನೇ ಅನೇಕಕಡೆಗಳಲ್ಲಿ ಒತ್ತಿಒತ್ತಿ ಹೇಳಿರುತ್ತದೆ.

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥**
(ಭ. ಗೀ. ೯–೨೦)

ಸೋಮಪಾನಮಾಡುವ ಸೋಮಯಾಜಿಗಳೂ, ಋಕ್, ಯಜುಸ್, ಸಾಮ, ಹೀಗೆ ವೇದತ್ರಯೋಕ್ತಕರ್ಮಮಾಡುವವರೂ ಯಜ್ಞದಿಂದ ನನ್ನನ್ನು ಪೂಜಿಸಿ ಸ್ವರ್ಗಪ್ರಾಪ್ತಿಯನ್ನು ಇಚ್ಛಿಸುತ್ತಾರೆ. ಅವರು ಪುಣ್ಯತಮವಾದ ಸುರೇಂದ್ರಲೋಕಕ್ಕೆ ಹೋಗಿ ಅಲ್ಲಿ ದಿವ್ಯವಾದ ದೇವತಾಭೋಗಗಳನ್ನು ಉಪಭೋಗಿಸುತ್ತಾರೆ.

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥** (ಭ. ಗೀ. ೯-೨೧)

ಆ ವಿಶಾಲವಾದ ಸ್ವರ್ಗಭೋಗವನ್ನು ಪಡೆದು ಪುಣ್ಯದ ಕ್ಷಯವಾದ ಬಳಿಕ ಪುನಃ ಜನ್ಮವನ್ನು ಹೊಂದಿ ಮರ್ತ್ಯಲೋಕಕ್ಕೆ ಬರುತ್ತಾರೆ. ಹೀಗೆ ಕೇವಲ ಯಜ್ಞಯಾಗಾದಿಗಳನ್ನೇ ಮಾಡುತ್ತ ಕಾಮ್ಯವಸ್ತುಗಳ ಇಚ್ಛೆಮಾಡುವವರಿಗೂ ಅವರಿಗೆ ಈಶ್ವರಜ್ಞಾನವಿಲ್ಲ. **ಅತಃ ವಿಶ್ವಕರ್ಮಾಣಂ ದೇವಂ ನ ಜಾನಂತಿ** । ವಿಶ್ವಕರ್ಮರೂಪನಾದ ಪರತತ್ತ್ವಜ್ಞಾನವು ಅವರಿಗೆ ಸಾಧ್ಯವಿಲ್ಲವೆಂಬ ಅಭಿಪ್ರಾಯವು ಈ ಋಕ್ಕಿನಲ್ಲಿರುತ್ತದೆಂದು ಸಾಯಣರು ವಿವರಿಸಿದ್ದಾರೆ. ಕರ್ಮಕ್ಕಿಂತಲೂ ಜ್ಞಾನವು ಅಧಿಕವೆಂದು ತಾತ್ಪರ್ಯ.

ಋಗ್ವೇದಸಂಹಿತೆಯಲ್ಲಿ ಹತ್ತನೆಯ ಮಂಡಲದ ೮೧ ಮತ್ತು ೮೨ ನೆಯ ಸೂಕ್ತಗಳು ವಿಶ್ವಕರ್ಮಸೂಕ್ತಗಳೆಂದು ಪ್ರಸಿದ್ಧವಾಗಿವೆ. ಈ ಸೂಕ್ತಗಳೇ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಪಠಿತವಾಗಿರುವುದನ್ನು ಇಲ್ಲಿ ಬರೆದಿದೇವೆ. ಈ ಮಂತ್ರಗಳಲ್ಲಿ ಅಲ್ಲಲ್ಲಿ ಕೆಲವು ಶಬ್ದಗಳೂ, ಮಂತ್ರಕ್ರಮಗಳೂ ವ್ಯತ್ಯಸ್ತವಾಗಿದ್ದರೂ ಅರ್ಥವಿವರಣೆಯಲ್ಲಿ ಏನೂ ಹೆಚ್ಚು ವ್ಯತ್ಯಾಸವಿಲ್ಲದ್ದರಿಂದ ಸಂಹಿತೆಯಲ್ಲಿರುವಂತೆ ಮಂತ್ರಗಳನ್ನು ಮಾತ್ರ ಉದಾಹರಿಸಲಾಗಿದೆ. ಅರ್ಥವಿವರಣೆ ನಾವು ಇದುವರೆಗೆ ಮಾಡಿದಂತೆಯೇ ಇರುವುದರಿಂದ ಪುನಃ ಅದನ್ನು ವಿವರಿಸುವ ಅವಶ್ಯಕತೆ ಇಲ್ಲ.

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನಿಷಸಾದಾ ಪಿತಾ ನಃ ।**
**ಸ ಆಶಿಷಾ ದ್ರವಿಣಮಿಚ್ಛಮಾನಃ ಪರಮಚ್ಛದೋ ವರ ಆ ವಿವೇಶ** ॥ ೧ ॥
**ವಿಶ್ವಕರ್ಮಾ ಮನಸಾ ಯದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ ।**
**ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರ ಸಪ್ತರ್ಷೀನ್ ಪರ ಏಕಮಾಹುಃ** ॥ ೨ ॥
**ಯೋ ನಃ ಪಿತಾ ಜನಿತಾ ಯೋ ವಿಧಾತಾ ಯೋ ನಃ ಸತೋ ಅಭ್ಯಾಸಜ್ಜಜಾನ ।**
**ಯೋ ದೇವಾನಾಂ ನಾಮಧಾ ಏಕ ಏವ ತಗ್ಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ** ॥ ೩ ॥
**ತ ಆ ಯಜಂತ ದ್ರವಿಣಗ್ಂ ಸಮಸ್ಮಾ ಋಷಯಃ ಪೂರ್ವೇ ಜರಿತಾರೋ ನ ಭೂನಾ ।**
**ಅಸೂರ್ತಾ ಸೂರ್ತಾ ರಜಸೋ ವಿಮಾನೇ ಯೇ ಭೂತಾನಿ ಸಮಕೃಣ್ವನ್ನಿಮಾನಿ** ॥ ೪ ॥
**ನ ತಂ ವಿದಾಥ ಯ ಇದಂ ಜಜಾನಾನ್ಯದ್ಯುಷ್ಮಾಕಮಂತರಂ ಭವಾತಿ ।**
**ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ** ॥ ೫ ॥

ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಗುಹಾ ಯತ್ ।
ಕಗ್ ಸ್ವಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಗಚ್ಛಂತ ವಿಶ್ವೇ || ೬ ||
ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಗಚ್ಛಂತ ವಿಶ್ವೇ ।
ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ನಿದಂ ವಿಶ್ವಂ ಭುವನಮಧಿ ಶ್ರಿತಂ || ೭ ||
ವಿಶ್ವಕರ್ಮಾ ಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ ।
ತೃತೀಯಃ ಪಿತಾ ಜನಿತೌಷಧೀನಾಮಪಾಂ ಗರ್ಭಂ ವ್ಯದಧಾತ್ಪುರುತ್ರಾ || ೮ ||
ಚಕ್ಷುಷಃ ಪಿತಾ ಮನಸಾ ಹಿ ಧೀರೋ ಘೃತಮೇನೇ ಅಜನನ್ನನ್ನಮಾನೇ ।
ಯದೇದಂತಾ ಅದದೃಗ್ಂಹಂತ ಪೂರ್ವ ಆದಿದ್ದ್ಯಾವಾಪೃಥಿವೀ ಅಪ್ರಥೇತಾಂ || ೯ ||
ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್ ।
ಸಂ ಬಾಹುಭ್ಯಾಂ ನಮತಿ ಸಂಪತತ್ರೈರ್ದ್ಯಾವಾಪೃಥಿವೀ ಜನಯನ್ದೇವ ಏಕಃ || ೧೦ ||
ಕಿಗ್ಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ ಕಿಮಾಸೀತ್ ।
ಯದೀ ಭೂಮಿಂ ಜನಯನ್ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ || ೧೧ ||
ಕಿಗ್ಂ ಸ್ವಿದ್ವನಂ ಕ ಉ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟಚಕ್ಷುಃ ।
ಮನೀಷಿಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ || ೧೨ ||
ಯಾ ತೇ ಧಾಮಾನಿ ಪರಮಾಣಿ ಯಾವಮಾ ಯಾ ಮಧ್ಯಮಾ ವಿಶ್ವಕರ್ಮನ್ನುತೇಮಾ ।
ಶಿಕ್ಷಾ ಸಖಿಭ್ಯೋ ಹವಿಷಿ ಸ್ವಧಾವಃ ಸ್ವಯಂ ಯಜಸ್ವ ತನುವಂ ಜುಷಾಣಃ || ೧೩ ||
ವಾಚಸ್ಪತಿಂ ವಿಶ್ವಕರ್ಮಾಣಮೂತಯೇ ಮನೋಯುಜಂ ವಾಜೇ ಅದ್ಯಾ ಹುವೇಮ ।
ಸ ನೋ ನೇದಿಷ್ಠಾ ಹವನಾನಿ ಜೋಷತೇ ವಿಶ್ವಶಂಭೂರವಸೇ ಸಾಧುಕರ್ಮಾ || ೧೪ ||
ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ತನುವಂ ಜುಷಾಣಃ ।
ಮುಹ್ಯಂತ್ವನ್ಯೇ ಅಭಿತಃ ಸಪತ್ನಾ ಇಹಾಸ್ಮಾಕಂ ಮಘವಾ ಸೂರಿರಸ್ತು || ೧೫ ||
ವಿಶ್ವಕರ್ಮನ್ ಹವಿಷಾ ವರ್ಧನೇನ ತ್ರಾತಾರಮಿಂದ್ರಮಕೃಣೋರವಧ್ಯಂ ।
ತಸ್ಮೈ ವಿಶಃ ಸಮನಮಂತ ಪೂರ್ವೀರಯಮುಗ್ರೋವಿಹವ್ಯೋ ಯಥಾಸತ್ || ೧೬ ||
ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ ।
ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಹಾಮರ್ತ್ಯಗ್ಂ ಹವಿಃ ||

(ತೈ. ಸಂ. ೪-೬-೨-೧, ೨, ೩, ೪, ೫, ೬)

ಋಗ್ವೇದದಲ್ಲಿರುವ ಎರಡು ವಿಶ್ವಕರ್ಮಪರವಾದ ಸೂಕ್ತಗಳಲ್ಲಿ ಒಟ್ಟು ೧೪ ಋಕ್ಕುಗಳಿವೆ. ಆದರೆ ಇಲ್ಲಿ ೧೭ ಮಂತ್ರಗಳಿವೆ. ಎಂದರೆ **ವಿಶ್ವಕರ್ಮಾ ಹ್ಯಜನಿಷ್ಟದೇವಃ** ಎಂಬ ೮ ನೆಯ ಮಂತ್ರವೂ, **ವಿಶ್ವಕರ್ಮನ್ ಹವಿಷಾ-ವರ್ಧನೇನ** ಎಂಬ ೧೬ ನೆಯ ಮಂತ್ರವೂ, **ಸಮುದ್ರಾಯ ವಯುನಾಯ** ಎಂಬ ೧೭ ನೆಯ ಮಂತ್ರವೂ ಒಟ್ಟು ಮೂರು ಮಂತ್ರಗಳು ಋಗ್ವೇದದಲ್ಲಿರುವುದಕ್ಕಿಂತ ಇಲ್ಲಿ ಹೆಚ್ಚಾಗಿ ಸೇರಿವೆ.



# ಎಂಭತ್ತಮೂರನೆಯ ಸೂಕ್ತವು.

## ಪೀಠಿಕೆ.

ಈ ಸೂಕ್ತಕ್ಕೂ, ಮುಂದಿನ ಸೂಕ್ತಕ್ಕೂ **ಮನ್ಯುಃ** ಎಂದರೆ ಕ್ರೋಧಾಭಿಮಾನಿಯಾದ ದೇವನು ದೇವತೆಯು. ಮನಸ್ಸಿನಲ್ಲಿ ಉತ್ಪನ್ನವಾಗುವ ಕೆಲವು ಭಾವನೆಗಳನ್ನೇ ದೇವತೆಗಳೆಂದು ಭಾವಿಸಿ ಅವುಗಳನ್ನು ಋಷಿಗಳು ಸ್ತೋತ್ರ ಮಾಡಿರುವ ಸಂದರ್ಭಗಳು ಕೆಲವಿವೆ. ಅವುಗಳಲ್ಲಿ ಮನ್ಯು (ಕ್ರೋಧ, ಕೋಪ) ವೂ ಒಂದು. ಇದರಂತೆ ಶ್ರದ್ಧಾ, ದಾನ, ತಪಸ್ಸು (ಧ್ಯಾನ), ಮೇಧಾ, ಪ್ರಜ್ಞಾ, ಕಾಮ, ಸತ್ಯ, ದಮ, ಶಮ, ಧರ್ಮ, ಯಜ್ಞ, ಮನಸ್ಸು, ಸಂವತ್ಸರ ಅಥವಾ ಕಾಲ, ಶಾಂತಿ, ಆನಂದ ಇತ್ಯಾದಿಗಳೂ ಭಾವನಾದೇವತೆಗಳೆಂದು ಪರಿಗಣಿಸಲ್ಪಟ್ಟಿವೆ,

ಪ್ರಕೃತ ಸೂಕ್ತದಲ್ಲಿ ಮತ್ತು ಮುಂದಿನ ಸೂಕ್ತದಲ್ಲಿ ಮನ್ಯು ಎಂಬ ಕ್ರೋಧಾಭಿಮಾನಿದೇವತೆಯನ್ನು ಮಾತ್ರ, ಸ್ತುತಿಸಲಾಗಿದೆ. ಯಜುರ್ವೇದದ ತೈತ್ತಿರೀಯ ಉಪನಿಷತ್ತಿನಲ್ಲಿಯೂ ಈ ದೇವತಾಕವಾದ ಒಂದು ಅನುವಾಕವಿದೆ—

> **ಮನ್ಯುರಕಾರ್ಷೀನ್ನಮೋ ನಮಃ । ಮನ್ಯುರಕಾರ್ಷೀನ್ಮನ್ಯುಃ ಕರೋತಿ ನಾಹಂ ಕರೋಮಿ ಮನ್ಯುಃ ಕರ್ತಾ ನಾಹಂ ಕರ್ತಾ ಮನ್ಯುಃ ಕಾರಯಿತಾ ನಾಹಂ ಕಾರಯಿತಾ ಏಷ ತೇ ಮನ್ಯೋ ಮನ್ಯವೇ ಸ್ವಾಹಾ ॥**
>
> (ತೈ. ಉ. ೪-೬೨)

ಎಲೈ ಮನ್ಯುವೆಂಬ ಕ್ರೋಧಾಭಿಮಾನಿದೇವನೇ, ಇಗೋ ನಿನಗೆ ನಮಸ್ಕಾರವು. ಈ ಪ್ರಪಂಚದಲ್ಲಿ ಎಲ್ಲಾ ಕಾರ್ಯಗಳನ್ನೂ ನೀನೇ ಮಾಡುತ್ತೀಯೆ. ನಾನು ಮಾಡುವುದಿಲ್ಲ. ಯಾವ ಕೆಲಸವನ್ನು ಮಾಡಬೇಕಾದರೂ ಅದಕ್ಕೆ ನೀನೇ ಕರ್ತೃವು ಮತ್ತು ಪ್ರೇರಕನು, ನಾನಲ್ಲ. ಇಂತಹ ಮಹಾಮಹಿಮನಾದ ನಿನಗೆ ಈ ಹವಿಸ್ಸನ್ನರ್ಪಿಸುವೆನು ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು.

ಶ್ರದ್ಧಾ ಮೊದಲಾದ ಇತರ ಭಾವನಾದೇವತೆಗಳ ವಿಷಯದಲ್ಲಿಯೂ ಕೆಲವು ಮಂತ್ರಗಳ ಉದಾಹರಣೆಗಳನ್ನು ಕೊಡುತ್ತೇವೆ. ಶ್ರದ್ಧಾದೇವತೆಯ ವಿಷಯವಾಗಿ ಋಗ್ವೇದದಲ್ಲಿ—

**ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।**
**ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ** ॥ ೧ ॥

**ಪ್ರಿಯಂ ಶ್ರದ್ಧೇ ದದತಃ ಪ್ರಿಯಂ ಶ್ರದ್ಧೇ ದಿದಾಸತಃ ।**
**ಪ್ರಿಯಂ ಭೋಜೇಷು ಯಜ್ವಸ್ವಿದಂ ಮ ಉದಿತಂ ಕೃಧಿ** ॥ ೨ ॥

**ಯಥಾ ದೇವಾ ಅಸುರೇಷು ಶ್ರದ್ಧಾಮುಗ್ರೇಷು ಚಕ್ರಿರೇ ।**
**ಏವಂ ಭೋಜೇಷು ಯಜ್ವಸ್ವಸ್ಮಾಕಮುದಿತಂ ಕೃಧಿ** ॥ ೩ ॥

**ಶ್ರದ್ಧಾಂ ದೇವಾ ಯಜಮಾನಾ ವಾಯುಗೋಪಾ ಉಪಾಸತೇ ।**
**ಶ್ರದ್ಧಾಂ ಹೃದಯ್ಯ೧ ಯಾಕೂತ್ಯಾ ಶ್ರದ್ಧಯಾ ವಿಂದತೇ ವಸು** ॥ ೪ ॥

ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ ।
ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ ॥ ೫ ॥

(ಋ. ಸಂ. ೧೦-೧೫೧-೧ ರಿಂದ ೫)

ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ ।
.......................................ಅಮೃತಾಪಿಧಾನಮಸಿ ॥

(ತೈ. ಉ. ೪-೬೯)

ಶ್ರದ್ಧಾಯಾಂ ಪ್ರಾಣೇ ನಿವಿಶ್ಯಾಮೃತಗ್‌ಂ ಹುತಂ........... ।
ಸಮಾನಮನ್ನೇನಾಪ್ಯಾಯಸ್ವ................................. ॥

(ತೈ. ಉ. ೪-೭೦)

ಇತ್ಯಾದಿ ಮಂತ್ರಗಳಲ್ಲಿ ಶ್ರದ್ಧಾದೇವತೆಯ ವಿಷಯವಾದ ಪ್ರಶಂಸೆ ಇದೆ. ಕಾಮವಿಚಾರವಾಗಿ—

ಕಾಮೋಽಕಾರ್ಷೀನ್ನಮೋ ನಮಃ । ಕಾಮೋಽಕಾರ್ಷೀತ್ಕಾಮಃ ಕರೋತಿ ನಾಹಂ ಕರೋಮಿ ಕಾಮಃ ಕರ್ತಾ ನಾಹಂ ಕರ್ತಾ ಕಾಮಃ ಕಾರಯಿತಾ ನಾಹಂ ಕಾರಯಿತಾ ಏಷ ತೇ ಕಾಮ ಕಾಮಾಯ ಸ್ವಾಹಾ ॥

(ತೈ. ಉ. ೪-೬೧)

ಕ ಇದಂ ಕಸ್ಮಾ ಅದಾತ್ । ಕಾಮಃ ಕಾಮಾಯ । ಕಾಮೋ ದಾತಾ । ಕಾಮಃ ಪ್ರತಿಗ್ರಹೀತಾ । ಕಾಮಗ್‌ಂ ಸಮುದ್ರಮಾವಿಶ । ಕಾಮೇನ ತ್ವಾ ಪ್ರತಿಗೃಹ್ಣಾಮಿ । ಕಾಮೈತತ್ತೇ । ಏಷಾ ತೇ ಕಾಮ ದಕ್ಷಿಣಾ । ಉತ್ತಾನಸ್ತ್ವಾಂಗೀರಸಃ ಪ್ರತಿಗೃಹ್ಣಾತು ॥

(ತೈ. ಉ. ೩-೧೦-೧, ೨)

ಮೇಧಾ—

ಮೇಧಾ ದೇವೀ ಜುಷಮಾಣಾನ ಆಗಾದ್ವಿಶ್ವಾಚೀ ಭದ್ರಾ ಸುಮನಸ್ಯಮಾನಾ ।
ತ್ವಯಾ ಜುಷ್ಟಾನುದಮಾನಾದುರುಕ್ತಾನ್ಬೃಹದ್ವದೇಮ ವಿದಥೇ ಸುವೀರಾಃ ॥
ತ್ವಯಾ ಜುಷ್ಟಋಷಿರ್ಭವತಿ ದೇವಿ ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ ।
ತ್ವಯಾ ಜುಷ್ಟಶ್ಚಿತ್ರಂ ವಿಂದತೇ ವಸು ಸಾನೋ ಜುಷಸ್ವ ದ್ರವಿಣೋ ನ ಮೇಧೇ ॥

(ತೈ. ಉ. ೪-೪೧-೧, ೨)

ಮೇಧಾಂ ಮ ಇಂದ್ರೋ ದದಾತು ಮೇಧಾಂ ದೇವೀ ಸರಸ್ವತೀ ।
ಮೇಧಾಂ ಮೇ ಅಶ್ವಿನಾವುಭಾವಾಧತ್ತಾಂ ಪುಷ್ಕರಸ್ರಜಾ ।
ಅಪ್ಸರಾಸು ಚ ಯಾ ಮೇಧಾ ಗಂಧರ್ವೇಷು ಚ ಯನ್ಮನಃ ।
ದೈವೀಂ ಮೇಧಾ ಸರಸ್ವತೀ ಸಾ ಮಾಂ ಮೇಧಾ ಸುರಭಿರ್ಜುಷತಾಗ್ ಸ್ವಾಹಾ ॥

(ತೈ. ಉ. ೪-೪೨-೧, ೨)

ಆಮಾಂ ಮೇಧಾ ಸುರಭಿರ್ವಿಶ್ವರೂಪಾ ಹಿರಣ್ಯವರ್ಣಾ ಜಗತೀ ಜಗಮ್ಯಾ ।
ಊರ್ಜಸ್ವತೀ ಪಯಸಾ ಪಿನ್ವಮಾನಾ ಸಾಮಾಂ ಮೇಧಾ ಸುಪ್ರತೀಕಾ ಜುಷಂತಾಂ ॥

(ತೈ. ಉ. ೪-೪೩-೧)

ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ
ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯಿ
ಸೂರ್ಯೋ ಭ್ರಾಜೋ ದಧಾತು ॥

(ತೈ. ಉ. ೪-೪೪-೧)

ಪ್ರಜ್ಞಾ ಅಥವಾ ಜ್ಞಾನ—

ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।
ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥ ೧ ॥

ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥ ೨ ॥

ಯಜ್ಞೇನ ವಾಚಃ ಪದವೀಯಮಾಯನ್ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ।
ತಾಮಾ ಭೃತ್ಯಾ ವ್ಯದಧುಃ ಪುರುತ್ರಾ ತಾಂ ಸಪ್ತ ರೇಭಾ ಅಭಿ ಸಂ ನವಂತೇ ॥ ೩ ॥

ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ ।
ಉತೋ ತ್ವಸ್ಮೈ ತನ್ವಂ೧ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥ ೪ ॥

ಉತ ತ್ವಂ ಸಖ್ಯೇ ಸ್ಥಿತಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು ।
ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾಁ ಅಫಲಾಮಪುಷ್ಪಾಂ ॥ ೫ ॥

ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ।
ಯದೀಂ ಶೃಣೋತ್ಯಲಕಂ ಶೃಣೋತಿ ನಹಿ ಪ್ರವೇದ ಸುಕೃತಸ್ಯ ಪಂಥಾಂ ॥ ೬ ॥

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥ ೭ ॥

ಹೃದಾ ತಷ್ಟೇಷು ಮನಸೋ ಜವೇಷು ಯದ್ಬ್ರಾಹ್ಮಣಾಃ ಸಂಯಜಂತೇ ಸಖಾಯಃ ।
ಅತ್ರಾಹ ತ್ವಂ ವಿ ಜಹುರ್ವೇದ್ಯಾಭಿರೋಹಬ್ರಹ್ಮಾಣೋ ವಿ ಚರಂತ್ಯು ತ್ವೇ ॥ ೮ ॥

ಇಮೇ ಯೇ ನಾರ್ವಾಙ್ನ ಪರಶ್ಚರಂತಿ ನ ಬ್ರಾಹ್ಮಣಾಸೋ ನ ಸುತೇಕರಾಸಃ ।
ತ ಏತೇ ವಾಚಮಭಿಪದ್ಯ ಪಾಪಯಾ ಸಿರೀಸ್ತಂತ್ರಂ ತನ್ವತೇ ಅಪ್ರಜಜ್ಞಯಃ ॥ ೯ ॥

ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ ।
ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ॥ ೧೦ ॥

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ ॥ ೧೧ ॥

(ಋ. ಸಂ. ೧೦-೭೧-೧ ರಿಂದ ೧೧)

ಸತ್ಯಂ—

ಸತ್ಯೇನ ವಾಯುರಾವಾತಿ ಸತ್ಯೇನಾದಿತ್ಯೋ ರೋಚತೇ ದಿವಿ ಸತ್ಯಂ ವಾಚಃ ಪ್ರತಿಷ್ಠಾ ಸತ್ಯೇ ಸರ್ವಂ ಪ್ರತಿಷ್ಠಿತಂ ತಸ್ಮಾತ್ಸತ್ಯಂ ಪರಮಂ ವದಂತಿ ॥

(ತ್ರೈ. ಉ. ೪-೭೯)

ತಪಃ—

ತಪಸಾ ದೇವಾ ದೇವತಾಮಗ್ರ ಆಯನ್ತಪಸರ್ಷಯಃ ಸುವರನ್ವವಿಂದನ್ತಪಸಾ ಸಪತ್ನಾನ್ಪ್ರಣು-ದಾಮಾರಾತೀಸ್ತಪಸಿ ಸರ್ವಂ ಪ್ರತಿಷ್ಠಿತಂ ತಸ್ಮಾತ್ತಪಃ ಪರಮಂ ವದಂತಿ ॥

(ತ್ರೈ. ಉ. ೪-೭೯)

ದಮ—

ದಮೇನ ದಾನ್ತಾಃ ಕಿಲ್ಬಿಷಮವಧೂನ್ವಂತಿ ದಮೇನ ಬ್ರಹ್ಮಚಾರಿಣಃ ಸುವರಗಚ್ಛನ್ದಮೋ ಭೂತಾನಾಂ ದುರಾಧರ್ಷಂ ದಮೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಮಃ ಪರಮಂ ವದಂತಿ ॥

(ತ್ರೈ. ಉ. ೪-೭೯)

ಶಮ—

ಶಮೇನ ಶಾಂತಾಃ ಶಿವಮಾಚರಂತಿ ಶಮೇನ ನಾಕಂ ಮುನಯೋಽನ್ವವಿಂದಞ್ಛಮೋ ಭೂತಾನಾಂ ದುರಾಧರ್ಷಞ್ಛಮೇ ಸರ್ವಂ ಪ್ರತಿಷ್ಠಿತಂ ತಸ್ಮಾಚ್ಛಮಃ ಪರಮಂ ವದಂತಿ ॥

(ತ್ರೈ. ಉ. ೪ ೭೯)

ದಾನ—

ದಾನಂ ಯಜ್ಞಾನಾಂ ವರೂಥಂ ದಕ್ಷಿಣಾ ಲೋಕೇ ದಾತಾರಗ್ಂ ಸರ್ವಭೂತಾನ್ಯುಪಜೀವಂತಿ ದಾನೇನಾರಾತೀರಪಾನುದಂತ ದಾನೇನ ದ್ವಿಷಂತೋ ಮಿತ್ರಾ ಭವಂತಿ ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ ಪರಮಂ ವದಂತಿ ॥

(ತ್ರೈ, ೪ ೭೯)

ಧರ್ಮ—

ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ ಲೋಕೇ ಧರ್ಮಿಷ್ಠಂ ಪ್ರಜಾ ಉಪಸರ್ಪಂತಿ ಧರ್ಮೇಣ ಪಾಪಮಪನುದತಿ ಧರ್ಮೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ಧರ್ಮಂ ಪರಮಂ ವದಂತಿ ॥

(ತ್ರೈ. ಉ. ೪-೭೯)

ಯಜ್ಞ—

ಯಜ್ಞ ಇತಿ ಯಜ್ಞೇನ ಹಿ ದೇವಾ ದಿವಂ ಗತಾ ಯಜ್ಞೇನಾಸುರಾನಪಾನುದಂತ ಯಜ್ಞೇನ ದ್ವಿಷಂತೋ ಮಿತ್ರಾ ಭವಂತಿ ಯಜ್ಞೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ಯಜ್ಞಂ ಪರಮಂ ವದಂತಿ ॥

(ತ್ರೈ, ಉ. ೪-೭೯)

ಮನಸ್ಸು—

ಮಾನಸಂ ವೈ ಪ್ರಾಜಾಪತ್ಯಂ ಪವಿತ್ರಂ ಮಾನಸೇನ ಮನಸಾ ಸಾಧು ಪಶ್ಯತಿ ಮನಸಾ ಋಷಯಃ ಪ್ರಜಾ ಅಸೃಜಂತ ಮಾನಸೇ ಸರ್ವಂ ಪ್ರತಿಷ್ಠಿತಂ ತಸ್ಮಾನ್ಮಾನಸಂ ಪರಮಂ ವದಂತಿ ॥

(ತೈ ಉ. ೪–೭೮)

ಸಂವತ್ಸರ ಅಥವಾ ಕಾಲ—

ಸ್ವಯಂಭುಪ್ರಜಾಪತಿಃ ಸಂವತ್ಸರ ಇತಿ ಸಂವತ್ಸರೋಽಸಾವಾದಿತ್ಯೋ ಯ ಏಷ ಆದಿತ್ಯೇ ಪುರುಷಃ ಸ ಪರಮೇಷ್ಠೀ ಬ್ರಹ್ಮಾತ್ಮಾ ॥

(ತೈ. ಉ. ೪-೭೮)

ದಕ್ಷಿಣಾ—

ದಕ್ಷಿಣಾಶ್ವಂ ದಕ್ಷಿಣಾ ಗಾಂ ದದಾತಿ ದಕ್ಷಿಣಾ ಚಂದ್ರಮುತ ಯದ್ಧಿರಣ್ಯಂ ।
ದಕ್ಷಿಣಾನ್ನಂ ವನುತೇ ಯೋ ನ ಆತ್ಮಾ ದಕ್ಷಿಣಾಂ ವರ್ಮ ಕೃಣುತೇ ವಿಜಾನನ್ ॥

(ಋ. ಸಂ. ೧೦–೧೦೭–೭)

ಆನಂದ—

ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ।
ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿಸಂವಿಶಂತಿ ॥

(ತೈ. ಉ. ೩–೬)

ಶಾಂತಿಃ—

ಪೃಥಿವೀ ಶಾಂತಾ ಸಾಗ್ನಿನಾ ಶಾಂತಾ ಸಾ ಮೇ ಶಾಂತಾ ಶುಚಗ್ಂ ಶಮಯತು । ಅಂತರಿಕ್ಷಗ್ಂ ಶಾಂತಂ ತದ್ವಾಯುನಾ ಶಾಂತಂ ತನ್ಮೇ ಶಾಂತಗ್ಂ ಶುಚಗ್ಂ ಶಮಯತು । ದ್ಯೌಃ ಶಾಂತಾ ಸಾದಿತ್ಯೇನ ಶಾಂತಾ ಸಾ ಮೇ ಶಾಂತಾ ಶುಚಗ್ಂ ಶಮಯತು । ಪೃಥಿವೀ ಶಾಂತಿರಂತ. ರಿಕ್ಷಗ್ಂ ಶಾಂತಿರ್ದ್ಯೌಃ ಶಾಂತಿರ್ದಿಶಃ ಶಾಂತಿರವಾಂತರದಿಶಾಃ ಶಾಂತಿರಗ್ನಿಃ ಶಾಂತಿರ್ವಾಯುಃ ಶಾಂತಿರಾದಿತ್ಯಃ ಶಾಂತಿಶ್ಚಂದ್ರಮಾಃ ಶಾಂತಿರ್ನಕ್ಷತ್ರಾಣಿ ಶಾಂತಿರಾಪಃ ಶಾಂತಿರೋಷಧಯಃ ಶಾಂತಿರ್ವನಸ್ಪತಯಃ ಶಾಂತಿರ್ಗೌಃ ಶಾಂತಿರಜಾ ಶಾಂತಿರಶ್ವಃ ಶಾಂತಿಃಪುರುಷಃ ಶಾಂತಿರ್ಬ್ರಹ್ಮ ಶಾಂತಿರ್ಬ್ರಾಹ್ಮಣಃ ಶಾಂತಿಃ ಶಾಂತಿರೇವ ಶಾಂತಿಃ ಶಾಂತಿರ್ಮೇ ಅಸ್ತು ಶಾಂತಿಃ । ತಯಾ- ಹಗ್ಂ ಶಾಂತ್ಯಾ ಸರ್ವಶಾಂತ್ಯಾ ಮಹ್ಯಂ ದ್ವಿಪದೇ ಚತುಷ್ಪದೇ ಚ ಶಾಂತಿಂ ಕರೋಮಿ ಶಾಂತಿರ್ಮೇ ಅಸ್ತು ಶಾಂತಿಃ ॥

(ತೈ. ಆ. ೪-೪೨)

ಇತ್ಯಾದ್ಯನೇಕ ಉದಾಹರಣೆಗಳನ್ನು ಕೊಡಬಹುದು.

ಪ್ರಕೃತಸೂಕ್ತಗಳ ದೇವತೆಯಾದ ಮನ್ಯುದೇವತೆಯ ವಿಷಯದಲ್ಲಿ ಕೆಲವು ವಿಷಯಗಳನ್ನು ಇಲ್ಲಿ ತಿಳಿಸುವುದು ಆವಶ್ಯಕವಾಗಿದೆ. ಮನ್ಯುವೆಂದರೆ ಕ್ರೋಧವು, ಕೋಪವು. ಈ ಕೋಪಕ್ಕೆ ಅಷ್ಟೇನು ಮಹತ್ತ್ವ ? ಎಂದರೆ ಕೋಪದಿಂದ ಅನೇಕಕೆಲಸಗಳನ್ನು ಮಾಡಬಹುದು. ಸಾಧಾರಣಸ್ಥಿತಿಯಲ್ಲಿರುವ ಮನುಷ್ಯನು ಮಾಡಲಾಗದ ಕೆಲಸ

ವನ್ನು ಕೋಪದಿಂದ ಯುಕ್ತನಾದ ಮನುಷ್ಯನು ಮಾಡುವನು. ಕೋಪವು ಮನುಷ್ಯನಲ್ಲಿ ಒಂದು ವಿಧವಾದ ಉತ್ಸಾಹವನ್ನೂ, ಶಕ್ತಿಯನ್ನೂ ಉಂಟುಮಾಡುವುದು. ಆದರೆ ಕೋಪವು ಒಳ್ಳೆಯ ಕಾರ್ಯದಲ್ಲಿ ಸಹಾಯ ಮಾಡುವುದು ಅಪರೂಪ. ಕೆಟ್ಟಕೆಲಸವನ್ನು ಎಂದರೆ ಹೊಡೆಯುವುದು, ಕೊಲ್ಲುವುದು, ಹಿಂಸಿಸುವುದು ಮೊದಲಾದ ಕೆಡುಕನ್ನು ಮಾಡುವುದರಲ್ಲಿಯೇ ಇದರ ಶಕ್ತಿಸಾಮರ್ಥ್ಯಗಳ ಉಪಯೋಗವಾಗುವುದು. ಹಾಗಾದರೆ ಇದನ್ನು ದೇವತೆಯೆಂದು ಭಾವಿಸಿ ಏಕೆ ಗೌರವಿಸಬೇಕು ? ಇದರಿಂದ ಉಪಯೋಗವೇನು ಎಂದರೆ ಯಾವಕಾರ್ಯದಲ್ಲಿ ಕೋಪವು ಸಹಾಯಮಾಡುವುದೋ ಆ ಕಾರ್ಯದಲ್ಲಿ ಇದರ ಸಹಕಾರವು ಅತ್ಯವಶ್ಯಕವಾಗಿರುವುದು. ಯುದ್ಧಾದಿಗಳಲ್ಲಿಯೂ, ಶತ್ರುಗಳನ್ನು ಕೊಲ್ಲುವಾಗಲೂ ಶಕ್ತಿಸಾಮರ್ಥ್ಯಗಳ ಅವಶ್ಯಕತೆ ಇರುವುದರಿಂದ ಆ ಸಂದರ್ಭಗಳಲ್ಲಿ ಈ ಕೋಪಕ್ಕೆ ವಿಶೇಷರೀತಿಯಿಂದ ಗೌರವವನ್ನು ಸಲ್ಲಿಸಬೇಕಾಗುವುದು. ಆದ್ದರಿಂದ ಶತ್ರುಹನನಕಾರ್ಯವೂ, ಯುದ್ಧವೂ ಈ ಎರಡು ಸೂಕ್ತಗಳಲ್ಲಿಯೂ ವಿವೃತವಾಗಿ ಆ ಮೂಲಕ ಮನ್ಯುದೇವತೆಯ ಪ್ರಶಂಸೆಯೂ ವಿಶೇಷವಾಗಿರುವುದು.

ಸಾಧಾರಣವಾಗಿ ಯುದ್ಧಮಾಡುವಾಗ ಎರಡು ಕಡೆಯ ಸೈನಿಕರು ಒಬ್ಬರನ್ನೊಬ್ಬರು ಹಿಂದೆ ನೋಡಿರುವ ಸಂಭವವು ಕಡಿಮೆ. ಪರಸ್ಪರ ಪರಿಚಯವಿರುವುದಿಲ್ಲ. ಹೀಗಿರುವಾಗ ಸೇನಾನಾಯಕನ ಆಜ್ಞೆಯನ್ನು ಬಿಟ್ಟರೆ ಒಬ್ಬರನ್ನೊಬ್ಬರು ಕೊಲ್ಲಲು ಯಾವ ಸಮಂಜಸವಾದ ಕಾರಣವೂ ಇರುವುದಿಲ್ಲ ಎಂದರೆ ಪರಸ್ಪರ ವೈಯಕ್ತಿಕದ್ವೇಷವಿರುವುದಿಲ್ಲ. ದ್ವೇಷವಿಲ್ಲದಿದ್ದರೆ ಕೋಪಬರುವಸಂಭವವಿಲ್ಲ. ಕೋಪವಿಲ್ಲದೆ ಶತ್ರುಸಂಹಾರನಡೆಯುವುದಿಲ್ಲ. ಆದ್ದರಿಂದ ಕೋಪಬರುವಂತೆ ಮಾಡಿಕೊಳ್ಳುವುದು, ಯುದ್ಧಾಭಿಲಾಷಿಗಳಲ್ಲಿ ರೂಢಿಯು. ಒಬ್ಬರನ್ನೊಬರು ಹೀಯಾಳಿಸುವುದು, ಬೈಯುವುದು, ಆತ್ಮಪ್ರಶಂಸೆಮಾಡಿಕೊಳ್ಳುವುದು, ನ್ಯಾಯಾನ್ಯಾಯವಿಚಾರವನ್ನೆತ್ತಿ ತಾವು ಮಾಡುವುದುನ್ಯಾಯ, ಎದುರಾಳಿಯು ಮಾಡುವುದು ಅನ್ಯಾಯ, ಮುಂತಾದ ಕಾರಣಗಳನ್ನು ಮುಂದೊಡ್ಡಿ ತಮ್ಮ ತಮ್ಮ ಮನಸ್ಸಿನಲ್ಲಿ ಕೋಪವು ಉಕ್ಕುವಂತೆ ಮಾಡಿಕೊಳ್ಳುವರು. ಕಾಡುಜನಗಳಲ್ಲಿಯೂ ಸಹ ಯುದ್ಧಮಾಡಬೇಕಾಗಿ ಬಂದಾಗ ಒಂದು ವಿಧವಾದ ನೃತ್ಯವನ್ನೆಸಗಿ (War-dance) ಕೋಪವು ಉಲ್ಬಣಾವಸ್ಥೆಗೆ ಬರುವಂತೆ ಮಾಡಿಕೊಳ್ಳುವರು.

ಈ ಮನ್ಯುದೇವತಾಕವಾದ ಎರಡು ಸೂಕ್ತಗಳ ವಿನಿಯೋಗ ಮತ್ತು ಫಲಶ್ರುತಿಯ ವಿಷಯದಲ್ಲಿ ಶೌನಕೋಕ್ತವಾದ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ರೀತಿ ಹೇಳಿದೆ—

**ಯಸ್ತೇ ಮನ್ಯೋ ಇತಿ ಸದಾ ಸಪತ್ನಘ್ನೇ ತ್ವಿಮೇ ಜಪೇತ್ ।**
**ಘೃತೇನಾಭಿಹುತಂ ಚಾಭ್ಯಾಂ ಧಾರಯೇದಾಯಸಂ ಮಣಿಂ** ॥ ೩೨ ॥

**ಜುಹುಯಾದಾಯಸಂ ಶಂಕುಸ್ತಾಭ್ಯಾಮೇವ ಚತುರ್ದಶೀಂ ।**
**ಖಾದಿರೇ ಸುಸಮಿದ್ಧೇಗ್ನೌ ಸಪತ್ನಾನ್ ಪ್ರತಿಬಾಧತೇ** ॥ ೩೯ ॥

ಶತ್ರುಗಳನ್ನು ಜಯಿಸಬೇಕೆಂದು ಇಚ್ಛಿಸುವ ಪುರುಷನು **ಯಸ್ತೇ ಮನ್ಯೋ** ಮತ್ತು **ತ್ವಯಾ ಮನ್ಯೋ** ಎಂಬ ಈ ಎರಡು ಸೂಕ್ತಗಳನ್ನು ಯಾವಾಗಲೂ ಜಪಿಸಬೇಕು ಈ ಸೂಕ್ತಗಳ ಪ್ರತಿಮಂತ್ರಪಠನ ಪುರಸ್ಸರವಾಗಿ ಆಜ್ಯಧಾರೆಯಿಂದ ಸಹಿತವಾಗಿ ಕಬ್ಬಿಣದ ಮಣಿಯನ್ನು ಅಗ್ನಿಯಲ್ಲಿ ಹೋಮಮಾಡಿ ಅನಂತರ ಅದನ್ನು ತನ್ನ ಅಂಗದಲ್ಲಿ ಧರಿಸಬೇಕು. ಮತ್ತು ಚೆನ್ನಾಗಿ ಪ್ರಜ್ವಲಿತವಾದ ಸಂಸ್ಕೃತಾಗ್ನಿಯಲ್ಲಿ ಖಾದಿರ ಸಮಿತ್ತುಗಳನ್ನೂ ಕಬ್ಬಿಣದ ಮೊಳೆ

(ಅಥವಾ ಬಾಣದ ತುದಿ) ಗಳನ್ನು ಈ ಸೂಕ್ತಗಳ ಹದಿನಾಲ್ಕುಮಂತ್ರಗಳ ಪಠನಪುರಸ್ಸರವಾಗಿ ಹೋಮಮಾಡಿದರೆ ಆ ಪುರುಷನು ತನ್ನ ಶತ್ರುಗಳನ್ನು ಖಂಡಿತವಾಗಿಯೂ ಹಿಂಸಿಸಲು ಶಕ್ತನಾಗುತ್ತಾನೆ.

**ಯಥಾ ಹಿ ಪರಮಂ ಬ್ರಹ್ಮ ಗುಹ್ಯಂ ಪಾವನಮುದ್ಧೃತಂ ।**
**ತಥಾ ಸಂವನನಂ ಹೃದ್ಯಂ ನಹ್ಯಸ್ಮಾದ್ವಿದ್ಯತೇ ಪರಂ** ॥ ೮೦ ॥

ಅತಿಪವಿತ್ರವೂ, ಆಶ್ಚರ್ಯಕರವೂ ರಹಸ್ಯವೂ ಆದ ಬ್ರಹ್ಮವಿದ್ಯೆಯು ಯಾವರೀತಿ ಶ್ರೇಷ್ಠವಾಗಿರುವುದೋ ಅದರಂತೆ ಮನಸ್ಸಿಗೆ ಹರ್ಷದಾಯಕವಾದ ಶತ್ರುಹನನವಿದ್ಯೆಯು ಬೇರೊಂದಿಲ್ಲ.

**ಉಪೋಷ್ಯ ದ್ವಾದಶಾಹಾನಿ ಜಪನ್ನೇತದೃಷಿಂ ಸದಾ ।**
**ತನ್ಮನಾಃ ಪ್ರಯತಃ ಸ ಸ್ಯಾತ್ ತ್ರಿರಹ್ನೋಽಭ್ಯುಪಯಾದಪಃ** ॥ ೮೧ ॥

**ಅಂತೇ ತು ದ್ವಾದಶಾಹಸ್ಯ ಶುಚೌ ದೇಶೇ ಸಮಾಹಿತಃ ।**
**ಪುಂಸಃ ಪ್ರತಿಕೃತಿಂ ಕುರ್ಯಾದ್ಭೂಮೌ ಪಾಂಸುಮಯೀಂ ತಥಾ** ॥ ೮೨ ॥

**ತಸ್ಯಾ ಹೃದಯದೇಶಂ ತು ಸಮಾಕ್ರಮ್ಯ ಜಪೇದೃಷಿಂ ।**
**ಅಮೋಘಂ ಕರ್ಮ ಜಾನೀಯಾದಹೋರಾತ್ರೇ ಗತೇ ಸತಿ** ॥ ೮೩ ॥

ಶತ್ರುಜಯವನ್ನಪೇಕ್ಷಿಸುವ ಪುರುಷನು ಹನ್ನೆರಡುದಿನಗಳವರೆಗೆ ಉಪವಾಸ ಮಾಡುತ್ತಾ ಈ ಸೂಕ್ತಮಂತ್ರಗಳನ್ನು ಶುದ್ಧನಾಗಿಯೂ, ಮನಃಪೂರ್ವಕವಾಗಿಯೂ ಜಪಿಸಬೇಕು. ಮೂರುದಿವಸಗಳವರೆಗೆ ನೀರನ್ನು ಅಭಿಮಂತ್ರಿಸಬೇಕು. ಹನ್ನೆರಡನೆಯದಿನದ ಕೊನೆಯಲ್ಲಿ ಶುದ್ಧವಾದ ಪ್ರದೇಶದಲ್ಲಿ ಕುಳಿತು ತನ್ನ ಶತ್ರುವಿನಂತೆ ಮಣ್ಣಿನಿಂದ ಒಂದು ಬೊಂಬೆಯನ್ನು ಮಾಡಬೇಕು ಅಥವಾ ಭೂಮಿಯಮೇಲೆ ತೆಳ್ಳಗೆ ಧೂಳನ್ನು ಹರಡಿ ಅದರ ಮೇಲೆ ಶತ್ರುವಿನ ಪ್ರತಿಕೃತಿಯನ್ನು (ಚಿತ್ರವನ್ನು) ಬರೆಯಬೇಕು. ಅನಂತರ ಆ ಬೊಂಬೆಯ ಅಥವಾ ಚಿತ್ರದ ಹೃದಯದ ಮೇಲೆ ತನ್ನ ಕೈಯನ್ನಿಟ್ಟು ಒಂದು ಹಗಲು ಮತ್ತು ಒಂದು ರಾತ್ರಿ ಕಳೆಯುವವರೆಗೆ ಮಂತ್ರಜಪವನ್ನು ಮಾಡಬೇಕು.

**ತ್ರ್ಯಹೇಣ ಧನಿನಂ ವೈಶ್ಯಂ ಚತೂರಾತ್ರೇಣ ಕ್ಷತ್ರಿಯಂ ।**
**ರಾಜಾನಂ ಪಂಚರಾತ್ರೇಣ ಷಡ್ರಾತ್ರೇಣ ದ್ವಿಜೋತ್ತಮಂ** ॥ ೮೪ ॥

**ತಪಸ್ವಿನಂ ಸಪ್ತರಾತ್ರಾಜ್ಜಯೇದ್ಭುಂಜೀತ ಚೈವ ತಂ ।**
**ಅಪಿ ವೋಪೋಷಿತಃ ಸ್ನಾತೋ ಜಪೇದೇತತ್ಸದಾ ಸ್ಥಿತಃ** ॥ ೮೫ ॥

ಈ ರೀತಿ ಮೂರುದಿನ ಪರ್ಯಂತರ ಜಪಮಾಡುವುದರಿಂದ ಬಹಳ ಧನವುಳ್ಳ ವೈಶ್ಯನನ್ನು ಜಯಿಸಬಹುದು. ನಾಲ್ಕು ರಾತ್ರಿಯವರೆಗೆ ಜಪಮಾಡಿದಲ್ಲಿ ಕ್ಷತ್ರಿಯನನ್ನೂ, ಐದುರಾತ್ರಿಯವರೆಗೆ ಮಾಡಿದರೆ ರಾಜನನ್ನೂ, ಆರುರಾತ್ರಿಯವರೆಗೆ ಮಾಡಿದರೆ ಉತ್ತಮನಾದ ಬ್ರಾಹ್ಮಣನನ್ನೂ ಏಳುರಾತ್ರಿಯವರೆಗೆ ಮಾಡಿದರೆ ತಪಸ್ವಿಯನ್ನೂ ಸಹ ಜಯಿಸಬಹುದು. ಅನಂತರ ಭೋಜನಮಾಡಿಯಾಗಲಿ ಅಥವಾ ಉಪವಾಸವಿದ್ದು ಸ್ನಾನಮಾಡಿಯಾಗಲಿ ಈ ಮಂತ್ರವನ್ನು ಯಾವಾಗಲೂ ಜಪಿಸುತ್ತಿರಬೇಕು.

**ಯ ಇಚ್ಛೇದಾತ್ಮನಃ ಕರ್ತುಂ ಹೀನಾಂ ತು ಪರಿವರ್ಜಯೇತ್ ।**
**ಸಹಸ್ರಸಂಪಾತಹುತಂ ಬಿಲ್ವಾನಾಂ ಚೂರ್ಣಮಾವಪೇತ್** || ೮೬ ||
**ಉದಪಾನೇ ವಶಂ ನೇತುಂ ತಂ ಜನಂ ಕ್ಷಿಪ್ರಮಾನಯೇತ್ ।**

ಇತರರು ತನ್ನ ವಶವರ್ತಿಗಳಾಗಬೇಕೆಂದು ಬಯಸುವವನು ಸಹಸ್ರಬಿಲ್ವದಳಗಳನ್ನು ತಂದು ಪುಡಿಮಾಡಿ ನೀರಿನಲ್ಲಿ ಹಾಕಿ ಆ ನೀರನ್ನು ಮಂತ್ರದಿಂದ ಅಭಿಮಂತ್ರಿಸಿ ಕುಡಿಯಲು ಕೊಟ್ಟರೆ ಆ ಜನರು ತನ್ನ ವಶವರ್ತಿಗಳಾಗುವರು.

**ಮಾತರ್ಯಾತ್ಮನಿ ಪುತ್ರೇಷು ಪಿತೃಭ್ರಾತೃಸುಹೃತ್ಸು ಚ** || ೮೭ ||
**ಹೃದ್ಯಮೇತತ್ಪ್ರಯುಂಜೀತ ಶಿರಸಾ ಧಾರಯೇದ್ಗುಡಂ ।**
**ಸುಮಿತ್ರಂ ತು ಪರಿಷ್ವಜ್ಯ ಮೂರ್ಧನ್ಯಾಘ್ರಾಯ ಚಾತ್ಮಜಂ** || ೮೮ ||
**ಹೃದ್ಯಮೇತತ್ಪ್ರಯುಂಜೀತ ಶಾಂತ್ಯರ್ಥಾಯ ಸುಖಾಯ ಚ ||**

ತನ್ನ ಸ್ವಜನರಿಗೆ ಶಾಂತಿಸುಖಗಳು ಲಭಿಸಬೇಕೆಂದು ಬಯಸಿದರೆ ಆಗ ಈ ಕೆಳಗೆ ಹೇಳಿದಂತೆ ಮಾಡಬೇಕು. ತನ್ನ ತಾಯಿ, ತಾನು, ಪುತ್ರರು, ತಂದೆ, ಅಣ್ಣತಮ್ಮಂದಿರು, ಸ್ನೇಹಿತರು ಇವರುಗಳ ವಿಷಯದಲ್ಲಿ ಬೆಲ್ಲವನ್ನು ಅಭಿಮಂತ್ರಿಸಿ ಶಿರಸ್ಸಿನ ಮೇಲಿಡಬೇಕು ಸ್ನೇಹಿತನನ್ನು ಆಲಿಂಗಿಸಿಕೊಳ್ಳಬೇಕು. ಪುತ್ರನ ಶಿರಸ್ಸನ್ನು ಆಘ್ರಾಣಿಸಬೇಕು.

**ಅಸಂಸಿದ್ಧೇ ಸಂವನನೇ ಪಾಂಸುಪ್ರತಿಕೃತಿಂ ಪಥಿ** || ೮೯ ||

**ಪ್ರಜ್ವಾಲ್ಯ ಜುಹುಯಾದಗ್ನಿಂ ಘೃತೇನ ಬ್ರಾಹ್ಮಣೋ ಯದಿ ।**
**ಕ್ಷತ್ರಿಯಸ್ತು ತೈಲೇನ ಸಾರ್ಷಪೇಣ ವಿಶಾಮಪಿ** || ೯೦ ||

**ಆಯಸೀಂ ವೈ ಪ್ರತಿಕೃತಿಮಗ್ನಿಮಧ್ಯೇ ನಿಧಾಪಯೇತ್ ।**
**ತಾಂ ಚ ಪ್ರಜ್ವಲಿತಾಂ ಮತ್ವಾ ಜುಹುಯಾತ್ತನ್ಮನಾಃ ಶುಚಿಃ** || ೯೧ ||

**ಉಗ್ರೇಣ ಮನಸಾ ಹನ್ಯಾತ್ಕ್ರುದ್ಧಶ್ಚ ಜುಹುಯಾದ್ಘೃತಂ ।**
**ಯಥಾ ಯಥಾ ಪ್ರಜ್ವಲಿತೇ ಹೂಯತೇ ಜಾತವೇದಸಿ** || ೯೨ ||

**ದೀಪ್ತಾ ಪ್ರತಿಕೃತಿರ್ವಿಪ್ರಸ್ತಥಾ ಸ್ವಂ ವಶಮೇಷ್ಯತಿ ।**

ಕಾರ್ಯಸಿದ್ಧಿಸದಿದ್ದಲ್ಲಿ ರಸ್ತೆಯಲ್ಲಿ ಧೂಳಿನ ಮೇಲೆ ಶತ್ರುವಿನ ಚಿತ್ರವನ್ನು ಬರೆದು ಅನಂತರ ಅಗ್ನಿಪ್ರತಿಷ್ಠಾಪನೆಮಾಡಿ ಉರಿಯುತ್ತಿರುವ ಅಗ್ನಿಯಲ್ಲಿ ಬ್ರಾಹ್ಮಣನಾದವನು ತುಪ್ಪದಿಂದಲೂ, ಕ್ಷತ್ರಿಯನು ಎಣ್ಣೆಯಿಂದಲೂ ವೈಶ್ಯನು ಸರ್ಷಪದಿಂದಲೂ ಹೋಮಮಾಡಬೇಕು. ಅನಂತರ ಕಬ್ಬಿಣದಿಂದ ಬೊಂಬೆಯನ್ನು ಮಾಡಿ ಅದನ್ನು ಅಗ್ನಿಯ ಮಧ್ಯದಲ್ಲಿ ಇಡಬೇಕು. ಅದು ಚೇನ್ನಾಗಿ ಕಾದು ಪ್ರಜ್ವಲಿತವಾದಾಗ ಶುಚಿರ್ಭೂತನಾಗಿ ಶತ್ರುಹನನಕಾರ್ಯದಲ್ಲಿಯೇ ಮನಸ್ಸನ್ನಿಟ್ಟು ಕೋಪಯುಕ್ತವಾದ ಮನಸ್ಸಿನಿಂದ ಆಜ್ಯವನ್ನು ಹೋಮಮಾಡಬೇಕು, ಆ ಬೊಂಬೆಯು ಕಾದು ಪ್ರಕಾಶಮಾನವಾದಂತೆಲ್ಲಾ ಅಗ್ನಿಯಲ್ಲಿ ತುಪ್ಪದಿಂದ ಹೆಚ್ಚುಹೆಚ್ಚಾಗಿ ಹೋಮಮಾಡಬೇಕು. ಹೀಗೆ ಮಾಡಿದರೆ ಶತ್ರುವು ತನ್ನ ವಶವಾಗುವನು. ಮುಂದೆಯೂ ಇದೇವಿಧವಾದ ಅಭಿಚಾರಕರ್ಮಗಳನ್ನು ಮಾತ್ರ ಹೇಳಿರುವುದರಿಂದಲೂ ಅವುಗಳ ಅರ್ಥವಿವರಣೆಯು ಅವಶ್ಯಕವಿಲ್ಲದ್ದರಿಂದಲೂ ಮೂಲಶ್ಲೋಕಗಳನ್ನು ಮಾತ್ರ ಕೊಟ್ಟಿರುತ್ತೆ.

ಶ್ಮಶಾನದಗ್ಧಪಾಂಸೂನಾಂ ಕುರ್ಯಾದ್ವೇದಿಂ ವಿಲಕ್ಷಣಾಂ ॥ ೯೩ ॥
ವೈಭೀತಕೇಧ್ಮೇ ಜ್ವಲಿತೇ ಲೋಹಪ್ರತಿಕೃತಿಂ ನ್ಯಸೇತ್ ।
ಅರ್ಧರಾತ್ರೇ ಸ್ಥಿತೇ ತೈಲಂ ಸಾರ್ಷಪಂ ಲವಣಾನ್ವಿತಂ ॥ ೯೪ ॥
ತತ್ರ ಶರಮಯಂ ಕುರ್ಯಾತ್ತ್ರಸ್ತರಂ ಪ್ರತಿಲೋಮತಃ ।
ತ್ರಿಷು ಶಂಕುಷು ಚಾಸೀನೋ ಜುಹುಯಾದುಗ್ರದರ್ಶನಃ ॥ ೯೫ ॥
ಮುಕ್ತಕೇಶೋ ವಧಂ ಪ್ರೇಪ್ಸುರಚಿರೇಣ ಪ್ರಸಾದಯೇತ್ ।
ಅಥವಾಭಿಚರೇದೇವಂ ಜುಹುಯಾದಾತ್ಮಶೋಣಿತಂ ॥ ೯೬ ॥
ವಶಂ ನಯತಿ ರಾಜಾನಂ ಕ್ಷಿಪ್ರಂ ಜನಪದಂ ಪುರಂ ।
ಪುಷ್ಟಿಕರ್ಮಾಪಿ ಕರ್ತವ್ಯಂ ಹೃದ್ಯೇನೋಕ್ತಂ ಯತಾತ್ಮನಾ ॥ ೯೭ ॥
ಅನಾಗಸಿ ನ ಕುರ್ವೀತ ಬ್ರಾಹ್ಮಣೋ ವಧಸಂಯುತಂ ।
ಸರೂಪವತ್ಸಾಯಾಶ್ಚ ಗೋಃ ಪಯಸಾ ಸಾಧಯೇಚ್ಚರುಂ ॥ ೯೮ ॥
ಸಹಸ್ರಸಂಪಾತಹುತಂ ಪಾಯಯೇದ್ವತ್ಸಮಗ್ರಜಂ ।
ಸಹಸ್ರಾನುಚರೋ ವತ್ಸಃ ಸ ಸ್ಯಾದ್ರೋಗೈರ್ವಿವರ್ಜಿತಃ ॥ ೯೯ ॥
ಗಾಶ್ಚೈವ ಪಾಯಯೇತ್ತಾಶ್ಚ ಭವಂತಿ ವ್ಯಾಧಿವರ್ಜಿತಾಃ ।
ಪುತ್ರಾಂಶ್ಚ ಪ್ರಾಶಯೇನ್ನಿತ್ಯಂ ಪ್ರಿಯಾನನ್ಯಾಂಶ್ಚ ಸಜ್ಜನಾನ್ ॥ ೧೦೦ ॥
ನಿರಾಮಯಾಶ್ಚ ಸ್ನಿಗ್ಧಾಶ್ಚ ಭವಂತಿ ವಿಗತಜ್ವರಾಃ ।
ಸ್ತ್ರಿಯಂ ಚೇದಭಿಮನ್ಯೇತ ತಸ್ಯಾಃ ಸಂವನನಂ ಮಹತ್ ॥ ೧೦೧ ॥
ವ್ರೀಹೀಣಾಂ ನಖಭಿನ್ನಾನಾಂ ತಂಡುಲಾನ್ ಸೂಕ್ಷ್ಮಚೂರ್ಣಿತಾನ್ ।
ಸಹಸ್ರಸಂಪಾತಹುತಾನ್ ಸ್ವೇದಯೇತ್ಕುಶಲೋಽಗ್ನಿನಾ ॥ ೧೦೨ ॥
ತೇನ ಪ್ರತಿಕೃತಿಂ ಕುರ್ಯಾತ್ತಾಂ ಧ್ಯಾತ್ವಾ ಮನಸಾ ಸ್ತ್ರಿಯಂ ।
ಅಕ್ತಾಂ ಸರ್ಪಪತ್ರೈಲೇನ ಜುಹುಯಾದಂಗಶಶ್ಚ ತಾಂ ॥ ೧೦೩ ॥
ಪಾದೌ ಪ್ರಥಮತಶ್ಛಿಂದ್ಯಾತ್ ಫಡಿತ್ಯಗ್ನೌ ನಿಧಾಪಯೇತ್ ।
ಅಥ ಜಂಘೇ ಜಾನುನೀ ಚ ಊರೂ ಬಾಹೂ ತತಃ ಶಿರಃ ॥ ೧೦೪ ॥
ಛಿತ್ತ್ವಾ ಹೃದಯದೇಶಂ ತು ಹೃದಯೇ ಸ್ವೇ ನಿವೇಶಯೇತ್ ।
ಜಪನ್ನಿಮಮೃಷಿಂ ವಿಪ್ರಃ ಸ್ತ್ರೀ ವಶಂ ಸಾಧಿಗಚ್ಛತಿ ॥ ೧೦೫ ॥
ನೈತತ್ಪರಿಗೃಹೀತಾಸು ನ ಸಾಧ್ವೀಷು ಕಥಂಚನ ।
ನ ಧರ್ಮವ್ರತಶೀಲಾಸು ಕುರ್ವೀತ ದ್ವಿಜಸತ್ತಮಃ ॥ ೧೦೬ ॥
ಕಾಮಂ ಪರಿಗೃಹೀತಾಸು ಹೀನವರ್ಣಾಸು ಯಶ್ಚರೇತ್ ।
ಪತಿಮಸ್ಯಾ ಗುಣೀಕುರ್ಯಾತ್ಪೂರ್ವಂ ಪಶ್ಚಾತ್ತು ತಾಂ ಸ್ತ್ರಿಯಂ ॥ ೧೦೭ ॥
ಭುಕ್ತ್ವಾ ವಾ ಪಾಯಸಂ ಸದ್ಯಶ್ಛರ್ದಯಿತ್ವಾ ನಿಧಾಪಯೇತ್ ।
ತಚ್ಚೂರ್ಣಂ ಕೃಷ್ಣಜಾಯಾಯೈ ದೇಯಂ ಸಂವನನಂ ಸ್ಮೃತಂ ॥ ೧೦೮ ॥

ಮಹಾವೃಕ್ಷಫಲಾನ್ಯೇವಮಯುಗ್ಮಾನ್ಯಭಿಮಂತ್ರಯೇತ್ ।
ತೇಷಾಂ ಯುಗ್ಮಾನಿ ಭುಂಜೀತ ಸ್ವಯಮರ್ಧಾನಿ ಶೇಷಯೇತ್ ॥ ೧೦೯ ॥
ತಾನಿ ದದ್ಯಾದ್ಯಮಿಚ್ಛೇತ್ತು ವಶೀಕರ್ತುಂ ಜಪನ್ನೃಷಿಂ ।
ಸುಹೃದ್ಭೂತ್ವಾ ಸುಹೃದ್ಯಸ್ಯ ದೇಯಂ ಸಂವನನಂ ಸ್ಮೃತಂ ॥ ೧೧೦ ॥
ಏಕೈಕಮಭಿರೂಪಂ ತು ಹೃದ್ಯಸೂಕ್ತಾದ್ಯತಃ ಪುನಃ ।
ಕರ್ಮಾಣಿ ತ್ವಭಿರೂಪಾಣಿ ಕುರ್ಯಾದ್ಯಸ್ತು ಯಥೇಚ್ಛತಿ ॥ ೧೧೧ ॥
ಪರಾಕದಾಸಸ್ಯ ವಿಧಿಂ ಹೃದ್ಯೇನೋಕ್ತಂ ವಿದುರ್ಬುಧಾಃ ।
ಸ್ತ್ರೀಣಾಂ ಸಂವನನಂ ಚೈತತ್ಪುಂಸಾಮಪಿ ವಿಧೀಯತೇ ॥ ೧೧೨ ॥
ದ್ವೇಷ್ಯಂ ತು ಜ್ಞಾತಿನಾಮೇವ ಜಯಶ್ಚೈವ ಸದಾ ಯುಧಿ ।
ಖಾದಿರಂ ಕಾರಯೇಚ್ಛಂಕುಂ ಹೃದಿ ತಂ ಸಂನಿವೇಶಯೇತ್ ॥ ೧೧೩ ॥
ಕೃತ್ವಾ ಪ್ರತಿಕೃತಿಂ ಪೂರ್ವಂ ಪಾಂಸುಭಿರ್ವಾಥವಾ ತುಷೈಃ ।
ಇಷುಮಪ್ಯನುಮಂತ್ರ್ಯೈವ ಸಂಗ್ರಾಮಂ ಸಂಪ್ರಕಲ್ಪಯೇತ್ ॥ ೧೧೪ ॥
ರಿಪುಘ್ನಮೇತಜ್ಜಾನೀಯಾತ್ಪ್ರಯುಕ್ತಮಪರಾಜಿತಂ ।
ಪರಾಕದಾಸದ್ವೇಷ್ಯಾರ್ಥಂ ಹೃದ್ಯಂ ಸಂವನನಂ ಸ್ಮೃತಂ ॥ ೧೧೫ ॥
ಚಿಂತಯನ್ಮನಸಾಪ್ಯೇತೇ ಸೂಕ್ತೇ ಸಿದ್ಧಿಂ ನಿಯಚ್ಛತಿ ॥

(ಋಗ್ವಿಧಾನ. ಅಧ್ಯಾಯ ೩. ಶ್ಲೋ. ೭೮-೧೧೫)

॥ ಸಾಯಣಭಾಷ್ಯಂ ॥

**ಯಸ್ತೇ ಮನ್ಯೋ ಇತಿ ಸಪ್ತರ್ಚಂ ಪಂಚದಶಂ ಸೂಕ್ತಂ । ಮನ್ಯುರ್ನಾಮ ತಪಸಃ ಪುತ್ರ ಋಷಿಃ । ಆದ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ಇದಮುತ್ತರಂ ಚ ಮನ್ಯುದೈವತಂ। ತಥಾ ಚಾನುಕ್ರಾಂತಂ। ಯಸ್ತೇ ಮನ್ಯೋ ಮನ್ಯುಸ್ತಾಪಸೋ ಮಾನ್ಯವಂ ತು ಜಗತ್ಯಾದೀತಿ ॥ ಅಜಿರನಾಮ್ನ್ಯಭಿಚಾರಸಾಧನೇ ಯಜ್ಞ ಏತತ್ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ತ್ವಯಾ ಮನ್ಯೋ ಯಸ್ತೇ ಮನ್ಯೋ । ಆ. ೯-೭ । ಇತಿ ।**

ಅನುವಾದವು—**ಯಸ್ತೇ ಮನ್ಯೋ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ತಪ ಎಂಬ ಋಷಿಯ ಪುತ್ರನಾದ ಮನ್ಯು ಎಂಬುವನು ಋಷಿಯು; ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಕ್ಕೂ ಮನ್ಯುವು ದೇವತೆಯು; ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ–**ಯಸ್ತೇ ಮನ್ಯೋ ಮನ್ಯುಸ್ತಾಪಸೋ ಮಾನ್ಯವಂ ತು ಜಗತ್ಯಾದಿ** ಎಂದು ಹೇಳಿರುವುದು. ಅಜಿರ ಎಂಬ ಅಭಿಚಾರಸಾಧನಭೂತವಾದ ಯಜ್ಞದಲ್ಲಿ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ವಯಾ ಮನ್ಯೋ ಯಸ್ತೇ ಮನ್ಯೋ** ಎಂಬ ಸೂತ್ರದಿಂದ (ಆ. ೯-೭) ವಿವೃತವಾಗಿರುವುದು.

## ಸೂಕ್ತ—೮೩

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೮೩ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೧೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಮನ್ಯುಸ್ತಾಪಸಃ ॥
ದೇವತಾ—ಮನ್ಯುಃ ॥
ಛಂದಃ—೧. ಜಗತೀ । ೨-೭. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯಸ್ತೇ ಮನ್ಯೋಽವಿಧದ್ವಜ್ರ ಸಾಯಕ ಸಹ ಓಜಃ ಪುಷ್ಯತಿ ವಿಶ್ವ-
ಮಾನುಷಕ್ ।
ಸಾಹ್ಯಾಮ ದಾಸಮಾರ್ಯಂ ತ್ವಯಾ ಯುಜಾ ಸಹಸ್ಕೃತೇನ ಸಹಸಾ
ಸಹಸ್ವತಾ ॥ ೧ ॥

॥ ಪದಪಾಠಃ ॥

ಯಃ । ತೇ । ಮನ್ಯೋ ಇತಿ । ಅವಿಧತ್ । ವಜ್ರ । ಸಾಯಕ । ಸಹಃ । ಓಜಃ । ಪುಷ್ಯತಿ । ವಿಶ್ವಂ ।
ಆನುಷಕ್ ।
ಸಹ್ಯಾಮ । ದಾಸಂ । ಆರ್ಯಂ । ತ್ವಯಾ । ಯುಜಾ । ಸಹಃಽಕೃತೇನ । ಸಹಸಾ । ಸಹಸ್ವತಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮನ್ಯೋ ಕ್ರೋಧಾಭಿಮಾನಿನ್ದೇವ । ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವೇತಿ ನಿರುಕ್ತಂ । ೧೦–೨೯ । ಯೋ ಯಜಮಾನಸ್ತೇ ತುಭ್ಯಮವಿಧತ್ ಪರಿಚರತಿ ಹೇ ವಜ್ರ ವಜ್ರವತ್ಸಾರಭೂತ ಸಾಯಕ ಸಾಯಕವಚ್ಛತ್ರೂಣಾಂ ಹಿಂಸಕ ಸ ಮನುಷ್ಯಃ ಸಹೋ ಬಲಂ ಬಾಹ್ಯಮೋಜಃ ಶಾರೀರಂ ಬಲಂ ಚಾನುಷಗನುಷಕ್ತಂ ಪುಷ್ಯತಿ ತ್ವದನುಗ್ರಹಾತ್ಸಂಗ್ರಾಮೇ । ಯಸ್ಮಾದೇವಂ ತಸ್ಮಾದ್ವಯಂ ದಾಸಮುಪಕ್ಷಯಕರ್ತಾರಮಾರ್ಯಮಸ್ಮತ್ತೋಽಧಿಕಂ ಚೋಭಯವಿಧಂ ಶತ್ರುಂ ಸಾಹ್ಯಾಮ । ಅಭಿಭವೇಮ । ಕೇನ ಸಾಧನೇನೇತಿ ತದುಚ್ಯತೇ । ತ್ವಯಾ ಯುಜಾ ತ್ವಯಾ ಸಹಾಯೇನ। ಸಹಾಯೋ ವಿಶೇಷ್ಯತೇ । ಸಹಸ್ಕೃತೇನ ಬಲೋತ್ಪಾದಿತೇನ ಸಹಸಾ ಸಹಮಾನೇನ ಪರಾನ್ ಸಹಸ್ವತಾ ಬಲವತಾ । ಈದೃಶೇನ ತ್ವಯಾ ಸಹಾಯೇನೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಜ್ರ**—ವಜ್ರಾಯುಧದಂತೆ ಶಕ್ತಿಯುತನೂ । **ಸಾಯಕ**—ಶತ್ರುನಾಶಕನೂ ಆದ । **ಮನ್ಯೋ**—ಎಲೈ ಕ್ರೋಧಾಭಿಮಾನಿದೇವನಾದ ಮನ್ಯುವೇ । **ಯಃ**—ಯಾವ ಯಜಮಾನನು । **ತೇ**—ನಿನ್ನನ್ನುದ್ದೇಶಿಸಿ । **ಅವಿಧತ್**—ಪೂಜೆಯನ್ನರ್ಪಿಸುವನೋ ಅವನು । **ವಿಶ್ವಂ ಸಹಃ**—ಸಕಲ ಬಲವನ್ನೂ । **ಓಜಃ**—ವೀರ್ಯವನ್ನೂ। **ಆನುಷಕ್**—ಸರ್ವದಾ । **ಪುಷ್ಯತಿ**—ಹೊಂದುತ್ತಾನೆ । (**ವಯಂ**—ನಾವು) । **ಸಹಸ್ಕೃತೇನ**—ಶಕ್ತಿಯುತವಾದ । **ಸಹಸಾ**—ನಿನ್ನ ಪರಾಕ್ರಮದಿಂದ । **ಸಹಸ್ವತಾ**—ಶತ್ರುಗಳನ್ನು ನಾಶಮಾಡಬಲ್ಲ । **ತ್ವಯಾ ಯುಜಾ**—ನಿನ್ನ ಜೊತೆಯಲ್ಲಿ । **ದಾಸಂ**—ನಾಶಕಾರಕನೂ । **ಆರ್ಯಂ**—ನಮಗಿಂತಲೂ ಅಧಿಕವಾದ ಶಕ್ತಿಯುಳ್ಳವನೂ ಆದ ವಿರೋಧಿಯನ್ನು । **ಸಾಹ್ಯಾಮ**—ಸೋಲಿಸುವಂತಾಗಲಿ.

॥ ಭಾವಾರ್ಥ ॥

ವಜ್ರಾಯುಧದಂತೆ ಶಕ್ತಿಯುತನೂ, ಶತ್ರುನಾಶಕನೂ ಆದ ಎಲೈ ಕ್ರೋಧಾಭಿಮಾನಿದೇವನೇ, ಯಾವ ಯಜಮಾನನು ನಿನ್ನನ್ನು ಪೂಜಿಸುವನೋ ಅವನು ಸಕಲ ವೀರ್ಯವನ್ನೂ ಸರ್ವದಾ ಹೊಂದುತ್ತಾನೆ- ಶಕ್ತಿಯುತವಾದ ವೀರ್ಯವುಳ್ಳ ನಿನ್ನ ಸಹಾಯದಿಂದ ನಾವು ನಾಶಕರನೂ, ಅಧಿಕವಾದ ವೀರ್ಯವುಳ್ಳವನೂ ಆದ ನಮ್ಮ ವಿರೋಧಿಯನ್ನು ಸೋಲಿಸುವಂತಾಗಲಿ.

English Translation

He who worships you, Manyu, the thunderbolt, the destroyer (of enemies), enjoys all might and strength, combined; may we overcome the Dasa and the Arya with you for our ally, invigorating, strong and vigorous

॥ ವಿಶೇಷವಿಷಯಗಳು ॥

**ಮನ್ಯುಃ**—ಮನ್ಯು ಶಬ್ದಕ್ಕೆ ಯಾಸ್ಕರು—**ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ । ಮನಂತ್ಯಸ್ಮಾದಿಷವಃ** । (ನಿ. ೧೦-೨೯) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಮನ್ಯುಶಬ್ದವು ಪ್ರಕಾಶಿಸು, ಕೋಪಮಾಡು, ಕೊಲ್ಲು ಎಂಬರ್ಥವಿರುವ **ಮನ್** ಧಾತುವಿನಿಂದ ನಿಷ್ಪನ್ನವಾಗಿದೆ ಯುದ್ಧಾದಿಗಳಲ್ಲಿ ಕೋಪದಿಂದ ಶತ್ರುಗಳ ಮೇಲೆ ಬಾಣಗಳನ್ನು ಬಿಡುವುದರಿಂದ ಮನ್ಯುಶಬ್ದಕ್ಕೆ ಕೋಪ ಎಂದು ಹೆಸರು ಬಂದಿದೆ ಎಂದಭಿಪ್ರಾಯವು.

**ವಜ್ರ—ವಜ್ರವತ್ಸಾರಭೂತ** । ವಜ್ರಾಯುಧದಂತೆ ಬಲಶಾಲಿಯಾದವನು. ಕೋಪಬಂದಾಗ ಬಲವು ಹೆಚ್ಚುವುದು ಎಂಬುದು ಲೋಕಪ್ರಸಿದ್ಧವಾಗಿದೆ.

**ಸಹಃ ಓಜಃ ಪುಷ್ಯತಿ—ಸಹಃ** ಎಂದರೆ ದೇಹದ ಬಲವು, ಸಾಮರ್ಥ್ಯವು; **ಓಜಃ** ಎಂದರೆ ಮನಸ್ಸಿನಲ್ಲಿ ಉಂಟಾಗುವ ಧೈರ್ಯವು, ಪರಾಕ್ರಮವು. ಕ್ರೋಧಯುಕ್ತನಾದ ಮನುಷ್ಯನಲ್ಲಿ ಈ ಎರಡುವಿಧವಾದ ಬಲಗಳೂ ಹೆಚ್ಚುತ್ತವೆ.

**ದಾಸಂ ಆರ್ಯಂ**—ಈ ಶಬ್ದಗಳಿಗೆ ಭಾಷ್ಯಕಾರರು **ದಾಸಂ ಉಪಕ್ಷಪಯಿತಾರಂ । ಆರ್ಯಂ ಅಸ್ಮತ್ತೋಽಧಿಕಂ ಚೋಭಯವಿಧಂ ಶತ್ರುಂ ॥** ಹಿಂಸಕನಾದ ಶತ್ರು ಮತ್ತು ನಮಗಿಂತಲೂ ಬಲಶಾಲಿಯಾದ ಶತ್ರು ಎಂಬ ಎರಡುವಿಧ ಶತ್ರುಗಳು ಎಂದು ಅರ್ಥವಿವರಣೆಮಾಡಿದಾರೆ. ಆದರೆ **ದಾಸಂ** ಎಂಬ ಶಬ್ದಕ್ಕೆ ಅನಾರ್ಯ, ಈ ದೇಶದ ಪೂರ್ವನಿವಾಸಿಯಾದ ಕಪ್ಪುಜನ ಎಂದೂ **ಆರ್ಯಂ** ಎಂದರೆ ಚಾತುರ್ವರ್ಣ್ಯಗಳಿಗೆ ಸೇರಿದ ಆರ್ಯಜನಾಂಗದವನು ಎಂದೂ ಅರ್ಥಮಾಡಬಹುದು. ಈ ಎರಡುವಿಧ ಜನರಲ್ಲಿ ನಮಗೆ ಶತ್ರುಭಾವದಿಂದಿರುವವನನ್ನು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಮನ್ಯುರಿಂದ್ರೋ ಮನ್ಯುರೇವಾಸ ದೇವೋ ಮನ್ಯುರ್ಹೋತಾ ವರುಣೋ ಜಾತವೇದಾಃ ।
ಮನ್ಯುಂ ವಿಶ ಈಳತೇ ಮಾನುಷೀರ್ಯಾಃ ಪಾಹಿ ನೋ ಮನ್ಯೋ ತಪಸಾ ಸಜೋಷಾಃ ॥ ೧ ॥

॥ ಪದಪಾಠಃ ॥

ಮನ್ಯುಃ । ಇಂದ್ರಃ । ಮನ್ಯುಃ । ಏವ । ಆಸ । ದೇವಃ । ಮನ್ಯುಃ । ಹೋತಾ । ವರುಣಃ । ಜಾತಽವೇದಾಃ ।
ಮನ್ಯುಂ । ವಿಶಃ । ಈಳತೇ । ಮಾನುಷೀಃ । ಯಾಃ । ಪಾಹಿ । ನಃ । ಮನ್ಯೋ ಇತಿ । ತಪಸಾ । ಸಽಜೋಷಾಃ ॥ ೧ ॥

॥ ಸಾಯಣಭಾಷ್ಯಂ ॥

**ಅಯಂ ಮನ್ಯುರಿಂದ್ರೋ ಮನ್ಯುರೇವ ದೇವಃ ಸರ್ವೋಽಪಿ ಮನ್ಯುರೇವಾಸ । ಅಭವತ್ । ಮನ್ಯುರೇವ ಹೋತಾ ಹೋಮನಿಷ್ಪಾದಕೋಽಗ್ನಿಃ । ತಥಾ ಮನ್ಯುರ್ವರುಣೋಽಪಿ ಜಾತವೇದಾ ಜಾತಪ್ರಜ್ಞೋ ವರುಣಶ್ಚ । ಸರ್ವೇಷ್ವಪಿ ತೇಜಸ್ವಿಷು ಮನ್ಯುಸದ್ಭಾವಾತ್ । ಯಾ ಮಾನುಷೀರ್ಮನುಷೋಽಪತ್ಯಭೂತಾ ವಿಶಃ ಪ್ರಜಾಃ ಸಂತಿ ತಾ ಮನ್ಯುಮೇವ ದೇವಮೀಳತೇ । ಸ್ತುವಂತಿ । ಹೇ ಮನ್ಯೋ ತಪಸೈತನ್ನಾಮಕೇನಾಸ್ಮತ್ಪಿತ್ರಾ ಸಜೋಷಾಃ ಸಮಾನಪ್ರೀತಿಸ್ತ್ವಂ ಪಾಹಿ । ರಕ್ಷ ॥**

॥ ಪ್ರತಿಪದಾರ್ಥ ॥

**ಮನ್ಯುಃ**—ಮನ್ಯುದೇವನೇ । **ಇಂದ್ರಃ**—ಇಂದ್ರರೂಪನು । **ಮನ್ಯುಃ ಏವ**—ಮನ್ಯುವೇ । **ದೇವಃ**—ಈಶ್ವರನಾಗಿ । **ಆಸ**—ಆಗಿದ್ದಾನೆ । **ಮನ್ಯುಃ**—ಮನ್ಯುವೇ । **ಹೋತಾ**—ಹೋಮಸಂಪಾದಕನಾದ ಅಗ್ನಿಯೂ ।

**ಜಾತವೇದಾಃ**—ಜಾತಪ್ರಜ್ಞನಾದ । **ವರುಣಃ**—ವರುಣನೂ ಆಗಿದ್ದಾನೆ । **ಯಾಃ**—ಯಾರು । **ಮಾನುಷೀಃ ವಿಶಃ**—ಮಾನವರ ಗುಂಪಿಗೆ ಸೇರಿದ ಪ್ರಜೆಗಳಾಗಿರುವರೋ ಅವರು । **ಮನ್ಯುಂ ಏವ**—ಮನ್ಯುವನ್ನೇ । **ಈಳತೇ**—ಸ್ತುತಿಸುತ್ತಾರೆ । **ಮನ್ಯೋ**—ಎಲೈ ಮನ್ಯುದೇವನೇ । **ತಪಸಾ**—ತಪ ಎಂಬ ನನ್ನ ತಂದೆಯೊಡನೆ । **ಸಜೋಷಾಃ**—ಒಂದುಗೂಡಿದವನಾಗಿ । **ಪಾಹಿ**—ನಮ್ಮನ್ನು ರಕ್ಷಿಸು.

॥ ಭಾವಾರ್ಥ ॥

ಮನ್ಯುವೇ ಇಂದ್ರನು, ಮನ್ಯುವೇ ಈಶ್ವರನು, ಮನ್ಯುವೇ ಹೋಮಸಂಪಾದಕನಾದ ಅಗ್ನಿಯೂ, ಜಾತಪ್ರಜ್ಞನಾದ ವರುಣನೂ ಆಗಿದ್ದಾನೆ. ಯಾರು ಮಾನವರ ಗುಂಪಿಗೆ ಸೇರಿದ ಪ್ರಜೆಗಳಾಗಿರುವರೋ ಅವರು ಮನ್ಯುವನ್ನೇ ಸ್ತುತಿಸುತ್ತಾರೆ. ಎಲೈ ಮನ್ಯುದೇವನೇ, ತಪ ಎಂಬ ನಮ್ಮ ತಂದೆಯೊಡನೆ ಒಂದುಗೂಡಿದವನಾಗಿ ನಮ್ಮನ್ನು ರಕ್ಷಿಸು.

English Translation

Manyu is Indra ; Manyu verily was a god ; Manyu is the sacrificing priest (Agni), the omniscient Varuna ; the people who are of human descent, praise Manyu ; protect us, Manyu, well pleased along with Tapas.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮನ್ಯುದೇವತೆಯನ್ನು ಪ್ರಶಂಸಿಸುವಾಗ ಈ ಮನ್ಯುದೇವನೇ ಇಂದ್ರ, ದೇವ, ಹೋತಾ, ವರುಣಃ ಇತ್ಯಾದಿ ಇತರ ದೇವತೆಗಳ ನಾಮಗಳಿಂದ ಸ್ತುತಿಸಲ್ಪಟ್ಟಿದೆ. ಎಂದರೆ ಇತರ ದೇವತೆಗಳಲ್ಲಿರುವ ಮಹದ್ಗುಣಗಳೆಲ್ಲವೂ ಈ ಮನ್ಯುದೇವನಲ್ಲಿದೆಯೆಂಬುದನ್ನು ತೋರಿಸುವುದಕ್ಕಾಗಿ ನಾನಾ ದೇವತೆಗಳ ಹೆಸರಿನಿಂದ ಮನ್ಯುದೇವನನ್ನು ಸಂಬೋಧಿಸಿದೆ. ಲೋಕವ್ಯವಹಾರದಲ್ಲಿಯೂ ಗುಣವಿಶಿಷ್ಟನಾದ ಓರ್ವ ಪುರುಷನನ್ನು ಹೊಗಳುವಾಗ ನೀನೇ ಇಂದ್ರ, ಚಂದ್ರ, ದೇವೇಂದ್ರ ಮೊದಲಾದ ಶಬ್ದಗಳನ್ನು ಉಪಯೋಗಿಸುವುದನ್ನು ಎಲ್ಲರೂ ಬಲ್ಲರು. ಅದರಂತೆ ಇಲ್ಲಿಯೂ ಋಷಿಯು ಮನ್ಯುದೇವನನ್ನು ಪ್ರಶಂಸೆಮಾಡಿದಾನೆ ಎಂದು ತಿಳಿಯಬೇಕು. ಹಿಂದೆ ಗೃತ್ಸಮದಋಷಿಯೂ ಸಹ,

**ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।**
**ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥**
**ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।**
**ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ ತ್ವಮಂಶೋ ವಿದಥೇ ದೇವ ಭಾಜಯುಃ ॥**

(ಋ. ಸಂ. ೨-೧-೩, ೪)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯನ್ನು ಸ್ತುತಿಸುವಾಗ ಅಗ್ನಿಯೇ ಇಂದ್ರನು, ಅವನೇ ಸಜ್ಜನರಲ್ಲಿ ಶ್ರೇಷ್ಠನು, ಅವನೇ ವಿಷ್ಣುವು, ಅವನೇ ಬ್ರಹ್ಮನು, ಅವನೇ ಬೃಹಸ್ಪತಿಯು, ಅವನೇ ಸೃಷ್ಟಿಕರ್ತನು, ಅವನೇ ವರುಣನು, ಅವನೇ ಮಿತ್ರನು, ಅವನೇ ಅರ್ಯಮನು ಎಂದು ಮುಂತಾಗಿ ನಾನಾ ದೇವತೆಗಳ ಹೆಸರುಗಳಿಂದ ಅಗ್ನಿಯನ್ನು ಸಂಬೋಧಿಸಿ ಸ್ತುತಿಸಿದಾನೆ. ಅಂತಹ ಪ್ರಶಂಸೆಗಳು ಋಗ್ವೇದದಲ್ಲಿ ಬಹಳವಾಗಿವೆ.

॥ ಸಂಹಿತಾಪಾಠಃ ॥

ಅಭೀಹಿ ಮನ್ಯೋ ತವಸಸ್ತವೀಯಾನ್ತಪಸಾ ಯುಜಾ ವಿ ಜಹಿ ಶತ್ರೂನ್ ।
ಅಮಿತ್ರಹಾ ವೃತ್ರಹಾ ದಸ್ಯುಹಾ ಚ ವಿಶ್ವಾ ವಸೂನ್ಯಾ ಭರಾ ತ್ವಂ ನಃ ॥೩॥

॥ ಪದಪಾಠಃ ॥

ಅಭಿ । ಇಹಿ । ಮನ್ಯೋ ಇತಿ । ತವಸಃ । ತವೀಯಾನ್ । ತಪಸಾ । ಯುಜಾ । ವಿ । ಜಹಿ । ಶತ್ರೂನ್ ।
ಅಮಿತ್ರಽಹಾ । ವೃತ್ರಽಹಾ । ದಸ್ಯುಽಹಾ । ಚ । ವಿಶ್ವಾ । ವಸೂನಿ । ಆ । ಭರ । ತ್ವಂ । ನಃ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಮನ್ಯೋ ತ್ವಮಭೀಹಿ । ಅಭಿಗಚ್ಛಾಸ್ಮದ್ಯಜ್ಞಂ । ಕೀದೃಶಸ್ತ್ವಂ । ತವಸೋ ಬಲವತೋಽಪಿ ತವೀಯಾನತ್ಯಂತಂ ಬಲವಾನ್ । ಸ ತ್ವಂ ತಪಸಾಸ್ಮತ್ಪಿತ್ರಾ ಯುಜಾ ಸಹಾಯೇನ ಶತ್ರೂನ್ವಿ ಜಹಿ । ಕಿಂಚಾಮಿತ್ರಹಾಮಿತ್ರಾಣಾಂ ಹಂತಾ । ಅಮಿತ್ರೋಽಸ್ನಿಗ್ಧಃ । ತಥಾ ವೃತ್ರಹಾವರಕಾಣಾಂ ಶತ್ರೂಣಾಂ ಹಂತಾ ತಥಾ ದಸ್ಯುಹಾ ಚ । ದಸ್ಯುರುಪಕ್ಷಯಕಾರೀ ಶತ್ರುಃ । ತಾದೃಶ ಮನ್ಯುದೇವ ತ್ವಂ ವಿಶ್ವಾ ಸರ್ವಾಣಿ ವಸೂನಿ ಧನಾನಿ ನೋಽಸ್ಮಭ್ಯಮಾ ಭರ । ಆಹರ ॥**

॥ ಪ್ರತಿಪದಾರ್ಥ ॥

**ಮನ್ಯೋ**—ಎಲೈ ಮನ್ಯುದೇವನೇ । **ಅಭೀಹಿ**—ನಮ್ಮಲ್ಲಿಗೆ ದಯಮಾಡು । **ತವಸಃ**—ಶಕ್ತಿಯುತರಿಗಿಂತಲೂ । **ತವೀಯಾನ್**—ಅಧಿಕಶಕ್ತಿಯುಳ್ಳ ನೀನು । **ತಪಸಾ ಯುಜಾ**—ತಪ ಎಂಬ ನಮ್ಮ ತಂದೆಯೊಡನೆ ಕೂಡಿ । **ಶತ್ರೂನ್**—ಶತ್ರುಗಳನ್ನು । **ವಿ ಜಹಿ**—ಸೋಲಿಸಿ ನಾಶಪಡಿಸು । **ವೃತ್ರಹಾ**—ಸರ್ವವ್ಯಾಪಿಯಾದ ಶತ್ರುನಾಶಕನೂ । **ಅಮಿತ್ರಹಾ**—ದ್ರೋಹಿಗಳನ್ನು ನಾಶಮಾಡುವವನೂ । **ದಸ್ಯುಹಾ**—ನಾಶಕನಾದ ಶತ್ರುನಾಶಕನೂ ಆದ । **ತ್ವಂ**—ನೀನು । **ವಿಶ್ವಾ**—ಸಕಲವಾದ । **ವಸೂನಿ**—ಧನಗಳನ್ನೂ । **ನಃ**—ನಮಗೆ । **ಆ ಭರ**—ತಂದೊದಗಿಸು.

॥ ಭಾವಾರ್ಥ ॥

ಎಲೈ ಮನ್ಯುದೇವನೇ, ನಮ್ಮಲ್ಲಿಗೆ ದಯಮಾಡು. ಶಕ್ತಿಯುತರಿಗಿಂತಲೂ ಅಧಿಕಶಕ್ತಿಯುಳ್ಳ ನೀನು ತಪಃ ಎಂಬ ನಮ್ಮ ತಂದೆಯೊಡನೆ ಕೂಡಿ ಶತ್ರುಗಳನ್ನು ಸೋಲಿಸಿ ನಾಶಪಡಿಸು. ಸರ್ವವ್ಯಾಪಿಯಾದ ಶತ್ರುನಾಶಕನೂ, ನಾಶಕನಾದ ಶತ್ರುನಾಶಕನೂ ಆದ ನೀನು ಸಕಲ ಧನಗಳನ್ನೂ ನಮಗೆ ತಂದೊದಗಿಸು.

English Translation

Come to us Manyu, who are the strongest of the strong; withas Tap

as your ally overthrow our enemies; do you who are the slayer of enemies, the slayer of adversaries, the slayer of foes, bring to us all riches.

॥ ಸಂಹಿತಾಪಾಠಃ ॥

ತ್ವಂ ಹಿ ಮನ್ಯೋ ಅಭಿಭೂತ್ಯೋಜಾಃ ಸ್ವಯಂಭೂರ್ಭಾಮೋ ಅಭಿಮಾತಿ-
ಷಾಹಃ ।

ವಿಶ್ವಚರ್ಷಣಿಃ ಸಹುರಿಃ ಸಹಾವಾನಸ್ಮಾಸ್ವೋಜಃ ಪೃತನಾಸು ಧೇಹಿ ॥ ೪ ॥

॥ ಪದಪಾಠಃ ॥

ತ್ವಂ । ಹಿ । ಮನ್ಯೋ ಇತಿ । ಅಭಿಭೂತಿऽಓಜಾಃ । ಸ್ವಯಂऽಭೂಃ । ಭಾಮಃ । ಅಭಿಮಾತಿऽಸಹಃ ।

ವಿಶ್ವऽಚರ್ಷಣಿಃ । ಸಹುರಿಃ । ಸಹಾವಾನ್ । ಅಸ್ಮಾಸು । ಓಜಃ । ಪೃತನಾಸು । ಧೇಹಿ ॥ ೪ ॥

। ಸಾಯಣಭಾಷ್ಯಂ ।

ಹೇ ಮನ್ಯೋ ತ್ವಮಭಿಭೂತ್ಯೋಜಾಃ ಪರೇಷಾಮಭಿಭಾವುಕಬಲಃ ಸ್ವಯಂಭೂಃ ಸ್ವಯ-ಮೇವೋತ್ಪನ್ನೋ ಭಾಮಃ ಕ್ರುದ್ಧೋऽಭಿಮಾತಿಷಾಹಃ । ಅಭಿತೋ ಹಿಂಸಂತೀತ್ಯಭಿಮಾತಯಃ ಶತ್ರವಃ । ತೇಷಾಮಭಿಭವಿತಾ ವಿಶ್ವಚರ್ಷಣಿಃ ಸರ್ವೇಷಾಂ ದ್ರಷ್ಟಾ ಸಹುರಿಃ ಸಹನಶೀಲಃ ಸಹಾವಾನ್ ಸಹನವಾನ್ ಈದೃಶಸ್ತ್ವಮಸ್ಮಾಸು ಪೃತನಾಸು ಸಂಗ್ರಾಮೇಷ್ವೋಜೋ ಬಲಂ ಧೇಹಿ । ದೇಹಿ ॥

। ಪ್ರತಿಪದಾರ್ಥ ।

**ಮನ್ಯೋ**—ಎಲೈ ಮನ್ಯುದೇವನೇ । **ಅಭಿಭೂತ್ಯೋಜಾಃ**—ಶತ್ರುಗಳನ್ನು ಸೋಲಿಸಬಲ್ಲ ಶಕ್ತಿಯುಳ್ಳವನೂ । **ಸ್ವಯಂಭೂಃ**—ಸ್ವಯಮುತ್ಪನ್ನನೂ । **ಭಾಮಃ**—ಕ್ರೋಧರೂಪನೂ । **ಅಭಿಮಾತಿಷಾಹಃ**—ಶತ್ರುನಾಶಕನೂ । **ವಿಶ್ವಚರ್ಷಣಿಃ**—ಎಲ್ಲವನ್ನೂ ನೋಡಬಲ್ಲವನೂ । **ಸಹುರಿಃ**—ಸಹನಶೀಲನೂ । **ಸಹಾವಾನ್**—ಶತ್ರುಗಳನ್ನು ಸೋಲಿಸಬಲ್ಲವನೂ ಆದ । **ತ್ವಂ**—ನೀನು । **ಅಸ್ಮಾಸು ಪೃತನಾಸು**—ನಮ್ಮ ಸಂಗ್ರಾಮಗಳಲ್ಲಿ । **ಓಜಃ**—ಶಕ್ತಿಯನ್ನು । **ಧೇಹಿ**—ಕೊಡು.

। ಭಾವಾರ್ಥ ।

ಎಲೈ ಮನ್ಯುದೇವನೇ, ಶತ್ರುನಾಶಕನೂ, ನೀನಾಗಿಯೇ ಉತ್ಪನ್ನನೂ, ಕ್ರೋಧರೂಪನೂ, ಸಕಲವನ್ನೂ ನೋಡಬಲ್ಲವನೂ, ಸಹನಶೀಲನೂ ಆದ ನೀನು ಸಂಗ್ರಾಮಗಳಲ್ಲಿ ನಮಗೆ ಶಕ್ತಿಯನ್ನುಂಟುಮಾಡು.

## English Translation

Do you Manyu, who are possessed of over-powering strength, self-existent, irate, the overcomer of enemies, the beholder of all, enduring, vigorous, grant us strength in battles.

। ಸಂಹಿತಾಪಾಠಃ ।

ಅಭಾಗಃ ಸನ್ನಪ ಪರೇತೋ ಅಸ್ಮಿ ತವ ಕ್ರತ್ವಾ ತವಿಷಸ್ಯ ಪ್ರಚೇತಃ ।
ತಂ ತ್ವಾ ಮನ್ಯೋ ಅಕ್ರತುರ್ಜಿಹೀಳಾಹಂ ಸ್ವಾ ತನೂರ್ಬಲದೇಯಾಯ
ಮೇಹಿ ॥ ೫ ॥

॥ ಪದಪಾಠಃ ॥

ಅಭಾಗಃ । ಸನ್ । ಅಪ । ಪರಾಽಇತಃ । ಅಸ್ಮಿ । ತವ । ಕ್ರತ್ವಾ । ತವಿಷಸ್ಯ । ಪ್ರಚೇತ ಇತಿ ಪ್ರಽಚೇತಃ।
ತಂ । ತ್ವಾ । ಮನ್ಯೋ ಇತಿ । ಅಕ್ರತುಃ । ಜಿಹೀಳ । ಅಹಂ । ಸ್ವಾ । ತನೂಃ । ಬಲಽದೇಯಾಯ ।
ಮಾ । ಆ । ಇಹಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಪ್ರಚೇತಃ ಪ್ರಕೃಷ್ಟಜ್ಞಾನ ಮನ್ಯೋ ತವಿಷಸ್ಯ ಮಹತಸ್ತವ ಕ್ರತ್ವಾ ಕರ್ಮಣಾಭಾಗೋ ಭಾಗರಹಿತಃ ಸನ್ । ತ್ವಾಂ ಯಜ್ಞೇಽಯಾಜಕಃ ಸನ್ನಿತ್ಯರ್ಥಃ । ತ್ವದನುಕೂಲರಹಿತೋಽಹಮುಪ ಪರೇತೋಽಸ್ಮಿ । ಯುದ್ಧೇ ಶತ್ರುಭಿರಭಿಭೂತಃ ಸನ್ದೂರಂ ಗತೋಽಸ್ಮಿ । ತಂ ತಾದೃಶಂ ಭಾಗರಹಿತಂ ತ್ವಾ ತ್ವಾಂ ಹೇ ಮನ್ಯೋ ಅಕ್ರತುಃ ಕರ್ಮರಹಿತೋಽಹಂ ಜಿಹೀಳ । ಕ್ರುದ್ಧಂ ಕೃತವಾನಿತ್ಯರ್ಥಃ । ಯದ್ವಾ । ಅಹಮೇವ ತ್ವತ್ಸಹಾಯಮೇವ ಕ್ರೋಧಿತವಾನ್ । ಅಥೇದಾನೀಂ ಸ್ವಾ ತನೂರ್ಮಮ ಶರೀರಭೂತಸ್ತ್ವಂ ಬಲದೇಯಾಯ ಬಲದಾನಾಯ ಮೇಹಿ । ಮಾಂ । ಪ್ರಾಪ್ನುಹಿ ॥

। ಪ್ರತಿಪದಾರ್ಥ ।

**ಪ್ರಚೇತಃ**—ಉತ್ಕೃಷ್ಟವಾದ ಜ್ಞಾನವುಳ್ಳ । **ಮನ್ಯೋ**—ಎಲೈ ಮನ್ಯುದೇವನೇ । **ತವ ಕ್ರತ್ವಾ**—ನಿನ್ನ ಕರ್ಮದಲ್ಲಿ । **ಅಭಾಗಃ ಸನ್**—ಭಾಗವನ್ನು ವಹಿಸದೆ । **ಅಪ ಪರೇತೋಽಸ್ಮಿ**—ಶತ್ರುಗಳಿಂದ ಸೋಲಿಸಲ್ಪಟ್ಟಿದ್ದೇನೆ । **ಮನ್ಯೋ**—ಎಲೈ ಮನ್ಯುದೇವನೇ । **ತಂ ತ್ವಾ**—ಪೂಜ್ಯನಾದ ನಿನ್ನನ್ನು । **ಅಕ್ರತುಃ**—ಕರ್ಮರಹಿತನಾದ । **ಅಹಂ**—ನಾನು । **ಜಿಹೀಳ**—ಕೋಪಗೊಳ್ಳುವಂತೆ ಮಾಡಿದ್ದೇನೆ । **ಸ್ವಾ ತನೂಃ**—ನನ್ನ ಶರೀರ ರೂಪಿಯಾದ ನೀನು । **ಬಲದೇಯಾಯ**—ನನಗೆ ಶಕ್ತಿಯನ್ನು ಕೊಡಲು । **ಮಾ**—ನನ್ನಲ್ಲಿಗೆ । **ಏಹಿ**—ದಯಮಾಡು.

॥ ಭಾವಾರ್ಥ ॥

ಉತ್ಕೃಷ್ಟವಾದ ಜ್ಞಾನವುಳ್ಳ ಎಲೈ ಮನ್ಯುದೇವನೇ, ನಿನ್ನ ಕರ್ಮದಲ್ಲಿ ಭಾಗವನ್ನು ವಹಿಸದೇ ಇದ್ದುದರಿಂದ ನಾನು ಶತ್ರುಗಳಿಂದ ಸೋಲಿಸಲ್ಪಟ್ಟಿದ್ದೇನೆ. ಎಲೈ ಮನ್ಯುದೇವನೇ, ಪೂಜ್ಯನಾದ ನಿನ್ನನ್ನು ಕರ್ಮರಹಿತನಾದ ನಾನು ಕೋಪಗೊಳ್ಳುವಂತೆ ಮಾಡಿದ್ದೇನೆ. ನನ್ನ ಶರೀರರೂಪಿಯಾದ ನೀನು ನನಗೆ ಶಕ್ತಿಯನ್ನು ಕೊಡಲು ನನ್ನಲ್ಲಿಗೆ ದಯಮಾಡು.

English Translation

Sage Manyu, takiug no part in the worship of you the powerful one, I have retreated (from before my foes); worshipping not, I was angry with you; (yet) being incorporated with) my body, approach me to give me strength.

॥ ಸಂಹಿತಾಪಾಠಃ ॥

ಅಯಂ ತೇ ಅಸ್ಮ್ಯುಪ ಮೇಹ್ಯರ್ವಾಙ್ ಪ್ರತೀಚೀನಃ ಸಹುರೇ ವಿಶ್ವಧಾಯಃ ।
ಮನ್ಯೋ ವಜ್ರಿನ್ನಭಿ ಮಾಮಾ ವವೃತ್ಸ್ವ ಹನಾವ ದಸ್ಯೂꣳರುತ ಬೋಧ್ಯಾಪೇಃ ॥

॥ ಪದಪಾಠಃ ॥

ಅಯಂ । ತೇ । ಅಸ್ಮಿ । ಉಪ । ಮಾ । ಆ । ಇಹಿ । ಅರ್ವಾಙ್ । ಪ್ರತೀಚೀನಃ । ಸಹುರೇ । ವಿಶ್ವऽಧಾಯಃ ।

ಮನ್ಯೋ ಇತಿ । ವಜ್ರಿನ್ । ಅಭಿ । ಮಾಂ । ಆ । ವವೃತ್ಸ್ವ । ಹನಾವ । ದಸ್ಯೂನ್ । ಉತ । ಬೋಧಿ । ಆಪೇಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸಹುರೇ ಶತ್ರೂಣಾಂ ಸಹನಶೀಲ ವಿಶ್ವಧಾಯೋ ವಿಶ್ವಸ್ಯ ಧರ್ತರ್ಮನ್ಯೋ ಅಯಂ ಜನೋಽಹಂ ತೇ ತವಾಸ್ಮಿ ಕರ್ಮಕೃತ್ । ಯತ ಏವಮತಃ ಪ್ರತೀಚೀನಃ ಪ್ರತಿಗಂತಾರ್ವಾಙಸ್ಮದಭಿಮುಖಂ ಮಾ ಮಾಮುಪೇಹಿ । ಉಪಾಗಚ್ಛ । ಹೇ ಮನ್ಯೋ ವಜ್ರಿನ್ ಮಾಮಭ್ಯಾ ವವೃತ್ಸ್ವ । ಅಭ್ಯಾವರ್ತಸ್ವ । ಕಿಮರ್ಥಮಭ್ಯಾಗಮನಮಿತಿ ಚೇತ್ ಉಚ್ಯತೇ । ಹನಾವಾವಾಂ ದಸ್ಯೂಞ್ಛತ್ರೂನ್ । ಉತಾಪಿ ಚಾಪೇರ್ಬಂಧುಂ ಬೋಧಿ । ಬುಧ್ಯಸ್ವ ॥

॥ ಪ್ರತಿಪದಾರ್ಥ ॥

**ಸಹುರೇ**—ಶತ್ರುಗಳನ್ನು ಸೋಲಿಸುವವನೂ । **ವಿಶ್ವಧಾಯಃ**—ವಿಶ್ವಧಾರಕನೂ ಆದ ಎಲೈ ಮನ್ಯುದೇವನೇ । **ಅಯಂ**—ಈ ಪುರುಷನು । **ತೇ**—ನಿನಗೆ ಸೇರಿದವನಾಗಿ । **ಅಸ್ಮಿ**—ಆಗಿದ್ದಾನೆ । **ಪ್ರತೀಚೀನಃ**—

ನನ್ನಕಡೆಗೆ ತಿರುಗಿದವನಾಗಿ । **ಮಾ ಅರ್ವಾಙ್**—ನನ್ನಕಡೆಗೆ । **ಉಪೇಹಿ**—ದಯಮಾಡು । **ವಜ್ರಿನ್**—ವಜ್ರಾಯುಧವನ್ನು ಧರಿಸಿರುವ । **ಮನ್ಯೋ**—ಎಲೈ ಮನ್ಯುದೇವನೇ । **ಮಾಂ**—ನನ್ನಲ್ಲಿಗೆ । **ಅಭ್ಯಾ ವವೃತ್ಸ್ವ**—ಹಿಂತಿರುಗಿ ಬಾ । **ದಸ್ಯೂನ್**—ಶತ್ರುಗಳನ್ನು । **ಹನಾವ**—ನಾವಿಬ್ಬರೂ ಸೇರಿ ಕೊಲ್ಲೋಣ । **ಉತ**—ಮತ್ತು । **ಆಪೇಃ**—ನಿನ್ನ ಬಂಧುವಾದ ನನ್ನನ್ನು । **ಬೋಧಿ**—ಸಹಾಯಾರ್ಹನೆಂದು ತಿಳಿ.

॥ ಭಾವಾರ್ಥ ॥

ಶತ್ರುಗಳನ್ನು ಸೋಲಿಸುವವನೂ, ವಿಶ್ವಧಾರಕನೂ ಆದ ಎಲೈ ಮನ್ಯುದೇವನೇ, ಈ ಯಜಮಾನನು ನಿನಗೆ ಸೇರಿದವನಾಗಿದ್ದಾನೆ. ನನ್ನಕಡೆಗೆ ತಿರುಗಿ ಬಾ. ವಜ್ರಾಯುಧಧಾರಿಯಾದ ಎಲೈ ಮನ್ಯುವೇ, ನನ್ನಲ್ಲಿಗೆ ಹಿಂತಿರುಗಿ ಬಾ. ನಾವಿಬ್ಬರೂ ಸೇರಿ ಶತ್ರುಗಳನ್ನು ಕೊಲ್ಲೋಣ. ನಿನ್ನ ಬಂಧುವಾದ ನನ್ನನ್ನು ಸಹಾಯಾರ್ಹನೆಂದು ತಿಳಿ.

## English Translation

I am yours, come to me, advancing to me, turned towards me, O resister (of foes), sustainer of all; Manyu, bearer of the thunderbolt, come up to me, let us slay the Dasyus, think upon your kinsman.

॥ ಸಂಹಿತಾಪಾಠಃ ॥

**ಅಭಿ ಪ್ರೇಹಿ ದಕ್ಷಿಣತೋ ಭವಾ ಮೇಽಧಾ ವೃತ್ರಾಣಿ ಜಂಘನಾವ ಭೂರಿ ।**
**ಜುಹೋಮಿ ತೇ ಧರುಣಂ ಮಧ್ವೋ ಅಗ್ರಮುಭಾ ಉಪಾಂಶು ಪ್ರಥಮಾ**
**ಪಿಬಾವ ॥ ೨ ॥**

॥ ಪದಪಾಠಃ ॥

**ಅಭಿ । ಪ್ರ । ಇಹಿ । ದಕ್ಷಿಣತಃ । ಭವ । ಮೇ । ಅಧ । ವೃತ್ರಾಣಿ । ಜಂಘನಾವ । ಭೂರಿ ।**
**ಜುಹೋಮಿ । ತೇ । ಧರುಣಂ । ಮಧ್ವಃ । ಅಗ್ರಂ । ಉಭೌ । ಉಪಽಅಂಶು । ಪ್ರಥಮಾ । ಪಿಬಾವ ॥**

॥ ಸಾಯಣಭಾಷ್ಯಂ ॥

**ಹೇ ಮನ್ಯೋ ಅಭಿ ಪ್ರೇಹಿ । ಅಭಿಗಚ್ಛ । ಮಮ ಯುದ್ಧಂ ಗತ್ವಾ ಚ ಮೇ ಮಮ ದಕ್ಷಿಣತೋ ಭವ । ಅಧಾಥಾವಾಂ ವೃತ್ರಾಣಿ ಶತ್ರೂನ್ಭೂರಿ ಪ್ರಭೂತಂ ಜಂಘನಾವ । ಹನಾವ । ತೇ ತುಭ್ಯಮಗ್ರಂ ಶ್ರೇಷ್ಠಂ ಮಧ್ವೋ ಮಧು ಸೋಮರಸಂ ಜುಹೋಮಿ । ಉಭೌ ತ್ವಂ ಚಾಹಂ ಚೋಪಾಂಶ್ವಪ್ರಕಾಶಂ ಪ್ರಥಮಾ ಪ್ರಥಮೌ ಸಂತೌ ಪಿಬಾವ ॥**

॥ ಪ್ರತಿಪದಾರ್ಥ ॥

(ಎಲೈ ಮನ್ಯುದೇವನೇ) **ಅಭಿ ಪ್ರೇಹಿ**—ನನಗಭಿಮುಖವಾಗಿ ಬಾ । **ಮೇ**—ನನ್ನ । **ದಕ್ಷಿಣತಃ**—ದಕ್ಷಿಣಭಾಗದಲ್ಲಿ । **ಭವ**—ಕುಳಿತಿರು । **ಅಧ**—ಅನಂತರ । **ಭೂರಿ ವೃತ್ರಾಣಿ**—ಅನೇಕ ಶತ್ರುಗಳನ್ನು । **ಜಂಘನಾವ**—ನಾವಿಬ್ಬರೂ ಸೇರಿ ಕೊಲ್ಲೋಣ । **ತೇ**—ನಿನ್ನನ್ನುದ್ದೇಶಿಸಿ । **ಧರುಣಂ**—ಧಾರಕವೂ । **ಅಗ್ರ್ಯಂ**—ಶ್ರೇಷ್ಠವೂ । **ಮಧ್ವಃ**—ಮಧುರವೂ ಆದ ಸೋಮರಸವನ್ನು । **ಜುಹೋಮಿ**—ಅರ್ಪಿಸುತ್ತೇನೆ । **ಉಭೌ**—ನಾವಿಬ್ಬರೂ । **ಉಪಾಂಶು**—ರಹಸ್ಯವಾಗಿ । **ಪ್ರಥಮಾ**—ಎಲ್ಲರಿಗಿಂತಲೂ ಮೊದಲು । **ಪಿಬಾವ**—ಪಾನಮಾಡೋಣ.

॥ ಭಾವಾರ್ಥ ॥

ಎಲೈ ಮನ್ಯುದೇವನೇ, ನನಗಭಿಮುಖವಾಗಿ ಬಾ. ನನ್ನ ದಕ್ಷಿಣಭಾಗದಲ್ಲಿ ಕುಳಿತುಕೋ. ಅನಂತರ ಅನೇಕ ಶತ್ರುಗಳನ್ನು ನಾವಿಬ್ಬರೂ ಸೇರಿ ಕೊಲ್ಲೋಣ. ನಿನ್ನನ್ನುದ್ದೇಶಿಸಿ ಧಾರಕವೂ, ಶ್ರೇಷ್ಠವೂ, ಮಧುರವೂ ಆದ ಸೋಮರಸವನ್ನು ಅರ್ಪಿಸುತ್ತೇವೆ. ನಾವಿಬ್ಬರೂ ರಹಸ್ಯವಾಗಿ ಎಲ್ಲರಿಗಿಂತಲೂ ಮೊದಲು ಪಾನಮಾಡೋಣ.

## English Translation

Approach, be upon my right, let us slay a multitude of foes ; I offer to you the best juice of the Soma, the sustainer, let us both drink it first in privacy.



## ಎಂಭತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತ್ವಯಾ ಮನ್ಯೋ ಇತಿ ಸಪ್ತರ್ಚಂ ಷೋಡಶಂ ಸೂಕ್ತಂ । ಆದಿತಸ್ತಿಸ್ರಸ್ತ್ರಿಷ್ಟುಭಸ್ತತಶ್ಚತಸ್ರೋ ಜಗತ್ಯಃ । ಪೂರ್ವವದೃಷಿದೇವತೇ । ತಥಾ ಚಾನುಕ್ರಾಂತಂ । ತ್ವಯಾ ಮನ್ಯೋ ಚತುರ್ಜಗತ್ಯಂತಮಿತಿ ॥ ಅಜಿರನಾಮ್ನ್ಯೇಕಾಹ ಇದಂ ಸೂಕ್ತಂ ಮರುತ್ವತೀಯಶಸ್ತ್ರೇ ನಿವಿದ್ಧಾನಂ । ಸೂತ್ರಂ ಪೂರ್ವಸೂಕ್ತ ಏವೋದಾಹೃತಂ ॥ ವಿನುತ್ತ್ಯಭಿಭೂತಿಷು ವಜ್ರೇಷ್ವೇಕಾಹೇಷ್ವೇತೇ ಸೂಕ್ತೇ ಮರುತ್ವತೀಯನಿಷ್ಕೇವಲ್ಯಯೋಃ ಶಸ್ಯೇ । ಸೂತ್ರಿತಂ ಚ । ವಿನುತ್ತ್ಯಭಿಭೂತ್ಯೋರಿಷುವಜ್ರಯೋಶ್ಚ ಮನ್ಯುಸೂಕ್ತೇ । ಆ. ೯-೮ । ಇತಿ ॥**

ಅನುವಾದವು—**ತ್ವಯಾ ಮನ್ಯೋ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಹಿಂದಿನ ಸೂಕ್ತದಂತೆಯೇ ಈ ಸೂಕ್ತಕ್ಕೆ ಋಷಿದೇವತೆಗಳು. ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು; ಮುಂದಿನ ನಾಲ್ಕು ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ತ್ವಯಾ ಮನ್ಯೋ ಚತುರ್ಜಗತ್ಯಂತಂ** ಎಂದು ಹೇಳಿರುವುದು. ಅಜಿರ ಎಂಬ ಹೆಸರಿನ ಏಕಾಹೇಷ್ಟಿಯಲ್ಲಿ ಈ ಸೂಕ್ತವನ್ನು ಮರುತ್ವತೀಯಶಸ್ತ್ರಮಂತ್ರಗಳಲ್ಲಿ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು

ನಿರ್ದಿಷ್ಟವಾದ ಆಶ್ವಲಾಯನಶ್ರೌತಸೂತ್ರದ ವಾಕ್ಯವನ್ನು ಹಿಂದೆಯೇ ಉದಹರಿಸಲಾಗಿದೆ. ವಿನುತ್ತ್ಯಭಿಭೂತಿ, ವಜ್ರ ಎಂಬ ಏಕಾಹೇಷ್ಟಿಗಳಲ್ಲಿಯೂ ಈ ಎರಡು ಮನ್ಯುದೇವತಾಕವಾದ ಸೂಕ್ತಗಳನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ವಿನುತ್ತ್ಯಭಿಭೂತ್ಯೋರಿಷು ವಜ್ರಯೋಶ್ಚ ಮನ್ಯುಸೂಕ್ತೇ** ಎಂಬ ಸೂಕ್ತದಿಂದ (ಆ. ೯-೮) ವಿವೃತವಾಗಿರುವುದು.

## ಸೂಕ್ತ—೮೪

ಮಂಡಲ— ೧೦ । ಅನುವಾಕ—೬ । ಸೂಕ್ತ—೮೪ ॥
ಅಷ್ಟಕ—೮ । ಅಧ್ಯಾಯ—೩ । ವರ್ಗ—೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಮನ್ಯುಸ್ತಾಪಸಃ ॥
ದೇವತಾ—ಮನ್ಯುಃ ॥
ಛಂದಃ—೧-೩. ತ್ರಿಷ್ಟುಪ್ । ೪-೭. ಜಗತೀ ॥

॥ ಸಂಹಿತಾಪಾಠಃ ॥

ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ ।
ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ॥

॥ ಪದಪಾಠಃ ॥

**ತ್ವಯಾ । ಮನ್ಯೋ ಇತಿ । ಸ್ಽರಥಂ । ಆಽರುಜಂತಃ । ಹರ್ಷಮಾಣಾಸಃ । ಧೃಷಿತಾಃ । ಮರುತ್ವಃ । ತಿಗ್ಮಽಇಷವಃ । ಆಯುಧಾ । ಸಂಽಶಿಶಾನಾಃ। ಅಭಿ । ಪ್ರ । ಯಂತು । ನರಃ । ಅಗ್ನಿಽರೂಪಾಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಮನ್ಯೋ ಹೇ ಮರುತ್ವಃ ತ್ವಯಾ ಸರಥಂ ಸಮಾನಮೇಕಮೇವ ರಥಮಾರುಹ್ಯೇತಿ ಶೇಷಃ। ಆರುಜಂತೋ ಗಚ್ಛಂತೋ ಹರ್ಷಮಾಣಾಸೋ ಹೃಷ್ಟಾ ಧೃಷಿತಾ ಧೃಷ್ಟಾಸ್ತಿಗ್ಮೇಷವಸ್ತೀಕ್ಷ್ಣಬಾಣಾ ಆಯುಧಾಯುಧಾನಿ ಸಂಶಿಶಾನಾಃ ಸಮ್ಯಗ್ನಿಶ್ಯಂತೋ ನರೋ ಯುದ್ಧಸ್ಯ ನೇತಾರ ಇಂದ್ರಾದಯೋ ದೇವಾಸ್ತ್ವದನುಚರಾ ವಾಗ್ನಿರೂಪಾ ಅಗ್ನಿವತ್ತೀಕ್ಷ್ಣದಾಹಾದಿಕರ್ಮಾಣಃ ಯದ್ವಾ ಸಂನದ್ಧಾಃ ಕವಚಿನೋಽಭಿ ಪ್ರ ಯಂತು ಯುದ್ಧೇ ಸಹಾಯಾರ್ಥಂ । ಅತ್ರ ತ್ವಯಾ ಮನ್ಯೋ ಸರಥಮಾರುಹ್ಯ ರುಜಂತ ಇತ್ಯಾದಿ ನಿರುಕ್ತಮನುಸಂಧೇಯಂ । ೧೦-೩೦ ॥**

॥ ಪ್ರತಿಪದಾರ್ಥ ॥

ಮರುತ್ವಃ—ಮರುತ್ತುಗಳೊಡನೆ ಕೂಡಿದ । ಮನ್ಯೋ—ಎಲೈ ಮನ್ಯುದೇವನೇ । ತ್ವಯಾ—ನಿನ್ನೊಡನೆ । ಸರಥಂ—ಸಮಾನವಾದ ರಥವನ್ನು ಹತ್ತಿ । ಆರುಜಂತಃ—ಹೋಗುತ್ತಿರುವವರೂ । ಹರ್ಷಮಾಣಾಸಃ—ಸಂತೋಷಯುಕ್ತರೂ । ಧೃಷಿತಾಃ—ಪ್ರಭಾವಯುತರೂ । ತಿಗ್ಮೇಷವಃ—ತೀಕ್ಷ್ಣವಾದ ಬಾಣಗಳುಳ್ಳವರೂ । ಆಯುಧಾ—ಆಯುಧಗಳನ್ನು । ಸಂಶಿಶಾನಾಃ—ಹರಿತಮಾಡಿಕೊಳ್ಳುವವರೂ । ನರಃ—ಯುದ್ಧಕರ್ಮನೇತೃಗಳೂ ಆದ ದೇವತೆಗಳು । ಅಗ್ನಿರೂಪಾಃ—ಅಗ್ನಿಯ ರೂಪವನ್ನು ಧರಿಸಿದವರಾಗಿ । ಅಭಿ ಪ್ರಯಂತು—ನಮಗಭಿಮುಖವಾಗಿ ಬರಲಿ.

॥ ಭಾವಾರ್ಥ ॥

ಮರುತ್ತುಗಳೊಡನೆ ಕೂಡಿದ ಎಲೈ ಮನ್ಯುದೇವನೇ, ನಿನ್ನೊಡನೆ ಸಮಾನವಾದ ರಥವನ್ನು ಹತ್ತಿಹೋಗುತ್ತಿರುವವರೂ, ಸಂತೋಷಯುಕ್ತರೂ, ಪ್ರಭಾವಯುತರೂ, ತೀಕ್ಷ್ಣವಾದ ಬಾಣಗಳುಳ್ಳವರೂ, ಆಯುಧಗಳನ್ನು ಹರಿತಮಾಡಿಕೊಳ್ಳುವವರೂ, ಯುದ್ಧ ಕರ್ಮನೇತೃಗಳೂ ಆದ ದೇವತೆಗಳು ಅಗ್ನಿಯ ರೂಪವನ್ನು ಧರಿಸಿದವರಾಗಿ ನಮಗಭಿಮುಖವಾಗಿ ಬರಲಿ.

## English Translation

May the leaders (of rites) wearing the form of Agni, (ascending) the same car with you, Manyu, who are accompanied by the Maruts, proceed to combat, advancing. exulting, indignant, armed with sharp arrows, whetting their weapons.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ತ್ವಯಾ ಮನ್ಯೋ ಸರಥಮಾರುಹ್ಯ ರುಜಂತೋ ಹರ್ಷಮಾಣಾಸೋಽಧೃಷಿತಾ ಮರುತ್ವಸ್ತಿಗ್ಮೇಷವ ಆಯುಧಾನಿ ಸಂಶಿಶ್ಯಮಾನಾ ಅಭಿಪ್ರಯಂತು ನರೋ ಅಗ್ನಿರೂಪಾ ಅಗ್ನಿಕರ್ಮಾಣಃ ಸನ್ನದ್ಧಾಃ ಕವಚಿನ ಇತಿ ವಾ ॥

(ನಿ. ೧೦-೩೦)

ಎಲೈ ಮನ್ಯುದೇವನೇ, ನಿನ್ನ ಜತೆಯಲ್ಲಿ ಒಂದೇ ರಥದಲ್ಲಿ ಕುಳಿತು ಸಂತೋಷದಿಂದಿರುವವರೂ, ಯುದ್ಧಾರ್ಥವಾಗಿ ಹೊರಟಿರುವವರೂ ಆದ ನಮ್ಮ ಯುದ್ಧಭಟರು, ತಮ್ಮ ಎದುರಾಳಿಗಳಿಂದ ಸೋಲಿಸಲ್ಪಡದಿರುವವರೂ, ರೋಮಾಂಚಿತರಾಗಿ ತಮ್ಮ ಬಾಣಗಳನ್ನು ಮತ್ತು ಆಯುಧಗಳನ್ನು ಹರಿತಮಾಡುವವರೂ ಆಗಿ ಅಗ್ನಿಯಂತೆ ದಹನ ಅಥವಾ ವಿಧ್ವಂಸನ ಕರ್ಮದಲ್ಲಿ ನಿರತರಾಗಿಯೂ, ಯುದ್ಧಾರ್ಥವಾಗಿ ಕವಚಗಳನ್ನು (Armours) ಧರಿಸುವವರಾಗಿಯೂ ಯುದ್ಧಭೂಮಿಯನ್ನು ಕುರಿತು ಹೊರಡಲಿ ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅ॒ಗ್ನಿರಿ॑ವ ಮನ್ಯೋ ತ್ವಿಷಿ॒ತಃ ಸ॑ಹಸ್ವ ಸೇ॒ನಾ॒ನೀರ್ನಃ॑ ಸಹುರೇ ಹೂ॒ತ ಏ॑ಧಿ ।
ಹ॒ತ್ವಾಯ॒ ಶತ್ರೂ॒ನ್ವಿ ಭ॑ಜಸ್ವ॒ ವೇದ॒ ಓಜೋ॒ ಮಿಮಾ॑ನೋ॒ ವಿ ಮೃಧೋ॑ ನುದಸ್ವ ॥ ೨ ॥

॥ ಪದಪಾಠಃ ॥

ಅ॒ಗ್ನಿಃऽಇ॑ವ । ಮ॒ನ್ಯೋ॒ ಇತಿ॑ । ತ್ವಿ॒ಷಿ॒ತಃ । ಸ॒ಹ॒ಸ್ವ॒ । ಸೇ॒ನಾ॒ऽನೀಃ । ನಃ॒ । ಸ॒ಹು॒ರೇ॒ । ಹೂ॒ತಃ । ಏ॒ಧಿ॒ ।
ಹ॒ತ್ವಾಯ॑ । ಶತ್ರೂ॑ನ್ । ವಿ । ಭ॒ಜ॒ಸ್ವ॒ । ವೇದಃ॑ । ಓಜಃ॑ । ಮಿಮಾ॑ನಃ । ವಿ । ಮೃಧಃ॑ । ನು॒ದ॒ಸ್ವ॒ ॥ ೨ ॥

॥ ಸಾಯಣಭಾಷ್ಯಂ ॥

ಹೇ ಮನ್ಯೋ ಅಗ್ನಿರಿವ ತ್ವಿಷಿತೋ ಜ್ವಲಿತಃ ಸಹಸ್ವ । ಅಭಿಭವ ಶತ್ರೂನ್ । ಹೇ ಸಹುರೇ ಸಹನಶೀಲ ಸೇನಾನೀರೇಧಿ ಭವ ನೋಽಸ್ಮಾಕಂ ಸಂಗ್ರಾಮೇ ಹೂತಃ ಸನ್ । ಕಿಂಚ ಹತ್ವಾಯ ಹತ್ವಾ ಶತ್ರೂನ್ವಿ ಭಜಸ್ವ ಪ್ರಯಚ್ಛಾಸ್ಮಾಕಂ ವೇದೋ ಧನಂ ಶತ್ರುಸಂಬಂಧಿ। ಕಿಂಚೌಜೋ ಮಿಮಾನೋಽಸ್ಮಾಕಂ ಬಲಂ ಕುರ್ವನ್ಮೃಧಃ ಶತ್ರೂನ್ವಿ ನುದಸ್ವ । ಘಾತಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಹುರೇ**—ಶತ್ರುಗಳನ್ನು ಸೋಲಿಸುವ । **ಮನ್ಯೋ**—ಎಲೈ ಮನ್ಯುದೇವನೇ । **ಅಗ್ನಿರಿವ**—ಅಗ್ನಿಯಂತೆ। **ತ್ವಿಷಿತಃ**—ಪ್ರಕಾಶಯುತನಾಗಿ । **ಸಹಸ್ವ**—ಶತ್ರುಗಳನ್ನು ಪ್ರತಿಭಟಿಸಿ ಸೋಲಿಸು । **ಸೇನಾನೀಃ**—ಸೇನಾಧಿಪತಿಯಂತೆ । **ನಃ**—ನಮ್ಮಲ್ಲಿಗೆ । **ಹೂತಃ**—ಕರೆಯಲ್ಪಟ್ಟವನಾಗಿ ವಿನೀತಿಯೋ । **ಏಧಿ**—ದಯಮಾಡು । **ಶತ್ರೂನ್**—ಶತ್ರುಗಳನ್ನು । **ಹತ್ವಾಯ**—ನಾಶಪಡಿಸಿ । **ವೇದಃ**—ಅವರ ಧನವನ್ನು । **ವಿ ಭಜಸ್ವ**—ನಮಗೆ ಹಂಚು । **ಓಜಃ**—ಶಕ್ತಿಯನ್ನು । **ಮಿಮಾನಃ**—ನಮ್ಮಲ್ಲಿಗೆ ಉತ್ಪನ್ನಮಾಡುತ್ತ । **ಮೃಧಃ**—ಶತ್ರುಗಳನ್ನು । **ವಿ ನುದಸ್ವ**—ಓಡಿಸಿ ನಾಶಪಡಿಸು.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಮನ್ಯುದೇವನೇ, ಅಗ್ನಿಯಂತೆ ಪ್ರಕಾಶಯುತನಾಗಿ ಶತ್ರುಗಳನ್ನು ಪ್ರತಿಭಟಿಸಿ ಸೋಲಿಸು. ನಮ್ಮಲ್ಲಿಗೆ ಕರೆಯಲ್ಪಟ್ಟವನಾಗಿ ವಿನೀತಿಯೋ, ಸೇನಾಧಿಪತಿಯಂತೆ ನಮ್ಮಲ್ಲಿಗೆ ಬಾ. ಶತ್ರುಗಳನ್ನು ನಾಶಪಡಿಸಿ ಅವರ ಧನವನ್ನು ನಮಗೆ ಹಂಚು. ನಮ್ಮಲ್ಲಿ ಶಕ್ತಿಯನ್ನು ಉತ್ಪನ್ನಮಾಡುತ್ತ ಅವರನ್ನು ಓಡಿಸಿ ನಾಶಪಡಿಸು.

## English Translation

Manyu, blazing like Agni, overthrow (our foes), come as our general, enduring (Manyu) when invoked (by us) in battle; having slain the

enemies divide (among us) the treasure; granting (us) strength, scatter (our) foes.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿರುವ— **ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ** ಎಂಬ ವಾಕ್ಯಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ ಇತಿ ತಥಾಗ್ನಿರ್ಮಾನ್ಯವೇ ಮಂತ್ರೇ । ತ್ವಿಷಿತೋ ಜ್ವಲಿತಃ । ತ್ವಿಷಿರಿತ್ಯಪ್ಯಸ್ಯ ದೀಪ್ತಿನಾಮ ಭವತಿ ॥**

(ನಿ. ೧-೧೭)

ಇಲ್ಲಿ ತ್ವಿಷಿತಃ ಎಂದರೆ ಪ್ರಕಾಶಮಾನವಾದ ಎಂದರ್ಥವು. ತ್ವಿಷಿ ಎಂದರೆ ಕಾಂತಿ, ಪ್ರಕಾಶ ಎಂದರ್ಥವು.

। ಸಂಹಿತಾಪಾಠಃ ।

**ಸಹಸ್ವ ಮನ್ಯೋ ಅಭಿಮಾತಿಮಸ್ಮೇ ರುಜನ್ಮೃಣನ್ಪ್ರಮೃಣನ್ಪ್ರೇಹಿ ಶತ್ರೂನ್ ।**
**ಉಗ್ರಂ ತೇ ಪಾಜೋ ನನ್ವಾ ರುರುಧ್ರೇ ವಶೀ ವಶಂ ನಯಸ ಏಕಜ ತ್ವಂ॥**

॥ ಪದಪಾಠಃ ॥

**ಸಹಸ್ವ । ಮನ್ಯೋ ಇತಿ । ಅಭಿऽಮಾತಿಂ । ಅಸ್ಮೇ ಇತಿ । ರುಜನ್ । ಮೃಣನ್ । ಪ್ರऽಮೃಣನ್ । ಪ್ರ । ಇಹಿ । ಶತ್ರೂನ್ ।**

**ಉಗ್ರಂ । ತೇ । ಪಾಜಃ । ನನು । ಆ । ರುರುಧ್ರೇ । ವಶೀ । ವಶಂ । ನಯಸೇ । ಏಕऽಜ । ತ್ವಂ ॥ ೩ ॥**

। ಸಾಯಣಭಾಷ್ಯಂ ।

**ಹೇ ಮನ್ಯೋ ಅಸ್ಮೇ ಅಸ್ಮಾಕಮಭಿಮಾತಿಮಭಿಗಂತಾರಂ ಶತ್ರುಂ ಸಹಸ್ವ । ಅಭಿಭವ । ರುಜನ್ ಹಿಂಸನ್ ಮೃಣನ್ ಪ್ರಮೃಣನ್ ಪ್ರಕರ್ಷೇಣ ಹಿಂಸನ್ ಯಥಾ ಪುನರ್ನ ಜೀವೇತ್ತಥಾ ಕುರ್ವಂಸ್ತ್ವಂ ಶತ್ರೂನ್ಪ್ರತಿ ಪ್ರೇಹಿ । ತೇ ತವ ಪಾಜೋ ಬಲಮುಗ್ರಮುದ್ಗೂರ್ಣಂ ಕೇ ನನ್ವಾ ರುರುಧ್ರೇ ಅರುಂಧಂತಿ । ನ ತಥಾ ಸಂಭವತಿ । ಹೇ ಏಕಜ ತ್ವಮಸಹಾಯ ವಶೀ ತ್ವಂ ವಶಂ ನಯಸೇ ಪ್ರಾಪಯಸಿ ಶತ್ರುಂ ॥**

। ಪ್ರತಿಪದಾರ್ಥ ।

**ಮನ್ಯೋ**—ಎಲೈ ಮನ್ಯುದೇವನೇ । **ಅಸ್ಮೇ**— ನಮ್ಮ । **ಅಭಿಮಾತಿಂ**— ಹಿಂಸಕರಾದ ಶತ್ರುಗಳನ್ನು । **ಸಹಸ್ವ**—ಸೋಲಿಸು । **ರುಜನ್**—ನೋಯಿಸುತ್ತಲೂ । **ಮೃಣನ್**— ಹಿಂಸಿಸುತ್ತಲೂ । **ಪ್ರಮೃಣನ್**—

ಸಾಯಿಸುತ್ತಲೂ । **ಶತ್ರೂನ್**—ಶತ್ರುಗಳನ್ನು । **ಪ್ರೇಹಿ**—ಎದುರಿಸು । **ತೇ**—ನಿನ್ನ । **ಉಗ್ರಂ**—ಭಯಂಕರವಾದ । **ಪಾಜಃ**—ಬಲವನ್ನು । **ನನು ಆ ರುರುಧ್ರೇ**—ಯಾರು ಎದುರಿಸಬಲ್ಲರು । **ಏಕಜ**—ಅದ್ವಿತೀಯನಾಗಿ ಉತ್ಪನ್ನನಾದ ಎಲೈ ಮನ್ಯುವೇ । **ತ್ವಂ**—ನೀನು । **ವಶೀ**—ಪ್ರಭುವಾಗಿ । **ವಶಂ ನಯಸೇ**—ಎಲ್ಲರನ್ನೂ ನಿನ್ನ ವಶಮಾಡಿಕೊಳ್ಳುತ್ತೀಯೆ.

॥ ಭಾವಾರ್ಥ ॥

ಎಲೈ ಮನ್ಯುದೇವನೇ, ನಮ್ಮ ಹಿಂಸಕರಾದ ಶತ್ರುಗಳನ್ನು ಸೋಲಿಸು. ಅವರನ್ನು ಹಿಂಸಿಸುತ್ತಲೂ, ನಾಶಪಡಿಸುತ್ತಲೂ, ಅವರನ್ನು ಎದುರಿಸು. ನಿನ್ನ ಭಯಂಕರವಾದ ಬಲವನ್ನು ಯಾರುತಾನೇ ಎದುರಿಸಬಲ್ಲರು ? ಅದ್ವಿತೀಯನಾಗಿ ಉತ್ಪನ್ನನಾದ ಎಲೈ ಮನ್ಯುವೇ, ನೀನು ಪ್ರಭುವಾಗಿ ಎಲ್ಲರನ್ನೂ ನಿನ್ನ ವಶಮಾಡಿಕೊಳ್ಳುತ್ತೀಯೆ.

English Translation

Overthrow, Manyu, our assailant; advance against our foes, wounding, killing, annihilating them; (who) can resist your fierce might ? O you who are without companion, subjecting them you lead them subject.

॥ ಸಂಹಿತಾಪಾಠಃ ॥

ಏಕೋ ಬಹೂನಾಮಸಿ ಮನ್ಯವೀಳಿತೋ ವಿಶಂವಿಶಂ ಯುಧಯೇ ಸಂ ಶಿಶಾಧಿ ।
ಅಕೃತ್ತರುಕ್ತ್ವಯಾ ಯುಜಾ ವಯಂ ದ್ಯುಮಂತಂ ಘೋಷಂ ವಿಜಯಾಯ ಕೃಣ್ಮಹೇ ॥ ೪ ॥

॥ ಪದಪಾಠಃ ॥

ಏಕಃ । ಬಹೂನಾಂ । ಅಸಿ । ಮನ್ಯೋ ಇತಿ । ಈಳಿತಃ । ವಿಶಂऽವಿಶಂ । ಯುಧಯೇ । ಸಂ । ಶಿಶಾಧಿ । ಅಕೃತ್ತಽರುಕ್ । ತ್ವಯಾ । ಯುಜಾ । ವಯಂ । ದ್ಯುಽಮಂತಂ । ಘೋಷಂ । ವಿಽಜಯಾಯ । ಕೃಣ್ಮಹೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಮನ್ಯೋ ಈಳಿತಃ ಸ್ತುತಸ್ತ್ವಮೇಕ ಏವಾಸಹಾಯ ಏವ ಬಹೂನಾಂ ಶತ್ರೂಣಾಮಸಿ । ಭವಸಿ ಪರ್ಯಾಪ್ತೋ ಹಂತುಂ । ಅತೋ ವಿಶಂ ವಿಶಂ ತಾಂ ತಾಮಸ್ಮದ್ವಿರೋಧಿನೀಂ ಪ್ರಜಾಂ ಯುಧಯೇ ಯುದ್ಧಾಯ ಸಂ ಶಿಶಾಧಿ । ಸಮ್ಯಕ್ ತೀಕ್ಷ್ಣೀಕುರು । ಕಿಂಚ ಹೇ ಅಕೃತ್ತರುಗಚ್ಛಿನ್ನದೀಪ್ತೇ

**ತ್ವಯಾ ಯುಜಾ ಸಹಾಯೇನ ವಯಂ ದ್ಯುಮಂತಂ ದೀಪ್ತಿಮಂತಂ ಘೋಷಂ ಸಿಂಹನಾದವಂತಂ ವಿಜಯಾಯ ವಿಶಿಷ್ಟಜಯಾರ್ಥಂ ಕೃಣ್ಮಹೇ । ಕುರ್ಮಃ ॥**

॥ ಪ್ರತಿಪದಾರ್ಥ ॥

**ಮನ್ಯೋ**—ಎಲೈ ಮನ್ಯುದೇವನೇ । **ಈಳಿತಃ**—ನಮ್ಮಿಂದ ಸ್ತುತನಾದ ನೀನು । **ಏಕಃ**—ಒಬ್ಬನೇ । **ಬಹೂನಾಂ ಅಸಿ**—ಅನೇಕ ಶತ್ರುಗಳ ನಾಶಕ್ಕೆ ಸಮರ್ಥನಾಗಿದ್ದೀಯೆ । **ವಿಶಂ ವಿಶಂ**—ನಮ್ಮ ಎಲ್ಲ ಶತ್ರುಜನರೊಡನೆಯೂ । **ಯುಧಯೇ**—ಯುದ್ಧಮಾಡಲು । **ಸಂ ಶಿಶಾಧಿ**—ಉತ್ತೇಜನವನ್ನು ಕೊಡು । **ಅಕೃತ್ತರುಕ್**—ಅಕುಂಠಿತವಾದ ಪ್ರಭೆಯುಳ್ಳ ಎಲೈ ಮನ್ಯುವೇ । **ತ್ವಯಾ ಯುಜಾ**—ನಿನ್ನೊಡನೆ ಸೇರಿ । **ವಯಂ**—ನಾವು । **ದ್ಯುಮಂತಂ**—ಕಾಂತಿಯುತವಾದ । **ಘೋಷಂ**—ಯುದ್ಧಘೋಷವನ್ನು । **ವಿಜಯಾಯ**—ಜಯಸಿದ್ಧಿಗಾಗಿ । **ಕೃಣ್ಮಹೇ**—ಮಾಡುತ್ತೇವೆ.

। ಭಾವಾರ್ಥ ।

ಎಲೈ ಮನ್ಯುದೇವನೇ, ನಮ್ಮಿಂದ ಸ್ತುತನಾದ ನೀನು ಒಬ್ಬನೇ, ಅನೇಕ ಶತ್ರುಗಳ ನಾಶಕ್ಕೆ ಸಮರ್ಥನಾಗಿದ್ದೀಯೆ. ನಮ್ಮ ಎಲ್ಲ ಶತ್ರುಜನರೊಡನೆಯೂ ಯುದ್ಧಮಾಡಲು ನಮಗೆ ಉತ್ತೇಜನವನ್ನು ಕೊಡು. ಅಕುಂಠಿತವಾದ ಪ್ರಭೆಯುಳ್ಳ ಎಲೈ ಮನ್ಯುವೇ, ನಿನ್ನೊಡನೆ ಸೇರಿ ನಾವು ಕಾಂತಿಯುತವಾದ ಯುದ್ಧಘೋಷವನ್ನು ನಮ್ಮ ಜಯಸಿದ್ಧಿಗಾಗಿ ಮಾಡುತ್ತೇವೆ.

## English Translation

You are praised, Manyu, as (the conqurer) alone of many ; animate us to contend with all men ; with you, O you of unshorn radiance, for our ally, we raise a loud shout for victory.

। ಸಂಹಿತಾಪಾಠಃ ।

ವಿಜೇಷಕೃದಿಂದ್ರ ಇವಾನವಬ್ರವೋ೩ಸ್ಮಾಕಂ ಮನ್ಯೋ ಅಧಿಪಾ ಭವೇಹ ।
ಪ್ರಿಯಂ ತೇ ನಾಮ ಸಹುರೇ ಗೃಣೀಮಸಿ ವಿದ್ಮಾ ತಮುತ್ಸಂ ಯತ ಆಬಭೂಥ ॥ ೫ ॥

॥ ಪದಪಾಠಃ ॥

ವಿಜೇಷಽಕೃತ್ । ಇಂದ್ರಃಽಇವ । ಅನವಽಬ್ರವಃ । ಅಸ್ಮಾಕಂ । ಮನ್ಯೋ ಇತಿ । ಅಧಿಽಪಾಃ । ಭವ । ಇಹ ।

ಪ್ರಿಯಂ । ತೇ । ನಾಮ । ಸಹುರೇ । ಗೃಣೀಮಸಿ । ವಿದ್ಮ । ತಂ । ಉತ್ಸಂ । ಯತಃ । ಆಽಬಭೂಥ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಮನ್ಯೋ ಇಂದ್ರ ಇವ ವಿಜೇಷಕೃದ್ವಿಜಯಕರ್ತಾ ತಥಾನವಬ್ರವೋಽನಿಂದಿತವಚನಃ । ಅನವಬ್ರವೋಽನವಕ್ಷಿಪ್ತವಚನ ಇತಿ ಯಾಸ್ಕಃ । ನಿ. ೬-೨೯ । ಈದೃಶಸ್ತ್ವಮಸ್ಮಾಕಮಧಿಪಾ ಅಧಿಕಂ ಪಾತಾ ರಕ್ಷಿತಾ ಭವೇಹಾಸ್ಮಿನ್ಯಜ್ಞೇ । ಹೇ ಸಹುರೇ ಶತ್ರೂಣಾಂ ಸಹನಶೀಲ ತೇ ಪ್ರಿಯಂ ನಾಮ ಸ್ತೋತ್ರಂ ಗೃಣೀಮಸಿ । ಗೃಣೀಮಃ । ಸ್ತುಮಃ । ಯತೋ ನಾಮ್ನಃ ಸ್ತೋತ್ರಾತ್ತ್ವಮಾಬಭೂಥ ಆಭವಸಿ ಪ್ರವೃದ್ಧೋ ಭವಸಿ ತಮುತ್ಸಂ ಬಲಸ್ಯೋದ್ಗಮಯಿತಾರಂ ವಿದ್ಮ । ಜಾನೀಮಃ ॥**

॥ ಪ್ರತಿಪದಾರ್ಥ ॥

**ಮನ್ಯೋ**—ಎಲೈ ಮನ್ಯುದೇವನೇ । **ಇಂದ್ರ ಇವ**—ಇಂದ್ರನಂತೆ । **ವಿಜೇಷಕೃತ್**—ವಿಜಯಶಾಲಿಯೂ । **ಅನವಬ್ರವಃ**—ನಿಂದಾರಹಿತನೂ ಆದ ನೀನು । **ಇಹ**—ಈ ಯಜ್ಞದಲ್ಲಿ । **ಅಸ್ಮಾಕಂ**—ನಮಗೆ । **ಅಧಿಪಾಃ**—ಪೂರ್ಣರಕ್ಷಕನಾಗಿ । **ಭವ**—ಆಗಿರು । **ಸಹುರೇ**—ಶತ್ರುನಾಶಕನಾದ ಮನ್ಯುವೇ । **ತೇ**—ನಿನ್ನನ್ನು ಪ್ರಶಂಸಿಸಿ । **ಪ್ರಿಯಂ ನಾಮ**—ಹಿತಕರವಾದ ಸ್ತೋತ್ರವನ್ನು । **ಗೃಣೀಮಸಿ**—ನಾವು ಪಠಿಸುತ್ತೇವೆ । **ಯತಃ**—ಯಾವ ಸ್ತುತಿಯಿಂದ । **ಆಬಭೂಥ**—ನೀನು ಪುಷ್ಟಿಯನ್ನು ಹೊಂದುವೆಯೋ । **ತಂ ಉತ್ಸಂ**—ಉತ್ತೇಜಕವಾದ ಆ ಸ್ತುತಿಯನ್ನು । **ವಿದ್ಮ**—ನಾವು ತಿಳಿದಿದ್ದೇವೆ.

॥ ಭಾವಾರ್ಥ ॥

ಎಲೈ ಮನ್ಯುದೇವನೇ, ಇಂದ್ರನಂತೆ ವಿಜಯಿಯೂ, ನಿಂದಾರಹಿತನೂ ಆದ ನೀನು ಈ ಯಜ್ಞದಲ್ಲಿ ನಮಗೆ ಪೂರ್ಣವಾದ ರಕ್ಷಕನಾಗಿರು. ಶತ್ರುನಾಶಕನಾದ ಎಲೈ ಮನ್ಯುವೇ, ನಿನ್ನನ್ನು ಪ್ರಶಂಸಿಸಿ ಹಿತಕರವಾದ ಸ್ತೋತ್ರವನ್ನು ನಾವು ಪಠಿಸುತ್ತೇವೆ. ಯಾವ ಸ್ತುತಿಯಿಂದ ನೀನು ಪುಷ್ಟಿಯನ್ನು ಹೊಂದುವೆಯೋ, ಉತ್ತೇಜಕವಾದ ಅದೇ ಸ್ತುತಿಯನ್ನು ನಾವು ಅರಿತಿದ್ದೇವೆ.

English Translation

Manyu, the giver of victory like Indra, irreproachable, be our protector at this (sacrifice) ; enduring one, we sing to you acceptable praise ; we know this to be the source whence you have become (mighty).

॥ ವಿಶೇಷವಿಷಯಗಳು ॥

**ಅನವಬ್ರವಃ**—**ಅನಿಂದಿತವಚನಃ** । ನಿರ್ದೋಷವಚನವುಳ್ಳ ; ಈ ಶಬ್ದಕ್ಕೆ ಯಾಸ್ಕರು—**ಅನವಬ್ರವಃ । ಅನವಬ್ರವೋಽನವಕ್ಷಿಪ್ತವಚನಃ । ವಿಜೇಷಕೃದಿಂದ್ರ ಇವಾನವಬ್ರವಃ ಇತ್ಯಪಿ ನಿಗಮೋ ಭವತಿ ॥** (ನಿ. ೬-೨೯) ಎಂದು ನಿರ್ವಚನವನ್ನು ಹೇಳಿದಾರೆ. ಅನವಬ್ರವಃ ಎಂದರೆ ತಾನು ಆಡುವ ಮಾತುಗಳಲ್ಲಿ ದೋಷಗಳಿಲ್ಲದಿರುವವನು. ಉತ್ತಮವಾದ, ನಿರ್ದೋಷವಾದ, ಅನಿಂದ್ಯ ಅಥವಾ ಸಭ್ಯವಾದ ಮಾತುಗಳನ್ನಾಡುವವನು ಎಂದಭಿಪ್ರಾಯವು. ಇಂದ್ರನ ವಾಕ್ಯವು ಆ ರೀತಿ ದೋಷರಹಿತವಾಗಿರುವುದರಿಂದ ಮನ್ಯುದೇವತೆಯ ವಾಕ್ಯವೂ ಆ ರೀತಿ ಇರು ಇರುವುದೆಂದು ಇಲ್ಲಿ ಇಂದ್ರನ ಉದಾಹರಣೆಯನ್ನು ಋಷಿಯು ಕೊಟ್ಟಿದಾನೆ.

। ಸಂಹಿತಾಪಾಠಃ ।

ಆಭೂತ್ಯಾ ಸಹಜಾ ವಜ್ರ ಸಾಯಕ ಸಹೋ ಬಿಭರ್ಷ್ಯಭಿಭೂತ ಉತ್ತರಂ ।
ಕ್ರತ್ವಾ ನೋ ಮನ್ಯೋ ಸಹ ಮೇದ್ಯೇಧಿ ಮಹಾಧನಸ್ಯ ಪುರುಹೂತ ಸಂಸೃಜಿ ॥ ೬ ॥

। ಪದಪಾಠಃ ॥

ಆಽಭೂತ್ಯಾ । ಸಹಽಜಾಃ । ವಜ್ರ । ಸಾಯಕ । ಸಹಃ । ಬಿಭರ್ಷಿ । ಅಭಿಽಭೂತೇ । ಉತ್ಽತರಂ ।
ಕ್ರತ್ವಾ । ನಃ । ಮನ್ಯೋ ಇತಿ । ಸಹ । ಮೇದೀ । ಏಧಿ । ಮಹಾಽಧನಸ್ಯ । ಪುರುಽಹೂತ । ಸಂಽಸೃಜಿ ॥

। ಸಾಯಣಭಾಷ್ಯಂ ।

ಹೇ ವಜ್ರ ವಜ್ರವತ್ಸಾರಭೂತ ಹೇ ಸಾಯಕ ಶತ್ರೂಣಾಮಂತಕರಾಭಿಭೂತೇ ಶತ್ರೂಣಾಮಭಿಭಾವುಕ ಮನ್ಯೋ ಆಭೂತ್ಯಾ । ಆಭೂತಿರಭಿಭವಃ । ತೇನ ಸಹಜಾಃ ಸಹೈವೋತ್ಪನ್ನಸ್ತ್ವಮುತ್ತರಮುತ್ಕೃಷ್ಟತರಂ ಸಹೋ ಬಲಂ ಬಿಭರ್ಷಿ । ಧಾರಯಸಿ । ಹೇ ಮನ್ಯೋ ಕ್ರತ್ವಾ ಕರ್ಮಣಾ ಸಹ ನೋಽಸ್ಮಾಕಂ ಮೇದ್ಯೇಧಿ । ಸ್ನಿಗ್ಧೋ ಭವ । ಕುತ್ರೇತಿ ತದುಚ್ಯತೇ । ಮಹಾಧನಸ್ಯ । ಸಂಗ್ರಾಮನಾಮೈತತ್ । ಸಂಗ್ರಾಮಸ್ಯ ಸಂಸೃಜಿ ಸರ್ಗೇ । ಹೇ ಪುರುಹೂತ ಬಹುಭಿರಾಹೂತೇತಿ ಮನ್ಯುಸಂಬೋಧನಂ ॥

। ಪ್ರತಿಪದಾರ್ಥ ।

**ವಜ್ರ**—ವಜ್ರದಂತೆ ಕಠಿನನೂ । **ಸಾಯಕ**—ಬಾಣದಂತೆ ಹಿಂಸಕನೂ । **ಅಭಿಭೂತೇ**—ಶತ್ರುನಾಶಕನೂ ಆದ ಎಲೈ ಮನ್ಯುವೇ । **ಆಭೂತ್ಯಾ**—ಶತ್ರುಪರಾಭವದೊಡನೆ । **ಸಹಜಾಃ**—ಒಂದಿಗೆ ಹುಟ್ಟಿದ ನೀನು । **ಉತ್ತರಂ**—ಪ್ರಶಸ್ಯವಾದ । **ಸಹಃ**—ಬಲವನ್ನು । **ಭಿಭರ್ಷಿ**—ಧರಿಸಿದ್ದೀಯೆ । **ಮಹಾಧನಸ್ಯ**—ಯುದ್ಧವು । **ಸಂಸೃಜಿ**—ಪ್ರಾಪ್ತವಾದಾಗ । **ಪುರುಹೂತ**—ಅನೇಕ ಬಾರಿ ಕರೆಯಲ್ಪಡುವ । **ಮನ್ಯೋ**—ಎಲೈ ಮನ್ಯುದೇವನೇ । **ಕ್ರತ್ವಾ ಸಹ**—ಯುದ್ಧ ಕರ್ಮದೊಡನಿರುವ । **ನಃ**—ನಮ್ಮಲ್ಲಿ । **ಮೇಧ್ಯೇಧಿ**—ಪ್ರೀತಿಯುತನಾಗಿರು.

।। ಭಾವಾರ್ಥ ।।

ವಜ್ರದಂತೆ ಕಠಿಣನನೂ, ಬಾಣದಂತೆ ಹಿಂಸಕನೂ, ಶತ್ರುನಾಶಕನೂ ಆದ ಎಲೈ ಮನ್ಯುವೇ, ಶತ್ರುಪರಾಭವದೊಡನೆ ಒಂದಿಗೆ ಹುಟ್ಟಿದ ನೀನು ಪ್ರಶಸ್ಯವಾದ ಬಲವನ್ನು ಧರಿಸಿದ್ದೀಯೆ. ಯುದ್ಧವು ಪ್ರಾಪ್ತವಾದಾಗ ಅನೇಕ ಬಾರಿ ಕರೆಯಲ್ಪಡುವ ಎಲೈ ಮನ್ಯುದೇವನೇ, ಯುದ್ಧ ಕರ್ಮದೊಡನಿರುವ ನಮ್ಮಲ್ಲಿ ಪ್ರೀತಿಯುತನಾಗಿರು.

English Translation

(Manyu), you destructive thunderbolt, the overpowerer (of foes), twin-born with victory, you possess exceeding strength ; be favourable to us, Manyu, in deeds, you who are invoked by many in the shock of battle.

॥ ಸಂಹಿತಾಪಾಠಃ ॥

ಸಂಸೃಷ್ಟಂ ಧನಮುಭಯಂ ಸಮಾಕೃತಮಸ್ಮಭ್ಯಂ ದತ್ತಾಂ ವರುಣಶ್ಚ ಮನ್ಯುಃ ।
ಭಿಯಂ ದಧಾನಾ ಹೃದಯೇಷು ಶತ್ರವಃ ಪರಾಜಿತಾಸೋ ಅಪ ನಿ ಲಯಂತಾಂ ॥ ೭ ॥

॥ ಪದಪಾಠಃ ॥

ಸಂऽಸೃಷ್ಟಂ । ಧನಂ । ಉಭಯಂ । ಸಂऽಆಕೃತಂ । ಅಸ್ಮಭ್ಯಂ । ದತ್ತಾಂ । ವರುಣಃ । ಚ । ಮನ್ಯುಃ ।
ಭಿಯಂ । ದಧಾನಾಃ । ಹೃದಯೇಷು । ಶತ್ರವಃ । ಪರಾऽಜಿತಾಸಃ । ಅಪ । ನಿ । ಲಯಂತಾಂ ॥ ೭ ॥

॥ ಸಾಯಣಭಾಷ್ಯಂ ॥

ಸಂಸೃಷ್ಟಮವಿಭಾಗಮಾಪನ್ನಮುಭಯಮುಭಯವಿಧಂ ಧನಂ ಸಮಾಕೃತಂ ಸಮ್ಯಗಾನೀತಮಸ್ಮಭ್ಯಂ ದತ್ತಾಂ । ಕಃ । ವರುಣಶ್ಚ ದೇವೋ ಮನ್ಯುಶ್ಚ । ಭಿಯಂ ಭಯಂ ಹೃದಯೇ ದಧಾನಾಃ ಶತ್ರವೋऽಸ್ಮದ್ವಿರೋಧಿನಃ ಪರಾಜಿತಾಸಃ ಪರಾಜಿತಾ ಅಪ ನಿ ಲಯಂತಾಂ । ಅಪನಿಲೀನಾ ಭವಂತು ॥

॥ ಪ್ರತಿಪದಾರ್ಥ ॥

**ವರುಣಃ**—ವರುಣನೂ । **ಮನ್ಯುಃ**—ಮನ್ಯುವೂ । **ಅಸ್ಮಭ್ಯಂ**—ನಮಗೆ । **ಸಂಸೃಷ್ಟಂ**—ವಿಭಕ್ತವಲ್ಲದುದೂ । **ಉಭಯಂ**—ಎರಡು ವಿಧವಾದುದೂ ಆದ । **ಧನಂ**—ಧನವನ್ನು । **ಸಮಾಕೃತಂ**—ನಮ್ಮ ಸ್ವಂತಕ್ಕೆ ಸೇರುವಂತೆ। **ದತ್ತಾಂ**—**ಕೊಡಲಿ** । **ಹೃದಯೇಷು**—ಹೃದಯಗಳಲ್ಲಿ । **ಭಿಯಾ**—ಭೀತಿಯನ್ನು । **ದಧಾನಾಃ**—ಹೊಂದಿರುವ । **ಶತ್ರವಃ**—ನಮ್ಮ ಶತ್ರುಗಳು । **ಪರಾಜಿತಾಸಃ**—ನಮ್ಮಿಂದ ಸೋಲಿಸಲ್ಪಟ್ಟವರಾಗಿ । **ಅಪ ನಿ ಲಯಂತಾಂ**—ನಾಶವನ್ನು ಹೊಂದಲಿ.

॥ ಭಾವಾರ್ಥ ॥

ವರುಣನೂ, ಮನ್ಯುವೂ, ನಮಗೆ ವಿಭಕ್ತವಲ್ಲದುದೂ, ಎರಡು ವಿಧವಾದುದೂ ಆದ ಧನವನ್ನು ನಮ್ಮ ಸ್ವಂತಕ್ಕೆ ಸೇರುವಂತೆ ಒದಗಿಸಲಿ. ಹೃದಯಗಳಲ್ಲಿ ಭೀತಿಯನ್ನು ಹೊಂದಿರುವ ನಮ್ಮ ಶತ್ರುಗಳು ನಮ್ಮಿಂದ ಸೋಲಿಸಲ್ಪಟ್ಟವರಾಗಿ ನಮ್ಮಿಂದ ನಾಶಹೊಂದಲಿ.

## English Translation

May Varuna and Manyu bestow upon us wealth of both kinds undivided and completely our own, and may our enemies, bearing fear within their hearts, be overcome and utterly destroyed.



## ಎಂಭತ್ತೈದನೆಯ ಸೂಕ್ತವು.

### ಪೀಠಿಕೆ.

---

ಈ ಸೂಕ್ತದಲ್ಲಿ ಮೊದಲಿನ ಐದು ಋಕ್ಕುಗಳಲ್ಲಿ ಸೋಮದೇವತೆಯ ವಿಷಯವೂ ೬-೧೬ನೆಯ ಋಕ್ಕುಗಳಲ್ಲಿ ಸೂರ್ಯಾದೇವತೆಯ ವಿವಾಹದ ವಿಷಯವೂ ಉಕ್ತವಾಗಿವೆ. ಈ ಸೂಕ್ತಕ್ಕೆ ಸೂರ್ಯದೇವಿಯೇ ಋಷಿಯು. ಸೂಕ್ತದ ಪ್ರಾರಂಭದಲ್ಲಿ ಸೂರ್ಯೆಯು ತನ್ನ ಪತಿಯಾದ ಸೋಮವನ್ನು ಸ್ತುತಿಸಿ ಅನಂತರ ತನ್ನ ವಿವಾಹದ ವಿಷಯವನ್ನು ಪ್ರಶಂಸೆಮಾಡಿದಾಳೆ. ಆದ್ದರಿಂದ ಈಸಂದರ್ಭದಲ್ಲಿ ಸೋಮದೇವತೆಯ ವಿಷಯವನ್ನೂ, ಸೂರ್ಯಾದೇವಿಯ ವಿವಾಹದ ವಿಷಯವನ್ನೂ ಸೂಕ್ಷ್ಮವಾಗಿ ಪರಿಶೀಲಿಸುವುದು ಅವಶ್ಯಕವಾಗಿದೆ. ಸೋಮದೇವತೆಯ ವಿಷಯವನ್ನು ಈ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿಮರ್ಶೆಮಾಡುತ್ತೇವೆ. ಈಗ ಸೂರ್ಯಾವಿವಾಹದ ವಿಷಯವನ್ನುಮಾತ್ರ ವಿವರಿಸಲಾಗುತ್ತದೆ.

ತೈತ್ತಿರೀಯ ಬ್ರಾಹ್ಮಣದಲ್ಲಿ ಈ ರೀತಿ ಇದೆ—

**ಪ್ರಜಾಪತಿಃ ಸೋಮಗ್ಂ ರಾಜಾನಮಸೃಜತ । ತಂ ತ್ರಯೋ ವೇದಾ ಅನ್ವಸೃಜ್ಯಂತ । ತಾನ್ ಹಸ್ತೇಽಕುರುತ । ಅಥ ಹ ಸೀತಾ ಸಾವಿತ್ರೀ । ಸೋಮಗ್ಂ ರಾಜಾನಂ ಚಕಮೇ । ಶ್ರದ್ಧಾಮು ಸ ಚಕಮೇ । ಸಾ ಹ ಪಿತರಂ ಪ್ರಜಾಪತಿಮುಪಸಸಾರ । ತಗ್ಂ ಹೋವಾಚ । ನಮಸ್ತೇ ಅಸ್ತು ಭಗವಃ । ಉಪತ್ವಾಽಯಾನಿ । ಪ್ರ ತ್ವಾ ಪದ್ಯೇ । ಸೋಮಂ ವೈ ರಾಜಾನಂ ಕಾಮಯೇ । ಶ್ರದ್ಧಾಮು ಸ ಕಾಮಯತ ಇತಿ । ತಸ್ಯಾ ಉ ಹಸ್ಥಾಗರಮಲಂಕಾರಂ ಕಲ್ಪಯಿತ್ವಾ। ದಶಹೋತಾರಂ ಪುರಸ್ತಾದ್ವ್ಯಾಖ್ಯಾಯ। ಚತುರ್ ಹೋತಾರಂ ದಕ್ಷಿಣತಃ। ಪಂಚಹೋತಾರಂ ಪಶ್ಚಾತ್ । ಷಡ್ಢೋತಾರಮುತ್ತರತಃ । ಸಪ್ತಹೋತಾರಮುಪರಿಷ್ಟಾತ್ । ಸಂಭಾರೈಶ್ಚ ಪತ್ನಿಭಿಶ್ಚ ಮುಖೇಽಲಂಕೃತ್ಯ। ಆಸ್ಯಾರ್ಧಂ ವವ್ರಾಜ ! ತಾಗ್ಂ ಹೋದೀಕ್ಷ್ಯೋವಾಚ । ಭೋಗಂ ತು ವ ಆಚಕ್ಷ್ವ । ಏತನ್ಮ ಆಚಕ್ಷ್ವ । ಯತ್ತೇ ಪಾಣಾವಿತಿ । ತಸ್ಯಾ ಉ ಹ ತ್ರೀನ್ ವೇದಾನ್ ಪ್ರದದೌ ॥** (ತೈ. ಬ್ರಾ. ೨-೩-೧೦-೧, ೨. ೩)

ಪೂರ್ವದಲ್ಲಿ ಪ್ರಜಾಪತಿಯು ಸೋಮದೇವನನ್ನು ಸೃಷ್ಟಿಮಾಡಿದನು. ಅನಂತರ ಋಗ್ಯಜುಃ ಸಾಮಗಳೆಂಬ ಮೂರ ವೇದಗಳ ಸೃಷ್ಟಿಯೂ ಆಯಿತು. ಅವುಗಳನ್ನು ತನ್ನ ಕೈಯಲ್ಲಿಟ್ಟುಕೊಂಡಿರುವುದನ್ನು ಸವಿತೃದೇವನ ಪುತ್ರಿಯಾದ

ಸಾವಿತ್ರಿಯು (ಸೂರ್ಯದೇವಿಯು) ನೋಡಿದಳು. ಆಗ ಅವಳಿಗೆ ಸೋಮದೇವನಮೇಲೆ ಕಾಮಾಲಾಭಿಲಾಷೆ ಉಂಟಾಯಿತು. ಆದರೆ ಆ ಸೋಮದೇವನಿಗೆ ಶ್ರದ್ಧಾ ದೇವಿಯಲ್ಲಿಮನಸ್ಸಿದ್ದಿತು. ಅವನು ಸೂರ್ಯಾದೇವಿಯನ್ನು ವಿವಾಹವಾಗಲು ಒಪ್ಪಲಿಲ್ಲ. ಆಗ ಸೂರ್ಯಾದೇವಿಯು ಸೋಮನತಂದೆಯಾದ ಪ್ರಜಾಪತಿಯಬಳಿಗೆ ಹೋಗಿ, ಎಲೈಸ್ವಾಮಿಯೇ, ಇಗೋ ನಿನಗೆ ನಮಸ್ಕರಿಸುವೆನು. ನಾನು ಒಂದು ಕಾರ್ಯಾರ್ಥವಾಗಿ ನಿನ್ನಬಳಿಗೆ ಬಂದಿರುವೆನು. ನಾನು ಕೇಳಿದ ವರವನ್ನು ಕೊಟ್ಟು ನನ್ನನ್ನು ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿದಳು. ಆಗ ಪ್ರಜಾಪತಿಯು ನಿನಗೇನು ಬೇಕು ಎನ್ನಲು ಸೂರ್ಯೆಯು ಎಲೈ ಭಗವಂತನೇ, ನಾನು ಸೋಮದೇವನನ್ನು ಮೋಹಿಸಿರುತ್ತೇನೆ. ಅವನನ್ನೇ ಮದುವೆಯಾಗಲು ಇಚ್ಛಿಸುತ್ತೇನೆ. ಆದರೆ ಆ ಸೋಮನು ಮಾತ್ರ ನನ್ನಲ್ಲಿ ಅನುರಾಗವಿಲ್ಲದೆ ಶ್ರದ್ಧಾದೇವಿಯಲ್ಲಿ ಆಸಕ್ತನಾಗಿರುವನು ಎಂದಳು. ಇದನ್ನುಕೇಳಿ ಪ್ರಜಾಪತಿಯು ಮನಸ್ಸಿನಲ್ಲಿಯೇ ಆಲೋಚಿಸಿ ಸೂರ್ಯೆಯನ್ನು ಕುರಿತು—ಒಳ್ಳೇದು, ನೀನು ಸೋಮದೇವನಕಣ್ಣಿಗೆ ಆಕರ್ಷಕವಾಗಿ ಕಂಡುಬರಬೇಕಾದರೆ ಆಭರಣಾದಿಗಳಿಂದ ನಿನ್ನ ದೇಹವನ್ನು ಚೆನ್ನಾಗಿ ಅಲಂಕರಿಸಿಕೊಂಡರೆ ಆಗ ಸೋಮನು ನಿನ್ನನ್ನು ಮೆಚ್ಚಿ ಮದುವೆಯಾಗಬಹುದು ಎಂದು ಹೇಳಿ ನಾನಾವಿಧ ವಸ್ತ್ರಾಭರಣಾದಿಗಳಿಂದ ಅವಳನ್ನು ಅಲಂಕರಿಸಿ ಸ್ವಲ್ಪದೂರ ಅವಳನ್ನು ಕರದುಕೊಂಡುಹೋಗಿ ಸೋಮರಾಜನ ಬಳಿ ಬಿಟ್ಟನು. ಆಗ ಸೂರ್ಯೆಯು ಪ್ರಜಾಪತಿಯನ್ನು ಕುರಿತು ನನ್ನಪತಿಯೊಡನೆ ಭೋಗಾದಿಗಳನ್ನನುಭವಿಸಲು ಅನುಕೂಲವಾಗುವಂತೆ ನಿನ್ನ ಕೈಲಿರುವುದನ್ನು ನನಗೆ ಬಳುವಳಿಯಾಗಿ ಕೊಡು ಎಂದು ಕೇಳಿದಳು. ಪ್ರಜಾಪತಿಯು ಹಾಗೆಯೇ ಆಗಲೆಂದೊಪ್ಪಿ ಅವಳಿಗೆ ತನ್ನ ಕೈಲಿದ್ದ ಮೂರು ವೇದಗಳನ್ನು ಕೊಟ್ಟನು ಎಂಬ ಇತಿಹಾಸವು ಉಕ್ತವಾಗಿದೆ. ಐತರೇಯಬ್ರಾಹ್ಮಣದಲ್ಲಿ ಈ ವಿಷಯವು ಸ್ವಲ್ಪ ವ್ಯತ್ಯಸ್ತವಾಗಿ ವರ್ಣಿತವಾಗಿದೆ.

ಸ್ಕಂದಸ್ವಾಮಿಗಳು **ಅತ್ರ ಪ್ರಜಾಪತಿರ್ವೈ ಸೋಮಾಯ ರಾಜ್ಞೇ** (ಐ. ಬ್ರಾ. ೪-೭-೧) **ಇತ್ಯಾದ್ಯೈತರೇಯಬ್ರಾಹ್ಮಣಾಧೀತಮಿಹಾಪ್ಯಾಕೃಷ್ಟವ್ಯಂ**—ಇಲ್ಲಿ ಪ್ರಜಾಪತಿಯು ರಾಜನಾದ ಸೋಮನಿಗೆ ತನ್ನ ಮಗಳನ್ನು ಕೊಟ್ಟನು ಎಂಬ ಇತಿಹಾಸವನ್ನು ಹೇಳುವ ಐತರೇಯ ಬ್ರಾಹ್ಮಣದ ವಾಕ್ಯವನ್ನು ವಿವರಿಸಬೇಕು ಎಂದು ವ್ಯಾಖ್ಯಾನ ಮಾಡಿರುವರು. ಮತ್ತು ಅದೆಲ್ಲವನ್ನು ಉದಾಹರಣೆಗಾಗಿ ಕೊಟ್ಟಿರುವರು—

> **ಪ್ರಜಾಪತಿಃ ಸವಿತುಃ ದುಹಿತರಂ ಸೂರ್ಯಾಂ ಸೋಮಾಯ ರಾಜ್ಞೇ ಪ್ರಾಯಚ್ಛತ್। ಯೇ ತ್ವನ್ಯೇ ದೇವಾಃ ತಾಂ ವರಯಿತುಮಾಗಚ್ಛನ್। ತೇಭ್ಯೋ ವಿವಾಹಾದನಂತರಮ್ಯುಕ್ಸಹಸ್ರಮುದದಾತ್। ಯದೇತದಾಶ್ವಿನಂ ನಾಮ ತಸ್ಮಿನ್ ದೇವಾ ವಿವಾದಮಕುರ್ವನ್। ಮಮೇದಮಸ್ತು ಮಮೇದಮಸ್ತ್ವಿತಿ। ತೇಽಬ್ರುವನ್। ಆಜಿಂ ಧಾವಾಮ। ಯೋ ನೋ ಜೇಷ್ಯತಿ ತಸ್ಯೇದಂ ಭವಿಷ್ಯತೀತಿ। ತೇಽಗ್ನೇರ್ಗೃಹಪತೇರುಪರ್ಯಾದಿತ್ಯಂ ಕಾಷ್ಠಾಂ ಕೃತ್ವಾಽಭಿಧಾವನ್। ಕಾಷ್ಠಾ ಆಜ್ಯಂತ ಉಚ್ಯತೇ ಅಶ್ವತರೀರಥೇನಾಗ್ನಿರಾಜಿಮಧಾವತ್। ಗೋಭಿರರುಣೈರುಷಾಃ। ಹರಿರಥೇನೇಂದ್ರಃ। ಗರ್ದಭರಥೇನಾಶ್ವಿನೌ। ತತ್ರಾಶ್ವಿನಾವಜಯತಾಮ್। ಇತಿ ॥**

ಬ್ರಹ್ಮನು ಸವಿತೃದೇವನ ಸೂರ್ಯಾ ಎಂಬ ಹೆಸರುಳ್ಳ ಮಗಳನ್ನು ರಾಜನಾದ ಸೋಮನಿಗೆ ವಿವಾಹಮಾಡಿಕೊಟ್ಟನು. ಆಗ ಇತರ ದೇವತೆಗಳು ಅವಳನ್ನು ವರಿಸುವುದಕ್ಕಾಗಿ ಬಂದರು. ಅವನು ವಿವಾಹವಾದನಂತರ ಅವರಿಗೆ ಒಂದು ಸಾವಿರಋಕ್ಕುಗಳನ್ನುಕೊಟ್ಟನು. ಈಋಕ್ಕುಗಳಿಗೆ **ಆಶ್ವಿನ** ಋಕ್ಕುಗಳು ಎಂದುಹೆಸರು ಪ್ರಸಿದ್ಧವಾಗಿರುವುದು. ಈ ಋಕ್ಕುಗಳನ್ನು ಅಲ್ಲಿಗೆ ಬಂದಿದ್ದ ದೇವತೆಗಳು ನನಗೆ ಬೇಕು, ತನಗೆ ಬೇಕು ಎಂದು ವಿವಾದವನ್ನು ಮಾಡಿದರು. ಅನಂತರ

ಅವರು ಈ ಋಕ್ಕುಗಳು, (ಸ್ಪರ್ಧೆಯಲ್ಲಿ) ಯುದ್ಧದಲ್ಲಿ ಗೆದ್ದವರಿಗೆ ಸಿಕ್ಕಲಿ ಎಂದು ತಮ್ಮಲ್ಲಿಯೇ ನಿರ್ಣಯವನ್ನು ಮಾಡಿಕೊಂಡರು. ಅನಂತರ ಅವರು ಗೃಹಪತಿಯಾದ ಅಗ್ನಿಯ ಮೇಲುಗಡೆಯಿಂದ ಆದಿತ್ಯನವರೆಗೆ ಹೋಗುವುದೇ ಸ್ಪರ್ಧೆಯ ಕೊನೆಯೆಂದು ನಿಷ್ಕರ್ಷೆಯನ್ನು ಮಾಡಿಕೊಂಡು ಓಡಲು ಉಪಕ್ರಮವನ್ನು ಮಾಡಿದರು. ಆಗ ಅಗ್ನಿಯು ಹೇಸರಗತ್ತೆಯನ್ನು ಕಟ್ಟಿರುವ ರಥದಿಂದ ಸ್ಪರ್ಧೆಗೆ ಬಂದನು. ಉಷಸ್ಸು ಕೆಂಪುಬಣ್ಣದ ಗೋವುಗಳನ್ನು ಕಟ್ಟಿದ ರಥದಿಂದ ಸ್ಪರ್ಧೆಗೆ ಬಂದಳು. ಇಂದ್ರನು ಹರೀ ಎಂಬ ಹೆಸರಿನ ಕುದುರೆಗಳನ್ನು ಕಟ್ಟಿದ ರಥದಿಂದ ಸ್ಪರ್ಧೆಗೆ ಬಂದನು. ಕತ್ತೆಗಳನ್ನು ಕಟ್ಟಿದ ರಥದಿಂದ ಅಶ್ವಿನೀದೇವತೆಗಳು ಸ್ಪರ್ಧೆಗೆ ಬಂದರು. ಆಗ ನಡೆದ ಸ್ಪರ್ಧೆಯಲ್ಲಿ ಅಶ್ವಿನೀದೇವತೆಗಳು ಜಯವನ್ನು ಹೊಂದಿದರು. ಒಂದು ಸಾವಿರ ಋಕ್ಕುಗಳು ಅವರಿಗೆ ದೊರೆತವು. ಇದರಿಂದ ಈ ಋಕ್ಕುಗಳಿಗೆ ಆಶ್ವಿನ ಎಂದು ಪ್ರಸಿದ್ಧಿಯು ಆಗಿರುತ್ತದೆ. ಎಂದು ಇತಿಹಾಸವನ್ನು ವಿವರಿಸಿರುವರು.
ಈ ಸಂದರ್ಭದ ಕಥೆಯನ್ನು ಸಾಯಣರು ಈರೀತಿ ಹೇಳಿದ್ದಾರೆ—

**ಸವಿತಾ ಸೂರ್ಯೋ ದುಹಿತರಂ ಸೂರ್ಯಾಖ್ಯಾಂ ಪ್ರದಾತುಮುನಾಃ ದೇವಾನಾಹೂಯ ಸಾಮರ್ಥ್ಯ-ಸಮೀಕ್ಷಣಾಯ ಆಜಿಂ ಪರಿಕಲ್ಪ್ಯ ಯ ಇಮಂ ಜೇಷ್ಯತಿ ಸ ಏತಾಂ ಕನ್ಯಕಾಮೃಕ್ಸಹ-ಸ್ರಕ್ಲೃಪ್ತಂ ಸ್ತೋತ್ರಂ ಚ ಲಭತೇ ಇತ್ಯಕಲ್ಪಯತ್ । ತಮಗ್ನಿಃ ಪ್ರಥಮಮುಜಯತ್ । ತಮಶ್ವಿನಾವಪಿ ಜಿತ್ವಾ ಅಗ್ನಿಂ ಪ್ರಧೃಷ್ಯ ಋಕ್ಸಹಸ್ರಂ ಕನ್ಯಕಾಂ ಚ ಚಾಲಭೇತಾಂ । ತತ ಇಂದ್ರ ಉಷಾಶ್ಚಾಲಭೇತಾಂ । ತೌ ಚ ತೈರಗ್ನ್ಯಾದಿಭಿಃ ಪ್ರಾರ್ಥಿತೌ ಸ್ವಶಸ್ತ್ರಸ್ಯ ಕಂಚಿತ್ಕಂ-ಚಿದ್ಭಾಗಂ ತೇಭ್ಯಃ ಪರಿಕಲ್ಪ್ಯ ಸೂರ್ಯಾಃ ಸ್ವರಥೇ ಅಧಾರಯತಾಂ ಇತಿ ॥**

ಸವಿತೃವು ತನ್ನ ಮಗಳಾದ ಸೂರ್ಯೆಯನ್ನು ವಿವಾಹಾರ್ಥವಾಗಿ ಕೊಡಲು ದೇವತೆಗಳನ್ನು ಕರೆಯಿಸಿ ಅವರ ಸಾಮರ್ಥ್ಯವನ್ನು ಪರೀಕ್ಷಿಸುವುದಕ್ಕಾಗಿ ಒಂದು ಸ್ಪರ್ಧೆಯನ್ನೇರ್ಪಡಿಸಿದನು. ಅದರಲ್ಲಿ ಜಯಿಸಿದವರಿಗೆ ತನ್ನ ಪುತ್ರಿಯನ್ನೂ ಮತ್ತು ಸಹಸ್ರಋಕ್ಪರಿಮಿತವಾದ ಶಸ್ತ್ರವನ್ನೂ ಒಪ್ಪಿಸುವುದಾಗಿ ಪ್ರಕಟಿಸಿದನು. ಆಗ ಅಗ್ನಿಯು ಅದನ್ನು ಜಯಿಸಿದಾಗ ಅಶ್ವಿನೀದೇವತೆಗಳು ಅವನನ್ನು ಪ್ರತಿಭಟಿಸಿ ಅವೆರಡನ್ನೂ ತಾವೇ ತೆಗೆದುಕೊಂಡರು. ಅನಂತರ ಇಂದ್ರನೂ ಮತ್ತು ಉಷಸ್ಸೂ ಸಹ ಆ ಸ್ಪರ್ಧೆಯನ್ನು ಜಯಿಸಿದಾಗ ಅವರಿಂದಲೂ ಅಗ್ನಿಯಿಂದಲೂ ಪ್ರಾರ್ಥಿತನಾಗಿ ತಮ್ಮ ಶಸ್ತ್ರದಲ್ಲಿ ಅವರಿಗೂ ಕೊಂಚಭಾಗವನ್ನು ಕಲ್ಪಿಸಿ ಸೂರ್ಯೆಯನ್ನು ತಮ್ಮ ರಥದಲ್ಲಿ ಕುಳ್ಳಿರಿಸಿಕೊಂಡರು ಎಂಬ ಕಥೆಯನ್ನು ತಿಳಿಸಿದ್ದಾರೆ. ಇದೇ ವಿಷಯವನ್ನು ೧೪ನೆಯ ಭಾಗದಲ್ಲಿ ೧-೧೮೪-೧ ನೇ ಋಕ್ಕಿನಲ್ಲಿ **ಆಶ್ವಿನಶಸ್ತ್ರದ** ಮಹತ್ತ್ವವನ್ನು ತಿಳಿಸುವಾಗ “ **ಪ್ರಜಾಪತಿರ್ವೈ ಸೋಮಾಯ ರಾಜ್ಞೇ** ” ಎಂಬ ಐತರೇಯಬ್ರಾಹ್ಮಣದ ವಾಕ್ಯಗಳನ್ನುದಾಹರಿಸಿ (ಐ. ೪-೭) ಅಲ್ಲಿ ವಿವರಿಸಿರುವ ಕಥೆಯನ್ನು ತಿಳಿಸಿದೆ. ಋಕ್ಸಂಹಿತೆಯಲ್ಲಿ **ಸೂರ್ಯಾವಿವಾಹವನ್ನು** ವರ್ಣಿಸುವ ಸೂಕ್ತವೇ ಪ್ರತ್ಯೇಕವಾಗಿರುತ್ತದೆ (ಋ. ಸಂ. ೧೦-೮೫). ಆ ವಿವರಣೆಯನ್ನು ತಿಳಿಯುವುದಕ್ಕೆ ಮೊದಲು **ಸೂರ್ಯಾ** ಎಂಬ ದೇವಕನ್ಯೆಯ ಅಥವಾ ದೇವತೆಯ ಸ್ವರೂಪವನ್ನು ಎಲ್ಲೆಲ್ಲಿ ಹೇಗೆಹೇಗೆ ವರ್ಣಿಸಿದೆ ಎಂಬುದನ್ನು ತಿಳಿಯುವುದು ಅತ್ಯವಶ್ಯವಾಗಿರುತ್ತದೆ. ಸೂರ್ಯೆಯ ಸ್ವರೂಪವನ್ನು ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದೆ—

**ತಸ್ಯ ಮುಖ್ಯತಮೌ ದೇವಾವಶ್ವಿನೌ ಸೂರ್ಯಮಾಶ್ರಿತೌ ।**
**ವೃಷಾಕಪಾಯೀ ಸೂರ್ಯೋಷಾಃ ಸೂರ್ಯಸ್ಯೈವ ತು ಪತ್ನಯಃ ॥**
**ಅಮುತೋಽರ್ವಾಙ್ ನಿವರ್ತಂತೇ ಪ್ರತಿಲೋಮಾಸ್ತದಾಶ್ರಯಾಃ ।**

**ಪುರೋದಯಾತ್ತ್ವಾಮುಷಸಂ ಸೂರ್ಯಾಂ ಮಧ್ಯಂದಿನೇ ಸ್ಥಿತೇ ॥**
**ವೃಷಾಕಪಾಯೀಂ ಸೂರ್ಯಸ್ಯ ತಾಮೇವಾಹುಸ್ತು ನಿಮ್ರುಚಿ ।**
**ತಸ್ಯಾಶ್ರಯೋ ಸರಣ್ಯೂಶ್ಚ ಭಗಃ ಪೂಷಾ ವೃಷಾಕಪಿಃ ॥**

(ಬೃ.ಹದೇ. ೨-೮ ರಿಂದ ೧೦)

ಅಶ್ವಿನೀದೇವತೆಗಳಿಬ್ಬರೂ ಸೂರ್ಯಸಂಬಂಧಿಯಾದ ದೇವತೆಗಳು. **ವೃಷಾಕಪಾಯೀ ಸೂರ್ಯಾ** ಮತ್ತು **ಉಷಸ್ಸು** ಈ ಮೂವರೂ ಸೂರ್ಯಪತ್ನಿಯರು. ಅಂತರಿಕ್ಷಲೋಕದ ಅವರು ಸೂರ್ಯಸಂಬಂಧವನ್ನು ಪಡೆದು ಈ ಲೋಕದ ಅಭಿಮುಖವಾಗಿ ಹಿಂತಿರುಗುತ್ತಾರೆ. ಒಂದೇ ದೇವತೆಯು ಮೂರು ಸ್ವರೂಪವಾಗಿ ಸೂರ್ಯೋದಯಕ್ಕೆ ಪೂರ್ವದಲ್ಲಿ **ಉಷಸ್ಸೆಂದೂ** ಮಾಧ್ಯಂದಿನಕಾಲದಲ್ಲಿ **ಸೂರ್ಯಾ** ಎಂದೂ ಮತ್ತು ಸೂರ್ಯಾಸ್ತಮಯಕಾಲದಲ್ಲಿ **ವೃಷಾಕಪಾಯೀ** ಎಂದೂ ನಾಮಧೇಯವುಳ್ಳವಳಾಗಿದ್ದಾಳೆ ಎಂದು ಹೇಳಿ ಪುನಃ ಸೂರ್ಯಾಸೂಕ್ತದ ವಿಷಯವನ್ನು ತಿಳಿಸುವಾಗ ಈ ವಿಧವಾಗಿ ವರ್ಣಿಸಿದೆ—

**ಸಾವಿತ್ರೀ ಚೈವ ಸೂರ್ಯಾ ಚ ಸೈವ ಪತ್ನೀ ವಿವಸ್ವತಃ ।**
**ಸ್ತುತಾ ವೃಷಾಕಪಾಯೀತಿ ಉಷಾ ಇತಿ ಚ ಯೋಚ್ಯತೇ ।**
**ಉಷಾ ಏಷಾ ತ್ರಿಧಾತ್ಮಾನಂ ವಿಭಜ್ಯ ಪ್ರೈತಿ ಗೋಪತಿಂ ॥**
**ಉಷಾಃ ಪುರೋದಯಾದ್ಭೂತ್ವಾ ಸೂರ್ಯಾ ಮಧ್ಯಂದಿನೇ ಸ್ಥಿತೇ ।**
**ಭೂತ್ವಾ ವೃಷಾಕಪಾಯೀ ಚ ದಿನಾಂತೇಷ್ವವಗಚ್ಛತಿ ॥**

(ಬೃ. ದೇ. ೭-೧೧೯ ರಿಂದ ೧೨೧)

ಸಾವಿತ್ರೀ ಮತ್ತು ಸೂರ್ಯಾ ಇವರಿಬ್ಬರೂ ಸಹ ವಿವಸ್ವಂತನ ಪತ್ನಿಯರು. ಇದೇ ಸೂರ್ಯೆಯನ್ನು ವೃಷಾಕಪಾಯೀ ಮತ್ತು ಉಷಸ್ಸು ಎಂಬುದಾಗಿಯೂ ಸಹ ಕರೆಯುತ್ತಾರೆ ಎಂದು ಹಿಂದೆ ಹೇಳಿರುವ ವಿಷಯವನ್ನೇ ಪುನಃ ತಿಳಿಸಿ ಈ ಸೂರ್ಯೆಯ ವಿವಾಹದ ವಿಷಯವನ್ನೂ ವರ್ಣಿಸುವ ವಿಷಯವನ್ನೂ ಸೂರ್ಯಾಸೂಕ್ತದ ವೈಶಿಷ್ಟ್ಯವನ್ನೂ ಪ್ರಶಂಸಿಸಿದೆ. ಹೀಗೆ **ಸೂರ್ಯಾ** ಎಂಬ ಕನ್ಯೆಯ ವರ್ಣನೆಯಿರುವಾಗ ಅವಳಿಗೂ ಸೂರ್ಯನಿಗೂ ಸಂಬಂಧವೇನು ಮತ್ತು ಅವಳು **ಅಶ್ವಿನೀದೇವತೆಗಳನ್ನು** ವರಿಸಿದಳು ಎಂಬುದರ ಅರ್ಥವೇನು ಎಂಬುದನ್ನು ತಿಳಿಯುವುದು ಅವಶ್ಯವಾಗಿರುತ್ತದೆ. ಸೂರ್ಯಾಸೂಕ್ತದಿಂದ ಕೆಳಗೆ ಉದಾಹರಿಸಿರುವ ಋಕ್ಕುಗಳಲ್ಲಿ ಸೂರ್ಯೆಯು ಅಶ್ವಿನೀದೇವತೆಗಳೊಂದಿಗೆ ವಿವಾಹಾರ್ಥವಾಗಿ ಸೇರಿಕೊಂಡುದು ವರ್ಣಿತವಾಗಿದೆ-

**ಯದಶ್ವಿನಾ ಪೃಚ್ಛಮಾನಾವಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ ।**
**ವಿಶ್ವೇ ದೇವಾ ಅನು ತದ್ವಾಮಜಾನನ್ ಪುತ್ರಃ ಪಿತರಾವವೃಣೀತ ಪೂಷಾ ॥**

(ಋ. ಸಂ. ೧೦-೮೫-೧೪)

ಎಂಬ ಋಕ್ಕಿನಲ್ಲಿ, "ಎಲೈ ಅಶ್ವಿನೀದೇವತೆಗಳೇ, ಸೂರ್ಯೆಯನ್ನು ಪಾಣಿಗ್ರಹಣ ಮಾಡುವುದಕ್ಕಾಗಿ ನೀವು ನಿಮ್ಮ ತ್ರಿಚಕ್ರಾತ್ಮಕವಾದ ರಥದಲ್ಲಿ ಬಂದಾಗ ನಿಮ್ಮ ವಿವಾಹವನ್ನು ಸಕಲವಾದ ದೇವತೆಗಳೂ ಸಹ ಅನುಮೋದಿಸಿದರು. ಮತ್ತು ನಿಮ್ಮ ಪುತ್ರನಾದ ಪೂಷನು ನಿಮ್ಮನ್ನು ಪಿತೃವನ್ನಾಗಿ ಆರಿಸಿಕೊಂಡನು" ಎಂದು ಪ್ರಕೃತವಾದ ಋಕ್ಕಿನಲ್ಲಿ ಉಪಯೋಗಿಸಿರುವ **ವಹತುಂ ಸೂರ್ಯಾಯಾಃ** ಎಂಬ ಪದಗಳನ್ನೇ ಉಪಯೋಗಿಸಿದೆ. ಇದಲ್ಲದೇ,

ಸ್ತೋಮಾ ಆಸನ್ಪ್ರತಿಧಯಃ ಕುರೀರಂ ಛಂದ ಓಪಶಃ ।
ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ಪುರೋಗವಃ ॥

(ಋ. ಸಂ. ೧೦-೮೫-೮)

ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।
ಕ್ವೈಕಂ ಚಕ್ರಂ ವಾಮಾಸೀತ್ಕ್ವದೇಷ್ಟ್ರಾಯ ತಸ್ಥಥುಃ ॥

(ಋ. ಸಂ. ೧೦-೮೫.೧೫)

ಎಂಬ ಋಕ್ಕುಗಳಲ್ಲಿಯೂ ಸಹ ವರ್ಣನೆಯಿರುತ್ತದೆ. ಇದಲ್ಲದೇ,

ಅಧಿ ಶ್ರಿಯೇ ದುಹಿತಾ ಸೂರ್ಯಸ್ಯ ರಥಂ ತಸ್ಥೌ ಪುರುಭುಜಾ ಶತೋತಿಂ ।
ಪ್ರ ಮಾಯಾಭಿರ್ಮಾಯಿನಾ ಭೂತಮತ್ರ ನರಾ ನೃತೂ ಜನಿಮನ್ಯಜ್ಞಿಯಾನಾಂ ॥

(ಋ.ಸಂ. ೬-೬೩-೫)

ಓ ತ್ಯಮಹ್ವ ಆ ರಥಮದ್ಯಾ ದಂಸಿಷ್ಠಮೂತಯೇ ।
ಯಮಶ್ವಿನಾ ಸುಹವಾ ರುದ್ರವರ್ತನೀ ಆ ಸೂರ್ಯಾಯೈ ತಸ್ಥಥುಃ ॥

(ಋ. ಸಂ. ೮-೨೨-೧)

ಕೋ ಮೃಳಾತಿ ಕತಮ ಆಗಮಿಷ್ಠೋ ದೇವಾನಾಮು ಕತಮಃ ಶಂಭವಿಷ್ಠಃ ।
ರಥಂ ಕಮಾಹುರ್ದ್ರವದಶ್ವಮಾಶುಂ ಯಂ ಸೂರ್ಯಸ್ಯ ದುಹಿತಾವೃಣೀತ ॥

(ಋ.ಸಂ, ೪-೪೩-೨)

ಇತ್ಯಾದಿ ಸನ್ನಿವೇಶಗಳಲ್ಲೆಲ್ಲಾ ಸೂರ್ಯೆಯು ಅಶ್ವಿನೀದೇವತೆಗಳನ್ನು ಸ್ವಯಂವರಾರ್ಥವಾಗಿ ವರಿಸಿದುದು ಪ್ರಸಿದ್ಧವಾಗಿದೆ. ಮೇಲೆ ಉದಾಹೃತವಾಗಿರುವ ೬-೬೩-೫ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳು, ತಮ್ಮ ತ್ರಿಚಕ್ರಾತ್ಮಕವಾದ ರಥದಲ್ಲಿ ಕುಳಿತು ದೇವತೆಗಳಿಗಾಗಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಜಯವನ್ನು ಪಡೆದರೆಂದಿದೆ. ಆದರೆ, ಸೂಕ್ತಮಂತ್ರಗಳಿಂದ ಮೇಲೆ ಉದಾಹೃತವಾಗಿರುವ ೧೦-೮೫-೧೫ನೇ ಋಕ್ಕಿನಲ್ಲಿ ಅವರು ಸೂರ್ಯೆಯನ್ನು ಸಮೀಪಿಸಲು ಹೊರಟಾಗ ಅವರ ಒಂದು ರಥಚಕ್ರವು ಅದೃಶ್ಯವಾಯಿತು ಎಂದು ವರ್ಣಿಸಿದೆ. ಇದರ ತಾತ್ಪರ್ಯವೇನು ಎಂದು ವಿವರಿಸುತ್ತಾ Maryla Falk ಎಂಬ ಆಂಗ್ಲ ಪಂಡಿತರು ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾರೆ.
ಈ ಅಭಿಪ್ರಾಯದ ಸಾರಾಂಶವು ಈರೀತಿಯಲ್ಲಿದೆ.

ಯೋ ವಾಂ ಪರಿಜ್ಮಾ ಸುವೃದಶ್ವಿನಾ ರಥೋ ದೋಷಾಮುಷಾಸೋ ಹವ್ಯೋ ಹವಿಷ್ಮತಾ ।
ಶಶ್ವತ್ತಮಾಸಸ್ತಮು ವಾಮಿದಂ ವಯಂ ಪಿತುರ್ನ ನಾಮ ಸುಹವಂ ಹವಾಮಹೇ ॥

(ಋ.ಸಂ. ೧೦-೨೯-೧)

ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಉಷಃಕಾಲದಲ್ಲಿಯೂ ಮತ್ತು ಸಾಯಂಸಂಧ್ಯಾಕಾಲದಲ್ಲಿಯೂ ಆಹೂತರಾಗುವರೆಂದು ತಿಳಿಸಿದೆ. ಅಷ್ಟೇ ಅಲ್ಲದೇ,

**ಉತಾ ಯಾತಂ ಸಂಗವೇ ಪ್ರಾತರಹ್ನೋ ಮಧ್ಯಂದಿನ ಉದಿತಾ ಸೂರ್ಯಸ್ಯ ।**
**ದಿವಾ ನಕ್ತಮವಸಾ ಶಂತಮೇನ ನೇದಾನೀಂ ಪೀತಿರಶ್ವಿನಾ ತತಾನ ॥** (ಋ.ಸಂ. ೫.೭೬-೩)

ಇತ್ಯಾದಿ ಮಂತ್ರಗಳಿಂದ ಅವರನ್ನು ಮಾಧ್ಯಂದಿನಸವನಕ್ಕೂ ಆಹ್ವಾನಿಸಿದೆ. ಈ ರೀತಿ ಸವನತ್ರಯದಲ್ಲೂ ಪ್ರಾಮುಖ್ಯವನ್ನು ಹೊಂದಿರುವ ಅಶ್ವಿನೀದೇವತೆಗಳ ಸ್ವರೂಪವೇನೆಂಬುದನ್ನು ನಿಷ್ಕೃಷ್ಟವಾಗಿ ತಿಳಿಸಲು ಸಾಧ್ಯವಿಲ್ಲವೆಂದೂ, ಒಬ್ಬೊಬ್ಬರೂ ಒಂದೊಂದಭಿಪ್ರಾಯವನ್ನು ಹೇಳುವರು ಎಂಬುದಾಗಿಯೂ ನಿರುಕ್ತಕಾರರು ಸ್ಪಷ್ಟಪಡಿಸಿದ್ದಾರೆ. (ನಿ. ೧೨-೧) ಮತ್ತು,

**ನಾನಾ ಜಾತಾವರೇಪಸಾ ಸಮಸ್ಮೇ ಬಂಧುಮೇಯಥುಃ ।** (ಋ.ಸಂ. ೫-೭೩-೪)

ಇತ್ಯಾದಿ ಕಡೆಗಳಲ್ಲಿ **ನಾನಾ ಜಾತಾ। ಪೃಥಗೇವ ಸಮೃದ್ಧೌ** ಎಂಬುದಾಗಿ ಅವರ ವೈಯಕ್ತಿಕವಾದ ಉತ್ಪತ್ತಿಯನ್ನೂ ವೃದ್ಧಿಯನ್ನೂ ತೋರಿಸಿದೆ. ಕೆಲವೆಡೆಗಳಲ್ಲಿ **ನಾಸತ್ಯ, ದಸ್ರ** ಎಂಬ ಎರಡು ಹೆಸರುಗಳೂ ಅಶ್ವಿನೀದ್ವಯದ ಬೇರೆ ಬೇರೆ ವೈಯಕ್ತಿಕವಾದ ರೂಪಗಳು ಎಂದೂ ತಿಳಿಸಿದೆ (Journal of Oriental Research, Madras Vol XV) ಪ್ರಭಾತಕಾಲದಲ್ಲೂ ಸಾಯಂಕಾಲದಲ್ಲೂ ಪ್ರಕಾಶಿಸತಕ್ಕ ದೇವತೆಗಳು ಎಂದು ತಿಳಿಯುತ್ತದೆ. ಆದುದರಿಂದಲೇ **ಹಿರಣ್ಯಯಾಃ ವಾಂ ಪವಯಃ** (೧-೧೮೦-೧) ಇತ್ಯಾದಿ ಅವರ ರಥದ ಮತ್ತು ರಥಚಕ್ರದ ಸಂಧ್ಯಾರಾಗದ ವರ್ಣವು ವರ್ಣಿತವಾಗಿದೆ. ಇಂತಹ ಸ್ವರೂಪವುಳ್ಳ ಅಶ್ವಿನೀದೇವತೆಗಳನ್ನು,

**ಯುವೋಃ ಶ್ರಿಯಂ ಪರಿಯೋಷಾವೃಣೀತ ಸೂರೋ ದುಹಿತಾ ಪರಿತಕ್ಮ್ಯಾಯಾಂ ।**
**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ॥**
(ಋ.ಸಂ. ೭-೬೯-೪)

ಎಂಬಲ್ಲಿ ಹೀಗೆ ಪ್ರಶಂಸಿಸಿದೆ. "ಎಲೈ ಅಶ್ವಿನೀದೇವತೆಗಳೇ, ಯಾವಾಗಲೂ ನಿಮ್ಮ ಸೌಂದರ್ಯದ ಸೇವೆಯಲ್ಲಿಯೇ ಆಸಕ್ತಳಾದ ಸೂರ್ಯದುಹಿತೆಯು ಸವನಕಾಲದಲ್ಲಿ ನಿಮ್ಮನ್ನು ಸೇರಿ ನಿಮ್ಮಲ್ಲಿ ವ್ಯಾಪಿಸುತ್ತಾಳೆ" ಎಂಬ ವರ್ಣನೆಯಲ್ಲದೇ, ಇದೇ ಸೂರ್ಯದುಹಿತೆಯು ಅಶ್ವಿನೀದೇವತೆಗಳನ್ನು ಅವರು ಅಂತರಿಕ್ಷದಲ್ಲಿ ಸೂರ್ಯಪಥಕ್ಕೆ ಮಧ್ಯವರ್ತಿಗಳಾದಾಗ ಆಕ್ರಮಿಸಿ ಅವರನ್ನು ಸೇರುತ್ತಾಳೆ ಎಂದೂ ಸಹ ಕೆಲವೆಡೆಗಳಲ್ಲಿ ತಿಳಿಸಿದೆ. ಇಂತಹ ಕಾಲಗಳಲ್ಲಿ,

**ಈರ್ಮಾನ್ಯದ್ವಪುಷೇ ವಪುಶ್ಚಕ್ರಂ ರಥಸ್ಯ ಯೇಮಥುಃ ।**
**ಪರ್ಯನ್ಯಾ ನಾಹುಷಾ ಯುಗಾ ಮಹ್ನಾ ರಜಾಂಸಿ ದೀಯಥಃ ॥**
(ಋ.ಸಂ. ೫.೭೩-೩)

ಇತ್ಯಾದಿ ಮಂತ್ರಗಳಿಂದ ಅಶ್ವಿನೀದೇವತೆಗಳ ರಥದ ಮೂರನೆಯ ಚಕ್ರವೂ, ಅದರ ಪ್ರಕಾಶವೂ ವರ್ಣಿತವಾಗಿದೆ- ಇಂತಹ ರಥಚಕ್ರವುಳ್ಳ ಅಶ್ವಿನೀದೇವತೆಗಳನ್ನು ಸೂರ್ಯೆಯು ಸೇರಿಕೊಳ್ಳುತ್ತಾಳೆ ಎಂದು,

**ಆ ಯದ್ವಾಂ ಸೂರ್ಯಾ ರಥಂ ತಿಷ್ಠದ್ರಘುಷ್ಯದಂ ಸದಾ ।**
(ಋ.ಸಂ. ೫-೭೩-೫)

ಮುಂತಾದ ಕಡೆ ಸ್ತುತಿಸಿದೆ. ಮತ್ತು ಇದೇಮಂತ್ರದಲ್ಲಿ, ಸೂರ್ಯೆಯು ಅಶ್ವಿನೀದೇವತೆಗಳ ರಥವನ್ನು ಏರಿದೊಡನೆಯೇ ಅವರ ರಥವು ಸೂರ್ಯನ ಸ್ವರ್ಣಮಯವಾದ ಪ್ರಭೆಗಳಿಂದ ಪೂರಿತವಾಯಿತು ಎಂದು "**ಪರಿ ವಾಮರುಷಾ ವಯೋ**

**ಘೃಣಾವರಂತ ಆತಪಃ** " ಎಂಬ ವಾಕ್ಯದಿಂದ ಪ್ರಶಂಸಿಸಿದೆ. ಎಂದರೆ ಸೂರ್ಯೆಯ ಪ್ರಭೆಯು ಅವರ ರಥಚಕ್ರವನ್ನು ಮರೆಸುವಂತೆ ಮಾಡಿತು ಎಂದರ್ಥವಾಗುತ್ತದೆ.

ಮೇಲೆ ಉದಾಹರಿಸಿರುವ Maryla Falk ಎಂಬ ಪಂಡಿತರ ಅಭಿಪ್ರಾಯಗಳಲ್ಲಿ ಕೆಲವು ವಿಮರ್ಶಾತ್ಮಕವಾಗಿಯೂ ಸಂಪ್ರದಾಯಕ್ಕೆ ಅನುಗುಣವಾದ ವಿವರಣೆಯಾಗಿಯೂ ಇರುತ್ತದೆ. ಆದರೆ ಆ ಲೇಖನದ ಇನ್ನು ಕೆಲವು ವಿವರಣೆಗಳು ಕೇವಲ ಕಲ್ಪಿತವಾದವಾಗಿದೆ. ಅವು ಯಾವರೀತಿ ಸಂಪ್ರದಾಯಕ್ಕೆ ವಿರೋಧವಾಗಿದೆಯೆಂಬುದನ್ನು ಮುಂದೆ ಸೂರ್ಯಾಸೂಕ್ತವನ್ನು ವಿವರಿಸುವಾಗ ವಿಶದವಾಗಿ ತಿಳಿಸಲಾಗುತ್ತದೆ. ಪ್ರಕೃತದಲ್ಲಿ ಸೂರ್ಯೆಯ ವಿವಾಹದ ವಿಷಯದಲ್ಲಿ ಸ್ಥೂಲವಾದ ದೃಷ್ಟಿಗೆ ತೋರತಕ್ಕ ಒಂದೆರಡು ವಿರೋಧಾಂಶಗಳನ್ನು ಗಮನಿಸಿ ಅನಂತರ ಸೂರ್ಯೆಯೊಂದಿಗೆ ತಾದಾತ್ಮ್ಯವನ್ನು ತೋರಿಸಿ ವರ್ಣಿಸಿರುವ ಉಳಿದ ದೇವತೆಗಳಾರು, ಅವರ ಸ್ವರೂಪವೇನು, ಎಂಬುದನ್ನು ಗಮನಿಸಬೇಕಾಗುತ್ತದೆ. ಮತ್ತು ಸ್ಥೂಲವಾದ ದೃಷ್ಟಿಗೆ ತೋರತಕ್ಕ ಈ ವಿರೋಧಾಂಶಗಳಲ್ಲಿ ಯಾವ ವಿಧವಾದ ಸಾಮರಸ್ಯವಿದೆ ಎಂಬುದನ್ನು ಮುಂದೆ ತಿಳಿಸಲಾಗುತ್ತದೆ.

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**

(ಋ-ಸಂ. ೧೦.೧೭.೨)

ಎಂಬ ಋಕ್ಕಿನಲ್ಲಿ ದೇವತೆಗಳು ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟು ವಿವಾಹ ಮಾಡಿದರೆಂದೂ, ಅಶ್ವರೂಪಿಯಾದ ಅವಳು ಅಶ್ವಿನೀದೇವತೆಗಳನ್ನು ಹಡದಳು ಎಂದೂ ವರ್ಣನೆಯಿದೆ. ಎಂದರೆ ಅಶ್ವಿನೀದೇವತೆಗಳು ವಿವಸ್ವಂತನ ಪುತ್ರರೆಂದು ಇದರಿಂದ ತಿಳಿಯುತ್ತದೆ. ಆದರೆ ಮೇಲೆ ಉದಾಹರಿಸಿರುವ,

**ಸಾವಿತ್ರೀ ಚೈವ ಸೂರ್ಯಾ ಚ ಸ್ಯವಪತ್ನೀ ವಿಶೇಷತಃ ।**

(ಬೃ.ದೇ- ೭-೧೧೯)

ಎಂಬ ಬೃಹದ್ದೇವತಾವಾಕ್ಯದಿಂದ ಸೂರ್ಯೆಯು ವಿವಸ್ವಂತನ ಪತ್ನಿಯೆಂದು ತಿಳಿಯುತ್ತದೆ. ಅವಳನ್ನೇ ಅಶ್ವಿನೀದೇವತೆಗಳು ವರಿಸಿದರು ಎಂಬುದರ ಅಭಿಪ್ರಾಯವೇನು ? ಹೀಗೆಯೇ,

**ಸೋಮೋ ವಧೂಯುರಭವದಶ್ವಿನಾಸ್ತಾಮುಭಾ ವರಾ ।**
**ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾದದಾತ್ ॥**

(ಋ. ಸಂ. ೧೦-೮೫-೯)

ಎಂಬಲ್ಲಿ ಸವಿತೃವು ತನ್ನ ಪುತ್ರಿಯಾದ ಸೂರ್ಯೆಯನ್ನು ಸೋಮನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಆಗ ಅಶ್ವಿನೀದೇವತೆಗಳು ಕೇವಲ ವೀಕ್ಷಕರಾಗಿ ಮಾತ್ರವಾಗಿದ್ದರು. ವಿವಾಹವಾದನಂತರ ಸೂರ್ಯೆಯು ಭರ್ತೃವಾದ ಸೋಮನ ಗೃಹಕ್ಕೆ ಹೋಗಿ ಸೇರಿದಳು ಎಂದಿದೆ. ಇಲ್ಲಿ ಯಾವವಿಧವಾಗಿ ತಾತ್ಪರ್ಯವನ್ನು ಹೇಳಬೇಕು ಇತ್ಯಾದಿಗಳನ್ನು ಸೂರ್ಯಾಸೂಕ್ತದ ವಿವರಣೆಯಲ್ಲಿ ವಿಶದವಾಗಿ ತಿಳಿಸಿ ಈ ವಿರೋಧಾಂಶಗಳಿಗೆ ಸಾಮರಸ್ಯವನ್ನು ತಿಳಿಸಲಾಗುತ್ತದೆ.

ಋಕ್ಸಂಹಿತೆಯಲ್ಲಿ ಸೂರ್ಯಾಸೂಕ್ತದಲ್ಲಿ ವಿವರಿಸಿರುವ ಸೂರ್ಯಾ ಮತ್ತು ಅವಳ ವಿವಾಹದ ವರ್ಣನೆಯಲ್ಲಿ ಗಹನ

ವಾದ ಆಧ್ಯಾತ್ಮಿಕತತ್ತ್ವವು ಅಡಗಿದೆ. ಈ ಅಂಶವನ್ನು ಸೂರ್ಯಾಸೂಕ್ತದ ಕೆಲವು ಮಂತ್ರಗಳು ತಿಳಿಸುತ್ತವೆ. ಉಪನಿಷದ್ವಾಕ್ಯಗಳಲ್ಲಿ ವರ್ಣಿತವಾಗಿರುವ ತತ್ತ್ವವು ಈ ಮಂತ್ರಗಳಿಂದ ತಿಳಿಸಲ್ಪಟ್ಟಿವೆ. ಉದಾಹರಣೆಗೆ—

**ಮನೋ ಅಸ್ಯಾ ಅನ ಆಸೀದ್ದ್ಯೌರಾಸೀದುತ ಚ್ಛದಿಃ ।**
**ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ಸೂರ್ಯಾ ಗೃಹಂ ॥**
**ಋಕ್ಸಾಮಾಭ್ಯಾಮಭಿಹಿತೌ ಗಾವೌ ತೇ ಸಾಮನಾವಿತಃ ।**
**ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾಚರಃ ॥**

(ಋ. ಸಂ, ೧೦-೮೫-೧೦,೧೧)

ಇತ್ಯಾದಿ ಋಕ್ಕುಗಳಲ್ಲಿ ಸೂರ್ಯೆಯ ಕೇವಲ ಭೌತಿಕವಾದ ಶರೀರಣದ ವರ್ಣನೆಯು ಮಾತ್ರವಿಲ್ಲ. ಸೂರ್ಯೆಯು ವಿಶ್ವತತ್ತ್ವವನ್ನು ಪ್ರತಿಬಿಂಬಿಸುವ ಒಂದು ಶಕ್ತಿಯೆಂಬರ್ಥವನ್ನು ಕೊಡುವ ವರ್ಣನೆಯಿದೆ. ಈ ವರ್ಣನೆಯಂತೆ, ಮನಸ್ಸೇ ಅವಳ ರಥವು; ಅಂತರಿಕ್ಷವೇ ಮೇಲುಹೊದ್ದಿಕೆಯು. ಅಂತರಿಕ್ಷದಲ್ಲಿ ಪ್ರಕಾಶಿಸುವ ಎರಡು ಪ್ರಭಾಮಂಡಲಗಳೇ ಅವಳ ವಾಹನಗಳು. ಋಕ್ಕಿನಿಂದಲೂ ಮತ್ತು ಸಾಮದಿಂದಲೂ ಅಹಿತವಾದ ಆ ವಾಹನಗಳು ಸೂರ್ಯೆಯನ್ನು ವಹಿಸಿದವು. ಆ ರಥಚಕ್ರಗಳೇ ಅವಳ ಕರ್ಣಗಳು. ಅವಳು ಸಂಚರಿಸುವ ಮಾರ್ಗವು ಅಂತರಿಕ್ಷಸ್ಥವಾಗಿದ್ದಿತು. ಇಂತಹ ವಿವಾಹ ನೇಪಥ್ಯಗಳಿಂದ ಅಲಂಕೃತಳಾದ ಸೂರ್ಯೆಯನ್ನು ವರಿಸಲು ಅಶ್ವಿನೀದೇವತೆಗಳು ಬಂದಾಗ ದೇವತೆಗಳೆಲ್ಲರೂ ಅನುಮೋದಿಸಿದರು ಎಂದಿದೆ.

ಇನ್ನು ಕೆಲವು ವರ್ಣನೆಗಳಿಂದ ಸೂರ್ಯೆಗೂ ಶಬ್ದಬ್ರಹ್ಮಾತ್ಮಿಕಾವಾಕ್ಕಿಗೂ ತಾದಾತ್ಮ್ಯವನ್ನು ಹೇಳಿರುವುದು ತಿಳಿಯುತ್ತದೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

**ಯದಾ ತು ವಾಗ್ಭವತ್ಯೇಷಾ ಸೂರ್ಯಾಮುಂ ಲೋಕಮಾಶ್ರಿತಾ ।**
**ತಥಾ ಸೂಕ್ತಮುಷಾ ಭೂತ್ವಾ ಸೂರ್ಯಾ ಚ ಭಜತೇಽಖಿಲಂ ॥**

(ಬೃ. ದೇ. ೨-೭೯)

**ಸೂರ್ಯಾಮೇವ ಸತೀಮೇತಾಂ ಗೌರೀಂ ವಾಚಂ ಸರಸ್ವತೀಂ**
**ಪಶ್ಯಾಮೋ ವೈಶ್ವದೇವೇಷು ನಿಪಾತೇನೈವ ಕೇವಲಾಃ ॥**

(ಬೃ. ದೇ. ೨-೮೦)

ಎಂಬ ಶ್ಲೋಕಗಳಿಂದ ಶಬ್ದಬ್ರಹ್ಮಾತ್ಮಕವಾದ ವಾಕ್ಕೇ ಸೂರ್ಯಾರೂಪದಲ್ಲಿ ಅಂತರಿಕ್ಷಸ್ಥಳಾಗಿರುವಳು. ಇವಳೇ ಸೂರ್ಯೆಯು, ಇವಳೇ ಉಷೋದೇವತೆಯು, ಗೌರಿಯು ಮತ್ತು ಸರಸ್ವತಿಯು, ಎಂಬುದಾಗಿ ವರ್ಣಿಸಿದೆ. ಈ ವಾಕ್ಕಿನ ಮಹತ್ತ್ವವನ್ನು ಹಿಂದೆ ೧-೧೬೪-೪೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರವಾಗಿ ತಿಳಿಸಿದೆ. ಈ ರೀತಿ ವಾಕ್ಕಿನೊಡನೆ ತಾದಾತ್ಮ್ಯವನ್ನು ಹೇಳಿರುವುದರಿಂದ ಸೂರ್ಯೆಗೂ ಗಂಧರ್ವನಿಗೂ ಇರತಕ್ಕ ದಾಂಪತ್ಯಸಂಬಂಧವೂ ಅರ್ಥವಾಗುತ್ತದೆ. ಸೂರ್ಯಾಸೂಕ್ತದ, ಕೊನೆಯ ಋಕ್ಕುಗಳಲ್ಲಿ ಸೋಮನನ್ನು ಪಡೆದ ಗಂಧರ್ವನಿಗೆ ಸೂರ್ಯನು ಲಭಿಸಿದುದು ಹೇಗೆ ಎಂಬುದು ಈ ರೀತಿ ವರ್ಣಿತವಾಗಿದೆ.

ತುಭ್ಯಮಗ್ರೇ ಪರ್ಯವಹನ್ತ್ಸೂರ್ಯಾಂ ವಹತುನಾ ಸಹ ।
ಪುನಃ ಪತಿಭ್ಯೋ ಜಾಯಾಂ ದಾ ಅಗ್ನೇ ಪ್ರಜಯಾ ಸಹ ॥
ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।
ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ॥
ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥
ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ ।
ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ ॥

(ಋ.ಸಂ. ೧೦-೮೫-೩೮ ರಿಂದ ೪೧)

ಎಂಬ ಋಕ್ಕುಗಳಲ್ಲಿ ಸೂರ್ಯೆಯು ಅಗ್ನಿಗೆ ಪ್ರಥಮಥಃ ದತ್ತಳಾಗಿ ಅನಂತರ ಅಗ್ನಿಯಿಂದ ಸೋಮನಿಗೂ, ಸೋಮನಿಂದ ಗಂಧರ್ವನಿಗೂ, ಗಂಧರ್ವನಿಂದ ಪುನಃ ಅಗ್ನಿಗೂ ಸೇರಿದುದೂ ತಿಳಿಸಿದೆ. ಈ ಗಂಧರ್ವನಿಗೂ ಸೋಮನಿಗೂ ಇರುವ ಸಂಬಂಧವು ಬೇರೆಕಡೆಯಲ್ಲಿ ತಿಳಿಸಲ್ಪಟ್ಟಿದೆ. ಸೋಮನು ವಾಗ್ದೇವಿಯನ್ನು ಗಂಧರ್ವನಿಗೆ ಒಪ್ಪಿಸಿದ ಕತೆಯು ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯ-ಮಸ್ಮಾನ್ಸೋಮೋ ರಾಜಾಗಚ್ಛೇದಿತಿ ಸಾ ವಾಗಬ್ರವೀತ್ಸ್ತ್ರೀಕಾಮಾ ವೈ ಗಂಧರ್ವಾ ಮಯೈವ ಸ್ತ್ರಿಯಾ ಭೂತಯಾ ಪಣಧ್ವಮಿತಿ ನೇತಿ ದೇವಾ ಅಬ್ರುವನ್ಕಥಂ ವಯಂ ತ್ವದೃತೇ ಸ್ಯಾಮೇತಿ ಸಾಽಬ್ರವೀತ್ಕ್ರೀಣೀತೈವ ಯರ್ಹಿ ವಾವ ವೋ ಮಯಾರ್ಥೋ ಭವಿತಾ ತರ್ಹ್ಯೇವ ವೋಽಹಂ ಪುನರಾಗಂತಾಸ್ಮೀತಿ ತಥೇತಿ ತಯಾ ಮಹಾನಗ್ನ್ಯಾಭೂತಯಾ ಸೋಮಂ ರಾಜಾನಮಕ್ರೀಣನ್ ॥**

(ಐ. ಬ್ರಾ. ೫-೨)

ಸೋಮರಾಜನು ಗಂಧರ್ವರ ಗುಂಪಿನಲ್ಲಿದ್ದನು. ದೇವತೆಗಳೂ, ಋಷಿಗಳೂ ಸಹ ಅವನನ್ನು ಪಡೆಯುವ ಬಗೆ ಹೇಗೆ ಎಂದು ಯೋಚಿಸುತ್ತಿದ್ದರು. ಆಗ ವಾಗ್ದೇವಿಯು ಗಂಧರ್ವರ ಸ್ತ್ರೀವ್ಯಾಮೋಹವನ್ನು ಅರಿತು ತಾನು ಸುಂದರ ಸ್ತ್ರೀಯಾಗುವುದಾಗಿಯೂ ತನ್ನನ್ನು ಗಂಧರ್ವರಿಗರ್ಪಿಸಿ ಸೋಮವನ್ನು ಪಡೆಯಬಹುದೆಂದೂ ತಿಳಿಸಿದಳು. ಆಗ ದೇವತೆಗಳು ಅವಳನ್ನು ಬಿಟ್ಟಿರಲಿಷ್ಟಪಡಲಿಲ್ಲ. ಆಗ ಅವಳು ಪುನಃ ಅಪೇಕ್ಷಿತಳಾದಾಗ ಅವರನ್ನು ಸೇರುವುದಾಗಿ ಭರವಸೆಯನ್ನು ಕೊಟ್ಟಾಗ ಅವಳನ್ನು ನಗ್ನಸ್ತ್ರೀಯನ್ನಾಗಿ ಪರಿವರ್ತಿಸಿ ಗಂಧರ್ವರಿಗೆ ಒಪ್ಪಿಸಿ ಸೋಮನನ್ನು ಪಡೆದರು ಎಂಬ ಕಥೆಯಿದೆ. ಈ ಗಂಧರ್ವಲೋಕವಾವುದು ? ಸೂರ್ಯೆಯು ವಾಗ್ರೂಪದಲ್ಲಿ ಈ ಲೋಕವನ್ನು ಸೇರಿದಳು ಎಂದ ರ್ಥವೇನು ಎಂಬುದನ್ನೂ ಸಹ ೧೦-೮೫ ನೇ ಸೂಕ್ತದಲ್ಲಿ ತಿಳಿಸಿರುವುದು. ಈ ಸೂರ್ಯಾಗಂಧರ್ವರ ಸಂಬಂಧವನ್ನು Eggeling ಎಂಬ ಪಂಡಿತನು ಈರೀತಿ ಹೇಳಿದ್ದಾನೆ—

The Rigvedic Gandharva was primarily wedded to the hypercosmic ಸೂರ್ಯಾ—original immortal abode of Soma—and the wedding of king Soma

who was derived from the Gandharva to ಸೂರ್ಯಾ—in other words, the return of the moon to the hypercosmic sphere of the nocturnal Sun—is the happy ending of the Gandharva's drama so tragically started. Soma's dying is not a death, for he is actually re-born through his union with ಸೂರ್ಯಾ. ಈರೀತಿ ಸೋಮಪತ್ನಿಯೆಂದೂ, ಗಂಧರ್ವಪತ್ನಿಯೆಂದೂ, ಮೇಲೆ ವಿವರಿಸಿದಂತೆ ಒಂದೊಂದುಸಲ ಸೂರ್ಯಪತ್ನಿಯೆಂದೂ, ಸೂರ್ಯೆಯ ಸಂಬಂಧವನ್ನು ತಿಳಿಸಿದೆ. ಅಶ್ವಿನೀದೇವತೆಗಳೇ ಸೂರ್ಯಾಚಂದ್ರಮಸ್ಸುಗಳೆಂದು ಹೇಳಿದೆ. ಋ. ಸಂ. ೧-೧೮೪-೩ ರಲ್ಲಿ **ಸೂರ್ಯಾಂ ವಹತುಂ** ಎಂದು ಅಶ್ವಿನಿದೇವತೆಗಳು ಸೂರ್ಯೆಯನ್ನು ತಮ್ಮ ತ್ರಿಚಕ್ರಾತ್ಮಕವಾದ ರಥಥಲ್ಲಿ ಕುಳ್ಳಿರಿಸಿಕೊಳ್ಳುವ ವಿಷಯವು ತಿಳಿಸಲ್ಪಟ್ಟಿದೆ.

॥ ಸಾಯಣಭಾಷ್ಯಂ ॥

**ಸಪ್ತಮೇಽನುವಾಕೇ ಷಟ್ ಸೂಕ್ತಾನಿ । ತತ್ರ ಸತ್ಯೇನೇತಿ ಸಪ್ತಚತ್ವಾರಿಂಶದೃಚಂ ಪ್ರಥಮಂ ಸೂಕ್ತಂ ಸವಿತೃಸುತಾಯಾಃ ಸೂರ್ಯಾಯಾ ಆರ್ಷಂ । ನವೋನವ ಇತಿ ತಿಸ್ರೋಽನೃಕ್ಷರಾ ಇತಿ ದ್ವೇ ಗೃಭ್ಣಾಮೀತಿ ದ್ವೇ ಯದಶ್ವಿನಾ ಪೃಚ್ಛಮಾನಾವಿತ್ಯೇಷಾ ಪೂಷಾ ತ್ವೇತೋ ನಯತ್ವಿತ್ಯೇಕಾಘೋರಚಕ್ಷು- ರಿತಿ ಚೈವಮೇತಾ ದಶರ್ಚಸ್ತ್ರಿಷ್ಟುಭಃ । ತೃಷ್ಟಮೇತದಿತ್ಯೇಷೋರೋಬೃಹತ್ಯಷ್ಟಕದ್ವಾದಶದ್ವ್ಯಷ್ಟಕವತೀ। ಪೂರ್ವಾಪರಂ ಚರತ ಇಹ ಪ್ರಿಯಂ ಪ್ರಜಯಾ ನಃ ಪ್ರಜಾಂ ಜನಯತ್ವಿತ್ಯೇತಾಸ್ತಿಸ್ರೋ ಜಗತ್ಯಃ । ಶಿಷ್ಟಾಸ್ತ್ರಯಸ್ತ್ರಿಂಶದನುಷ್ಟುಭಃ । ಆದಿತಃ ಪಂಚಾನಾಮೃಚಾಂ ಸೋಮೋ ದೇವತಾ। ತತ ಏಕಾದಶ- ಭಿಃ ಸೂರ್ಯಾ ಸ್ವವಿವಾಹಂ ಸ್ತುತವತೀ । ಅತಸ್ತತ್ರ ಯೋಽರ್ಥಃ ಪ್ರತಿಪಾದ್ಯತೇ ಸ ಏವ ದೇವತಾತ್ವೇನ ವಿಜ್ಞೇಯಃ। ಯಾ ತೇನೋಚ್ಯತೇ ಸಾ ದೇವತೀತಿ ನ್ಯಾಯಾತ್ । ಸಪ್ತದಶ್ಯಾ ದೇವಾ ದೇವತಾ। ಅಷ್ಟಾ- ದಶ್ಯಾಃ ಸೋಮಾರ್ಕೌ । ಏಕೋನವಿಂಶ್ಯಾಶ್ಚಂದ್ರಮಾಃ । ಸುಕಿಂಶುಕಮಿತ್ಯಾದ್ಯಾ ನವರ್ಚೋ ವಿವಾಹ- ಮಂತ್ರಾ ಆಶಿಷಃ ಪ್ರತಿಪಾದಕಾಃ । ಅತಸ್ತತ್ರ ತತ್ರ ಪ್ರತಿಪಾದ್ಯೋಽರ್ಥೋ ದೇವತಾ । ಪರಾ ದೇಹ್ಯ- ಶ್ರೀರಾ ತನೂರಿತಿ ದ್ವೇ ವಧ್ವಾ ವಿವಾಹಕಾಲೇ ಪರಿಹಿತಸ್ಯ ವಾಸಸಃ ಸಂಸ್ಪರ್ಶನಿಂದಯಿತ್ರ್ಯೌ । ಯೋ ವಧ್ವಶ್ಚಂದ್ರಮಿತಿ ದಂಪತ್ಯೋಃ ಕ್ಷಯರೋಗಸ್ಯ ನಾಶಿನೀ । ಅತಸ್ತದ್ದೇವತಾಕಾ । ಪರಿಶಿಷ್ಟಾನಾಂ ಷೋಡಶಾನಾಂ ಸೂರ್ಯಾ ದೇವತಾ । ತಥಾ ಚಾನುಕ್ರಾಂತಂ । ಸತ್ಯೇನ ಸಪ್ತಚತ್ವಾರಿಂಶತ್ ಸರ್ವ- ಮನುಕ್ರಾಂತಂ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು— ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ಏಳನೆಯ ಅನುವಾಕದಲ್ಲಿ ಆರು ಸೂಕ್ತಗಳಿರು ವವು. ಅವುಗಳಲ್ಲಿ **ಸತ್ಯೇನೋತ್ತಭಿತಾ ಭೂಮಿಃ** ಎಂಬುದು ಮೊದಲನೆಯ ಸೂಕ್ತವು. ಇದರಲ್ಲಿ ನಲವತ್ತೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವಿತೃಪುತ್ರಿಯಾದ ಸೂರ್ಯಾ ಎಂಬ ಸ್ತ್ರೀಯು ಋಷಿಯು. ಈ ಸೂಕ್ತದ ಋಕ್ಕುಗಳಲ್ಲಿ **ನವೋನವಃ** ಎಂದು ಮೊದಲಾಗುವ ಮೂರು ಋಕ್ಕುಗಳು (೧೯–೨೧), **ಅನೃಕ್ಷರಾ** ಎಂದು ಮೊದ ಲಾಗುವ ಎರಡು ಋಕ್ಕುಗಳು (೨೩-೨೪), **ಗೃಭ್ಣಾಮಿ ತೇ** ಎಂದು ಮೊದಲಾಗುವ ಎರಡು ಋಕ್ಕುಗಳು (೩೬–೩೭) **ಯದಶ್ವಿನಾ** ಎಂಬ ಒಂದು ಋಕ್ಕು (೧೪) **ಪೂಷಾ ತ್ವೇತೋ ನಯತು** ಎಂಬ ಒಂದು ಋಕ್ಕು (೨೬) **ಅಘೋರ ಚಕ್ಷುಃ** ಎಂಬ ಒಂದು ಋಕ್ಕು (೪೪) ಅಂತೂ ಒಟ್ಟು ಹತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು; **ತೃಷ್ಟಮೇ-**

**ತತ್** ಎಂಬ ಋಕ್ಕು (೩೪) ಉರೋಬೃಹತೀ ಎಂಬ ಛಂದಸ್ಸಿನದು. ಈ ಛಂದಸ್ಸಿನಲ್ಲಿ ನಾಲ್ಕುಪಾದಗಳಿದ್ದು ಮೊದಲನೆಯ ಪಾದದಲ್ಲಿ ಎಂಟು ಅಕ್ಷರಗಳೂ, ಎರಡನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ, ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು; **ಪೂರ್ವಾಪರಂ ಚರತಃ** (೧೮) **ಇಹ ಪ್ರಿಯಂ ಪ್ರಜಯಾ** (೨೭) **ಆ ನಃ ಪ್ರಜಾಂ ಜನಯತು** (೪೩) ಎಂಬ ಮೂರು ಋಕ್ಕುಗಳು ಜಗತೀಛಂದಸ್ಕವು; ಉಳಿದ ಮೂವತ್ತಮೂರು ಋಕ್ಕುಗಳು ಅನುಷ್ಟುಪ್ ಛಂದಸ್ಕವು. ಈ ಸೂಕ್ತದಲ್ಲಿ ಮೊದಲಿನ ಐದು ಋಕ್ಕುಗಳಿಗೆ ಸೋಮನು ದೇವತೆಯು; ಅಲ್ಲಿಂದ ಮುಂದಿನ ೧೧ ಋಕ್ಕುಗಳಲ್ಲಿ (೬-೧೬) ಸೂರ್ಯಾದೇವಿಯು ತನ್ನ ವಿವಾಹದ ವಿಷಯವನ್ನು ತಿಳಿಸಿರುವಳು. ಋಕ್ಕುಗಳಲ್ಲಿ ಯಾವ ವಿಷಯವು ಪ್ರತಿಪಾದಿತವಾಗಿರುವುದೋ ಆ ಋಕ್ಕುಗಳಿಗೆ ಅದೇ ದೇವತೆಯು ಎಂಬ ವಚನಪ್ರಕಾರ ಆ ೧೧ ಋಕ್ಕುಗಳಿಗೆ ಸೂರ್ಯಾವಿವಾಹದ ಪ್ರಸ್ತಾಪವೇ ದೇವತೆಯು; ಹದಿನೇಳನೇ ಋಕ್ಕಿಗೆ ದೇವತೆಗಳೇ ದೇವತೆಯು; ಹದಿನೆಂಟನೇ ಋಕ್ಕಿಗೆ ಸೋಮಾರ್ಕರು ದೇವತೆಯು; ಹತ್ತೊಂಭತ್ತನೆಯ ಋಕ್ಕಿಗೆ ಚಂದ್ರನು ದೇವತೆಯು; **ಸುಕಿಂಶುಕಂ** ಎಂದು ಮೊದಲಾಗುವ ಒಂಭತ್ತು ಋಕ್ಕುಗಳಲ್ಲಿ (೨೦-೨೮) ವಿವಾಹಮಂತ್ರಗಳಲ್ಲಿ ಉಪಯೋಗಿಸುವ ಆಶೀರ್ವಚನಗಳು ಉಕ್ತವಾಗಿರುವುವರಿಂದ ಈ ಋಕ್ಕುಗಳಿಗೆ ಆಶೀರ್ವಚನಗಳೇ ದೇವತೆಯು; **ಪರಾ ದೇಹಿ** ಮತ್ತು **ಅಶ್ರೀರಾ ತನೂಃ** ಎಂಬ ಎರಡು ಋಕ್ಕುಗಳಲ್ಲಿ (೨೯-೩೦) ವಿವಾಹಕಾಲದಲ್ಲಿ ವಧೂವಸ್ತ್ರಸಂಸ್ಪರ್ಶನಿಂದೆಯು ಉಕ್ತವಾಗಿರುವುದರಿಂದ ಈ ಋಕ್ಕುಗಳಿಗೆ ಅದೇ ದೇವತೆಯು; **ಯೇ ವಧ್ವಶ್ಚಂದ್ರಂ** ಎಂಬ ಋಕ್ಕಿನಲ್ಲಿ (೩೧) ದಂಪತಿಗಳ ಕ್ಷಯರೋಗನಾಶದ ವಿಷಯವು ಉಕ್ತವಾಗಿರುವುದರಿಂದ ಆ ಋಕ್ಕಿಗೆ ಅದೇ ದೇವತೆಯು; ಉಳಿದ ಹದಿನಾರು ಋಕ್ಕುಗಳಿಗೆ (೩೨-೪೭) ಸೂರ್ಯಾದೇವಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಸತ್ಯೇನ ಸಪ್ತಚತ್ವಾರಿಂಶತ್** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೮೫

ಮಂಡಲ—೧೦ ॥ ಅನುವಾಕ—೭ ॥ ಸೂಕ್ತ—೮೫ ॥
ಅಷ್ಟಕ—೮ ॥ ಅಧ್ಯಾಯ—೩ ॥ ವರ್ಗ—೨೦, ೨೧, ೨೨, ೨೩, ೨೪, ೨೫, ೨೬, ೨೭, ೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪೭ ॥
ಋಷಿಃ—ಸೂರ್ಯಾ ಸಾವಿತ್ರೀ ॥
ದೇವತಾ—೧-೫. ಸೋಮಃ । ೬-೧೬. ಸೂರ್ಯಾವಿವಾಹಃ । ೧೭. ದೇವಾಃ । ೧೮. ಸೋಮಾರ್ಕೌ । ೧೯. ಚಂದ್ರಮಾಃ । ೨೦-೨೮. ನೃಣಾಂ ವಿವಾಹಮಂತ್ರಾ ಆಶೀಃಪ್ರಾಯಾಃ । ೨೯-೩೦. ವಧೂವಾಸಃಸಂಸ್ಪರ್ಶನಿಂದಾ । ೩೧. ಯಕ್ಷ್ಮನಾಶಿನೀ ದಂಪತ್ಯೋಃ । ೩೨-೪೭. ಸೂರ್ಯಾ ॥
ಛಂದಃ—೧-೧೩, ೧೫-೧೭, ೨೨, ೨೫, ೨೮-೩೩, ೩೫, ೩೮-೪೨, ೪೫-೪೭. ಅನುಷ್ಟುಪ್। ೧೪, ೧೯-೨೧, ೨೩-೨೪, ೨೬, ೩೬-೩೭, ೪೪. ತ್ರಿಷ್ಟುಪ್ । ೧೮, ೨೭, ೪೩ ಜಗತೀ । ೩೪. ಉರೋಬೃಹತೀ ।

॥ ಸಂಹಿತಾಪಾಠಃ ॥

ಸತ್ಯೇನೋತ್ತಭಿತಾ ಭೂಮಿಃ ಸೂರ್ಯೇಣೋತ್ತಭಿತಾ ದ್ಯೌಃ ।
ಋತೇನಾದಿತ್ಯಾಸ್ತಿಷ್ಠಂತಿ ದಿವಿ ಸೋಮೋ ಅಧಿ ಶ್ರಿತಃ ॥ ೧ ॥

॥ ಪದಪಾಠಃ ॥

ಸತ್ಯೇನ । ಉತ್ತಭಿತಾ । ಭೂಮಿಃ । ಸೂರ್ಯೇಣ । ಉತ್ತಭಿತಾ । ದ್ಯೌಃ ।

ಋತೇನ । ಆದಿತ್ಯಾಃ । ತಿಷ್ಠಂತಿ । ದಿವಿ । ಸೋಮಃ । ಅಧಿ । ಶ್ರಿತಃ ॥ ೧ ॥

। ಸಾಯಣಭಾಷ್ಯಂ ।

ಸತ್ಯೇನ ಬ್ರಹ್ಮಣಾನಂತಾತ್ಮನಾ । ಬ್ರಹ್ಮಾ ಖಲು ದೇವಾನಾಂ ಮಧ್ಯೇ ಸತ್ಯಭೂತಃ । ತೇನಾಧಃ ಸ್ಥಿತೇನ ಭೂಮಿರುತ್ತಭಿತಾ । ಉಪರಿ ಸ್ತಂಭಿತಾ । ಯಥಾಧೋ ನ ಪತೇತ್ತಥಾ ಕೃತಾ । ಯದ್ವಾ । ಸತ್ಯೇನಾನೃತಪ್ರತಿಯೋಗಿನಾ ಧರ್ಮೇಣ ಭೂಮಿರುತ್ತಭಿತೋದ್ಧೃತಾ ಫಲಿತಾ ಭವತೀತ್ಯರ್ಥಃ । ಅಸತಿ ಸತ್ಯೇ ಭೂಮ್ಯಾಂ ಸಸ್ಯಾದಯೋ ನ ಫಲಂತಿ । ತಥಾ ಸೂರ್ಯೇಣ ದೇವೇನ ದ್ಯೌರುತ್ತಭಿತಾ । ಸೂರ್ಯೋ ಹಿ ದ್ಯುಸ್ಥಾನತ್ವಾದ್ದಿವಂ ದಧಾರ । ಋತೇನ ಯಜ್ಞೇನಾದಿತ್ಯಾ ಅದಿತೇಃ ಪುತ್ರಾ ದೇವಾಸ್ತಿಷ್ಠಂತಿ । ಯಜ್ಞೇನ ಯಜಮಾನದತ್ತೇನ ಖಲ್ವಾಹುತ್ಯಾ ದೇವಾ ಉಪಜೀವಂತಿ । ದಿವಿ ದ್ಯುಲೋಕೇ ಸೋಮೋ ದೇವಾನಾಮಾಪ್ಯಾಯನಕಾರೀ ವಲ್ಲೀರೂಪೋ ದೇವತಾರೂಪಶ್ಚಾಧಿ ಶ್ರಿತಃ । ಅಧಿತಿಷ್ಠತಿ । ಇತಿ ಸ್ವಪತಿಂ ಸೋಮಂ ಸೂರ್ಯಾ ಸ್ತೌತಿ॥

। ಪ್ರತಿಪದಾರ್ಥ ।

ಭೂಮಿಃ—ಪೃಥ್ವಿಯು । **ಸತ್ಯೇನ**—ಬ್ರಹ್ಮರೂಪವಾದ ಸತ್ಯದಿಂದ । **ಉತ್ತಭಿತಾ**—ಎತ್ತಿ ಹಿಡಿಯಲ್ಪಟ್ಟಿದೆ । **ದ್ಯೌಃ**—ದ್ಯುಲೋಕವು । **ಸೂರ್ಯೇಣ**—ಸೂರ್ಯನಿಂದ । **ಉತ್ತಭಿತಾ**—ಧೃತವಾಗಿದೆ । **ಆದಿತ್ಯಾಃ**—ಆದಿತಿಪುತ್ರರಾದ ದೇವತೆಗಳು । **ಋತೇನ**—ಯಜ್ಞವನ್ನಾಶ್ರಯಿಸಿ । **ತಿಷ್ಠಂತಿ**—ಉಪಜೀವಿಸುತ್ತಾರೆ । **ದಿವಿ**—ದ್ಯುಲೋಕದಲ್ಲಿ । **ಸೋಮಃ**—ಸೋಮನು । **ಅಧಿಶ್ರಿತಃ**—ಆಶ್ರಯವನ್ನು ಹೊಂದಿದ್ದಾನೆ.

। ಭಾವಾರ್ಥ ।

ಪೃಥ್ವಿಯು ಬ್ರಹ್ಮರೂಪವಾದ ಸತ್ಯದಿಂದ ಎತ್ತಿ ಹಿಡಿಯಲ್ಪಟ್ಟಿದೆ. ದ್ಯುಲೋಕವು ಸೂರ್ಯನಿಂದ ಧೃತವಾಗಿದೆ. ಆದಿತಿಪುತ್ರರಾದ ದೇವತೆಗಳು ಯಜ್ಞವನ್ನಾಶ್ರಯಿಸಿ ಉಪಜೀವಿಸುತ್ತಾರೆ. ದ್ಯುಲೋಕದಲ್ಲಿ ಸೋಮನು ಆಶ್ರಯವನ್ನು ಹೊಂದಿದ್ದಾನೆ.

English Translation

Earth is upheld by truth; heaven is upheld by the sun; the Adityas are supportcd by sacrifice, Soma is supreme in heaven.

॥ ವಿಶೇಷವಿಷಯಗಳು ॥

ಸತ್ಯೇನ ಭೂಮಿಃ ಉತ್ತಭಿತಾ—ಸತ್ಯೇನ ಬ್ರಹ್ಮಣಾನಂತಾತ್ಮನಾ । ಬ್ರಹ್ಮಾ ಖಲು ದೇವಾನಾಂ ಮಧ್ಯೇ ಸತ್ಯಭೂತಃ ॥ ತೇನಾಧಃ ಸ್ಥಿತೇನ ಭೂಮಿಃ ಉಪರಿ ಸ್ತಂಭಿತಾ । ಯಥಾಧೋ ನ ಪತೇತ್ತಥಾ

**ಕೃತಾ** । ಇಲ್ಲಿ ಸತ್ಯಶಬ್ದಕ್ಕೆ ಭಾಷ್ಯಕಾರರು ಬ್ರಹ್ಮನೆಂದು ಅರ್ಥಮಾಡಿದಾರೆ. ಏಕೆಂದರೆ ದೇವತೆಗಳ ಮಧ್ಯದಲ್ಲಿ ಬ್ರಹ್ಮನೇ ಸತ್ಯಭೂತನಾದವನು. ಇವನ ಲೋಕಕ್ಕೆ ಸತ್ಯಲೋಕವೆಂದು ಹೆಸರು. ಇಂತಹ ಅನಂತಾತ್ಮನೂ, ಸತ್ಯಭೂತನೂ ಆದ ಬ್ರಹ್ಮನಿಂದ ಕೆಳಗಿದ್ದ ಭೂಮಿಯು ಮೇಲಕ್ಕೆ ಎತ್ತಲ್ಪಟ್ಟು ಅಲ್ಲಾಡದಂತೆಯೂ, ದೃಢವಾಗಿರುವಂತೆಯೂ ನಿಲ್ಲಿಸಲ್ಪಟ್ಟಿತು. ಅಥವಾ ಈ ವಾಕ್ಯಕ್ಕೆ ಇನ್ನೊಂದು ವಿಧ ಅರ್ಥವನ್ನು ಹೇಳಬಹುದು. ಸತ್ಯ ಶಬ್ದಕ್ಕೆ ಧರ್ಮವೆಂದು ಅರ್ಥಮಾಡಿದರೆ—**ಸತ್ಯೇನ ಅನೃತಪ್ರತಿಯೋಗಿನಾ ಧರ್ಮೇಣ ಭೂಮಿರುದ್ಧೃತಾ ಫಲಿತಾ ಭವತೀತ್ಯರ್ಥಃ । ಅಸತಿ ಸತ್ಯೇ ಭೂಮ್ಯಾಂ ಸಸ್ಯಾದಯೋ ನ ಫಲಂತಿ ।** ಎಂದರೆ ಸತ್ಯದಿಂದ ಅಥವಾ ಧರ್ಮದಿಂದಲೇ ಈ ಭೂಮಿಯು ನಿಂತಿರುತ್ತದೆ ಎಂದರೆ ಭೂಮಿಯ ಮೇಲೆ ನಡೆಯುವ ಸಮಸ್ತ ವ್ಯವಹಾರಗಳೂ ಧರ್ಮದ ಆಶ್ರಯದಿಂದಲೇ ನಡೆಯುತ್ತವೆ. ಸತ್ಯ ಅಥವಾ ಧರ್ಮವಿಲ್ಲದಿದ್ದರೆ ಭೂಮಿಯ ಮೇಲೆ ಸಸ್ಯಾದಿಗಳು ಬೆಳೆಯುವುದಿಲ್ಲ. ಆದ್ದರಿಂದ ಸಕಲವೂ ಧರ್ಮವನ್ನೇ ಆಶ್ರಯಿಸಿರುತ್ತದೆ. ಈ ವಿಷಯವನ್ನು—

**ಸತ್ಯೇನ ವಾಯುರಾವಾತಿ ಸತ್ಯೇನಾದಿತ್ಯೋ ರೋಚತೇ ದಿವಿ ಸತ್ಯಂ ವಾಚಃ ಪ್ರತಿಷ್ಠಾ ಸತ್ಯೇ ಸರ್ವಂ ಪ್ರತಿಷ್ಠಿತಂ ತಸ್ಮಾತ್ಸತ್ಯಂ ಪರಮಂ ವದಂತಿ ॥**

(ತೈ. ಉ. ೪-೮೦)

ಎಂಬ ತೈತ್ತಿರೀಯೋಪನಿಷದ್ವಾಕ್ಯವೂ ಸಮರ್ಥಿಸುತ್ತದೆ.

**ಸೂರ್ಯೇಣ ದ್ಯೌಃ ಉತ್ತಭಿತಾ—ಸೂರ್ಯೋ ಹಿ ದ್ಯುಸ್ಥಾನತ್ವಾದ್ದಿವಂ ದಾಧಾರ** । ಸೂರ್ಯನು ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಬೆಳಗುತ್ತಿರುವವನಾದ್ದರಿಂದ ಸ್ವರ್ಗವನ್ನೂ, ಅಂತರಿಕ್ಷವನ್ನೂ ತನ್ನ ಮಹಿಮೆಯಿಂದ ಧರಿಸಿ ಪೋಷಿಸುತ್ತಿರುವನು ಎಂದಭಿಪ್ರಾಯವು.

**ಋತೇನಾದಿತ್ಯಾಸ್ತಿಷ್ಠಂತಿ—ಅದಿತೇಃ ಪುತ್ರಾ ದೇವಾಃ ಯಜ್ಞೇನ ತಿಷ್ಠಂತಿ । ಯಜ್ಞೇ ಯಜಮಾನದತ್ತೇನ ಖಲ್ವಾಹುತ್ಯಾ ದೇವಾ ಉಪಜೀವಂತಿ ।** ಇಲ್ಲಿ ಆದಿತ್ಯಾಃ ಎಂಬ ಶಬ್ದಕ್ಕೆ **ಅದಿತಿಪುತ್ರಾಃ ಇಂದ್ರಾದಯೋ ದೇವಾಃ** ಅದಿತಿ ದೇವಿಯ ಪುತ್ರರಾದ ಇಂದ್ರಾದಿದೇವತೆಗಳು ಎಂದು ಅರ್ಥಮಾಡಿದೆ. ಭೂಮಿಯ ಮೇಲೆ ಮಾನವರಾದ ಯಜಮಾನರು ಯಜ್ಞಮಾಡುವಾಗ ದೇವತೆಗಳನ್ನುದ್ದೇಶಿಸಿ ಅರ್ಪಿಸುವ ಆಹುತಿಗಳಿಂದ ಸ್ವರ್ಗದಲ್ಲಿರುವ ದೇವತೆಗಳು ಜೀವಿಸುತ್ತಾರೆ, ಎಂದು ಹೇಳಿದೆ. ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಅರ್ಪಿಸುವ ಆಹುತಿಗಳನ್ನು ಅಗ್ನಿದೇವನು ಸ್ವರ್ಗದಲ್ಲಿರುವ ದೇವತೆಗಳು ಬಳಿಗೆ ಒಯ್ಯುತ್ತಾನೆ. ಅಗ್ನಿಯ ಮೂಲಕವೇ ದೇವತೆಗಳ ಆಹುತಿಗಳನ್ನು ಸ್ವೀಕರಿಸುವರು. ಆದ್ದರಿಂದಲೇ ದೇವತೆಗಳನ್ನು **ಅಗ್ನಿಜಿಹ್ವಾಃ** ಎಂದು ಕರೆಯುವ ರೂಢಿ ಇದೆ.

**ದಿವಿ ಸೋಮೋ ಅಧಿ ಶ್ರಿತಃ**—ದಿವಿ ಎಂದರೆ ಸ್ವರ್ಗಲೋಕದಲ್ಲಿ ಸೋಮವು ಸ್ಥಾಪಿತವಾಗಿದೆ. ಯಜ್ಞಾದಿಗಳಲ್ಲಿ ಉಪಯೋಗಿಸುವ ಸೋಮವು ಭೂಮಿಯ ಮೇಲೂ, ಪರ್ವತಗಳ ಮೇಲೂ ಬೆಳೆಯುವುದಾದರೂ ಪೂರ್ವದಲ್ಲಿ ಅದು ಸ್ವರ್ಗದಲ್ಲಿಯೇ ಇದ್ದಿತೆಂದೂ ಅದನ್ನು ಗಾಯತ್ರಿಯು ಶ್ಯೇನಪಕ್ಷಿಯ ರೂಪದಲ್ಲಿ ಹಾರಿಹೋಗಿ ಅದನ್ನು ಭೂಮಿಗೆ ತಂದಿತೆಂದೂ **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್** (ತೈ. ಬ್ರಾ. ೩-೨-೧-೧) ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಪ್ರಸಿದ್ಧವಾಗಿದೆ. ಈ ವಿಷಯವನ್ನು ನಾವು ಹಿಂದಿನ ಭಾಗಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

ಸೋಮವಿಷಯದಲ್ಲಿ—ಬಳ್ಳಿಯೆಂತಲೂ, ಅಭಿಮಾನಿದೇವತೆಯೆಂತಲೂ ಎರಡು ವಿಧವಾಗಿ ಭಾವಿಸಬಹುದು. ಅದನ್ನು ನಾವು ಹಿಂದೆಯೇ ಹೇಳಿದೇವೆ. ಯಾಸ್ಕರು ಸೋಮಶಬ್ದನಿರ್ವಚನವನ್ನು ಈ ರೀತಿ ಹೇಳಿದಾರೆ—

**ಓಷಧಿಸ್ಸೋಮಃ ಸುನೋತೇರ್ಯದೇನಮಭಿಷುಣ್ವಂತಿ**—ಸೋಮ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಮೂಲಿಕೆಯು ಇದನ್ನು—

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪-೨೬-೭)

ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ, ಸ್ವರ್ಗದಿಂದ ಭೂಮಿಗೆ ತಂದಿರುವುದೆಂದೂ, ಇಂದ್ರನು ಈ ಸೋಮವನ್ನು ಪಾನಮಾಡುವ ಸನ್ನಿವೇಶಗಳಿಂದ ಸಹಸ್ರಸುತ್ಯಗಳುಳ್ಳ ಯಜ್ಞಗಳನ್ನು ನೆರವೇರಿಸಿ ಯಜಮಾನರು ಅಯುತಸಂಖ್ಯಾಕವಾದ ದಕ್ಷಿಣೆಯನ್ನು ದಾನಮಾಡಿರುವರೆಂದೂ ಸೋಮದ ಮಾಹಾತ್ಮ್ಯವನ್ನು ವಿವರಿಸಿದ್ದಾರೆ. ಮತ್ತು **ಬಹುಲಮಸ್ಯ ನೈಘಂಟುಕಂ ವೃತ್ತಂ ಆಶ್ಚರ್ಯಮಿವ ಪ್ರಾಧಾನ್ಯೇನ**—ಈ ಸೋಮದ ಸ್ತುತಿಯೂ ಇದರ ಪ್ರಾಮುಖ್ಯತೆಯನ್ನು ಸೂಚಿಸುವುದಾಗಿರುತ್ತದೆ. ಮತ್ತು ಆಶ್ಚರ್ಯಜನಕವಾಗಿ ಇರುತ್ತದೆ ಎಂದು ಒಂಭತ್ತನೆಯ ಮಂಡಲದಲ್ಲಿ ಪಠಿತವಾಗಿದೆ. ಮತ್ತು ಈ ಸೋಮದ ಮಹಿಮೆಯು ಸ್ತುತಿರೂಪದಿಂದ—

**ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ।**

(ಋ. ಸಂ. ೯-೧-೧)

ಎಂಬ ಈ ಋಕ್ಕಿನಲ್ಲಿ ಉಕ್ತವಾಗಿದೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಂ ।**
**ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥**

(ಋ. ಸಂ. ೧೦-೮೫-೩)

ಸೋಮ ಎಂಬ ಪದಕ್ಕೆ ಚಂದ್ರನೆಂದು ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಸೋಮಲತೆ, ಚಂದ್ರ ಇವರಿಬ್ಬರನ್ನು ಸ್ತುತಿಸಿರುವುದು. ಆದರೆ, ಪ್ರಸಿದ್ಧನಾದ ಚಂದ್ರನಿಗಿಂತಲೂ ಈ ಸೋಮಕ್ಕೆ ಪ್ರಾಧಾನ್ಯವನ್ನು ಈ ರೀತಿಯಾಗಿ ಯಾಸ್ಕರು ವರ್ಣಿಸಿದ್ದಾರೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ವೃಥಾಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುರಿತಿ ನ ತಸ್ಯಾಶ್ನಾತಿ ಕಶ್ಚನಾಯಜ್ವೇತ್ಯಧಿಯಜ್ಞಂ । ಅಥಾಧಿದೈವತಂ ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ಯಜುಸ್ಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುಶ್ಚಂದ್ರಮಸಂ ನ ತಸ್ಯಾಶ್ನಾತಿ ಕಶ್ಚನಾದೇವ ಇತಿ ।** (ನಿ. ೧೧-೪)

ರಸಾಯನಾದಿಗಳನ್ನು ಮಾಡುವವರು ಸೋಮವನ್ನು ತಂದು ರಸವನ್ನು ಹಿಂಡಿ ಪಾನಮಾಡುವರಾದರೂ, ಅವರು ಯಜ್ಞದಲ್ಲಿ ಸೋಮಪಾನ ಮಾಡುವ ಸೋಮಪರೆಂದು ಪ್ರಸಿದ್ಧರಾಗುವುದಿಲ್ಲವಾದುದರಿಂದ ಯಜ್ಞಾಂಗವಾಗಿ ಉಪಯೋಗಿಸಲ್ಪಟ್ಟಕಾರಣ ಸೋಮವು ಯಜಮಾನರಿಗೆ ಮಾತ್ರವೇ ವಿಧ್ಯುಕ್ತವಾದ ರೀತಿಯಿಂದ ಸೋಮಪನೆಂಬ ಪ್ರಸಿದ್ಧಿಯನ್ನು ಉಂಟುಮಾಡುವುದೆಂದು ಸ್ತುತಿಸಿದೆ. ಅಧಿದೈವತಪಕ್ಷದಲ್ಲಿಯೂ, (ಸೋಮಪದಕ್ಕೆ ಚಂದ್ರನೆಂದು

ಅರ್ಥವನ್ನು ವಿವರಿಸುವುದರಲ್ಲಿಯೂ) ಯಜ್ಞಾಂಗವಾಗಿರುವ ಸೋಮವನ್ನು ಸೋಮಪದದಿಂದ ನಿರ್ದೇಶಮಾಡಿದೆ. **" ಸೋಮೋ ನೂನಮೇಷ ಯದ್ದೇವಾನಾಮನ್ನಂ "** ಎಂಬ ಶ್ರುತಿವಾಕ್ಯದಿಂದ ಚಂದ್ರನು ಸೋಮಪದವಾಚ್ಯನಾಗಿದ್ದರೂ ಅವನು ದೇವತೆಗಳಿಗೆ ಮಾತ್ರವೇ ಅನ್ನವಾಗಿರುವನು. ಆದ್ದರಿಂದ **ಸೋಮಂ ಮನ್ಯತೇ** ಎಂಬ ಮಂತ್ರದಿಂದ ಅಧಿಯಜ್ಞ ಅಧಿದೈವ ಎಂಬ ಎರಡು ವಿಧವಾದ ಅರ್ಥವನ್ನು ಸೋಮಪದಕ್ಕೆ ಹೇಳಿದರೂ, ಓಷಧಿ ರೂಪವಾದ ಸೋಮಕ್ಕೇ ಯಾಜ್ಞಿಕರು ಯಜ್ಞದಲ್ಲಿ ಪ್ರಾಧಾನ್ಯವನ್ನು ಹೇಳಿರುತ್ತಾರೆ.

**ಯತ್ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।**
**ವಾಯುಃಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥**

(ಋ. ಸಂ. ೧೦-೮೫-೫)

**ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾವಿತಿ ವಾ ವಾಯುಃಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾತ್ ರಸಹರಣಾದ್ವಾ। ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈರೋಷಧಿಶ್ಚಂದ್ರಮಾ ವಾ ।** ಅಧಿಯಜ್ಞಪರವಾದ ಅರ್ಥದಲ್ಲಿ ಸೋಮವನ್ನು ಮೂರು ಸವನಗಳಲ್ಲಿಯೂ, ಯಜಮಾನರೇ ಮೊದಲಾದ ಋತ್ವಿಜರು ಪಾನಮಾಡುತ್ತಾರೆ, ಇದರಿಂದ ಈ ಸೋಮನು ಆಪ್ಯಾಯನಮಾಡುವವನಾಗಿರುವನು. ವಾಯುವು ಓಷಧಿಗಳ ರಸವನ್ನು ಹೀರುವವನಾದರೂ ಸೋಮರಸವನ್ನು ಹೀರದೇ ಇರುವುದರಿಂದ ಅದರ ರಕ್ಷಕನಾಗಿರುವನು. ಆಯುರ್ವೇದವನ್ನು ತಿಳಿದ ರಸಾಯನಕಾರರು ಈ ಸೋಮನು ಆಯಾಯ ಮಾಸದ ಶುಕ್ಲಪಕ್ಷಗಳಿರುವ ತಿಥಿಗಳಿಗನುಸಾರವಾಗಿ ಪರ್ಣಗಳ (ಎಲೆಗಳ) ಅಭಿವೃದ್ಧಿಯನ್ನೂ ಕೃಷ್ಣಪಕ್ಷಗಳಿರುವ ತಿಥಿಗಳಿಗೆ ಅನುಗುಣವಾಗಿ ಪರ್ಣಗಳ (ಅಪಚಿತಿ) ಹ್ರಾಸವನ್ನೂ ಹೊಂದುವನು. ಅಧಿದೈವತಪಕ್ಷದಲ್ಲಿ ಸೋಮಪದವಾಚ್ಯನಾದ ಚಂದ್ರನು ತನ್ನ ಕಲೆಗಳಿಂದ ಆಯಾಯ ತಿಥಿಗಳಿಗನುಗುಣವಾಗಿ ದೇವತೆಗಳ ಆಪ್ಯಾಯಕನಾಗಿರುವನು. ಚಂದ್ರನ ಕಲೆಗಳನ್ನು ದೇವತೆಗಳೂ ಪಾನಮಾಡುವರು. ಆಯಾಯ ಪಕ್ಷಗಳಲ್ಲಿ ವೃದ್ಧಿಹ್ರಾಸಗಳನ್ನು ತನ್ನ ಕಲೆಗಳ ಮೂಲಕ ಚಂದ್ರನು ಹೊಂದುವನು ಎಂದು ಅಧಿಯಜ್ಞ ಅಧಿದೈವತ ಎಂಬ ಎರಡು ಪ್ರಕಾರಗಳಲ್ಲಿಯೂ ಸೋಮಲತೆಗೆ ಚಂದ್ರನ (ಸಮಾನಸ್ಥಿತಿಯನ್ನು) ಸಾದೃಶ್ಯವನ್ನು ಹೇಳಿ ಸೋಮತಾದಾತ್ಮ್ಯವನ್ನು ಉಪಪಾದನೆಮಾಡಿ ಪ್ರಭೂತವಾದ ಮಹಾಪೂರಿತವೆಂದು ಸೋಮಲತೆಯನ್ನು ಪ್ರಶಂಸಿಸಿದೆ.

ಈಗ ಸೋಮವೆಂದರೇನು ಎಂಬುದನ್ನು ವಿಮರ್ಶೆಮಾಡಬೇಕಾಗಿದೆ. ಸೋಮವು ಒಂದುವಿಧವಾದ ಲತಾವಿಶೇಷವು. ಈ ಸೋಮಲತೆಯು ಈಗ ಇಂಡಿಯಾದೇಶದಲ್ಲೆಲ್ಲಿಯೂ ದೊರಕುವುದಿಲ್ಲ. ಇದು ವಿಶೇಷವಾಗಿ ಬಯಲುಗಳಲ್ಲಿಯೂ, ನದೀತೀರಗಳಲ್ಲಿಯೂ, ಬೆಟ್ಟಗಳಲ್ಲಿಯೂ ಬೆಳೆಯುವುದು. ಎಷ್ಟೆಷ್ಟು ಎತ್ತರದಲ್ಲಿ ಬೆಳೆದಿದ್ದರೆ ಅಷ್ಟಷ್ಟು ಹೆಚ್ಚು ರಸವನ್ನು ಕೊಡುವುದು. ಸುಮಾರು ೭೦೦೦ ಅಡಿ ಎತ್ತರದಲ್ಲಿಯೂ ಇದು ಬೆಳೆಯುವುದು. ಆದುದರಿಂದ ಈ ಸೋಮವನ್ನು ಬೆಟ್ಟಗಳಿಂದ ತಂದ ವರ್ಣನೆಗಳು ಋಗ್ವೇದದಲ್ಲಿ (ಋ. ಸಂ. ೧-೯೩-೬ ; ೩-೪೮-೨ ; ೫-೪೩-೪ ಇತ್ಯಾದಿ) ಅನೇಕ ಕಡೆ ಇವೆ. **ಮೌಜವತ**ವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧಿಯಾಗಿದೆ. (ಋ.ಸಂ. ೧೦ ೩೪-೧; ವಾ. ಸಂ. ೩-೬೧-೧ ; ನಿ. ೯-೮ ಇತ್ಯಾದಿ) **ಶರ್ಯಣಾವತ್** ಎಂಬ ಸರೋವರದ ದಡಗಳಲ್ಲಿ ಸೋಮಲತೆಯು ದೊರೆಯುವುದೆಂದು ಋಗ್ವೇದದಲ್ಲಿ (ಋ. ಸಂ. ೮-೭-೨೯, ೮-೬೪-೧೧, ೯-೬೫-೨೨ ಇತ್ಯಾದಿ) ಅಲ್ಲಲ್ಲಿ ಹೇಳಿದೆ.

ಮತ್ತು **ಅರ್ಜೀಕ** ಎಂಬ ಸ್ಥಳದಲ್ಲಿಯೂ (ಋ. ಸಂ. ೮-೭-೨೯, ೮-೬೪-೧೧ ಇತ್ಯಾದಿ) **ಪಸ್ತ್ಯ** ಎಂಬ ದೇಶದಲ್ಲಿಯೂ (ಋ. ಸಂ. ೯-೬೫-೩) ಪಂಚಜನರೆಂಬ ಐದು ಪಂಗಡದವರು ವಾಸಿಸುವ ಸ್ಥಳದಲ್ಲಿಯೂ (ಋ. ಸಂ. ೯-೬೫-೨೩, ೯-೯೨-೩ ಇತ್ಯಾದಿ) **ಸುಷೋಮಾ** ಎಂಬ ನದಿಯ ಸುತ್ತಮುತ್ತ ಪ್ರದೇಶಗಳಲ್ಲಿಯೂ(ಋ.ಸಂ. ೮-೭-೨೯, ೮-೬೪-೧೧ ಇತ್ಯಾದಿ) ಸೋಮವು ದೊರೆಯುವುದೆಂದು ಹೇಳಿದೆ. ಕಡೆಯದಾದ **ಸುಷೋಮಾ** ಎಂದರೆ ಸು+ಸೋಮ= ಒಳ್ಳೆಯ ಸೋಮವು ಸಿಕ್ಕುವ ಸ್ಥಳವಾದ್ದರಿಂದ ಈ ಪ್ರದೇಶಕ್ಕೆ ಸುಷೋಮವೆಂದು ಹೆಸರು ಬಂದಿರಬಹುದು. ಆದುದರಿಂದ ಋಗ್ವೇದಕಾಲದಲ್ಲಿ ಈಗಿನ ಪಂಜಾಬು ದೇಶದ ಬಯಲುಗಳಲ್ಲಿಯೂ ನದೀತೀರಗಳಲ್ಲಿಯೂ ಸೋಮಲತೆಯು ಯಥೇಷ್ಟವಾಗಿ ಬೆಳೆಯುತ್ತಿತ್ತೆಂದು ತಿಳಿದುಬರುವುದು. ಬಯಲಿನಲ್ಲಿ ಬೆಳೆಯುವ ಲತೆಯಿಂದ ಬೆಟ್ಟದಲ್ಲಿ ಬೆಳೆಯುವ ಲತೆಯಷ್ಟು ರಸವು ದೊರೆಯುತ್ತಿರಲಿಲ್ಲವಾಗಿ ಬಯಲಿನ ಲತೆಯನ್ನು ನೀರಿನಲ್ಲಿ ಚೆನ್ನಾಗಿ ನೆನೆಯಿಸಿ ಉಪಯೋಗಿಸುತ್ತಿದ್ದರು. (ಋ. ಸಂ. ೯-೬೩-೪, ೯-೭೪-೯ ಇತ್ಯಾದಿ).

ಈ ಲತೆಯ ಕಾಂಡವು ಸುಮಾರು ೪ ಅಡಿಯ ಎತ್ತರಕ್ಕೆ ಬೆಳೆಯುವುದು. ಇದರ ಕಾಂಡವು ದುಂಡಾಗಿಯೂ, ಮೃದುವಾಗಿಯೂ, ಬಿಳುಪು ಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿಯೂ ಇರುವುದು. ಮತ್ತು ಒಂದು ಬೆಟ್ಟುಗಾತ್ರ ದಪ್ಪನಾಗಿರುವುದು. ಎಲೆಗಳು ಬಹಳ ಸ್ವಲ್ಪ ಮತ್ತು ಬಿಳುಪಾಗಿಯೂ ಸಣ್ಣದಾಗಿಯೂ ಇರುವುವು. ಸಾಧಾರಣವಾಗಿ ಎಲೆಗಳು ಉದುರಿಹೋಗುವುವು. ಗಿಡದ ತುದಿಯಲ್ಲಿ ಕೆಲವು ಬೀಜಗಳಿಂದ ಕೂಡಿದ (ಜೋಳದಂತಿರುವ) ಗೊಂಚಲು ಇರುವುದು. ಇದರ ರಸವು ಹಸುರುಮಿಶ್ರವಾದ ಬಿಳುಪಾಗಿರುವುದು. ರುಚಿಯಲ್ಲಿ ಸ್ವಲ್ಪ ಸಿಹಿಯಾಗಿರುವುದಾದರೂ ಕೆಲವು ದಿನಗಳವರೆಗೆ ಇಟ್ಟಿದ್ದರೆ ಹುಳಿಯಾಗುವುದು. ದೊಡ್ಡಮರದ ಸಮೀಪದಲ್ಲಿ ಬೆಳೆಯುವ ಸಂದರ್ಭದಲ್ಲಿ ಇದು ಲತೆಯಂತೆ ಮರದ ಸುತ್ತಲೂ ಹಬ್ಬಿ ಬೆಳೆಯುವುದು. ಅಲ್ಲಲ್ಲಿ ಗಿಣ್ಣುಗಳಿರುವವು. ಇದನ್ನು ಸುಲಭವಾಗಿ ಮುರಿಯಬಹುದು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು— ನದೀತೀರಗಳಲ್ಲಿಯೂ, ಪರ್ವತದ ಮೇಲೆಯೂ ಬೆಳೆಯುತ್ತಿದ್ದ ಸೋಮಲತೆಯನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು. ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು. ಸೋಮಲತೆಯನ್ನು ತಂದಮೇಲೆ ಅದನ್ನು ಕಲ್ಲುಗಳಿಂದ (ಗ್ರಾವ, ಅದ್ರಿ) ಜಜ್ಜಿ, ಹಿಂಡಿ ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನ ಋತ್ವಿಜರು ಪಾನಮಾಡುವುದು ರೂಢಿಯಾಗಿದೆ ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸಗಳಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವುದು. ಇದಕ್ಕೆ ಅಭಿಷವ ಅಥವಾ ಸವನ (ರಸವನ್ನು ಹಿಂಡಿ ತೆಗೆಯುವುದು) ಎಂದು ಹೆಸರು. ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದು ಹೆಸರು.

ಸೋಮಲತೆಯು (ಬಳ್ಳಿಗಳು) **ಬಭ್ರು, ಅರುಣ** (ಮಾಸಲು ಕೆಂಪು) ಅಥವಾ ಹಳದಿಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರುವುದು. ಪರ್ವತಗಳಲ್ಲಿ ಬಹಳ ಎತ್ತರದಲ್ಲಿ ಬೆಳೆದಿರುವ ಲತೆಯು ಶ್ರೇಷ್ಠವೆಂದೂ ಅದರಿಂದ ಹೆಚ್ಚು ರಸವನ್ನು ತೆಗೆಯಬಹುದೆಂದೂ ಹೇಳಿರುವುದರಿಂದ ಸಾಧ್ಯವಾದ ಸಂದರ್ಭಗಳಲ್ಲಿ ಸೋಮಲತೆಯನ್ನು ಪರ್ವತಗಳಿಂದಲೇ ತರುತ್ತಿದ್ದರು. ಇಂತಹ ಪರ್ವತಗಳಲ್ಲಿ **ಮೂಜವತ**ವೆಂಬ ಪರ್ವತವು ಪ್ರಸಿದ್ಧವಾಗಿದ್ದಿತು. ಈ ಸೋಮಲತೆಯು

ಕುಡಿಯು **ಅಂಶ**ವೆಂಬ ಹೆಸರಿನಿಂದಲೂ (ಋ. ಸಂ. ೧-೧೬೮-೩ ; ೩-೪೮-೨ ; ಇತ್ಯಾದಿ) ಚಿಗುರುಗಳಿಂದ ಕೂಡಿದ ಕುಡಿಗೆ **ವಕ್ಷಣಾ** ಎಂದೂ (ಋ. ಸಂ. ೮-೧-೧೭) **ವಾಣ** ಎಂದೂ (ಋ. ಸಂ. ೪-೨೪-೯ ; ೯-೫೦-೧) ಸೋಮ ರಸಕ್ಕೆ **ಅಂಧಃ** (ಋ. ಸಂ. ೧-೨೮-೭ ; ೩-೪೮-೧ ; ೪-೧೬-೧) ಎಂದೂ ಸೋಮಲತೆಯ ದಂಡಕ್ಕೆ (ಬಳ್ಳಿಗೆ) **ಪರ್ವನ್** (ಋ. ಸಂ. ೧-೯-೧) ಎಂದೂ ಹೇಳುವ ರೂಢಿಯಿರುವುದು.

## ಸೋಮರಸವನ್ನು ಸಿದ್ಧಪಡಿಸುವ ಕ್ರಮ

ಸೋಮಲತೆಯಲ್ಲಿರುವ ಅಥವಾ ಬಳ್ಳಿಯಲ್ಲಿರುವ ಎಲೆಗಳನ್ನು ತೆಗೆದುಹಾಕಿ ಅದನ್ನು ಒರಳಿನಲ್ಲಿ ಹಾಕಿ ಕಲ್ಲಿನಿಂದ ಜಜ್ಜುವರು. **ಲತೆ**ಯು ಹೊಸದಲ್ಲದಿದ್ದರೆ ಒಂದೆರಡುದಿನ ನೀರಿನಲ್ಲಿ ನೆನೆಹಾಕಿ ಮೆತ್ತಗಾದ ಮೇಲೆ ರಸವನ್ನು ತೆಗೆಯುವರು. ಸೋಮಲತೆಯನ್ನು ಜಜ್ಜುವ ಒರಳಿಗೆ **ಉಲೂಖಲ**ವೆಂದು ಹೆಸರು. ಇದು ಸಾಧಾರಣವಾಗಿ ಕಲ್ಲಿನಿಂದಲೇ ನಿರ್ಮಿತವಾಗಿರುವುದು, ಮರದಿಂದ ಮಾಡುವುದೂ ಉಂಟು. ಒರಳಿನಲ್ಲಿ ಹಾಕಿ ಮೇಲಿನಿಂದ ಕುಟ್ಟುವ ಕಲ್ಲಿಗೆ **ಗ್ರಾವಾ,** (ಋ. ಸಂ. ೧-೮೩-೬ ; ೧-೧೩೫-೭) **ಅದ್ರಿ,** (ಋ. ಸಂ. ೧-೧೩೦-೨ ; ೧-೧೩೫-೫ ; ೧-೧೩೭-೧) ಎಂಬ ಹೆಸರುಗಳಿರುವವು. **ಉಲೂಖಲ**ವೆಂದರೆ ಈಗ ನಾವು ಉಪಯೋಗಿಸುತ್ತಿರುವ ಒರಳಿನಂತಿದ್ದ ಒಂದು ಕಲ್ಲಿನ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳ ಮಾತ್ರವಾಗಿತ್ತೆಂದು ಊಹಿಸಬಹುದು. ಈ ಉಲೂಖಲವೆಂಬ ಒರಳು **ಮುಸಲ** (ಒನಕೆ) ದಿಂದ ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸಲ್ಪಡುತ್ತಿತ್ತು.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವುವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆ ಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವ, ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಫಲಕ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಬಟದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ, ಶುಚಿ ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರು ವುದು. ಇಂದ್ರನಿಗೂ, ವಾಯುವಿಗೂ ಶುದ್ಧವಾದ ಎಂದರೆ ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸು ವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದ ಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸು ವುದುಂಟು. ಇವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ, ಯವಾಶಿರ** ಎಂಬ ಹೆಸರುಗಳಿವೆ.



॥ ಸಂಹಿತಾಪಾಠಃ ॥

ಸೋಮೇನಾದಿತ್ಯಾ ಬಲಿನಃ ಸೋಮೇನ ಪೃಥಿವೀ ಮಹೀ ।
ಅಥೋ ನಕ್ಷತ್ರಾಣಾಮೇಷಾಮುಪಸ್ಥೇ ಸೋಮ ಆಹಿತಃ ॥ ೨ ॥

॥ ಪದಪಾಠಃ ॥

ಸೋಮೇನ । ಆದಿತ್ಯಾಃ । ಬಲಿನಃ । ಸೋಮೇನ । ಪೃಥಿವೀ । ಮಹೀ ।
ಅಥೋ ಇತಿ । ನಕ್ಷತ್ರಾಣಾಂ । ಏಷಾಂ । ಉಪಽಸ್ಥೇ । ಸೋಮಃ । ಆಽಹಿತಃ ॥ ೨ ॥

॥ ಸಾಯಣಭಾಷ್ಯಂ ॥

ಸೋಮೇನಾದಿತ್ಯಾ ಅದಿತೇಃ ಪುತ್ರಾ ಇಂದ್ರಾದಯೋ ಬಲಿನೋ ಭವಂತಿ । ಐಂದ್ರವಾಯವಾದಿಗ್ರಹಪರಿಗ್ರಹಾದಿತಿ ಭಾವಃ । ತಥಾ ಸೋಮೇನಾಹುತ್ಯಾತ್ಮನಾಗ್ನೌ ಹುತೇನ ಪೃಥಿವೀ ಭೂಮಿರ್ಮಹೀ ಮಹತೀ ಭವತಿ । ಆಹುತ್ಯಾ ವೃಷ್ಟಿದ್ವಾರೇಣ ಸಸ್ಯಾದಿಸಂಪತ್ತೇಃ । ಅಥೋ ಅಪಿ ಚಾಯಂ ಸೋಮೋ ನಕ್ಷತ್ರಾಣಾಮೇಷಾಂ । ನ ಕ್ಷಂ ತ್ರಾಯಂತ ಇತಿ ನಕ್ಷತ್ರಾ ಗ್ರಹಚಮಸಾದಯಃ । ತೇಷಾಮೇಷಾಮುಪಸ್ಥೇ ಸೋಮೋ ರಸಾತ್ಮಕ ಆಹಿತಃ । ಯದ್ವಾ । ಸಿದ್ಧಾನಾಮೇವ ನಕ್ಷತ್ರಾಣಾಮುಪಸ್ಥ ಉಪಸ್ಥಾನೇ ದ್ಯುಲೋಕೇ ಸೋಮ ಆಹಿತಃ । ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ತಂ ಗಾಯತ್ರ್ಯಾಹರತ್ । ತೈ. ಬ್ರಾ. ೩-೨-೧-೧ । ಇತ್ಯಾದಿಶ್ರುತೇಃ ॥ ದೇವತಾರೂಪಸೋಮಪಕ್ಷೇ । ಸೋಮೇನಾದಿತ್ಯಾ ದೇವಾ ಬಲಿನೋ ಬಲವಂತೋ ಭವಂತಿ ತಸ್ಯೈಕೈಕಕಲಾಸ್ವಾದನಾತ್ । ಪ್ರಥಮಾಂ ಪಿಬತೇ ವಹ್ನಿರ್ದ್ವಿತೀಯಾಂ ಪಿಬತೇ ರವಿರಿತ್ಯಾದಿಸ್ಮೃತೇಃ । ಸೋಮೇನ ಪೃಥಿವೀ ಮಹೀ । ಅಮೃತಸೇಕೇನೌಷಧ್ಯಾದ್ಯಭಿವೃದ್ಧ್ಯಾ ಪೃಥಿವ್ಯಾ ಬಲವತ್ತ್ವಂ । ಚಂದ್ರಸ್ಯ ನಕ್ಷತ್ರಾಣಾಮುಪಸ್ಥೇ ಸ್ಥಿತಿಃ ಪ್ರಸಿದ್ಧಾ ॥

। ಪ್ರತಿಪದಾರ್ಥ ।

**ಸೋಮೇನ**—ಸೋಮನ ಪ್ರಭಾವದಿಂದ । **ಆದಿತ್ಯಾಃ**—ಅದಿತಿಪುತ್ರರಾದ ದೇವತೆಗಳು । **ಬಲಿನಃ**—ಶಕ್ತಿಯುತರಾಗಿದ್ದಾರೆ । **ಸೋಮೇನ**—ಸೋಮನ ಪ್ರಭಾವದಿಂದ । **ಪೃಥಿವೀ**—ಪೃಥ್ವಿಯು । **ಮಹೀ**—ಮಹತ್ವವುಳ್ಳದ್ದಾಗಿದೆ । **ಅಥೋ**—ಅಲ್ಲದೇ । **ಸೋಮಃ**—ರಸಾತ್ಮಕವಾದ ಸೋಮವು । **ಏಷಾಂ ನಕ್ಷತ್ರಾಣಾಂ**—ಈ ನಕ್ಷತ್ರಗಳ । **ಉಪಸ್ಥೇ**—ಸಮೀಪದಲ್ಲಿ । **ಆಹಿತಃ**—ಸ್ಥಾಪಿತವಾಗಿದೆ.

। ಭಾವಾರ್ಥ ।

ಸೋಮನ ಹ್ರಭಾವದಿಂದ ಅದಿತಿಪುತ್ರರಾದ ದೇವತೆಗಳು ಶಕ್ತಿಯುತರಾಗಿದ್ದಾರೆ. ಸೋಮನ ಪ್ರಭಾವದಿಂದ ಪೃಥ್ವಿಯು ಮಹತ್ವವುಳ್ಳದ್ದಾಗಿದೆ. ಅಲ್ಲದೇ, ರಸಾತ್ಮಕವಾದ ಸೋಮವು ಈ ನಕ್ಷತ್ರಗಳ ಸಮೀಪದಲ್ಲಿ ಸ್ಥಾಪಿತವಾಗಿದೆ.

## English Translation

By Soma the Adityas are strong; by Soma the earth is great; Soma is stationed in the vicinity of these Nakshatras.

|| ವಿಶೇಷವಿಷಯಗಳು ||

**ಸೋಮೇನ ಆದಿತ್ಯಾಃ ಬಲಿನಃ—ಅದಿತೇಃ ಪುತ್ರಾ ಇಂದ್ರಾದಯೋ ದೇವಾ ಆಹುತ್ಯಾತ್ಮನಾಗ್ನೌ ಹುತೇನ ಸೋಮೇನ ಬಲಿನೋ ಭವಂತಿ ।** ಯಜ್ಞಾದಿಗಳಲ್ಲಿ ಯಜಮಾನರು ಅಗ್ನಿಯಲ್ಲಿ ಆಹುತಿರೂಪದಿಂದ ಅರ್ಪಿಸುವ ಸೋಮರಸದಿಂದ ಇಂದ್ರಾದಿದೇವತೆಗಳು ಶಕ್ತಿಯುತರಾಗುವರು. ಸೋಮವೆಂದರೆ ಅಮೃತವೆಂದೂ ಅರ್ಥವು. ದೇವತೆಗಳು ಅಮೃತಪಾನದಿಂದ ತೃಪ್ತರೂ, ಬಲಯುತರೂ ಆಗುವರು. ಅಗ್ನಿಯಲ್ಲಿ ಹೋಮಮಾಡಿದ ಸೋಮವು ಸ್ವರ್ಗದಲ್ಲಿರುವ ದೇವತೆಗಳಿಗೆ ಸೇರಿ ಅವರು ಆ ಸೋಮಪಾನದಿಂದ ಶಕ್ತಿಯುತರಾಗುವರು ಎಂದು ಪುರಾಣಾದಿಗಳಲ್ಲಿಯೂ ಹೇಳಿದೆ.

**ಸೋಮೇನ ಪೃಥಿವೀ ಮಹೀ—ಸೋಮೇನ ಭೂಮಿಃ ಮಹತೀ ಭವತಿ । ಆಹುತ್ಯಾ ವೃಷ್ಟಿದ್ವಾರೇಣ ಸಸ್ಯಾದಿಸಂಪತ್ತೇಃ ।** ಅಗ್ನಿಯಲ್ಲಿ ಸೋಮಾಹುತಿಯಿಂದ ಎಂದರೆ ಯಜ್ಞಾದಿಕರ್ಮಾನುಷ್ಠಾನದಿಂದ ಭೂಮಿಯಮೇಲೆ ಕಾಲಕಾಲಕ್ಕೆ ವೃಷ್ಟಿಯುಂಟಾಗಿ ಭೂಮಿಯು ಸಸ್ಯಸಂಪತ್ತಿನಿಂದ ಕಂಗೊಳಿಸುವುದು ಎಂದರೆ ಭೂಮಿಯು ಶೋಭಾಯಮಾನವಾಗಿ ಕಾಣಿಸುವುದಕ್ಕೆ ಸೋಮವೇ ಕಾರಣವು ಎಂದಭಿಪ್ರಾಯವು.

**ಅಥೋ ಏಷಾಂ ನಕ್ಷತ್ರಾಣಾಂ ಉಪಸ್ಥೇ ಸೋಮಃ ಆಹಿತಃ ।** ನಕ್ಷತ್ರಗಳ ಸಮೀಪದಲ್ಲಿರುವ ದ್ಯುಲೋಕದಲ್ಲಿ ಸೋಮವು ಸ್ಥಾಪಿತವಾಗಿದೆ ಎಂದು ವಾಕ್ಯಾಭಿಪ್ರಾಯವು. **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್** । (ತೈ. ಬ್ರಾ. ೩-೨-೧-೧) ಎಂಬ ತೈತ್ತಿರೀಯಬ್ರಾಹ್ಮಣವಾಕ್ಯದಲ್ಲಿ ಹೇಳಿರುವಂತೆ ಸೋಮಲತೆಯು ಮೊದಲು ಭೂಮಿಯ ಮೇಲಿರಲಿಲ್ಲ. ಸ್ವರ್ಗದಲ್ಲಿ ಇದ್ದಿತು. ಅದನ್ನು ಭೂಮಿಗೆ ತರಬೇಕೆಂದು ದೇವತೆಗಳು ಇಚ್ಛಿಸಿ ಅದಕ್ಕಾಗಿ ಗಾಯತ್ರ್ಯಾದಿ ಛಂದಸ್ಸುಗಳನ್ನು ಪ್ರಾರ್ಥಿಸಿದರು. ಆ ಛಂದಸ್ಸುಗಳಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಛಂದಸ್ಸುಗಳೂ ಪ್ರಯತ್ನಪಟ್ಟರೂ ಸೋಮವನ್ನು ಭೂಮಿಗೆ ತರಲು ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸುಗಳಿಗೆ ಸಾಧ್ಯವಾಗಲಿಲ್ಲ. ಆದರೆ ಗಾಯತ್ರೀಛಂದಸ್ಸು ಮಾತ್ರ ಶ್ಯೇನಪಕ್ಷಿಯ ರೂಪವನ್ನು ತಳೆದು ಸೋಮವನ್ನು ಭೂಮಿಗೆ ತಂದಿತು. ಈ ಸೋಮಾಪಹರಣೋಪಾಖ್ಯಾನದ ಕಥೆಯನ್ನು ನಾವು ಋ. ಸಂ. ೨೬ ನೇ ಭಾಗದ ಪ್ರಾರಂಭದಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

**ನಕ್ಷತ್ರಾಣಾಂ**—ನಕ್ಷತ್ರಗಳು ಅಥವಾ ದೇವಗೃಹಗಳು. ದೇವತೆಗಳು ವಾಸಮಾಡುವ ಗೃಹಗಳಿಗೆ ನಕ್ಷತ್ರಗಳೆಂದು—**ದೇವಗೃಹಾ ವೈ ನಕ್ಷತ್ರಾಣಿ** (ತೈ. ಬ್ರಾ. ೧-೫-೨-೬) ತೈತ್ತಿರೀಯಬ್ರಾಹ್ಮಣದಲ್ಲಿ ಹೇಳಿರುವುದು ಮತ್ತು ಅಲ್ಲಿಯೇ—**ಯೋ ವಾ ಇಹ ಯಜತೇ । ಅಮುಗ್ಂ ಸ ಲೋಕಂ ನಕ್ಷತೇ । ತನ್ನಕ್ಷತ್ರಾಣಾಂ ನಕ್ಷತ್ರತ್ವಂ** (ತೈ- ಬ್ರಾ. ೧-೫-೨-೫) ಎಂದರೆ ಈ ಲೋಕದಲ್ಲಿ ಯಜ್ಞವನ್ನು ಮಾಡುವವನು ಪರಲೋಕದಲ್ಲಿ ಪ್ರಕಾಶಮಾನವಾದ (ನಕ್ಷತ್ರವೆಂಬ) ಗೃಹದಲ್ಲಿ ವಾಸಮಾಡುವನು. ಆದುದರಿಂದ ನಕ್ಷತ್ರಗಳಿಗೆ ಈ ಹೆಸರು ಬಂದಿರುವುದು ಎಂದು ಅಲ್ಲಿಯೇ ಹೇಳಿದೆ ಅಥವಾ **ಸುಕೃತಾಂ ವಾ ಏತಾನಿ ಜ್ಯೋತೀಗ್ಂಷಿ ಯನ್ನಕ್ಷತ್ರಾಣಿ** । (ತೈ. ಸಂ. ೫-೪-೧-೩) ಸತ್ಕರ್ಮಾ

ನುಷ್ಠಾನಮಾಡಿದವರು ಪರಲೋಕದಲ್ಲಿ ನಕ್ಷತ್ರರೂಪವಾದ ತೇಜಸ್ಸಿನಿಂದ ಬೆಳಗುತ್ತಿರುವರು. ಅವರೇ ನಮಗೆ ನಕ್ಷತ್ರ ರೂಪದಿಂದ ಕಾಣಿಸುತ್ತಿರುವರು ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ- **ನಕ್ಷತ್ರಾಣಿ । ನಕ್ಷತೇರ್ಗತಿಕರ್ಮಣಃ । ನೇಮಾನಿ ಕ್ಷತ್ರಾಣೀತಿ ಚ ಬ್ರಾಹ್ಮಣಂ ॥** (ನಿ. ೩-೨೦) ಎಂದು ಹೇಳಿರುವರು. ಎಂದರೆ ನಕ್ಷತಿಧಾತುವಿಗೆ ಗತ್ಯರ್ಥವಿರುವುದು. ಕ್ಷತ್ರ ಎಂದರೆ ಧನವು, ಧನರೂಪವಾದ ಹಿರಣ್ಯದಂತೆ ಪ್ರಕಾಶಮಾನವಾದುದರಿಂದ ಇವುಗಳಿಗೆ ನಕ್ಷತ್ರಗಳೆಂದು ಹೆಸರು. ಸತ್ಕರ್ಮವನ್ನು ಮಾಡಿದವರು ಸ್ವರ್ಗಲೋಕದಲ್ಲಿ ಉತ್ತಮಸ್ಥಾನದಲ್ಲಿ ವಾಸಿಸುತ್ತಾ ನಕ್ಷತ್ರರೂಪದಿಂದ ಬೆಳಗುತ್ತಿರುವರು ಎಂದು ಪ್ರತೀತಿ ಇರುವುದು.

ಈ ಋಕ್ಕಿಗೆ ಮತ್ತೊಂದು ಅರ್ಥವನ್ನು ಭಾಷ್ಯಕಾರರು ಹೇಳಿರುವರು. ಅದನ್ನು ನಾವು ಈ ಸೂಕ್ತದ ಪೀಠಿಕೆ ಯಲ್ಲಿಯೇ ವಿವರಿಸಿದೇವೆ.

॥ ಸಂಹಿತಾಪಾಠಃ ॥

**ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂತ್ಯೋಷಧಿಂ ।**

**ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥ ೩ ॥**

॥ ಪದಪಾಠಃ ॥

**ಸೋಮಂ । ಮನ್ಯತೇ । ಪಪಿऽವಾನ್ । ಯತ್ । ಸಂऽಪಿಂಷಂತಿ । ಓಷಧಿಂ ।**

**ಸೋಮಂ । ಯಂ । ಬ್ರಹ್ಮಾಣಃ । ವಿದುಃ । ನ । ತಸ್ಯ । ಅಶ್ನಾತಿ । ಕಃ । ಚನ ॥ ೩ ॥**

॥ ಸಾಯಣಭಾಷ್ಯಂ ॥

**ಸೋಮಂ ಮನ್ಯತೇ । ಕಃ । ಯಃ ಪಪಿವಾನ್ । ಮೈಥುನಕಾಮಾರ್ಥಂ ಚಿಕಿತ್ಸಾದ್ಯರ್ಥಂ ಪೀತಃ ಸೋಮೋ ಯೇನ । ಯದ್ಯಮಿತ್ಯರ್ಥಃ । ಯಂ ಸೋಮಮೋಷಧಿಂ ವಲ್ಲೀರೂಪಂ ಸಂಪಿಂಷಂತಿ । ಸಾಮರ್ಥ್ಯಾದ್ರಾಸಾಯನಿಕಾಃ । ನ ಚ ಸ ಸಾಕ್ಷಾತ್ಸೋಮಃ । ತರ್ಹಿ ಕಃ । ಉಚ್ಯತೇ । ಸೋಮಂ ಹಿ ತಂ ಮನ್ಯತೇ ಯಂ ಬ್ರಹ್ಮಾಣಃ । ಯದ್ಬ್ರಹ್ಮಶಬ್ದೋ ಬ್ರಾಹ್ಮಣಶಬ್ದಪರ್ಯಾಯೋಽಸ್ತಿ ಕುತೋ ನು ಚರಸಿ ಬ್ರಹ್ಮನ್ ತಸ್ಮೈ ವಾ ಬ್ರೂಯಾ ನಿಧಿಪಾಯ ಬ್ರಹ್ಮನ್ನಿತ್ಯಾದಿಪ್ರಯೋಗಾತ್ । ಬ್ರಾಹ್ಮಣಾ ಇತ್ಯರ್ಥಃ । ತೇ ಚರ್ತ್ವಿಜೋ ಯಜಮಾನಶ್ಚ ಯಾಗಸಾಧನಭೂತಂ ಸಂಸ್ಕೃತಂ ವಿದುಃ ಜಾನಂತಿ ತಸ್ಯಾಂಶಂ । ಯದ್ವಾ । ಕರ್ಮಣಿ ಷಷ್ಠೀ । ತಂ ಸೋಮಂ ಕಶ್ಚನ ನಾಶ್ನಾತಿ । ಕಶ್ಚಿದಪ್ಯಯಜ್ವೇತಿ ಶೇಷಃ । ಯಜ್ವೈನಂ ಭಕ್ಷಯಿತುಮರ್ಹತಿ ನಾನ್ಯ ಇತ್ಯರ್ಥಃ । ಏವಮೋಷಧಿಪಕ್ಷೇ ॥ ಅಥ ಚಂದ್ರಪಕ್ಷ ಉಚ್ಯತೇ । ತಂ ಸೋಮಂ ಮನ್ಯತೇ ಪಪಿವಾನ್ ಪೀತವಾನ್ಯಜಮಾನೋ ಯದ್ಯಮೋಷಧಿರೂಪಂ ಸಂಪಿಂಷಂತ್ಯಭಿಷವಗ್ರಾವಭಿರಧ್ವರ್ಯ್ವಾದಯೋ ಯಜಮಾನಶ್ಚ । ನ ಚ ಸ ಸೋಮಃ ಕಸ್ತರ್ಹಿ ।**

**ಯಂ ಬ್ರಹ್ಮಾಣೋ ಬ್ರಾಹ್ಮಣಾ ಅಭಿಜ್ಞಾ ದೈವಜ್ಞಾ ವಿದುಃ ಕಥಯಂತಿ ಚಂದ್ರಮಸಂ ನ ತಸ್ಯಾಶ್ನಾತಿ- ಕಶ್ಚನಾದೇವೋ ದೇವೇಭ್ಯೋಽನ್ಯೋ ಮನುಷ್ಯಾದಿಃ। ದೇವಾ ಅಗ್ನ್ಯಾದಯೋ ರಶ್ಮಯೋ ವಾ। ಯಜ್ಞಾರ್ಹಸೋಮಸ್ಯಾಸೋಮತ್ವಂ ನ ನಿಂದಾಯೈ ಅಪಿ ತ್ವಿತರಸ್ಯ ಸ್ತುತ್ಯಾ ಇತಿ ಮಂತವ್ಯಂ। ಅಪಶವೋಽನ್ಯೇ ಗೋಅಶ್ವೇಭ್ಯ ಇತ್ಯಾದಿವತ್। ಏವಮತ್ರ ಸೋಮ್ಯಾ ಉಭಯಥಾ ಯೋಜ್ಯಾಃ ||**

**॥ ಪ್ರತಿಪದಾರ್ಥ ॥**

**ಓಷಧಿಂ**—ಬಳ್ಳಿರೂಪದ। **ಯತ್**—ಯಾವ ಸೋಮವನ್ನು। **ಸಂಪಿಂಷಂತಿ**—ರಾಸಾಯನಿಕರು ಹಿಂಡುವರೋ ಅದನ್ನೇ। **ಸೋಮಂ**—ನಿಜವಾದ ಸೋಮಸ್ವರೂಪವೆಂದು। **ಪಪಿವಾನ್**—ಆ ರಸವನ್ನು ಪಾನ ಮಾಡಿದವನು। **ಮನ್ಯತೇ**-ತಿಳಿಯುತ್ತಾನೆ (ಆದರೆ)। **ಯಂ ಸೋಮಂ**-ಯಾವ ಸೋಮವನ್ನು। **ಬ್ರಹ್ಮಾಣಃ**—ಋತ್ವಿಗ್ಯಜಮಾನರು। **ವಿದುಃ**—ಅರಿಯುವರೋ। **ತಸ್ಯ**—ಅದರ ಸ್ವರೂಪವನ್ನು। **ಕಶ್ಚನ**—ಯಾರೂ ಕೂಡ। **ನ ಅಶ್ನಾತಿ**—ಅರಿಯಲಾರರು.

**। ಭಾವಾರ್ಥ ।**

ಬಳ್ಳಿರೂಪದ ಯಾವ ಸೋಮವನ್ನು ರಾಸಾಯನಿಕರು ಹಿಂಡುವರೋ, ಆ ಲೌಕಿಕವಾದ ರಸವನ್ನೇ ನಿಜವಾದ ಸೋಮವೆಂದು ರಸಪಾನಮಾಡುವ ಸಾಧಾರಣ ಪುರುಷನು ಅರಿಯುತ್ತಾನೆ. ಆದರೆ ಋತ್ವಿಗ್ಯಜಮಾನರು ಯಾಗ ಯೋಗ್ಯವಾದ ಯಾವ ಸೋಮವನ್ನು ಅರಿಯುವರೋ, ಅದರ ಸ್ವರೂಪವನ್ನು ಕರ್ಮರಹಿತರು ಅರಿಯಲಾರರು.

## English Translation

He who has drunk thinks that the herb which men crush is the Soma ; (but) that which the Brahmans know to be Soma, of that no one partakes.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಸೋಮದೇವತೆಯ ವಿಷಯದಲ್ಲಿ ಎರಡುವಿಧವಾದ ಅರ್ಥವಿವರಣೆ ಇರುವುದು. ಒಂದನೆಯ ದಾಗಿ ಸಾಮಾನ್ಯ ಜನರಿಗೆ ತಿಳಿದಿರುವ ಸೋಮಲತೆಯು. ಇದನ್ನು ತಂದು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ಪಾನಮಾಡುವರು. ಈ ಸೋಮವು ವಲ್ಲೀ (ಓಷಧಿ) ರೂಪದಲ್ಲಿರುವುದು. ಎರಡನೆಯದಾಗಿ, ಸೋಮಲತಾಭಿಮಾನಿ ಯಾದ ದೇವತೆಯು. ಚಂದ್ರನನ್ನೇ ಈ ದೇವತೆಯೆಂದು ಹೇಳುವರು. **ಸೋಮ ಓಷಧೀನಾಮಧಿಪತಿಃ** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು. ಸೋಮಾಭಿಮಾನಿದೇವತೆಯ ಸ್ವರೂಪವನ್ನು ಮೇಧಾವಿಗಳಾದ ಬ್ರಾಹ್ಮಣರು ಮಾತ್ರವೇ ತಿಳಿದಿರುವರು. ಇತರರು ತಿಳಿಯಲಾರರು ಮತ್ತು ಅದನ್ನು ಪಾನಮಾಡಲಾರರು. ಆದರೆ ದೇವತೆಗಳು ಮಾತ್ರ ಅದನ್ನು ಭಕ್ಷಿಸಲು ಶಕ್ತರಾಗುವರು ಎಂದು ಪುರಾಣಾದಿಗಳಲ್ಲಿ ಹೇಳಿದೆ. ಈ ವಿಷಯದಲ್ಲಿ ಶತಪಥ ಬ್ರಾಹ್ಮಣದಲ್ಲಿಯೂ—**ಚಂದ್ರಮಾ ವೈ ಸೋಮೋ ದೇವಾನಾಮನ್ನಂ ತಾ ಪೌರ್ಣಮಾಸ್ಯಾಮಭಿಷುಣ್ವಂತಿ||** (ಶ. ಬ್ರಾ. ೧೧.೧-೫-೩) ಎಂದು ಹೇಳಿದೆ.

ನಿರುಕ್ತಕಾರರು, **ಓಷಧಿಸ್ಸೋಮಃ ಸುನೋತೇರ್ಯದೇನಮಭಿಷುಣ್ವಂತಿ।** ಸೋಮ ಎಂಬ ಹೆಸರಿ ನಿಂದ ಪ್ರಸಿದ್ಧವಾದ ಒಂದು ಮೂಲಿಕೆಯು. ಇದನ್ನು

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪-೨೬-೭)

ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗದಿಂದ ಭೂಮಿಗೆ ತಂದಿರುವುದೆಂದೂ, ಇಂದ್ರನು ಈ ಸೋಮವನ್ನು ಪಾನಮಾಡುವ ಸನ್ನಿವೇಶಗಳಿಂದ ಸಹಸ್ರಸುತ್ಯಗಳುಳ್ಳ ಯಜ್ಞಗಳನ್ನು ನೆರವೇರಿಸಿ ಯಜಮಾನರು ಅಯುತಸಂಖ್ಯಾಕವಾದ ದಕ್ಷಿಣೆಯನ್ನು ದಾನಮಾಡಿರುವರೆಂದೂ ಸೋಮದ ಮಾಹಾತ್ಮ್ಯವನ್ನು ವಿವರಿಸಿದ್ದಾರೆ ಮತ್ತು **ಬಹುಲಮಸ್ಯ ನೈಘಂಟುಕಂ ವೃತ್ತಂ ಆಶ್ಚರ್ಯಮಿವ ಪ್ರಾಧಾನ್ಯೇನ**—ಈ ಸೋಮದ ಸ್ತುತಿಯೂ ಇದರ ಪ್ರಾಮುಖ್ಯತೆಯನ್ನು ಸೂಚಿಸುವುದಾಗಿರುತ್ತದೆ ಮತ್ತು ಆಶ್ಚರ್ಯಜನಕವಾಗಿ ಇರುತ್ತದೆ ಎಂದು ಒಂಭತ್ತನೆಯ ಮಂಡಲದಲ್ಲಿ ಪಠಿತವಾಗಿದೆ ಮತ್ತು ಈ ಸೋಮದ ಮಹಿಮೆಯು ಸ್ತುತಿರೂಪದಿಂದ—

**ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ॥**

(ಋ. ಸಂ. ೯-೧-೧)

ಎಂಬ ಈ ಋಕ್ಕಿನಲ್ಲಿ ಉಕ್ತವಾಗಿದೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಂಷಂತ್ಯೋಷಧಿಂ ।**
**ಸೋಮಂ ಯಂ ಬ್ರಾಹ್ಮಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥**

(ಋ. ಸಂ. ೧೦.೮೫-೩)

ಸೋಮ ಎಂಬ ಪದಕ್ಕೆ ಚಂದ್ರನೆಂದು ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಸೋಮಲತೆ, ಚಂದ್ರ ಇವರಿಬ್ಬರನ್ನು ಸ್ತುತಿಸಿರುವುದು. ಆದರೆ, ಪ್ರಸಿದ್ಧನಾದ ಚಂದ್ರನಿಗಿಂತಲೂ ಈ ಸೋಮಕ್ಕೆ ಪ್ರಾಧಾನ್ಯವನ್ನು ಈ ರೀತಿಯಾಗಿ ಯಾಸ್ಕರು ವರ್ಣಿಸಿದ್ದಾರೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಂಷಂತ್ಯೋಷಧಿಮಿತಿ ವೃಥಾಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುರಿತಿ ನ ತಸ್ಯಾಶ್ನಾತಿ ಕಶ್ಚನಾಯಜ್ವೇತ್ಯಧಿಯಜ್ಞಂ ಅಥಾಧಿದೈವತಂ ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಂಷಂತ್ಯೋಷಧಿಮಿತಿ ಯಜುಸ್ಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುಶ್ಚಂದ್ರಮಸಂ ನ ತಸ್ಯಾಶ್ನಾತಿ ಕಶ್ಚನಾದೇವ ಇತಿ ॥**

(ನಿ. ೧೧-೪)

ರಸಾಯನಾದಿಗಳನ್ನು ಮಾಡುವವರು ಸೋಮವನ್ನು ತಂದು ರಸವನ್ನು ಹಿಂಡಿ ಪಾನಮಾಡುವವರಾದರೂ, ಅವರು ಯಜ್ಞದಲ್ಲಿ ಸೋಮಪಾನಮಾಡುವ ಸೋಮಪರೆಂದು ಪ್ರಸಿದ್ಧರಾಗುವುದಿಲ್ಲವಾದುದರಿಂದ ಯಜ್ಞಾಂಗವಾಗಿ ಉಪಯೋಗಿಸಲ್ಪಟ್ಟಕಾರಣ ಸೋಮವು ಯಜಮಾನರಿಗೆ ಮಾತ್ರವೇ ವಿಧ್ಯುಕ್ತವಾದ ರೀತಿಯಿಂದ ಸೋಮಪನೆಂಬ ಪ್ರಸಿದ್ಧಿಯನ್ನು ಉಂಟುಮಾಡುವುದೆಂದು ಸ್ತುತಿಸಿದೆ. ಅಧಿದೈವತಪಕ್ಷದಲ್ಲಿಯೂ, (ಸೋಮಪದಕ್ಕೆ ಚಂದ್ರನೆಂದು ಅರ್ಥವನ್ನು ವಿವರಿಸುವಲ್ಲಿಯೂ) ಯಜ್ಞಾಂಗವಾಗಿರುವ ಸೋಮವನ್ನು ಸೋಮಪದದಿಂದ ನಿರ್ದೇಶಮಾಡಿದೆ. **ಸೋಮೋ ನೂನಮೋಷ**

**ಯದ್ದೇವಾನಾಮನ್ನಂ** ಎಂಬ ಶ್ರುತಿವಾಕ್ಯದಿಂದ ಚಂದ್ರನು ಸೋಮಪದವಾಚ್ಯನಾಗಿದ್ದರೂ ಅವನು ದೇವತೆಗಳಿಗೆ ಮಾತ್ರವೇ ಅನ್ನವಾಗಿರುವನು. ಆದ್ದರಿಂದ **ಸೋಮಂ ಮನ್ಯತೇ** ಎಂಬ ಮಂತ್ರದಿಂದ ಅಧಿಯಜ್ಞ, ಅಧಿದೈವತ ಎಂಬ ಎರಡುವಿಧವಾದ ಅರ್ಥವನ್ನು ಸೋಮಪದಕ್ಕೆ ಹೇಳಿದರೂ, ಓಷಧಿರೂಪವಾದ ಸೋಮಕ್ಕೇ ಯಾಜ್ಞಿಕರು ಆಚರಿಸುವ ಯಜ್ಞದಲ್ಲಿ ಪ್ರಾಧಾನ್ಯವನ್ನು ಹೇಳಿರುತ್ತಾರೆ.

**ಯತ್ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।**
**ವಾಯುಸ್ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥**

(ಋ. ಸಂ. ೧೦-೮೫-೫)

**ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾವಿತಿ ವಾ ವಾಯುಸ್ಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾತ್ ರಸಹರಣಾದ್ವಾ । ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈರೋಷಧಿಶ್ಚಂದ್ರಮಾ ವಾ ॥** ಅಧಿಯಜ್ಞಪರವಾದ ಅರ್ಥದಲ್ಲಿ ಸೋಮವನ್ನು ಮೂರು ಸವನಗಳಲ್ಲಿಯೂ, ಯಜಮಾನರೇ ಮೊದಲಾದ ಋತ್ವಿಜರು ಪಾನಮಾಡುತ್ತಾರೆ. ಇದರಿಂದ ಈ ಸೋಮನು ಆಪ್ಯಾಯನಮಾಡುವವನಾಗಿರುವನು. ವಾಯುವು ಓಷಧಿಗಳ ರಸವನ್ನು ಹೀರುವವನಾದರೂ ಸೋಮರಸವನ್ನು ಹೀರದೇ ಇರುವುದರಿಂದ ಅದರ ರಕ್ಷಕನಾಗಿರುವನು. ಆಯುರ್ವೇದವನ್ನು ತಿಳಿದ ರಸಾಯನಕಾರರು ಈ ಸೋಮನು ಆಯಾಯ ಮಾಸದ ಶುಕ್ಲಪಕ್ಷಗಳಲ್ಲಿರುವ ತಿಥಿಗಳಿಗನುಸಾರವಾಗಿ ಪರ್ಣಗಳ (ಎಲೆಗಳ) ಅಭಿವೃದ್ಧಿಯನ್ನೂ ಕೃಷ್ಣಪಕ್ಷಗಳಲ್ಲಿರುವ ತಿಥಿಗಳಿಗೆ ಅನುಗುಣವಾಗಿ ಪರ್ಣಗಳ (ಅಪಚಿತಿ) ಹ್ರಾಸವನ್ನೂ ಹೊಂದುವನು. ಅಧಿದೈವತಪಕ್ಷದಲ್ಲಿ ಸೋಮಪದವಾಚ್ಯನಾದ ಚಂದ್ರನು ತನ್ನ ಕಲೆಗಳಿಂದ ಆಯಾಯ ತಿಥಿಗಳಿಗನುಗುಣವಾಗಿ ದೇವತೆಗಳಿಗೆ ಆಪ್ಯಾಯಕನಾಗಿರುವನು. ಚಂದ್ರನ ಕಲೆಗಳನ್ನು ದೇವತೆಗಳೂ ಪಾನಮಾಡುವರು. ಆಯಾಯ ಪಕ್ಷಗಳಲ್ಲಿ ವೃದ್ಧಿಹ್ರಾಸಗಳನ್ನು ತನ್ನ ಕಲೆಗಳ ಮೂಲಕ ಚಂದ್ರನು ಹೊಂದುವನು ಎಂದು ಅಧಿಯಜ್ಞ, ಅಧಿದೈವತ ಎಂಬ ಎರಡು ಪ್ರಕಾರಗಳಲ್ಲಿಯೂ ಸೋಮಲತೆಗೆ ಚಂದ್ರನ (ಸಮಾನಸ್ಥಿತಿಯನ್ನು) ಸಾದೃಶ್ಯವನ್ನು ಹೇಳಿ ಸೋಮತಾದಾತ್ಮ್ಯವನ್ನು ಉಪಪಾದನೆಮಾಡಿ ಪ್ರಭೂತವಾದ ಮಾಹಾತ್ಮ್ಯಪೂರಿತವೆಂದು ಸೋಮಲತೆಯನ್ನು ಪ್ರಶಂಸಿಸಿದೆ.

। ಸಂಹಿತಾಪಾಠಃ ।

ಆಚ್ಛದ್ವಿಧಾನೈರ್ಗುಪಿತೋ ಬಾರ್ಹತೈಃ ಸೋಮ ರಕ್ಷಿತಃ ।
ಗ್ರಾವ್ಣಾಮಿಚ್ಛೃಣ್ವನ್ತಿಷ್ಠಸಿ ನ ತೇ ಅಶ್ನಾತಿ ಪಾರ್ಥಿವಃ ॥ ೪ ॥

॥ ಪದಪಾಠಃ ॥

ಆಚ್ಛತ್ಽವಿಧಾನೈಃ । ಗುಪಿತಃ । ಬಾರ್ಹತೈಃ । ಸೋಮ । ರಕ್ಷಿತಃ ।
ಗ್ರಾವ್ಣಾಂ । ಇತ್ । ಶೃಣ್ವನ್ । ತಿಷ್ಠಸಿ । ನ । ತೇ । ಅಶ್ನಾತಿ । ಪಾರ್ಥಿವಃ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಆಚ್ಛದ್ವಿಧಾನೈಃ । ಆಚ್ಛಾದಯಂತಿ ವಿಧಾನಾನಿ ಯೇಷಾಂ ವಿದ್ಯಂತೇ ತೆ ಆಚ್ಛದ್ವಿಧಾನಾಃ । ತೈರ್ಗುಪಿತಃ । ತಥಾ ಬಾರ್ಹತೈರ್ಗುಪಿತಃ । ಸ್ವಾನಭ್ರಾಜಾಂಘಾರ್ಯಾದಿಭಿಃ ಸಪ್ತಭಿಃ ಸೋಮಪಾಲೈ ರಕ್ಷಿತಸ್ತ್ವಂ । ಏತೇ ವಾ ಅಮುಷ್ಮಿಲ್ಲೋಕೇ ಸೋಮಮರಕ್ಷನ್। ತೈ. ಸಂ. ೬-೧-೧೦-೫ । ಇತಿ ಬ್ರಾಹ್ಮಣಂ । ಗ್ರಾವ್ಣಾಮಿಚ್ಛೃಣ್ವನ್ನಭಿಷವಗ್ರಾವ್ಣಾಂ ಧ್ವನಿಂ ಶೃಣ್ವನ್ನೇವ ತಿಷ್ಠಸಿ । ತೇ ತ್ವಾಂ ಪಾರ್ಥಿವಃ ಪಾರ್ಥಿವೋ ಜನೋ ನಾಶ್ನಾತಿ । ನ ಹಿ ದ್ಯುಸ್ಥಶ್ಚಂದ್ರರೂಪೋऽತ್ರತ್ಯೈಃ ಪಾನಯೋಗ್ಯೋ ಭವತಿ । ಚಂದ್ರಮಾ ವೈ ಸೋಮೋ ದೇವಾನಾಮನ್ನಂ ತಂ ಪೌರ್ಣಮಾಸ್ಯಾಯಾಮಭಿಷುಣ್ವಂತೀತಿ ವಾಜಸನೇಯಕಂ ॥**

। ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಆಚ್ಛದ್ವಿಧಾನೈಃ**—ಹೊದ್ದಿಕೆಯ ಸಾಧನಗಳಿಂದ । **ಗುಪಿತಃ**—ಮುಚ್ಚಲ್ಪಟ್ಟವನೂ । **ಬಾರ್ಹತೈಃ**—ಏಳು ಸೋಮಪಾಲಕರಿಂದ । **ರಕ್ಷಿತಃ**—ರಕ್ಷಿಸಲ್ಪಟ್ಟವನೂ ಆದ ನೀನು । **ಗ್ರಾವ್ಣಾಂ ಇತ್**—ಹಿಂಡುವ ಕಲ್ಲುಗಳ ಶಬ್ದವನ್ನು । **ಶೃಣ್ವನ್**—ಕೇಳುತ್ತ । **ತಿಷ್ಠಸಿ**—ನಿಂತಿದ್ದೀಯೆ । **ತೇ ಪಾರ್ಥಿವಃ**—ಪೃಥ್ವಿಗೆ ಸೇರಿದ ಮಾನವರು । **ನ ಅಶ್ನಾತಿ**—ನಿನ್ನ ಪಾನದಲ್ಲಿ ಭಾಗವನ್ನು ವಹಿಸಲಾರರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಹೊದ್ದಿಕೆಯ ಸಾಧನಗಳಿಂದ ಮುಚ್ಚಲ್ಪಟ್ಟವನೂ, ಏಳು ಸೋಮಪಾಲಕರಿಂದ ರಕ್ಷಿಸಲ್ಪಟ್ಟವನೂ ಆದ ನೀನು ಹಿಂಡುವ ಕಲ್ಲುಗಳ ಶಬ್ದವನ್ನು ಕೇಳುತ್ತ ನಿಂತಿದ್ದೀಯೆ, ಪೃಥ್ವಿಗೆ ಸೇರಿದ ಮಾನವರು ನಿನ್ನ ಪಾನದಲ್ಲಿ ಭಾಗವನ್ನು ವಹಿಸಲಾರರು.

## English Translation

Concealed by means of coverings, protected by the Barhats, O Soma, you abide listening to the grinding-stones; no terristrial being partakes of you.

॥ ವಿಶೇಷವಿಷಯಗಳು ॥

**ಬಾರ್ಹತೈಃ ಸೋಮ ರಕ್ಷಿತಃ**—ಸ್ವರ್ಗದಲ್ಲಿದ್ದ ಸೋಮವನ್ನು ಏಳುಮಂದಿ ಗಂಧರ್ವರು ರಕ್ಷಿಸುತ್ತಿದ್ದರು. ಅವರಿಗೆ ಸೋಮಪಾಲಕರೆಂದು ಹೆಸರು. ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬುವರೇ ಆ ಏಳು ಜನ ಸೋಮಪಾಲಕರು. ಗಾಯತ್ರಿಯು ಶ್ಯೇನಪಕ್ಷಿಯರೂಪದಿಂದ ಸೋಮವನ್ನು ಭೂಮಿಗೆ ತರುತ್ತಿದ್ದಾಗ ಮೇಲೆ ಹೇಳಿದ ಸೋಮಪಾಲಕರಲ್ಲೊಬ್ಬನಾದ ಕೃಶಾನವು ಕೋಪಗೊಂಡು ಸೋಮವನ್ನು ಅಪಹರಿಸಿಕೊಂಡು ಹೋಗುತ್ತಿದ್ದ ಶ್ಯೇನಪಕ್ಷಿಗೆ ಗುರಿಯಿಟ್ಟು ಬಾಣದಿಂದ ಹೊಡೆದನು. ಅದರಿಂದ ಶ್ಯೇನಪಕ್ಷಿಯ ರೆಕ್ಕೆಯ ಒಂದು ಭಾಗವು ಕತ್ತರಿಸಿ ಹೋಗಿ ಗಾಯವಾಯಿತು. ಕೆಲವುಕಡೆ ಈ ಪಕ್ಷಿಯ ಎಡಪಾದದ ನಖವು (ಉಗುರು) ಕತ್ತರಿಸಿಹೋಯಿತೆಂದು ಹೇಳಿದೆ. ಅದು ಮುಳ್ಳುಹಂದಿರೂಪಕ್ಕೆ ಪರಿವರ್ತಿತವಾಗಿ ಶಲ್ಯರೂಪಕ್ಕೆ ತಿರುಗಿತು. ಅದರಿಂದ ಸುರಿದ ರಕ್ತವು

ಬಂಜೆ ಹಸುವಾಗಿಯೂ, ಎಲಬುಗೂಡು ಸರ್ಪರೂಪಕ್ಕೂ ತಿರುಗಿತು. ಆದರೆ ವಿಷವನ್ನು ಕಾರಿ ಕಚ್ಚುವಂತಾಗಲಿಲ್ಲ. ಹೀಗೆಯೇ ರೆಕ್ಕೆ ಬಾವಲಿಯೂ ಸ್ನಾಯುವಿನಿಂದ ಮಣ್ಣುಹುಳವೂ ಉತ್ಪನ್ನವಾಗಿ ಇಷುವಿನ ಸ್ವರೂಪವು ಈ ವಿಧ ವಾಯಿತು.

**ಆಚ್ಛದ್ವಿಧಾನೈಃ ಗುಪಿತಃ**—ಹೊದ್ದಿಕೆಯ ಸಾಧನಗಳಿಂದ; ವಸ್ತ್ರಾದಿ ಆಚ್ಛಾದನೆಗಳಿಂದ ಮುಚ್ಚಲ್ಪಟ್ಟವನು. ಸೋಮಲತೆಗಳನ್ನು ಪರ್ವತಾದಿಗಳಿಂದ ಯಜ್ಞಭೂಮಿಗೆ ತರುವಾಗ ಆ ಲತೆಗಳನ್ನು ಹಗ್ಗದಿಂದ ಕಟ್ಟಿ ಹವಿರ್ಧಾನವೆಂಬ ಗಾಡಿಗಳಲ್ಲಿ ಹಾಕಿ ಛದಿ ಎಂಬ ಆಚ್ಛಾದನೆಯನ್ನು (ವಸ್ತ್ರವನ್ನು) ಮರೆಯಾಗಿರುವಂತೆ ಹೊದಿಸಿ ಯಜ್ಞಭೂಮಿಗೆ ತರುವರು. ಈ ವಿಷಯದಲ್ಲಿ—

**ಶಿಕ್ಷಮಾಣಸ್ಯ ದೇವೇತಿ ಶಿಕ್ಷತೇ ವಾ ಏಷ ಯೋ ಯಜತೇ ಕ್ರತುಂ ದಕ್ಷಂ ವರುಣ ಸಗ್ಂಶಿಶಾಧಿ ವೀರ್ಯಂ ಪ್ರಜ್ಞಾನಂ ವರುಣ ಸಗ್ಂಶಿಶಾಧೀತ್ಯೇವ ತದಾಹ ॥**

ಎಂಬ ಶ್ರುತಿವಾಕ್ಯವಿರುವುದು. ಸೋಮಲತೆಗಳನ್ನು ಹಗ್ಗದಿಂದ ಕಟ್ಟಿ ವಸ್ತ್ರದಿಂದ ಆಚ್ಛಾದಿಸಿರುವ ಪರ್ಯಂತರ ಅದು ವರುಣನ ಸ್ವಾಧೀನದಲ್ಲಿದ್ದಂತೆ ಭಾವಿಸಲಾಗುವುದು. ಈ ಬಂಧನವನ್ನು ತೆಗೆದು ವಸ್ತ್ರವನ್ನು ತೆಗೆಯುವುದಕ್ಕಾಗಿ ವರುಣನನ್ನು ಪ್ರಾರ್ಥಿಸಲಾಗಿದೆ. ಆಚ್ಛಾದನೆ ಮಾಡಿರುವ ವಸ್ತ್ರದ ವಿಷಯವನ್ನೇ ಪ್ರಕೃತ ಋಕ್ಕಿನಲ್ಲಿ **ಆಚ್ಛದ್ವಿಧಾನೈಃ ಗುಪಿತಃ** ಎಂಬ ವಾಕ್ಯದಿಂದ ಹೇಳಲಾಗಿದೆ.

। ಸಂಹಿತಾಪಾಠಃ ।

ಯತ್ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।
ವಾಯುಃ ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥ ೫ ॥

॥ ಪದಪಾಠಃ ॥

ಯತ್ । ತ್ವಾ । ದೇವ । ಪ್ರऽಪಿಬಂತಿ । ತತಃ । ಆ । ಪ್ಯಾಯಸೇ । ಪುನರಿತಿ ।
ವಾಯುಃ । ಸೋಮಸ್ಯ । ರಕ್ಷಿತಾ । ಸಮಾನಾಂ । ಮಾಸಃ । ಆऽಕೃತಿಃ ॥ ೫ ॥

। ಸಾಯಣಭಾಷ್ಯಂ ।

ಹೇ ದೇವ ಸೋಮ ಯದ್ಯದಾ ತ್ವಾ ತ್ವಾಂ ಪ್ರಪಿಬಂತ್ಯೋಷಧಿರೂಪಂ ತ್ರಿಷ್ವಪಿ ಸವನೇಷು ತತೋऽನಂತರಮೇವ ಪುನರಾ ಪ್ಯಾಯಸೇ। ಆ ಪ್ಯಾಯಸ್ವ ಸಂ। ಋ. ೧-೯೧-೧೬। ಇತಿ ಪ್ರಾತಃಸವನೇ ಸಂ ತೇ ಪಯಾಂಸಿ। ಋ. ೧-೯೧-೧೮। ಇತ್ಯುತ್ತರಯೋಃ ಸವನಯೋರಾಪ್ಯಾಯಸೇ। ಕಿಂಚ ವಾಯುಸ್ತವ ಸೋಮಸ್ಯ ರಕ್ಷಿತಾ। ಯಥಾ ನ ಶುಷ್ಯತಿ ತಥಾ। ವಾಯುಃ ಶೋಷಕಃ ಪ್ರಸಿದ್ಧೋ ಲೋಕೇ। ಕಿಂಚ ಮಾಸಃ। ಪರಿಮೀಯತ ಇತಿ ಮಾಸಃ ಸೋಮಃ। ಸ ಚ ಸಮಾನಾಂ ಸಂವತ್ಸರಾಣಾಮಾಕೃತಿರಾಕರ್ತಾ ವ್ಯವಚ್ಛೇದಕೋ ಭವತಿ। ಸಂವತ್ಸರೇ ಸಂವತ್ಸರೇ ವಸಂತಾದಿಕಾಲೇಷ್ವನು-

**ಕ್ಷೀಯಮಾಣತ್ವಾದ್ವಸಂತೇ ವಸಂತೇ ಜ್ಯೋತಿಷಾ ಯಜೇತೇತಿ ಶ್ರುತೇಃ । ಯದ್ವಾ । ಸೋಮಾಧಾರವನಸ್ಪತಿವಿಕಾರಗ್ರಹದ್ವಾರೇಣ ವಾಯುಃ ಸೋಮರಸಸ್ಯ ರಕ್ಷಿತಾ ಭವತಿ । ವಾಯುಗೋಪಾ ವನಸ್ಪತಯ ಇತಿ ಶ್ರುತೇಃ । ಏವಂ ವಲ್ಲೀರೂಪಸೋಮಪಕ್ಷೇ ಯೋಜನಾ ॥ ಚಂದ್ರಪಕ್ಷೇ ತು ಹೇ ದೇವ ಸೋಮ ಯದ್ಯದಾ ತ್ವಾ ತ್ವಾಂ ಪ್ರ ಪಿಬಂತಿ ರಶ್ಮಯೋಽಪರಪಕ್ಷೇ ತತೋಽನಂತರಮೇವ ಪೂರ್ವಪಕ್ಷೇ ಪುನರಾ ಪ್ಯಾಯಸೇ । ವಾಯುಶ್ಚ ಸೋಮಸ್ಯ ತವ ರಕ್ಷಿತಾ । ವಾಯ್ವಧೀನತ್ವಾಚ್ಚಂದ್ರಗತೇಃ । ಕಿಂಚ ಸಮಾನಾಂ ಸಂವತ್ಸರಾಣಾಂ ಮಾಸಃ ॥ ಷಷ್ಠ್ಯೇಕವಚನಮೇತತ್ ॥ ಮಾಸಸ್ಯಾಕೃತಿಶ್ಚ ಕರ್ತಾ ತ್ವಂ ಚಾಸಿ । ಏಕೈಕಕಲಾಕ್ಷಯಸಂವೃದ್ಧಿಭ್ಯಾಂ ಹಿ ಮಾಸಃ ಪೂರ್ಯತೇ ತೈಃ ಸಂವತ್ಸರ ಇತಿ ॥**

॥ ಪ್ರತಿಪದಾರ್ಥ ॥

**ದೇವ**—ಎಲೈ ಸೋಮದೇವನೇ । **ಯತ್**—ಯಾವಾಗ । **ತ್ವಾ**—ನಿನ್ನನ್ನು । **ಪ್ರ ಪಿಬಂತಿ**—ದೇವತೆಗಳು ಪಾನಮಾಡುವರೋ । **ತತಃ**—ಆ ಒಡನೆಯೇ । **ಪುನಃ**—ತಿರುಗಿಯೂ । **ಆ ಪ್ಯಾಯಸೇ**—ಚೈತನ್ಯವನ್ನು ಹೊಂದುವೆ । **ವಾಯುಃ**—ವಾಯುವು । **ಸೋಮಸ್ಯ**—ಸೋಮನ । **ರಕ್ಷಿತಾ**—ರಕ್ಷಕನಾಗಿದ್ದಾನೆ । **ಮಾಸಃ**—ಸೋಮನು । **ಸಮಾನಾಂ**—ಸಂವತ್ಸರಗಳಿಗೆ । **ಆಕೃತಿಃ**—ಕಾಲವ್ಯವಸ್ಥೆಯನ್ನುಂಟು ಮಾಡುವವನಾಗಿದ್ದಾನೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವಾಗ ನಿನ್ನನ್ನು ದೇವತೆಗಳು ಪಾನಮಾಡುವರೋ, ಆ ಒಡನೆಯೇ, ತಿರುಗಿಯೂ ನೀನು ಚೈತನ್ಯವನ್ನು ಹೊಂದುವೆ. ವಾಯುವು ಸೋಮನ ರಕ್ಷಕನಾಗಿದ್ದಾನೆ. ಸೋಮನು ಸಂವತ್ಸರಗಳಿಗೆ ಕಾಲ ವ್ಯವಸ್ಥೆಯನ್ನುಂಟುಮಾಡುವವನಾಗಿದ್ದಾನೆ.

## English Translation

When, O god, they quaff you, then you renew yourself again ; Vayu is the guardian of Soma, the maker of years and months.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಓಷಧಿ ಮತ್ತು ಚಂದ್ರನ ಪರವಾದ ಎರಡುವಿಧ ಅರ್ಥಗಳನ್ನು ವಿವರಿಸುವುದಕ್ಕಾಗಿ ನಿರ್ವಚನವನ್ನು ಹೇಳಿದಾರೆ—

> **ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾವಿತಿ ವಾ ವಾಯುಃ ಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾದ್ರಸಹರಣಾದ್ವಾ । ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈರೋಷಧಿಶ್ಚಂದ್ರಮಾ ವಾ ॥**

(ನಿ. ೧೧–೫)

ಎಲೈ ಸೋಮನೇ, ಋತ್ವಿಗ್ಯಜಮಾನಾದಿಗಳು ಮೂರು ಸವನಗಳಲ್ಲಿಯೂ ಸೋಮರಸವನ್ನು ಪಾನಮಾಡುತ್ತಾರೆ. ಆದರೂ ನೀನು ವೃದ್ಧಿಯನ್ನು ಹೊಂದುತ್ತಿ ಮತ್ತು ಪಾನಮಾಡಿದವರನ್ನು ತೃಪ್ತರಾಗುವಂತೆ ಮಾಡುತ್ತೀಯೆ. ಈ ವಿಷಯವು—

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ । ಭವಾ ವಾಜಸ್ಯ ಸಂಗಥೇ ॥**

(ಋ. ಸಂ. ೧-೯೧-೧೬)

**ಸಂ ತೇ ಪಯಾಂಸಿ ಸಮು ಯಂತು ವಾಜಾಃ ಸಂ ವೃಷ್ಣ್ಯಾನ್ಯಭಿಮಾತಿಷಾಹಃ ।**
**ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಂಸ್ಯುತ್ತಮಾನಿ ಧಿಷ್ವ ॥**

(ಋ, ಸಂ. ೧-೯೧-೧೮)

ಎಂಬ ಋಕ್ಕುಗಳಲ್ಲಿ ವಿಶದವಾಗಿ ತಿಳಿಸಲ್ಪಟ್ಟಿರುವುದು. ಸೋಮಪಾನಮಾಡುವುದರಿಂದ ಮನಸ್ಸಿಗೆ ಹರ್ಷವುಂಟಾಗಿ ತೃಪ್ತಿಯಾಗುವುದೆಂದು ಅನೇಕಕಡೆ ಹೇಳಿದೆ. ವಾಯುವು ಸೋಮನ ಪಾಲಕನು ಎಂದು ಹೇಳಿರುವ ವಿಷಯದಲ್ಲಿ ವಾಯುವು ಯಾವಾಗಲೂ ಸೋಮಲತೆಯ ಬಳಿಯಲ್ಲಿ ಬೀಸುತ್ತಾ ಸಾಹಚರ್ಯವನ್ನು ಹೊಂದಿರುವನು ಎಂದರೆ ಸಮೀಪವರ್ತಿಯಾಗಿರುವನು. ಅಲ್ಲದೆ ವಾಯುವಿನ ಸ್ವಭಾವವು ರಸವನ್ನು ಶೋಷಣೆ (ಒಣಗಿಸುವುದು) ಮಾಡುವುದಾದರೂ ಸೋಮದ ವಿಷಯದಲ್ಲಿ ಹಾಗೆ ಮಾಡುವುದಿಲ್ಲವಾದ್ದರಿಂದ ವಾಯುವು ಸೋಮರಕ್ಷಕನೆಂದು ಹೇಳಲ್ಪಡುವನು. ಇನ್ನು **ಸಮಾನಾಂ ಮಾಸ ಆಕೃತಿಃ**—ಎಂಬ ವಾಕ್ಯದ ವಿಷಯದಲ್ಲಿ ಓಷಧಿ, ಲತೆ ಮೊದಲಾದುವುಗಳಲ್ಲಿ ಕೆಲವು ಕಾಲಗಳಲ್ಲಿ ಓಷಧಿಲತೆಗಳ ಆಕೃತಿಯಲ್ಲಿ ಅಥವಾ ರೂಪಗಳಲ್ಲಿ ಕೆಲವು ಬದಲಾವಣೆಗಳಾಗುವವು. ಈ ವ್ಯತ್ಯಾಸವು ವರ್ಷಕ್ಕೆ ಒಂದ್ಸಲ ಮಾತ್ರ ಆಗುವುದರಿಂದ, ಈ ನಿಯಮವು ಸಂವತ್ಸರಪರಿಮಿತಿಯನ್ನನುಸರಿಸಿರುವುದು ಎಂದು ತಿಳಿಯಬೇಕು. ಇದು ಓಷಧಿ (ಸೋಮಲತೆಯ) ಪರವಾದ ಅರ್ಥವಿವರಣೆಯು

ಇನ್ನು ಚಂದ್ರಪರವಾದ ಅರ್ಥದಲ್ಲಿ ದೇವತೆಗಳು ಚಂದ್ರನನ್ನು (ಅಮೃತವನ್ನು) ರಶ್ಮಿಗಳ ಮೂಲಕ ಅಪರ ಪಕ್ಷದಲ್ಲಿ ಪಾನಮಾಡುವುದರಿಂದ ಚಂದ್ರನು ಹ್ರಾಸವನ್ನೈದಿದರೂ ಪೂರ್ವಪಕ್ಷದಲ್ಲಿ ಪುನಃ ಅಭಿವೃದ್ಧಿಯನ್ನೇ ಹೊಂದುತ್ತಿರುವನು. ಅಂತರಿಕ್ಷದಲ್ಲಿ ಚಂದ್ರನೂ ವಾಯುವೂ ಸಹಚಾರಿಗಳಾಗಿರುವುದರಿಂದ ವಾಯುವು ಚಂದ್ರನ ರಕ್ಷಕನೆಂದು ಹೇಳಲ್ಪಡುವನು. ಮತ್ತು ಚಂದ್ರನ ವೃದ್ಧಿಹ್ರಾಸಗಳಿಂದ ಶುಕ್ಲಕೃಷ್ಣಪಕ್ಷಗಳುಂಟಾಗಿ ಆ ಕಾಲವು ಒಂದು ಮಾಸ (ತಿಂಗಳು) ವೆನಿಸುವುದು. ಈ ಮಾಸವು ಸಂವತ್ಸರದಲ್ಲಿ ಒಂದು ಭಾಗಮಾತ್ರ ಇಂತಹ ಹನ್ನೆರಡು ಮಾಸಗಳು ಸೇರಿ ಒಂದು ಸಂವತ್ಸರದ ಆಕೃತಿ ಅಥವಾ ಆಕಾರವು ಎಂದಾಗಿ ಆ ಕಾಲವು ಸಂವತ್ಸರವೆಂದು ಕರೆಯಲ್ಪಡುವುದು ಎಂದು ಚಂದ್ರಪರವಾದ ಅರ್ಥವಿವರಣೆಯು.

॥ ಸಂಹಿತಾಪಾಠಃ ॥

ರೈಭ್ಯಾಸೀದನುದೇಯೀ ನಾರಾಶಂಸೀ ನ್ಯೋಚನೀ ।
ಸೂರ್ಯಾಯಾ ಭದ್ರಮಿದ್ವಾಸೋ ಗಾಥಯೈತಿ ಪರಿಷ್ಕೃತಂ ॥೬॥

॥ ಪದಪಾಠಃ ॥

ರೈಭೀ । ಆಸೀತ್ । ಅನುऽದೇಯೀ । ನಾರಾಶಂಸೀ । ನಿऽಓಚನೀ ।

ಸೂರ್ಯಾಯಾಃ । ಭದ್ರಂ । ಇತ್ । ವಾಸಃ । ಗಾಥಯಾ । ಏತಿ । ಪರಿऽಕೃತಂ ॥ ೬ ॥

॥ ಸಾಯಣಭಾಷ್ಯಂ ॥

ಆಭಿಃ ಸೂರ್ಯಾ ಸ್ವವಿವಾಹಮಸ್ತೌದಿತ್ಯುಕ್ತಂ । ಸೂರ್ಯಾ ಸಾವಿತ್ರೀ ಬ್ರೂತೇ । ರೈಭೀ । ರೈಭ್ಯಃ ಕಾಶ್ಚನರ್ಚಃ । ರೈಭೀಃ ಶಂಸತಿ ರೇಭಂತೋ ವೈ ದೇವಾಶ್ಚರ್ಷಯಶ್ಚ ಸ್ವರ್ಗಂ ಲೋಕಮಾಯನ್ನಿತ್ಯಾದಿಬ್ರಾಹ್ಮಣವಿಹಿತಾ ರೈಭ್ಯಃ । ಐ. ಬ್ರಾ. ೬-೩೨ । ಸಾ ರೈಭ್ಯನುದೇಯ್ಯಾಸೀತ್ । ದೀಯಮಾನವಧೂವಿನೋದನಾಯಾನುದೀಯಮಾನಾ ವಯಸ್ಯಾಸೀತ್ । ತಥಾ ನಾರಾಶಂಸೀ । ಪ್ರಾತಾ ರತ್ನಂ । ಋ. ೧-೧೨೫-೧ । ಇತ್ಯಾದಿಕಾ ಮನುಷ್ಯಾಣಾಂ ಸ್ತುತಯೋ ನಾರಾಶಂಸ್ಯಃ । ಸಾ ನಾರಾಶಂಸೀ ನ್ಯೋಚನೀ । ಉಚತಿಃ ಸೇವಾಕರ್ಮಾ । ಸಾ ವಧೂಶುಶ್ರೂಷಾರ್ಥಂ ದೀಯಮಾನಾ ದಾಸ್ಯಭವತ್ । ಸೂರ್ಯಾಯಾ ಮಮ ಭದ್ರಂ ವಾಸೋ ವಿಚಿತ್ರಂ ದುಕೂಲಾದಿಕಮಾಚ್ಛಾದನಯೋಗ್ಯಂ ವಸ್ತ್ರಂ ಗಾಥಯಾ ಪರಿಷ್ಕೃತಮಲಂಕೃತಮೇತಿ । ಗಾಥಾ ಗೀಯತ ಇತ್ಯಾದಿಬ್ರಾಹ್ಮಣೋಕ್ತಾ ಗಾಥಾ । ತಯಾ ಗಾಥಯಾ ಯತ್ಪರಿಷ್ಕೃತಮಸ್ತಿ ತದ್ವಾಸೋऽಭವದಿತಿ ॥

॥ ಪ್ರತಿಪದಾರ್ಥ ॥

(ನನ್ನ ವಿವಾಹಕಾಲದಲ್ಲಿ) **ರೈಭೀ**—ರೈಭಿಯೆಂಬ ಸ್ತುತಿಗಳೇ । **ಅನುದೇಯೀ**—ನನಗೆ ಜೊತೆಗಾರಳಾಗಿ । **ಆಸೀತ್**—ಇದ್ದಳು । **ನಾರಾಶಂಸೀ**—ನಾರಾಶಂಸಿಯೆಂಬ ಮಂತ್ರಗಳೇ । **ನ್ಯೋಚನೀ**—ನನ್ನಸೇವಕಳಾಗಿದ್ದಳು । **ಸೂರ್ಯಾಯಾಃ**—ಸೂರ್ಯಾಸಂಜ್ಞಕಳಾದ ನನ್ನ । **ಭದ್ರಂ**—ಮಂಗಳಕರವಾದ । **ವಾಸಃ**—ವಸ್ತ್ರವು । **ಗಾಥಯಾ**—ಗಾಥೆಯಿಂದ (ಸಾಮಗಾನದಿಂದ) । **ಪರಿಷ್ಕೃತಂ ಏತಿ**—ಸಂಸ್ಕೃತವಾಗುತ್ತದೆ.

॥ ಭಾವಾರ್ಥ ॥

(ನನ್ನ ವಿವಾಹಕಾಲದಲ್ಲಿ) ರೈಭಿಯೆಂಬ ಸ್ತುತಿಗಳೇ ನನಗೆ ಜೊತೆಗಾರಳಾಗಿದ್ದಳು. ನಾರಾಶಂಸಿಯೆಂಬ ಮಂತ್ರವೇ ನನ್ನ ಸೇವಕಳಾಗಿದ್ದಳು. ಸೂರ್ಯಾಸಂಜ್ಞಕಳಾದ ನನ್ನ ಮಂಗಳಕರವಾದ ವಸ್ತ್ರವು ಗಾಥೆಯಿಂದ (ಸಾಮಗಾನದಿಂದ) ಸಂಸ್ಕೃತವಾಗುತ್ತದೆ.

English Translation

Raibhi was her companion ; Narashamsi her slave ; Surya's lovely dress was adorned by Gatha.

॥ ವಿಶೇಷವಿಷಯಗಳು ॥

ಸೂರ್ಯಾದೇವಿಯು ತನ್ನ ವಿವಾಹವನ್ನು ತಾನೇ ವರ್ಣಿಸುವಾಗ ರೈಭೀ ಎಂಬ ಸ್ತುತಿಯೇ ತನ್ನ ಜೊತೆಗಾರಳೆಂದೂ, ನಾರಾಶಂಸಿ ಎಂಬ ಮಂತ್ರವೇ ತನ್ನ ಸೇವಕಳೆಂದೂ, ಗಾಥೆಯೆಂಬ ಸಾಮಗಾನಮಂತ್ರವೇ ತನ್ನ ವಸ್ತ್ರವೆಂದೂ

ಹೇಳಿಕೊಂಡಿದಾಳೆ. ರೈಭೀ, ನಾರಾಶಂಸೀ ಎಂಬ ಮಂತ್ರಗಳ ಸ್ವರೂಪವು ಐತರೇಯಬ್ರಾಹ್ಮಣದಲ್ಲಿ ಈರೀತಿ ವರ್ಣಿತವಾಗಿದೆ—

**ರೈಭೀಃ ಶಂಸತಿ । ರೇಭಂತೋ ವೈ ದೇವಾಶ್ಚ ಋಷಯಶ್ಚ ಸ್ವರ್ಗಂ ಲೋಕಮಾಯಂಸ್ತಥೈವೈತದ್ಯಜಮಾನಾ ರೇಭಂತ ಏವ ಸ್ವರ್ಗಂ ಲೋಕಂ ಯಂತಿ ॥**

(ಐ. ಬ್ರಾ. ೩೦.೩೨)

ರೇಭ ಎಂಬ ಶಬ್ದವಿರುವ ಮಂತ್ರಗಳಿಗೆ ರೈಭೀಃ ಎಂದು ಹೆಸರು. ಅಥರ್ವವೇದದಲ್ಲಿರುವ **ವಚ್ಯಸ್ವ ರೇಭ ವಚ್ಯಸ್ವ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (ಅಥರ್ವ. ೨೦-೧೨೭-೪, ೫, ೬) ರೈಭೀಮಂತ್ರಗಳೆಂದು ಹೆಸರು. ಹಿಂದೆ ದೇವತೆಗಳೂ ಮತ್ತು ಋಷಿಗಳೂ ಯಜ್ಞಮಾಡಿದಾಗ ಈ ರೈಭೀಮಂತ್ರಗಳನ್ನು ಘಟ್ಟಿಯಾಗಿ ಉಚ್ಚರಿಸುತ್ತಾ ಸ್ವರ್ಗಲೋಕಕ್ಕೆ ಹೋದರು. ಆದ್ದರಿಂದ ರೈಭೀಮಂತ್ರಗಳನ್ನು ಘಟ್ಟಿಯಾಗಿ ಉಚ್ಚರಿಸುವ ಯಜಮಾನರು ಸ್ವರ್ಗಲೋಕಕ್ಕೆ ಹೋಗುತ್ತಾರೆ. ಪೃಷ್ಠ್ಯಷಡಹವೆಂಬ ಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಶಿಲ್ಪಶಸ್ತ್ರವಮಂತ್ರಗಳನ್ನು ಪಠಿಸಬೇಕಾದಾಗ ಕುಂತಾಪವೆಂಬ ಹೆಸರಿನ ಖಿಲಸೂಕ್ತಗಳಲ್ಲಿರುವ ನಾರಾಶಂಸೀಃ ರೈಭೀಃ ಎಂಬ ಕೆಲವು ಮಂತ್ರಗಳನ್ನು ಪಠಿಸಬೇಕು. ಪ್ರಕೃತ ಋಕ್ಕಿನಲ್ಲಿ ರೈಭೀಃ ಮತ್ತು ನಾರಾಶಂಸೀಃ ಎಂಬ ಎರಡು ಮಂತ್ರಗಳನ್ನು ಸೂಚಿಸಲಾಗಿದೆ. ಈ ರೈಭಿಸಂಜ್ಞಕವಾದ ಮೂರು ಮಂತ್ರಗಳೇ ತನ್ನ ಜತೆಗಾರಳು ಎಂದು ಸೂರ್ಯಾದೇವಿಯು ಹೇಳಿಕೊಂಡಿದಾಳೆ. ಅದರಂತೆ—

**ನಾರಾಶಂಸೀಃ ಶಂಸತಿ ಪ್ರಜಾ ವೈ ನರೋ ವಾಕ್ಶಂಸಃ ಪ್ರಜಾಸ್ವೇವ ತದ್ವಾಚಂ ದಧಾತಿ ತಸ್ಮಾದಿಮಾಃ ಪ್ರಜಾ ವದಂತ್ಯೋ ಜಾಯಂತೇ ಯ ಏವಂ ವೇದ ಯದೇವ ನಾರಾಶಂಸೀಃ ಶಂಸಂತೋ ವೈ ದೇವಾಶ್ಚ ಋಷಯಶ್ಚ ಸ್ವರ್ಗಂ ಲೋಕಮಾಯಂಸ್ತಥೈವೈತದ್ಯಜಮಾನಾಃ ಶಂಸಂತ ಏವ ಸ್ವರ್ಗಂ ಲೋಕಂ ಯಂತಿ ॥**

(ಐ. ಬ್ರಾ. ೩೦.೩೨)

ಅಥರ್ವವೇದದಲ್ಲಿರುವ- **ಇದಂ ಜನಾ ಉಪಶ್ರುತ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (ಅಥ. ೨೦-೧೨೭-೧, ೨, ೩) ನಾರಾಶಂಸೀಮಂತ್ರಗಳೆಂದು ಹೆಸರು. ಇದರಲ್ಲಿ ನರಾಶಂಸದೇವತೆಯ ಸ್ತುತಿ ಇರುವುದರಿಂದ ಈ ಮಂತ್ರಕ್ಕೆ ಈ ಹೆಸರು ಬಂದಿದೆ. ಇಲ್ಲಿ ನರಾ ಎಂದರೆ (ಮನುಷ್ಯರು) ಮಕ್ಕಳು, ಶಂಸಃ ಎಂದರೆ ಮಾತು. ಮಕ್ಕಳಲ್ಲಿ ಮಾತನ್ನು ಸ್ಥಾಪಿಸುವುದರಿಂದ ಮಕ್ಕಳು ಮಾತನ್ನಾಡಲು ಶಕ್ತರಾಗುತ್ತಾರೆ. ಈ ವಿಷಯವನ್ನು ತಿಳಿದಿರುವ ಪುರುಷನಿಗೆ ಮಾತುಗಳನ್ನಾಡುವುದರಲ್ಲಿ ಚೆನ್ನಾಗಿ ಕುಶಲರಾದ ಮಕ್ಕಳು ಹುಟ್ಟುತ್ತಾರೆ. ಹಿಂದೆ ದೇವತೆಗಳೂ ಋಷಿಗಳೂ ಯಜ್ಞ ಮಾಡಿದಾಗ ಈ **ನಾರಾಶಂಸೀಃ** ಎಂಬ ಮಂತ್ರಗಳನ್ನು ಪಠಿಸುತ್ತಾ ಸ್ವರ್ಗಲೋಕಕ್ಕೆ ಹೋದರು. ಆದ್ದರಿಂದ ಈ ನಾರಾಶಂಸೀ ಋಕ್ಕುಗಳನ್ನು ಪಠಿಸುವ ಯಜಮಾನರು ಸ್ವರ್ಗಕ್ಕೆ ಹೋಗುತ್ತಾರೆ ಎಂದು ಹೇಳಿದೆ. ಪ್ರಕೃತ ಋಕ್ಕಿನಲ್ಲಿ ಈ ನಾರಾಶಂಸೀಮಂತ್ರಗಳೇ ತನಗೆ ಸೇವಕಳು ಎಂದು ಸೂರ್ಯಾದೇವಿಯು ಹೇಳಿಕೊಂಡಿದ್ದಾಳೆ.

ವಿವಾಹಕಾಲದಲ್ಲಿ ವಧುವಿಗೆ ಸಖಿಯೊಬ್ಬಳು ಇರಬೇಕಷ್ಟೆ. ಆ ಸಖಿಯೇ **ರೈಭೀ** ಎಂಬ ಮಂತ್ರವು. ಹಾಗೆಯೇ ವಧುವಿನ ಜತೆಯಲ್ಲಿ ಅವಳ ಸೇವಾರ್ಥವಾಗಿ ಕಳುಹಿಸುವ ದಾಸಿಯೇ ಈ **ನಾರಾಶಂಸೀ** ಎಂಬ ಮಂತ್ರವು,

ಗಾಥಾ ಎಂಬ ಸಾಮಮಂತ್ರವೇ ವಧುವಿನ (ತನ್ನ) ಅಲಂಕಾರಾರ್ಥವಾದ ಪಟ್ಟೆವಸ್ತ್ರವು ಎಂಬ ಈ ಮೂರು ವಿಷಯಗಳನ್ನೂ ಸೂರ್ಯಾದೇವಿಯೇ ಪ್ರಕೃತ ಋಕ್ಕಿನಲ್ಲಿ ಹೇಳಿಕೊಂಡಿದಾಳೆ.

॥ ಸಂಹಿತಾಪಾಠಃ ॥

ಚಿತ್ತಿರಾ ಉಪಬರ್ಹಣಂ ಚಕ್ಷುರಾ ಅಭ್ಯಂಜನಂ ।

ದ್ಯೌರ್ಭೂಮಿಃ ಕೋಶ ಆಸೀದ್ಯದಯಾತ್ಸೂರ್ಯಾ ಪತಿಂ ॥ ೭ ॥

॥ ಪದಪಾಠಃ ॥

ಚಿತ್ತಿಃ । ಆಃ । ಉಪऽಬರ್ಹಣಂ । ಚಕ್ಷುಃ । ಆಃ । ಅಭಿऽಅಂಜನಂ ।

ದ್ಯೌಃ । ಭೂಮಿಃ । ಕೋಶಃ । ಆಸೀತ್ । ಯತ್ । ಅಯಾತ್ । ಸೂರ್ಯಾ । ಪತಿಂ ॥ ೭ ॥

॥ ಸಾಯಣಭಾಷ್ಯಂ ॥

ಚಿತ್ತಿರ್ದೇವತೋಪಬರ್ಹಣಮಾಃ । ಆಸೀತ್ । ಚಕ್ಷುರಭ್ಯಂಜನಮಾಃ । ಆಸೀತ್ । ತಥಾ ಹಿ । ವೃತ್ರಸ್ಯ ಕನೀನಿಕಾ ಪರಾಪತತ್ತ್ರಿಕಕುನ್ನಾಮ ಪರ್ವತೇ । ತೇನ ತ್ರೈಕಕುದೇನಾಂಜನಸಜಾತೀಯೇನ ಚಕ್ಷುಷೀ ಆಂಜತೇ । ತಚ್ಚಕ್ಷುರೇವಾಂಜನಮಾಸೀದಿತಿ । ದ್ಯೌಶ್ಚ ಭೂಮಿಶ್ಚ ಕೋಶ ಆಸೀತ್ । ಕೋಶಸ್ಥಾನೀಯೇ ಅಭೂತಾಂ । ಯದ್ಯದಾ ಸೂರ್ಯಾ ಪತಿಂ ಸ್ವಕೀಯಂ ನವಭರ್ತಾರಂ ಸೋಮಮಯಾತ್ ಅಗಚ್ಛತ್ ತದೈವಮುಪಕರಣಾನ್ಯಾಸನ್ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಸೂರ್ಯಾ**—ಸೂರ್ಯೆಯು । **ಪತಿಂ**--ತನ್ನ ಪತಿಯಾದ ಸೋಮನಲ್ಲಿಗೆ। **ಅಯಾತ್**-ಹೋದಳೋ ಆಗ । **ಚಿತ್ತಿಃ**—ಚಿತ್ತಿಸಂಜ್ಞಕವಾದ ದೇವತೆಯು (ಮನಸ್ಸು) । **ಉಪಬರ್ಹಣಂ**—ತಲೆದಿಂಬಾಗಿ । **ಆಃ**—ಆಯಿತು । **ಚಕ್ಷುಃ**—ಕಣ್ಣು । **ಅಭ್ಯಜನಂ**—ಕಣ್ಣಿನ ಅಂಜನವಾಗಿ । ಆಃ—ಆಯಿತು । **ದ್ಯೌಃ ಭೂಮಿಃ**-ದ್ಯಾವಾಪೃಥಿವಿಗಳು । **ಕೋಶಃ**—ಪೆಟ್ಟಿಗೆಯಾಗಿ । **ಆಸೀತ್**—ಆದವು.

॥ ಭಾವಾರ್ಥ ॥

ಸೂರ್ಯೆಯು ತನ್ನ ಪತಿಯಲ್ಲಿಗೆ ಹೊಸದಾಗಿ ಹೋದಾಗ ಚಿತ್ತಿಸಂಜ್ಞಕವಾದ ದೇವತೆಯು ( ಮನಸ್ಸು ) ತಲೆದಿಂಬಾಗಿ ಆಯಿತು. ಕಣ್ಣು ಅಂಜನವಾಗಿ (ಕಪ್ಪು, ಕಾಡಿಗೆ) ಆಯಿತು. ದ್ಯಾವಾಪೃಥಿವಿಗಳು ಪೆಟ್ಟಿಗೆಯಾದವು.

## English Translation

Chitti (mind) was the pillow, the Eye was the collyriaum: heaven and earth were the box when Surya went to her husband.

|| ವಿಶೇಷವಿಷಯಗಳು ||

**ಚಕ್ಷುಃ ಆ ಅಭ್ಯಂಜಸಂ—ವೃತ್ರಸ್ಯ ಕನೀನಿಕಾ ಪರಾಪತತ್ತ್ರಿಕಕುನ್ನಾಮ್ನಃಪರ್ವತೇ। ತೇನ ತ್ರೈಕಕುದೇನಾಂಜನಸಜಾತೀಯೇನ ಚಕ್ಷುಷೀ ಅಂಜತೇ। ತಚ್ಚಕ್ಷುರೇವಾಂಜನಮಾಸೀತ್ ।** ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನುಸಂಹಾರಮಾಡಿದಾಗ ಅವನ ಕಣ್ಣುಗಳಲ್ಲಿದ್ದ ಕನೀನಿಕೆಯು (ಕನೀನಿಕೆ ಎಂದರೆ ಕಣ್ಣುಗುಡ್ಡೆಗಳಲ್ಲಿ ಕಾಣಬರುವ ಕಪ್ಪುಭಾಗವು) ತ್ರಿಕಕುತ್ ಎಂಬ ಪರ್ವತದ ಮೇಲೆ ಬಿದ್ದಿತು. ಅದು ತ್ರೈಕಕುತ್ ಎಂಬ ಒಂದುವಿಧ ಮೂಲಿಕೆಯಾಗಿ ಬೆಳೆಯಿತು. ಆ ಮೂಲಿಕೆಯಿಂದ ನಿರ್ಮಿತವಾದ ಕಪ್ಪನ್ನೇ ಯಜ್ಞಾದಿಗಳಲ್ಲಿ ದೀಕ್ಷಾಕಾಲದಲ್ಲಿ ಕಣ್ಣಿಗೆ ಹಚ್ಚುವ ಕಪ್ಪನ್ನಾಗಿ ಉಪಯೋಗಿಸುವರು. ಅದನ್ನೇ ಇಲ್ಲಿ ಚಕ್ಷುಃ ಎಂಬ ಶಬ್ದದಿಂದ ವಿವರಿಸಲಾಗಿದೆ. ತೈತ್ತಿರೀಯಸಂಹಿತೆಯು—

**ಇಂದ್ರೋ ವೃತ್ರಮಹನ್ತಸ್ಯ ಕನೀನೀಕಾ ಪರಾಪತತ್ತದಾಂಜನಮಭವದ್ಯಾಂಕ್ತೇ ಚಕ್ಷುರೇವ ||**

(ತೈ. ಸಂ. ೭-೮-೧-೫)

ಎಂಬ ವಾಕ್ಯವು ಇದನ್ನು ಸಮರ್ಥಿಸುವುದು.

|| ಸಂಹಿತಾಪಾಠಃ ||

ಸ್ತೋಮಾ ಆಸನ್ಪ್ರತಿಧಯಃ ಕುರೀರಂ ಛಂದ ಓಪಶಃ ।
ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ಪುರೋಗವಃ ॥ ೮ ॥

|| ಪದಪಾಠಃ ||

ಸ್ತೋಮಾಃ । ಆಸನ್ । ಪ್ರತಿऽಧಯಃ । ಕುರೀರಂ । ಛಂದಃ । ಓಪಶಃ ।
ಸೂರ್ಯಾಯಾಃ । ಅಶ್ವಿನಾ । ವರಾ । ಅಗ್ನಿಃ । ಆಸೀತ್ । ಪುರಃऽಗವಃ ॥ ೮ ॥

। ಸಾಯಣಭಾಷ್ಯಂ ।

**ಸೂರ್ಯಾಯಾ ರಥಸ್ಯ ಸ್ತೋಮಾಸ್ತ್ರಿವೃದಾದಯಃ ಪ್ರತಿಧಿಯ ಆಸನ್ । ಪ್ರತಿಧೀಯಂತ ಇತಿ ಪ್ರತಿಧಯ ಈಷಾತಿರ್ಯಗಾಯತಕಾಷ್ಠಾದಯಃ । ತಥಾ ಕುರೀರಂ ಛಂದಃ ಕುರೀರನಾಮಕಂ ಛಂದೋऽನಸ ಓಪಶೋऽಭವತ್ । ಯೇನೋಪಶೇರತೇ ಸ ಓಪಶಃ । ತಾದೃಶಾಯಾಃ ಸೂರ್ಯಾಯಾ ಅಶ್ವಿನಾಶ್ವಿನೌ ವರಾ ವರಾವಾಸ್ತಾಮಿತಿ ಶೇಷಃ। ತಸ್ಯಾ ವಿವಾಹೇ ಪುರೋಗವಃ ಪುರೋಗಂತಾ ಪುರತೋ ಗಂತಾ ಯಃ ಪೂರ್ವಮೇವ ಪ್ರಸ್ಥಾನಾರ್ಥಂ ಗಚ್ಛತಿ ತತ್ಸ್ಥಾನೀಯೋऽಗ್ನಿರಾಸೀತ್ ॥ ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛನ್ನಿತ್ಯಾದಿ ಹಿ ಬ್ರಾಹ್ಮಣಂ। ಐ. ಬ್ರಾ. ೪-೭ । ಅತ್ರಾಯಮಭಿಪ್ರಾಯಃ। ಪ್ರಜಾಪತಿಃ ಸವಿತಾ ಸ್ವದುಹಿತರಂ ಸೋಮಾಯ ಪ್ರಾಯಚ್ಛತ್। ಸೋಮಾಯ ದಾಸ್ಯಾಮಿತಿ ಮನೀಷಾಮಕರೋತ್ ।**

**ತಸ್ಮಿನ್ಸವುಯೇ ಪುತ್ರಾ್ಯ ಉಪಚಾರಾರ್ಥಂ ಪ್ರದಾನಾನ್ಯಕ್ತ್ವಾತ್ಸ್ವಭವನ್ । ತಥಾ ಚ ಸತ್ಯಶ್ವಿನಾ ಪ್ರಬಲೌ ಸಂತಾವಾಜಿಂ ಪುರತೋ ಗತ್ವಾ ತಾಮಲಭೇತಾಮಿತಿ । ಉತ್ತರತ್ರಾಪಿ ಸೋಮೋ ವಧೂಯುರ- ಭವದಿತ್ಯಾದಿನಾಯಮೇವಾರ್ಥಃ ಸ್ಪಷ್ಟೋ ಭವಿಷ್ಯತಿ । ಯೋಷಾವೃಣೀತ ಜೇನ್ಯೇತ್ಯಾದಿಕಮುಕ್ತಂ । ಋ. ೧-೧೧೯-೫ ॥**

। ಪ್ರತಿಪದಾರ್ಥ ।

(ಸೂರ್ಯೆಯ ರಥಕ್ಕೆ) **ಸ್ತೋಮಾಃ**—ತ್ರಿವೃದಾದಿ ಸ್ತೋಮಗಳು । **ಪ್ರತಿಧಯಃ**—ಸಲಾಕಿಗಳಂತೆ । **ಆಸನ್**—ಆಗಿದ್ದವು । **ಕುರೀರಂ ಛಂದಃ**—ಕುರೀರಸಂಜ್ಞಕವಾದ ಛಂದಸ್ಸು । **ಓಪಶಃ**—ಬಾರುಕೋಲಾಗಿದ್ದಿತು । **ಸೂರ್ಯಾಯಾಃ**—ಸೂರ್ಯೆಗೆ । **ಅಶ್ವಿನಾ**—ಅಶ್ವಿನೀದೇವತೆಗಳು । **ವರಾ**—ವರರಾಗಿದ್ದರು । **ಅಗ್ನಿಃ**—ಅಗ್ನಿಯು । **ಪುರೋಗವಃ**—ಮೆರೆವಣಿಗೆಯ ನೇತೃವಾಗಿ । **ಆಸೀತ್**—ಇದ್ದನು.

। ಭಾವಾರ್ಥ ।

ಸೂರ್ಯೆಯ ವಿವಾಹಕಾಲದ ಮೆರೆವಣಿಗೆಯಲ್ಲಿ ಅಗ್ನಿಯು ಎಲ್ಲರಿಗೂ ನೇತೃವಾಗಿ ಮುಂದೆ ಹೋಗುತ್ತಿದ್ದನು. ತ್ರಿವೃದಾದಿ ಸ್ತೋಮಗಳು ಸೂರ್ಯೆಯ ರಥದ ಸಲಾಕಿಗಳಾಗಿದ್ದವು. ತುರೀರಸಂಜ್ಞಕವಾದ ಛಂದಸ್ಸು ಬಾರು ಕೋಲಾಗಿದ್ದಿತು. ಅಶ್ವಿನೀದೇವತೆಗಳೇ ವರರಾಗಿದ್ದರು.

## English Translation

Hymns were the cross-bars (of the car) ; the Kurira metre was the thong of the whip ; the Aswins were Surya's groomsmen ; Agni was the leader of the procession.

॥ ವಿಶೇಷವಿಷಯಗಳು ॥

**ಸ್ತೋಮಾಃ**—ತ್ರಿವೃದಾದಿಸ್ತೋಮಗಳು ಎಂದು ಇಲ್ಲಿ ಹೇಳಿದೆ. ಈ ಸ್ತೋಮಗಳೆಂದರೇನು ? ಇವುಗಳ ಸ್ವರೂಪವೇನು ? ಯಜ್ಞಗಳಲ್ಲಿ ಇವುಗಳ ಉಪಯೋಗವೇನು ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸುವುದು ಅವಶ್ಯಕ ವಾಗಿದೆ—

**ಸ್ತೋಮ**ಶಬ್ದಕ್ಕೆ ಸಾಯಣರು **ತ್ರಿವೃತ್ಪಂಚದಶಾದಿಲಕ್ಷಣಾಃ ಸ್ತೋತ್ರಂ** ಎಂದು ವಿವರಣೆ ಯನ್ನು ಹೇಳಿದ್ದಾರೆ. **ಏಕಂ ಸಾಮ ತೃಚೇ ಕ್ರಿಯತೇ ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ** ಎಂಬ ವಾಕ್ಯದಿಂದ ಸ್ತೋಮದ ಲಕ್ಷಣವನ್ನುತಿಳಿಸಿ ಸ್ತೋಮಗಳಲ್ಲಿ **ತ್ರಿವೃತ್, ಪಂಚದಶಃ, ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುರ್ವಿಂಶಃ ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ** ಎಂದು ಒಂಭತ್ತು ವಿಧಗಳನ್ನೂ ಸಹ ಅವುಗಳ ವಿಷ್ಟುತಿಗಳೊಡನೆ ಋಗ್ವೇದಸಂಹಿತೆಯ ೨ ನೇ ಭಾಗವ ೧೩೮ ರಿಂದ ೧೫೦ ನೇ ಪೇಜುಗಳಲ್ಲಿ ಬಹಳ ವಿಶದವಾಗಿ ತಿಳಿಸಿದೆ ಇಲ್ಲಿ ಆ ಸ್ತೋಮಗಳ ಸೂಕ್ಷ್ಮವಿವರಣೆಯನ್ನೂ, ಅವುಗಳ ಪಠನದಿಂದ ಲಭಿಸತಕ್ಕಪ್ರಯೋಜನಗಳನ್ನು ಮಾತ್ರತಿಳಿಸಲಾಗುತ್ತದೆ-

ಅಭಿಪ್ಲವಷಡಹಯಾಗದಲ್ಲಿ ವಿಷಮದಿನಗಳು ಎಂದರೆ, ಪ್ರಥಮ, ತೃತೀಯ, ಪಂಚಮದಿನಗಳಲ್ಲಿ ನಡೆಯುವ ಮಾಧ್ಯಂದಿನಸವನಗಳಲ್ಲಿ (ಮಧ್ಯಾಹ್ನ ಕಾಲದಲ್ಲಿ ಸೋಮರಸವನ್ನು ಹಿಂಡುವ ಕರ್ಮವಿಶೇಷಕಾಲದಲ್ಲಿ) ಉದ್ಗಾತೃ

ಮೊದಲಾದ ಋತ್ವಿಜರು **ರಥಂತರ**ವೆಂಬ ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ರಥಂತರಪೃಷ್ಠ** ಗಳೆಂದು ಹೆಸರು. ಅದರಂತೆಯೇ ಸಮದಿನಗಳಲ್ಲಿ ಎಂದರೆ, ದ್ವಿತೀಯ, ಚತುರ್ಥ, ಷಷ್ಠದಿನಗಳಲ್ಲಿ **ಬೃಹತ್ಸಾಮ**ವೆಂಬ ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ಬೃಹತ್ಪೃಷ್ಠ** ದಿನಗಳೆಂದು ಹೆಸರು. ಮೂರನೆಯ ದಿನದಿಂದ ಪ್ರಾರಂಭಿಸಿ ಪ್ರತಿದಿನವೂ ಪೃಷ್ಠ್ಯಸ್ತೋತ್ರಗಳನ್ನು ಪಠಿಸುವಾಗ ಅದಕ್ಕೆ ಪ್ರತಿಯಾಗಿ ವೈರೂಪ, ವೈರಾಜ, ಶಾಕ್ವರರೈವತಗಳೆಂದು ಹೇಳಲ್ಪಡುವ ವಿಶೇಷಸಾಮಮಂತ್ರಗಳು ಗಾನಮಾಡಲ್ಪಡುತ್ತವೆ. ಆ ಕಾಲದಲ್ಲಿ ಸಾಮಗಾನಕ್ಕೆ ಅನುಸಾರವಾಗಿ ಹೋತೃವರ್ಗದ ಋತ್ವಿಜರು **ಸ್ತೋಮ**ವೆಂದು ಹೇಳಲ್ಪಡುವ ಕೆಲವು ಋಕ್ಕುಗಳನ್ನು ಪಠಿಸುವರು. ಸ್ತೋಮದ ವಿವರಣೆಯು ಈ ರೀತಿ ಇರುವುದು—

**ಏಕಂ ಸಾಮ ತೃಚೇ ಕ್ರಿಯತೇ । ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ ॥**

ತೃಚವೆಂದರೆ ಮೂರು ಋಕ್ಕುಗಳು. ಈ ಮೂರು ಋಕ್ಕುಗಳೂ ಒಂದೇ ದೇವತೆಯನ್ನು ಪ್ರತಿಪಾದಿಸುವುದಾಗಿ ಇರಬೇಕು. ಇಂತಹ ಋಕ್ಕುಗಳನ್ನು ಸ್ಥಾನಭೇದಗಳಿಂದ ವಿಧವಿಧವಾಗಿಯೂ, ಒಂದೊಂದು ಋಕ್ಕನ್ನು ಒಂದಾವರ್ತಿಗಿಂತ ಹೆಚ್ಚಾಗಿ ಪಠಿಸುವುದರಿಂದಲೂ ತೃಚವನ್ನು ಅನೇಕ ಋಕ್ಕುಗಳನ್ನಾಗಿ ವೃದ್ಧಿಪಡಿಸಬಹುದು. ಉದಾ.—ಒಂದು ತೃಚದಲ್ಲಿ ೧, ೨, ೩ ಎಂಬ ಋಕ್ಕುಗಳಿವೆ. ಅವುಗಳನ್ನು,

೧, ೨, ೩ ; ೩, ೨, ೧ ; ೧, ೩, ೨ ; ೨, ೧, ೩ ; ೨, ೩, ೧ ; ೩, ೧, ೨ ಇತ್ಯಾದಿ ಸ್ಥಾನಭೇದಗಳಿಂದಲೂ.

೧, ೧, ೧, ೨, ೩ ; ೧, ೨, ೨, ೨, ೩ ; ೧, ೨, ೩, ೩, ೩ ಇತ್ಯಾದಿ ಅಧಿಕ ಆವೃತ್ತಿಗಳಿಂದಲೂ,

ಪಠಿಸುವಾಗ ಮೂರು ಋಕ್ಕುಗಳು ಅನೇಕ ಋಕ್ಕುಗಳಾಗುವುವು. ಈ ರೀತಿಯಾಗಿ ತೃಚವೆಂಬ ಮೂರು ಋಕ್ಕುಗಳನ್ನು ಯಾವುದಾದರೂ ಒಂದು ಕ್ರಮದಲ್ಲಿ ಪಠಿಸುವುದಕ್ಕೆ ಎಂದರೆ ೧, ೨, ೩ ಅಥವಾ ೧, ೨, ೩, ೩, ೩ ಎಂದು ಮೊದಲಾಗಿ ಪಠಿಸುವುದಕ್ಕೆ ಪರ್ಯಾಯವೆಂದು ಹೆಸರು. ಇಂತಹ ಪರ್ಯಾಯಗಳು ಮೂರಾದರೆ ಒಂದು **ವಿಷ್ಟುತಿ**ಯಾಗುವುದು. ಪ್ರತಿಯೊಂದು ಸ್ತೋಮಕ್ಕೂ ಇಂತಹ ವಿಷ್ಟುತಿಗಳು ಬೇರೆ ಬೇರೆ ಹೆಸರಿನಿಂದ ಅನೇಕವಿಧಗಳಾಗಿರುವುವು. ಆದುದರಿಂದ ಮೂರು ಋಕ್ಕಿನ ತೃಚವನ್ನು ಮೂರು ಪರ್ಯಾಯಗಳಲ್ಲಿ ವಿಧವಿಧವಾದ ಕ್ರಮದಿಂದ ಪಠಿಸುವುದೇ ಸ್ತೋಮವೆನಿಸುವುದು. ಸ್ತೋಮಗಳಲ್ಲಿ **ತ್ರಿವೃತ್, ಪಂಚದಶಃ, ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುರ್ವಿಂಶಃ, ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ** ಎಂದು ಒಂಭತ್ತುವಿಧವಾದ ಸ್ತೋಮಗಳಿರುವವು. ತ್ರಿವೃತ್‌ಸ್ತೋಮದಲ್ಲಿ ತೃಚವನ್ನು ಬೇರೆ ಬೇರೆ ಕ್ರಮಗಳಲ್ಲಿ ಮೂರಾವರ್ತಿ ಪಠಿಸುವುದರಿಂದ ಈ ಸ್ತೋಮಕ್ಕೆ ತ್ರಿವೃತ್ಸ್ತೋಮವೆಂದು ಹೆಸರು. ಆದುದರಿಂದ ತ್ರಿವೃತ್ಸ್ತೋಮದ ಮೂರು ಪರ್ಯಾಯಗಳ ಒಟ್ಟು ಋಕ್ಕುಗಳ ಸಂಖ್ಯೆ ೯ ಆಗುವುದು. ಪಂಚದಶ ಮೊದಲಾದ ಸ್ತೋಮಗಳಲ್ಲಿ ಮೂರು ಪರ್ಯಾಯಗಳ ಹದಿನೈದು ಅಥವಾ ಹೆಚ್ಚಿನ ಸಂಖ್ಯೆಯ ಋಕ್ಕುಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಎಂದರೆ ಪಂಚದಶ ಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ಹದಿನೈದು ಋಕ್ಕುಗಳೂ ಸಪ್ತದಶಸ್ತೋಮದಲ್ಲಿ ಮೂರು ಪರ್ಯಾ

ಯುಗಳಿಂದ ಒಟ್ಟು ೧೭ ಋಕ್ಕುಗಳೂ ಇರುವವು, ಇತ್ಯಾದಿ. ಆದುದರಿಂದ ಋಕ್ಸಂಖ್ಯೆಗಳಿಗೆ ಅನುಸಾರವಾಗಿ ಸ್ತೋಮಗಳಿಗೆ ಆಯಾ ಹೆಸರು ಬಂದಿರುವುದು. ಪ್ರತಿಪರ್ಯಾಯದಲ್ಲಿಯೂ ಒಂದೇ ಸಂಖ್ಯೆಯ ಋಕ್ಕುಗಳಿರಬೇಕೆಂಬ ನಿಯಮವಿಲ್ಲ. ಮೂರು ಪರ್ಯಾಗಳಿಂದ ಕ್ಲೃಪ್ತಸಂಖ್ಯೆಯ ಋಕ್ಕುಗಳು ಆಯಾ ಸ್ತೋಮಗಳ ವಿಷ್ಟುತಿಗಳಲ್ಲಿರಬೇಕು. ಅವುಗಳ ವಿವರವು ಈ ರೀತಿ ಇದೆ—

| | | | | |
|---|---|---|---|---|
| (೧) | ತ್ರಿವೃತ್ಸ್ತೋಮವು— | ಮೂರು ಪರ್ಯಾಯಗಳಿಂದ ಒಟ್ಟು | ೯ | ಋಕ್ಕುಗಳು. |
| (೨) | ಪಂಚದಶಸ್ತೋಮವು | ,, | ೧೫ | ,, |
| (೩) | ಸಪ್ತದಶಸ್ತೋಮವು | ,, | ೧೭ | ,, |
| (೪) | ಏಕವಿಂಶಸ್ತೋಮವು | ,, | ೨೧ | ,, |
| (೫) | ತ್ರಿಣವಸ್ತೋಮವು | ,, | ೨೭ | ,, |
| (೬) | ತ್ರಯಸ್ತ್ರಿಂಶಸ್ತೋಮವು | ,, | ೩೩ | ,, |
| (೭) | ಚತುರ್ವಿಂಶಸ್ತೋಮವು | ,, | ೨೪ | ,, |
| (೮) | ಚತುಶ್ಚತ್ವಾರಿಂಶಸ್ತೋಮವು | ,, | ೪೪ | ,, |
| (೯) | ಅಷ್ಟಾಚತ್ವಾರಿಂಶಸ್ತೋಮವು | ,, | ೪೮ | ,, |

ಈ ರೀತಿ ೯ ಸ್ತೋಮಗಳ ಋಕ್ಸಂಖ್ಯೆಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಈ ಸಂಖ್ಯೆಯು ಸ್ತೋಮದಲ್ಲಿರುವ ಒಂದೊಂದು ವಿಷ್ಟುತಿಗೆ ಅನ್ವಯಿಸುವುದು ಎಂದು ತಿಳಿಯಬೇಕು. ಎಂದರೆ ತ್ರಿವೃತ್ಸ್ತೋಮದಲ್ಲಿ ಮೂರು ವಿಷ್ಟುತಿಗಳಿರುವುದರಿಂದ ಒಂದೊಂದು ವಿಷ್ಟುತಿಯ ಮೂರು ಪರ್ಯಾಯಗಳಿಗೂ ೯ ಋಕ್ಕುಗಳಿರುವುವೆಂದು ತಿಳಿಯಬೇಕು. ಒಟ್ಟು ಮೂರು ವಿಷ್ಟುತಿಗಳಿಂದ ಸೇರಿ ೯ ಋಕ್ಕುಗಳಲ್ಲಿ, ೨೭ ಋಕ್ಕುಗಳಾಗುವುವು. ಇತ್ಯಾದಿ.

ಪ್ರತಿಯೊಂದು ಸ್ತೋಮಕ್ಕೂ ಅನೇಕ ವಿಷ್ಟುತಿಗಳಿರುವುವೆಂದು ಹಿಂದೆಯೇ ಹೇಳಿರುವುದಷ್ಟೆ. ಅವುಗಳ ವಿವರವನ್ನು ಕೆಳಗೆ ಕೊಟ್ಟಿದೆ—

**I ತ್ರಿವೃತ್ಸ್ತೋಮಕ್ಕೆ—**

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳು.

**II ಪಂಚದಶಸ್ತೋಮಕ್ಕೆ—**

(೧) ಪಂಚಪಂಚಿನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

**III ಸಪ್ತದಶಸ್ತೋಮಕ್ಕೆ—**

(೧) ದಶಸಪ್ತಾ ಪ್ರಥಮಾ (೨) ದಶಸಪ್ತಾ ದ್ವಿತೀಯಾ (೩) ಸಪ್ತಸ್ಥಿತಾ ಪ್ರಥಮಾ (೪) ಸಪ್ತಸ್ಥಿತಾ ದ್ವಿತೀಯಾ (೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು ವಿಷ್ಟುತಿಗಳು.

IV **ಏಕವಿಂಶಸ್ತೋಮಕ್ಕೆ—**

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) ಸೂರ್ಮಿ ಎಂದು ನಾಲ್ಕು ವಿಷ್ಟುತಿಗಳು.

V **ತ್ರಿಣವಸ್ತೋಮಕ್ಕೆ—**

(೧) ಪ್ರತಿಷ್ಠಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು.

VI **ತ್ರಯಸ್ತ್ರಿಂಶಸ್ತೋಮಕ್ಕೆ—**

(೧) ಸಮತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು.

VII **ಚತುರ್ವಿಂಶಸ್ತೋಮಕ್ಕೆ—**

ಇದಕ್ಕೆ ಒಂದೇ ವಿಷ್ಟುತಿ ಇರುವುದು.

VIII **ಚತುಶ್ಚತ್ವಾರಿಂಶಸ್ತೋಮಕ್ಕೆ—**

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುತಿಗಳು.

IX **ಅಷ್ಟಾಚತ್ವಾರಿಂಶಸ್ತೋಮಕ್ಕೆ—**

(೧) ಪ್ರಥಮಾ (೨) ನೇದೀಯಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು.

ಒಟ್ಟು ಒಂಭತ್ತು ಸ್ತೋಮಗಳಿಗೆ ಮೂವತ್ತು ವಿಷ್ಟುತಿಗಳಿರುವುವು.

ಸ್ತೋಮಗಳಲ್ಲಿ ಮೇಲೆ ಹೇಳಿರುವ ಒಂಭತ್ತು ವಿಭಾಗಗಳನ್ನು ತ್ರಯೋದಶ, ಚತುರ್ದಶ, ಷೋಡಶ ಇತ್ಯಾದಿ ಆವಾಪಕ್ರಮದಿಂದ ಹೆಚ್ಚುಮಾಡಿಕೊಳ್ಳಬಹುದು. ಉದಾಹರಣೆಗೆ—

**ವಸವಸ್ತ್ರಯೋದಶಾಕ್ಷರೇಣ ತ್ರಯೋದಶಗ್ಂ ಸ್ತೋಮಮುದಜಯನ್ರುದ್ರಾಶ್ಚತುರ್ದಶಾಕ್ಷರೇಣ ಚತುರ್ದಶಗ್ಂ ಸ್ತೋಮಮುದಜಯನ್ನಾದಿತ್ಯಾಃ ಪಂಚದಶಾಕ್ಷರೇಣ ಪಂಚದಶಗ್ಂ ಸ್ತೋಮಮುದಜಯನ್ನದಿತಿಃ ಷೋಡಶಾಕ್ಷರೇಣ ಷೋಡಶಗ್ಂ ಸ್ತೋಮಮುದಜಯತ್ಪ್ರಜಾಪತಿಸ್ಸಪ್ತದಶಾಕ್ಷರೇಣ ಸಪ್ತದಶಗ್ಂ ಸ್ತೋಮಮುದಜಯತ್ ॥**

(ತೈ. ಸಂ. ೧-೭-೧೧-೪೪)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಿಂದ **ವಸುರುದ್ರಾದಿತ್ಯರೂ, ಅದಿತಿಯೂ, ಪ್ರಜಾಪತಿಯೂ** ಕ್ರಮವಾಗಿ **ತ್ರಯೋದಶ, ಚತುರ್ದಶ, ಪಂಚದಶ, ಷೋಡಷ, ಸಪ್ತದಶ** ಸ್ತೋಮಗಳನ್ನು ಗಳಿಸಿಕೊಂಡ ಕ್ರಮವನ್ನು ಹೇಳಿದೆ ಸ್ತೋಮಗಳ ಪ್ರಭಾವವು ಅತ್ಯಧಿಕವಾದುದು. ಇವುಗಳ ಪಠನದಿಂದ ಸಕಲವಾದ ಇಷ್ಟಾರ್ಥಗಳನ್ನೂ ಗಳಿಸಬಹುದು ಎಂಬ ವಿಷಯವೂ ತೈತ್ತಿರೀಯಸಂಹಿತೆಯಲ್ಲಿಯೇ ಪಠಿಸಲ್ಪಟ್ಟಿದೆ.

**ಪ್ರಾತಃಸವನೇ ವೈ ಗಾಯತ್ರೇಣ ಚ್ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ**

**ವೀರ್ಯೇಣ ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಗ್ಂಶಾಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ಸ್ತೋಮಾಯ ಜ್ಯೋತಿರ್ದಧದೇತ್ಯಥೋಸ್ತೋಮ ಏವ ಸ್ತೋಮಮಭಿಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾಸ್ತಾವಂತೋ ಲೋಕಾಸ್ತಾವಂತಿ ಜ್ಯೋತೀಗ್ಂಷ್ಯೇತಾವತ ಏವ ಸ್ತೋಮಾನೇತಾವತಃ ಕಾಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್ಂಷ್ಯವರುಂಧೇ ॥**

(ತೈ. ಸಂ. ೭-೧-೨-೧)

ಎಂಬ ಈ ವಾಕ್ಯಗಳಲ್ಲಿ ಅಗ್ನಿಷ್ಟೋಮದಲ್ಲಿ ಪಠಿಸಬೇಕಾದ ನಾಲ್ಕುವಿಧವಾದ ಸ್ತೋಮಗಳ ಪ್ರಭಾವವನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನಕಾಲದಲ್ಲಿ ಗಾಯತ್ರೀಚ್ಛಂದಸ್ಸಿನಿಂದ **ತ್ರಿವೃತ್ ಸ್ತೋಮವನ್ನು** ಮಹತ್ತ್ವದ ಸ್ಥಾನದಲ್ಲಿರಿಸುತ್ತಾನೆ. ಹೀಗೆಯೇ ಜ್ಯೋತೀರೂಪವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ ವೀರ್ಯಯುತವಾದ ಪಂಚದಶದಿಂದ ಸಪ್ತದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ ಪ್ರಜನನಕ್ಕೆ ಸಾಧವಾದ ಸಪ್ತದಶಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಮಯವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದುಬಗೆಯ ಸ್ತೋಮವು ಇನ್ನೊಂದುವಿಧವಾದ ಸ್ತೋಮಕ್ಕೆ ಪ್ರಭಾವವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟುಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟುಬಗೆಯ ತೇಜಸ್ಸುಗಳೂ ಅಷ್ಟೇವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮಪಠನದಿಂದ ಯಜಮಾನರು ಅಷ್ಟುವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ ಮತ್ತು ಇಷ್ಟಾರ್ಥಗಳನ್ನೂ ಪಡೆಯುವರು ಎಂದು ಸ್ತೋಮದ ಪ್ರಭಾವದನ್ನು ತಿಳಿಸಿ ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

**ಬ್ರಹ್ಮವಾದಿನೋ ವದಂತಿ ಸತ್ವೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್ಂಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕವಿಗ್ಂಶಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್ಂಶ್ಚ ತಸ್ಯ ನಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೀತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ॥**

(ತೈ. ಸಂ. ೭-೧-೩)

ಅಗ್ನಿಷ್ಟೋಮದಿಂದ ಯಜ್ಞಮಾಡತಕ್ಕವರು ಸರ್ವಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿದ್ದಾರೆ. ಈ ವಿಧಿಯಲ್ಲಿ **ತಿವೃತ್** ಸ್ತೋಮವನ್ನು ಬಿಟ್ಟುಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುವುದರಿಂದ ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದಿಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಸಪ್ತದಶಸ್ತೋಮವನ್ನು ಬಿಟ್ಟರೆ ಸಂತತಿಯಿಲ್ಲದೇ ಹೋಗುವುದರಿಂದಲೂ ಏಕವಿಂಶತಿಸ್ತೋಮವನ್ನು ಬಿಟ್ಟರೆ ತನ್ನಜೀವನಾಧಾರವೇ ಕಳಚಿಹೋಗುವುದರಿಂದಲೂ ತ್ರಿಣವಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕರಾಗದಿರುವುದರಿಂದಲೂ, ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರುವುದರಿಂದಲೂ ಸಹ ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ, ಸಂತತಿಲಾಭಕ್ಕಾಗಿ ಸಪ್ತದಶಸ್ತೋಮದಿಂದಲೂ, ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ, ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ, ತನ್ನ ಮುಖ್ಯದೇವತಾಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್‌ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ, ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ.

ಹೀಗೆಯೇ, **ಪೃಷ್ಠ್ಯಷಡಹ** ಯಾಗದಲ್ಲಿ ಆರುದಿನಗಳಲ್ಲಿಯೂ ಕ್ರಮವಾಗಿ ಪಠಿಸಬೇಕಾದ ತ್ರಿವೃದಾದಿ ಸ್ತೋಮಗಳ ಮಹಿಮೆಯನ್ನು ವರ್ಣಿಸುತ್ತಾ,

> **ತ್ರಿವೃದಗ್ನಿಷ್ಟೋಮೋ ಭವತಿ ತೇಜ ಏವಾವರುಂಧತೇ ಪಂಚದಶೋ ಭವತೀಂದ್ರಿಯಮೇವಾ-ವರುಂಧತೇ ಸಪ್ತದಶೋ ಭವತ್ಯನ್ನಾದಸ್ಯಾವರುದ್ಧ್ಯಾ ಅಥೋ ಪ್ರೈವ ತೇನ ಜಾಯಂತ ಏಕವಿಗ್‌ಂಶೋ ಭವತಿ ಪ್ರತಿಷ್ಠಿತ್ಯಾ ಅಥೋ ರುಚಮೇವಾತ್ಮನ್ದಧತೇ ತ್ರಿಣವೋ ಭವತಿ ವಿಜಿತ್ಯೈ ತ್ರಯಸ್ತ್ರಿಗ್‌ಂಶೋ ಭವತಿ ಪ್ರತಿಷ್ಠಿತ್ಯೈ ||**

ತ್ರಿವೃತ್‌ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ ಪಂಚದಶಸ್ತೋಮದಿಂದ ವೀರ್ಯವನ್ನೂ ಸಪ್ತದಶದಿಂದ ಅನ್ನವನ್ನೂ ಏಕವಿಗ್‌ಂಶದಿಂದ ಪ್ರತಿಷ್ಠೆಯನ್ನೂ ತ್ರಿಣವದಿಂದ ಜಯವನ್ನೂ ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ ಎಂದೂ ಸಹ ಸ್ತೋಮಪಠನದ ಪ್ರಯೋಜನಗಳನ್ನು ತಿಳಸಿದೆ. ಕಠೋಪನಿಷತ್ತಿನಲ್ಲಿಯೂ ಸಹ,

> **ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯ-ಸ್ರಾಕ್ಷೀಃ ||** (ಕ. ಉ. ೨-೧೧)

ಎಂಬ ವಾಕ್ಯದಿಂದ ಸ್ತೋಮದ ಮಹತ್ತ್ವವನ್ನೂ ಆದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತಿಳಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿ,

> **ಯೇನ ಛಂದಸಾ ಸ್ತೋಷ್ಯನ್ ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯ-ಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ||**

(ಛಾ. ಉ. ೧-೩-೧೦)

ಎಂಬ ವಾಕ್ಯದಿಂದ **ಉದ್ಗೀಥದ** ಮಹತ್ತ್ವವನ್ನು ವರ್ಣಿಸುತ್ತಾ ಯಾವ **ಸ್ತೋಮ**ದಿಂದ ಆಯಾ ಸನ್ನಿವೇಶಕ್ಕನು ಗುಣವಾಗಿ ಸ್ತುತಿಕರ್ತನ ಸ್ತೋತ್ರವು ಪೂರ್ಣವಾಗಿರುತ್ತದೆಯೋ ಅಂತಹ ಸ್ತೋಮವನ್ನೇ ಆಶ್ರಯಿಸಿ ಪುರುಷನು ಧ್ಯಾನಮಾಡಬೇಕೆಂದು ವಿಧಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಸ್ತೋಮಾಃ** ಎನ್ನುವುದರಿಂದ ಇಂತಹ ಗಾನಾತ್ಮಕವಾದುದೂ ಅತಿಶಯವಾದ ಪ್ರಯೋಜನವನ್ನು ಕೊಡತಕ್ಕದ್ದೂ ಆದ ಸ್ತೋತ್ರವೆಂದರ್ಥ.

ಸೂರ್ಯಾವಿವಾಹದ ವಿಷಯದಲ್ಲಿ ಭಾಷ್ಯಕಾರರು ಐತರೇಯಬ್ರಾಹ್ಮಣದಲ್ಲಿರುವ ಒಂದು ಪೂರ್ವೇತಿಹಾಸ ವನ್ನು ಇಲ್ಲಿ ಉದಾಹರಿಸಿದಾರೆ. ಪೂರ್ವದಲ್ಲಿ ಪ್ರಜಾಪತಿಯು ತನ್ನ ಪುತ್ರಿಯಾದ ಸೂರ್ಯಾದೇವಿಯನ್ನು ಸೋಮ ರಾಜನಿಗೆ ವಿವಾಹಮಾಡಿಕೊಡುವುದಕ್ಕಾಗಿ ಒಂದು ಸ್ವಯಂವರವನ್ನೇರ್ಪಡಿಸಿದನು. ಆಕಾಲದಲ್ಲಿ ಆ ಸೂರ್ಯೆಯನ್ನು ಪಡೆಯಬೇಕೆಂಬ ಇಚ್ಛೆಯಿಂದ ಅನೇಕ ದೇವತೆಗಳು ಅಲ್ಲಿಗೆ ಬಂದರು. ಆಗ ಅವರವರಲ್ಲಿಯೇ ಸ್ಪರ್ಧೆಯುಂಟಾ ಯಿತು. ಅದನ್ನು ತಮ್ಮಲ್ಲಿಯೇ ಬಗೆಹರಿಸಿಕೊಳ್ಳಬೇಕೆಂದು ಒಂದು ಸ್ಪರ್ಧೆಯನ್ನೇರ್ಪಡಿಸಿ ಅದರಲ್ಲಿ ಗೆದ್ದವರು ಸೂರ್ಯೆಯನ್ನು ವಿವಾಹವಾಗತಕ್ಕದ್ದೆಂದು ತೀರ್ಮಾನಿಸಿ ಅದರಂತೆ ಮಾಡಿದರು ಅದನ್ನೇ ಇಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ—

ಆಶ್ವಿನಶಸ್ತ್ರಮಂತ್ರಗಳ ಸ್ವರೂಪವನ್ನು ವಿವರಿಸುವುದಕ್ಕಾಗಿ ಐತರೇಯಬ್ರಾಹ್ಮಣದಲ್ಲಿ ಸೂರ್ಯಾದೇವಿಯ ವಿವಾಹವನ್ನು ಪೀಠಿಕಾರೂಪವಾಗಿ ವಿವರಿಸಿದೆ. ಏಕೆಂದರೆ ಸೂರ್ಯಾದೇವಿಯ ವಿವಾಹಕಾಲದಲ್ಲಿ ಪ್ರಜಾಪತಿಯು ಈ ಮಂತ್ರಗಳನ್ನು ತನ್ನ ಪುತ್ರಿಗೆ ವಿವಾಹಕಾಲದಲ್ಲಿ ಬಳುವಳಿಯಾಗಿ ಕೊಟ್ಟಿರುವುದೆಂದು ಹೇಳಿ ಆ ಕಾರಣಕ್ಕಾಗಿ ಇಲ್ಲಿ ಸೂರ್ಯಾದೇವಿಯ ವಿವಾಹದ ಪ್ರಸ್ತಾಪಮಾಡಲಾಗಿದೆ—

> **ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತ-ದಾಶ್ವಿನಮಿತ್ಯಾಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ಹೈವ ಶಂಸೇದ್ಭೂಯೋ ವಾ ॥**
>
> (ಐ. ಬ್ರಾ. ೧೭-೭)

ಪೂರ್ವದಲ್ಲಿ ಪ್ರಜಾಪತಿಯು ಸವಿತೃಪುತ್ರಿಯಾದ ಸೂರ್ಯಾ ಎಂಬ ಕನ್ಯೆಯನ್ನು ಸೋಮನೆಂಬ ವರನಿಗೆ ವಿವಾಹ ಮಾಡಿಕೊಡಲು ಉದ್ಯುಕ್ತನಾದನು. ಸೂರ್ಯೆಯು ಸವಿತೃದೇವನ ಪುತ್ರಿಯಾಗಿದ್ದರೂ ಸ್ನೇಹಾತಿಶಯದಿಂದ ಇಲ್ಲಿ ಪ್ರಜಾಪತಿಯ ಪುತ್ರಿಯೆಂದೇ ವರ್ಣಿಸಲಾಗಿದೆ. ಈ ವಿವಾಹವಿಚಾರವನ್ನು ತಿಳಿದು ಆ ಕನ್ಯೆಯನ್ನು ವಿವಾಹಮಾಡಿ ಕೊಳ್ಳಲು ಅಪೇಕ್ಷಿಸಿ ಇತರ ದೇವತೆಗಳೆಲ್ಲರೂ ಪ್ರಜಾಪತಿಯ ಬಳಿಗೆ ಬಂದು ಸೇರಿದರು. ಆಗ ಪ್ರಜಾಪತಿಯು ವರಪರೀಕ್ಷೆ ಗಾಗಿ, ಒಂದು ನಿರ್ಣಯವನ್ನು ಮಾಡಿದನು. ವಿವಾಹಕಾರ್ಯದಲ್ಲಿ ವಧುವಿನ ಅಲಂಕಾರಾರ್ಥವಾಗಿ ಅರಸಿನ, ಬೆಲ್ಲ ಮೊದಲಾದ ಮಂಗಳದ್ರವ್ಯಗಳನ್ನು ತಂದಿಡುವರಷ್ಟೆ. ಆ ಮಂಗಳದ್ರವ್ಯದ ಪ್ರತೀಕವಾಗಿ ಪ್ರಜಾಪತಿಯು ಒಂದು ಸಹಸ್ರ ಋಕ್ಕುಗಳನ್ನು ವರನಾಗುವವನು ಪಠಿಸಬೇಕೆಂದು ನಿಶ್ಚಯಮಾಡಿದನು. ಈ ಋಕ್ಕುಗಳಿಗೆ ಆಶ್ವಿನಸಹಸ್ರವೆಂದು ಹೆಸರು. ಸೂರ್ಯಾದೇವಿಯ ವರನಾಗಬಯಸುವವನು ಈ ಸಹಸ್ರ ಋಕ್ಕುಗಳನ್ನೆಲ್ಲಾ ಒಬ್ಬನೇ ಪಠಿಸಬೇಕು. ಆ ರೀತಿ ಪಠಿಸಬಲ್ಲವನು ಮಾತ್ರ ಸೂರ್ಯೆಯನ್ನು ವಿವಾಹವಾಗಬಹುದು. ಅವನಿಗೆ ಮಾತ್ರ ನಾನು ಸೂರ್ಯಾ ದೇವಿಯನ್ನು ಮದುವೆಮಾಡಿಕೊಡುವೆನು ಎಂದು ಪ್ರಜಾಪತಿಯು ದೇವತೆಗಳ ಎದುರಿಗೆ ಪ್ರತಿಜ್ಞೆಮಾಡಿದನು.

ಈ ಸಹಸ್ರ ಋಕ್ಕುಗಳಿಗೆ ಆಶ್ವಿನಶಸ್ತ್ರಮಂತ್ರವೆಂದು ಹೆಸರು. ಇದರಲ್ಲಿ ಸಹಸ್ರ ಸಂಖ್ಯೆಗಿಂತ ಕಡಿಮೆ ಋಕ್ಕುಗಳಿರ ಕೂಡದು. ಸಹಸ್ರಸಂಖ್ಯೆ ಇರಬೇಕು. ಒಂದುವೇಳೆ ಹೆಚ್ಚಾಗಿದ್ದರೂ ಬಾಧಕವಿಲ್ಲ, ಕಡಿಮೆಮಾತ್ರ ಇರಕೂಡದು. ಆದ್ದರಿಂದ ಈ ಕ್ರಮವನ್ನನುಸರಿಸಿ ಯಜ್ಞದಲ್ಲಿ ಈಗಲೂ ಹೋತೃವು ಸಹಸ್ರಸಂಖ್ಯೆಯ ಋಕ್ಕುಗಳನ್ನು ಪಠಿಸುವುದು ರೂಢಿಯಾಗಿದೆ.

**ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಕ್ತೋ ವರ್ತತ ಏವಂ ಹೈವಾಕ್ತೋ ವರ್ತತೇ ಶಕುನಿರಿವೋತ್ಪತಿಷ್ಯನ್ನಾಹ್ವಯೀತ ॥** (ಐ. ಬ್ರಾ. ೧೭-೭)

ಈ ಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಹೋತೃವು ಸ್ವಲ್ಪ ಘೃತ (ತುಪ್ಪ) ವನ್ನು ಭಕ್ಷಿಸಬೇಕು. ಲೋಕವ್ಯವಹಾರದಲ್ಲಿ ಗಾಡಿ ಅಥವಾ ರಥದ ಚಕ್ರಗಳು ಅನಾಯಾಸವಾಗಿ ತಡೆಯಿಲ್ಲದೆ ಸರಸರನೆ ಉರುಳುವುದಕ್ಕಾಗಿ ಆ ಚಕ್ರದ ರಂಧ್ರದಲ್ಲಿ ಕಪ್ಪುಮಿಶ್ರಿತವಾದ ಎಣ್ಣೆಯನ್ನು ಹಾಕುವ ರೂಢಿ ಇದೆಯಷ್ಟೆ. ಇದರಿಂದ ಚಕ್ರದ ಚಲನೆಯು ಸುಲಭವಾಗಿ ಆಗುವುದು. ಅದರಂತೆಯೇ ಬಾಯಿಯಿಂದ ಮಂತ್ರೋಚ್ಚಾರಣೆಯು ಸುಲಭವಾಗಿ ಆಗುವುದಕ್ಕಾಗಿ ಘೃತವನ್ನು ಭಕ್ಷಿಸಬೇಕು ಎಂದು ಹೇಳಿದೆ. ಮತ್ತು **ಶಕುನಿಃ** ಎಂಬ ಪಕ್ಷಿಯು ದೂರಪ್ರದೇಶಕ್ಕೆ ಹಾರಿಹೋಗುವುದಕ್ಕಾಗಿ ತನ್ನ ಕಾಲುಗಳ ಹಿಮ್ಮಡಿಯ ಮೇಲೆ ತನ್ನ ಶರೀರದ ಭಾರವನ್ನು ಬಿಟ್ಟು ಹಾರುವುದಕ್ಕಾಗಿ ಸಜ್ಜುಗೊಳ್ಳುವಂತೆ ಮಂತ್ರವನ್ನು ಪಠಿಸುವ ಹೋತೃವೂ ಸಹ ಅಗ್ನಿಯ ಸಮೀಪದಲ್ಲಿ ತನ್ನ ಮೊಳಕಾಲುಗಳನ್ನು ಮಡಿಸಿ ಹಿಮ್ಮಡಿಯ ಮೇಲೆ (ಅಂಗುಷ್ಠಗಳು ಭೂಮಿಯನ್ನು ಸೋಕುವಂತೆ) ಶರೀರದ ಭಾರವನ್ನು ಇರಿಸಿ ಹಾರಿಹೋಗುವ ಪಕ್ಷಿಯ ಆಕಾರ ದಂತೆ ಶರೀರವನ್ನು ಪರಿವರ್ತಿಸಿ ಆಹಾವ ಮಂತ್ರಗಳನ್ನು ಪಠಿಸಲು ಪ್ರಾರಂಭಿಸಬೇಕು. ಈ ವಿಷಯದಲ್ಲಿ ಆಶ್ವಲಾಯನ ಮಹರ್ಷಿಯು—**ಪ್ರಾಶ್ಯ ಪ್ರತಿಪ್ರಸೃಪ್ಯ ಪಶ್ಚಾತ್ಸ್ವಸ್ಯ ಧಿಷ್ಣ್ಯಸ್ಯೋಪವಿಶೇತ್ಸಮಸ್ತಜಂಘೋರುರತ್ನಿಭ್ಯಾಂ ಜಾನುಭ್ಯಾಂ ಚೋಪಸ್ಥಂ ಕೃತ್ವಾ ಯಥಾ ಶಕುನಿರುತ್ಪತಿಷ್ಯನ್ನುಪಸ್ಥಕೃತಸ್ತ್ವೇವಾಶ್ವಿನಂ ಶಂಸೇತ್**— ಎಂದು ಹೇಳಿರುವರು.

**ತಸ್ಮಿನ್ದೇವಾ ನ ಸಮಜಾನತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರುವನ್ನಾಜಿಮಸ್ಯಾಯಾಮಹೈ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇವಾಧಿ ಗೃಹಪತೇರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯೀ ಪ್ರತಿಪದ್ಭವ-ತ್ಯಾಶ್ವಿನಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ॥**

ಪ್ರಜಾಪತಿಯು ನೀಡಿದ ಸಾವಿರ ಋಕ್ಕುಗಳನ್ನು ತೆಗೆದುಕೊಳ್ಳುವಾಗ (ಪಠಿಸುವಾಗ) ದೇವತೆಗಳು ತಮ್ಮಲ್ಲಿ ಒಮ್ಮತವಿಲ್ಲದೆ ಇದು ನನಗೆ ಬೇಕು, ತನಗೆ ಬೇಕು ಎಂದು ಪರಸ್ಪರ ವಿವಾದಮಾಡುತ್ತಾ ವಿವಾದವು ಬಗೆಹರಿಯದಿರಲು, ಕೊನೆಗೆ ಅವರು ತಮ್ಮಲ್ಲಿಯೇ ಆಲೋಚಿಸಿ, ಒಂದು ಒಪ್ಪಂದಕ್ಕೆ ಬಂದರು. ತಾವೆಲ್ಲರೂ ಒಂದು ಸ್ಪರ್ಧೆಯನ್ನು ಏರ್ಪಡಿಸಿ ಇದರಲ್ಲಿ ಗೆದ್ದವರು ಆ ಋಕ್ಕುಗಳನ್ನು ಪಡೆಯಬಹುದೆಂದು ನಿರ್ಧಾರವಾಯಿತು. ಆ ಗಾರ್ಹಪತ್ಯಾಗ್ನಿಯಿಂದ ಮೇಲಕ್ಕೆ ಹೊರಟು ಸೂರ್ಯನ ಬಳಿಗೆ ಓಡಿಹೋಗುವುದೇ ಸ್ಪರ್ಧೆಯೆಂದೂ, ಯಾರು ಮೊದಲು ನಿರ್ದಿಷ್ಟಸ್ಥಳವನ್ನು ಸೇರುವರೋ ಅವರೇ ಗೆದ್ದಂತೆ ಭಾವಿಸಬೇಕೆಂತಲೂ ನಿಷ್ಕರ್ಷೆಯಾಯಿತು. ಈ ಕಾರಣಕ್ಕಾಗಿಯೇ ಆಶ್ವಿನಶಸ್ತ್ರಮಂತ್ರಗಳು ಅಗ್ನಿದೇವತಾಕವಾದ **ಅಗ್ನಿರ್ಹೋತಾ ಗೃಹಪತಿಃ** (ಋ. ಸಂ. ೬-೧೫-೧೩) ಎಂಬ ಮಂತ್ರಗಳಿಂದಲೇ ಪ್ರಾರಂಭ ವಾಗುವುದು.

**ತದ್ಧೈಕ ಆಹುರಗ್ನಿಂ ಮನ್ಯೇ ಪಿತರಮಗ್ನಿಮಾಪಿಮಿತ್ಯೇತಯಾ ಪ್ರತಿಪದ್ಯೇತ ದಿವಿ ಶುಕ್ರಂ ಯಜತಂ ಸೂರ್ಯಸ್ಯೇತಿ ಪ್ರಥಮಯೈವ ಋಚಾ ಕಾಷ್ಠಾಮಾಪ್ನೋತೀತಿ ತತ್ತನ್ನಾದೃತ್ಯಂ ಯ ಏನಂ ತತ್ರ ಬ್ರೂಯಾದಗ್ನಿಮಿತಿ ವೈ ಪ್ರತ್ಯಪಾದ್ಯಗ್ನಿಮಾಪತ್ಸ್ಯತೀತಿ ಶಶ್ವತ್ತಥಾ ಸ್ಯಾತ್॥**

(ಐ.ಬ್ರಾ. ೧೭–೭)

ಈ ವಿಷಯದಲ್ಲಿ ಕೆಲವರು ಯಾಜ್ಞಿಕರು ಆಶ್ವಿನಶಸ್ತ್ರಮಂತ್ರಗಳನ್ನು **ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಂ** (ಋ. ಸಂ. ೧೦–೭–೩) ಎಂಬ ಋಕ್ಕಿನಿಂದ ಪ್ರಾರಂಭಿಸಬೇಕೆಂದು ಹೇಳುವರು. ಆದರೆ ಅದು ಸರಿಯಲ್ಲ. ಈ ಆಶ್ವಿನ ಶಸ್ತ್ರಮಂತ್ರವಾದ ಈ ಮೊದಲನೆಯ ಋಕ್ಕಿನಲ್ಲಿಯೇ ನಾಲ್ಕನೆಯ ಪಾದದಲ್ಲಿ **ದಿವಿ ಶುಕ್ರಂ ಯಜತಂ ಸೂರ್ಯಸ್ಯ** ಎಂದಿರುವುದು. ಸ್ಪರ್ಧೆಯಲ್ಲಿ ಅಂತಿಮನಿರ್ದಿಷ್ಟಸ್ಥಾನವಾದ ಸೂರ್ಯನ ಹೆಸರು ಮೊದಲ ಮಂತ್ರದಲ್ಲಿಯೇ ಇರುವುದು ಸರಿಯಲ್ಲ. ಸ್ಪರ್ಧೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆಯೇ ಕೊನೆಮುಟ್ಟಿತೆಂದು ಹೇಳುವುದು ಸಮಂಜಸವಲ್ಲ. ಇದಲ್ಲದೆ ನಾಲ್ಕುಸಲ ಅಗ್ನಿಯೆಂಬ ಪದವಿರುವುದೂ ಸರಿಯಲ್ಲ. ಒಂದು ದೇವತೆಯನ್ನು ನಿರ್ದೇಶಿಸುವಾಗ ಆ ದೇವತೆಯ ವೈಯಕ್ತಿಕವಾದ ಗುಣವರ್ಣನೆ ಇರಬೇಕೇ ವಿನಹ ಸ್ಪಷ್ಟವಾಗಿ ಆ ದೇವತೆಯ ಪ್ರತ್ಯಕ್ಷವಾದ ನಾಮನಿರ್ದೇಶವು ಇರಬಾರದು. ಯಾವನಾದರೂ ವಿವೇಕಿಯಾದ ಪುರುಷನು ಬಂದು ಈ ಹೋತೃವು ಪ್ರಥಮ ಋಕ್ಕಿನಲ್ಲಿಯೇ ನಾಲ್ಕು ಸಲ ಅಗ್ನಿಯ ಹೆಸರನ್ನು ಪಠಿಸುತ್ತಿರುವನಲ್ಲಾ. ಇದರಿಂದ ಇವನು ದಗ್ಧನಾಗುವನು ಎಂದು ಶಪಿಸಿದ್ದೇ ಆದರೆ ಹಾಗೇ ಆಗುವುದುಂಟು.

**ತಸ್ಮಾದಗ್ನಿರ್ಹೋತಾ ಗೃಹಪತಿಃ ಸ ರಾಜೇತ್ಯೇತಯೈವ ಪ್ರತಿಪದ್ಯೇತ ಗೃಹಪತಿವತೀ ಪ್ರಜಾತಿಮತೀ ಶಾಂತಾ ಸರ್ವಾಯುಃ। ಸರ್ವಾಯುತ್ವಾಯ ಸರ್ವಮಾಯುರೇತಿ ಏವಂ ವೇದ॥**

(ಐ. ಬ್ರಾ. ೧೭-೭)

ಆದ್ದರಿಂದ ಹೋತೃವು— **ಅಗ್ನಿರ್ಹೋತಾ ಗೃಹಪತಿಃ ಸ ರಾಜಾ** ಎಂಬ ಋಕ್ಕಿನಿಂದಲೇ ಆಶ್ವಿನಶಸ್ತ್ರಮಂತ್ರಗಳನ್ನು ಪ್ರಾರಂಭಿಸಬೇಕು. ಏಕೆಂದರೆ ಈ ಋಕ್ಕಿನ ಪ್ರಾರಂಭದಲ್ಲಿ ಗೃಹಪತಿಃ ಎಂಬ ಶಬ್ದವಿದೆ. ಆದ್ದರಿಂದ ಅಗ್ನಿಯು ಗೃಹಕ್ಕೆ ಒಡೆಯನಾಗಿದಾನೆ ಎಂಬುದೂ, ಹಾಗೆಯೇ ಎರಡನೆಯ ಪಾದದಲ್ಲಿರುವ **ವಿಶ್ವಾವೇದ ಜನಿಮ**—ಸಮಸ್ತ ಪ್ರಾಣಿಗಳ ಜನನರೂಪವಾದ ಜ್ಞಾನಕಥನವೂ, ಯಜ್ಞಮಾಡುವ ಯಜಮಾನನಿಗೆ ಗೃಹ, ಪ್ರಜಾಸಂತತಿ, ಶಾಂತವಾದ ವಾತಾವರಣ ಮೊದಲಾದವುಗಳನ್ನು ಕಲ್ಪಿಸುವುದಲ್ಲದೆ ದೀರ್ಘಾಯುವಾಗಿಯೂ ಜೀವಿಸುವನು ಎಂದು ಸೂಚಿತವಾಗುವುದು. ಆದ್ದರಿಂದ ಈ ವಿಷಯವನ್ನು ತಿಳಿದವನೂ ಸಹ ದೀರ್ಘಾಯುವಾಗಿ ಬಾಳುವನು.

**ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ಶಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ॥** (ಐ. ಬ್ರಾ. ೧೭-೮)

ಸ್ಪರ್ಧೆಯು ನಿಷ್ಕರ್ಷೆಯಾದ ಮೇಲೆ ದೇವತೆಗಳೆಲ್ಲರೂ ಗಾರ್ಹಪತ್ಯಾಗ್ನಿಯ ಸಮೀಪದಿಂದ ಹೊರಟು ಸೂರ್ಯಾಭಿಮುಖವಾಗಿ ಓಡಲು ಉಪಕ್ರಮಿಸಿದರು. ಒಬ್ಬೊಬ್ಬರು ಒಂದೊಂದು ಮಾರ್ಗವನ್ನನುಸರಿಸಿ ಓಡುತ್ತಿರುವಾಗ ಅಗ್ನಿಯು

ತಾನೇ ಎಲ್ಲರಿಗೂ ಮುಂದಾಗಬೇಕೆಂದು ನೇರವಾದ ಮಾರ್ಗದಲ್ಲಿಯೇ ಓಡುತ್ತಿದ್ದನು. ಈ ಅಗ್ನಿಯ ಹಿಂದೆಯೆ ಸಮೀಪದಲ್ಲಿ ಓಡಿಬರುತ್ತಿದ್ದ ಅಶ್ವಿನೀದೇವತೆಗಳು ಅಗ್ನಿಯನ್ನು ಕುರಿತು, ಎಲೈ ಅಗ್ನಿಯೇ, ಸ್ವಲ್ಪ ತಾಳು, ನಮಗೆ ದಾರಿಯನ್ನು ಬಿಟ್ಟು ಪಕ್ಕಕ್ಕೆ ಸರಿ. ನಾವು ಬೇಗನೆ ಹೋಗಿ ಗೆಲ್ಲುವೆವು ಎನ್ನಲಾಗಿ ಅಗ್ನಿಯು ಒಳ್ಳೇದು, ನಾನು ನಿಮಗೆ ದಾರಿಯನ್ನು ಬಿಟ್ಟುಕೊಟ್ಟು ನಿಮಗೆ ಗೆಲ್ಲಲು ಸಹಾಯಮಾಡಿದರೆ ನೀವು ಗೆಲ್ಲುವ ಶಸ್ತ್ರಮಂತ್ರಗಳಲ್ಲಿ ನನಗೂ ಭಾಗಕೊಡಬೇಕು ಎಂದನು. ಅಶ್ವಿನೀದೇವತೆಗಳು ಅದಕ್ಕೊಪ್ಪಿ ಅಗ್ನಿಯಿಂದ ದಾರಿಯನ್ನು ಬಿಡಿಸಿಕೊಂಡು ಮುಂದು ವರೆದರು. ಈ ಕಾರಣಕ್ಕಾಗಿಯೇ ಆಶ್ವಿನಶಸ್ತ್ರಮಂತ್ರಗಳಲ್ಲಿ ಅಗ್ನಿಪರವಾದ ಅನೇಕ ಮಂತ್ರಗಳಿರುವವು

**ತಾ ಉಷಸಮನ್ವಾಗಚ್ಛತಾಂ ತಾಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜ್ಯೇಷ್ಯಾವ ಇತಿ ಸಾ ತಥೇತ್ಯಬ್ರವೀತ್ತಸ್ಯೈ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಯಾ ಅಪ್ಯತ್ರಾಕುರುತಾಂ ತಸ್ಮಾದುಷಸ್ಯಮಾಶ್ವಿನೇ ಶಸ್ಯತೇ ||** (ಐ. ಬ್ರಾ. ೧೭-೮)

ಇನ್ನು ಸ್ವಲ್ಪದೂರ ಹೋದಮೇಲೆ ತಮ್ಮ ಮುಂದೆ ಉಷೋದೇವತೆಯು ಓಡುತ್ತಿರುವುದು ಕಂಡುಬಂದಿತು. ಆಗ ಅಶ್ವಿನೀ ದೇವತೆಗಳು ಉಷೋದೇವತೆಯನ್ನುದ್ದೇಶಿಸಿ, ಎಲೈ ಉಷಸ್ಸೇ, ಓಡುತ್ತಿರುವ ನಮಗೆ ದಾರಿಬಿಟ್ಟು ಪಕ್ಕಕ್ಕೆ ಸರಿ ಎನ್ನಲು, ಉಷೋದೇವತೆಯು–ನೀವು ಗೆಲ್ಲುವ ಆಶ್ವಿನಶಸ್ತ್ರಮಂತಗಳಲ್ಲಿ ನನಗೂ ಒಂದು ಭಾಗವನ್ನು ಕೊಡುವುದಾದರೆ ದಾರಿಯನ್ನು ಬಿಡುತ್ತೇನೆನ್ನಲು, ಅಶ್ವಿನೀ ದೇವತೆಗಳು ಹಾಗೆಯೇ ಆಗಲೆಂದೊಪ್ಪಿಮುಂದುವರೆದರು. ಈ ಕಾರಣದಿಂದಲೇ ಆಶ್ವಿನಶಸ್ತ್ರಮಂತ್ರಗಳಲ್ಲಿ ಉಷೋದೇವತಾಕವಾದ ಅನೇಕ ಮಂತ್ರಗಳಿರುವವು.

**ತಾವಿಂದ್ರಮನ್ವಾಗಚ್ಛತಾಂ ತಮಬ್ರೂತಾಮಾವಾಂ ವಾ ಇದಂ ಮಘವಾಞ್ಜ್ಯೇಷ್ಯಾವ ಇತಿ ನ ಹ ತಂ ದಧೃಷತುರಪೋದಿಹೀತಿ ವಕ್ತುಂ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಯಾ ಅಪ್ಯತ್ರಾಕುರುತಾಂ ತಸ್ಮಾದೈಂದ್ರಮಾಶ್ವಿನೇ ಶಸ್ಯತೇ ||**

(ಐ. ಬ್ರಾ. ೧೭-೮)

ಸ್ವಲ್ಪಮುಂದೆ ಹೋಗಲಾಗಿ ತಮ್ಮ ಮುಂದೆ ಇಂದ್ರನಿರುವುದನ್ನು ಕಂಡರು. ಆದರೆ ಇಂದ್ರನು ದೇವತೆಗಳಿಗೆ ಸ್ವಾಮಿ ಯಾದ್ದರಿಂದ ಇತರದೇವತೆಗಳಿಗೆ ಹೇಳಿದಂತೆ ದೂರ ಸರಿ ಅಥವಾ ಪಕ್ಕಕ್ಕೆ ಸರಿ ಎಂದು ಹೇಳಲು ಅವರಿಗೆ ಧೈರ್ಯವಿಲ್ಲ ವಾಯಿತು. ಆದ್ದರಿಂದ ಅವರು ವಿನಯದಿಂದಲೇ ಇಂದ್ರನನ್ನುದ್ದೇಶಿಸಿ-ಎಲೈ ಇಂದ್ರನೇ, ನಾವು ಈ ಸ್ಪರ್ಧೆಯನ್ನು ಗೆಲ್ಲಬೇಕೆಂದಿರುವೆವು. ನೀನು ಪಕ್ಕಕ್ಕೆ ಸರಿದು ದಾರಿಮಾಡಿಕೊಟ್ಟರೆ ನಮಗೆ ಸಹಾಯಮಾಡಿದಂತಾಗುವುದು ಎಂದು ಹೇಳಲು ಅದಕ್ಕೆ ಇಂದ್ರನು ನೀವು ಗೆಲ್ಲುವ ಆಶ್ವಿನಮಂತ್ರಗಳಲ್ಲಿ ನನಗೂ ಒಂದು ಭಾಗವನ್ನು ಕೊಡುವುದಾದರೆ ನಿಮ್ಮ ಮಾತಿಗೆ ಒಪ್ಪುವೆನೆಂದನು. ಅಶ್ವಿನೀದೇವತೆಗಳು ಅದಕ್ಕೆ ಸಮ್ಮತಿಸಿದರು. ಈ ಕಾರಣದಿಂದಲೇ ಆಶ್ವಿನಶಸ್ತ್ರ ಮಂತ್ರಗಳಲ್ಲಿ ಇಂದ್ರನನ್ನು ಸ್ತುತಿಸುವ ಮಂತ್ರಗಳೂ ಇವೆ.

**ತದಶ್ವಿನಾ ಉದಜಯತಾಮಶ್ವಿನಾವಾಶ್ನುವತಾಂ ಯದಶ್ವಿನಾ ಉದಜಯತಾಮಶ್ವಿನಾ- ವಾಶ್ನುವತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ಅಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ||** (ಐ. ಬ್ರಾ. ೧೭-೮)

ಅನಂತರ ಅಶ್ವಿನೀದೇವತೆಗಳು ಮುಂದೆ ಓಡುತ್ತಾ ಯಾವವಿಧವಾದ ತೊಂದರೆಯೂ ಇಲ್ಲದೆ ಅಂತಿಮ ನಿರ್ದಿಷ್ಟ ಸ್ಥಾನವಾದ ಸೂರ್ಯನನ್ನು ಹೋಗಿ ಸೇರಿದರು. ಆದ್ದರಿಂದ ಈ ಅಶ್ವಿನೀದೇವತೆಗಳೇ ಈ ಸ್ಪರ್ಧೆಯನ್ನು ಗೆದ್ದಂತಾ

ಯಿತು. ಅಶ್ವಿನೀದೇವತೆಗಳು ಈ ಮಂತ್ರಗಳನ್ನು ಸ್ಪರ್ಧೆಯಲ್ಲಿ ಗೆದ್ದದ್ದರಿಂದ ಈ ಮಂತ್ರಗಳಿಗೆ ಆಶ್ವಿನಶಸ್ತ್ರ ಮಂತ್ರಗಳೆಂದು ಹೆಸರಾಯಿತು. ಈ ವಿವರವನ್ನು ತಿಳಿಯುವ ಪುರುಷನು ತನಗೆ ಬೇಕಾದ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು.

**ತದಾಹುರ್ಯದ್ಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ಕಸ್ಮಾದೇತದಾಶ್ವಿನ-ಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ಅಶ್ನುತೇ ಯದ್ಯ-ತ್ಕಾಮಯತೇ ಯ ಏವಂ ವೇದ ॥**

(ಐ. ಬ್ರಾ. ೧೭-೮)

ಕೆಲವರು ಹೀಗೆಂದು ಆಕ್ಷೇಪಿಸುವರು–ಈ ಆಶ್ವಿನಮಂತ್ರಗಳಲ್ಲಿ ಅಗ್ನಿ, ಉಷೋದೇವತೆ, ಇಂದ್ರ, ಅಶ್ವಿನೀದೇವತೆಗಳು ಇವರನ್ನೆಲ್ಲಾ ಸ್ತುತಿಸಿದ್ದರೂ ಅಗ್ನಿಮೊದಲಾದವರನ್ನು ಬಿಟ್ಟು ಈ ಮಂತ್ರಗಳಿಗೆ ಆಶ್ವಿನ ಎಂಬ ಅಶ್ವಿನೀದೇವತೆಗಳ ಹೆಸರೇಕೆ ? ಇದು ಸರಿಯೇ ಎಂದರೆ, ಹಾಗಲ್ಲ. ಸ್ಪರ್ಧೆಯಲ್ಲಿ ಅಗ್ನಿ, ಉಷಸ್ಸು, ಇಂದ್ರ ಇವರೆಲ್ಲರೂ ಭಾಗವಹಿಸಿ ಓಡುತ್ತಿದ್ದರೂ ಅಗ್ನಿ ಮೊದಲಾದವರು ಅಶ್ವಿನೀದೇವತೆಗಳ ಮಾತಿನಂತೆ ನಿರ್ದಿಷ್ಟಸ್ಥಾನವಾದ ಸೂರ್ಯನವರೆಗೂ ಓಡಲಿಲ್ಲ. ಮಧ್ಯದಲ್ಲಿಯೇ ನಿಂತುಬಿಟ್ಟರು. ಅಶ್ವಿನೀದೇವತೆಗಳು ಮಾತ್ರ ಸೂರ್ಯನತನಕ ಕೊನೆಯವರೆಗೂ ಓಡಿ ಸ್ಪರ್ಧೆಯನ್ನು ಗೆದ್ದರು. ಆದ್ದರಿಂದ ಆ ಮಂತ್ರಗಳನ್ನು ಆಶ್ವಿನಮಂತ್ರಗಳೆಂದು ಕರೆಯುವುದು ಸಹಜವಾಗಿದೆ. ಈ ವಿಷಯವನ್ನು ತಿಳಿದಿರುವ ಪುರುಷನು ತನ್ನ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು.

**ಅಶ್ವತರೀರಥೇನಾಗ್ನಿರಾಜಿಮುಧಾವತ್ತಾಸಾಂ ಪ್ರಾಜಮಾನೋ ಯೋನಿಮಕೂಲಯತ್ತಸ್ಮಾತ್ತಾ ನ ವಿಜಾಯಂತೇ ॥**

ಐ. ಬ್ರಾ. ೧೭-೯)

ದೇವತೆಗಳು ಈ ಸ್ಪರ್ಧೆಯಲ್ಲಿ ಭಾಗವಹಿಸಿ ಓಡುವಾಗ ಯಾವ ಯಾವ ದೇವತೆಗಳು ತಮ್ಮ ರಥಕ್ಕೆ ಯಾವ ಯಾವ ಅಶ್ವಗಳನ್ನು ಹೂಡಿ ಓಡಿದರು ಎಂಬ ವಿಷಯವನ್ನು ಸ್ವಲ್ಪ ವಿಶದವಾಗಿ ತಿಳಿಸಲಾಗುವುದು. ಸ್ಪರ್ಧೆಯಲ್ಲಿ ಭಾಗವಹಿಸಿದಾಗ ಅಗ್ನಿಯು ಹೇಸರಕತ್ತೆಗಳನ್ನು ತನ್ನ ರಥಕ್ಕೆ ಕಟ್ಟಿ ಅದರಲ್ಲಿ ಕುಳಿತು ಬಂದನು. ರಥವನ್ನು ನಡೆಸುವಾಗ ಅಗ್ನಿಯು ಹೇಸರಕತ್ತೆಗಳನ್ನು ಪ್ರಚೋದಿಸಿ ವೇಗವಾಗಿ ಓಡಿಸುತ್ತಿದ್ದುದರಿಂದ ಅವುಗಳ ಯೋನಿಯೂ ಗರ್ಭಕೋಶವೂ ಸುಟ್ಟುಹೋಯಿತು. ಆದ್ದರಿಂದ ಹೇಸರಕತ್ತೆಗಳು ಗರ್ಭವನ್ನು ಧರಿಸಿ ಮರಿಗಳನ್ನು ಹಾಕುವುದಿಲ್ಲ.

**ಗೋಭಿರರುಣೈರುಷಾ ಆಜಿಮುಧಾವತ್ತಸ್ಮಾದುಷಸ್ಯಾಗತಾಯಾಮರುಣಮಿವೈವ ಪ್ರಭಾತ್ಯು-ಷಸೋ ರೂಪಂ ॥**

(ಐ. ಬ್ರಾ. ೧೨-೯)

ಉಷೋದೇವತೆಯು ತನ್ನ ರಥಕ್ಕೆ ಸ್ವಲ್ಪ ಕೆಂಪುಬಣ್ಣದ ಎತ್ತುಗಳನ್ನು ಕಟ್ಟಿ ಸ್ಪರ್ಧೆಯಲ್ಲಿ ಭಾಗವಹಿಸಿದ್ದರಿಂದ, ರಾತ್ರಿಯ ಅವಸಾನದಲ್ಲಿ ಎಂದರೆ ಪ್ರಭಾತಕಾಲದಲ್ಲಿ ಉಷೋದೇವತೆಯು ಆವಿರ್ಭವಿಸುವಾಗ ಪೂರ್ವದಿಕ್ಕಿನಲ್ಲಿ ಕೆಂಪು ಬಣ್ಣದ ಛಾಯೆಯು ಗೋಚರವಾಗುವುದು. ಇದೇ ಉಷಸ್ಸಿನ ರೂಪವು.

**ಅಶ್ವರಥೇನೇಂದ್ರ ಆಜಿಮುಧಾವತ್ತಸ್ಮಾತ್ಸ ಉಚ್ಚೈರ್ಘೋಷ ಉಪಬ್ದಿಮಾನ್ ಕ್ಷತ್ರಸ್ಯ ರೂಪ-ಮೈಂದ್ರೋ ಹಿ ಸಃ ॥**

(ಐ. ಬ್ರಾ. ೧೭-೯)

ಇಂದ್ರನು ಕುದುರೆಗಳನ್ನು ಕಟ್ಟಿದ ರಥಗಳಲ್ಲಿ ಕುಳಿತು ಸ್ಪರ್ಧೆಗೆ ಬಂದನು ಮತ್ತು ಆ ಕುದುರೆಗಳ, ಕೆನೆತ, ಕಾಲುಗೊರಸಿನ ಧ್ವನಿ ಇವುಗಳಿಂದ ಬಹಳ ಘಟ್ಟಿಯಾದ ಧ್ವನಿಯುಂಟಾಯಿತು. ಲೋಕದಲ್ಲಿ ರಾಜನಾದವನು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಯುದ್ಧಾರ್ಥವಾಗಿ ಹೊರಡುವುದೂ, ಆ ರಾಜನ ಹಿಂದೆಯೂ ಮುಂದೆಯೂ ಅವನ ರಕ್ಷಣಾರ್ಥವಾಗಿ ಅವನ ಸೇವಕರೂ ಸಹ ಕುದುರೆಗಳ ಮೇಲೆ ಕುಳಿತು ಅವನನ್ನನುಸರಿಸುವುದೂ, ಆ ಕಾಲದಲ್ಲಿ ಕುದುರೆಗಳ ಹೇಷಾಧ್ವನಿ, ಕಾಲುಗೊರಸುಗಳ ಶಬ್ದ ಇವುಗಳಿಂದ ಮಹತ್ತರವಾದ ಶಬ್ದವುಂಟಾಗುವುದೂ ಎಲ್ಲರಿಗೂ ತಿಳಿದ ವಿಷಯವಷ್ಟೆ. ಅದರಂತೆ ಇಂದ್ರನ ರಥದ ಕುದುರೆಗಳಿಂದ ಮಹತ್ತರಶಬ್ದವುಂಟಾಯಿತು. ಆದ್ದರಿಂದ ಇಂದ್ರನು ಕ್ಷತ್ರಿಯನ ಪ್ರತೀಕವು ಎಂದರೆ ರಾಜನ ಸ್ವರೂಪವು.

**ಗರ್ದಭರಥೇನಾಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾತ್ಸ ಸೃತಜವೋ ದುಗ್ಧದೋಹಃ ಸರ್ವೇಷಾಮೇತರ್ಹಿ ವಾಹನಾನಾಮನಾಶಿಷ್ಠೋ ರೇತಸಸ್ತ್ವಸ್ಯ ವೀರ್ಯಂ ನಾಹರತಾಂ ತಸ್ಮಾತ್ಸ ದ್ವಿರೇತಾ ವಾಜೀ॥**

(ಐ ಬ್ರಾ. ೧೭-೯)

ಅಶ್ವಿನೀದೇವತೆಗಳು ಕತ್ತೆಗಳನ್ನು ಕಟ್ಟಿದ ತಮ್ಮ ರಥದಲ್ಲಿ ಕುಳಿತು ಸ್ಪರ್ಧೆಗೆ ಬಂದು ತಮ್ಮ ರಥವನ್ನು ವೇಗವಾಗಿ ಓಡಿಸಿ ಸ್ಪರ್ಧೆಯಲ್ಲಿ ಜಯವನ್ನು ಪಡೆದರು. ಆದರೆ ಸ್ಪರ್ಧೆಯಲ್ಲಿ ಗೆಲ್ಲಬೇಕೆಂಬ ಆಸೆಯಿಂದ ರಥವನ್ನು ಅತ್ಯಂತವೇಗವಾಗಿ ಓಡಿಸಿದ್ದರಿಂದ ರಥಕ್ಕೆ ಕಟ್ಟಿದ್ದ ಕತ್ತೆಗಳು ವೇಗವಾಗಿ ಓಡಿದ ಆಯಾಸದಿಂದ ಬಳಲಿ ಬೆಂಡಾದವು. ಅವುಗಳಲ್ಲಿ (ಕತ್ತೆಗಳಲ್ಲಿ) ಹಾಲು ಕರೆಯುವ ಶಕ್ತಿಯು ಕಮ್ಮಿಯಾಯಿತು. ವಾಹನಕ್ಕಾಗಿ ಉಪಯೋಗಿಸುವ ಆನೆ, ಕುದುರೆ ಮೊದಲಾದ ಪ್ರಾಣಿಗಳಲ್ಲಿ ಎಲ್ಲಕ್ಕಿಂತಲೂ ಕತ್ತೆಯ ಗತಿಯು ಮಂದವಾಯಿತು. ಆದ್ದರಿಂದ ಈಗಲೂ ಕತ್ತೆಯು ಬಹುನಿಧಾನವಾಗಿ ಹೋಗುವುದು. ಆದರೆ ಅಶ್ವಿನೀದೇವತೆಗಳ ಅನುಗ್ರಹದಿಂದ ಕತ್ತೆಯಲ್ಲಿ ವೀರ್ಯವು ಎಂದರೆ ಮರಿಯನ್ನು ಉತ್ಪಾದನೆಮಾಡುವ ಶಕ್ತಿಯು ಕುಂದಲಿಲ್ಲ. ಮತ್ತು ಒಂದುಭಾಗದಲ್ಲಿ ಹೆಚ್ಚಿತೆಂದೇ ಹೇಳಬೇಕು. ಏಕೆಂದರೆ ಕುದುರೆ ಮತ್ತು ಕತ್ತೆಗಳೆರಡರಲ್ಲಿಯೂ ಈ ಪ್ರಾಣಿಯ ಸಂತತಿಯು ವೃದ್ಧಿಯಾಗುವುದು ಕತ್ತೆ ಮತ್ತು ಕುದುರೆಯ ಸಂಯೋಗದಿಂದ ಹೇಸರಕತ್ತೆಯೂ, ಕತ್ತೆಗಳ ಸಂಯೋಗದಿಂದ ಸಾಧಾರಣ ಕತ್ತೆಗಳೂ ಉತ್ಪತ್ತಿಯಾಗುವುವು ಈ ಎರಡುವಿಧವಾದ ರೇತಸ್ಸಾಮರ್ಥ್ಯವು ಕತ್ತೆಗೆ ಇರುವುದು.

॥ ಸಂಹಿತಾಪಾಠಃ ॥

**ಸೋಮೋ ವಧೂಯುರಭವದಶ್ವಿನಾಸ್ತಾಮುಭಾ ವರಾ ।**

**ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾದದಾತ್ ॥ ೯ ॥**

॥ ಪದಪಾಠಃ ॥

**ಸೋಮಃ । ವಧೂऽಯುಃ । ಅಭವತ್ । ಅಶ್ವಿನಾ । ಆಸ್ತಾಂ । ಉಭಾ । ವರಾ ।**

**ಸೂರ್ಯಾಂ । ಯತ್ । ಪತ್ಯೇ । ಶಂಸಂತೀಂ । ಮನಸಾ । ಸವಿತಾ । ಅದದಾತ್ ॥ ೯ ॥**

॥ ಸಾಯಣಭಾಷ್ಯಂ ॥

**ಸೋಮೋ ವಧೂಯುರ್ವಧೂಕಾಮೋ ವರೋಽಭವತ್ । ತಸ್ಮಿನ್ಸಮಯೇಽಶ್ವಿನಾಶ್ವಿನಾವು-ಭೋಭೌ ವರಾ ವರಾವಾಸ್ತಾಂ । ಅಭೂತಾಂ । ಯದ್ಯದಾ ಸೂರ್ಯಾಂ ಪತ್ಯೇ ಶಂಸಂತೀಂ ಪತಿಂ ಕಾಮಯಮಾನಾಂ । ಪರ್ಯಾಪ್ತಯೌವನಾಮಿತ್ಯರ್ಥಃ । ಸೂರ್ಯಾಂ ಮನಸಾ ಸಹಿತಾಯ ಸೋಮಾಯ ವರಾಯ ಸವಿತಾ ತತ್ಪಿತಾದದಾತ್ ಪ್ರಾದಾತ್ ದತ್ತ್ವಾಂ ಚಕಾರ ॥**

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಪತ್ಯೇ ಶಂಸಂತೀಂ**—ಪತಿಯನ್ನು ಹೊಂದಬೇಕೆಂದು ಇಚ್ಛಿಸುತ್ತಿದ್ದ । **ಸೂರ್ಯಾಂ**—ಸೂರ್ಯೆಯನ್ನು । **ಸವಿತಾ**—ಸವಿತೃವು । **ಮನಸಾ**-ಮನೋಯುಕ್ತನಾದ ಸೋಮನಿಗೆ । **ಅದದಾತ್**—ಕೊಟ್ಟನೋ ಆಗ । **ಉಭಾ ಅಶ್ವಿನಾ**—ಅಶ್ವಿನೀದೇವತೆಗಳಿಬ್ಬರೂ । **ವರಾ**—ವರರಾಗಿ । **ಆಸ್ತಾಂ**—ಆಗಿದ್ದರು । **ಸೋಮಃ**—ಸೋಮನು । **ವಧೂಯುಃ**—ವಧುವನ್ನು ಹೊಂದಬೇಕೆಂಬ ಇಚ್ಛೆಯಿಂದ ಕೂಡಿ । **ಅಭವತ್**—ಇದ್ದನು.

॥ ಭಾವಾರ್ಥ ॥

ಸೋಮನು ವಧುವನ್ನು ಹೊಂದಬೇಕೆಂಬ ಇಚ್ಛೆಯಿಂದ ಕೂಡಿದ್ದನು. ಪತಿಯನ್ನು ಹೊಂದಬೇಕೆಂದಪೇಕ್ಷಿಸಿದ ಸೂರ್ಯೆಯನ್ನು ಸವಿತೃವು ಮನೋಯುಕ್ತನಾದ ಸೋಮನಿಗೆ ಕೊಟ್ಟಾಗ ಅಶ್ವಿನೀದೇವತೆಗಳಿಬ್ಬರೂ ವರರಾಗಿದ್ದರು.

## English Translation

Soma was desirious of a bride; the two Aswins were the two grooms-men were Savitri gave Surya, who was ripe for a husband, (to Soma endowed) with intelligence.

॥ ಸಂಹಿತಾಪಾಠಃ ॥

ಮನೋ ಅಸ್ಯಾ ಅನ ಆಸೀದ್ದ್ಯೌರಾಸೀದುತ ಚ್ಛದಿಃ ।
ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ಸೂರ್ಯಾ ಗೃಹಂ ॥ ೧೦ ॥

॥ ಪದಪಾಠಃ ॥

ಮನಃ । ಅಸ್ಯಾಃ । ಅನಃ । ಆಸೀತ್ । ದ್ಯೌಃ । ಆಸೀತ್ । ಉತ । ಛದಿಃ ।
ಶುಕ್ರೌ । ಅನಡ್ವಾಹೌ । ಆಸ್ತಾಂ । ಯತ್ । ಅಯಾತ್ । ಸೂರ್ಯಾ । ಗೃಹಂ ॥ ೧೦ ॥

॥ ಸಾಯಣಭಾಷ್ಯಂ ॥

**ಅಸ್ಯಾಃ ಸೂರ್ಯಾಯಾಃ ಪತ್ಯುರ್ಗೃಹಂ ಗಚ್ಛಂತ್ಯಾ ಅನೋ ರಥೋ ಮನ ಆಸೀತ್ । ಯಾ ಪತಿಗೃಹಂ ತ್ವಯಾ ಗಚ್ಛಾಮೀತಿ ಮತಿರಸ್ತಿ ಸಾನ ಆಸೀತ್ । ಉತಾಪಿ ಚ ತಸ್ಯಾ ಅನಸೋ ದ್ಯೌರ್ದ್ಯು-**

ಲೋಕಶ್ಛದಿರುಪರ್ಯಾಚ್ಛಾದನಮಾಸೀತ್ । ಶುಕ್ರೌ ದೀಪ್ತೌ ಸೂರ್ಯಾಚಂದ್ರಮಸಾವನಡ್ವಾಹೌ ರಥಸ್ಯ ವೋಢಾರಾವಾಸ್ತಾಂ । ಅಭವತಾಂ । ಯದ್ಯದಾ ಸೂರ್ಯಾ ಗೃಹಂ ಸೋಮಮಯಾತ್ ಅಗಾತ್ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಸೂರ್ಯಾ—ಸೂರ್ಯೆಯು । ಗೃಹಂ—ಸೋಮನ ಗೃಹಕ್ಕೆ । ಆಯಾತ್—ಹೋದಳೋ ಆಗ । ಮನಃ—ಮನಸ್ಸು । ಅಸ್ಯಾಃ—ಇವಳ । ಅನಃ—ರಥವಾಗಿ । ಆಸೀತ್—ಆಗಿದ್ದಿತು । ಉತ—ಮತ್ತು । ದ್ಯೌಃ—ದ್ಯುಲೋಕವು । ಛದಿಃ—ಮೇಲ್ಭಾಗದ ಹೊದ್ದಿಕೆಯಾಗಿ । ಆಸೀತ್—ಇದ್ದಿತು । ಶುಕ್ರಾ—ಪ್ರಕಾಶಮಾನರಾದ ಸೂರ್ಯ ಮತ್ತು ಚಂದ್ರರು । ಅನಡ್ವಾಹೌ—ರಥವನ್ನು ಎಳೆಯುವ ಎತ್ತುಗಳಾಗಿ ಆಸ್ತಾಂ—ಆಗಿದ್ದರು.

॥ ಭಾವಾರ್ಥ ॥

ಸೂರ್ಯೆಯು ಪತಿಯ ಗೃಹಕ್ಕೆ ಹೋದಾಗ ಮನಸ್ಸೇ ಅವಳ ರಥವಾಗಿದ್ದಿತು. ದ್ಯುಲೋಕವು ಮೇಲ್ಭಾಗದ ಹೊದ್ದಿಕೆಯಾಗಿದ್ದಿತು. ಪ್ರಕಾಶಮಾನರಾದ ಸೂರ್ಯ ಮತ್ತು ಚಂದ್ರರು ರಥವನ್ನು ಎಳೆಯುವ ಎತ್ತುಗಳಾಗಿದ್ದರು.

## English Translation

Mind was her chariot, and heaven was the covering, the two shining (orbs) were the oxen when Surya went to (her husband's) dwelling.

॥ ಸಂಹಿತಾಪಾಠಃ ॥

ಋಕ್ಸಾಮಾಭ್ಯಾಮಭಿಹಿತೌ ಗಾವೌ ತೇ ಸಾಮನಾವಿತಃ ।
ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾಚರಃ ॥ ೧೧ ॥

॥ ಪದಪಾಠಃ ॥

ಋಕ್ಽಸಾಮಾಭ್ಯಾಂ । ಅಭಿಽಹಿತೌ । ಗಾವೌ । ತೇ । ಸಾಮನೌ । ಇತಃ ।
ಶ್ರೋತ್ರಂ । ತೇ । ಚಕ್ರೇ ಇತಿ । ಆಸ್ತಾಂ । ದಿವಿ । ಪಂಥಾಃ । ಚರಾಚರಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯೇ ದೇವಿ ತೇ ತವರ್ಕ್ಸಾಮಾಭ್ಯಾಮಭಿಧಾನೀಸ್ಥಾನಾಭ್ಯಾಮಭಿಹಿತೌ ಗಾವೌ ಗೋಸ್ಥಾನೀಯೌ ಸೂರ್ಯಾಚಂದ್ರಮಸೌ ಸಾಮನೌ ಸಮಾನೌ ಸಂತಾವಿತಃ । ಗಚ್ಛತಃ । ಅನೋವಾಹೌ ಪತ್ಯುರ್ಗೃಹಂ ಪ್ರತಿ ಗಚ್ಛತಃ । ತೇ ತವ ಶ್ರೋತ್ರಂ । ಶ್ರೋತ್ರೇ ಇತ್ಯರ್ಥಃ । ವರಸ್ಯ ಗುಣಗ್ರಾಹಿಣೀ ಶ್ರೋತ್ರೇ ಏವ ಚಕ್ರೇ ಆಸ್ತಾಂ । ಮನೋರೂಪಸ್ಯ ರಥಸ್ಯ ಶ್ರೋತ್ರೇ ಚಕ್ರೇ ಅಭವತಾಮಿತ್ಯರ್ಥಃ

ದಿವಿ ಪಂಥಾಶ್ಚರಾಚರಶ್ಚಲಾಚಲೋಽತ್ಯಂತಂ ಗಮನಸಾಧಭೂತೋ ಮಾರ್ಗೋಽಭೂತ್ । ರಥಸಂಚಾರ. ಪ್ರದೇಶೋ ದ್ಯುಲೋಕ ಆಸೀತ್ ॥

। ಪ್ರತಿಪದಾರ್ಥ ।

(ಎಲೈ ಸೂರ್ಯಾದೇವಿಯೇ) **ಋಕ್ಸಾಮಾಭ್ಯಾಂ**—ನೊಗಗಳಂತಿರುವ ಋಕ್ಕು ಮತ್ತು ಸಾಮಗಳಿಂದ। **ಅಭಿಹಿತಾ**—ರಥಕ್ಕೆ ಕಟ್ಟಲ್ಪಟ್ಟು ಪ್ರಚೋದಿತಗಳಾದ। **ತೇ ಗಾವಾ**—ಸೂರ್ಯ ಮತ್ತು ಚಂದ್ರರೂಪವಾದ ನಿನ್ನ ಎತ್ತುಗಳು । **ಸಾಮನಾ**—ಒಂದೇ ಸಮನಾಗಿ। **ಇತಃ**—ಹೋಗುತ್ತಿವೆ। **ತೇ**—ನಿನ್ನ। **ಶ್ರೋತ್ರಂ**—ಶ್ರೋತ್ರಗಳು। **ಚಕ್ರೇ**—ರಥಚಕ್ರಗಳಾಗಿ। **ಆಸ್ತಾಂ**—ಆಗಿವೆ। **ಚರಾಚರಃ**—ಸಂಚಾರಸಾಧನವಾದ। **ಪಂಥಾಃ**—ಮಾರ್ಗವು। **ದಿವಿ**—ದ್ಯುಲೋಕದಲ್ಲಿರುತ್ತದೆ.

॥ ಭಾವಾರ್ಥ ॥

ಎಲೈ ಸೂರ್ಯಾದೇವಿಯೇ, ನೊಗಗಳಂತಿರುವ ಋಕ್ಕು ಮತ್ತು ಸಾಮಗಳಿಂದ ರಥಕ್ಕೆ ಕಟ್ಟಲ್ಪಟ್ಟು ಪ್ರಚೋದಿತಗಳಾದ ಸೂರ್ಯ ಮತ್ತು ಚಂದ್ರರೂಪವಾದ ಎತ್ತುಗಳು ಒಂದೇ ಸಮನಾಗಿ ಹೋಗುತ್ತಿವೆ. ನಿನ್ನ ಶ್ರೋತ್ರಗಳು ರಥಚಕ್ರಗಳಾಗಿವೆ. ಸಂಚಾರಸಾಧನವಾದ ಮಾರ್ಗವು ದ್ಯುಲೋಕದಲ್ಲಿರುತ್ತದೆ.

## English Translation

Those two oxen yoked by the Rich and the Saman march equally; the two wheels were your ears; the moving path (was) in ·uǝʌɐǝɥ

॥ ಸಂಹಿತಾಪಾಠಃ ॥

ಶುಚೀ ತೇ ಚಕ್ರೇ ಯಾತ್ಯಾ ವ್ಯಾನೋ ಅಕ್ಷ ಆಹತಃ ।
ಅನೋ ಮನಸ್ಮಯಂ ಸೂರ್ಯಾರೋಹತ್ಪ್ರಯತೀ ಪತಿಂ ॥ ೧೨ ॥

। ಪದಪಾಠಃ ॥

ಶುಚೀ ಇತಿ । ತೇ । ಚಕ್ರೇ ಇತಿ । ಯಾತ್ಯಾಃ । ವಿಽಆನಃ । ಅಕ್ಷಃ । ಆಽಹತಃ ।
ಅನಃ । ಮನಸ್ಮಯಂ । ಸೂರ್ಯಾ । ಆ । ಅರೋಹತ್ । ಪ್ರಽಯತೀ । ಪತಿಂ ॥ ೧೨ ॥

। ಸಾಯಣಭಾಷ್ಯಂ ।

ಯಾತ್ಯಾ ಗಚ್ಛಂತ್ಯಾಸ್ತೇ ತವಾನಸಶ್ಚಕ್ರೇ ಚಂಕ್ರಮಣಶೀಲೇ ರಥಾಂಗೇ ಶುಚೀ ಶ್ರೋತ್ರೇ ಆಸ್ತಾಂ। ವ್ಯಾನಸ್ತ್ವವ ವ್ಯಾನೋ ವಾಯುರಕ್ಷಃ। ಉಭಯರಥಚಕ್ರಚ್ಛಿದ್ರಗಾಮಿನೀ ಯಾ ಕಾಷ್ಠಾ ಸಾ ಚ ರಥಸ್ಯ ಸರ್ವಂ ಭಾರಂ ವಹತಿ। ಸೋಽಕ್ಷೋ ವ್ಯಾನೋಽಭೂತ್। ಮನಸ್ಮಯಂ ಮನೋಮಯಮಾನಃ ಶಕಟಂ ಸೂರ್ಯಾ ಪತಿಂ ಸೋಮಂ ಪ್ರತಿ ಪ್ರಯತೀ ಪ್ರಕರ್ಷೇಣ ಗಚ್ಛಂತ್ಯಾರೋಹತ್।

ಆರೂಢವತೀ । ಪತಿಂ ಪ್ರತಿ ಜಿಗಮಿಷೋರ್ಮನೋರೂಪಸ್ಯ ರಥಸ್ಯ ಪತ್ಯುರ್ಗುಣಶ್ರಾವಿಣೀ ಶ್ರೋತ್ರೇ ಏವ ಚಕ್ರೇ ಅಭೂತಾಂ ವ್ಯಾನೋ ಧಾರಕೋ ವಾಯುಶ್ಚೇಷ್ಟಕೋಽಕ್ಷೋಽಭೂದಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೂರ್ಯಾದೇವಿಯೇ), **ಯಾತ್ಯಾಃ**—ಪತಿಯ ಗೃಹಕ್ಕೆ ಹೋಗುತ್ತಿದ್ದಾಗ । **ತೇ**—ನಿನ್ನ । **ಶುಚೀ**—ಶ್ರೋತೃಗಳು । **ಚಕ್ರೇ**—ರಥಚಕ್ರಗಳಾಗಿ ಇದ್ದವು । **ವ್ಯಾನಃ**—ವಾಯುವು । **ಅಕ್ಷಃ ಆಹತಃ**—ಇರಚಿಪಟಿಯಾಗಿ ಭಾರವನ್ನು ವಹಿಸಿದನು । **ಸೂರ್ಯಾ**—ಸೂರ್ಯೆಯು । **ಪತಿಂ**—ಪತಿಯಾದ ಸೋಮನಲ್ಲಿಗೆ । **ಪ್ರಯತೀ**—ಹೋಗುತ್ತಿರುವಾಗ । **ಮನಸ್ಮಯಂ**—ಮನೋಮಯವಾದ । **ಅನಃ**—ಶಕಟವನ್ನು । **ಆರೋಹತ್**—ಹತ್ತಿದಳು.

॥ ಭಾವಾರ್ಥ ॥

ಎಲೈ ಸೂರ್ಯಾದೇವಿಯೇ, ಪತಿಯ ಗೃಹಕ್ಕೆ ಹೋಗುತ್ತಿದ್ದಾಗ ನಿನ್ನ ಶ್ರೋತ್ರಗಳು ರಥಚಕ್ರಗಳಾಗಿದ್ದವು. ವಾಯುವು ಭದ್ರವಾದ ಇರಚಿಪಟ್ಟಿಯಾಗಿ ಭಾರವನ್ನು ವಹಿಸಿದನು. ಸೂರ್ಯೆಯು ಪತಿಯಾದ ಸೋಮನಲ್ಲಿಗೆ ಹೋಗುತ್ತಿರುವಾಗ ಮನೋಮಯವಾದ ಶಕಟವನ್ನು ಹತ್ತಿದಳು.

## English Translation

The two swift-moving wheels were your pure (cars), Vayu was the fastened axle, Surya mounted thc chariot of the Mind, going to her lord.

। ಸಂಹಿತಾಪಾಠಃ ।

ಸೂರ್ಯಾಯಾ ವಹತುಃ ಪ್ರಾಗಾತ್ಸವಿತಾ ಯಮವಾಸೃಜತ್ ।
ಅಘಾಸು ಹನ್ಯಂತೇ ಗಾವೋಽರ್ಜುನ್ಯೋಃ ಪರ್ಯುಹ್ಯತೇ ॥ ೧೩ ॥

। ಪದಪಾಠಃ ॥

ಸೂರ್ಯಾಯಾಃ । ವಹತುಃ । ಪ್ರ । ಅಗಾತ್ । ಸವಿತಾ । ಯಂ । ಅವಽಅಸೃಜತ್ ।
ಅಘಾಸು । ಹನ್ಯಂತೇ । ಗಾವಃ । ಅರ್ಜುನ್ಯೋಃ । ಪರಿ । ಉಹ್ಯತೇ ॥ ೧೩ ॥

॥ ಸಾಯಣಭಾಷ್ಯಂ ॥

ಸೋಮಾಯ ಪ್ರದಿತ್ಸಿತಾಯಾಃ ಸೂರ್ಯಾಯಾ ವಹತುಃ । ಕನ್ಯಾಪ್ರಿಯಾರ್ಥಂ ದಾತವ್ಯೋ ಗವಾದಿಪದಾರ್ಥೋ ವಹತುಃ । ಸ ಚ ಪ್ರಾಗಾತ್ । ತಸ್ಯಾ ಅಪಿ ಪೂರ್ವಮಗಚ್ಛತ್ । ಯಂ ವಹತುಂ ಸವಿತಾಸ್ಯಾಃ ಪಿತಾವಾಸೃಜತ್ ಅವಸೃಷ್ಟವಾನ್ । ಪ್ರಾದಾದಿತ್ಯರ್ಥಃ । ಕದಾ ಸಾಗಚ್ಛತ್ ಕದಾ

**ವಹತುರಿತ್ಯುಭಯೋಃ ಕಾಲ ಉಚ್ಯತೇ । ಅಘಾಸು । ಮಘಾಸ್ವಿತ್ಯರ್ಥಃ । ಮಘಾನಕ್ಷತ್ರೇಷು ಗಾವಃ ಸವಿತ್ರಾ ದತ್ತಾ ಗಾವಃ ಸೋಮಗೃಹಂ ಪ್ರತಿ ಹನ್ಯಂತೇ । ದಂಡೈಸ್ತಾಡ್ಯಂತೇ ಪ್ರೇರಣಾರ್ಥಂ। ಅರ್ಜುನ್ಯೋಃ । ಫಲ್ಗುನ್ಯೋರಿತ್ಯರ್ಥಃ । ತಯೋರ್ನಕ್ಷತ್ರಯೋಃ ಸವಿತುಃ ಸಕಾಶಾತ್ ಪರಿ ಸೋಮ-ಗೃಹಂ ಪ್ರತ್ಯುಹ್ಯತೇ । ನೀಯತೇ ರಥೇನ ॥**

॥ ಪ್ರತಿಪದಾರ್ಥ ॥

**ಸೂರ್ಯಾಯಾಃ**—ಪತಿಗೃಹಕ್ಕೆ ಹೋಗುವ ಸೂರ್ಯೆಗಾಗಿ । **ಯಂ**—ಯಾವ ಗವಾದಿಸಂಪತ್ತುಗಳ ಬಳುವಳಿಗಳನ್ನು । **ಸವಿತಾ**—ಸೂರ್ಯನು । **ಅವಾಸೃಜತ್**—ಪ್ರಥಮತಃ ಕಳುಹಿಸಿದನೋ । **ವಹತುಃ**—ಆ ಬಳುವಳಿಗಳ ಮೆರವಣಿಗೆಯು । **ಪ್ರಾಗಾತ್**—ಸೂರ್ಯಾದೇವಿಯ ಮುಂದೆ ಹೊರಟಿತು । **ಗಾವಃ**—ಸೂರ್ಯನಿಂದ ಕಳುಹಲ್ಪಟ್ಟ ಗೋವುಗಳು । **ಅಘಾಸು**—ಮಘಾನಕ್ಷತ್ರಗಳ ಗುಂಪುಗಳಲ್ಲಿ । **ಹನ್ಯಂತೇ**—ಮುಂದೆ ಹೋಗಲು ಪ್ರೇರಿಸಲ್ಪಡುತ್ತವೆ । (**ಸೂರ್ಯಾ**—ಸೂರ್ಯೆಯು) । **ಅರ್ಜುನ್ಯೋಃ ಪರಿ**—ಫಲ್ಗುನೀನಕ್ಷತ್ರ ಗುಂಪುಗಳಲ್ಲಿ (ಅವುಗಳ ಮೂಲಕ) । **ಉಹ್ಯತೇ**—ಪತಿಗೃಹಕ್ಕೆ ಒಯ್ಯಲ್ಪಡುತ್ತಾಳೆ.

॥ ಭಾವಾರ್ಥ ॥

ಪತಿಗೃಹಕ್ಕೆ ಹೋಗುವ ಸೂರ್ಯೆಗಾಗಿ ಯಾವ ಗವಾದಿಸಂಪತ್ತುಗಳ ಬಳುವಳಿಗಳನ್ನು ಸೂರ್ಯನು ಪ್ರಥಮತಃ ಕಳುಹಿಸಿದನೋ, ಆ ಬಳುವಳಿಗಳ ಮೆರೆವಣಿಗೆಯು ಸೂರ್ಯಾದೇವಿಗಿಂತಲೂ ಮೊದಲೇ ಬಂದಿತು. ಸೂರ್ಯನಿಂದ ಕಳುಹಲ್ಪಟ್ಟ ಗೋವುಗಳು ಮಘಾನಕ್ಷತ್ರಗಳ ಗುಂಪುಗಳಲ್ಲಿ ಮುಂದೆ ಹೋಗಲು ಪ್ರೇರಿಸಲ್ಪಡುತ್ತವೆ. ಸೂರ್ಯೆಯು ಫಲ್ಗುನೀ ನಕ್ಷತ್ರಗಳ ಗುಂಪುಗಳ ಮೂಲಕ ಪತಿಗೃಹಕ್ಕೆ ಒಯ್ಯಲ್ಪಡುತ್ತಾಳೆ.

## English Translation

Surya's bridal procession which Savitri despatched has advanced, the oxen are whipped along in the Magha (constellations); she is borne (to her husband's house) in the Arjuni (constellations).

॥ ವಿಶೇಷವಿಷಯಗಳು ॥

**ವಹತುಃ—ಕನ್ಯಾಪ್ರಿಯಾರ್ಥಂ ದಾತವ್ಯೋ ಗವಾದಿಪದಾರ್ಥೋ ವಹತುಃ ।** ವಿವಾಹಕಾಲದಲ್ಲಿ ತಂದೆಯು ತನ್ನ ಪುತ್ರಿಯ ಬಳುವಳಿಗಾಗಿ ಕೊಡುವ ಗೋವುಗಳು, ಆಭರಣಾದಿವಸ್ತುಗಳು, ವಸ್ತ್ರಗಳು, ದಾಸದಾಸೀ ಜನರು ಇತ್ಯಾದಿ

**ಅಘಾಸು, ಅರ್ಜುನ್ಯೋಃ**—ಈ ಶಬ್ದಗಳಿಗೆ ಭಾಷ್ಯಕಾರರು ಮಘಾನಕ್ಷತ್ರ ಮತ್ತು ಫಲ್ಗುನೀನಕ್ಷತ್ರಗಳೆಂದು ಅರ್ಥಮಾಡಿದ್ದಾರೆ. ಒಟ್ಟು ೨೭ ನಕ್ಷತ್ರಗಳ ಗುಂಪುಗಳಿವೆಯೆಂದೂ ಅವುಗಳಿಗೆ ನಾನಾ ದೇವತೆಗಳು ಅಧಿಪತಿಗಳೆಂದೂ ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ—

**ಕೃತ್ತಿಕಾ ನಕ್ಷತ್ರಮಗ್ನಿರ್ದೇವತಾಗ್ನೇರುಚಃ ಸ್ಥ ಪ್ರಜಾಪತೇರ್ಧಾತುಃ ಸೋಮಸ್ಯರ್ಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ ರೋಹಿಣೀನಕ್ಷತ್ರಂ ಪ್ರಜಾಪತಿರ್ದೇ-**

ವತಾ ಮೃಗಶೀರ್ಷಂ ನಕ್ಷತ್ರಗ್‌ಂ ಸೋಮೋ ದೇವತಾರ್ದ್ರಾ ನಕ್ಷತ್ರಗ್‌ಂ ರುದ್ರೋ ದೇವತಾ ಪುನರ್ವಸೂನಕ್ಷತ್ರಮದಿತಿರ್ದೇವತಾ ತಿಷ್ಯೋನಕ್ಷತ್ರಂ ಬೃಹಸ್ಪತಿರ್ದೇವತಾಶ್ರೇಷಾನಕ್ಷತ್ರಗ್‌ಂ ಸರ್ಪಾ ದೇವತಾ ಮಘಾನಕ್ಷತ್ರಂ ಪಿತರೋ ದೇವತಾ ಫಲ್ಗುನೀನಕ್ಷತ್ರಮರ್ಯಮಾ ದೇವತಾ ಫಲ್ಗುನೀನಕ್ಷತ್ರಂ ಭಗೋ ದೇವತಾ ಹಸ್ತೋ ನಕ್ಷತ್ರಗ್‌ಂ ಸವಿತಾ ದೇವತಾ ಚಿತ್ರಾನಕ್ಷತ್ರ-ಮಿಂದ್ರೋ ದೇವತಾ ಸ್ವಾತೀನಕ್ಷತ್ರಂ ವಾಯುರ್ದೇವತಾ ವಿಶಾಖೇ ನಕ್ಷತ್ರಮಿಂದ್ರಾಗ್ನೀ ದೇವತಾನೂರಾಧಾ ನಕ್ಷತ್ರಂ ಮಿತ್ರೋ ದೇವತಾ ರೋಹಿಣೀನಕ್ಷತ್ರಮಿಂದ್ರೋ ದೇವತಾ ವಿಚೃತೌ ನಕ್ಷತ್ರಂ ಪಿತರೋ ದೇವತಾಷಾಢಾ ನಕ್ಷತ್ರಮಾಪೋ ದೇವತಾಷಾಢಾ ನಕ್ಷತ್ರಂ ವಿಶ್ವೇದೇವಾ ದೇವತಾ ಶ್ರೋಣಾನಕ್ಷತ್ರಂ ವಿಷ್ಣುರ್ದೇವತಾ ಶ್ರವಿಷ್ಠಾನಕ್ಷತ್ರಂ ವಸವೋ ದೇವತಾ ಶತಭಿಷಙ್ನಕ್ಷತ್ರಮಿಂದ್ರೋ ದೇವತಾ ಪ್ರೋಷ್ಠಪದಾನಕ್ಷತ್ರಮಜಏಕ-ಪಾದ್ದೇವತಾ ಪ್ರೋಷ್ಠಪದಾನಕ್ಷತ್ರಮಹಿರ್ಬುಧ್ನಿಯೋ ದೇವತಾ ರೇವತೀ ನಕ್ಷತ್ರಂ ಪೂಷಾ ದೇವತಾಶ್ವಯುಜೌ ನಕ್ಷತ್ರಮಶ್ವಿನೌ ದೇವತಾಪಭರಣೀರ್ನಕ್ಷತ್ರಂ ಯಮೋ ದೇವತಾ ಪೂರ್ಣಾ ಪಶ್ಚಾದ್ಯತ್ತೇ ದೇವಾ ಅದಧುಃ ॥

(ತೈ. ಸಂ. ೪-೪-೧೦-೧, ೨, ೩)

॥ ಸಂಹಿತಾಪಾಠಃ ॥

ಯದಶ್ವಿನಾ ಪೃಚ್ಛಮಾನಾವಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ।
ವಿಶ್ವೇ ದೇವಾ ಅನು ತದ್ವಾಮಜಾನನ್ಪುತ್ರಃ ಪಿತರಾವವೃಣೀತ ಪೂಷಾ ॥

॥ ಪದಪಾಠಃ ॥

ಯತ್ । ಅಶ್ವಿನಾ । ಪೃಚ್ಛಮಾನೌ । ಅಯಾತಂ । ತ್ರಿಚಕ್ರೇಣ । ವಹತುಂ । ಸೂರ್ಯಾಯಾಃ ।
ವಿಶ್ವೇ । ದೇವಾಃ । ಅನು । ತತ್ । ವಾಂ । ಅಜಾನನ್ । ಪುತ್ರಃ । ಪಿತರೌ । ಅವೃಣೀತ । ಪೂಷಾ ॥೧೪॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯದ್ಯದಾ ಪೃಚ್ಛಮಾನೌ ಸವಿತಾರಂ ಪ್ರಷ್ಟುಮಯಾತಂ ಅಗಚ್ಛತಂ। ಕೇನ ಸಾಧನೇನಾಯಾತಂ ತದುಚ್ಯತೇ । ತ್ರಿಚಕ್ರೇಣ ಚಕ್ರತ್ರಯಯುಕ್ತೇನ ರಥೇನ । ಕಿಂ ಪೃಚ್ಛಮಾನೌ । ಸೂರ್ಯಾಯಾ ವಹತುಂ । ವಿವಾಹಮಿತ್ಯರ್ಥಃ । ತತ್ತದಾನೀಂ ವಾಂ ಯುವಾಂ ಸವಿತಾರಂ ಪ್ರತಿ ಗಚ್ಛಂತೌ ವಿಶ್ವೇ ಸರ್ವೇ ದೇವಾ ಅನ್ವಜಾನನ್ । ಅನುಜ್ಞಾತವಂತಃ । ತಥಾ ಪಿತರೌ ಪುತ್ರೋಽಶ್ವಿನೋಃ ಪುತ್ರಃ ಪೂಷಾವೃಣೀತ । ವೃತವಾನ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯತ್**—ಯಾವಾಗ । **ಸೂರ್ಯಾಯಾಃ**—ಸೂರ್ಯೆಯ । **ವಹತುಂ**—ವಿವಾಹಪ್ರಶ್ನೆಯನ್ನು । **ಪೃಚ್ಛಮಾನೌ**—ಕೇಳುವ ನಿಮಿತ್ತವಾಗಿ । **ತ್ರಿಚಕ್ರೇಣ**—ಮೂರು ಚಕ್ರ

ವುಳ್ಳ ರಥದಲ್ಲಿ | **ಅಯಾತಂ**—ಹೋದಿರೋ **ತತ್**—ಆಗ | **ವಾಂ**—ನಿಮ್ಮ ಇಚ್ಛೆಯನ್ನು | **ವಿಶ್ವೇ ದೇವಾಃ**—ಸಕಲ ದೇವತೆಗಳೂ | **ಅನ್ವಜಾನನ್**—ಅನುಮೋದಿಸಿದರು | **ಪುತ್ರಃ**—ನಿಮ್ಮ ಪುತ್ರನಾದ | **ಪೂಷಾ**—ಪೂಷದೇವನು | **ಪಿತರೌ**—ಪಿತೃಗಳನ್ನಾಗಿ | **ಅವೃಣೀತ**—ನಿಮ್ಮನ್ನು ಆರಿಸಿದನು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವಾಗ ಸೂರ್ಯೆಯ ವಿವಾಹಪ್ರಶ್ನೆಯನ್ನು ಕೇಳುವ ನಿಮಿತ್ತವಾಗಿ ಮೂರು ಚಕ್ರವುಳ್ಳ ರಥದಲ್ಲಿ ನೀವು ಹೋದಿರೋ, ಆಗ ನಿಮ್ಮ ಇಚ್ಛೆಯನ್ನು ಸಕಲ ದೇವತೆಗಳೂ ಅನುಮೋದಿಸಿದರು. ನಿಮ್ಮ ಪುತ್ರನಾದ ಪೂಷದೇವನು ನಿಮ್ಮನ್ನು ಪಿತೃಗಳನ್ನಾಗಿ ಆರಿಸಿದನು.

English Translation

When, Aswins, you came in your three-wheeled car soliciting the marriage of Surya, then all the gods assented, and Pushan (your) son chose (you as) his parents.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಸಹ ಅಶ್ವಿನೀದೇವತೆಗಳ ರಥದ ವರ್ಣನೆಯಿದೆ. **ತ್ರಿಚಕ್ರಃ ತ್ರಿವಂಧುರಃ, ಮನಸಃ ಜವೀಯಾನ್** ಇತ್ಯಾದಿ ವಿಶೇಷಣಗಳ ತಾತ್ಪರ್ಯವನ್ನು ಹಿಂದೆ ವಿವರಿಸಿದೆ. ಪ್ರಕೃತದಲ್ಲಿ **ತ್ರಿಚಕ್ರಃ, ತ್ರಿವಂಧುರಃ** ಎಂಬ ವಿಶೇಷಣಗಳು ಅಶ್ವಿನೀದೇವತೆಗಳ ವಿಶ್ವವ್ಯಾಪಕತ್ವವನ್ನು ಯಾವ ರೀತಿಯಲ್ಲಿ ತಿಳಿಸುತ್ತವೆ ಎಂಬುದನ್ನು ಪರಿಶೀಲಿಸಬೇಕು. **ತ್ರಿಷು ವಿಕ್ರಮಣೇಷು** ಇತ್ಯಾದಿಯಾದ ವಾಕ್ಯಗಳಿಂದ **ವಿಷ್ಣುವಿನ** ವ್ಯಾಪಕತ್ವವೂ **ತ್ರೀಣಿ ಜಾನಾ ಪರಿಭೂಷಂತಿ** ಇತ್ಯಾದಿ ವಾಕ್ಯಗಳಿಂದ ಅಗ್ನಿಯ ವಿಶ್ವವ್ಯಾಪಕತ್ವವೂ ತಿಳಿಯುವಂತೆ, **ತ್ರಿಚಕ್ರಃ** ಇತ್ಯಾದಿ ವಿಶೇಷಣಗಳಿಂದ ಅಶ್ವಿನೀದೇವತೆಗಳ ಸ್ವರೂಪವು ತಿಳಿಯುತ್ತದೆ. ಅಗ್ನಿ, ವಿಷ್ಣು, ಸವಿತೃ. ಅಶ್ವಿನೀದೇವತೆಗಳು ಇವರ ವರ್ಣನೆಯೆಲ್ಲವೂ ಸಮಾನವಾದ ತತ್ವವನ್ನು ವಿವರಿಸುತ್ತದೆ ಮತ್ತು ಎಲ್ಲಾ ಸಂದರ್ಭಗಳಲ್ಲೂ ಈ ಎಲ್ಲಾ ದೇವತೆಗಳಿಗೂ ಸಮಾನವಾದ ಅಂಶವನ್ನು ವಿವರಿಸುತ್ತದೆ ಎಂಬ ವಿಷಯವು ಗಮನಾರ್ಹವಾದುದು. Hopkins ಎಂಬ ಆಂಗ್ಲ ಪಂಡಿತನು ಈ ಅಂಶವನ್ನು ವಿವರಿಸುತ್ತಾ ಈರೀತಿ ತಿಳಿಸಿದ್ದಾನೆ—

> A comparison with the abodes of other Vedic Deities who are said to traverse the whole Universe like Vishnu conforms the same view. One of these deities is ಸವಿತೃ. The second deity that traverses or measures the Universe is ಅಗ್ನಿ. He has three stations. His light is spoken of as three-fold. Although these three stations do not seem to be always conceived alike, yet, one of them at any rate can be clearly identified with the third step of Vishnu. Agni sometimes represents the Sun in the Rig-Veda and Vishnu is also the same

Sun under a different name and the third or the hidden abode of Agni can therefore, be easily recognised as identical in character. The third Deity that traverses the Universe is the Aswins to whom the epithet ಪರಿಜ್ಮನ್ is applied several times in the Rig-Veda. The Aswins are said to have three stations and their chariot which is to go over both the worlds alike has three wheels one of which is represented as deposited in a cave or a secret place like the third step of Vishnu which is beyond the ken of mortals. This coincidence between the third stations of three different world traversing Gods cannot be treated as accidental.

(J. A. O. S. Vol. 16. p. CXLIX to CL.)

ಮೇಲಿನ ವಾಕ್ಯಗಳಲ್ಲಿ ಎರಡು ಅಂಶಗಳು ಸ್ಪಷ್ಟವಾಗಿ ತಿಳಿಯುತ್ತವೆ. ಮೊದಲನೆಯದಾಗಿ—

೧. ಪೃಥಿವೀ, ದ್ಯುಲೋಕ ಮತ್ತು ಅಂತರಿಕ್ಷ ಈ ಮೂರು ಲೋಕಗಳೂ ಸಹ ಅಗ್ನಿ, ವಿಷ್ಣು ಮತ್ತು ಅಶ್ವಿನೀದೇವತೆಗಳಿಗೆ ಆವಾಸಸ್ಥಾನಗಳು; ಎರಡನೆಯದಾಗಿ,

೨. ಈ ಮೂರು ದೇವತೆಗಳಿಗೂ ಮೂರು ಪಾದಗಳಿದ್ದು, ಎಲ್ಲಾ ದೇವತೆಗಳ ಮೂರನೇ ಪಾದವೂ ಸಹ ಪುರುಷನಿಗೆ ಗಹನಾತೀತವಾದ ಲೋಕವನ್ನಾಕ್ರಮಿಸಿರುವುವು. ಈ ಎರಡು ಅಂಶಗಳೂ ಸಹ ಗಮನಾರ್ಹವಾದವು. ಮೊದಲನೆಯ ಅಂಶವನ್ನು ವರ್ಣಿಸುವ ವಾಕ್ಯಗಳಲ್ಲಿ ಕೆಲವನ್ನು ಮಾತ್ರ ಪರಿಶೀಲಿಸಿದರೆ,

**ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।**
**ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ॥**

(ಋ. ಸಂ. ೧-೧೫೪-೨)

**ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ ಸ್ವಧಯಾ ಮದಂತಿ ।**
**ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ॥**

(ಋ. ಸಂ. ೧-೧೫೪-೪)

**ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು ।**
**ಪೂರ್ವಾಮನು ಪ್ರ ದಿಶಂ ಪಾರ್ಥಿವಾನಾಮೃತೂನ್ಪ್ರಶಾಸದ್ವಿ ದಧಾವನುಷ್ಠು ॥**

(ಋ. ಸಂ. ೧-೯೫-೩)

**ಅಗ್ನಿಸ್ತ್ರೀಣಿ ತ್ರಿಧಾತೂನ್ಯಾ ಕ್ಷೇತಿ ವಿದಥಾ ಕವಿಃ ।**
**ಸ ತ್ರೀಁರೇಕಾದಶಾಁ ಇಹ ಯಕ್ಷಚ್ಚ ಪಿಪ್ರಯಚ್ಚ ನೋ ವಿಪ್ರೋ ದೂತಃ ಪರಿಷ್ಕೃತೋ ನಭಂತಾಮನ್ಯಕೇ ಸಮೇ ॥** (ಋ. ಸಂ. ೮-೩೯-೯)

**ತ್ರೀಣಿ ಪದಾನ್ಯಶ್ವಿನೋರಾವಿಃ ಸಾಂತಿ ಗುಹಾ ಪರಃ ।**
**ಕವೀ ಋತಸ್ಯ ಪತ್ಮಭಿರರ್ವಾಗ್ಜೀವೇಭ್ಯಸ್ಪರಿ ॥** (ಋ. ಸಂ. ೮ ೮-೨೩)

ಈ ಋಕ್ಕುಗಳಲ್ಲಿ ಮೊದಲನೆಯ ಎರಡೂ ವಿಷ್ಣುವಿನ ವ್ಯಾಪಕತ್ವವನ್ನು ವರ್ಣಿಸುತ್ತವೆ. ಅದರಂತೆ, ವಿಷ್ಣುವಿನ ಅತ್ಯಂತ ವಿಸ್ತೃತವಾದವೂ, ಮೂರು ಸಂಖ್ಯೆಗಳುಳ್ಳವೂ ಆದ ಪಾದಗಳ ಪ್ರಕ್ಷೇಪಗಳಲ್ಲಿ ಸಮಸ್ತವಾದ ಭೂತಜಾತಗಳೂ ನೆಲೆಸಿ ನಿಂತಿವೆ. ಮಧುರವಾದ ಅಮೃತದೊಡನೆ ತುಂಬಿದವೂ ನಾಶರಹಿತವೂ ಆದ ವಿಷ್ಣುವಿನ ಮೂರು ಪಾದ ಪ್ರಕ್ಷೇಪಣಗಳೂ ತಮ್ಮ ಆಶ್ರಿತಜನರನ್ನು ಪವಿತ್ರವಾದ ಅನ್ನದಾನದಿಂದ ಸಂತೋಷಗೊಳಿಸುತ್ತವೆ. ಮತ್ತು ಅದೇ ವಿಷ್ಣುವು ಕೆಳಭಾಗದ ಸಪ್ತಲೋಕಗಳನ್ನೂ ಮತ್ತು ಮೇಲುಭಾಗದ ಸಪ್ತಲೋಕಗಳನ್ನೂ ಹೀಗೆ ಸಮಸ್ತವಾದ ಹದಿನಾಲ್ಕು ಲೋಕಗಳನ್ನೂ ಸಹ ಪೃಥಿವ್ಯಪ್ತೇಜೋರೂಪವಾದ **ತ್ರಿಧಾತು**ಗಳೊಡನೆ ಕೂಡಿಕೊಂಡಿರುವಂತೆ ಎತ್ತಿ ಹಿಡಿದಿದ್ದಾನೆಂದು ವಿಷ್ಣುವಿನ ಪಾದತ್ರಯದ ವ್ಯಾಪಕತ್ವದ ವರ್ಣನೆಯಿದೆ. ಮೂರು ಮತ್ತು ನಾಲ್ಕನೆಯ ಋಕ್ಕುಗಳಲ್ಲಿ ಅಗ್ನಿಯ ಸ್ವರೂಪವನ್ನು ತಿಳಿಸಿದೆ. ಅಗ್ನಿಗೆ ಬಡಬಾನಲರೂಪದಲ್ಲಿ ಸಮುದ್ರದಲ್ಲಿ ಒಂದೂ, ಆದಿತ್ಯರೂಪದಲ್ಲಿ ದ್ಯುಲೋಕದಲ್ಲಿ ಒಂದೂ, ವಿದ್ಯುದ್ರೂಪದಿಂದ ಅಂತರಿಕ್ಷದಿಂದ ಒಂದು, ಹೀಗೆ ಮೂರು ಜನ್ಮಸ್ಥಾನಗಳಿವೆ ಮತ್ತು ಇದೇ ಅಗ್ನಿಯು **ತ್ರಿಧಾತು**ಗಳನ್ನೂ ಆಕ್ರಮಿಸಿದ್ದಾನೆ, ಎಂದು ಅಗ್ನಿಯು ಲೋಕತ್ರಯವನ್ನು ವ್ಯಾಪಿಸಿರುವುದು ವರ್ಣಿಸಿದೆ. ಇದರಂತೆಯೇ ಐದನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಪಾದತ್ರಯದ ವರ್ಣನೆಯಿದೆ ಮತ್ತು ವಿಷ್ಣು ಮತ್ತು ಅಗ್ನಿಗಳ ಆವಾಸಸ್ಥಾನಗಳನ್ನು ವರ್ಣಿಸಿರುವಂತೆಯೇ,

**ಇದಂ ಹಿ ವಾಂ ಪ್ರದಿವಿ ಸ್ಥಾನಮೋಕ ಇಮೇ ಗೃಹಾ ಅಶ್ವಿನೇದಂ ದುರೋಣಂ ।**
**ಆ ನೋ ದಿವೋ ಬೃಹತಃ ಪರ್ವತಾದಾದ್ಭ್ಯೋ ಯಾತಮಿಷಮೂರ್ಜಂ ವಹಂತಾ ॥**
(ಋ. ಸಂ. ೫-೭೬-೪)

ಎಂಬಲ್ಲಿ ಅಶ್ವಿನೀದೇವತೆಗಳಿಗೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳೂ ಸಹ ಆವಾಸಸ್ಥಾನಗಳೆಂದು ವರ್ಣಿಸಿದೆ. ಈ ವಿವರಣೆಗಳಲ್ಲಿ ಇನ್ನೊಂದಂಶವನ್ನೂ ಸಹ ಗಮನಿಸಬೇಕಾಗಿದೆ. ವಿಷ್ಣುವಿನ ಪಾದಪ್ರಕ್ಷೇಪಗಳನ್ನು ವರ್ಣಿಸುವ ೧-೧೫೪-೪ ನೇ ಋಕ್ಕಿನಲ್ಲೂ, ಅಗ್ನಿಯ ವ್ಯಾಪಕತ್ವವನ್ನು ವರ್ಣಿಸುವ ೮-೩೯.೯ನೇ ಋಕ್ಕಿನಲ್ಲೂ ಮತ್ತು ಅಶ್ವಿನೀದೇವತೆಗಳ ರಥಸಂಚಾರವನ್ನು ವರ್ಣಿಸುವ ಪ್ರಕೃತವಾದ ಋಕ್ಕಿನಲ್ಲೂ (೧-೧೮೩-೧) **ತ್ರಿಧಾತು**ವೆಂಬ ಪದವು ಈ ಮೂರು ದೇವತೆಗಳ ಸಮಾನವಾದ ಸ್ವರೂಪವನ್ನು ಸೂಚಿಸುವ ಪದವಾಗಿರುತ್ತದೆ.

ಎರಡನೆಯದಾಗಿ, ಇವರೆಲ್ಲರ ತೃತೀಯ ಪಾದವು (ಅಥವಾ ಸ್ಥಾನವು) ಗಹನಾತೀತವಾದ ರಹಸ್ಯಸ್ಥಾನದಲ್ಲಿರುವುದೆಂಬ ವರ್ಣನೆಯು ಎಲ್ಲರಿಗೂ ಇರತಕ್ಕ ಸಮಾನಸ್ವರೂಪವನ್ನು ತೋರಿಸುತ್ತದೆ.

**ವಿಷ್ಣುರಿತ್ಥಾ ಪರಮಮಸ್ಯ ವಿದ್ವಾಞ್ಜಾತೋ ಬೃಹನ್ನಭಿ ಪಾತಿ ತೃತೀಯಂ ।**
**ಆಸಾ ಯದಸ್ಯ ಪಯೋ ಅಕ್ರತ ಸ್ವಂ ಸಚೇತಸೋ ಅಭ್ಯರ್ಚಂತ್ಯತ್ರ ॥**
(ಋ. ಸಂ. ೧೦-೧-೩)

**ಕ ಇಮಂ ವೋ ನಿಣ್ಯಮಾ ಚಿಕೇತ ವತ್ಸೋ ಮಾತೄರ್ಜನಯತ ಸ್ವಧಾಭಿಃ ।**
(ಋ.ಸಂ. ೧-೯೫-೪)

ದ್ವೇ ಇದಸ್ಯ ಕ್ರಮಣೇ ಸ್ವರ್ದೃಶೋಽಭಿಖ್ಯಾಯ ಮರ್ತ್ಯೋ ಭುರಣ್ಯತಿ ।
ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ ॥
(ಋ. ಸಂ. ೧-೧೫೫-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಮೂರನೆಯ ಸ್ಥಾನವೂ ಮತ್ತು ವಿಷ್ಣುವಿನ ಮೂರನೇ ಪಾದದ ಆಕ್ರಮಣವೂ ಯಾವ ಮಾನವನಿಂದಲೂ ತಿಳಿಯಲು ಸಾಧ್ಯವಿಲ್ಲ ಎಂದು ತಿಳಿಸಿದೆ. "ಸ್ವರ್ಗಲೋಕವನ್ನು ವೀಕ್ಷಿಸುವ ವಿಷ್ಣುವಿನ ಎರಡು ಪಾದಗಳನ್ನಿಡುವ ಭೂಲೋಕ ಮತ್ತು ಅಂತರಿಕ್ಷ ಲೋಕಗಳನ್ನು ಮಾತ್ರ ಮಾನವನು ಸ್ತುತಿಮಾಡಿ ತಿಳಿದುಕೊಳ್ಳುತ್ತಾನೆ. ಈ ವಿಷ್ಣುವಿನ ಮೂರನೆಯ ಪಾದವನ್ನಿಡುವ ಲೋಕವನ್ನು ಯಾವ ಮಾನವನೂ ತಿಳಿದುಕೊಳ್ಳಲು ಸಾಧ್ಯವೇ ಇಲ್ಲ" ಎಂದು ಹೇಳಿರುವಂತೆಯೇ, ಅಶ್ವಿನೀದೇವತೆಗಳ **ತ್ರಿಚಕ್ರಾತ್ಮಕವಾದ ರಥದ** ಗತಿಯನ್ನೂ ಅದರ ಗಹನಾತೀತವಾದ ಸಂಚಾರವನ್ನೂ ತಿಳಿಸಿದೆ.

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ಕ್ವ ದೇಷ್ಟ್ರಾಯ ತಸ್ಥಥುಃ ॥**
**ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತಥಾ ವಿದುಃ ।**
**ಅಥೈಕಂ ಚಕ್ರಂ ಯದ್ಗುಹಾ ತದದ್ಧಾತಯ ಇದ್ವಿದುಃ ॥**
(ಋ. ಸಂ. ೧೦-೮೫-೧೫, ೧೬)

ಎಂಬಲ್ಲಿ ಅಶ್ವಿನೀದೇವತೆಗಳ ರಥದ ಮೂರು ಚಕ್ರಗಳಲ್ಲಿ ಒಂದು ಮಾತ್ರ ಯಾರಿಗೂ ಗೋಚರವಾಗದೆ, ಕೇವಲ ದರ್ಶನಶಕ್ತಿಯುಳ್ಳ ಋಷಿಗಳಿಗೆ ಮಾತ್ರ ತಿಳಿಯುವುದೆಂದು ವರ್ಣಿಸಿದೆ. ಈ ವಿಧವಾಗಿ ಅವರ ಅಸಾಧಾರಣವಾದ ಸ್ವರೂಪದ ವರ್ಣನೆಯಲ್ಲಿ ಮೂರು ದೇವತೆಗಳಿಗೂ ಸಮಾನ ಧರ್ಮವನ್ನು ಎರಡು ಮುಖ್ಯವಾದ ಅಂಶಗಳಲ್ಲಿ ತೋರಿಸಿದೆ. ಮೂರು ದೇವತೆಗಳೂ ಸಹ ಆದಿತ್ಯಸ್ವರೂಪರೇ ಎಂದೂ ಸಹ ಹಿಂದೆಲ್ಲಾ ತಿಳಿಸಿದೆ. **ತ್ರಿಚಕ್ರಃ, ತ್ರಿಬರ್ಹಿಃ, ತ್ರಿಷಧಸ್ಥಃ, ತ್ರಿವಂಧುರಃ, ತ್ರಿವಿಕ್ರಮಃ,** ಇತ್ಯಾದಿ ವಿಶೇಷಣಗಳಲ್ಲಿ ಒಂದು ಸಾಂಕೇತಿಕವಾದ ಅಭಿಪ್ರಾಯವು ಸೂಚಿತವಾಗಿದೆ. ಅದೇ ವಿಷಯವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ತಿಳಿಸಿದೆ. ಮತ್ತು ಮೇಲೆ ತಿಳಿಸಿದಂತೆ, **ತ್ರಿಚಕ್ರ,** ಶಬ್ದದಿಂದ ಅವರ ವಿಶ್ವವ್ಯಾಪಕತ್ವವು ಬೋಧಿತವಾಗಿದೆಯಾದುದರಿಂದ **ತ್ರಿಚಕ್ರ** ಶಬ್ದಕ್ಕೆ ಅರ್ಥವೇನೆಂದು ತಿಳಿಯಬೇಕು.

। ಸಂಹಿತಾಪಾಠಃ ।

ಯುದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।
ಕ್ವೈಕಂ ಚಕ್ರಂ ವಾಮಾಸೀತ್ಕ್ವ ದೇಷ್ಟ್ರಾಯ ತಸ್ಥಥುಃ ॥ ೧೫ ॥

॥ ಪದಪಾಠಃ ॥

ಯತ್ । ಅಯಾತಂ । ಶುಭಃ । ಪತೀ ಇತಿ । ವರೇಽಯಂ । ಸೂರ್ಯಾಂ । ಉಪ ।
ಕ್ವ । ಏಕಂ । ಚಕ್ರಂ । ವಾಂ । ಆಸೀತ್ । ಕ್ವ । ದೇಷ್ಟ್ರಾಯ । ತಸ್ಥಥುಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಶುಭಸ್ಪತೀ ಉದಕಸ್ಯ ಸ್ವಾಮಿನೌ ಯದ್ಯಾವಯಾತಂ ಅಗಚ್ಛತಂ । ಕಂ ಪ್ರತಿ । ವರೇಯುಂ ವರಣೀಯಾಯಾಃ ಸೂರ್ಯಾಯಾಃ ಸಂಬಂಧಿನಂ ವರ್ಯೈರ್ಯಾರ್ಚಿತವ್ಯಂ ವಾ । ಸವಿತಾರಮಿತ್ಯರ್ಥಃ । ಕಿಮರ್ಥಂ । ಸೂರ್ಯಾಮುಪ ಗಂತುಂ । ವಾಂ ಭವತೋಃ ಸಂಪ್ರತಿ ದೃಶ್ಯಮಾನಮಿದಮೇಕಂ ಚಕ್ರಂ ಕ್ವಾಸೀತ್ಪುರಾ । ಕ್ವ ವಾಂ ಯುವಾಂ ದೇಷ್ಟ್ರಾಯ ದಾನಾಯ ಪ್ರವೃತ್ತೌ ತಸ್ಥಥುರಿತ್ಯಶ್ವಿನೋರ್ನಿವಾಸಂ ಪೃಚ್ಛತಿ ॥

॥ ಪ್ರತಿಪದಾರ್ಥ ॥

**ಶುಭಸ್ಪತೀ**—ಉದಕಕ್ಕೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ । **ಯತ್**—ಯಾವಾಗ । **ಸೂರ್ಯಾಂ ಉಪ**—ಸೂರ್ಯೆಯನ್ನು ಪಡೆಯಲು । **ವರೇಯುಂ**—ಅವಳನ್ನು ದಾನಮಾಡುವ ಸವಿತೃವಿನಲ್ಲಿಗೆ । **ಅಯಾತಂ**—ಹೋದಿರೋ ಆಗ । **ವಾಂ**—ನಿಮ್ಮ ರಥದ । **ಏಕಂ ಚಕ್ರಂ**—ಈಗ ಗೋಚರವಾಗುವ ಒಂದು ಚಕ್ರವು । **ಕ್ವ ಆಸೀತ್**—ಎಲ್ಲಿ ಇದ್ದಿತು । **ದೇಷ್ಟ್ರಾಯ**—ದಾನಾರ್ಥವಾಗಿ ಪ್ರವೃತ್ತರಾದ ನೀವು । **ಕ್ವ**—ಎಲ್ಲಿ **ತಸ್ಥಥುः**—ನಿಂತಿದ್ದಿರಿ.

॥ ಭಾವಾರ್ಥ ॥

ಉದಕಕ್ಕೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ಯಾವಾಗ ನೀವು ಸೂರ್ಯೆಯನ್ನು ಪಡೆಯಲು ಅವಳನ್ನು ದಾನಮಾಡುವ ಸವಿತೃವಿನಲ್ಲಿಗೆ ಹೋದಿರೋ ಆಗ ನಿಮ್ಮ ರಥದ ಈಗ ಗೋಚರವಾಗುವ ಚಕ್ರವು ಎಲ್ಲಿದ್ದಿತು ? ದಾನಾರ್ಥವಾಗಿ ಪ್ರವೃತ್ತರಾದ ನೀವು ಎಲ್ಲಿ ನಿಂತಿದ್ದಿರಿ ?

## English Translation

When, lords of water, you came to the giver-away (to get) Surya, where was the one wheel of your car, where did you stand to make the gift ?

। ಸಂಹಿತಾಪಾಠಃ ।

ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ ।

ಅಥೈಕಂ ಚಕ್ರಂ ಯದ್ಗುಹಾ ತದದ್ಧಾತಯ ಇದ್ವಿದುಃ ॥ ೧೬ ॥

॥ ಪದಪಾಠಃ ॥

ದ್ವೇ ಇತಿ । ತೇ । ಚಕ್ರೇ ಇತಿ । ಸೂರ್ಯೇ । ಬ್ರಹ್ಮಾಣಃ । ಋತುऽಥಾ । ವಿದುಃ ।

ಅಥ । ಏಕಂ । ಚಕ್ರಂ । ಯತ್ । ಗುಹಾ । ತತ್ । ಅದ್ಧಾತಯಃ । ಇತ್ । ವಿದುಃ ॥ ೧೬ ॥

॥ ಸಾಯಣಭಾಷ್ಯಂ ॥

ಅಥ ಸ್ವಯಮೇವ ಸ್ವಾತ್ಮಾನಂ ಪ್ರತಿ ಸೂರ್ಯಾ ವದತಿ । ಹೇ ಸೂರ್ಯೇ ತೇ ತವ ದ್ವೇ ಚಕ್ರೇ ಪ್ರಜ್ಞಾತೇ ಪುರಾ ದೃಷ್ಟೇ ದ್ವೇ ಏವ ಚಂದ್ರಸೂರ್ಯಾತ್ಮಕೇ ಋತುಥರ್ತುಷು ವಿನಿರ್ದಿಷ್ಟೇ ಚಕ್ರೇ ಬ್ರಹ್ಮಾಣೋ ಬ್ರಾಹ್ಮಣಾ ವಿದುಃ । ಅಥೈಕಂ ಚಕ್ರಂ ತೃತೀಯಂ ಸಂವತ್ಸರಾತ್ಮಕಂ ಗುಹಾ ಗುಹಾಯಾಂ ನಿಹಿತಂ ಯದಸ್ತಿ ತದದ್ಧಾತಯ ಇತ್ । ಏತನ್ಮೇಧಾವಿನಾಮಸು ಪಠಿತಂ । ಮೇಧಾವಿನ ಏವ ವಿದುಃ । ಜಾನಂತಿ ॥

॥ ಪ್ರತಿಪದಾರ್ಥ ॥

**ಸೂರ್ಯೇ**—ಎಲೈ ಸೂರ್ಯಾದೇವಿಯೇ । **ತೇ**—ನಿನ್ನ ರಥದ । **ದ್ವೇ ಚಕ್ರೇ**—ಎರಡು ಚಕ್ರಗಳನ್ನೂ । **ಋತುಥಾ**—ಆಯಾ ನಿರ್ದಿಷ್ಟವಾದ ಋತುಕಾಲಗಳಲ್ಲಿ । **ಬ್ರಹ್ಮಾಣಃ**—ಮಂತ್ರವಿತ್ತುಗಳು । **ವಿದುಃ**—ಅರಿತಿದ್ದಾರೆ । **ಅಥ**—ಅಲ್ಲದೇ । **ಯತ್ ಏಕಂ ಚಕ್ರಂ**—ಯಾವ ಒಂದು ಚಕ್ರವು । **ಗುಹಾ**—ರಹಸ್ಯವಾಗಿರುವುದೋ । **ತತ್**—ಅದನ್ನು । **ಅದ್ಧಾತಯ ಇತ್**—ಮೇಧಾವಿಗಳು ಮಾತ್ರ । **ವಿದುಃ**—ಅರಿಯುತ್ತಾರೆ.

॥ ಭಾವಾರ್ಥ ॥

ಎಲೈ ಸೂರ್ಯಾದೇವಿಯೇ, ನಿನ್ನ ರಥದ ಎರಡು ಚಕ್ರಗಳನ್ನೂ ಆಯಾ ನಿರ್ದಿಷ್ಟವಾದ ಋತುಕಾಲಗಳಲ್ಲಿ ಮಂತ್ರವಿತ್ತುಗಳು ಅರಿತಿದ್ದಾರೆ. ಅಲ್ಲದೇ, ರಹಸ್ಯವಾಗಿ ಅಡಗಿರುವ ನಿನ್ನ ಒಂದು ಚಕ್ರದ ಸ್ವರೂಪವನ್ನು ಮೇಧಾವಿಗಳು ಮಾತ್ರ ಅರಿಯುತ್ತಾರೆ.

English Translation

Surya, the Brahmans know your two chariot wheels in their season ; the single wheel that is concealed, the sages know it also.

॥ ಸಂಹಿತಾಪಾಠಃ ॥

ಸೂರ್ಯಾಯೈ ದೇವೇಭ್ಯೋ ಮಿತ್ರಾಯ ವರುಣಾಯ ಚ ।
ಯೇ ಭೂತಸ್ಯ ಪ್ರಚೇತಸ ಇದಂ ತೇಭ್ಯೋಽಕರಂ ನಮಃ ॥ ೧೭ ॥

॥ ಪದಪಾಠಃ ॥

ಸೂರ್ಯಾಯೈ । ದೇವೇಭ್ಯಃ । ಮಿತ್ರಾಯ । ವರುಣಾಯ । ಚ ।
ಯೇ । ಭೂತಸ್ಯ । ಪ್ರಚೇತಸಃ । ಇದಂ । ತೇಭ್ಯಃ । ಅಕರಂ । ನಮಃ ॥ ೧೭ ॥

॥ ಸಾಯಣಭಾಷ್ಯಂ ॥

ಸೂರ್ಯಾಯೈ ಸೂರ್ಯಸ್ಯ ಪತ್ನ್ಯೈ ದೇವೇಭ್ಯೋಽಗ್ನ್ಯಾದಿಭ್ಯೋ ಮಿತ್ರಾಯ ವರುಣಾಯ ಚ ಯೇ ಚ ಭೂತಸ್ಯ ಭೂತಜಾತಸ್ಯ ಪ್ರಚೇತಸಃ ಸುಮತಯೋಽಭಿಮತಪ್ರದಾ ಭವಂತಿ ತೇಭ್ಯಃ ಸರ್ವೇಭ್ಯ ಇದಂ ನಮೋ ನಮಸ್ಕಾರಮಕರಂ । ಕರೋಮಿ ॥

॥ ಪ್ರತಿಪದಾರ್ಥ ॥

**ಸೂರ್ಯಾಯೈ**—ಸೂರ್ಯಪತ್ನಿಗೂ । **ದೇವೇಭ್ಯಃ**—ದೇವತೆಗಳಿಗೂ । **ಮಿತ್ರಾಯ**—ಮಿತ್ರನಿಗೂ । **ವರುಣಾಯ**—ವರುಣನಿಗೂ । **ಚ**—ಮತ್ತು । **ಯೇ**—ಯಾವ ದೇವತೆಗಳು । **ಭೂತಸ್ಯ**—ಸಕಲ ಭೂತ ಜಾತಗಳಲ್ಲಿಯೂ । **ಪ್ರಚೇತಸಃ**—ಉತ್ತಮವಾದ ಅನುಗ್ರಹಬುದ್ಧಿಯುಳ್ಳವರಾಗಿರುವರೋ । **ತೇಭ್ಯಃ**—ಅವರೆಲ್ಲರಿಗೂ । **ಇದಂ ನಮಃ**—ಈ ನಮಸ್ಕಾರವನ್ನು । **ಅಕರಂ**—ಅರ್ಪಿಸುತ್ತೇನೆ.

॥ ಭಾವಾರ್ಥ ॥

ಸೂರ್ಯಾದೇವಿಗೂ, ಮಿತ್ರ, ವರುಣ ಮತ್ತು ಇತರ ದೇವತೆಗಳಿಗೂ, ಲೋಕದ ಭೂತಗಳ ವಿಷಯದಲ್ಲಿ ಅನುಗ್ರಹಬುದ್ಧಿಯುಳ್ಳ ಇತರ ದೇವತೆಗಳಿಗೂ ಈ ನಮಸ್ಕಾರವನ್ನು ಅರ್ಪಿಸುತ್ತೇನೆ.

English Translation

I offer this adarotion to Surya, to the gods, to Mitra and Varuna, (and to all those) who are considerate to created beings.

॥ ಸಂಹಿತಾಪಾಠಃ ॥

ಪೂರ್ವಾಪರಂ ಚರತೋ ಮಾಯಯೈತೌ ಶಿಶೂ ಕ್ರೀಳಂತೌ ಪರಿ ಯಾತೋ ಅಧ್ವರಂ ।
ವಿಶ್ವಾನ್ಯನ್ಯೋ ಭುವನಾಭಿಚಷ್ಟ ಋತೂಁರನ್ಯೋ ವಿದಧಜ್ಜಾಯತೇ ಪುನಃ ॥

॥ ಪದಪಾಠಃ ॥

ಪೂರ್ವಽಅಪರಂ । ಚರತಃ । ಮಾಯಯಾ । ಏತೌ । ಶಿಶೂ ಇತಿ । ಕ್ರೀಳಂತೌ । ಪರಿ । ಯಾತಃ । ಅಧ್ವರಂ ।
ವಿಶ್ವಾನಿ । ಅನ್ಯಃ । ಭುವನಾ । ಅಭಿಽಚಷ್ಟೇ । ಋತೂನ್ । ಅನ್ಯಃ । ವಿಽದಧತ್ । ಜಾಯತೇ । ಪುನರಿತಿ ॥ ೧೮ ॥

॥ ಸಾಯಣಭಾಷ್ಯಂ ॥

ಕಶ್ಚಿತ್ಪೂರ್ವಂ ಗಚ್ಛತಿ ಸೂರ್ಯಃ। ಅನ್ಯಸ್ತಮನುಚರತಿ ಚಂದ್ರಮಾಃ। ಏವಂ ಪೂರ್ವಾಪರಂ ಪೌರ್ವಾಪರ್ಯೇಣ ಮಾಯಯಾ ಸ್ವಪ್ರಜ್ಞಾನೇನೈತಾವಾದಿತ್ಯಚಂದ್ರೌ ಚರತಃ। ಗಚ್ಛತೋ ದಿವಿ। ತೌ ಶಿಶೂ। ಶಿಶುವತ್ಪ್ರಮಣಾಜ್ಞಾಯಮಾನತ್ವಾದ್ವಾ ಶಿಶೂ ಇತ್ಯುಚ್ಯೇತೇ। ಶಿಶೂ ಸಂತೌ ಕ್ರೀಳಂತಾವಂತರಿಕ್ಷೇ ವಿಹರಂತಾವಧ್ವರಂ ಪರಿ ಯಾತಃ। ಯಜ್ಞಂ ಪ್ರತಿ ಗಚ್ಛತಃ। ತಯೋರನ್ಯ ಆದಿತ್ಯೋ ವಿಶ್ವಾನಿ ಭುವನಾನ್ಯಭಿಚಷ್ಟೇ। ಅಭಿಪಶ್ಯತಿ। ಋತೂನ್ವಸಂತಾದೀನನ್ಯಶ್ಚಂದ್ರಮಾ ವಿದಧತ್ಕುರ್ವನ್ಮಾಸಾರ್ಧಮಾಸಾಂಶ್ಚ ಕುರ್ವನ್ಪುನರ್ಜಾಯತೇ। ಯದ್ಯುಭಯೋರಪಿ ಪುನರ್ಜಾತಿರಸ್ತಿ ತಥಾಪಿ ಸೂರ್ಯಸ್ಯ ಸರ್ವದಾ ಪ್ರವೃದ್ಧೇರುದಯೋ ನಾಭಿಪ್ರೇತಃ। ಚಂದ್ರಸ್ಯ ತು ಹ್ರಾಸವೃದ್ಧಿಸದ್ಭಾವಾತ್ಪುನಃ ಪುನರ್ಜಾಯತ ಇತ್ಯುಕ್ತಿರ್ಯುಕ್ತಾ। ಚಂದ್ರಮಾ ವೈ ಜಾಯತೇ ಪುನಃ। ತೈ. ಬ್ರಾ. ೩.೯.೫-೪। ಇತ್ಯಾದಿಶ್ರುತೇಃ ॥

॥ ಪ್ರತಿಪದಾರ್ಥ ॥

**ಶಿಶೂ**—ಶಿಶುರೂಪರಾದ। **ಏತೌ**—ಈ ಸೂರ್ಯ ಮತ್ತು ಚಂದ್ರರು। **ಪೂರ್ವಾಪರ**—ಪರ್ಯಾಯರೂಪವಾಗಿ (ಒಬ್ಬರಾದ ಮೇಲೆ ಇನ್ನೊಬ್ಬರು)। **ಮಾಯಯಾ**—ತಮ್ಮ ಅಸಾಧಾರಣವಾದ ಜ್ಞಾನದಿಂದ ಕೂಡಿ। **ಚರತಃ**—ಸಂಚರಿಸುತ್ತಾರೆ। **ಕ್ರೀಳಂತೌ**—ಅಂತರಿಕ್ಷದಲ್ಲಿ ವಿಹರಿಸುತ್ತ। **ಅಧ್ವರಂ ಪರಿ**—ಯಜ್ಞಾಭಿಮುಖವಾಗಿ। **ಯಾತಃ**—ಬರುತ್ತಾರೆ। **ಅನ್ಯಃ**—ಇವರಲ್ಲಿ ಒಬ್ಬನಾದ ಆದಿತ್ಯನು। **ವಿಶ್ವಾನಿ ಭುವನಾ**—ಸಕಲ ಲೋಕಗಳನ್ನೂ। **ಅಭಿಚಷ್ಟೇ**—ನೋಡುತ್ತಾನೆ। **ಅನ್ಯಃ**—ಇನ್ನೊಬ್ಬನಾದ ಚಂದ್ರನು। **ಋತೂನ್**—ವಸಂತಾದಿ ಋತುಗಳನ್ನು। **ವಿದಧತ್**—ನಿಯಮಿಸುತ್ತ। **ಪುನಃ**—ತಿರುಗಿಯೂ। **ಜಾಯತೇ**—ಉತ್ಪನ್ನನಾಗುತ್ತಾನೆ.

॥ ಭಾವಾರ್ಥ ॥

ಶಿಶುರೂಪರಾದ ಈ ಸೂರ್ಯ ಮತ್ತು ಚಂದ್ರರು ತಮ್ಮ ಅಸಾಧಾರಣವಾದ ಜ್ಞಾನದಿಂದ ಕೂಡಿ ಪರ್ಯಾಯರೂಪದಲ್ಲಿ ಸಂಚರಿಸುತ್ತಾರೆ. ಅಂತರಿಕ್ಷದಲ್ಲಿ ವಿಹರಿಸುತ್ತ ಯಜ್ಞಾಭಿಮುಖವಾಗಿ ಬರುತ್ತಾರೆ. ಇವರಲ್ಲಿ ಒಬ್ಬನಾದ ಆದಿತ್ಯನು ಸಕಲ ಲೋಕಗಳನ್ನು ನೋಡುತ್ತಾನೆ. ಇನ್ನೊಬ್ಬನಾದ ಚಂದ್ರನು ವಸಂತಾದಿ ಋತುಗಳನ್ನೂ ನಿಯಮಿಸುತ್ತ ಪುನಃಪುನಃ ಉತ್ಪನ್ನನಾಗುತ್ತಾನೆ.

English Translation

These two (the sun and moon) wandering in thought one after the other, youthful, sportive, approach the sacrifice; one (of them) looks over all worlds, the other regulating the seasons is born repeatedly.

॥ ಸಂಹಿತಾಪಾಠಃ ॥

ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ।

ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ಪ್ರ ಚಂದ್ರಮಾಸ್ತಿರತೇ ದೀರ್ಘ-
ಮಾಯುಃ ॥ ೧೯ ॥

॥ ಪದಪಾಠಃ ॥

ನವಃಽನವಃ । ಭವತಿ । ಜಾಯಮಾನಃ । ಅಹ್ನಾಂ । ಕೇತುಃ । ಉಷಸಾಂ । ಏತಿ । ಅಗ್ರಂ ।
ಭಾಗಂ । ದೇವೇಭ್ಯಃ । ವಿ । ದಧಾತಿ । ಆಽಯನ್ । ಪ್ರ । ಚಂದ್ರಮಾಃ । ತಿರತೇ । ದೀರ್ಘಂ । ಆಯುಃ ॥

॥ ಸಾಯಣಭಾಷ್ಯಂ ॥

ಅತಿಮೂರ್ತಿನಾಮ್ನ್ಯೇಕಾಹೇ ಶುಕ್ಲಪಕ್ಷೇ ಚಾಂದ್ರಮಸೀಷ್ಟಿಃ । ತತ್ರ ನವೋನವ ಇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ನವೋನವೋ ಭವತಿ ಜಾಯಮಾನಸ್ತರಣಿರ್ವಿಶ್ವದರ್ಶತಃ । ಆ. ೯-೮ ॥ ಇತಿ ॥

ಅಯಂ ಚಂದ್ರಮಾ ಜಾಯಮಾನಃ ಪ್ರತಿದಿನಂ ಜಾಯಮಾನ ಏಕೈಕಕಲಾಧಿಕ್ಯೇನೋತ್ಪದ್ಯಮಾನಃ ಸನ್ನವೋನವೋ ಭವತಿ । ಪ್ರತಿದಿನಂ ನೂತನ ಏವ ಭವತಿ । ಏತತ್ಪೂರ್ವಪಕ್ಷಾದ್ಯಭಿಪ್ರಾಯಂ । ತಥಾಹ್ನಾಂ ದಿವಸಾನಾಂ ಕೇತುಃ ಪ್ರಜ್ಞಾಪಕಃ ಪ್ರತಿಪದಾದೀನಾಂ ತಿಥೀನಾಂ ಚಂದ್ರಕಲಾಹ್ರಾಸವೃದ್ಧ್ಯಧೀನತ್ವಾತ್ । ತಾದೃಶಶ್ಚಂದ್ರಮಾ ಉಷಸಾಂ ಪ್ರಭಾತೀನಾಮಗ್ರಮೇತಿ । ಏತತ್ಕೃಷ್ಣಪಕ್ಷಾಂತಾಭಿಪ್ರಾಯಂ । ಕೇಚನೈತಂ ಪಾದಮಾದಿತ್ಯದೈವತ್ಯಮಾಹುಃ । ತಸ್ಮಿನ್ಪಕ್ಷೇಽಹ್ನಾಂ ಕೇತುತ್ವಮುಷಸಾಮಗ್ರಗತಿಶ್ಚ ಪ್ರಸಿದ್ಧೇ । ದೇವೇಭ್ಯೋ ಭಾಗಂ ಹವಿರ್ಭಾಗಂ ವಿ ದಧಾತಿ । ಕರೋತಿ । ಉಭಯಪಕ್ಷಾಂತೇ । ಕಿಂ ಕುರ್ವನ್ । ಆಯನ್ ಪ್ರತಿದಿನಂ ಹ್ರಾಸವೃದ್ಧ್ಯಾ ಪಕ್ಷಾಂತಮಭಿಗಚ್ಛನ್ । ಏತದರ್ಧಮಾಸಾಭಿಪ್ರಾಯಂ । ಚಂದ್ರಮಾ ಉಕ್ತಲಕ್ಷಣೋ ದೇವೋ ದೀರ್ಘಮಾಯುಸ್ತಿರತೇ । ವರ್ಧಯತಿ ॥

॥ ಪ್ರತಿಪದಾರ್ಥ ॥

**ಚಂದ್ರಮಾಃ**—ಚಂದ್ರನು । **ಜಾಯಮಾನಃ**—ಪ್ರತಿದಿನವೂ ಉತ್ಪನ್ನನಾಗುತ್ತ । **ನವೋ ನವೋ ಭವತಿ**—ಹೊಸ ಹೊಸದಾಗಿ ಕಾಣುತ್ತಾನೆ । **ಅಹ್ನಾಂ**—ಪಾಡ್ಯವೇ ಮುಂತಾದ ದಿನಗಳಿಗೆ । **ಕೇತುಃ**—ಪ್ರಜ್ಞಾಪಕನಾದ ಚಂದ್ರನು । **ಉಷಸಾಂ ಅಗ್ರಂ**—ಉಷಸ್ಸುಗಳಿಗೆ ಅಗ್ರಭಾಗದಲ್ಲಿ (ಮುಂಭಾಗದಲ್ಲಿ) । **ಏತಿ**—ಹೋಗುತ್ತಾನೆ । **ಆಯನ್**—ತನ್ನ ಕ್ರಮದಲ್ಲಿ ಆವಿರ್ಭವಿಸುತ್ತ । **ದೇವೇಭ್ಯಃ**—ದೇವತೆಗಳಿಗೆ । **ಭಾಗಂ**—ಯಜ್ಞಭಾಗವನ್ನು । **ವಿ ದಧಾತಿ**—ನಿಯಮಿಸುತ್ತಾನೆ । **ದೀರ್ಘಂ ಆಯುಃ**—ದೀರ್ಘವಾದ ಆಯುಸ್ಸನ್ನು । **ತಿರತೇ**—ಬೆಳೆಸುತ್ತಾನೆ.

॥ ಭಾವಾರ್ಥ ॥

ಚಂದ್ರನು ಪ್ರತಿದಿನವೂ ಉತ್ಪನ್ನನಾಗುತ್ತ ಪ್ರತಿದಿನವೂ ಹೊಸಬನಾಗಿ ಕಾಣುತ್ತಾನೆ. ಪಾಡ್ಯವೇ ಮುಂತಾದ ದಿನಗಳಿಗೆ ಪ್ರಜ್ಞಾಪಕನಾದ ಚಂದ್ರನು ಉಷಸ್ಸುಗಳ ಮುಂಭಾಗದಲ್ಲಿ ಹೋಗುತ್ತಾನೆ. ತನ್ನ ದೈನಂದಿನವ ಕ್ರಮದಲ್ಲಿ ಆವಿರ್ಭವಿಸುತ್ತ ದೇವತೆಗಳಿಗೆ ಯಜ್ಞಭಾಗವನ್ನು ನಿಯಮಿಸುತ್ತಾನೆ. ದೀರ್ಘವಾದ ಆಯುಸ್ಸನ್ನು ಬೆಳೆಸುತ್ತಾನೆ.

## English Translation

New every day (the moon) is born ; the manifester of days he goes in front of the Dawns ! he distributes their portion to the gods as he goes ; the moon protracts a long existence.

### ॥ ವಿಶೇಷವಿಷಯಗಳು ॥

**ಅತಿಮೂರ್ತಿ** ಎಂಬ ಒಂದು ದಿನದ ಮಟ್ಟಿಗೆ ಮಾಡುವ ಇಷ್ಟಿಯನ್ನು ಶುಕ್ಲಪಕ್ಷದಲ್ಲಿ ಮಾಡುವಾಗ ಅದಕ್ಕೆ ಚಾಂದ್ರಮಸೀಷ್ಟಿಯೆಂದು ಹೆಸರು. ಆ ಇಷ್ಟಿಯಲ್ಲಿ **ನವೋನವಃ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ನವೋನವೋ ಭವತಿ ಜಾಯಮಾನಸ್ತರಣಿರ್ವಿಶ್ವದರ್ಶತಃ** ಎಂಬ ಸೂತ್ರದಿಂದ (ಆ. ೯-೮) ವಿವೃತವಾಗಿರುವುದು.

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ನವೋನವೋ ಭವತಿ ಜಾಯಮಾನ ಇತಿ ಪೂರ್ವಪಕ್ಷಾದಿಮಭಿಪ್ರೇತ್ಯ । ಅಹ್ನಾಂ ಕೇತುರುಷಸಾಮೇತ್ಯಗ್ರಂ ಇತ್ಯಪರಪಕ್ಷಾಂತಮಭಿಪ್ರೇತ್ಯ । ಆದಿತ್ಯದೈವತೋ ದ್ವಿತೀಯಃ ಪಾದ ಇತ್ಯೇಕೇ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ ಇತ್ಯರ್ಧಮಾಸೇಜ್ಯಾಮಭಿಪ್ರೇತ್ಯ । ಪ್ರವರ್ಧಯತೇ ಚಂದ್ರಮಾ ದೀರ್ಘಮಾಯುಃ ॥**

(ನಿ. ೧೧-೬)

ಒಂದು ಮಾಸದಲ್ಲಿ ಪೂರ್ವಪಕ್ಷ ಅಪರಪಕ್ಷ ಎಂಬ ಎರಡು ಪಕ್ಷಗಳಿರುವವು. ಒಂದೊಂದು ಪಕ್ಷದಲ್ಲಿಯೂ ಹದಿನೈದು ದಿನಗಳಿರುವವು. ಚಂದ್ರನು ಪೂರ್ವಪಕ್ಷದ ದಿನಗಳಲ್ಲಿ ಉದಯಿಸುವಾಗ ದಿನದಿನಕ್ಕೂ ವೃದ್ಧಿಯಾಗಿ ಉದಯಿಸುವನು. ಎಂದರೆ ಮೊದಲನೆಯ ದಿನದಲ್ಲಿ ಉದಯಿಸದ ಆಕಾರಕ್ಕಿಂತಲೂ ಎರಡನೆಯ ದಿನದ ಆಕಾರವು ಸ್ವಲ್ಪ ವೃದ್ಧಿಯಾಗಿರುವುದು. ಇದರಂತೆ ಪ್ರತಿದಿನವೂ ಸ್ವಲ್ಪಸ್ವಲ್ಪವಾಗಿ ಹೆಚ್ಚುತ್ತಾ ಹದಿನೈದನೆಯ ದಿವಸ ಎಂದರೆ ಪೌರ್ಣಮಾಸಿಯ ದಿವಸ ಪೂರ್ಣಚಂದ್ರನಾಗಿ ಉದಯಿಸುವನು. ಈ ರೀತಿ ಪೂರ್ವಪಕ್ಷದಲ್ಲಿ ಪ್ರತಿದಿನವೂ ಬೇರೆಬೇರೆಯಾದ (ಸ್ವಲ್ಪ ಹೆಚ್ಚಾದ) ಆಕಾರದಿಂದ ಉದಯಿಸುವ ಚಂದ್ರನನ್ನು ಈ ಋಕ್ಕಿನಲ್ಲಿ **ನವೋ ನವೋ ಭವತಿ ಜಾಯಮಾನಃ**—ಪ್ರತಿದಿನವೂ ಹೊಸಹೊಸ ಆಕಾರದಿಂದ ಉತ್ಪನ್ನನಾಗುವನು ಎಂದು ವರ್ಣಿಸಿದೆ. ಈ ವಾಕ್ಯವು ಚಂದ್ರನ ಪೂರ್ವಪಕ್ಷದ ಗತಿಯನ್ನು ನಿರ್ದೇಶಿಸುವುದು. ಇನ್ನು **ಅಹ್ನಾಂ ಕೇತುರುಷಸಾಮೇತ್ಯಗ್ರಂ** ಎಂಬ ವಾಕ್ಯವು ಚಂದ್ರನ ಅಪರಪಕ್ಷದ ಗತಿಯನ್ನು ನಿರ್ದೇಶಿಸುವುದು. ಪೂರ್ವಪಕ್ಷದ ಗತಿಗೆ ವಿರುದ್ಧವಾಗಿ ಅಪರಪಕ್ಷದಲ್ಲಿ ಚಂದ್ರನ ಗತಿ ಇರುವುದು ಎಂದರೆ ಅಪರಪಕ್ಷದಲ್ಲಿ ಚಂದ್ರನ ಆಕಾರವು ದಿನದಿನಕ್ಕೆ ಕಡಿಮೆಯಾಗುತ್ತಾ ಪಕ್ಷದ ಕೊನೆಯ ದಿನವಾದ ಅಮಾವಾಸ್ಯೆಯಲ್ಲಿ ಚಂದ್ರನು ಪೂರ್ತಾ ಕಾಣಿಸದೆ ಅಸ್ತಂಗತನಾಗಿಯೇ ಇರುವನು. ಇದಲ್ಲದೆ ಅಪರಪಕ್ಷದಲ್ಲಿ ಚಂದ್ರನು ಪ್ರತಿದಿನವೂ ಸಾಯಂಕಾಲದಲ್ಲಿಯೇ ಉದಯಿಸುವುದಿಲ್ಲ. ದಿನದಿನಕ್ಕೂ ಎರಡೆರಡು ಘಳಿಗೆ ಸಾವಕಾಶವಾಗಿ ಉದಯಿಸಿ ಸೂರ್ಯೋದಯಾನಂತರ ಅಸ್ತಂಗತನಾಗುವನು. ಆದ್ದರಿಂದಲೇ ಇಲ್ಲಿ **ಅಹ್ನಾಂ ಕೇತುರುಷಸಾಮೇತ್ಯಗ್ರಂ**—ಉಷಃಕಾಲಾನಂತರ ಅಹಸ್ಸಿನಲ್ಲಿ ಧ್ವಜದಂತೆ ಗೋಚರಿಸುತ್ತಿರುವನು ಎಂದು ಇಲ್ಲಿ ಹೇಳಿದೆ. ಎಂದರೆ ಸೂರ್ಯೋದಯಾ

ನಂತರವೂ ಚಂದ್ರನು ಗೋಚರಿಸುವವನಾದರೂ ಅವನು ಪ್ರಕಾಶಿಸುವುದಿಲ್ಲ. ಈ ದ್ವಿತೀಯಪಾದವು ಆದಿತ್ಯನನ್ನು ನಿರ್ದೇಶಿಸುವುದು ಎಂದು ಕೆಲವರ ಮತವು. ಏಕೆಂದರೆ ಉಷಃಕಾಲದಲ್ಲಿ ಅಹಸ್ಸಿಗೆ ಹಗಲಿಗೆ ಧ್ವಜಸ್ಥಾನೀಯವಾಗಿ (ಪ್ರಾರಂಭಕಾಲದಲ್ಲಿ) ಪ್ರಥಮತಃ ಸೂರ್ಯನು ಆವಿರ್ಭವಿಸುವನು ಎಂದರೆ ಸೂರ್ಯನು ಉಷಃಕಾಲಾನಂತರ ಹಗಲಿಗೆ ಧ್ವಜಸ್ಥಾನೀಯವಾಗಿ ಉದಯಿಸುವನು ಎಂದಭಿಪ್ರಾಯವು.

ಇನ್ನು ಮೂರನೆಯ ಪಾದವಾದ **ಭಾಗಂ ದೇವೇಭ್ಯೋ ವಿದಧಾತ್ಯಾಯನ್** ಎಂಬ ವಾಕ್ಯಕ್ಕೆ ಚಂದ್ರನು ದೇವತೆಗಳಿಗೆ ಅವರವರಿಗೆ ಸಲ್ಲಬೇಕಾದ ಹವಿರ್ಭಾಗಗಳನ್ನು ಹಂಚಿಕೊಡುವನು. ಎಂದರೆ—ಚಂದ್ರನು ಪ್ರತಿಮಾಸದಲ್ಲಿಯೂ ಪೂರ್ವಪಕ್ಷ ಮತ್ತು ಅಪರಪಕ್ಷಗಳೆಂಬ ಕಾಲವಿಭಾಗಗಳಿಗೆ ಕಾರಣಕರ್ತನಾಗಿರುವನು. ಈ ಎರಡು ಪಕ್ಷಗಳಿಗೆ ಸಂಬಂಧಿಸಿದಂತೆ ಪಕ್ಷಾಂತ್ಯದಲ್ಲಿ ದರ್ಶ (ಅಮಾವಾಸ್ಯಾ) ಪೂರ್ಣಿಮಾಸೇಷ್ಟಿಗಳನ್ನು ಜನರು ಆಚರಿಸುವರು. ಆ ಇಷ್ಟಿಗಳಲ್ಲಿ ಯಜಮಾನರು ದೇವತೆಗಳನ್ನುದ್ದೇಶಿಸಿ ಹವಿರಾದಿಗಳನ್ನು ಅರ್ಪಿಸುವರು. ಆದ್ದರಿಂದ ಕಾಲವಿಭಾಗ ಕರ್ತನಾಗಿ ಆ ಕಾಲಗಳಲ್ಲಿ ಇಷ್ಟಿಗಳನ್ನು ಮಾಡುವಾಗ ದೇವತೆಗಳಿಗೆ ಹವಿಸ್ಸನ್ನು ಒದಗಿಸಲು ಚಂದ್ರನು ಕಾರಣ ಕರ್ತನಾಗಿರುವುದರಿಂದ ಇಲ್ಲಿ **ಭಾಗಂ ದೇವೇಭ್ಯೋ ವಿದಧಾತಿ** ದೇವತೆಗಳಿಗೆ ಹವಿರ್ಭಾಗಗಳನ್ನು ಹಂಚಿಕೊಡುತ್ತಾನೆ ಎಂದು ವಿವರಿಸಲಾಗಿದೆ.

ಇನ್ನು ನಾಲ್ಕನೆಯಪಾದವಾದ-**ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ** ಎಂಬ ವಾಕ್ಯದಲ್ಲಿ ಮೇಲೆ ಹೇಳಿದ ಗುಣವಿಶಿಷ್ಟನಾದ ಚಂದ್ರನು ಯಜ್ಞಮಾಡುವ ಯಜಮಾನಾದಿಗಳಿಗೆ ದೀರ್ಘಾಯುಸ್ಸನ್ನೂ ಕೊಡಲಿ ಎಂಬ ಆಶಾಸನೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಸುಕಿಂಶುಕಂ ಶಲ್ಮಲಿಂ ವಿಶ್ವರೂಪಂ ಹಿರಣ್ಯವರ್ಣಂ ಸುವೃತಂ ಸುಚಕ್ರಂ ।
ಆ ರೋಹ ಸೂರ್ಯೇ ಅಮೃತಸ್ಯ ಲೋಕಂ ಸ್ಯೋನಂ ಪತ್ಯೇ ವಹತುಂ ಕೃಣುಷ್ವ ॥ ೨೦ ॥

॥ ಪದಪಾಠಃ ॥

ಸುಕಿಂಶುಕಂ । ಶಲ್ಮಲಿಂ । ವಿಶ್ವऽರೂಪಂ । ಹಿರಣ್ಯऽವರ್ಣಂ । ಸುऽವೃತಂ । ಸುऽಚಕ್ರಂ ।
ಆ । ರೋಹ । ಸೂರ್ಯೇ । ಅಮೃತಸ್ಯ । ಲೋಕಂ । ಸ್ಯೋನಂ । ಪತ್ಯೇ । ವಹತುಂ । ಕೃಣುಷ್ವ ॥೨೦॥

॥ ಸಾಯಣಭಾಷ್ಯಂ ॥

**ಸುಕಿಂಶುಕಂ** ಶೋಭನಕಿಂಶುಕವೃಕ್ಷನಿರ್ಮಿತಂ ತಥಾ **ಶಲ್ಮಲಿಂ** ಶಲ್ಮಲಿವೃಕ್ಷನಿರ್ಮಿತಂ **ವಿಶ್ವರೂಪಂ** ನಾನಾರೂಪಂ **ಹಿರಣ್ಯವರ್ಣಂ** ಹಿತರಮಣೀಯವರ್ಣಂ ಹಿರಣ್ಯಾಲಂಕಾರಯುಕ್ತಂ ವಾ **ಸುವೃತಂ** ಸುಷ್ಠುವರ್ತನಂ **ಸುಚಕ್ರಂ** ಶೋಭನಚಕ್ರೋಪೇತಂ ರಥಂ ಹೇ **ಸೂರ್ಯೇ ಆ ರೋಹ** ।

ಅಮೃತಸ್ಯ ಲೋಕಂ ಸ್ಥಾನಂ ಸ್ಯೋನಂ ಸುಖಕರಂ ಪತ್ಯೇ ಸೋಮಾಯ ವಹತುಂ ವಹನಮಾತ್ಮನಃ ಪ್ರಾಪಣಂ ಕೃಣುಷ್ವ । ಕುರುಷ್ವ । ಅತ್ರ ನಿರುಕ್ತಂ । ೧೨-೮ । ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

**ಸೂರ್ಯೇ**—ಎಲೈ ಸೂರ್ಯಾದೇವಿಯೇ । **ಸುಕಿಂಶುಕಂ**—ಉತ್ತಮವಾದ ಕಿಂಶುಕವೃಕ್ಷದಿಂದ ನಿರ್ಮಿತವೂ । **ಶಲ್ಮಲಿಂ**—ಶಲ್ಮಲೀವೃಕ್ಷದಿಂದ ನಿರ್ಮಿತವೂ । **ವಿಶ್ವರೂಪಂ**—ಅನೇಕ ರೂಪವುಳ್ಳದ್ದೂ । **ಹಿರಣ್ಯವರ್ಣಂ**—ಸುವರ್ಣಮಯವಾದ ಅಲಂಕಾರವುಳ್ಳದ್ದೂ । **ಸುವೃತಂ**—ಉತ್ತಮವಾದ ಹೊದ್ದಿಕೆಯುಳ್ಳದ್ದೂ । **ಸುಚಕ್ರಂ**—ಶ್ರೇಷ್ಠವಾದ ಚಕ್ರವುಳ್ಳದ್ದೂ ಆದ ರಥವನ್ನು । **ಆ ರೋಹ**—ಹತ್ತಿ ಕುಳಿತಿಕೊ । **ಪತ್ಯೇ**—ನಿನ್ನ ಪತಿಯಲ್ಲಿಗೆ । **ವಹತುಂ**—ನೀನು ಹೋಗುವಾಗ । **ಅಮೃತಸ್ಯ**—ಮರಣರಹಿತವಾದ । **ಲೋಕಂ**—ದೇವಲೋಕವನ್ನು । **ಸ್ಯೋನಂ**—ಸುಖಕರವನ್ನಾಗಿ । **ಕೃಣುಷ್ವ**—ಮಾಡು.

॥ ಭಾವಾರ್ಥ ॥

ಎಲೈ ಸೂರ್ಯಾದೇವಿಯೇ, ಉತ್ತಮವಾದ ಕಿಂಶುಕ ಮತ್ತು ಶಲ್ಮಲೀವೃಕ್ಷಗಳಿಂದ ನಿರ್ಮಿತವೂ, ಅನೇಕ ರೂಪವುಳ್ಳದ್ದೂ, ಸುವರ್ಣಮಯವಾದ ಅಲಂಕಾರವುಳ್ಳದ್ದೂ, ಉತ್ತಮವಾದ ಹೊದ್ದಿಕೆಯುಳ್ಳದ್ದೂ, ಶ್ರೇಷ್ಠವಾದ ಚಕ್ರವುಳ್ಳದ್ದೂ, ಆದ ರಥವನ್ನು ಹತ್ತಿ ಕುಳಿತುಕೊ. ನಿನ್ನ ಪತಿಯಲ್ಲಿಗೆ ನೀನು ಹೋಗುವಾಗ ಮರಣರಹಿತವಾದ ದೇವಲೋಕವನ್ನು ಸುಖಕರವನ್ನಾಗಿ ಮಾಡು.

## English Translation

Ascend, Surya; the chariot made of good kimshuka wood and of shalmali, multiform, decorated with gold, well-covered, well-wheeled; prepare the happy world of the immortals, yonr marriage procession to your husband.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

> ಸುಕಾಶನಂ ಶಲ್ಮಲಂ ಸರ್ವರೂಪಂ । ಅಪಿ ವೋಪಮಾರ್ಥೇ ಸ್ಯಾತ್ । ಸುಕಿಂಶುಕಮಿವ ಶಲ್ಮಲಿಮಿತಿ । ಕಿಂಶುಕಂ ಕ್ರಂಶತೇಃ । ಪ್ರಕಾಶಯತಿಕರ್ಮಣಃ । ಶಲ್ಮಲಿಃ ಸುಶರೋ ಭವತಿ। ಶರವಾನ್ವಾ । ಆರೋಹ ಸೂರ್ಯೇ ಅಮೃತಸ್ಯ ಲೋಕಮುದಕಸ್ಯ ಸುಖಂ ಪತ್ಯೇ ವಹತುಂ ಕುರುಷ್ವ । ಸವಿತಾ ಸೂರ್ಯಾಂ ಪ್ರಾಯಚ್ಛತ್ ಸೋಮಾಯ ರಾಜ್ಞೇ ಪ್ರಜಾಪತಯೇ ವಾ ಇತಿ ಚ ಬ್ರಾಹ್ಮಣಂ ॥
>
> (ನಿ. ೧೨-೮)

ಸೂರ್ಯಾದೇವಿಯು ಹತ್ತಿಕುಳಿತುಕೊಳ್ಳುವ ರಥವನ್ನು ವರ್ಣಿಸುವಾಗ ಋಷಿಯು **ಸುಕಿಂಶುಕಂ** ಮೊದಲಾದ ಶಬ್ದಗಳಿಂದ ಅದನ್ನು ವರ್ಣಿಸುತ್ತಾನೆ.

**ಸುಕಿಂಶುಕಂ**—ಸುಷ್ಠು ಕಾಶನಂ ದೀಪನಂ ಲೋಕಾನಾಂ । ಚೆನ್ನಾಗಿ ಪ್ರಕಾಶಿಸುತ್ತಿರುವ, ಅತ್ಯಂತ ಶೋಭಾಯಮಾನವಾದ.

**ಶಲ್ಮಲಿಂ**—ಶನ್ನಮಲಂ ವ್ಯಪಗತಮಲಂ । ಕಲ್ಮಷರಹಿತನಾದ, ಕೊಳಕಿಲ್ಲದ, ಶುಭ್ರವಾದ, ಸ್ವಚ್ಛವಾದ.

**ವಿಶ್ವರೂಪಂ**—ಸರ್ವರೂಪಂ । ನಾನಾವಿಧ ಎಂದ ಚಿತ್ರವಿಚಿತ್ರವಾದ ರೂಪಗಳುಳ್ಳ, ನಾನಾಲಂಕಾರ ಯುಕ್ತವಾದ.

ಅಥವಾ **ಸುಕಿಂಶುಕಂ ಶಲ್ಮಲಿಂ** ಎಂಬ ಶಬ್ದಗಳಿಗೆ ಉಪಮಾರ್ಥವಾಗಿಯೂ ಅರ್ಥವನ್ನು ಹೇಳಬಹುದು ಶಲ್ಮಲಿ ಎಂದರೆ ಪಾಲಾಶ ಮುತ್ತುಗದ ಗಿಡ. ಕಿಂಶುಕವೆಂದರೆ ಆಗತಾನೇ ಚಿಗುರಿರುವ ಹೂವು. ಆದ್ದರಿಂದ ಸಕಿಂಶುಕಂ ಶಲ್ಮಲಿಂ ಎಂಬ ಶಬ್ದಗಳಿಗೆ ಕೆಂಪಗಿರುವ ಅನೇಕ ಪುಷ್ಪಗಳಿಂದ ಸಿಬಿಡವಾಗಿ ಶೋಭಿಸುತ್ತಿರುವ ಮುತ್ತುಗದ ಗಿಡದಂತೆ ಕಾಣುತ್ತಿರುವ ರಥವನ್ನು ಎಂದು ರಥಕ್ಕೆ ಉಪಮಾನವನ್ನು ಹೇಳಿದೆ. ಈ ಅರ್ಥದಲ್ಲಿ ಕಿಂಶುಕವೆಂದರೆ, ಕ್ರಂಶತೇಃ ಪ್ರಕಾಶಯತಿಕರ್ಮಣಃ । ಪ್ರಕಾಶಿಸು, ಶೋಭಾಯಮಾನವಾಗಿ ಕಾಣಿಸು, ಎಂದರ್ಥವುಳ್ಳ ಕ್ರಂಶತಿಧಾತುವಿನಿಂದ ಕಿಂಶುಕಶಬ್ದವು ನಿಷ್ಪನ್ನವಾಗಿದೆ. ಶಲ್ಮಲಿಃ ಎಂದರೆ **ಸುಶರೋ ಭವತಿ ಶರವಾನ್ವಾ** ಹಿಂಸಿಸು ಎಂಬರ್ಥವುಳ್ಳ **ಶೄ—ಹಿಂಸಾಯಾಂ** ಎಂಬ ಧಾತುವಿನಿಂದ ಶಲ್ಮಲಿ ಶಬ್ದವು ನಿಷ್ಪನ್ನವಾಗಿದೆ. ಮುಳ್ಳುಗಳಿಂದ ಕೂಡಿದ ವೃಕ್ಷವೆಂದು ಅರ್ಥವಾಗುವುದು.

ಇಂತಹ ಉತ್ತಮವಾದ ಮತ್ತು ಸುಖಕರವಾದ ರಥವನ್ನು, ಎಲೈ ಸೂರ್ಯಾದೇವಿಯೇ, ಹತ್ತಿಕುಳಿತು ಕೊಂಡು ಉದಕಲೋಕವಾದ (ಅಂತರಿಕ್ಷ) ಸ್ವರ್ಗವನ್ನು ಕುರಿತು ತೆರಳು ಎಂದು ಋಕ್ಕಿನ ಅಭಿಪ್ರಾಯವು. ನಿರುಕ್ತ ಕಾರರು—**ಸವಿತಾ ಸೂರ್ಯಾಂ ಪ್ರಾಯಚ್ಛತ್ ಸೋಮಾಯ ರಾಜ್ಞೇ ಪ್ರಜಾಪತಯೇ ವಾ** ಎಂಬ ಬ್ರಾಹ್ಮಣ ವಾಕ್ಯವನ್ನು ಉದಾಹರಿಸಿದಾರೆ. ಇದರ ಪ್ರಕಾರ ನಿರುಕ್ತಪಕ್ಷದಲ್ಲಿ **ಜ್ಯೋತ್ಸ್ನಾಂ ಸೋಮಾಯ ದದಾತಿ** ಸೋಮ ನಿಗೆ (ಚಂದ್ರನಿಗೆ) ಪ್ರಕಾಶವನ್ನು (ಬೆಳದಿಂಗಳನ್ನು) ಕೊಟ್ಟನು ಎಂದೂ, ಐತಿಹಾಸಿಕಪಕ್ಷದಲ್ಲಿ—ಉಷಸಂ ವಾ ಮಧ್ಯ ಸ್ಥಾನಾಯ ಪ್ರಜಾಪತಯೇ ದದಾತಿ—ಮಧ್ಯಸ್ಥಾನದೇವತೆಯಾದ ಪ್ರಜಾಪತಿಗೆ (ಸೂರ್ಯನಿಗೆ) ಉಷೋದೇವತೆಯನ್ನು ಕೊಟ್ಟನು ಎಂಬ ಅಭಿಪ್ರಾಯವು ವ್ಯಕ್ತವಾಗುವುದು.

॥ ಸಂಹಿತಾಪಾಠಃ ॥

**ಉದೀರ್ಷ್ವಾತಃ ಪತಿವತೀ ಹ್ಯೇ೩ಷಾ ವಿಶ್ವಾವಸುಂ ನಮಸಾ ಗೀರ್ಭಿರೀಳೇ।**
**ಅನ್ಯಾಮಿಚ್ಛ ಪಿತೃಷದಂ ವ್ಯಕ್ತಾಂ ಸ ತೇ ಭಾಗೋ ಜನುಷಾ ತಸ್ಯ ವಿದ್ಧಿ ॥**

॥ ಪದಪಾಠಃ ॥

ಉತ್ । ಈರ್ಷ್ವ । ಅತಃ । ಪತಿಽವತೀ । ಹಿ । ಏಷಾ । ವಿಶ್ವಽವಸುಂ । ನಮಸಾ । ಗೀಃಽಭಿಃ । ಈಳೇ ।
ಅನ್ಯಾಂ । ಇಚ್ಛ । ಪಿತೃಽಸದಂ । ವಿಽಅಕ್ತಾಂ । ಸಃ । ತೇ । ಭಾಗಃ । ಜನುಷಾ । ತಸ್ಯ । ವಿದ್ಧಿ ॥ ೨೧ ॥

॥ ಸಾಯಣಭಾಷ್ಯಂ ॥

**ಅಭಿನಿರ್ಗಣಾಂ ವಿವಾಹಃ ಸ್ತೂಯತೇ । ಹೇ ವಿಶ್ವಾವಸೋ ಅತಃ ಸ್ಥಾನಾತ್ಕನ್ಯಾಸಮೀಪಾದುದೀರ್ಷ್ವ । ಉತ್ತಿಷ್ಠ । ಏಷಾ ಕನ್ಯಾ ಪತಿವತೀ ಹಿ ಸಂಜಾತಾ । ಅತ ಉದೀರ್ಷ್ವೇತಿ ವಾತಃ ಶಬ್ದೋ ಯೋಜ್ಯಃ । ವಿಶ್ವಾವಸುಮೇತನ್ನಾಮಾನಂ ಗಂಧರ್ವಂ ನಮಸಾ ನಮಸ್ಕಾರೇಣ ಗೀರ್ಭಿಃ ಸ್ತುತಿಭಿಶ್ಚೇಳೇ । ಸ್ತೌಮಿ । ತರ್ಹ್ಯೇನಾಂ ವಿಹಾಯ ಕಾಂ ಸ್ವೀಕರೋಮೀತಿ ಯದಿ ಬ್ರೂಷೇ ತರ್ಹ್ಯನ್ಯಾಂ ಪಿತೃಷದಂ ಪಿತೃಕುಲೇ ಸ್ಥಿತಾಂ ವ್ಯಕ್ತಾಮನೂಢೇತಿ ಪರಿಸ್ಫುಟಾಂ ವಿಗತಾಂಜನಾಂ ವಾ । ಸ್ತನೋದ್ಗಮಾದಿರಾಹಿತ್ಯೇನಾಪ್ರೌಢಾಮಿತ್ಯರ್ಥಃ । ಸ ತಾದೃಶಃ ಪದಾರ್ಥಸ್ತೇ ತವ ಭಾಗಃ ಕಲ್ಪಿತಃ । ತಸ್ಯ ತಂ ಭಾಗಂ ವಿದ್ಧಿ ಜಾನೀಹಿ ಜನುಷಾ ಜನ್ಮನಾ । ಲಭಸ್ವೇತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ವಿಶ್ವಾವಸುವೇ) **ಅತಃ**—ಈ ಪ್ರದೇಶದಿಂದ । **ಉದೀರ್ಷ್ವ**—ಎದ್ದೇಳು । **ಏಷಾ**—ಈ ಕನ್ಯೆಯು । **ಪತಿವತೀ ಹಿ**—ಪತಿಯನ್ನು ಹೊಂದಿದ್ದಾಳೆ ಎಂಬುದಾಗಿ । **ವಿಶ್ವಾವಸುಂ**—ವಿಶ್ವಾವಸುಸಂಜ್ಞಕನಾದ ಗಂಧರ್ವನನ್ನು । **ನಮಸಾ**—ನಮಸ್ಕಾರದಿಂದಲೂ । **ಗೀರ್ಭಿಃ**—ಸ್ತುತಿಗಳಿಂದಲೂ । **ಈಳೇ**—ಸ್ತುತಿಸುತ್ತೇನೆ (ಪ್ರಾರ್ಥಿಸುತ್ತೇನೆ) । **ಪಿತೃಷದಂ**—ಪಿತೃವಿನ ಮನೆಯಲ್ಲಿರುವವಳೂ । **ವ್ಯಕ್ತಾಂ**—ವಿವಾಹಿತಳಲ್ಲವೆಂದು ನಿಷ್ಕೃಷ್ಟವಾಗಿ ಪ್ರಕಟಿಸುವವಳೂ ಆದ । **ಅನ್ಯಾಂ**—ಬೇರೊಬ್ಬ ಕನ್ಯೆಯನ್ನು । **ಇಚ್ಛ**—ಅಪೇಕ್ಷಿಸು । **ಸಃ**—ಅಂತಹ ವಸ್ತುವು । **ತೇ ಭಾಗಃ**—ನಿನಗೆ ಪರಿಕಲ್ಪಿತವಾದ ವಸ್ತುವಾಗಿದೆ । **ತಸ್ಯ**—ಆ ವಸ್ತುವನ್ನು । **ಜನುಷಾ**—ಸ್ವಾಭಾವಿಕವಾಗಿ । **ವಿದ್ಧಿ**—ನಿನ್ನದೆಂದು ತಿಳಿ.

। ಭಾವಾರ್ಥ ।

"ಎಲೈ ವಿಶ್ವಾಸುವೇ, ಈ ಕನ್ಯೆಯು ವಿವಾಹಿತಳಾಗಿ ತನ್ನ ಪತಿಯನ್ನು ಹೊಂದಿದ್ದಾಳೆ. ಆದುದರಿಂದ ಈ ಪ್ರದೇಶವನ್ನು ಬಿಟ್ಟು ಎದ್ದೇಳು" ಎಂದು ವಿಶ್ವಾವಸು ಸಂಜ್ಞಕನಾದ ಗಂಧರ್ವನನ್ನು ನಮಸ್ಕಾರ ಪೂರ್ವಕವೂ ಸ್ತುತಿಪೂರ್ವಕವೂ ಸ್ತುತಿಸಿ ಪ್ರಾರ್ಥಿಸುತ್ತೇನೆ. ಪಿತೃವಿನ ಮನೆಯಲ್ಲಿ ವಿವಾಹವಾಗದ ಕನ್ಯೆಯು ಮಾತ್ರ ನಿನಗೆ ಸೇರಿದ ಭಾಗವೆಂದು ತಿಳಿ.

## English Translation

Rise up from hence, for this (damsel) has a husband; I worship Vishwavasu with reverence and with hymns; O Viswavasu, seek for another maiden still dwelling in her father's house, decorated with ornaments; that is your portion, know this (to be your portion, take it) from your birth.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ವಿಶ್ವಾವಸುವೆಂಬ ಗಂಧರ್ವನನ್ನು ಹೊಸದಾಗಿ ವಿವಾಹವಾಗಿರುವ ನವವಧುವಿನ ಸಮೀಪದಿಂದ ಹೊರಟುಹೋಗಬೇಕೆಂದು ಪ್ರಾರ್ಥಿಸಿದೆ ಇದೇ ಸೂಕ್ತದ—

**ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।**
**ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥**
(ಋ. ಸಂ. ೧೦-೮೫-೪೦)

ಎಂಬ ಋಕ್ಕಿನಲ್ಲಿ ಈರೀತಿ ಹೇಳಿದೆ. ಪಿತೃಗೃಹದಲ್ಲಿ ವಾಸಿಸುತ್ತಾ ಕನ್ಯಾವಸ್ಥೆಯಲ್ಲಿರುವ ಕನ್ಯೆಗೆ ಮೊದಲು ಸೋಮನು ಸ್ವಾಮಿಯು, ಅನಂತರ ಗಂಧರ್ವನು, ಅನಂತರ ಅಗ್ನಿಯು, ಕೊನೆಗೆ ಮನುಷ್ಯನು ಎಂದರೆ ಮದುವೆಯಾಗುವ ವರನು. ಇವರೆಲ್ಲರೂ ಒಬ್ಬರ ಅನಂತರ ಮತ್ತೊಬ್ಬರು ಸ್ವಾಮಿಯು ಎಂದರೆ ಕನ್ಯೆಯು ಇವರ ಅಧೀನಳೆಂದು ಭಾವಿಸಲ್ಪಡುವಳು. ಪ್ರಾರಂಭದಲ್ಲಿ ಎಂದರೆ ಕನ್ಯೆಯು ತೀರಾ ಚಿಕ್ಕವಳಾಗಿದ್ದಾಗ ಸೋಮನ ಅಧೀನದಲ್ಲಿರುವಳು. ಅನಂತರ ವಿವಾಹ ವಯಸ್ಸನ್ನು ಸಮೀಪಿಸಿದಾಗ ಗಂಧರ್ವರ ಅಧೀನದಲ್ಲಿರುವಳು. ವಿವಾಹಕಾಲದಲ್ಲಿ ಅಗ್ನಿಯ ವಶವರ್ತಿಯಾಗಿರುವಳು. ವಿವಾಹಾನಂತರ ಮನುಷ್ಯನ (ವರನ) ವಶವರ್ತಿಯಾಗಿರುವಳು ಎಂದು ಹೇಳಿದೆ. ಆದ್ದರಿಂದ ಇಲ್ಲಿ ವಿವಾಹಾನಂತರ ವಿಶ್ವಾವಸುವೆಂಬ ಗಂಧರ್ವನನ್ನುದ್ದೇಶಿಸಿ—ಎಲೈ ವಿಶ್ವಾವಸುವೆಂಬ ಗಂಧರ್ವನೇ, ಈ ಕನ್ಯೆಯು ಇದುವರೆಗೂ ನಿನ್ನ ಅಧೀನದಲ್ಲಿದ್ದಳು. ಈಗ ಈ ಕನ್ಯೆಗೆ ವಿವಾಹವಾಗಿ ಪತಿಗೃಹಕ್ಕೆ ಹೋಗಬೇಕಾಗಿರುವುದರಿಂದ ಇವಳ ಸಮೀಪದಿಂದ ನೀನು ಬೇರೆಕಡೆಗೆ ಎಂದರೆ ಪಿತೃಗೃಹದಲ್ಲಿದ್ದು ಇನೂ ಮದುವೆಯಾಗಿಲ್ಲದ ಇತರ ಕನ್ಯೆಯರ ಬಳಿಗೆ ಹೋಗು. ಅಂತಹ ಕನ್ಯೆಯರೇ ನಿನ್ನ ಭಾಗಕ್ಕೆ ಸೇರಬೇಕಾದವರು ಎಂದು ಪ್ರಾರ್ಥಿಸಲಾಗಿದೆ.

ಪೂರ್ವದಲ್ಲಿ ಶ್ಯೇನಪಕ್ಷಿಯು ಸ್ವರ್ಗದಿಂದ ಸೋಮಲತೆಗಳನ್ನು ತರುತ್ತಿದ್ದಾಗ ವಿಶ್ವಾವಸುವೆಂಬ ಗಂಧರ್ವನು ದಾರಿಯಲ್ಲಿ ಅಡ್ಡಹಾಕಿ ಆ ಲತೆಗಳನ್ನು ಅಪಹರಿಸಿ ತನ್ನಲ್ಲಿಟ್ಟುಕೊಂಡಿದ್ದನು ಆಗ ದೇವತೆಗಳು ಅವನಿಂದ ಆ ಸೋಮ ಲತೆಗಳನ್ನು ಹಿಂದಕ್ಕೆ ಹೇಗೆ ತರಬೇಕೆಂದು ಯೋಚಿಸುತ್ತಿರುವಲ್ಲಿ ವಾಗ್ದೇವತೆಯು ಅವರನ್ನು ಕುರಿತು ಇದಕ್ಕಾಗಿ ಏಕೆ ಯೋಚಿಸುತ್ತೀರಿ ? **ಸ್ತ್ರೀಕಾಮಾ ವೈ ಗಂಧರ್ವಾಃ ಸ್ತ್ರಿಯಾ ನಿಷ್ಕ್ರೀಣಾಮೇತಿ ತೇ ವಾಚಗ್ಂ ಸ್ತ್ರಿಯ- ಮೇಕಹಾಯನೀಂ ಕೃತ್ವಾ ತಯಾ ನಿರಕ್ರೀಣನ್** । —ಸ್ತ್ರೀಯರಲ್ಲಿ ಅನುರುಕ್ತರಾಗಿರುವುದೇ ಎಂದರೆ ಸ್ತ್ರೀಯರಲ್ಲಿ ಕಾಮಾಭಿಲಾಷೆಯಿಂದಿರುವುದೇ ಗಂಧರ್ವರ ಸ್ವಭಾವವು. ಸ್ತ್ರೀಯರೆಂದರೆ ಅವರಿಗೆ ತುಂಬಾ ಆಶೆ. ಆದ್ದರಿಂದ ನಾನು ಸುಂದರಸ್ತ್ರೀಯಾಗುವೆನು. ನೀವು ನನ್ನನ್ನು ಆ ಗಂಧರ್ವನಿಗೆ ಮಾರಿ ಅದಕ್ಕೆ ಬದಲಾಗಿ ಅವನು ಅಪಹರಿಸಿರುವ ಸೋಮಲತೆಗಳನ್ನು ಕೊಂಡುಕೊಳ್ಳಿ ಎಂದು ಹೇಳಲಾಗಿ ದೇವತೆಗಳು ಹಾಗೆಯೇ ಮಾಡಿದರು. ಅನಂತರ ವಾಗ್ದೇವತೆಯು ಕೆಂಪುಜಿಂಕೆಯ ರೂಪದಿಂದ ಗಂಧರ್ವನಿಂದ ತಪ್ಪಿಸಿಕೊಂಡು ದೇವತೆಗಳ ಬಳಿಗೆ ಓಡಿಬಂದಿತು ಎಂಬ ಕಥೆಯು ತೈತ್ತಿರೀಯಸಂಹಿತೆಯಲ್ಲಿ (ತೈ. ಸಂ. ೬-೧) ಹೇಳಿದೆ.

ಗಂಧರ್ವರ ವಿಷಯವಾಗಿ ಸ್ವಲ್ಪ ವಿವರಣೆಯು ಅವಶ್ಯಕವಾಗಿದೆ—

ಹಿಂದೆಯೇ ಹೇಳಿರುವಂತೆ, ಅಪ್ಸರೆಯರಿಗೆ ಸಂಬಂಧಿಸಿದಂತೆ ಗಂಧರ್ವ ಅಥವಾ ಗಂಧರ್ವರೆಂಬ ಒಬ್ಬ ಪುರುಷ ಅಥವಾ ಒಂದು ಪುರುಷಜಾತಿಯಿದೆ. ಋಗ್ವೇದದಲ್ಲಿ ಪ್ರಸಕ್ತವಾಗುವ ಇಪ್ಪತ್ತು ಸ್ಥಳಗಳಲ್ಲಿ, ಮೂರೇ ಸಲ ಅದು ಬಹುವಚನದಲ್ಲಿರುವುದು. ಅಥರ್ವವೇದದಲ್ಲಿರುವ ಮೂವತ್ತೆರಡರಲ್ಲಿ, ಅರ್ಧದಷ್ಟು ಬಹುವಚನದಲ್ಲಿದೆ. ಇದನ್ನು ನೋಡಿದರೆ, ಮೊದಲು ಒಬ್ಬನೇ ಇದ್ದು, ಬರುಬರುತ್ತಾ, ಸಂಖ್ಯೆ ಹೆಚ್ಚುತ್ತಾ ಬಂದಿರುವಂತೆ ತೋರುತ್ತದೆ. ಇತರ ವೇದಗಳಲ್ಲಿ, ದೇವತೆಗಳು, ಪಿತೃಗಳು, ಅಸುರರು, ಇವರಂತೆ, ಗಂಧರ್ವರೂ ಒಂದುಗಣ (ಅ. ವೇ. ೧೧-೫-೨ ; ತೈ. ಸಂ. ೭-೮-೨೫-೨). ಯಜುರ್ವೇದದಲ್ಲಿ ಅವರ ಸಂಖ್ಯೆ ೨೭ ಇದ್ದದ್ದು, ಅಥರ್ವ ವೇದದಲ್ಲಿ ಸುಮಾರು ೬೩೩೩ (ಅ. ವೇ. ೧೧-೫-೨) ಆಗಿದೆ. ಮೊದಲಿನಿಂದ ಇವರ ಲಕ್ಷಣ ಮತ್ತು ಸ್ವಭಾವ

ಗಳೇನು ಎಂಬುದನ್ನು ನಿರ್ಧರಿಸಲು, ಋಗ್ವೇದದಲ್ಲಿ ಆಧಾರವೇನೂ ಸಿಗುವದಿಲ್ಲ. ಈ ಸಂದರ್ಭದಲ್ಲಿ ಯಾವ ಯಾವ ಮಂಡಲಗಳಲ್ಲಿ ಈ ಪದಪ್ರಯೋಗಗಳು ಕಂಡುಬರುತ್ತವೆ ಎಂಬುದೂ ಮುಖ್ಯವಾದ ಸಂಗತಿಯೇ. ಎರಡರಿಂದ ಏಳು ಮಂಡಲಗಳಲ್ಲಿ ಪೂರ್ತಿ ಒಂದೇ ಸಲವೂ, ಎಂಟನೆಯದರಲ್ಲಿ ಇಂದ್ರನಿಗೆ ವಿರುದ್ಧವೆಂದು ಎರಡು ಸಲವೂ ಬಂದಿದೆ. ಅಥವಾ ಈ ಪದವನ್ನು ವಿಶೇಷಣವೆಂದೇ ಭಾವಿಸಬಹುದೆಂದು ತೋರುತ್ತವೆ. ಒಂದೊಂದು ಸಲ ವಿಶ್ವಾವಸು ಎಂಬ ಪದದ ಜೊತೆಯಲ್ಲಿ ಪ್ರಯೋಗಿಸಿದೆ. (೯-೮೬-೩೬ ; ೧೦-೧೩೯-೪,೫ ; ಅ. ವೇ. ೨-೨-೪ ; ವಾ.ಸಂ. ೨-೩). ಒಂದು ಸಂದರ್ಭದಲ್ಲಿ ಗಂಧರ್ವನನ್ನು ಸೂಚಿಸುವುದಕ್ಕೆ ವಿಶ್ವಾವಸು ಎಂದು ಪ್ರಯೋಗವಿದೆ (೧೦-೮೫-೨೧,೨೨; ೧೦-೮೫.೪೦, ೪೧ ಗಳನ್ನು ಹೋಲಿಸಿ). ಇತರ ಸಂಹಿತೆಗಳು, ಬ್ರಾಹ್ಮಣಗಳು ಮತ್ತು ಪುರಾಣಾದಿಗಳಲ್ಲಿ, ವಿಶ್ವಾವಸು ಎಂಬುದು ಒಬ್ಬ ಗಂಧರ್ವನ ಹೆಸರು.

ಋಗ್ವೇದದ ಪ್ರಕಾರ ಗಂಧರ್ವನು ವಾಯುಮಂಡಲ ಅಥವಾ ಆಕಾಶದ ಅತ್ಯಂತ ಎತ್ತರವಾದ ಪ್ರದೇಶ ದಲ್ಲಿ ವಾಸಿಸುವನು. ಅವನು ಆಕಾಶದಲ್ಲಿ ಅಳೆಯುವವನು (೧೦-೧೩೯-೫) ಅಗಾಧವಾದ ವಾಯುಮಂಡಲ ಪ್ರದೇಶಗಳಲ್ಲಿ ಇರುತ್ತಾನೆ (೮-೬೬-೫) ದೇವತಾ ಸ್ವಭಾವವುಳ್ಳವನು, ಅಂತರಿಕ್ಷದಲ್ಲಿ ನೇರವಾಗಿ ನಿಂತಿರುತ್ತಾನೆ (೧೦-೧೨೩-೭). ಇವನ ಮೇಲೆಯೇ ಅಪ್ಸರೆಯು ಮಂದಹಾಸವನ್ನು ಬೀರುವುದು (೧೦-೧೨೩-೫) ಸ್ವರ್ಗದಲ್ಲಿದೆ ಅವನ ವಾಸಸ್ಥಳ (ಅ. ವೇ. ೨-೨-೧,೨), ಮತ್ತು ಪುಣ್ಯವಂತರು ಗಂಧರ್ವರೊಡನೆ ವಾಸಿಸುತ್ತಾರೆ. ( ಅ. ವೇ. ೪-೩೪-೩ ) ಕೆಲವು ವಾಕ್ಯಗಳಲ್ಲಿ, ಗಂಧರ್ವರಿಗೆ ಯಾವುದಾದರೊಂದು ವಿಧವಾದ ಸ್ವರ್ಗೀಯ ಬೆಳಕಿನೊಡನೆ ಸಂಬಂಧವಿದೆಯೆಂದು ಹೇಳಿದೆ. ವರುಣನ ದೂತನಾದ, ಸುವರ್ಣಮಯವಾದ ಪಕ್ಷಗಳುಳ್ಳ ಸೂರ್ಯನೊಡ ನೆಯೂ (೧೦-೧೨೩-೬), ಸೂರ್ಯಪಕ್ಷಿಯೊಡನೆಯೂ (೧೦-೧೭೭-೨), ಸೂರ್ಯಾಶ್ವದೊಡನೆಯೂ (೧-೧೬೩-೨), ಮತ್ತು ಸೂರ್ಯನಂತಿರುವ ಸೋಮದೊಡನೆಯೂ (೯-೮೫-೧೨) ಸೇರಿಸಲ್ಪಟ್ಟಿದ್ದಾನೆ. ಇದೂ ಅಲ್ಲದೆ ಚಂದ್ರ ಪಥದಲ್ಲಿ ರುವ ಇಪ್ಪತ್ತೇಳು ನಕ್ಷತ್ರಗಳು (ವಾ. ಸಂ. ೯-೭) ವಿಶೇಷವಾಗಿ ರೋಹಿಣೀ ನಕ್ಷತ್ರ (ಅ. ವೇ. ೧೩-೧-೨೩) ಇವುಗ ಳೊಡನೆ ಸಂಬಧ ಕಲ್ಪಿತವಾಗಿದೆ. ವಾಜಸನೇಯಿ ಸಂಹಿತೆಯಲ್ಲಿ (ವಾ. ಸಂ. ೧೮-೩೮,) ಅಗ್ನಿ, ಸೂರ್‍ಯ, ಚಂದ್ರ, ವಾಯುಗಳೊಡನೆ ಗಂಧರ್ವನೂ ದೇವತೆಯೆಂದು ಪರಿಗಣಿತನಾಗಿದಾನೆ. ಪುರಾಣಾದಿಗಳಲ್ಲಿ ಗಂಧರ್ವನಗರ (ಪುರ) ಎಂಬುದು ಮರೀಚಿಕೆಯ ಒಂದು ಹೆಸರು.

ಗಂಧರ್ವರ ಹೆಸರು ವಿಶೇಷವಾಗಿ ಒಂಬತ್ತನೆಯ ಮಂಡಲದಲ್ಲಿ ಸೋಮನೊಡನೆ ಹೇಳಲ್ಪಟ್ಟಿದೆ. ಸೋಮದ ಸ್ಥಳವನ್ನು ಮತ್ತು ದೇವತೆಗಳ ವಂಶವನ್ನು ರಕ್ಷಿಸುತ್ತಾರೆ (೯-೮೩-೪ ; ೧-೨೨-೧೪ಳನ್ನು ಹೋಲಿಸಿ). ಸೋಮರಸದ ಅವಸ್ಥಾವಿಶೇಷಗಳನ್ನೆಲ್ಲಾ ವೀಕ್ಷಿಸುತ್ತಾ ಗಗನಮಂಡಲದಲ್ಲಿ ನಿಂತಿರುತ್ತಾರೆ (೯.೮೫-೧೨). ಪರ್ಜನ್ಯ ಮತ್ತು ಸೂರ್‍ಯ ಪುತ್ರಿಯೊಡನೆ, ಗಂಧರ್ವರು ಸೋಮರಸವನ್ನು ಅಭಿವೃದ್ಧಿಪಡಿಸುತ್ತಾರೆ (೯-೧೧೩-೩) ಗಂಧರ್ವನ ಬಾಯಿಂದಲೇ, ದೇವತೆಗಳು ಸೋಮಪಾನ ಮಾಡುತ್ತಾರೆ (ಅ. ವೇ. ೭,೭೩-೩). ದೇವತೆಗಳಿಗೋ ಸ್ಕರ ಗಂಧರ್ವರು ಸೋಮರಸವನ್ನು ಕಾಪಾಡುತ್ತಿದ್ದರೆಂದೂ, ಅಪಹೃತವಾಗಲು ಅವಕಾಶಕೊಟ್ಟರೆಂದೂ, ಅದಕ್ಕೆ ಶಿಕ್ಷೆಯಾಗಿ ಗಂಧರ್ವರಿಗೆ ಸೋಮಪಾನ ನಿಷಿದ್ಧವಾಯಿತೆಂದೂ (ಮೈ. ಸಂ. ೩-೮.೧೦) ಹೇಳಿದೆ. ಈ ಸೋಮರಸದ ಸಂಬಂಧದಿಂದಲೇ ಗಂಧರ್ವರಿಗೆ ಸಸ್ಯಗಳ ಪರಿಚಯವಿದೆಯೆಂದು ಹೇಳಿರುವುದು (ಅ.ವೇ.೪-೪-೧) ಸೋಮರಕ್ಷಣೆಯಲ್ಲಿ ಬದ್ಧಾದರನಾದ ಗಂಧರ್ವನೇ ಇಂದ್ರನ ಅಪ್ರೀತಿಯನ್ನು ಗಳಿಸಿ, ವಾಯುಮಂಡಲದಲ್ಲಿ ಅವನಿಂದ ಇರಿಯಲ್ಪಡುವುದು

(೮-೬೬ ೫). ಮತ್ತು ಇದೇ ಕಾರಣದಿಂದಲೇ, ಸ್ತೋತ್ರಗಳು, ಇವನನ್ನು ಸೋಲಿಸೆಂದು ಇಂದ್ರನನ್ನು ಸ್ತುತಿಸುವುದು (೮-೧ ೧೧). ಬೇರೆ ಒಂದು ಸ್ಥಳದಲ್ಲಿ (ತೈ.ಸಂ. ೧-೨-೯-೧), ವಿಶ್ವಾವಸು ಗಂಧರ್ವನಿಂದ ತಪ್ಪಿಸಿಕೊಳ್ಳಲು, ಶ್ಯೇನರೂಪದಿಂದ ಬರಬೇಕೆಂದು ಸೋಮಕ್ಕೆ ಸೂಚಿಸಿರುವುದೂ ಕಂಡುಬರುತ್ತದೆ. ಸೋಮರಸವು ಗಂಧರ್ವರ ಮಧ್ಯದಲ್ಲಿ ಇತ್ತು ಅಥವಾ ವಿಶ್ವಾವಸು ಗಂಧರ್ವನಿಂದ ಅಪಹೃತವಾಗಿತ್ತು ; ಸ್ತ್ರೀಲಂಪಟರಾದ ಗಂಧರ್ವರಿಗೆ, ವಾಗ್ದೇವತೆಯನ್ನು ಬೆಲೆಯಾಗಿ ಕೊಟ್ಟು, ಗಂಧರ್ವರಿಂದ ಸೋಮವನ್ನುಪಡೆದರೆಂದು ಹೇಳಿದೆ. (ಐ.ಬ್ರಾ.೧-೨೭; ತೈ.ಸಂ.೬-೧-೬-೫; ಮೈ.ಸಂ. ೩-೭-೩) ಸೋಮವನ್ನು ಎತ್ತಿಕೊಂಡು ಹೋಗುತ್ತಿರುವ ಶ್ಯೇನದಮೇಲೆ ಬಾಣಬಿಡುವ ಕೃಶಾನುವೂ ಒಬ್ಬ ಗಂಧರ್ವನೇ ಇರಬೇಕು. ತೈತ್ತಿರೀಯಾರಣ್ಯಕ (ತೈ.ಆ. ೧-೯-೩)ದಲ್ಲಿ ಕೃಶಾನುವೂ ಗಂಧರ್ವನೆಂದೇ ಸ್ಪಷ್ಟವಾಗಿ ಹೇಳಿದೆ.

ಗಂಧರ್ವರಿಗೂ ನೀರಿಗೂ ಸಂಪರ್ಕವಿದೆ. ನೀರಿನಲ್ಲಿರುವ ಗಂಧರ್ವ ಮತ್ತು ಜಲರೂಪಳಾದ ಅಪ್ಸರೆಯರು, ಯಮ ಮತ್ತು ಯಮಿಗಳಿಗೆ ಜನಕರೆಂದು (೧೦-೧೦-೪) ಹೇಳಿದೆ. ನೀರಿನಲ್ಲಿ ಸುರಿದಿರುವ ಸೋಮರಸಕ್ಕೆ ನೀರಿನ ಗಂಧರ್ವನೆಂದು (೯-೮೬-೩೬) ಕರೆದಿದೆ. ಅಪ್ಸರೆಯರೊಡನೆ ಸಂಯೋಜಿತರಾಗಿರುವ ಗಂಧರ್ವರೂ ನೀರಿನಲ್ಲಿ ವಾಸಿಸುತ್ತಾರೆ (ಅ. ವೇ. ೨-೨-೩ ; ೪-೩೭-೧೨).

ಗಂಧರ್ವ ಮತ್ತು ಅಪ್ಸರೆಯರ ಸಂಯೋಗವು ವಿವಾಹಸೂಚಕವಾಗಿದೆ. ಆದುದರಿಂದ ಗಂಧರ್ವರಿಗೂ ವಿವಾಹ ಸಮಾರಂಭಕ್ಕೂ ಸಂಬಂಧ ಕಲ್ಪಿತವಾಗಿದೆ ಅವಿವಾಹಿತಳಾದ ಕನ್ಯೆಯು ಗಂಧರ್ವ, ಸೋಮ ಮತ್ತು ಅಗ್ನಿ ಇವರಿಗೆ ಸೇರಿದವಳು (೧೦-೮೫-೪೦,೪೧). ವಿವಾಹದ ಮೊದಲದಿನಗಳಲ್ಲಿ, ವಿಶ್ವಾವಸುವು ವರನಿಗೆ ಪ್ರತಿಸ್ಪರ್ಧಿ (೧೦-೮೫-೨೨) ಗಂಧರ್ವನಿಗೆ ಸ್ತ್ರೀಯರ ವಿಷಯದಲ್ಲಿರುವ ಪ್ರೇಮವು ಇತರ ವೇದಗಳಲ್ಲಿ ಪ್ರಸಿದ್ಧವಾಗಿದೆ (ಮೈ. ಸಂ. ೩-೭-೩) ಗಂಧರ್ವರು ಮತ್ತು ಅಪ್ಸರೆಯರು ಫಲಶಕ್ತಿಗೆ ಅಭಿಮಾನಿದೇವತೆಗಳು ಮತ್ತು ಸಂತತಿಯನ್ನಪೇಕ್ಷಿಸುವವರು ಅವರನ್ನು ಸ್ತುತಿಸುತ್ತಾರೆ (ಪಂ. ಬ್ರಾ. ೧೯-೩-೨)

ಗಂಧರ್ವರು ದೇವಗಾಯಕರೆಂದು ಪುರಾಣಾದಿಗಳಲ್ಲಿ ಪ್ರಸಿದ್ಧಿ ಬಂದಿರುವುದಕ್ಕೆ ಋಗ್ವೇದದಲ್ಲಿ ಎಲ್ಲಿಯೂ ಆಧಾರವಿಲ್ಲ (೧೦-೧೭೭-೨ ; ೧೦-೧೧-೨ ಗಳನ್ನು ಹೋಲಿಸಿ).

ಅವರ ದೇಹಾದಿಗಳ ವಿಷಯವಾಗಿ ಒಂದೆರಡು ಕಡೆ ಮಾತ್ರ ನಿರ್ದೇಶವಿದೆ. ಅವರಿಗೆ ಗಾಳಿಯೇ ಕೇಶ (೩-೩೮-೬) ಮತ್ತು ಅವರಲ್ಲಿ ಹೊಳೆಯುತ್ತಿರವ ಆಯುಧಗಳಿವೆ (೧೦-೧೨೩-೭). ಈ ವಿಷಯದಲ್ಲಿ ಅಥರ್ವವೇದವು ಹೆಚ್ಚು ಸ್ಪಷ್ಟವಾಗಿದೆ. (ಅ. ವೇ. ೪-೩-೭ ; ೮-೬-೧ ಗಳು ವಿಶೇಷವಾಗಿ). ಇಲ್ಲಿ, ಅವರು ಲೋಮಶರೆಂದೂ. ಅರ್ಧ ಪ್ರಾಣಿಗಳಂತಿರುವ ದೇಹವುಳ್ಳವರೆಂದೂ, ಮನುಷ್ಯರಿಗೆ ಅನೇಕ ವಿಧದಲ್ಲಿ ವಿಪತ್ಕಾರಕರೆಂದೂ ಹೇಳಿದೆ, ಮತ್ತೆ ಕೆಲವು ಕಡೆ ಅವರು ಸುಂದರರೆಂದೂ ಇದೆ (ಶ. ಬ್ರಾ. ೧೩-೪-೪-೭,೮). ಋಗ್ವೇದದಲ್ಲಿ. ಗಂಧರ್ವರು ಸುವಾಸನೆಯುಳ್ಳ ಉಡುಪುಗಳನ್ನು ಧರಿಸುತ್ತಾರೆ (೧೦-೧೨೩-೭) ಎಂದೂ, ಅಥರ್ವವೇದದಲ್ಲಿ, ಭೂಮಿಯಿಂದ ಸುಗಂಧವು ಗಂಧರ್ವರನ್ನು ಸೇರುತ್ತದೆಂದೂ (ಅ. ವೇ. ೧೨-೧-೨೩) ಹೇಳಿದೆ.

ಇದರಿಂದ ಗಂಧರ್ವ ಎಂಬ ಪದವು ಗಂಧ ಎಂಬುದರಿಂದ ಆಗಿದೆ ಎಂದು ಹೇಳಬಹುದು. ಇದೇ ಸರಿಯಾದ ವ್ಯುತ್ಪತ್ತಿಯಾದರೂ, ಗಂಧರ್ವನ ಸ್ವಭಾವ, ಅಥವಾ ಲಕ್ಷಣವೇನೂ ತಿಳಿದಂತಾಗುವುದಿಲ್ಲ. ಮೇಲೆ ಕಂಡುಬರುವ ವಿವರಣೆಗಳಿಂದ, ಗಂಧರ್ವನೂ ಒಬ್ಬ ತೇಜಸ್ವಿಯಾದ ದಿವ್ಯಪುರುಷ. ತನ್ನ ಜೊತೆಗಾತಿ ಅಪ್ಸರೆಯೊಡನೆ ನೀರಿನಲ್ಲಿ

ವಾಸಮಾಡುವವನು ಎಂದಿಷ್ಟು ಮಾತ್ರ ನಿರ್ಧರವಾಗಿ ಹೇಳಬಹುದು. ನಾನಾ ವಿದ್ವಾಂಸರು, ಈ ವಿಶಯದಲ್ಲಿ ವಾಯ್ವಿನಲ್ಲಿ ಸೇರಿ ಕೊಂಡಿರುವ ಅಮೂರ್ತ ವ್ಯಕ್ತಿಗಳೆಂದೂ, ಕಾಮನಬಿಲ್ಲು, ಚಂದ್ರ, ಸೋಮ ಉದಿತನಾಗುತ್ತಿರುವ ಸೂರ ಅಥವಾ ಮೇಘಾಭಿಮಾನಿದೇವತೆ ಇತ್ಯಾದಿ ನಾನಾ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿದ್ದಾರೆ.

॥ ಸಂಹಿತಾಪಾಠಃ ॥

ಉದೀರ್ಷ್ವಾತೋ ವಿಶ್ವಾವಸೋ ನಮಸೇಳಾಮಹೇ ತ್ವಾ ।
ಅನ್ಯಾಮಿಚ್ಛ ಪ್ರಫರ್ವ್ಯ೦ಂ ಸಂ ಜಾಯಾಂ ಪತ್ಯಾ ಸೃಜ ॥ ೨೨ ॥

॥ ಪದಪಾಠಃ ॥

ಉತ್ । ಈರ್ಷ್ವ । ಅತಃ । ವಿಶ್ವಾವಸೋ ಇತಿ ವಿಶ್ವಽವಸೋ । ನಮಸಾ । ಈಳಾಮಹೇ । ತ್ವಾ ।
ಅನ್ಯಾಂ । ಇಚ್ಛ । ಪ್ರಽಫರ್ವ್ಯಂ । ಸಂ । ಜಾಯಾಂ । ಪತ್ಯಾ । ಸೃಜ ॥ ೨೨ ॥

॥ ಸಾಯಣಭಾಷ್ಯಂ ॥

ಅತೋಽಸ್ಮಾಚ್ಛಯನಾದ್ಧೇ ವಿಶ್ವಾವಸೋ ಕನ್ಯಾಸ್ವಾಮಿನ್ಗಂಧರ್ವ ಉದೀರ್ಷ್ವ । ಉದ್ಗಚ್ಛ ॥ ಈರ ಗತೌ ಅದಾದಿಕಃ । ಅನುದಾತ್ತೇತ್ । ತಸ್ಯ ಲೋಟಿ ರೂಪಂ ॥ ವಿಶ್ವಾವಸುರ್ನಾಮ ಗಂಧರ್ವಃ ಕನ್ಯಾನಾಮಧಿಪತಿರ್ಯತಃ । ಲಭಾಮಿ ತೇನ ಕನ್ಯಾಮಿತಿ ಹಿ ಮಂತ್ರಃ । ಸ ತಾದೃಶ ದೇವ ತ್ವಾಂ ನಮಸಾ ನಮಸ್ಕಾರೇಣೇಳಾಮಹೇ । ಸ್ತುಮಃ । ಸ ತ್ವಮನ್ಯಾಂ ಪ್ರಫರ್ವ್ಯಂ ಬೃಹನ್ನಿತಂಬಾಂ ಕನ್ಯಾಮಿಚ್ಛ । ಜಾಯಾಂ ಮಾಂ ಪತ್ಯಾ ಸಹ ಪುನಃ ಸಂ ಸೃಜ ॥

॥ ಪ್ರತಿಪದಾರ್ಥ ॥

**ವಿಶ್ವಾವಸೋ**—ಎಲೈ ವಿಶ್ವಾವಸುವೇ । **ನಮಸಾ**—ನಮಸ್ಕಾರಪೂರ್ವಕವಾಗಿ । **ಈಳಾಮಹೇ**—ನಿನ್ನನ್ನು ಸ್ತುತಿಸಿ ಪ್ರಾರ್ಥಿಸುತ್ತೇವೆ । **ಅತಃ**—ಈ ಪ್ರದೇಶದಿಂದ । **ಉದೀರ್ಷ್ವ**—ಎದ್ದೇಳು । **ಪ್ರಫರ್ವ್ಯಂ**—ಪುಷ್ಟವಾದ ನಿತಂಬಪ್ರದೇಶವುಳ್ಳ । **ಅನ್ಯಾಂ**—ಬೇರೊಬ್ಬ ಕನ್ಯೆಯನ್ನು । **ಇಚ್ಛ**—ಅಪೇಕ್ಷಿಸು । **ಜಾಯಾಂ**-ಬೇರೊಬ್ಬನಿಗೆ ಪತ್ನಿಯಾದ ನನ್ನನ್ನು । **ಪತ್ಯಾ**—ನನ್ನ ಪತಿಯೊಂದಿಗಿರಲು । **ಸಂ ಸೃಜ**—ಬಿಟ್ಟುಕೊಡು.

॥ ಭಾವಾರ್ಥ ॥

ಎಲೈ ವಿಶ್ವಾವಸುವೇ, ನಮಸ್ಕಾರಪೂರ್ವಕವಾಗಿ ನಿನ್ನನ್ನು ಸ್ತುತಿಸಿ ಪ್ರಾರ್ಥಿಸುತ್ತೇವೆ. ಈ ಪ್ರದೇಶದಿಂದ ಎದ್ದೇಳು. ಪುಷ್ಟವಾದ ನಿತಂಬಪ್ರದೇಶವುಳ್ಳ ಬೇರೊಬ್ಬ ಕನ್ಯೆಯನ್ನು ಅಪೇಕ್ಷಿಸು. ಬೇರೊಬ್ಬನಿಗೆ ಪತ್ನಿಯಾದ ನನ್ನನ್ನು ನನ್ನ ಪತಿಯೊಂದಿಗಿರಲು ಬಿಟ್ಟುಕೊಡು.

## English Translation

Rise up from hence, Vishwavasu ; we worship you with reverence. seek another maiden, one with large hips; leave the bride with her husband

। ಸಂಹಿತಾಪಾಠಃ ।

ಅನೃಕ್ಷರಾ ಋಜವಃ ಸಂತು ಪಂಥಾ ಯೇಭಿಃ ಸಖಾಯೋ ಯಂತಿ ನೋ ವರೇಯಂ ।

ಸಮರ್ಯಮಾ ಸಂ ಭಗೋ ನೋ ನಿನೀಯಾತ್ಸಂ ಜಾಸ್ಪತ್ಯಂ ಸುಯಮ-ಮಸ್ತು ದೇವಾಃ ॥ ೨೩ ॥

। ಪದಪಾಠಃ ॥

ಅನೃಕ್ಷರಾಃ । ಋಜವಃ । ಸಂತು । ಪಂಥಾಃ । ಯೇಭಿಃ । ಸಖಾಯಃ । ಯಂತಿ । ನಃ । ವರೇಽಯಂ ।

ಸಂ । ಅರ್ಯಮಾ । ಸಂ । ಭಗಃ । ನಃ । ನಿನೀಯಾತ್ । ಸಂ । ಜಾಃಪತ್ಯಂ । ಸುಽಯಮಂ । ಅಸ್ತು । ದೇವಾಃ ॥ ೨೩ ॥

। ಸಾಯಣಭಾಷ್ಯಂ ।

ಹೇ ದೇವಾಃ ಪಂಥಾಃ ಪಂಥಾನೋ ಮಾರ್ಗಾ ಅನೃಕ್ಷರಾಃ । ಋಕ್ಷರಃ ಕಂಟಕ ಉಚ್ಯತೇ । ಕಂಟಕರಹಿತಾ ಋಜವೋಽಕುಟಿಲಾಶ್ಚ ಸಂತು ಯೇಭಿರ್ಯೈಃ ಪಥಿಭಿರ್ನೋಽಸ್ಮಾಕಂ ಸಖಾಯೋ ವರಪ್ರೇಷಿತಾ ವರೇಯಂ ವರೈರ್ಯಾಚಿತವ್ಯಂ ಪಿತರಂ ಪ್ರತಿ ಯಂತಿ ಗಚ್ಛಂತಿ ತೇ ಪಂಥಾ ಇತಿ । ಕಿಂಚಾರ್ಯಮಾ ದೇವೋ ನೋಽಸ್ಮಾನ್ ಸಂ ನಿನೀಯಾತ್ । ಸಮ್ಯಕ್ ಪ್ರಾಪಯೇತ್ । ತಥಾ ಭಗೋ ದೇವಃ ಸಂ ನಿನೀಯಾತ್ । ಹೇ ದೇವಾಃ ಆಸಂಗತಮಸ್ತು ಪತಿಕುಲಮಿತಿ ಶೇಷಃ ತಥೇದಂ ಜಾಸ್ಪತ್ಯಂ ಜಾಯಾಪತ್ಯೋರ್ಯುಗಲಂ ಸುಯಮಮಸ್ತು । ಸುಮಿಥುನಮಸ್ತು ॥

। ಪ್ರತಿಪದಾರ್ಥ ।

**ಯೇಭಿಃ**—ಯಾವ ಮಾರ್ಗಗಳಿಂದ । **ನಃ**—ನಮ್ಮ । **ಸಖಾಯಃ**—ಮಿತ್ರರು । **ವರೇಯಂ**—ವರರಿಂದ ಪ್ರಾರ್ಥಿಸಲ್ಪಡುವ ಕನ್ಯೆಯ ತಂದೆಯ ಬಳಿಗೆ । **ಯಂತಿ**—ಹೋಗುವರೋ ಅಂತಹ । **ಪಂಥಾಃ**—ಮಾರ್ಗಗಳು । **ಅನೃಕ್ಷರಾಃ**—ಕಂಟಕರಹಿತವಾಗಿಯೂ । **ಋಜವಃ**—ವಕ್ರವಿಲ್ಲದೆಯೂ । **ಸಂತು**—ಇರಲಿ । **ಅರ್ಯಮಾ**—ಅರ್ಯಮದೇವನು । **ನಃ**—ನಮ್ಮನ್ನು । **ಸಂ ನಿನೀಯಾತ್**—ಸರಿಯಾಗಿ ಕರೆದೊಯ್ಯಲಿ । **ಭಗಃ**—ಭಗನು । **ಸಂ**—ಸರಿಯಾಗಿ ಮಾರ್ಗತೋರಿಸಲಿ । **ದೇವಾಃ**—ಎಲೈ ದೇವತೆಗಳೇ । **ಜಾಸ್ಪತ್ಯಂ**—ದಂಪತಿಗಳ ಪರಸ್ಪರ ಸಂಬಂಧವು । **ಸುಯಮಂ**—ಶ್ರೇಷ್ಠವಾದ ಬಂಧನವುಳ್ಳದ್ದಾಗಿ । **ಅಸ್ತು**—ಆಗಿರಲಿ.

। ಭಾವಾರ್ಥ ।

ಯಾವ ಮಾರ್ಗಗಳಿಂದ ನಮ್ಮ ಮಿತ್ರರು ವರರಿಂದ ಪ್ರಾರ್ಥಿಸಲ್ಪಡುವ ಕನ್ಯೆಯ ತಂದೆಯ ಬಳಿಗೆಹೋಗುವರೋ, ಅಂತಹ ಮಾರ್ಗಗಳುಕಂಟಕರಹಿತವಾಗಿಯೂ, ವಕ್ರವಿಲ್ಲದೆಯೂ ಇರಲಿ. ಅರ್ಯಮದೇವನುನಮ್ಮನ್ನುಸರಿಯಾಗಿ ಕರೆದೊಯ್ಯಲಿ. ಭಗನು ನಮಗೆ ಸರಿಯಾದ ಮಾರ್ಗವನ್ನು ತೋರಲಿ. ಎಲೈ ದೇವತೆಗಳೇ, ದಂಪತಿಗಳ ಪರಸ್ಪರ ಸಂಬಂಧವು ಶ್ರೇಷ್ಠವಾಗಿ ಹೊಂದಿಕೊಳ್ಳಲಿ.

## English Translation

Smooth and straight be the paths by which our friends repair to the bride's father ; may Aryaman, may Bhaga conduct us, and may the union of the wife and husband be easily accomplished, O gods.

॥ ಸಂಹಿತಾಪಾಠಃ ॥

ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾದ್ಯೇನ ತ್ವಾಬಧ್ನಾತ್ಸವಿತಾ ಸುಶೇವಃ ।
ಋತಸ್ಯ ಯೋನೌ ಸುಕೃತಸ್ಯ ಲೋಕೇಽರಿಷ್ಟಾಂ ತ್ವಾ ಸಹ ಪತ್ಯಾ ದಧಾಮಿ ॥

। ಪದಪಾಠಃ ।

ಪ್ರ । ತ್ವಾ । ಮುಂಚಾಮಿ । ವರುಣಸ್ಯ । ಪಾಶಾತ್ । ಯೇನ । ತ್ವಾ । ಅಬಧ್ನಾತ್ । ಸವಿತಾ ಸುಽಶೇವಃ ।
ಋತಸ್ಯ । ಯೋನೌ । ಸುಽಕೃತಸ್ಯ । ಲೋಕೇ । ಅರಿಷ್ಟಾಂ । ತ್ವಾ । ಸಹ । ಪತ್ಯಾ । ದಧಾಮಿ ॥ ೨೪ ॥

। ಸಾಯಣಭಾಷ್ಯಂ ।

ಪತ್ನ್ಯಾ ಯೋಕ್ತ್ರವಿಮೋಚನೇ ಪ್ರ ತ್ವಾ ಮುಂಚಾಮೀತ್ಯೇಷಾ । ಸೂತ್ರಿತಂ ಚ । ಅಥಾಸ್ಯಾ ಯೋಕ್ತ್ರಂ ವಿಚೃತೇತ್ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾತ್ । ಆ. ೧-೧೧ । ಇತಿ ॥

ಜಾತಂ ಪ್ರಾಣಿನಂ ಸವಿತ್ರಾ ಪ್ರೇರಿತೋ ವರುಣ ಆತ್ಮಪಾಶೈರ್ಬಧ್ನಾತಿ । ತಸ್ಮಾದ್ವರುಣಸ್ಯ ಪಾಶಾತ್ ಹೇ ವಧು ತ್ವಾ ತ್ವಾಂ ಪ್ರ ಮುಂಚಾಮಿ ಯೇನ ತ್ವಾ ತ್ವಾಂ ಸವಿತಾ ವರುಣಸ್ಯ ಪ್ರೇರಕಃ ಸುಶೇವಃ ಸುಖೋಽಬಧ್ನಾತ್ ಬಂಧನಂ ಕೃತವಾನ್ । ಯಚ್ಚಾಂಗಪಕ್ಷೇ ಪತ್ನೀಂ ಯೋಕ್ತ್ರೇಣ ಬಧ್ನಾತಿ । ಬಂಧನಸ್ಯ ವರುಣೋಽಭಿಮಾನೀ । ಅತೋ ವರುಣಪಾಶಾದ್ಯೋಕ್ತ್ರಾತ್ಪ್ರ ಮುಂಚಾಮಿ ಯೇನ ಯೋಕ್ತ್ರೇಣ ಸವಿತಾ ಕರ್ಮಣಾಮನುಜ್ಞಾತಾ ದೇವ ಋತ್ವಿಕ್ಪಾಶೇನಾಬಧ್ನಾತ್ । ತಂ ಮೋಚಯಿತ್ವಾ

**ಚರ್ತಸ್ಯ ಯಜ್ಞಸ್ಯ ಯೋನೌ ಸ್ಥಾನೇ ಯಾಗಭೂಮೌ ಸುಕೃತಸ್ಯ ಲೋಕೇ ಕರ್ಮಕ್ಷೇತ್ರೇ ಭೂಲೋಕೇ ಚಾರಿಷ್ಟಾಮಹಿಂಸಿತಾಂ ತ್ವಾಂ ಪುತ್ರಾದ್ಯರ್ಥಂ ಪತ್ಯಾ ಸಹ ದಧಾಮಿ । ಸ್ಥಾಪಯಾಮಿ ॥**

॥ ಪ್ರತಿಪದಾರ್ಥ ॥

(ಎಲೈ ವಧುವೇ) **ಯೇನ**—ಯಾವ ಪಾಶದಿಂದ । **ಸುಶೇವಃ**—ಉತ್ತಮ ಸುಖಕಾರಕನಾದ । **ಸವಿತಾ**—ಸವಿತೃದೇವನು । **ತ್ವಾ**—ನಿನ್ನನ್ನು । **ಅಬಧ್ನಾತ್**—ಬಂಧಿಸಿದ್ದನೋ ಅಂತಹ । **ವರುಣಸ್ಯ**—ವರುಣನ । **ಪಾಶಾತ್**—ಬಂಧನದಿಂದ । **ತ್ವಾ**—ನಿನ್ನನ್ನು । **ಪ್ರ ಮುಂಚಾಮಿ**—ಬಿಡಿಸುತ್ತೇನೆ । **ಋತಸ್ಯ**—ಯಜ್ಞಕ್ಕೆ । **ಯೋನೌ**—ಸ್ಥಾನವೂ । **ಸುಕೃತಸ್ಯ**—ಉತ್ತಮವಾದ ಕರ್ಮಕ್ಕೆ । **ಲೋಕೇ**—ಕ್ಷೇತ್ರವೂ ಆದ ಭೂಲೋಕದಲ್ಲಿ । **ಅರಿಷ್ಟಾಂ ತ್ವಾ**—ಹಿಂಸಾರಹಿತಳಾದ ನಿನ್ನನ್ನು । **ಪತ್ಯಾ ಸಹ**—ನಿನ್ನ ಪತಿಯ ಜೊತೆಯಲ್ಲಿ । **ದಧಾಮಿ**—ಸ್ಥಾಪಿಸುತ್ತೇನೆ.

॥ ಭಾವಾರ್ಥ ॥

ಎಲೈ ವಧುವೇ, ಯಾವ ಪಾಶದಿಂದ ಉತ್ತಮ ಸುಖಕಾರಕನಾದ ಸವಿತೃದೇವನು ನಿನ್ನನ್ನು ಬಂಧಿಸಿದ್ದನೋ, ಅಂತಹ ವರುಣನ ಬಂಧನದಿಂದ ನಿನ್ನನ್ನು ಬಿಡಿಸುತ್ತೇನೆ. ಯಜ್ಞಕ್ಕೆ ಸ್ಥಾನವೂ, ಉತ್ತಮವಾದ ಕರ್ಮಕ್ಕೆ ಕ್ಷೇತ್ರವೂ ಆದ ಭೂಲೋಕದಲ್ಲಿ ಹಿಂಸಾರಹಿತಳಾದ ನಿನ್ನನ್ನು ನಿನ್ನ ಪತಿಯ ಜೊತೆಯಲ್ಲಿ ಸ್ಥಾಪಿಸುತ್ತೇನೆ.

## English Translation

I set you free from the noose of Varuna, wherewith the adorable Savitri had bound you; in the place of sacrifice in the world of good deeds I unite you, unharmed, with your husband.

॥ ವಿಶೇಷವಿಷಯಗಳು ॥

ಪತ್ನಿಯ ಸೊಂಟದಲ್ಲಿ ಕಟ್ಟಿದ್ದ ಯೋಕ್ತ್ರವೆಂಬ ದರ್ಭೆಯ ರಜ್ಜುವನ್ನು ಬಿಚ್ಚುವಾಗ **ಪ್ರ ತ್ವಾ ಮುಂಚಾಮಿ** ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಥಾಸ್ಯಾ ಯೋಕ್ತ್ರಂ ವಿಚೃತೀತ್ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾತ್** ಎಂಬ ಸೂತ್ರದಿಂದ (ಆ. ೧-೧೧) ವಿವೃತವಾಗಿರುವುದು.

ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಸಕಲ ಪ್ರಾಣಿಗಳನ್ನು ಸಹ ವರುಣನು ಸವಿತೃದೇವನ ಪ್ರೇರಣೆಯಿಂದ ತನ್ನ ಪಾಶದಿಂದ ಬಂಧಿಸುತ್ತಾನೆ. ಆದ್ದರಿಂದ ಇಲ್ಲಿ ಹೇಳಿರುವ ವಧುವನ್ನು ಹಿಂದೆಯೇ ಎಂದರೆ ಹುಟ್ಟಿದ ಕಾಲದಲ್ಲಿ ಬಂಧಿಸಿದ್ದನು. ಈಗ, ಈ ವಿವಾಹಾನಂತರ ಆ ಪಾಶವನ್ನು ಬಿಚ್ಚಿ ತನ್ನ ಪತಿಯೊಡನೆ ಸುಖದಿಂದ ವಾಸಿಸಲು ಅನುಕೂಲವಾಗುವಂತೆ ಆ ವರುಣನ ಪಾಶವನ್ನು ಬಿಚ್ಚುತ್ತೇನೆ ಮತ್ತು ನಿನ್ನ ಪತಿಯ ಸಮೀಪದಲ್ಲಿ ಸ್ಥಾಪಿಸುತ್ತೇನೆ ಎಂಬ ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಪ್ರೇತೋ ಮುಂಚಾಮಿ ನಾಮುತಃ ಸುಬದ್ಧಾಮಮುತಸ್ಕರಂ ।**

ಯಥೇಯಮಿಂದ್ರ ಮೀಢ್ವಃ ಸುಪುತ್ರಾ ಸುಭಗಾಸತಿ ॥ ೨೫ ॥

॥ ಪದಪಾಠಃ ॥

ಪ್ರ । ಇತಃ । ಮುಂಚಾಮಿ । ನ । ಅಮುತಃ । ಸುऽಬದ್ಧಾಂ । ಅಮುತಃ । ಕರಂ ।

ಯಥಾ । ಇಯಂ । ಇಂದ್ರ । ಮೀಢ್ವಃ । ಸುऽಪುತ್ರಾ । ಸುऽಭಗಾ । ಅಸತಿ ॥ ೨೫ ॥

॥ ಸಾಯಣಭಾಷ್ಯಂ ॥

**ಇತಃ** ಪಿತೃಕುಲಾತ್ಪ್ರ ಮುಂಚಾಮಿ ತ್ವಾಂ ನಾಮುತೋ ಭರ್ತೃಗೃಹಾತ್ಪ್ರಮುಂಚಾಮಿ । ಅಮುತೋ ಭರ್ತೃಗೃಹೇ ಸುಬದ್ಧಾಂ ಕರಂ । ಯಥೇಯಂ ಕನ್ಯಾ ಹೇ ಇಂದ್ರ ಮೀಢ್ವಃ ಸೇಕ್ತಃ ಸುಪುತ್ರಾ ಸುಭಗಾ ಸುಷ್ಠು ಭಾಗ್ಯಾ ವಾಸತಿ ಭವತಿ ತಥಾ ಕುರು ॥

॥ ಪ್ರತಿಪದಾರ್ಥ ॥

(ಎಲೈ ವಧುವೇ) **ಇತಃ**—ಪಿತೃಕುಲದಿಂದ । **ಪ್ರ ಮುಂಚಾಮಿ**—ನಿನ್ನನ್ನು ಬಿಡಿಸುತ್ತೇನೆ। **ಅಮುತಃ**—ಪತಿಗೃಹದಿಂದ। **ನ**—ಬಿಡಿಸುವುದಿಲ್ಲ । **ಅಮುತಃ**—ಪತಿಗೃಹದಲ್ಲಿ । **ಸುಬದ್ಧಾಂ**—ಭದ್ರವಾಗಿ ಸ್ಥಾಪಿತಳಾಗುವಂತೆ । **ಅಕರಂ**—ಮಾಡುತ್ತೇನೆ । **ಮೀಢ್ವಃ**—ಕಾಮವರ್ಷಕನಾದ। **ಇಂದ್ರ**—ಎಲೈ ಇಂದ್ರನೇ। **ಯಥಾ**—ಯಾವ ರೀತಿ। **ಇಯಂ**—ಈ ಕನ್ಯೆಯು । **ಸುಪುತ್ರಾ**—ಉತ್ತಮವಾದ ಪುತ್ರರುಳ್ಳವಳೂ । **ಸುಭಗಾ**—ಸೌಭಾಗ್ಯವುಳ್ಳವಳೂ । **ಅಸತಿ**—ಆಗುವಳೋ ಆ ರೀತಿ ಅನುಗ್ರಹಿಸು.

॥ ಭಾವಾರ್ಥ ॥

ಎಲೈ ವಧುವೇ, ಪಿತೃಕುಲದಿಂದ ನಿನ್ನನ್ನು ಬಿಡಿಸುತ್ತೇನೆ. ಪತಿಗೃಹದಿಂದ ಬಿಡಿಸುವುದಿಲ್ಲ. ನಿನ್ನನ್ನು ಪತಿಗೃಹದಲ್ಲಿ ಭದ್ರವಾಗಿ ಸ್ಥಾಪಿತಳಾಗುವಂತೆ ಮಾಡುತ್ತೇನೆ. ಕಾಮವರ್ಷಕನಾದ ಎಲೈ ಇಂದ್ರನೇ, ಯಾವ ರೀತಿ ಈ ಕನ್ಯೆಯು ಉತ್ತಮವಾದ ಪುತ್ರರುಳ್ಳವಳೂ, ಸೌಭಾಗ್ಯವುಳ್ಳವಳೂ ಆಗುವಳೋ ಆ ರೀತಿ ಅನುಗ್ರಹಿಸು.

English Translation

I set you free from thence, not from hence; I place you here firmly bound; grant, Indra, showerer, that this (damsel) may have excellent children, and be very fortunate.

॥ ವಿಶೇಷವಿಷಯಗಳು ॥

**ಇತಃ ಪ್ರ ಮುಂಚಾಮಿ, ನ ಅಮುತಃ, ಅಮುತಃ ಸುಬದ್ಧಾಂ ಕರಂ**—ಎಲೈ ವಧುವೇ, ಈಗ ನೀನು ವಿವಾಹಿತಳಾಗಿರುವುದರಿಂದ ನಿನ್ನ ತಂದೆಯ ಮನೆಯ ಸಂಬಂಧವನ್ನು ಬಿಡಿಸುತ್ತೇನೆ. ಆದರೆ ಪತಿಯ ಗೃಹದ

ಸಂಬಂಧವನ್ನು ಬಿಡಿಸುವುದಿಲ್ಲ, ಅಷ್ಟೇ ಅಲ್ಲ ಪತಿಗೃಹದಲ್ಲಿ ಶಾಶ್ವತವಶಗಿ ಇದ್ದು ಬಾಳುವಂತೆ ಮಾಡುತ್ತೇನೆ ಎಂದ ಹೇಳಿದೆ. ವಿವಾಹಕ್ಕೆ ಮೊದಲು ಕನ್ಯೆಯು ಪಿತೃಗೃಹದಲ್ಲಿದ್ದುದನ್ನು ಈಗ ತ್ಯಜಿಸಿ ಪತಿಯ ಗೃಹಕ್ಕೆ ಹೋಗುವುದನ್ನು ಇಲ್ಲಿ ವಿವರಿಸಿದೆ. ವಿವಾಹಾನಂತರ ವಿವಾಹವಾದ ಕನ್ಯೆಗೂ ಪಿತೃಗೃಹಕ್ಕೂ ಏನೂ ಸಂಬಂಧವಿಲ್ಲ. ಇದ್ದ ಸಂಬಂಧು ವನ್ನೆಲ್ಲಾ ತ್ಯಜಿಸಲಾಗಿದೆ. ಇನ್ನು ಮುಂದೆ ಏನು ಸಂಬಂಧವಿದ್ದರೂ ಅದು ಪತಿಯ ಗೃಹದೊಡನೆ ಮಾತ್ರ. ಅಲ್ಲಿಯ ಸಂಬಂಧವೇ ಇನ್ನು ಮುಂದೆ ಶಾಶ್ವತವೆಂದು ತಿಳಿಯಬೇಕು. ಎಲೈ ಇಂದ್ರನೇ, ಈ ಕನ್ಯೆಯು ಪುತ್ರವತಿಯೂ, ಸೌಭಾಗ್ಯವತಿಯೂ ಆಗಿ ಪತಿಯ ಗೃಹದಲ್ಲಿ ಶಾಶ್ವತ ಸುಖದಿಂದ ಬಾಳಲೆಂದು ಅನುಗ್ರಹಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರ ವಹತಾಂ ರಥೇನ ।
ಗೃಹಾನ್ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ॥

॥ ಪದಪಾಠಃ ॥

ಪೂಷಾ । ತ್ವಾ । ಇತಃ । ನಯತು । ಹಸ್ತಽಗೃಹ್ಯ । ಅಶ್ವಿನಾ । ತ್ವಾ । ಪ್ರ । ವಹತಾಂ । ರಥೇನ ।
ಗೃಹಾನ್ । ಗಚ್ಛ । ಗೃಹಽಪತ್ನೀ । ಯಥಾ । ಅಸಃ । ವಶಿನೀ । ತ್ವಂ । ವಿದಥಂ । ಆ । ವದಾಸಿ ॥ ೨೬ ॥

॥ ಸಾಯಣಭಾಷ್ಯಂ ॥

ವಿವಾಹಾನಂತರಭಾವಿನಿ ಪ್ರಯಾಣೇ ಪೂಷಾ ತ್ವೇತೋ ನಯತ್ವಿತ್ಯನಯಾ ರಥಾದಿಯಾನಮಾರೋಹಯೇತ್ । ಸೂತ್ರಿತಂ ಚ । ಪೂಷಾ ತ್ವೇತೋ ನಯತು ಹಸ್ತಗೃಹ್ಯೇತಿ ಯಾನಮಾರೋಹಯೇತ್ । ಆ. ಗೃ. ೧-೮.೧ ॥

ಹಸ್ತಗೃಹ್ಯ ಗ್ರಾಹ್ಯಹಸ್ತಃ ಪೂಷಾ ತ್ವಾಮಿತೋ ನಯತು । ಪ್ರಾಪಯತು । ಅಶ್ವಿನಾಶ್ವಿನೌ ತ್ವಾ ತ್ವಾಂ ರಥೇನ ಪ್ರ ವಹತಾಂ । ಪ್ರಗಮಯತಾಂ । ಗೃಹಾನ್ ಭರ್ತೃಸಂಬಂಧಿನೋ ಗಚ್ಛ ತ್ವಂ ಗೃಹಪತ್ನೀ ಯಥಾಸಃ ಭವಸಿ ಸ್ವಗೃಹಸ್ವಾಮಿನೀ ಭವಸಿ । ವಶಿನೀ ಸರ್ವೇಷಾಂ ಗೃಹಗತಾನಾಂ ವಶಂ ಪ್ರಾಪಯಿತ್ರೀ ಪ್ರತ್ಯುರ್ವಶೇ ವರ್ತಮಾನಾ ವಾ ವಿದಥಂ ಪತಿಗೃಹಮಾ ವದಾಸಿ । ಆವದಸಿ । ಗೃಹಸ್ಥಿತಂ ಭೃತ್ಯಾದಿಜನಮಾವದ ॥

॥ ಪ್ರತಿಪದಾರ್ಥ ॥

ಹಸ್ತಗೃಹ್ಯ—ನಿನ್ನ ಕೈಯ್ಯನ್ನು ಹಿಡಿದು । ಪೂಷಾ—ಪೂಷದೇವನು । ತ್ವಾ—ನಿನ್ನನ್ನು । ಇತಃ—ಇಲ್ಲಿಂದ । ನಯತು—ಕರೆದೊಯ್ಯಲಿ । ಅಶ್ವಿನಾ—ಅಶ್ವಿನೀದೇವತೆಗಳು । ತ್ವಾ—ನಿನ್ನನ್ನು । ರಥೇನ—ರಥದಲ್ಲಿ । ಪ್ರ ವಹತಾಂ—ಕರೆದುಕೊಂಡುಹೋಗಲಿ । ಯಥಾ—ಯಾವ ರೀತಿ । ಗೃಹಪತ್ನೀ ಅಸಃ—

ಪತಿಗೃಹಕ್ಕೆ ಪಾಲಕಳಾಗುವೆಯೋ ಹಾಗೆ । **ಗೃಹಾನ್**—ಪತಿಗೃಹಕ್ಕೆ । **ಗಚ್ಛ**—ಹೋಗು । **ತ್ವಂ**—ನೀನು । **ವಶಿನೀ**—ಪತಿಗೆ ಅಧೀನಳಾಗಿ । **ವಿದಥಂ**—ಆ ಗೃಹದ ಜನಕ್ಕೆ । **ಆ ವದಾಸಿ**—ನಿರ್ದೇಶವನ್ನು ಕೊಡುತ್ತಿರು.

। ಭಾವಾರ್ಥ ।

ಎಲೈ ವಧುವೇ, ಪೂಷದೇವನು ನಿನ್ನ ಕೈಯ್ಯನ್ನು ಹಿಡಿದು ನಿನ್ನನ್ನು ಇಲ್ಲಿಂದ ಕರೆದೊಯ್ಯಲಿ. ಅಶ್ವಿನೀ ದೇವತೆಗಳು ನಿನ್ನನ್ನು ರಥದಲ್ಲಿ ಕರೆದುಕೊಂಡುಹೋಗಲಿ. ನೀನು ಪತಿಗೃಹಕ್ಕೆ ಹೋಗಿ ಅಲ್ಲಿ ಪತಿಗೃಹದ ಪಾಲಕಳಾಗಿರು. ಪತಿಯ ವಶದಲ್ಲಿದ್ದು ಆ ಗೃಹದ ಭೃತ್ಯಾದಿಗಳಿಗೆ ಸರಿಯಾದ ನಿರ್ದೇಶವನ್ನು ಕೊಡುತ್ತಿರು.

English Translatian

May Pushan lead you hence, taking you by the hand; may the Ashwins convey you away in their car, go to the dwelling (of your husband) as you are the mistress of the house; you, submissive (to your husband) give orders to his household.

|| ವಿಶೇಷವಿಷಯಗಳು ||

ವಿವಾಹಾನಂತರದಲ್ಲಿ ವಧುವು ಪತಿಯ ಗೃಹಕ್ಕೆ ಹೊರಟು ರಥಾದಿಗಳಲ್ಲಿ (ಗಾಡಿಯಲ್ಲಿ) ಕುಳಿತುಕೊಳ್ಳುವಾಗ **ಪೂಷಾ ತ್ವೇತೋ ನಯತು** ಎಂಬ ಋಕ್ಕಿನಿಂದ ಗಾಡಿಯನ್ನು ಹತ್ತಿಸಿ ಕುಳ್ಳಿರಿಸಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ಪೂಷಾ ತ್ವೇತೋ ನಯತು ಹಸ್ತಗೃಹ್ಯೇತಿ ಯಾನಮಾರೋಹೇತ್** ಎಂಬ ಸೂತ್ರದಿಂದ (ಆ. ಗೃ. ೧-೮ ೧) ವಿವೃತವಾಗಿರುವುದು.

ವಿವಾಹಾನಂತರ ವಧುವು ಪತಿಗೃಹಕ್ಕೆ ಹೋಗುವಾಗ ಆ ನವವಧುವು ಪತಿಯ ಗೃಹಕ್ಕೆ ಹೋಗಿ ಆ ಗೃಹದಲ್ಲಿ ಯಜಮಾನಿಯಾಗಿ ಗೃಹಕೃತ್ಯಗಳನ್ನು ನಿರ್ವಹಿಸುತ್ತಾ ಪತಿಯ ಕೆಲಸಕಾರ್ಯಗಳಿಗೆ ಅನುಕೂಲಳಾಗಿಯೂ, ಮನೆಯಲ್ಲಿರುವ ತನಗಿಂತ ಚಿಕ್ಕವರಾದ ಮಕ್ಕಳು, ಭೃತ್ಯರು ಮೊದಲಾದ ಪರಿಜನರ ವಿಷಯದಲ್ಲಿಯೂ ಆದರದಿಂದ ವರ್ತಿಸುತ್ತಾ ಅವರನ್ನು ತನ್ನ ವಶವರ್ತಿಯಾಗಿ ಮಾಡಿಕೊಂಡು ಸುಖವಾಗಿ ಬಾಳೆಂಬ ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ.

। ಸಂಹಿತಾಪಾಠಃ ।

ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಸ್ಮಿನ್ಗೃಹೇ ಗಾರ್ಹಪತ್ಯಾಯ ಜಾಗೃಹಿ ।
ಏನಾ ಪತ್ಯಾ ತನ್ವಂ೧ಸಂ ಸೃಜಸ್ವಾಧಾ ಜಿವ್ರೀ ವಿದಥಮಾ ವದಾಥಃ ॥೨೭॥

॥ ಪದಪಾಠ ॥

ಇಹ । ಪ್ರಿಯಂ । ಪ್ರಜಯಾ । ತೇ । ಸಂ । ಋಧ್ಯತಾಂ । ಅಸ್ಮಿನ್ । ಗೃಹೇ । ಗಾರ್ಹಽಪತ್ಯಾಯ । ಜಾಗೃಹಿ ।

ಏನಾ । ಪತ್ಯಾ । ತನ್ವಂ । ಸಂ । ಸೃಜಸ್ವ । ಅಧ । ಜಿವ್ರೀ ಇತಿ । ವಿದಥಂ । ಆ । ವದಾಥಃ ॥ ೨೭ ॥

॥ ಸಾಯಣಭಾಷ್ಯಂ ॥

ಇಹ ಪ್ರಿಯಮಿತ್ಯೇಷಾ ವಧ್ವಾ ಗೃಹಪ್ರವೇಶನೀ । ಸೂತ್ರಿತಂ ಚ । ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಿತಿ ಗೃಹಂ ಪ್ರವೇಶಯೇತ್ । ಆ. ಗೃ. ೧-೮.೮ । ಇತಿ ॥

ಹೇ ವಧು ತೇ ತವೇಹಾಸ್ಮಿನ್ಪತಿಕುಲೇ ಪ್ರಿಯಂ ಪ್ರಜಯಾ ಸಹ ಸಮೃಧ್ಯತಾಂ । ಅಸ್ಮಿನ್ಗೃಹೇ ಗಾರ್ಹಪತ್ಯಾಯ ಗೃಹಪತಿತ್ವಾಯ ಜಾಗೃಹಿ । ಬುಧ್ಯಸ್ವ । ಏನಾನೇನ ಪತ್ಯಾ ಸಹ ತನ್ವಂ ಸ್ವೀಯಂ ಶರೀರಂ ಸಂ ಸೃಜಸ್ವ । ಸಂಸೃಷ್ಟಾ ಭವ । ಅಥಾಥ ಜಿವ್ರೀ ಜೀರ್ಣೌ ಜಾಯಾಪತೀ ಯುವಾಂ ವಿದಥಂ ಗೃಹಮಾ ವದಾಥಃ । ಅಭಿಮುಖ್ಯೇನ ವದತಂ ॥

॥ ಪ್ರತಿಪದಾರ್ಥ ॥

(ಎಲೈ ವಧುವೇ) **ತೇ**—ನಿನಗೆ । **ಇಹ**—ಈ ಪತಿಗೃಹದಲ್ಲಿ । **ಪ್ರಜಯಾ**—ಪುತ್ರಾದಿಗಳೊಡನೆ । **ಪ್ರಿಯಂ**—ಪ್ರೀತಿಯು । **ಸಮೃಧ್ಯತಾಂ**—ಪೂರ್ಣವಾಗಿ ಬೆಳೆಯಲಿ । **ಅಸ್ಮಿನ್ ಗೃಹೇ**—ಈ ಗೃಹದಲ್ಲಿ । **ಗಾರ್ಹಪತ್ಯಾಯ**—ಗೃಹಪಾಲಕಳಾಗಿರಲು । **ಜಾಗೃಹಿ**—ಎಚ್ಚರವಾಗಿರು । **ಏನಾ ಪತ್ಯಾ**—ನಿನ್ನ ಈ ಪತಿಯೊಂದಿಗೆ । **ತನ್ವಂ**—ನಿನ್ನ ಶರೀರವನ್ನು । **ಸಂ ಸೃಜಸ್ವ**—ಒಟ್ಟಿಗೆ ಸೇರಿಸು । **ಅಧ**—ಕಾಲಾನಂತರ । **ಜಿವ್ರೀ**—ವೃದ್ಧರಾದ ನೀವಿಬ್ಬರೂ । **ವಿದಥಂ**—ನಿಮ್ಮ ಗೃಹದಲ್ಲಿರುವ ಪುತ್ರಾದಿಗಳಿಗೆ । **ಆ ವದಾಥಃ**—ನಿರ್ದೇಶವನ್ನು ಕೊಡುತ್ತೀರಿ.

॥ ಭಾವಾರ್ಥ ॥

ಎಲೈ ವಧುವೇ, ಈ ಪತಿಗೃಹದಲ್ಲಿ ಪುತ್ರಾದಿಗಳೊಡನೆ ಕೂಡಿದ ಪ್ರೀತಿಯು ನಿನಗೆ ಬೆಳೆಯಲಿ. ನೀನು ಈ ಗೃಹದ ಪಾಲಕಳಾಗಿರಲು ಎಚ್ಚರವಾಗಿರು. ನಿನ್ನ ಪತಿಯೊಂದಿಗೆ ಸೇರಿ ತಾದಾತ್ಮ್ಯವನ್ನು ಹೊಂದು. ಕಾಲಾನಂತರ ವೃದ್ಧರಾದ ನೀವಿಬ್ಬರೂ ನಿಮ್ಮ ಗೃಹದಲ್ಲಿರುವ ಪುತ್ರಾದಿಗಳಿಗೆ ನಿರ್ದೇಶವನ್ನು ಕೊಡುತ್ತೀರಿ.

## English Translation

In this your (husband's family) may affection increase with ofspring, be watchful over the domestic fire in this house; unite your person with this your husband; and both growing old together govern your household.

|| ವಿಶೇಷವಿಷಯಗಳು ||

**ಇಹ ಪ್ರಿಯಂ** ಎಂಬ ಈ ಋಕ್ಕನ್ನು ನವವಧುವು ಪತಿಯ ಗೃಹವನ್ನು ಪ್ರವೇಶಿಸುವಾಗ ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಿತಿ ಗೃಹಂ ಪ್ರವೇಶಯೇತ್**— ಎಂಬ ಸೂತ್ರದಿಂದ (ಆ. ಗೃ. ೧-೮-೮) ವಿವೃತವಾಗಿರುವುದು.

ಎಲೈ ವಧುವೇ, ಈ ಪತಿಗೃಹವನ್ನು ಪ್ರವೇಶಿಸು. ಇಲ್ಲಿ ನಿನಗೆ ಪ್ರಿಯಕರವಾದ ವಸ್ತುಗಳೂ, ಸಂಪದಾದಿಗಳೂ, ಪುತ್ರಾದಿಸಂತಾನಗಳೂ ಅಭಿವೃದ್ಧಿಯನ್ನುಂಟುಮಾಡಲಿ. ಈ ಮನೆಗೆ ಯಜಮಾನಿಯಾಗಿದ್ದು ಮನೆಯ ಆಡಳಿತವನ್ನು ಎಚ್ಚರಿಕೆಯಿಂದ ನೋಡಿಕೋ. ಈ ನಿನ್ನ ಪತಿಯೊಡನೆ ಸೇರಿ ಶರೀರಸುಖವನ್ನು ಪಡೆದು ಪುತ್ರಾದಿ ಸಂತಾನವನ್ನು ಉತ್ಪಾದನೆಮಾಡು. ಈ ರೀತಿ ಪತಿಪತ್ನಿಯರಾದ ನೀವು ಈ ಗೃಹದಲ್ಲಿ ಬಹುಕಾಲ ಸುಖಸಂತೋಷಗಳಿಂದ ಬದುಕಿ ಬಾಳಿ ಕೊನೆಗೆ ಇಬ್ಬರೂ ಒಟ್ಟಿಗೆ ವೃದ್ಧರಾಗುವಂತಾಗಲಿ ಎಂಬ ಹಾರೈಕೆಯು ಉಕ್ತವಾಗಿದೆ.

**ಅಯಾ, ಏನಾ** ಎಂಬ ಸರ್ವನಾಮಶಬ್ದಗಳು ಇಂತಹ ಸ್ತ್ರೀ, ಇಂತಹ ಪುರುಷ ಎಂದು ನಿರ್ದೇಶಿಸಲ್ಪಡುವಾಗ ಉಪಯೋಗಿಸಲ್ಪಡುವವು. **ಅಯಾ** ಎಂಬ ಶಬ್ದವು ಸ್ತ್ರೀಯರ ವಿಷಯದಲ್ಲಿಯೂ, **ಏನಾ** ಎಂಬ ಶಬ್ದವು ಪುರುಷರ ಮತ್ತು ನಪುಂಸಕಶಬ್ದದ ವಿಷಯದಲ್ಲಿಯೂ ಉಪಯೋಗಿಸಲ್ಪಡುವವು ಉದಾಹರಣೆಗೆ—

**ಅಯಾ ತೇ ಅಗ್ನೇ ಸಮಿಧಾ ವಿಧೇಮ । ಇತಿ ಸ್ತ್ರಿಯಾಃ ||**

ಮೇಲಿನ ಶ್ರುತಿವಾಕ್ಯದಲ್ಲಿ **ಅಯಾ** ಎಂಬ ಶಬ್ದವು ಸ್ತ್ರೀಲಿಂಗಶಬ್ದವಾದ **ಸಮಿಧಾ** ಎಂಬ ಶಬ್ದದ ಸಂಬಂಧದಲ್ಲಿ ಉಪಯೋಗಿಸಲ್ಪಟ್ಟಿರುವುದು.

ಏನಾ **ವೋ ಅಗ್ನಿಂ ನಮಸಾ । ಇತಿ ನಪುಂಸಕಸ್ಯ ||**

ಎಂಬ ವಾಕ್ಯದಲ್ಲಿ **ಏನಾ** ಎಂಬ ಶಬ್ದವು ನಪುಂಸಕಲಿಂಗಶಬ್ದವಾದ **ನಮಸಾ** ಎಂಬ ಶಬ್ದದ ಸಂಬಂಧದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಏನಾ ಪತ್ಯಾ ತನ್ವಂ ಸಂಸೃಜಸ್ವ । ಇತಿ ಪುಂಸಃ ||**

ಎಂಬ ವಾಕ್ಯದಲ್ಲಿ **ಏನಾ** ಎಂಬ ಶಬ್ದವು ಪುಲ್ಲಿಂಗವಾದ **ಪತ್ಯಾ** ಎಂಬ ಶಬ್ದದ ಸಂಬಂಧದಲ್ಲಿ ಉಪಯೋಗಿಸಲ್ಪಟ್ಟಿರುವುದು (ನಿ. ೩-೨೧).

॥ ಸಂಹಿತಾಪಾಠಃ ॥

ನೀಲಲೋಹಿತಂ ಭವತಿ ಕೃತ್ಯಾಸಕ್ತಿರ್ವ್ಯಜ್ಯತೇ ।

ಏಧಂತೇ ಅಸ್ಯಾ ಜ್ಞಾತಯಃ ಪತಿರ್ಬಂಧೇಷು ಬಧ್ಯತೇ ॥ ೨೮ ॥

॥ ಪದಪಾಠಃ ॥

ನೀಲsಲೋಹಿತಂ । ಭವತಿ । ಕೃತ್ಯಾ । ಆಸಕ್ತಿಃ । ವಿ । ಅಜ್ಯತೇ ।

ಏಧಂತೇ । ಅಸ್ಯಾಃ । ಜ್ಞಾತಯಃ । ಪತಿಃ । ಬಂಧೇಷು । ಬಧ್ಯತೇ ॥ ೨೮ ॥

॥ ಸಾಯಣಭಾಷ್ಯಂ ॥

**ಕೃತ್ಯಾಭಿಚಾರಾಭಿಮಾನಿನೀ ದೇವತಾ ನೀಲಲೋಹಿತಂ ಭವಂತಿ । ನೀಲಂ ಚ ಲೋಹಿತಂ ಚ ತಸ್ಯಾ ರೂಪಂ ಭವತೀತ್ಯರ್ಥಃ । ಸಾ ಕೃತ್ಯಾಸಕ್ತಿರಾಸಕ್ತಾಸ್ಯಾಂ ಸಂಬದ್ಧಾ ವ್ಯಜ್ಯತೇ । ತ್ಯಜ್ಯತ ಇತ್ಯರ್ಥಃ । ತಸ್ಯಾಂ ಕೃತ್ಯಾಯಾಮುಪಗತಾಯಾಮಸ್ಯಾ ವಧ್ವಾ ಜ್ಞಾತಯ ಏಧಂತೇ ವರ್ಧಂತೇ । ಪತಿರ್ಬಂಧೇಷು ಸಾಂಸಾರಿಕೇಷು ಬಧ್ಯತೇ ॥**

॥ ಪ್ರತಿಪದಾರ್ಥ ॥

**ಕೃತ್ಯಾ**—ಕೃತ್ಯಾಸಂಜ್ಞಕಳಾದ ಅಭಿಚಾರಾಭಿಮಾನಿಯಾದ ದೇವತೆಯು (ಮಾಂತ್ರಿಕಶಕ್ತಿಯುಳ್ಳ ದೇವತೆಯು) । **ನೀಲಲೋಹಿತಾ**—ನೀಲ ಮತ್ತು ಕೆಂಪುಬಣ್ಣವುಳ್ಳವಳಾಗಿ । **ಭವತಿ**—ಇರುತ್ತಾಳೆ । **ಆಸಕ್ತಿಃ**—ಇವಳಲ್ಲಿ ಅಂಟಿಕೊಂಡಿರುವ ಆ ಕೃತ್ಯೆಯು । **ವ್ಯಜ್ಯತೇ**—ತ್ಯಜಿಸಲ್ಪಡುತ್ತಾಳೆ । **ಅಸ್ಯಾಃ**—ಈ ವಧುವಿನ । **ಜ್ಞಾತಯಃ**—ಬಂಧುಗಳು । **ಏಧಂತೇ**—ಪ್ರವೃದ್ಧರಾಗುತ್ತಾರೆ । **ಪತಿಃ**—ಇವಳ ಪತಿಯು । **ಬಂಧೇಷು**—ಸಾಂಸಾರಿಕವಾದ ಬಂಧನಗಳಲ್ಲಿ । **ಬಧ್ಯತೇ**—ನಿಯಮಿತನಾಗುತ್ತಾನೆ.

॥ ಭಾವಾರ್ಥ ॥

ಕೃತ್ಯಾಸಂಜ್ಞಕಳಾದ ಮಾಂತ್ರಿಕಶಕ್ತಿಯುಳ್ಳ ದೇವತೆಯು ನೀಲ ಮತ್ತು ಕೆಂಪುಬಣ್ಣವುಳ್ಳವಳಾಗಿರುತ್ತಾಳೆ. ಈ ವಧುವಿನಲ್ಲಿ ಅಂಟಿಕೊಂಡಿರುವ ಆ ಕೃತ್ಯೆಯು ತ್ಯಜಿಸಲ್ಪಡುತ್ತಾಳೆ. ಅನಂತರ ಈ ವಧುವಿನ ಬಂಧುಗಳು ಪ್ರವೃದ್ಧರಾಗುತ್ತಾರೆ. ಇವಳ ಪತಿಯು ಸಾಂಸಾರಿಕವಾದ ಬಂಧನಗಳಲ್ಲಿ ನಿಯಮಿತನಾಗುತ್ತಾನೆ.

English Translation

Blue and red is (her form) ; Kritya devoted (to her) is left behind ; her kinsmen prosper, the husband is bound in bonds.

॥ ಸಂಹಿತಾಪಾಠಃ ॥

ಪರಾ ದೇಹಿ ಶಾಮುಲ್ಯಂ ಬ್ರಹ್ಮಭ್ಯೋ ವಿ ಭಜಾ ವಸು ।
ಕೃತ್ಯೈಷಾ ಪದ್ವತೀ ಭೂತ್ವ್ಯಾ ಜಾಯಾ ವಿಶತೇ ಪತಿಂ ॥ ೨೯ ॥

॥ ಪದಪಾಠಃ ॥

ಪರಾ । ದೇಹಿ । ಶಾಮುಲ್ಯಂ । ಬ್ರಹ್ಮಭ್ಯಃ । ವಿ । ಭಜ । ವಸು ।
ಕೃತ್ಯಾ । ಏಷಾ । ಪತ್ಽವತೀ । ಭೂತ್ವೀ । ಆ । ಜಾಯಾ । ವಿಶತೇ । ಪತಿಂ ॥ ೨೯ ॥

॥ ಸಾಯಣಭಾಷ್ಯಂ ॥

ಶಾಮುಲ್ಯಂ । ಶಾಮುಲಮಿತ್ಯರ್ಥಃ । ಶಮುಲಂ ಶಾರೀರಂ ಮಲಂ । ಶರೀರಾವಚ್ಛಿನ್ನಸ್ಯ ಮಲಸ್ಯ ಧಾರಕಂ ವಸ್ತ್ರಂ ಪರಾ ದೇಹಿ । ಪರಾತ್ಯಜ । ಧೃತಪ್ರಾಯಶ್ಚಿತ್ತಾರ್ಥಂ ಬ್ರಹ್ಮಭ್ಯೋ ಬ್ರಾಹ್ಮಣೇಭ್ಯೋ ವಸು ಧನಂ ವಿ ಭಜ । ಪ್ರಯಚ್ಛೇತ್ಯರ್ಥಃ । ಕಿಮರ್ಥಂ ವಧೂವಾಸಃಪರಿತ್ಯಾಗ ಇತಿ ಚೇತ್ ಉಚ್ಯತೇ । ಏಷಾ ಕೃತ್ಯಾ ಪದ್ವತೀ ಪಾದವತೀ ಸತೀ ಜಾಯಾ ಭೂತ್ವೀ ಭೂತ್ವಾ ಪತಿಂ ವಿಶತೇ । ಕೃತ್ಯಾರೂಪವಾಸಃ-ಪ್ರವೇಶಾತ್ ಕೃತ್ಯಾ ಜಾಯಾ ಭೂತ್ವಾ ವಿಶ್ವತ ಇತ್ಯುಪಚರ್ಯತೇ । ಅತಸ್ತತ್ಪರಿತ್ಯಾಗೇ ಕೃತ್ಯೈವ ತ್ಯಕ್ತಾ ಭವತೀತ್ಯರ್ಥಃ । ಯದಿ ವಧೂವಾಸಃ ಸ್ವಯಂ ನಿಧತ್ತೇ ತದ್ವೈವಂ ಭವತೀತಿ ವಧೂವಾಸಃ-ಸಂಸ್ಪರ್ಶನಂ ನಿಂದಾಯುಕ್ತಂ ॥

॥ ಪ್ರತಿಪದಾರ್ಥ ॥

(ಎಲೈ ವಧುವೇ) **ಶಾಮುಲ್ಯಂ**—ದೇಹದ ಕೊಳೆಯಿಂದ ಮಲಿನವಾದ ವಸ್ತ್ರವನ್ನು । **ಪರಾ ದೇಹಿ**—ದೂರ ಹಾಕು । **ಬ್ರಹ್ಮಭ್ಯಃ**—ವೇದವಿತ್ತುಗಳಿಗೆ । **ವಸು**—ಧನವನ್ನು । **ವಿ ಭಜ**—ಹಂಚು । **ಏಷಾ ಕೃತ್ಯಾ**—ಕೃತ್ಯಾಸಂಜ್ಞಕಳಾದ ಈ ದೇವಿಯು । **ಪದ್ವತೀ**—ಕಾಲುಗಳನ್ನು ಹೊಂದಿದವಳಾಗಿ । **ಜಾಯಾ ಭೂತ್ವೀ**—ಪತ್ನಿಯ ಸಂಬಂಧವನ್ನು ಹೊಂದಿ । **ಪತಿಂ**—ನಿನ್ನ ಪತಿಯನ್ನು । **ಆ ವಿಶತೇ**—ಪ್ರವೇಶಿಸುತ್ತಾಳೆ.

॥ ಭಾವಾರ್ಥ ॥

ಎಲೈ ವಧುವೇ, ದೇಹದ ಕೊಳೆಯಿಂದ ಮಲಿನವಾದ ವಸ್ತ್ರವನ್ನು ದೂರಹಾಕು. ವೇದವಿತ್ತುಗಳಿಗೆ ಧನವನ್ನು ಹಂಚು. ಕೃತ್ಯಾಸಂಜ್ಞಕಳಾದ ಈ ದೇವಿಯು ಕಾಲುಗಳನ್ನು ಹೊಂದಿದವಳಾಗಿ ಪತ್ನಿಯ ರೂಪವನ್ನು ಹೊಂದಿ ನಿನ್ನ ಪತಿಯನ್ನು ಪ್ರವೇಶಿಸುತ್ತಾಳೆ.

## English Translation

Put away the garment soiled by the body; give wealth to the Brahmins; this Kritya having become endowed with feet, enters the husband's heart as his wife.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಕೊಳೆಯಿಂದ ಮಲಿನವಾದ ತನ್ನ ವಸ್ತ್ರವನ್ನು ದೂರ ತೆಗೆದುಹಾಕಬೇಕೆಂದು ವಧುವನ್ನು ನಿರ್ದೇಶಿಸಿದೆ. ಏಕೆಂದರೆ, ವಧುವಿನ ಮಲಿನವಸ್ತ್ರವು ಪತಿಯ ದೇಹಕ್ಕೆ ಸ್ಪರ್ಶವಾದರೆ ಕೃತ್ಯಾ ಎಂಬ ನೀಲಲೋಹಿತ ರೂಪವುಳ್ಳ ಓರ್ವ ಪಾಪದೇವತೆಯು ಪತಿಯ ದೇಹವನ್ನು ಪ್ರವೇಶಿಸುವ ಸಂಭವವುಂಟು. ಅದ್ದರಿಂದ ಆ ಪಾಪದೇವತೆಯು ದೂರ ತೊಲಗುವುದಕ್ಕಾಗಿ ವಧುವು ತನ್ನ ಮಲಿನವಸ್ತ್ರವನ್ನು ದೂರ ಎಸೆದುಬಿಡಬೇಕೆಂದು ಹೇಳಿದೆ. ಅದ್ದರಿಂದಲೇ ವಧೂವಸ್ತ್ರಸಂಸ್ಪರ್ಶನವು ನಿಂದಾರ್ಹವೆಂದು ಹೇಳಿದೆ.

॥ ಸಂಹಿತಾಪಾಠಃ ॥

ಅಶ್ರೀರಾ ತನೂರ್ಭವತಿ ರುಶತೀ ಪಾಪಯಾಮುಯಾ ।
ಪತಿರ್ಯದ್ವಧ್ವೋ೩ ವಾಸಸಾ ಸ್ವಮಂಗಮಭಿಧಿತ್ಸತೇ ॥ ೩೦ ॥

॥ ಪದಪಾಠಃ ॥

ಅಶ್ರೀರಾ । ತನೂಃ । ಭವತಿ । ರುಶತೀ । ಪಾಪಯಾ । ಅಮುಯಾ ।
ಪತಿಃ । ಯತ್ । ವಧ್ವಃ । ವಾಸಸಾ । ಸ್ವಂ । ಅಂಗಂ । ಅಭಿऽಧಿತ್ಸತೇ ॥ ೩೦ ॥

॥ ಸಾಯಣಭಾಷ್ಯಂ ॥

ಅತ್ರಾಪಿ ವಧೂವಾಸಃಸಂಸ್ಪರ್ಶನಿಂದೋಚ್ಯತೇ । ತನೂರ್ವರಸ್ಯ ಸಂಬಂಧಿನ್ಯಶ್ರೀರಶ್ರೀಕಾ ಭವತಿ । ಕಥಂ ಸ್ಯಾದಿತಿ ಉಚ್ಯತೇ । ರುಶತೀ । ರುಶದಿತಿ ವರ್ಣನಾಮ । ದೀಪ್ತ್ಯಯಾಮುಯಾನಯಾ ಪಾಪರೂಪಯಾ ಕೃತ್ಯಯಾ ಯುಕ್ತಾ ಚೇತ್ತನೂಃ । ತದೇವಾಹ । ಪತಿರ್ಯದ್ಯದಿ ವಧ್ವೋ ವಾಸಸಾ ಸ್ವಮಂಗಮಭಿಧಿತ್ಸತೇ ಪರಿಧಾತುಮಿಚ್ಛತಿ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಪತಿಃ**—ವರನು । **ವಧ್ವಃ**—ವಧುವಿನ । **ವಾಸಸಾ**—ವಸ್ತ್ರದಿಂದ । **ಸ್ವಂ ಅಂಗಂ**—ತನ್ನ ಶರೀರವನ್ನು । **ಅಭಿಧಿತ್ಸತೇ**—ಹೊದ್ದುಕೊಳ್ಳಲಿಚ್ಛಿಸುವನೋ ಆಗ । **ಅಮುಯಾ ಪಾಪಯಾ**—ಪಾಪಿಷ್ಠಳಾದ ಈ ಕೃತ್ಯಾದೇವಿಯ ಸಂಸರ್ಗದಿಂದ । **ರುಶತೀ**—ಪ್ರಕಾಶಿಸುವ । **ತನೂಃ**—ಅವನ ಶರೀರವು । **ಅಶ್ರೀರಾಃ**—ಕಾತಿರಹಿತವಾಗಿ । **ಭವತಿ**—ಆಗುತ್ತದೆ.

॥ ಭಾವಾರ್ಥ ॥

ಯಾವಾಗ ಪತಿಯಾದವನು ವಧುವಿನ ವಸ್ತ್ರದಿಂದ ತನ್ನ ಶರೀರವನ್ನು ಹೊದ್ದುಕೊಳ್ಳಲಿಚ್ಛಿಸುವನೋ ಆಗ ಪಾಪಿಷ್ಠಳಾದ ಈ ಕೃತ್ಯಾದೇವಿಯ ಸಂಸರ್ಗದಿಂದ ಪ್ರಕಾಶಿಸುವ ಅವನ ಶರೀರವು ಕಾಂತಿರಹಿತವಾಗಿ ಆಗುತ್ತದೆ.

## English Translation

The (bridegroom's) body is lacking in beauty ; shining with this wicked (Kritya), when he wishes to clothe his own limbs with his wife's garments·

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ವಧೂವಸ್ತ್ರಸಂಸ್ಪರ್ಶನಿಂದೆಯು ಉಕ್ತವಾಗಿದೆ. ಪತಿಯಾದವನು ವಧೂವಸ್ತ್ರವನ್ನು ಒಂದುವೇಳೆ ಹೊದ್ದುಕೊಂಡರೆ ಆಗ ಅವನ ಶರೀರದ ವರ್ಣವೂ ಕಾಂತಿಯೂ ನಷ್ಟವಾಗಿ ದೇಹವು ಕಳೆಯಿಲ್ಲದಂತಾಗು

ವುದು. ಆದ್ದರಿಂದ ಈಗಲೂ ಸ್ತ್ರೀಯರ ವಸ್ತ್ರಾದಿಗಳನ್ನು ಪುರುಷರು ಧರಿಸಿರುವುದು ರೂಢಿಯಲ್ಲಿದೆ. ಆರೋಗ್ಯದಿಂದಲೂ, ವರ್ಚಸ್ಸಿನಿಂದಲೂ, ಶಕ್ತಿಯಿಂದಲೂ ಇರಬೇಕೆಂದು ಬಯಸುವ ಪುರುಷನು ಸ್ತ್ರೀಯರು ಉಪಯೋಗಿಸಿದ ವಸ್ತ್ರಾದಿಗಳನ್ನು ಯಾವಾಗಲೂ ಧರಿಸಬಾರದು.

॥ ಸಂಹಿತಾಪಾಠಃ ॥

ಯೇ ವಧ್ವಶ್ಚಂದ್ರಂ ವಹತುಂ ಯಕ್ಷ್ಮಾ ಯಂತಿ ಜನಾದನು ।
ಪುನಸ್ತಾನ್ಯಜ್ಞಿಯಾ ದೇವಾ ನಯಂತು ಯತ ಆಗತಾಃ ॥ ೩೧ ॥

॥ ಪದಪಾಠಃ ॥

ಯೇ । ವಧ್ವಃ । ಚಂದ್ರಂ । ವಹತುಂ । ಯಕ್ಷ್ಮಾಃ । ಯಂತಿ । ಜನಾತ್ । ಅನು ।
ಪುನರಿತಿ । ತಾನ್ । ಯಜ್ಞಿಯಾಃ । ದೇವಾಃ । ನಯಂತು । ಯತಃ । ಆಽಗತಾಃ ॥ ೩೧ ॥

॥ ಸಾಯಣಭಾಷ್ಯಂ ॥

ವಧ್ವಶ್ಚಂದ್ರಂ ಹಿರಣ್ಯರೂಪಂ ವಹತುಂ ಯೇ ಯಕ್ಷ್ಮಾ ವ್ಯಾಧಯೋಽನು ಯಂತಿ ಪ್ರಾಪ್ನುವಂತಿ ಜನಾದಸ್ಮದ್ವಿರೋಧಿನಃ ಸಕಾಶಾತ್ । ಯದ್ವಾ । ಜನಾದ್ಯವಾಖ್ಯಾತ್ । ತಾನ್ಪುನರ್ನಯಂತು ಪ್ರಾಪಯಂತು ಯಜ್ಞಿಯಾ ಯಜ್ಞಾರ್ಹಾ ದೇವಾ ಇಂದ್ರಾದಯಃ । ಯತ ಆಗತಾ ಯಸ್ಮಾತ್ತೇ ಯಕ್ಷ್ಮಾ ಆಗತಾಃ ತತ್ರ ತಾನ್ನಯಂತು ॥

॥ ಪ್ರತಿಪದಾರ್ಥ ॥

**ಯಜ್ಞಿಯಾಃ**—ಯಜ್ಞಾರ್ಹರಾದ । **ದೇವಾಃ**—ದೇವತೆಗಳು । **ಜನಾತ್**—ನಮ್ಮ ಶತ್ರುಜನರಿಂದ । **ಯೇ ಯಕ್ಷ್ಮಾಃ**—ಯಾವ ವ್ಯಾಧಿಗಳು । **ವಧ್ವಃ**—ವಧುವಿನ । **ಚಂದ್ರಂ**—ಹಿರಣ್ಯರೂಪವಾದ । **ವಹತುಂ**—ವೈಭವವನ್ನು । **ಅನುಯಂತಿ**—ಪ್ರವೇಶಿಸಿ ಕಾಂತಿರಹಿತವನ್ನಾಗಿ ಮಾಡುವುವೋ । **ತಾನ್**—ಅವುಗಳನ್ನು । **ಯತ ಆಗತಾಃ**—ಅವು ಎಲ್ಲಿಂದ ಬಂದವೋ ಅಲ್ಲಿಗೆ । **ಪುನಃ**—ತಿರುಗಿಯೂ । **ನಯಂತು**—ಹಿಂತಿರುಗಿಸಲಿ.

॥ ಭಾವಾರ್ಥ ॥

ನಮ್ಮ ಶತ್ರುಗಳಿಂದ ಯಾವ ವ್ಯಾಧಿಗಳು ವಧುವಿನ ಹಿರಣ್ಯರೂಪವಾದ ಶರೀರವನ್ನು ಪ್ರವೇಶಿಸಿ ಕಾಂತಿರಹಿತವನ್ನಾಗಿ ಮಾಡುವುವೋ ಆವುಗಳನ್ನು ಅವುಎಲ್ಲಿಂದ ಬಂದವೋ ಅಲ್ಲಿಗೆ ತಿರುಗಿಯೂ ಹಿಂತಿರುಗಿಸಲಿ.

## English Translation

May the adorable gods drive back again to the place whence they came the diseases which follow from (other) people the wife's golden bridal procession.

॥ ವಿಶೇಷವಿಷಯಗಳು ॥

ಪ್ರಕೃತ ಋಕ್ಕಿನಲ್ಲಿ ಯಕ್ಷ್ಮ ಮೊದಲಾದ ವ್ಯಾಧಿಗಳು ಶತ್ರುಗಳಿಂದಲಾಗಲೀ, ಯಮನಿಂದಲಾಗಲೀ ಪ್ರಾಪ್ತವಾದರೆ ಅವೆಲ್ಲವೂ ಇಂದ್ರಾದಿದೇವತೆಗಳ ಅನುಗ್ರಹದಿಂದ ಹಿಂತಿರುಗಿ ಶತ್ರುಗಳ ಬಳಿಗೆ ಹೋಗಲಿ ಎಂದರೆ ಶತ್ರುಗಳನ್ನೇ ಬಾಧಿಸಲಿ ಎಂಬ ಆಶ್ವಾಸನೆಯು ಉಕ್ತವಾಗಿದೆ.

**ಚಂದ್ರಂ—ಹಿರಣ್ಮಯಂ** । ಸುವರ್ಣಕಾಂತಿಯಂತೆ ಬೆಳಗುತ್ತಿರುವ ವಧುವಿನ ಶರೀರವನ್ನು; ಚಂದ್ರಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ಹೇಳಬಹುದು. **ಸರ್ವೇಷಾಮಾಹ್ಲಾದಕಶ್ಚಂದ್ರಸದೃಶೋ ಭವತಿ** । ಒಂದು ವಸ್ತುವನ್ನು ವರ್ಣಿಸುವಾಗ ಅದನ್ನು ಎಲ್ಲರಿಗೂ ಆಹ್ಲಾದವನ್ನುಂಟುಮಾಡುವ ಚಂದ್ರನ ಕಾಂತಿಯಂತೆ ಬೆಳಗುತ್ತಿರುವ ವಸ್ತುವು ಎಂದು ಚಂದ್ರಶಬ್ದದಿಂದ ವರ್ಣಿಸಲಾಗುವುದು. ಈ ಅರ್ಥವು ನಿರುಕ್ತದ ನಿರ್ವಚನವನ್ನನುಸರಿಸಿದೆ ನಿರುಕ್ತದಲ್ಲಿ—

**ಚಂದ್ರಶ್ಚಂದತೇಃ ಕಾಂತಿಕರ್ಮಣಃ** । (ನಿ. ೧೧-೫) ಕಾಂತಿಯಿಂದ ಬೆಳಗು, ರಮ್ಯವಾಗಿ ಕಾಣು. ಎಂಬರ್ಥವುಳ್ಳ ಚಂದ್ ಧಾತುವಿನಿಂದ ಚಂದ್ರಶಬ್ದವು ನಿಷ್ಪನ್ನವಾಗಿದೆ ಎಂದು ಹೇಳಿದ್ದಾರೆ. ಆದ್ದರಿಂದ ಆಹ್ಲಾದಕರವಾದ ವಸ್ತುವನ್ನು ವರ್ಣಿಸುವಾಗ ಚಂದ್ರಶಬ್ದವನ್ನು ಉಪಯೋಗಿಸಲಾಗುತ್ತದೆ.

॥ ಸಂಹಿತಾಪಾಠಃ ॥

**ಮಾ ವಿದನ್ಪರಿಪಂಥಿನೋ ಯ ಆಸೀದಂತಿ ದಂಪತೀ ।**

**ಸುಗೇಭಿರ್ದುರ್ಗಮತೀತಾಮಪ ದ್ರಾಂತ್ವರಾತಯಃ ॥ ೩೨ ॥**

॥ ಪದಪಾಠಃ ॥

**ಮಾ । ವಿದನ್ । ಪರಿऽಪಂಥಿನಃ । ಯೇ । ಆऽಸೀದಂತಿ । ದಂಪತೀ ಇತಿ ದಂऽಪತೀ ।**

**ಸುऽಗೇಭಿಃ । ದುಃऽಗಂ । ಅತಿ । ಇತಾಂ । ಅಪ । ದ್ರಾಂತು । ಅರಾತಯಃ ॥ ೩೨ ॥**

॥ ಸಾಯಣಭಾಷ್ಯಂ ॥

ವಧ್ವಾಃ ಪ್ರಯಾಣೇ ಮಾ ವಿದನ್ನಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಕಲ್ಯಾಣೇಷು ದೇಶವೃಕ್ಷಚತುಷ್ಪಥೇಷು ಮಾ ವಿದನ್ಪರಿಪಂಥಿನ ಇತಿ ಜಪೇತ್ । ಆ. ಗೃ. ೧-೮-೬ । ಇತಿ ॥

ಪರಿಪಂಥಿನಃ ಪರ್ಯವಸ್ಥಾತಾರಃ ಶತ್ರವೋ ಮಾ ವಿದನ್ ಮಾ ಪ್ರಾಪಯನ್ ಯೇ ಪರಿಪಂಥಿನೋ ದಂಪತೀ ಆಸೀದಂತಿ ಅಭಿಗಚ್ಛಂತಿ । ಸುಗೇಭಿಃ ಸುಗೈರ್ಮಾರ್ಗೈರ್ದುರ್ಗಂ ದುಃಖೇನ ಗಂತುಂ ಶಕ್ಯಂ ದುರ್ಗಮಂ ದೇಶಮತೀತಾಂ । ಅತಿಗಚ್ಛತಾಂ । ಅರಾತಯೋಽದಾತಾರಃ ಶತ್ರವೋಽಪ ದ್ರಾಂತು । ಅಪಗಚ್ಛಂತು ॥

॥ ಪ್ರತಿಪದಾರ್ಥ ॥

**ಯೇ ಪರಿಪಂಥಿನಃ**—ದಾರಿಯನ್ನು ಕಾಯತಕ್ಕ ಯಾವ ಚೋರರು । **ದಂಪತೀ—**ಈ ಹೊಸ ದಂಪತಿಗಳನ್ನು । **ಆಸೀದಂತಿ**—ಎದುರಿಸುತ್ತ ಬರುವರೋ ಅವರು । **ಮಾ ವಿದನ್**—ಇವರನ್ನು ಸಮೀಪಿಸದಂತಾಗಲಿ । **ದುರ್ಗಂ**—ಕಠಿಣವಾದ ಮಾರ್ಗವನ್ನು । **ಸುಗೇಭಿಃ**—ಸುಖಕರವಾದ ಪ್ರಯಾಣದಿಂದ । **ಅತೀತಾಂ**— ದಾಟಲಿ । **ಅರಾತಯಃ**—ಶತ್ರುಗಳು । **ಅಪ ದ್ರಾಂತು**—ದೂರಕ್ಕೆ ಓಡಲಿ.

॥ ಭಾವಾರ್ಥ ॥

ದಾರಿಯನ್ನು ಕಾಯತಕ್ಕ ಯಾವ ಚೋರರು ಈ ಹೊಸ ದಂಪತಿಗಳನ್ನು ಎದುರಿಸುತ್ತ ಬರುವರೋ ಅವರು ಇವರನ್ನು ಸಮೀಪಿಸಿದಂತಾಗಲಿ ಇವರು ತಮ್ಮ ಕಠಿನವಾದ ಮಾರ್ಗವುಳ್ಳ ಪ್ರದೇಶವನ್ನು ಸುಖವಾಗಿ ದಾಟಲಿ. ಇವರ ಶತ್ರುಗಳು ದೂರಕ್ಕೆ ಓಡಲಿ.

English Translation

Let not the robbers who approach the husband and wife reach them ; may they by easy roads pass the difficulty ; may enemies keep aloof.

॥ ವಿಶೇಷವಿಷಯಗಳು ॥

ವಧುವು ಪತಿಯ ಗೃಹಕ್ಕೆ ಪ್ರಯಾಣಮಾಡುವ ಕಾಲದಲ್ಲಿ **ಮಾ ವಿದನ್** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಕಲ್ಯಾಣೇಷು ದೇಶವೃಕ್ಷ ಚತುಷ್ಪಥೇಷು ಮಾ ವಿದನ್ ಪರಿಪಂಥಿನ ಇತಿ ಜಪೇತ**—ಎಂಬ ಸೂತ್ರದಿಂದ (ಆ.ಗೃ. ೧-೮-೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ॥**

**ಸೌಭಾಗ್ಯಮಸ್ಯೈ ದತ್ವಾಯಾಥಾಸ್ತಂ ವಿ ಪರೇತನ ॥ ೩೩ ॥**

॥ ಪದಪಾಠಃ ॥

ಸುऽಮಂಗಲೀಃ । ಇಯಂ । ವಧೂಃ । ಇಮಾಂ । ಸಂऽಏತ । ಪಶ್ಯತ ।

ಸೌಭಾಗ್ಯಂ । ಅಸ್ಯೈ । ದತ್ವಾಯ । ಅಥ । ಅಸ್ತಂ । ವಿ । ಪರಾ । ಇತನ ॥ ೩೩ ॥

॥ ಸಾಯಣಭಾಷ್ಯಂ ॥

ಇಯಂ ವಧೂಃ ಸುಮಂಗಲೀಃ ಶೋಭನಮಂಗಲಾ । ಅತ ಇಮಾಂ ಸರ್ವ ಆಶೀಃಕರ್ತಾರಃ ಸಮೇತ । ಸಂಗಚ್ಛತ । ತಾಂ ಪಶ್ಯತ ಚ । ತಾಂ ಸಂಗತಾಶ್ಚ ದೃಷ್ಟ್ವಾ ಸ್ತ್ಯಾ ಊಢಾಯೈ ಸೌಭಾಗ್ಯಂ

ದತ್ವಾಯ ದತ್ವಾಥಾಸ್ತಂ । ಗೃಹನಾಮೈತತ್ । ಸ್ವಸ್ವಸಂಬಂಧಿನಂ ವಿ ಪರೇತನ । ವಿವಿಧಂ ಪರಾಗಚ್ಛತ ॥

। ಪ್ರತಿಪದಾರ್ಥ ॥

ಇಯಂ ವಧೂಃ—ಈ ವಧುವು । ಸುಮಂಗಲೀಃ—ಮಂಗಳಕರವಾದ ಸ್ವರೂಪವುಳ್ಳವಳು । (ಎಲೈ ಹಿರಿಯರೇ) ಇಮಾಂ—ಇವಳನ್ನು । ಸಮೇತ—ಸಮೀಪಿಸಿರಿ । ಪಶ್ಯತ—ಅನುಗ್ರಹ ದೃಷ್ಟಿಯಿಂದ ನೋಡಿರಿ । ಅಸ್ಯೈ—ಇವಳಿಗೆ । ಸೌಭಾಗ್ಯಂ—ಅನುಗ್ರಹ ವಚನವನ್ನು । ದತ್ವಾಯ—ಕೊಟ್ಟು । ಅಥ—ಅನಂತರ । ಅಸ್ತಂ—ನಿಮ್ಮ ನಿಮ್ಮ ಗೃಹಕ್ಕೆ । ವಿ ಪರೇತನ—ಹೋಗಿರಿ.

। ಭಾವಾರ್ಥ ।

ಎಲೈ ಹಿರಿಯರೇ, ಈ ವಧುವು ಮಂಗಳಕರವಾದ ಸ್ವರೂಪವುಳ್ಳವಳು. ಇವಳನ್ನು ಸಮೀಪಿಸಿ ಇವಳಿಗೆ ಆಶೀರ್ವಚನವನ್ನು ಅನುಗ್ರಹಿಸಿರಿ. ನಂತರ ನಿಮ್ಮ ನಿಮ್ಮ ಗೃಹಕ್ಕೆ ಹೊರಡಿರಿ.

## English Translation

Fortunate is this bride, approach, behold her; having given her your congratulations, depart to your several homes.

। ಸಂಹಿತಾಪಾಠಃ ॥

ತೃಷ್ಟಮೇತತ್ಕಟುಕಮೇತದಪಾಷ್ಠವದ್ವಿಷವನ್ನೈತದತ್ತವೇ ॥
ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ಸ ಇದ್ವಾಧೂಯಮರ್ಹತಿ ॥ ೩೪ ॥

। ಪದಪಾಠಃ ॥

ತೃಷ್ಟಂ । ಏತತ್ । ಕಟುಕಂ । ಏತತ್ । ಅಪಾಷ್ಠsವತ್ । ವಿಷsವತ್ । ನ । ಏತತ್ । ಅತ್ತವೇ ।
ಸೂರ್ಯಾಂ । ಯಃ । ಬ್ರಹ್ಮಾ । ವಿದ್ಯಾತ್ । ಸಃ । ಇತ್ । ವಾಧೂsಯಂ । ಅರ್ಹತಿ ॥ ೩೪ ॥

। ಸಾಯಣಭಾಷ್ಯಂ ।

ಅನಯಾಪಿ ವಧೂವಸ್ತ್ರಪರಿತ್ಯಾಗಃ ಪ್ರತಿಪಾದ್ಯತೇ । ಏತದ್ವಸ್ತ್ರಂ ತೃಷ್ಟಂ ದಾಹಜನಕಂ । ತಥೈತತ್ಕಟುಕಂ । ತಥಾಪಾಷ್ಠವತ್ । ಅಪಾಷ್ಠಮುಪಸ್ಥಿತಮೃಜೀಷಂ । ತದ್ವತ್ । ತಥಾ ವಿಷವತ್ ॥ ನೈತದ್ವಸ್ತ್ರಮತ್ತವೇ । ಅತ್ತವ್ಯಂ । ಅನುಪಯೋಗ್ಯಂ । ಯೋ ಬ್ರಹ್ಮಾ ಬ್ರಾಹ್ಮಣಃ ಸೂರ್ಯಾಮಿದಾನೀಂ ಪ್ರಸ್ತುತಾಂ ದೇವೀಂ ವಿದ್ಯಾತ್ ಸಮ್ಯಗ್ಜಾನೀಯಾತ್ ಸ ಇತ್ಸ ಏವ ವಾಧೂಯಂ ವಧೂವಸ್ತ್ರಮರ್ಹತಿ ।

॥ ಪ್ರತಿಪದಾರ್ಥ ॥

**ಏತತ್**—ಈ ವಸ್ತ್ರವು । **ತೃಷ್ಟಂ**—ದಾಹಜನಕವಾಗಿದೆ । **ಏತತ್**—ಇದು । **ಕಟುಕಂ**—ಕಷಾಯಾತ್ಮಕವಾಗಿದೆ । **ಅಪಾಷ್ಠವತ್**—ಋಜೀಷ ಸಂಜ್ಞಕವಾದ ಹಳೆಯ ಸೋಮದಂತಿರುತ್ತದೆ । **ವಿಷವತ್**—ವಿಷದಂತಿರುತ್ತದೆ । **ಏತತ್**—ಇದು । **ಅತ್ತವೇ ನ**—ಉಪಯೋಗಿಸಲು ಅರ್ಹವಾಗಿಲ್ಲ । **ಯಃ ಬ್ರಹ್ಮಾ**—ಮಂತ್ರವಿತ್ತಾದ ಯಾವ ಪುರುಷನು । **ಸೂರ್ಯಾಂ**—ಸೂರ್ಯಾದೇವಿಯನ್ನು । **ವಿದ್ಯಾತ್**—ಅರಿಯುವನೋ । **ಸ ಇತ್**—ಅವನೇ ! **ವಾಧೂಯಂ**—ವಧುವಿನ ಈ ವಸ್ತ್ರವನ್ನು । **ಅರ್ಹತಿ**—ಹೊಂದಲು ಅರ್ಹನಾಗುತ್ತಾನೆ.

। ಭಾವಾರ್ಥ ।

ಈ ವಸ್ತ್ರವು ದಾಹಜನಕವಾಗಿದೆ. ಇದು ಕಷಾಯಾತ್ಮಕವಾಗಿದೆ. ಋಜೀಷಸಂಜ್ಞಕವಾದ ಹಳೆಯ ಸೋಮದಂತಿರುತ್ತದೆ. ವಿಷದಂತಿದೆ. ಇದು ಉಪಯೋಗಿಸಲು ಅರ್ಹವಾಗಿಲ್ಲ. ಸೂರ್ಯಾದೇವಿಯ ಸ್ವರೂಪವನ್ನು ಅರಿತ ಬ್ರಾಹ್ಮಣನು ಮಾತ್ರ ಈ ವಧುವಿನ ವಸ್ತ್ರವನ್ನು ಹೊಂದಲು ಅರ್ಹನಾಗುತ್ತಾನೆ.

English Translation

This (garment) is inflaming , it is pungent; it is like stale Soma ; it is like poison ; it is not fit to eat ; the Brahman, who knows Surya, verily desires the bridal (garment).

॥ ಸಂಹಿತಾಪಾಠಃ ॥

ಆ ಶಸನಂ ವಿಶಸನಮಥೋ ಅಧಿವಿಕರ್ತನಂ ।
ಸೂರ್ಯಾಯಾಃ ಪಶ್ಯ ರೂಪಾಣಿ ತಾನಿ ಬ್ರಹ್ಮಾ ತು ಶುಂಧತಿ ॥ ೩೫ ॥

॥ ಪದಪಾಠಃ ॥

ಆऽಶಸನಂ । ವಿऽಶಸನಂ । ಅಥೋ ಇತಿ । ಅಧಿऽವಿಕರ್ತನಂ ।
ಸೂರ್ಯಾಯಾಃ । ಪಶ್ಯ । ರೂಪಾಣಿ । ತಾನಿ । ಬ್ರಹ್ಮಾ । ತು । ಶುಂಧತಿ ॥ ೩೫ ॥

॥ ಸಾಯಣಭಾಷ್ಯಂ ॥

ಆಶಸನಂ ತೂಷಾಧಾನಂ । ತಚ್ಚಾನ್ಯವರ್ಣಂ ಭವತಿ । ವಿಶಸನಂ ಶಿರಸಿ ನಿಧೀಯಮಾನಂ । ತಾದೃಶಂ ದಶಾಂತೇ ನಿಧೀಯಮಾನಮಧಿವಿಕರ್ತನಂ ಯತ್ತ್ರಿಧಾ ವಾಸೋ ವಿಕೃಂತಂತಿ । ತಾನ್ಯಾಶಸನಾದೀನಿ ವಾಸಾಂಸ್ಯವಸ್ಥಿತಾನಿ ಸೂರ್ಯಾಯಾ ರೂಪಾಣಿ ಭವಂತಿ । ತಾನಿ ಪಶ್ಯ । ಏವಂಭೂತಾನ್ಯಾಶಸನಾದೀನಿ ಪುರಾ ಸೂರ್ಯಾಸ್ವಶರೀರೇ ಸ್ಥಿತಾನ್ಯಮಂಗಲಾನಿ ವಾಸಾಂಸಿ ವಿಧತ್ತೇ । ತಾನಿ ರೂಪಾಣಿ ಸೂರ್ಯಾವಿದ್ಬ್ರಹ್ಮಾ ತು ಬ್ರಾಹ್ಮಣ ಏವ ತಸ್ಮಾದ್ವಾಸಸಃ ಸಕಾಶಾಚ್ಛುಂಧತಿ । ಅಪನಯತಿ ॥

॥ ಪ್ರತಿಪದಾರ್ಥ ॥

**ಸೂರ್ಯಾಯಾಃ**—ಸೂರ್ಯಾದೇವಿಯ । **ಆಶಸನಂ**—ಪಾರ್ಶ್ವವರ್ತಿಯಾದ ಆಶಸನಸಂಜ್ಞಕವೂ । **ವಿಶಸನಂ**—ಶಿರೋಧಾಯಿಯಾದ ವಿಶಸನಸಂಜ್ಞಕವೂ । **ಅಧಿವಿಕರ್ತನಂ**—ವಿಭಾಗಾತ್ಮಕವಾದ ಅಧಿ ವಿಕರ್ತನಸಂಜ್ಞಕವೂ ಆದ । **ರೂಪಾಣಿ**—ಮೂರು ರೂಪಗಳನ್ನೂ (ವಸ್ತ್ರಗಳನ್ನೂ) । **ಪಶ್ಯ**—ನೋಡು । **ತಾನಿ**—ಅವುಗಳನ್ನು । ಬ್ರಹ್ಮಾ ತು—ಮಂತ್ರವಿತ್ತಾದ ಪುರುಷನು ಮಾತ್ರ । **ಶುಂಧತಿ**—ದೂರಮಾಡುತ್ತಾನೆ.

। ಭಾವಾರ್ಥ ।

ಪಾರ್ಶ್ವವರ್ತಿಯಾದ ಆಶನಸಂಜ್ಞಕವೂ, ಶಿರೋಧಾಯಿಯಾದ ವಿಶಸನಸಂಜ್ಞಕವೂ, ವಿಭಾಗಾತ್ಮಕವಾದ ಅಧಿವಿಕರ್ತನಸಂಜ್ಞಕವೂ ಆದ ಸೂರ್ಯಾದೇವಿಯು ಮೂರು ರೂಪಗಳನ್ನೂ (ವಸ್ತ್ರಗಳನ್ನೂ) ನೋಡು. ಅವುಗಳನ್ನು ಮಂತ್ರವಿತ್ತಾದ ಪುರುಷನು ಮಾತ್ರ ದೂರಮಾಡುತ್ತಾನೆ.

English Translation

Beheld the forms of Surya, the ashasana (border-cloth), the Vishasana (head-cloth), the adhivikartana (divided skirt); of these the Brahman relieves her.

। ಸಂಹಿತಾಪಾಠಃ ।

ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ । ೩೬ ॥

। ಪದಪಾಠಃ ।

ಗೃಭ್ಣಾಮಿ । ತೇ । ಸೌಭಗऽತ್ವಾಯ । ಹಸ್ತಂ । ಮಯಾ । ಪತ್ಯಾ । ಜರತ್ऽಅಷ್ಟಿಃ । ಯಥಾ । ಅಸಃ ।
ಭಗಃ । ಅರ್ಯಮಾ । ಸವಿತಾ । ಪುರಂऽಧಿಃ । ಮಹ್ಯಂ । ತ್ವಾ । ಅದುಃ । ಗಾರ್ಹऽಪತ್ಯಾಯ । ದೇವಾಃ ॥

। ಸಾಯಣಭಾಷ್ಯಂ ।

ವಿವಾಹೇ ಕನ್ಯಾಹಸ್ತಗ್ರಹಣೇ ಗೃಭ್ಣಾಮೀತ್ಯೇಷಾ। ಸೂತ್ರಿತಂ ಚ। ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮಿತ್ಯಂಗುಷ್ಠಮೇವ ಗೃಹ್ಣೀಯಾತ್ । ಆ. ಗೃ. ೧-೭-೩ । ಇತಿ ॥

**ಹೇ ವಧು ತೇ ತವ ಹಸ್ತಮಹಂ ಗೃಭ್ಣಾಮಿ । ಗೃಹ್ಣಾಮಿ । ಕಿಮರ್ಥಂ । ಸೌಭಗತ್ವಾಯ ಸೌಭಾಗ್ಯಾಯ । ಮಯಾ ಪತ್ಯಾ ತ್ವಂ ಯಥಾ ಜರದಷ್ಟಿಃ ಪ್ರಾಪ್ತವಾರ್ಧಕ್ಯಾ ಅಸಃ ಭವಸಿ । ಭಗೋಽರ್ಯಮಾ ಸವಿತಾ ಪುರಂಧಿಃ ಪೂಷಾ ಏತೇ ದೇವಾಸ್ತ್ವಾ ತ್ವಾಂ ಮಹ್ಯಮದುಃ । ದತ್ತವಂತಃ । ಕಿಮರ್ಥಂ ಗಾರ್ಹಪತ್ಯಾಯ । ಯಥಾಹಂ ಗೃಹಪತಿಃ ಸ್ಯಾಮಿತಿ ॥**

। ಪ್ರತಿಪದಾರ್ಥ ।

**ತೇ**—ನಿನ್ನ । **ಹಸ್ತಂ**—ಹಸ್ತವನ್ನು । **ಸೌಭಗತ್ವಾಯ**—ಶ್ರೇಯಸ್ಸಾಧನೆಗಾಗಿ । **ಗೃಭ್ಣಾಮಿ**—ಹಿಡಿಯುತ್ತೇನೆ । **ಯಥಾ**—ಇದೇ ಸಂಬಂಧದಿಂದ । **ಪತ್ಯಾ ಮಯಾ**—ನಿನ್ನ ಪತಿಯಾದ ನನ್ನೊಡನೆ । **ಜರದಷ್ಟಿಃ ಅಸಃ**—ವಾರ್ಧಕ್ಯವನ್ನು ಹೊಂದುತ್ತೀಯೆ । **ಗಾರ್ಹಪತ್ಯಾಯ**—ನಾನು ಗೃಹಕ್ಕೆ ಪಾಲಕನಾಗಲು । **ದೇವಾಃ**—ದೇವತಾತ್ಮರಾದ । **ಭಗಃ**—ಭಗನೂ । **ಅರ್ಯಮಾ**—ಅರ್ಯಮನೂ । **ಸವಿತಾ**—ಸವಿತೃವೂ । **ಪುರಂಧಿಃ**—ಪೂಷದೇವನೂ । **ತ್ವಾ**—ನಿನ್ನನ್ನು । **ಮಹ್ಯಂ**—ನನಗೆ । **ಅದುಃ**—ದಾನಮಾಡಿದ್ದಾರೆ.

॥ ಭಾವಾರ್ಥ ॥

ನಿನ್ನ ಹಸ್ತವನ್ನು ಶ್ರೇಯಸ್ಸಾಧನೆಗಾಗಿ ಹಿಡಿಯುತ್ತೇನೆ. ಇದೇ ಸಂಬಂಧದಿಂದ ನಿನ್ನ ಪತಿಯಾದ ನನ್ನೊಡನೆ ವಾರ್ಧಕ್ಯವನ್ನು ಹೊಂದುವವರೆಗೂ ನನ್ನೊಡನಿರು. ದೇವತಾತ್ಮರಾದಭಗನೂ, ಅರ್ಯಮನೂ, ಸವಿತೃವೂ, ಪೂಷದೇವನೂ ನಿನ್ನನ್ನು ನನಗೆ ಗೃಹಪತಿಯಾಗಲು (ಗೃಹಸ್ಥನಾಗಲು) ದಾನಮಾಡಿದ್ದಾರೆ.

English Translation

I take your hand for good fortune, that you may attain old age with me as your husband ; the gods Bhaga, Aryaman, Savitri, Purandhi have given you to me, that I may be the master of a household.

॥ ವಿಶೇಷವಿಷಯಗಳು ॥

ವಿವಾಹಕಾಲದಲ್ಲಿ ಕನ್ಯಾಪಾಣಿಗ್ರಹಣಮಾಡುವಾಗ **ಗೃಭ್ಣಾಮಿ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮಿತ್ಯಂಗುಷ್ಠಮೇವ ಗೃಹ್ಣೀಯಾತ್** ಎಂಬ ಸೂತ್ರದಿಂದ (ಆ. ಗೃ. ೧-೭-೩) ವಿವೃತವಾಗಿರುವುದು.

**ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ**—ಎಲೈ ವಧುವೇ, ಸಕಲಸಂಮೃದ್ಧಿಗಾಗಿಯೂ, ಶ್ರೇಯಃಪ್ರಾಪ್ತಿಗಾಗಿಯೂ ಈ ವಿವಾಹಕಾಲದಲ್ಲಿ ನಿನ್ನ ಪಾಣಿಗ್ರಹಣಮಾಡುತ್ತೇನೆ ಎಂದು ವರನು ವಧುವನ್ನುದ್ದೇಶಿಸಿ ಹೇಳುವನು ಮತ್ತು ಅದರಂತೆ ಆಚರಿಸುವನು.

**ಮಯಾ ಪತ್ಯಾ ಜರದೃಷ್ಟಿಃ ಯಥಾ ಅಸಃ**—ಎಲೈ ವಧುವೇ, ನೀನು ನಿನ್ನ ಪತಿಯಾದ ನನ್ನೊಡನೆ ದೀರ್ಘಕಾಲ ಎಂದರೆ ನಾವಿಬ್ಬರೂ ವೃದ್ಧರಾಗುವವರೆಗೂ ಎಂದರೆ ವಾರ್ಧಕ್ಯದಿಂದ ಶರೀರವು ಶಿಥಿಲವಾಗುವವರೆಗೂ ಸಂಸಾರಮಾಡಿಕೊಂಡು ಸುಖವಾಗಿ ಬಾಳು.

**ಭಗೋ ಅರ್ಯಮಾ ಸವಿತಾ ಪುರಂಧಿಃ ದೇವಾಃ ತ್ವಾಂ ಮಹ್ಯಂ ಗಾರ್ಹಪತ್ಯಾಯ ಅದುಃ**—

ಎಲೈ ವಧುವೇ, ಭಗ, ಅರ್ಯಮಾ, ಸವಿತೃ, ಪೂಷಾ ಮೊದಲಾದ ದೇವತೆಗಳು ಗೃಹಸ್ಥಾಶ್ರಮದಲ್ಲಿ ನಾವಿಬ್ಬರೂ ಕರ್ತವ್ಯಕರ್ಮವನ್ನು ನೆರವೇರಿಸುವುದಕ್ಕಾಗಿ ನಿನ್ನನ್ನು ನನಗೆ ಕೊಟ್ಟಿದ್ದಾರೆ ಎಂದು ವರನು ವಧುವನ್ನು ಉದ್ದೇಶಿಸಿ ಹೇಳುವನು.

॥ ಸಂಹಿತಾಪಾಠಃ ॥

ತಾಂ ಪೂಷಞ್ಛಿವತಮಾಮೇರಯಸ್ವ ಯಸ್ಯಾಂ ಬೀಜಂ ಮನುಷ್ಯಾ ೩
ವಪಂತಿ ।
ಯಾ ನ ಊರೂ ಉಶತೀ ವಿಶ್ರಯಾತೇ ಯಸ್ಯಾಮುಶಂತಃ ಪ್ರಹರಾಮ
ಶೇಪಂ ॥ ೩೭ ॥

॥ ಪದಪಾಠಃ ॥

ತಾಂ । ಪೂಷನ್ । ಶಿವऽತಮಾಂ । ಆ । ಈರಯಸ್ವ । ಯಸ್ಯಾಂ । ಬೀಜಂ । ಮನುಷ್ಯಾಃ । ವಪಂತಿ ।
ಯಾ । ನಃ । ಊರೂ ಇತಿ । ಉಶತೀ । ವಿऽಶ್ರಯಾತೇ । ಯಸ್ಯಾಂ । ಉಶಂತಃ । ಪ್ರऽಹರಾಮ ।
ಶೇಪಂ ॥ ೩೭ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ಪೋಷಕೈತನ್ನಾಮಕ ದೇವ ಶಿವತಮಾಮತ್ಯಂತಮಂಗಲಭೂತಾಂ ತಾಮೇರಯಸ್ವ । ಆ ಈರಯ । ಸರ್ವತಃ ಪ್ರೇರಯ । ಯಸ್ಯಾಮೂರಾ ಬೀಜಂ ರೇತೋಲಕ್ಷಣಂ ಮನುಷ್ಯಾ ವಪಂತಿ ಆದಧತೇ । ಯಾ ನೋऽಸ್ಮಾಕಮೂರೂ ಉಶತೀ ಕಾಮಯಮಾನಾ ವಿಶ್ರಯಾತೇ । ಯಸ್ಯಾಮೂರಾವುಶಂತಃ ಕಾಮಯಮಾನಾ ವಯಂ ಶೇಪಂ ಸ್ಪರ್ಶನಯೋಗ್ಯಂ ಪುಂಪ್ರಜನನಂ ಪ್ರಹರಾಮ । ಊರೌ ವ್ಯಂಜನಸಂಬಂಧಂ ಕರವಾಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ಯಸ್ಯಾಂ**—ಯಾವಳಲ್ಲಿ । **ಬೀಜಂ**—ರೇತೋರೂಪವಾದ ಬೀಜವನ್ನು । **ಮನುಷ್ಯಾಃ**—ಮಾನವರು । **ವಪಂತಿ**—ಸ್ಥಾಪಿಸುವರೋ । **ಯಾ**—ಯಾರು । **ನಃ**—ನಮ್ಮ । **ಊರೂ**—ಸಂಗವನ್ನು । **ಉಶತೀ**—ಅಪೇಕ್ಷಿಸುತ್ತ । **ವಿಶ್ರಯಾತೇ**—ಆದರಿಸುವಳೋ । **ಯಸ್ಯಾಂ**—ಯಾವಳಲ್ಲಿ। **ಉಶಂತಃ**—ಪುತ್ರರನ್ನು ಇಚ್ಛಿಸಿ । **ಶೇಪಂ**—ಪುತ್ರೋತ್ಪಾದಕವಾದ ಬೀಜವನ್ನು(ಪುರುಷಲಿಂಗವನ್ನು)। **ಪ್ರಚರಾಮ**—ಸ್ಥಾಪಿಸುವೆವೋ । **ಶಿವತಮಾಂ ತಾಂ**—ಮಂಗಳಕಾರಿಣಿಯಾದ ಅವಳನ್ನು । **ಏರಯಸ್ವ**—ನಮ್ಮನ್ನು ಪ್ರೀತಿಸುವಂತೆ ಪ್ರೇರಿಸು.

॥ ಭಾವಾರ್ಥ ॥

ಎಲೈ ಪೂಷದೇವನೇ, ಯಾವಳಲ್ಲಿ ರೇತೋರೂಪವಾದ ಬೀಜವನ್ನು ಮಾನವರು ಸ್ಥಾಪಿಸುವರೋ, ಯಾರು ನಮ್ಮ ಸಂಗವನ್ನು ಅಪೇಕ್ಷಿಸುತ್ತ ನಮ್ಮನ್ನು ಆದರಿಸುವಳೋ, ಯಾವಳಲ್ಲಿ ಪುತ್ರರನ್ನು ಇಚ್ಛಿಸಿ ನಾವು ಪುತ್ರೋತ್ಪಾದಕವಾದ ಬೀಜವನ್ನು (ಪುರುಷಲಿಂಗವನ್ನು) ಸ್ಥಾಪಿಸುವೆವೋ ಅವಳು ನಮ್ಮನ್ನು ಪ್ರೀತಿಸುವಂತೆ ಪ್ರೇರಿಸು.

English Translation

Pushan, inspire her who is most aaspicious, in whom men may sow seed, who most affectionate may be devouted to us, and in whom animated by desire we may beget progeny.

॥ ವಿಶೇಷವಿಷಯಗಳು ॥

ಈ ಋಕ್ಕಿನ ಕೊನೆಯ ಪಾದವಾದ **ಯಸ್ಯಾಮುಶಂತಃ ಪ್ರಹರಾಮ ಶೇಪಂ** ಎಂಬ ವಾಕ್ಯದಲ್ಲಿರುವ ಶೇಪಂ ಎಂಬ ಶಬ್ದಕ್ಕೆ ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿದ್ದಾರೆ—

**ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯ । ಶೇಪಃ ಶಪತೇಃ ಸ್ಪೃಶತಿಕರ್ಮಣಃ ವೈತಸೋ ವಿತಸ್ತಂ ಭವತಿ । ಯಸ್ಯಾಮುಶಂತಃ ಪ್ರಹರಾಮ ಶೇಪಂ । ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ ಇತ್ಯಪಿ ನಿಗಮೌ ಭವತಃ ॥** (ನಿ. ೩-೨೧)

**ಶೇಪಃ** ಮತ್ತು **ವೈತಸಃ** ಎಂಬ ಎರಡು ಶಬ್ದಗಳೂ ಪುರುಷನ ಪ್ರಜೋತ್ಪಾದನ ಅಂಗವಾದ ಲಿಂಗವನ್ನು ಎಂದರೆ ಪುರುಷಾವಯವನ್ನು ನಿರ್ದೇಶಿಸುತ್ತವೆ. ಮುಟ್ಟು, ಸ್ಪರ್ಶಮಾಡು ಎಂಬರ್ಥವಿರುವ ಸ್ಪೃಶತಿಧಾತುವಿನಿಂದ **ಶೇಪಃ** ಎಂಬ ಶಬ್ದವು ನಿಷ್ಪನ್ನವಾಗಿದೆ. ಏಕೆಂದರೆ ಈ ಅವಯವದಿಂದ ಪುರುಷನು ಸ್ತ್ರೀಯನ್ನು (ಸ್ತ್ರೀಯ ಯೋನಿಯನ್ನು) ಸ್ಪರ್ಶಿಸುತ್ತಾನೆ. **ವೈತಸ**ವೆಂದರೆ ಪುರುಷಾವಯದಲ್ಲಿ ದಂಡದಂತಿರುವ ಭಾಗವು (penis) ಏಕೆಂದರೆ ಇದು ಸ್ತ್ರೀಸಂಪರ್ಕವಿಲ್ಲದಿದ್ದಾಗ**ವಿತಸ್ತಂ** ಉದ್ರೇಕವಿಲ್ಲದೆ ಸುಪ್ತಸ್ಥಿತಿಯಲ್ಲಿರುವುದು. ಆದ್ದರಿಂದ ಇದಕ್ಕೆ ವೈತಸವೆಂದು ಹೆಸರು. ಈ ಶಬ್ದಗಳ ಪ್ರಯೋಗವಿರುವ ಎರಡು ಶ್ರುತಿವಾಕ್ಯಗಳನ್ನು ಯಾಸ್ಕರು ಉದಾಹರಣೆಯಾಗಿ ಕೊಟ್ಟಿರುತ್ತಾರೆ.

**ಯಸ್ಯಾಮುಶಂತಃ ಪ್ರಹರಾಮ ಶೇಪಂ ।** (ಋ. ಸಂ. ೧೦-೮೫-೩೭)

ಈ ವಾಕ್ಯವು ಪ್ರಕೃತ ಋಕ್ಕಿನ ಕೊನೆಯ ಪಾದದಲ್ಲಿರುವುದು. ನಾವು ಪ್ರೀತಿಸುವ ಯಾವ ಸ್ತ್ರೀಯಲ್ಲಿ (ಅಥವಾ ಸ್ತ್ರೀಯ ಯೋನಿಯಲ್ಲಿ) ನಮ್ಮ ಪುರುಷಾವಯವವನ್ನು ಇಡುತ್ತೇವೆಯೋ ಅಂತಹ ಸ್ತ್ರೀಯನ್ನು, ಎಲೈ ಪೂಷನೇ ನಮ್ಮನ್ನು ಪ್ರೀತಿಸುವಂತೆ ಪ್ರೇರಿಸು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ** (ಋ. ಸಂ. ೧೦-೯೫-೫)

ಈ ವಾಕ್ಯದಲ್ಲಿ ಊರ್ವಶಿಯು ಪುರೂರವಸ್ಸನ್ನು ಸಂಬೋಧಿಸಿ ಈರೀತಿ ಹೇಳುತ್ತಾಳೆ—ಎಲೈ ಪುರೂರವನೇ, ನೀನು ಮೂರುದಿವಸಗಳಲ್ಲಿಯೂ ನನ್ನನ್ನು (ನನ್ನ ಯೋನಿಪ್ರದೇಶವನ್ನು) ನಿನ್ನ ಪುರುಷಲಿಂಗದ ದಂಡದಿಂದ ತಾಡನಮಾಡಿದ್ದೀಯೆ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು. ವೈತಸವೆಂದರೆ ಪುರುಷಾವಯವದ ದಂಡದಂತಿರುವ ಭಾಗವು.

॥ ಸಂಹಿತಾಪಾಠಃ ॥

ತುಭ್ಯಮಗ್ರೇ ಪರ್ಯವಹನ್ತ್ಸೂರ್ಯಾಂ ವಹತುನಾ ಸಹ ।
ಪುನಃ ಪತಿಭ್ಯೋ ಜಾಯಾಂ ದಾ ಅಗ್ನೇ ಪ್ರಜಯಾ ಸಹ ॥ ೩೮ ॥

॥ ಪದಪಾಠಃ ॥

ತುಭ್ಯಂ । ಅಗ್ರೇ । ಪರಿ । ಅವಹನ್ । ಸೂರ್ಯಾಂ । ವಹತುನಾ । ಸಹ ।
ಪುನರಿತಿ । ಪತಿऽಭ್ಯಃ । ಜಾಯಾಂ । ದಾಃ । ಅಗ್ನೇ । ಪ್ರऽಜಯಾ । ಸಹ ॥ ೩೮ ॥

॥ ಸಾಯಣಭಾಷ್ಯಂ ॥

ಗಂಧರ್ವಾ ಹೇ ಅಗ್ನೇ ತುಭ್ಯಮಗ್ರೇ ಪರ್ಯವಹನ್ । ಪ್ರಾಯಚ್ಛನ್ನಿತ್ಯರ್ಥಃ । ಕಾಂ । ಸೂರ್ಯಾಂ । ಕೇನ ಸಹ । ವಹತುನಾ ಸಹ। ವಹತುನಾ ಸಹ । ತ್ವಂ ಚ ತಾಂ ಸೂರ್ಯಾಂ ವಹತುನಾ ಸಹ ಸೋಮಾಯ ಪ್ರಾಯಚ್ಛಃ । ತದ್ವದಿದಾನೀಮಪಿ ಹೇ ಅಗ್ನೇ ಪುನಃ ಪತಿಭ್ಯೋऽಸ್ಮಭ್ಯಂ ಜಾಯಾಂ ಪ್ರಜಯಾ ಸಹ ದಾಃ । ದೇಹಿ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಅಗ್ರೇ—ಮೊದಲು । ತುಭ್ಯಂ—ನಿನಗೆ । ಸೂರ್ಯಾಂ—ಸೂರ್ಯೆಯನ್ನು । ವಹತುನಾ ಸಹ—ಬಳವಳಿಗಳೊಂದಿಗೆ । ಪರ್ಯವಹನ್—ಗಂಧರ್ವರು ಕೊಟ್ಟರು । ಪುನಃ—ಈಗ । ಪತಿಭ್ಯಃ—ಮಾನವರಾದ ನಮಗೆ । ಜಾಯಾಂ—ಪತ್ನಿಯನ್ನು । ಪ್ರಜಯಾ ಸಹ—ಸಂತಾನದೊಂದಿಗೆ । ದಾಃ—ಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮೊದಲು ಗಂಧರ್ವರು ಸೂರ್ಯೆಯನ್ನು ಬಳವಳಿಗಳೊಂದಿಗೆ ನಿನಗೆ ಕೊಟ್ಟರು. ಈಗ ನೀನು ಮಾನವರೂಪರಾದ ನಮಗೆ ಸಂತಾನಯೋಗ್ಯವಾದ ಪತ್ನಿಯನ್ನು ಕೊಡು.

English Translation

(The Gandharvas) gave Surya to you, Agni, with her bridal ornaments ; do you, Agni, give (us) husbands our wife back again with male offspring.

॥ ಸಂಹಿತಾಪಾಠಃ ॥

ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।

ದೀರ್ಘಾಯುರಸ್ಯಾ ಯಃ ಪತಿ ರ್ಜೀವಾತಿ ಶರದಃ ಶತಂ ॥ ೩೯ ॥

॥ ಪದಪಾಠಃ ॥

ಪುನರಿತಿ । ಪತ್ನೀಂ । ಅಗ್ನಿಃ । ಅದಾತ್ । ಆಯುಷಾ । ಸಹ । ವರ್ಚಸಾ ।

ದೀರ್ಘಽಆಯುಃ । ಅಸ್ಯಾಃ । ಯಃ । ಪತಿಃ । ಜೀವಾತಿ । ಶರದಃ । ಶತಂ ॥ ೩೯ ॥

॥ ಸಾಯಣಭಾಷ್ಯಂ ॥

**ಪುನಃ ಸ್ವಗೃಹೀತಾಂ ಪತ್ನೀಮಗ್ನಿರಾಯುಷಾ ಸಹ ವರ್ಚಸಾ ಸಹಾದಾತ್ । ಪ್ರಾಯಚ್ಛತ್ । ಅಸ್ಯಾ ಅಗ್ನಿದತ್ತಾಯಾ ಯಃ ಪತಿಃ ಪುಮಾನ್ ಸ ದೀರ್ಘಾಯುಃ ಸಞ್ಛರದಃ ಶತಂ ಶತಸಂವತ್ಸರಂ ಜೀವಾತಿ । ಜೀವತು ॥**

॥ ಪ್ರತಿಪದಾರ್ಥ ॥

**ಪುನಃ**—ಪತ್ನಿಯನ್ನು ಪಡೆದನಂತರ । **ಪತ್ನೀಂ**—ಅವಳನ್ನು । **ಅಗ್ನಿಃ**—ಅಗ್ನಿಯು । **ಆಯುಷಾ ಸಹ**—ದೀರ್ಘವಾದ ಆಯುಸ್ಸಿನೊಡನೆಯೂ । **ವರ್ಚಸಾ**—ತೇಜಸ್ಸಿನೊಡನೆಯೂ । **ಅದಾತ್**—(ಮಾನವನಿಗೆ) ಕೊಟ್ಟನು । **ಅಸ್ಯಾಃ**—ಇವಳಿಗೆ । **ಯಃ**—ಯಾರು । **ಪತಿಃ**—ಪತಿಯಾಗುವನೋ ಅವನು । **ದೀರ್ಘಾಯುಃ**—ದೀರ್ಘಾಯುಸ್ಸುಳ್ಳವನಾಗಿ । **ಶರದಃ ಶತಂ**—ನೂರು ವರ್ಷಗಳ ಕಾಲ । **ಜೀವಾತಿ**—ಜೀವಿಸುತ್ತಾನೆ.

॥ ಭಾವಾರ್ಥ ॥

ಅಗ್ನಿಯು ತಾನು ಪಡೆದನಂತರ ಮಾನವನಿಗೆ ದೀರ್ಘವಾದ ಆಯುಸ್ಸಿನೊಡನೆಯೂ, ತೇಜಸ್ಸಿನೊಡನೆಯೂ ಕೂಡಿದ ಪತ್ನಿಯನ್ನು ಮಾನವನಿಗೆ ಕೊಟ್ಟನು. ಇವಳಿಗೆ ಯಾರು ಪತಿಯಾಗುವನೋ ಅವನು ದೀರ್ಘಾಯುಸ್ಸುಳ್ಳವನಾಗಿ ನೂರು ವರ್ಷಗಳ ಕಾಲ ಜೀವಿಸುತ್ತಾನೆ (ಜೀವಿಸಲಿ).

## English Translation

Agni gave the wife back agaia with life and splendour : may he who is her husband enjoying long life live a hundred years.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಪುನಃ ಪತ್ನೀಂ ಅಗ್ನಿಃ ಅದಾತ್**—ಅಗ್ನಿಯು ವಿವಾಹಾನಂತರ ಪತ್ನಿಯನ್ನು ಪುನಃ ವರನಿಗೆ ಕೊಟ್ಟನು ಎಂದು ಹೇಳಿದೆ. ಇಲ್ಲಿ ಪುನಃ ಎಂಬ ಶಬ್ದದ ಪ್ರಯೋಗದ ಔಚಿತ್ಯವೇನು, ಎಂದರೆ

**ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ ।**
**ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ ॥**

(ಋ.ಸಂ. ೧೦-೮೫.೪೧)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಸೋಮನು ತನ್ನ ವಶದಲ್ಲಿದ್ದ ಕನ್ಯೆಯನ್ನು ಗಂಧರ್ವನಿಗೆ ಕೊಟ್ಟನು. ಗಂಧರ್ವನ ಆ ವಧುವನ್ನು ಅಗ್ನಿಗೆ ಕೊಟ್ಟನು. ಅನಂತರ ಅಗ್ನಿಯು ಗಂಧರ್ವನಿಗೆ ತಾನು ಸ್ವೀಕರಿಸಿದ ಕನ್ಯೆಯನ್ನು ಪುನಃ ಮಾನವನಾದ ವರನಿಗೆ ಕೊಟ್ಟನು. ಹೀಗೆ ಒಬ್ಬರಿಂದ ಮತ್ತೊಬ್ಬರಿಗೆ ಕನ್ಯೆಯು ಕೊಡಲ್ಪಡುವುದರಿಂದ ಎಂದರೆ ಒಂದಾವರ್ತಿಗಿಂತ ಹೆಚ್ಚು ಸಲ ಕೊಡಲ್ಪಡುವುದರಿಂದ ಇಲ್ಲಿ ಪುನಃ ಎಂದು ಹೇಳಿದೆ.

ಇದಲ್ಲದೆ ಸೋಮನು ಕನ್ಯೆಯನ್ನು ಗಂಧರ್ವನ ವಶಕ್ಕೆ ಕೊಡುವಾಗಲೂ, ಗಂಧರ್ವನು ಅಗ್ನಿಯ ವಶಕ್ಕೆ ಕೊಡುವಾಗಲೂ ಕನ್ಯೆಯನ್ನು ಮಾತ್ರ (ಯಾವ ಇತರವಸ್ತುಗಳೂ ಇಲ್ಲದೆ) ಒಬ್ಬರಿಂದ ಒಬ್ಬರಿಗೆ ಕೊಡುತ್ತಾರೆ. ಆದರೆ ಅಗ್ನಿಯು ತನ್ನ ವಶಕ್ಕೆ ಬಂದ ಕನ್ಯೆಯನ್ನು ಅದೇ ಸ್ಥಿತಿಯಲ್ಲಿ ಪುನಃ ಮಾನವನಿಗೆ ಕೊಡುವುದಿಲ್ಲ. ಆ ಕನ್ಯೆಯೊಡನೆ ದೀರ್ಘಾಯುಸ್ಸನ್ನೂ, ವರ್ಚಸ್ಸನ್ನೂ ಸೇರಿಸಿ ಕೊಡುವನು. ಆದ್ದರಿಂದಲೇ ಪ್ರಕೃತ ಋಕ್ಕಿನಲ್ಲಿ **ಆಯುಷಾ ಸಹ ವರ್ಚಸಾ** ಎಂದು ಹೇಳಿದೆ. ಆಯುಷಾ, ವರ್ಚಸಾ ಎಂಬ ಶಬ್ದಗಳು ಕನ್ಯೆಗೂ, ಅವಳ ಪತಿಗೂ ಇಬ್ಬರಿಗೂ ಅನ್ವಯಿಸಬಹುದು. ಆದರೆ ಈ ಋಕ್ಕಿನ ಉತ್ತರಾರ್ಧದಲ್ಲಿ ದೀರ್ಘಾಯುಸ್ಸಿನ ವಿಚಾರವು ವರನಿಗೆ ಮಾತ್ರ ಅನ್ವಯಿಸುತ್ತದೆ. **ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ** ಎಂಬ ವಾಕ್ಯದಲ್ಲಿ ಈ ವಧುವಿನ ಎಂದರೆ ವಿವಾಹಕಾಲದಲ್ಲಿ ಅಗ್ನಿಪೂರ್ವಕವಾಗಿ ಸಂಸ್ಕೃತಳಾದ ಈ ವಧುವಿನ ಪತಿಯಾದ ಯಾವ ವರನಿರುವನೋ ಅವನು ನೂರು ವರ್ಷಗಳ ವರೆಗೆ ಜೀವಿಸುವಂತಾಗಲಿ ಎಂಬ ಆಶ್ವಾಸನೆ ಮತ್ತು ದೀರ್ಘಾಯುಸ್ಸು ಸಹಿತವಾಗಿ ವಧುವನ್ನು ಅಗ್ನಿಯು ವರನ ವಶಕ್ಕೆ ಒಪ್ಪಿಸುತ್ತಾನೆ. ಈ ವಿಷಯವನ್ನೇ ಪ್ರಕೃತಋಕ್ಕಿನಲ್ಲಿ **ಪುನಃ ಪತ್ನೀಮಗ್ನಿರದಾತ್** ಎಂಬ ವಾಕ್ಯದಿಂದ ವಿವರಿಸಲಾಗಿದೆ. ಈ ಋಕ್ಕಿನಲ್ಲಿರುವ **ಶರದಃ ಶತಂ** ಎಂಬ ಶಬ್ದಗಳಿಗೆ ಯಾಸ್ಕರು **ಶರಚ್ಛ್ರಿತಾ ಅಸ್ಯಾಮೋಷಧಯೋ ಭವಂತಿ। ಶೀರ್ಣಾ ಆಪ ಇತಿ ವಾ** (ನಿ. ೪-೨೫) ಎಂದು ನಿರ್ವಚನವನ್ನು ಹೇಳಿದಾರೆ. ಶರದೃತುವಿನಲ್ಲಿ ಲತೆಗಳು, ವೃಕ್ಷಗಳು ಓಷಧಿವನಸ್ಪತಿಗಳು ಮೊದಲಾದ ಸಸ್ಯವರ್ಗವು ಫಲಾದಿಗಳನ್ನು ಬಿಟ್ಟನಂತರ ಪರ್ಣಾದಿಗಳೂ ಉದುರಿಹೋಗುವವು ಅಥವಾ ಈ ಕಾಲದಲ್ಲಿ ಫಲಗಳು ಪಕ್ವವಾಗುವುದರಿಂದ ಈ ಋತುವಿಗೆ ಶರತ್ ಎಂದು ಹೆಸರು ಅಥವಾ ಈ ಕಾಲದಲ್ಲಿ ನದ್ಯಾದಿಜಲಾಶಯಗಳಲ್ಲಿರುವ ಉದಕವು ಕಡಿಮೆಯಾಗುವುದು. ವರ್ಷಾಕಾಲದ ವೃಷ್ಟಿಯಿಲ್ಲದ್ದರಿಂದ ಜಲಾಶಯಗಳ ನೀರು ಬತ್ತಿಹೋಗಿ ಸ್ವಲ್ಪಜಲಮಾತ್ರವಿರುವುದು. ಆದ್ದರಿಂದ ಈ ಋತುವಿಗೆ ಶರತ್ ಎಂದು ಹೆಸರು. **ಶರದ್ಧಿ ದುರ್ಜೀವಾ ರೋಗಭೂಯಸ್ತ್ವಾತ್। ಅತ ಏವಮಾಶಾಸ್ಯತೇ ಶರಚ್ಛತಂ ಜೀವತ್ವಿತಿ।** ಶರತ್ಕಾಲದಲ್ಲಿ ವಾತಾವರಣದ ವ್ಯತ್ಯಾಸದಿಂದ ಮನುಷ್ಯರಿಗೆ ಅನೇಕವಿಧವಾದ ರೋಗರುಜಿನಾದಿಗಳು ಸಂಭವಿಸುವವು. ಆದ್ದರಿಂದ ಈ ಶರತ್ಕಾಲವನ್ನು ಕಳೆಯುವುದು ಕಷ್ಟವು. ಒಂದು ಶರತ್ಕಾಲವನ್ನು ಕಳೆದರೆ ಒಂದು ವರ್ಷಪರ್ಯಂತರ ಸುಖವಾಗಿರಬಹುದು. ಮತ್ತು ಶರತ್ಕಾಲವು ಒಂದು ವರ್ಷದಲ್ಲಿ ಒಂದು ಸಲಮಾತ್ರ ಪ್ರಾಪ್ತವಾಗುವುದರಿಂದ ಸಂವತ್ಸರಪರಿಮಿತಿ ಸೂಚಿಸುವುದಕ್ಕಾಗಿ ಶರತ್ ಶಬ್ದವನ್ನು ಉಪಯೋಗಿಸುವುದು ವೇದಗಳಲ್ಲಿ ರೂಢಿಯಾದೆ. **ಜೀವಾತಿ ಶರದಃ ಶತಂ** ಎಂದರೆ ನೂರು ವರ್ಷಗಳ ವರೆಗೆ ಬದುಕುತ್ತಾನೆ ಎಂದರ್ಥವು. **ಶರದಃ ಶತಂ** ಎಂಬ ಶಬ್ದಗಳಿಗೆ ನೂರು ವರ್ಷಗಳು ಎಂಬರ್ಥದಲ್ಲಿ—

> **ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ನಂದಾಮ ಶರದಃ ಶತಂ ಮೋದಾಮ ಶರದಃ ಶತಂ ಭವಾಮ ಶರದಃ ಶತಗ್ಂ ಶೃಣವಾಮ ಶರದಃ ಶತಂ ಪ್ರಬ್ರವಾಮ ಶರದಃ ಶತಂ ಅಜೀತಾಸ್ಸ್ಯಾಮ ಶರದಃ ಶತಂ ||** (ತೈ. ಆ. ೪-೪೧-೬)

ಇತ್ಯಾದಿ ಅನೇಕ ಶ್ರುತಿವಾಕ್ಯಗಳ ಉದಾಹರಣೆಗಳನ್ನು ಕೊಡಬಹುದು.

॥ ಸಂಹಿತಾಪಾಠಃ ॥

ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥ ೪೦ ॥

॥ ಪದಪಾಠಃ ॥

ಸೋಮಃ । ಪ್ರಥಮಃ । ವಿವಿದೇ । ಗಂಧರ್ವಃ । ವಿವಿದೇ । ಉತ್ಽತರಃ ।
ತೃತೀಯಃ । ಅಗ್ನಿಃ । ತೇ । ಪತಿಃ । ತುರೀಯಃ । ತೇ । ಮನುಷ್ಯಽಜಾಃ ॥ ೪೦ ॥

॥ ಸಾಯಣಭಾಷ್ಯಂ ॥

**ಜಾತಾಂ ಕನ್ಯಾಂ ಸೋಮಃ ಪ್ರಥಮಭಾವೀ ಸನ್ ವಿವಿದೇ। ಲಬ್ಧವಾನ್। ಗಂಧರ್ವ ಉತ್ತರಃ ಸನ್ ವಿವಿದೇ। ಲಬ್ಧವಾನ್। ಅಗ್ನಿಸ್ತೃತೀಯಃ ಪತಿಸ್ತೇ ತವ। ಪಶ್ಚಾನ್ಮನುಷ್ಯಜಾಃ ಪತಿಸ್ತುರೀಯಶ್ಚತುರ್ಥಃ ॥**

॥ ಪ್ರತಿಪದಾರ್ಥ ॥

**ಸೋಮಃ**—ಸೋಮದೇವನು । **ಪ್ರಥಮಃ**—ಮೊದಲು । **ವಿವಿದೇ**—ಕನ್ಯೆಯನ್ನು ಪಡೆದನು । **ಉತ್ತರಃ**—ಅನಂತರ । **ಗಂಧರ್ವಃ**—ಗಂಧರ್ವನು । **ವಿವಿದೇ**—ಪಡೆದನು (ಎಲೈ ಕನ್ಯೆಯೇ) । **ತೇ**—ನಿನಗೆ । **ಅಗ್ನಿಃ**—ಅಗ್ನಿಯು । **ತೃತೀಯಃ ಪತಿಃ**—ಮೂರನೆಯ ಪತಿಯು । **ತೇ**—(ಅನಂತರ) ನಿನಗೆ । **ಮನುಷ್ಯಜಾಃ**—ಮಾನವರಲ್ಲಿ ಉತ್ಪನ್ನನಾದ ಪತಿಯು । **ತುರೀಯಃ**—ನಾಲ್ಕನೆಯವನು.

॥ ಭಾವಾರ್ಥ ॥

ಎಲೈ ಕನ್ಯೆಯೇ, ನಿನ್ನನ್ನು ಮೊದಲು ಸೋಮನು ಪಡೆದನು. ಅನಂತರ ಗಂಧರ್ವನು ಹೊಂದಿದನು. ಅಗ್ನಿಯು ನಿನಗೆ ಮೂರನೆಯ ಪತಿಯು. ಮಾನವನಾದ ಪತಿಯು ನಾಲ್ಕನೆಯವನು.

English Translation

Soma first obtained the bride; the Gandharva obtained her next; Agni was your third hrsband; your fourth (husband) is born of man.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ **ತೃತೀಯೋ ಅಗ್ನಿಷ್ಟೇ ಪತಿಃ** ಎಂಬ ವಾಕ್ಯಕ್ಕೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ.

**ಸೇನೇವ ಸೃಷ್ಟಾಮಂ ದಧಾತ್ಯಸ್ತುರ್ನ ದಿದ್ಯುತ್ತ್ವೇಷಪ್ರತೀಕಾ ।**
**ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ ಪತಿರ್ಜನೀನಾಂ ॥**

(ಋ. ಸಂ. ೧-೬೬-೪)

ಎಂಬ ಋಕ್ಕಿನ ನಿರ್ವಚನವನ್ನು ಹೇಳುವಾಗ ಅಗ್ನಿಗೂ ಕನ್ಯೆಗೂ ಇರುವ ಸಂಬಂಧವನ್ನು ವಿವರಿಸಿದಾರೆ. ಅಲ್ಲಿ— **ಜಾರಃ ಕನೀನಾಂ ಪತಿರ್ಜನೀನಾಂ** ಎಂಬ ವಾಕ್ಯಕ್ಕೆ— **ಜಾರಃ ಕನೀನಾಂ ಜರಯಿತಾ ಕನ್ಯಾನಾಂ ಪತಿರ್ಜನೀನಾಂ ಪಾಲಯಿತಾ ಜಾಯಾನಾಂ । ತತ್ಪ್ರಧಾನಾ ಹಿ ಯಜ್ಞಸಂಯೋಗೇನ ಭವಂತಿ ॥** ಅಗ್ನಿಯು ಕನ್ಯೆಯರ ಪ್ರಿಯನು ಮತ್ತು ಅವರ ಸ್ಥಿತಿಯನ್ನು ವ್ಯತ್ಯಾಸಮಾಡುವವನು ಎಂದರೆ ಕನ್ಯಾವಸ್ಥೆಯಿಂದ ಪ್ರೌಢಸ್ತ್ರೀಯ ಅವಸ್ಥೆಗೆ ಬರುವಂತೆ ಮಾಡುವವನು. ಹೇಗೆಂದರೆ, ವಿವಾಹಾತ್ಪೂರ್ವದಲ್ಲಿ ಕನ್ಯೆಯು ಸಾಧಾರಣವಾಗಿ ಬಾಲ್ಯಾವಸ್ಥೆಯಲ್ಲಿರುವಳು. ವಿವಾಹಾನಂತರ ಅಗ್ನಿಸನ್ನಿಧಿಯಲ್ಲಿ ಸಂಸ್ಕಾರಾದಿಗಳಿಂದ (ಹೋಮ ಇತ್ಯಾದಿ) ಪ್ರೌಢಸ್ತ್ರೀಯೆಂದೂ ಪತಿಯ ಸಂಭೋಗಕ್ಕೆ ಅರ್ಹಳೆಂದೂ ಪರಿಗಣಿಸಲ್ಪಡುವಳು. ಈರೀತಿ ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಗೆ ಬರುವವಳಾದ್ದರಿಂದ ಕನ್ಯೆಯು ವಯಸ್ಸು ಅತಿಕ್ರಮಿಸುವುದು. ಕನ್ಯಾವಸ್ಥೆಯ ವಯಸ್ಸಿಗಿಂತ ಪ್ರೌಢಾವಸ್ಥೆಯ ವಯಸ್ಸು ಹೆಚ್ಚಾಗಿರುವುದು. ಈ ವಿಧವಾದ ವಯೋತಿಕ್ರಮಕ್ಕೆ ಅಗ್ನಿಯೇ ಕಾರಣನಾಗಿರುವುದನ್ನು **ಜರಯಿತಾ ಕನ್ಯಾನಾಂ** ಕನ್ಯೆಯ ವಯಸ್ಸು ಜೀರ್ಣವಾಗುವಂತೆ ಎಂದರೆ ಕಳೆದುಹೋಗುವಂತೆ ಮಾಡುವವನು ಎಂದು ವರ್ಣಿಸಿದೆ. ಇದಲ್ಲದೆ **ಪತಿರ್ಜನೀನಾಂ** ಎಂಬ ಶಬ್ದಗಳಿಗೆ **ಪಾಲಯಿತಾ ಜಾಯಾನಾಂ** ಪತ್ನಿಯರ ಪಾಲಕನೆಂದು ಹೇಳಿದಾರೆ. ಅಗ್ನಿಯು ಪತ್ನಿಯರ ಪಾಲಕನೆಂದರೇನು ? ಎಂದರೆ ವಿವಾಹಾನಂತರ ಪತ್ನಿಯು ತನ್ನ ಪತಿಯೊಡನೆ ಅಗ್ನಿಯಲ್ಲಿ ಔಪಾಸನಾದಿ ಕರ್ಮಗಳನ್ನೂ, ವ್ರತಾದಿಗಳನ್ನೂ, ಅಗ್ನಿಪರಿಚರ್ಯೆಯನ್ನೂ ಮಾಡಬೇಕಾಗಿರುವುದು. ಇದನ್ನೇ ನಿರುಕ್ತಕಾರರು—

**ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯೌಷಧಾಹುತ್ಯಾಸ್ತಂ ಯಥಾ ಗಾವ ಆಪ್ನುವಂತಿ ತಥಾಪ್ಯನುಯಾಮೇದ್ಧಂ ಸಮಿದ್ಧಂ ಭೋಗ್ಯೈಃ ॥**

(ನಿ. ೧೦-೨೧)

ಎಂಬ ನಿರ್ವಚನದಿಂದ ಸ್ಪಷ್ಟಪಡಿಸಿದಾರೆ. ಎಂದರೆ— ಚಲಿಸುವ ಪಶ್ವಾದಿಗಳನ್ನು ಅಗ್ನಿಯಲ್ಲಿ ಹೋಮಮಾಡುವುದು (ಯಜ್ಞಾದಿಕರ್ಮಗಳೂ) ಚಲಿಸದಿರುವ ಓಷಧಿ ವನಸ್ಪತಿಗಳ ಸಮಿದಾದಿಗಳಿಂದ ಹೋಮಮಾಡುವುದು ಮೊದಲಾದ ಪರಿಚರಣ ಕಾರ್ಯಗಳನ್ನು ಮಾಡುವುದಕ್ಕಾಗಿ, ಗೋವುಗಳು ತಮ್ಮ ಮನೆಯನ್ನು(ಕೊಟ್ಟಿಗೆಯನ್ನು) ಸಮೀಪಿಸುವಂತೆ, ಪ್ರಜ್ವಲಿತಾಗ್ನಿಯನ್ನು ಸಮೀಪಿಸಿ ಭೋಗಸಾಧನವಾದ ಆಜ್ಯಾದಿದ್ರವ್ಯಗಳಿಂದ ಸೇವೆಮಾಡಬೇಕು. ಈ ರೀತಿ ಅಗ್ನಿಪರಿಚರಣದಿಂದ ಅಗ್ನಿಯು ಪ್ರೀತನಾಗಿ ಪತ್ನಿಗೂ, ಪತಿಗೂ ಸಹ ಭೋಗಾದಿಪ್ರದನಾಗಿ ಆಗುತ್ತಾನೆ. ಈ ವಿಧವಾದ ಸಂಬಂಧವಿರುವುದರಿಂದ ಎಂದರೆ ಅನುಗ್ರಹಕಾರಕನಾಗಿರುವುದರಿಂದ ಅಗ್ನಿಯನ್ನು ಪತ್ನಿಯ ಪಾಲಕನೆಂದು ಹೇಳಿದಾರೆ. ಇಂತಹ ಅಗ್ನಿಯು, ಎಲೈ ವಧುವೇ, ನಿನಗೆ ಪತಿ ಎಂದರೆ ಪಾಲಕನಾಗಿರುವನು ಎಂದು ಪ್ರಕೃತಋಕ್ಕಿನ ಮೂರನೆಯ ಪಾದದಲ್ಲಿ ಹೇಳಿರುವ— **ತೃತೀಯೋ ಅಗ್ನಿಷ್ಟೇ ಪತಿಃ** ಎಂಬ ವಾಕ್ಯದ ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ ।

ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ ॥ ೪೧ ॥

॥ ಪದಪಾಠಃ ॥

ಸೋಮಃ । ದದತ್ । ಗಂಧರ್ವಾಯ । ಗಂಧರ್ವಃ । ದದತ್ । ಅಗ್ನಯೇ ।

ರಯಿಂ । ಚ । ಪುತ್ರಾನ್ । ಚ । ಅದಾತ್ । ಅಗ್ನಿಃ । ಮಹ್ಯಂ । ಅಥೋ ಇತಿ । ಇಮಾಂ ॥ ೪೧ ॥

॥ ಸಾಯಣಭಾಷ್ಯಂ ॥

**ಸೋಮೋ ಗಂಧರ್ವಾಯ ಪ್ರಥಮಂ ದದತ್ । ಪ್ರಾದಾತ್ । ಗಂಧರ್ವೋಽಗ್ನಯೇ ಪ್ರಾದಾತ್ । ಅಥೋ ಅಪಿ ಚಾಗ್ನಿರಿಮಾಂ ಕನ್ಯಾಂ ರಯಿಂ ಧನಂ ಪುತ್ರಾಂಶ್ಚ ಮಹ್ಯಮದಾತ್ ॥**

॥ ಪ್ರತಿಪದಾರ್ಥ ॥

**ಸೋಮಃ**—ಸೋಮನು। **ಗಂಧರ್ವಾಯ**—ಗಂಧರ್ವನಿಗೆ। **ದದತ್**—ಕನ್ಯೆಯನ್ನು ಮೊದಲು ಕೊಟ್ಟನು। **ಗಂಧರ್ವಃ**—ಗಂಧರ್ವನು । **ಅಗ್ನಯೇ ದದತ್**—ಅನಂತರ ಅಗ್ನಿಗೆ ಕೊಟ್ಟನು । **ಅಥೋ**—ಅನಂತರ । **ಅಗ್ನಿಃ**—ಅಗ್ನಿಯು । **ಇಮಾಂ**—ಈ ಕನ್ಯೆಯನ್ನೂ । **ರಯಿಂ**—ಧನವನ್ನೂ । **ಪುತ್ರಾಂಶ್ಚ**—ಪುತ್ರರನ್ನೂ । **ಮಹ್ಯಂ**—ನನಗೆ । **ಅದಾತ್**—ಕೊಟ್ಟನು.

॥ ಭಾವಾರ್ಥ ॥

ಈ ಕನ್ಯೆಯನ್ನು ಮೊದಲು ಸೋಮನು ಗಂಧರ್ವನಿಗೆ ಕೊಟ್ಟನು. ಅನಂತರ ಗಂಧರ್ವನು ಅಗ್ನಿಗೆ ಕೊಟ್ಟನು. ಕೊನೆಯಲ್ಲಿ ಅಗ್ನಿಯು ನನಗೆ ಇವಳನ್ನೂ, ಇವಳ ಜೊತೆಯಲ್ಲಿ ಧನವನ್ನೂ, ಪುತ್ರರನ್ನೂ ಕೊಟ್ಟನು.

English Translation

Soma gave her to the Gandharva ; the Gandharva gave her to Agni; Agni has given her to me and wealth and sons.

॥ ಸಂಹಿತಾಪಾಠಃ ॥

ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯುರ್ವ್ಯಶ್ನುತಂ ।

ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ ॥ ೪೨ ॥

॥ ಪದಪಾಠಃ ॥

ಇಹ । ಏವ । ಸ್ತಂ । ಮಾ । ವಿ । ಯೌಷ್ಟಂ । ವಿಶ್ವಂ । ಆಯುಃ । ವಿ । ಅಶ್ನುತಂ ।

ಕ್ರೀಳಂತೌ । ಪುತ್ರೈಃ । ನಪ್ತೃಽಭಿಃ । ಮೋದಮಾನೌ । ಸ್ವೇ । ಗೃಹೇ ॥ ೪೨ ॥

॥ ಸಾಯಣಭಾಷ್ಯಂ ॥

ಇಹೈವ ಸ್ತಂ । ಇಹೈವಾಸ್ಮಿಂಲ್ಲೋಕೇ ಸ್ತಂ । ಭವತಂ। ಮಾ ವಿ ಯೌಷ್ಟಂ । ಮಾ ಪೃಥಗ್ಭೂತಂ। ವಿಶ್ವಮಾಯುರ್ವ್ಯಶ್ನುತಂ । ಪ್ರಾಪ್ನುತಂ । ಕಿಂಚ ಪುತ್ರೈರ್ನಪ್ತೃಭಿಃ ಪೌತ್ರೈಃ ಸಹ ಸ್ವೇ ಗೃಹೇ ಮೋದಮಾನೌ ಭವತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಕನ್ಯೆಯೇ) ಇಹೈವ ಸ್ತಂ—ನಾವು ಈ ಲೋಕದಲ್ಲಿಯೇ ಇರೋಣ । ಮಾ ವಿಯೌಷ್ಟಂ— ನಾವು ಬೇರೆಯಾಗದಿರುವಂತಾಗಲಿ । ಸ್ವೇ ಗೃಹೇ—ನಮ್ಮ ಗೃಹದಲ್ಲಿಯೇ । ಪುತ್ರೈಃ—ಪುತ್ರರೊಡನೆಯೂ । ನಪ್ತೃಭಿಃ–ಪೌತ್ರರೊಡನೆಯೂ । ಕ್ರೀಳಂತೌ—ಆಟವಾಡುತ್ತಲೂ । ಮೋದಮಾನೌ—ಹರ್ಷವನ್ನನುಭವಿಸುತ್ತಲೂ । ವಿಶ್ವಂ ಆಯುಃ—ಪೂರ್ಣವಾದ ಆಯುಸ್ಸನ್ನು । ವ್ಯಶ್ನುತಂ—ಅನುಭವಿಸೋಣ.

॥ ಭಾವಾರ್ಥ ॥

ಎಲೈ ಕನ್ಯೆಯೇ, ನಾವು ಈ ಲೋಕದಲ್ಲಿಯೇ ಇರೋಣ. ನಾವು ಬೇರೆಯಾಗದಿರುವಂತಾಗಲಿ. ನಮ್ಮ ಗೃಹದಲ್ಲಿಯೇ, ಪುತ್ರರೊಡನೆಯೂ, ಪೌತ್ರರೊಡನೆಯೂ, ಆಟವಾಡುತ್ತಲೂ, ಹರ್ಷವನ್ನನುಭವಿಸುತ್ತಲೂ, ಪೂರ್ಣವಾದ ಆಯುಸ್ಸನ್ನು ಅನುಭವಿಸೋಣ.

English Translation

Abide here together; may you never be separated; live together all your lives, sporting with sons and grand-sons, happy in your own home

॥ ವಿಶೇಷವಿಷಯಗಳು ॥

ಯಾಸ್ಕರು **ಅರ್ಥವಂತಃ ಶಬ್ದಸಾಮಾನ್ಯಾತ್** ಎಂಬ ವಾಕ್ಯವನ್ನು ವಿವರಿಸುತ್ತಾ ಈರೀತಿ ಹೇಳಿರುವರು. ಸಾಮಾನ್ಯವಾಗಿ ಶಬ್ದಗಳಿಗೆ ರೂಢಿಯಲ್ಲಿ ಯಾವ ಅರ್ಥವಿರುವುದೋ ಅದೇ ಅರ್ಥವನ್ನು ಆಯಾ ಸಂದರ್ಭದಲ್ಲಿ ಹೇಳಬೇಕು. ಕೆಲವು ವಿಶೇಷಸಂದರ್ಭಗಳಲ್ಲಿ ಮಾತ್ರ ಶಬ್ದಗಳಿಗೆ ಸಾಮಾನ್ಯಾರ್ಥವೂ, ವಿಶೇಷಾರ್ಥವೂ ಇರುವವು. ಈ ವಿಷಯದಲ್ಲಿ—

**ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಾಮಾಣಮೃಗ್ಯಜುರ್ವಾಭಿವದತೀತಿ ಚ ಬ್ರಾಹ್ಮಣಂ । ಕ್ರೀಳಂತೌ ಪುತ್ರೈರ್ನಪ್ತೃಭಿರಿತಿ ॥** (ನಿ. ೧-೧೬)

ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿರುವರು. ಇದರ ಅರ್ಥವೇನೆಂದರೆ—ಯಜ್ಞಾದಿಗಳಲ್ಲಿ ಒಂದು ಕರ್ಮವನ್ನು ಮಾಡುವಾಗ ಅದಕ್ಕೆ ಸಂಬಂಧಪಟ್ಟಂತೆ ಮಂತ್ರವನ್ನು ಪಠಿಸಬೇಕಷ್ಟೆ. ಆ ಸಂದರ್ಭದಲ್ಲಿ ಪಠಿಸಲ್ಪಡುವ ಮಂತ್ರವು ಆ ಕರ್ಮಕ್ಕನುಸಾರವಾಗಿರಬೇಕು ಎಂದರೆ ಆ ಕರ್ಮದಲ್ಲಿ ಹೇಳಿರುವ ವಿಷಯಕ್ಕೆ ಸಂಬಂಧಿಸಿರಬೇಕು. ಈರೀತಿ ಮಂತ್ರಕ್ಕೂ, ಕರ್ಮಕ್ಕೂ ಪರಸ್ಪರಸಂಬಂಧವಿದ್ದಲ್ಲಿ ಅದನ್ನು ಸಮೃದ್ಧ ಅಥವಾ ರೂಪಸಮೃದ್ಧವೆಂದು ಕರೆಯುವರು. ರೂಪಸಮೃದ್ಧವೆಂದರೆ ಕರ್ಮದ ರೂಪಕ್ಕೆ ಅನುಸಾರವಾಗಿ, ಪಠಿಸಲ್ಪಡುವ ಮಂತ್ರವು ಋಕ್ಕಾಗಲಿ, ಯಜುಸ್ಸಾಗಲಿ ಆ ಕರ್ಮಕ್ಕೇ ಸಂಬಂಧಪಟ್ಟಿರಬೇಕು. ಹೀಗಿದ್ದರೆ ಮಾತ್ರ ಆ ಕರ್ಮವು ಸಾಂಗವಾಗಿ ನೆರವೇರಿ ನಿರ್ದಿಷ್ಟವಾದ ಫಲಪ್ರಾಪ್ತಿಯಾಗುವುದು. ಮಾಡುವ ಕರ್ಮಕ್ಕೂ, ಪಠಿಸುವ ಮಂತ್ರಕ್ಕೂ ಪರಸ್ಪರಸಂಬಂಧವಿಲ್ಲದಿದ್ದರೆ ಅದು ಸಮೃದ್ಧ ಅಥವಾ ರೂಪಸಮೃದ್ಧವೆನಿಸಲಾರದು.

ಸಮೃದ್ಧಶಬ್ದಕ್ಕೆ ಇನ್ನೊಂದುವಿಧವಾದ ಅರ್ಥವೂ ಬಳಕೆಯಲ್ಲಿರುವುದು. ಈ ಸಂದರ್ಭದಲ್ಲಿ ಸಮೃದ್ಧವೆಂದರೆ ಐಹಿಕಸುಖಕ್ಕೆ ಸಾಧನವಾದ, ಆಹಾರ, ಧನ, ಗೃಹ, ಪುತ್ರಾದಿಗಳು ಮೊದಲಾದವುಗಳ ಯಥೇಚ್ಛಪ್ರಾಪ್ತಿಯು. ಇವುಗಳಿಗೆ ಸಮೃದ್ಧಿ ಅಥವಾ ಸಮೃದ್ಧವೆಂದು ಹೆಸರು. ಈ ವಿಧವಾಗ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕಿನಲ್ಲಿರುವ—**ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ** ಎಂಬ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿದಾರೆ. ಈ ವಾಕ್ಯದಲ್ಲಿ ವರನು ವಧುವನ್ನು ಉದ್ದೇಶಿಸಿ—ಎಲೈ ವಧುವೇ, ನಾವಿಬ್ಬರೂ ನಾವು ಮುಂದೆ ಪಡೆಯುವ ಪುತ್ರರಿಂದಲೂ, ಪೌತ್ರ (ಮೊಮ್ಮಕ್ಕಳಿಂದಲೂ) ರಿಂದಲೂ ಸುಖವಾಗಿ ಸಂತೋಷವನ್ನನುಭವಿಸುತ್ತಾ ನಮ್ಮದೇ ಆದ ಮನೆಯಲ್ಲಿ ವಿಹರಿಸುತ್ತಿರೋಣ ಎಂದು ಹೇಳಿದಾನೆ. ಪುತ್ರಪೌತ್ರರೇ ಮೊದಲಾದ ಸಂತತಿಯನ್ನು ಪಡೆಯುವುದೂ, ಅವರೊಡನೆ ದುಃಖಾದ್ಯನುಭವವಿಲ್ಲದೆ ಸುಖಸಂತೋಷಾದಿಗಳಿಂದ ತಮ್ಮದೇ ಆದ ಗೃಹದಲ್ಲಿ ವಿಹರಿಸುವುದೂ ಸಹ ಇಲ್ಲಿ ಸಮೃದ್ಧವೆಂಬ ಪದವು ನಿರ್ದೇಶಿಸುವುದು.

॥ ಸಂಹಿತಾಪಾಠಃ ॥

**ಆ ನಃ ಪ್ರಜಾಂ ಜನಯತು ಪ್ರಜಾಪತಿರಾಜರಸಾಯ ಸಮನಕ್ತ್ವರ್ಯಮಾ।**
**ಅದುರ್ಮಂಗಲೀಃ ಪತಿಲೋಕಮಾ ವಿಶ ಶಂ ನೋ ಭವ ದ್ವಿಪದೇ ಶಂ**
**ಚತುಷ್ಪದೇ ॥ ೪೩ ॥**

॥ ಪದಪಾಠಃ ॥

ಆ । ನಃ । ಪ್ರऽಜಾಂ । ಜನಯತು । ಪ್ರಜಾऽಪತಿಃ । ಆऽಜರಸಾಯ । ಸಂ । ಅನಕ್ತು । ಅರ್ಯಮಾ ।
ಅದುಃऽಮಂಗಲೀಃ । ಪತಿऽಲೋಕಂ । ಆ । ವಿಶ । ಶಂ । ನಃ । ಭವ । ದ್ವಿऽಪದೇ । ಶಂ । ಚತುಃऽಪದೇ ॥

॥ ಸಾಯಣಭಾಷ್ಯಂ ॥

ಗೃಹಪ್ರವೇಶ ಆ ನಃ ಪ್ರಜಾಂ ಜನಯತ್ವಿತ್ಯಾದ್ಯಾಶ್ಚತಸ್ರೋ ಹೋಮಾರ್ಥಾಃ । ಸೂತ್ರಿತಂ ಚ । ಆ ನಃ ಪ್ರಜಾಂ ಜನಯತು ಪ್ರಜಾಪತಿರಿತಿ ಚತಸೃಭಿಃ ಪ್ರತ್ಯೃಚಂ ಹುತ್ವಾ । ಆ. ಗೃ. ೧-೮-೯ । ಇತಿ ॥

ಪ್ರಜಾಪತಿರ್ದೇವೋ ನೋಽಸ್ಮಾಕಂ ಪ್ರಜಾಮಾ ಜನಯತು । ಅರ್ಯಮಾ ಚಾಜರಸಾಯ ಜರಾಪರ್ಯಂತಂ ಜೀವನಾಯ ಸಮನಕ್ತು । ಸಂಗಮಯತು । ಸಾ । ತ್ವಮದುರ್ಮಂಗಲೀರ್ದುರ್ಮಂಗಲರಹಿತಾ ಸುಮಂಗಲೀ । ಯದ್ವಾ । ಯಾ ಮಂಗಲಾಚಾರಾನ್ದೂಷಯತಿ ಸಾ ದುರ್ಮಂಗಲೀ । ತತೋಽನ್ಯಾದುರ್ಮಂಗಲೀ । ತಾದೃಶೀ ಸತೀ ಪತಿಲೋಕಂ ಪತಿಸಮೀಪಮಾ ವಿಶ । ಪ್ರಾಪ್ನುಹಿ । ನೋಽಸ್ಮಾಕಂ ದ್ವಿಪದೇ ಶಂ ಭವ । ತಥಾ ಚ ಶಂ ಚತುಷ್ಪದೇ ಭವ ॥

॥ ಪ್ರತಿಪದಾರ್ಥ ॥

**ಪ್ರಜಾಪತಿಃ**—ಪ್ರಜಾಪತಿಯು । **ನಃ**—ನಮಗೆ । **ಪ್ರಜಾಂ**—ಪುತ್ರರನ್ನು । **ಆ ಜನಯತು**—ಅನುಗ್ರಹಿಸಲಿ । **ಅರ್ಯಮಾ**—ಅರ್ಯಮನು । **ಆಜರಸಾಯ**—ವಾರ್ಧಕ್ಯದವರೆಗೂ ಜೀವಿಸಲು । **ಸಮನಕ್ತು**—ನಮ್ಮನ್ನು ಒಟ್ಟಗಿರಿಸಲಿ (ಎಲೈ ಕನ್ಯೆಯೇ) । **ಅದುರ್ಮಂಗಲೀಃ**—ಕೇಡನ್ನುಂಟುಮಾಡುವ ಲಕ್ಷಣಗಳಿಲ್ಲದೆ । **ಪತಿಲೋಕಂ**—ಪತಿಗೃಹವನ್ನು । **ಆ ವಿಶ**—ಪ್ರವೇಶಿಸು । **ನಃ**—ನಮ್ಮ । **ದ್ವಿಪದೇ**—ಪುತ್ರಾದಿಗಳಿಗೆ । **ಶಂ ಭವ**—ಮಂಗಳಕರಳಾಗು । **ಚತುಷ್ಪದೇ**—ಪಶ್ವಾದಿಗಳಿಗೂ । **ಶಂ**—ಸುಖಕರಳಾಗು.

॥ ಭಾವಾರ್ಥ ॥

ಪ್ರಜಾಪತಿಯು ನಮಗೆ ಪುತ್ರರನ್ನು ಅನುಗ್ರಹಿಸಲಿ. ನಾವು ವಾರ್ಧಕ್ಯದವರೆಗೂ ಜೊತೆಯಲ್ಲಿರಲು ಅರ್ಯಮನು ನಮ್ಮನ್ನು ಅನುಗ್ರಹಿಸಲಿ. ಎಲೈ ಕನ್ಯೆಯೇ, ಕೇಡನ್ನುಂಟುಮಾಡುವ ಲಕ್ಷಣಗಳಿಲ್ಲದೆ ನೀನು ಪತಿಗೃಹವನ್ನು ಪ್ರವೇಶಿಸು. ನಮ್ಮ ಪುತ್ರಾದಿಗಳಿಗೂ, ಪಶ್ವಾದಿಗಳಿಗೂ ಒಳ್ಳೆಯದನ್ನುಂಟುಮಾಡು.

## English Translation

May Prajapati grant us progeny, may Aryaman unite us together until old age; free from all evil omens enter your husband's abode, be the bringer of prosperity to our bipeds and quadrupeds.

॥ ವಿಶೇಷವಿಷಯಗಳು ॥

ವಿವಾಹಕಾಲದಲ್ಲಿ ಆಚರಿಸುವ ಗೃಹಪ್ರವೇಶ ಹೋಮದಲ್ಲಿ **ಆ ನಃ ಪ್ರಜಾಂ ಜನಯತು** ಎಂದು ಮೊದಲಾಗುವ ನಾಲ್ಕು ಋಕ್ಕುಗಳನ್ನು ಪಠಿಸಿ ಪ್ರಧಾನಾಹುತಿಯನ್ನರ್ಪಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಆ ನಃ ಪ್ರಜಾಂ ಜನಯತು ಪ್ರಜಾಪತಿರಿತಿ ಚತಸೃಭಿಃ ಪ್ರತ್ಯೃಚಂ ಹುತ್ವಾ** ಎಂಬ ಸೂತ್ರದಿಂದ (ಆ. ಗೃ. ೧-೮-೯) ವಿವೃತವಾಗಿರುವುದು.

**ಆ ನಃ ಪ್ರಜಾಂ ಜನಯತು ಪ್ರಜಾಪತಿಃ—ಪ್ರಜಾಪತಿರ್ದೇವೋಽಸ್ಮಾಕಂ ಪ್ರಜಾಂ ಜನಯತು ।** ಸರ್ವೇಶ್ವರನಾದ ಪ್ರಜಾಪತಿಯು ನೂತನದಂಪತಿಗಳಾದ ನಮಗೆ ಪ್ರಜಾದಿಸಂತತಿಯನ್ನು ಉಂಟುಮಾಡಲಿ ಎಂದು ಪತಿಯು ಅಥವಾ ನೂತನವಾಗಿ ವಿವಾಹಿತರಾದ ದಂಪತಿಗಳು ಬಯಸುತ್ತಾರೆ ಅಥವಾ ಪ್ರಜಾಪತಿಯನ್ನು ಪ್ರಾರ್ಥಿಸುತ್ತಾರೆ.

**ಆಜರಸಾಯ ಸಂ ಅನಕ್ತು ಆರ್ಯಮಾ—ದೇವೋಽರ್ಯಮಾ ಚ ಜರಾಪರ್ಯಂತಂ ಜೀವನಾಯ ಸಂಗಮಯತು ।** ಅರ್ಯಮನೆಂಬ ದೇವನೂ ಸಹ ದಂಪತಿಗಳಾದ ನಾವು ಶರೀರ ಶೈಥಿಲ್ಯದಿಂದ ವೃದ್ಧರಾಗುವವರೆಗೂ ಎಂದರೆ ನಾವು ಬಹುಕಾಲಜೀವಿಸಿರುವ ಪರ್ಯಂತರ ಪರಸ್ಪರ ಅಗಲದಿರುವಂತೆ ಅನುಗ್ರಹಿಸಲಿ.

**ಅದುರ್ಮಂಗಲೀಃ ಪತಿಲೋಕಂ ಆ ವಿಶ—**ಇಲ್ಲಿ ಅದುರ್ಮಂಗಲೀಃ ಎಂಬ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಮಂಗಲವೆಂದರೆ ಒಳ್ಳೆಯದು, ಶ್ರೇಯಸ್ಸು, ಶುಭವು. ದುರ್ಮಂಗಲವೆಂದರೆ—ಮಂಗಲವಲ್ಲದ್ದು, ಅಶುಭವು. ದುರ್ಮಂಗಲೀಃ ಎಂದರೆ ಮಂಗಳಕರಳಲ್ಲದ, ಶುಭವಲ್ಲದ, ಕೆಟ್ಟಸ್ವಭಾವದ ಸ್ತ್ರೀಯು ; ಅದುರ್ಮಂಗಲೀಃ ಎಂದರೆ ದುರ್ಮಂಗಲಿಯಲ್ಲದ್ದು, ಕೆಟ್ಟಸ್ವಭಾವವಲ್ಲದ್ದು, ಅಶುಭವಲ್ಲದ್ದು ಎಂದರೆ, ಒಳ್ಳೆಯಸ್ವಭಾವವುಳ್ಳ, ಶ್ರೇಯಸ್ಸನ್ನುಂಟುಮಾಡುವ, ಶುಭ ಅಥವಾ ಮಂಗಳಪ್ರದಳಾದ ಸ್ತ್ರೀಯು, ಸುಮಂಗಲಿಯು, ಸಾಧ್ವಿಯಾದ ಪತ್ನಿಯು ಎಂದರ್ಥವು. ಅಥವಾ **ಮಂಗಲಾಚಾರಾನ್ ದೂಷಯತಿ ಸಾ ದುರ್ಮಂಗಲೀ । ತತೋಽನ್ಯಾ ಅದುರ್ಮಂಗಲೀಃ** ಉತ್ತಮವಾದ, ಮಂಗಳಕರವಾದ, ದೇವಪೂಜಾದಿ ಸತ್ಕರ್ಮಗಳನ್ನುದೂಷಿಸುವವಳು ಅಥವಾ ದ್ವೇಷಿಸುವವಳು ಅಥವಾ ಅವುಗಳಲ್ಲಿ ಆಸಕ್ತಿ ಇಲ್ಲದವಳು ಅಥವಾ ಅವುಗಳನ್ನು ಆಚರಿಸದವಳು ದುರ್ಮಂಗಲೀ ಎಂದು ಹೇಳಲ್ಪಡುವಳು. ಇದಕ್ಕೆ ವಿರುದ್ಧಸ್ವಭಾವವುಳ್ಳ ಸ್ತ್ರೀಯು **ಅದುರ್ಮಂಗಲೀಃ** ಎಂದು ಹೇಳಲ್ಪಡುವಳು ಎಂದರೆ, ಸೌಶೀಲ್ಯ, ಮಂಗಳಕರ್ಮಾಚರಣೆ ಇತ್ಯಾದಿ ಸದ್ಗುಣವುಳ್ಳ ಸ್ತ್ರೀಯನ್ನು ಅದುರ್ಮಂಗಲಿ ಅಥವಾ ಸುಮಂಗಲಿ ಎಂದು ಹೇಳುವರು. ಈ ವಾಕ್ಯದಲ್ಲಿ ಎಲೈ ವಧುವೇ, ಮೇಲೆ ಹೇಳಿದ ಸದ್ಗುಣಸಂಪನ್ನಳೂ, ಸುಮಂಗಲಿಯೂ ಆದ ನೀನು ನಿನ್ನಪತಿಯು ಇರುವ ಪ್ರದೇಶವನ್ನು ಎಂದರೆ ಪತಿಸಾಮಿಪ್ಯವನ್ನು ಸೇರು ಎಂಬ ಅಭಿಪ್ರಾಯವು ಉಕ್ತವಾಗಿದೆ.

**ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ—**ಇಲ್ಲಿ ದ್ವಿಪದೇ ಎಂದರೆ ಎರಡು ಪಾದಗಳಿರುವ ಮನುಷ್ಯರು, ಚತುಷ್ಪದೇ ಎಂದರೆ ನಾಲ್ಕುಪಾದಗಳುಳ್ಳ ಗೋವೇ ಮೊದಲಾದ ಪಶುಗಳು. ಎಲೈ ವಧುವೇ, ನೀನು ಪತಿಗೃಹವನ್ನು ಸೇರಿದಮೇಲೆ ಅಲ್ಲಿರುವ ನಿನ್ನ ಪತಿಯ ಸಂಬಂಧಿಗಳಾದ ಮೈದುನ, ಅತ್ತೆ, ಮಾವ ಮೊದಲಾದವರೊಡನೆಯೂ ಭೃತ್ಯಾದಿಪರಿಜನರೊಡನೆಯೂ ಒಳ್ಳೆಯಮಾತುಗಳನ್ನಾಡುತ್ತಾ ಅವರಿಗೆ ಸುಖಕರಳಾಗಿರು ಮತ್ತು ಮನೆಯಲ್ಲಿರುವ, ಗೋವುಗಳು, ಅಶ್ವಗಳು ಮೊದಲಾದ ಪ್ರಾಣಿಗಳ ವಿಷಯದಲ್ಲಿಯೂ ದಯದಿಂದಲೂ ಕನಿಕರದಿಂದಲೂ ನಡೆದುಕೊಂಡು ಅವುಗಳ ಯೋಗಕ್ಷೇಮನ್ನು ಸರಿಯಾಗಿ ನೋಡಿಕೋ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

• ಸಂಹಿತಾಪಾಠಃ •

**ಅಘೋರಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ ।**

**ವೀರಸೂರ್ದೇವಕಾಮಾ ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ॥**

॥ ಪದಪಾಠಃ ॥

ಅಘೋರಽಚಕ್ಷುಃ । ಅಪತಿಽಘ್ನೀ । ಏಧಿ । ಶಿವಾ । ಪಶುಽಭ್ಯಃ । ಸುಽಮನಾಃ । ಸುಽವರ್ಚಾಃ ।
ವೀರಽಸೂಃ । ದೇವಽಕಾಮಾ । ಸ್ಯೋನಾ । ಶಂ । ನಃ । ಭವ । ದ್ವಿಽಪದೇ । ಶಂ । ಚತುಃಽಪದೇ ॥೪೪॥

॥ ಸಾಯಣಭಾಷ್ಯಂ ॥

ಹೇ ವಧು ತ್ವಮಘೋರಚಕ್ಷುಃ ಕ್ರೋಧಾದಭಯಂಕರಚಕ್ಷುರೇಧಿ । ಭವ । ತಥಾಪತಿಘ್ನೀ ಭವ । ತಥಾ ಪಶುಭ್ಯಃ ಶಿವಾ ಹಿತಕರೀ ಭವ । ಸುಮನಾಃ ಸುವರ್ಚಾಶ್ಚ ಭವ । ವೀರಸೂಃ ಪುತ್ರಾಣಾಮೇವ ಪ್ರಸವಿತ್ರೀ ದೇವಕಾಮಾ ಸ್ಯೋನಾ ಸುಖಕರಾ ಚ ಭವ ॥

॥ ಪ್ರತಿಪದಾರ್ಥ ॥

(ಎಲೈ ವಧುವೇ) ತ್ವಂ—ನೀನು । ಅಘೋರಚಕ್ಷುಃ—ಭಯಂಕರವಾದ ದೃಷ್ಟಿಯುಳ್ಳವಳಾಗಿರದೆ । ಏಧಿ—ಪತಿಯನ್ನು ಸಮೀಪಿಸು । ಅಪತಿಘ್ನೀ—ಪತಿಗೆ ಕೇಡನ್ನು ಬಯಸಬೇಡ । ಪಶುಭ್ಯಃ—ಪಶುಗಳಿಗೆ । ಶಿವಾ—ಹಿತಕರಳಾಗಿಯೂ । ಸುಮನಾಃ—ಸುಮುಖಳಾಗಿಯೂ । ಸುವರ್ಚಾಃ—ಒಳ್ಳೆಯ ವರ್ಚಸ್ಸುಳ್ಳವಳಾಗಿಯೂ ಇರು । ವೀರಸೂಃ—ವೀರಪುತ್ರರನ್ನು ಪಡೆಯುವವಳೂ । ದೇವಕಾಮಾ—ದೇವಪೂಜೆಯಲ್ಲಿ ಆಸಕ್ತಿಯುಳ್ಳವಳೂ । ಸ್ಯೋನಾ—ಸುಖಕರಳೂ ಆಗು.

॥ ಭಾವಾರ್ಥ ॥

ಎಲೈ ವಧುವೇ, ನೀನು ಭಯಂಕರ ನೋಟವಿಲ್ಲದೆ (ಕ್ರೂರದೃಷ್ಟಿಯಿಲ್ಲದೆ) ಪತಿಯನ್ನು ಸಮೀಪಿಸು. ಪತಿಗೆ ಕೇಡನ್ನು ಬಯಸಬೇಡ. ಪಶುಗಳಿಗೆ ಹಿತಕರಳೂ, ಸುಮುಖಳೂ, ವರ್ಚಸ್ಸುಳ್ಳವಳೂ ಆಗಿರು. ವೀರಪುತ್ರರನ್ನು ಪಡೆದು ದೇವಪೂಜೆಯಲ್ಲಿ ಆಸಕ್ತಳೂ, ಸುಖಕರಳೂ ಆಗು.

English Translation

(Look upon your husband) with no angry eye, be not hostile to your lord, be tender to animals, be amiable, be very glorious; be the mother of males, be devouted to the gods, be the bestower of happiness, be the bringer of prosperity to our bipeds and quadrupeds,

॥ ವಿಶೇಷವಿಷಯಗಳು ॥

ಅಘೋರಚಕ್ಷುಃ—ವಧುವಿನ ದೃಷ್ಟಿಯು ಕ್ರೋಧಾದಿಗಳಿಂದ ಕ್ರೂರವಾಗಿರದೆ ಸೌಮ್ಯವಾಗಿರಬೇಕೆಂದೂ, ವಧುವು ಹಸನ್ಮುಖಿಯಾಗಿರಬೇಕೆಂದೂ ಆಶಿಸಲಾಗಿದೆ. ಹೆಂಗಸರೇ ಆಗಲಿ, ಗಂಡಸರೇ ಆಗಲಿ ಅವರ ಮುಖಭಾವವು ಅವರ ಕಣ್ಣನ್ನು ಅವಲಂಬಿಸಿರುವುದು. ಮನಸ್ಸಿನಲ್ಲಿ, ಕೋಪ, ವ್ಯಸನ ಮೊದಲಾದುವುಗಳಿದ್ದರೆ ಅದು ಕಣ್ಣುಗಳಲ್ಲಿ ವ್ಯಕ್ತವಾಗಿ ಮುಖದ ಅಂದವನ್ನೇ ಕೆಡಿಸುವುದು. ಹಾಗಿಲ್ಲದೆ ಮನಸ್ಸಿನಲ್ಲಿ ಸಂತೋಷವೂ, ಇತರರಲ್ಲಿ ಸ್ನೇಹವೂ, ದಯೆಯೂ, ಉಪಕಾರಬುದ್ಧಿಯೂ ಇದ್ದಲ್ಲಿ ಕಣ್ಣುಗಳು ಸೌಮ್ಯವಾಗಿಯೂ, ಹಿತಕರವಾಗಿಯೂ ಇದ್ದು ಮುಖದ ಸೌಂದರ್ಯವನ್ನು ಹೆಚ್ಚಿಸುವುದು. ಆದ್ದರಿಂದ ಇಲ್ಲಿ ವಧುವು ಸೌಮ್ಯದೃಷ್ಟಿಯಿಂದ ಕೂಡಿರಬೇಕೆಂದು ಹೇಳಿದೆ.

**ಅಪತಿಘ್ನೀ**—ಪತಿಗೆ ಕೇಡನ್ನು ಎಂದರೆ ಪತಿಗೆ ಹಿತಕರವಲ್ಲದ ಯಾವ ಕಾರ್ಯವನ್ನೂ ಮಾಡಬೇಡವೆಂದು ಆಶಿಸಲಾಗಿದೆ.

**ಶಿವಾ ಪಶುಭ್ಯಃ**—ಗೋವು ಮೊದಲಾದ ಪಶುಗಳ ವಿಷಯದಲ್ಲಿ, ಅವುಗಳನ್ನು ಚೆನ್ನಾಗಿ ನೋಡಿಕೊಂಡು ಕಾಲಕಾಲಕ್ಕೆ ತೃಣಜಲಾದಿಗಳನ್ನು ಹಾಕುತ್ತಾ ಅವುಗಳ ಸಂರಕ್ಷಣೆಯಲ್ಲಿ ಜಾಗರೂಕಳಾಗಿರು ಎಂದಭಿಪ್ರಾಯವು.

**ಸುಮನಾಃ, ಸುವರ್ಚಾಃ**—ಒಳ್ಳೆಯ ಮನಸ್ಸುಳ್ಳವಳಾಗಿ ಎಂದರೆ ಯಾರಿಗೂ ಮನಸ್ಸಿನಲ್ಲಿ ಸಹ ಕೇಡನ್ನು ಬಯಸದಂತೆ ಇರಬೇಕಲ್ಲದೆ ಮಾತಿನಲ್ಲಿಯೂ ನಯವಿನಯಗಳಿಂದ ಯುಕ್ತಳಾಗಿ ಹಿತವಚನಗಳನ್ನೇ ಆಡುತ್ತಾ ಎಲ್ಲರಿಗೂ ಒಳ್ಳೆಯದಾಗಲೆಂದೇ ಅಪೇಕ್ಷಿಸುತ್ತಿರಬೇಕು. ಈ ವಿಧವಾದ ನಡತೆಗೆ **ಸುಮನಾಃ** ಎಂದು ಹೆಸರು. **ಸುವರ್ಚಾಃ** ಎಂದರೆ ಸ್ವಚ್ಛವಾದ ವಸ್ತ್ರಾಭರಣಾದಿಗಳಿಂದ ಅಲಂಕೃತಳಾಗಿಯೂ ಪರಹಿತಕಾರ್ಯಗಳಲ್ಲಿ ಆಸಕ್ತಳಾಗಿಯೂ ಇರುವುದೇ ವರ್ಚಸ್ಸೆನಿಸುವುದು, ಅಂತಹ ವರ್ಚಸ್ಸಿನಿಂದ ಯುಕ್ತಳಾಗಿರಬೇಕೆಂದೂ ಆಶಿಸಿದೆ

**ವೀರಸೂಃ**—ಪತ್ನಿಯಾದವಳ ಮುಖ್ಯ ಕರ್ತವ್ಯವು, ಪತಿಶುಶ್ರೂಷೆಯೂ ಸತ್ಕರ್ಮಾನುಷ್ಠಾನದಲ್ಲಿ ಪತಿಗೆ ಸಹಕಾರಿಯಾಗಿರುವುದೂ, ಶ್ರೇಷ್ಠರಾದ ಪುತ್ರರನ್ನು ಪಡೆಯುವುದೂ ಆಗಿದೆ. ಆ ಕಾಲದಲ್ಲಿ ಆರ್ಯಜನರು ಈ ದೇಶದ ನಿವಾಸಿಗಳಾದ ದಸ್ಯು ಎಂಬ ಕಪ್ಪುಜನರೊಡನೆ ಆಗಾಗ ಯುದ್ಧಮಾಡಬೇಕಾದ ಸಂದರ್ಭವು ಒದಗುತ್ತಿದ್ದುದರಿಂದ ವೀರರಾದ ಪುತ್ರರ ಅವಶ್ಯಕತೆಯು ಬಹಳವಾಗಿತ್ತು. ಆದ್ದರಿಂದ ದೇವತೆಗಳನ್ನು ಪ್ರಾರ್ಥಿಸುವಾಗಲೂ ಸಹ ವೀರರಾದ ಪುತ್ರಪೌತ್ರಾದಿಗಳನ್ನು ಕೊಡಬೇಕೆಂದು ಋಷಿಗಳು ಅನೇಕವೇಳೆ ಪ್ರಾರ್ಥಿಸುವುದು ರೂಢಿಯಾಗಿದೆ. ಇಲ್ಲಿಯೂ ಸಹ ನವವಧುವು ವೀರರಾದ ಪುತ್ರರನ್ನು ಪಡೆಯಲೆಂದು ಆಶಿಸಿದೆ.

**ದೇವಕಾಮಾಃ**—ದೇವತಾಕಾರ್ಯಗಳಲ್ಲಿ ಎಂದರೆ ಯಜ್ಞಯಾಗಾದಿಸತ್ಕರ್ಮಾನುಷ್ಠಾನಗಳಲ್ಲಿ ಆಸಕ್ತಳಾಗಿ ಅವುಗಳಲ್ಲಿ ಪತಿಗೆ ನೆರವಾಗುವಂತೆ ಇರಬೇಕೆಂದು ಅಪೇಕ್ಷಿಸಲಾಗಿದೆ.

**ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ**—ನಮಗೆ ಎಂದರೆ ವಧುವಿನ ಬಂಧುಗಳಾದ ನಮಗೂ, ಪರಿಜನರಿಗೂ ಭೃತ್ಯಾದಿಗಳಿಗೂ ಸ್ನೇಹಾದರಗಳಿಂದ ಸುಖವನ್ನುಂಟುಮಾಡುವುದಲ್ಲದೆ, ಇತರ ಜನರ ಮತ್ತು ಗೋವುಗಳೇ ಮೊದಲಾದ ಪಶುಗಳ ವಿಷಯದಲ್ಲಿಯೂ ಕನಿಕರದಿಂದಲೂ ಸಹಾನುಭೂತಿಯಿಂದಲೂ ವರ್ತಿಸುತ್ತಾ ಎಲ್ಲರಿಗೂ ನಿನ್ನ ನಡೆತೆಯಿಂದ ಸುಖವನ್ನುಂಟುಮಾಡು ಎಂಬ ಆಶ್ವಾಸನೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಇಮಾಂ ತ್ವಮಿಂದ್ರ ಮೀಢ್ವಃ ಸುಪುತ್ರಾಂ ಸುಭಗಾಂ ಕೃಣು ।
ದಶಾಸ್ಯಾಂ ಪುತ್ರಾನಾ ಧೇಹಿ ಪತಿಮೇಕಾದಶಂ ಕೃಧಿ ॥ ೪೫ ॥

॥ ಪದಪಾಠಃ ॥

ಇಮಾಂ । ತ್ವಂ । ಇಂದ್ರ । ಮೀಢ್ವಃ । ಸುऽಪುತ್ರಾಂ । ಸುऽಭಗಾಂ । ಕೃಣು ।
ದಶ । ಅಸ್ಯಾಂ । ಪುತ್ರಾನ್ । ಆ । ಧೇಹಿ । ಪತಿಂ । ಏಕಾದಶಂ । ಕೃಧಿ ॥ ೪೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಿಮಾಂ ವಧೂಂ ಸುಪುತ್ರಾಂ ಸುಭಗಾಂ ಚ ಕೃಣು । ಕೃಧಿ । ಅಸ್ಯಾಂ ವಧ್ವಾಂ ದಶ ಪುತ್ರಾನಾ ಧೇಹಿ । ಪತಿಮೇಕಾದಶಂ ಕೃಧಿ । ದಶ ಪುತ್ರಾಃ ಪತಿರೇಕಾದಶೋ ಯಥಾ ಸ್ಯಾತ್ತಥಾ ಕೃಧಿ । ಕೃಣು ॥

॥ ಪ್ರತಿಪದಾರ್ಥ ॥

**ಮೀಢ್ವಃ**—ಕಾಮವರ್ಷಕನಾದ । **ಇಂದ್ರ**—ಎಲೈ ಇಂದ್ರನೇ । **ಇಮಂ**—ಈ ವಧುವನ್ನು । **ಸುಪುತ್ರಾಂ**—ಉತ್ತಮವಾದ ಪುತ್ರರುಳ್ಳವಳನ್ನಾಗಿಯೂ । **ಸುಭಗಾಂ**—ಮಂಗಳಕರಳನ್ನಾಗಿಯೂ । **ಕೃಣು**—ಮಾಡು । **ಅಸ್ಯಾಂ**—ಇವಳಲ್ಲಿ । **ದಶ ಪುತ್ರಾನ್**—ಹತ್ತುಮಂದಿ ಮಕ್ಕಳನ್ನು । **ಆ ಧೇಹಿ**—ಜನಿಸುವಂತೆ ಮಾಡು । **ಪತಿಂ**—ಅವಳ ಪತಿಯನ್ನು । **ಏಕಾದಶಂ**—ಹನ್ನೊಂದನೆಯವನನ್ನಾಗಿ । **ಕೃಧಿ**—ಮಾಡು.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ, ಈ ವಧುವನ್ನು ಉತ್ತಮವಾದ ಪುತ್ರರುಳ್ಳವಳನ್ನಾಗಿಯೂ ಮಂಗಳಕರಳನ್ನಾಗಿಯೂ ಮಾಡು. ಇವಳಲ್ಲಿ ಹತ್ತುಮಂದಿ ಮಕ್ಕಳು ಜನಿಸುವಂತೆ ಮಾಡು. ಇವಳ ಪತಿಯನ್ನೇ ಹನ್ನೊಂದನೆಯವನನ್ನಾಗಿ ಮಾಡು.

English Translatian

Indra, showerer, make her the mother of sons, pleasing (to her shuband); give her ten sons; make her husband the eleventh.

॥ ಸಂಹಿತಾಪಾಠಃ ॥

ಸಮ್ರಾಜ್ಞೀ ಶ್ವಶುರೇ ಭವ ಸಮ್ರಾಜ್ಞೀ ಶ್ವಶ್ರ್ವಾಂ ಭವ ।
ನನಾಂದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿ ದೇವೃಷು ॥ ೪೬ ॥

॥ ಪದಪಾಠಃ ॥

ಸಂऽರಾಜ್ಞೀ । ಶ್ವಶುರೇ । ಭವ । ಸಂऽರಾಜ್ಞೀ । ಶ್ವಶ್ರ್ವಾಂ । ಭವ ।
ನನಾಂದರಿ । ಸಂऽರಾಜ್ಞೀ । ಭವ । ಸಂऽರಾಜ್ಞೀ । ಅಧಿ । ದೇವೃಷು ॥ ೪೬ ॥

॥ ಸಾಯಣಭಾಷ್ಯಂ ॥

ಹೇ ವಧು ಶ್ವಶುರಾದಿಷು ತ್ವಂ ಸಮ್ರಾಜ್ಞೀ ಭವ । ದೇವೃಷು । ದೇವರೇಷ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ವಧುವೇ) **ಶ್ವಶುರೇ**—ನಿನ್ನ ಮಾವನಲ್ಲಿ । **ಸಂರಾಜ್ಞೀ ಭವ**—ಆನಂದದಾಯಕಳಾದ ರಾಣಿಯಂತೆ ವರ್ತಿಸು । **ಶ್ವಶ್ರ್ವಾಂ**—ಅತ್ತೆಯಲ್ಲಿಯೂ । **ಸಂರಾಜ್ಞೀ ಭವ**—ಸಂತೋಷಜನಕಳಾಗಿ ವ್ಯವಹರಿಸು । **ನನಾಂದರಿ**–

ನಾದಿನಿಯರಲ್ಲಿ । **ಸಂರಾಜ್ಞೀ**—ಉತ್ತಮವಾದ ರಾಣಿಯಂತೆ ವರ್ತಿಸು । **ಅಧಿ ದೇವೃಷು**—ಮೈದುನರಲ್ಲಿಯೂ । **ಸಂರಾಜ್ಞೀ**—ಸಂತೋಷಜನಕವಾದ ಅಧಿಕಾರವನ್ನು ನಡೆಸು.

॥ ಭಾವಾರ್ಥ ॥

ಎಲೈ ವಧುವೇ, ನಿನ್ನ ಮಾವನಲ್ಲಿ ಆನಂದದಾಯಕವಾದ ರಾಣಿಯಂತೆ ವರ್ತಿಸು. ಅತ್ತೆಯಲ್ಲಿಯೂ ಸಂತೋಷಜನಕಳಾಗಿ ವ್ಯವಹರಿಸು. ನಾದಿನಿಯರು ಮತ್ತು ಮೈದುನರ ವಿಷಯದಲ್ಲಿಯೂ ಅವರಿಗೆ ಹರ್ಷಕಾರಕಳಾಗಿ ಅಧಿಕಾರವನ್ನು ಮಾಡು.

## English Translation

Be a queen to your father-in law, be a queen to your mother-in-law, be a queen to your husband's sister, be a queen to your husband's brothers.

॥ ವಿಶೇಷವಿಷಯಗಳು ॥

**ದೇವರಂ** ಎಂಬ ಶಬ್ದದ ಅರ್ಥವಿವರಣೆ ಮಾಡುವುದಕ್ಕಾಗಿ ಯಾಸ್ಕರು ಋ. ಸಂ. ೧೦-೪೦-೨ನೇ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ನಿರುಕ್ತವನ್ನು ಹೇಳಿರುತ್ತಾರೆ—

> **ಕ್ವ ಸ್ವಿದ್ದೋಷಾ ಭವತಃ, ಕ್ವ ದಿವಾ, ಕ್ವಾಭಿಪಿತ್ವಂ ಕರುಥಃ, ಕ್ವ ವಸಥಃ, ಕೋ ವಾ ಶಯುನೇ ವಿಧವೇವ ದೇವರಂ । ದೇವರಃ ಕಸ್ಮಾತ್ ದ್ವಿತೀಯೋ ವರ ಉಚ್ಯತೇ । ವಿಧವಾ ವಿಧಾತೃಕಾ ಭವತಿ । ವಿಧಾವನಾದ್ವಾ । ವಿಧವನಾದ್ವೇತಿ ಚರ್ಮಶಿರಾಃ । ಅಪಿ ವಾ ಧವ ಇತಿ ಮನುಷ್ಯನಾಮ ತದ್ವಿಯೋಗಾದ್ವಿಧವಾ । ದೇವರೋ ದೀವ್ಯತಿಕರ್ಮಾ । ಮರ್ಯೋ ಮನುಷ್ಯೋ ಮರಣಧರ್ಮಾ । ಯೋಷಾ ಯೌತೇಃ । ಆಕುರುತೇ ಸಹಸ್ಥಾನೇ ॥**
>
> (ನಿ. ೩-೧೫)

ಈ ಸೂಕ್ತದ ಋಷಿಯಾದ ಘೋಷಾ ಎಂಬ ಸ್ತ್ರೀಯು ಅಶ್ವಿನೀದೇವತೆಗಳನ್ನು ಸ್ತುತಿಸುವಾಗ ಅವರನ್ನು ಈ ರೀತಿ ಪ್ರಶ್ನೆಮಾಡುತ್ತಾಳೆ—ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರಿಕಾಲದಲ್ಲಿ ಎಲ್ಲಿರುತ್ತೀರಿ ? ಹಗಲು ಎಲ್ಲಿರುತ್ತೀರಿ ? (ಸ್ನಾನಭೋಜನಾದಿ ನಿಮ್ಮ ) ಕಾರ್ಯನಿರ್ವಹಣೆಯನ್ನು ಎಲ್ಲಿ ಮಾಡುತ್ತೀರಿ ? ಎಲ್ಲಿ ವಾಸಮಾಡುತ್ತೀರಿ ಗಂಡನಿಲ್ಲದ ವಿಧವೆಯು ತನ್ನ ಮೈದನನ್ನು (ರಾತ್ರಿಕಾಲದಲ್ಲಿ) ತನ್ನ ಹಾಸಿಗೆಯಲ್ಲಿ ಎದುರಾಗಿ ಕೂರಿಸಿಕೊಳ್ಳುವಂತೆಯೂ, ಹೆಂಡತಿಯು ತನ್ನ ಗಂಡನನ್ನು ಏಕಾಂತದಲ್ಲಿ ಎದುರಾಗಿ ಕೂರಿಸಿಕೊಂಡು ವಿಹರಿಸುವಂತೆಯೂ ನೀವು ಯಜ್ಞಮಾಡುವ ಯಾವ ಯಜಮಾನನ ಯಜ್ಞಗೃಹದಲ್ಲಿ ಅವನಿಂದ ಸತ್ಕರಿಸಲ್ಪಡುತ್ತೀರಿ ?

**ದೇವರ** ಶಬ್ದವು ಹೇಗೆ ನಿಷ್ಪನ್ನವಾಗಿದೆ ? ದೇವರ ಎಂದರೇನು ? ದೇವರ ಎಂದರೆ ಎರಡನೇ ವರ. ಸ್ತ್ರೀಗೆ ಮದುವೆಯಾದ ಗಂಡನೇ ಮೊದಲನೆಯ ವರ. ಮಕ್ಕಳಾಗುವುದಕ್ಕೆ ಮುಂಚೆಯೇ ಆ ಗಂಡನು ಮೃತನಾದಲ್ಲಿ (ಆ ಕಾಲದಲ್ಲಿ ರೂಢಿಯಲ್ಲಿದ್ದಂತೆ) ಆ ಗಂಡನ ತಮ್ಮನು ಎಂದರೆ ಮೈದುನನು ಆ ಸ್ತ್ರೀಯಲ್ಲಿ ಪುತ್ರೋತ್ಪತ್ತಿಗಾಗಿ ಸಂಭೋಗಮಾಡಬಹುದಾದ್ದರಿಂದ ಆ ಮೈದನನೇ ಆ ಸ್ತ್ರೀಗೆ ದ್ವಿತೀಯ ವರ (ಎರಡನೆಯ ಗಂಡ) ಎಂದರೆ ದೇವರ ಶಬ್ದಕ್ಕೆ ಮೈದುನ ಎಂದರ್ಥವು.

**ವಿಧವಾ** ಎಂಬ ಶಬ್ದಕ್ಕೆ (೧) **ವಿಧಾತೃಕಾ** ಎಂದರ್ಥವು. ಪತಿಯು ಮೃತನಾದಮೇಲೆ ಆ ಸ್ತ್ರೀಯನ್ನು ಧರಿಸುವರು ಎಂದರೆ (ಅನ್ನವಸ್ತ್ರಾದಿಗಳನ್ನು ಕೊಟ್ಟು) ಪೋಷಿಸುವವರು ಯಾರೂ ಇರುವುದಿಲ್ಲವಾದ್ದರಿಂದ ಗಂಡನಿಲ್ಲದ ಸ್ತ್ರೀಯನ್ನು ವಿಧವಾ ಎಂದು ಕರೆಯುವರು. (೨) ಅಥವಾ **ವಿಧವನಾದ್ವಾ** ಪತಿಯ ಮರಣದಿಂದ ದುಃಖಿತಳಾಗಿ ಶೋಕದಿಂದ ನಡಗುತ್ತಿರುವವಳಾದ್ದರಿಂದ ಪತಿಯಿಲ್ಲದ ಸ್ತ್ರೀಗೆ ವಿಧವಾ ಎಂದು ಹೆಸರು. (೩) ಅಥವಾ **ವಿಧಾವನಾದ್ವಾ** ಪತಿಯಮರಣದಿಂದ ಶೋಕಸಂತಪ್ತಳಾಗಿ ಇಲ್ಲಿಂದಲ್ಲಿಗೆ ಯಾರ ನಿರ್ಬಂಧವೂ ಇಲ್ಲದೆ ಓಡಾಡುವವಳಾದ್ದರಿಂದ ಪತಿರಹಿತಳಾದ ಸ್ತ್ರೀಗೆ ವಿಧವಾ ಎಂದು ಹೆಸರು ಎಂದು ಚರ್ಮಶಿರಾಃ ಎಂಬ ಆಚಾರ್ಯರ ಅಭಿಪ್ರಾಯವು. (೪) ಅಥವಾ ಧವಶಬ್ದಕ್ಕೆ ಮನುಷ್ಯನೆಂದರ್ಥವು. ಆದ್ದರಿಂದ ತನ್ನಪತಿಯನ್ನು (ವಿ ಧವ) ಕಳೆದುಕೊಂಡಿರುವ ಸ್ತ್ರೀಗೆ ವಿಧವಾ ಎಂದು ಹೆಸರು.

**ದೇವರಃ ದೀವ್ಯತಿಕರ್ಮಾ** । ದೇವರ ಶಬ್ದವು ಕ್ರೀಡಿಸು ಎಂಬರ್ಥವುಳ್ಳ ದೀವ್ಯತಿಧಾತುವಿನಿಂದ ನಿಷ್ಪನ್ನವಾಗಿದೆ. ಇಲ್ಲಿ ತನ್ನ ಸಹೋದರನ ಪತ್ನಿಯೊಡನೆ ರತಿಕ್ರೀಡೆಯಲ್ಲಿ ಆಸಕ್ತನಾಗಿರುವವನೆಂದಭಿಪ್ರಾಯವು.

। ಸಂಹಿತಾಪಾಠಃ ।

**ಸಮಂಜಂತು ವಿಶ್ವೇ ದೇವಾಃ ಸಮಾಪೋ ಹೃದಯಾನಿ ನೌ ।**

**ಸಂ ಮಾತರಿಶ್ವಾ ಸಂ ಧಾತಾ ಸಮು ದೇಷ್ಟ್ರೀ ದಧಾತು ನೌ ॥ ೪೭ ॥**

। ಪದಪಾಠಃ ॥

**ಸಂ । ಅಂಜಂತು । ವಿಶ್ವೇ । ದೇವಾಃ । ಸಂ । ಆಪಃ । ಹೃದಯಾನಿ । ನೌ ।**

**ಸಂ । ಮಾತರಿಶ್ವಾ । ಸಂ । ಧಾತಾ । ಸಂ । ಊಂ ಇತಿ । ದೇಷ್ಟ್ರೀ । ದಧಾತು । ನೌ ॥ ೪೭ ॥**

॥ ಸಾಯಣಭಾಷ್ಯಂ ।

ಸಮಂಜಂತ್ವಿತ್ಯೇಷಾ ವರಸ್ಯ ದಧಿಪ್ರಾಶನೇ ವಧೂವರಯೋರ್ಹೃದಯಸ್ಪರ್ಶನೇ ವಾ ವಿನಿಯುಕ್ತಾ । ತಥಾ ಚ ಸೂತ್ರಿತಂ । ಸಮಂಜಂತು ವಿಶ್ವೇ ದೇವಾ ಇತಿ ದಧ್ನಃ ಪ್ರಾಶ್ಯ ಪ್ರತಿಪ್ರಯಚ್ಛೇದಾಜ್ಯಶೇಷೇಣ ವಾನಕ್ತಿ ಹೃದಯೇ । ಆ. ಗೃ. ೧-೮-೯ । ಇತಿ ॥

ವಿಶ್ವೇ ದೇವಾಃ ಸರ್ವೇ ದೇವಾ ನೌ ಹೃದಯಾನಿ ಮಾನಸಾನಿ ಸಮಂಜಂತು । ಸಮ್ಯಗಂಜಂತು । ಅಪಗತದುಃಖಾದಿಕ್ಲೇಶಾನಿ ಕೃತ್ವಾ ಲೌಕಿಕವೈದಿಕವಿಷಯೇಷು ಪ್ರಕಾಶಯುಕ್ತಾನಿ ಕುರ್ವಂತ್ವಿತ್ಯರ್ಥಃ । ಆಪಶ್ಚ ಸಮಂಜಂತು । ತಥಾ ಮಾತರಿಶ್ವಾ ನೌ ಹೃದಯಾನಿ ಸಂ ದಧಾತು । ಆವಯೋರ್ಬುದ್ಧೀಃ ಪರಸ್ಪರಾನುಕೂಲಾಃ ಕರೋತ್ವಿತ್ಯರ್ಥಃ । ಧಾತಾ ಚ ಸಂ ದಧಾತು । ದೇಷ್ಟ್ರೀ ದಾತ್ರೀ ಫಲಾನಾಂ । ಸರಸ್ವತೀತ್ಯರ್ಥಃ । ಸಾ ಚ ಸಂ ದಧಾತು । ಸಂಧಾನಂ ಕರೋತು ॥

। ಪ್ರತಿಪದಾರ್ಥ ।

**ವಿಶ್ವೇ ದೇವಾಃ**— ಸಕಲ ದೇವತೆಗಳೂ । **ನೌ ಹೃದಯಾನಿ**— ನಮ್ಮಿಬ್ಬರ ಹೃದಯಗಳನ್ನೂ । **ಸಮಂಜಂತು**— ಒಂದುಗೂಡಿಸಲಿ । **ಆಪಃ**— ಅಬ್ದೇವತೆಗಳೂ । **ಸಂ ಅಂಜಂತು**— ಒಂದಾಗುವಂತೆ ಮಾಡಲಿ । **ಮಾತರಿಶ್ವಾ**— ವಾಯುವೂ (ಮಾತರಿಶ್ವನೂ) ।**ಸಂ ದಧಾತು**— ನಮ್ಮ ಮನಸ್ಸನ್ನು ಪರಸ್ಪರ ಹಿತಕರವಾಗುವಂತೆ ಮಾಡಲಿ । **ದೇಷ್ಟ್ರೀ**— ಫಲದಾತೃವಾದ ಸರಸ್ವತಿಯೂ । **ಧಾತಾ**— ಧಾತೃವೂ ಸಹ । **ನೌ**— ನಮ್ಮ ಹೃದಯಗಳನ್ನು । **ಸಂ (ದಧಾತು)**— ಒಂದಾಗಿಸಲಿ.

। ಭಾವಾರ್ಥ ।

ಸಕಲ ದೇವತೆಗಳೂ ಕೂಡಿ ನಮ್ಮ ಹೃದಯವನ್ನು ಒಂದಾಗುವಂತೆ ಮಾಡಲಿ. ಅಬ್ದೇವತೆಗಳೂ ಸಹ ನಮ್ಮನ್ನು ಒಂದುಗೂಡಿಸಲಿ. ಮಾತರಿಶ್ವನು ನಮ್ಮ ಮನಸ್ಸನ್ನು ಪರಸ್ಪರ ಹಿತಕರವಾಗುವಂತೆ ಮಾಡಲಿ. ಫಲದಾತೃವಾದ ಸರಸ್ವತಿಯು ನಮ್ಮ ಹೃದಯಗಳನ್ನು ಒಂದಾಗಿಸಲಿ.

## English Translation

May the universal gods unite both our hearts; may the waters unite them; may Matarishvan, Dhatri and the bountiful (Saraswati) unite both our hearts.

॥ ವಿಶೇಷವಿಷಯಗಳು ॥

ವಿವಾಹಕಾಲದಲ್ಲಿ ವರನು ದಧಿಪ್ರಾಶನಮಾಡುವಾಗಲೂ ಮತ್ತು ವಧೂವರರು ತಮ್ಮ ಹೃದಯವನ್ನು ಸ್ಪರ್ಶಿಸುವಾಗಲೂ **ಸಮಂಜಂತು** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಸಮಂಜಂತು ವಿಶ್ವೇದೇವಾ ಇತಿ ದಧ್ನಃ ಪ್ರಾಶ್ಯ ಪ್ರತಿಯಚ್ಛೇದಾಜ್ಯಶೇಷೇಣ ವಾನಕ್ತಿ ಹೃದಯೇ** ಎಂಬ ಸೂತ್ರದಿಂದ (ಆ. ಗೃ. ೧-೮-೯) ವಿವೃತವಾಗಿರುವುದು.

**ಹೃದಯಾನಿ ಸಮಂಜಂತು— ಅಪಗತೆದುಃಖಾದಿಕ್ಲೇಶಾನಿ ಕೃತ್ವಾ ಲೌಕಿಕವೈದಿಕವಿಷಯೇಷು ಪ್ರಕಾಶಯುಕ್ತಾನಿ ಕುರ್ವಂತ್ವಿತ್ಯರ್ಥಃ** ॥ ಎಲೈ ಸಮಸ್ತ ದೇವತೆಗಳೇ, ನವದಂಪತಿಗಳಾದ ನಮಗೆ ಸಂಭವಿಸಬಹುದಾದ ದುಃಖಕ್ಲೇಶಾದಿಗಳನ್ನೂ, ತೊಂದರೆಗಳನ್ನೂ ನಿವಾರಣೆಮಾಡಿ ಲೌಕಿಕವಾದ ಗೃಹಕೃತ್ಯಾದಿಗಳಲ್ಲಿಯೂ, ವೈದಿಕವಾದ ಯಜ್ಞಯಾಗಾದಿ ಸತ್ಕರ್ಮಾನುಷ್ಠಾನದಲ್ಲಿಯೂ ನಮ್ಮಿಬ್ಬರ ಮನಸ್ಸೂ ಭಿನ್ನಾಭಿಪ್ರಾಯವಿಲ್ಲದೆ ಒಂದೇ ರೀತಿಯಾಗಿ ಪ್ರವರ್ತಿಸುವಂತೆ ಅನುಗ್ರಹಿಸಿ ಎಂದಭಿಪ್ರಾಯವು.

ಮಾತರಿಶ್ವಾ ಎಂಬ ಶಬ್ದಕ್ಕೆ ಸಾಧಾರಣವಾಗಿ ಅಂತರಿಕ್ಷದಲ್ಲಿ ಬೀಸುವ ವಾಯುವೆಂದರ್ಥವಿದ್ದರೂ, **ಮಾತರ್ಯಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಮಾತರಿಶ್ವಾ । ಅಥವಾ ಮಾತರ್ಯರಣ್ಯಾಂ ಶ್ವಸಿತಿ ನಿವಸತೀತಿ ಮಾತರಿಶ್ವಾ** । ಎಂದು ಮಾತರಿಶ್ವಾ ಎಂಬ ಶಬ್ದಕ್ಕೆ ಅಗ್ನಿಯ ಪರವಾಗಿ ಅವಯವಾರ್ಥವನ್ನು ಹೇಳಿರುವರು. ಎಂದರೆ ಅಂತರಿಕ್ಷದಲ್ಲಿ ಸಂಚರಿಸುವ ಸೂರ್ಯನು ಸಕಲಜೀವರಾಶಿಗಳಿಗೂ ಚೈತನ್ಯದಾಯಕವಾಗಿ ಪ್ರಕಾಶಿಸುತ್ತಿರುವನು. ಈ ಸೂರ್ಯನು ದ್ಯುಲೋಕದಲ್ಲಿರುವ ಅಗ್ನಿಯ ರೂಪಾಂತರವೇ ಆಗಿರುವುದರಿಂದ, ಮಾತರಿಶ್ವಾ ಎಂಬ ಶಬ್ದಕ್ಕೆ ಆದಿತ್ಯರೂಪಿಯಾದ ಅಗ್ನಿಯೆಂದು ಹೇಳಬಹುದು. ಅಥವಾ

ಅಗ್ನಿಯನ್ನು ಅರಣಿಗಳಲ್ಲಿ (ಮರದ ತುಂಡುಗಳಲ್ಲಿ) ಕಡೆದು ಉತ್ಪತ್ತಿ ಮಾಡುವುದರಿಂದ ಅರಣಿಗಳು ಅಗ್ನಿಗೆ ಮಾತೃಸ್ಥಾನೀಯವು (ತಾಯಿಯರು). ಇಂತಹ ಅರಣಿಗಳಲ್ಲಿ ಅಗ್ನಿಯು ಇರುವವನಾದ್ದರಿಂದ **ಮಾತರಿಶ್ವಾ** ಎಂದರೆ ಅಗ್ನಿಯು ಎಂದು ಇನ್ನೊಂದು ವಿಧವಾದ ರೂಪನಿಷ್ಪತ್ತಿಗೂ ಅರ್ಥವು. ಯಾಸ್ಕರು ಮಾತರಿಶ್ವಾ ಶಬ್ದಕ್ಕೆ **ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ** (ನಿ. ೭-೨೬) ಎಂದು ನಿರ್ವಚನವನ್ನು ಹೇಳಿರುವರು. **ಮಾತರಿ** ಎಂದರೆ ಅಂತರಿಕ್ಷದಲ್ಲಿ **ಶ್ವಸಿತಿ** ಚಲಿಸುತ್ತಾನೆ. ಆದ್ದರಿಂದ ಅಂತರಿಕ್ಷದಲ್ಲಿ ಚಲಿಸುವ ವಾಯುವು ಎಂದು ಒಂದು ವಿಧವಾದ ಅರ್ಥವು. ಅಥವಾ **ಮಾತರಿ** ಅಂತರಿಕ್ಷದಲ್ಲಿ **ಆಶು** ವೇಗವಾಗಿ **ಅನಿತಿ** (ಗಚ್ಛತಿ) ಸಂಚರಿಸುವನಾದ್ದರಿಂದ ವಾಯುವಿಗೆ ಮಾತರಿಶ್ವನೆಂದು ಹೆಸರು ಎಂದು ಇನ್ನೊಂದು ವಿಧವಾದ ಅರ್ಥ. ಎಂದರೆ–ಅಂತರಿಕ್ಷದಲ್ಲಿ ಸಂಚರಿಸುವ ದೇವತೆಯೆಂದು ಮಾತರಿಶ್ವಾ ಎಂಬ ಶಬ್ದಕ್ಕೆ ಅರ್ಥವನ್ನು ಹೇಳಿದಂತಾಯಿತು. ಅಂತರಿಕ್ಷದಲ್ಲಿ ಸಂಚರಿಸುವವನು ವಾಯುಮಾತ್ರವಲ್ಲ. ಸೂರ್ಯನೂ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಸೂರ್ಯನಿಗೂ ಮಾತರಿಶ್ವನೆಂದು ಹೆಸರು. ಸೂರ್ಯನೂ ದ್ಯುಲೋಕದಲ್ಲಿರುವ ಅಗ್ನಿಯ ರೂಪಾಂತರವಾಗಿರುವುದರಿಂದ ಅಗ್ನಿಯನ್ನು ಇಲ್ಲಿ ಮಾತರಿಶ್ವಾ ಎಂಬ ಶಬ್ದದಿಂದ ವರ್ಣಿಸಿವೆ.

**ಮಾತರಿಶ್ವಾ—ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ ।** ಅಂತರಿಕ್ಷದಲ್ಲಿ ಶ್ವಾಸಮಾಡುವುದರಿಂದ ಅಥವಾ ಸಂಚರಿಸುವುದರಿಂದ ವಾಯುವಿಗೆ **ಮಾತರಿಶ್ವ**ನೆಂದು ಹೆಸರು ಬಂದಿದೆ. ಋ. ಸಂ. ೧-೯೪-೪ ನೇ ಋಕ್ಕಿನಲ್ಲಿ ಈ ಪದಕ್ಕೆ ಅಗ್ನಿಯೆಂದೂ ೧-೧೪೧-೩ ನೆಯದರಲ್ಲಿ ಯಜಮಾನನೆಂದೂ ಅರ್ಥಮಾಡುತ್ತಾರೆ. ಆದರೆ ಅಂತಹ ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲೆಲ್ಲಾ **ಮಾತರಿಶ್ವಾ** ಎಂದರೆ ವಾಯುವೆಂದೇ ಅರ್ಥವು.

**ಆನ್ಯಂ ಮಾತರಿಶ್ವಾ ದಿವ ಆ ಜಭಾರ**— ಯಜ್ಞಾತ್ಮಕನಾದ ಅಗ್ನಿಯ ಅಲೌಕಿಕವಾದ ಆವಿರ್ಭಾವವೂ ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿದೆ. ಯಜ್ಞಗಳಿಗೆ ಕೇತುವೂ, ವಿದಥಕ್ಕೆ ಸಾಧನವೂ, ಯಾಗಾದಿಗಳ ಪಿತೃವೂ, ಅಧ್ವರಗಳ ರಾಜನೂ (ಋ. ಸಂ. ೩-೩-೩ ; ೩-೧೧-೨ ; ೪-೨-೩ ಇತ್ಯಾದಿ ಋಕ್ಕುಗಳಲ್ಲಿರುವ ವರ್ಣನೆಗಳನ್ನು ನೋಡಿ) ಆದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದ ಋಕ್ಸಂಹಿತೆಯ

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆರ್ಭವ ಸುಕ್ರತೂಯಾ ವಿವಸ್ವತೇ ।**

(ಋ. ಸಂ. ೧-೩೧-೩)

**ಸ ಜಾಯಮಾನಃ ಪರಮೇ ವ್ಯೋಮನ್ಯಾವಿರಗ್ನಿರಭವನ್ಮಾತರಿಶ್ವನೇ ।**

(ಋ. ಸಂ. ೧-೪೩-೨)

ಮುಂತಾದ ಋಕ್ಕುಗಳಲ್ಲಿ ಹೊಗಳಿದೆ. ಈ ವಾಯುವು ಯಜ್ಞಕರ್ತರಾದ ಭೃಗುವಿಗಾಗಿಯೂ ಮನುವಿಗಾಗಿಯೂ ಅತ್ಯಂತ ದೂರಪ್ರದೇಶದಲ್ಲಿ ಗೂಢವಾಗಿದ್ದ ಅಗ್ನಿಯನ್ನು ಕರೆತಂದು ಇವರಿಗೆ ಸಹಾಯಮಾಡಿದನು ಎಂದು ಅನೇಕ ಶ್ರುತಿವಾಕ್ಯಗಳಿವೆ. ಉದಾಹರಣೆಗೆ—

**ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।**

(ಋ. ಸಂ. ೧-೬೦-೧)

**ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ।**

(ಋ. ಸಂ. ೧-೧೨೮-೨)

**ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ।**

(ಋ. ಸಂ. ೩-೯-೫)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**

(ಋ. ಸಂ. ೬-೮-೪)

**ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ।**

(ಋ. ಸಂ. ೧೦-೪೬-೯)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮಾತರಿಶ್ವರನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ ಮಾಡಿದನೆಂದು ಶ್ರುತಿಪ್ರಸಿದ್ಧವಾಗಿದೆ.

**ಮಾತರಿಶ್ವಾ ಮಥಿತ್**—**ಮಾತರಿಶ್ವಾ** ಎಂಬ ಪದದ ವಿವರಣೆಗೆ ಋ. ಸಂ. ೧-೯೩-೬ ನೇ ಋಕ್ಕಿನ ವಿಶೇಷವಿಷಯಗಳನ್ನು ನೋಡಿ. ಕೀದೃಶಃ **ಮಾತರಿಶ್ವಾ** । ವಿಭೃತಃ । **ಪ್ರಾಣಿಷು ಪ್ರಾಣಾಪಾನಾದಿ ಪಂಚವೃತ್ತಿರೂಪೇಣ ವಿಭೃತೋ ವಿಭಜ್ಯ ಸ್ಥಿತಃ** । ಪ್ರಾಣಿಗಳಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂದು ಐದು ವಿಭಾಗವಾಗಿ ವ್ಯಾಪಿಸಿರುವವನು ಎಂದು **ವಿಭೃತಃ** ಎಂಬ ಪದಕ್ಕೆ ಅರ್ಥವನ್ನು ಹೇಳಿ ಅವುಗಳಲ್ಲಿ ಈ ಸಂದರ್ಭಕ್ಕೆ **ಮಾತರಿಶ್ವಾ** ಎಂದರೆ **ವ್ಯಾನವೃತ್ತಿರೂಪೇಣಾವಸ್ಥಿತೋ ಮುಖ್ಯಪ್ರಾಣಃ ।** ವ್ಯಾನವೃತ್ತಿರೂಪದಲ್ಲಿರುವ ಮುಖ್ಯಪ್ರಾಣನಾದ ವಾಯುವೆಂದು ಭಾಷ್ಯಕಾರರು ವಿವರಿಸಿದ್ದಾರೆ. ಈ ರೂಪದಲ್ಲಿರುವ ವಾಯುವೇ ಅಗ್ನಿಮಥನಕ್ಕೆ ಸಮರ್ಥನೆಂದು ಈ ಕಾರ್ಯವನ್ನು ನಿರ್ವಹಿಸಿದನೆಂದೂ ಸಮರ್ಥಿಸುವುದಕ್ಕೆ ಛಾಂದೋಗ್ಯೋಪನಿಷತ್ತಿನ **ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನಃ । ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋತಿ** । ಎಂಬ ವ್ಯಾನರೂಪದ ವಾಯುವಿನ ಪ್ರಶಂಸೆಯನ್ನು ಉದಹರಿಸುತ್ತಾರೆ. ಪ್ರಾಣಾಪಾನಗಳ ಶಕ್ತಿಗೆ ಮೀರಿದ ಅಗ್ನಿಮಂಥನಾದಿ ಪರಾಕ್ರಮಕಾರ್ಯಗಳನ್ನೆಲ್ಲಾ ವ್ಯಾನರೂಪದ ವಾಯುವು ಮಾತ್ರ ಮಾಡಬಲ್ಲದು ಎಂದು ಈ ಶ್ರುತಿವಾಕ್ಯದ ತಾತ್ಪರ್ಯ. (ಛಾ. ಉ. ೧-೩-೩-೫)

ಅಗ್ನಿಮಥನಕ್ಕೆ ಪೂರ್ವಪ್ರಸಿದ್ಧವಾದ ಒಂದು ಕಥೆಯಿದೆ. ಅದರಲ್ಲಿ ಹೇಳುವಂತೆ **ಸರ್ವಮಿದಮಂಧತಮ ಆಸೀತ್ । ಅಥ ಮಾತರಿಶ್ವಾಕಾಶೇ ಸೂಕ್ಷ್ಮಮಗ್ನಿಂ ಪಶ್ಯತ್ । ತಮಮಥ್ನಾತ್ । ಮಥಿತ್ವಾ ಜಾನಯದಿತಿ** । ಹಿಂದೆ ಲೋಕವೆಲ್ಲವೂ ಕಗ್ಗತ್ತಲೆಯಿಂದ ಆವೃತವಾಗಿದ್ದಿತು. ಆಗ ಮಾತರಿಶ್ವನು ಸೂಕ್ಷ್ಮರೂಪದ ಅಗ್ನಿಯನ್ನು ಆಕಾಶದಲ್ಲಿ ಗುರ್ತಿಸಿ ಮಥನ ಮಾಡಿದನು. ಅನಂತರ ಯಜ್ಞಕ್ಕೆ ಅನುಕೂಲವಾಗುವಂತೆ ಪೃಥ್ವಿಗೆ ಕರೆತಂದನು ಎಂದು ಪ್ರಸಿದ್ಧವಾದ ಕಥೆಯು ಸೂಕ್ಷ್ಮವಾಗಿ ಋಕ್ಸಂಹಿತೆಯಲ್ಲಿಯೂ ಅನೇಕ ಕಡೆ ಹೇಳಲ್ಪಟ್ಟಿದೆ. ಉದಾಹರಣೆಗೆ—

ಅನ್ಯಂ ದಿವೋ ಮಾತಾರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।
(ಋ. ಸಂ. ೧-೯೩-೬)

ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।
(ಋ. ಸಂ. ೬-೮-೪)

ಎಂಬ ಋಕ್ಕುಗಳಲ್ಲಿಯೂ ಸಹ ಇಲ್ಲಿ ಪ್ರಶಂಸಿಸುವಂತೆಯೇ ಅಗ್ನಿಪ್ರಶಂಸೆಯನ್ನು ಪೂರ್ವಕಥಾಸಂದರ್ಭದೊಡನೆ ವಿವರಿಸಿರುತ್ತೆ. ಹೀಗೆ ಮಾತರಿಶ್ವನು ಕರೆತಂದನಂತರವೇ ಅಗ್ನಿಯು ಯಜ್ಞಗೃಹದಲ್ಲಿ ಬೆಳಗಿದನು ಎಂದರ್ಥ.

### ಮಾತರಿಶ್ವಾ ಎಂಬ ದೇವತೆಯ ಸಾಮಾನ್ಯವಿವರಣೆ.

ಈ ದೇವತೆಯೊಂದನ್ನೇ ಸ್ತುತಿಸುವ ಸೂಕ್ತವೇ ಇಲ್ಲ. ಈ ಹೆಸರು ಬರುವುದೇ ಇಪ್ಪತ್ತೇಳುಸಲ. ಮಾತರಿಶ್ವನೂ ಅಗ್ನಿಯೂ ಒಂದೇ ಅಥವಾ ಮಾತರಿಶ್ವನು ಅಗ್ನಿಯನ್ನು ಉತ್ಪತ್ತಿಮಾಡುತ್ತಾನೆ ಎಂದು ತಿಳಿದು ಬರುತ್ತದೆ. ಮಾತರಿಶ್ವಾ ಎಂದು ಅಗ್ನಿಗೇ ಹೆಸರು. (೩-೫-೯; ೩-೨೬-೨; ೧-೯೬-೪). (೯-೮೮-೧೯) ರಲ್ಲಿರುವ ಸಂಬೋಧನೆಯೂ ಅಗ್ನಿಗೇ ಅನ್ವಯಿಸಬೇಕು. ಇನ್ನೊಂದುಕಡೆ, "ಸ್ವರ್ಗೀಯ ಅಣುರೂಪದಲ್ಲಿ" 'ತನೂನಪಾತ್' ಎಂದು ಹೆಸರು; ಜನಿಸಿದಮೇಲೆ 'ನರಾಶಂಸ' ನೆನ್ನಿಸಿಕೊಳ್ಳುತ್ತಾನೆ; ಮಾತರಿಶ್ವರೂಪನಾಗಿ ಉದ್ಭವಿಸಿದಾಗ, ಅವನೇ ಶೀಘ್ರಗತಿಯುಳ್ಳ ವಾಯುವಾಗುತ್ತಾನೆ (೩-೨೯-೧೧). ಒಬ್ಬನನ್ನೇ ಜ್ಞಾನಿಗಳು ನಾನಾ ನಾಮಗಳಿಂದ ಕರೆಯುತ್ತಾರೆ; ಅಗ್ನಿ, ಯಮ, ಮಾತರಿಶ್ವ ಮೊದಲಾಗಿ ಹೇಳುತ್ತಾರೆ (೧-೧೬೪-೪೬). ಅಗ್ನಿಗೆ ಸಮನೆಂದು ಅನೇಕಬಾರಿ ಹೇಳಲ್ಪಟ್ಟಿರುವ ಬೃಹಸ್ಪತಿ ಎಂಬ ನಾಮಧೇಯ ಮಾತರಿಶ್ವನಿಗೂ ಉಂಟು. "ಆ ಬೃಹಸ್ಪತಿಯೇ ಯಾಗಕಾಲದಲ್ಲಿ ಮಾತರಿಶ್ವನಾದನು" (೧-೧೯೦-೨).

ಇತರ ಕೆಲವು ಸ್ಥಳಗಳಲ್ಲಿ, ಅಗ್ನಿಯೂ ಮಾತರಿಶ್ವನೂ ಭಿನ್ನರೆಂದು ಉಕ್ತವಾಗಿದೆ. ಅವನ (ಅಗ್ನಿಯು) ಅತಿ ಎತ್ತರದಲ್ಲಿ ಸ್ವರ್ಗದಲ್ಲಿ ಜನಿಸಿ, ಮಾತರಿಶ್ವನಿಗೆ ಕಾಣಿಸಿಕೊಂಡನು (೧-೧೪೩-೨). ಅಗ್ನಿಯು ಆದಿಯಲ್ಲಿ ಮಾತರಿಶ್ವ ಮತ್ತು ವಿವಸ್ವತರಿಗೆ ಕಾಣಿಸಿದನು (೧-೩೧-೩). ತೇಜೋವಿಶಿಷ್ಟವಾದ ಗ್ರಹಗಳಲ್ಲಿ ಅತಿಶ್ರೇಷ್ಠನಾದುದರಿಂದ, ಅಗ್ನಿಯು ತನ್ನ ಜ್ವಾಲೆಗಳಿಂದ ಗಗನಮಂಡಲಕ್ಕೆ ಅಧಾರಭೂತನಾಗಿದಾನೆ; ನಿಗೂಢನಾಗಿದ್ದ ಆಹುತಿವಾಹಕನನ್ನು ಮಾತರಿಶ್ವನು ಪ್ರಜ್ವಲಿಸುವಂತೆ ಮಾಡಿದನು (೩-೫-೧೦). ಆಕಾಶದಿಂದ ಮಾತರಿಶ್ವನು ಒಬ್ಬನನ್ನು (ಅಗ್ನಿಯನ್ನು ತಂದನು; ಗಿಡುಗವು ಇನ್ನೊಬ್ಬನನ್ನು (ಸೋಮವನ್ನು) ಪರ್ವತದಿಂದ ತಂದಿತು (೧-೯೩-೬). ಮಾತರಿಶ್ವನು, ಪೂಜ್ಯನಾದ ಪುರೋಹಿತನೂ, ಸ್ವರ್ಗವಾಸಿಯೂ ಆದ ಅಗ್ನಿಯನ್ನು ತಂದನು (೩-೨-೧೩). ಭೃಗುವಿನಿಂದ ಜನಿತನಾದ (ಅಗ್ನಿಯನ್ನು) ದೇವತೆಗಳು ಮನುಷ್ಯರಿಗೆ ಆದಿ ಪುರೋಹಿತನನ್ನಾಗಿ ಮಾಡಿದರು (೧೦-೪೬-೯). ಮಾತರಿಶ್ವದೇವತೆಯು ಅವನನ್ನು (ಅಗ್ನಿಯನ್ನು) ಬಹಳ ದೂರದಿಂದ ಮನುಷ್ಯನಿಗೋಸ್ಕರ ತಂದನು (೧-೧೨೮-೨). ವಿಶ್ವವತನ ದೂತನಾದ ಮಾತರಿಶ್ವನು ಬಹಳ ದೂರದಿಂದ ವೈಶ್ವನರಾಗ್ನಿಯನ್ನು ತಂದನು; ಅವನನ್ನು ಬಲಿಷ್ಠರಾದವರು ನೀರಿನಲ್ಲಿ ಹಿಡಿದುಬಿಟ್ಟರು (೬-೮-೪). ಅರಣಿಮಥನದಿಂದ ಉದ್ಭೂತನೂ ನಿಗೂಢನೂ ಆಗಿದ್ದ ಅಗ್ನಿಯನ್ನು ಬಹಳ ದೂರದಿಂದ ಮಾತರಿಶ್ವನು ತಂದನು (೩-೯-೫) ನಿಗೂಢನಾಗಿದ್ದ ಅಗ್ನಿಯನ್ನು ಮಾತರಿಶ್ವನು ಮಥಿಸಿ ಉತ್ಪತ್ತಿ ಮಾಡಿದನು (೧-೧೪೧-೩) ಮಾತರಿಶ್ವನಿಂದ ಮಥಿಸಲ್ಪಟ್ಟು, ಅಗ್ನಿಯು ಮನುಷ್ಯರ ವಸತಿಗಳಲ್ಲಿ ಸ್ಥಾಪಿಸಲ್ಪಟ್ಟನು

(೧–೭೧-೪, ೧-೧೪೮-೧) ಇಂದ್ರನು ಸರ್ಪದ ಹಿಡಿತದಿಂದ ತ್ರಿತನಿಗಾಗಿ ಗೋವುಗಳನ್ನು ಬಿಡುಗಡೆಮಾಡಿ, ಗೋಶಾಲೆಗಳನ್ನು ದಧ್ಯಂಚ ಮತ್ತು ಮಾತರಿಶ್ವರಿಗೆ ಕೊಟ್ಟನು (೧೦-೪೮-೨).

ಋಗ್ವೇದದ ಕಡೆಯ ಭಾಗದ ಕೆಲವು ಸೂಕ್ತಗಳಲ್ಲಿ, ಮಾತರಿಶ್ವನ ವಿಷಯ ಪ್ರಸ್ತಾಪಿತವಾಗಿದ್ದರೂ, ಮಾತರಿಶ್ವನ ಸ್ವಭಾವ, ಗುಣ ಇತ್ಯಾದಿ ವಿಷಯದಲ್ಲಿ ಏನೂ ತಿಳಿದುಬರುವುದಿಲ್ಲ. ಎರಡು ಸ್ಥಳಗಳಲ್ಲಿ (೯-೬೭-೩೧ ; ೧೦-೧೧೪-೧), ಆವನು ಸೋಮವನ್ನು ಶೋಧಿಸಿ, ಅದನ್ನು ಪಾನಮಾಡುತ್ತಿದ್ದನೆಂದು ಹೇಳಿದೆ. ಇನ್ನೊಂದು ಸ್ಥಳದಲ್ಲಿ (ವಾಲ. ೪–೨) ಪಿತೃಗಣದಲ್ಲಿ ಈ ಹೆಸರು ಬಂದಿದೆ; ಅಲ್ಲಿ ಇಂದ್ರನು ಇವನ ಪಾರ್ಶ್ವದಲ್ಲಿ ಕುಳಿತು ಸೋಮಪಾನ ಮಾಡುತ್ತಾನೆ. ಒಂದುಸಲ ಉತ್ತಮ ಶಿಲ್ಪಿಗೆ ಹೋಲಿಸುವಂತೆ, ಇಂದ್ರನು ಇವನಿಗೆ ಹೋಲಿಸಲ್ಪಟ್ಟಿದ್ದಾನೆ (೧೦-೧೦೫-೬). ವಿವಾಹಸಂಬಂಧವಾದ ಸೂಕ್ತದಲ್ಲಿ, ಮಾತರಿಶ್ವನು ಇತರ ದೇವತೆಗಳ ಜೊತೆಯಲ್ಲಿ, ಪ್ರೇಮಿಗಳೀರ್ವರ ಹೃದಯಗಳನ್ನು ಪ್ರವೇಶಿಸಬೇಕೆಂದು ಪ್ರಾರ್ಥಿತನಾಗಿರುವಾಗಲೂ, ಈ ಕೌಶಲ್ಯವೇ ಉದ್ದಿಷ್ಟವಾಗಿರಬಹುದು. ಕಡೆಯದಾಗಿ, ಒಂದುಕಡೆ, ಮಾತರಿಶ್ವನು ಅಪಾರನೆಂದೂ, ಅಲೆದಾಡುತ್ತಿರುವವನೆಂದೂ ಹೇಳಿದೆ (೧೦-೧೦೯-೧). ಈ ಎರಡು ಗುಣಗಳೂ, ಮಾತರಿಶ್ವನೆಂದರೆ ವಾಯುವೆಂಬ ಅಭಿಪ್ರಾಯಕ್ಕೆ ಪೋಷಕವಾಗುತ್ತವೆ.

ಹೀಗೆ ಮಾತರಿಶ್ವನೆಂದರೆ, ಮೂರ್ತಿಮತ್ತಾದ ಸ್ವರ್ಗೀಯಾಗ್ನಿಯೆನ್ನಬಹುದು ; ಅಲ್ಲದೆ ಸ್ವರ್ಗದಿಂದ, ಭೂಲೋಕಕ್ಕೆ ಅಗ್ನಿಯನ್ನು ತಂದವನೂ ಇವನೇ. ಮಾತರಿಶ್ವನಿಗೆ ವಿದ್ಯುತ್ತೇ ಮೂಲವೆನ್ನಬಹುದು. ಅಗ್ನಿಯು ಈ ಎರಡು ಲೋಕಗಳ ಮಧ್ಯೆ ದೂತನಾಗಿರುವಂತೆ, ಮಾತರಿಶ್ವನು ವಿಶ್ವವತನ ದೂತನಾಗಿ ಸ್ವರ್ಗದಿಂದ ಭೂಮಿಗೆ ಬಂದನೆನ್ನಬಹುದು. ಅಥರ್ವವೇದದಲ್ಲಿಯೂ ಮಾತರಿಶ್ವ ಎಂಬುದು ಅಗ್ನಿಯ ನಾಮಧೇಯ (ಅ.ವೇ. ೧೦-೮-೩೯ ಮತ್ತು ೪೦) ; ಆದರೆ ಬ್ರಾಹ್ಮಣಾದಿಗಳಲ್ಲಿ, ಮಾತರಿಶ್ವನೆಂದರೆ ವಾಯುವೇ. ಈ ಅಭಿಪ್ರಾಯಕ್ಕೆ ಆಧಾರವು ಆಗಲೇ ಉಕ್ತವಾಗಿದೆ (೩-೨೯-೧೧) ವಾಯುಮಂಡಲದಲ್ಲಿ ಬುಸುಗುಟ್ಟುವ ಸರ್ಪದಂತಿದ್ದ ಅಗ್ನಿಯು ಬೇರೊಂದುಕಡೆ ರಭಸದಿಂದ ನುಗ್ಗುವ ಗಾಳಿಯೆಂದು ವರ್ಣಿತನಾಗಿದಾನೆ (೧-೭೯-೧).

ಮಾತರಿಶ್ವ ಎಂಬ ಪದಕ್ಕೆ ತಾಯಿಯಲ್ಲಿ ಬೆಳೆಯುವವನು, ರೂಪುಗೊಂಡವನು ಎಂಬರ್ಥವಾಗಬಹುದು. ಶು ಎಂಬ ಧಾತುವಿಗೆ ಅಭಿವೃದ್ಧಿಹೊಂದು, ಗಾತ್ರವಲ್ಲಿ ಹೆಚ್ಚಾಗು ಎಂದರ್ಥ. ಇದರಿಂದಲೇ ಶಿಶು ಮುಂತಾದ ಪದಗಳು ನಿಷ್ಪನ್ನವಾಗಿವೆ. ಮಾತರಿಶ್ವನಂತೆ ಅಗ್ನಿಯೂ ತಾಯಿಯರಲ್ಲಿ ಅಭಿವೃದ್ಧಿಹೊಂದುತ್ತಾನೆ (೧-೧೪೧-೫). ಮಾತರಿಶ್ವನಿಗೆ ಅನ್ವಯಿಸುವಾಗ, ಅರಣಿಯ ಕೆಳಭಾಗ, ಅಥವಾ ಮೇಘವು ಮಾತೃವಿರಬಹುದು. ಮಾತರಿಶ್ವನು ಅಂತರಿಕ್ಷದಿಂದ ಬರುವುದರಿಂದ ಮೇಘವು ಅವನ ಮಾತೃವು ಎಂದು ಹೇಳಬಹುದು. ಯಾಸ್ಕರ ಮತದಲ್ಲಿ ಮಾತರಿಶ್ವ ಎಂದರೆ ವಾಯುವು ; 'ಮಾತರಿ' ಎಂದರೆ ಅಂತರಿಕ್ಷದಲ್ಲಿ 'ಶ್ವನ್' ಉಸಿರಾಡುವವನು ಅಥವಾ 'ಆಶು ಅನ್' ಬೇಗಬೇಗ ಉಸಿರಾಡುವವನು ಅಂದರೆ ಗಾಳಿ ಎಂದರ್ಥ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ ತೃತೀಯೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

ಶುಭಂ ಭೂಯಾತ್

ಮಂಗಳಂ





॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಪ್ರಾಜ್ಞಃ ಶ್ರೀಸಾಯಣಾಚಾರ್ಯೋ ವ್ಯಾಖ್ಯಾಯ ಚರಮೇಽಷ್ಟಕೇ ।
ಸ್ಫುಟಂ ತೃತೀಯಮಧ್ಯಾಯಂ ಚತುರ್ಥಂ ವಕ್ತುಮುದ್ಯತಃ ॥

**ಸಾಯಣಭಾಷ್ಯಸಹಿತಾ**

# ಋಗ್ವೇದಸಂಹಿತಾ



## ॥ ಅಷ್ಟಮಾಷ್ಟಕೇ ಚತುರ್ಥೋಽಧ್ಯಾಯಃ ॥

**ಎಂಟನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು.**

## ಹತ್ತನೆಯ ಮಂಡಲದಲ್ಲಿ ಎಂಭತ್ತಾರನೆಯ ಸೂಕ್ತವು.

## ಪೀಠಿಕೆ.

---

ಈ ಸೂಕ್ತಕ್ಕೆ ಋಷಿಯು ಇಂದ್ರಪುತ್ರನಾದ ವೃಷಾಕಪಿ ಎಂದು ಹೇಳಿದೆ. ಈ ಸೂಕ್ತವು, ಇಂದ್ರ, ಇಂದ್ರಾಣೀ ಇಂದ್ರಪುತ್ರನಾದ ವೃಷಾಕಪಿ ಎಂಬ ಮೂವರಿಗೆ ನಡೆದ ಸಂವಾದವಾಗಿರುವುದು. ವೃಷಾಕಪಿಶಬ್ದಕ್ಕೆ ಯಾಸ್ಕರ ಈರೀತಿ ನಿರ್ವಚನವನ್ನು ಹೇಳಿರುವರು—

**ವೃಷಾಕಪಿಃ । ಅಥ ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ ವೃಷಾಕಂಪನಃ**

(ನಿ. ೧೨-೨೭)

ಯಾರು ತನ್ನ ರಶ್ಮಿಗಳಿಂದ ಪ್ರತಿಯೊಂದು ವಸ್ತುವನ್ನೂ ಕಂಪಿಸುವಂತೆ ಮಾಡುವನೋ ಅವನಿಗೆ ವೃಷಾಕಪಿಯೆಂದು ಹೆಸರು ಎಂದು ಆದಿತ್ಯನನ್ನುದ್ದೇಶಿಸಿ ಅರ್ಥಮಾಡಿದಾರೆ. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ ಪ್ರಕೃತಸೂಕ್ತದ–

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**
**ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದಾರೆ. ಈ ಋಕ್ಕಿನಲ್ಲಿರುವ ಸ್ವಪ್ನನಂಶನಃ ಎಂಬ ಶಬ್ದಕ್ಕೆ ತನ್ನ ಉದಯ ದಿಂದ ಪ್ರಾಣಿಗಳ ನಿದ್ರೆಯನ್ನು ಕೊನೆಗಾಣಿಸುವ ಎಂದರೆ ನಾಶಮಾಡುವ ಆದಿತ್ಯನೆಂದು ಅರ್ಥಮಾಡಿದಾರೆ. ಸಾಯಣರು ಆದಿತ್ಯಸ್ವರೂಪನೇ ವೃಷಾಕಪಿಯೆಂದು ಹೇಳಿದಾರೆ. ವೃಷಾಕಪಿ ಶಬ್ದಕ್ಕೆ ಆದಿತ್ಯನೆಂಬ ಅರ್ಥವು ಹೊಂದು ವುದಾದರೂ ಪ್ರಕೃತಸೂಕ್ತದಲ್ಲಿ ಉಕ್ತವಾಗಿರುವ ವೃಷಾಕಪಿಯು ಇಂದ್ರನ ಪುತ್ರನೆಂದೇ ತಿಳಿಯಬೇಕು. ಇದಲ್ಲದೆ ಇಂದ್ರನ ಪತ್ನಿಯಾದ ಇಂದ್ರಾಣಿಯ ವಿಷಯವನ್ನು ಹೇಳುವಾಗ ಯಾಸ್ಕರು—

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।**
**ಯಸ್ಯೇದಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ ಉತ್ತರಃ ॥**
(ಋ. ಸಂ. ೧೦-೮೬-೧೨)

ಎಂಬ ಋಕ್ಕನ್ನುದಾಹರಿಸಿ ಇಂದ್ರಾಣಿಯು ತನ್ನ ಪತ್ನಿಯೆಂದೂ, ವೃಷಾಕಪಿಯು ತಾಯಿಯೆಂದೂ ಇಂದ್ರನು ಸಂಬೋಧಿ ಸಿದಾನೆ (ನಿ. ೧೧-೩೯). ಇದಲ್ಲದೆ—

**ವೃಷಾಕಪಾಯೀ । ವೃಷಾಕಪಾಯೀ ವೃಷಾಕಪೇಃ ಪತ್ನ್ಯೈಷೈವಾಭಿಸೃಷ್ಟಕಾಲತಮಾ ॥**
(ನಿ. ೧೨ ೮)

ವೃಷಾಕಪಾಯೀ ಎಂದರೆ ವೃಷಾಕಪಿಯ (ಇಂದ್ರನ) ಪತ್ನಿಯೆಂದೂ, ವೃಷಾಕಪಿಯೆಂದರೆ ಆದಿತ್ಯನೆಂದೂ ಹೇಳಿದಾರೆ.

### ವೃಷಾಕಪಿಃ

ಪ್ರಕೃತವಾದ ಈ ಸೂಕ್ತದಲ್ಲಿ ನಿರ್ದಿಷ್ಟವಾಗಿರುವ **ವೃಷಾಕಪಿಯು** ಸ್ವರೂಪವೇನೆಂಬುದನ್ನು ನಿಷ್ಕೃಷ್ಟ ವಾಗಿ ಹೇಳುವುದು ಸುಲಭವಲ್ಲ. ಸ್ಥೂಲವಾಗಿ ನೋಡಿದರೆ, ವೃಷಾಕಪಿಯು ಇಂದ್ರನಿಗೆ ಪ್ರಿಯವಾದ ಒಂದು ವಾನರ ವೆಂದು ಹೇಳಬಹುದು. ಈ ವೃಷಾಕಪಿಯು ಇಂದ್ರಪತ್ನಿಯಾದ ಇಂದ್ರಾಣಿಯ ಮನಸ್ಸಿಗೆ ಒಂದು ಸನ್ನಿವೇಶದಲ್ಲಿ ಖೇದವನ್ನುಂಟುಮಾಡಿದಾಗ ಇಂದ್ರನಿಗೂ, ಇಂದ್ರಾಣಿಗೂ ನಡೆದ ಸಂಭಾಷಣೆ ಮತ್ತು ಮಧ್ಯದಲ್ಲಿ ವೃಷಾಕಪಿಯೂ ಈ ಸಂಭಾಷಣೆಯಲ್ಲಿ ಭಾಗವಹಿಸುವುದು ಇದೇ ಈ ಸೂಕ್ತದ ವಿಷಯ. ಇದರಲ್ಲಿ ಮೊದಲನೆಯ ಋಕ್ಕಿನ ಅರ್ಥವು ಎರಡು ವಿಧವಾಗಿ ಹೇಳಲ್ಪಟ್ಟಿದೆ. ಇದು ಇಂದ್ರನ ವಾಕ್ಯವೆಂದು ಒಂದು ಮತ ಇಂದ್ರಾಣಿಯ ವಾಕ್ಯವೆಂದು ಇನ್ನೊಂದು ಮತ.

ತನಗಾಗಿ ನಿರ್ದಿಷ್ಟವಾದ ಸೋಮವನ್ನು ವೃಷಾಕಪಿಯು ಪಾನಮಾಡಿ ತನಗೆ ಆ ಹರ್ಷವನ್ನು ತಪ್ಪಿಸಿದಾಗ್ಯೂ ತಾನೇ ಲೋಕಕ್ಕೆಲ್ಲ ಪ್ರಭುವು ಎಂಬ ಇಂದ್ರನ ಪ್ರಕಟನವು ಮೊದಲನೆಯ ವಿವರಣೆಯ ಪ್ರಕಾರ ತಿಳಿಯುತ್ತದೆ. ಅಲ್ಲದೇ, ಎರಡನೆಯದಾಗಿ—

ನನ್ನ ಪತಿಯಾದ ಇಂದ್ರನಿಗಾಗಿ ನಿರ್ದಿಷ್ಟವಾದ ಸೋಮವನ್ನು ವೃಷಾಕಪಿಯು ಪಾನಮಾಡಿ ನನ್ನ ಪತಿಗೆ ಈ ಹರ್ಷವನ್ನು ತಪ್ಪಿಸಿತು. ಆದರೂ ನನ್ನ ಪತಿಯಾದ ಇಂದ್ರನೇ ಲೋಕಕ್ಕೆಲ್ಲ ಪ್ರಭುವು ಎಂದು ಇಂದ್ರಾಣಿಯು ತಿಳಿಸುತ್ತಾಳೆಂದು ಒಂದು ತಾತ್ಪರ್ಯ. ಈ ವೃಷಾಕಪಿಯು ಯಾರು, ಇಂದ್ರನಿಗೂ ವೃಷಾಕಪಿಗೂ ಇರುವ ಸಂಬಂಧ ವನ್ನು ನಿಷ್ಕೃಷ್ಟವಾಗಿ ತಿಳಿಸಲು ಆಧಾರವಿದೆಯೇ ಇತ್ಯಾದಿಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿರುತ್ತದೆ.

ನಿರುಕ್ತ ಮತ್ತು ಬೃಹದ್ದೇವತಾವಾಕ್ಯಗಳು ವೃಷಾಕಪಿಯ ಸ್ವರೂಪವನ್ನು ಕೊಂಚಮಟ್ಟಿಗೆ ವಿವರಿಸುತ್ತವೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತ,

**ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ, ವೃಷಾಕಂಪನಃ ॥**

(ನಿ. ೧೨-೨೭)

ತನ್ನ ರಶ್ಮಿಗಳಿಂದ ಯಾರು ಸಮಸ್ತವನ್ನೂ ಕಂಪಿಸುವಂತೆ ಮಾಡುವನೋ ಅವನು ವೃಷಾಕಪಿ ಎಂದು ತಾತ್ಪರ್ಯವನು ಹೇಳಿದ್ದಾರೆ. ಅಲ್ಲದೇ ಋಕ್ಸಂಹಿತೆಯ,

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**
**ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೧)

ಎಂಬ ಋಕ್ಕನ್ನುದಾಹರಿಸಿ ಈ ಋಕ್ಕಿನಲ್ಲಿ ಪ್ರಯುಕ್ತವಾಗಿರುವ ವೃಷಾಕಪಿಪದದ ತಾತ್ಪರ್ಯವನ್ನೂ, ವೃಷಾಕಪಿಯ ಕರ್ಮವನ್ನೂ ವಿವರಿಸಿದ್ದಾರೆ. ಈ ಋಕ್ಕಿನ ತಾತ್ಪರ್ಯವು ಹೀಗಿದೆ. ಎಲೈ ವೃಷಾಕಪಿಯೇ, ನೀನು ಸ್ವಪ್ನನಾಶಕನು. ಪುನಃ ನೀನು ಈ ಮಾರ್ಗವಾಗಿ ಸಂಚರಿಸಲು ಬರಬೇಕು. ದಯಮಾಡಿ ಪುನಃ ಬಾ. ನಾವಿಬ್ಬರೂ ಸೇರಿ ಕಲ್ಯಾಣ ಕಾರಕವಾದ ಕರ್ಮವನ್ನು ನಿರ್ವಹಿಸೋಣ. ಈ ತಾತ್ಪರ್ಯವನ್ನು ಕೊಡುವ ಋಕ್ಕಿನಲ್ಲಿ **ವೃಷಾಕಪಿ**ಯೆಂದರೆ ಯಾರು ಎಂಬುದಕ್ಕೆ ನಿರುಕ್ತಕಾರರ ವಿವರಣವು ಹೀಗಿದೆ—

**ಪುನರೇಹಿ ವೃಷಾಕಪೇ ಸುಪ್ರಸೂತಾನಿ ವಃ ಕರ್ಮಾಣಿ ಕಲ್ಪಯಾವಹೈ । ಯ ಏಷ ಸ್ವಪ್ನ- ದರ್ಶನಃ ಸ್ವಪ್ನಾನ್ ನಾಶಯಸಿ ಆದಿತ್ಯ ಉದಯೇನ ಸೋಽಸ್ತಮೇಷಿ ಯಥಾ ಪುನಃ । ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮ ಆದಿತ್ಯಂ ॥**

(ನಿ. ೧೨-೨೮)

ಎಲೈ ವೃಷಾಕಪಿಯೇ, ನೀನು ಸ್ವಪ್ನನಾಶಕನು ಎಂದರೆ, ಪ್ರಾತಃಕಾಲದಲ್ಲಿ ನೀನು ಉದಯಿಸಿದೊಡನೆಯೇ ಸಕಲರ ನಿದ್ರೆಯೂ ನಾಶವಾಗುವುದರಿಂದ ನೀನು ಆದಿತ್ಯನು. ನಿನ್ನ ಕರ್ಮಾನುರೋಧವಾಗಿ ನೀನು ಪುನಃ ಉದಯಿಸಬೇಕು. ನಿನ್ನ ಪುನರುದಯಾನಂತರ ನಾವಿಬ್ಬರೂ ಸೇರಿ ಕಲ್ಯಾಣಕಾರಕವಾದ ಕರ್ಮವನ್ನು ನಿರ್ವಹಿಸೋಣ. ಇಂದ್ರರೂಪನಾದ ಸೂರ್ಯನನ್ನು ಉದ್ದೇಶಿಸಿ ಇದೇ ಪ್ರಶಂಸೆಯನ್ನು ಹೇಳುತ್ತಾರೆ ಎಂದು ವೃಷಾಕಪಿ, ಇಂದ್ರ ಇವರಿಬ್ಬರೂ ಆದಿತ್ಯನ ವಿಭೂತಿವಿಶೇಷಗಳೆಂದೇ ತಿಳಿಸಿದೆ. ಬೃಹದ್ದೇವತಾಕಾರರೂ ವೃಷಾಕಪಿಯನ್ನು ಆದಿತ್ಯಲೋಕಕ್ಕೆ ಸೇರಿದ ದೇವತೆಯೆಂದು ನಿರ್ದೇಶಿಸಿದ್ದಾರೆ.

**ವೃಷಾಕಪಾಯೀಂ ಸೂರ್ಯಸ್ಯ ತಾಮೇವಾಹುಸ್ತು ನಿಮ್ರುಚಿ ।**
**ತಸ್ಯಾಶ್ರಯೇ ಸರಣ್ಯೂಶ್ಚ ಭಗಃ ಪೂಷಾ ವೃಷಾಕಪಿಃ ॥**

(ಬೃ. ದೇ. ೨-೧೦)

ವೃಷಾಕಪಾಯೀ, ಸೂರ್ಯಾ, ಉಷಸ್ಸು ಇವರು ಸೂರ್ಯನ ಪತ್ನಿಯರು. ಸೂರ್ಯಾಸ್ತಮಯಕಾಲದಲ್ಲಿ ಸೂರ್ಯ ಮತ್ತು ವೃಷಾಕಪಾಯಿಯರ ಸಂಬಂಧವು ಅಧಿಕವಾಗಿರುತ್ತದೆ. ಸರಣ್ಯು, ಭಗ, ಪೂಷ ಮತ್ತು ವೃಷಾಕಪಿ ಇವರೆಲ್ಲರೂ ಸೂರ್ಯನ ಆಶ್ರಯಕ್ಕೆ ಸೇರಿದವರು ಎಂದು ನಿರುಕ್ತಕಾರರ ತಾತ್ಪರ್ಯವನ್ನು ಅನುಮೋದಿಸುವ ವಿವರವಿರುತ್ತದೆ. ನಂತರ ಈ ಪದದ ನಿರ್ವಚನವು ಈರೀತಿಯಿರುತ್ತದೆ.

**ವೃಷ್ವೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।**
**ವೃಷಾಕಪಿರಸೌ ತೇನ ವಿಶ್ವಸ್ಮಾದಿಂದ್ರ ಉತ್ತರಃ ।**
**ರಶ್ಮಿಭಿಃ ಕಂಪಯನ್ನೇತಿ ವೃಷಾ ವರ್ಷಿಷ್ಠ ಏವ ಸಃ ॥** (ಬೃ. ದೇ. ೨-೬೭)

ಕಪಿಲವರ್ಣಾತ್ಮಕವಾದ **ವೃಷವು ನಾಕ**ವನ್ನು ಹತ್ತುವುದರಿಂದ ಇದಕ್ಕೆ **ವೃಷಾಕಪಿ**ಯೆಂದು ಹೆಸರು. ಆದುದರಿಂದ **ವಿಶ್ವಸ್ಮಾದಿಂದ್ರ ಉತ್ತರಃ** ಎಂಬ ವಾಕ್ಯವನ್ನೊಳಗೊಂಡ ಸೂಕ್ತದಲ್ಲಿ ವರ್ಣಿತವಾಗಿರುವ ವೃಷಾಕಪಿಯು ಕಂಪಿಸುವಂತೆ ಮಾಡುವ ಆದಿತ್ಯನೇ ಆಗಿರಬೇಕು.

**ಸಾಯಾಹ್ನಕಾಲೇ ಭೂತಾನಿ ಸ್ವಾಪಯನ್ನಸ್ತಮೇತಿ ಯತ್ ।**
**ವೃಷಾಕಪಿರಿತೋ ವಾ ಸ್ಯಾದಿತಿ ಮಂತ್ರೇಷು ದೃಶ್ಯತೇ ॥**

(ಬೃ. ದೇ. ೨.೬೮)

ಅಲ್ಲದೇ, ಸಾಯಂಕಾಲದಲ್ಲಿ ಸಕಲ ಭೂತಗಳನ್ನೂ ನಿದ್ರೆಮಾಡುವಂತೆ ಮಾಡಿಸಿ ತಾನು ಅಸ್ತನಾಗುತ್ತಾನೆ- **ಧನ್ವ ಚ ಯತ್ಕೃಂತತ್ರಂ** ಎಂಬ ಮಂತ್ರದಿಂದ ಹಿಡಿದು **ಯದುದಂಚೋ ವೃಷಾಕಪೇ** ಎಂಬ ಮಂತ್ರದ ವರೆಗೆ (೨೦-೨೨) ವೃಷಾಕಪಿಗೆ ಇಂದ್ರನ ನಿಷ್ಕೃಷ್ಟವಾದ ನಿರ್ದೇಶವಿರುತ್ತದೆ. ಹೀಗೆ ವೃಷಾಕಪಿಯು ಸೂರ್ಯ ಲೋಕಕ್ಕೆ ಸೇರಿದ ಮತ್ತು ಸೂರ್ಯಾಂಶವನ್ನೂ ಪ್ರತಿಬಿಂಬಿಸುವ ದೇವತೆಯೆಂದು ಮೇಲಿನ ವಿವರಗಳಿಂದ ತಿಳಿಯುತ್ತದೆ.

**ಚಕಾರ ಹರಿತೋ ಮೃಗಃ** (ಋ. ಸಂ. ೧೦-೮೬-೩) ಇತ್ಯಾದಿ ವಾಕ್ಯಗಳಲ್ಲಿರುವ ಮೃಗಶಬ್ದದಿಂದ ವೃಷಾಕಪಿಯು ಮೃಗಜಾತಿಗೆ ಸೇರಿದುದಾಗಿದೆ ಎಂದು ಕೆಲವರ ಮತ. ಆದರೆ, ಮೃಗಶಬ್ದಕ್ಕೂ ಆದಿತ್ಯಪರವಾಗಿಯೇ ಅರ್ಥಮಾಡಿದೆ. ನಿರುಕ್ತಕಾರರು ಋಕ್ಸಂಹಿತೆಯ,

**ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಂತನ ।**
**ಕ್ವ೧ಸ್ಯ ಪುಲ್ವಘೋ ಮೃಗಃ ಕಮಗಂಜನಯೋಪನೋ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೨)

ಎಂಬ ಋಕ್ಕನ್ನುದಾಹರಿಸಿ ಈ ವಿಷಯವನ್ನು ವಿಶದಪಡಿಸುತ್ತಾರೆ. **ತ ಏತದ್ವಃ ಬ್ರೂಮ ಆದಿತ್ಯಂ** ಎಂದು (ನಿ. ೧೩-೩) ಇಲ್ಲಿಯೂ ಆದಿತ್ಯಪರವಾಗಿಯೇ ಅರ್ಥಮಾಡಿದ್ದಾರೆ. ಇಲ್ಲಿ **ಮೃಗ** ಶಬ್ದವನ್ನು ದುರ್ಗಾಚಾರ್ಯರು

ವಿವರಿಸುತ್ತ (ನಿ. ೧೩-೩) ಈ ಶಬ್ದಕ್ಕೆ **ಆದಿತ್ಯ** ಪರವಾದ ಅರ್ಥವು ಹೇಗೆ ಸಾಧ್ಯವೆಂದು ತಿಳಿಸಲು **ಪುಲ್ವಘಃ** ಎಂಬ ವಿಶೇಷಣವನ್ನು ವಿವರಿಸುತ್ತಾರೆ.

**ಪುಲ್ವಘಃ** ಎಂದರೆ ಅಧಿಕವಾಗಿ ಭಕ್ಷಿಸುವವನು (**ಬಹ್ವಾದೀ**) ಎಂದು ನಿರುಕ್ತಕಾರರೇ ಹೇಳಿದ್ದಾರೆ. ಬಹುವಾಗಿ ಭಕ್ಷಿಸುವವನು ಎಂದರ್ಥ. ಅದು ಹೇಗೆಂದರೆ—**ಬಹ್ವಸೌ ಅತ್ತಿ ಸರ್ವಪ್ರಾಣಿಷ್ವವಸ್ಥಿತಃ**—

**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ॥
(ಋ. ಸಂ. ೧-೧೧೫-೧)

ಎಂಬ ವಾಕ್ಯದಲ್ಲಿ ವರ್ಣಿತವಾಗಿರುವಂತೆ ಸೂರ್ಯನೇ ಸಕಲ ಪ್ರಾಣಿಗಳ ಆತ್ಮನಲ್ಲೂ ವ್ಯಾಪಿಸಿರುವುದರಿಂದಲೂ **ಆದ್ಯತೇಽತ್ತಿ ಚ ಭೂತಾನಿ** ಇತ್ಯಾದಿ ಉಪನಿಷದ್ವಾಕ್ಯಗಳು ಆದಿತ್ಯರೂಪನಾದ ಪರಬ್ರಹ್ಮನ ಭಕ್ಷಕಸ್ವರೂಪವನ್ನು ವಿವರಿಸುವುದರಿಂದಲೂ, ಪ್ರಕೃತದಲ್ಲೂ **ಪುಲ್ವಘಃ ಮೃಗಃ** ಎಂಬುದಕ್ಕೆ ಆದಿತ್ಯನೆಂದೇ ಅರ್ಥಮಾಡಿದ್ದಾರೆ.

ಈ ಸೂಕ್ತದಲ್ಲಿ ಇಂದ್ರ, ಇಂದ್ರಾಣೀ, ಇಂದ್ರಪುತ್ರನಾದ ವೃಷಾಕಪಿ ಎಂಬುವರ ಸಂವಾದವು ಉಕ್ತವಾಗಿದೆ ಯೆಂದು ಹಿಂದೆಯೇ ಹೇಳಿದೆಯಷ್ಟೆ. ಆ ಸಂವಾದವನ್ನೇ ಇಲ್ಲಿ ಸಂಕ್ಷೇಪವಾಗಿ ವಿವರಿಸಿದೇವೆ—

(೧) ಇಂದ್ರ—ನಾನು ಸಮಸ್ತ ಜಗತ್ತಿಗಿಂತಲೂ ಶ್ರೇಷ್ಠನಾದವನು, ಎಲ್ಲರಿಗಿಂತಲೂ ಅಧಿಕನು. ಆದರೂ ನನ್ನಿಂದಲೇ ಆಜ್ಞಪ್ತರಾದ ಋತ್ವಿಕ್ಕುಗಳು ತಾವು ಮಾಡಿದ ಸೋಮಯಾಗದಲ್ಲಿ ನನ್ನ ಪುತ್ರನಾದ ವೃಷಾಕಪಿಯನ್ನೇ ಸ್ತುತಿಸಿದರು. ಆ ಯಾಗದಲ್ಲಿ ಅವನು ಸೋಮಪಾನದಿಂದ ತೃಪ್ತಿಯನ್ನು ಪಡೆದನು. ಆ ಯಾಗದಲ್ಲಿ ನನಗಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಲಿಲ್ಲ ಮತ್ತು ನನ್ನನ್ನು ಸ್ತುತಿಸಲೂ ಇಲ್ಲ.

(೨) ಇಂದ್ರಾಣೀ (ಇಂದ್ರನ ಪತ್ನಿ)—ಎಲೈ ಇಂದ್ರನೇ, ನಿನ್ನ ಮನಸ್ಸು ವ್ಯಥೆಯಿಂದ ಯಾವಾಗಲೂ ವೃಷಾಕಪಿಯ ಕಡೆಗೇ ಓಡುತ್ತಿರುವುದು. ನೀನು ಸೋಮಪಾನಾರ್ಥವಾಗಿ ಮತ್ತೆಲ್ಲಿಗೂ ಹೋಗುವುದೇ ಇಲ್ಲ.

(೩) ಎಲೈ ಇಂದ್ರನೇ, ಕೇವಲ ಪಶುವಿನಂತಿರುವ ಆ ವೃಷಾಕಪಿಯು ನಿನಗೆ ಹಿತಕರವಾದ ಏನು ಉಪಕಾರ ಮಾಡಿದಾನೆ? ಏನು ಮಾಡದಿದ್ದರೂ ನೀನು ಅವನಿಗೆ ಉದಾರವಾಗಿ ಧನವನ್ನೂ, ಆಹಾರವನ್ನೂ ಒದಗಿಸಿ ಕೊಡುತ್ತೀಯಲ್ಲವೇ.

(೪) ಎಲೈ ಇಂದ್ರನೇ, ನೀನು ಅತ್ಯಂತ ಪ್ರೀತಿಯಿಂದ ಕಾಪಾಡಬಯಸುವ ನಿನ್ನ ಪುತ್ರನಾದ ಈ ವೃಷಾಕಪಿಯನ್ನು, ಬೇಟೆನಾಯಿಯು ಕಾಡುಹಂದಿಯನ್ನು ಕಿವಿಯಿಂದ ಕಚ್ಚಿ ಕೊಂದುತಿನ್ನುವಂತೆ, ಹಿಡಿದು ಭಕ್ಷಿಸಲಿ.

(೫) ಯಜ್ಞದಲ್ಲಿ ಯಜಮಾನರು ನನಗಾಗಿ ಸಿದ್ಧಪಡಿಸಿದ್ದ ಆಜ್ಯಯುಕ್ತವಾದ ಹವಿಸ್ಸನ್ನು ಈ ದುಷ್ಟಕಪಿಯು ಕೆಡಿಸಿ ಹಾಳುಮಾಡಿದೆ. ಇದರ ಶಿರಸ್ಸನ್ನು ಕತ್ತರಿಸಿಹಾಕುತ್ತೇನೆ. ಕೆಟ್ಟಕೆಲಸವನ್ನು ಮಾಡುವವರಿಗೆ ನಾನು ಎಂದಿಗೂ ಸುಖವನ್ನುಂಟುಮಾಡಲು ಬಯಸುವುದಿಲ್ಲ.

(೬) ನನಗಿಂತಲೂ ಅಧಿಕ ಸೌಭಾಗ್ಯವುಳ್ಳ ಸ್ತ್ರೀಯು ಮತ್ತಾರೂ ಇಲ್ಲ. ಒಳ್ಳೆಯ ಪುತ್ರರನ್ನು ಪಡೆದ ಸ್ತ್ರೀಯು ನನಗಿಂತ ಬೇರೆ ಯಾರೂ ಇಲ್ಲ. ತನ್ನ ಪತಿಯನ್ನು ಅನುಸರಿಸಿ ಅವನೊಡನೆ ಹೊಂದಿಕೊಂಡು ಅವನ ಇಚ್ಛೆಯನ್ನು ಪೂರ್ತಿಮಾಡುವ ಸ್ತ್ರೀಯು ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ.

(೭) ವೃಷಾಕಪಿ—ಎಲೈ ಮಾತೆಯೇ, ನೀನು ಹೇಳಿದಂತೆಯೇ ಎಲ್ಲವೂ ಬೇಗ ನೆರವೇರಲಿ. ನನ್ನ ತಂದೆಯಾದ ಇಂದ್ರನು ನಿನ್ನ ಸಂಗದಿಂದ ಸುಖವನ್ನು ಪಡೆಯಲಿ. ನೀನು ಪತಿಯೊಡನಿರುವಾಗ ಅವನಿಗೆ ಸೌಖ್ಯವುಂಟಾಗಲಿ. ಕೋಕಿಲಾದಿ ಪಕ್ಷಿಗಳ ಗಾನದಂತೆ ನಿನ್ನ ಪ್ರಿಯಾಲಾಪಗಳಿಂದ ನನ್ನ ತಂದೆಯು ಹರ್ಷವನ್ನನುಭವಿಸಲಿ.

(೮) ಇಂದ್ರ—(ಇಂದ್ರಾಣಿಯನ್ನುದ್ದೇಶಿಸಿ) ಎಲೈ ಶೋಭನಾಂಗಿಯೇ, ನೀನು ವೀರಪತ್ನಿಯು, ನಿನ್ನ ಬಾಹುಗಳು ಕೋಮಲವಾಗಿವೆ, ನಿನ್ನ ಬೆರಳುಗಳು ಚೆನ್ನಾಗಿವೆ. ನಿನ್ನ ಕೇಶರಾಶಿಗಳು ನೀಳವಾಗಿಯೂ, ಕಪ್ಪಾಗಿಯೂ ಇವೆ. ನಿನ್ನ ಜಘನಪ್ರದೇಶವು ವಿಸ್ತೃತವಾಗಿದೆ. ಹೀಗಿರುವ ನೀನು ನಮ್ಮ ಪುತ್ರನಾದ ವೃಷಾಕಪಿಯ ಮೇಲೆ ಏಕೆ ಕೋಪಿಸಿಕೊಳ್ಳುವೆ ?

(೯) ಇಂದ್ರಾಣಿ—ಈ ದುಷ್ಟಮೃಗವು ನನ್ನನ್ನು ಪುರುಷರ ರಕ್ಷಣೆಯೇ ಇಲ್ಲದಿರುವವಳಂತೆ ತಿಳಿದು ತಿರಸ್ಕಾರ ಭಾವದಿಂದ ಮಾತನಾಡುತ್ತದೆ. ನನಗೆ ವೀರನಾದ ಇಂದ್ರನೇ ಪತಿಯು, ನನಗೆ ಶೂರರಾದ ಪುತ್ರರಿದಾರೆ. ವೀರರಾದ ಮರುತ್ತುಗಳೂ ನನ್ನ ಮಿತ್ರರೇ ಆಗಿದಾರೆ.

(೧೦) ಈ ಇಂದ್ರಾಣಿಯು (ನಾನು) ಸತ್ಯದ ನಿರ್ಮಾತ್ರಿಯು, ವೀರಪುತ್ರರನ್ನು ಪಡೆದಿರುವವಳು, ಶೂರನಾದ ಇಂದ್ರನ ಭಾರ್ಯೆಯು. ಸ್ತೋತೃಜನರಿಂದ ಪ್ರಾರ್ಥಿತಳಾಗಿ ಅವರನ್ನು ಅನುಗ್ರಹಿಸುವುದಕ್ಕಾಗಿ ಅವರು ಮಾಡುವ ಯುದ್ಧಕ್ಕಾಗಲಿ, ಯಜ್ಞಭೂಮಿಗಾಗಲಿ ಹೋಗುತ್ತಾಳೆ.

(೧೧) ಇಂದ್ರ—(ಇಂದ್ರಾಣಿಯನ್ನುದ್ದೇಶಿಸಿ) ಸೌಭಾಗ್ಯಸಂಪನ್ನರಾದ ಸ್ತ್ರೀಯರಲ್ಲೆಲ್ಲಾ ಈ ಇಂದ್ರಾಣಿಯು ಅತ್ಯಂತ ಸೌಭಾಗ್ಯಯುಕ್ತಳೆಂದು ನಾನು ಕೇಳಿದೇನೆ. ಏಕೆಂದರೆ ಈ ಇಂದ್ರಾಣಿಯ ಪತಿಯಾದ ಇಂದ್ರನು ಎಲ್ಲರಿಗಿಂತಲೂ ಶ್ರೇಷ್ಠನು. ಸಾಮಾನ್ಯ ಜನರಂತೆ ಅವನು ಮುಪ್ಪಿನಿಂದ ಮೃತ್ಯುವಶನಾಗುವುದಿಲ್ಲ.

(೧೨) ಎಲೈ ಇಂದ್ರಾಣಿಯೇ, ನನಗೆ ಮಿತ್ರನಂತಿರುವ ನನ್ನ ಪುತ್ರನಾದ ವೃಷಾಕಪಿಯು ನನ್ನೊಡನಿಲ್ಲದಿದ್ದರೆ ನನಗೆ ಹರ್ಷವಿರುವುದಿಲ್ಲ. ಆ ವೃಷಾಕಪಿಯಿಂದ ಸಿದ್ಧಗೊಳಿಸಲ್ಪಟ್ಟು ಉದಕದಿಂದ ಸಂಸ್ಕರಿಸಲ್ಪಟ್ಟ ಶುದ್ಧವಾದ ಹವಿಸ್ಸು ದೇವತೆಗಳಿಗೆ ಅತ್ಯಂತ ಪ್ರೀತಿಪಾತ್ರವಾಗಿರುತ್ತದೆ.

(೧೩) ವೃಷಾಕಪಿ—ಎಲೈ (ವೃಷಾಕಪಿಯಾದ ನನ್ನ) ಮಾತೆಯಾದ ವೃಷಾಕಪಾಯಿಯೇ (ಇಂದ್ರಾಣಿಯೇ), ನೀನು ಧನವಂತಳು, ನಿನಗೆ ಶ್ರೇಷ್ಠರಾದ ಪುತ್ರರಿದಾರೆ ಮತ್ತು ಉತ್ತಮ ಸೊಸೆಯರೂ ಇದಾರೆ. ನೀನು ನಿನ್ನ ಪತಿಯಾದ ಇಂದ್ರನಿಗಾಗಿ ಪ್ರೀತಿಯಿಂದ ಅರ್ಪಿಸುವ ಹವಿರೂಪವಾದುದೂ ಇಂದ್ರನಿಗೆ ಪ್ರಿಯಕರವಾದುದೂ ಆದ ಪಶುಗಳನ್ನು (ಪಶುಗಳ ಮಾಂಸವನ್ನು) ತಿನ್ನಲಿ.

(೧೪) ಇಂದ್ರ-ನನ್ನ ಪತ್ನಿಯಾದ ಇಂದ್ರಾಣಿಯಿಂದ ಪ್ರೇರಿತರಾದ ಯಜ್ಞಕರ್ತರು ನನ್ನ ತೃಪ್ತಿಗಾಗಿ ಹದಿನೈದು ಅಥವಾ ಇಪ್ಪತ್ತು ವೃಷಭ (ಎತ್ತು ಅಥವಾ ಹೋರಿ) ಗಳನ್ನು ಎಂದರೆ ಅವುಗಳ ಮಾಂಸವನ್ನು ಪಕ್ವಮಾಡುತ್ತಾರೆ. ಅವುಗಳನ್ನು ನಾನು ಭಕ್ಷಿಸಿ ಪುಷ್ಟನಾಗುತ್ತೇನೆ. ಅವು ನನ್ನ ಉದರದ ಎರಡು ಪಾರ್ಶ್ವಗಳನ್ನೂ ತುಂಬುತ್ತವೆ ಮತ್ತು ನನ್ನ ಉದರವನ್ನು ಸೋಮರಸದಿಂದ ಯಜಮಾನರು ತುಂಬುತ್ತಾರೆ.

(೧೫) ಇಂದ್ರಾಣೀ—ಎಲೈ ಇಂದ್ರನೇ, ಹರಿತವಾದ ಕೊಂಬುಗಳುಳ್ಳ ವೃಷಭವು ಗೋವುಗಳ ಹಿಂಡಿನಲ್ಲಿ ಗುಟುರುಹಾಕುತ್ತಾ ಹೇಗೆ ಹರ್ಷದಿಂದಿರುವುದೋ ಅದರಂತೆ ನಾನು ನಿನ್ನ ಹರ್ಷಕ್ಕಾಗಿ ಹಿಂಡಿ ಸಿದ್ಧಪಡಿಸುವ ಸೋಮ ರಸವು ನಿನಗೆ ತೃಪ್ತಿಯನ್ನುಂಟುಮಾಡಿ ಹರ್ಷದಾಯಕವಾಗಿರಲಿ.

(೧೬) ಎಲೈ ಇಂದ್ರನೇ, ಯಾವ ಪುರುಷನ ಜನನೇಂದ್ರಿಯವು ಎರಡು ತೊಡೆಗಳ ಮಧ್ಯದಲ್ಲಿ ನೇತಾಡುತ್ತಾ ಸುಪ್ತಾವಸ್ಥೆಯಲ್ಲಿ ಮಾತ್ರವಿರುತ್ತಾ ಶಕ್ತಿಹೀನವಾಗಿರುವುದೋ ಅಂತಹ ಪುರುಷನು ಸ್ತ್ರೀಯೊಡನೆ ಮೈಥುನಕರ್ಮ ವನ್ನೆಸಗಲು ಎಂದರೆ ಸ್ತ್ರೀಸಂಭೋಗಮಾಡಲು ಶಕ್ತನಾಗಿರುವುದಿಲ್ಲ. ಆದರೆ ಯಾವ ಪುರುಷನ ಜನನೇಂದ್ರಿಯದ ದಂಡವು ಉದ್ರಿಕ್ತಾವಸ್ಥೆಯಲ್ಲಿ ನೇರವಾಗಿ ನಿಲ್ಲಲು ಶಕ್ತವಾಗುವುದೋ ಅಂತಹ ಪುರುಷನು ಮಾತ್ರ ಸ್ತ್ರೀಯೊಡನೆ ರತಿಕರ್ಮವನ್ನೆಸಗಲು ಸಮರ್ಥನಾಗುತ್ತಾನೆ.

(೧೭) ಇಂದ್ರ—ಎಲೈ ಇಂದ್ರಾಣಿಯೇ, ನೀನು ಹೇಳುವುದು ಸರಿಯಲ್ಲ. ಯಾವ ಪುರುಷನ ಸುಪ್ತಾವಸ್ಥೆ ಯಲ್ಲಿರುವ ಪುರುಷಲಿಂಗವು ಉದ್ರಿಕ್ತಾವಸ್ಥೆಯಲ್ಲಿ ನೆಟ್ಟಗೆ ನಿಲ್ಲುವುದೋ ಆ ಪುರುಷನು ಸ್ತ್ರೀಸಂಭೋಗಮಾಡಲು ಶಕ್ತನಲ್ಲ; ಯಾವ ಪುರುಷನ ಜನನೇಂದ್ರಿಯದ ಲಿಂಗವು ಎರಡು ತೊಡೆಗಳ ಮಧ್ಯದಲ್ಲಿ ನಿಸ್ಸತ್ತ್ವವಾಗಿ ಜೋಲಾಡು ತ್ತಿರುವುದೋ ಅಂತಹ ಪುರುಷನೇ ಸ್ತ್ರೀಸಂಗವನ್ನು ಮಾಡಲು ಸಮರ್ಥನು.

(೧೮) ಇಂದ್ರಾಣೀ—ಈ ವೃಷಾಕಪಿಯು ತನ್ನದಲ್ಲದ ಒಂದು ಸತ್ತ ಪ್ರಾಣಿಯನ್ನು ತೆಗೆದುಕೊಳ್ಳಲಿ. ಅದನ್ನು ಕತ್ತರಿಸಲು ಹರಿತವಾದ ಕತ್ತಿಯನ್ನೂ, ಅದನ್ನು ಪಾಕಮಾಡಲು ಸೌಟನ್ನೂ, ಹೊಸ ಬಾಂಡಲೆಯನ್ನೂ, ಬೇಯಿಸುವುದ ಕ್ಕಾಗಿ ಒಂದು ಗಾಡಿತುಂಬ ಸೌದೆಯನ್ನೂ ಸಿದ್ಧಪಡಿಸಿಕೊಳ್ಳಲಿ.

(೧೯) ಇಂದ್ರ—ಎಲೈ ಇಂದ್ರಾಣಿಯೇ, ಯಜ್ಞಮಾಡುತ್ತಿರುವ ಯಜಮಾನರ ಯಜ್ಞಕರ್ಮವನ್ನು ನೋಡುತ್ತಾ ಅಲ್ಲಿಗೆ ಬರುತ್ತೇನೆ. ಇವರಲ್ಲಿ ದಾಸಜನರು (ದಸ್ಯುಜನರು ಕಪ್ಪುವರ್ಣದವರು) ಯಾರು, ಆರ್ಯಜನರು ಯಾರು ಎಂಬುದನ್ನು ತಿಳಿದುಕೊಳ್ಳುತ್ತೇನೆ. ಒಳ್ಳೆಯ ಮನಸ್ಸಿನಿಂದ ನನಗಾಗಿ ಯಾರು ಸೋಮರಸವನ್ನು ಸಿದ್ಧಪಡಿಸು ವರೋ ಆ ಸೋಮವನ್ನು ಮಾತ್ರ ಪಾನಮಾಡುತ್ತೇನೆ. ಮತ್ತು ಶ್ರೇಷ್ಠನಾದ ಯಜಮಾನನನ್ನು ಅನುಗ್ರಹಬುದ್ಧಿ ಯಿಂದ ನೋಡುತ್ತೇನೆ.

(೨೦) ಎಲೈ ವೃಷಾಕಪಿಯೇ, ನಮ್ಮ ಮನೆಗೂ ಇಲ್ಲಿಗೂ ಮಧ್ಯದಲ್ಲಿ ಅರಣ್ಯವೂ, ಬೆಂಗಾಡು ಪ್ರದೇಶವೂ ಇರುವುದು. ಇದು ಎಷ್ಟುದೂರದವರೆಗಿರುವುದೋ ? ಇದರಲ್ಲಿ ಶತ್ರುಗಳಿರಬಹುದು. ಆದ್ದರಿಂದ ಇಲ್ಲಿಂದ ಹೊರಟು ನಮ್ಮ ಮನೆಗೆ ಹೋಗಿ ಅಲ್ಲಿರುವ ಯಜ್ಞಗೃಹದ ಸಮೀಪಕ್ಕೆ ಹೋಗು.

(೨೧) ಎಲೈ ವೃಷಾಕಪಿಯೇ, ನಮ್ಮ ಮನೆಗೆ ಹಿಂತಿರುಗಿ ಬಾ. ನಾನೂ ಇಂದ್ರಾಣಿಯೂ ನಿನಗೆ ಹಿತವಾದ ಕಾರ್ಯಗಳನ್ನೇ ಮಾಡಬೇಕೆಂದಿರುವೆವು. ಆದ್ದರಿಂದ ತನ್ನ ಉದಯದಿಂದ ಪ್ರಾಣಿಗಳ ನಿದ್ರಾಭಂಗವನ್ನುಂಟುಮಾಡುವ ಆದಿತ್ಯನ ಸ್ವರೂಪವಾದ ನೀನು ನೇರವಾದ ಮಾರ್ಗದಿಂದ ಮನೆಗೆ ಬಾ.

(೨೨) ಇಂದ್ರಾಣೀ—ಎಲೈ ವೃಷಾಕಪಿಯೇ, ಇಂದ್ರನೇ, ಎದ್ದೇಳಿ, ಮನೆಗೆ ಬನ್ನಿ. ವಿನಾಶಕರವಾದ ಆ ಹಾಳು ಮೃಗವು ಎಲ್ಲಿಗೆ ಹೋಯಿತು ?

(೨೩) ವೃಷಾಕಪಿಃ—ಎಲೈ ಇಂದ್ರ ವಿಸೃಷ್ಟವಾದ ಬಾಣವೇ, ಮನುವಿನ ಪುತ್ರಿಯಾದ ಪರ್ಶು ಎಂಬ ಹೆಣ್ಣು ಮಗಳು ಏಕಕಾಲದಲ್ಲಿ ಇಪ್ಪತ್ತು ಮಕ್ಕಳನ್ನು ಹಡೆದಳು. ಇಪ್ಪತ್ತು ಮಕ್ಕಳನ್ನು ಏಕಕಾಲದಲ್ಲಿ ತನ್ನ ಗರ್ಭದಲ್ಲಿ ಧರಿಸಿದ್ದ ಆ ಸ್ತ್ರೀಗೆ ಮಂಗಳವುಂಟಾಗಲಿ.

ಈ ಸೂಕ್ತದ ವಿನಿಯೋಗವಿಷಯದಲ್ಲಿ ಶೌನಕೋಕ್ತಗ್ರಂಥವಾದ ಋಗ್ವಿಧಾನದಲ್ಲಿ ಈ ರೀತಿ ಹೇಳಿದೆ.

ಇಂದ್ರಾಣ್ಯಾಃ ಕೃತಸಂವಾದಂ ಸ್ನಾನೇ ಸೂಕ್ತಂ ಪ್ರಯೋಜಯೇತ್ ।
ನವವರ್ಗೋತ್ತಮಯುತಂ ಪತಿಸೌಭಾಗ್ಯಪುತ್ರದಂ ॥
ಜಲಪುಷ್ಪೋತ್ಕರಯುತೇ ಚಿತ್ರಕುಂಭಸಮಾವೃತೇ ।
ಕರ್ತವ್ಯೋಽತ್ರ ತಥಾ ಯಾಗಃ ಸೋಮಗಂಧರ್ವವಹ್ನಿನಾಂ ॥
ಭಗಾಯಾಪ್ಸರಸಾಂ ಚೈವ ಯಕ್ಷಾಧಿಪತಯೇಽಪಿ ಚ ।
ಇಂದ್ರಾಣ್ಯೈ ದೇವಪತ್ನೀನಾಂ ರತಿಪ್ರದ್ಯುಮ್ನಯೋಸ್ತಥಾ ॥
ನದೀಸಲಿಲಸಂಪೂರ್ಣೈಃ ಪಂಚಗವ್ಯಸಮಾವೃತೈಃ ।
ಹುತ್ವಾಗ್ನಿಂ ಸ್ನಾಪಯೇತ್ಕನ್ಯಾಂ ಸ್ಥಿತಾಂ ದೇಶೇ ತು ದಕ್ಷಿಣೇ ॥
ಪ್ರಿಯಂಗುವಟನಾಗಾನಾಂ ಕಷಾಯೋದ್ಧೃಷ್ಟಕೇಸರಂ ।
ಸಂಪಾತಾಭಿಹುತಂ ಕೃತ್ವಾ ಸರ್ವೌಷಧಿಸಮನ್ವಿತಂ ॥
ಅಭಿಮಂತ್ರ್ಯೇಹ ಸೂಕ್ತಾಂತೇ ನವಭಿಸ್ತು ವಿ ಹೀತಿ ವೈ ।
ಸ್ಥೇಯಾಭಿರದ್ಭಿಃ ಪೂರ್ಣೇನ ಅಭಿಷಿಂಚೇದುಪೋಷಿತಾಂ ॥
ಯಾಃ ಪತಿಘ್ನ್ಯಃ ಸ್ತ್ರಿಯಸ್ತಸ್ತ್ವಃ ಶಾಮ್ಯಂತೇ ತಾಸ್ತ್ವನೇನ ವೈ ।
ಸ್ನಾಪಯೇದಾಹನಸ್ಯಾಭಿರ್ವಿದ್ಯಾದ್ಯಾಂ ವಿಪ್ರವಾಜಿನೀಂ ॥
ಸೂಕ್ತಾದುಪೋದ್ಧರೇದೇನಂ ನ ಸೇಶ ಇತಿ ಋ ಚ್ವೃಚಂ ।
ಉಪದಿಷ್ಟೋಽಯಮೇಕೇಷಾಂ ಪುಂಸಃ ಕರ್ಮಣಿ ಪೌರುಷೇ ॥

(ಋಗ್ವಿಧಾನ. ಅ. ೩-೧೨೦ ರಿಂದ ೧೨೭)

ಇಂದ್ರ ಮತ್ತು ಇಂದ್ರಾಣಿಯರೊಡನೆ ನಡೆದ ಸಂವಾದವನ್ನೊಳಗೊಂಡಿರುವ ಈ ಸೂಕ್ತವನ್ನು ಸ್ನಾನಕಾಲದಲ್ಲಿ ಪಠಿಸಬೇಕು. ಇದರಿಂದ ಸ್ತ್ರೀಯರಿಗೆ ಸೌಭಾಗ್ಯ, ಪತಿ ಪುತ್ರರು ಮೊದಲಾದುವುಗಳು ಲಭಿಸುವವು. ಚಿತ್ರವಿಚಿತ್ರವಾದ ಕಲಶವನ್ನಿಟ್ಟು ಅದರಲ್ಲಿ ನೀರನ್ನು ತುಂಬಿ ಚಿಗರು, ಎಲೆ ಪುಷ್ಪ ಇವುಗಳನ್ನು ಹಾಕಿ ಸೋಮಾದಿದೇವತೆಗಳನ್ನು ಅದರಲ್ಲಿ ಆಹ್ವಾನಮಾಡಿ ಯಾಗವನ್ನು ಮಾಡಬೇಕು. ಆ ಹೋಮದಲ್ಲಿ ಸೋಮ, ಗಂಧರ್ವ, ಅಗ್ನಿ, ಭಗ, ಅಪ್ಸರಸ್ಸು, ಯಕ್ಷಾಧಿಪತಿ, ಇಂದ್ರಾಣೀ ದೇವಪತ್ನಿಯರು, ರತಿ, ಪ್ರದ್ಯುಮ್ನ ಇವರುಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಬೇಕು. ನದೀಜಲಸಹಿತವಾಗಿ ಪಂಚಗವ್ಯವನ್ನು ಅಭಿಮಂತ್ರಿಸಬೇಕು. ಅಗ್ನಿಯಲ್ಲಿ ಹೋಮಮಾಡಿದನಂತರ ಕಲಶೋದಕದಿಂದ ಕನ್ಯೆಯನ್ನು ದಕ್ಷಿಣದಿಕ್ಕಿನಲ್ಲಿ ಕೂಡಿಸಿ ಸ್ನಾನಮಾಡಿಸಬೇಕು. ಪ್ರಿಯಂಗು ಮೊದಲಾದ ಓಷಧಿಗಳಿಂದ ಸಿದ್ಧವಾದ ರಸದಿಂದ ಈ ಸೂಕ್ತಮಂತ್ರಪಠನಪೂರ್ವಕವಾಗಿ ಕನ್ಯೆಯನ್ನು ಪ್ರೋಕ್ಷಿಸಿ ಸೂಕ್ತಪಠನಾನಂತರ ಕಲಶೋದಕದಿಂದ ಸ್ನಾನಮಾಡಿಸಬೇಕು ಹೀಗೆ ಮಾಡಿದರೆ ಸ್ತ್ರೀಯ ಶರೀರದಲ್ಲಿ ಪ್ರವೇಶಿಸಿರುವ ಭೂತಾದಿಗಳೂ ವ್ಯಾಧಿಗಳೂ

ಪರಿಹಾರವಾಗಿ ಆಯುರಾರೋಗ್ಯವು ವೃದ್ಧಿಯಾಗುವುದು. ಈ ಸೂಕ್ತದಲ್ಲಿರುವ **ನ ಸೇಶೇ** ಎಂಬ ೧೬ ಮತ್ತು ೧೭ನೇ ಎರಡು ಋಕ್ಕುಗಳನ್ನು ಉಪದೇಶಮೂಲಕ ಪುರುಷರು ಜಪಿಸಿದಲ್ಲಿ ನಷ್ಟವಾದ ಪುಂಸತ್ವವು ಪುನಃ ಪ್ರಾಪ್ತವಾಗುವುದು.

॥ಸಾಯಣಭಾಷ್ಯಂ ॥

**ಅಷ್ಟಮಾಷ್ಟಕಸ್ಯ ಚತುರ್ಥೋಽಧ್ಯಾಯ ಆರಭ್ಯತೇ । ತತ್ರ ವಿ ಹೀತಿ ತ್ರಯೋವಿಂಶತ್ಯೃಚಂ ದ್ವಿತೀಯಂ ಸೂಕ್ತಂ। ವೃಷಾಕಪಿರ್ನಾಮೇಂದ್ರಸ್ಯ ಪುತ್ರಃ। ಸ ಚೇಂದ್ರಾಣೀಂದ್ರಶ್ಚೈತೇ ತ್ರಯಃ ಸಂಹತಾಃ ಸಂವಿವಾದಂ ಕೃತವಂತಃ। ತತ್ರ ವಿಹಿ ಸೋತೋರಸೃಕ್ಷತ ಕಿಂ ಸುಬಾಹೋ ಸ್ವಂಗುರ ಇಂದ್ರಾಣೀಮಾಸು ನಾರಿಷ್ವಿತಿ ದ್ವೇ ಉಕ್ಷ್ಣೋ ಹಿ ಮೇಽಯಮೇಮೀತಿ ಚತಸ್ರ ಇತ್ಯೇತಾ ನವರ್ಚ ಇಂದ್ರವಾಕ್ಯಾನಿ। ಅತಸ್ತಾಸಾಮಿಂದ್ರ ಋಷಿಃ। ಪರಾ ಹೀಂದ್ರೇತಿ ಪಂಚಾವೀರಾಮಿತಿ ದ್ವೇ ವೃಷಭೋ ನ ತಿಗ್ಮಶೃಂಗ ಇತ್ಯಾದ್ಯಾಶ್ಚತಸ್ರ ಇತ್ಯೇಕಾದಶರ್ಚ ಇಂದ್ರಾಣ್ಯಾ ವಾಕ್ಯಾನಿ। ಅತಸ್ತಾಸಾಮಿಂದ್ರಾಣ್ಯೃಷಿಃ। ಉವೇ ಅಂಬ ವೃಷಾಕಪಾಯಿ ರೇವತಿ ಪರ್ಶುರ್ಹ ನಾಮೇತಿ ತಿಸ್ರೋ ವೃಷಾಕಪೇರ್ವಾಕ್ಯಾನಿ। ಅತಸ್ತಾಸಾಂ ವೃಷಾಕಪಿರ್ಋಷಿಃ। ಸರ್ವಂ ಸೂಕ್ತಮೈಂದ್ರಂ ಪಂಚಪದಾಪಂಕ್ತಿಚ್ಛಂದಸ್ಕಂ। ತಥಾ ಚಾನುಕ್ರಾಂತಂ। ವಿ ಹಿ ತ್ರ್ಯಧಿಕೈಂದ್ರೋ ವೃಷಾಕಪಿರಿಂದ್ರಾಣೀಂದ್ರಶ್ಚ ಸಮೂದಿರೇ ಪಾಂಕ್ತಮಿತಿ॥ ಷಷ್ಠೇಽಹನಿ ಬ್ರಾಹ್ಮಣಾಚ್ಛಂಸಿನ ಉಕ್ಥ್ಯಶಸ್ತ್ರ ಏತತ್ಸೂಕ್ತಂ। ಸೂತ್ರಿತಂ ಚ। ಅಥ ವೃಷಾಕಪಿಂ ಶಂಸೇದ್ಯಥಾ ಹೋತಾಜ್ಯಾದ್ಯಾಂ ಚತುರ್ಥೇ। ಆ. ೮-೩। ಇತಿ॥ ಯದಿ ಷಷ್ಠೇಽಹನ್ಯುಕ್ಥ್ಯಸ್ತೋತ್ರಾಣಿ ದ್ವಿಪದಾಸು ನ ಸ್ತುವೀರನ್ನಾಮುಗಾ ಯದಿ ವೇದಮುಹರಗ್ನಿಷ್ಟೋಮಃ ಸ್ಯಾತ್ತದಾನೀಂ ಬ್ರಾಹ್ಮಣಾಚ್ಛಂಸೀ ಮಾಧ್ಯಂದಿನೇ ಸವನ ಆರಂಭಣೀಯಾಭ್ಯ ಊರ್ಧ್ವಮೇತತ್ಸೂಕ್ತಂ ಶಂಸೇದ್ವಿಶ್ವಜಿತ್ಯಪಿ। ತಥಾ ಚ ಸೂತ್ರಿತಂ। ಸುಕೀರ್ತಿಂ ಬ್ರಾಹ್ಮಣಾಚ್ಛಂಸೀ ವೃಷಾಕಪಿಂ ಚ ಪಂಕ್ತಿಶಂಸಂ। ಆ. ೮-೪। ಇತಿ॥**

ಅನುವಾದವು—ಋಗ್ವೇದಸಂಹಿತೆಯಲ್ಲಿ ಈಗ ಎಂಟನೇ ಅಷ್ಟಕದ ನಾಲ್ಕನೆಯ ಅಧ್ಯಾಯದ ವಿವರಣೆಯು ಪ್ರಾರಂಭಿಸಲ್ಪಡುವುದು. ಈ ಅಧ್ಯಾಯದ ಪ್ರಾರಂಭ ಸೂಕ್ತವಾದ ವಿ ಹಿ ಎಂಬ ಸೂಕ್ತವು ಏಳನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಂದ್ರನ ಪುತ್ರನಾದ ವೃಷಾಕಪಿ ಎಂಬುವನು ಋಷಿಯು. ಈ ಸೂಕ್ತದಲ್ಲಿ ವೃಷಾಕಪಿ, ಇಂದ್ರ, ಇಂದ್ರಾಣೀ ಎಂಬ ಮೂವರ ಸಂವಾದವು ಅಡಕವಾಗಿರುವುದು. ಈ ಸೂಕ್ತದಲ್ಲಿ—ವಿ ಹಿ ಸೋತೋರಸೃಕ್ಷತ(೧) **ಕಿಂ ಸುಬಾಹೋ ಸ್ವಂಗುರೇ** (೮) **ಇಂದ್ರಾಣೀಮಾಸು ನಾರಿಷು** ಎಂಬ ೨ ಋಕ್ಕುಗಳೂ (೧೧-೧೨) **ಉಕ್ಷ್ಣೋ ಹಿ ಮೇ** (೧೪) ಅಯಮೇಮಿ ಎಂಬ ೪ ಋಕ್ಕುಗಳೂ (೧೯-೨೨) ಎಂಬ ಒಟ್ಟು ಒಂಭತ್ತು ಋಕ್ಕುಗಳಲ್ಲಿ ಇಂದ್ರನ ವಾಕ್ಯಗಳಿವೆ. ಆದ್ದರಿಂದ ಈ ಋಕ್ಕುಗಳಿಗೆ ಇಂದ್ರನೇ ಋಷಿಯು; **ಪರಾ ಹೀಂದ್ರ** ಎಂಬ ೫ ಋಕ್ಕುಗಳೂ (೨-೬) **ಅವೀರಾಂ** ಎಂಬ ೨ ಋಕ್ಕುಗಳೂ (೯-೧೦) **ವೃಷಭೋ ನ ತಿಗ್ಮಶೃಂಗಃ** ಎಂಬ ೪ ಋಕ್ಕುಗಳೂ (೧೫-೧೮) ಒಟ್ಟು ಹನ್ನೊಂದು ಋಕ್ಕುಗಳೂ ಇಂದ್ರಾಣಿಯ ವಾಕ್ಯಗಳು ಆದ್ದರಿಂದ ಇವುಗಳಿಗೆ ಇಂದ್ರಾಣಿಯೇ ಋಷಿಯು; **ಉವೇ ಅಂಬ** (೭) **ವೃಷಾಕಪಾಯಿ ರೇವತಿ** (೧೩) **ಪರ್ಶುರ್ಹನಾರ್ಮ** (೨೩) ಎಂಬ ಋಕ್ಕುಗಳು ವೃಷಾಕಪಿಯ ವಾಕ್ಯಗಳು. ಆದ್ದರಿಂದ ಈ ಋಕ್ಕುಗಳಿಗೆ ವೃಷಾಕಪಿಯೇ ಋಷಿಯು. ಒಟ್ಟು ಸೂಕ್ತಕ್ಕೆಲ್ಲಾ ಇಂದ್ರನೇ ದೇವತೆಯು. ಸೂಕ್ತದ ಋಕ್ಕುಗಳು ಪಂಚಪದಾಪಂಕ್ತಿಃ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—ವಿ ಹಿ **ತ್ರ್ಯಧಿಕೇಂದ್ರೋ ವೃಷಾಕಪಿರಿಂದ್ರಾಣೀಂದ್ರಶ್ಚ** ಸಮೂದಿರೇ ಪಾಂಕ್ತಂ

ಎಂದು ಹೇಳಿರುವುದು. ಯಾಗದ ಆರನೆಯ ದಿವಸ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸಬೇಕಾದ ಉಕ್ಥ್ಯಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಅಥೆ ವೃಷಾಕಪಿಂ ಶಂಸೇದ್ಯಥಾ ಹೋತಾಜ್ಯಾದ್ಯಾಂ ಚತುರ್ಥೇ** ಎಂಬ ಸೂತ್ರದಿಂದ (ಆ. ೮-೩) ವಿವೃತವಾಗಿರುವುದು. ಆರನೆಯ ದಿನಸ ಉಕ್ಥ್ಯಸ್ತೋತ್ರಗಳನ್ನು ದ್ವಿಪದಾಛಂದಸ್ಸಿನ ಋಕ್ಕುಗಳಿಂದ ಸ್ತುತಿಸದಿದ್ದರೆ ಅಥವಾ ಸಾಮಗಾನಮಾಡುವವರು ಇದಮುಹಃ ಎಂಬ ಮಂತ್ರವನ್ನು ಅಗ್ನಿಷ್ಟೋಮಯಾಗದ ವಿಶ್ವಜಿತಿ ಎಂಬ ದಿನದಲ್ಲಿ ಪಠಿಸಿದರೆ ಆಗ ಬ್ರಾಹ್ಮಣಾಚ್ಛಂಸಿ ಯೆಂಬ ಋತ್ವಿಜನು ಮಾಧ್ಯಂದಿನಸವನಕಾಲದಲ್ಲಿ ಪ್ರಾರಂಭದ ಮಂತ್ರಾನಂತರ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಸುಕೀರ್ತಿಂ ಬ್ರಾಹ್ಮಣಾಚ್ಛಂಸೀ ವೃಷಾಕಪಿಂ ಚ ಪಂಕ್ತಿಶಂಸಂ** ಎಂಬ ಸೂತ್ರ ದಿಂದ (ಆ. ೮-೪) ವಿವೃತವಾಗಿರುವುದು.

## ಸೂಕ್ತ—೮೬

ಮಂಡಲ—೧೦ ॥ ಅನುವಾಕ—೭ ॥ ಸೂಕ್ತ—೮೬ ॥
ಅಷ್ಟಕ—೮ ॥ ಅಧ್ಯಾಯ—೪ ॥ ವರ್ಗ—೧, ೨, ೩, ೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೩ ॥
ಋಷಿಃ—ವೃಷಾಕಪಿರೈಂದ್ರ ಇಂದ್ರಾಣೀಂದ್ರಶ್ಚ ಸಮೂದಿರೇ । ೧, ೮, ೧೧-೧೨, ೧೪, ೧೯-೨೨. ಇಂದ್ರಃ । ೨-೬, ೯-೧೦, ೧೫-೧೮. ಇಂದ್ರಾಣೀ । ೭, ೧೩, ೨೩. ವೃಷಾಕಪಿಃ ॥
ದೇವತಾ—ಇಂದ್ರಃ ॥
ಛಂದಃ—ಪಂಕ್ತಿಃ ॥

॥ ಸಂಹಿತಾಪಾಠಃ ॥

ವಿ ಹಿ ಸೋತೋರಸೃಕ್ಷತ ನೇಂದ್ರಂ ದೇವಮಮಂಸತ ।
ಯತ್ರಾಮದದ್ವೃಷಾಕಪಿರರ್ಯಃ ಪುಷ್ಟೇಷು ಮತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ ॥ ೧ ॥

॥ ಪದಪಾಠಃ ॥

ವಿ । ಹಿ । ಸೋತೋಃ । ಅಸೃಕ್ಷತ । ನ । ಇಂದ್ರಂ । ದೇವಂ । ಅಮಂಸತ ।
ಯತ್ರ । ಅಮದತ್ । ವೃಷಾಕಪಿಃ । ಅರ್ಯಃ । ಪುಷ್ಟೇಷು । ಮತ್ऽಸಖಾ । ವಿಶ್ವಸ್ಮಾತ್ । ಇಂದ್ರಃ । ಉತ್ऽತರಃ ॥ ೧ ॥

॥ ಸಾಯಣಭಾಷ್ಯಂ ॥

**ಸೋತೋಃ ಸೋಮಾಭಿಷವಂ ಕರ್ತುಂ ವ್ಯಸೃಕ್ಷತ । ಯಾಗಂ ಪ್ರತಿ ಮಯಾ ವಿಸೃಷ್ಟಾ** ಅನುಜ್ಞಾತಾಃ ಸ್ತೋತಾರೋ ವೃಷಾಕಪೇರ್ಯಷ್ಟಾರಃ । **ಹೀತಿ ಪೂರಣಃ । ತತ್ರ ದೇವಂ ದ್ಯೋತಮಾನ-**

ಮಿಂದ್ರಂ ಮಾಂ ನಾಮಂಸತ । ಮಯಾ ಪ್ರೇರಿತಾಃ ಸಂತೋಽಪಿ ತೇ ಸ್ತೋತಾರೋ ನ ಸ್ತುತವಂತಃ । ಕಿಂತು ಮಮ ಪುತ್ರಂ ವೃಷಾಕಪಿಮೇವ ಸ್ತುತವಂತಃ । ಯತ್ರ ಯೇಷು ಪುಷ್ಟೇಷು ಸೋಮೇನ ಪ್ರವೃದ್ಧೇಷು ಯಾಗೇಷ್ವರ್ಯಃ ಸ್ವಾಮೀ ವೃಷಾಕಪಿರ್ಮಮ ಪುತ್ರೋ ಮತ್ಸಖಾ ಮಮ ಸಖಿಭೂತಃ ಸನ್ನಮದತ್ ಸೋಮಪಾನೇನ ಹೃಷ್ಟೋಽಭೂತ್ । ಯದ್ಯಪ್ಯೇವಂ ತಥಾಪೀಂದ್ರೋಽಹಂ ವಿಶ್ವಸ್ಮಾತ್ಸರ್ವಸ್ಮಾಜ್ಜಗತ ಉತ್ತರಃ । ಉತ್ಕೃಷ್ಟತರಃ ॥ ಮಾಧವಭಟ್ಟಾಸ್ತು ವಿ ಹಿ ಸೋತೋರಿತ್ಯೇಷರ್ಗಿಂದ್ರಾಣ್ಯಾ ವಾಕ್ಯಮಿತಿ ಮನ್ಯಂತೇ । ತಥಾ ಚ ತದ್ವಚನಂ । ಇಂದ್ರಾಣ್ಯೈ ಕಲ್ಪಿತಂ ಹವಿಃ ಕಶ್ಚಿನ್ಮೃಗೋಽದೂದುಷದಿಂದ್ರಪುತ್ರಸ್ಯ ವೃಷಾಕಪೇರ್ವಿಷಯೇ ವರ್ತಮಾನಃ । ತತ್ರೇಂದ್ರಮಿಂದ್ರಾಣೀ ವದತಿ । ತಸ್ಮಿನ್ಪಕ್ಷೇ ತ್ವಸ್ಯಾ ಋಚೋಽಯಮರ್ಥಃ । ಸೋತೋಃ ಸೋಮಾಭಿಷವಂ ಕರ್ತುಂ ವಿ ಹ್ಯಸೃಕ್ಷತ । ಉಪರತಸೋಮಾಭಿಷವಾ ಆಸನ್ಯಜಮಾನಾ ಇತ್ಯರ್ಥಃ । ಕಿಂಚ ಮಮ ಪತಿಮಿಂದ್ರಂ ದೇವಂ ನಾಮಂಸತ । ಸ್ತೋತಾರೋ ನ ಸ್ತುವಂತಿ । ಕುತ್ರೇತಿ ಅತ್ರಾಹ । ಯತ್ರ ಯಸ್ಮಿನ್ದೇಶೇ ಪುಷ್ಟೇಷು ಪ್ರವೃದ್ಧೇಷು ಧನೇಷ್ವರ್ಯಃ ಸ್ವಾಮೀ ವೃಷಾಕಪಿರಮದತ್ । ಮತ್ಸಖಾ ಮತ್ಪ್ರಿಯಶ್ಚೇಂದ್ರೋ ವಿಶ್ವಸ್ಮಾತ್ಸರ್ವಸ್ಮಾಜ್ಜಗತ ಉತ್ತರಃ । ಉತ್ಕೃಷ್ಟತರಃ ॥

॥ ಪ್ರತಿಪದಾರ್ಥ ॥

**ಪುಷ್ಟೇಷು**—ಸೋಮರಸದಿಂದ ವೃದ್ಧಿಯನ್ನು ಹೊಂದಿದ । **ಯತ್ರ**—ಯಾವ ಯಾಗಗಳಲ್ಲಿ । **ಮತ್ಸಖಃ**—ನನ್ನ ಮಿತ್ರನೂ । **ಅರ್ಯಃ**—ಪ್ರಭುವೂ ಆದ । **ವೃಷಾಕಪಿಃ**—(ನನ್ನ ಪುತ್ರನಾದ) ವೃಷಾಕಪಿಯು । **ಅಮದತ್**—ಸಂತೋಷವನ್ನು ಹೊಂದಿದನೋ ಅಲ್ಲಿ । **ಸೋತೋಃ**—ಯಜ್ಞಕ್ಕಾಗಿ ಸೋಮವನ್ನು ಹಿಂಡಲು । **ವ್ಯಸೃಕ್ಷತ**—ಋತ್ವಿಕ್ಕುಗಳು ನನ್ನಿಂದಲೇ ನಿರ್ದಿಷ್ಟರಾದರು । **ದೇವಂ**—ಪ್ರಕಾಶಮಾನನೂ । **ಇಂದ್ರಂ**—ಸ್ವಾಮಿಯೂ ಆದ ನನ್ನನ್ನು ಮಾತ್ರ । **ನ ಅಮಂಸತ**—ಸ್ತುತಿಸಲಿಲ್ಲ (ಆದರೂ ಸಹ) । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಶ್ರೇಷ್ಠನು.

॥ ಭಾವಾರ್ಥ ॥

ಸೋಮದಿಂದ ಪುಷ್ಟವಾದ ಯಾವ ಯಾಗಗಳಲ್ಲಿ ನನ್ನ ಮಿತ್ರನೂ, ಪ್ರಭುವೂ, ಪುತ್ರನೂ ಆದ ವೃಷಾಕಪಿಯು ಸಂತೋಷವನ್ನು ಹೊಂದಿದನೋ, ಅಲ್ಲಿ ಯಜ್ಞಕ್ಕಾಗಿ ಸೋಮವನ್ನು ಹಿಂಡಲು ಋತ್ವಿಕ್ಕುಗಳು ನನ್ನಿಂದಲೇ ನಿರ್ದಿಷ್ಟರಾದರು. ಆದರೂ ಪ್ರಕಾಶಮಾನನೂ, ಪ್ರಭುವೂ ಆದ ನನ್ನನ್ನು ಮಾತ್ರ ಅವರು ಸ್ತುತಿಸಲಿಲ್ಲ. ಆದರೂ ಇಂದ್ರನೇ ಸಕಲ ಜಗತ್ತಿಗಿಂತಲೂ ಶ್ರೇಷ್ಠನು.

## English Translation

[ Indra speaks : ] They have neglected the pressing of the Soma, they have not praised the divine Indra at the cherished (sacrifices), at which the noble Vrishakapi becoming my friend rejoiced : (still) I, Indra, am above all (the world).

|| ವಿಶೇಷವಿಷಯಗಳು ||

**ವಿ ಹಿ ಸೋತೋಃ ಅಸೃಕ್ಷತ ನ ಇಂದ್ರಂ ದೇವಂ ಅಮಂಸತ**—ಇದು ಇಂದ್ರನ ವಾಕ್ಯವು **ವೃಷಾಕಪೇರ್ಯಜ್ಞಾರೋ ಸ್ತೋತಾರೋ ಮಯಾ ಅನುಜ್ಞಾತಾಃ ಸಂತೋಽಪಿ ತದ್ಯಜ್ಞೇ ದೇವ ಇಂದ್ರಂ ಮಾಂ ನ ಅಮಂಸತ । ಮಯಾ ಪ್ರೇರಿತಾಃ ಸಂತೋಽಪಿ ತೇ ಸ್ತೋತಾರೋ ನ ಸ್ತುತವಂತಃ ಕಿಂತು ಮಮ ಪುತ್ರಂ ವೃಷಾಕಪಿಮೇವ ಸ್ತುತವಂತಃ** || ವೃಷಾಕಪಿಯು ನನ್ನ ಪುತ್ರನು. ಅವನು ಮಾಡುತ್ತಿದ್ದ ಯಜ್ಞದಲ್ಲಿ ಭಾಗವನ್ನು ವಹಿಸುತ್ತಿದ್ದ ಋತ್ವಿಕ್ಕುಗಳು ಸೋಮರಸವನ್ನು ಹಿಂಡಲು ನನ್ನಿಂದಲೇ ಆಜ್ಞಪ್ತರಾದರು ಆದರೂ ಸಹ ಅವರು ಯಜ್ಞಕ್ಕೆ ಮುಖ್ಯ ನಾಯಕನೂ, ದೇವನೂ ಆದ ನನ್ನನ್ನೇ ಸ್ತೋತ್ರಮಾಡಲಿಲ್ಲ. ಅದಕ್ಕೆ ಬದಲಾಗಿ ನನ್ನ ಪುತ್ರನಾದ ವೃಷಾಕಪಿಯನ್ನೇ ಸ್ತೋತ್ರಮಾಡಿದರು.

**ಯತ್ರ ಪುಷ್ಟೇಷು ಅರ್ಯಃ ವೃಷಾಕಪಿಃ ಮತ್ಸಖಾ ಅಮದತ್ ಇಂದ್ರಃ ವಿಶ್ವಸ್ಮಾತ್ ಉತ್ತರಃ. ಸೋಮೇನ ಪ್ರವೃದ್ಧೇಷು ಯೇಷು ಯಾಗೇಷು ಸ್ವಾಮೀ ವೃಷಾಕಪಿಃ ಸಖಿಭೂತಃ ಮಮ ಪುತ್ರ ಸೋಮಪಾನೇನ ಹೃಷ್ಟೋಽಭೂತ್ ಯದ್ಯಪ್ಯೇವಂ ತಥಾಪಿ ಇಂದ್ರಃ ಅಹಂ ಸರ್ವಸ್ಮಾಜ್ಜಗತ ಉತ್ಕೃಷ್ಟತರಃ** || ವೃಷಾಕಪಿಯು ಮಾಡಿದ ಯಾಗದಲ್ಲಿ ಸೋಮಾಭಿಷವವು ಯಥೇಚ್ಛವಾಗಿ ನಡೆಯಿತು. ನನ್ನ ಸ್ನೇಹಿತನಂತಿರುವ ನನ್ನ ಪುತ್ರನಾದ ಆ ವೃಷಾಕಪಿಯು ಆ ಯಜ್ಞದಲ್ಲಿ ಯಥೇಷ್ಟವಾಗಿ ಸೋಮಪಾನಮಾಡಿ ಹರ್ಷಿತ ನಾದನು. ಆದರೂ ಸಹ ಇಂದ್ರನಾದ ನಾನೇ ಸಕಲ ಜಗತ್ತಿಗಿಂತಲೂ ಅಧಿಕನು.

ಮುಖ್ಯಾಭಿಪ್ರಾಯವೇನೆಂದರೆ—ಇಂದ್ರನಾದ ನಾನು ಸಕಲ ಜಗತ್ತಿಗಿಂತಲೂ ಅಧಿಕನು, ನನ್ನನ್ನು ಮೀರಿದವನಿಲ್ಲ. ಆದರೂ ನನ್ನಿಂದಲೇ ಆಜ್ಞಪ್ತರಾದ ಋತ್ವಿಕ್ಕುಗಳು ನನ್ನ ಪುತ್ರನಾದ ವೃಷಾಕಪಿಯು ಮಾಡುತ್ತಿದ್ದ ಯಜ್ಞದಲ್ಲಿ ಸೋಮಾಭಿಷವವನ್ನು ಮಾಡಿದಾಗ ಯಜ್ಞದ ಮುಖ್ಯನಾಯಕನಾದ ನನ್ನನ್ನೇ ಸ್ತುತಿಸಲಿಲ್ಲ. ವೃಷಾಕಪಿಯನ್ನು ಮಾತ್ರ ಸ್ತುತಿಸಿದರು. ಇದು ಬಹಳ ಅನುಚಿತವಾದುದು ಎಂದು ಇಂದ್ರನು ತನ್ನ ವಿಷಾದವನ್ನು ವ್ಯಕ್ತಪಡಿಸಿದಾನೆ.

ಮಾಧವಭಟ್ಟರೆಂಬುವರು (ವೆಂಕಟಮಾಧವರು-ಇವರು ಸಾಯಣರಿಗಿಂತ ಪೂರ್ವದಲ್ಲಿದ್ದವರು. ಇವರೂ ಋಗ್ವೇದಕ್ಕೆ ಭಾಷ್ಯವನ್ನು ಬರೆದಿದಾರೆ). ಈ ಋಕ್ಕಿನಲ್ಲಿ ಹೇಳಿರುವ ವಾಕ್ಯವು ಇಂದ್ರನು ಹೇಳಿದ್ದಲ್ಲ, ಇದು ಇಂದ್ರಾಣಿಯ ವಾಕ್ಯವು ಎಂದು ತಮ್ಮ ಅಭಿಪ್ರಾಯದನ್ನು ಈರೀತಿ ಸೂಚಿಸಿದಾರೆ—

> **ಇಂದ್ರಾಣ್ಯೈ ಕಲ್ಪಿತಂ ಹವಿಃ ಕಶ್ಚಿನ್ಮೃಗೋಽದೂದುಷದಿಂದ್ರಸ್ಯ ವೃಷಾಕಪೇರ್ವಿಷಯೇ ವರ್ತಮಾನಃ । ತತ್ರೇಂದ್ರಮಿಂದ್ರಾಣೀ ವದತಿ । ತಸ್ಮಿನ್ಪಕ್ಷೇ ತ್ವಸ್ಯಾ ಋಚೋಽಯಮರ್ಥಃ ಸೋತೋಃ ಸೋಮಾಭಿಷವಂ ಕರ್ತುಂ ವಿ ಹ್ಯಸೃಕ್ಷತ । ಉಪರತಸೋಮಾಭಿಷವಾ ಅಸನ್ ಯಜಮಾನಾ ಇತ್ಯರ್ಥಃ । ಕಿಂಚ ಮಮ ಪತಿಮಿಂದ್ರಂ ದೇವಂ ನಾಮಂಸತ ಸ್ತೋತಾರೋ ನ ಸ್ತುವಂತಿ । ಕುತ್ರೇತಿ ಅತ್ರಾಹ । ಯತ್ರ ಯಸ್ಮಿನ್ ಜನಪದೇ ಪುಷ್ಟೇಷು ಪ್ರವೃದ್ಧೇಷು ಧನೇಷ್ವರ್ಯಃ ಸ್ವಾಮೀ ವೃಷಾಕಪಿರಮದತ್ । ಮತ್ಸಖಾ ಮತ್ಪ್ರಿಯಶ್ಚೇಂದ್ರೋ ವಿಶ್ವಸ್ಮಾತ್ಸರ್ವಸ್ಮಾಜ್ಜಗತೆ ಉತ್ತರಃ ಉತ್ಕೃಷ್ಟತರಃ ||**

ಹಿಂದೆ ಒಂದಾನೊಂದು ಕಾಲದಲ್ಲಿ ಇಂದ್ರಾಣೀ ದೇವತೆಗಾಗಿ ಸಿದ್ಧಮಾಡಿದ್ದ ಹವಿಸ್ಸನ್ನು ಇಂದ್ರಪುತ್ರನಾದ ವೃಷಾಕಪಿಯ ರಾಜ್ಯದಲ್ಲಿದ್ದ ಒಂದು ಮೃಗವು ಹಾಳುಮಾಡಿ ಕೆಡಿಸಿತು. ಆ ಸಂದರ್ಭದಲ್ಲಿ ಇಂದ್ರಾಣಿಯು ಇಂದ್ರನನ್ನು ಕುರಿತು ಹೇಳಿರುವುದನ್ನು ಈ ಋಕ್ಕಿನಲ್ಲಿ ಹೇಳಿದೆ. ಯಜ್ಞದಲ್ಲಿ ಸೋಮರಸವನ್ನು ಹಿಂಡುವ ಕಾರ್ಯದಲ್ಲಿ ಪ್ರವೃತ್ತರಾದ ಯಜಮಾನರು ಸೋಮರಸವನ್ನು ಹಿಂಡಿದ ಮೇಲೆ ವಿಶ್ರಾಂತರಾಗಿದ್ದರು. ಆ ಕಾಲದಲ್ಲಿ ಒಂದು ದುಷ್ಟಮೃಗವು ಹಿಂಡಿದ್ದ ಸೋಮರಸವನ್ನು ಕೆಡಿಸಿತು. ಮತ್ತು ಆ ಯಜ್ಞದಲ್ಲಿ ಋತ್ವಿಗ್ಯಜಮಾನರು ನನ್ನ ಪತಿಯಾದ ಇಂದ್ರನನ್ನು ಸ್ತುತಿಸಲೇ ಇಲ್ಲ. ಇದೆಲ್ಲಾ ನಡೆದದ್ದು ವೃಷಾಕಪಿಯ ರಾಜ್ಯದಲ್ಲಿಯೇ. ಅದು ಸಕಲಸಂಪತ್ಸಮೃದ್ಧವಾಗಿದ್ದಿತು. ಅಂತಹ ದೇಶಕ್ಕೆ ವೃಷಾಕಪಿಯು ಸ್ವಾಮಿಯಾಗಿ ಅಲ್ಲಿ ಸುಖದಿಂದಿದ್ದನು. ನನಗೆ ಸ್ನೇಹಿತನಂತಿರುವವನೂ, ಪ್ರೀತಿ ಪಾತ್ರನೂ ಆದ ಇಂದ್ರನೇನೂ ಸಾಮಾನ್ಯನಲ್ಲ. ಅವನು ಸಕಲ ಜಗತ್ತಿಗಿಂತಲೂ ಅಧಿಕನಾದವನು. ಅವನಿಗಿಂತ ಅಧಿಕರಾಗಲಿ, ಶ್ರೇಷ್ಠರಾಗಲಿ ಇಲ್ಲ ಎಂದು ಮುಖ್ಯಾಭಿಪ್ರಾಯವು.

ಈ ಋಕ್ಕಿಗೆ ಯಾಸ್ಕರು ಪರಿಶಿಷ್ಟಾಧ್ಯಾಯದಲ್ಲಿ—**ಅಥೇಮಾ ಅತಿಸ್ತುತಯ ಇತ್ಯಾಚಕ್ಷತೇ** । ಸಾಮಾನ್ಯಾರ್ಥಕ್ಕಿಂತಲೂ ಬೇರೆ ವಿಧವಾದ ಅರ್ಥವನ್ನು ಸೂಚಿಸುವ ಕೆಲವು ಮಂತ್ರಗಳನ್ನು ವಿವರಿಸುತ್ತೇವೆ ಎಂದು ಹೇಳಿ ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ. ಅದು ಆದಿತ್ಯಪರವಾಗಿದೆ. ಆದ್ದರಿಂದ ಅದನ್ನು ಇಲ್ಲಿ ವಿವರಿಸುತ್ತೇವೆ—

> **ವ್ಯಸೃಕ್ಷತ ಹಿ ಪ್ರಸವಾಯ ನ ಚೇಂದ್ರಂ ದೇವಮಮಂಸತ ಯತ್ರಾಮಾದ್ಯತ್ ವೃಷಾಕಪಿರರ್ಯಃ ಈಶ್ವರಃ ಪುಷ್ಟೇಷು ಪೋಷೇಷು ಮತ್ಸಖಾ ಮಮ ಸಖಾ ಮದನಸಖಾ ಯೇ ನಃ ಸಖಾಯಸ್ತೈಃ ಸಹೇತಿ ವಾ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಂ** ॥
>
> (ನಿ. ೧೩-೪)

ಇದಕ್ಕೆ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಬರೆದಿರುವ ವ್ಯಾಖ್ಯಾನವನ್ನು ವಿವರಿಸಿ ಅನಂತರ ಇದರ ಅರ್ಥಾನುವಾದಮಾಡುತ್ತೇವೆ—

> **ವ್ಯಸೃಕ್ಷತ** ಯದಾದಿತ್ಯೋ ರಶ್ಮೀನಹನ್ಯಹನಿ ಸೋತೋಃ ಸರ್ವಭೂತಪ್ರಸವಾಯ, ಅಭ್ಯನುಜ್ಞಾನಾಯ, ತತ್ಪ್ರಕಾಶಿತಲೋಕಸ್ಯ ಸರ್ವಕರ್ಮೋಪಪತ್ತೇಃ । ತದಾ ಕಿಂ ? ಇತಿ । ತದಾ **ತೇ ರಶ್ಮಯಃ ಸರ್ವಕರ್ಮಣ್ಯನುಗಮನಾತ್ ನೇಂದ್ರಂ ದೇವಮಮಂಸತ** ತಮೇವೇಂದ್ರಮಾದಿತ್ಯಂ ಯೇನ ವಿಸೃಷ್ಟಾಃ ತಮೇತಮಾತ್ಮನೋ ದೀಪಯಿತಾರಂ ನ ಮನ್ಯಂತೇ ಸ್ವಮಹಿಮ್ನೈವ ದೀಪ್ಯಾಮಹ ಇತಿ ಮನ್ಯಂತೇ । ಕದಾ ? **ಯತ್ರ** ಯದಾ **ಅಮದತ್ ವೃಷಾಕಪಿಃ ಅರ್ಯಃ** ಸ್ವಾಮೀ ರಶ್ಮಿಪೋಷಂ ಪುಷ್ಯತಿ **ಪುಷ್ಟೇಷು** ಏಕೀಭೂತೇಷು ಮಧ್ಯಂದಿನೇ । **ಮತ್ಸಖಾ** ಮಮ ಸಖಾ ಇತಿ ಮಂತ್ರದೃಗಾಹ। ಅಥವಾ ಸರ್ವ ಏವ ಮನ್ಯತೇ ಮಮಾಯಂ ಸಖಾ ಮಮಾಯಂ ಸಖಾ ಇತಿ । ಅಥವಾ **ಮದನಸಖಾ** ಹರ್ಷಸಖೇತ್ಯರ್ಥಃ। ಅಥವಾ **ಯೇ ನಃ ಸಖಾಯಃ** ರಶ್ಮಯಃ ತೈ ಸಹೇತಿ । **ವಿಶ್ವಸ್ಮಾತ್** ಇತಿ ಉಕ್ತಾರ್ಥಃ ।
>
> (ನಿರು. ಭಾ. ೧೩.೪)

ಈ ಋಕ್ಕಿನಲ್ಲಿ ಆದಿತ್ಯರಶ್ಮಿಪರವಾದ ಅರ್ಥವು ವಿವೃತವಾಗಿದೆ. ಇಲ್ಲಿ ವೃಷ್ಟಿಕರ್ಮಕ್ಕೆ ಕಾರಣಭೂತನಾದ ಆದಿತ್ಯನನ್ನು ವೃಷಾಕಪಿಯೆಂದು ಕರೆದಿದೆ. **ವಿ ಹಿ ಸೋತೋರಸೃಕ್ಷತ**—ಎಂದರೆ, ಸರ್ವಪ್ರಾಣಿಗಳ ಪ್ರಸವಕ್ಕೆ ಕಾರಣನಾದವನು

ಆದಿತ್ಯನು. ಅಂತಹ ಆದಿತ್ಯನು ಸಕಲಪ್ರಾಣಿಗಳ ಉತ್ಪತ್ತಿಗಾಗಿ ಅಥವಾ ತನ್ನಿಂದ ಪ್ರಕಾಶಿತವಾದ ಸಮಸ್ತ ಲೋಕದ ವ್ಯವಹಾರಗಳು ನಡೆಯುವುದಕ್ಕಾಗಿ ತನ್ನ ರಶ್ಮಿಗಳನ್ನು ವಿಸೃಜಿಸಿದನು ಎಂದರೆ ಪ್ರಸಾರಮಾಡಿದನು, ಲೋಕದಲ್ಲೆಲ್ಲಾ ಹರಡಿದನು. ಆದರೆ ಆ ರಶ್ಮಿಗಳು ಅಥವಾ ಕಿರಣಗಳು ಆದಿತ್ಯನಿಂದ ಹೊರಟಿದ್ದರೂ ತಮಗೆ ಕಾರಣಭೂತನೂ ಸ್ವಾಮಿಯೂ ಆದ ಅವನನ್ನೇ (ಆದಿತ್ಯನನ್ನೇ) ತಿಳಿಯಲಿಲ್ಲ. ಎಂದರೆ ತಾವು (ರಶ್ಮಿಗಳು) ಆದಿತ್ಯನ ಮಹಿಮೆಯಿಂದ ಬೆಳಗುತ್ತಿರುವವೆಂಬುದನ್ನು ಮರೆತು ತಮ್ಮ ಸ್ವಂತ ಮಹಿಮೆಯಿಂದಲೇ ಪ್ರಕಾಶಿಸುತ್ತಿರುವೆವು ಎಂಬ ಭ್ರಾಂತಿಗೊಳಗಾದವು. ಇದು ಯಾವಾಗ ಎಂದರೆ **ಅಮದತ್ ವೃಷಾಕಪಿಃ ಅರ್ಯಃ ಪುಷ್ಟೇಷು**—ಸಕಲಲೋಕಕ್ಕೂ ಸ್ವಾಮಿಯಾದ ಈ ಆದಿತ್ಯನು ತನ್ನ ಸರ್ವಶಕ್ತಿಯನ್ನು ಕೇಂದ್ರೀಕರಿಸಿ ಬೆಳಗುತ್ತಿರುವಾಗ ಎಂದರೆ ಮಧ್ಯಾಹ್ನ ಸಮಯದಲ್ಲಿ ಎದರ್ಥವು. ಮಧ್ಯಾಹ್ನಕಾಲದಲ್ಲಿ ಸೂರ್ಯನ ಪ್ರಕಾಶವು ಅತಿ ತೀಕ್ಷ್ಣವಾಗಿರುವುದು. ಇಲ್ಲಿ **ಮತ್ಸಖಾ**—ಎಂಬ ಶಬ್ದಕ್ಕೆ ಅರ್ಥವೇನೆಂದರೆ—ಸೂಕ್ತದ್ರಷ್ಟೃವಾದ ಋಷಿಯು ಆದಿತ್ಯನನ್ನು **ಮತ್ಸಖಾ**—ನನ್ನ ಸ್ನೇಹಿತನು ಎಂದು ಆದಿರಾತಿಶಯದಿಂದ ಹೇಳಿಕೊಂಡಿದ್ದಾನೆ ಅಥವಾ ಮತ್ಸಖಾ ಎಂದರೆ **ಮದನಸಖಾ**— ಹರ್ಷವನ್ನುಂಟುಮಾಡುವ ಸ್ನೇಹಿತನು ಎಂದು ಅರ್ಥವು. **ಅಥವಾ ಯೇ ನಃ ಸಖಾಯಃ ತೈ ಸಹೇತಿ ವಾ**—ನನಗೆ ಸ್ನೇಹಿತರಂತೆ ಹಿತಕಾರಿಗಳಾದ ಯಾವ ರಶ್ಮಿಗಳಿರುವವೋ ಅಂತಹ ರಶ್ಮಿಗಳಿಂದ ಸಹಿತನಾದ ಆದಿತ್ಯನು ಎಂಬರ್ಥವನ್ನಾದರೂ ಹೇಳಬಹುದು. ಇಂತಹ ಆದಿತ್ಯನು ಸಕಲಜಗತ್ತಿನಲ್ಲಿಯೂ ಅದ್ವಿತೀಯನಾಗಿ (ಅಧಿಕವಾಗಿ) ಬೆಳಗುತ್ತಿದ್ದಾನೆ ಎಂದು ನಿರ್ವಚನಾಭಿಪ್ರಾಯವು.

ಈ ಸೂಕ್ತದ ಪ್ರತಿಋಕ್ಕಿನ ಕೊನೆಯ ಪಾದದಲ್ಲಿಯೂ **ವಿಶ್ವಸ್ಮಾದಿಂದ್ರ ಉತ್ತರಃ** ಎಂಬ ಇಂದ್ರನನ್ನು ಸ್ತುತಿಸುವ ವಿಶೇಷಣ ವಾಕ್ಯವು ಪಲ್ಲವಿಯಂತೆ ಪುನಃಪುನಃ ಪಠಿತವಾಗಿದೆ.

। ಸಂಹಿತಾಪಾಠಃ ।

ಪರಾ ಹೀಂದ್ರ ಧಾವಸಿ ವೃಷಾಕಪೇರತಿ ವ್ಯಥಿಃ ।
ನೋ ಅಹ ಪ್ರ ವಿಂದಸ್ಯನ್ಯತ್ರ ಸೋಮಪೀತಯೇ ವಿಶ್ವಸ್ಮಾದಿಂದ್ರ ಉತ್ತರಃ ॥

। ಪದಪಾಠಃ ।

ಪರಾ । ಹಿ । ಇಂದ್ರ । ಧಾವಸಿ । ವೃಷಾಕಪೇಃ । ಅತಿ । ವ್ಯಥಿಃ ।
ನೋ ಇತಿ । ಅಹ । ಪ್ರ । ವಿಂದಸಿ । ಅನ್ಯತ್ರ । ಸೋಮಽಪೀತಯೇ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೧ ॥

। ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಮತ್ಯತ್ಯಂತಂ ವ್ಯಥಿಶ್ಚಲಿತೋ ವೃಷಾಕಪೇರ್ವೃಷಾಕಪಿಂ ಪರಾ ಧಾವಸಿ । ಪ್ರತಿಗಚ್ಛಸಿ । ಅನ್ಯತ್ರ ಸೋಮಪೀತಯೇ ಸೋಮಪಾನಾಯ ನೋ ಅಹ ನೈವ ಚ ಪ್ರ ವಿಂದಸಿ । ಪ್ರಗಚ್ಛಸೀತ್ಯರ್ಥಃ । ಸೋಽಯಮಿಂದ್ರೋ ವಿಶ್ವಸ್ಮಾದುತ್ತರಃ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಅತಿ ವ್ಯಥಿಃ**—ಮನಸ್ಸಿನಲ್ಲಿ ಅತ್ಯಂತ ವ್ಯಥೆಗೊಂಡವನಾಗಿ । **ವೃಷಾಕಪೇಃ ಪರಾ**—ವೃಷಾಕಪಿಯ ಕಡೆಗೆ । **ಧಾವಸಿ**—ಓಡುತ್ತೀಯೆ । **ಸೋಮಪೀತಯೇ**—ಸೋಮಪಾನಕ್ಕಾಗಿ । **ಅನ್ಯತ್ರ**—ಬೇರೆ ಕಡೆಗೆ । **ನೋ ಅಹ ಪ್ರ ವಿಂದಸಿ**—ಖಂಡಿತಹೋಗುವುದೇ ಇಲ್ಲ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಶ್ರೇಷ್ಠನು.

॥ ಭಾವಾರ್ಥ ॥

ಎಲೈ ಇಂದ್ರನೇ, ಮನಸ್ಸಿನಲ್ಲಿ ನೀನು ಅತ್ಯಂತ ವ್ಯಥೆಗೊಂಡವನಾಗಿ ವೃಷಾಕಪಿಯ ಕಡೆಗೆ ಓಡುತ್ತೀಯೆ. ಸೋಮಪಾನಕ್ಕಾಗಿ ಬೇರೆಕಡೆಗೆ ಹೋಗುವುದೇ ಇಲ್ಲ. ಸಕಲ ಜಗತ್ತಿಗಿಂತಲೂ ಇಂದ್ರನೇ ಅಧಿಕನು.

English Translation

[ Indrani speaks: ] You, Indra, much annoyed, hasten towards Vrishakapi ; and yet you find no other place to drink the Soma ; Indra is above all (the world).

॥ ಸಂಹಿತಾಪಾಠಃ ॥

**ಕಿಮುಯಂ ತ್ವಾಂ ವೃಷಾಕಪಿಶ್ಚಕಾರ ಹರಿತೋ ಮೃಗಃ ।**

**ಯಸ್ಮಾ ಇರಸ್ಯಸೀದು ನ್ವ೧ರ್ಯೋ ವಾ ಪುಷ್ಟಿಮದ್ವಸು ವಿಶ್ವಸ್ಮಾದಿಂದ್ರ ಉತ್ತರಃ ॥ ೩ ॥**

॥ ಪದಪಾಠಃ ॥

ಕಿಂ । **ಅಯಂ** । **ತ್ವಾಂ** । ವೃಷಾಕಪಿಃ । **ಚಕಾರ** । ಹರಿತಃ । ಮೃಗಃ ।

ಯಸ್ಮೈ । ಇರಸ್ಯಸಿ । ಇತ್ । ಊಂ ಇತಿ । ನು । ಅರ್ಯಃ । ವಾ । ಪುಷ್ಟಿಽಮತ್ । ವಸು । ವಿಶ್ವಸ್ಮಾತ್ । ಇಂದ್ರಃ । ಉತ್ಽತರಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಂ ಪ್ರತಿ ಹರಿತೋ ಹರಿತವರ್ಣೋ ಮೃಗೋ ಮೃಗಭೂತೋಽಯಂ ವೃಷಾಕಪಿಃ । ಮೃಗಜಾತಿರ್ಹಿ ವೃಷಾಕಪಿಃ । ಕಿಂ ಪ್ರಿಯಂ ಚಕಾರ । ಅಕಾರ್ಷೀತ್ । ಯಸ್ಮೈ ವೃಷಾಕಪಯೇ ಪುಷ್ಟಿಮತ್ಪೋಷಯುಕ್ತಂ ವಸು ಧನಮರ್ಯೋ ವೋದಾರ ಇವ ಸ ತ್ವಂ ನು ಕ್ಷಿಪ್ರಮಿರಸ್ಯಸೀತ್ ಪ್ರಯಚ್ಛಸ್ಯೇವ । ಯ ಇಂದ್ರೋ ವಿಶ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಸ್ಮೈ**—ಯಾವ ವೃಷಾಕಪಿಗೆ । **ಪುಷ್ಟಿವತ್**—ಪುಷ್ಟಿಸಾಧನವಾದ । **ವಸು**—ಧನವನ್ನು । **ಅರ್ಯೋ ನ**—ಉದಾರಿಯಾದ ದಾನಿಯಂತೆ । **ನು**—ಕ್ಷಿಪ್ರವಾಗಿ । **ಇರಸ್ಯಸೀತ್**—ಕೊಟ್ಟೆಯೋ ಅಂತಹ । **ಹರಿತಃ**—ಪಚ್ಚೆವರ್ಣವುಳ್ಳವನೂ । **ಮೃಗಃ**—ಮೃಗರೂಪನೂ ಆದ । **ಅಯಂ ವೃಷಾಕಪಿಃ**—ಈ ವೃಷಾಕಪಿಯು । **ತ್ವಾಂ**—ನಿನಗೆ । **ಕಿಂ**—ಯಾವ ಪ್ರಿಯವನ್ನು । **ಚಕಾರ**—ಮಾಡಿದನು । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅತ್ಯುತ್ಕೃಷ್ಟನು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ವೃಷಾಕಪಿಗೆ ನೀನು ಉದಾರಿಯಾದ ದಾನಿಯಂತೆ ಪುಷ್ಟಿಸಾಧನವಾದ ಧನವನ್ನು ಕೊಟ್ಟೆಯೋ, ಅಂತಹ ಪಚ್ಚೆವರ್ಣದವನೂ, ಮೃಗರೂಪನೂ ಆದ ವೃಷಾಕಪಿಯು ನಿನಗೆ ಏನು ಒಳ್ಳೆಯದನ್ನು ಮಾಡಿದನು ? ಇಂದ್ರನು ಸಕಲ ಜಗತ್ತಿಗಿಂತಲೂ ಉತ್ಕೃಷ್ಟನು.

English Translation

What (favour) has this tawny dear Vrishakapi done to you that you should, like a liberal (banefactor), bestow upon him wealth and nourish ment ? Indra is above all (the world).

|| ವಿಶೇಷವಿಷಯಗಳು ||

ಎಲೈ ಇಂದ್ರನೇ, ಆ ಹಸುರುವರ್ಣದ ಮೃಗವಾದ ವೃಷಾಕಪಿಯು ನಿನಗೆ ಏನು ಉಪಕಾರಮಾಡಿದಾನೆ ? ಅವನಿಗೆ ಧನವನ್ನೂ, ಪುಷ್ಟಿಯಾದ ಆಹಾರವನ್ನೂ ಉದಾರಿಯಾದ ದಾನಿಯಂತೆ ಏತಕ್ಕೆ ಕೊಡುತ್ತೀಯೆ ? ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಯಮಿಮಂ ತ್ವಂ ವೃಷಾಕಪಿಂ ಪ್ರಿಯಮಿಂದ್ರಾಭಿರಕ್ಷಸಿ ।
ಶ್ವಾ ನ್ವಸ್ಯ ಜಂಭಿಷದಪಿ ಕರ್ಣೇ ವರಾಹಯುರ್ವಿಶ್ವಸ್ಮಾದಿಂದ್ರ ಉತ್ತರಃ ॥

॥ ಪದಪಾಠಃ ॥

ಯಂ । ಇಮಂ । ತ್ವಂ । ವೃಷಾಕಪಿಂ । ಪ್ರಿಯಂ । ಇಂದ್ರ । ಅಭಿऽರಕ್ಷಸಿ ।
ಶ್ವಾ । ನು । ಅಸ್ಯ । ಜಂಭಿಷತ್ । ಅಪಿ । ಕರ್ಣೇ । ವರಾಹऽಯುಃ । ವಿಶ್ವಸ್ಮಾತ್ । ಇಂದ್ರಃ ।
ಉತ್ऽತರಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಪ್ರಿಯಮಿಷ್ಟಂ ಪುತ್ರಂ ಯಮಿಮಂ ವೃಷಾಕಪಿಮಭಿರಕ್ಷಸಿ ಪರಿಪಾಲಯಸಿ ಅಸ್ಯೈನಂ ವೃಷಾಕಪಿಂ । ದ್ವಿತೀಯಾರ್ಥೇ ಷಷ್ಠೀ । ವರಾಹಯುರ್ವರಾಹಮಿಚ್ಛಞ್ಶ್ವಾ ನು ಕ್ಷಿಪ್ರಂ ಜಂಭಿಷತ್ । ಭಕ್ಷಯತು । ಅಪಿ ಚ ಕರ್ಣೇ ಗೃಹ್ಣಾತ್ವಿತಿ ಶೇಷಃ । ಶ್ವಾನೋ ಹಿ ವರಾಹಮಿಚ್ಛಂತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಪ್ರಿಯಂ**—ನಿನಗೆ ಪ್ರೀತಿಪಾತ್ರನಾದ । **ಯಂ**—ಯಾವ । **ಇಮಂ ವೃಷಾಕಪಿಂ**—ಈ ವೃಷಾಕಪಿಯನ್ನು । **ಅಭಿರಕ್ಷಸಿ**—ಕಾಪಾಡುವೆಯೋ । **ಅಸ್ಯ**—ಅಂತಹ ಈ ವೃಷಾಕಪಿಯನ್ನು । **ವರಾಹಯುಃ**—ವರಾಹನನ್ನು ಹಿಡಿಯಲು ಇಚ್ಛಿಸುವ । **ಶ್ವಾ**—ನಾಯಿಯು । **ನು**—ಕ್ಷಿಪ್ರವಾಗಿ । **ಕರ್ಣೇ**—ಕಿವಿಯಿಂದ ಹಿಡಿದುಕೊಂಡು । **ಜಂಭಿಷತ್**—ನುಂಗಲಿ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಪ್ರೀತಿಪಾತ್ರನಾದ ಯಾವ ವೃಷಾಕಪಿಯನ್ನು ನೀನು ಕಾಪಾಡುವೆಯೋ, ಅಂತಹ ಈ ವೃಷಾಕಪಿಯನ್ನು ವರಾಹನನ್ನು ಹಿಡಿಯಲಿಚ್ಛಿಸುವ ನಾಯಿಯು ಕ್ಷಿಪ್ರವಾಗಿ ಕಿವಿಯಿಂದ ಹಿಡಿದು ನುಂಗಲಿ. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

English Translation

This Vrishakapi whom you, Indra, cherish as your dear (son)—may the dog which chases the boar (seize) him by the ear (and) devour him; Indra is above all (the world).

॥ ವಿಶೇಷವಿಷಯಗಳು ॥

ಇಂದ್ರಾಣಿಯು ವೃಷಾಕಪಿಯ ವಿಷಯದಲ್ಲಿ ಜುಗುಪ್ಸೆಗೊಂಡು ಈರೀತಿ ಹೇಳುತ್ತಾಳೆ—ಎಲೈ ಇಂದ್ರನೇ, ನೀನು ಇಷ್ಟು ಅಭಿಮಾನದಿಂದ ಕಾಪಾಡುತ್ತಿರುವ ವೃಷಾಕಪಿಯನ್ನು ಕಂಡರೆ ನನಗಾಗುವುದಿಲ್ಲ. ಕಾಡುಹಂದಿಯನ್ನು ಬೇಟೆನಾಯಿಯು ಅಟ್ಟಿಸಿಕೊಂಡುಹೋಗಿ ಅದನ್ನು ಕಿವಿಯನ್ನು ಕಚ್ಚಿ ಹಿಡಿದುತರುವಂತೆ ಈ ವೃಷಾಕಪಿಯನ್ನು ನಾಯಿಯು ಬೇಗನೆ ಕಚ್ಚಿತಿಂದುಬಿಡಲಿ.

॥ ಸಂಹಿತಾಪಾಠಃ ॥

ಪ್ರಿಯಾ ತಷ್ಟಾನಿ ಮೇ ಕಪಿರ್ವ್ಯಕ್ತಾ ವ್ಯದೂದುಷತ್ ।
ಶಿರೋ ನ್ವಸ್ಯ ರಾವಿಷಂ ನ ಸುಗಂ ದುಷ್ಕೃತೇ ಭುವಂ ವಿಶ್ವಸ್ಮಾದಿಂದ್ರ ಉತ್ತರಃ ॥ ೫ ॥

। ಪದಪಾಠಃ ॥

ಪ್ರಿಯಾ । ತಷ್ಟಾನಿ । ಮೇ । ಕಪಿಃ । ವಿಽಅಕ್ತಾ । ವಿ । ಅದೂದುಷತ್ ।

ಶಿರಃ । ನು । ಅಸ್ಯ । ರಾವಿಷಂ । ನ । ಸುಽಗಂ । ದುಃಽಕೃತೇ । ಭುವಂ । ವಿಶ್ವಸ್ಮಾತ್ । ಇಂದ್ರಃ ।

ಉತ್ಽತರಃ ॥ ೫ ॥

। ಸಾಯಣಭಾಷ್ಯಂ ।

ಮೇ ಮಹ್ಯಮಿಂದ್ರಾಣ್ಯೈ ತಷ್ಟಾನಿ ಯಜಮಾನೈಃ ಕಲ್ಪಿತಾನಿ ಪ್ರಿಯಾ ಪ್ರಿಯಾಣಿ ವ್ಯಕ್ತಾ ವ್ಯಕ್ತಾನ್ಯಾಜ್ಯೈರ್ವಿಶೇಷೇಣಾಕ್ತಾನಿ ಹವೀಂಷಿ ಕಶ್ಚಿದ್ವೃಷಾಕಪೇರ್ವಿಷಯೇ ವರ್ತಮಾನಃ ಕಪಿರ್ವ್ಯದೂದುಷತ್ । ದೂಷಯಾಮಾಸ । ತತೋಽಹಮಸ್ಯ ತತ್ಕಪಿಸ್ವಾಮಿನೋ ವೃಷಾಕಪೇಃ ಶಿರೋ ನು ಕ್ಷಿಪ್ರಂ ರಾವಿಷಂ। ಲುನೀಯಾಂ । ದುಷ್ಕೃತೇ ದುಷ್ಟಸ್ಯ ಕರ್ಮಣಃ ಕರ್ತ್ರೇ ವೃಷಾಕಪಯೇಽಸ್ಮೈ ಸುಗಂ ಸುಖಂ ನ ಭುವಂ । ಅಹಂ ನ ಭವೇಯಂ । ಅಸ್ಮೈ ಸುಖಪ್ರದಾತ್ರೀ ನ ಭವಾಮೀತ್ಯರ್ಥಃ । ಅಸ್ಯಾ ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥

। ಪ್ರತಿಪದಾರ್ಥ ॥

**ಮೇ**—(ಇಂದ್ರಾಣಿಯಾದ) ನನ್ನನ್ನುದ್ದೇಶಿಸಿ । **ತಷ್ಟಾನಿ**—ಯಜಮಾನರಿಂದ ಕಲ್ಪಿತವಾದವೂ । **ಪ್ರಿಯಾ**—ಹಿತಕರವಾದವೂ । **ವ್ಯಕ್ತಾ**—ಆಜ್ಯಪೂರಿತವೂ ಆದ ಹವಿಸ್ಸನ್ನು । **ಕಪಿಃ**—ಈ ವೃಷಾಕಪಿಯ ದೇಶದಲ್ಲಿರುವ ಈ ದುಷ್ಟಕಪಿಯು । **ವ್ಯದೂದುಷತ್**—ಕೆಡಿಸಿದೆ (ಆದ್ದರಿಂದ) । **ಅಸ್ಯ**—ಈ ದುಷ್ಟಕಪಿಯ ಸ್ವಾಮಿಯಾದ ವೃಷಾಕಪಿಯ । **ಶಿರೋ ನು**—ಶಿರಸ್ಸನ್ನು । **ರಾವಿಷಂ**—ನಾನು ಛೇದಿಸುತ್ತೇನೆ । **ದುಷ್ಕೃತೇ**—ಕೆಟ್ಟ ಕೆಲಸವನ್ನು ಮಾಡುವವನಿಗೆ । **ಸುಗಂ**—ಸುಖವನ್ನು । **ನ ಭುವಂ**—ಉಂಟುಮಾಡಲವಕಾಶಕೊಡುವುದಿಲ್ಲ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಇಂದ್ರಾಣಿಯಾದ ನನ್ನನ್ನುದ್ದೇಶಿಸಿ ಯಜಮಾನರಿಂದ ಕಲ್ಪಿತವೂ ನನಗೆ ಹಿತಕರವೂ, ಆಜ್ಯಪೂರಿತವೂ ಆದ ಹವಿಸ್ಸನ್ನು ಈ ಕಪಿಯು ಕೆಡಸಿದೆ. ಇದರ ಶಿರಸ್ಸನ್ನು ಛೇದಿಸುತ್ತೇನೆ. ಕೆಟ್ಟಕೆಲಸವನ್ನು ಮಾಡುವವನಿಗೆ ಸುಖವುಂಟಾಗಲವಕಾಶವನ್ನು ಕೊಡುವುದಿಲ್ಲ. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

The ape has spoiled the beloved ghi-adorned (oblations) made to me (by worshippers); let me quickly cut off his head, let me not be the giver of happiness to one who works evil; Indra is above all (the world).

॥ ವಿಶೇಷವಿಷಯಗಳು ॥

**ಕಪಿಃ—ವೃಷಾಕಪೇರ್ವಿಷಯೇ ವರ್ತಮಾನಃ ಕಶ್ಚಿತ್ ಕಪಿಃ ।** ವೃಷಾಕಪಿಯ ರಾಜ್ಯದಲ್ಲಿರುವ ಒಂದಾನೊಂದು ದುಷ್ಟಕಪಿಯು ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥಮಾಡಿ, **ಅಸ್ಯ ಶಿರೋ ನು ಕ್ಷಿಪ್ರಂ ರಾವಿಷಂ—ತತ್ಕಪಿಸ್ವಾಮಿನೋ ವೃಷಾಕಪೇಃ ಶಿರಃ ಲುನೀಯಾಂ ।** ಆದ್ದರಿಂದ ಈ ಕಪಿಗೆ ಸ್ವಾಮಿಯಾದ ಈ ವೃಷಾಕಪಿಯ ಶಿರಸ್ಸನ್ನು ಕತ್ತರಿಸಿಹಾಕುತ್ತೇನೆ ಎಂದು ಇಂದ್ರಾಣಿಯು ಹೇಳಿದಾಳೆ. ಲೋಕವ್ಯವಹಾರದಲ್ಲಿಯೂ ಈರೀತಿ ಇರುವುದು ಕಂಡುಬರುವುದು. ಒಂದು ಪಶುವು ಮಾಡಿದ ದುಷ್ಕೃತ್ಯಕ್ಕಾಗಿ ಅದರ ಯಜಮಾನನನ್ನು ಶಿಕ್ಷಿಸುವುದು ರೂಢಿಯು. ಉದಾ.—ಗೋವಾಗಲಿ, ನಾಯಿಯಾಗಲಿ ಮತ್ತೊಬ್ಬರಿಗೆ ಕೆಡುಕನ್ನು ಮಾಡಿದರೆ ಅವುಗಳ ಯಜಮಾನನನ್ನು ಶಿಕ್ಷೆಗೆ ಗುರಿಪಡಿಸುವುದು ಸಾಮಾನ್ಯವಾಗಿದೆ.

। ಸಂಹಿತಾಪಾಠಃ ।

ನ ಮತ್ಸ್ತ್ರ್ಯ೧॑ಸ್ತಿ ಸುಭಸತ್ತ॑ರಾ ನ ಸುಯಾಶು॑ತರಾ ಭುವತ್ ।
ನ ಮತ್ಪ್ರತಿ॑ಚ್ಯವೀಯಸೀ ನ ಸಕ್ಥ್ಯು೧॑ದ್ಯಮೀಯಸೀ ವಿಶ್ವ॑ಸ್ಮಾದಿಂದ್ರ॒ ಉತ್ತ॑ರಃ ॥ ೬ ॥

॥ ಪದಪಾಠಃ ॥

ನ । ಮತ್ । ಸ್ತ್ರೀ । ಸುಭಸತ್ಽತರಾ । ನ । ಸುಯಾಶುಽತರಾ । ಭುವತ್ ।
ನ । ಮತ್ । ಪ್ರತಿಽಚ್ಯವೀಯಸೀ । ನ । ಸಕ್ಥಿ । ಉತ್ಽಯಮೀಯಸೀ । ವಿಶ್ವಸ್ಮಾತ್ । ಇಂದ್ರಃ । ಉತ್ಽತರಃ ॥ ೬ ॥

। ಸಾಯಣಭಾಷ್ಯಂ ।

ಮನ್ಮತ್ತೋಽನ್ಯಾ ಸ್ತ್ರೀ ನಾರೀ ಸುಭಸತ್ತರಾತಿಶಯೇನ ಸುಭಗಾ ನ ಭುವತ್ । ನ ಭವತಿ । ನಾಸ್ತೀತ್ಯರ್ಥಃ । ಕಿಂಚ ಮತ್ತೋಽನ್ಯಾ ಸ್ತ್ರೀ ಸುಯಾಶುತರಾತಿಶಯೇನ ಸುಸುಖಾತಿಶಯೇನ ಸುಪುತ್ರಾ ವಾ ನ ಭವತಿ । ತಥಾ ಚ ಮಂತ್ರಾಂತರಂ । ದದಾತಿ ಮಹ್ಯಂ ಯಾದುರೀ ಯಾಶೂನಾಂ ಭೋಜ್ಯಾ ಶತಾ । ಋ. ೧-೧೨೬-೬ । ಇತಿ । ಕಿಂಚ ಮನ್ಮತ್ತೋಽನ್ಯಾ ಪ್ರತಿಚ್ಯವೀಯಸೀ ಪುಮಾಂಸಂ ಪ್ರತಿ ಶರೀರಸ್ಯಾತ್ಯಂತಂ ಚ್ಯಾವಯಿತ್ರೀ ನಾಸ್ತಿ । ಕಿಂಚ ಮತ್ತೋಽನ್ಯಾ ಸ್ತ್ರೀ ಸಕ್ಥ್ಯುದ್ಯಮೀಯಸೀ ಸಂಭೋಗೇಽತ್ಯಂತಮುತ್ಕ್ಷೇಪ್ತ್ರೀ ನಾಸ್ತಿ । ನ ಮತ್ತೋಽನ್ಯಾ ಕಾಚಿದಪಿ ನಾರೀ ಮೈಥುನೇಽನುಗುಣಂ ಸಕ್ಥ್ಯುದ್ಯಚ್ಛತೀತ್ಯರ್ಥಃ । ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ । ಉತ್ಕೃಷ್ಟಃ ॥

॥ ಪ್ರತಿಪದಾರ್ಥ ।

ಮತ್—ನನಗಿಂತಲೂ । **ಸುಭಸತ್ತರಾ**—ಅಧಿಕವಾದ ಸೌಭಾಗ್ಯವುಳ್ಳ । ಸ್ತ್ರೀ—ಹೆಂಗಸು । **ನ ಭುವತ್**—ಇಲ್ಲವೇ ಇಲ್ಲ । **ಸುಯಾಶುತರಾ**—ಅಧಿಕವಾದ ಸುಖದಾಯಕಳೂ । ನ—ನನಗಿಂತ ಮಿಾರಿ

ದವಳಿಲ್ಲ । **ಮತ್**—ನನಗಿಂತಲೂ । **ಪ್ರತಿಚ್ಯವೀಯಸೀ**—ಪತಿಯೊಂದಿಗೆ ಹೊಂದಿಕೊಳ್ಳುವವಳೂ । **ನ**—ಬೇರೆಯಿಲ್ಲ । **ಸಕ್ಥಿ**—ಪತಿಪತ್ನಿಯರು ಒಂದಿಗಿರುವಾಗ । **ಉದ್ಯಮೀಯಸೀ**—ನನಗಿಂತಲೂ ಅಧಿಕವಾದ ಅನುಸರಣೆಯುಳ್ಳವಳೂ । **ನ**—ಬೇರೆ ಯಾರೂ ಇಲ್ಲ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ। **ಉತ್ತರಃ**—ಶ್ರೇಷ್ಠನು.

॥ ಭಾವಾರ್ಥ ॥

ನನಗಿಂತಲೂ ಅಧಿಕವಾದ ಸೌಭಾಗ್ಯವುಳ್ಳ ಹೆಂಗಸು ಯಾರೂ ಇಲ್ಲ. ಅಧಿಕವಾದ ಸುಖದಾಯಕಳು ಯಾರೂ ಇಲ್ಲ. ಪತಿಯೊಂದಿಗೆ ಹೊಂದಿಕೊಳ್ಳುವವಳೂ, ಪತಿಪತ್ನಿಯರು ಒಂದಗಿರುವಾಗ ಪತಿಯ ಇಚ್ಛೆಯನ್ನು ಅನುಸರಿಸುವವಳೂ ನನ್ನನ್ನು ಮೀರಿ ಇನ್ನೊಬ್ಬಳಿಲ್ಲ. ಇಂದ್ರನು ಸಕಲ ಜಗತ್ತಿಗಿಂತಲೂ ಶ್ರೇಷ್ಠನು.

English Translation

There is no woman more amiable than I am, nor one who bears fairer sons than I ; nor one more tractable nor one more ardent ; Indra is above all (the world),

॥ ಸಂಹಿತಾಪಾಠಃ ॥

**ಉವೇ ಅಂಬ ಸುಲಾಭಿಕೇ ಯಥೇವಾಂಗ ಭವಿಷ್ಯತಿ ।**
**ಭಸನ್ಮೇ ಅಂಬ ಸಕ್ಥಿ ಮೇ ಶಿರೋ ಮೇ ವೀವ ಹೃಷ್ಯತಿ ವಿಶ್ವಸ್ಮಾದಿಂದ್ರ**
**ಉತ್ತರಃ ॥ ೭ ॥**

॥ ಪದಪಾಠಃ ॥

ಉವೇ । ಅಂಬ । ಸುಲಾಭಿಕೇ । ಯಥಾಽಇವ । ಅಂಗ । ಭವಿಷ್ಯತಿ ।
ಭಸತ್ । ಮೇ । ಅಂಬ । ಸಕ್ಥಿ । ಮೇ । ಶಿರಃ । ಮೇ । ವಿಽಇವ । ಹೃಷ್ಯತಿ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೭ ॥

॥ ಸಾಯಣಭಾಷ್ಯಂ ॥

ಏವಮಿಂದ್ರಾಣ್ಯಾ ಶಪ್ತೋ ವೃಷಾಕಪಿರ್ಬ್ರವೀತಿ । ಉವೇ ಇತಿ ಸಂಬೋಧನಾರ್ಥೋ ನಿಪಾತಃ । ಹೇ ಅಂಬ ಮಾತಃ ಸುಲಾಭಿಕೇ ಶೋಭನಲಾಭೇ ತ್ವಯಾ ಯಥೈವ ಯೇನ ಪ್ರಕಾರೇಣೈವೋಕ್ತಂ ತಥೈವ ತದಂಗ ಕ್ಷಿಪ್ರಂ ಭವಿಷ್ಯತಿ । ಭವತು । ಕಿಮನೇನ ತ್ವದನುಪ್ರೀತಿಕಾರಿಣಾ ಗ್ರಹೇಣ ಮಮ ಪ್ರಯೋಜನಂ । ಕಿಂಚ ಮೇ ಮಮ ಪಿತುಸ್ತ್ವದೀಯೋ ಭಸದ್ಭಗ ಉಪಯುಜ್ಯತಾಂ । ಕಿಂಚ ಮಮ

ಪಿತುಸ್ತ್ವದೀಯಂ ಸಕ್ಥಿ ಚೋಪಯುಜ್ಯತಾಂ । ಕಿಂಚ ಮೇ ಮಮ ಪಿತರಮಿಂದ್ರಂ ತ್ವದೀಯಂ ಶಿರಶ್ಚ ಪ್ರಿಯಾಲಾಪೇನ ವೀವ ಯಥಾ ಕೋಕಿಲಾದಿಃ ಪಕ್ಷೀ ತದ್ವದ್ಧೃಷ್ಯತಿ। ಹರ್ಷಯತು। ಮಮ ಪಿತೇಂದ್ರೋ ವಿಶ್ವಸ್ಮಾದುತ್ತರಃ ॥

। ಪ್ರತಿಪದಾರ್ಥ ।

**ಸುಲಾಭಿಕೇ**—ಸುಲಭವಾಗಿ ಅನುಗ್ರಹಿಸುವ । **ಉವೇ ಅಂಬ**—ಎಲೈ ಮಾತೆಯೇ । **ಯಥೈವ**—ನೀನು ಹೇಳಿದಂತೆಯೇ । **ಅಂಗ**—ಕ್ಷಿಪ್ರವಾಗಿ । **ಭವಿಷ್ಯತಿ**—ನಡೆಯಲಿ । **ಅಂಬ**—ತಾಯಿಯೇ । **ಸಕ್ಥಿ**—ನೀನು ಪತಿಯೊಂದಿಗಿರುವಾಗ । **ಮೇ**—ನನ್ನ ತಂದೆಯಾದ ಇಂದ್ರನು । **ಭಸತ್**—ನಿನ್ನೊಡನೆ ಸೌಖ್ಯವನ್ನನು ಭವಿಸಲಿ । **ವೀವ**—ಪಕ್ಷಿಯಂತೆ । **ಶಿರಃ**—ನಿನ್ನ ಶಿರಸ್ಸು । **ಮೇ**—ನನ್ನ ಪಿತೃವಾದ ಇಂದ್ರನನ್ನು । **ಹೃಷ್ಯತಿ**-ಹರ್ಷಗೊಳಿಸಲಿ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅತ್ಯಂತ ಶ್ರೇಷ್ಠನು.

॥ ಭಾವಾರ್ಥ ॥

ಸುಲಭವಾಗಿ ಅನುಗ್ರಹಿಸತಕ್ಕ ಎಲೈ ಮಾತೆಯೇ, ನೀನು ಹೇಳಿದಂತೆಯೇ ಕ್ಷಿಪ್ರವಾಗಿ ನೆರವೇರಲಿ. ನೀನು ಪತಿಯೊಂದಿಗಿರುವಾಗ ನನ್ನ ತಂದೆಯಾದ ಇಂದ್ರನು ನಿನ್ನೊಡನೆ ಸೌಖ್ಯವನ್ನನುಭವಿಸಲಿ. ನಿನ್ನ ಶಿರಸ್ಸು ನನ್ನ ಪಿತೃವಾದ ಇಂದ್ರನನ್ನು ಪಕ್ಷಿಯಂತೆ ಹರ್ಷಗೊಳಿಸಲಿ. ಇಂದ್ರನು ಸಕಲ ಜಗತ್ತಿಗಿಂತಲೂ ಅತ್ಯಂತ ಶ್ರೇಷ್ಠನು.

English Translation

[ Vrishakapi speaks ] : O mother, who are easy of access, it will quickly be as (you have said) ; may my (father) and you, mother, be united ; may it delight my (father) and your head like a bird : Indra is above all (the world).

॥ ಸಂಹಿತಾಪಾಠಃ ॥

ಕಿಂ ಸುಬಾಹೋ ಸ್ವಂಗುರೇ ಪೃಥುಷ್ಟೋ ಪೃಥುಜಾಘನೇ ।

ಕಿಂ ಶೂರಪತ್ನಿ ನಸ್ತ್ವಮಭ್ಯಮೀಷಿ ವೃಷಾಕಪಿಂ ವಿಶ್ವಸ್ಮಾದಿಂದ್ರ ಉತ್ತರಃ ॥

ಪದಪಾಠಃ ॥

ಕಿಂ । ಸುಬಾಹೋ ಇತಿ ಸುऽಬಾಹೋ । ಸುऽಅಂಗುರೇ । ಪೃಥುಸ್ತೋ ಇತಿ ಪೃಥುऽಸ್ತೋ ಪೃಥುऽಜಘನೇ ।

ಕಿಂ । ಶೂರऽಪತ್ನಿ । ನಃ । ತ್ವಂ । ಅಭಿ । ಅಮೀಷಿ । ವೃಷಾಕಪಿಂ । ವಿಶ್ವಸ್ಮಾತ್ । ಇಂದ್ರಃ । ಉತ್ऽತರಃ ॥ ೮ ॥

। ಸಾಯಣಭಾಷ್ಯಂ ।

ಕ್ರುದ್ಧಾಮಿಂದ್ರ ಉಪಶಮಯತಿ । ಹೇ ಸುಬಾಹೋ ಹೇ ಶೋಭನಬಾಹೋ ಸ್ವಂಗುರೇ ಶೋಭನಾಂಗುಲಿಕೇ ಪೃಥುಷ್ಟೋ ಪೃಥುಕೇಶಸಂಘಾತೇ ಪೃಥುಜಘನೇ ವಿಸ್ತೀರ್ಣಜಘನೇ ಶೂರಪತ್ನಿ ವೀರಭಾರ್ಯೇ ಹೇ ಇಂದ್ರಾಣಿ ತ್ವಂ ನೋಽಸ್ಮದೀಯಂ ವೃಷಾಕಪಿಂ ಕಿಮರ್ಥಮಭ್ಯಮೀಷಿ । ಅಭಿಕ್ರುಧ್ಯಸಿ । ಏಕಃ ಕಿಂಶಬ್ದಃ । ಯಸ್ಯ ಪಿತೇಂದ್ರೋಽಹಂ ವಿಶ್ವಸ್ಮಾದುತ್ತರಃ ॥

। ಪ್ರತಿಪದಾರ್ಥ ।

**ಸುಬಾಹೋ**—ಉತ್ತಮವಾದ ಬಾಹುಗಳುಳ್ಳವಳೂ । **ಸ್ವಂಗುರೇ**—ಶ್ರೇಷ್ಠವಾದ ಬೆರಳುಗಳುಳ್ಳವಳೂ । **ಪೃಥುಷ್ಟೋ**—ಪುಷ್ಟವಾದ ಕೇಶರಾಶಿಯುಳ್ಳವಳೂ । **ಪೃಥುಜಘನೇ**—ವಿಸ್ತೃತವಾದ ಜಘನಪ್ರದೇಶವುಳ್ಳವಳೂ । **ಶೂರಪತ್ನಿ**—ವೀರಪತ್ನಿಯೂ ಆದ ಎಲೈ ಇಂದ್ರಾಣಿಯೇ । **ತ್ವಂ**—ನೀನು । **ನಃ**—ನಮ್ಮ ಪುತ್ರನಾದ । **ವೃಷಾಕಪಿಂ**—ವೃಷಾಕಪಿಯ ವಿಷಯದಲ್ಲಿ । **ಕಿಂ ಅಭ್ಯಮೀಷಿ**—ಏತಕ್ಕಾಗಿ ಕೋಪಗೊಳ್ಳುತ್ತೀಯೆ । **ಇಂದ್ರಃ**—ಲೋಕಕ್ಕೆ ಪ್ರಭುವಾದ ನಾನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅತ್ಯಧಿಕನು.

। ಭಾವಾರ್ಥ ।

ಉತ್ತಮವಾದ ಬಾಹುಗಳುಳ್ಳವಳೂ, ಶ್ರೇಷ್ಠವಾದ ಬೆರಳುಗಳುಳ್ಳವಳೂ, ಪುಷ್ಟವಾದ ಕೇಶರಾಶಿಗಳುಳ್ಳವಳೂ, ವಿಸ್ತೃತವಾದ ಜಘನಪ್ರದೇಶಗಳುಳ್ಳವಳೂ, ವೀರಪತ್ನಿಯೂ ಆದ ಎಲೈ ಇಂದ್ರಾಣಿಯೇ, ನೀನು ನನ್ನ ಪುತ್ರನಾದ ವೃಷಾಕಪಿಯ ವಿಷಯದಲ್ಲಿ ಏತಕ್ಕಾಗಿ ಕೋಪಗೊಳ್ಳುತ್ತೀಯೆ? ಲೋಕಕ್ಕೆ ಪ್ರಭುವಾದ ನಾನು ಸಕಲ ಜಗತ್ತಿಗಿಂತಲೂ ಅತ್ಯಧಿಕನು.

English Translation

[ Indra speaks : ] You who have beautiful arms, who have beautiful fingers, long-haired, broad-hipped, why are you angry with our Vrishakapi, O you wife of a hero ; Indra is above all (the world).

। ಸಂಹಿತಾಪಾಠಃ ।

ಅವೀರಾಮಿವ ಮಾಮಯಂ ಶರಾರುರಭಿ ಮನ್ಯತೇ ।
ಉತಾಹಮಸ್ಮಿ ವೀರಿಣೀಂದ್ರಪತ್ನೀ ಮರುತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ ॥

॥ ಪದಪಾಠಃ ॥

ಅವೀರಾಂಽಇವ । ಮಾಂ । ಅಯಂ । ಶರಾರುಃ । ಅಭಿ । ಮನ್ಯತೇ ।
ಉತ । ಅಹಂ । ಅಸ್ಮಿ । ವೀರಿಣೀ । ಇಂದ್ರಽಪತ್ನೀ । ಮರುತ್ಽಸಖಾ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೯ ॥

॥ ಸಾಯಣಭಾಷ್ಯಂ ॥

ಪುನರಿಂದ್ರಮಿಂದ್ರಾಣೀ ಬ್ರವೀತಿ । ಶರಾರುರ್ಘಾತುಕೋ ಮೃಗೋಽಯಂ ವೃಷಾಕಪಿರ್ಮಾ-ಮಿಂದ್ರಾಣೀಮವೀರಾಮಿವಾಭಿ ಮನ್ಯತೇ । ವಿಜಾನಾತಿ । ಉತಾಪಿ ಚೇಂದ್ರಪತ್ನೀಂದ್ರಸ್ಯ ಭಾರ್ಯಾಹ-ಮಿಂದ್ರಾಣೀ ವೀರಿಣೀ ಪುತ್ರವತೀ ಮರುತ್ಸಖಾ ಮರುದ್ಭಿರ್ಯುಕ್ತಾ ಚಾಸ್ಮಿ । ಭವಾಮಿ । ಯಃಸ್ಯಾ ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

**ಶರಾರುಃ**—ಹಿಂಸಕನಾದ ಮೃಗರೂಪಿಯಾದ । **ಅಯಂ**—ಈ ವೃಷಾಕಪಿಯು । **ಮಾಂ**—ನನ್ನನ್ನು । **ಅವಿರಾಂ ಇವ**—ವೀರಪುರುಷನ ರಕ್ಷಣೆಯೇ ಇಲ್ಲದವಳಂತೆ (ತಿಳಿದು) । **ಅಭಿ ಮನ್ಯತೇ**—ತಿರಸ್ಕರಿಸಿ ಮಾತನಾಡು ತ್ತದೆ । **ಉತ**—ವಸ್ತುತಃ । **ಅಹಂ**—ನಾನು । **ಇಂದ್ರಪತ್ನೀ**—ವೀರನಾದ ಇಂದ್ರನಿಗೆ ಪತ್ನಿಯಾಗಿಯೂ । **ವೀರಿಣೀ**—ವೀರಪುತ್ರರುಳ್ಳವಳಾಗಿಯೂ । **ಮರುತ್ಸಖಾ**—ಮರುತ್ತುಗಳೊಡಗೂಡಿದವಳಾಗಿಯೂ । **ಅಸ್ಮಿ**—ಆಗಿದ್ದೇನೆ । **ಇಂದ್ರಃ**—ನನ್ನ ಪತಿಯಾದ ಇಂದ್ರನು । **ವಿಶ್ವಸ್ಮಾತ್**—ಸಕಲ ಲೋಕಕ್ಕಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ದುಷ್ಟಮೃಗರೂಪಿಯಾದ ಈ ವೃಷಾಕಪಿಯು ನನ್ನನ್ನು ವೀರಪುರುಷನ ರಕ್ಷಣೆಯೇ ಇಲ್ಲದವಳೆಂದು ತಿಳಿದು ತಿರಸ್ಕರಿಸಿ ಮಾತನಾಡುತ್ತದೆ. ಆದರೆ, ನನಗೆ ವೀರನಾದ ಇಂದ್ರನೇ ಪತಿಯು. ನಾನು ಶೂರರಾದ ಪುತ್ರರನ್ನು ಹೊಂದಿದ್ದೇನೆ. ವೀರರಾದ ಮರುತ್ತುಗಳೇ ನನ್ನ ಸಖರು. ನನ್ನ ಪತಿಯಾದ ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

[ Indrani speaks : ] This savage beast (Vrishakapi) despises me as one who has no male (protector), and yet I am the mother of male off-spring, the wife of Indra, the friend of the Maruts; Indra is above all (the world).

॥ ಸಂಹಿತಾಪಾಠಃ ॥

ಸಂಹೋತ್ರಂ ಸ್ಮ ಪುರಾ ನಾರೀ ಸಮನಂ ವಾವ ಗಚ್ಛತಿ ।
ವೇಧಾ ಋತಸ್ಯ ವೀರಿಣೀಂದ್ರಪತ್ನೀ ಮಹೀಯತೇ ವಿಶ್ವಸ್ಮಾದಿಂದ್ರ ಉತ್ತರಃ ॥

॥ ಪದಪಾಠಃ ॥

ಸಂಽಹೋತ್ರಂ । ಸ್ಮ । ಪುರಾ । ನಾರೀ । ಸಮನಂ । ವಾ । ಅವ । ಗಚ್ಛತಿ ।

ವೇಧಾಃ । ಋತಸ್ಯ । ವೀರಿಣೀ । ಇಂದ್ರಽಪತ್ನೀ । ಮಹೀಯತೇ । ವಿಶ್ವಸ್ಮಾತ್ । ಇಂದ್ರಃ ।

ಉತ್ಽತರಃ ॥ ೧೦ ॥

॥ ಸಾಯಣಭಾಷ್ಯಂ ॥

ನಾರೀ ಸ್ತ್ರೀ ಋತಸ್ಯ ಸತ್ಯಸ್ಯ ವೇಧಾ ವಿಧಾತ್ರೀ ವೀರಿಣೀ ಪುತ್ರವತೀಂದ್ರಪತ್ನೀಂದ್ರಸ್ಯ ಭಾರ್ಯೇಂದ್ರಾಣೀ ಸಂಹೋತ್ರಂ ಸ್ಮ ಸಮೀಚೀನಂ ಯಜ್ಞಂ ಖಲು ಸಮನಂ ವಾ ಸಂಗ್ರಾಮಂ । ಸಮನಮಿತಿ ಸಂಗ್ರಾಮನಾಮಸು ಪಾಠಾತ್ । ಅವ ಪ್ರತಿ ಪುರಾ ಗಚ್ಛತಿ । ಮಹೀಯತೇ । ಸ್ತೋತೃಭಿಃ ಸ್ತೂಯತೇ ಚ । ತಸ್ಯಾ ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥

। ಪ್ರತಿಪದಾರ್ಥ ।

ಋತಸ್ಯ—ಸತ್ಯಕ್ಕೆ । ವಿಧಾತ್ರೀ—ನಿರ್ಮಾಪಕಳೂ । ವೀರಿಣೀ—ವೀರಪುತ್ರರುಳ್ಳವಳೂ । ಇಂದ್ರಪತ್ನೀ—ಇಂದ್ರನ ಭಾರ್ಯೆಯೂ ಆದ । ನಾರೀ—ಇಂದ್ರಾಣಿಯು । ಸಂಹೋತ್ರಂ ಸ್ಮ—ಉತ್ತಮವಾದ ಯಜ್ಞಕ್ಕಾಗಲಿ । ಸಮನಂ ವಾ—ಸಂಗ್ರಾಮಕ್ಕಾಗಲಿ । ಅವ—ಅಭಿಮುಖವಾಗಿ । ಪುರಾ—ಎಲ್ಲರಿಗಿಂತಲೂ ಮೊದಲು । ಗಚ್ಛತಿ—ಹೋಗುತ್ತಾಳೆ । ಮಹೀಯತೇ—ಅಲ್ಲಿ ಸ್ತುತಿಕರ್ತರಿಂದ ಪ್ರಶಂಸಿಸಲ್ಪಡುತ್ತಾಳೆ । ಇಂದ್ರಃ—ಇಂದ್ರನು । ವಿಶ್ವಸ್ಮಾತ್—ಎಲ್ಲ ಲೋಕಕ್ಕಿಂತಲೂ । ಉತ್ತರಃ—ಅತ್ಯಧಿಕನು.

। ಭಾವಾರ್ಥ ।

ಸತ್ಯದ ನಿರ್ಮಾಪಕಳೂ, ವೀರಪುತ್ರರುಳ್ಳವಳೂ, ಇಂದ್ರ ಭಾರ್ಯೆಯೂ ಆದ ಇಂದ್ರಾಣಿಯು ಉತ್ತಮವಾದ ಯಜ್ಞಕ್ಕಾಗಲಿ, ಸಂಗ್ರಾಮಕ್ಕಾಗಲಿ ಎಲ್ಲರಿಗಿಂತಲೂ ಮೊದಲೇ ಹೋಗುತ್ತಾಳೆ. ಅಲ್ಲಿ ಸ್ತುತಿಕರ್ತರಿಂದ ಪ್ರಶಂಸಿಸಲ್ಪಡುತ್ತಾಳೆ. ಇಂದ್ರನು ಎಲ್ಲ ಲೋಕಕ್ಕಿಂತಲೂ ಅತ್ಯಧಿಕನು,

English Translation

The mother who is the institutress of the ceremony, the mother of male offspring, the wife of Indra, goes first to the united sacrifice, to battle (and) is honoured (by the praisers); Indra is above all (the world).

॥ ಸಂಹಿತಾಪಾಠಃ ॥

ಇಂದ್ರಾಣೀಮಾಸು ನಾರಿಷು ಸುಭಗಾಮಹಮಶ್ರವಂ ।

ನಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿರ್ವಿಶ್ವಸ್ಮಾದಿಂದ್ರ ಉತ್ತರಃ ॥೧೧॥

॥ ಪದಪಾಠಃ ॥

ಇಂದ್ರಾಣೀಂ । ಆಸು । ನಾರಿಷು । ಸುಽಭಗಾಂ । ಅಹಂ । ಅಶ್ರವಂ ।

ನಹಿ । ಅಸ್ಯಾಃ । ಅಪರಂ । ಚನ । ಜರಸಾ । ಮರತೇ । ಪತಿಃ । ವಿಶ್ವಸ್ಮಾತ್ । ಇಂದ್ರಃ । ಉತ್ಽತರಃ ॥

॥ ಸಾಯಣಭಾಷ್ಯಂ ॥

ಅಥೇಂದ್ರಾಣೀಮಿಂದ್ರಃ ಸ್ತೌತಿ । ಆಸು ಸೌಭಾಗ್ಯವತ್ತಯಾ ಪ್ರಸಿದ್ಧಾಸು ನಾರೀಷು ಸ್ತ್ರೀಷು ಸ್ತ್ರೀಣಾಂ ಮಧ್ಯ ಇಂದ್ರಾಣೀಂ ಸುಭಗಾಂ ಸೌಭಾಗ್ಯವತೀಮಹಮಿಂದ್ರೋಽಶ್ರವಂ । ಅಶ್ರೌಷಂ । ಕಿಂಚಾಸ್ಯಾ ಇಂದ್ರಾಣ್ಯಾಃ ಪತಿಃ ಪಾಲಕೋ ವಿಶ್ವಸ್ಮಾದುತ್ತರ ಉತ್ಕೃಷ್ಟತರ ಇಂದ್ರೋಽಪರಂ ಜನಾನ್ಯ-ದ್ಭೂತಜಾತಮಿವ ಜರಸಾ ವಯೋಹಾನ್ಯಾ ನ ಹಿ ಮರತೇ । ನ ಖಲು ಮ್ರಿಯತೇ । ಯದ್ವಾ । ಇದಂ ವೃಷಾಕಪೇರ್ವಾಕ್ಯಂ । ತಸ್ಮಿನ್ಪಕ್ಷೇ ತ್ವಹಮಿತಿ ಶಬ್ದೋ ವೃಷಾಕಪಿಪರತಯಾ ಯೋಜ್ಯಃ । ಅನ್ಯತ್ಸಮಾನಂ ॥

॥ ಪ್ರತಿಪದಾರ್ಥ ॥

**ಆಸು ನಾರಿಷು**—ಈ ಸ್ತ್ರೀಯರಲ್ಲೆಲ್ಲ । **ಇಂದ್ರಾಣೀಂ**—ಇಂದ್ರಾಣಿಯನ್ನೇ । **ಸುಭಗಾಂ**—ಶ್ರೇಷ್ಠಳಾದ ಸೌಭಾಗ್ಯವತಿಯೆಂದು । **ಅಹಂ**—ನಾನು । **ಅಶ್ರವಂ**—ಕೇಳಿದ್ದೇನೆ । **ಅಸ್ಯಾಃ**—ಇವಳ । **ಪತಿಃ**—ಪಾಲಕನಾದ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲಲೋಕಕ್ಕಿಂತಲೂ । **ಉತ್ತರಃ**—ಶ್ರೇಷ್ಠನು । **ಅಪರಂ ಚ ನ**—ಬೇರೆ ಜನರಂತೆ । **ಜರಸಾ**—ಮುಪ್ಪಿನಿಂದ । **ನ ಹಿ ಮರತೇ**—ಸಾಯುವುದಿಲ್ಲ.

॥ ಭಾವಾರ್ಥ ॥

ಈ ಸ್ತ್ರೀಯರಲ್ಲೆಲ್ಲ ಇಂದ್ರಾಣಿಯೇ ಅತ್ಯಂತ ಶ್ರೇಷ್ಠಳಾದ ಸೌಭಾಗ್ಯವತಿಯೆಂದು ನಾನು ಕೇಳಿದ್ದೇನೆ. ಸಕಲ ಲೋಕಕ್ಕಿಂತಲೂ ಅಧಿಕನಾದ ಇಂದ್ರನೇ ಇವಳ ಪತಿಯು. ಅವನು ಬೇರೆ ಜನರಂತೆ ಮುಪ್ಪಿನಿಂದ ಸಾಯುವುದಿಲ್ಲ.

English Translation

[ Indra speaks:] I have heard that Indrani is the most fortunate among these women, for her lord Indra, who is above all (the world), does not die of old age like other (men).

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ಇಂದ್ರಾಣೀ ಇಂದ್ರಸ್ಯ ಪತ್ನೀ । ತಸ್ಯೈಷಾ ಭವತಿ । ಇಂದ್ರಾಣೀಮಾಸು ನಾರಿಷು ಸುಭಗಾಮಹ-ಮಶ್ರವಂ । ನ ಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿರ್ವಿಶ್ವಸ್ಮಾದಿಂದ್ರ ಉತ್ತರಃ ॥ ಇಂದ್ರಾಣೀಮಾಸು ನಾರಿಷು ಸುಭಗಾಮಹಮಶೃಣವಂ ನ್ಯ ಹ್ಯಸ್ಯಾ ಅಪರಾಮಪಿ ಸಮಾಂ ಜರಯಾ ಮ್ರಿಯತೇ ಪತಿಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮಃ ॥

(ನಿ. ೧೧-೩೮)

ಇಂದ್ರಾಣೀ ಎಂದರೆ ಇಂದ್ರನ ಪತ್ನಿಯು. ಈ ಮುಂದಿನ ಋಕ್ಕಿನಲ್ಲಿ ಇಂದ್ರಾಣಿಯ ಪ್ರಸ್ತಾಪವಿದೆ ಇಂದ್ರನ ಪತ್ನಿಯಾದ ಇಂದ್ರಾಣಿಯು ಇತರ ಎಲ್ಲಾ ಸ್ತ್ರೀಯರಿಗಿಂತಲೂ ಅತ್ಯಂತ ಸೌಭಾಗ್ಯಯುಕ್ತಳೆಂದು ನಾನು ಕೇಳಿಬಲ್ಲೆನು. ಏಕೆಂದರೆ, ಎಷ್ಟೇ ವರ್ಷ ವಯಸ್ಸಾಗಿದ್ದರೂ ಅವಳ ಪತಿಯಾದ ಇಂದ್ರನು ಯಾವ ಕಾಲಕ್ಕೂ ಮುಪ್ಪಿನಿಂದ ಮೃತನಾಗುವುದಿಲ್ಲ. ಇಂದ್ರನು ಸಕಲ ಜಗತ್ತಿಗಿಂತಲೂ ಶ್ರೇಷ್ಠನಾದವನು ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

। ಸಂಹಿತಾಪಾಠಃ ।

ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।

ಯಸ್ಯೇದಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ

ಉತ್ತರಃ ॥ ೧೨ ॥

। ಪದಪಾಠಃ ।

ನ । ಅಹಂ । ಇಂದ್ರಾಣಿ । ರರಣ । ಸಖ್ಯುಃ । ವೃಷಾಕಪೇಃ । ಋತೇ ।

ಯಸ್ಯ । ಇದಂ । ಅಪ್ಯಂ । ಹವಿಃ । ಪ್ರಿಯಂ । ದೇವೇಷು । ಗಚ್ಛತಿ । ವಿಶ್ವಸ್ಮಾತ್ । ಇಂದ್ರಃ ।

ಉತ್ಽತರಃ ॥ ೧೨ ॥

। ಸಾಯಣಭಾಷ್ಯಂ ।

**ಹೇ ಇಂದ್ರಾಣಿ ಅಹಮಿಂದ್ರಃ ಸಖ್ಯುರ್ಮಮ ಸಖಿಭೂತಾದ್ವೃಷಾಕಪೇರ್ಋತೇ ಪ್ರಿಯಂ ವೃಷಾಕಪಿಂ ವಿನಾ ನ ರರಾಣ । ನ ರಮೇ । ಅಪ್ಯಮಪ್ಸು ಭವಮದ್ಭಿರ್ವಾ ಸುಸಂಸ್ಕೃತಂ ಪ್ರಿಯಂ ಪ್ರೀತಿಕರಮಿದಮುಪಸ್ಥಿತಂ ಹವಿರ್ದೇವೇಷು ದೇವಾನಾಂ ಮಧ್ಯೇ ಯಸ್ಯ ಮಮೇಂದ್ರಸ್ಯ ಸಕಾಶಂ ಗಚ್ಛತಿ । ಯಶ್ಚಾಹಮಿಂದ್ರಃ ಸರ್ವಸ್ಮಾದುತ್ತರಃ । ಯದ್ವಾ । ಅಯಮರ್ಥಃ । ಹೇ ಇಂದ್ರಾಣಿ ವೃಷಾಕಪೇಃ ಸಖ್ಯುರಿಂದ್ರಾದೃತೇಽಹಂ ವೃಷಾಕಪಿರ್ನ ರರಾಣ । ನ ರಮೇ । ಅನ್ಯತ್ಸಮಾನಂ ॥**

। ಪ್ರತಿಪದಾರ್ಥ ।

**ಇಂದ್ರಾಣಿ**—ಎಲೈ ಇಂದ್ರಾಣಿಯೇ । **ಅಹಂ**—ನಾನು । **ಸಖ್ಯುಃ**—ನನ್ನ ಪುತ್ರನಾದ । **ವೃಷಾಕಪೇಃ ಋತೇ**—ವೃಷಾಕಪಿಯನ್ನು ಬಿಟ್ಟು । **ನ ರರಣ**—ಹರ್ಷಿತನಾಗುವುದಿಲ್ಲ । **ಅಪ್ಯಂ**—ಉದಕಗಳಿಂದ ಸಂಸ್ಕೃತವಾದುದೂ । **ಪ್ರಿಯಂ**—ನನಗೆ ಪ್ರೀತಿಕಾರಕವೂ ಆದ । **ಇದಂ ಹವಿಃ**—ಈ ಹವಿಸ್ಸು । **ದೇವೇಷು**—ದೇವತೆಗಳ ನಡುವೆ । **ಯಸ್ಯ**—ಯಾವ ನನ್ನನ್ನು ಕುರಿತು । **ಗಚ್ಛತಿ**—ಬರುವುದೋ ಅಂತಹ । **ಇಂದ್ರಂ**—ಪ್ರಭುವಾದ ನಾನು । **ವಿಶ್ವಸ್ಮಾತ್**—ಸಕಲ ಲೋಕಕ್ಕಿಂತಲೂ । **ಉತ್ತರಃ**—ಅಧಿಕನಾಗಿದ್ದೇನೆ.

॥ ಭಾವಾರ್ಥ ॥

ಎಲೈ ಇಂದ್ರಾಣಿಯೇ, ನನ್ನ ಮಿತ್ರನಾದ ವೃಷಾಕಪಿಯನ್ನು ಬಿಟ್ಟರೆ ನನಗೆ ಹರ್ಷವಿರುವುದಿಲ್ಲ. ಉದಕಗಳಿಂದ ಸಂಸ್ಕೃತವೂ, ನನಗೆ ಪ್ರೀತಿಕಾರಕವೂ ಆದ ಈ ಹವಿಸ್ಸು ದೇವತೆಗಳ ನಡುವೆ ಯಾವ ನನ್ನನ್ನುದ್ದೇಶಿಸಿ ಬರುವುದೋ, ಅಂತಹ ಪ್ರಭುವಾದ ನಾನು ಲೋಕಕ್ಕಿಂತಲೂ ಅಧಿಕನಾಗಿದ್ದೇನೆ.

## English Translation

I am not happy, Indrani, without my friend Vrishakapi; whose acceptable oblation here, purified with water, proceeds to the gods; Indra is above all (the world)

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿನ ವಿಷಯದಲ್ಲಿ ಈ ರೀತಿ ನಿರುಕ್ತವನ್ನು ಹೇಳಿದಾರೆ—

**ನಾಹಮಿಂದ್ರಾಣಿ ರಮೇ ಸಖ್ಯುರ್ವೃಷಾಕಪೇರ್ಋತೇ ಯಸ್ಯೇದಮಪ್ಯಂ ಹವಿರಪ್ಸು ಶೃತಮದ್ಭಿಃ ಸಂಸ್ಕೃತಮಿತಿ ವಾ ಪ್ರಿಯಂ ದೇವೇಷು ನಿಗಚ್ಛತಿ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತ-ದ್ಬ್ರೂಮಃ ॥** (ನಿ. ೧೧-೩೯)

ಈ ಋಕ್ಕಿನಲ್ಲಿ ಇಂದ್ರನು ಇಂದ್ರಾಣಿಯನ್ನು ಸಂಬೋಧಿಸಿ ಈ ರೀತಿ ಹೇಳುವನು—ಎಲೈ ಇಂದ್ರಾಣಿಯೇ, ನನ್ನ ಸ್ನೇಹಿತನೂ ಪುತ್ರನೂ ಆದ ವೃಷಾಕಪಿ ನನ್ನೊಡನಿಲ್ಲದಿದ್ದರೆ ನನಗೆ ಸಂತೋಷವಾಗುವುದಿಲ್ಲ. ಅವನು ನೀರಿನಿಂದ ಪಕ್ವಮಾಡಿದ ಎಂದರೆ ನೀರನ್ನು ಉಪಯೋಗಿಸಿ ಸಿದ್ಧಪಡಿಸಿದ ಹವಿಸ್ಸು ದೇವತೆಗಳಿಗೆ ಪ್ರೀತಿಯನ್ನುಂಟುಮಾಡುವುದಾಗಿ ಅವರನ್ನು ಸಮೀಪಿಸುತ್ತದೆ.

॥ ಸಂಹಿತಾಪಾಠಃ ॥

ವೃಷಾಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ ।
ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ
ಉತ್ತರಃ ॥ ೧೩ ॥

॥ ಪದಪಾಠಃ ॥

ವೃಷಾಕಪಾಯಿ । ರೇವತಿ । ಸುಽಪುತ್ರೇ । ಆತ್ । ಊಂ ಇತಿ । ಸುಽಸ್ನುಷೇ ।
ಘಸತ್ । ತೇ । ಇಂದ್ರಃ । ಉಕ್ಷಣಃ । ಪ್ರಿಯಂ । ಕಾಚಿತ್ಽಕರಂ । ಹವಿಃ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ವೃಷಾಕಪಾಯಿ। ಕಾಮಾನಾಂ ವರ್ಷಕತ್ವಾದಭೀಷ್ಟದೇಶಗ ನಾಚ್ಚೇಂದ್ರೋ ವೃಷಾಕಪಿಃ । ತಸ್ಯ ಪತ್ನಿ । ಯದ್ವಾ । ವೃಷಾಕಪೇರ್ಮಮ ಮಾತರಿತ್ಯರ್ಥಃ । ರೇವತಿ ಧನವತಿ ಸುಪುತ್ರೇ ಶೋಭನ-ಪುತ್ರೇ ಸುಸ್ನುಷೇ ಶೋಭನಸ್ನುಷೇ ಹೇ ಇಂದ್ರಾಣಿ ತೇ ತವಾಯಮಿಂದ್ರ ಉಕ್ಷಣಃ ಸೇಚನಸಮರ್ಥಾ ನಾದ್ವನಂತರಮೇವ। ಶೀಘ್ರಮೇವೇತ್ಯರ್ಥಃ । ಪಶೂನ್ಘಸತ್ । ಪ್ರಾಶ್ನಾತು । ಕಿಂಚ ಕಾಚಿತ್ಕರಂ । ಕಂ ಸುಖಂ। ತಸ್ಯಾಚಿತ್ ಸಂಘಃ। ತತ್ಕರಂ ಹವಿಃ ಪ್ರಿಯಮಿಷ್ಟಂ ಕುರ್ವಿತಿ ಶೇಷಃ। ಕಿಂಚ ತೇ ಪತಿರಿಂದ್ರೋ ವಿಶ್ವಸ್ಮಾದುತ್ತರಃ । ತಥಾ ಚ ಯಾಸ್ಕಃ । ವೃಷಾಕಪಾಯಿ ರೇವತಿ ಸುಪುತ್ರೇ ಮಧ್ಯಮೇನ ಸುಸ್ನುಷೇ ಮಾಧ್ಯಮಿಕಯಾ ವಾಚಾ । ಸ್ನುಷಾ ಸಾಧುಸಾದಿನೀತಿ ವಾ ಸಾಧುಸಾನಿನೀತಿ ವಾ । ಪ್ರಿಯಂ ಕುರುಷ್ವ ಸುಖಾಚಯಕರಂ ಹವಿಃ ಸರ್ವಸ್ಮಾದ್ಯ ಇಂದ್ರ ಉತ್ತರಃ । ನಿ. ೧೨-೯ । ಇತಿ ॥

॥ ಪ್ರತಿಪದಾರ್ಥ ॥

**ವೃಷಾಕಪಾಯಿ**—ವೃಷಾಕಪಿಯ ಮಾತೆಯೂ । **ರೇವತಿ**—ಧನಯುಕ್ತಳೂ । **ಸುಪುತ್ರೇ**—ಉತ್ತಮವಾದ ಪುತ್ರರುಳ್ಳವಳೂ । **ಸುಸ್ನುಷೇ**—ಉತ್ತಮವಾದ ಸೊಸೆಯುಳ್ಳವಳೂ ಆದ । (ಎಲೈ ಇಂದ್ರಾಣಿಯೇ) **ತೇ**—ನಿನ್ನ ಪತಿಯಾದ । **ಇಂದ್ರಃ**—ಇಂದ್ರನು । **ಉಕ್ಷಣಃ**—ಶಕ್ತಿಯುತವಾದ ಎತ್ತುಗಳನ್ನು । **ಆದು**—ಒಡನೆಯೇ । **ಘಸತ್**—ತಿನ್ನಲಿ । **ಕಾಚಿತ್ಕರಂ ಹವಿಃ**—ಸುಖಕಾರಕವಾದ ಹವಿಸ್ಸನ್ನು । **ಪ್ರಿಯಂ**—ಇಂದ್ರನಿಗೆ। ಹಿತಕರವಾಗುವಂತೆ ಮಾಡು । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತುಗಳಿಗೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ವೃಷಾಕಪಿಯ ಮಾತೆಯೂ, ಧನಯುಕ್ತಳೂ, ಉತ್ತಮವಾದ ಪುತ್ರರುಳ್ಳವಳೂ, ಶ್ರೇಷ್ಠವಾದ ಸೊಸೆಯುಳ್ಳವಳೂ ಆದ ಎಲೈ ಇಂದ್ರಾಣಿಯೇ, ನಿನ್ನ ಪತಿಯಾದ ಇಂದ್ರನು ಶಕ್ತಿಯುತವಾದ ಎತ್ತುಗಳ (ಮಾಂಸವ)ನ್ನು ತಿನ್ನಲಿ. ಸುಖಕರವಾದ ಹವಿಸ್ಸನ್ನು ಇಂದ್ರನಿಗೆ ಪ್ರೀತಿಕರವಾಗುವಂತೆ ಮಾಡು. ಇಂದ್ರನು ಸಕಲ ಜಗತ್ತಿಗಿಂತಲೂ ಶ್ರೇಷ್ಠನು.

## English Translation

[ Vrishakapi speaks : ] O mother of Vrishakapi, wealthy, possessing excellent sons, possessing excellent daughters-in-law, let Indra eat your bulls, (give him) the beloved and most delightful ghi ; Indra is above all (the world).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ವೃಷಾಕಪಾಯಿ ಎಂಬ ಶಬ್ದವನ್ನು ವಿವರಿಸುತ್ತಾ ಉದಾಹರಣೆಗಾಗಿ ಈ ಋಕ್ಕಿನ ನಿರ್ವಚನವನ್ನು ಯಾಸ್ಕರು ಈರೀತಿ ಹೇಳಿದಾರೆ—

**ವೃಷಾಕಪಾಯಿ ವೃಷಾಕಪೇಃ ಪತ್ನೀ । ಏಷೈವಾಭಿಸೃಷ್ಟಕಾಲತಮಾ । ತಸ್ಯೈಷಾ ಭವತಿ ।**
**ವೃಷಾಕಪಾಯಿ ರೇವತಿ ಸುಪುತ್ರ ಆ ಸುಸ್ನುಷೇ ಘಸತ್ತ ಇಂದ್ರ ಉಕ್ಷಣಃ ಪ್ರಿಯಂ**

ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ॥ ವೃಷಾಕಪಾಯಿ ರೇವತಿ **ಸುಪುತ್ರೇ ಮಧ್ಯ-**ಮೇನ ಸುಸ್ನುಷೇ ಮಾಧ್ಯಮಿಕಯಾ ವಾಚಾ । ಸ್ನುಷಾ ಸಾಧುಸಾದಿನೀತಿ ವಾ ಸಾಧು-ಸಾನಿನೀತಿ ವಾ ಸ್ವಪತ್ಯಂ ತತ್ಸನೋತೀತಿ ವಾ ॥ ಪ್ರಾಶ್ನಾತು ತ ಇಂದ್ರ ಉಕ್ಷಣ ಏತಾನ್ಮಾ-ಧ್ಯಮಿಕಾನ್ ಸಂಸ್ತ್ಯಾಯಾನ್ । ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ ಪ್ರಿಯಂ ಕುರುಷ್ವ ಸುಖಾಚಯಕರಂ ಹವಿಃ ಸುಖಕರಂ ಹವಿಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಂ ॥ (ನಿ. ೧೨-೯)

ವೃಷಾಕಪಾಯಿ ಎಂದರೆ ವೃಷಾಕಪಿಯ ಪತ್ನಿಯು ಎಂದರೆ ಆದಿತ್ಯನ ಪತ್ನಿಯು. ವೃಷಾಕಪಿ ಎಂದರೆ ಸೂರ್ಯನು. ಆ ಸೂರ್ಯನ ಪತ್ನಿಯಾದ ಸೂರ್ಯೆಯೇ ಕೆಲವುಕಾಲ ಕಳೆದಮೇಲೆ ವೃಷಾಕಪಾಯಿ ಎಂಬ ಹೆಸರಿನಿಂದ ಕರೆಯಲ್ಪಡುವಳು. ಈ ವೃಷಾಕಪಾಯಿ ರೇವತಿ ಎಂಬ ಋಕ್ಕಿನಲ್ಲಿ (ಪ್ರಕೃತ ಋಕ್ಕಿನಲ್ಲಿ) ಈ ವಿಷಯದ ಪ್ರಸ್ತಾಪವಿದೆ.

ಎಲೈ ವೃಷಾಕಪಾಯಿಯೇ, (ಆದಿತ್ಯನ ಪತ್ನಿಯೇ) ನೀನು **ರೇವತಿ**-ಎಂದರೆ ಧನವುಳ್ಳವಳು. ಇಲ್ಲಿ ಧನವೆಂದರೆ ಉದಕರೂಪವಾದ ಧನವು; **ಸುಪುತ್ರೇ**-ಉತ್ತಮ ಪುತ್ರನನ್ನುಳ್ಳವಳು. ಇಲ್ಲಿ ಪುತ್ರನೆಂದರೆ ಮಧ್ಯಮಸ್ಥಾನ (ಅಂತರಿಕ್ಷ) ದೇವತೆಯಾದ ಇಂದ್ರನೇ ಉತ್ತಮ ಪುತ್ರನು. **ಸುಸ್ನುಷೇ**--ಉತ್ತಮವಾದ ಸೊಸೆಯುಳ್ಳವಳು. ಇಲ್ಲಿ ಮಧ್ಯಮಸ್ಥಾನದೇವತೆಯಾದ ವಾಗ್ದೇವತೆಯೇ ಉತ್ತಮವಾದ ಸೊಸೆಯು. **ಸ್ನುಷಾ** ಶಬ್ದಕ್ಕೆ ಮೂರುವಿಧವಾದ ಅವಯವಾರ್ಥವನ್ನು ಇಲ್ಲಿ ಹೇಳಲಾಗಿದೆ. **ಸಾಧುಸಾದಿನೀತಿ ವಾ ಸ್ನುಷಾ**-ಇವಳು ಚೆನ್ನಾಗಿ ಕುಳಿತುಕೊಳ್ಳುವುದರಿಂದ ಎಂದರೆ ಅತ್ತೆಯಮನೆಯಲ್ಲಿ ಸ್ಥಿರವಾಗಿ ನೆಲಸುವುದರಿಂದ ಸೊಸೆಗೆ ಸ್ನುಷಾ ಎಂದು ಹೆಸರು ; ಅಥವಾ **ಸಾಧು ಸಾನಿನೀತಿ ವಾ ಸ್ನುಷಾ**-ಅತ್ತೆಯ ಮನೆಯಲ್ಲಿ ಕೆಲಸಕಾರ್ಯಗಳನ್ನು ಮಾಡುತ್ತಾ ಜೀವನನಿರ್ವಹಕಾರ್ಯದಲ್ಲಿ ಸಹಾಯಮಾಡುವುದರಿಂದ ಸೊಸೆಗೆ ಸ್ನುಷಾ ಎಂದು ಹೆಸರು; ಅಥವಾ **ಸ್ವಪತ್ಯಂ ತತ್ಸನೋತೀತಿ ವಾ ಸ್ನುಷಾ** ಪತಿಗೃಹದಲ್ಲಿದ್ದು ಪತಿಯ ಸಂತಾನವನ್ನು ವೃದ್ಧಿಪಡಿಸುವವಳಾದ್ದರಿಂದ ಸೊಸೆಗೆ ಸ್ನುಷಾ ಎಂದು ಹೆಸರು.

**ಉಕ್ಷಣಃ** ಎಂಬ ಶಬ್ದವು ವೃದ್ಧಿಯನ್ನೈದು ಎಂಬರ್ಥವುಳ್ಳ ಉಕ್ಷ್ ಧಾತುವಿನಿಂದ ನಿಷ್ಪನ್ನವಾಗಿದೆ ಅಥವಾ ಉಕ್ಷ್ ಧಾತುವಿಗೆ ಉದಕವನ್ನು ಸೇಚನಮಾಡು ಸಿಂಪಡಿಸು ಎಂದೂ ಅರ್ಥವಾಗಬಹುದು. ಆದ್ದರಿಂದ ಉಕ್ಷಣಃ ಎಂದರೆ ಉದಕವನ್ನು ಸೇಚನೆಮಾಡುವ ಮೇಘವೆಂದು ಅರ್ಥಮಾಡಬಹುದು. **ಘಸತ್ತು** ಇಂದ್ರ ಉಕ್ಷಣಃ ಎಂದರೆ ಇಂದ್ರನು ಉದಕಸೇಕ್ತೃಗಳಾದ ಈ ಮೇಘಗಳನ್ನು ತಿನ್ನಲಿ ಎಂದರೆ ಧ್ವಂಸಮಾಡಲಿ, ವಜ್ರಾಯುಧದಿಂದ ಪ್ರಹರಿಸಲಿ ಎಂದರ್ಥವು. ಆದ್ದರಿಂದ ಈ ಇಂದ್ರನಿಗೆ ಅರ್ಥಾತ್ ಸೂರ್ಯನಿಗೆ ಅರ್ಪಿಸುವ ಈ ಹವಿಸ್ಸನ್ನು ಅವನಿಗೆ ಹಿತಕರವಾಗುವಂತೆ ಮಾಡು ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

॥ಸಂಹಿತಾಪಾಠಃ॥

**ಉಕ್ಷ್ಣೋ ಹಿ ಮೇ ಪಂಚದಶ ಸಾಕಂ ಪಚಂತಿ ವಿಂಶತಿಂ ।**
**ಉತಾಹಮದ್ಮಿ ಪೀವ ಇದುಭಾ ಕುಕ್ಷೀ ಪೃಣಂತಿ ಮೇ ವಿಶ್ವಸ್ಮಾದಿಂದ್ರ ಉತ್ತರಃ ॥ ೧೪ ॥**

॥ ಪದಪಾಠಃ ॥

ಉಕ್ಷ್ಣಃ । ಹಿ । ಮೇ । ಪಂಚಽದಶ । ಸಾಕಂ । ಪಚಂತಿ । ವಿಂಶತಿಂ ।

ಉತ । ಅಹಂ । ಅದ್ಮಿ । ಪೀವಃ । ಇತ್ । ಉಭಾ । ಕುಕ್ಷೀ ಇತಿ । ಪೃಣಂತಿ । ಮೇ । ವಿಶ್ವಸ್ಮಾತ್ ।

ಇಂದ್ರಃ । ಉತ್ಽತರಃ ॥ ೧೪ ॥

॥ ಸಾಯಣಭಾಷ್ಯಂ ॥

ಅಥೇಂದ್ರೋ ಬ್ರವೀತಿ । ಮೇ ಮದರ್ಥಂ ಪಂಚದಶ ಪಂಚದಶಸಂಖ್ಯಾಕಾನ್ ವಿಂಶತಿಂ ವಿಂಶತಿಸಂಖ್ಯಾಕಾಂಶ್ಚೋಕ್ಷ್ಣೋ ವೃಷಭಾನ್ ಸಾಕಂ ಸಹ ಮಮ ಭಾರ್ಯಯೇಂದ್ರಾಣ್ಯಾ ಪ್ರೇರಿತಾ ಯಷ್ಟಾರಃ ಪಚಂತಿ । ಉತಾಪಿ ಚಾಹಮದ್ಮಿ । ತಾನ್ಭಕ್ಷಯಾಮಿ । ಜಗ್ಧ್ವಾ ಚಾಹಂ ಪೀವ ಇತ್ ಸ್ಥೂಲ ಏವ ಭವಾಮೀತಿ ಶೇಷಃ । ಕಿಂಚ ಮೇ ಮಮೋಭೋಭೌ ಕುಕ್ಷೀ ಪೃಣಂತಿ । ಸೋಮೇನ ಪೂರಯಂತಿ ಯಷ್ಟಾರಃ । ಸೋಽಹಮಿಂದ್ರಃ ಸರ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

**ಮೇ**—ನನ್ನನ್ನುದ್ದೇಶಿಸಿ । **ಪಂಚದಶ**—ಹದಿನೈದು ಸಂಖ್ಯೆಯವೂ । **ವಿಂಶತಿಂ**—ಇಪ್ಪತ್ತು ಸಂಖ್ಯೆಯವೂ ಆದ । **ಉಕ್ಷ್ಣಃ**—ವೃಷಭಗಳನ್ನು । **ಸಾಕಂ**—ಒಟ್ಟಿಗೆ । **ಪಚಂತಿ**—ಯಜ್ಞಕರ್ತರು ಪಕ್ವಮಾಡುತ್ತಾರೆ । **ಉತ**—ಮತ್ತು । **ಅಹಂ**—ನಾನು । **ಅದ್ಮಿ**—ಅವುಗಳನ್ನು ತಿನ್ನುತ್ತೇನೆ । **ಪವೀತ್**—ಪುಷ್ಟನಾಗಿ ಬೆಳೆಯುತ್ತೇನೆ । **ಮೇ**—ನನ್ನ । **ಉಭಾ ಕುಕ್ಷೀ**—ಉದರದ ಎರಡು ಪಾರ್ಶ್ವಗಳನ್ನು । **ಪೃಣಂತಿ**—ತುಂಬುತ್ತವೆ । **ಇಂದ್ರಃ**—ಪ್ರಭುವಾದ ನಾನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಯಜ್ಞಕರ್ತರು ನನ್ನನ್ನುದ್ದೇಶಿಸಿ ಹದಿನೈದು ಮತ್ತು ಇಪ್ಪತ್ತು ವೃಷಭಗಳನ್ನು ಪಕ್ವಮಾಡಿ ಅರ್ಪಿಸುತ್ತಾರೆ. ನಾನು ಅವುಗಳನ್ನು ಭಕ್ಷಿಸಿ ಪುಷ್ಟನಾಗುತ್ತೇನೆ. ಅವು ನನ್ನ ಉದರದ ಎರಡು ಪಾರ್ಶ್ವಗಳನ್ನೂ ತುಂಬುತ್ತವೆ. ಪ್ರಭುವಾದ ನಾನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

[ Indra speaks: ] The worshippers dress for me fifteen (and) twenty bulls: I eat them and (become) fat, they fill both sides of my belly; Indra is above all (the world).

॥ ಸಂಹಿತಾಪಾಠಃ ॥

ವೃಷಭೋ ನ ತಿಗ್ಮಶೃಂಗೋಽಂತರ್ಯೂಥೇಷು ರೋರುವತ್ ।
ಮಂಥಸ್ತ ಇಂದ್ರ ಶಂ ಹೃದೇ ಯಂ ತೇ ಸುನೋತಿ ಭಾವಯುರ್ವಿಶ್ವಸ್ಮಾ-
ದಿಂದ್ರ ಉತ್ತರಃ ॥ ೧೫ ॥

॥ ಪದಪಾಠಃ ॥

ವೃಷಭಃ । ನ । ತಿಗ್ಮऽಶೃಂಗಃ । ಅಂತಃ । ಯೂಥೇಷು । ರೋರುವತ್ ।
ಮಂಥಃ । ತೇ । ಇಂದ್ರ । ಶಂ । ಹೃದೇ । ಯಂ । ತೇ । ಸುನೋತಿ । ಭಾವಯುಃ । ವಿಶ್ವಸ್ಮಾತ್ ।
ಇಂದ್ರಃ । ಉತ್ऽತರಃ ॥ ೧೫ ॥

॥ ಸಾಯಣಭಾಷ್ಯಂ ॥

ಅಥೇಂದ್ರಾಣೀ ಬ್ರವೀತಿ । ತಿಗ್ಮಶೃಂಗಸ್ತೀಕ್ಷ್ಣಶೃಂಗೋ ವೃಷಭೋ ನ ಯಥಾ ವೃಷಭೋ ಯೂಥೇಷು ಗೋಸಂಘೇಷ್ವಂತರ್ಮಧ್ಯೇ ರೋರುವಚ್ಛಬ್ದಂ ಕುರ್ವನ್ ಗಾ ಅಭಿರಮಯತಿ ತಥಾ ಹೇ ಇಂದ್ರ ತ್ವಂ ಮಾಮಭಿರಮಯೇತಿ ಶೇಷಃ । ಕಿಂಚ ಹೇ ಇಂದ್ರ ತೇ ತವ ಹೃದೇ ಹೃದಯಾಯ ಮಂಥೋ ದಧ್ನೋ ಮಥನವೇಲಾಯಾಂ ಶಬ್ದಂ ಕುರ್ವಣ್ಯಾಂ ಶಂಕರೋ ಭವತ್ವಿತಿ ಶೇಷಃ । ಕಿಂಚ ತೇ ತುಭ್ಯಂ ಯಂ ಸೋಮಂ ಭಾವಯುರ್ಭಾವಮಿಚ್ಛಂತೀಂದ್ರಾಣೀ ಸುನೋತಿ ಅಭಿಷುಣೋತಿ ಸೋಽಪಿ ಶಂಕರೋ ಭವತ್ವಿತ್ಯರ್ಥಃ । ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯೂಥೇಷು ಅಂತಃ**—ಗೋವುಗಳ ಸಮೂಹದಲ್ಲಿ । **ರೋರುವತ್**—ಶಬ್ದವನ್ನು ಮಾಡಿಕೊಂಡು । **ತಿಗ್ಮಶೃಂಗಃ**—ತೀಕ್ಷ್ಣವಾದ ಕೊಂಬುಗಳುಳ್ಳ । **ವೃಷಭೋ ನ**—ವೃಷಭವು ಹರ್ಷವನ್ನನುಭವಿಸುವಂತೆ । **ತೇ**—ನಿನ್ನನ್ನುದ್ದೇಶಿಸಿ । **ಯಂ**—ಯಾವ ಸೋಮವನ್ನು । **ಭಾವಯುಃ**—ನಿನ್ನ ಹರ್ಷವನ್ನಪೇಕ್ಷಿಸುವ ನಾನು । **ಸುನೋತಿ**—ಹಿಂಡುವನೋ ಅದು । **ತೇ**—ನಿನ್ನ । **ಹೃದೇ**—ಹೃದಯದಲ್ಲಿ । **ಮಂಥಃ**—ಮಥನಶಬ್ದವನ್ನು ಮಾಡುತ್ತ । **ಶಂ**—ಸುಖಕಾರಕನಾಗಲಿ । **ಇಂದ್ರಃ**—ಪ್ರಭುವಾದ ನೀನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಗೋವುಗಳ ಸಮೂಹದಲ್ಲಿ ಶಬ್ದವನ್ನು ಮಾಡಿಕೊಂಡು ತೀಕ್ಷ್ಣವಾದ ಕೊಂಬುಗಳುಳ್ಳ ವೃಷಭವು ಹರ್ಷವನ್ನನುಭವಿಸುವಂತೆ ನಿನ್ನನ್ನುದ್ದೇಶಿಸಿ ಯಾವ ಸೋಮವನ್ನು ನಿನ್ನ ಸುಖವನ್ನಪೇಕ್ಷಿಸುವ ನಾನು ಹಿಂಡು

ವೆನೋ, ಅದು ನಿನ್ನ ಹೃದಯದಲ್ಲಿ ಮಥನಶಬ್ದವನ್ನು ಮಾಡುತ್ತಾ ಸುಖಕಾರಕವಾಗಲಿ. ಪ್ರಭುವಾದ ನೀನು ಸಕಲ ಜಗತ್ತಿಗಿಂತಲೂ ಅಧಿಕನಾಗಿದ್ದೀಯೆ.

English Translation

[ Indrani speaks : ] Like a sharp-horned bull roaring amongst the herds, so may your libation please your heart, Indra, (your libation) which she who desires to please you is expressing for you; Indra is above all (the world).

। ಸಂಹಿತಾಪಾಠಃ ।

ನ ಸೇಶೇ ಯಸ್ಯ ರಂಬತೇಽನ್ತರಾ ಸಕ್ಥ್ಯಾ೩ ಕಪೃತ್ ।
ಸೇದೀಶೇ ಯಸ್ಯ ರೋಮಶಂ ನಿಷೇದುಷೋ ವಿಜೃಂಭತೇ ವಿಶ್ವಸ್ಮಾದಿಂದ್ರ
ಉತ್ತರಃ ॥ ೧೬ ॥

। ಪದಪಾಠಃ ॥

ನ । ಸಃ । ಈಶೇ । ಯಸ್ಯ । ರಂಬತೇ । ಅಂತರಾ । ಸಕ್ಥ್ಯಾ । ಕಪೃತ್ ।
ಸಃ । ಇತ್ । ಈಶೇ । ಯಸ್ಯ । ರೋಮಶಂ । ನಿऽಸೇದುಷಃ । ವಿऽಜೃಂಭತೇ । ವಿಶ್ವಸ್ಮಾತ್ । ಇಂದ್ರಃ ।
ಉತ್ऽತರಃ ॥ ೧೬ ॥

। ಸಾಯಣಭಾಷ್ಯಂ ॥

ಹೇ ಇಂದ್ರ ಸ ಜನೋ ನೇಶೇ ಮೈಥುನಂ ಕರ್ತುಂ ನೇಷ್ಟೇ ನ ಶಕ್ನೋತಿ ಯಸ್ಯ ಜನಸ್ಯ ಕಪೃಚ್ಛೇಪಃ ಸಕ್ಥ್ಯಾ ಸಕ್ಥಿನೀ ಅಂತರಾ ರಂಬತೇ ಲಂಬತೇ । ಸೇತ್ ಸ ಏವ ಸ್ತ್ರೀಜನ ಈಶೇ ಮೈಥುನಂ ಕರ್ತುಂ ಸಕ್ನೋತಿ ಯಸ್ಯ ಜನಸ್ಯ ನಿಷೇದುಷಃ ಶಯಾನಸ್ಯ ರೋಮಶಮುಪಸ್ಥಂ ವಿಜೃಂಭತೇ ವಿವೃತಂ ಭವತಿ । ಯಸ್ಯ ಚ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಸ್ಯ**—ಯಾವ ಪುರುಷನ । **ಕಪೃತ್**—ಜನೇಂದ್ರಿಯವು । **ಸಕ್ಥ್ಯಾ**—ತೊಡೆಗಳ । **ಅಂತರಾ**—ಮಧ್ಯಭಾಗದಲ್ಲಿ । **ರಂಬತೇ**—(ಸುಪ್ತಾವಸ್ಥೆಯಲ್ಲಿ) ಶಕ್ತಿರಹಿತವಾಗಿ ಜೋಲಾಡುತ್ತಿರುವುದೋ । **ಸಃ ಜನಃ**—ಆ ಪುರುಷನು । **ನ ಈಶೇ**—ಸ್ತ್ರೀಯೊಡನೆ ಮೈಥುನಕರ್ಮವನ್ನು ನಡೆಸಲು ಎಂದರೆ ಸಂಭೋಗಮಾಡಲು ಶಕ್ತನಾಗುವುದಿಲ್ಲ । **ಯಸ್ಯ**—ಯಾವ ಪುರುಷನ । **ನಿಷೇದುಷಃ**—ಸುಪ್ತಾವಸ್ಥೆಯಲ್ಲಿರುವ । **ರೋಮಶಂ**—ಪುರುಷ ಲಿಂಗವು (ಅಥವಾ ಲಿಂಗದ ದಂಡವು) **ವಿಜೃಂಭತೇ**—ಉದ್ರಿಕ್ತಾವಸ್ಥೆಯಿಂದ ನಿಲ್ಲುವುದೋ । **ಸಃ ಇತ್**—ಅಂತಹ

ಪುರುಷನು ಮಾತ್ರವೇ | ಈಶೇ—ಸ್ತ್ರೀಸಂಗವನ್ನು ಮಾಡಲು ಶಕ್ತನಾಗುತ್ತಾನೆ | ಇಂದ್ರಃ—ಇಂದ್ರನು |. ವಿಶ್ವ-ಸ್ಮಾತ್—ಸಕಲ ಜಗತ್ತಿಗಿಂತಲೂ | ಉತ್ತರಃ—ಅತ್ಯಂತ ಶ್ರೇಷ್ಠನಾಗಿದ್ದಾನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಪುರುಷನ ಜನನೇಂದ್ರಿಯವು ಎರಡು ತೊಡೆಗಳ ಮಧ್ಯದಲ್ಲಿ ನೇತಾಡುತ್ತಾ ಸುಪ್ತಾವಸ್ಥೆಯಲ್ಲಿ ಮಾತ್ರವಿರುತ್ತಾ ಶಕ್ತಿಹೀನವಾಗಿರುವುದೋ ಅಂತಹ ಪುರುಷನು ಸ್ತ್ರೀಯೊಡನೆ ಮೈಥುನಕರ್ಮವನ್ನೆಸಗಲು ಎಂದರೆ ಸ್ತ್ರೀಸಂಭೋಗಮಾಡಲು ಶಕ್ತನಾಗಿರುವುದಿಲ್ಲ. ಆದರೆ ಯಾವ ಪುರುಷನ ಜನನೇಂದ್ರಿಯದ ದಂಡವು ಉದ್ರಿಕ್ತಾವಸ್ಥೆಯಿಂದ ನೇರವಾಗಿ ನಿಲ್ಲಲು ಶಕ್ತವಾಗುವುದೋ ಅಂತಹ ಪುರುಷನು ಮಾತ್ರ ಸ್ತ್ರೀಯೊಡನೆ ರತಿಕರ್ಮವನ್ನೆಸಗಲು ಸಮರ್ಥನಾಗುತ್ತಾನೆ. ಇಂದ್ರನು ಸಕಲಜಗತ್ತಿಗಿಂತಲೂ ಅಧಿಕನು.

## English Translation

The man who is impotent begets not progeny, but he who is endowed with vigour; Indra is above all (the world).

॥ ಸಂಹಿತಾಪಾಠಃ ॥

ನ ಸೇಶೇ ಯಸ್ಯ ರೋಮಶಂ ನಿಷೇದುಷೋ ವಿಜೃಂಭತೇ ।
ಸೇದೀಶೇ ಯಸ್ಯ ರಂಬತೇಽಂತರಾ ಸಕ್ಥ್ಯಾ೩ ಕಪೃದ್ವಿಶ್ವಸ್ಮಾದಿಂದ್ರ ಉತ್ತರಃ ॥

॥ ಪದಪಾಠಃ ॥

ನ । ಸಃ । ಈಶೇ । ಯಸ್ಯ । ರೋಮಶಂ । ನಿऽಸೇದುಷಃ । ವಿऽಜೃಂಭತೇ ।
ಸಃ । ಇತ್ । ಈಶೇ । ಯಸ್ಯ । ರಂಬತೇ । ಅಂತರಾ । ಸಕ್ಥ್ಯಾ೩ । ಕಪೃತ್ । ವಿಶ್ವಸ್ಮಾತ್ । ಇಂದ್ರಃ ।
ಉತ್ऽತರಃ ॥ ೧೭ ॥

॥ ಸಾಯಣಭಾಷ್ಯಂ ॥

ಸ ಜನೋ ನೇಶೇ ಮೈಥುನಂ ಕರ್ತುಂ ನೇಷ್ಟೇ ಯಸ್ಯ ಜನಸ್ಯ ನಿಷೇದುಷಃ ಶಯಾನಸ್ಯ ರೋಮಶಮುಪಸ್ಥಂ ವಿಜೃಂಭತೇ ವಿವೃತಂ ಭವತಿ । ಸೇತ್ ಸ ಏವ ಜನ ಈಶೇ ಮೈಥುನಂ ಕರ್ತುಂ ಶಕ್ನೋತಿ ಯಸ್ಯ ಜನಸ್ಯ ಕಪೃತ್ ಪ್ರಜನನಂ ಸಕ್ಥ್ಯಾ ಸಕ್ಥಿನೀ ಅಂತರಾ ರಂಬತೇ ಲಂಬತೇ । ಸಿದ್ಧಮನ್ಯತ್ । ಪೂರ್ವೋಕ್ತವ್ಯತಿರೇಕೋಽತ್ರ ದ್ರಷ್ಟವ್ಯಃ । ಪೂರ್ವಸ್ಯಾಮೃಚಿ ಮಿಯಮಪ್ಸುರಿಂದ್ರಾಣೀಂದ್ರಂ ವದತಿ ಅತ್ರ ತ್ವಯಿಮಯಪ್ಸುರಿಂದ್ರ ಇಂದ್ರಾಣೀಂ ವದತೀತ್ಯವಿರೋಧಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಣಿಯೇ, ನೀನು ಹೇಳುವುದು ಸರಿಯಲ್ಲ) **ಯಸ್ಯ**—ಯಾವ ಪುರುಷನ । **ನಿಷೇದುಷಃ**—ಸುಸ್ತಾವಸ್ಥೆಯಲ್ಲಿರುವ । **ರೋಮಶಂ**—ಪುರುಷಲಿಂಗವು । **ವಿಜೃಂಭತೇ**—ಉದ್ರಿಕ್ತಾವಸ್ಥೆಯಲ್ಲಿ ನೆಟ್ಟಗೆ ನಿಲ್ಲುವುದೋ । **ಸಃ ಜನಃ**—ಆ ಪುರುಷನು । **ನ ಈಶೇ**—ಸ್ತ್ರೀಸಂಭೋಗದಲ್ಲಿ ಶಕ್ತನಾಗುವುದಿಲ್ಲ । **ಯಸ್ಯ**—ಯಾವ ಪುರುಷನ । **ಕಪೃತ್**—ಜನನೇಂದ್ರಿಯದ ಲಿಂಗವು । **ಸಕ್ಥ್ಯಾ ಅಂತರಾ**—ಎರಡು ತೊಡೆಗಳ ನಡುವೆ । **ರಂಬತೇ**—ನಿಸ್ಸತ್ತ್ವವಾಗಿ ಜೋಲಾಡುತ್ತಿರುವುದೋ । **ಸಃ ಇತ್**—ಅಂತಹ ಪುರುಷನೇ । **ಈಷ್ಟೇ**—ಸ್ತ್ರೀಸಂಗವನ್ನು ಮಾಡಲು ಸಮರ್ಥನು । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಎಲೈ ಇಂದ್ರಾಣಿಯೇ, ನೀನು ಹೇಳುವುದು ಸರಿಯಲ್ಲ. ಯಾವ ಪುರುಷನ ಸುಪ್ತಾವಸ್ಥೆಯಲ್ಲಿರುವ ಪುರುಷಲಿಂಗವು ಉದ್ರಿಕ್ತಾವಸ್ಥೆಯಲ್ಲಿ ನೆಟ್ಟಗೆ ನಿಲ್ಲುವುದೋ ಆ ಪುರುಷನು ಸ್ತ್ರೀಸಂಭೋಗಮಾಡಲು ಶಕ್ತನಲ್ಲ; ಯಾವ ಪುರುಷನ ಜನನೇಂದ್ರಿಯದ ಲಿಂಗವು ಎರಡು ತೊಡೆಗಳ ಮಧ್ಯದಲ್ಲಿ ನಿಸ್ಸತ್ತ್ವವಾಗಿ ಜೋಲಾಡುತ್ತಿರುವುದೋ ಅಂತಹ ಪುರುಷನೇ ಸ್ತ್ರೀಸಂಗವನ್ನು ಮಾಡಲು ಸಮರ್ಥನು. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

[ Indra speaks : ] He who is endowed with vigour begets not progeny, but he who is impotent ; Indra is above all (the world).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ಹೇಳಿರುವ ವಿಷಯವು ಹಿಂದಿನ ಋಕ್ಕಿನಲ್ಲಿ ಇಂದ್ರಾಣಿಯು ಹೇಳಿರುವ ವಿಷಯಕ್ಕೆ ತೀರಾ ಭಿನ್ನವಾಗಿದೆ. ಹಿಂದಿನ ಋಕ್ಕಿನಲ್ಲಿ ಇಂದ್ರಾಣಿಯು ಸಂಭೋಗಾಸಕ್ತಳಾಗಿ ಹೇಳಿದ ವಿಷಯವು ಸ್ವಭಾವಸಿದ್ಧವಾಗಿದ್ದರೂ, ಸಂಭೋಗಾಭಿಲಾಷೆಯಿಲ್ಲದಿರುವ ಇಂದ್ರನು ಸ್ವಭಾವಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಬೇಕೆಂತಲೇ ವ್ಯಕ್ತಪಡಿಸಿರುವನು.

॥ ಸಂಹಿತಾಪಾಠಃ ॥

ಅಯಮಿಂದ್ರ ವೃಷಾಕಪಿಃ ಪರಸ್ವಂತಂ ಹತಂ ವಿದತ್ ।
ಅಸಿಂ ಸೂನಾಂ ನವಂ ಚರುಮಾದೇಧಸ್ಯಾನ ಆಚಿತಂ ವಿಶ್ವಸ್ಮಾದಿಂದ್ರ ಉತ್ತರಃ ॥ ೧೮ ॥

॥ ಪದಪಾಠಃ ॥

ಅಯಂ । ಇಂದ್ರ । ವೃಷಾಕಪಿಃ । ಪರಸ್ವಂತಂ । ಹತಂ । ವಿದತ್ ।

ಅಸಿಂ । ಸೂನಾಂ । ನವಂ । ಚರುಂ । ಆತ್ । ಏಧಸ್ಯ । ಅನಃ । ಆऽಚಿತಂ । ವಿಶ್ವಸ್ಮಾತ್ । ಇಂದ್ರಃ ।

ಉತ್ऽತರಃ ॥ ೧೮ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಅಯಂ ವೃಷಾಕಪಿಃ ಪರಸ್ವಂತಂ ಪರಸ್ವಮಾತ್ಮನೋ ವಿಷಯೇऽವರ್ತಮಾನಂ ಹತಂ ಹಿಂಸಿತಂ ವಿದತ್ । ವಿಂದತು । ತಥಾ ಹತಸ್ಯ ವಿಶಸನಾಯಾಸಿಂ ಶಸ್ತ್ರಂ ಸೂನಾಮುದ್ಧಾನಂ ಪಾಕಾರ್ಥಂ ನವಂ ಪ್ರತ್ಯಗ್ರಂ ಚರುಂ ಭಾಂಡಮಾದನಂತರಮೇಧಸ್ಯ ಕಾಷ್ಠಸ್ಯಾಚಿತಂ ಪೂರ್ಣಮನಃ ಶಕಟಂ ಚ ವಿಂದತು । ಮಮ ಪತಿರಿಂದ್ರೋ ವಿಶ್ವಸ್ಮಾದುತ್ತರಃ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಅಯಂ ವೃಷಾಕಪಿಃ**—ಈ ವೃಷಾಕಪಿಯು । **ಪರಸ್ವಂತಂ**—ತನದಲ್ಲದೇ ಇರುವುದೂ । **ಹತಂ**—ಕೊಲ್ಲಲ್ಪಟ್ಟಿರುವುದೂ ಆದ ಈ ಪ್ರಾಣಿಯನ್ನು । **ವಿದತ್**—ಪಡೆಯಲಿ । **ಅಸಿಂ**—(ಇದನ್ನು ಕತ್ತರಿಸಲು) ಕತ್ತಿಯನ್ನೂ । **ಸೂನಾಂ**—ಪಾಕಮಾಡಲು ಸೌಟನ್ನೂ । **ನವಂ ಚರುಂ**—ಹೊಸ ಬಾಂಡಲೆಯನ್ನೂ । **ಆತ್**—ನಂತರ । **ಏಧಸ್ಯ ಆಚಿತಂ**—ಕಟ್ಟಿಗೆಯಿಂದ ಪೂರ್ಣವಾದ । **ಅನಃ**—ಶಕಟವನ್ನೂ ಹೊಂದಲಿ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಎಲೈ ಇಂದ್ರನೇ, ಈ ವೃಷಾಕಪಿಯು ಮೃತವಾಗಿರುವ ತನ್ನದಲ್ಲದ ಪ್ರಾಣಿಯನ್ನು ಹೊಂದಲಿ. ಅದನ್ನು ಕತ್ತರಿಸಲು ಕತ್ತಿಯನ್ನೂ, ಪಾಕಮಾಡಲು ಸೌಟನ್ನೂ, ಹೊಸ ಬಾಂಡಲೆಯನ್ನೂ, ಕಟ್ಟಿಗೆಯಿಂದ ಪೂರ್ಣವಾದ ಗಾಡಿಯನ್ನೂ ಹೊಂದಲಿ. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

English Translation

[ Indrani speaks : ] Let this Vrishakapi, Indra, take a dead wild ass, (let him take) a knife (to cut it up), a fire place (to cook it), a new saucepan, and a cart full of fuel ; Indra is above all (the world).

॥ ಸಂಹಿತಾಪಾಠಃ ॥

ಅಯಮೇಮಿ ವಿಚಾಕಶದ್ವಿಚಿನ್ವನ್ದಾಸಮಾರ್ಯಂ ।

ಪಿಬಾಮಿ ಪಾಕಸುತ್ವನೋಽಭಿ ಧೀರಮಚಾಕಶಂ ವಿಶ್ವಸ್ಮಾದಿಂದ್ರ ಉತ್ತರಃ॥

॥ ಪದಪಾಠಃ ॥

ಅಯಂ । ಏಮಿ । ವಿಽಚಾಕಶತ್ । ವಿಽಚಿನ್ವನ್ । ದಾಸಂ । ಆರ್ಯಂ ।

ಪಿಬಾಮಿ । ಪಾಕಽಸುತ್ವನಃ । ಅಭಿ । ಧೀರಂ । ಅಚಾಕಶಂ । ವಿಶ್ವಸ್ಮಾತ್ । ಇಂದ್ರಃ । ಉತ್ಽತರಃ ॥

॥ ಸಾಯಣಭಾಷ್ಯಂ ॥

ಅಥೇಂದ್ರೋ ಬ್ರವೀತಿ । ವಿಚಾಕಶತ್ ಪಶ್ಯನ್ಯಜಮಾನಾನ್ ದಾಸಮುಪಕ್ಷಪಯಿತಾರಮಸುರಮಾರ್ಯಮಪಿ ಚ ವಿಚಿನ್ವನ್ ಪೃಥಕ್ಕುರ್ವನ್ನಯಮಹಮಿಂದ್ರ ಏಮಿ । ಯಜ್ಞಂ ಪ್ರತಿ ಗಚ್ಛಾಮಿ । ಯಜ್ಞಂ ಗತ್ವಾ ಚ ಪಾಕಸುತ್ವನಃ । ಪಚತೀತಿ ಪಾಕಃ । ಸುನೋತೀತಿ ಸುತ್ವಾ । ಹವಿಷಾಂ ಪಕ್ತುಃ ಸೋಮಸ್ಯಾಭಿಷೋತುರ್ಯಜಮಾನಸ್ಯ ಪಾಕೇನ ವಿಪಕ್ವೇನ ಮನಸಾ ಸೋಮಸ್ಯಾಭಿಷೋತುರ್ವಾ ಯಜಮಾನಸ್ಯ ಸಂಬಂಧಿನಂ ಸೋಮಂ ಪಿಬಾಮಿ । ತಥಾ ಧೀರಂ ಧೀಮಂತಂ ಯಜಮಾನಮಭ್ಯಚಾಕಶಂ। ಅಭಿಪಶ್ಯಾಮಿ । ಯೋಽಹಮಿಂದ್ರೋ ವಿಶ್ವಸ್ಮಾದುತ್ತರಃ ॥

॥ ಪ್ರತಿಪದಾರ್ಥ ॥

**ವಿಚಾಕಶತ್**—ಯಜಮಾನನ ಕರ್ಮವನ್ನು ವೀಕ್ಷಿಸುತ್ತಲೂ । **ದಾಸಂ**—ಕರ್ಮರಹಿತನಾದ ದಾಸನನ್ನೂ **ಆರ್ಯಂ**—ಕರ್ಮನಿಷ್ಠನಾದ ಆರ್ಯನನ್ನೂ । **ವಿಚಿನ್ವನ್**—ವಿಭಾಗಮಾಡುತ್ತಲೂ । **ಅಯಂ**—ಪ್ರಭುವಾದ ನಾನು । **ಏಮಿ**—ಯಜ್ಞಕ್ಕೆ ಬರುತ್ತೇನೆ । **ಪಾಕಸುತ್ವನಃ**—ಪಕ್ವವಾದ ಮನಸ್ಸಿನಿಂದ ಹಿಂಡುವವನ ಸೋಮವನ್ನು । **ಪಿಬಾಮಿ**—ಪಾನಮಾಡುತ್ತೇನೆ । **ಧೀರಂ**—ಪ್ರಾಜ್ಞನಾದ ಯಜಮಾನನನ್ನು । **ಅಭ್ಯಚಾಕಶಂ**—ಅನುಗ್ರಹಿಸಿ ನೋಡುತ್ತೇನೆ । **ಇಂದ್ರಃ**—ಪ್ರಭುವಾದ ನಾನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಶ್ರೇಷ್ಠನು.

॥ ಭಾವಾರ್ಥ ॥

ಯಜಮಾನನ ಕರ್ಮವನ್ನು ವೀಕ್ಷಿಸುತ್ತಲೂ, ಕರ್ಮರಹಿತನಾದ ದಾಸನಿಂದ ಕರ್ಮನಿಷ್ಠನಾದ ಆರ್ಯನನ್ನು ವಿಭಾಗಮಾಡುತ್ತಲೂ ಪ್ರಭುವಾದ ನಾನು ಯಜ್ಞಕ್ಕೆ ಬರುತ್ತೇನೆ. ಪಕ್ವವಾದ ಮನಸ್ಸಿನಿಂದ ಹಿಂಡಿ ಅರ್ಪಿಸುವವನ ಸೋಮವನ್ನು ಪಾನಮಾಡುತ್ತೇನೆ. ಪ್ರಾಜ್ಞನಾದ ಯಜಮಾನನನ್ನು ಅನುಗ್ರಹಿಸಿ ನೋಡುತ್ತೇನೆ. ಪ್ರಭುವಾದ ನಾನು ಸಕಲ ಜಗತ್ತಿಗಿಂತಲೂ ಶ್ರೇಷ್ಠನು.

## English Translation

[ Indra speaks ] Here I come to the (sacrifice) looking upon (the worshippers), distinguishing the Dasa and the Arya; I drink the (Soma)

of the (worshipper), who effuses (the Soma) with mature (mind); I look upon the intelligent (sacrificeı); Indra is above all (the world).

॥ ಸಂಹಿತಾಪಾಠಃ ॥

ಧನ್ವ ಚ ಯತ್ಕೃಂತತ್ರಂ ಚ ಕತಿ ಸ್ವಿತ್ತಾ ವಿ ಯೋಜನಾ ।
ನೇದೀಯಸೋ ವೃಷಾಕಪೇಸ್ತಮೇಹಿ ಗೃಹಾಁ ಉಪ ವಿಶ್ವಸ್ಮಾದಿಂದ್ರ
ಉತ್ತರಃ ॥ ೨೦ ॥

॥ ಪದಪಾಠಃ ॥

ಧನ್ವ । ಚ । ಯತ್ । ಕೃಂತತ್ರಂ । ಚ । ಕತಿ । ಸ್ವಿತ್ । ತಾ । ವಿ । ಯೋಜನಾ ।
ನೇದೀಯಸಃ । ವೃಷಾಕಪೇ । ಅಸ್ತಂ । ಆ । ಇಹಿ । ಗೃಹಾನ್ । ಉಪ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೨೦ ॥

॥ ಸಾಯಣಭಾಷ್ಯಂ ॥

ಧನ್ವ ನಿರುದಕೋಽರಣ್ಯರಹಿತೋ ದೇಶಃ । ಕೃಂತತ್ರಂ ಕರ್ತನೀಯಮರಣ್ಯಂ । ಯದ್ಯಚ್ಚ ಧನ್ವ ಚ ಕೃಂತತ್ರಂ ಚ ಭವತಿ । ನ್ಯಗ್ರೋಧಾಶ್ವತ್ಥಮರಣ್ಯಮೇವಂವಿಧಂ ಭವತಿ ನ ತ್ವತ್ಯಂತವಿಪಿನಂ । ತಸ್ಯ ಶತ್ರುನಿಲಯಸ್ಯಾಸ್ಮದೀಯಗೃಹಸ್ಯ ಚ ಮಧ್ಯೇ ಕತಿ ಸ್ವಿತ್ತಾ ತಾನಿ ಯೋಜನಾ ಯೋಜನಾನಿ ಸ್ಥಿತಾನಿ । ನಾತ್ಯಂತದೂರೇ ತದ್ಭವತೀತ್ಯರ್ಥಃ । ಅತೋ ನೇದೀಯಸೋಽತಿಶಯೇನ ಸಮೀಪಸ್ಥಾಚ್ಛತ್ರು-ನಿಲಯಾತ್ ಹೇ ವೃಷಾಕಪೇ ತ್ವಮಸ್ತಮಸ್ಮಾಕಂ ಗೃಹಂ ನ್ಯೇಹಿ । ವಿಶೇಷೇಣಾಗಚ್ಛ । ಆಗತ್ಯ ಚ ಗೃಹಾನ್ಯಜ್ಞಗೃಹಾನುಪಗಚ್ಛ । ಯತೋಽಯಮಿಂದ್ರಃ ಸರ್ವಸ್ಮಾದುತ್ಕೃಷ್ಟಃ ॥

॥ ಪ್ರತಿಪದಾರ್ಥ ॥

**ಯತ್**—ಯಾವ ಪ್ರದೇಶವು । **ಧನ್ವ ಚ**—ಬೆಂಗಾಡಾಗಿಯೂ । **ಕೃಂತತ್ರಂ ಚ**—ಹಿಂಸಾಪೂರ್ಣವಾಗಿಯೂ ಇರುವುದೋ ಆ ಅರಣ್ಯದಿಂದ ನಮ್ಮ ಗೃಹಕ್ಕೆ । **ಕತಿ ಸ್ವಿತ್ ತಾ ಯೋಜನಾ**—ಕೆಲವು ಯೋಜನಗಳು ಮಾತ್ರವಿರುತ್ತವೆ । **ವೃಷಾಕಪೇ**—ಎಲೈ ವೃಷಾಕಪಿಯೇ । **ನೇದೀಯಸಃ**—ಹತ್ತಿರವಿರತಕ್ಕ ಈ ಅರಣ್ಯದಿಂದ । **ಅಸ್ತಂ**—ನಮ್ಮ ಗೃಹಕ್ಕೆ । **ವ್ಯೇಹಿ**—ಹೊರಡು । **ಗೃಹಾನ್ ಉಪ**—ಯಜ್ಞಗೃಹಕ್ಕೂ ಹೋಗು । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನು.

॥ ಭಾವಾರ್ಥ ॥

ಯಾವ ಪ್ರದೇಶವು ಬೆಂಗಾಡಾಗಿಯೂ, ಹಿಂಸಾಪೂರ್ಣವಾಗಿಯೂ ಇರುವುದೋ, ಆ ಅರಣ್ಯದಿಂದ ನಮ್ಮ ಗೃಹಕ್ಕೆ ಕೆಲವು ಯೋಜನಗಳು ಮಾತ್ರವಿರುತ್ತವೆ. ಎಲೈ ವೃಷಾಕಪಿಯೇ, ಹತ್ತಿರವಿರತಕ್ಕ ಈ ಅರಣ್ಯದಿಂದ ನಮ್ಮ ಗೃಹಕ್ಕೆ ಹೊರಡು. ಯಜ್ಞಗೃಹಕ್ಕೂ ಹೋಗು. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

Go home, Vrishakapi, to the halls of sacrifice (from lurking place of the enemy), which is desert and forest (how many leagues are there from there ?) and from the nearest (lurking-place); Indra is above all (the world).

॥ ಸಂಹಿತಾಪಾಠಃ ॥

ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।
ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ॥

। ಪದಪಾಠಃ ।

ಪುನಃ । ಆ । ಇಹಿ । ವೃಷಾಕಪೇ । ಸುವಿತಾ । ಕಲ್ಪಯಾವಹೈ ।
ಯಃ । ಏಷಃ । ಸ್ವಪ್ನಽನಂಶನಃ । ಅಸ್ತಂ । ಏಷಿ । ಪಥಾ । ಪುನಃ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೨೧ ॥

। ಸಾಯಣಭಾಷ್ಯಂ ।

ಆಗತ್ಯ ಪ್ರತಿಗತಂ ವೃಷಾಕಪಿಮಿಂದ್ರೋ ಬ್ರವೀತಿ । ಹೇ ವೃಷಾಕಪೇ ತ್ವಂ ಪುನರೇಹಿ । ಅಸ್ಮಾನ್ಪ್ರತ್ಯಾಗಚ್ಛ । ಆಗತೇ ಚ ತ್ವಯಿ ಸುವಿತಾ ಸುವಿತಾನಿ ಕಲ್ಯಾಣಾನಿ ತ್ವಚ್ಚಿತ್ತಪ್ರೀತಿಕರಾಣಿ ಕರ್ಮಾಣಿ ಕಲ್ಪಯಾವಹೈ । ಇಂದ್ರಾಣ್ಯಹಂ ಚಾವಾಮುಭೌ ಪರ್ಯಾಲೋಚ್ಯ ಕುರ್ಯಾವ । ಕಿಂಚ ಯಃ ಸ್ವಪ್ನನಂಶನ ಉದಯೇನ ಸರ್ವಸ್ಯ ಪ್ರಾಣಿನಃ ಸ್ವಪ್ನಾನಾಂ ನಾಶಯಿತಾದಿತ್ಯಃ ಸ ಏಷ ತ್ವಂ ಪಥಾ ಮಾರ್ಗೇಣಾಸ್ತಮಾತ್ಮೀಯಮಾವಾಸಂ ಪುನರೇಷಿ । ಗಚ್ಛಸಿ । ಯತೋಽಹಮಿಂದ್ರೋ ವಿಶ್ವಸ್ಮಾದುತ್ತರಃ । ತಥಾ ಚ ಯಾಸ್ಕಃ । ಸುಪ್ರಸೂತಾನಿ ವಃ ಕರ್ಮಾಣಿ ಕಲ್ಪಯಾವಹೈ ಯ ಏಷ ಸ್ವಪ್ನನಂಶನಃ ಸ್ವಪ್ನಾನ್ನಾಶಯಸ್ಯಾದಿತ್ಯ ಉದಯೇನ ಸೋಽಸ್ತಮೇಷಿ ಪಥಾ ಪುನಃ । ನಿ. ೧೨-೨೮ । ಇತಿ ॥

। ಪ್ರತಿಪದಾರ್ಥ ।

**ವೃಷಾಕಪೇ**—ಎಲೈ ವೃಷಾಕಪಿಯೇ । **ಪುನಃ ಏಹಿ**—ಗೃಹಕ್ಕೆ ಹಿಂತಿರುಗಿ ಬಾ । **ಸುವಿತಾ**—ನಿನಗೆ ಪ್ರಿಯಕರವಾದ ಕಾರ್ಯಗಳನ್ನು । **ಕಲ್ಪಯಾವಹೈ**—ನಾನೂ ಇಂದ್ರಾಣಿಯೂ ಮಾಡುತ್ತೇವೆ । **ಯಃ**—ಯಾರು । **ಸ್ವಪ್ನನಂಶನಃ**—ನಿದ್ರೆಯನ್ನು ನಾಶಮಾಡುವ ಆದಿತ್ಯರೂಪನೋ । **ಏಷಃ**—ಅಂತಹ ನೀನು । **ಪಥಾ** —ಉತ್ತಮವಾದ ಮಾರ್ಗದಿಂದ । **ಅಸ್ತಂ**—ನಮ್ಮ ಗೃಹಕ್ಕೆ । **ಪುನಃ ಏಷಿ**—ತಿರುಗಿ ಬಾ । **ಇಂದ್ರಃ**—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । **ಉತ್ತರಃ**—ಅಧಿಕನಾಗಿದ್ದಾನೆ.

॥ ಭಾವಾರ್ಥ ॥

ಎಲೈ ವೃಷಾಕಪಿಯೇ, ಗೃಹಕ್ಕೆ ಹಿಂತಿರುಗಿ ಬಾ. ನಿನಗೆ ಪ್ರಿಯಕರವಾದ ಕಾರ್ಯಗಳನ್ನು ನಾನೂ ಇಂದ್ರಾಣಿಯೂ ಮಾಡುತ್ತೇವೆ. ಯಾರು ನಿದ್ರೆಯನ್ನು ನಾಶಮಾಡುವ ಆದಿತ್ಯರೂಪನೋ ಅಂತಹ ನೀನು ಉತ್ತಮವಾದ ಮಾರ್ಗದಿಂದ ನಮ್ಮ ಗೃಹಕ್ಕೆ ತಿರುಗಿ ಬಾ. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನಾಗಿದ್ದಾನೆ.

## English Translation

Come back, Vrishakapi, that we may do what is agreeable to you; you, who are the destroyer of sleep come home again by the road; Indra is above all (the world).

॥ ವಿಶೇಷವಿಷಯಗಳು ॥

ವೃಷಾಕಪಿಶಬ್ದಕ್ಕೆ ನಿರ್ವಚನವನ್ನು ಹೇಳುವಾಗ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ವೃಷಾಕಪಿಃ । ಅಥ ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ ವೃಷಾಕಂಪನಃ । ತಸ್ಯೈಷಾ ಭವತಿ । ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ । ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ॥ ಪುನರೇಹಿ ವೃಷಾಕಪೇ ಸುಪ್ರಸೂತಾನಿ ಯಃ ಕರ್ಮಾಣಿ ಕಲ್ಪಯಾವಹೈ ಯ ಏಷ ಸ್ವಪ್ನನಂಶನಃ ಸ್ವಪ್ನಾನ್ನಾಶಯತ್ಯಾದಿತ್ಯ ಉದಯೇನ ಸೋಽಸ್ತಮೇಷಿ ಪಥಾ ಪುನಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರವಮ ಆದಿತ್ಯಂ ॥**

(ನಿ. ೧೨-೨೮)

ವೃಷಾಕಪಿಯೆಂದರೆ ಆದಿತ್ಯನು. ಏಕೆಂದರೆ ಈ ಆದಿತ್ಯನು ತನ್ನ ರಶ್ಮಿಗಳಿಂದ ಉದಯಿಸುವಾಗ ಎಲ್ಲವನ್ನೂ ನಡಗಿಸುವನು ಅಥವಾ ಸೂರ್ಯನು ತನ್ನ ರಶ್ಮಿಗಳಿಂದ ಸಹಿತವಾಗಿ ಅಸ್ತಂಗತನಾಗುವಾಗ ಎಲ್ಲಾ ಪ್ರಾಣಿಗಳನ್ನು ನಡಗುವಂತೆ ಮಾಡುವನು. ಸೂರ್ಯನು ಮುಳುಗಿದ ಮೇಲೆ ಕತ್ತಲೆಯು ಕವಿಯುವುದು. ಕತ್ತಲೆಯಿಂದ ಅನೇಕರು ಭಯಗೊಂಡು ನಡಗುವರು ಅಥವಾ ಕತ್ತಲೆಯಾದ ಮೇಲೆ ಸೂರ್ಯನ ಶಾಖವು ಇಲ್ಲದಿರುವುದರಿಂದ ಜನರು ಚಳಿಯಿಂದ ನಡಗುವರು. ಆದ್ದರಿಂದ ಜನರನ್ನು ಅಥವಾ ಪ್ರಾಣಿಗಳನ್ನು ಕಂಪನಮಾಡುವ ಸ್ವಭಾವವುಳ್ಳವನಾದ್ದರಿಂದ ಸೂರ್ಯನಿಗೆ ವೃಷಾಕಪಿಯೆಂದು ಹೆಸರು. ಈ ಕೆಳಗಿನ ಋಕ್ಕಿನಲ್ಲಿ ಈ ವಿಷಯದ ಪ್ರಸ್ತಾಪವಿದೆ.

ಎಲೈ ವೃಷಾಕಪಿಯೇ (ಆದಿತ್ಯನೇ) ನೀನು ಉದಯಿಸಿ ಪ್ರಾಣಿಗಳ (ಜನರ) ನಿದ್ರೆಯನ್ನು ನಾಶಮಾಡುವುದರಿಂದ ನೀನು ಜನರ ಸ್ವಪ್ನನಾಶಕನು. ಅಂತಹ ನೀನು ಪುನಃ ಉದಯಿಸು. ನಿನ್ನ ಉದಯಾನಂತರ ನಾವು ಮಾಡಬೇಕಾದ ಕರ್ತವ್ಯಕರ್ಮಗಳಲ್ಲಿ ಪ್ರವೃತ್ತರಾಗುವೆವು ನೀನು ಮುಳುಗುವುದರಿಂದ ಕತ್ತಲೆಯು ಕವಿದು, ಶಾಖವಿಲ್ಲದಂತಾಗಿ ಚಳಿಯಿಂದ ಜನರು ನಡಗುವರು. ನೀನು ಉದಯಿಸಿದ ಕೂಡಲೇ ಜನರ ನಿದ್ರೆಯು ನಾಶವಾಗಿ ಅವರು ಎಚ್ಚರಗೊಂಡು ಅವರವರ ಕೆಲಸಕಾರ್ಯದಲ್ಲಿ ಪ್ರವೃತ್ತರಾಗುವರು. ಆದ್ದರಿಂದ ಎಲೈ ವೃಷಾಕಪಿಯೇ (ಆದಿತ್ಯನೇ) ಪುನಃ ಈ ದಿವಸವೂ ಉದಯಿಸಿ ಬಾ ಎಂದು ನಿರುಕ್ತವಚನದ ಮುಖ್ಯಾಭಿಪ್ರಾಯವು

॥ ಸಂಹಿತಾಪಾಠಃ ॥

ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಂತನ ।
ಕ್ವ೧ ಸ್ಯ ಪುಲ್ವಘೋ ಮೃಗಃ ಕಮಗಞ್ಜನಯೋಪನೋ ವಿಶ್ವಸ್ಮಾದಿಂದ್ರ ಉತ್ತರಃ ॥ ೨೨ ॥

॥ ಪದಪಾಠಃ ॥

ಯತ್ । ಉದಂಚಃ । ವೃಷಾಕಪೇ । ಗೃಹಂ । ಇಂದ್ರ । ಅಜಗಂತನ ।
ಕ್ವ । ಸ್ಯಃ । ಪುಲ್ವಘಃ । ಮೃಗಃ । ಕಂ । ಅಗನ್ । ಜನಽಯೋಪನಃ । ವಿಶ್ವಸ್ಮಾತ್ । ಇಂದ್ರಃ ।
ಉತ್ಽತರಃ ॥ ೨೨ ॥

॥ ಸಾಯಣಭಾಷ್ಯಂ ॥

ಗತ್ವಾ ಪುನರಾಗತಂ ವೃಷಾಕಪಿಮಿಂದ್ರಃ ಪೃಚ್ಛತಿ । ಹೇ ಇಂದ್ರ ಪರಮೈಶ್ವರ್ಯವನ್ ಹೇ ವೃಷಾಕಪೇ ಯೂಯಮುದಂಚ ಉದ್ಗಾಮಿನಃ ಸಂತೋ ಮದ್ಗೃಹಮಜಗಂತನ । ಆಗಚ್ಛ । ಏಕಸ್ಮಿನ್ನಪಿ ಬಹುವಚನಂ ಪೂಜಾರ್ಥಂ । ತತ್ರ ಭವತಃ ಸಂಬಂಧೀ ಪುಲ್ವಘೋ ಬಹೂನಾಂ ಭೌಮರಸಾನಾಮತ್ತಾ ಸ್ಯ ಸ ಮೃಗಃ ಕ್ವಾಭೂತ್ । ಜನಯೋಪನೋ ಜನಾನಾಂ ಮೋದಯಿತಾ ಮೃಗಃ ಕಂ ವಾ ದೇಶಮಗನ್ । ಅಗಚ್ಛತ್ । ಸೋಽಹಮಿಂದ್ರೋ ವಿಶ್ವಸ್ಮಾದುತ್ತರಃ ॥ ಯದ್ವಾ ಇಂದ್ರಾಣೀವಾಕ್ಯಮಿದಂ। ಅತ್ರ ಯಾಸ್ಕಃ । ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಮತ ಕ್ವ ಸ್ಯ ಪುಲ್ವಘೋ ಮೃಗಃ ಕ್ವ ಸ ಬಹ್ವಾದೀ ಮೃಗಃ । ಮೃಗೋ ಮಾರ್ಷ್ಟೇರ್ಗತಿಕರ್ಮಣಃ । ಕಮಗಮದ್ದೇಶಂ ಜನಯೋಪನಃ । ನಿ. ೧೩-೩ । ಇತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಐಶ್ವರ್ಯಯುಕ್ತನೇ । **ವೃಷಾಕಪೇ**—ಎಲೈ ವೃಷಾಕಪಿಯೇ । **ಗೃಹಂ ಉದಂಚಃ**—ನನ್ನ ಗೃಹಾಭಿಮುಖನಾಗಿ ಎದ್ದು । **ಅಜಗಂತನ**—ಬಾ । **ಪುಲ್ವಘಃ**—ರಸವನ್ನು ಹೀರತಕ್ಕದ್ದೂ । **ಸ್ಯಃ ಮೃಗಃ**—ಪ್ರಸಿದ್ಧವಾದುದೂ ಆದ ಆ ಮೃಗವು । **ಕ್ವ**—ಎಲ್ಲಿ । **ಜನಯೋಪನಃ**—ಜನರಿಗೆ ಹರ್ಷಕಾರಕರಾದ ಆ ಮೃಗವು । **ಕಂ ಅಗನ್**—ಯಾವ ದೇಶಕ್ಕೆ ಹೋಗಿದೆ । ಇಂದ್ರಃ—ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । ಉತ್ತರಃ—ಅಧಿಕನು.

॥ ಭಾವಾರ್ಥ ॥

ಎಲೈ ಐಶ್ವರ್ಯಯುಕ್ತನಾದ ವೃಷಾಕಪಿಯೇ, ನನ್ನ ಗೃಹಾಭಿಮುಖನಾಗಿ ಎದ್ದು ಬಾ ರಸವನ್ನು ಹೀರತಕ್ಕದ್ದೂ, ಪ್ರಸಿದ್ಧವಾದುದೂ ಆದ ಆ ಮೃಗವು ಎಲ್ಲಿ? ಜನರಿಗೆ ಹರ್ಷಕಾರಕವಾದ ಆ ಮೃಗವು ಯಾವ ದೇಶಕ್ಕೆ ಹೋಗಿದೆ ? ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

## English Translation

Rise up and come home, Vrishakapi and Indra; where is that destructive beast, to what (region) has (that beast), the exhilarator of men gone ? Indra is above all (the world).

|| ವಿಶೇಷವಿಷಯಗಳು ||

ಈ ಋಕ್ಕಿಗೆ ಯಾಸ್ಕರು ಆದಿತ್ಯಪರವಾಗಿ ನಿರ್ವಚನವನ್ನು ಹೇಳಿದಾರೆ—

**ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಮತ ಕ್ವ ಸ್ಯಃ ಪುಲ್ವಘೋ ಮೃಗಃ ಕ್ವ ಸ ಬಹ್ವಾದೀ ಮೃಗಃ। ಮೃಗೋ ಮಾಷ್ಟೇರ್ಗತಿಕರ್ಮಣಃ । ಕಮಗಮದ್ದೇಶಂ ಜನಯೋಪನಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಂ ||**

ಇಲ್ಲಿ **ಉದಂಚಃ** – ಎಂದರೆ ಉತ್ತರದಿಕ್ಕಿನಲ್ಲಿದ್ದು ಎಂದರೆ ಉತ್ತರದಿಕ್ಕನ್ನು ಬಳಸಿಕೊಂಡು ಎಂದರ್ಥವು; ಗೃಹವೆಂದರೆ— ಸ್ವದೇಶವು, ನಾವು ವಾಸಮಾಡುತ್ತಿರುವ ಪ್ರದೇಶವು; **ಪುಲ್ವಘಃ** ಎಂದರೆ ಪುರು+ಅಘ, ಹೆಚ್ಚಾಗಿ ಎಲ್ಲವನ್ನೂ ಭಕ್ಷಿಸುವ ಎಂದರೆ, ಸರ್ವವನ್ನೂ ಭಕ್ಷಿಸುವ ಅಗ್ನಿಯು. ಅಗ್ನಿಯು ಆದಿತ್ಯರೂಪದಲ್ಲಿಯೂ ಇರುವುದರಿಂದ ಇಲ್ಲಿ ಆದಿತ್ಯನನ್ನು ಸರ್ವಪ್ರಾಣಿಗಳ ಜಠರಾಗ್ನಿರೂಪದಲ್ಲಿದ್ದು ಬಹಳವಾಗಿ ಭಕ್ಷಿಸುವವನು ಎಂದು ಹೇಳಿದೆ. ಮೃಗಶಬ್ದವು ಗತ್ಯರ್ಥವನ್ನು ಸೂಚಿಸುವ ಮಾರ್ಷ್ಟಿರ್ಧಾತುವಿನಿಂದ ನಿಷ್ಪನ್ನವಾಗಿದೆ. ಸೂರ್ಯನು ತನ್ನ ಕಿರಣಗಳ ಮೂಲಕ ಸರ್ವತ್ರ ವ್ಯಾಪಿಸುವುದರಿಂದ ಸೂರ್ಯನು ಮೃಗಶಬ್ದವಾಚ್ಯನೆಂದು ಹೇಳಿದೆ. ಆದ್ದರಿಂದ ಈ ಋಕ್ಕಿನ ಮುಖ್ಯಾಭಿಪ್ರಾಯ ವೆಂದರೆ—ಎಲೈ ವೃಷಾಕಪಿಯೇ ಎಂದರೆ ಆದಿತ್ಯನೇ, ನೀನು ಉತ್ತರದಿಕ್ಕನ್ನು ಬಳಸಿಕೊಂಡು ಪುನಃ ನಮಗೆ ಕಾಣುವಂತೆ ನಮ್ಮ ಭೂಮಿಗೆ ಬಾ. ಇದುವರೆಗೂ (ರಾತ್ರಿ ಕಾಲದಲ್ಲಿ) ನೀನು ಎಲ್ಲಿಗೆ ಹೋಗಿದ್ದೆ ? ನೀನು ಅಗ್ನಿರೂಪ ದಿಂದ ಸರ್ವಭಕ್ಷಕನಾಗಿಯೂ, ಕಿರಣಗಳ ಮೂಲಕ ಸರ್ವತ್ರ ವ್ಯಾಪಿಯಾಗಿಯೂ ಇರುವೆ. ಇಂತಹ ನೀನು ಇದು ವರೆಗೂ ಎಲ್ಲಿಗೆ ಹೋಗಿದ್ದೆ ? ನಮ್ಮ ಗೃಹವೆನಿಸುವ ಈ ಭೂಮಿಯನ್ನು ಬೆಳಗಲು ಉದಯಿಸಿ ಬೇಗ ಬಾ. ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿದ ಮೇಲೆ ಹಗಲಿನಲ್ಲಿ ದಕ್ಷಿಣದಿಕ್ಕಿನಲ್ಲಿ ಬಳಸಿಕೊಂಡು ಪಶ್ಚಿಮ ದಿಕ್ಕಿನಲ್ಲಿ ಅಸ್ತಂಗತನಾಗುವನು. ಇದನ್ನು ನಾವು ಎಲ್ಲರೂ ಪ್ರತಿದಿನವೂ ನೋಡುತ್ತಿರುತ್ತೇವೆ. ಅನಂತರ ಸಾಯಂಕಾಲ ದಲ್ಲಿ ಸೂರ್ಯನು ಮುಳುಗಿದ ಮೇಲೆ ಸೂರ್ಯನ ಗತಿಯನ್ನು ನಾವು ನೋಡಲಾಗುವುದಿಲ್ಲ. ಆದ್ದರಿಂದ ಋಷಿಯು ಆದಿತ್ಯನನ್ನು—ನೀನು ಇದುವರೆಗೂ ಎಲ್ಲಿದ್ದೆ ಎಂದು ಪ್ರಶ್ನಿಸುವನು ಮತ್ತು ಅದಕ್ಕೆ ಉತ್ತರವನ್ನು ಹೇಳುವನು. ಎಲೆ ಆದಿತ್ಯನೇ, ನೀನು ಹಗಲಿನಲ್ಲಿ ದಕ್ಷಿಣದಿಕ್ಕನ್ನು ಬಳಸುವೆ. ಆದ್ದರಿಂದ ರಾತ್ರಿಕಾಲದಲ್ಲಿ ಉತ್ತರದಿಕ್ಕನ್ನು ಬಳಸಿಕೊಂಡು ಪುನಃ ಪೂರ್ವದಿಕ್ಕಿನಲ್ಲಿ ಎಂದಿನಂತೆ ಉದಯಿಸಿ ಬಾ ಎಂದು ಹೇಳಿರುವನು. ಇಲ್ಲಿ ನಾವು ವಾಸಮಾಡುವ ಭೂಮಿಯನ್ನು ಆದರಾತಿಶಯದಿಂದ ಗೃಹವೆಂದು ಕರೆಯಲಾಗಿದೆ. ಇಲ್ಲಿ ನಾವು ವಾಸಮಾಡುವ ಭೂಮಿಯೆಂದರೆ ಹಗಲಿನಲ್ಲಿ ಸೂರ್ಯನ ಪ್ರಕಾಶವು ಎಲ್ಲಿ ಬೀಳುವುದೋ ಆ ಭೂಮಿ ಮಾತ್ರ. ರಾತ್ರಿ ಕಾಲದಲ್ಲಿ ಸೂರ್ಯನ ಗತಿಯು ಕಾಣಿಸುವುದಿಲ್ಲ ವಾದ್ದರಿಂದ ಆ ಕಾಲದಲ್ಲಿ ಸೂರ್ಯನ ಪ್ರಕಾಶವು ಯಾವ ಪ್ರದೇಶದ ಮೇಲೆ ಬೀಳುವುದೋ ಅದನ್ನು ಋಷಿಯು

ಗಣನೆಗೆ ತೆಗೆದುಕೊಂಡಿಲ್ಲ. ಆದ್ದರಿಂದ ಸೂರ್ಯನು ಅಸ್ತಂಗತನಾದ ಮೇಲೆ ಪುನಃ ಸೂರ್ಯೋದಯಪರ್ಯಂತರ ಸೂರ್ಯನು ಎಲ್ಲಿದ್ದನೆಂದು ಆಶ್ಚರ್ಯವನ್ನು ವ್ಯಕ್ತಪಡಿಸಿದಾನೆ.

ಇದೇ ವಿಷಯವನ್ನು ಹಿರಣ್ಯಸ್ತೂಪಋಷಿಯು ವರ್ಣಿಸುತ್ತಾ—

**ಕ್ವೇ೩ ದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ||**

(ಋ. ಸಂ. ೧-೩೫-೭)

ಈಗ (ರಾತ್ರಿ ಕಾಲದಲ್ಲಿ) ಸೂರ್ಯನು ಎಲ್ಲಿದಾನೆ ಎಂಬುವುದನ್ನು ಯಾರು ತಿಳಿಯಬಲ್ಲರು? ಅವನು ಬೇರೆ ಯಾವ ಪ್ರದೇಶವನ್ನು ತನ್ನ ರಶ್ಮಿಗಳಿಂದ ವ್ಯಾಪಿಸಿ ಬೆಳಗುತ್ತಾನೆ? ಇದನ್ನು ಯಾರೂ ಅರಿಯರು ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದಾನೆ.

॥ ಸಂಹಿತಾಪಾಠಃ ॥

**ಪರ್ಶುರ್ಹ ನಾಮ ಮಾನವೀ ಸಾಕಂ ಸಸೂವ ವಿಂಶತಿಂ ।**

**ಭದ್ರಂ ಭಲ ತ್ಯಸ್ಯಾ ಅಭೂದ್ಯಸ್ಯಾ ಉದರಮಾಮಯದ್ವಿಶ್ವಸ್ಮಾದಿಂದ್ರ ಉತ್ತರಃ ॥ ೨೩ ॥**

॥ ಪದಪಾಠಃ ॥

**ಪರ್ಶುಃ । ಹ । ನಾಮ । ಮಾನವೀ । ಸಾಕಂ । ಸಸೂವ । ವಿಂಶತಿಂ ।**

**ಭದ್ರಂ । ಭಲ । ತ್ಯಸ್ಯೈ । ಅಭೂತ್ । ಯಸ್ಯಾಃ । ಉದರಂ । ಆಮಯತ್ । ವಿಶ್ವಸ್ಮಾತ್ । ಇಂದ್ರಃ ।**

**ಉತ್ऽತರಃ || ೨೩ ||**

॥ ಸಾಯಣಭಾಷ್ಯಂ ॥

**ಇಂದ್ರವಿಸೃಜ್ಯಮಾನಮನೇನ ಮಂತ್ರೇಣ ವೃಷಾಕಪಿರಾಶಾಸ್ತೇ । ಹೇ ಭಲೇಂದ್ರೇಣ ವಿಸೃಜ್ಯಮಾನ ಶರ । ಭಲತಿರ್ಭೇದನಕರ್ಮಾ । ಪರ್ಶುರ್ನಾಮ ಮೃಗೀ । ಹೇತಿ ಪೂರಣಃ । ಮಾನವೀ ಮನೋರ್ದುಹಿತೇಯಂ ವಿಂಶತಿಂ ವಿಂಶತಿಸಂಖ್ಯಾಕಾನ್ಪುತ್ರಾನ್ ಸಾಕಂ ಸಹ ಸಸೂವ । ಅಜೀಜನತ್ । ತ್ಯಸ್ಯೈ ತಸ್ಯೈ ಭದ್ರಂ ಭಜನೀಯಂ ಕಲ್ಯಾಣಮಭೂತ್ । ಭವತು ॥ ಲೋಡರ್ಥೇ ಲುಙ್ ॥ ಯಸ್ಯಾ ಉದರಮಾಮಯತ್ ಗರ್ಭಸ್ಥೈರ್ವಿಂಶತಿಭಿಃ ಪುತ್ರೈಃ ಪುಷ್ಟಮಾಸೀತ್ । ಮಮ ಪಿತೇಂದ್ರೋ ವಿಶ್ವಸ್ಮಾದುತ್ತರಃ ॥**

। ಪ್ರತಿಪದಾರ್ಥ ।

**ಮಾನವೀ**—ಮನುವಿನ ಪುತ್ರಿಯೂ । **ಪರ್ಶುಃ ನಾಮ**—ಪರ್ಶುಸಂಜ್ಞಕವೂ ಆದ ಈ ಹೆಣ್ಣು ಮೃಗವು । **ಸಾಕಂ**—ಒಟ್ಟಿಗೆ । **ವಿಂಶತಿಂ**—ಇಪ್ಪತ್ತು ಮಕ್ಕಳನ್ನು । **ಸಸೂವ**—ಹಡೆದಳು । **ಭಲ**—ಇಂದ್ರನಿಂದ ವಿಸರ್ಜಿತ

ವಾದ ಎಲ್ಯೆ ಬಾಣವೇ । **ಯಸ್ಯಾಃ**—ಯಾವಳ । ಉದರಂ—ಉದರವು । **ಅವುಯತ್**—ಗರ್ಭದಿಂದ ಪುಷ್ಟ ವಾಯಿತೋ । **ತಸ್ಯೈ**—ಅವಳಿಗೆ । **ಭದ್ರಂ**—ಮಂಗಳವು । **ಅಭೂತ್**—ಉಂಟಾಗಲಿ । ಇಂದ್ರಃ— ಇಂದ್ರನು । **ವಿಶ್ವಸ್ಮಾತ್**—ಸಕಲ ಜಗತ್ತಿಗಿಂತಲೂ । ಉತ್ತರಃ—ಅತ್ಯಧಿಕನು.

।ಭಾವಾರ್ಥ।

ಮನುವಿನ ಪುತ್ರಿಯೂ, ಪರ್ಶುಸಂಜ್ಞಕವೂ ಆದ ಈ ಹೆಣ್ಣು ಮೃಗವು ಒಟ್ಟಿಗೆ ಇಪ್ಪತ್ತು ಮಕ್ಕಳನ್ನು ಹಡೆದಳು. ಇಂದ್ರನಿಂದ ವಿಸರ್ಜಿತವಾದ ಎಲ್ಯೆ ಬಾಣವೇ, ಈ ಇಪ್ಪತ್ತು ಗರ್ಭಗಳಿಂದ ಪುಷ್ಟವಾದ ಉದರವುಳ್ಳ ಅವಳಿಗೆ ಮಂಗಳವುಂಟಾಗಲಿ. ಇಂದ್ರನು ಸಕಲ ಜಗತ್ತಿಗಿಂತಲೂ ಅಧಿಕನು.

English Translation

The daughter of Manu, Parshu by name, bore twenty children at once; may good fortune, O arrow of Indra, befall her whose belly was so prolific; Indra is above all (the world).



## ಎಂಭತ್ತೇಳನೆಯ ಸೂಕ್ತವು.

### ಪೀಠಿಕೆ.

---

ಈ ಸೂಕ್ತಕ್ಕೆ **ರಕ್ಷೋಹಾಗ್ನಿಃ** ಎಂಬುವುದು ದೇವತೆಯು. ರಕ್ಷೋಹಾಗ್ನಿಯ ವಿಚಾರವು ಅಲ್ಲಲ್ಲಿ ಅನೇಕ ಋಕ್ಕುಗಳಲ್ಲಿರುವುದಾದರೂ ಈ ದೇವತೆಯನ್ನೇ ಸ್ತುತಿಸುವ ಸೂಕ್ತಗಳು ಮುಖ್ಯವಾಗಿ ಮೂರು. ಕೃಣುಷ್ವಪಾಜಃ (ಋ. ಸಂ. ೪-೪) ರಕ್ಷೋಹಣಂ ವಾಜಿನಂ (ಋ. ಸಂ. ೧೦-೮೭) ಅಗ್ನೇ ಹಂಸಿ ನ್ಯತ್ರಿಣಂ (ಋ. ಸಂ. ೧೦-೧೧೮) ಎಂಬ ಮೂರು ಸೂಕ್ತಗಳಿಗೆ ರಕ್ಷೋಹಾಗ್ನಿಯೇ ದೇವತೆಯು. ಯಜ್ಞಾದಿಗಳಲ್ಲಿ ರಕ್ಷೋಗಣಗಳ ಬಾಧೆಯು ಉಂಟಾಗ ದಿರುವುದಕ್ಕಾಗಿ ರಕ್ಷೋಹಾಗ್ನಿಯನ್ನು ಸ್ತುತಿಸುವ ಸೂಕ್ತಗಳನ್ನು ಪಠಿಸುವುದು ರೂಢಿಯಾಗಿದೆ. ಅಗ್ನಿಮಥನಕಾಲದಲ್ಲಿ ಅರಣಿಗಳಿಂದ ಅಗ್ನಿಯ ಉತ್ಪತ್ತಿ ಆಗದಿದ್ದರೆ ಅದಕ್ಕೆ ರಕ್ಷೋಗಣದ ಬಾಧೆಯೇ ಕಾರಣವೆಂದು ಭಾವಿಸಿ ಗಾಯತ್ರೀ ಛಂದಸ್ಸಿನಲ್ಲಿರುವ **ಅಗ್ನೇ ಹಂಸಿ** ಎಂಬ ರಕ್ಷೋಘ್ನಸೂಕ್ತವನ್ನು ಪಠಿಸಬೇಕೆಂದು ಐತರೇಯಬ್ರಾಹ್ಮಣದಲ್ಲಿ ಅಗ್ನಿಮಥನ ಸಂದರ್ಭದಲ್ಲಿ ಹೇಳಿದೆ. ಈ ವಿಷಯವನ್ನು ನಾವು ಅಗ್ನಿಮಥನಕರ್ಮವನ್ನು ವಿವರಿಸುವಾಗ ಹೇಳಿದೇವೆ. ಋ. ಸಂ. ೭-೧೦೪ ನೇ ಸೂಕ್ತದಲ್ಲಿ ಇಂದ್ರ, ಸೋಮ ಮೊದಲಾದವರನ್ನು ರಕ್ಷೋಘ್ನರೆಂದು ಕರೆದಿದೆ ಮತ್ತು ಆ ಸೂಕ್ತವನ್ನೂ ರಕ್ಷೋಘ್ನಸೂಕ್ತವೆಂದೇ ಕರೆದಿದೆ. ರಕ್ಷೋಹಾಃ ಎಂಬ ವಿಶೇಷಣವು ಕೆಲವುವೇಳೆ ಸೋಮನಿಗೂ ಅನ್ವಯಿಸುತ್ತದೆ. ರಕ್ಷೋಹಾ ವಿಶ್ವಚರ್ಷಣಿಃ (೯-೧-೨) ಇತ್ಯಾದಿ. ಪ್ರಕೃತ ಸೂಕ್ತದಲ್ಲಿ ಜಾತವೇದೋರೂಪನಾದ ಅಗ್ನಿ, ರಕ್ಷೋಹಾಗ್ನಿ, ರಕ್ಷೋಗಣಗಳು, ಭೂತಗಳು, ಪಿಶಾಚಿಗಳು, ಯಾತುಧಾನರು ಇವರುಗಳ ವಿಷಯವಿರುವುದರಿಂದ ಇವರ ಸೂಕ್ಷ್ಮವಿವರಣೆಯು ಅವಶ್ಯಕವು.

**ಜಾತವೇದಃ**—ನಿರುಕ್ತಕಾರರಿಂದ ಈ ಪದವು **ಜಾತಾನಿ ವೇದ, ಜಾತಾನಿ ವೈನಂ ವಿದುಃ ಜಾತೇಜಾತೇ ವಿದ್ಯತ ಇತಿ ವಾ, ಜಾತವಿದ್ಯೋ ಜಾತಧನಃ ಜಾತವಿದ್ಯೋ ಜಾತಪ್ರಜ್ಞಾನಃ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಂ ಇತಿ ಬ್ರಾಹ್ಮಣಂ** ಎಂದು ವ್ಯಾಖ್ಯಾತವಾಗಿರುತ್ತದೆ.

ಜಾತವೇದಸ್ಸಿನ ಸ್ವರೂಪವನ್ನು ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದೆ—

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥**

(ಬೃ. ದೇ. ೧-೬೭)

ಋಷಿಗಳು ಪೃಥ್ವಿಯ ಮೇಲಿರತಕ್ಕ ಅಗ್ನಿಯನ್ನು ಜಾತವೇದಸ್ಸೆಂದೂ, ದ್ಯುಲೋಕದಲ್ಲಿರುವ ಅಗ್ನಿಯನ್ನು ವೈಶ್ವಾನರನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿದೆ ಮತ್ತು ಇದೇ ವಿವರಣೆಯನ್ನು ಮುಂದುವರಿಸುತ್ತಾ,

**ವೈಶ್ವಾನರಂ ಶ್ರಿತೋಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ॥** (ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿಯೂ ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ ಜಾತವೇದಸ್ಸು ಈ ಎರಡು ರೂಪಗಳಲ್ಲಿಯೂ ಅಡಕವಾಗಿದ್ದಾನೆಂದೂ, ಈ ಎರಡು ರೂಪಗಳೂ ಜಾತವೇದಸ್ಸಿನ ಬೇರೆಬೇರೆ ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ವರೂಪ ನಿರ್ವಚನವನ್ನು ಈರೀತಿ ತಿಳಿಸಿದೆ—

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥**

(ಬೃ. ದೇ. ೨-೩೦)

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥** (ಬೃ. ದೇ. ೨-೩೧)

ಉತ್ಪನ್ನನಾಗುವಾಗಲೇ ಸಕಲವನ್ನೂ ತಿಳಿಯುವುದರಿಂದಲೂ, ಅಥವಾ ಅವನಲ್ಲೇ ಜ್ಞಾನವು ಉತ್ಪನ್ನವಾದುದರಿಂದಲೂ ಅಥವಾ ಉತ್ಪನ್ನವಾದಾಗಲೇ ಸಕಲ ಧನವನ್ನೂ ತಿಳಿದು ಹೊಂದಿರುವುದರಿಂದಲೂ, ಅಥವಾ ಪುನಃಪುನಃ ಉತ್ಪನ್ನವಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವವನಾದುದರಿಂದಲೂ ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು** ಅಗ್ನಿಯು ಸ್ತುತನಾಗಿದ್ದಾನೆಂದು ಬೃಹದ್ದೇವತೆಯಲ್ಲಿ ನಿರ್ವಚನವಿದೆ. ಇದರಂತೆಯೇ ಈ ಅಗ್ನಿಯ ಸ್ವರೂಪವನ್ನು ವಿವರಿಸಿ ಶತಪಥಬ್ರಾಹ್ಮಣದಲ್ಲಿ ಈರೀತಿ ಹೇಳಿದೆ—

**ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತನ್ಮೇತದ್ವಿಭರ್ತ್ಯರ್ಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ॥**

(ಶ. ಬ್ರಾ. ೯-೫-೧೬-೮)

ಪ್ರಾಣರೂಪಿಯಾದ ಅಗ್ನಿಯು ಉತ್ಪನ್ನನಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ **ಜಾತವೇದಸ್ಸೆಂದು** ಕರೆಯಲ್ಪಟ್ಟಿದೆಯೆಂದು ಹೇಳಿದೆ. ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಶ್ವಾತ್ಮನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ||**

(ಪ್ರ. ಉ. ೧-೮)

ವಿಶ್ವರೂಪನೂ, ಸಹಸ್ರ ರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನಾದವನೂ ಮತ್ತು ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲ ಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ |**
**ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ||**

(ಕ. ಉ. ೧-೪-೮)

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣೀಸ್ತ್ರೀಯರು ಮಮತೆಯಿಂದ ತಮ್ಮ ಗರ್ಭಗಳನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ ಮತ್ತು ಯಾವ ಪೂಜ್ಯನಾದ ಅಗ್ನಿಯನ್ನುದ್ದೇಶಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ ಜಾತವೇದಸ್ಸೇ ವಿಶ್ವಾತ್ಮನಾದ **ಪರಬ್ರಹ್ಮ** ಎಂದು ಕಠೋಪನಿಷತ್ತಿನಲ್ಲಿ ವರ್ಣಿಸಿದೆ. ಇದೇ ಆನುಪೂರ್ವಿಯಲ್ಲಿ ಋ. ಸಂ. ೩-೨೯-೨ ನೇ ಋಕ್ಕಿನಲ್ಲಿ ವರ್ಣಿಸಿರುವ ಅಂಶವನ್ನೇ ಕಠದಲ್ಲಿ ತಿಳಿಸಿದೆ ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಾಧಾರವುಳ್ಳವನೂ, ಸರ್ವೋತ್ಕೃಷ್ಟನೂ ಆದುದರಿಂದ **ಜಾತವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

ಈ ಸೂಕ್ತಕ್ಕೆ **ಅಗ್ನೀ ರಕ್ಷೋಹಾ** ಎಂಬುದು ದೇವತೆಯು. ಎಂದರೆ ಭೂತ ಪಿಶಾಚಾದಿ ಯಜ್ಞವಿಘ್ನಕಾರಿಗಳಾದ ರಕ್ಷೋಗಣವನ್ನು ನಾಶಪಡಿಸುವ ಅಗ್ನಿಯೆಂದರ್ಥವು, ಯಾಸ್ಕರು ರಕ್ಷಃ ಶಬ್ದವನ್ನು ವಿವರಿಸುತ್ತಾ—

**ರಕ್ಷೋ ರಕ್ಷಿತವ್ಯಮಸ್ಮಾತ್ | ರಹಸಿ ಕ್ಷಣೋತೀತಿ ವಾ | ರಾತ್ರೌ ನಕ್ಷತ ಇತಿ ವಾ ||**

(ನಿ. ೪-೧೮)

ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ರಕ್ಷಸ್ಸೆಂಬ ಭೂತಗಣವು ಮನುಷ್ಯರನ್ನು ಭಕ್ಷಿಸುವುದು. ಇದರಿಂದ ನಮ್ಮ ಶರೀರವು ರಕ್ಷಿಸಲ್ಪಡಬೇಕು. ರಕ್ಷಿಸಲ್ಪಡಬೇಕಾದುದರಿಂದ ಇದಕ್ಕೆ ರಕ್ಷಃ ಎಂದು ಹೆಸರು. ಅಥವಾ ಯಾರೂ ಇಲ್ಲದಿರುವ ನಿರ್ಜನಪ್ರದೇಶದಲ್ಲಿ ಅಥವಾ ಕತ್ತಲಲ್ಲಿ (ಮನುಷ್ಯರನ್ನು) ಹಿಂಸಿಸುವುದರಿಂದ ಇದಕ್ಕೆ ರಕ್ಷಃ ಎಂದು ಹೆಸರು. ಅಥವಾ ರಾತ್ರಿಕಾಲದಲ್ಲಿ ಇದು ಸಂಚರಿಸುವುದರಿಂದ ಇದಕ್ಕೆ ರಕ್ಷಃ ಎಂದು ಹೆಸರು ಎಂದು ಮೂರು ವಿಧವಾದ ಅರ್ಥವನ್ನು ಹೇಳಿದಾರೆ. ರಕ್ಷಃ ಎಂಬ ಶಬ್ದಕ್ಕೂ, ರಾಕ್ಷಸಶಬ್ದಕ್ಕೂ ವ್ಯತ್ಯಾಸವಿದೆ. ರಾಕ್ಷಸರೆಂದರೆ ಮನುಷ್ಯಾಕಾರದ ಅಥವಾ ಕಣ್ಣಿಗೆ ಕಾಣಿಸುವ ಇತರ ಭಯಂಕರಾಕಾರದ ವ್ಯಕ್ತಿವಿಶೇಷಗಳು. ಇವರು ದುಷ್ಟಸ್ವಭಾವದವರಾಗಿ ಯಾವಾಗಲೂ ಸತ್ಪುರುಷರಿಗೆ ಹಿಂಸೆಯನ್ನುಂಟುಮಾಡುವವರು. ಸತ್ಕರ್ಮಗಳಿಗೆ ವಿಘ್ನವನ್ನುಂಟು

ಮಾಡುವವರು. ರಕ್ಷಃ ಎಂಬ ಶಬ್ದಕ್ಕೆ ಕಣ್ಣಿಗೆ ಕಾಣಿಸದಿರುವ ಭೂತ, ದೈವ, ಪಿಶಾಚಾದಿಗಳು Demons, evil spirits &c ; ಮನುಷ್ಯರಿಗೆ ಹಿಂಸೆಯನ್ನುಂಟುಮಾಡುವುದೂ, ಯಜ್ಞಾದಿ ಸತ್ಕರ್ಮಗಳಿಗೆ ವಿಘ್ನವನ್ನುಂಟುಮಾಡುವುದೂ ಇವುಗಳ ಸ್ವಭಾವ. ಇವುಗಳ ಬಾಧೆಯನ್ನು ಪರಿಹರಿಸಿ ಕಾಪಾಡಬೇಕೆಂದು ಅಗ್ನಿಯನ್ನು ಯಜ್ಞಾದಿಗಳಲ್ಲಿಯೂ, ಇತರ ಕರ್ಮಗಳಲ್ಲಿಯೂ ಪ್ರಾರ್ಥಿಸುವುದು ರೂಢಿಯು. ಈ ವಿಧವಾದ ಬಾಧೆಯನ್ನು ಪರಿಹರಿಸುವ ಅಗ್ನಿಯನ್ನು ರಕ್ಷೋಹಾಗ್ನಿ ಎಂದು ಕರೆಯುವರು.

ಭೂಮಿಯಲ್ಲಿರುವ ಪಿಶಾಚಿಗಳು ಅಥವಾ ಭೂತಗಳು—ಮನುಷ್ಯರ ದ್ವೇಷಿಗಳು. ಇವರನ್ನು ಹೇಳುವ ಜಾತಿವಾಚಕವು ರಕ್ಷಃ ಎಂಬುದು. ಈ ಶಬ್ದವು ಐವತ್ತಕಿಂತ ಹೆಚ್ಚುಸಲ ಏಕವಚನ ಮತ್ತು ಬಹುವಚನಗಳಲ್ಲಿ ಬಂದಿದೆ. ಸಾಧಾರಣವಾಗಿ ಯಾವುದಾದರೊಂದು ದೇವತೆಯೊಡನೆ, ರಾಕ್ಷಸನನ್ನು ಧ್ವಂಸಮಾಡೆಂದು ಪ್ರಾರ್ಥನಾರೂಪವಾಗಿ, ಅಥವಾ ರಾಕ್ಷಸನನ್ನು ವಧಿಸಿದೆ ಎಂದು ಸ್ತುತಿರೂಪವಾಗಿಯೇ ಬರುತ್ತದೆ. ೭-೧೦೪ ಮತ್ತು ೧೦-೮೭ ನೆಯ ಸೂಕ್ತಗಳಲ್ಲಿ ಇವರ ಪ್ರಸ್ತಾಪವೇ ಇದೆ. ಇಲ್ಲಿ ರಕ್ಷಃ, ಯಾತು, ಯಾತುಧಾನ ಮೊದಲಾದ ಪದಗಳು ಇವರನ್ನು ಸೂಚಿಸುತ್ತವೆ. ರಕ್ಷಸಃ ಎಂಬುದು ದುರ್ದೇವತೆಗಳು, ಪಿಶಾಚಿಗಳು ಇವೆಲ್ಲಕ್ಕೂ ಹೆಸರಾದುದರಿಂದ ಅದನ್ನು ಜಾತಿವಾಚಕವೆಂತಲೂ, ಯಾತು ಎಂಬುದನ್ನು ಉಪಜಾತಿವಾಚಕವೆಂತಲೂ ತಿಳಿಯಬಹುದು.

ಈ ಪಿಶಾಚಿಗಳು ಅಥವಾ ಭೂತಗಳಿಗೆ, ನಾಯಿ, ರಣಹದ್ದು, ಗೂಬೆ ಮತ್ತು ಇತರ ಪಕ್ಷಿಗಳ ರೂಪಗಳುಂಟು (೭-೧೦೪-೨೦ ರಿಂದ ೨೨). ಪಕ್ಷಿರೂಪವಾಗಿ, ರಾತ್ರಿಯವೇಳೆ ಹಾರಾಡುತ್ತಾರೆ (೭-೧೦೪-೧೮). ಭ್ರಾತೃ, ಭರ್ತೃ ಅಥವಾ ಪ್ರಿಯನ ರೂಪವನ್ನು ಧರಿಸಿ, ಸ್ತ್ರೀಯರನ್ನು ಸಮೀಪಿಸಿ, ಅವರ ಮಕ್ಕಳನ್ನು ನಾಶಪಡಿಸಲು ಇಚ್ಛಿಸುತ್ತಾರೆ (೧೦-೧೬೨-೫). ನಾಯಿ ಅಥವಾ ಕಪಿರೂಪಿಯಾಗಿ ಹೆಂಗಸರ ಮೇಲೆ ಬೀಳಲು ಕಾದಿರುತ್ತಾರೆ. (ಅ. ವೇ. ೪-೩೭-೧೧). ಆದುದರಿಂದ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ಇವರಿಂದ ತೊಂದರೆಯುಂಟು. (ಅ. ವೇ. ೮-೬), ವಿವಾಹಕಾಲದಲ್ಲಿ, ವಧುವಿನ ಸುತ್ತಲೂ ಓಡಾಡುತ್ತಿರುತ್ತಾರೆ, ಇವರ ಕಣ್ಣುಗಳನ್ನು ಚುಚ್ಚಲೆಂದು. ಸಣ್ಣಬಾಣಗಳನ್ನು ಅಂತರಿಕ್ಷದಲ್ಲಿ ಬಿಡುತ್ತಾರೆ (ಪಾ. ಗೃ. ಸೂ. ೧-೧೦). ಅಥರ್ವವೇದದಲ್ಲಿಯೇ ಇವರ ರೂಪ ಮೊದಲಾದುವುಗಳ ವರ್ಣನೆಯಿರುವುದು. ಅವರು ವಿಶೇಷವಾಗಿ ಮನುಷ್ಯರಂತೆ ರೂಪವನ್ನು ಧರಿಸಿರುತ್ತಾರೆ. ಅವರ ಶಿರಸ್ಸು, ಕಣ್ಣು, ಹೃದಯ ಮೊದಲಾದ ಅಂಗಾಂಗಗಳ ಪ್ರಸಕ್ತಿಯಿದೆ ; ಆದರೆ ಏನಾದರೊಂದು ವೈರೂಪ್ಯವಿದ್ದೇ ಇರುತ್ತದೆ. ಮೂರು ತಲೆ, ಎರಡು ಬಾಯಿ, ನಾಲ್ಕು ಕಣ್ಣು, ಐದು ಪಾದಗಳು, ಬೆರಳುಗಳಿಲ್ಲ, ಪಾದಗಳು ಹಿಂದು ಮುಂದಾಗಿರುವುದು ಅಥವಾ ಕೈಮೇಲೆ ಕೊಂಬುಗಳು, ಇತ್ಯಾದಿ (ಅ. ವೇ. ೮-೬ ; ಹಿ. ಗೃ. ಸೂ. ೨.೩-೭). ನೀಲಿ, ಹಳದಿ ಅಥವಾ ಹಸುರ ಪಿಶಾಚಿಗಳೂ ಉಕ್ತರಾಗಿದಾರೆ. (ಅ. ವೇ. ೧೯-೨೨-೪, ೫) ಅವರಲ್ಲಿಯೂ ಗಂಡು, ಹೆಣ್ಣುಗಳೂ, ಸಂಸಾರಗಳೂ, ರಾಜರೂ (ಅ. ವೇ. ೫-೨೨-೧೨ ; ಹಿ. ಗೃ. ಸೂ. ೨-೩-೭) ಉಂಟು ; ಅವರೂ ಮರಣಶೀಲರು (ಅ. ವೇ. ೬-೩೨-೨ ; ಇತ್ಯಾದಿ)

ಯಾತುಧಾನರು ಮನುಷ್ಯರ ಮತ್ತು ಅಶ್ವಗಳ ಮಾಂಸವನ್ನು ತಿನ್ನುತ್ತಾರೆ. ಮತ್ತು ಗೋಕ್ಷೀರವನ್ನು ಪಾನಮಾಡುತ್ತಾರೆ. (೧೦-೮೭-೧೬, ೧೭) ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿಕೊಳ್ಳಲು ರಾಕ್ಷಸರು ಮನುಷ್ಯರನ್ನು ಆಕ್ರಮಿಸುತ್ತಾರೆ. ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶಮಾಡುವ ಮೂಲಕವೇ. ಆಧಾರಕರನ್ನು ಪ್ರವೇಶಿಸದಂತೆ ರಾಕ್ಷಸರನ್ನು ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆಇದೆ (೮-೪೮-೨೦) ಅಲ್ಲಿಂದಿಲ್ಲಿ

ಹಾರಾಡುತ್ತಿರುವ ರೋಗಾಭಿಮಾನಿಯಾದ ಪಿಶಾಚಿಯೊಂದು ಮನುಷ್ಯರನ್ನು ಪ್ರವೇಶಿಸುತ್ತದೆ. (ಅ.ವೇ. ೭-೭೬-೪) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ ನಮ್ಮನ್ನು ಪ್ರವೇಶಿಸುತ್ತವೆ. (ಅ. ವೇ. ೫-೨೯.೬ ರಿಂದ ೮) ; ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು. (ಅ. ವೇ. ೮.೬.೩). ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತುತಿಂದು, ರೋಗವನ್ನುಂಟು ಮಾಡುತ್ತಾರೆ ಅ. ವೇ. ೫-೨೯.೫, ೧೦). ಹುಚ್ಚತನವನ್ನುಂಟು ಮಾಡುತ್ತಾರೆ. ಮತ್ತು ವಾಕ್ಪಟುತ್ವವನ್ನು ನಾಶ ಗೊಳಿಸುತ್ತಾರೆ (ಅ. ವೇ. ೬.೧೧೧.೩ ; ಹಿ. ಗೃ. ಸೂ. ೧-೧೫.೫), ಮನುಷ್ಯರ ವಾಸಗೃಹಗಳನ್ನು ಆಕ್ರಮಿಸುತ್ತಾರೆ. (ಕೌ. ಸೂ. ೧೩೫.೯) ಕೆಲವು ಭೂತಗಳು ಸಾಯಂಕಾಲದ ವೇಳೆಯಲ್ಲಿ ಮನೆಗಳ ಸುತ್ತಲೂ ಕುಣಿಯುತ್ತಾ ಕತ್ತೆಗಳಂತೆ ಅರಚುತ್ತಾ, ತಿರುಗುತ್ತಿರುತ್ತವೆ ಅಥವಾ ಕಾಡುಗಳಲ್ಲಿ ತಿರುಗುತ್ತಿರುತ್ತವೆ ಅಥವಾ ಗಟ್ಟಿಯಾಗಿ ನಗುತ್ತಾ ಇಲ್ಲವೇ ಕಪಾಲಗಳಿಂದ ಪಾನಮಾಡುತ್ತಾ ಇರುತ್ತವೆ. (ಅ. ವೇ. ೮-೬-೧೦, ೧೧, ೧೪ ; ಹಿ. ಗೃ. ಸೂ. ೨-೩-೩).

ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ (೭-೧೦೪.೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ ; ಅಲ್ಲಿ ಉದಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ. (ತೈ. ಸಂ. ೧.೬.೬.೩). ಬೀಳುತ್ತಿರುವ ಉಲ್ಕೆಯು ಭೂತದ ರೂಪವೆಂದು ಭಾವನೆ. (ಕೌ. ಸೂ. ೧೨೬-೯) ಅಮಾವಾಸ್ಯೆಯ ಕಗ್ಗತ್ತಲೆಯು ಪ್ರೇತಗಳ ಸಂಚಾರಕ್ಕೆ ಯೋಗ್ಯವಾಗಿರುವಂತೆ ಭೂತಗಳಿಗೂ ಅದೇ ಅನುಕೂಲಕಾಲ. (ಅ. ವೇ. ೧-೧೬ ೧ ; ೪-೩೬-೩).

ಯಜ್ಞಗಳಿಗೆ ಇವರಿಂದ ಇರುವಷ್ಟು ಆಪತ್ತು ಯಾವುದಕ್ಕೂ ಇಲ್ಲ. ದೇವಯೋಗ್ಯವಾದ ಯಜ್ಞಗಳಲ್ಲಿ ಪಿಶಾಚಿಗಳು, ಲೋಪದೋಷಗಳನ್ನುಂಟುಮಾಡುತ್ತವೆ. ಮತ್ತು ಯಾತುಗಳು ಅರ್ಪಿತವಾದ ಆಹುತಿಗಳನ್ನು ಚಲ್ಲಾಪಿಲ್ಲಿಯಾಗಿ ಎರಚುತ್ತವೆ. (೭-೧೦೪-೧೮, ೨೧) ಸ್ತೋತ್ರವನ್ನು ಕಂಡರೆ ಅವರಿಗಾಗದು. (೧೦-೧೮೨-೩) ಯಜ್ಞಕ್ಕೆ ಶಾಪ ತಗಲದಂತೆ, ಭೂತಾದಿಗಳನ್ನು ದಹಿಸಿಬಿಡೆಂದು ಅಗ್ನಿಗೆ ಪ್ರಾರ್ಥನೆ. (೧-೭೬-೩) ಯಾತುಧಾನರು ಮತ್ತು ರಕ್ಷೋಗಣಗಳ ಮಾಯೆಯಿಂದ ಶತ್ರುವಿನ ಯಾಗವನ್ನು ಊರ್ಜಿತವಾಗದಂತೆ ಮಾಡುವ ಮಂತ್ರವೊಂದಿದೆ. (ಅ. ವೇ. ೭-೭೦-೨, ಮೃತರಿಗೆ ಆಹುತಿಕೊಡುವ ಅನ್ನೋದಕಗಳಿಗೆ ಪ್ರೇತರೂಪವಲ್ಲಿ ಅತಿಥಿಯಾಗಿ ಬರುತ್ತಾರೆ. (ಅ. ವೇ. ೧೮-೨-೨೮ ; ವಾ ಸಂ. ೨-೨೯ನ್ನು ಶೋಲಿಸಿ). ಪುರಾಣಗಳಲ್ಲಿ ಈ ರಕ್ಷೋಗಣಗಳು (ರಾಕ್ಷಸರಂತಲೇ ವ್ಯವಹಾರ) ಯೋಗಿಗಳಿಗೆ ತೊಂದರೆಮಾಡುತ್ತಾರೆ ಎಂಬುದು ಸಾಮಾನ್ಯವಾಗಿದೆ.

ಕತ್ತಲನ್ನು ಹೋಗಲಾಡಿಸುವವನೂ, ಯಾಗಕ್ಕೆ ಯಜಮಾನನೂ ಆದ ಅಗ್ನಿಗೂ ಇವರಿಗೂ ಬದ್ಧ ದ್ವೇಷ. ಇವರನ್ನು ದಹಿಸು, ಓಡಿಸು ಅಥವಾ ನಾಶಮಾಡು ಎಂದು ಅಗ್ನಿಯನ್ನೇ ಪ್ರಾರ್ಥಿಸುವುದು. (೧೦-೮೭-೩,೬ ಇತ್ಯಾದಿ) ಈ ಕಾರ್ಯದಿಂದಲೇ ಅಗ್ನಿ ಮತ್ತು ಇತರ ಕೆಲವು ದೇವತೆಗಳಿಗೆ ' ರಕ್ಷೋಹಾ ' ಎಂಬ ಹೆಸರು ಬಂದಿರುವುದು.

ಈ ಭೂತಗಳು ಸ್ವಭಾವತಃ ಹಾನಿಕರಗಳು ಮಾತ್ರವಲ್ಲ, ಇತರರಿಂದ ಪ್ರೇರಿತರಾಗಿಯೂ ಹಾನಿಯನ್ನುಂಟು ಮಾಡುವುದುಂಟು. ರಕ್ಷೋಯುಜಃ (ರಾಕ್ಷಸರನ್ನು ಪ್ರೇರಿಸುವವರು) ಎಂಬುದು ಕಂಡುಬರುತ್ತದೆ. (೬-೬೨-೯) ಮತ್ತು ಮಂತ್ರಗಾರರ ಭೂತಗಳು ಮತ್ತು ಯಾತುಗಳು ಅಲ್ಲಲ್ಲಿ ಇವೆ. (೭-೧೦೪.೨೩ ; ೮.೬೦-೨೦) ಶತ್ರುವಿನಿಂದ ಪ್ರೇರಿತವಾದ ಭೂತದ ಕಾಟಕ್ಕೆ ಒಳಗಾದವನು ಯವಿಷ್ಠಾಗ್ನಿಗೆ ಹೋಮಮಾಡಿ ಅವುಗಳನ್ನು ಓಡಿಸಬಹುದು.

(ತೈ. ಸಂ. ೨-೨-೩-೨) ಮತ್ತು ಪ್ರೇರಿಸುವವನನ್ನೇ ನುಂಗಿಬಿಡು ಎಂದು ಆ ಭೂತಗಳಿಗೇ ಅಪ್ಪಣೆ ಇದೆ. (ಅ. ವೇ. ೨-೨-೪).

ಭೂತಗಳು ಎಂಬರ್ಥದಲ್ಲಿ ರಕ್ಷಃ ಎಂಬ ಪದವು ಪುಲ್ಲಿಂಗ ಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ನಪುಂಸಕದಲ್ಲಿ ಅಪಾಯ ಎಂತಲೂ ಅರ್ಥವುಂಟು. ರಕ್ಷ್ (ತೊಂದರೆಮಾಡು) ಎಂಬ ಧಾತುವಿನಿಂದ ರಕ್ಷಃ ಎಂದಾಗಿರಬಹುದು (ಋಕ್ಸಾ ಅಪಾಯಕರವಾದ); ಆದರೆ ಈ ಪ್ರಯೋಗವು ಬಹಳ ಅಪರೂಪ. ಸಾಧಾರಣವಾದ ರಕ್ಷ್—ಕಾಪಾಡು ಎಂಬುದರಿಂದಲೂ ಆಗಿರಬಹುದು. ಈ ಸಂದರ್ಭದಲ್ಲಿ ರಕ್ಷಃ ಎಂದರೆ ತಪ್ಪಿಸಿಕೊಳ್ಳಬೇಕಾದುದು ಎಂದರ್ಥವಾಗುತ್ತದೆ.

। ಸಾಯಣಭಾಷ್ಯಂ ।

**ರಕ್ಷೋಹಣಮಿತಿ ಪಂಚವಿಂಶತ್ಯೃಚಂ ತೃತೀಯಂ ಸೂಕ್ತಂ। ಪಾಯುರ್ನಾಮ ಭಾರದ್ವಾಜ ಋಷಿಃ। ದ್ವಾವಿಂಶಾದ್ಯಾಶ್ಚತಸ್ರೋಽನುಷ್ಟುಭಃ। ಶಿಷ್ಟಾ ಏಕವಿಂಶತಿಸ್ತ್ರಿಷ್ಟುಭಃ। ರಕ್ಷೋಹಾಗ್ನಿರ್ದೇವತಾ। ತಥಾ ಚಾನುಕ್ರಾಂತಂ। ರಕ್ಷೋಹಣಂ ಪಂಚಾಧಿಕಾ ಪಾಯುರಾಗ್ನೇಯಂ ರಾಕ್ಷೋಘ್ನಂ ಚತುರನುಷ್ಟುಬಂತಮಿತಿ ॥ ಗತಃ ಸೂಕ್ತವಿನಿಯೋಗಃ ॥ ಅಂಗಾರಾಭಿವಿಹರಣೇ ಪರಿ ತ್ವಾಗ್ನ ಇತ್ಯೇಷಾ ಜಪ್ಯಾ। ಸೂತ್ರಿತಂ ಚ। ಧಿಷ್ಣ್ಯವತಾಮಿತ್ಯಾದಿನಾ ಪರಿ ತ್ವಾಗ್ನೇ ಪುರಂ ವಯಮಿತ್ಯಂತೇನ। ಆ. ೫-೧೩ ॥**

ಅನುವಾದವು—**ರಕ್ಷೋಹಣಂ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜಗೋತ್ರದ ಪಾಯುಃ ಎಂಬುವನು ಋಷಿಯು; ಈ ಸೂಕ್ತದ ಇಪ್ಪತ್ತೆರಡನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು ಅನುಷ್ಟುಪ್‌ಛಂದಸ್ಕವು ಉಳಿದ ಇಪ್ಪತ್ತೊಂದು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ರಕ್ಷೋಹಾಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ರಕ್ಷೋಹಣಂ ಪಂಚಾಧಿಕಾ ಪಾಯುರಾಗ್ನೇಯಂ ರಾಕ್ಷೋಘ್ನಂ ಚತುರನುಷ್ಟುಬಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಅಂಗಾರಾಭಿವಿಹರಣದಲ್ಲಿ **ಪರಿತ್ವಾಗ್ನೇ** ಎಂಬ ಈ ಸೂಕ್ತದ ೨೨ ನೇ ಋಕ್ಕನ್ನು ಜಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಧಿಷ್ಣ್ಯವತಾಮಿತ್ಯಾದಿನಾ ಪರಿ ತ್ವಾಗ್ನೇ ಪುರಂ ವಯಂ** ಎಂಬ ಸೂತ್ರದಿಂದ (ಆ. ೫-೧೩) ವಿವೃತವಾಗಿರುವುದು.

## ಸೂಕ್ತ—೮೭

ಮಂಡಲ—೧೦ । ಅನುವಾಕ—೭ ॥ ಸೂಕ್ತ—೮೭ ।
ಅಷ್ಟಕ—೮ ॥ ಅಧ್ಯಾಯ—೪ ॥ ವರ್ಗ—೫, ೬, ೭, ೮, ೯ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
ಋಷಿಃ—ಪಾಯುಃ ॥
ದೇವತಾ—ಅಗ್ನೀ ರಕ್ಷೋಹಾ ॥
ಛಂದಃ—೧-೨೧. ತ್ರಿಷ್ಟುಪ್ । ೨೨-೨೫. ಅನುಷ್ಟುಪ್ ।

। ಸಂಹಿತಾಪಾಠಃ ।

ರಕ್ಷೋಹಣಂ ವಾಜಿನಮಾ ಜಿಘರ್ಮಿ ಮಿತ್ರಂ ಪ್ರಥಿಷ್ಠಮುಪ ಯಾಮಿ
ಶರ್ಮ ।

ಶಿಶಾನೋ ಅಗ್ನಿಃ ಕ್ರತುಭಿಃ ಸಮಿದ್ಧಃ ಸ ನೋ ದಿವಾ ಸ ರಿಷಃ ಪಾತು ನಕ್ತಂ ॥ ೧ ॥

॥ ಪದಪಾಠಃ ॥

ರಕ್ಷಃ ಽಹನಂ । ವಾಜಿನಂ । ಆ । ಜಿಘರ್ಮಿ । ಮಿತ್ರಂ । ಪ್ರಥಿಷ್ಠಂ । ಉಪ । ಯಾಮಿ । ಶರ್ಮ ।
ಶಿಶಾನಃ । ಅಗ್ನಿಃ । ಕ್ರತುಽಭಿಃ । ಸಂಽಇದ್ಧಃ । ಸಃ । ನಃ । ದಿವಾ । ಸಃ । ರಿಷಃ । ಪಾತು । ನಕ್ತಂ ॥೧॥

॥ ಸಾಯಣಭಾಷ್ಯಂ ॥

ರಕ್ಷೋಹಣಂ ರಕ್ಷಸಾಂ ಹಂತಾರಂ ವಾಜಿನಂ ಬಲವಂತಮನ್ನವಂತಂ ವಾಗ್ನಿಮಾ ಜಿಘರ್ಮಿ । ಘೃತೇನಾಜುಹೋಮಿ । ಕಿಂಚ ಮಿತ್ರಂ ಯಜಮಾನಾನಾಂ ಸಖಾಯಂ ಪ್ರಥಿಷ್ಠಂ ಪೃಥುತಮಂ ಶರ್ಮ ಗೃಹಮುಪ ಯಾಮಿ । ಉಪಗಚ್ಛಾಮಿ । ಸೋಽಯಮಗ್ನಿಃ ಶಿಶಾನೋ ಜ್ವಾಲಾಸ್ತೀಕ್ಷ್ಣೀಕುರ್ವನ್ ಕ್ರತುಭಿಃ ಕರ್ಮಪರೈಃ ಪುರುಷೈಃ ಸಮಿದ್ಧಃ ಪ್ರಜ್ವಾಲಿತೋ ಭವತಿ। ಕಿಂಚ ಸೋಽಗ್ನಿರ್ನೋಽಸ್ಮಾನ್ದಿವಾಹನಿ ರಿಷೋ ಹಿಂಸಕಾದ್ರಕ್ಷಸಃ ಪಾತು । ರಕ್ಷತು । ಸೋಽಗ್ನಿರ್ನಕ್ತಂ ರಾತ್ರೌ ಚಾಸ್ಮಾನ್ರಕ್ಷಸಃ ಪಾತು ॥

। ಪ್ರತಿಪದಾರ್ಥ ।

**ರಕ್ಷೋಹಣಂ**—ರಾಕ್ಷಸರ ನಾಶಕನೂ । **ವಾಜಿನಂ**—ಶಕ್ತಿಯುತನೂ ಆದ ಅಗ್ನಿಯನ್ನುದ್ದೇಶಿಸಿ । **ಆ ಜಿಘರ್ಮಿ**—ಆಜ್ಯಾಹುತಿಯನ್ನರ್ಪಿಸುತ್ತೇನೆ । **ಮಿತ್ರಂ**—ಯಜಮಾನರ ಸಖನೂ । **ಪ್ರಥಿಷ್ಠಂ**—ಪುಷ್ಟನೂ । **ಶರ್ಮ**—ಗೃಹದಂತೆ ಆಶ್ರಯದಾತನೂ ಆದ ಅಗ್ನಿಯನ್ನು । **ಉಪ ಯಾಮಿ**—ಸಮೀಪಿಸುತ್ತೇನೆ । **ಅಗ್ನಿಃ**—ಅಗ್ನಿಯು । **ಶಿಶಾನಃ**—ಜ್ವಾಲೆಯಿಂದ ತೀಕ್ಷ್ಣವಾಗಿ । **ಸಮಿದ್ಧಃ**—ಪ್ರಜ್ವಲಿತನಾಗುತ್ತಾನೆ । **ಸಃ**—ಅದೇ ಅಗ್ನಿಯು । **ನಃ**—ನಮ್ಮನ್ನು । **ದಿವಾ**—ಹಗಲಿನಲ್ಲಿ । **ರಿಷಃ**—ಹಿಂಸಕರಾದ ಶತ್ರುಗಳಿಂದ । **ಪಾತು**—ರಕ್ಷಿಸಲಿ । **ಸಃ**—ಅಗ್ನಿಯು । **ನಕ್ತಂ**—ರಾತ್ರಿಯಲ್ಲಿಯೂ ರಕ್ಷಿಸಲಿ.

। ಭಾವಾರ್ಥ ।

ರಾಕ್ಷಸರ ನಾಶಕನೂ, ಶಕ್ತಿಯುತನೂ ಆದ ಅಗ್ನಿಯನ್ನುದ್ದೇಶಿಸಿ ಆಜ್ಯಾಹುತಿಯನ್ನರ್ಪಿಸುತ್ತೇನೆ. ಯಜಮಾನರ ಸಖನೂ, ಪುಷ್ಟನೂ ಗೃಹದಂತೆ ಆಶ್ರಯದಾತನೂ ಆದ ಅಗ್ನಿಯನ್ನು ಸಮೀಪಿಸುತ್ತೇನೆ. ಅಗ್ನಿಯು ತನ್ನ ಜ್ವಾಲೆಯಿಂದ ತೀಕ್ಷ್ಣನಾಗಿ ಕರ್ಮಪರರಾದ ಪುರುಷರಿಂದ ಪ್ರಜ್ವಲಿತನಾಗುತ್ತಾನೆ. ಅದೇ ಅಗ್ನಿಯು ನಮ್ಮನ್ನು ಅಹೋರಾತ್ರವೂ ರಕ್ಷಿಸಲಿ.

English Translation

I offer clarified butter to the powerful Agni, the slayer of Rakshasas; I approach the most spacious dwelling, the friend (of worshippers); Agni

sharpening (his flames) is kindled by pious men; may he guard us from malignant spirits by day and by night.

। ಸಂಹಿತಾಪಾಠಃ ।

ಅಯೋದಂಷ್ಟ್ರೋ ಅರ್ಚಿಷಾ ಯಾತುಧಾನಾನುಪ ಸ್ಪೃಶ ಜಾತವೇದಃ
ಸಮಿದ್ಧಃ ।
ಆ ಜಿಹ್ವಯಾ ಮೂರದೇವಾನ್ರಭಸ್ವ ಕ್ರವ್ಯಾದೋ ವೃಕ್ತ್ವ್ಯಪಿ ಧತ್ಸ್ವಾಸನ್ ॥

। ಪದಪಾಠಃ ।

ಅಯಃಽದಂಷ್ಟ್ರಃ । ಅರ್ಚಿಷಾ । ಯಾತುಽಧಾನಾನ್ । ಉಪ । ಸ್ಪೃಶ । ಜಾತಽವೇದಃ । ಸಂಽಇದ್ಧಃ ।
ಆ । ಜಿಹ್ವಯಾ । ಮೂರಽದೇವಾನ್ । ರಭಸ್ವ । ಕ್ರವ್ಯಽಅದಃ । ವೃಕ್ತ್ವೀ । ಅಪಿ । ಧತ್ಸ್ವ । ಆಸನ್ ॥

। ಸಾಯಣಭಾಷ್ಯಂ ।

ಹೇ ಜಾತವೇದೋ ಜಾತಧನ ಜಾತಪ್ರಜ್ಞ ವಾ ತ್ವಂ ಸಮಿದ್ಧಃ ಸಮ್ಯಗ್ದೀಪ್ತೋಽಯೋದಂಷ್ಟ್ರೋಽಯೋಮಯದಂಷ್ಟ್ರಃ । ತೀಕ್ಷ್ಣದಂಷ್ಟ್ರಃ ಸನ್ನಿತ್ಯರ್ಥಃ । ಯಾತುಧಾನಾನ್ರಾಕ್ಷಸಾನರ್ಚಿಷಾ ಜ್ವಾಲಯೋಪ ಸ್ಪೃಶ । ಸಂದಹೇತ್ಯರ್ಥಃ । ಕಿಂಚ ತ್ವಂ ಮೂರದೇವಾನ್ ಮೂಢದೇವಾನ್ಮಾರಕವ್ಯಾಪಾರಾನ್ರಾಕ್ಷಸಾಞ್ಜಿಹ್ವಯಾ ಜ್ವಾಲಯಾ ರಭಸ್ವ । ಮಾರಯೇತ್ಯರ್ಥಃ । ಮಾರಯಿತ್ವಾ ಚ ಕ್ರವ್ಯಾದೋ ಮಾಂಸಭಕ್ಷಕಾನ್ರಾಕ್ಷಸಾನ್ವೃಕ್ತ್ವೀ ಛಿತ್ತ್ವಾಸನ್ನಾಸ್ಯೇಽಪಿ ಧತ್ಸ್ವ । ಅಪಿಧೇಹಿ । ಆಚ್ಛಾದಯೇತ್ಯರ್ಥಃ ॥

। ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದಸಂಜ್ಞಕನಾದ ಎಲೈ ಅಗ್ನಿಯೇ । **ಅಯೋದಂಷ್ಟ್ರಃ**—ಉಕ್ಕಿನಂತೆ ತೀಕ್ಷ್ಣವಾದ ದವಡೆಯುಳ್ಳ ನೀನು । **ಸಮಿದ್ಧಃ**—ಪ್ರಜ್ವಲಿತನಾಗಿ । **ಅರ್ಚಿಷಾ**—ನಿನ್ನ ಜ್ವಾಲೆಯಿಂದ । **ಯಾತುಧಾನಾನ್**—ರಾಕ್ಷಸರನ್ನು । **ಉಪ ಸ್ಪೃಶ**—ನಾಶಪಡಿಸು । **ಮೂರದೇವಾನ್**—ಹಿಂಸಾವ್ಯಾಪಾರವುಳ್ಳ ಅಸುರರನ್ನು । **ಜಿಹ್ವಯಾ**—ಜ್ವಾಲೆಯಿಂದ । **ಆ ರಭಸ್ವ**—ನಾಶಪಡಿಸು । **ಕ್ರವ್ಯಾದಃ**—ಮಾಂಸಭಕ್ಷಕರಾದ ಅಸುರರನ್ನು । **ವೃಕ್ತ್ವೀ**—ಕತ್ತರಿಸಿ । **ಆಸನ್**—ಬಾಯಿನೊಳಕ್ಕೆ । **ಅಪಿ ಧತ್ಸ್ವ**—ತುರುಕಿಕೋ.

। ಭಾವಾರ್ಥ ॥

ಜಾತವೇದೋಸಂಜ್ಞಕನಾದ ಎಲೈ ಅಗ್ನಿಯೇ, ಉಕ್ಕಿನಂತೆ ತೀಕ್ಷ್ಣವಾದ ದವಡೆಯುಳ್ಳ ನೀನು ಪ್ರಜ್ವಲಿತನಾಗಿ ನಿನ್ನ ಜ್ವಾಲೆಯಿಂದ ರಾಕ್ಷಸರನ್ನು ನಾಶಪಡಿಸು. ಹಿಂಸಾವ್ಯಾಪಾರವುಳ್ಳ ಅಸುರರನ್ನು ಜ್ವಾಲೆಯಿಂದ ನಾಶಪಡಿಸು. ಮಾಂಸಭಕ್ಷಕರಾದ ಅಸುರರನ್ನು ಕತ್ತರಿಸಿ ನಿನ್ನ ಬಾಯಿನಲ್ಲಿ ತುರುಕು.

### English Translation

Jatavedas, who have teeth of iron, consume the Yatudhanas' flame when kindled, destroy the destructive (spirits) with your tongue, cut up the eaters of flesh, and put them in your mouth.

। ಸಂಹಿತಾಪಾಠಃ ।

ಉಭೋಭಯಾವಿನ್ನುಪ ಧೇಹಿ ದಂಷ್ಟ್ರಾ ಹಿಂಸ್ರಃ ಶಿಶಾನೋಽವರಂ ಪರಂ ಚ ।
ಉತಾಂತರಿಕ್ಷೇ ಪರಿ ಯಾಹಿ ರಾಜಞ್ಜಂಭೈಃ ಸಂ ಧೇಹ್ಯಭಿ ಯಾತುಧಾನಾನ್ ॥ ೩ ॥

। ಪದಪಾಠಃ ॥

ಉಭಾ । ಉಭಯಾವಿನ್ । ಉಪ । ಧೇಹಿ । ದಂಷ್ಟ್ರಾ । ಹಿಂಸ್ರಃ । ಶಿಶಾನಃ । ಅವರಂ । ಪರಂ । ಚ ।
ಉತ । ಅಂತರಿಕ್ಷೇ । ಪರಿ । ಯಾಹಿ । ರಾಜನ್ । ಜಂಭೈಃ । ಸಂ । ಧೇಹಿ । ಅಭಿ । ಯಾತುಽಧಾನಾನ್ ॥

॥ ಸಾಯಣಭಾಷ್ಯಂ ॥

ಹೇ ಉಭಯಾವಿನ್ನುಭಾಭ್ಯಾಂ ದಂಷ್ಟ್ರಾಭ್ಯಾಂ ಯುಕ್ತಾಗ್ನೇ ತ್ವಂ ಹಿಂಸ್ರೋ ರಾಕ್ಷಸಾನಾಂ ಹಿಂಸಕಸ್ತ್ವಮುಭೋಭೇ ದಂಷ್ಟ್ರಾ ದಂಷ್ಟ್ರೇ ಶಿಶಾನಸ್ತೀಕ್ಷ್ಣೀಕುರ್ವನ್ನುಪ ಧೇಹಿ । ವಧಾರ್ಹೇಷು ರಾಕ್ಷಸೇಷು ಪ್ರತಿಷ್ಠಾಪಯ । ಕಿಂಚಾವರಂ ಪರಂ ಚ ಜಗದ್ರಕ್ಷ । ಉತಾಪಿ ಚ ಹೇ ರಾಜನ್ ದೀಪ್ತಾಗ್ನೇ ತ್ವಮಂತರಿಕ್ಷೇ ಸ್ಥಿತಾನ್ರಾಕ್ಷಸಾನ್ಪರಿ ಯಾಹಿ । ಪರಿಗಚ್ಛ । ಪರಿಗತ್ಯ ಚ ತಾನ್ಯಾತುಧಾನಾನ್ರಾಕ್ಷಸಾಞ್ಜಂಭೈರ್ಭಕ್ಷಣಸಾಧನಭೂತಾಭಿರ್ದಂಷ್ಟ್ರಾಭಿರಭಿ ಸಂ ಧೇಹಿ। ಸಂಯೋಜಯ ಭಕ್ಷಯೇತ್ಯರ್ಥಃ ॥

। ಪ್ರತಿಪದಾರ್ಥ ।

**ಉಭಯಾವಿನ್**—ಎರಡು ದವಡೆಗಳುಳ್ಳ ಎಲೈ ಅಗ್ನಿಯೇ । **ಹಿಂಸ್ರಃ**—ರಾಕ್ಷಸರ ಹಿಂಸಕನಾದ ನೀನು । **ಉಭಾ ದಂಷ್ಟ್ರಾ**—ನಿನ್ನ ಎರಡು ದವಡೆಗಳನ್ನೂ । **ಶಿಶಾನಃ**—ಹರಿತ ಮಾಡಿಕೊಂಡು । **ಉಪ ಧೇಹಿ**—ರಾಕ್ಷಸರಲ್ಲಿ ಪ್ರಯೋಗಿಸು । **ಅವರಂ**—ಈ ಲೋಕವನ್ನೂ । **ಪರಂ ಚ**—ಮೇಲಿನ ಲೋಕವನ್ನೂ ರಕ್ಷಿಸು । **ಉತ**—ಮತ್ತು । **ರಾಜನ್**—ಪ್ರಭಾಯುತನಾದ ಎಲೈ ಅಗ್ನಿಯೇ । **ಅಂತರಿಕ್ಷೇ**—ಅಂತರಿಕ್ಷಸ್ಥನಾದ ಅಸುರರಿಗೆದುರಾಗಿ । **ಪರಿ ಯಾಹಿ**—ಹೊರಡು । **ಯಾತುಧಾನಾನ್**—ಆ ರಾಕ್ಷಸರನ್ನು । **ಜಂಭೈಃ**—ತೀಕ್ಷ್ಣವಾದ ದಂಷ್ಟ್ರಗಳಿಂದ । **ಅಭಿ ಸಂ ಧೇಹಿ**—ಕಬಳಿಸು.

॥ ಭಾವಾರ್ಥ ॥

ಎರಡು ದವಡೆಗಳುಳ್ಳ ಎಲೈ ಅಗ್ನಿಯೇ, ರಾಕ್ಷಸಂಹಿಕನಾದ ನೀನು. ನಿನ್ನ ಎರಡು ದವಡೆಗಳನ್ನೂ ಹರಿತ ಮಾಡಿಕೊಂಡು ರಾಕ್ಷಸರಲ್ಲಿ ಪ್ರಯೋಗಿಸು. ಈ ಲೋಕವನ್ನೂ ಮೇಲಿನ ಲೋಕವನ್ನೂ ರಕ್ಷಿಸು. ಪ್ರಭಾಯುತನಾದ ಎಲೈ ಅಗ್ನಿಯೇ, ಅಂತರಿಕ್ಷಸ್ಥರಾದ ಅಸುರರನ್ನು ಎದುರಿಸು. ಆ ರಾಕ್ಷಸರನ್ನು ತೀಕ್ಷ್ಣವಾದ ದಂಷ್ಟ್ರಗಳಿಂದ ಕಬಳಿಸು.

## English Translation

Agni, the destroyer (of the Rakshasas), who have two (rows of teeth), sharpening them both, apply them to (the Rakshasas, and preserve) both the upper and the lower (world); and march, radiant (Agni, against the Rakshasas) in the firmament, seize the Yatudhanas with your jaws.

॥ ಸಂಹಿತಾಪಾಠಃ ॥

ಯುಜ್ಞೈರಿಷೂಃ ಸಂನಮಮಾನೋ ಅಗ್ನೇ ವಾಚಾ ಶಲ್ಯಾँ ಅಶನಿಭಿರ್ದಿ-
ಹಾನಃ ।
ತಾಭಿರ್ವಿಧ್ಯ ಹೃದಯೇ ಯಾತುಧಾನಾನ್ಪ್ರತೀಚೋ ಬಾಹೂನ್ಪ್ರತಿ
ಭಙ್ಧ್ಯೇಷಾಂ ॥ ೪ ॥

ಪದಪಾಠಃ ॥

ಯಜ್ಞೈಃ । ಇಷೂಃ । ಸಂऽನಮಮಾನಃ । ಅಗ್ನೇ । ವಾಚಾ । ಶಲ್ಯಾನ್ । ಅಶನಿऽಭಿಃ । ದಿಹಾನಃ ।
ತಾಭಿಃ । ವಿಧ್ಯ । ಹೃದಯೇ । ಯಾತುऽಧಾನಾನ್ । ಪ್ರತೀಚಃ । ಬಾಹೂನ್ । ಪ್ರತಿ । ಭಙ್ಧಿ । ಏಷಾಂ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಯಜ್ಞೈರಸ್ಮದೀಯೈರ್ಬಲಕರೈರ್ಯಾಗೈರ್ವಾಚಾಸ್ಮದೀಯಯಾ ಸ್ತುತ್ಯಾ ಚೇಷೂರ್ವಕ್ರಾನ್ಬಾಣಾನ್ ಸಂನಮಮಾನಃ ಸಂನಮಯನ್ ಶಲ್ಯಾಂಸ್ತಾಸಾಂ ಶಲ್ಯಾನಶನಿಭಿರ್ದೀಪ್ತಿಭಿರ್ದಿಹಾನಸ್ತೀಕ್ಷ್ಣೀಕುರ್ವನ್ ತಾಭಿರಿಷುಭಿರ್ಯಾತುಧಾನಾನ್ರಾಕ್ಷಸಾನ್ಹೃದಯೇ ವಿಧ್ಯ । ತತ ಏಷಾಂ ಯಾತುಧಾನಾನಾಂ ಸಂಬಂಧಿನಃ ಪ್ರತೀಚೋ ಯುದ್ಧಾಯ ತ್ವಾಂ ಪ್ರತಿಗತಾನ್ಬಾಹೂನ್ಪ್ರತಿ ಭಙ್ಧಿ । ಪ್ರತ್ಯಾಮರ್ದಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । **ಯಜ್ಞೈಃ**—ಯಜ್ಞಗಳಿಂದಲೂ । **ವಾಚಾ**—ಸ್ತುತಿಗಳಿಂದಲೂ । **ಇಷೂಃ**—ನಿನ್ನ ಬಾಣಗಳನ್ನು । **ಸಂನಮಮಾನಃ**—ಅಸುರರ ಮೇಲೆ ಪ್ರಯೋಗಿಸಲು ಬಗ್ಗಿಸುತ್ತಲೂ । **ಶಲ್ಯಾನ್**—ನಿನ್ನ

ಶಲ್ಯಗಳನ್ನು । **ಅಶನಿಭಿಃ**—ಜ್ವಾಲೆಗಳಿಂದ । **ದಿಹಾನಃ**—ತೀಕ್ಷ್ಣಮಾಡುತ್ತಲೂ । **ತಾಭಿಃ**—ಅವುಗಳಿಂದ । **ಯಾತುಧಾನಾನ್**—ಅಸುರರನ್ನು । **ಹೃದಯೇ**—ಹೃದಯದಲ್ಲಿ ಹೊಡೆದು । **ವಿಧ್ಯ**—ಸೀಳಿಹಾಕು। **ಪ್ರತೀಚಃ**—ನಿನ್ನನ್ನು ಎದುರಿಸುವ । **ಏಷಾಂ ಬಾಹೂನ್**—ಅವರ ತೋಳುಗಳನ್ನು । **ಪ್ರತಿ ಭಂಗ್ಧಿ**—ಕತ್ತರಿಸಿ ಹಾಕು.

। ಭಾವಾರ್ಥ ।

ಎಲೈ ಅಗ್ನಿಯೇ, ಯಜ್ಞಗಳಿಂದಲೂ ಸ್ತುತಿಗಳಿಂದಲೂ ನಿನ್ನ ಬಾಣಗಳನ್ನು ಅಸುರರ ಮೇಲೆ ಪ್ರಯೋಗಿಸಲು ಬಗ್ಗಿಸುತ್ತಲೂ, ನಿನ್ನ ಶಲ್ಯಗಳನ್ನು ಜ್ವಾಲೆಗಳಿಂದ ತೀಕ್ಷ್ಣಮಾಡುತ್ತಲೂ, ಅವುಗಳಿಂದ ಅಸುರರನ್ನು ಹೃದಯದಲ್ಲಿ ಹೊಡೆದು ಸೀಳಿಹಾಕು. ನಿನ್ನನ್ನು ಎದುರಿಸುವ ಅವರ ತೋಳುಗಳನ್ನು ಕತ್ತರಿಸಿ ಹಾಕು.

English Translation

Agni, bending your arrows by means of our sacrifices and praise, and sharpening the javelins with your splendours, pierce with them the Yatudhanas to the heart, break their arms when raised against you.

॥ ಸಂಹಿತಾಪಾಠಃ ॥

ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ ಹಿಂಸ್ರಾಶನಿರ್ಹರಸಾ ಹಂತ್ವೇನಂ ।
ಪ್ರ ಪರ್ವಾಣಿ ಜಾತವೇದಃ ಶೃಣೀಹಿ ಕ್ರವ್ಯಾತ್ಕ್ರವಿಷ್ಣುರ್ವಿ ಚಿನೋತು ವೃಕ್ಣಂ ॥ ೫ ॥

। ಪದಪಾಠಃ ।

ಅಗ್ನೇ । ತ್ವಚಂ । ಯಾತುऽಧಾನಸ್ಯ । ಭಿಂಧಿ । ಹಿಂಸ್ರಾ । ಅಶನಿಃ । ಹರಸಾ । ಹಂತು । ಏನಂ ।
ಪ್ರ । ಪರ್ವಾಣಿ । ಜಾತऽವೇದಃ । ಶೃಣೀಹಿ । ಕ್ರವ್ಯऽಅತ್ । ಕ್ರವಿಷ್ಣುಃ । ವಿ । ಚಿನೋತು । ವೃಕ್ಣಂ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ಜಾತಧನ ಜಾತಪ್ರಜ್ಞ ವಾಗ್ನೇ ತ್ವಂ ಯಾತುಧಾನಸ್ಯ ರಾಕ್ಷಸಸ್ಯ ತ್ವಚಂ ಭಿಂಧಿ । ದಾರಯ । ಏನಂ ಭಿನ್ನತ್ವಚಂ ಯಾತುಧಾನಂ ಹಿಂಸ್ರಾ ಹಿಂಸನಶೀಲಂ ತವಾಶನಿರ್ವಜ್ರಂ ಹರಸಾ ತಾಪೇನ ಹಂತು । ಹಿನಸ್ತು । ಹತಸ್ಯ ರಾಕ್ಷಸಸ್ಯ ಪರ್ವಾಣಿ ಶರೀರಪರ್ವಾಣಿ ಚ ಪ್ರ ಶೃಣೀಹಿ । ಛಿಂಧೀತ್ಯರ್ಥಃ । ಛಿನ್ನೇಷು ಚ ಶರೀರಸಂಬಂಧಿಷು ಸತ್ಸು ವೃಕ್ಣಂ ಛಿನ್ನಸಂಧಿನೋನಂ ಯಾತುಧಾನಂ ಕ್ರವಿಷ್ಣುರ್ಮಾಂಸಮಿಚ್ಛನ್ ಕ್ರವ್ಯಾನ್ಮಾಂಸಭಕ್ಷಕೋ ವೃಕಾದಿರ್ವಿ ಚಿನೋತು । ಭಕ್ಷಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಜಾತವೇದಃ—ಸಕಲವನ್ನೂ ತಿಳಿದಿರುವ । ಅಗ್ನೇ—ಎಲೈ ಅಗ್ನಿಯೇ । ಯಾತುಧಾನಸ್ಯ—ಅಸುರನ । ತ್ವಚಂ—ಚರ್ಮವನ್ನು । ಭಿಂಧಿ—ಸುಲಿದುಹಾಕು । ಏನಂ—ಅವನನ್ನು । ಹಿಂಸ್ರಾ—ನೋವನ್ನುಂಟುಮಾಡುವ । ಅಶನಿಃ—ವಜ್ರಾಯುಧವು । ಹರಸಾ—ತನ್ನ ಜ್ವಾಲೆಯಿಂದ । ಹಂತು—ನಾಶಪಡಿಸಲಿ । ಪರ್ವಾಣಿ—ಶರೀರದ ಸಂಧಿಸ್ಥಾನಗಳನ್ನೂ । ಪ್ರ ಶೃಣೀಹಿ—ಕತ್ತರಿಸಿ ಹಾಕು । ವೃಕ್ಣಂ—ಕತ್ತರಿಸಲ್ಪಟ್ಟ ದೇಹವುಳ್ಳ ಇವನನ್ನು । ಕ್ರವಿಷ್ಣುಃ—ಮಾಂಸವನ್ನಪೇಕ್ಷಿಸುವುದೂ । ಕ್ರವ್ಯಾತ್—ಮಾಂಸವನ್ನು ತಿನ್ನತಕ್ಕದ್ದೂ ಆದ ತೋಳವೇ ಮುಂತಾದ ದುಷ್ಟಪ್ರಾಣಿಗಳು । ವಿ ಚಿನೋತು—ಕೊಕ್ಕಿ ತಿನ್ನಲಿ.

॥ ಭಾವಾರ್ಥ ॥

ಸರ್ವಜ್ಞನಾದ ಎಲೈ ಅಗ್ನಿಯೇ, ಅಸುರನ ಚರ್ಮವನ್ನು ಸುಲಿದುಹಾಕು. ನೋವನ್ನುಂಟುಮಾಡುವ ವಜ್ರಾಯುಧವು ತನ್ನ ಜ್ವಾಲೆಯಿಂದ ಅವನನ್ನು ನಾಶಪಡಿಸಲಿ. ಅವನ ಶರೀರದ ಸಂಧಿಸ್ಥಾನಗಳನ್ನು ಕತ್ತರಿಸು. ಕತ್ತರಿಸಲ್ಪಟ್ಟ ದೇಹವುಳ್ಳ ಇವನನ್ನು ಮಾಂಸಭಕ್ಷಕವಾದ ವೃಕಾದಿಗಳು ಕೊಕ್ಕಿ ತಿನ್ನಲಿ.

English Translation

Agni Jatavedas, cut through the skin of the Yatudhana, let your destructive thunderbolt destroy him with its fire ; sever his joints, may the flesh-desiring flesh-eater devour his mutilated body.

॥ ಸಂಹಿತಾಪಾಠಃ ॥

ಯತ್ರೇದಾನೀಂ ಪಶ್ಯಸಿ ಜಾತವೇದಸ್ತಿಷ್ಠಂತಮಗ್ನ ಉತ ವಾ ಚರಂತಂ ।
ಯದ್ವಾಂತರಿಕ್ಷೇ ಪಥಿಭಿಃ ಪತಂತಂ ತಮಸ್ತಾ ವಿಧ್ಯ ಶರ್ವಾ ಶಿಶಾನಃ ॥ ೬ ॥

॥ ಪದಪಾಠಃ ॥

ಯತ್ರ । ಇದಾನೀಂ । ಪಶ್ಯಸಿ । ಜಾತಽವೇದಃ । ತಿಷ್ಠಂತಂ । ಅಗ್ನೇ । ಉತ । ವಾ । ಚರಂತಂ ।
ಯತ್ । ವಾ । ಅಂತರಿಕ್ಷೇ । ಪಥಿಽಭಿಃ । ಪತಂತಂ । ತಂ । ಅಸ್ತಾ । ವಿಧ್ಯ । ಶರ್ವಾ । ಶಿಶಾನಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಜಾತವೇದ ಉತ್ಪನ್ನಪ್ರಜ್ಞಾಗ್ನೇ ತ್ವಂ ಯತ್ರ ಪೃಥಿವ್ಯಾಂ ತಿಷ್ಠಂತಮುತಾಪಿ ಚ ಚರಂತಂ ಯದ್ವಾಂತರಿಕ್ಷೇ ಪಥಿಭಿರಾಕಾಶಮಾರ್ಗೈಃ ಪತಂತಂ ಗಚ್ಛಂತಂ ಯಾತುಧಾನಮಿದಾನೀಂ ಸಂಪ್ರತಿ

ಪಶ್ಯಸಿ ತಂ ಯಾತುಧಾನಮಸ್ತಾ ಶರಾಣಾಂ ಕ್ಷೇಪ್ತಾ ತ್ವಂ ಶಿಶಾನಃ ಶರಾಂಸ್ತೀಕ್ಷ್ಣೀಕುರ್ವಞ್ಶರ್ವಾ ಶರೇಣ ವಿಧ್ಯ ॥

। ಪ್ರತಿಪದಾರ್ಥ ।

**ಜಾತವೇದಃ**—ಜಾತವೇದೋರೂಪನಾದ । **ಅಗ್ನೇ**—ಎಲೈ ಅಗ್ನಿಯೇ । **ತಿಷ್ಠಂತಂ**—ಆ ಅಸುರನು ನಿಂತಿರಲಿ । **ಉತ ವಾ**—ಅಥವಾ । **ಚರಂತಂ**—ಅವನು ಚಲಿಸುತ್ತಿರಲಿ । **ಯದ್ವಾ**—ಅಥವಾ । **ಅಂತರಿಕ್ಷೇ ಪಥಿಭಿಃ**—ಅಂತರಿಕ್ಷಮಾರ್ಗಗಳಲ್ಲಿ । **ಪತಂತಂ**—ಹಾರುತ್ತಿರಲಿ, ಅಂತಹ ಯಾತುಧಾನನನ್ನು । **ಇದಾನೀಂ**—ಈಗ । **ಯತ್ರ ಪಶ್ಯಸಿ**—ಯಾವ ಪ್ರದೇಶದಲ್ಲಿ ನೋಡಿದರೂ ಸಹ । **ತಂ**—ಅವನನ್ನು । **ಅಸ್ತಾ**—ಶರಪ್ರಯೋಗವುಳ್ಳ ನೀನು । **ಶಿಶಾನಃ**—ನಿನ್ನ ಅಸ್ತ್ರವನ್ನು ಹರಿತಮಾಡಿ । **ಶರ್ವಾ**—ಬಾಣದಿಂದ । **ವಿಧ್ಯ**—ಸೀಳಿಹಾಕು.

। ಭಾವಾರ್ಥ ।

ಜಾತವೇದೋರೂಪನಾದ ಎಲೈ ಅಗ್ನಿಯೇ, ಆ ಯಾತುಧಾನನು ನಿಂತಿರಲಿ, ಅಥವಾ ಚಲಿಸುತ್ತಿರಲಿ ಅಥವಾ ಅಂತರಿಕ್ಷಮಾರ್ಗಗಳಲ್ಲಿ ಹಾರುತ್ತಿರಲಿ, ಅವನನ್ನು ಈಗ ಯಾವ ಪ್ರದೇಶದಲ್ಲಿ ನೋಡಿದರೂ ಸಹ ಅವನನ್ನು ನಿನ್ನ ತೀಕ್ಷ್ಣವಾದ ಶರಪ್ರಯೋಗದಿಂದ ನಾಶಪಡಿಸು.

## English Translation

Wherever you now behold him, Agni Jatavedas, whether standing or moving, or passing along the paths in the firmament, you, O shooter, sharpening (your arrows), transfix him with your shaft.

॥ ಸಂಹಿತಾಪಾಠಃ ॥

ಉತಾಲಬ್ಧಂ ಸ್ಪೃಣುಹಿ ಜಾತವೇದ ಆಲೇಭಾನಾದೃಷ್ಟಿಭಿರ್ಯಾತುಧಾ-
ನಾತ್ ।
ಅಗ್ನೇ ಪೂರ್ವೋ ನಿ ಜಹಿ ಶೋಶುಚಾನ ಆಮಾದಃ ಕ್ಷ್ವಿಂಕಾಸ್ತಮ-
ದಂತ್ವೇನೀಃ ॥ ೭ ॥

॥ ಪದಪಾಠಃ ॥

ಉತ । ಆಽಲಬ್ಧಂ । ಸ್ಪೃಣುಹಿ । ಜಾತಽವೇದಃ । ಆಽಲೇಭಾನಾತ್ । ಋಷ್ಟಿಽಭಿಃ । ಯಾತುಽಧಾನಾತ್ ।
ಅಗ್ನೇ । ಪೂರ್ವಃ । ನಿ । ಜಹಿ । ಶೋಶುಚಾನಃ । ಆಮಽಅದಃ । ಕ್ಷ್ವಿಂಕಾಃ । ತಂ । ಅದಂತು । ಏನೀಃ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಜಾತವೇದೋಽಗ್ನೇ ತ್ವಮಾಲಬ್ಧಂ ಹಂತುಂ ಹಸ್ತಾಭ್ಯಾಮಾರಬ್ಧಂ ಸಾಧುಂ ಮಾಂ ಸ್ತೋತಾರಂ ಯಷ್ಟಾರಂ ವಾಲೇಭಾನಾದಾಲಭಮಾನಾದ್ಯಾತುಧಾನಾದ್ರಾಕ್ಷಸಾದೃಷ್ಟಿಭಿರಾತ್ಮೀಯೈ-ರಾಯುಧವಿಶೇಷೈಃ ಸ್ಪೃಣುಹಿ । ಪಾರಯ । ರಕ್ಷೇತ್ಯರ್ಥಃ । ಕಿಂಚ ಪೂರ್ವೋ ಮುಖ್ಯಸ್ತ್ವಂ ಶೋಶುಚಾನಃ ಪ್ರಜ್ವಲನ್ನಿ ಜಹಿ । ಮಾಂ ಹಂತುಮುದ್ಯುಕ್ತಂ ಯಾತುಧಾನಂ ಮಾರಯ । ಕಿಂಚ ತಂ ಯಾತುಧಾನಮಾಮಾದೋಽಪಕ್ವಸ್ಯ ಮಾಂಸಸ್ಯ ಭಕ್ಷಕಾಃ ಕ್ಷ್ವಿಂಕಾಃ ಶಬ್ದಕಾರಿಣ್ಯಃ॥ ಟುಕ್ಷು ಶಬ್ದೇ॥ ಯದ್ವಾ । ಕ್ಷ್ವಿಂಕಾ ನಾಮ ಪಕ್ಷಿವಿಶೇಷಾಃ । ಏನೀರ್ಗಂತ್ರ್ಯೋಽದಂತು । ಭಕ್ಷಯಂತು ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪನಾದ । **ಅಗ್ನೇ**—ಎಲೈ ಅಗ್ನಿಯೇ । **ಆಲಬ್ಧಂ**—ಶತ್ರುನಾಶಕ್ಕೆ ಯತ್ನಿಸಿರುವ ನನ್ನನ್ನು । **ಆಲೇಭಾನಾತ್**—ನನ್ನನ್ನು ಎದುರಿಸಿ ಮೇಲೆ ಬೀಳುವ । **ಯಾತುಧಾನಾತ್**—ರಾಕ್ಷಸನಿಂದ । **ಋಷ್ಟಿಭಿಃ**—ನಿನ್ನ ಆಯುಧಗಳಿಂದ । **ಸ್ಪೃಣುಹಿ**—ರಕ್ಷಿಸು । **ಪೂರ್ವಃ**—ಪ್ರಮುಖನಾದ ನೀನು । **ಶೋಶುಚಾನಃ**—ಪ್ರಜ್ವಲಿಸುತ್ತ । **ನಿ ಜಹಿ**—ಶತ್ರುವನ್ನು ನಾಶಮಾಡು । **ಆಮಾದಃ**—ಮಾಂಸಭಕ್ಷಕವೂ । **ಕ್ಷ್ವಿಂಕಾಃ**—ಶಬ್ದಮಾಡತಕ್ಕವೂ । **ಏನೀಃ**—ಹಾರಾಡತಕ್ಕವೂ ಆದ ಕ್ರೂರಪಕ್ಷಿಗಳು । **ತಂ ಅದಂತು**—ಅವನನ್ನು ತಿನ್ನಲಿ.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ಶತ್ರುನಾಶಕ್ಕಾಗಿ ಯತ್ನಿಸಿರುವ ನನ್ನನ್ನು ಮೇಲೆ ಬೀಳುವ ರಾಕ್ಷಸನಿಂದ ರಕ್ಷಿಸು. ಪ್ರಮುಖನಾದ ನೀನು ಪ್ರಜ್ವಲಿಸುತ್ತ ಶತ್ರುವನ್ನು ನಾಶಮಾಡು. ಮಾಂಸಭಕ್ಷಕವೂ ಶಬ್ದಮಾಡತಕ್ಕವೂ ಆದ ಕ್ರೂರಪಕ್ಷಿಗಳು ಅವನನ್ನು ತಿನ್ನಲಿ.

## English Translation

And defend me, Jatavedas, with your darts when I am seized, (defend me) from the Yatudhana who has seized me; anticipating him you, Agni, blazing fiercely, slay him; may the swift-flying vultures, the flesh-eaters, devour him.

॥ ಸಂಹಿತಾಪಾಠ ॥

ಇಹ ಪ್ರ ಬ್ರೂಹಿ ಯತಮಃ ಸೋ ಅಗ್ನೇ ಯೋ ಯಾತುಧಾನೋ ಯ

ಇದಂ ಕೃಣೋತಿ ।

ತಮಾ ರಭಸ್ವ ಸಮಿಧಾ ಯವಿಷ್ಠ ನೃಚಕ್ಷಸಶ್ಚಕ್ಷುಷೇ ರಂಧಯೈನಂ ॥ ೮ ॥

॥ ಪದಪಾಠಃ ॥

ಇಹ । ಪ್ರ । ಬ್ರೂಹಿ । ಯತಮಃ । ಸಃ । ಅಗ್ನೇ । ಯಃ । ಯಾತುऽಧಾನಃ । ಯಃ । ಇದಂ । ಕೃಣೋತಿ ।

ತಂ । ಆ । ರಭಸ್ವ । ಸಂऽಇಧಾ । ಯವಿಷ್ಠ । ನೃऽಚಕ್ಷಸಃ । ಚಕ್ಷುಷೇ । ರಂಧಯ । ಏನಂ ॥ ೮ ॥

॥ ಸಾಯಣಭಾಷ್ಯಂ ॥

ಯೋ ಯವಿಷ್ಠ ಯುವತಮಾಗ್ನೇ ಯೋ ಯಾತುಧಾನೋ ರಾಕ್ಷಸೋऽಸ್ಮದ್ಯಜ್ಞವಿಘ್ನಕಾರೀ ಯಶ್ಚಾನ್ಯೋऽಪಿ ಪಿಶಾಚಾದಿರಿದಂ ಯಜ್ಞದೂಷಣಾದಿ ಕರೋತಿ ಸ ಯತಮಃ ॥ ತಮಬಂಧಾರಣಾರ್ಥಂ ॥ ಇಹಾಸ್ಮಿಂಸ್ತ್ವದ್ವಿಷಯಯಾಗಕರ್ಮಣಿ ವರ್ತಮಾನಾಯ ಮಹ್ಯಂ ಪ್ರ ಬ್ರೂಹಿ । ತಂ ಪಾಪಕಾರಿಣಂ ಸಮಿಧಾ ಸ್ವಕೀಯೇನ ತೇಜಸಾ ರಭಸ್ವ। ಹಂತುಂ ಪ್ರಾರಭಸ್ವ । ತತ ಏನಂ ಪಾಪಿಷ್ಠಂ ನೃಚಕ್ಷಸೋ ನೃಣಾಂ ದ್ರಷ್ಟುಸ್ತವ ಚಕ್ಷುಷೇ ತೇಜಸೇ ರಂಧಯ । ವಶಂ ನಯ । ತೇಜಸಾ ಸಂದಹೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯವಿಷ್ಠ—ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ । ಯಃ ಯಾತುಧಾನಃ—ಯಾವ ರಾಕ್ಷಸನಾಗಲಿ । ಯಃ—ಅಥವಾ ಯಾವ ಪಿಶಾಚಿಯಾಗಲಿ । ಇದಂ—ನಮ್ಮ ಯಜ್ಞಕ್ಕೆ ವಿಘ್ನವನ್ನು । ಕರೋತಿ—ಮಾಡುವನೋ । ಸಂ ಯತಮಃ—ಅವನು ಯಾರೇ ಆಗಲಿ । ಇಹ—ಇಲ್ಲಿ । ಪ್ರ ಬ್ರೂಹಿ—ಅವನ ಹೆಸರನ್ನು ಪ್ರಕಟಿಸು । ತಂ—ಆ ಪಾಪಕಾರಿಯನ್ನು । ಸಮಿಧಾ—ನಿನ್ನ ಜ್ವಾಲೆಯಿಂದ । ಆರಭಸ್ವ—ನಾಶಮಾಡಲು ಪ್ರಯತ್ನಿಸು । ಏನಂ—ಈ ಅಸುರನನ್ನು । ನೃಚಕ್ಷಸಃ—ಮಾನವರ ವ್ಯವಹಾರವನ್ನು ನೋಡಬಲ್ಲ । ಚಕ್ಷುಸಃ—ನಿನ್ನ ತೇಜಸ್ಸಿಗೆ । ರಂಧಯ—ವಶವಾಗುವಂತೆ ಮಾಡು.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಯಾವ ರಾಕ್ಷಸನಾಗಲಿ, ಅಥವಾ ಯಾವ ಪಿಶಾಚಿಯಾಗಲಿ, ನಮ್ಮ ಯಜ್ಞಕ್ಕೆ ವಿಘ್ನವನ್ನುಂಟುಮಾಡುವನೋ, ಅವನು ಯಾರೇ ಆಗಲಿ ಇಲ್ಲಿ ಅವನ ಹೆಸರನ್ನು ಪ್ರಕಟಿಸು. ಆ ಪಾಪಕಾರಿಯನ್ನು ನಿನ್ನ ಜ್ವಾಲೆಯಿಂದ ನಾಶಪಡಿಸು. ಅವನನ್ನು ನಿನ್ನ ಜ್ವಾಲೆಯ ಅಧೀನವಾಗುವಂತೆ ಮಾಡು.

English Translation

Agni, youngest of the gods, announce (to me present) at this (your sacrifice), which is your Yatudhana who does this; destroy him with your kindled flame; beholder of men, consume him with your brilliance.

॥ ಸಂಹಿತಾಪಾಠಃ ॥

ತೀಕ್ಷ್ಣೇನಾಗ್ನೇ ಚಕ್ಷುಷಾ ರಕ್ಷ ಯಜ್ಞಂ ಪ್ರಾಂಚಂ ವಸುಭ್ಯಃ ಪ್ರ ಣಯ ಪ್ರಚೇತಃ ।

ಹಿಂಸ್ರಂ ರಕ್ಷಾಂಸ್ಯಭಿ ಶೋಶುಚಾನಂ ಮಾ ತ್ವಾ ದಭನ್ಯಾತುಧಾನಾ ನೃಚಕ್ಷಃ ॥

॥ ಪದಪಾಠಃ ॥

ತೀಕ್ಷ್ಣೇನ । ಅಗ್ನೇ । ಚಕ್ಷುಷಾ । ರಕ್ಷ । ಯಜ್ಞಂ । ಪ್ರಾಂಚಂ । ವಸುಽಭ್ಯಃ । ಪ್ರ । ನಯ । ಪ್ರಚೇತ

ಇತಿ ಪ್ರಽಚೇತಃ ।

ಹಿಂಸ್ರಂ । ರಕ್ಷಾಂಸಿ । ಅಭಿ । ಶೋಶುಚಾನಂ । ಮಾ । ತ್ವಾ । ದಭನ್ । ಯಾತುಽಧಾನಾಃ । ನೃಽಚಕ್ಷಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ತೀಕ್ಷ್ಣೇನ ತಿಗ್ಮೇನ ಚಕ್ಷುಷಾ ತೇಜಸಾ ಯಜ್ಞಮಸ್ಮದೀಯಂ ಯಾಗಂ ರಕ್ಷ । ಪಾಲಯ । ಕಿಂಚ ಹೇ ಪ್ರಚೇತಃ ಪ್ರಕೃಷ್ಟಜ್ಞಾನಾಗ್ನೇ ಪ್ರಾಂಚಂ ಪ್ರಾಂಚಿತಾರಂ ಯಜ್ಞಂ ವಸುಭ್ಯೋ ವಸೂನಾಮರ್ಥಾಯ ಪ್ರ ಣಯ । ಪ್ರಕರ್ಷೇಣ ನಯ । ಕಿಂಚ ಹೇ ನೃಚಕ್ಷೋ ನೃಣಾಂ ದ್ರಷ್ಟರಗ್ನೇ ರಕ್ಷಾಂಸಿ ಹಿಂಸ್ರಂ ಹಿಂಸನಶೀಲಮಭಿ ಶೋಶುಚಾನಮಭಿಪ್ರದೀಪ್ತಂ ತ್ವಾ ತ್ವಾಂ ಯಾತುಧಾನಾ ರಾಕ್ಷಸಾ ಮಾ ದಭನ್ । ಹಿಂಸಿಷುಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತೀಕ್ಷ್ಣೇನ**—ದಹಿಸತಕ್ಕ । **ಚಕ್ಷುಷಾ**—ನಿನ್ನ ತೇಜಸ್ಸಿನಿಂದ । **ಯಜ್ಞಂ**—ನಮ್ಮ ಯಜ್ಞವನ್ನು । **ರಕ್ಷ**—ಪಾಲಿಸು । **ಪ್ರಚೇತಃ**—ಉತ್ಕೃಷ್ಟವಾದ ಜ್ಞಾನವುಳ್ಳ ಎಲೈ ಅಗ್ನಿಯೇ । **ಪ್ರಾಂಚಂ**—ಮುಂದುವರೆಯುವ ನಮ್ಮ ಯಜ್ಞವನ್ನು । **ವಸುಭ್ಯಃ**—ಧನಾರ್ಥವಾಗಿ । **ಪ್ರ ಣಯ**—ಪೂರ್ಣವಾಗಿ ಮುಂದುವರಿಯುವಂತೆ ಮಾಡು । **ನೃಚಕ್ಷಃ**—ಮಾನವರನ್ನು ನೋಡಬಲ್ಲ ಎಲೈ ಅಗ್ನಿಯೇ । **ಹಿಂಸ್ರಂ**—ಹಿಂಸೆಯನ್ನುಂಟುಮಾಡುವ । **ರಕ್ಷಾಂಸಿ**—ರಾಕ್ಷಸರನ್ನು । **ಅಭಿ ಶೋಶುಚಾನಂ**—ದಹಿಸುವ । **ತ್ವಾ**—ನಿನ್ನನ್ನು । **ಯಾತುಧಾನಾಃ**—ಅಸುರರು । **ಮಾ ದಭನ್**—ಹಿಂಸಿಸದಿರಲಿ.

। ಭಾವಾರ್ಥ ।

ಎಲೈ ಅಗ್ನಿಯೇ, ದಾಹಾತ್ಮಕವಾದ ನಿನ್ನ ತೇಜಸ್ಸಿನಿಂದ ನಮ್ಮ ಯಜ್ಞವನ್ನು ಪಾಲಿಸು. ಉತ್ಕೃಷ್ಟವಾದ ಜ್ಞಾನವುಳ್ಳ ಎಲೈ ಅಗ್ನಿಯೇ, ನಮ್ಮ ಯಜ್ಞವನ್ನು ಧನಾರ್ಥವಾಗಿ ಪೂರ್ಣವಾಗುವಂತೆ ಮಾಡು. ಹಿಂಸಕರಾದ ಅಸುರರು ಅವರನ್ನು ನಾಶಮಾಡುವ ನಿನ್ನನ್ನು ಹಿಂಸಿಸದಿರಲಿ.

## English Translation

Protect this sacrifice, Agni, with your sharp glance; lead it sage (Agni) forward to (the acquisition of) riches; let not the Yatudhanas harm you, beholder of men, the destroyer of Rakshasas blazing fiercely.

॥ ಸಂಹಿತಾಪಾಠಃ ॥

ನೃಚಕ್ಷಾ ರಕ್ಷಃ ಪರಿ ಪಶ್ಯ ವಿಕ್ಷು ತಸ್ಯ ತ್ರೀಣಿ ಪ್ರತಿ ಶೃಣೀಹ್ಯಗ್ರಾ ।
ತಸ್ಯಾಗ್ನೇ ಪೃಷ್ಟೀರ್ಹರಸಾ ಶೃಣೀಹಿ ತ್ರೇಧಾ ಮೂಲಂ ಯಾತುಧಾನಸ್ಯ ವೃಶ್ಚ ॥ ೧೦ ॥

॥ ಪದಪಾಠಃ ॥

ನೃಽಚಕ್ಷಾಃ । ರಕ್ಷಃ । ಪರಿ । ಪಶ್ಯ । ವಿಕ್ಷು । ತಸ್ಯ । ತ್ರೀಣಿ । ಪ್ರತಿ । ಶೃಣೀಹಿ । ಅಗ್ರಾ ।
ತಸ್ಯ । ಅಗ್ನೇ । ಪೃಷ್ಟೀಃ । ಹರಸಾ । ಶೃಣೀಹಿ । ತ್ರೇಧಾ। ಮೂಲಂ । ಯಾತುಽಧಾನಸ್ಯ । ವೃಶ್ಚ ॥೧೦॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನೃಚಕ್ಷಾ ನೃಣಾಂ ದ್ರಷ್ಟಾ ತ್ವಂ ವಿಕ್ಷು ಮನುಷ್ಯೇಷು ಹಿಂಸಕತ್ವೇನ ವರ್ತಮಾನಂ ರಕ್ಷೋ ರಾಕ್ಷಸಂ ಪರಿ ಪಶ್ಯ । ಸರ್ವತೋಽವಲೋಕಯ । ಅವಲೋಕ್ಯ ಚ ತಸ್ಯ ರಕ್ಷಸಸ್ತ್ರೀಣ್ಯಗ್ರಾಗ್ರಾಣಿ ಶಿರಾಂಸಿ ಪ್ರತಿ ಶೃಣೀಹಿ । ಛಿಂಧೀತ್ಯರ್ಥಃ । ತತಸ್ತಸ್ಯ ರಕ್ಷಸಃ ಪೃಷ್ಟೀಃ ಪಾರ್ಶ್ವಸ್ಥಾನ್ರಾಕ್ಷಸಾನಪಿ ಹರಸಾ ಸ್ವಕೀಯೇನ ತೇಜಸಾ ಶೃಣೀಹಿ । ಮಾರಯ । ಏವಂ ತ್ರೇಧಾ ಯಾತುಧಾನಸ್ಯ ತಸ್ಯ ರಾಕ್ಷಸಸ್ಯ ಮೂಲಂ ಪಾದಂ ವೃಶ್ಚ । ಛಿಂಧಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನೃಚಕ್ಷಾಃ**—ಮಾನವರ ವ್ಯವಹಾರವನ್ನು ನೋಡಬಲ್ಲ ನೀನು । **ವಿಕ್ಷು**—ಮಾನವರ ನಡುವೆ ಹಿಂಸಾಕಾರಿಯಾದ। **ರಕ್ಷಃ**—ಅಸುರನನ್ನು । **ಪರಿಪಶ್ಯ**—ಕಂಡುಹಿಡಿ । **ತಸ್ಯ**—ಅವನ । **ತ್ರೀಣಿ ಅಗ್ರಾ**—ಮೂರು ತಲೆಗಳನ್ನೂ । **ಪ್ರತಿ ಶೃಣೀಹಿ**—ಕತ್ತರಿಸು । **ತಸ್ಯ**—ಅದೇ ಅಸುರನ । **ಪೃಷ್ಟೀಃ**—ಅಕ್ಕಪಕ್ಕದಲ್ಲಿರುವವರನ್ನೂ । **ಹರಸಾ**—ನಿನ್ನ ತೇಜಸ್ಸಿನಿಂದ । **ಶೃಣೀಹಿ**—ನಾಶಪಡಿಸು । **ಯಾತುಧಾನಸ್ಯ**—ಅಸುರನ । **ತ್ರೇಧಾ**—ಮೂರುರೂಪವಾದ । **ಮೂಲಂ**—ಪಾದವನ್ನೂ । **ವೃಶ್ಚ**—ಕತ್ತರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮಾನವರ ವ್ಯವಹಾರವನ್ನು ನೋಡಬಲ್ಲ ನೀನು ಮಾನವರ ನಡುವೆ ಹಿಂಸಾಕಾರಿಯಾದ ಅಸುರನನ್ನು ಕಂಡುಹಿಡಿ. ಅವನ ಮೂರು ತಲೆಗಳನ್ನೂ ಕತ್ತರಿಸು. ಅದೇ ಅಸುರನ ಅಕ್ಕಪಕ್ಕದಲ್ಲಿರುವವರನ್ನೂ ನಿನ್ನ ತೇಜಸ್ಸಿನಿಂದ ನಾಶಪಡಿಸು. ಅಸುರನ ಮೂರುವಿಧವಾದ ಪಾದವನ್ನೂ ಕತ್ತರಿಸು.

English Translation

Regard, beholder of men, the Rakshasa among the people; cut off his three heads; cut off his flanks with your might; cut off the triple foot of the Yatudhana.

॥ ಸಂಹಿತಾಪಾಠಃ ॥

ತ್ರಿರ್ಯಾತುಧಾನಃ ಪ್ರಸಿತಿಂ ತ ಏತ್ವೃತಂ ಯೋ ಅಗ್ನೇ ಅನೃತೇನ ಹಂತಿ ।
ತಮರ್ಚಿಷಾ ಸ್ಫೂರ್ಜಯಂಜಾತವೇದಃ ಸಮಕ್ಷಮೇನಂ ಗೃಣತೇ ನಿ ವೃಙ್ಧಿ ॥ ೧೧ ॥

॥ ಪದಪಾಠಃ ॥

ತ್ರಿಃ । ಯಾತುऽಧಾನಃ । ಪ್ರऽಸಿತಿಂ । ತೇ । ಏತು । ಋತಂ । ಯಃ । ಅಗ್ನೇ । ಅನೃತೇನ । ಹಂತಿ ।
ತಂ । ಅರ್ಚಿಷಾ । ಸ್ಫೂರ್ಜಯನ್ । ಜಾತऽವೇದಃ । ಸಂऽಅಕ್ಷಂ । ಏನಂ । ಗೃಣತೇ । ನಿ । ವೃಙ್ಧಿ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ಜಾತಪ್ರಜ್ಞಾಗ್ನೇ ತೇ ತ್ವದೀಯಂ ಪ್ರಸಿತಿಂ ಜ್ವಾಲಾಪ್ರಬಂಧನಂ ಯಾತುಧಾನೋ ರಾಕ್ಷಸಸ್ತ್ರಿಸ್ತ್ರೀನ್ವಾರಾನೇತು । ಗಚ್ಛತು । ತ್ರಿರ್ಬದ್ಧಂ ಯತ್ತತ್ಸುಬದ್ಧಂ ಭವತಿ ಹಿ । ಕಿಂಚ ಯೋ ಯಾತುಧಾನೋ ರಾಕ್ಷಸ ಋತಂ ಸತ್ಯಮನೃತೇನಾಸತ್ಯೇನ ಹಂತಿ ಹಿನಸ್ತಿ ತಂ ಯಾತುಧಾನಮರ್ಚಿಷಾ ಸ್ವಕೀಯೇನ ತೇಜಸಾ ಸ್ಫೂರ್ಜಯನ್ನಿಷ್ಪಿಷನ್ । ಸ್ಫೂರ್ಜತಿರತ್ರ ನಿಷ್ಪೇಷಣಕರ್ಮಾ । ಏನಂ ಯಾತುಧಾನಂ ಗೃಣತೇ ಸ್ತೋತ್ರಂ ಕುರ್ವತೇ ಮಹ್ಯಂ ಸಮಕ್ಷಂ ಪ್ರತ್ಯಕ್ಷಂ ನಿ ವೃಙ್ಧಿ । ನಿಗೃಹ್ಯ ವರ್ಜಯ ವೃಕೇಣ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪನಾದ । **ಅಗ್ನೇ**—ಎಲೈ ಅಗ್ನಿಯೇ । **ಯಃ**—ಯಾವ ರಾಕ್ಷಸನು । **ಋತಂ**—ಸತ್ಯವನ್ನು । **ಅನೃತೇನ**—ಅಸತ್ಯದಿಂದ । **ಹಂತಿ**—ಮಲಿನ ಮಾಡುವನೋ । (**ಸಃ**) **ಯಾತುಧಾನಃ**—ಅದೇ ಅಸುರನು । **ತೇ**—ನಿನ್ನ । **ಪ್ರಸಿತಿಂ**—ಜ್ವಾಲಾಸಮೂಹದಲ್ಲಿ । **ತ್ರಿಃ**—ಮೂರು ಸಲ । **ಏತು**—ಸಿಕ್ಕಿಕೊಳ್ಳಲಿ । **ತಂ**—ಅವನನ್ನು । **ಅರ್ಚಿಷಾ**—ನಿನ್ನ ತೇಜಸ್ಸಿನಿಂದ । **ಸ್ಫೂರ್ಜಯನ್**—ಹಿಂಡುತ್ತ । **ಏನಂ**—ಅವನನ್ನು । **ಗೃಣತೇ**—ಸ್ತುತಿಕರ್ತನ । **ಸಮಕ್ಷಂ**—ಪ್ರತ್ಯಕ್ಷದಲ್ಲಿ । **ನಿ ವೃಙ್ಧಿ**—ನಾಶಪಡಿಸು.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ಯಾವ ರಾಕ್ಷಸನು ಸತ್ಯವನ್ನು ಅಸತ್ಯದಿಂದ ಮಲಿನ ಮಾಡುವನೋ, ಅದೇ ಅಸುರನು ನಿನ್ನ ಜ್ವಾಲಾಸಮೂಹದಲ್ಲಿ ಮೂರುಸಲ ಸಿಕ್ಕಿಬೀಳಲಿ. ಅವನನ್ನು ನಿನ್ನ ತೇಜಸ್ಸಿನಿಂದ ಹಿಂಡುತ್ತ, ಸ್ತುತಿಕರ್ತನ ಪ್ರತ್ಯಕ್ಷದಲ್ಲಿ ಅವನನ್ನು ನಾಶಪಡಿಸು.

## English Translation

Agni, Jatavedas, let the Yatudhana, who defeats your truth with falsehood, come thrice into the confinement of your flames; crushing him with your might, drive him from the presence of (me) your worshipper.

। ಸಂಹಿತಾಪಾಠಃ ।

ತದಗ್ನೇ ಚಕ್ಷುಃ ಪ್ರತಿ ಧೇಹಿ ರೇಭೇ ಶಫಾರುಜಂ ಯೇನ ಪಶ್ಯಸಿ ಯಾತುಧಾನಂ ।

ಅಥರ್ವವಜ್ಜ್ಯೋತಿಷಾ ದೈವ್ಯೇನ ಸತ್ಯಂ ಧೂರ್ವಂತಮಚಿತಂ ನ್ಯೋಷ ॥

।। ಪದಪಾಠಃ ।।

ತತ್ । ಅಗ್ನೇ । ಚಕ್ಷುಃ । ಪ್ರತಿ । ಧೇಹಿ । ರೇಭೇ । ಶಫಽಆರುಜಂ । ಯೇನ । ಪಶ್ಯಸಿ । ಯಾತುಽಧಾನಂ।

ಅಥರ್ವಽವತ್ । ಜ್ಯೋತಿಷಾ । ದೈವ್ಯೇನ । ಸತ್ಯಂ । ಧೂರ್ವಂತಂ । ಅಚಿತಂ । ನಿ । ಓಷ ॥ ೧೨ ॥

। ಸಾಯಣಭಾಷ್ಯಂ ।

**ಹೇ ಅಗ್ನೇ ತ್ವಂ ರೇಭೇ ಶಬ್ದಾಯಮಾನೇ ರಾಕ್ಷಸೇ ತಚ್ಚಕ್ಷುಸ್ತೇಜಃ ಪ್ರತಿ ಧೇಹಿ ಪ್ರಕ್ಷಿಪ ಯೇನ ಚಕ್ಷುಷಾ ಶಫಾರುಜಂ ಶಫಾಭ್ಯಾಮಾರುಜಂತಂ ಶಫಸದೃಶೈರ್ನಖೈಃ ಸಾಧೂನಾಮಾಭಿಮುಖ್ಯೇನ ಭಂಜಕಂ ಯಾತುಧಾನಂ ರಾಕ್ಷಸಂ ಪಶ್ಯಸಿ । ಕಿಂಚ ಸತ್ಯಂ ಧೂರ್ವಂತಮಸತ್ಯೇನ ಹಿಂಸಂತಮಚಿತಮಜ್ಞಾನಂ ದೈವ್ಯೇನ ದಿವಿ ಭವೇನ ಜ್ಯೋತಿಷಾ ತೇಜಸಾಥರ್ವವನ್ನ್ಯೋಷ। ನಿತರಾಂ ದಹ। ದಧ್ಯಙ್ಙಥರ್ವಾ ರಕ್ಷಸಾಂ ಹಂತೇತಿ ಪ್ರಾಗುಕ್ತಂ ॥**

। ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । **ಯೇನ**—ಯಾವ ಚಕ್ಷುಸ್ಸಿನಿಂದ । **ಶಫಾರುಜಂ**—ಗೊರಸಿನಂತಿರುವ ಉಗುರುಗಳಿಂದ ಸೀಳುವ । **ಯಾತುಧಾನಂ**—ರಾಕ್ಷಸನನ್ನು । **ಪಶ್ಯಸಿ**—ನೀನು ನೋಡುವೆಯೋ । **ತತ್ ಚಕ್ಷುಃ**—ಅದೇ ಚಕ್ಷುಸ್ಸನ್ನು । **ರೇಭೇ**—ಶಬ್ದಮಾಡತಕ್ಕ ಅಸುರನಮೇಲೆ । **ಪ್ರತಿ ಧೇಹಿ**—ಪ್ರಯೋಗಿಸು । **ಸತ್ಯಂ**—ಸತ್ಯವನ್ನು । **ಧೂರ್ವತಂಂ**—ಅಸತ್ಯದಿಂದ ಹಿಂಸಿಸುವ । **ಅಚಿತಂ**—ಅಜ್ಞಾನಿಯನ್ನು । **ದಿವ್ಯೇನ ಜ್ಯೋತಿಷಾ**—ತನ್ನ ದಿವ್ಯಜ್ಯೋತಿಯಿಂದ । **ಅಥರ್ವಸತ್**—ಅಥರ್ವನು ನಾಶಮಾಡುವಂತೆ । **ನ್ಯೋಷ**—ಅಸುರರನ್ನು ಪೂರ್ಣವಾಗಿ ದಹಿಸು.

।। ಭಾವಾರ್ಥ ।

ಎಲೈ ಅಗ್ನಿಯೇ, ಗೊರಸಿನಂತೆ ಹಿಂಸಕವಾದ ಉಗುರುಗಳುಳ್ಳ ರಾಕ್ಷಸನನ್ನು ನೀನು ಯಾವ ಚಕ್ಷುಸ್ಸಿನಿಂದ ನೋಡುವೆಯೋ, ಅದೇ ಚಕ್ಷುಸ್ಸನ್ನು ಶಬ್ದಮಾಡತಕ್ಕ ಅಸುರನಮೇಲೆ ಪ್ರಯೋಗಿಸು. ಸತ್ಯವನ್ನು ಅಸತ್ಯದಿಂದ ಹಿಂಸಿಸುವ ಅಜ್ಞಾನಿಯನ್ನು ತನ್ನ ದಿವ್ಯಜ್ಯೋತಿಯಿಂದ ಅಥರ್ವನು ನಾಶಮಾಡುವಂತೆ ಅಸುರನನ್ನು ಪೂರ್ಣವಾಗಿ ದಹಿಸು.

## English Translation

Cast, Agni, upon the two roaring (Rakshasas) that eye wherewith you behold the Yatudhana striking with his hoof; like Atharvan with celestial radiance burn down the ignorant (Rakshasa), who assails truth with falsehood.

॥ ಸಂಹಿತಾಪಾಠಃ ॥

ಯದಗ್ನೇ ಅದ್ಯ ಮಿಥುನಾ ಶಪಾತೋ ಯದ್ವಾಚಸ್ತೃಷ್ಟಂ ಜನಯಂತ ರೇಭಾಃ ।

ಮನ್ಯೋರ್ಮನಸಃ ಶರವ್ಯಾ೩ ಜಾಯತೇ ಯಾ ತಯಾ ವಿಧ್ಯ ಹೃದಯೇ ಯಾತುಧಾನಾನ್ ॥ ೧೩ ॥

॥ ಪದಪಾಠಃ ॥

ಯತ್ । ಅಗ್ನೇ । ಅದ್ಯ । ಮಿಥುನಾ । ಶಪಾತಃ । ಯತ್ । ವಾಚಃ । ತೃಷ್ಟಂ । ಜನಯಂತ । ರೇಭಾಃ । ಮನ್ಯೋಃ । ಮನಸಃ । ಶರವ್ಯಾ । ಜಾಯತೇ । ಯಾ । ತಯಾ । ವಿಧ್ಯ । ಹೃದಯೇ । ಯಾತುऽಧಾನಾನ್ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯದ್ಯದಾದ್ಯಾಸ್ಮಿನ್ನಹನಿ ಮಿಥುನಾ ಸ್ತ್ರೀಪುಂಸೌ ಶಪಾತಃ ಪರಸ್ಪರಮಾಕ್ರೋಶತಃ । ಯದ್ಯದಾ ರೇಭಾಃ ಸ್ತೋತಾರೋ ವಾಚಃ ಸಂಬಂಧಿ ತೃಷ್ಟಂ ಕಟುಕಂ ಪರಸ್ಪರಾಕ್ರೋಶಲಕ್ಷಣಮಧರಂ ವಾ ಜನಯಂತ । ಪರಸ್ಪರಮಾಕ್ರೋಶಂತೀತ್ಯರ್ಥಃ । ತದಾ ಮನ್ಯೋರ್ದೀಪ್ತಸ್ಯ ಕ್ರುದ್ಧಸ್ಯ ವಾ ತವ । ತಥಾ ಚ ಯಾಸ್ಕಃ । ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ । ನಿ. ೧೦-೨೯ । ಇತಿ । ಮನಸಃ ಸಕಾಶಾದ್ಯಾ ಶರವ್ಯೇಷುರ್ಜಾಯತೇ ತಯಾ ಶರವ್ಯಯಾ ಯಾತುಧಾನಾನ್ರಾಕ್ಷಸಾನ್ಹೃದಯೇ ವಿಧ್ಯ । ತಾಡಯ । ಮಾರಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವಾಗ । **ಅದ್ಯ**—ಈ ಯಾಗ ದಿನದಲ್ಲಿ । **ಮಿಥುನಾ**—ಒಟ್ಟಿಗೆ ಕೂಡಿರುವ ಪತಿಪತ್ನಿಯರು । **ಶಪಾತಃ**—ಪರಸ್ಪರವಾಗಿ ಕ್ರೋಧಯುಕ್ತವಾದ ಮಾತುಗಳನ್ನು ಪ್ರಯೋಗಿಸುವರೋ ।

ಯತ್—ಯಾವಾಗ । ರೇಭಾಃ—ಸ್ತುತಿಕರ್ತರು । ವಾಚಃ—ವಾಕ್ಕನ್ನು । ತೃಷ್ಟಂ—ಕಠಿನವಾಗಿ । ಜನಯಂತ—ಪ್ರಯೋಗಿಸುವರೋ ಆಗ । ಮನ್ಯೋಃ—ಕ್ರುದ್ಧನಾದ ನಿನ್ನ । ಮನಸಃ—ಮನಸ್ಸಿನಿಂದ । ಯಾ ಶರವ್ಯಾ—ಯಾವ ಬಾಣವು । ಜಾಯತೇ—ಉತ್ಪನ್ನವಾಗುವುದೋ । ತಯಾ—ಅದರಿಂದ । ಯಾತುಧಾನಾನ್—ಅಸುರರನ್ನು । ಹೃದಯೇ—ಹೃದಯದಲ್ಲಿ । ವಿಧ್ಯ—ಸೀಳಿಹಾಕು

॥ ಭಾವಾರ್ಥ ॥

ಎಲೈ ಅಗ್ನಿಯೇ, ಈ ಯಾಗದಿನದಲ್ಲಿ ಯಾವಾಗ ಒಟ್ಟಿಗೆ ಕೂಡಿರುವ ಪತಿಪತ್ನಿಯರು ಪರಸ್ಪರ ಕ್ರೋಧಯುಕ್ತವಾದ ಮಾತುಗಳನ್ನು ಪ್ರಯೋಗಿಸುವರೋ, ಯಾವಾಗ ಸ್ತುತಿಕರ್ತರು ಕಠಿನವಾದ ವಾಕ್ಕನ್ನು ಪ್ರಯೋಗಿಸುವರೋ ಆಗ ಕ್ರುದ್ಧನಾದ ನಿನ್ನ ಮನಸ್ಸಿನಿಂದ ಯಾವ ಬಾಣವು ಉತ್ಪನ್ನವಾಗುವುದೋ ಅದರಿಂದ ಅಸುರರನ್ನು ಹೃದಯದಲ್ಲಿ ಸೀಳಿಹಾಕು.

## English Translation

To-day Agni, when the married pair curse each other, then the praisers produce bitter words (in anger against each other), pierce the Yatudhanas through the heart with your arrow, which is generated from your wrathful mind.

॥ ಸಂಹಿತಾಪಾಠಃ ॥

ಪರಾ ಶೃಣೀಹಿ ತಪಸಾ ಯಾತುಧಾನಾನ್ಪರಾಗ್ನೇ ರಕ್ಷೋ ಹರಸಾ ಶೃಣೀಹಿ ।
ಪರಾರ್ಚಿಷಾ ಮೂರದೇವಾಞ್ಛೃಣೀಹಿ ಪರಾಸುತೃಪೋ ಅಭಿ ಶೋಶುಚಾನಃ ॥

॥ ಪದಪಾಠಃ ॥

ಪರಾ । ಶೃಣೀಹಿ । ತಪಸಾ । ಯಾತುಽಧಾನಾನ್ । ಪರಾ । ಅಗ್ನೇ । ರಕ್ಷಃ । ಹರಸಾ । ಶೃಣೀಹಿ ।
ಪರಾ । ಅರ್ಚಿಷಾ । ಮೂರಽದೇವಾನ್ । ಶೃಣೀಹಿ । ಪರಾ । ಅಸುಽತೃಪಃ । ಅಭಿ । ಶೋಶುಚಾನಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಾತುಧಾನಾಂಸ್ತಪಸಾ ತಾಪೇನ ಪರಾ ಶೃಣೀಹಿ । ಮಾರಯ । ಕಿಂಚ ರಕ್ಷೋ ಹರಸಾ ತ್ವದೀಯೇನಾಸಹ್ಯೇನ ಪರಾ ಶೃಣೀಹಿ । ಕಿಂಚ ಮೂರದೇವಾನ್ಮಾರಣವ್ಯಾಪಾರಾನ್ರಾಕ್ಷಸಾನರ್ಚಿಷಾ ಸ್ವಕೀಯೇನ ತೇಜಸಾ ಪರಾ ಶೃಣೀಹಿ । ಅಪಿ ಚಾಸುತೃಪಃ ಮನುಷ್ಯಾಣಾಮಸುಭಿಸ್ತೃಪ್ಯನ್ತಿ ಯೇ ತಾನಪಿ ಪರಾ ಶೃಣೀಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯಾತುಧಾನಾನ್**—ರಾಕ್ಷಸರನ್ನು । **ತಪಸಾ**—ನಿನ್ನ ಜ್ವಾಲೆಯಿಂದ । **ಪರಾ ಶೃಣೀಹಿ**—ನಾಶಪಡಿಸು । **ರಕ್ಷಃ**—ರಾಕ್ಷಸರನ್ನು । **ಹರಸಾ**—ದಹಿಸುವ ಜ್ವಾಲೆಯಿಂದ । **ಪರಾ ಶೃಣೀಹಿ**—ಸುಟ್ಟುಬಿಡು । **ಮೂರದೇವಾನ್**—ಕ್ಷುದ್ರದೇವತೆಗಳ ಪೂಜಕರಾದ ಅಸುರರನ್ನು । **ಅರ್ಚಿಷಾ**—ನಿನ್ನ ತೇಜಸ್ಸಿನಿಂದ । **ಪರಾ ಶೃಣೀಹಿ**—ನಾಶಪಡಿಸು । **ಶೋಶುಚಾನಃ**—ಕಾಂತಿಯುತನಾದ ನೀನು । **ಅಸುತೃಪಃ**—ಹಿಂಸಕರಾದ ಅಸುರರನ್ನು । **ಅಭಿ ಪರಾ (ಶೃಣೀಹಿ)**—ನಾಶಪಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಜ್ವಾಲೆಯಿಂದ ರಾಕ್ಷಸರನ್ನು ನಾಶಪಡಿಸು. ಅವರನ್ನು ದಹಿಸುವ ಜ್ವಾಲೆಯಿಂದ ಸುಟ್ಟುಬಿಡು. ಕ್ಷುದ್ರದೇವತೆಗಳ ಪೂಜಕರಾದ ಅಸುರರನ್ನು ನಿನ್ನ ತೇಜಸ್ಸಿನಿಂದ ನಾಶಪಡಿಸು. ಕಾಂತಿಯುತನಾದ ನೀನು ಹಿಂಸಕರಾದ ಅಸುರರನ್ನು ನಾಶಪಡಿಸು.

English Translation

Destroy the Yatudhanas with your scorching fire; destroy the Rakshasas, Agni, with your heat; destroy with your radiance those who believe in vain gods, fiercely blazing, destroy the insatiable.

॥ ಸಂಹಿತಾಪಾಠಃ ॥

ಪರಾದ್ಯ ದೇವಾ ವೃಜಿನಂ ಶೃಣಂತು ಪ್ರತ್ಯಗೇನಂ ಶಪಥಾ ಯಂತು ತೃಷ್ಟಾಃ।
ವಾಚಾಸ್ತೇನಂ ಶರವ ಋಚ್ಛಂತು ಮರ್ಮನ್ವಿಶ್ವಸ್ಯೈತು ಪ್ರಸಿತಿಂ
ಯಾತುಧಾನಃ ॥ ೧೫ ॥

॥ ಪದಪಾಠಃ ॥

ಪರಾ । ಅದ್ಯ । ದೇವಾಃ । ವೃಜಿನಂ । ಶೃಣಂತು । ಪ್ರತ್ಯಕ್ । ಏನಂ । ಶಪಥಾಃ । ಯಂತು । ತೃಷ್ಟಾಃ । ವಾಚಾऽಸ್ತೇನಂ । ಶರವಃ । ಋಚ್ಛಂತು । ಮರ್ಮನ್ । ವಿಶ್ವಸ್ಯ । ಏತು । ಪ್ರऽಸಿತಿಂ । ಯಾತುऽಧಾನಃ ॥ ೧೫ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ನಹನಿ ದೇವಾ ಅಗ್ನಿಪುರೋಗಾಃ ಸರ್ವೇ ದೇವಾ ವೃಜಿನಂ ಪ್ರಾಣಿನಾಂ ಪ್ರಾಣೈರ್ವರ್ಜಿತಾರಂ ಯಾತುಧಾನಂ ಪರಾ ಶೃಣಂತು । ಅಥೈನಮಾಯಾಂತಂ ರಾಕ್ಷಸಂ ತೃಷ್ಟಾಃ ಕಟುಕಾ

**ಆಸ್ಮಾಭಿರುಕ್ತಾಃ ಶಪಥಾಃ ಪ್ರತ್ಯಗ್ಯಂತು । ಕಿಂಚ ವಾಚಾಸ್ತೇನಮನೃತವಚನಮೇನಂ ಯಾತುಧಾನಂ ಶರವಃ ಶರಾ ಮರ್ಮನ್ ಮರ್ಮಣ್ಯೃಚ್ಛಂತು । ಗಚ್ಛಂತು । ವಿಶ್ವಸ್ಯ ವ್ಯಾಪ್ತಸ್ಯಾಗ್ನೇಃ ಪ್ರಸಿತಿಂ ಜಾಲಂ । ತಥಾ ಚ ಯಾಸ್ಕಃ । ಪ್ರಸಿತಿಃ ಪ್ರಸಯನಾತ್ತಂತುರ್ವಾ ಜಾಲಂ ವಾ । ನಿ. ೬-೧೨ । ಇತಿ । ಜಾಲಂ ಯಾತುಧಾನೋ ರಾಕ್ಷಸ ಏತು । ಗಚ್ಛತು ॥**

॥ ಪ್ರತಿಪದಾರ್ಥ ॥

**ಅದ್ಯ**—ಇಂದು । **ದೇವಾಃ**—ಸಕಲ ದೇವತೆಗಳೂ । **ವೃಜಿನಃ**—ಪ್ರಾಣಿಹಿಂಸಕನಾದ ಅಸುರನನ್ನು । **ಪರಾ ಶೃಣಂತು**—ನಾಶಪಡಿಸಲಿ । **ಏನಂ**—ಇವನನ್ನು । **ತೃಷ್ಟಾಃ ಶಪಥಾಃ**—ಕಟುವಾದ ಶಾಪಗಳು । **ಪ್ರತ್ಯಕ್ ಯಂತು**—ಎದುರಿಸಿ ನಾಶಪಡಿಸಲಿ । **ವಾಚಾಸ್ತೇನಂ**—ಸುಳ್ಳು ಹೇಳುವ ಈ ಅಸುರನನ್ನು । **ಶರವಃ**—ಬಾಣಗಳು । **ಮರ್ಮನ್**—ಮರ್ಮಸ್ಥಾನದಲ್ಲಿ । **ಋಚ್ಛಂತು**—ಹೋಗಿ ಹಿಂಸಿಸಲಿ । **ವಿಶ್ವಸ್ಯ**—ಸರ್ವವ್ಯಾಪಕನಾದ ಅಗ್ನಿಯ । **ಪ್ರಸಿತಿಂ**—ಬಂಧರೂಪವಾದ ಜ್ವಾಲೆಯನ್ನು । **ಯಾತುಧಾನಃ**—ರಾಕ್ಷಸನು । **ಏತು**—ಪ್ರವೇಶಿಸಿ ಸಿಕ್ಕಿಕೊಳ್ಳಲಿ.

॥ ಭಾವಾರ್ಥ ॥

ಸಕಲ ದೇವತೆಗಳೂ ಸಹ ಪ್ರಾಣಿಹಿಂಸಕನಾದ ಅಸುರನನ್ನು ಇಂದು ನಾಶಪಡಸಲಿ. ಇವನನ್ನು ಕಟುವಾದ ಶಾಪಗಳು ಹಿಂಸಿಸಲಿ. ಸುಳ್ಳುಹೇಳುವ ಈ ಅಸುರನನ್ನು ಬಾಣಗಳು ಮರ್ಮಸ್ಥಾನದಲ್ಲಿ ಹೋಗಿ ಹಿಂಸಿಸಲಿ. ಸರ್ವವ್ಯಾಪಕನಾದ ಅಗ್ನಿಯ ಬಂಧರೂಪವಾದ ಜ್ವಾಲೆಯನ್ನು ರಾಕ್ಷಸನು ಪ್ರವೇಶಿಸಿ ಸಿಕ್ಕಿಕೊಳ್ಳಲಿ.

## English Translation

Let all the gods to-day destroy the murderous (Yatudhana); let our sharp imprecations encounter him; may the arrows hit the speaker of falsehood in a vital part; may the Yatudhana go into the bondage of the all-pervading Agni

॥ ಸಂಹಿತಾಪಾಠಃ ॥

ಯಃ ಪೌರುಷೇಣ ಕ್ರವಿಷಾ ಸಮಂಕ್ತೇ ಯೋ ಅಶ್ವ್ಯೇನ ಪಶುನಾ ಯಾತುಧಾನಃ ।
ಯೋ ಅಘ್ನ್ಯಾಯಾ ಭರತಿ ಕ್ಷೀರಮಗ್ನೇ ತೇಷಾಂ ಶೀರ್ಷಾಣಿ ಹರಸಾಪಿ ವೃಶ್ಚ ॥ ೧೬ ॥

॥ ಪದಪಾಠಃ ॥

ಯಃ । ಪೌರುಷೇಯೇಣ । ಕ್ರವಿಷಾ । ಸಂऽಅಂಕ್ತೇ । ಯಃ । ಅಶ್ವ್ಯೇನ । ಪಶುನಾ । ಯಾತುऽ-
ಧಾನಃ ।

ಯಃ । ಅಘ್ನ್ಯಾಯಾಃ । ಭರತಿ । ಕ್ಷೀರಂ । ಅಗ್ನೇ । ತೇಷಾಂ । ಶೀರ್ಷಾಣಿ । ಹರಸಾ । ಅಪಿ । ವೃಶ್ಚ ॥

॥ ಸಾಯಣಭಾಷ್ಯಂ ॥

ಯೋ ಯಾತುಧಾನೋ ರಾಕ್ಷಸಃ ಪೌರುಷೇಯೇಣ ಪುರುಷಸಂಬಂಧಿನಾ ಕ್ರವಿಷಾ ಮಾಂಸೇನ ಸಮಂಕ್ತೇ ಆತ್ಮಾನಂ ಸಂಗಮಯತಿ । ಯಶ್ಚಾಶ್ವ್ಯೇನಾಶ್ವಸಮೂಹೇನ । ತದೀಯೇನ ಮಾಂಸೇನೇತ್ಯರ್ಥಃ । ಆತ್ಮಾನಂ ಸಂಗಮಯತಿ । ಯೋ ವಾ ಯಾತುಧಾನೋಽನ್ಯೇನ ಪಶುನಾತ್ಮಾನಂ ಸಂಗಮಯತಿ । ಯೋ ವಾ ಯಾತುಧಾನೋಽಘ್ನ್ಯಾಯಾ ಗೋಃ ಕ್ಷೀರಂ ಭರತಿ ಹರತಿ । ಹೇ ಅಗ್ನೇ ತ್ವಂ ತೇಷಾಂ ಸರ್ವೇಷಾಮಪಿ ರಾಕ್ಷಸಾನಾಂ ಶೀರ್ಷಾಣಿ ಶಿರಾಂಸಿ ಹರಸಾ ತ್ವದೀಯೇನ ತೇಜಸಾ ವೃಶ್ಚ । ಛಿಂದ್ಧಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯಃ ಯಾತುಧಾನಃ**—ಯಾವ ಅಸುರನು । **ಪೌರುಷೇಯೇಣ**—ಪುರುಷ ಸಂಬಂಧಿಯಾದ । **ಕ್ರವಿಷಾ**—ಮಾಂಸದಿಂದ । **ಸಮಂಕ್ತೇ**—ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುವನೋ । **ಯಃ**—ಯಾರು । **ಅಶ್ವ್ಯೇನ**—ಅಶ್ವಸಮೂಹಗಳನ್ನು ಭಕ್ಷಿಸಿಯೂ । **ಪಶುನಾ**—ಪಶುಗಳನ್ನು ಭಕ್ಷಿಸಿಯೂ ತನ್ನ ಉದರವನ್ನು ತುಂಬುವನೋ । **ಅಪಿ**—ಮತ್ತು । **ಯಃ**—ಯಾರು । **ಅಘ್ನ್ಯಾಯಾಃ**—ಗೋವಿನ । **ಕ್ಷೀರಂ**—ಕ್ಷೀರವನ್ನು । **ಭರತಿ**—ಅಪಹರಿಸುವನೋ । **ತೇಷಾಂ**—ಅವರೆಲ್ಲರ । **ಶೀರ್ಷಾಣಿ**—ಶಿರಸ್ಸುಗಳನ್ನೂ । **ಹರಸಾ**—ಜ್ವಾಲೆಯಿಂದ । **ವೃಶ್ಚ**—ದಹಿಸಿ ನಾಶಪಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಅಸುರನು ಪುರುಷನ ಮಾಂಸದಿಂದಲೂ, ಅಶ್ವ ಮತ್ತು ಪಶುಸಮೂಹಗಳನ್ನು ಭಕ್ಷಿಸಿಯೂ ತನ್ನ ಉದರವನ್ನು ತುಂಬಿಸಿಕೊಳ್ಳುವನೋ, ಯಾರು ಗೋವಿನ ಕ್ಷೀರವನ್ನು ಅಪಹರಿಸುವನೋ ಅವರೆಲ್ಲರ ಶಿರಸ್ಸುಗಳನ್ನೂ ಜ್ವಾಲೆಯಿಂದ ದಹಿಸಿ ನಾಶಪಡಿಸು.

## English Translation

The Yatudhana who fills himself with the flesh of man, and he who fills himself with the flesh of horses or of other animals, and he who steals the milk of the cow—cut off tkeir heads with your flame.

॥ ಸಂಹಿತಾಪಾಠಃ ॥

ಸಂವತ್ಸರೀಣಂ ಪಯ ಉಸ್ರಿಯಾಯಾಸ್ತಸ್ಯ ಮಾಶೀದ್ಯಾತುಧಾನೋ ನೃಚಕ್ಷಃ ।
ಪೀಯೂಷಮಗ್ನೇ ಯತಮಸ್ತಿತೃಪ್ಸಾತ್ತಂ ಪ್ರತ್ಯಂಚಮರ್ಚಿಷಾ ವಿಧ್ಯ ಮರ್ಮನ್ ॥ ೧೭ ॥

॥ ಪದಪಾಠಃ ॥

ಸಂವತ್ಸರೀಣಂ । ಪಯಃ । ಉಸ್ರಿಯಾಯಾಃ । ತಸ್ಯ । ಮಾ । ಅಶೀತ್ । ಯಾತುಽಧಾನಃ । ನೃಽಚಕ್ಷಃ ।
ಪೀಯೂಷಂ । ಅಗ್ನೇ । ಯತಮಃ । ತಿತೃಪ್ಸಾತ್ । ತಂ । ಪ್ರತ್ಯಂಚಂ । ಅರ್ಚಿಷಾ । ವಿಧ್ಯ ।
ಮರ್ಮನ್ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ನೃಚಕ್ಷೋ ನೃಣಾಂ ದ್ರಷ್ಟರಗ್ನೇ ಉಸ್ರಿಯಾಯಾಃ ಗೋಃ । ಉಸ್ರಿಯಾಹೀತಿ ಗೋನಾಮಸು ಪಾಠಾತ್ । ಸಂವತ್ಸರೀಣಂ ಸಂವತ್ಸರೇಣ ಭವಂ ಯತ್ಪಯೋಽಸ್ತಿ ಯಾತುಧಾನೋ ರಾಕ್ಷಸಸ್ತಸ್ಯ ಮಾಶೀತ್ । ತತ್ಪಯೋ ಮಾ ಭಕ್ಷಯತು । ಕಿಂಚ ಯತಮೋ ಯೋ ರಾಕ್ಷಸಃ ಪೀಯೂಷಂ ಪೀಯೂಷೇಣ ॥ ವಿಭಕ್ತಿವ್ಯತ್ಯಯಃ ॥ ಅಸ್ಮದೀಯಾಯಾ ಗೋಃ ಪಯಸಾ ತಿತೃಪ್ಸಾತ್ ಆತ್ಮಾನಂ ತರ್ಪಯಿತುಮಿಚ್ಛತಿ ತಂ ಪ್ರತ್ಯಂಚಂ ಯುದ್ಧಾಯಾತ್ಮಾನಂ ಪ್ರತಿಗತಂ ರಾಕ್ಷಸಂ ಮರ್ಮನ್ ಮರ್ಮಣಿ ಪ್ರಾಣವಿಯೋಗಸ್ಥಾನೇಽರ್ಚಿಷಾ ಸ್ವಕೀಯೇನ ತೇಜಸಾ ವಿಧ್ಯ । ತಾಡಯ । ಮಾರಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

ನೃಚಕ್ಷಃ—ಮಾನವರನ್ನು ನೋಡಬಲ್ಲ । ಅಗ್ನೇ—ಎಲೈ ಅಗ್ನಿಯೇ । ಉಸ್ರಿಯಾಯಾಃ—ಕರೆಯುವ ಹಸುವಿನ । ಸಂವತ್ಸರೀಣಂ—ವರ್ಷಾವಧಿಯುಳ್ಳ । ಪಯಃ—ಯಾವ ಕ್ಷೀರವಿದೆಯೋ । ತಸ್ಯ—ಅದನ್ನು । ಯಾತುಧಾನಃ—ರಾಕ್ಷಸನು । ಮಾಶೀತ್—ಕುಡಿಯದಂತಾಗಲಿ । ಯತಮಃ—ಅಸುರರಲ್ಲಿ ಯಾರಾದರೂ । ಪೀಯೂಷಂ—ನಮ್ಮ ಗೋವಿನ ಕ್ಷೀರದಿಂದ । ತಿತೃಪ್ಸಾತ್—ತೃಪ್ತಿಯನ್ನು ಹೊಂದಲಿಚ್ಛಿಸಿದರೆ । ಪ್ರತ್ಯಂಚಂ—ಎದುರುಬೀಳುವ । ತಂ—ಆ ಅಸುರನನ್ನು । ಅರ್ಚಿಷಾ—ನಿನ್ನ ತೇಜಸ್ಸಿನಿಂದ । ಮರ್ಮನ್—ಮರ್ಮಸ್ಥಾನದಲ್ಲಿ । ವಿಧ್ಯ—ಹೊಡೆದು ಸಾಯಿಸು.

॥ ಭಾವಾರ್ಥ ॥

ಮಾನವರ ವ್ಯವಹಾರಗಳನ್ನು ನೋಡಬಲ್ಲ ಎಲೈ ಅಗ್ನಿಯೇ, ಕರೆಯುವ ಹಸುವಿನ ವರ್ಷಾವಧಿಯುಳ್ಳ ಯಾವ ಕ್ಷೀರವಿದೆಯೋ, ಅದನ್ನು ರಾಕ್ಷಸನು ಕುಡಿಯದಂತಾಗಲಿ. ಅಸುರರಲ್ಲಿ ಯಾರಾದರೂ ನಮ್ಮ ಗೋವಿನ ಕ್ಷೀರದಿಂದ

ತೃಪ್ತಿಯನ್ನು ಹೊಂದಲಿಚ್ಛಿಸಿದರೆ ಎದುರುಬೀಳುವ ಆ ಅಸುರನನ್ನು ನಿನ್ನ ತೇಜಸ್ಸಿನಿಂದ ಮರ್ಮಸ್ಥಾನದಲ್ಲಿ ಸೀಳಿಸಾಯಿಸು.

English Translation

The milk of the cow is annually produced, let not the Yatudhana consume it, O beholder of men ; whichever of them would like to satiate himself with the ambrosia, you, Agni, pierce that contending (Rakshasa) with your flame in a vital part.

। ಸಂಹಿತಾಪಾಠಃ ।

ವಿಷಂ ಗವಾಂ ಯಾತುಧಾನಾಃ ಪಿಬಂತ್ವಾ ವೃಶ್ಚ್ಯಂತಾಮದಿತಯೇ ದುರೇವಾಃ ।

ಪರೈನಾಂದೇವಃ ಸವಿತಾ ದದಾತು ಪರಾ ಭಾಗಮೋಷಧೀನಾಂ ಜಯಂತಾಂ॥

। ಪದಪಾಠಃ ॥

ವಿಷಂ । ಗವಾಂ । ಯಾತುऽಧಾನಾಃ । ಪಿಬಂತು । ಆ । ವೃಶ್ಚ್ಯಂತಾಂ । ಅದಿತಯೇ । ದುಃऽಏವಾಃ । ಪರಾ । ಏನಾನ್ । ದೇವಃ । ಸವಿತಾ । ದದಾತು । ಪರಾ । ಭಾಗಂ । ಓಷಧೀನಾಂ । ಜಯಂತಾಂ ॥೧೮॥

। ಸಾಯಣಭಾಷ್ಯಂ ।

**ಹೇ ಅಗ್ನೇ ಯಾತುಧಾನಾ ರಾಕ್ಷಸಾ ಗವಾಂ ಪಶೂನಾಂ ಗೃಹೇ ಸ್ಥಿತಂ ವಿಷಂ ಪಿಬಂತು । ಕಿಂಚಾದಿತಯೇऽದಿತ್ಯರ್ಥಂ ದುರೇವಾ ದುಸ್ತರಾ ಯಾತುಧಾನಾ ಆ ವೃಶ್ಚ್ಯಂತಾಂ । ತ್ವದೀಯೈರಾಯುಧೈರಾಚ್ಛಿದ್ಯಂತಾಂ । ಕಿಂಚ ಸವಿತಾ ದೇವ ಏನಾನ್ರಾಕ್ಷಸಾನ್ಪರಾ ದದಾತು । ಸಿಂಹೇಭ್ಯಃ ಪ್ರಯಚ್ಛತು । ಅಪಿ ಚ ತೇऽಮೀ ರಾಕ್ಷಸಾ ಓಷಧೀನಾಂ ಸ್ವಭೂತಂ ಭಾಗಂ ಭಜನೀಯಮನ್ನಂ ಪರಾ ಜಯಂತಾಂ । ಲಭಂತಾಮಿತ್ಯರ್ಥಃ ॥**

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ) **ಯಾತುಧಾನಾಃ**—ರಾಕ್ಷಸರು । **ಗವಾಂ**—ಗೋವುಗಳ ಕೊಟ್ಟಿಗೆಯಲ್ಲಿರುವ। **ವಿಷಂ**—ವಿಷವನ್ನು । **ಪಿಬಂತು**—ಪಾನಮಾಡಲಿ । **ಅದಿತಯೇ**—ಅದಿತಿಯ ತೃಪ್ತ್ಯರ್ಥವಾಗಿ । **ದುರೇವಾಃ**—ಅಪ್ರತಿಹತರಾದ ಅಸುರರು । **ಆ ವೃಶ್ಚ್ಯಂತಾಂ**—ಕತ್ತರಿಸಲ್ಪಡಲಿ । **ಸವಿತಾ ದೇವಃ**—ಸವಿತೃದೇವನು । **ಏನಾನ್**—ಈ ಅಸುರರನ್ನು । **ಪರಾ ದದಾತು**—ದುಷ್ಟಮೃಗಗಳಿಗೆ ಕೊಡಲಿ । **ಓಷಧೀನಾಂ**—ಓಷಧಿಗಳ । **ಭಾಗಂ**—ರಸರೂಪವಾದ ಅನ್ನವನ್ನು । **ಪರಾಜಯಂತಾಂ**—ಅವರು ಹೊಂದದಿರಲಿ.

। ಭಾವಾರ್ಥ ।

ಎಲೈ ಅಗ್ನಿಯೇ, ರಾಕ್ಷಸರು ಗೋವುಗಳ ಕೊಟ್ಟಿಯಲ್ಲಿರುವ ವಿಷವನ್ನು ಪಾನಮಾಡಲಿ. ಅದಿತಿಯು ತೃಪ್ತ್ಯರ್ಥವಾಗಿ ಅಪ್ರತಿಹತರಾದ ಅಸುರರು ಕತ್ತರಿಸಲ್ಪಡಲಿ. ಸವಿತೃವು ಈ ಅಸುರರನ್ನು ದುಷ್ಟಮೃಗಗಳಿಗೆ ಕೊಡಲಿ. ಓಷಧಿಗಳ ರಸರೂಪವಾದ ಅನ್ನವನ್ನು ಅವರು ಹೊಂದದಿರಲಿ.

English Translation

Let the Yatudhanas drink poison from the cattle ; let the (Rakshasas) hard to overcome be cut to pieces for the sake of Aditi ; may the divine Savitri give them over (to destruction), may they be deprived of the food of herbs.

। ಸಂಹಿತಾಪಾಠಃ ।

ಸನಾದಗ್ನೇ ಮೃಣಸಿ ಯಾತುಧಾನಾನ್ನ ತ್ವಾ ರಕ್ಷಾಂಸಿ ಪೃತನಾಸು ಜಿಗ್ಯುಃ।
ಅನು ದಹ ಸಹಮೂರಾನ್ಕ್ರವ್ಯಾದೋ ಮಾ ತೇ ಹೇತ್ಯಾ ಮುಕ್ಷತ
ದೈವ್ಯಾಯಾಃ ॥ ೧೯ ॥

। ಪದಪಾಠಃ ।

ಸನಾತ್ । ಅಗ್ನೇ । ಮೃಣಸಿ । ಯಾತುऽಧಾನಾನ್ । ನ । ತ್ವಾ । ರಕ್ಷಾಂಸಿ । ಪೃತನಾಸು । ಜಿಗ್ಯುಃ ।
ಅನು । ದಹ । ಸಹऽಮೂರಾನ್ । ಕ್ರವ್ಯऽಅದಃ । ಮಾ । ತೇ । ಹೇತ್ಯಾಃ । ಮುಕ್ಷತ । ದೈವ್ಯಾಯಾಃ॥

। ಸಾಯಣಭಾಷ್ಯಂ ।

ಹೇ ಅಗ್ನೇ ತ್ವಂ ಸನಾಚ್ಚಿರಾದೇವಾರಭ್ಯ ಯಾತುಧಾನಾನ್ರಾಕ್ಷಸಾನ್ಮೃಣಸಿ । ಬಾಧಸೇ । ತಥಾಪಿ ತ್ವಾ ತ್ವಾಂ ಪೃತನಾಸು ಸಂಗ್ರಾಮೇಷು ರಕ್ಷಾಂಸಿ ರಾಕ್ಷಸಾ ನ ಜಿಗ್ಯುಃ। ನಾಜಯನ್ । ಕಿಂಚ ಸ ತ್ವಮಧುನಾನ್ವನುಕ್ರಮೇಣ ಸಹಮೂರಾನ್ ಮೂಲೇನ ಸಹಿತಾನ್ ಮಾರಕವ್ಯಾಪಾರೇಣ ಯುಕ್ತಾನ್ ಕ್ರವ್ಯಾದೋ ಮಾಂಸಭಕ್ಷಕಾನ್ರಾಕ್ಷಸಾನ್ದಹ । ತೇಜಸಾ ಭಸ್ಮೀಕುರು । ಕಿಂಚ ತವ ಸಂಬಂಧಿನೋ ದೈವ್ಯಾಯಾ ದೈವ್ಯಾದ್ಧೇತ್ಯಾ ಆಯುಧಾತ್ತೇ ಯಾತುಧಾನಾ ಮಾ ಮುಕ್ಷತ। ಮುಕ್ತಾ ಮಾ ಭೂವನ್ ॥

। ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । ಸನಾತ್—ಬಹುಕಾಲದಿಂದಲೂ । ಯಾತುಧಾನಾನ್—ರಾಕ್ಷಸರನ್ನು ॥ ಮೃಣಸಿ—ನೀನು ಹಿಂಸಿಸುತ್ತೀಯೆ । ರಕ್ಷಾಂಸಿ—ರಾಕ್ಷಸರು । ಪೃತನಾಸು—ಸಂಗ್ರಾಮಗಳಲ್ಲಿ । ತ್ವಾ—

ನಿನ್ನನ್ನು । ನ ಜಿಗ್ಯುಃ—ಯಾವಾಗಲೂ ಜಯಿಸಿಲ್ಲ। ಸಹಮೂರಾನ್—ಹಿಂಸಾಕರ್ಮಿಗಳಾದವರೂ। ಕ್ರವ್ಯಾದಃ-ಮಾಂಸಭಕ್ಷಕರೂ ಆದ ಅವರನ್ನು । ಅನು—ಒಬ್ಬೊಬ್ಬರನ್ನಾಗಿ । ದಹ—ದಹಿಸು । ತೇ—ನಿನ್ನ । ದೈವ್ಯಾಯಾಃ—ದಿವ್ಯತ್ವವನ್ನು ಹೊಂದಿರುವ । ಹೇತ್ಯಾಃ—ಆಯುಧದಿಂದ । ಮಾ ಮುಕ್ಷತ—ಅವರು ತಪ್ಪಿಸಿಕೊಳ್ಳದಿರಲಿ.

। ಭಾವಾರ್ಥ ।

ಎಲೈ ಅಗ್ನಿಯೇ, ನೀನು ಬಹುಕಾಲದಿಂದಲೂ ರಾಕ್ಷಸರನ್ನು ಹಿಂಸಿಸುತ್ತೀಯೆ. ರಾಕ್ಷಸರು ಸಂಗ್ರಾಮಗಳಲ್ಲಿ ನಿನ್ನನ್ನು ಯಾವಾಗಲೂ ಜಯಿಸಿಲ್ಲ. ಹಿಂಸಾಕರ್ಮಿಗಳೂ, ಮಾಂಸಭಕ್ಷಕರೂ ಆದ ಅವರನ್ನು ಒಬ್ಬೊಬ್ಬರನ್ನಾಗಿ ದಹಿಸು. ದಿವ್ಯತ್ವವನ್ನು ಹೊಂದಿರುವ ನಿನ್ನ ಆಯುಧದಿಂದ ಅವರು ತಪ್ಪಿಸಿಕೊಳ್ಳದಿರಲಿ.

## English Translation

You, Agni, have from old time opposed the Yatudhanas : the Rakshasas have never overcome you in battles ; burn the murderous flesh-eating (Rakshasas) one by one ; let them not escape your divine weapon.

॥ ಸಂಹಿತಾಪಾಠಃ ॥

ತ್ವಂ ನೋ ಅಗ್ನೇ ಅಧರಾದುದಕ್ತಾತ್ತ್ವಂ ಪಶ್ಚಾದುತ ರಕ್ಷಾ ಪುರಸ್ತಾತ್ ।
ಪ್ರತಿ ತೇ ತೇ ಅಜರಾಸಸ್ತಪಿಷ್ಠಾ ಅಘಶಂಸಂ ಶೋಶುಚತೋ ದಹಂತು ॥

। ಪದಪಾಠಃ ।

ತ್ವಂ । ನಃ । ಅಗ್ನೇ । ಅಧರಾತ್ । ಉದಕ್ತಾತ್ । ತ್ವಂ । ಪಶ್ಚಾತ್ । ಉತ । ರಕ್ಷ । ಪುರಸ್ತಾತ್ ।
ಪ್ರತಿ । ತೇ । ತೇ । ಅಜರಾಸಃ । ತಪಿಷ್ಠಾಃ । ಅಘಽಶಂಸಂ । ಶೋಶುಚತಃ । ದಹಂತು ॥ ೨೦ ॥

। ಸಾಯಣಭಾಷ್ಯಂ ।

ಹೇ ಅಗ್ನೇ ತ್ವಂ ನೋಽಸ್ಮಾನಧರಾದ್ದಕ್ಷಿಣತಃ । ಉತ್ತರಾದಿದಿಕ್ಷ್ವಮಭಿಮ್ಯಾಹಾರಾದಧರಶಬ್ದೋಽತ್ರ ದಕ್ಷಿಣದಿಕ್ಪರ ಇತಿ ವಿಜ್ಞಾಯತೇ । ಉದಕ್ತಾದುತ್ತರತಶ್ಚ ರಕ್ಷ । ಪಾಹಿ । ಉತಾಪಿ ಚ ಹೇ ಅಗ್ನೇ ತ್ವಂ ಪಶ್ಚಾತ್ಪಶ್ಚಿಮತಃ ಪುರಸ್ತಾತ್ಪೂರ್ವತಶ್ಚ ನೋಽಸ್ಮಾನ್ರಕ್ಷ । ಚತಸೃಷು ದಿಕ್ಷ್ವವಸ್ಥಿತೇಭ್ಯೋ ರಾಕ್ಷಸೇಭ್ಯೋಽಸ್ಮಾನ್ಪಾಹೀತ್ಯರ್ಥಃ । ಕಿಂಚ ತೇ ತವ ಸಂಬಂಧಿನಸ್ತೇ ತಪಿಷ್ಠಾ ಅತಿಶಯೇನ ತಪ್ಯಮಾನಾ ಅಜರಾಸೋ ಜರಾವರ್ಜಿತಾಃ ಶೋಶುಚತೋ ಜ್ವಲಂತಃ ಸಂತೋ ರಶ್ಮಯೋಽಘಶಂಸಂ ಪಾಪಶಂಸಕಂ ರಾಕ್ಷಸಂ ಪ್ರತಿ ದಹಂತು । ಭಸ್ಮೀಕುರ್ವಂತು ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ। **ತ್ವಂ**—ನೀನು। **ನಃ**—ನಮ್ಮನ್ನು। **ಅಧರಾತ್**—ದಕ್ಷಿಣದಿಕ್ಕಿನಿಂದಲೂ। **ಉದಕ್ತಾತ್**—ಉತ್ತರದಿಕ್ಕಿನಿಂದಲೂ। **ರಕ್ಷ**—ರಕ್ಷಿಸು। **ಉತ**—ಮತ್ತು। **ತ್ವಂ**—ನೀನು। **ಪಶ್ಚಾತ್**—ಪಶ್ಚಿಮದಿಕ್ಕಿನಿಂದಲೂ। **ಪುರಸ್ತಾತ್**—ಪೂರ್ವದಿಕ್ಕಿನಿಂದಲೂ ರಕ್ಷಿಸು। **ತಪಿಷ್ಠಾಃ**—ದಾಹಾತ್ಮಕವೂ। **ಅಜರಾಸಃ**—ಕ್ಷಯರಹಿತವೂ। **ಶೋಶುಚತಃ**—ಪ್ರಭಾಯುತವೂ ಆದ। **ತೇ ತೇ**—ನಿನ್ನ ರಶ್ಮಿಗಳು। **ಅಘಶಂಸಂ**—ಪಾಪಿಯಾದ ಅಸುರರನ್ನು। **ಪ್ರತಿ ದಹಂತು**—ಸುಟ್ಟುಬಿಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಮ್ಮನ್ನು ದಕ್ಷಿಣದಿಂದಲೂ ಮತ್ತು ಉತ್ತರದಿಕ್ಕಿನಿಂದಲೂ ರಕ್ಷಿಸು. ಪೂರ್ವ ಮತು ಪಶ್ಚಿಮದಿಕ್ಕುಗಳಿಂದಲೂ ರಕ್ಷಿಸು. ದಾಹಾತ್ಮಕವೂ, ಕ್ಷಯರಹಿತವೂ, ಪ್ರಭಾಯುತವೂ ಆದ ನಿನ್ನ ರಶ್ಮಿಗಳು ಪಾಪಿಯಾದ ಅಸುರನನ್ನು ಸುಟ್ಟುಬಿಡಲಿ.

English Translation

Do you, Agni, protect us on the south, on the north ; on the west, and on the east ; may these, your undecaying, scorching, blazing (flames), consume the perpetrator of wickedness.

। ಸಂಹಿತಾಪಾಠಃ ।

ಪಶ್ಚಾತ್ಪುರಸ್ತಾದಧರಾದುದಕ್ತಾತ್ಕವಿಃ ಕಾವ್ಯೇನ ಪರಿ ಪಾಹಿ ರಾಜನ್ ।
ಸಖೇ ಸಖಾಯಮಜರೋ ಜರಿಮ್ಣೇಽಗ್ನೇ ಮರ್ತಾ ಅಮರ್ತ್ಯಸ್ತ್ವಂ ನಃ ॥

॥ ಪದಪಾಠಃ ॥

ಪಶ್ಚಾತ್ । ಪುರಸ್ತಾತ್ । ಅಧರಾತ್ । ಉದಕ್ತಾತ್ । ಕವಿಃ । ಕಾವ್ಯೇನ । ಪರಿ । ಪಾಹಿ । ರಾಜನ್ ।
ಸಖೇ । ಸಖಾಯಂ । ಅಜರಃ । ಜರಿಮ್ಣೇ । ಅಗ್ನೇ । ಮರ್ತಾನ್ । ಅಮರ್ತ್ಯಃ । ತ್ವಂ । ನಃ ॥ ೨೧ ॥

। ಸಾಯಣಭಾಷ್ಯಂ ।

ಹೇ ರಾಜನ್ದೀಪ್ತಾಗ್ನೇ ಕವಿಃ ಕ್ರಾಂತದರ್ಶನಸ್ತ್ವಂ ಕಾವ್ಯೇನ ಕವಿಕರ್ಮಣಾ ಪಶ್ಚಾತ್ ಪಶ್ಚಿಮತಃ ಪುರಸ್ತಾತ್ಪೂರ್ವತೋಽಧರಾದ್ದಕ್ಷಿಣತ ಉದಕ್ತಾದುತ್ತರತಶ್ಚಾಸ್ಮಾನ್ಪರಿ ಪಾಹಿ। ಪರಿತೋ ರಕ್ಷ। ಕಿಂಚ ಹೇ ಸಖೇ ಮಿತ್ರಭೂತಾಗ್ನೇ ಅಜರೋ ಜರಾರಹಿತಸ್ತ್ವಂ ಮಾಂ ಸಖಾಯಂ ಜರಿಮ್ಣೇ ಜರಾಯೈ ಕುರು। ತ್ವತ್ಪ್ರಸಾದಾದಹಂ ಚಿರಂ ಜೀವಾನೀತ್ಯರ್ಥಃ। ಏತದೇವ ದರ್ಶಯತಿ। ಹೇ ಅಗ್ನೇ

**ಅಮರ್ತ್ಯೋ ಮರಣಧರ್ಮರಹಿತಸ್ತ್ವಂ ಮರ್ತಾನ್ಮರಣಧರ್ಮವತೋ ನೋಽಸ್ಮಾಞ್ಜರಿಮ್ಣೇ ಜರಾಯೈ ಕುರ್ವಿತಿ ಶೇಷಃ ॥**

॥ ಪ್ರತಿಪದಾರ್ಥ ॥

**ರಾಜನ್**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ಕವಿಃ**—ಮೇಧಾವಿಯಾದ ನೀನು । **ಕಾವ್ಯೇನ**—ಉತ್ತಮವಾದ ನಿನ್ನ ಕರ್ಮಗಳಿಂದ । **ಪಶ್ಚಾತ್**—ಪಶ್ಚಿಮದಿಕ್ಕಿನಿಂದಲೂ । **ಪುರಸ್ತಾತ್**—ಪೂರ್ವದಿಕ್ಕಿನಿಂದಲೂ । **ಅಧರಾತ್**—ದಕ್ಷಿಣದಿಕ್ಕಿನಿಂದಲೂ । **ಉದಕ್ತಾತ್**—ಉತ್ತರದಿಕ್ಕಿನಿಂದಲೂ । **ಪರಿಪಾಹಿ**—ರಕ್ಷಿಸು । **ಸಖೇ**—ಮಿತ್ರನಾದ ಎಲೈ ಅಗ್ನಿಯೇ । **ಅಜರಃ**—ಕ್ಷಯರಹಿತನಾದ ನೀನು । **ಸಖಾಯಂ**—ನಿನ್ನ ಮಿತ್ರನಾದ ನನ್ನನ್ನು । **ಜರಿಮ್ಣೇ**—ಮುಪ್ಪಿನವರೆಗೆ ಬದುಕುವಂತೆ ಮಾಡು । **ಅಗ್ನೇ**—ಎಲೈ ಅಗ್ನಿಯೇ। **ಅಮರ್ತ್ಯಃ**—ಮರಣರಹಿತನಾದ। **ತ್ವಂ**—ನೀನು । **ಮರ್ತಾನ್**—ಮಾನವರಾದ । **ನಃ**—ನಮ್ಮನ್ನು ದೀರ್ಘಕಾವ ಬದುಕುವಂತೆ ಮಾಡು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ಮೇಧಾವಿಯಾದ ನೀನು ಉತ್ತಮವಾದ ನಿನ್ನ ಕರ್ಮಗಳಿಂದ ಪಶ್ಚಿಮ ದಿಕ್ಕಿನಿಂದಲೂ, ಪೂರ್ವದಿಕ್ಕಿನಿಂದಲೂ, ದಕ್ಷಿಣದಿಕ್ಕಿನಿಂದಲೂ, ಉತ್ತರದಿಕ್ಕಿನಿಂದಲೂ ರಕ್ಷಿಸು. ಮಿತ್ರನಾದ ಎಲೈ ಅಗ್ನಿಯೇ, ಕ್ಷಯರಹಿತನಾದ ನೀನು ನಿನ್ನ ಮಿತ್ರನಾದ ನನ್ನನ್ನು ಮುಪ್ಪಿನವರೆಗೆ ಬದುಕುವಂತೆ ಮಾಡು. ಎಲೈ ಅಗ್ನಿಯೇ, ಮರಣರಹಿತನಾದ ನೀನು ಮಾನವರಾದ ನಮ್ಮನ್ನು ದೀರ್ಘಕಾಲ ಬದುಕುವಂತೆ ಮಾಡು.

English Translation

Royal Agni, you are a sage, protect us by your wisdom on the west, on the east, on the south, on the north ; you, O friend, who are undecaying, (preserve me), your friend, to old age ; you who are immortal (protect) us who are mortal.

॥ ಸಂಹಿತಾಪಾಠಃ ॥

ಪರಿ ತ್ವಾಗ್ನೇ ಪುರಂ ವಯಂ ವಿಪ್ರಂ ಸಹಸ್ಯ ಧೀಮಹಿ ।
ಧೃಷದ್ವರ್ಣಂ ದಿವೇದಿವೇ ಹಂತಾರಂ ಭಂಗುರಾವತಾಂ ॥ ೨೨ ॥

॥ ಪದಪಾಠಃ ॥

ಪರಿ । ತ್ವಾ । ಅಗ್ನೇ । ಪುರಂ । ವಯಂ । ವಿಪ್ರಂ । ಸಹಸ್ಯ । ಧೀಮಹಿ ।
ಧೃಷತ್ಽವರ್ಣಂ । ದಿವೇಽದಿವೇ । ಹಂತಾರಂ । ಭಂಗುಽರವತಾಂ ॥ ೨೨ ॥

॥ ಸಾಯಣಭಾಷ್ಯಂ ॥

**ಹೇ ಸಹಸ್ಯ ಸಹಸೇ ಹಿತ ಸಹಸೋ ಜಾತ ವಾಗ್ನೇ ಪುರಂ ಪೂರಕಂ ವಿಪ್ರಂ ಮೇಧಾವಿನಂ ಧೃಷದ್ವರ್ಣಂ ಧರ್ಷಕರೂಪಂ ಭಂಗುರಾವತಾಂ ಭಂಗುರಕರ್ಮಯುಕ್ತಾನಾಂ ರಕ್ಷಸಾಂ ದಿವೇದಿವೇ ಪ್ರತ್ಯಹಂ ಹಂತಾರಂ ಹಿಂಸಿತಾರಂ ತ್ವಾ ತ್ವಾಂ ವಯಂ ಸಾಯುನಾಮಧೇಯಾ ಭಾರದ್ವಾಜಾ ರಕ್ಷಸಾಂ ಹನನಾಯ ಪರಿ ಧೀಮಹಿ ॥**

॥ ಪ್ರತಿಪದಾರ್ಥ ॥

**ಸಹಸ್ಯ**—ಶಕ್ತಿಪುತ್ರನಾದ । **ಅಗ್ನೇ**—ಎಲೈ ಅಗ್ನಿಯೇ । **ಪುರಂ**—ಕರ್ಮನಿರ್ವಾಹಕನೂ । **ವಿಪ್ರಂ**—ಮೇಧಾವಿಯೂ । **ಧೃಷದ್ವರ್ಣಂ**—ಭಯಂಕರವಾದ ರೂಪವುಳ್ಳವನೂ । **ಭಂಗುರಾವತಾಂ**—ನಾಶಕರಾದ ರಾಕ್ಷಸರನ್ನು । **ದಿವೇ ದಿವೇ**—ಪ್ರತಿದಿನವೂ । **ಹಂತಾರಂ**—ನಾಶಮಾಡುವವನೂ ಆದ । **ತ್ವಾ**—ನಿನ್ನನ್ನು । **ವಯಂ**—ನಾವು । **ಪರಿ ಧೀಮಹಿ**—ಧ್ಯಾನರೂಪದಲ್ಲಿ ಪೂಜಿಸುತ್ತೇವೆ.

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಕರ್ಮನಿರ್ವಾಹಕನೂ, ಮೇಧಾವಿಯೂ, ಭಯಂಕರವಾದ ರೂಪವುಳ್ಳವನೂ, ನಾಶಕರಾದ ರಾಕ್ಷಸರನ್ನು ಪ್ರತಿದಿನವೂ ನಾಶಮಾಡುವವನೂ ಆದ ನಿನ್ನನ್ನು ನಾವು ಧ್ಯಾನರೂಪದಲ್ಲಿ ಪೂಜಿಸುತ್ತೇವ.

English Translation

We meditate, strength-born Agni, on you, the accomplisher (of rites), the sage, of fearful form, the destroyer of the tracherous day by day.

॥ ಸಂಹಿತಾಪಾಠಃ ॥

**ವಿಷೇಣ ಭಂಗುರಾವತಃ ಪ್ರತಿ ಷ್ಮ ರಕ್ಷಸೋ ದಹ ।**

**ಅಗ್ನೇ ತಿಗ್ಮೇನ ಶೋಚಿಷಾ ತಪುರಗ್ರಾಭಿರ್ಋಷ್ಟಿಭಿಃ ॥ ೨೩ ॥**

॥ ಪದಪಾಠ ॥

**ವಿಷೇಣ । ಭಂಗುರಽವತಃ । ಪ್ರತಿ । ಸ್ಮ । ರಕ್ಷಸಃ । ದಹ ।**

**ಅಗ್ನೇ । ತಿಗ್ಮೇನ । ಶೋಚಿಷಾ । ತಪುಃಽಅಗ್ರಾಭಿಃ । ಋಷ್ಟಿಽಭಿಃ ॥ ೨೩ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ಭಂಗುರಾವತೋ ಭಂಜನಕರ್ಮಯುಕ್ತಾನ್ರಕ್ಷಸೋ ರಾಕ್ಷಸಾನ್ವಿಷೇಣ ವ್ಯಾಪ್ತೇನ ತಿಗ್ಮೇನ ತೀಕ್ಷ್ಣೇನ ಶೋಚಿಷಾ ತೇಜಸಾ ಪ್ರತಿ ದಹ । ಭಸ್ಮೀಕುರು । ತಥಾ ತಪುರಗ್ರಾಭಿಸ್ತಪನಶೀಲಾಗ್ರಾಭಿರ್ಋಷ್ಟಿಭಿಃ । ಋಷ್ಟಯ ಆಯುಧವಿಶೇಷಾಃ । ತಾಭಿರಪಿ ಪ್ರತಿ ದಹ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಭಂಗುರಾವತಃ**—ನಾಶಕರಾದ ಅಸುರರನ್ನು । **ವಿಷೇಣ**—ವ್ಯಾಪಕವಾದುದೂ । **ತಿಗ್ಮೇನ**—ತೀಕ್ಷ್ಣವಾದುದೂ ಆದ । **ಶೋಚಿಷಾ**—ನಿನ್ನ ತೇಜಸ್ಸಿನಿಂದ । **ಪ್ರತಿ ದಹ**—ದಹಿಸು । **ತಪುರಗ್ರಾಭಿಃ**—ದಾಹಾತ್ಮಕವಾದ ಅಗ್ರಭಾಗವುಳ್ಳ । **ಋಷ್ಟಿಭಿಃ**—ಆಯುಧಗಳಿಂದ ಅವರನ್ನು ದಹಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾಶಕರಾದ ಅಸುರರನ್ನು ನಿನ್ನ ಸರ್ವವ್ಯಾಪಕವೂ, ತೀಕ್ಷ್ಣವೂ ಆದ ತೇಜಸ್ಸಿನಿಂದ ದಹಿಸು. ದಾಹಾತ್ಮಕವಾದ ಅಗ್ರಭಾಗವುಳ್ಳ ನಿನ್ನ ಆಯುಧಗಳಿಂದ ಅವರನ್ನು ದಹಿಸು.

English Translation

Consume, Agni, the treacherous Rakshasas with your all-pervading sharp flame, with your flame-pointed darts.

। ಸಂಹಿತಾಪಾಠಃ ।

ಪ್ರತ್ಯಗ್ನೇ ಮಿಥುನಾ ದಹ ಯಾತುಧಾನಾ ಕಿಮೀದಿನಾ ।
ಸಂ ತ್ವಾ ಶಿಶಾಮಿ ಜಾಗೃಹ್ಯದಬ್ಧಂ ವಿಪ್ರ ಮನ್ಮಭಿಃ ॥ ೨೩ ॥

। ಪದಪಾಠಃ ।

ಪ್ರತಿ । ಅಗ್ನೇ । ಮಿಥುನಾ । ದಹ । ಯಾತುऽಧಾನಾ । ಕಿಮೀದಿನಾ ।
ಸಂ । ತ್ವಾ । ಶಿಶಾಮಿ । ಜಾಗೃಹಿ । ಅದಬ್ಧಂ । ವಿಪ್ರ । ಮನ್ಮऽಭಿಃ ॥ ೨೩ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ಮಿಥುನಾ ಮಿಥುನಭೂತಾನಿ ಕಿಮೀದಿನಾ । ಕಿಮಿದಾನೀಮಿತಿ ಯೇ ಚರಂತಿ ತೇ ಕಿಮೀದಿನಃ । ತಾನ್ । ತಥಾ ಚ ಯಾಸ್ಕಃ । ಕಿಮೀದಿನೇ ಕಿಮಿದಾನೀಮಿತಿ ಚರತೇ ಕಿಮಿದಂ ಕಿಮಿದಮಿತಿ ವಾ । ನಿ. ೬.೧೧ । ಇತಿ । ಯಾತುಧಾನಾ ಯಾತುಧಾನಾನ್ರಾಕ್ಷಸಾನ್ಪ್ರತಿ ದಹ । ಕಿಂಚ ಹೇ ವಿಪ್ರ ಮೇಧಾವಿನ್ನಗ್ನೇ ಅದಬ್ಧಂ ಕೇನಾಪ್ಯಹಿಂಸಿತಂ ತ್ವಾ ತ್ವಾಂ ಮನ್ಮಭಿಃ ಸ್ತುತಿಭಿರಹಂ ಸಂ ಶಿಶಾಮಿ । ಸ್ತೌಮೀತ್ಯರ್ಥಃ । ಅತಸ್ತ್ವಂ ಜಾಗೃಹಿ । ನಿದ್ರಾಂ ಮಾ ಕುರು । ಬುಧ್ಯಸ್ವೇತ್ಯರ್ಥಃ ॥**

। ಪ್ರತಿಪದಾರ್ಥ ।

**ಅಗ್ನೇ**—ಎಲೈ ಅಗ್ನಿಯೇ । **ಮಿಥುನಾ**—ಒಟ್ಟಿಗೆ ಸೇರಿರುವರೂ । **ಕಿಮೀದಿನಾ**—ದುರಭಿಮಾನವುಳ್ಳವರಾದುದರಿಂದ ಕಿಮೀದಿಸಂಜ್ಞಕರೂ ಆದ । **ಯಾತುಧಾನಾ**—ಅಸುರರನ್ನು । **ಪ್ರತಿ ದಹ**—ದಹಿಸು । **ವಿಪ್ರ**—

ಮೇಧಾವಿಯಾದ ಎಲೈ ಅಗ್ನಿಯೇ । ಅದಬ್ಧಂ—ಅಹಿಂಸಿತನಾದ । ತ್ವಾ—ನಿನ್ನನ್ನು । ಮನ್ಮಭಿಃ—ಸ್ತುತಿಗಳಿಂದ । ಸಂ ಶಿಶಾಮಿ—ಸ್ತುತಿಸುತ್ತೇನೆ । ಜಾಗೃಹಿ—ಎಚ್ಚರಗೊಳ್ಳು.

। ಭಾವಾರ್ಥ ।

ಎಲೈ ಅಗ್ನಿಯೇ, ಒಟ್ಟಿಗೆ ಸೇರಿರುವರೂ ದುರಭಿಮಾನವುಳ್ಳವರಾದುದರಿಂದ ಕಿಮಿದಿಸಂಜ್ಞಕರೂ ಆದ ಅಸುರರನ್ನು ದಹಿಸು. ಮೇಧಾವಿಯಾದ ಎಲೈ ಅಗ್ನಿಯೇ, ಅಹಿಂಸಿತನಾದ ನಿನ್ನನ್ನು ಸ್ತುತಿಗಳಿಂದ ಪ್ರಶಂಸಿಸುತ್ತೇನೆ. ಎಚ್ಚರವನ್ನು ಹೊಂದು.

English Translation

Consume, Agni, these pairs of Yatudhanas and Kimidins; I whet you, O sage, the invincible one, with my praises; wake up.

। ಸಂಹಿತಾಪಾಠಃ ।

ಪ್ರತ್ಯಗ್ನೇ ಹರಸಾ ಹರಃ ಶೃಣೀಹಿ ವಿಶ್ವತಃ ಪ್ರತಿ ।
ಯಾತುಧಾನಸ್ಯ ರಕ್ಷಸೋ ಬಲಂ ವಿ ರುಜ ವೀರ್ಯಂ ॥ ೨೫ ॥

। ಪದಪಾಠಃ ।

ಪ್ರತಿ । ಅಗ್ನೇ । ಹರಸಾ । ಹರಃ । ಶೃಣೀಹಿ । ವಿಶ್ವತಃ । ಪ್ರತಿ ।
ಯಾತುಽಧಾನಸ್ಯ । ರಕ್ಷಸಃ । ಬಲಂ । ವಿ । ರುಜ । ವೀರ್ಯಂ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಹರಸಾ ತ್ವದೀಯೇನ ತೇಜಸಾ । ತಥಾ ಚ ಯಾಸ್ಕಃ । ಹರೋ ಹರತೇರ್ಜ್ಯೋತಿರ್ಹರ ಉಚ್ಯತೇ ನಿ. ೪-೧೯ । ಇತಿ ॥ ಯಾತುಧಾನಸ್ಯ ರಾಕ್ಷಸಸ್ಯ ಹರೋ ಹರಣಶೀಲಂ ಬಲಂ ಪ್ರತಿ ಶೃಣೀಹಿ । ನಾಶಯೇತ್ಯರ್ಥಃ । ತಥಾ ರಕ್ಷಸೋ ರಾಕ್ಷಸಸ್ಯ ವೀರ್ಯಂ ಚ ವಿ ರುಜ । ಭಂಜಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಹರಸಾ—ದಾಹಾತ್ಮಕವಾದ ತೇಜಸ್ಸಿನಿಂದ । ಯಾತುಧಾನಸ್ಯ—ಅಸುರನ । ಹರಃ—ಹಿಂಸಾತ್ಮಕವಾದ । ಬಲಂ—ಶಕ್ತಿಯನ್ನು । ಪ್ರತಿ ಶೃಣೀಹಿ—ನಾಶಮಾಡು । ರಕ್ಷಸಃ—ರಾಕ್ಷಸನ । ವೀರ್ಯಂ—ಶಕ್ತಿಯನ್ನು । ವಿ ರುಜ—ನಾಶಪಡಿಸು.

। ಭಾವಾರ್ಥ ।

ಎಲೈ ಅಗ್ನಿಯೇ, ದಾಹಾತ್ಮಕವಾದ ತೇಜಸ್ಸಿನಿಂದ ಅಸುರನ ಹಿಂಸಾತ್ಮಕವಾದ ಶಕ್ತಿಯನ್ನು ನಾಶಮಾಡು. ರಾಕ್ಷಸನ ಶಕ್ತಿಯನ್ನು ನಾಶಪಡಿಸು.

## English Translation

Destroy, Agni, with your flame, the impetuous might of the Yatudhana ; break the strength of the Rakshasa.



## ಎಂಭತ್ತೆಂಟನೆಯ ಸೂಕ್ತವು.

### ಪೀಠಿಕೆ.

ಈ ಸೂಕ್ತದಲ್ಲಿ ಸೂರ್ಯವೈಶ್ವಾನರಾಗ್ನಿಯನ್ನು ಸ್ತುತಿಸಲಾಗಿದೆ. ಆದ್ದರಿಂದ ಸೂರ್ಯ ಮತ್ತು ವೈಶ್ವಾನರಾಗ್ನಿಯ ವಿಷಯದಲ್ಲಿ ವಿವರಣೆಯು ಅವಶ್ಯಕವು. ಸೂರ್ಯನ ವಿಷಯವನ್ನು ಸೂಕ್ಷ್ಮವಾಗಿ ವಿವರಿಸಿ ಅನಂತರ ಯಾಸ್ಕರು ವಿವರಿಸಿರುವಂತೆ ಸೂರ್ಯವೈಶ್ವಾನರಾಗ್ನಿಯ ವಿಷಯವನ್ನು ಪರಿಶೀಲಿಸುತ್ತೇವೆ.

**ಸೂರ್ಯಃ— ಸುಷ್ಠು ಅರ್ಯಃ ಸ್ವಾಮೀ । ಯದ್ವಾ ಸರ್ವಾಂತರ್ಯಾಮಿತಯಾ ಸುಷ್ಠು ಪ್ರೇರಕಃ। ಯದ್ವಾ ಶೋಭನವೀರ್ಯಃ** । ಯಾಸ್ಕರು **ಸೂರ್ಯಃ ಸರ್ತೇರ್ವಾ, ಸುವತೇರ್ವಾ, ಸ್ವೀರ್ಯತೇರ್ವಾ** (ನಿ. ೧೨ ೧೪) ಗತ್ಯರ್ಥಕವಾದ ಸೃಧಾತುವಿನಿಂದ ಸೂರ್ಯ ಎಂಬ ಪದವು ನಿಷ್ಪನ್ನವಾಗಿದೆ. ಈ ಪಕ್ಷದಲ್ಲಿ ಸಂಚರಿಸುವವನೆಂದು ಅರ್ಥ. ಪ್ರಸವಿಸು ಎಂಬ ಅರ್ಥವುಳ್ಳ ಷೂಞ್ ಧಾತುವಿನಿಂದ ನಿಷ್ಪನ್ನವಾದಾಗ ಸೃಷ್ಟಿಮಾಡುವವನು ಎಂದು ಅರ್ಥವಾಗುತ್ತದೆ. ಗಮನ ಅಥವಾ ಕಂಪನ ಎಂಬ ಅರ್ಥವುಳ್ಳ ಈರಧಾತುವಿನಿಂದ ಸು ಎಂಬ ಉಪಸರ್ಗಪೂರ್ವಕವಾಗಿ ಸೂರ್ಯಶಬ್ದದ ರೂಪನಿಷ್ಪತ್ತಿಯನ್ನು ಹೇಳುವಾಗ **ವಾಯುನಾ ಹ್ಯಯಂ ಸುಷ್ಠು ಈರ್ಯತೇ ಪ್ರೇರ್ಯತೇ** ವಾಯುವಿನಿಂದ ಅತಿಶಯವಾಗಿ ಪ್ರೇರಿಸಲ್ಪಡುವನೆಂದೂ ಮೂರು ವಿಧವಾಗಿ ಅರ್ಥವನ್ನು ವಿವರಿಸಿ ಪ್ರಸಿದ್ಧನಾದ ಸೂರ್ಯನಿಗೆ ಜಾತವೇದಾಗ್ನಿಯ ತಾದಾತ್ಮ್ಯವನ್ನು ಬೋಧಿಸುವ,

**ಉದು ತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥**
(ಋ. ಸಂ. ೧-೫೦-೧)

ಈ ಋಕ್ಕನ್ನು ಉದಹರಿಸಿದ್ದಾರೆ. ಮತ್ತು ಈ ಸೂರ್ಯನಿಗೆ ಸಾರ್ವಾತ್ಮ್ಯವನ್ನು ಬೋಧಿಸುವ—

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**
(ಋ. ಸಂ. ೧-೧೧೫-೧)

ಈ ಋಕ್ಕನ್ನು ಉದಹರಿಸಿದ್ದಾರೆ. ಇಲ್ಲಿ ಪ್ರಸಿದ್ಧನಾದ ಅಗ್ನಿಯು ಸೂರ್ಯನಲ್ಲಿ ಕಂಡುಬರುವ ಗುಣಗಳನ್ನು ಹೊಂದಿರುವನೆಂದು ಸಮರ್ಥನೆ ಮಾಡಿ, ಅಗ್ನಿಯು ಎಲ್ಲಕ್ಕೂ ಪ್ರಭುವಾಗಿರುವವನೂ, ಸರ್ವರಿಗೂ ಅಂತರ್ಯಾಮಿಯಾಗಿರುವವನೂ, ಆದ್ದರಿಂದ ಎಲ್ಲರಿಗೂ ಪ್ರೇರಕನಾಗಿರುವನು, ಮತ್ತು ಉತ್ತಮವಾದ ವೀರ್ಯವುಳ್ಳವನು ಎಂದು ಅರ್ಥವನ್ನು ಮಾಡಿದೆ.

**ಸರ್ವಸ್ಯ ಪ್ರೇರಕ ಆದಿತ್ಯಃ ।** ಸರ್ವ ಜಗತ್ತನ್ನೂ, ಎಂದರೆ ಜಗತ್ತಿನಲ್ಲಿರುವ ಸರ್ವ ಪ್ರಾಣಿಗಳನ್ನೂ ಪ್ರೇರಿಸುವ ಸೂರ್ಯನು. ಸೂರ್ಯನಿಂದ ರಶ್ಮಿಗಳ ಮೂಲಕ ಹೊರಡುವ ಔಷ್ಣ್ಯವನ್ನು ನಾವು ಪಡೆಯದಿದ್ದರೆ

ಜೀವಿಸಲಾಗುವುದಿಲ್ಲ. **ಸೂರ್ಯ ಆತ್ಮಾ ಜಗತಃ** ಎಂದು ಋ. ಸಂ. ೧-೧೧೫-೧ ರಲ್ಲಿ ಹೇಳಿರುವಂತೆ ಸೂರ್ಯನೇ ಸಕಲ ಜಗತ್ತಿಗೂ ಆತ್ಮಸ್ವರೂಪನು. ಸೂರ್ಯನ ತೇಜಸ್ಸಿಲ್ಲದಿದ್ದರೆ ಭೂಮಿಯ ಮೇಲಿರುವ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು. ಸಮಸ್ತ ಪ್ರಾಣಿವರ್ಗಕ್ಕೂ, ಮನುಷ್ಯರಿಗೂ ಸೂರ್ಯನ ತೇಜಸ್ಸು (ಶಾಖವು) ಅವಶ್ಯವಾಗಿ ಬೇಕೇ ಬೇಕು. ಶಾಖವು (ಅಗ್ನಿಯು) ಪಂಚಭೂತಗಳಲ್ಲಿ ಒಂದಾಗಿರುವುದರಿಂದ ಗಾಳಿ, ನೀರು, ಆಹಾರ ಇವು ಅವಶ್ಯಕವಾಗಿರುವಂತೆ ಸೂರ್ಯನ ತೇಜಸ್ಸೂ ಅವಶ್ಯಕವಾಗಿರುವುದು. ಅಗ್ನ್ಯಾದಿಗಳಿಂದ ಉಂಟಾಗುವ ತೇಜಸ್ಸಿಗೂ, ಸೂರ್ಯನ ತೇಜಸ್ಸಿಗೂ ವ್ಯತ್ಯಾಸವಿದೆ. ಸೂರ್ಯನ ತೇಜಸ್ಸಿಗೆ ವಿಷವನ್ನು ಪರಿಹಾರಮಾಡುವ ಮತ್ತು ಆರೋಗ್ಯವನ್ನುಂಟುಮಾಡುವ ಶಕ್ತಿಯಿದೆ. ಆದುದರಿಂದಲೇ ಮಧ್ಯಾಹ್ನದ ಸೂರ್ಯನ ತೀಕ್ಷ್ಣವಾದ ಕಿರಣಗಳು ವಿಷವನ್ನು ನಾಶಮಾಡುವುವೆಂದು ಇಲ್ಲಿ **ಪುರು ವಿಶ್ವಾನಿ ವಿಷಾಣಿ ಜೂರ್ವನ್-ಹಿಂಸನ್** ಎಂಬ ವಾಕ್ಯದಿಂದ ಹೇಳಿದೆ. ಹಿಂದೆ ಪ್ರಸ್ಕಣ್ವಋಷಿಯು—

**ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ।**

(ಋ. ಸಂ. ೧-೫೦-೧೧)

ಎಲೈ ಸೂರ್ಯನೇ, ನನ್ನ ಹೃದಯದಲ್ಲಿ ವ್ಯಾಪಿಸಿರುವ ರೋಗವನ್ನೂ, ನನ್ನ ಚರ್ಮದ ಮೇಲೆ ಹರಡಿರುವ ಕುಷ್ಠ ರೋಗದಿಂದ ಉಂಟಾಗಿರುವ ಹಳದಿಯ ಬಣ್ಣವನ್ನೂ (ತೊನ್ನು Leprosy) ನಾಶಮಾಡು ಎಂದು ಪ್ರಾರ್ಥಿಸಿರುವುದು ಸೂರ್ಯನ ರೋಗಪರಿಹಾರಶಕ್ತಿಗೆ ನಿದರ್ಶನವಾಗಿರುವುದು.

ಋಗ್ವೇದದಲ್ಲಿಯೂ ಯಜುರ್ವೇದಲ್ಲಿಯೂ ಅನೇಕಕಡೆ ಹಗಲಿಗೆ ಮಿತ್ರನು ಅಧಿಪತಿಯೆಂದೂ, ರಾತ್ರಿಗೆ ವರುಣನು ಅಧಿಪತಿಯೆಂದೂ ಹೇಳಿದೆ. **ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ ॥** ಇತ್ಯಾದಿ ಅನೇಕ ಶ್ರುತಿ ವಾಕ್ಯೋದಾಹರಣೆಗಳನ್ನು ಕೊಡಬಹುದು. ಆದರೆ ಸೂರ್ಯನಿಗೂ ಮಿತ್ರಾವರುಣರಿಗೂ ಏನು ಸಂಬಂಧ ಎಂದರೆ ನಮ್ಮ ಕಣ್ಣುಗಳಿಗೆ ಕಾಣಿಸುತ್ತಿರುವ ಈ ಸೂರ್ಯನು ಮಿತ್ರನ ಮತ್ತು ವರುಣನ ಕಣ್ಣುಗಳಂತಿರುವವನು ಎಂದು ಹೇಳಿದೆ—**ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ** (ಋ. ಸಂ. ೧.೧೧೫-೧) **ಚಕ್ಷುರ್ಮಿತ್ರಸ್ಯ ವರುಣಸ್ಯ** (ಋ.ಸಂ. ೭-೬೩-೧) **ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ** (ಋ. ಸಂ. ೧೦-೩೭-೧) ಇತ್ಯಾದ್ಯನೇಕ ಋಕ್ಕುಗಳಲ್ಲಿ ಸೂರ್ಯನು ಮಿತ್ರ ಮತ್ತು ವರುಣರ ಚಕ್ಷುಸ್ಸೆಂದು ಪ್ರಸಿದ್ಧನಾಗಿದ್ದಾನೆ.

ಸೂರ್ಯನು ದ್ಯುಲೋಕದ ಪುತ್ರನು (**ದಿವಸ್ಪುತ್ರಾಯ ಸೂರ್ಯಾಯ ಶಂಸತ** ೧೦-೩೭-೧) ಕೆಲವೆಡೆ ಸೂರ್ಯನು ಅದಿತಿಯ ಪುತ್ರನೆಂದೂ ಪರಿಗಣಿತನಾಗಿದಾನೆ. (**ಸೂರ್ಯಮಾದಿತೇಯಂ** ೧೦ ೮೮-೧) ಸೂರ್ಯನು ರಥದ ಮೇಲೆ ಕುಳಿತಿರುತ್ತಾನೆ. ಅವನ ರಥವನ್ನು ಒಂದು ಅಥವಾ ಅನೇಕ ಕುದುರೆಗಳು ಎಳೆಯುತ್ತವೆ. ಸಾಧಾರಣವಾಗಿ ಏಳು ಕುದುರೆಗಳು ಅವನ ರಥವನ್ನು ವಹಿಸುತ್ತವೆ. (**ಸಪ್ತಾಶ್ವಾ ಹರಿತಃ ಸೂರ್ಯಸ್ಯ** ೧-೧೧೫-೩, ೪) ಸೂರ್ಯನು ಜಗತ್ತಿಗೆಲ್ಲಾ ಆತ್ಮನು ಎಂದರೆ ಪ್ರಾಣಿಗಳ ಶರೀರದಲ್ಲಿ ಅಂತರಾತ್ಮನಾಗಿ ಅವರುಗಳ ಚಲನವಲನಗಳನ್ನು ನಿಯಮಿಸುತ್ತಾನೆ. ಜಡವಸ್ತುಗಳ ಚಲನವಲನಕ್ಕೂ ಸೂರ್ಯನೇ ಕಾರಣವು. (**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ೧-೧೧೫-೧) ಸೂರ್ಯನ ಶಕ್ತಿಯಿಂದ ಪ್ರಚೋದಿತರಾಗಿ ಜನರು ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತಾರೆ. (**ನೂನಂ ಜನಾಃ ಸೂರ್ಯೇಣ ಪ್ರಸೂತಾ ಅಯನ್ನರ್ಥಾನಿ ಕೃಣವನ್ನಪಾಂಸಿ**)-

೭-೬೩-೪) ಅವನು ಬಹುದೂರದವರಿಗೂ ಎಲ್ಲವನ್ನು ನೋಡಬಲ್ಲನು, ಮನುಷ್ಯರು ಮಾಡುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳೆಲ್ಲವನ್ನೂ ನೋಡುತ್ತಾನೆ. (೧-೫೦-೨, ೭ ; ೭-೬೧-೧, ೭-೬೩-೧,೪ ಇತ್ಯಾದಿ).

ಯಾಸ್ಕರು ಸೂರ್ಯಶಬ್ದಾರ್ಥವನ್ನು ವಿವರಿಸುತ್ತಾ—

**ಸೂರ್ಯಃ ಸರ್ತೇರ್ವಾ, ಸುವರ್ತೇರ್ವಾ ಸ್ವೀರ್ಯತೇರ್ವಾ ॥**

(ನಿ. ೧೨-೧೪)

ಎಂದು ಹೇಳಿದಾರೆ. ಎಂದರೆ ಸೂರ್ಯಶಬ್ದವು ಸೃ—ಸಂಚರಿಸು ಎಂಬ ಧಾತುವಿನಿಂದಾಗಲಿ, ಷೂಞ್—ಉತ್ಪತ್ತಿ ಮಾಡು ಎಂಬ ಧಾತುವಿನಿಂದಾಗಲಿ, ಪ್ರೇರಿಸು ಎಂಬರ್ಥವುಳ್ಳ ಸು+ಈರಯತಿ ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು ಎಂದು ಹೇಳಿದಾರೆ. ಸೂರ್ಯನು ಪ್ರಾತಃಕಾಲದಲ್ಲಿ ಪೂರ್ವದಿಕ್ಕಿನಲ್ಲಿ ಉದಯಿಸಿ ಅಂತರಿಕ್ಷದಲ್ಲಿ ಎಡಬಿಡದೆ ಸಂಚರಿಸುತ್ತಾ ಸಾಯಂಕಾಲದ ಹೊತ್ತಿಗೆ ಪಶ್ಚಿಮದಿಕ್ಕನ್ನು ಸೇರಿ ಅಸ್ತನಾಗುವನು. ಆದ್ದರಿಂದ ಸೂರ್ಯನ ಸಂಚಾರವು ಅವಿಚ್ಛಿನ್ನವಾಗಿರುವುದು. ಮತ್ತು ಸೂರ್ಯನ ಶಕ್ತಿಯಿಂದಲೇ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳೂ, ಸಸ್ಯಾದಿಗಳೂ ಉತ್ಪತ್ತಿಯಾಗುವವು. ಸೂರ್ಯನ ಕಿರಣಗಳಿಂದ ತಪ್ತವಾದ ವಾಯುವು ತನ್ನ ಚಲನವಲನಗಳಿಂದ ಪ್ರಪಂಚದಲ್ಲಿ ನಾನಾವಿಧ ವ್ಯತ್ಯಾಸಗಳಿಗೆ ಕಾರಣವಾಗಿರುವುದು. ಸೂರ್ಯನ ಕಿರಣಗಳ ಶಾಖದಿಂದಲೇ ಸಮುದ್ರಾದಿ ಜಲಾಶಯಗಳ ನೀರು ಆವಿಯಾಗಿ ಅಂತರಿಕ್ಷದಲ್ಲಿ ಮೇಘರೂಪದಿಂದ ವೃಷ್ಟಿಯನ್ನು ಸುರಿಸಿ ಸಸ್ಯಾದಿಗಳ ಉತ್ಪತ್ತಿಗೆ ಕಾರಣವಾಗಿರುವುದು. ಸಸ್ಯಾದಿಗಳಿಂದ ಪ್ರಾಣಿಗಳೂ ಮನುಷ್ಯರೂ ಉತ್ಪನ್ನರಾಗುವರು. (**ಅದ್ಭ್ಯ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥** ತೈ. ಉ. ೨-೧-೧). ಜಡವಸ್ತುಗಳ ಚಲನವಲನಗಳೂ ಕೂಡ ಸೂರ್ಯನ ಶಾಖದಿಂದಲೇ ಉಂಟಾಗುವವು. ಹೇಗೆಂದರೆ—**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಎಂಬಲ್ಲಿ ಹೇಳಿರುವಂತೆ, ಕಾಂತಿಸಮೂಹವಾಗಿರುವ ಸೂರ್ಯನು ಮಂಡಲಮಧ್ಯದಲ್ಲಿ ಇರುವವನಾದರೂ ಎಲ್ಲವನ್ನೂ ತನ್ನ ಶಾಖದಿಂದ ವ್ಯಾಪಿಸಿರುವ ಕಾರಣ ಎಲ್ಲಕ್ಕೂ ಅಂತರ್ಯಾಮಿಯಾಗಿ ಆಯಾಯ ಕಾಲಕ್ಕನುಗುಣವಾಗಿ ಮಾಡುವಂತೆ ಪ್ರೇರಿಸುವವನಾಗಿರುವನು. ಆದ್ದರಿಂದ ಚಲಿಸುವ (ಪ್ರಾಣಿಗಳೇ ಮೊದಲಾದ) ಸ್ಥಿರವಾದ (ಜಡವಸ್ತುಗಳ) ವಸ್ತುಗಳ ಕಾರ್ಯವರ್ಗದ ಉತ್ಪತ್ತಿಗೆ ಕಾರಣನಾಗಿರುವನು. ಸೂರ್ಯನು ಉದಯವನ್ನು ಹೊಂದಿದಕೂಡಲೇ ರಾತ್ರಿಯಲ್ಲಿ ಮೃತರಂತೆ ನಿಶ್ಚೇಷ್ಟಿತರಾಗಿ ಯಾವ ಕಾರ್ಯವನ್ನೂ ಮಾಡಲು ಜ್ಞಾನವೂ ಶಕ್ತಿಯೂ ಇಲ್ಲದಿರುವ ಪ್ರಾಣಿಗಳನ್ನು ಉತ್ತೇಜನಗೊಳಿಸಿ ಅವರ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತರಾಗುವಂತೆ ಮಾಡುವ ಸಾಮರ್ಥ್ಯವು ಸೂರ್ಯನೊಬ್ಬನಿಗೆ ಮಾತ್ರ ಇರುವುದು.

**ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ।..........**
**ಅಸೌ ಯೋಽಸ್ತಮೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಾಸ್ತಮೇತಿ । ......**
**ಅಸೌ ಯ ಆಪೂರ್ಯತಿ । ಸ ಸರ್ವೇಷಾಂ ಭೂತಾನಾಂ ಪ್ರಾಣೈರಾಪೂರ್ಯತಿ ।**

( ತೈ. ಆ. ೧-೧೪-೧)

ಎಂಬ ಶ್ರುತಿವಾಕ್ಯಗಳಲ್ಲಿ ಹೇಳಿರುವಂತೆ ಸೂರ್ಯನು ಅಸ್ತಂಗತನಾಗುವಾಗ ಸಮಸ್ತ ಜೀವರಾಶಿಗಳ ಪ್ರಾಣಗಳನ್ನು ಎಂದರೆ ಚಲವಲನಾದಿಶಕ್ತಿಯನ್ನೂ ಜ್ಞಾನಕ್ರಿಯೆಯನ್ನೂ ತನ್ನ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುವನು. ಆದ್ದರಿಂದ ರಾತ್ರಿಕಾಲದಲ್ಲಿ ಪ್ರಾಣಿಗಳು ಯಾವ ಕಾರ್ಯವನ್ನು ಮಾಡಲು ಸಮರ್ಥರಾಗದೆ ನಿದ್ರಾಪರವಶರಾಗುವರು.

ಪುನಃ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವಾಗ ಆ ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ಎಂದರೆ ಕಾರ್ಯಗಳನ್ನು ಮಾಡುವ ಶಕ್ತಿಗಳನ್ನೂ ಜ್ಞಾನಕ್ರಿಯೆಯನ್ನೂ ತನ್ನ ಜತೆಯಲ್ಲಿಯೇ ತೆಗೆದುಕೊಂಡುಬಂದು ಉದಯಿಸುವನು. ಆಗ ಆ ಪ್ರಾಣಿಗಳನ್ನು ತನ್ನ ಉತ್ಸಾಹರೂಪವಾದ ಶಕ್ತಿಯಿಂದ ತುಂಬುವನು ಎಂದು ಹೇಳಿದೆ. ಸೂರ್ಯನು ಲೋಕವೆಲ್ಲಕ್ಕೂ ಜ್ಞಾನವನ್ನೂ ಕ್ರಿಯಾಶಕ್ತಿಯನ್ನೂ ಕೊಟ್ಟು ತನ್ನ ಉದಯಾಸ್ತಗಳಿಂದ ಚೇತನಾಚೇತನವುಳ್ಳದ್ದನ್ನಾಗಿ ಮಾಡುವುದರಿಂದ ಸೂರ್ಯನು ಸ್ಥಾವರಜಂಗಮವಾದ ಸಮಸ್ತ ವಸ್ತುಜಾತಗಳಿಗೂ ಆತ್ಮನೂ ಜೀವಾತ್ಮನೂ ಆಗಿರುವನೆಂದು ಸೂರ್ಯನ ಮಹತ್ತ್ವವನ್ನು ಇಲ್ಲಿ ವರ್ಣಿಸಿದೆ,

ಇದಲ್ಲದೆ ಈಗಿನ ವಿಜ್ಞಾನಶಾಸ್ತ್ರಪ್ರಕಾರವಾಗಿಯೂ (Sceintiefie view) ಸೂರ್ಯನೇ ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳ ಚಲನವಲನಗಳಿಗೂ ಕಾರಣನು. ಸೂರ್ಯನಿಂದಲೇ ನಾವು ಎಲ್ಲಾ ವಿಧವಾದ ಶಕ್ತಿಯನ್ನೂ (energy) ಪಡೆಯುತ್ತೇವೆ. ಪ್ರಾಣಿವರ್ಗದಲ್ಲಿ ನಡೆಯುತ್ತಿರುವ ಚಲನವಲನಾದಿಗಳಿಗೂ, ಅಂತರಿಕ್ಷದಲ್ಲಿ ನಡೆಯುವ ವಾಯುವಿನ ಚಲನ, ಮೇಘಗಳ ಉತ್ಪತ್ತಿ, ವೃಷ್ಟಿವರ್ಷಣ ಮೊದಲಾದ ಕಾರ್ಯಗಳಿಗೂ, ಭೂಮಿಯಲ್ಲಿ ಎಡಬಿಡದೆ ನಡೆಯುತ್ತಿರುವ ಸಸ್ಯೋತ್ಪತ್ತಿ, ನದಿಗಳ ಪ್ರವಾಹರೂಪವಾದ ಚಲನ ಮೊದಲಾದ ಎಲ್ಲಾ ವಿಧವಾದ ಕಾರ್ಯಗಳಿಗೂ ಸೂರ್ಯನೇ ಅಥವಾ ಸೂರ್ಯನ ಕಿರಣಗಳೇ ಕಾರಣವು. ಸೂರ್ಯನ ಪ್ರಕಾಶವಿಲ್ಲದಿದ್ದರೆ ಈ ಪ್ರಪಂಚದಲ್ಲಿ ಗಾಢವಾದ ಅಂಧಕಾರವು ಆವರಿಸುವುದಲ್ಲದೆ ಒಂದು ಹುಲ್ಲುಕಡ್ಡಿಯ ಚಲನವೂ ಸಹ ನಡೆಯಲಾರದು. ಆದುದರಿಂದ **ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಎಂಬ ವಾಕ್ಯಕ್ಕೆ–The sun is the source of all the energies s› for as this world (earths) is concerned ಎಂಬ ಅಭಿಪ್ರಾಯವನ್ನು ಹೇಳುವುದು ಯುಕ್ತವಾಗಿರುವುದು.

ಪುರಾಣಾದಿಗಳಲ್ಲಿ ಸೂರ್ಯನನ್ನು ಆದಿತ್ಯ, ಪೂಷಾ, ಮಿತ್ರ, ಸವಿತೃ ಮೊದಲಾದ ಶಬ್ದಗಳಿಂದ ಕರೆಯಲಾಗಿದೆ. ಆದರೆ ವೇದಗಳಲ್ಲಿ ಅದರಲ್ಲಿಯೂ ಋಗ್ವೇದದಲ್ಲಿ ಸೂರ್ಯನ ವೈಶಿಷ್ಟ್ಯವೇ ಬೇರೆ, ಆದಿತ್ಯನ ವೈಶಿಷ್ಟ್ಯವು ಬೇರೆ. ಪೂಷಾ, ಮಿತ್ರ, ಸವಿತೃ ಇತ್ಯಾದಿ ದೇವತೆಗಳ ವೈಶಿಷ್ಟ್ಯವೇ ಬೇರೆಯಾಗಿರುವುದು. ಸೂರ್ಯನ ಗುಣಗಳು ಮಿತ್ರ ಮೊದಲಾದ ದ್ವಾದಶಾದಿತ್ಯರಲ್ಲಿ ಕಂಡುಬರುವುದಾದರೂ, ಯಜ್ಞಯಾಗಾದಿಗಳಲ್ಲಿ ಸೂರ್ಯನನ್ನು ಸ್ತುತಿಸುವ ಕಡೆ ಆದಿತ್ಯನನ್ನು ಸ್ತುತಿಸಲಾಗುವುದಿಲ್ಲ. ಇವರೆಲ್ಲರೂ ಬೇರೆ ಬೇರೆ ದೇವತೆಗಳೆಂದೇ ಪರಿಗಣನೆ. ಅಷ್ಟೇ ಅಲ್ಲ. ವೇದಗಳಲ್ಲಿ ಒಬ್ಬನೇ ದೇವತೆಯು ಅವನ ವೈಯಕ್ತಿಕವಾದ ಗುಣವಿಶಿಷ್ಟನಾಗಿರುವಾಗ ಆ ಗುಣಸಹಿತವಾದ ದೇವತೆಯೇ ಬೇರೆಯೆಂದು ಭಾವಿಸಲ್ಪಟ್ಟಿರುವುದು. ಹೇಗೆಂದರೆ—ಇಂದ್ರನು ಮರುತ್ವಾನಿಂದ್ರಃ, ಮಹಾನಿಂದ್ರಃ ಎಂದು ಕರೆಯಲ್ಪಟ್ಟಾಗ ಇಂದ್ರನೇ ಬೇರೆ, ಮರುತ್ವಾನಿಂದ್ರ (ಮರುದ್ದೇವತೆಗಳೊಡನಿರುವ ಇಂದ್ರನು) ನೇ ಬೇರೆ. ಮಹಾನಿಂದ್ರ (ಮಹತ್ತ್ವರೂಪವುಳ್ಳ ಇಂದ್ರನೇ) ಬೇರೆ ಎಂದು ಪರಿಗಣಿಸಿ ಆಯಾಸಂದರ್ಭಕ್ಕನುಸಾರವಾಗಿ ಅವರುಗಳನ್ನು ಆರಾಧಿಸಲಾಗಿರುವುದು. ಅದರಂತೆ ಅಗ್ನಿಃ ಅಗ್ನಿಃಪಾವಕಃ ಇತ್ಯಾದಿ ಪ್ರಭೇದಗಳೂ ಇತರ ದೇವತೆಗಳಲ್ಲಿಯೂ ಕಂಡುಬರುವುದು.

## ವೈಶ್ವಾನರಾಗ್ನಿಯ ಸೂಕ್ಷ್ಮಪರಿಚಯ

**ವೈಶ್ವಾನರಃ । ಇತಿ ತ್ರೀಣಿ ಪದಾನಿ । ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ । ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ॥**　　(ನಿ. ೭-೨೧)

ಈಗ ವೈಶ್ವಾನರಶಬ್ದ ವಿವರಣೆಯನ್ನು ಮಾಡುವೆವು. ಈ ವೈಶ್ವಾನರಶಬ್ದವು **ವಿಶ್ವಾನ್ ನರಾನ್ ನಯತಿ** ಎಂಬ ಮೂರು ಪದಗಳ ಅರ್ಥವನ್ನೊಳಗೊಂಡಿರುವ ದೇವತೆಯನ್ನು ಸೂಚಿಸುವ ಶಬ್ದವಾಗಿದೆ. ವೈಶ್ವಾನರನಿಗೆ ಈ ಹೆಸರು ಏತಕ್ಕೆ ಬಂತು ಎಂದರೆ—ಈ ದೇವನು **ವಿಶ್ವಾನ್ ನರಾನ್ ನಯತಿ**—ಸಮಸ್ತ ಜನರನ್ನೂ ಸನ್ಮಾರ್ಗದಲ್ಲಿ ಒಯ್ಯುತ್ತಾನೆ ಎಂದರೆ ಸಮಸ್ತ ಜನರಿಗೂ ಸನ್ಮಾರ್ಗಪ್ರವರ್ತಕನು. ಆದ್ದರಿಂದ ಈ ದೇವನಿಗೆ ವೈಶ್ವಾನರನೆಂದು ಹೆಸರು. ಅಥವಾ—**ವಿಶ್ವಂ ಏನಂ ನರಾ ನಯಂತೀತಿ ವಾ**—ಅಥವಾ ಸರ್ವರೂ ಈ ದೇವನನ್ನು ತಾವು ಮಾಡುವ ಯಜ್ಞಾದಿಗಳಲ್ಲಿ ಉತ್ತರವೇದಿಗೆ ಒಯ್ಯುವರು ಎಂದರೆ ಯಜ್ಞಗಳಲ್ಲಿ ಅಗ್ನಿಪ್ರಣಯನವೆಂಬ ಕಾರ್ಯವನ್ನು ಮಾಡುವಾಗ ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದ ಸ್ಥಾನದಿಂದ ವಿಧ್ಯುಕ್ತವಾಗಿ ಉತ್ತರವೇದಿಯ ಬಳಿಗೆ ತೆಗೆದುಕೊಂಡುಹೋಗಿ ಅಲ್ಲಿ ಸ್ಥಾಪಿಸುವರು ಅಥವಾ ಸರ್ವರೂ ತಮ್ಮತಮ್ಮ ಗೃಹಗಳಲ್ಲಿ ಅಗ್ನಿಯನ್ನು ತೆಗೆದುಕೊಂಡುಹೋಗಿ ಪಚನಕಾರ್ಯಕ್ಕಾಗಿ ಮಹಾನಸ ಮೊದಲಾದ ಸ್ಥಳಗಳಲ್ಲಿ ಸ್ಥಾಪಿಸುವರು. ಆದುದರಿಂದ ಈ ಅಗ್ನಿಗೆ ವೈಶ್ವಾನರನೆಂದು ಹೆಸರು ಅಥವಾ ವಿಶ್ವಾನರನೇ ವೈಶ್ವಾನರನು. ಈ ವಿಶ್ವಾನರನು ಸಮಸ್ತ ಪ್ರಾಣಿಗಳ ಶರೀರದಲ್ಲಿ ವ್ಯಾಪಿಸಿ ಜಾಠರಾಗ್ನಿರೂಪದಿಂದ ಇದ್ದು ಪ್ರಾಣಿಗಳು ಭುಜಿಸುವ ಆಹಾರಾದಿಗಳನ್ನು ಪಚನಮಾಡುವನು. ಆದುದರಿಂದ ಸರ್ವಪ್ರಾಣಿಗಳ ಶರೀರದಲ್ಲಿರುವ ವಿಶ್ವಾನರನೇ ವೈಶ್ವಾನರಾಗ್ನಿಯು.

**ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿಕಂ ಭುವನಾನಾಮಭಿ ಶ್ರೀಃ ।**
**ಇತೋ ಜಾತೋ ವಿಶ್ವಮಿದಂ ವಿಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥**

(ಋ. ಸಂ. ೧-೯೮-೧)

ಎಂಬ ಈ ಋಕ್ಕು ವೈಶ್ವಾನರಾಗ್ನಿಯನ್ನು ಸ್ತುತಿಸುವುದು. ನಾವು ವೈಶ್ವಾನರಾಗ್ನಿಯ ಅನುಗ್ರಹಾತ್ಮಕವಾದ ಬುದ್ಧಿಗೆ ಪಾತ್ರರಾಗೋಣ. ಏಕೆಂದರೆ ಈ ವೈಶ್ವಾನರಾಗ್ನಿಯು ರಾಜನು. ರಾಜನು ಸಕಲ ಲೋಕಗಳಿಗೂ ಆಶ್ರಯಭೂತನು. ಈ ಪ್ರಪಂಚದಲ್ಲಿ ಉತ್ಪನ್ನನಾಗಿ ಸಮಸ್ತ ವಿಶ್ವವನ್ನೂ ವೀಕ್ಷಿಸುತ್ತಿರುವನು. ಸೂರ್ಯನಿಂದ ಸಹಿತವಾಗಿ ಎಲ್ಲವನ್ನೂ ವ್ಯಾಪಿಸಿರುವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

## ವೈಶ್ವನರಾಗ್ನಿಯು ಯಾರು ? ಇವನು ಮಧ್ಯಮಸ್ಥಾನ ದೇವತೆಯೋ ?

**ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣಾಂ ಮತೌ ಸ್ಯಾಮೇತಿ । ತತ್ಕೋ ವೈಶ್ವಾನರಃ । ಮಧ್ಯಮ ಇತ್ಯಾಚಾರ್ಯಾಃ ॥**

(ನಿ. ೭-೨೨)

ಎಂದು ಈ ಋಕ್ಕಿನ ನಿರ್ವಚನವು. ಈ ವೈಶ್ವಾನರಾಗ್ನಿಯು ಈ ಲೋಕದಲ್ಲಿಯೇ ಜನಿಸಿ ವಿಶ್ವವೆಲ್ಲವನ್ನೂ ನೋಡಲು ಸಮರ್ಥನಾಗಿರುವನು. ಸೂರ್ಯನಿಂದ ಸಹಿತನಾಗಿ ವಿಶ್ವವೆಲ್ಲವನ್ನೂ ವ್ಯಾಪಿಸಿರುವನು. ಇಂತಹ ವೈಶ್ವಾನರಾಗ್ನಿಯ ಉತ್ತಮವಾದ ಬುದ್ಧಿ ಎಂದರೆ ಅನುಗ್ರಹಕ್ಕೆ ಪಾತ್ರರಾಗೋಣ. ಇವನೇ ರಾಜನು ಮತ್ತು ಸೃಷ್ಟಿಸಲ್ಪಟ್ಟ ಸಮಸ್ತ ಪ್ರಾಣಿವರ್ಗಗಳಿಗೂ ಆಶ್ರಯಭೂತನು. ಆದರೆ ಈ ವೈಶ್ವಾನರನು ಯಾರು ? ಇವನ ಸ್ವರೂಪವೇನು ? ಎಂದರೆ ಕೆಲವು ಆಚಾರ್ಯರು ಈ ವೈಶ್ವಾನರನು ಮಧ್ಯಮಸ್ಥಾನದಲ್ಲಿ (ಅಂತರಿಕ್ಷದಲ್ಲಿ) ನೆಲಸಿರುವ ದೇವತೆಯೆಂದು ಹೇಳುವರು.

## English Translation

Agni whom the gods, generated, in whom all beings have offered oblations—he, the straight-going, has warmed by his radiance, by his might, the earth and this heaven.

॥ಸಂಹಿತಾಪಾಠಃ॥

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ।
ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ॥

ಪದಪಾಠಃ ॥

ಸ್ತೋಮೇನ । ಹಿ । ದಿವಿ । ದೇವಾಸಃ । ಅಗ್ನಿಂ । ಅಜೀಜನನ್ । ಶಕ್ತಿಽಭಿಃ । ರೋದಸಿಽಪ್ರಾಂ ।
ತಂ । ಊಂ ಇತಿ । ಅಕೃಣ್ವನ್ । ತ್ರೇಧಾ । ಭುವೇ । ಕಂ । ಸಃ । ಓಷಧೀಃ । ಪಚತಿ । ವಿಶ್ವಽರೂಪಾಃ ॥

॥ ಸಾಯಣಭಾಷ್ಯಂ ॥

ದೇವಾಸೋ ದೇವಾಃ ಶಕ್ತಿಭಿಃ ಕರ್ಮಭೀ ರೋದಸಿಪ್ರಾಂ ದ್ಯಾವಾಪೃಥಿವ್ಯೋರಾಪೂರಯಿತಾರಮಗ್ನಿಂ ಸೂರ್ಯಾತ್ಮಕಂ ದಿವಿ ದ್ಯುಲೋಕೇ ಸ್ತೋಮೇನ ಹಿ ಸ್ತುತ್ಯಾ ಖಲ್ವಜೀಜನನ್ । ಉತ್ಪಾದಿತವಂತಃ । ಅಪಿ ಚ ತಮು ತಮೇವ ಕಂ ಸುಖಕರಮಗ್ನಿಂ ಯಜ್ಞೇ ತ್ರೇಧಾ ಭುವೇ ತ್ರೇಧಾಭಾವಾಯಾಕೃಣ್ವನ್ । ಕುರ್ವಂತಿ । ಪೃಥಿವ್ಯಾಂ ವರ್ತಮಾನೋ ವಿಶ್ವರೂಪಾಃ ಸರ್ವರೂಪಾ ಓಷಧೀರ್ವ್ರೀಹ್ಯಾದ್ಯಾಸ್ತೇನ ತೇನೋಪಕಾರೇಣ ಪಚತಿ । ಅತ್ರ ಯಾಸ್ಕಃ । ಸ್ತೋಮೇನ ಯಂ ಹಿ ದಿವಿ ದೇವಾಸೋಽಗ್ನಿಮಜನಯಞ್ಛಕ್ತಿಭಿಃ ಕರ್ಮಭಿರ್ದ್ಯಾವಾಪೃಥಿವ್ಯೋಃ ಪೂರಣಂ ತಮಕುರ್ವಂಸ್ತ್ರೇಧಾ. ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಯದಸ್ಯ ದಿವಿ ತೃತೀಯಂ ತದಸಾವಾದಿತ್ಯ ಇತಿ ಹಿ ಬ್ರಾಹ್ಮಣಂ । ನಿ. ೭-೨೮ । ಇತಿ ॥

॥ಪ್ರತಿಪದಾರ್ಥ॥

**ದೇವಾಸಃ**—ದೇವತೆಗಳು । **ಶಕ್ತಿಭಿಃ**—ತಮ್ಮ ಮಹತ್ಕರ್ಮಗಳಿಂದ । **ರೋದಸಿಪ್ರಾಂ**—ದ್ಯಾವಾಪೃಥಿವಿಗಳನ್ನು ಪೂರ್ಣಮಾಡುವ । **ಅಗ್ನಿಂ**—ಸೂರ್ಯರೂಪನಾದ ಅಗ್ನಿಯನ್ನು । **ದಿವಿ**—ದ್ಯುಲೋಕದಲ್ಲಿ। **ಸ್ತೋಮೇನ**—ಸ್ತುತಿಪೂರ್ವಕವಾಗಿ । **ಅಜೀಜನನ್**—ಉತ್ಪನ್ನಮಾಡಿದರು । **ಕಂ ತಮು**—ಸುಖಕಾರಕನಾದ ಅದೇ ಅಗ್ನಿಯನ್ನು। **ತ್ರೇಧಾ ಭುವೇ**—ಮೂರುಲೋಕಗಳಲ್ಲಿಯೂ ಮೂರುರೂಪದಲ್ಲಿ ಪ್ರಕಾಶಿತನಾಗುವಂತೆ । **ಅಕೃಣ್ವನ್**—ಮಾಡಿದ್ದಾರೆ ! **ಸಃ**—ಅದೇ ಅಗ್ನಿಯು । **ವಿಶ್ವರೂಪಾಃ**—ಅನೇಕರೂಪಗಳುಳ್ಳ । **ಓಷಧೀಃ**—ಓಷಧಿಗಳ್ನು । **ಪಚತಿ**—ಪಕ್ವಮಾಡುತ್ತಾನೆ.

॥ ಭಾವಾರ್ಥ ॥

ದೇವತೆಗಳು ತಮ್ಮ ಮಹತ್ಕರ್ಮಗಳಿಂದ ದ್ಯಾವಾಪೃಥಿವಿಗಳನ್ನೆಲ್ಲ ಪೂರ್ಣಮಾಡುವ ಸೂರ್ಯರೂಪನಾದ ಅಗ್ನಿಯನ್ನು ದ್ಯುಲೋಕದಲ್ಲಿ ಸ್ತುತಿಪೂರ್ವಕವಾಗಿ ಉತ್ಪನ್ನಮಾಡಿದರು. ಸುಖಕಾರಕನಾದ ಅದೇ ಅಗ್ನಿಯನ್ನು ಮೂರು ಲೋಕಗಳಲ್ಲಿಯೂ ಮೂರು ರೂಪದಲ್ಲಿ ಪ್ರಕಾಶಿತನಾಗುವಂತೆ ಮಾಡಿದ್ದಾರೆ. ಅದೇ ಅಗ್ನಿಯು ಪೃಥ್ವಿಯಲ್ಲಿ ಅನೇಕ ರೂಪಗಳುಳ್ಳ ಓಷಧಿಗಳನ್ನು ಪಕ್ವಮಾಡುತ್ತಾನೆ.

English Translation

The gods have by praise engendered Agni in the sky, who fills heven and earth by his functions, they appointed the joy-bestowing Agni to his three-fold condition, he brings the manifold plants to maturity.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಬರೆದಿರುವ ನಿರ್ವಚನದ ವಿವರಣೆಯನ್ನು ಈ ಸೂಕ್ತದ ಪೀಠಿಕೆಯಲ್ಲಿ (pages 538–539) ಬರೆದಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ।
ಯದಾ ಚರಿಷ್ಣೂ ಮಿಥುನಾವಭೂತಾಮಾದಿತ್ಪ್ರಾಪಶ್ಯನ್ಭುವನಾನಿ ವಿಶ್ವಾ ॥

॥ ಪದಪಾಠಃ ॥

ಯದಾ । ಇತ್ । ಏನಂ । ಅದಧುಃ । ಯಜ್ಞಿಯಾಸಃ । ದಿವಿ । ದೇವಾಃ । ಸೂರ್ಯಂ । ಆದಿತ್ತೇಯಂ ।
ಯದಾ । ಚರಿಷ್ಣೂ ಇತಿ । ಮಿಥುನೌ । ಅಭೂತಾಂ । ಆತ್ । ಇತ್ । ಪ್ರ । ಅಪಶ್ಯನ್ । ಭುವನಾನಿ ।
ವಿಶ್ವಾ ॥ ೧೧ ॥

॥ ಸಾಯಣಭಾಷ್ಯಂ ॥

ಯದೇದ್ಯದೈವ ಪ್ರಾತರಾದಿತೇಯಮದಿತೇಃ ಪುತ್ರಂ ಸೂರ್ಯಮೇನಮಗ್ನಿಂ ಚ ಯಜ್ಞಿಯಾಸೋ ಯಜ್ಞಾರ್ಹಾ ದೇವಾ ದಿವಿ ದ್ಯುಲೋಕೇಽದಧುಃ ಧೃತವಂತಃ । ಯದಾ ಚೇಮೌ ಚರಿಷ್ಣೂ ಚರಣಶೀಲೌ ಸೂರ್ಯವೈಶ್ವಾನರೌ ಮಿಥುನಾವಭೂತಾಂ ಪ್ರಾದುರಭೂತಾಂ । ಆದಿದನಂತರಮೇವ ವಿಶ್ವಾ ವಿಶ್ವಾನಿ ಭುವನಾನಿ ಭೂತಜಾತಾನಿ ಪ್ರಾಪಶ್ಯನ್ । ತೌ ಪಶ್ಯಂತಿ ॥ ಅತ್ರ ಯಾಸ್ಕಃ । ಯದೈನಮದಧುರ್ಯಜ್ಞಿಯಾಃ ಸರ್ವೇ ದಿವಿ ದೇವಾಃ ಸೂರ್ಯಮದಿತೇಃ ಪುತ್ರಂ ಯದಾ ಚರಿಷ್ಣೂ

ಮಿಥುನೌ ಪ್ರಾದುರಭೂತಾಂ ಸರ್ವದಾ ಸಹಚಾರಿಣಾವುಷಾಶ್ಚಾದಿತ್ಯಶ್ಚ । ಮಿಥುನೌ ಕಸ್ಮಾನ್ಮಿನೋತಿಃ ಶ್ರಯತಿಕರ್ಮಾ ಥು ಇತಿ ನಾಮಕರಣಸ್ಥಕಾರೋ ವಾ ನಯತಿಃ ಪರೋ ವನಿರ್ವಾ ಸಮಾಶ್ರಿತಾವನ್ಯೋನ್ಯಂ ನಯುತೋ ವಸುತೋ ವಾ । ಮನುಷ್ಯಮಿಥುನಾವಪ್ಯೇತಸ್ಮಾದೇವ ಮೇಥಂತಾವನ್ಯೋನ್ಯಂ ವಸುತ ಇತಿ ವಾ । ನಿ. ೭-೨೯ । ಇತಿ ॥

॥ ಪ್ರತಿಪದಾರ್ಥ ॥

**ಯದೇತ್**—ಯಾವಾಗ । **ಆದಿತೇಯಂ**—ಅದಿತಿಪುತ್ರನಾದ । **ಸೂರ್ಯಂ**—ಸೂರ್ಯನನ್ನೂ । **ಏನಂ**—ಅಗ್ನಿಯನ್ನೂ । **ಯಜ್ಞಿಯಾಸಃ**—ಯಜ್ಞಾರ್ಹರಾದ । **ದೇವಾಃ**—ದೇವತೆಗಳು । **ದಿವಿ**—ದ್ಯುಲೋಕದಲ್ಲಿ । **ಅದಧುಃ**—ಸ್ಥಾಪಿಸಿದರೋ । (ಮತ್ತು) **ಯದಾ**—ಯಾವಾಗ । **ಚರಿಷ್ಣೂ**—ಸಂಚಾರಶೀಲರಾದ ಈ ಸೂರ್ಯ ಮತ್ತು ವೈಶ್ವಾನರಾಗ್ನಿಗಳು । **ಮಿಥುನಾ**—ಒಂದಾಗಿ ಸೇರಿದರೋ । **ಆದಿತ್**—ಆ ಒಡನೆಯೇ । **ವಿಶ್ವಾ ಭುವನಾನಿ**—ಸಕಲ ಲೋಕಗಳೂ । **ಪ್ರಾಪಶ್ಯನ್**—ಇವರಿಬ್ಬರನ್ನೂ ನೋಡಿದವು

॥ ಭಾವಾರ್ಥ ॥

ಅದಿತಿಪುತ್ರನಾದ ಸೂರ್ಯನನ್ನೂ, ಅಗ್ನಿಯನ್ನೂ ಯಜ್ಞಾರ್ಹರಾದ ದೇವತೆಗಳು ಯಾವಾಗ ದ್ಯುಲೋಕದಲ್ಲಿ ಸ್ಥಾಪಿಸಿದರೋ, ಯಾವಾಗ ಸಂಚಾರಶೀಲರಾದ ಈ ಸೂರ್ಯಾಗ್ನಿಗಳು ಒಂದಾಗಿ ಸೇರಿದರೋ ಆ ಒಡನೆಯೇ, ಸಕಲ ಲೋಕಗಳೂ ಇವರಿಬ್ಬರನ್ನೂ ನೋಡಿದವು.

English Translation

When the adorable gods placed him and Surya, the son of Aditi, in heaven ; when the swift-moving pair (Agni and Vishwanar) appeared, then all beings beheld them,

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಬರೆದಿರುವ ನಿರ್ವಚನದ ವಿವರಣೆಯನ್ನು ಈ ಸೂಕ್ತದ ಪೀಠಿಕೆಯಲ್ಲಿ (pages 539-540) ಬರೆದಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ।
ಆ ಯಸ್ತತಾನೋಷಸೋ ವಿಭಾತೀರಪೋ ಊರ್ಣೋತಿ ತಮೋ ಅರ್ಚಿಷಾಯನ್ ॥ ೧೨ ॥

॥ ಪದಪಾಠಃ ॥

ವಿಶ್ವಸ್ಮೈ । ಅಗ್ನಿಂ । ಭುವನಾಯ । ದೇವಾಃ । ವೈಶ್ವಾನರಂ । ಕೇತುಂ । ಅಹ್ನಾಂ । ಅಕೃಣ್ವನ್ ।
ಆ । ಯಃ । ತತಾನ । ಉಷಸಃ । ವಿಽಭಾತೀಃ । ಅಪೋ ಇತಿ । ಊರ್ಣೋತಿ । ತಮಃ । ಅರ್ಚಿಷಾ । ಯನ್ ॥ ೧೨ ॥

॥ ಸಾಯಣಭಾಷ್ಯಂ ॥

ದೇವಾ ಇಂದ್ರಾದಯೋ ವಿಶ್ವಸ್ಮೈ ಭುವನಾಯ ವೈಶ್ವಾನರಂ ವಿಶ್ವನರಹಿತಮಗ್ನಿಮಹ್ನಾಂ ದಿವಸಾನಾಂ ಕೇತುಂ ಪ್ರಜ್ಞಾಪಕಮಕೃಣ್ವನ್ । ಅಕುರ್ವನ್ । ಯೋ ವೈಶ್ವಾನರೋಽಗ್ನಿರುಷಸೋ ವಿಭಾತೀರ್ವಿವಿಧಂ ದೀಪ್ಯಮಾನಾ ಆ ತತಾನ ವಿಸ್ತಾರಯತಿ। ಕಿಂಚ ಸೋಽಯಂ ಯನ್ಗಚ್ಛಂಸ್ತಮೋಽಂಧಕಾರಮರ್ಚಿಷಾ ತೇಜಸಾಪ್ರೋ ಊರ್ಣೋತಿ । ಅಪಗಮಯತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ವೈಶ್ವಾನರಾಗ್ನಿಯು । ವಿಭಾತೀಃ—ಪ್ರಕಾಶಮಾನಗಳಾದ । ಉಷಸಃ—ಉಷಸ್ಸುಗಳನ್ನು । ಆ ತತಾನ—ವಿಸ್ತರಿಸುವಂತೆ ಮಾಡುವನೋ ಅಂತಹ । ವೈಶ್ವಾನರಂ ಅಗ್ನಿಂ—ವೈಶ್ವಾನರರೂಪಿಯಾದ ಅಗ್ನಿಯನ್ನು । ದೇವಾಃ—ಇಂದ್ರಾದಿದೇವತೆಗಳು । ವಿಶ್ವಸ್ಮೈ ಭುವನಾಯ—ಸಕಲ ಲೋಕಗಳ ಹಿತಕ್ಕಾಗಿಯೂ । ಅಹ್ನಾಂ ಕೇತುಂ—ಅಹಸ್ಸುಗಳ ಪ್ರಜ್ಞಾಪಕನನ್ನಾಗಿ । ಅಕೃಣ್ವನ್—ಮಾಡಿದರು (ಇದೇ ಅಗ್ನಿಯು) । ಯನ್—ಸರ್ವತ್ರ ಸಂಚರಿಸುತ್ತ । ತಮಃ—ಅಂಧಕಾರವನ್ನು । ಅರ್ಚಿಷಾ—ತನ್ನ ತೇಜಸ್ಸಿನಿಂದ। ಅಪ್ರೋ ಊರ್ಣೋತಿ—ನಾಶಪಡಿಸುತ್ತಾನೆ.

॥ ಭಾವಾರ್ಥ ॥

ಪ್ರಕಾಶಮಾನಗಳಾದ ಉಷಸ್ಸುಗಳನ್ನು ತನ್ನ ಕಾಂತಿಯಿಂದ ವಿಸ್ತೃತವಾಗುವಂತೆ ಮಾಡಿದ ಈ ವೈಶ್ವಾನರರೂಪಿಯಾದ ಅಗ್ನಿಯನ್ನು ಇಂದ್ರಾದಿದೇವತೆಗಳು ಸಕಲ ಲೋಕಗಳ ಹಿತಕ್ಕಾಗಿಯೂ ಸಹ ಅಹಸ್ಸುಗಳಿಗೆ ಪ್ರಜ್ಞಾಪಕನಾಗುವಂತೆ ಮಾಡಿದರು ಇದೇ ಅಗ್ನಿಯು ಸರ್ವತ್ರ ಸಂಚರಿಸುತ್ತ ತನ್ನ ತೇಜಸ್ಸಿನಿಂದ ಅಂಧಕಾರವನ್ನು ನಾಶಪಡಿಸುತ್ತಾನೆ.

English Translation

The gods made Agni Vaishwanara, the indicator of days, for the sake of the whole world, who stretched out the radiant dawns, and as he moves along scatters the darkness with his light.

॥ ಸಂಹಿತಾಪಾಠಃ ॥

ವೈಶ್ವಾನರಂ ಕವಯೋ ಯಜ್ಞಿಯಾಸೋಽಗ್ನಿಂ ದೇವಾ ಅಜನಯನ್ನಜುರ್ಯಂ ।
ನಕ್ಷತ್ರಂ ಪ್ರತ್ನಮಮಿನಚ್ಚರಿಷ್ಣು ಯಕ್ಷಸ್ಯಾಧ್ಯಕ್ಷಂ ತವಿಷಂ ಬೃಹಂತಂ ॥೧೩॥

॥ ಪದಪಾಠಃ ॥

ವೈಶ್ವಾನರಂ । ಕವಯಃ । ಯಜ್ಞಿಯಾಸಃ । ಅಗ್ನಿಂ । ದೇವಾಃ । ಅಜನಯನ್ । ಅಜುರ್ಯಂ ।
ನಕ್ಷತ್ರಂ । ಪ್ರತ್ನಂ । ಅಮಿನತ್ । ಚರಿಷ್ಣು । ಯಕ್ಷಸ್ಯ । ಅಧಿಽಅಕ್ಷಂ । ತವಿಷಂ । ಬೃಹಂತಂ ॥ ೧೩ ॥

॥ ಸಾಯಣಭಾಷ್ಯಂ ॥

ಕವಯೋ ಮೇಧಾವಿನೋ ಯಜ್ಞಿಯಾಸೋ ಯಜ್ಞಾರ್ಹಾ ಯಜ್ಞಸಂಪಾದಿನೋ ವಾ ದೇವಾ ಅಜುರ್ಯಂ ಜರಾವರ್ಜಿತಮಹಿಂಸ್ಯಂ ವಾ ವೈಶ್ವಾನರಂ ವಿಶ್ವನರಹಿತಂ ಸೂರ್ಯಾತ್ಮಕಮಗ್ನಿಮಜನಯನ್ । ಉತ್ಪಾದಿತವಂತಃ । ಸ ಚ ದೇವೈರುತ್ಪಾದಿತೋಽಗ್ನಿರ್ನಕ್ಷತ್ರಂ ಕೃತ್ತಿಕಾದಿ ಪ್ರತ್ನಂ ಪುರಾಣಂ ಚರಿಷ್ಣು ಚರಣಶೀಲಂ ಯಕ್ಷಸ್ಯ । ಯಕ್ಷತಿಃ ಪೂಜಾರ್ಥಃ । ಪ್ರಯಕ್ಷಮಿತ್ಯಾದೌ ದರ್ಶನಾತ್ । ಋ. ೨-೫-೧ । ಯಕ್ಷಸ್ಯ ಪೂಜ್ಯಸ್ಯ ದೇವಸ್ಯಾಧ್ಯಕ್ಷಂ ಪ್ರತ್ಯಕ್ಷಂ ಸ್ವಾಮಿನಂ ವಾ ತವಿಷಂ ವೃದ್ಧಂ ಬೃಹಂತಂ ಮಹಾಂತಮಮಿನತ್ । ಹಿಂಸಿತವಾನ್ । ತೇಜಸಾಭಿಭೂತವಾನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕವಯಃ**—ಮೇಧಾವಿಗಳೂ । **ಯಜ್ಞಿಯಾಸಃ**—ಯಜ್ಞಾರ್ಹರೂ ಆದ । **ದೇವಾಃ**—ದೇವತೆಗಳು । **ಅಜುರ್ಯಂ**—ಕ್ಷಯರಹಿತನೂ । **ವೈಶ್ವಾನರಂ**—ವೈಶ್ವಾನರಸಂಜ್ಞಕನೂ ಆದ । **ಅಗ್ನಿಂ**—ಅಗ್ನಿಯನ್ನು । **ಅಜನಯನ್**—ಉತ್ಪನ್ನಮಾಡಿದರು (ಇದೇ ಅಗ್ನಿಯು) । **ಪ್ರತ್ನಂ**—ಪುರಾತನವೂ । **ಚರಿಷ್ಣು**—ಸಂಚಾರಾತ್ಮಕವೂ । **ಯಕ್ಷಸ್ಯ**—ಪೂಜ್ಯವಾದ ದೇವಸಮೂಹಕ್ಕೆ । **ಅಧ್ಯಕ್ಷಂ**—ಮುಖ್ಯವೂ (ಸ್ವಾಮಿಯೂ) । **ತವಿಷಂ**—ಪ್ರವೃದ್ಧವೂ । **ಬೃಹಂತಂ**—ಮಾಹಾತ್ಮ್ಯವುಳ್ಳದ್ದೂ ಆದ । **ನಕ್ಷತ್ರಂ**—ನಕ್ಷತ್ರಸಮೂಹವನ್ನು । **ಅಭಿನತ್**—ತನ್ನ ತೇಜಸ್ಸಿನಿಂದ ಮೀರಿಸಿದನು.

॥ ಭಾವಾರ್ಥ ॥

ಮೇಧಾವಿಗಳೂ, ಯಜ್ಞಾರ್ಹರೂ ಆದ ದೇವತೆಗಳು ಕ್ಷಯರಹಿತನೂ, ವೈಶ್ವಾನರಸಂಜ್ಞಕನೂ ಆದ ಅಗ್ನಿಯನ್ನು ಉತ್ಪನ್ನಮಾಡಿದರು. ಇದೇ ಅಗ್ನಿಯು ಪುರಾತನವೂ, ಸಂಚಾರಾತ್ಮಕವೂ, ಪೂಜ್ಯವಾದ ದೇವಸಮೂಹಕ್ಕೆ ಮುಖ್ಯವೂ, ಪ್ರವೃದ್ಧವೂ, ಮಾಹಾತ್ಮ್ಯವುಳ್ಳದ್ದೂ ಆದ ನಕ್ಷತ್ರಸಮೂಹವನ್ನು ತನ್ನ ತೇಜಸ್ಸಿನಿಂದ ಮೀರಿಸಿದನು.

## English Translation

The wise and adorable gods engendered the imperishable Agni Vaishwanara ; he overcame (with his light) the ancient swift-moving Nakshatra, the overseer of the adorable (deity), mighty and great.

॥ ಸಂಹಿತಾಪಾಠಃ ॥

ವೈಶ್ವಾನರಂ ವಿಶ್ವಹಾ ದೀದಿವಾಂಸಂ ಮಂತ್ರೈರಗ್ನಿಂ ಕವಿಮಚ್ಛಾ ವದಾಮಃ ।
ಯೋ ಮಹಿಮ್ನಾ ಪರಿಬಭೂವೋರ್ವೀ ಉತಾವಸ್ತಾದುತ ದೇವಃ
ಪರಸ್ತಾತ್ ॥ ೧೪ ॥

॥ ಪದಪಾಠಃ ॥

ವೈಶ್ವಾನರಂ । ವಿಶ್ವಹಾ । ದೀದಿऽವಾಂಸಂ । ಮಂತ್ರೈಃ । ಅಗ್ನಿಂ । ಕವಿಂ । ಅಚ್ಛ । ವದಾಮಃ ।
ಯಃ । ಮಹಿಮ್ನಾ । ಪರಿऽಬಭೂವ । ಉರ್ವೀ ಇತಿ । ಉತ । ಅವಸ್ತಾತ್ । ಉತ । ದೇವಃ । ಪರಸ್ತಾತ್ ॥

॥ ಸಾಯಣಭಾಷ್ಯಂ ॥

ವಿಶ್ವಹಾ ಸರ್ವದಾ ದೀದಿವಾಂಸಂ ದೀಪ್ತಂ ಕವಿಂ ಕ್ರಾಂತಪ್ರಜ್ಞಂ ವೈಶ್ವಾನರಮಗ್ನಿಂ ಮಂತ್ರೈರಚ್ಛಾ ವದಾಮಃ । ಅಭಿಷ್ಟುಮಃ। ಯೋ ವೈಶ್ವಾನರೋಽಗ್ನಿರ್ಮಹಿಮ್ನಾ ಮಹತ್ತ್ವೇನೋರ್ವೀ ದ್ಯಾವಾಪೃಥಿವ್ಯೌ ಪರಿಬಭೂವ ಪರಿಭವತಿ । ಉತಾಪಿ ಚಾಯಮವಸ್ತಾದಧಸ್ತಾತ್ತಪತಿ । ಉತಾಪಿ ಚಾಯಂ ಸೂರ್ಯಾತ್ಮಕೋ ದೇವಃ ಪರಸ್ತಾದುಪರಿಷ್ಟಾಚ್ಚ ತಪತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ವೈಶ್ವಾನರಾಗ್ನಿಯು । **ಮಹಿಮ್ನಾ**—ತನ್ನ ಮಹತ್ತ್ವದಿಂದ । **ಉರ್ವೀ**—ವಿಸ್ತೃತವಾದ ದ್ಯಾವಾಪೃಥಿವಿಗಳನ್ನು । **ಪರಿ ಬಭೂವ**—ಮೀರಿಸುವನೋ । **ಉತ**—ಮತ್ತು । **ದೇವಃ**—ದೇವತಾತ್ಮನಾದ ಈ ಅಗ್ನಿಯು । **ಅಧಸ್ತಾತ್**—ಅಗ್ನಿರೂಪದಲ್ಲಿ ಪೃಥ್ವಿಯಲ್ಲಿಯೂ । **ಉತ**—ಮತ್ತು । **ಪರಸ್ತಾತ್**—ಸೂರ್ಯ ರೂಪದಲ್ಲಿ ಅಂತರಿಕ್ಷದಲ್ಲಿಯೂ ಜ್ವಾಲೆಯನ್ನು ಪ್ರಸರಿಸುವನೋ ಅಂತಹ । **ದೀದಿವಾಂಸಂ**—ಪ್ರಕಾಶಮಾನನೂ । **ಕವಿಂ**—ಮೇಧಾವಿಯೂ ಆದ । **ವೈಶ್ವಾನರಂ ಅಗ್ನಿಂ**—ವೈಶ್ವಾನರಾಗ್ನಿಯನ್ನು । **ಮಂತ್ರೈಃ**—ಸ್ತುತಿಗಳಿಂದ। **ವಿಶ್ವಹಾ**—ಯಾವಾಗಲೂ । **ಅಚ್ಛಾ**—ಪೂರ್ಣವಾಗಿ । **ವದಾಮಃ**—ಪ್ರಶಂಸಿಸುತ್ತೇವೆ.

॥ ಭಾವಾರ್ಥ ॥

ಯಾವ ವೈಶ್ವಾನರಾಗ್ನಿಯು ತನ್ನ ಮಹತ್ತ್ವದಿಂದ ವಿಸ್ತೃತವಾದ ದ್ಯಾವಾಪೃಥಿವಿಗಳನ್ನು ಮೀರಿಸುವನೋ ಮತ್ತು ದೇವತಾತ್ಮನಾಗಿ ಪೃಥ್ವಿಯಲ್ಲಿಯೂ, ಅಂತರಿಕ್ಷದಲ್ಲಿಯೂ ತನ್ನ ಜ್ವಾಲೆಯನ್ನು ಪ್ರಸರಿಸುವನೋ ಅಂತಹ ಪ್ರಕಾಶಮಾನನೂ, ಮೇಧಾವಿಯೂ ಆದ ವೈಶ್ವಾನರಾಗ್ನಿಯನ್ನು ಯಾವಾಗಲೂ ಸ್ತುತಿಗಳಿಂದ ಪೂರ್ಣವಾಗಿ ಪ್ರಶಂಸಿಸುತ್ತೇವೆ.

English Translation

We glorify daily with praises the brilliant and sage Agni Vaishwanara, the god who overcomes by his might both heaven and earth, (burning) both below and above.

॥ ಸಂಹಿತಾಪಾಠಃ ॥

ದ್ವೇ ಸ್ರುತೀ ಅಶೃಣವಂ ಪಿತೃ್ಣಾಮಹಂ ದೇವಾನಾಮುತ ಮರ್ತ್ಯಾನಾಂ ।
ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ॥

॥ ಪದಪಾಠಃ ॥

ದ್ವೇ ಇತಿ । ಸ್ರುತೀ ಇತಿ । ಅಶೃಣವಂ । ಪಿತೃ್ಣಾಂ । ಅಹಂ । ದೇವಾನಾಂ । ಉತ । ಮರ್ತ್ಯಾನಾಂ ।
ತಾಭ್ಯಾಂ । ಇದಂ । ವಿಶ್ವಂ । ಏಜತ್ । ಸಂ । ಏತಿ । ಯತ್ । ಅಂತರಾ । ಪಿತರಂ । ಮಾತರಂ । ಚ ॥

॥ ಸಾಯಣಭಾಷ್ಯಂ ॥

ಪಿತೃ್ಣಾಂ ದೇವಾನಾಂ ಚೋತಾಪಿ ಮರ್ತ್ಯಾನಾಂ ಮನುಷ್ಯಾಣಾಂ ಚ ದ್ವೇ ಸ್ರುತೀ ದ್ವೌ ಮಾರ್ಗೌ ದೇವಯಾನಪಿತೃಯಾಣಾಖ್ಯಾವಹಮಶೃಣವಂ । ಅಶ್ರೌಷಂ । ಯದ್ವಿಶ್ವಂ ಪಿತರಂ ಪಾಲಕತ್ವೇನ ಪಿತೃಭೂತಾಂ ದ್ಯಾಂ ಮಾತರಂ ಚ ಧಾರಕತ್ವೇನ ಮಾತೃಭೂತಾಂ ಪೃಥಿವೀಂ ಚಾಂತರಾ ದ್ಯಾವಾ-ಪೃಥಿವೀಮಧ್ಯೇ ಭವತಿ ತದಿದಂ ವಿಶ್ವಮಗ್ನಿನಾ ಸಂಸ್ಕೃತಂ ಸದೇಜದ್ದೇವಲೋಕಂ ಪಿತೃಲೋಕಂ ಚ ಗಚ್ಛತ್ ತಾಭ್ಯಾಂ ದೇವಯಾನಪಿತೃಯಾಣಾಖ್ಯಾಭ್ಯಾಂ ಮಾರ್ಗಾಭ್ಯಾಂ ಸಮೇತಿ । ಗಚ್ಛತಿ । ತೌ ಚ ಮಾರ್ಗೌ ಭಗವತಾ ದರ್ಶಿತೌ ॥ ಭ. ಗೀ. ೮-೨೪, ೨೫, ೨೬ ॥

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥
ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಮನ್ಯಯಾ ವರ್ತತೇ ಪುನಃ ॥
ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನೇತಿ ॥

॥ ಪ್ರತಿಪದಾರ್ಥ ॥

ಪಿತೃ್ಣಾಂ—ಪಿತೃಗಳಿಗೂ । ದೇವಾನಾಂ—ದೇವತೆಗಳಿಗೂ । ಉತ—ಮತ್ತು । ಮರ್ತ್ಯಾನಾಂ—ಮಾನವರಿಗೂ । ದ್ವೇ ಸ್ರುತೀ—ದೇವಯಾನ ಮತ್ತು ಪಿತೃಯಾಣಗಳೆಂಬ ಎರಡು ಮಾರ್ಗಗಳಿವೆಯೆಂದು । ಅಹಂ–

ನಾನು । **ಅಶೃಣವಂ**—ಕೇಳಿದ್ದೇನೆ । **ಪಿತರಂ**—ದ್ಯುಲೋಕಕ್ಕೂ । **ಮಾತರಂ ಚ**—ಪೃಥ್ವೀಲೋಕಕ್ಕೂ । **ಅಂತರಾ**—ನಡುವೆ ಇರುವ । **ಯತ್ ಇದಂ ವಿಶ್ವಂ**—ಯಾವ ಈ ಸಕಲ ವಿಶ್ವವಿದೆಯೋ ಅದು । **ಏಜತ್**—ಸಂಚರಿಸುತ್ತ । **ತಾಭ್ಯಾಂ**—ಈ ಎರಡು ಮಾರ್ಗಗಳ ನಡುವೆ ಮಾತ್ರ । **ಸಂ ಏತಿ**—ಸಂಚರಿಸುತ್ತದೆ.

॥ ಭಾವಾರ್ಥ ॥

ಪಿತೃಗಳಿಗೂ, ದೇವತೆಗಳಿಗೂ ಮತ್ತು ಮಾನವರಿಗೂ ಸಹ ದೇವಯಾನ ಮತ್ತು ಪಿತೃಯಾಣಗಳೆಂಬ ಎರಡು ಮಾರ್ಗಗಳಿವೆಯೆಂದು ನಾನು ಕೇಳಿದ್ದೇನೆ. ದ್ಯುಲೋಕಕ್ಕೂ ಪೃಥ್ವೀಲೋಕಕ್ಕೂ ನಡುವೆ ಇರುವ ಯಾವ ಈ ಸಕಲ ವಿಶ್ವವಿದೆಯೋ, ಅದು ಚಲಿಸುತ್ತ ಈ ಎರಡು ಮಾರ್ಗಗಳಲ್ಲಿ ಮಾತ್ರ ಸಂಚರಿಸುತ್ತದೆ.

## English Translation

I have heard that there are two paths for Pitris, gods and mortals ; all this universe which is between the paternal (heaven) and the maternal (earth) proceeds on its way by these two (paths).

॥ ವಿಶೇಷವಿಷಯಗಳು ॥

ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಿಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸುವ ಮಾರ್ಗವೆಂದೇ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕವಾದ ತಾತ್ಪರ್ಯವೂ ಸೂಚಿತವಾಗಿದೆ.

ಉಪನಿಷತ್ತುಗಳಲ್ಲಿ **ದೇವಯಾನ** ಮತ್ತು **ಪಿತೃಯಾನ** ಎಂಬ ಪದಗಳಿಂದ ಪುರುಷನ ಮರಣಾನಂತರ ಅವನ ದೇಹವು ಭಸ್ಮವಾಗಿ ನಿತ್ಯನಾಗಿರುವ ಆತ್ಮನು ಸಂಚರಿಸತಕ್ಕ ಮಾರ್ಗಗಳೆರಡು ಎಂದು ಪ್ರಸಿದ್ಧವಾಗಿದೆ. ಸತ್ಕರ್ಮಕ್ಕೆ ಫಲವನ್ನನುಭವಿಸಲು ಹೋಗತಕ್ಕ ಮಾರ್ಗಗಳಲ್ಲಿ ಒಂದು **ದೇವಯಾನ** ಇನ್ನೊಂದು ಪಿತೃಯಾನ. ಒಂದು ದೇವತೆಗಳ ಮಾರ್ಗ ; ಮತ್ತೊಂದು ಪಿತೃಗಳ ಮಾರ್ಗ. **ಪಂಚಾಗ್ನಿವಿದ್ಯೆಯನ್ನ**ರಿತು ಸತ್ಯದಲ್ಲೇ ಶ್ರದ್ಧೆಯನ್ನಿಟ್ಟಿರುವವರು ದೇವಮಾರ್ಗದಲ್ಲಿ ಹೊರಟು ಪರಬ್ರಹ್ಮನನ್ನು ಸೇರುತ್ತಾರೆ. ಇವರ ಮರಣಾನಂತರ ಆತ್ಮನು ಜ್ವಾಲೆಯನ್ನು ಪ್ರವೇಶಿಸಿ ತನ್ಮೂಲಕ ಅಹಸ್ಸನ್ನೂ, ಶುಕ್ಲಪಕ್ಷವನ್ನೂ, ಉತ್ತರಾಯಣವನ್ನೂ, ಸಂವತ್ಸರವನ್ನೂ, ಆದಿತ್ಯನನ್ನೂ, ವಿದ್ಯುತ್ತನ್ನೂ ಪ್ರವೇಶಿಸಿ ತನ್ಮೂಲಕ ಅಮಾನವನಾದ ಪುರುಷನ ಸಹಾಯದಿಂದ ಪರಬ್ರಹ್ಮನನ್ನು ಪಡೆಯುತ್ತಾನೆ ಎಂಬ ವಿಷಯವನ್ನು ಉಪನಿಷತ್ತುಗಳಲ್ಲಿ ಈರೀತಿ ವರ್ಣಿಸಿದೆ—

> **ತೇ ಯ ಏವಮೇತದ್ವಿದುರ್ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿರಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ಷಣ್ಮಾಸಾನುದಙ್ಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಮಾದಿತ್ಯಾದ್ವೈದ್ಯುತಂ ತಾನ್ವೈದ್ಯುತಾನ್ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ಗಮಯತಿ**

**ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸಂತಿ ತೇಷಾಂ ನ ಪುನರಾವೃತ್ತಿಃ ॥**

(ಬೃ. ಉ. ೨-೬-೧೫)

ಈ ವಿಧವಾಗಿ ಬ್ರಹ್ಮಲೋಕವನ್ನು ಸೇರಿದವರಿಗೆ ಪುನರಾವೃತ್ತಿಯಿರುವುದಿಲ್ಲವೆಂದು ತಿಳಿಸಿ ಅನಂತರ ಪಿತೃಯಾನದ ಸ್ವರೂಪವನ್ನೂ ಆ ಮಾರ್ಗದ ಕ್ರಮವನ್ನೂ ವರ್ಣಿಸಿದೆ.

> **ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯಂತಿ ತೇ ಧೂಮಮಭಿಸಂಭವಂತಿ ಧೂಮಾದ್ರಾತ್ರಿಂ ರಾತ್ರೇರಪಕ್ಷೀಯಮಾಣಪಕ್ಷಮಪಕ್ಷೀಯಮಾಣಪಕ್ಷಾದ್ಯಾನ್ಷಣ್ಮಾಸಾನ್ದಕ್ಷಿಣಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾಚ್ಚಂದ್ರಂ ತೇ ಚಂದ್ರಂ ಪ್ರಾಪ್ಯಾನ್ನಂ ಭವಂತಿ ತಾಂಸ್ತತ್ರ ದೇವಾ ಯಥಾ ಸೋಮಂ ರಾಜಾನಮಾಪ್ಯಾಯ............ತೇ ಪೃಥಿವೀಂ ಪ್ರಾಪ್ಯಾನ್ನಂ ಭವಂತಿ ತೇ ಪುನಃ ಪುರುಷಾಗ್ನೌ ಹೂಯಂತೇ..................ಏವಮೇವಾನುಪರಿವರ್ತಂತೇ ॥**

(ಬೃ. ಉ. ೬-೨-೧೬)

ಯಾರು ಕೇವಲ ಯಜ್ಞದಿಂದಲೂ, ದಾನಾದಿಗಳಿಂದಲೂ ಲೋಕವನ್ನು ತೃಪ್ತಿಗೊಳಿಸುತ್ತಾರೆಯೋ ಎಂದರೆ ಪಂಚಾಗ್ನಿ ವಿದ್ಯೆಯನ್ನರಿಯದೇ ಕೇವಲ ಸತ್ಕರ್ಮನಿರತರಾಗಿರುವರೋ ಅಂತಹವರು ಮರಣಾನಂತರ ಬೇರೆ ಮಾರ್ಗದಲ್ಲಿ ಸಂಚರಿಸುತ್ತಾರೆ. ದೇಹವು ದಗ್ಧವಾದನಂತರ ಆತ್ಮವು ಧೂಮದೊಂದಿಗೆ ಸೇರಿ ಅನಂತರ ರಾತ್ರಿಯನ್ನೂ, ತನ್ಮೂಲಕ ಕೃಷ್ಣಪಕ್ಷವನ್ನೂ, ತದ್ದ್ವಾರಾ ದಕ್ಷಿಣಾಯನವನ್ನೂ, ಅನಂತರ ಪಿತೃಲೋಕವನ್ನೂ, ಕೊನೆಗೆ ಚಂದ್ರಲೋಕವನ್ನೂ ಸೇರುತ್ತಾರೆ. ಅದೇ ಅವರ ಚರಮಸ್ಥಾನವು. ಈ ಲೋಕದಲ್ಲಿ ಅವರ ಸತ್ಕರ್ಮಗಳಿಗನುಗುಣವಾದ ಫಲಗಳನ್ನು ಪೂರ್ಣವಾಗಿ ಅನುಭವಿಸಿ ಪಿತೃಗಳೊಂದಿಗಿದ್ದು, ತಮ್ಮ ಕರ್ಮದ ಸಂಸ್ಕಾರವು ಮುಗಿದೊಡನೆಯೇ ಪುನಃ ಅದೇ ಧೂಮಮಾರ್ಗವಾಗಿ ಪೃಥ್ವಿಗೆ ಹಿಂತಿರುಗುತ್ತಾರೆ. ಇದೇ ಉಪನಿಷತ್ತುಗಳಲ್ಲಿ ವರ್ಣಿಸಿರತಕ್ಕ **ದೇವಯಾನ** ಮತ್ತು **ಪಿತೃಯಾನ**ಗಳ ಸ್ವರೂಪವು.

ಪ್ರಕೃತದಲ್ಲಿ ನಾವು ಗಮನಿಸಬೇಕಾದುದೇನೆಂದರೆ, ಮೇಲೆ ವಿವರಿಸಿದಂತೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೆಲ್ಲವೂ ಪೂರ್ಣವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸುವ **ದೇವಯಾನ** ಪದದಿಂದ ಸೂಚಿತವಾಗುತ್ತದೆಯೋ ಅಥವಾ ಕೇವಲ ದೇವತೆಗಳು ಸಂಚರಿಸತಕ್ಕ ಭೌತಿಕವಾದ ಮಾರ್ಗವೆಂದರ್ಥವಾಗುತ್ತದೆಯೋ ಎಂಬುದು. ಇದರಂತೆಯೇ, ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ **ಪಿತೃಯಾನ** ಶಬ್ದಕ್ಕೂ ಸಹ ಯಾವ ಅರ್ಥ ಎಂಬುದನ್ನೂ ಪ್ರಕೃತದಲ್ಲಿ ವಿಮರ್ಶಿಸಬೇಕಾಗಿದೆ.

ಋಕ್ಸಂಹಿತೆಯಲ್ಲಿ **ದೇವಯಾನ** ಎಂಬ ಪದವು ಒಟ್ಟು ಹದಿಮೂರುಸಲ ಪ್ರಯೋಗಿಸಲ್ಪಟ್ಟಿದೆ. [೧-೭೨-೭ ; ೧-೧೬೨-೪ ; ೧-೧೮೩-೬ ; ೧-೧೮೪-೬; ೪-೩೭-೧ ; ೫-೪೩-೬ ;೭-೩೮-೮; ೭-೭೬-೨; ೧೦-೧೮-೧ ; ೧೦ ೫೧-೨; ೧೦-೫೧-೫ ; ೧೦-೯೮-೧೧ ; ೧೦-೧೮೧-೩.] ಈ ಸಂದರ್ಭಗಳಲ್ಲೆಲ್ಲಾ ಸಾಯಣರು ಪ್ರಧಾನವಾಗಿ ಎರಡು ಅರ್ಥಗಳನ್ನು ಮಾತ್ರ ಹೇಳಿದ್ದಾರೆ. ಅವರ ವಿವರಣೆಯ ಪ್ರಕಾರ ಮೊದಲನೆಯದಾಗಿ ಯಜ್ಞಕರ್ತರಾದ ಮಾನವರು ತಮ್ಮ ಹವಿಸ್ಸುಗಳೊಂದಿಗೆ ದೇವತೆಗಳನ್ನು ಸಮೀಪಿಸಲು ಹೊಗತಕ್ಕ ಮಾರ್ಗವೆಂದೂ ಎರಡನೆಯದಾಗಿ ದೇವತೆಗಳು ತಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ಪೃಥ್ವಿಗೆ ಬರತಕ್ಕ ಮಾರ್ಗವೆಂದೂ ಅರ್ಥವಾಗುತ್ತದೆ.

**ಪಿತೃಯಾನ**ವೆಂಬ ಪದವು ಋಕ್ಸಂಹಿತೆಯಲ್ಲಿ ಕೇವಲ ಒಂದುಸಲ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಆ ಪ್ರಯೋಗವು ಯಾವ ಸಂದರ್ಭದಲ್ಲೆಂದರೆ,

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
**ಪಂಥಾಮನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥**
(ಋ. ಸಂ. ೧೦-೨-೭)

ಎಂಬ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಂದಲೂ, ಉದಕಗಳಿಂದಲೂ, ಸೃಷ್ಟಿಕರ್ತನಿಂದಲೂ, ತ್ವಷ್ಟೃವಿನಿಂದಲೂ ಪ್ರಜ್ವಲಿತನಾದವನೂ ಮತ್ತು **ಪಿತೃಯಾಣದ** ಸ್ವರೂಪವನ್ನು ಪೂರ್ಣವಾಗಿ ಅರಿತವನೂ ಆದ ಅಗ್ನಿಯು ಪ್ರಜ್ವಲಿತನಾದೊಡನೆಯೇ ಪ್ರಕಾಶಿತನಾಗಲಿ ಎಂದು ಪ್ರಾರ್ಥಿಸಿದೆ. ಋಕ್ಕಿನಲ್ಲಿ ಮೂರನೇ ಪಾದದಲ್ಲಿರುವ ಈ ಪದಕ್ಕೆ ಸಾಯಣರ ವಿವರಣೆಯಂತೆ **ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ**—ಪಿತೃಗಳು ಯಾವ ಮಾರ್ಗದಲ್ಲಿ ಸಂಚರಿಸುವರೋ ಆ ಮಾರ್ಗವೆಂದರ್ಥ. ಇದೇ ಅರ್ಥವನ್ನು ಆಂಗ್ಲಪಂಡಿತರೂ ಒಪ್ಪಿ ವಿವರಿಸಿದ್ದಾರೆ.

ಹೀಗೆ **ದೇವಯಾನಕ್ಕೆ** ದೇವತೆಗಳು ಹವಿಸ್ಸಿಗಾಗಿ ಬರತಕ್ಕ ಮಾರ್ಗವೆಂದೂ, **ಪಿತೃಯಾನಕ್ಕೆ** ಪಿತೃಗಳು ಸಂಚರಿಸತಕ್ಕ ಮಾರ್ಗವೆಂದೂ ಅರ್ಥಮಾಡಿದರೆ, ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕಪರವಾದ ತಾತ್ಪರ್ಯವು ಈ ಸಂದರ್ಭಗಳಲ್ಲಿ ಹೇಗೆ ಸಾಧ್ಯವಾಗುವುದು ಎಂದರೆ ಆಗ ಕೆಳಗೆ ಉದಹರಿಸಿರುವ ಋಕ್ಕುಗಳ ತಾತ್ಪರ್ಯವನ್ನು ವಿಮರ್ಶಿಸಿ ಈ ಭಾವವು ಆ ಮಂತ್ರಗಳಿಂದ ವ್ಯಕ್ತವಾಗುವುದೇ ಎಬುದನ್ನು ನಿರ್ಧರಿಸಬೇಕು.

ಪ್ರ ಮೇ ಪಂಥಾ ದೇವಯಾನಾ ಅದೃಶ್ರನ್ನಮರ್ಧಂತೋ ವಸುಭಿರಿಷ್ಕೃತಾಸಃ ।
ಅಭೂದು ಕೇತುರುಷಸಃ ಪುರಸ್ತಾತ್ಪ್ರತೀಚ್ಯಾಗಾದಧಿ ಹರ್ಮ್ಯೇಭ್ಯಃ ॥
(ಋ. ಸಂ. ೭-೭೬-೨)

**ಕೋ ಮಾ ದದರ್ಶ ಕತಮಃ ಸ ದೇವೋ ಯೋ ಮೇ ತನ್ವೋ ಬಹುಧಾ ಪರ್ಯಪಶ್ಯತ್ ।**
**ಕ್ವಾಹ ಮಿತ್ರಾವರುಣಾ ಕ್ಷಿಯಂತ್ಯಗ್ನೇರ್ವಿಶ್ವಾಃ ಸಮಿಧೋ ದೇವಯಾನೀಃ ॥**
(ಋ. ಸಂ. ೧೦-೫೧-೨)

**ಏಹಿ ಮನುರ್ದೇವಯುರ್ಯಜ್ಞಕಾಮೋಽರಂಕೃತ್ಯಾ ತಮಸಿ ಕ್ಷೇಷ್ಯಗ್ನೇ ।**
**ಸುಗಾನ್ಪಥಃ ಕೃಣುಹಿ ದೇವಯಾನಾನ್ವಹ ಹವ್ಯಾನಿ ಸುಮನಸ್ಯಮಾನಃ ॥**
(ಋ. ಸಂ. ೧೦-೫೧-೫)

ಎಂಬ ಈ ಋಕ್ಕುಗಳಲ್ಲಿ ಮೊದಲನೆಯ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ವರ್ಣಿತವಾಗಿರುವ **ದೇವಯಾನಕ್ಕೆ** ಎರಡು ವಿಶೇಷಣಗಳಿವೆ. ಮೊದಲನೆಯದಾಗಿ **ಅಮರ್ಧಂತಃ (ಅಹಿಂಸಂತಃ)** ಎಂದೂ ಎರಡನೆಯದಾಗಿ **ವಸುಭಿಃ ಇಷ್ಕೃತಾಸಃ ತೇಜೋಭಿಃ ಸಂಸ್ಕೃತಾಃ** ಎಂದೂ ಇವೆ. ಈ ಎರಡು ವಿಶೇಷಣಗಳಿಂದ ದೇವಯಾನದ ಸ್ವರೂಪವು ವರ್ಣಿತವಾಗಿದೆ. ಅದು ಅಹಿಂಸಿತವಾದ ಮಾರ್ಗವೆಂದೂ, ಪೂರ್ಣವಾದ ತೇಜಸ್ಸಿನಿಂದ ಕೂಡಿದುದೆಂದೂ ಈ ವಿಶೇಷಣಗಳು ತಿಳಿಸುತ್ತದೆ. ಎರಡನೆಯ ಮಂತ್ರದ ಉತ್ತರಾರ್ಧದಲ್ಲಿ ಅಗ್ನಿಯು ಮಿತ್ರಾವರುಣರನ್ನು ಪ್ರಶ್ನಿಸುವಾಗ, ತೇಜೋಯುತವೂ, ದೇವಯಾನರೂಪವಾದುದೂ ಆದ ಅಗ್ನಿಯ ಅನಂತರೂಪವನ್ನು ದೇವತೆಗಳಲ್ಲಿ ಯಾರುತಾನೆ ಅರಿತಿರುವರು

ಎಂದು ಪ್ರಶ್ನಿಸುತ್ತಾನೆ ಮತ್ತು ಮೂರನೆಯ ಮಂತ್ರದಲ್ಲಿ ದೇವತೆಗಳಿಗೆ ಹವಿಸ್ಸನ್ನು ವಹಿಸುವ ದೇವಯಾನವನ್ನು ತೇಜೋಯುತವನ್ನಾಗಿ ಮಾಡಬೇಕೆಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

ಈ ಆಧಾರಗಳಮೇಲೆ ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ದೇವಯಾನವು ಕೇವಲ ಸಂಚಾರಮಾರ್ಗ ಮಾತ್ರವೇ ಅಲ್ಲ. ಅದು ಸಂಚರಿಸಲು ಯೋಗ್ಯವಾದುದೂ ಆದ ಮಾರ್ಗವೆಂದು ಹೇಳಬಹುದು. ಈ ಗುಣಗಳಿಲ್ಲದೇ ಇದಕ್ಕೆ ವಿರೋಧವಾದುದು ಪಿತೃಮಾರ್ಗವೆಂಬುದು ಉಪನಿಷದ್ವಾಕ್ಯಗಳಿಂದ ತಿಳಿದುಬರುತ್ತದೆ.

ಈ ದೇವಯಾನದಿಂದ ಸಂಚರಿಸಲು ಯೋಗ್ಯತೆಯನ್ನು ಪಡೆದಿರುವ ಆತ್ಮನು ಬ್ರಹ್ಮಲೋಕವನ್ನುಸೇರಿದನಂತರ ಪುನರಾವರ್ತಿಯನ್ನು ಹೊಂದಿ ಪೃಥ್ವಿಗೆ ಹಿಂತಿರುಗುವುದಿಲ್ಲ ಎಂದು ಉಪನಿಷತ್ತುಗಳಲ್ಲಿ ಹೇಳಿರುವ ಅಂಶವೂ ಸಹ ಋಕ್ಸಂಹಿತಾವಾಕ್ಯಗಳಲ್ಲಿ ಸೂಚಿತವಾಗಿದೆಯೇ ಎಂಬುದೂ ಒಂದು ಪ್ರಶ್ನೆ. ಆ ಅಂಶವು ಕೆಳಗೆ ಉದಾಹೃತವಾಗುವ ಮಂತ್ರಗಳಲ್ಲಿರುವ ವರ್ಣನೆಗಳಿಂದ ವಿಶದವಾಗಿ ತಿಳಿಯಬಹುದು.

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥**

(ಋ- ಸಂ. ೧೦-೧೮-೧)

**ಏತಾನ್ಯಗ್ನೇ ನವತಿಂ ಸಹಸ್ರಾ ಸಂ ಪ್ರ ಯಚ್ಛ ವೃಷ್ಣ ಇಂದ್ರಾಯ ಭಾಗಂ ।**
**ವಿದ್ವಾನ್ ಪಥ ಋತುಶೋ ದೇವಯಾನಾನಪ್ಯೌಲಾನಂ ದಿವಿ ದೇವೇಷು ಧೇಹಿ ॥**

(ಋ. ಸಂ. ೧೦-೯೮-೧೧)

**ವಿದ್ವಾಁ ಅಗ್ನೇ ವಯುನಾನಿ ಕ್ಷಿತೀನಾಂ ವ್ಯಾನುಷಕ್ಛುರುಧೋ ಜೀವಸೇ ಧಾಃ ।**
**ಅಂತರ್ವಿದ್ವಾಁ ಅಧ್ವನೋ ದೇವಯಾನಾನತಂದ್ರೋ ದೂತೋ ಅಭವೋ ಹವಿರ್ವಾಟ್ ॥**

(ಋ. ಸಂ. ೧-೭೨-೭)

ಈ ಮಂತ್ರಗಳಲ್ಲಿ ಮೊದಲನೆಯದರಲ್ಲಿ ಮೃತ್ಯುವನ್ನು ಉದ್ದೇಶಿಸಿದ ಪ್ರಾರ್ಥನೆಯಾಗಿದೆ. ಇಲ್ಲಿ ಮೃತ್ಯುವಿನ ಮಾರ್ಗವೇ ಬೇರೆ, ದೇವಯಾನದ ಮಾರ್ಗವೇ ಬೇರೆ ಎಂಬುದು ವಿಶದವಾಗಿದೆ. **ಯಃ ತ್ವೇ ಸ್ವಃ ದೇವಯಾನಾತ್ ಇತರಃ** ಎಂಬ ವಾಕ್ಯದಿಂದ ದೇವಯಾನಕ್ಕಿಂತ ಮೃತ್ಯುಮಾರ್ಗವು ಬೇರೆಯಾದುದು ಎಂದು ವರ್ಣಿತವಾಗಿದೆ. ಆದುದರಿಂದ, ದೇವಯಾನಕ್ಕೂ ಮೃತ್ಯುವಿಗೂ ವಿರೋಧವೆಂದಾಗಿ ದೇವಯಾನದಲ್ಲಿ ಸಂಚರಿಸುವವರೆಲ್ಲರೂ ಮರಣರಹಿತರಾಗಿ ನಿತ್ಯವಾದ ಬ್ರಹ್ಮಲೋಕವನ್ನು ಸೇರುವರು ಎಂದಭಿಪ್ರಾಯವು ಸೂಚಿತವಾಗುತ್ತದೆ

ಎರಡನೆಯ ಮಂತ್ರದಲ್ಲಿ ದೇವಯಾನದ ಸ್ವರೂಪವನ್ನರಿತ ಅಗ್ನಿಯನ್ನು ಕುರಿತು ಔಲಾನಶಂತನುವೆಂಬುವನನ್ನು ದೇವತೆಗಳಲ್ಲಿಗೆ ಸೇರಿಸಬೇಕೆಂದು ಪ್ರಾರ್ಥಿಸಿದೆ. ಮರಣಾನಂತರ ಆತ್ಮನು ಅಗ್ನಿಜ್ವಾಲೆಯೊಡನೆ ಅಂತರ್ಗತನಾಗಿ ದೇವಲೋಕವನ್ನು ಸೇರುವನು ಎಂದು ವರ್ಣಿತವಾಗಿರುವ ಭಾವವು ಇಲ್ಲಿ ಸೂಚಿತವಾಗಿದೆ. ಮೂರನೆಯ ಮಂತ್ರದಲ್ಲೂ ಸಹ ಇದೇ ಅಂಶವು ವಿಶದವಾಗಿ ಸೂಚಿಸಲ್ಪಟ್ಟಿದೆ.

ಈ ಆಧಾರಗಳ ಮೇಲೆ **ದೇವಯಾನವೂ ಪಿತೃಯಾಣವೂ**ಸಹ ಮರಣಾನಂತರ ಆತ್ಮನನ್ನು ಕೊಂಡೊಯ್ಯುವ ಬೇರೆಬೇರೆ ಮಾರ್ಗಗಳೆಂದು ತಿಳಿಯುತ್ತದೆ.ಈ ಅಭಿಪ್ರಾಯಗಳನ್ನು ಇನ್ನೂ ವಿಶದವಾಗಿ ತಿಳಿಯಬೇಕಾದರೆ ಗಾತು,

ರಜಸ್, ಸ್ರುತೀ ಎಂಬ ಪದಗಳ ತಾತ್ಪರ್ಯವನ್ನು ವಿವರಿಸುವಾಗ ಆಯಾ ಸಂದರ್ಭಗಳಲ್ಲಿ ತಿಳಿಯಬಹುದು. ಉದಾಹರಣೆಗೆ—

ದ್ವೇ ಸ್ರುತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಂ ।
ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ॥

(ಋ. ಸಂ. ೧೦-೮೮-೧೫)

ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।
ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥

(ಋ. ಸಂ. ೧-೩೫-೨)

ಇತ್ಯಾದಿ ಮಂತ್ರಗಳಲ್ಲಿ ಎರಡು ಮಾರ್ಗಗಳಿಗೂ ಇರುವ ವ್ಯತ್ಯಾಸವು ತಿಳಿಸಲ್ಪಟ್ಟಿದೆ. ಈ ವಿಷಯವನ್ನು ಇನ್ನೂ ವಿಶದವಾಗಿ ಮುಂದೆ ಆಯಾ ಸನ್ನಿವೇಶಗಳಲ್ಲಿ ವಿವರಿಸಲಾಗುತ್ತದೆ. ಈ ದೇವಯಾನವನ್ನೇ ಉಪನಿಷತ್ತುಗಳಲ್ಲಿ ಅರ್ಚಿರಾದಿಮಾರ್ಗವೆಂದೂ ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮಲೋಕವನ್ನು ಸೇರಿದ ಸುಕೃತಿಗಳಿಗೆ ಪುನರಾವರ್ತಿಯಿಲ್ಲವೆಂದು ಮೇಲೆ ಉದಾಹೃತವಾದ ಬೃಹದಾರಣ್ಯಕೋಪನಿಷದ್ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಇತರ ಉಪನಿಷತ್ತುಗಳಲ್ಲಿಯೂ ಈ ಅಂಶವನ್ನು ತಿಳಿಸಿದೆ.

ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ॥

(ಛಾ. ಉ. ೪-೧೫-೫)

ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸಃ ಪುರುಷೋಽಹ್ಯವ್ಯಯಾತ್ಮಾ ॥

(ಮು. ಉ. ೨-೧೧)

ಇತ್ಯಾದಿ ಸೂರ್ಯದ್ವಾರವನ್ನು ವರ್ಣಿಸುವ ವಾಕ್ಯಗಳು ದೇವಯಾನದ ಮಹತ್ತ್ವವನ್ನು ಪ್ರಶಂಸಿಸುತ್ತವೆ.

॥ ಸಂಹಿತಾಪಾಠಃ ॥

ದ್ವೇ ಸಮೀಚೀ ಬಿಭೃತಶ್ಚರಂತಂ ಶೀರ್ಷತೋ ಜಾತಂ ಮನಸಾ ವಿಮೃಷ್ಟಂ।
ಸ ಪ್ರತ್ಯಙ್ವಿಶ್ವಾ ಭುವನಾನಿ ತಸ್ಥಾವಪ್ರಯುಚ್ಛನ್ತರಣಿರ್ಭ್ರಾಜಮಾನಃ ॥

॥ ಪದಪಾಠಃ ॥

ದ್ವೇ ಇತಿ । ಸಮೀಚೀ ಇತಿ ಸಂಽಈಚೀ । ಬಿಭೃತಃ । ಚರಂತಂ । ಶೀರ್ಷತಃ । ಜಾತಂ । ಮನಸಾ । ವಿಽಮೃಷ್ಟಂ ।
ಸಃ । ಪ್ರತ್ಯಙ್ । ವಿಶ್ವಾ । ಭುವನಾನಿ । ತಸ್ಥೌ । ಅಪ್ರಽಯುಚ್ಛನ್ । ತರಣಿಃ । ಭ್ರಾಜಮಾನಃ ॥ ೧೬ ॥

॥ ಸಾಯಣಭಾಷ್ಯಂ ॥

ಸಮೀಚೀ ಸಂಗತೇ ದ್ವೇ ದ್ಯಾವಾಪೃಥಿವ್ಯೌ ಚರಂತಂ ಗಚ್ಛಂತಂ ಶೀರ್ಷತಃ ಶಿರಸೋ ಜಾತಮುತ್ಪನ್ನಂ । ತಥಾ ಚ ನಿಗಮಾಂತರಂ । ಉತ ಮನ್ಯೇಽಹಮೇನಮನಯೋರ್ಹಿ ಶಿರಸ್ತೋಽಯಂ ಪ್ರಾತರ್ಜಾಯತ ಇತಿ । ಯದ್ವಾ । ಸರ್ವಶಿರೋಭೂತಾದಾದಿತ್ಯಾಜ್ಜಾತಮಿತ್ಯರ್ಥಃ । ಮನಸಾ । ಮನ್ಯತಿರರ್ಚತಿಕರ್ಮಾ । ಅರ್ಚನೀಯಯಾ ಸ್ತುತ್ಯಾ ವಿಮೃಷ್ಟಂ ಶೋಧಿತಂ ಸಂಸ್ಕೃತಮಗ್ನಿಂ ಬಿಭೃತಃ । ಧಾರಯತಃ । ಸೋಽಪ್ರಯುಚ್ಛನ್ನಪ್ರಮಾದ್ಯಂಸ್ತರಣಿಃ ಕ್ಷಿಪ್ರಕಾರೀ ಭ್ರಾಜಮಾನೋ ದೀಪ್ಯ-ಮಾನೋಽಗ್ನಿರ್ವಿಶ್ವಾನಿ ಭುವನಾನಿ ಪ್ರತ್ಯಙ್ಙಭಿಮುಖಸ್ತಸ್ಥೌ । ತಿಷ್ಠತಿ । ತಥಾ ಚ ಶ್ರೂಯತೇ । ತಸ್ಮಾತ್ಸರ್ವ ಏವ ಮನ್ಯಂತೇ ಮಾಂ ಪ್ರತ್ಯುದಗಾದಿತಿ ॥

॥ ಪ್ರತಿಪದಾರ್ಥ ॥

**ಸಮೀಚೀ**—ಒಂದುಗೂಡಿರುವ । **ದ್ವೇ**—ದ್ಯಾವಾಪೃಥಿವಿಗಳು । **ಚರಂತಂ**—ಸಂಚಾರಾತ್ಮಕನೂ । **ಶೀರ್ಷತಃ**—ಶಿರಸ್ಸಿನಿಂದ । **ಜಾತಂ**—ಉತ್ಪನ್ನನೂ । **ಮನಸಾ**—ಸ್ತುತಿಯಿಂದ । **ವಿಮೃಷ್ಟಂ**—ಸಂಸ್ಕೃತನೂ ಆದ ಅಗ್ನಿಯನ್ನು । **ಬಿಭೃತಃ**—ಧರಿಸಿವೆ । **ಸಃ**—ಅದೇ ಅಗ್ನಿಯು । **ಅಪ್ರಯುಚ್ಛನ್**—ಆಲಸ್ಯವಿಲ್ಲದೆಯೂ । **ತರಣಿಃ**—ಶೀಘ್ರಗಾಮಿಯಾಗಿಯೂ । **ಭ್ರಾಜಮಾನಃ**—ಪ್ರಕಾಶಮಾನನಾಗಿಯೂ । **ವಿಶ್ವಾ ಭುವನಾನಿ**—ಸಕಲ ಲೋಕಗಳಿಗೂ । **ಪ್ರತ್ಯಙ್**—ಅಭಿಮುಖವಾಗಿ । **ತಸ್ಥೌ**—ಸ್ಥಾಪಿತನಾಗಿದ್ದಾನೆ.

॥ ಭಾವಾರ್ಥ ॥

ಸಂಚಾರಾತ್ಮಕನೂ, ಶಿರಸ್ಸಿನಿಂದ ಉತ್ಪನ್ನನೂ, ಸ್ತುತಿಯಿಂದ ಸಂಸ್ಕೃತನೂ ಆದ ಅಗ್ನಿಯನ್ನು ದ್ಯಾವಾಪೃಥಿವಿಗಳು ಪರಸ್ಪರ ಸಂಬಂಧವನ್ನು ಹೊಂದಿ ಧರಿಸಿವೆ. ಅದೇ ಅಗ್ನಿಯು ತನ್ನ ಕಾರ್ಯದಲ್ಲಿ ಆಲಸ್ಯವಿಲ್ಲದೆಯೂ, ಶೀಘ್ರಗಾಮಿಯಾಗಿಯೂ, ಪ್ರಕಾಶಮಾನನಾಗಿಯೂ ಸಹ ಸಕಲ ಲೋಕಗಳಿಗೂ ಅಭಿಮುಖನಾಗಿ ಸ್ಥಾಪಿತನಾಗಿದ್ದಾನೆ.

## English Translation

The associated two (heaven and earth) support (Agni) moving, born from the head, sanctified by praise; diligent, rapid, radiant, he appears in the presence of all beings.

॥ ಸಂಹಿತಾಪಾಠಃ ॥

ಯತ್ರಾ ವದೇತೇ ಅವರಃ ಪರಶ್ಚ ಯಜ್ಞನ್ಯೋಃ ಕತರೋ ನೌ ವಿ ವೇದ ।

ಆ ಶೇಕುರಿತ್ಸಧಮಾದಂ ಸಖಾಯೋ ನಕ್ಷಂತ ಯಜ್ಞಂ ಕ ಇದಂ ವಿ ವೋಚತ್ ॥ ೧೭ ॥

॥ ಪದಪಾಠ ॥

ಯತ್ರ । ವದೇತೇ ಇತಿ । ಅವರಃ । ಪರಃ । ಚ । ಯಜ್ಞಽನ್ಯೋಃ । ಕತರಃ । ನೌ । ವಿ । ವೇದ ।

ಆ । ಶೇಕುಃ । ಇತ್ । ಸಧಽಮಾದಂ । ಸಖಾಯಃ । ನಕ್ಷಂತ । ಯಜ್ಞಂ । ಕಃ । ಇದಂ । ವಿ । ವೋಚತ್॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಕಾಲೇಽವರಃ ಪಾರ್ಥಿವೋಽಗ್ನಿರ್ದೈವ್ಯೋ ಹೋತಾ ಪರಶ್ಚ ಮಧ್ಯಮೋ ವಾಯುಶ್ಚೋಭೌ ವದೇತೇ ವಿವಾದಂ ಕುರ್ವಾತೇ ಯಜ್ಞನ್ಯೋರ್ಯಜ್ಞಸ್ಯ ನೇತ್ರೋರ್ನಾವಾವಯೋರ್ಮಧ್ಯೇ ಕತರೋ ಭೂಯಿಷ್ಠಂ ಯಜ್ಞಂ ವಿ ವೇದ ವೇತ್ತಿ ತತ್ರ ಸಖಾಯಃ ಸಮಾನಖ್ಯಾನಾ ಋತ್ವಿಜಃ ಸಧಮಾದಂ ಯಜ್ಞಮಾ ಶೇಕುಃ । ಕರ್ತುಂ ಶಕ್ನುವಂತಿ । ತಥಾ ಯಜ್ಞಂ ನಕ್ಷಂತ ಅಶ್ನುವತೇಽನುತಿಷ್ಠಂತಿ ಚ ಯೇ ತೇಷಾಂ ವಿದುಷಾಂ ಯಜ್ಞಮಶ್ನುವಾನಾನಾಂ ಮಧ್ಯೇ ಕೋ ವಿದ್ವಾನನುಷ್ಠಾತಾ ವೇದಮಸ್ಯ ವಿವಾದಸ್ಯ ನಿರ್ಣಯರೂಪಂ ವಾಕ್ಯಂ ವಿ ವೋಚತ್ । ಬ್ರವೀತಿ । ಮಾಧ್ಯಮಿಕಮಿಮಮಗ್ನಿಂ ಬ್ರವೀತಿ ॥ ತಥಾ ಚ ಯಾಸ್ಕಃ । ಯತ್ರ ವಿವದೇತೇ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ಕತರೋ ನೌ ಯಜ್ಞೇ ಭೂಯೋ ವೇದೇತ್ಯಾಶಕ್ನುವಂತಿ ತತ್ಸಹಮದನಂ ಸಮಾನಖ್ಯಾನಾ ಋತ್ವಿಜಸ್ತೇಷಾಂ ಯಜ್ಞಂ ಸಮಶ್ನುವಾನಾನಾಂ ಕೋ ನ ಇದಂ ವಿವಕ್ಷ್ಯತಿ । ನಿ. ೭-೩೦ । ಇತಿ ॥

॥ ಪ್ರತಿಪದಾರ್ಥ ॥

**ಯಜ್ಞನ್ಯೋಃ**—ಯಜ್ಞಕ್ಕೆ ನೇತೃಗಳಾದ । **ನೌ**—ನಮ್ಮ ಮಧ್ಯೆ । **ಕತರಃ**—ಯಾರು । **ವಿ ವೇದ**—ಅಧಿಕವಾದ ಜ್ಞಾನಿಯು ಎಂದು । **ಯತ್ರ**—ಯಾವಾಗ । **ಅವರಃ**—ಪಾರ್ಥಿವಾಗ್ನಿಯೂ । **ಪರಶ್ಚ**—ಮಧ್ಯಮ ಲೋಕದ ವಾಯುವೂ । **ವದೇತೇ**—ಪ್ರಶ್ನರೂಪವಾಗಿ ಸಂಭಾಷಿಸುವರೋ ಆಗ । **ಸಖಾಯಃ**—ಅವರ ಮಿತ್ರರಾದ ಋತ್ವಿಕ್ಕುಗಳು । **ಸಧಮಾದಂ**—ಯಜ್ಞವನ್ನು । **ಆ ಶೇಕುಃ**—ನಿರ್ವಹಿಸಲು ಶಕ್ತರಾಗುತ್ತಾರೆ । **ಯಜ್ಞಂ ನಕ್ಷಂತ**—ಯಜ್ಞವನ್ನೂ ನಿರ್ವಹಿಸುತ್ತಾರೆ (ಈ ಯಜ್ಞಕಾಲದಲ್ಲಿ) । **ಕಃ**—ಯಾರು । **ಇದಂ**—ಈ ವಿವಾದದ ನಿಶ್ಚಯವನ್ನು । **ವಿವೋಚತ್**—ತಿಳಿದು ಹೇಳಬಲ್ಲನು.

॥ ಭಾವಾರ್ಥ ॥

"ಯಜ್ಞಕ್ಕೆ ನೇತೃಗಳಾದ ನಮ್ಮ ನಡುವೆ ಯಾರು ಅಧಿಕವಾದ ಜ್ಞಾನಿಯು" ಎಂದು ಪಾರ್ಥಿವಾಗ್ನಿಗೂ ಮಧ್ಯಮಲೋಕದ ವಾಯುರೂಪನಾದ ಅಗ್ನಿಗೂ ವಿವಾದವು ಜರಗಿದಕಾಲದಲ್ಲಿ ಅವನ ಮಿತ್ರರಾದ ಋತ್ವಿಕ್ಕುಗಳು ಯಜ್ಞವನ್ನು ಸಾಮರ್ಥ್ಯದಿಂದ ನಿರ್ವಹಿಸುತ್ತಾರೆ. ಈ ಯಜ್ಞಕಾಲದಲ್ಲಿ ಈ ವಿವಾದದ ನಿಶ್ಚಯವನ್ನು ತಿಳಿದು ಯಾರು ಹೇಳಬಲ್ಲರು ?

English Translation

When the lower and upper (fire) disputed "which of us twin leaders of sacrifice knows the work best?" then the friends (the priests) were

competent (to offer) sacrifice, they came to the sacrifice; who declares this?

|| ವಿಶೇಷವಿಷಯಗಳು ||

**ಯತ್ರ ವಿವದೇತೇ ದೇವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ಕತರೋ ನೌ ಯಜ್ಞೇ ಭೂಯೋ ವೇದೇತ್ಯಾಶಕ್ನುವಂತಿ ಸತ್ಸಹಮದನಂ ಸಮಾನಖ್ಯಾನಾ ಋತ್ವಿಜಸ್ತೇಷಾಂ ಯಜ್ಞಂ ಸಮಶ್ನುವಾನಾನಾಂ ಕೋ ನ ಇದಂ ವಿವಕ್ಷ್ಯತೀತಿ ||**

(ನಿ. ೭-೩೦)

ಈ ವೈಶ್ವಾನರಾಗ್ನಿಯನ್ನು ಪಾರ್ಥಿವಾಗ್ನಿಯೆಂದೇ ಸ್ವೀಕರಿಸಿ ಈ ಋಕ್ಕಿನಿಂದ ಋಷಿಯು ಸ್ತುತಿಸಿರುವನು. ಯಜ್ಞವಿಷಯವನ್ನು ತಿಳಿದಿರುವ ಕೆಳಗಿನ ಮತ್ತು ಮೇಲಿನ ಅಗ್ನಿಗಳಲ್ಲಿ ಯಾರು ಹೆಚ್ಚಾಗಿ ತಿಳಿದಿರುವರು ? ಈ ವಿಷಯವನ್ನು ನಿರ್ಧರಿಸಲು ನಿಶ್ಚಯಿಸಲು ಯಾರು ಸಮರ್ಥರು ?

**ದೈವ್ಯಾ ಹೋತಾರಾ**—ಎಂದರೆ ದೇವತಾಸ್ವರೂಪರಾದ ಹೋತೃಗಳು, ದೇವತೆಗಳನ್ನು ಯಜ್ಞದಲ್ಲಿ ಆಹ್ವಾನಮಾಡುವ ಹೋತೃನಾಮಕನಾದ ಅಗ್ನಿಯು. ಇಲ್ಲಿ **ಹೋತಾರೌ** ಎಂದು ದ್ವಿವಚನಾಂತಶಬ್ದವಿರುವುದರಿಂದ ಪೃಥಿವಿಯಲ್ಲಿ ಸ್ಥಾಪಿತನಾಗಿರುವ ಪಾರ್ಥಿವಾಗ್ನಿ (ಯಜ್ಞಾಗ್ನಿ) ಮತ್ತು ಮಧ್ಯಮಸ್ಥಾನದಲ್ಲಿರುವ ವಾಯು ಅಥವಾ ವಿದ್ಯುದಗ್ನಿಯೆಂಬ ಇಬ್ಬರು ದೇವತೆಗಳು. ಈ ಇಬ್ಬರೂ ಅಗ್ನಿಯ ರೂಪಾಂತರಗಳೇ ಆಗಿರುವುದರಿಂದ ಇವರನ್ನು **ಹೋತಾರೌ** ಎಂಬ ದ್ವಿವಚನಾಂತಶಬ್ದದಿಂದ ಸಂಬೋಧಿಸಲಾಗಿದೆ. **ಅವರಃ ಪರಶ್ಚ** ಎಂದರೆ ಕೆಳಗಿನ ಮತ್ತು ಮೇಲಿನ ಎಂದರ್ಥವು. ಕೆಳಗೆ ಎಂದರೆ ಪೃಥಿವಿಸ್ಥಾನದಲ್ಲಿರುವ ಪಾರ್ಥಿವಾಗ್ನಿಯೆಂದೂ ಪರಃ ಎಂದರೆ ಮಧ್ಯಮಸ್ಥಾನದಲ್ಲಿರುವ ಅಗ್ನಿ (ವಿದ್ಯುತ್) ಎಂದು ತಿಳಿಯಬೇಕು. ಈ ಇಬ್ಬರಲ್ಲಿ ಯಾರಿಗೆ ಹೆಚ್ಚಾಗಿ ತಿಳುವಳಿಕೆ ಇದೆ ? ಯಜ್ಞಾದಿಕರ್ಮಗಳಲ್ಲಿ ಸಮಾನಭಾಗಗಳನ್ನು ಎಂದರೆ ಮುಖ್ಯಪಾತ್ರಗಳನ್ನು ವಹಿಸಿ ಯಜ್ಞವಿಷಯವನ್ನು ಚೆನ್ನಾಗಿ ತಿಳಿದಿರುವ ಋತ್ವಿಜರಲ್ಲಿ ಯಾವ ಋತ್ವಿಜನು ಈ ವಿಷಯವನ್ನು ನಿರ್ಧರಿಸಲು ಸಮರ್ಥನು ?

**ದೈವ್ಯಾ ಹೋತಾರಾ—ದೇವಸಂಬಂಧಿನೌ ಹೋತಾರೌ| ಅಯಂ ಚ ಮಧ್ಯಮಸ್ಥಾನಶ್ಚ ಇತ್ಯುಭೌ** ದೇವಸಂಬಂಧಿಗಳೂ ಹೋತೃಗಳೂ ಆದ ಪಾರ್ಥಿವಾಗ್ನಿ ಮತ್ತು ಅಂತರಿಕ್ಷಸ್ಥವಾದ ಅಗ್ನಿ ಎಂಬ ಅಗ್ನಿಯ ಎರಡು ರೂಪಗಳೆಂದು ಸಾಯಣರು ಅರ್ಥಮಾಡಿದ್ದಾರೆ. ಅಧುನಿಕರಾದ ಕೆಲವು ಪಂಡಿತರು ಇದಕ್ಕೆ ಭಿನ್ನವಾದ ಅರ್ಥವನ್ನು ಹೇಳಿ ತಮ್ಮಲ್ಲೇ ಅಭಿಪ್ರಾಯಭೇದವನ್ನೂ ತೋರಿದ್ದಾರೆ. Geldner ಎಂಬ ಪಂಡಿತನು ಯಜ್ಞಕರ್ತನಾದ **ಹೋತೃ** ಮತ್ತು ಅವನ **ಅಗ್ನಿ**ಯೆಂದೂ, Haug ಎಂಬುವನು **ಹೋತೃ** ಮತ್ತು **ಅಧ್ವರ್ಯು**ವೆಂದೂ Oldenberg ಎಂಬುವನು ಹೋತೃ ಮತ್ತು ಅವನ ಸಹಾಯಕನಾದ ಮೈತ್ರಾವರುಣನೆಂದೂ ಅರ್ಥಮಾಡಿದ್ದಾರೆ. ಇವೊಂದೂ ಸಮಂಜಸವಾಗಿಲ್ಲ.

ಯಜ್ಞವನ್ನು ನೆರವೇರಿಸುವುದೇ ಈ ಹೋತೃಗಳ ಮುಖ್ಯ ಕರ್ತವ್ಯವೆಂದು **ಯಜ್ಞಂ ನೋ ಯಕ್ಷತಾಮಿಮಂ** | ಎಂದು ೧-೧೩-೮, ೧-೧೮೮-೭ ನೇ ಋಕ್ಕುಗಳಲ್ಲೂ, **ದೇವಾನ್ಯಜಂತಾವೃತುಥಾ** | ಎಂದು ೨-೩-೭ ನೇ ಋಕ್ಕಿನಲ್ಲೂ ಹೇಳಿದೆ. ಈ ಕರ್ತವ್ಯಜ್ಞಾಪನವು ಮಾನವನಾದ ಹೋತೃವಿಗೆ ಅನ್ವಯಿಸತಕ್ಕದ್ದು ಮತ್ತು ಅಗ್ನಿಯನ್ನು ಕುರಿತು ಅಲಂಕಾರಿಕವಾಗಿ ಸಂಬೋಧಿಸಿದೆ.

**ದೈವ ಹೋತಾರಾ** ಎಂಬ ಶಬ್ದದ ವಿಷಯದಲ್ಲಿ ಯಾಸ್ಕರ ವಿವರಣೆಯು—

**ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ||**

ಎಂದರೆ ಈ ಶಬ್ದವು ಅಗ್ನಿಯನ್ನೇ ಸೂಚಿಸುವುದು. ಅಗ್ನಿಯು ದೇವತೆಗಳನ್ನು ಆಹ್ವಾನಮಾಡುವುದರಿಂದ ದೇವತೆಗಳಿಗೂ ಮನುಷ್ಯರಿಗೂ ಅಗ್ನಿಯು ಮಧ್ಯಸ್ಥನಾಗಿರುವನು ಎಂದು ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿರುವರು.

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ |**
**ಪ್ರಚೋದಯಂತಾ ವಿಧಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ||**

(ಋ. ಸಂ- ೧೦-೧೧೦-೭)

ಇದಕ್ಕೆ ದುರ್ಗಾಚಾರ್ಯಕೃತವ್ಯಾಖ್ಯಾನವು—

**ಯಾವೇತೌ ದೈವ್ಯಾ ಹೋತಾರಾ | ದೇವೇಷು ಭವೌ ದೇವ್ಯಾ ದೇವಾವೇವ ದೇವ್ಯಾ | ಸ್ವಾರ್ಥೇ ಏವ ತದ್ಧಿತಃ | ಮನುಷ್ಯಹೋತಾರೌ ಅಪೇಕ್ಷ್ಯ | ದೈವ್ಯಾ ಹೋತಾರೌ ಹೋತೃಮೈತ್ರಾವರುಣೌ ಇತಿ ವಿಶೇಷಣಂ| ಹೋತಾರಾ ಹೋತಾರೌ ಆಹ್ವಾತಾರೌ ದೇವಾನಾಂ ವಾಯ್ವಗ್ನೀ| ಪ್ರಥಮಾ ಪ್ರಥಮೌ ಮುಖ್ಯೌ ಮನುಷ್ಯಹೋತಾರಾವಪೇಕ್ಷ್ಯ | ಸುವಾಚಾ | ಸುವಾಚೌ | ಪ್ರಶಸ್ತವಾಚೌ | ಸುಸ್ತುತೌ | ಮಿಮಾನಾ ಯಜ್ಞಂ ಯಜ್ಞನಿರ್ಮಾತಾರೌ ನಿತ್ಯಂ| ಮನುಷಃ ಮನುಷ್ಯಸ್ಯ ಯಜಧ್ಯೈ ಯಜನಾಯ | ಪ್ರಚೋದಯಂತಾ ಪ್ರಚೋದಯಮಾನೌ | ವಿದಥೇಷು ಯಜ್ಞೇಷು | ಕಾರೂ ಕರ್ತಾರೌ | ಇತ್ಯಾದಿ |**

ಇದರ ಮುಖ್ಯಾಭಿಪ್ರಾಯವೇನೆಂದರೆ—ದೇವತೆಗಳಿಗೆ ಅಗ್ನಿವಾಯುಗಳು ಹೋತೃಗಳೆಂದೂ ಮನುಷ್ಯರಿಗೆ ಹೋತೃಮೈತ್ರಾವರುಣರೆಂಬ ಋತ್ವಿಜರು ಹೋತೃಗಳೆಂದೂ ಪ್ರಸಿದ್ಧವು. ಅಗ್ನಿ ಅಥವಾ ಅಗ್ನಿವಾಯುಗಳು ದೇವತೆಗಳಿಗೂ, ಮನುಷ್ಯರಿಗೂ ಮಧ್ಯದಲ್ಲಿದ್ದು ಅವರಿಗೆ ಸಂಬಂಧವನ್ನು ಕಲ್ಪಿಸುವುದರಿಂದ ಅಗ್ನಿಯು ಮಧ್ಯಮನೆಂದು ಹೇಳಲ್ಪಡುವನು. **ದೈವ್ಯಾ ಹೋತಾರಾ** ಎಂಬ ದೇವತೆಗಳ ಹೆಸರು ಆಪ್ರೀ ಸೂಕ್ತಗಳಲ್ಲಲ್ಲದೆ—

**ತ್ವಷ್ಟಾರಂ ವಾಯುಮೃಭವೋ ಯ ಓಹತೇ ದೈವ್ಯಾ ಹೋತಾರಾ ಉಷಸಂ ಸ್ವಸ್ತಯೇ |**

(ಋ. ಸಂ. ೧೦-೬೫-೧೦)

**ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ |**

(ಋ.ಸಂ. ೧೦-೬೬-೧೩)

ಎಂಬ ಎರಡು ಋಕ್ಕುಗಳಲ್ಲಿ ಮಾತ್ರ ಪಠಿತವಾಗಿರುವುದು. ಋ. ಸಂ. ೭-೨-೭ ನೆಯ ಋಕ್ಕಿನಲ್ಲಿ ಜಾತಾವೇದಸಾ ಎಂದೂ ಋ. ಸಂ. ೧೦-೭೦-೭ ನೆಯ ಋಕ್ಕಿನಲ್ಲಿ ಪುರೋಹಿತೌ ಎಂದೂ ಇವರನ್ನು ಕರೆದಿದಾರೆ. ಮತ್ತು ಮೇಲೆ ಹೇಳಿದ ಋಕ್ಕುಗಳಲ್ಲಿರುವ **ಮಿಮಾನಾ ಯಜ್ಞಂ ಮನುಷೋ ಯಜಧ್ಯೈ, ಯಜ್ಞೇಷು ಮಾನುಷೇಷು ಕಾರೂ** ಮತ್ತು **ಪ್ರಚೋದಯಂತಾ ವಿದಥೇಷು ಕಾರೂ** ಎಂಬ ಶಬ್ದಗಳು ಈ ದೇವತೆಗಳು, ಮನುಷ್ಯರು ಮಾಡುವ ಯಜ್ಞಗಳನ್ನು ನಿರ್ವಹಿಸುವವರು ಎಂದು ಹೇಳಿರುವುದರಿಂದ ಇವರನ್ನು ಪುರೋಹಿತರೆಂದು ಕರೆದಿರುವುದು ಸಹಜವಾಗಿದೆ.

ದೇವತೆಗಳಲ್ಲಿ ಹೋತೃಗಳು ಅಗ್ನಿನಾಯುಗಳಾದರೆ ಮನುಷ್ಯರಲ್ಲಿ ಹೋತೃ ಇವನ ಸಹಾಯಕ ಋತ್ವಿಜನಾದ ಮೈತ್ರಾವರುಣನು ಹೋತೃಗಳೆಂದು ಕರೆಯಲ್ಪಡುವರು. ಈ ಮೈತ್ರಾವರುಣನು ಪ್ರೈಷಮಂತ್ರಗಳಿಂದ ಇತರ ಋತ್ವಿಜರಿಗೆ ಆಯಾಯ ಕಾರ್ಯಗಳನ್ನು ಮಾಡುವಂತೆ ಆಜ್ಞಾಪಿಸುವನು. ಯಜುರ್ವೇದದಲ್ಲಿ (ತೈ. ಸಂ. ೬-೧) **ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ** ಎಂದು ಹೇಳಿರುವುದು.

ಹೀಗೆ ಕೆಲವು ವಿಶೇಷಣಗಳು ಎರಡು ಹೋತೃಗಳಿಗೂ ಸಮಾನವಾಗಿದ್ದರೂ, ಮಾನವನಾದ ಹೋತೃವಿನ ಕರ್ತವ್ಯವನ್ನೇ ಸೂಚಿಸುವಂತೆ, ಇನ್ನು ಕೆಲವು ವಿಶೇಷಣಗಳೂ ಸಹ ಇಬ್ಬರಿಗೂ ಸಾಧಾರಣವಾಗಿದ್ದರೂ **ಅವು ದೇವಹೋತೃವಾದ** ಅಗ್ನಿಯ ಕರ್ತವ್ಯಗಳನ್ನೇ ವರ್ಣಿಸುತ್ತವೆ. ಉದಾಹರಣೆಗೆ—

**ದೈವ್ಯಾ ಹೋತಾರಾ ಪ್ರಥಮಾ ನ್ಯೃಂಜೇ ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ ।**
**ಋತಂ ಶಂಸಂತ ಋತಮಿತ್ತ ಆಹುರನು ವ್ರತಂ ವ್ರತಪಾ ದೀಧ್ಯಾನಾಃ ॥**
(ಋ. ಸಂ. ೩-೪-೭)

ಎಂಬ ಋಕ್ಕಿನಲ್ಲಿ **ಪ್ರಥಮಾ** ಎಂಬ ವಿಶೇಷಣವು ದೇವಹೋತೃವಾದ ಅಗ್ನಿಪರವೇ ಆಗಿದೆ ಎಂಬುದರಲ್ಲಿ ಸಂದೇಹವಿಲ್ಲ. ೧-೧೩-೪ ರಲ್ಲು **ಹೋತಾ ಮನುರ್ಹಿತಃ** ಎಂದು ಅಗ್ನಿಯ ವಿಶೇಷಣವಾಗಿದೆ. ಈ ಎರಡು ಹೋತೃಗಳಿಗೂ ಇರತಕ್ಕ ನಿಷ್ಕರ್ಷವಾದ ವ್ಯತ್ಯಾಸವನ್ನು ಪ್ರೈಷ ಸೂಕ್ತದಲ್ಲಿ ಈ ರೀತಿ ಹೇಳಿದೆ.

**ಹೋತಾ ಯಕ್ಷದ್ದೈವ್ಯಾ ಹೋತಾರಾ ಮಂದ್ರಾ ಪೋತಾರಾ ಕವೀ ಪ್ರಚೇತಸಾ । ಸ್ವಿಷ್ಟಮದ್ಯಾನ್ಯಃ ಕರದಿಷಾ ಸ್ವಭಿಗೂರ್ತಮನ್ಯ ಊರ್ಜಾ ಸತವಸೇಮಂ ಯಜ್ಞಂ ದಿವಿ ದೇವೇಷು ಧತ್ತಾಂ ವೀತಾಮಾಜ್ಯಸ್ಯ ಹೋತರ್ಯಜ ॥**
(ತೈ. ಬ್ರಾ. ೩ ೬-೨-೨)

ಎಂಬ ವಾಕ್ಯದಲ್ಲಿ ಒಬ್ಬ ಹೋತೃವು ಅನ್ನರೂಪವಾದ ಹವಿಸ್ಸಿನಿಂದ ಯಜ್ಞವನ್ನು ಸ್ವೀಕಾರಾರ್ಹವನ್ನಾಗಿಮಾಡಲೆಂದೂ ಇನ್ನೊಬ್ಬನು ಈ ಯಜ್ಞವನ್ನು ಸ್ವರ್ಗದಲ್ಲಿ ದೇವತೆಗಳ ನಡುವೆ ಸ್ಥಾಪಿಸಲೆಂದೂ ಸೂಚಿಸಿದೆ. ಈ ಕಾರ್ಯವಿನಿಮಯವು ಮಾನವನಾದ ಹೋತೃವಿಗೂ ದೇವಹೋತೃವಾದ ಅಗ್ನಿಗೂ ಇರುವ ವ್ಯತ್ಯಾಸವನ್ನು ತಿಳಿಸುತ್ತದೆ. ಐತರೇಯ ಬ್ರಾಹ್ಮಣದಲ್ಲಿ—

**ದೈವ್ಯಾ ಹೋತಾರ ಯಜತಿ ಪ್ರಾಣಾಪಾನೌ ವೈ ದೈವ್ಯಾ ಹೋತಾರಾ ಪ್ರಾಣಾಪಾನಾವೇವ ತತ್ಪ್ರೀಣಾತಿ ಪ್ರಾಣಾಪಾನೌ ಯಜಮಾನೇ ದಧಾತಿ ।**
(ಐ. ಬ್ರಾ. ೨-೪)

ಎಂದು ಈ ಹೋತೃಗಳಿಗೂ, ಪ್ರಾಣಾಪಾನಗಳಿಗೂ ತಾದಾತ್ಮ್ಯವನ್ನು ಹೇಳಿ, ಈ ಮಂತ್ರವನ್ನು ಪಠಿಸತಕ್ಕವನು ಯಜ್ಞಕರ್ತನಿಗೆ ಪ್ರಾಣಾಪಾನಗಳ ಸುಸ್ಥಿತಿಯನ್ನು ಸಂಪಾದಿಸಿ ಕೊಡುತ್ತಾನೆಂದು ಹೇಳಿದೆ. ನಿರುಕ್ತದಲ್ಲಿ,

**ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ।**
(ನಿ. ೮-೧೨)

ಎಂದು ಸಾಯಣರ ಅರ್ಥವನ್ನು ಸಮರ್ಥಿಸುವ ಆಧಾರವಾಕ್ಯಗಳಿಂದ **ಪಾರ್ಥಿವವಾದ ಅಗ್ನಿ** ಮತ್ತು ಅಂತರಿಕ್ಷಸ್ಥನಾದ ಅಗ್ನಿಯೆಂದು ಹೇಳಿದೆ. **ಬೃಹದ್ದೇವತೆಯಲ್ಲಿ**ಯೂ ಇದೇ ಅರ್ಥವನ್ನನುಮೋದಿಸುತ್ತಾ,

ದೈವ್ಯಾವಿತಿ ತು ಹೋತಾರಾವಗ್ನೀ ಪಾರ್ಥಿವಮಧ್ಯಮೌ ।
ದಿವ್ಯಾದಗ್ನೇರ್ಹಿ ಜಜ್ಞಾತೇ ದೈವ್ಯೌ ತೇನೇಹ ಜನ್ಮನಾ ॥

(ಬೃ. ದೇ. ೩.೧೧)

ಈ ಇಬ್ಬರು ಹೋತೃಗಳೂ ಪಾರ್ಥಿವ ಮತ್ತು ಮಧ್ಯಮರಾದ (ಅಂತರಿಕ್ಷಸ್ಥರಾದ) ಅಗ್ನಿಗಳೆಂದು ಹೇಳಿದ್ದಾರೆ.

॥ ಸಂಹಿತಾಪಾಠಃ ॥

ಕತ್ಯಗ್ನಯಃ ಕತಿ ಸೂರ್ಯಾಸಃ ಕತ್ಯುಷಾಸಃ ಕತ್ಯು ಸ್ವಿದಾಪಃ ।
ನೋಪಸ್ಪಿಜಂ ವಃ ಪಿತರೋ ವದಾಮಿ ಪೃಚ್ಛಾಮಿ ವಃ ಕವಯೋ ವಿದ್ಮನೇ
ಕಂ ॥ ೧೮ ॥

॥ ಪದಪಾಠಃ ॥

ಕತಿ । ಅಗ್ನಯಃ । ಕತಿ । ಸೂರ್ಯಾಸಃ । ಕತಿ । ಉಷಸಃ । ಕತಿ । ಊಂ ಇತಿ । ಸ್ವಿತ್ । ಆಪಃ ।
ನ । ಉಪऽಸ್ಪಿಜಂ । ವಃ । ಪಿತರಃ । ವದಾಮಿ । ಪೃಚ್ಛಾಮಿ । ವಃ । ಕವಯಃ । ವಿದ್ಮನೇ । ಕಂ ॥೧೮॥

॥ ಸಾಯಣಭಾಷ್ಯಂ ॥

ಏವಂ ವಿವದಮಾನಾವಗ್ನಿ ಜಾಯೂ ಪಿತ್ರ್ಯಾನ್ಪ್ರಶ್ನಮೇನಂತುಃ । ತತ್ರ ಮಧ್ಯಮಸ್ತಾನ್ಪೃಚ್ಛತಿ । ಕತ್ಯಗ್ನಯಃ । ಅಗ್ನಯಃ ಕತಿ ಕತಿಸಂಖ್ಯಾಕಾಃ । ಸೂರ್ಯಾಸಃ ಸೂರ್ಯಾಶ್ಚ ಕತಿಸಂಖ್ಯಾಕಾಃ । ಉಷಾಸ ಉಷಸಶ್ಚ ಕತಿಸಂಖ್ಯಾಕಾಃ । ಆಪಶ್ಚ ಕತಿ । ಉ ಇತಿ ಪೂರಣಃ । ಸ್ವಿಚ್ಛಬ್ದೋऽತ್ರ ವಿಚಾರಣಾರ್ಥಃ । ಹೇ ಪಿತರಃ ವೋ ಯುಷ್ಮಾಕಮುಪಸ್ಪಿಜಂ । ಉಪಸ್ಪಿಜಮಿತಿ ಸ್ಪರ್ಧಾಯುಕ್ತಂ ವಚನಮುಚ್ಯತೇ । ಪೂರ್ವೋಕ್ತಂ ಪ್ರಶ್ನವಚನಮೇತನ್ನ ವದಾಮಿ ಕಿಂತರ್ಹ್ಯಹಮಜಾನನ್ ಹೇ ಕವಯೋ ಮೇಧಾವಿನಃ ಯುಷ್ಮಾನ್ವಿದ್ಮನೇ ವಿಜ್ಞಾನಾಯ ಕಂ ಸುಖಂ ಸ್ವರೂಪಪರ್ಯಾಲೋಚನ-ಕ್ಲೇಶಮಂತರೇಣ ಪೃಚ್ಛಾಮಿ । ಅತ್ರೋತ್ತರಾಣಿ ವಾಲಖಿಲ್ಯಸಂಹಿತಾಯಾಂ ದರ್ಶಿತಾನಿ । ಏಕ ಏವಾಗ್ನಿರ್ಬಹುಧಾ ಸಮಿದ್ಧ ಏಕಃ ಸೂರ್ಯೋ ವಿಶ್ವಮನು ಪ್ರಭೂತಃ । ಏಕೈವೋಷಾಃ ಸರ್ವಮಿದಂ ವಿ ಭಾತ್ಯೇಕಂ ವಾ ಇದಂ ವಿ ಬಭೂವ ಸರ್ವಂ । ಋ. ೮.೫೮.೨ । ಇತಿ ॥

॥ ಪ್ರತಿಪದಾರ್ಥ ॥

ಕತಿ ಅಗ್ನಯಃ—ಅಗ್ನಿಗಳ ಸಂಖ್ಯೆಯೆಷ್ಟು । ಕತಿ ಸೂರ್ಯಾಸಃ—ಸೂರ್ಯನ ಸಂಖ್ಯೆಯೆಷ್ಟು । ಕತಿ ಉಷಸಃ—ಉಷಸ್ಸುಗಳ ಸಂಖ್ಯೆಯೆಷ್ಟು । ಕತಿ ಸ್ವಿದಾಪಃ—ಅಬ್ದೇವತೆಗಳ ಸಂಖ್ಯೆಯೆಷ್ಟು । ಪಿತರಃ—ಎಲೈ ಪಿತೃಗಳೇ । ವಃ—ನಿಮ್ಮೊಂದಿಗೆ । ಉಪಸ್ಪಿಜಂ—ಸ್ಪರ್ಧೆಯ ಉದ್ದಿಶ್ಯದಿಂದ । ನ ವದಾಮಿ—ಮಾತನಾಡು

ವುದಿಲ್ಲ । **ಕವಯಃ**—ಎಲ್ಯೆ ಮೇಧಾವಿಗಳೇ । **ವಿದ್ಮನೇ**—ಜ್ಞಾನಸಂಪಾದನೆಗಾಗಿ ಮಾತ್ರ । **ಕಂ ಪೃಚ್ಛಾಮಿ**–ಸುಲಭವಾದ ಪ್ರಶ್ನೆಯನ್ನು ಹಾಕುತ್ತೇನೆ.

। ಭಾವಾರ್ಥ ।

ಎಲೈ ಪಿತೃಗಳೇ, ಅಗ್ನಿಗಳ ಸಂಖ್ಯೆಯೆಷ್ಟು ? ಸೂರ್ಯರ ಸಂಖ್ಯೆಯೆಷ್ಟು ? ಉಷಸ್ಸುಗಳ ಸಂಖ್ಯೆಯೆಷ್ಟು ? ಅಬ್ದೇವತೆಗಳ ಸಂಖ್ಯೆಯೆಷ್ಟು ? ನಿಮ್ಮೊಂದಿಗೆ ಸ್ಪರ್ಧಿಸುವ ಉದ್ದಿಶ್ಯದಿಂದ ಮಾತನಾಡುತ್ತಿಲ್ಲ. ಎಲೈ ಮೇಧಾವಿಗಳೇ, ಜ್ಞಾನಸಂಪಾದನೆಗೆ ಮಾತ್ರ ಈ ಪ್ರಶ್ನೆಯನ್ನು ಸುಲಭವಾಗಿ ಕೇಳುತ್ತಿದ್ದೇನೆ.

## English Translation

How many fires are there, how many suns, how many dawns, how many waters? I address you, O Pitris, not in rivalry, I ask you, sages, in order to know (the truth).

। ಸಂಹಿತಾಪಾಠಃ ।

ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ ।
ತಾವದ್ದಧಾತ್ಯುಪ ಯಜ್ಞಮಾಯನ್ಬ್ರಾಹ್ಮಣೋ ಹೋತುರವರೋ
ನಿಷೀದನ್ ॥ ೧೯ ॥

। ಪದಪಾಠಃ ।

ಯಾವತ್ಽಮಾತ್ರಂ । ಉಷಸಃ । ನ । ಪ್ರತೀಕಂ । ಸುಽಪರ್ಣ್ಯಃ । ವಸತೇ । ಮಾತರಿಶ್ವಃ ।
ತಾವತ್ । ದಧಾತಿ । ಉಪ । ಯಜ್ಞಂ । ಆಽಯನ್ । ಬ್ರಾಹ್ಮಣಃ । ಹೋತುಃ । ಅವರಃ । ನಿಽಸೀದನ್ ॥

। ಸಾಯಣಭಾಷ್ಯಂ ।

ಪ್ರಕೃತಸ್ಯ ವೈಶ್ವಾನರಸ್ಯ ವಿಷಯೇ ಯಃ ಪ್ರಶ್ನಸ್ತಸ್ಯ ನಿರ್ಣಯಮನಯಾ ವದಂತಿ । ಹೇ ಮಾತರಿಶ್ವೋ ಮಾತರ್ಯಂತರಿಕ್ಷೇ ಶ್ವಸನ್ ಮಾಧ್ಯಮಿಕ ವಾಯೋ ಯಾವನ್ಮಾತ್ರಂ ಯಾವದೇವ ಸುಪರ್ಣ್ಯಃ ಸುಪತನಾ ರಾತ್ರ್ಯಯ ಉಷಸಃ ಪ್ರತೀಕಂ ಮುಖಂ ಪ್ರಕಾಶಾಖ್ಯಂ ದರ್ಶನಂ ವಾ । ನೇತಿ ಪೂರಣಃ । ವಸತೇ ಆಚ್ಛಾದಯಂತಿ ತಾವದೇವ ಬ್ರಾಹ್ಮಣೋ ಹೋತಾವರೋ ನಿಕೃಷ್ಟೋ ಹೋತುರಸ್ಯಾಗ್ನೇರ್ವೈಶ್ವಾನರಸ್ಯ ದೈವ್ಯಸ್ಯ ಹೋತುರ್ನಿಷೀದನ್ ಹೌತ್ರಂ ಕರ್ಮ ಕರ್ತುಮುಪವಿಶನ್ ಯಜ್ಞಮಾಯನ್ನುಪಗಚ್ಛನ್ನುಪ ದಧಾತಿ । ಹೋತೃಕರ್ಮ ಸ್ವಬುದ್ಧ್ಯಾ ಧಾರಯತಿ । ತಥಾ ಚ ಯಾಸ್ಕಃ । ಯಾವನ್ಮಾತ್ರಮುಷಸಃ ಪ್ರತ್ಯಕ್ತಂ ಭವತಿ ಪ್ರತಿದರ್ಶನಮಿತಿ ವಾಸ್ತ್ಯುಪಮಾನಸ್ಯ ಸಂಪ್ರತ್ಯರ್ಥೇ ಪ್ರಯೋಗ ಇಹೇವ ನಿಷೀದೇತಿ ಯಥಾ ಸುಪರ್ಣ್ಯಃ ಸುಪತನಾ ಏತಾ ರಾತ್ರಯೋ ವಸತೇ ಮಾತರಿಶ್ವ.

ಇರ್ಜ್ಯೋತಿರ್ವರ್ಣಸ್ಯ ತಾವದುಪದಧಾತಿ ಯಜ್ಞಮಾಗಚ್ಛನ್ಬ್ರಾಹ್ಮಣೋ ದೋತಾಸ್ಯಾಗ್ನೇರ್ಹೋತುರವರೋ ನಿಷೀದನ್ ಹೋತೃಜಪಸ್ತ್ವಸಗ್ನಿರ್ವೈಶ್ವಾನರೀಯೋ ಭವತಿ ॥ ನಿ. ೭-೩೧ । ಇತಿ ॥

॥ ಪ್ರತಿಪದಾರ್ಥ ॥

ಮಾತರಿಶ್ವಃ—ವಾಯುರೂಪನಾದ ಎಲೈ ಅಗ್ನಿಯೇ । ಯಾವನ್ಮಾತ್ರಂ—ಎಲ್ಲಿಯವರೆಗೆ । ಸುಪರ್ಣ್ಯಃ—ಉತ್ತಮವಾದ ಆವಿರ್ಭಾವವುಳ್ಳ ರಾತ್ರಿಗಳು । ಉಷಸಃ ಪ್ರತೀಕಂ—ಉಷಸ್ಸಿನ ಮುಖವನ್ನು । ವಸತೇ—ಹೊದ್ದಿಸುವವೋ । ತಾವತ್—ಅಲ್ಲಿಯವರೆಗೆ । ಅವರಃ ಬ್ರಾಹ್ಮಣಃ—ಪೃಥ್ವಿಯಲ್ಲಿರುವ ಹೋತೃವು । ಹೋತುಃ—ಹೋಮಸಂಪಾದಕನಾದ ಅಗ್ನಿಯ ಕರ್ಮವನ್ನಾಚರಿಸಲು । ನಿಷೀದನ್—ಕುಳಿತುಕೊಂಡು । ಯಜ್ಞಂ—ಯಜ್ಞವನ್ನು । ಆಯನ್—ಸಮಿಾಪಿಸಿ । ಉಪ ದಧಾತಿ—ತನ್ನ ಕರ್ಮಜ್ಞಾನವನ್ನು ಹೊಂದುತ್ತಾನೆ.

। ಭಾವಾರ್ಥ ।

ವಾಯುರೂಪನಾದ ಎಲೈ ಅಗ್ನಿಯೇ, ಎಲ್ಲಿಯವರೆಗೆ ಉತ್ತಮವಾದ ಆವಿರ್ಭಾವವುಳ್ಳ ರಾತ್ರಿಗಳು ಉಷಸ್ಸಿನ ಮುಖವನ್ನು ಹೊದ್ದಿಸುವವೋ, ಅಲ್ಲಿಯವರೆಗೆ ಪೃಥ್ವಿಯಲ್ಲಿರುವ ಹೋತೃವು ಹೋಮಸಂಪಾದಕನಾದ ಅಗ್ನಿಯ ಕರ್ಮವನ್ನು ಆಚರಿಸಲು ಕುಳಿತು ಯಜ್ಞವನ್ನು ಸಮಿಾಪಿಸಿ ತನ್ನ ಕರ್ತವ್ಯಜ್ಞಾನವನ್ನು ಹೊಂದುತ್ತಾನೆ.

## English Translation

As long, Matarishvan, as the swiftly-moving (nights) cover the face of the dawn, (so long) the Brahman, the inferior sitting down (to perform the work) of the Hotri, approaching the sacrifice supports (the ceremony).

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರ ನಿರ್ವಚನವು ಈರೀತಿ ಇದೆ—

**ಯಾವನ್ಮಾತ್ರಮುಷಸಃ ಪ್ರತ್ಯಕ್ತಂ ಭವತಿ ಪ್ರತಿದರ್ಶನಮಿತಿ ವಾಸ್ಯೋಪಮಾನಸ್ಯ ಸಂಪ್ರತ್ಯರ್ಥೇ ಪ್ರಯೋಗ ಇಹೇವ ನಿಧೇಹೀತಿ ಯಥಾ ಸುಪರ್ಣ್ಯಃ ಸುಪತನಾ ಏತಾ ರಾತ್ರಯೋ ವಸತೇ ಮಾತರಿಶ್ವನ್ ಜ್ಯೋತಿರ್ವರ್ಣಸ್ಯ ತಾವದುಪದಧಾತಿ ಯಜ್ಞಮಾಗಚ್ಛನ್ ಬ್ರಾಹ್ಮಣೋ ಹೋತಾಸ್ಯಾಗ್ನೇರ್ಹೋತುರವರೋ ನಿಷೀದನ್ ॥** (ನಿ. ೭.೩೧)

ಈ ವಿಷಯದಲ್ಲಿ ಇನ್ನೂ ಒಂದು ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ. ಹಿಂದಿನ ಋಕ್ಕಿನಲ್ಲಿ ಅಗ್ನಿ ಮತ್ತು ವಾಯುಗಳನ್ನು ಸ್ತುತಿಸಿದೆ. ಈ ಋಕ್ಕಿನಲ್ಲಿ ಕೇವಲ ಅಗ್ನಿಯನ್ನೇ ಸ್ತುತಿಸಲಾಗಿದೆ. ಮಾತರಿಶ್ವನು (ವಾಯುವು) ಒಬ್ಬ ಪುರುಷನನ್ನು ಕುರಿತು–ದೇವತೆಗಳ ಹೋತೃವಾದ ಅಗ್ನಿಗೆ ಇರುವ ವಿಜ್ಞಾನವನ್ನು (ಯಜ್ಞಾನುಷ್ಠಾನಕರ್ಮದಲ್ಲಿರುವ ತಿಳುವಳಿಕೆಯನ್ನು) ಯಜ್ಞದಲ್ಲಿ ಭಾಗವಹಿಸುವ ಮನುಷ್ಯಹೋತೃವಾದ ಬ್ರಾಹ್ಮಣನು ಧರಿಸಬಲ್ಲನೇ ಎಂದರೆ ತಿಳಿಯಬಲ್ಲನೇ ಎಂದು ಕೇಳಲಾಗಿ ಅದಕ್ಕೆ ಆ ಪುರುಷನು ಈ ರೀತಿ ಪ್ರತ್ಯುತ್ತರವನ್ನು ಹೇಳಿರುವನು.

ಎಲೈ ಮಾತರಿಶ್ವನೇ, ಉತ್ತಮವಾದ ರೆಕ್ಕೆಗಳುಳ್ಳ ಪಕ್ಷಿಗಳು ಎಲ್ಲಿಯವರೆಗೆ (ಎಷ್ಟು ಹೊತ್ತಿನವರೆಗೆ) ಉಷಸ್ಸನ್ನು ಧರಿಸಿರುವುವೋ ಅಲ್ಲಿಯವರೆಗೆ ಯಜ್ಞವೇದಿಯಲ್ಲಿ ಯಜ್ಞಾಗ್ನಿಯ ಸಮಿಾಪದಲ್ಲಿ ಅಗ್ನಿಗಿಂತ ನೀಚಸ್ಥಾನದಲ್ಲಿ ಕುಳಿ

ತಿರುವ ಮನುಷ್ಯಹೋತೃವಾದ ಬ್ರಾಹ್ಮಣನು ಅದನ್ನು ಧರಿಸುವನು. (ಎಂದರೆ ಅಗ್ನಿಯ ಅನುಗ್ರಹದಿಂದ ಸ್ವಲ್ಪಮಟ್ಟಿಗೆ ತಿಳಿಯುವನು).

ಈ ಋಕ್ಕಿನಲ್ಲಿರುವ ನ ಎಂಬ ಶಬ್ದಕ್ಕೆ ಉಪಮಾರ್ಥವಿರುವುದಿಲ್ಲ. ಸಂಪ್ರತ್ಯರ್ಥ (ಈಗ ಎಂಬ ಅರ್ಥ) ವಿರುವುದು. ಹೇಗೆಂದರೆ ಇಹ ಎಂಬ ಶಬ್ದಕ್ಕೆ ಇಲ್ಲಿ ಎಂಬರ್ಥವಿದ್ದರೂ **ಇಹೈವ ನಿಧೇಹಿ** ಎಂಬ ವಾಕ್ಯಕ್ಕೆ ಈಗಲೇ ಇಡು ಎಂಬರ್ಥವಿರುವಂತೆ ಎಂದು ತಿಳಿಯಬೇಕು. ಆದ್ದರಿಂದ **ಯಾವನ್ಮಾತ್ರಮುಷಸೋ ನ ಪ್ರತೀಕಂ** ಎಂಬ ವಾಕ್ಯಕ್ಕೆ ರಾತ್ರಿಯ ಕೊನೆಯಲ್ಲಿರುವ ಉಷಃಕಾಲವು ಎಲ್ಲಿಯವರಗೆ ಎಂದರೆ ಎಷ್ಟು ಕಾಲದವರೆಗೆ (ಸ್ವಲ್ಪಕಾಲ ಮಾತ್ರ) ವ್ಯಾಪಿಸಿರುವುದೋ ಅಷ್ಟುಕಾಲಮಾತ್ರ ಎಂದರ್ಥವು. **ಸುಪರ್ಣ್ಯಃ ಸುಪತನಾ ಏತಾ ರಾತ್ರಯೋ ವಸತೇ ಮಾತ-ರಿಶ್ವನ್** ಎಂಬ ವಾಕ್ಯಕ್ಕೆ ಎಲೈ ಮಾತರಿಶ್ವನೇ, ಉತ್ತಮವಾದ ರೆಕ್ಕೆಗಳುಳ್ಳ ಪಕ್ಷಿಗಳು ಹಾರಾಡುತ್ತಾ ಉಷಃಕಾಲವನು ಧರಿಸಿರುವವು ಎಂದರ್ಥವು. ಇಲ್ಲಿ ಪಕ್ಷಿಗಳು ಎಂದರೆ ರಾತ್ರಿಗಳು ಎಂದರ್ಥ. ಇದನ್ನು ಸೂಚಿಸುವ ಸುಪರ್ಣ್ಯ ಶಬ್ದಕ್ಕೆ ನಾನಾವಿಧ ರೆಕ್ಕೆಗಳು ಎಂಬರ್ಥವು. ಉಷಃಕಾಲದ ನಾನಾವಿಧ (ಉತ್ತಮವಾದ) ಬಣ್ಣಗಳು ಎಂಬರ್ಥ ವನ್ನು ಸೂಚಿಸುವುದು. ಆದ್ದರಿಂದ ಸುಪರ್ಣ್ಯಃ ಎಂದರೆ ರಾತ್ರಿಯ ಅಂತ್ಯ ಭಾಗದಲ್ಲಿ ಉಷಸ್ಸು ಉದಯಿಸಿದಾಗ ಆ ಉಷಸ್ಸು ನಾನಾವಿಧ ಅಥವಾ ರಮಣೀಯವಾದ ಬಣ್ಣಗಳುಳ್ಳದ್ದಾಗಿರುವುದು ಎಂದಭಿಪ್ರಾಯವು. ಈ ಉಷಃಕಾಲದ ಪ್ರಮಾಣವು ಅತ್ಯಲ್ಪವಾಗಿರುವುದು. ಉಷಃಕಾಲಾನಂತರ ಅತಿಶೀಘ್ರವಾಗಿ ಸೂರ್ಯೋದಯವಾಗುವುದರಿಂದ ಉಷಃ ಕಾಲವು ಪ್ರಮಾಣದಲ್ಲಿ ಅತ್ಯಲ್ಪವಾಗಿರುವುದು. ಬಹುಸ್ವಲ್ಪ ಕಾಲದವರೆಗೆ ಮಾತ್ರ ಎಂದಭಿಪ್ರಾಯವು. ಮನುಷ್ಯ ಹೋತೃವು ದೇವಹೋತೃವಾದ ಅಗ್ನಿಗಿಂತ ಕನಿಷ್ಠನು. ಆದುದರಿಂದ ಮನುಷ್ಯಹೋತೃವಾದ ಬ್ರಾಹ್ಮಣನು ಯಜ್ಞ ವೇದಿಯಲ್ಲಿ ಪ್ರತಿಷ್ಠಾಪಿತನಾಗಿರುವ ಅಗ್ನಿಗಿಂತ ನೀಚಸ್ಥಾನದಲ್ಲಿ ಕುಳಿತು ಅತ್ಯಲ್ಪಕಾಲದವರೆಗೆ ಮಾತ್ರ, ವಿಶೇಷಪ್ರಾಜ್ಞ ನಾದ ಅಗ್ನಿಯ ಅನುಗ್ರಹದಿಂದ ಹೋತೃಕರ್ಮವನ್ನು ನೆರವೇರಿಸುವನು ಎಂದು ಮುಖ್ಯಾಭಿಪ್ರಾಯವು. ಇದರಿಂದ ಮನುಷ್ಯನ ಅಲ್ಪತ್ವವೂ ಅಗ್ನಿಯ ಮಹತ್ತ್ವವೂ ವ್ಯಕ್ತಪಡುವುದು. ಈ ಋಕ್ಕಿನಲ್ಲಿ ಮನುಷ್ಯಹೋತೃವಾದ ಬ್ರಾಹ್ಮ ಣನು ಯಜ್ಞವೇದಿಯಲ್ಲಿ ಕುಳಿತು ದೇವಹೋತೃವಾದ ಅಗ್ನಿಯನ್ನು ಸ್ತುತಿಸುತ್ತಾ ಹೋತೃಕರ್ಮವನ್ನು ನೆರವೇರಿಸು ವನು ಎಂದು ಹೇಳಿರುವುದರಿಂದ ಇಲ್ಲಿ ವೈಶ್ವಾನರಾಗ್ನಿಯೆಂದರೆ ಪಾರ್ಥಿವಾಗ್ನಿಯನ್ನೇ ಸ್ತುತಿಸಲಾಗಿದೆ. ಆದಿತ್ಯನನ್ನಲ್ಲ ಎಂದು ಸ್ಪಷ್ಟವಾಗಿ ವ್ಯಕ್ತವಾಗಿರುವುದು.

**ಹೋತೃಜಪಸ್ತ್ವನಗ್ನಿರ್ವೈಶ್ವಾನರಿಯೋ ಭವತಿ ದೇವ ಸತವಿರೇತಂ ತ್ವಾ ವೃಣತೇಽಗ್ನಿಂ ಹೋತ್ರಾಯ ಸಹ ಪಿತ್ರಾ ವೈಶ್ವಾನರೇಣೇತೀಮಮೇವಾಗ್ನಿಂ ಸವಿತಾರಮಾಹ ಸರ್ವಸ್ಯ ಪ್ರಸ-ವಿತಾರಂ ಮಧ್ಯಮಂ ವೋತ್ತಮಂ ವಾ ಪಿತರಂ ||**

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ | ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ಭಜೇತೇ ||**

(ನಿ. ೭-೩೧)

ಯಜ್ಞದಲ್ಲಿ ಹೋತೃವು ಪಠಿಸುವ ಜಪಮಂತ್ರಾದಿಗಳು ವೈಶ್ವಾನರನನ್ನೇ ಸಂಬೋಧಿಸಿ ಸ್ತುತಿಸುತ್ತವೆ. ಅಗ್ನಿಯನ್ನಲ್ಲ, ಮಂತ್ರಜಪವು—**ದೇವಸವಿತರೇತಂ ತ್ವಾ ವೃಣತೇಽಗ್ನಿ ಹೋತ್ರಾಯ ಸಹ ಪಿತ್ರಾ ವೈಶ್ವಾನರೇಣ** ಎಂದಿರು ವುದು. ಎಲೈ ಪ್ರಕಾಶನಾನವಾದ ಸವಿತೃದೇವನೇ, ಸ್ತೋತ್ರಮಾಡುವುದಕ್ಕಾಗಿ ಹೋತೃವು ನಿನ್ನನ್ನೇ ಎಂದರೆ

ಅಗ್ನಿಯನ್ನೇ ನಿನ್ನ ತಂದೆಯಾದ ವೈಶ್ವಾನರನೊಡನೆ ಆರಿಸಿಕೊಂಡಿರುವನು ಎಂಬ ವಾಕ್ಯಕ್ಕೆ ವಿವರಣೆಯು ಅವಶ್ಯಕವು. ಇಲ್ಲಿ ಋಷಿಯು ಅಗ್ನಿಯನ್ನು ಸವಿತೃವೆಂದೇ ಕರೆದಿರುವನು. ಇಲ್ಲಿ ಸವಿತೃವೆಂದರೆ (ಸವಿತೃ ಶಬ್ದಕ್ಕೆ) **ಸಮಸ್ತ ವಸ್ತುಜಾತಗಾನ** (ಅಥವಾ ಪ್ರಾಣಿಗಳ) ಉತ್ಪತ್ತಿಕಾರಕನು ಎಂದರ್ಥವು. ಈ ಅರ್ಥದಲ್ಲಿಯೇ ಇಲ್ಲಿ ಈ ಶಬ್ದ ಪ್ರಯೋಗವಿರುವುದು. ಮಧ್ಯಮಸ್ಥಾನೀಯನಾದ ವಾಯುವನ್ನು ಅಥವಾ ಉತ್ತಮ (ಸ್ವರ್ಗ) ಸ್ಥಾನೀಯವಾದ ಆದಿತ್ಯನನ್ನು ತಂದೆಯೆಂದು ಸಂಬೋಧಿಸಿರುವನು.

ಸೂಕ್ತದಲ್ಲಿ ಯಾವ ದೇವನನ್ನು ಸ್ತುತಿಸಲಾಗಿದೆಯೋ, ಯಾವ ದೇವನಿಗಾಗಿ (ಯಾವ ದೇವತೆಯನ್ನುದ್ದೇಶಿಸಿ ಹವಿಸ್ಸು ಹೋಮಮಾಡಲ್ಪಡುವುದೋ ಆ ವೈಶ್ವಾನರನೇ ಈ ಪಾರ್ಥಿವಾಗ್ನಿಯು.

ಅಗ್ನಿ ಮಥನಕ್ಕೆ ಪೂರ್ವಪ್ರಸಿದ್ಧವಾದ ಒಂದು ಕಥೆ ಇದೆ, ಆದರಲ್ಲಿ ಹೇಳುವಂತೆ—**ಸರ್ವಮಿದಮಂಧಂತಮ ಆಸೀತ್ । ಅಥ ಮಾತರಿಶ್ವಾಕಾಶೇ ಸೂಕ್ಷ್ಮಮಗ್ನಿಮಪಶ್ಯತ್ । ತಮಮಂಥ್ನಾತ್ । ಮಥಿತ್ವಾ ಜಾನಯದಿತಿ ।** ಹಿಂದೆ ಲೋಕವೆಲ್ಲವೂ ಕಗ್ಗತ್ತಲೆಯಿಂದ ಆವೃತವಾಗಿದ್ದಿತು ಆಗ ಮಾತರಿಶ್ವನು ಸೂಕ್ಷ್ಮರೂಪದಿಂದಿರುವ ಅಗ್ನಿಯನ್ನು ಆಕಾಶದಲ್ಲಿ ಗುರ್ತಿಸಿ ಮಥನಮಾಡಿದನು. ಅನಂತರ ಯಜ್ಞಕ್ಕೆ ಅನುಕೂಲವಾಗುವಂತೆ ಆ ಅಗ್ನಿಯನ್ನು ಪೃಥ್ವಿಗೆ ಕರೆತಂದನು. ಎಂದು ಪ್ರಸಿದ್ಧವಾದ ಕಥೆಯು ಋಗ್ವೇದದಲ್ಲಿ—

**ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**
(ಋ. ಸಂ. ೧-೯೩-೬)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**
(ಋ. ಸಂ. ೬-೮-೪)

ಎಂಬ ಋಕ್ಕುಗಳಲ್ಲಿಯೂ ಇತರ ಋಕ್ಕುಗಳಲ್ಲಿಯೂ ಮಾತರಿಶ್ವನು ಕರೆತಂದನಂತರವೇ ಅಗ್ನಿಯು ಯಜ್ಞಗೃಹದಲ್ಲಿ ಬೆಳಗಿದನು ಎಂಬ ಅಗ್ನಿಪ್ರಶಂಸೆಯ ವರ್ಣನವಿದೆ.

**ಮಾತರಿಶ್ವಾ—ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ।** ಅಂತರಿಕ್ಷದಲ್ಲಿ ಶ್ವಾಸಮಾಡುವುದರಿಂದ ಅಥವಾ ಸಂಚರಿಸುವುದರಿಂದ ವಾಯುವಿಗೆ **ಮಾತರಿಶ್ವ**ನೆಂದು ಹೆಸರು ಬಂದಿದೆ. ಋ. ಸಂ. ೧-೯೬-೪ ನೇ ಋಕ್ಕಿನಲ್ಲಿ ಈ ಪದಕ್ಕೆ ಅಗ್ನಿಯೆಂದೂ ೧-೧೪೧-೩ ನೆಯದರಲ್ಲಿ ಯಜಮಾನನೆಂದೂ ಅರ್ಥ ಮಾಡುತ್ತಾರೆ. ಆದರೆ ಇಂತಹ ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲ್ಲೆಲ್ಲಾ **ಮಾತರಿಶ್ವಾ** ಎಂದರೆ ವಾಯುವೆಂದೇ ಅರ್ಥವು

**ಅನ್ಯಂ ಮಾತರಿಶ್ವಾ ದಿವ ಆ ಜಭಾರ**-ಎಂದು ಯಜ್ಞಾತ್ಮನಾದ ಅಗ್ನಿಯ ಅಲೌಕಿಕವಾದ ಆವಿರ್ಭಾವವೂ ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿದೆ. ಯಜ್ಞಗಳಿಗೆ ಕೇತುವೂ, ವಿದಥಕ್ಕೆ ಸಾಧನವೂ, ಯಾಗಾದಿಗಳ ಪಿತೃವೂ, ಅಧ್ವರಗಳ ರಾಜನೂ (ಋ. ಸಂ. ೩-೩-೩ ; ೩-೧೧-೨ ; ೪-೨-೩ ಇತ್ಯಾದಿ ಋಕ್ಕುಗಳಲ್ಲಿರುವ ವರ್ಣನೆಗಳನ್ನು ನೋಡಿ) ಆದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಋಕ್ಸಂಹಿತೆಯು—

ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।

(ಋ. ಸಂ. ೧-೩೧-೩)

ಸ ಜಾಯಮಾನಃ ಪರಮೇ ವ್ಯೋಮನ್ಯಾವಿರಗ್ನಿರಭವನ್ಮಾತರಿಶ್ವನೇ ।

(ಋ. ಸಂ. ೧-೧೪೩-೨)

ಮುಂತಾದ ಋಕ್ಕುಗಳಲ್ಲಿ ಹೊಗಳಿದೆ. ಈ ವಾಯುವು ಯಜ್ಞಕರ್ತರಾದ ಭೃಗುವಿಗಾಗಿಯೂ, ಮನುವಿಗಾಗಿಯೂ ಅತ್ಯಂತ ದೂರಪ್ರದೇಶದಲ್ಲಿ ಗೂಢವಾಗಿದ್ದ ಅಗ್ನಿಯನ್ನು ಕರೆತಂದು ಇವರಿಗೆ ಸಹಾಯಮಾಡಿದನು ಎಂದು ಅನೇಕ ಶ್ರುತಿವಾಕ್ಯಗಳಿವೆ. ಉದಾಹರಣೆಗೆ—

ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।

(ಋ. ಸಂ. ೧-೬೦-೧)

ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ।

(ಋ. ಸಂ. ೧-೧೨೮-೨)

ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ।

(ಋ. ಸಂ. ೩-೯-೫)

ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।

(ಋ. ಸಂ. ೬-೮-೪)

ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ।

(ಋ. ಸಂ. ೧೦-೪೬-೯)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮಾತರಿಶ್ವನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ ಮಾಡಿದನೆಂದು ಶ್ರುತಿಪ್ರಸಿದ್ಧವಾಗಿದೆ.



## ಎಂಭತ್ತೊಂಭತ್ತನೆಯ ಸೂಕ್ತವು.

### ಪೀಠಿಕೆ.

———

ಋಗ್ವೇದದಲ್ಲಿ ಅಗ್ನಿಗೂ, ಇಂದ್ರನಿಗೂ ಇರುವ ಪ್ರಾಧಾನ್ಯತೆಯು ಬೇರೆ ಯಾವ ದೇವತೆಗೂ ಇಲ್ಲ. ಅದರಲ್ಲಿಯೂ ಸೂಕ್ತ ಮತ್ತು ಋಕ್ಕುಗಳ ಸಂಖ್ಯೆಯ ದೃಷ್ಟಿಯಿಂದ ಪರಿಶೀಲಿಸುವುದಾದರೆ ಇಂದ್ರನಿಗೇ ಪ್ರಥಮ ಸ್ಥಾನವು ದೊರೆಯುವುದು. ಸುಮಾರು ಒಟ್ಟು ಋಗ್ವೇದಸಂಹಿತೆಯಲ್ಲಿ ಕಾಲುಭಾಗದಷ್ಟು ಮಂತ್ರಗಳು ಇಂದ್ರನನ್ನೇ ಸ್ತುತಿಸುವವು. ಆದ್ದರಿಂದ ಇಂದ್ರನ ವಿಷಯವನ್ನು ವಿಸ್ತಾರವಾಗಿಯೂ, ವಿಮರ್ಶಾತ್ಮಕವಾಗಿಯೂ ತಿಳಿದುಕೊಳ್ಳುವುದು ಅವಶ್ಯಕವಾದ್ದರಿಂದ ಅದನ್ನೇ ಇಲ್ಲಿ ವಿವರಿಸುವೆವು. ಇಂದ್ರನು ಯಾರು ಎಂಬ ವಿಷಯದಲ್ಲಿ ಹಿಂದೆ ಗೃತ್ಸಮದ ಋಷಿಯು ಋ. ಸಂ. ೨-೧೨ನೆಯ ಸೂಕ್ತದಲ್ಲಿ ಸರಿಯಾದ ಪ್ರತ್ಯುತ್ತರವನ್ನು ಹೇಳಿದಾನೆ. ಅದನ್ನೇ ಇಲ್ಲಿ ಸೂಕ್ಷ್ಮವಾಗಿ ಹೇಳಿ ಇಂದ್ರನ ವಿಷಯದಲ್ಲಿ ಋಗ್ವೇದದಲ್ಲಿ ಕಂಡುಬರುವ ಸಂಗತಿಗಳನ್ನು ಹೇಳಲಾಗಿದೆ.

ಎಲೈ ಜನರೇ, ಯಾವನು ಉತ್ಪನ್ನನಾದೊಡನೆಯೇ ದೇವತೆಗಳಿಗೆ ಪ್ರಧಾನಭೂತನೂ, ಸ್ಥಿರಮನಸ್ಕನೂ, ದ್ಯೋತಮಾನನೂ ಆಗಿ ವೃತ್ರವಧಾದಿರೂಪವಾದ ಕರ್ಮದಿಂದ ಸಕಲ ದೇವತೆಗಳನ್ನೂ ಗೌರವಿಸಿ ರಕ್ಷಿಸಿದನೋ ಮತ್ತು ಯಾವನ ಶರೀರದ ಬಲದಿಂದ ದ್ಯಾವಾಪೃಥಿವಿಗಳೆರಡೂ ಭೀತಿಗೊಂಡವೋ ಸೇನಾರೂಪವಾದ ಬಲದ ಮಹತ್ತ್ವದೊಡನೆ ಕೂಡಿದ ಅವನೇ ಇಂದ್ರನು.

ಎಲೈ ಜನರೇ, ಯಾವನು ಅಲುಗಾಡುತ್ತಿದ್ದ ಪೃಥಿವಿಯನ್ನು ದೃಢವಾಗಿ ನಿಲ್ಲುವಂತೆ ಮಾಡಿದನೋ, ಯಾವನು ರೆಕ್ಕೆಗಳೊಡನೆ ಸರ್ವತ್ರ ಸಂಚರಿಸುತ್ತಿದ್ದ ಪರ್ವತಗಳನ್ನು ತನ್ನ ನಿಯಮನಕ್ಕೆ ಬಾಗಿ ಸ್ಥಿರವಾಗಿರುವಂತೆ ಮಾಡಿದನೋ, ಯಾವನು ವಿಸ್ತೃತವಾದ ಅಂತರಿಕ್ಷವನ್ನು ನಿರ್ಮಿಸಿದನೋ, ಯಾವನು ದ್ಯುಲೋಕವನ್ನು ತಡೆದು ನಿಲ್ಲಿಸಿದನೋ, ಅವನೇ ಇಂದ್ರನು.

ಎಲೈ ಜನರೇ, ಯಾವನು ಮೇಘವನ್ನು ಹನನಮಾಡಿ ಸಪ್ತಸಂಖ್ಯಾಕವೂ ಪ್ರವಹಿಸತಕ್ಕವೂ ಆದ ಗಂಗಾದಿ ನದಿಗಳನ್ನು ಪ್ರವಹಿಸುವಂತೆ ಮಾಡಿದನೋ, ಯಾವನು ವಲನೆಂಬ ಅಸುರನ ತಡೆಗೆ ಸಿಕ್ಕಿದ ಗೋವುಗಳನ್ನು ಬಿಡಿಸಿದನೋ ಯಾವನು ಮೇಘಗಳ ಮಧ್ಯಪ್ರದೇಶದಲ್ಲಿ ವಿದ್ಯುದ್ರೂಪದ ಅಗ್ನಿಯನ್ನು ಸೃಷ್ಟಿಸಿದನೋ ಮತ್ತು ಯಾವನು ಸಂಗ್ರಾಮಗಳಲ್ಲಿ ಅಪ್ರತಿಹತನಾಗಿರುತ್ತಾನೆಯೋ, ಅವನೇ ಇಂದ್ರನು.

ಎಲೈ ಜನರೇ, ಯಾವ ಇಂದ್ರನಿಂದ ನಶ್ವರವಾದ ಈ ಲೋಕವೆಲ್ಲವೂ ಸ್ಥಿರವಾಗಿರುವಂತೆ ನಿರ್ಮಿತವಾದವೋ, ಯಾವನು ನಾಶಕನಾದವನೂ ನಿಕೃಷ್ಟನಾದವನೂ ಆದ ಅಸುರನನ್ನು ನರಕರೂಪವಾದ ಗುಹೆಯಲ್ಲಿ ಇರುವಂತೆ ಮಾಡಿದನೋ ಮತ್ತು ತಾನು ಗುರಿಯಿಟ್ಟ ಶತ್ರುವನ್ನು ಜಯಿಸಿದನೋ ಮತ್ತು ಬೇಡನು ಮೃಗವನ್ನು ಸ್ವಾಧೀನಪಡಿಸಿಕೊಳ್ಳುವಂತೆ ಯಾರು ಶತ್ರುವಿನ ಸಮೃದ್ಧವಾದ ಸಂಪತ್ತುಗಳನ್ನು ತನ್ನಧೀನವಾದುದನ್ನಾಗಿ ಮಾಡಿಕೊಂಡನೋ ಅವನೇ ಇಂದ್ರನು.

ಆ ಇಂದ್ರನು ಎಲ್ಲಿರುವನು ಎಂದು ಶತ್ರುವಿಗೆ ಭಯಂಕರನಾದ ಯಾವನ ವಿಷಯದಲ್ಲಿ ಪ್ರಶ್ನಿಸುತ್ತಾರೆಯೋ, ಅಂತಹ ಇಂದ್ರನ ವಿಷಯದಲ್ಲಿ ಅವನು ಒಂದೇಕಡೆಯಲ್ಲಿರುವುದಿಲ್ಲವೆಂದು ತಿಳಿದವರು ಹೇಳುತ್ತಾರೆ. ಅದೇ ಇಂದ್ರನು

ಉದ್ವೇಜಕನಾಗಿ ಶತ್ರುವಿಗೆ ಸೇರಿದವೂ ಆವನಿಗೆ ಪೋಷಕಗಳೂ ಆದ ಗವಾಶ್ವಾದಿಗಳನ್ನು ಸುತ್ತಲೂ ಹಿಂಸಿಸುತ್ತಾನೆ. ಎಲೈ ಜನರೇ, ಇಂತಹ ಮಹಾತ್ಮನಾದ ಇಂದ್ರನಲ್ಲಿ ಶ್ರದ್ಧೆಯನ್ನಿಡಿ.

ಎಲೈ ಜನರೇ, ಯಾವನು ಧನಿಕನಿಗೂ, ದರಿದ್ರನಿಗೂ, ಅವನನ್ನು ಯಾಚಿಸುವವನಿಗೂ, ಸ್ತುತಿಕಾರನಾದ ಋತ್ವಿಕ್ಕಿಗೂ ಏಕಪ್ರಕಾರವಾಗಿ ಧನವನ್ನು ಒದಗಿಸುತ್ತಾನೆಯೋ, ಯಾರು ಶ್ರೇಷ್ಠವಾದ ಕೆನ್ನೆಯುಳ್ಳವನಾಗಿರುವನೋ ಮತ್ತು ರಸವನ್ನು ಹಿಂಡುವ ಕಲ್ಲನ್ನು ಕೈಯ್ಯಲ್ಲಿ ಹಿಡಿದಿರುವವನೂ, ಸೋಮರಸವನ್ನು ಹಿಂಡಿರುವವನೂ ಆದ ಯಜಮಾನನ ರಕ್ಷಕನಾಗಿರುತ್ತಾನೆಯೋ ಅವನೇ ಇಂದ್ರನು.

ಎಲೈ ಜನರೇ, ಯಾವ ಸರ್ವಾಂತರ್ಯಾಮಿಯಾದವನ ಅನುಶಾಸನದಲ್ಲಿ ಅಶ್ವಗಳೂ, ಗೋವುಗಳೂ, ಗ್ರಾಮ ಗಳೂ ಮತ್ತು ಸಕಲ ರಥಗಳೂ ಇವೆಯೋ, ಯಾವನು ವೃತ್ರನನ್ನು ಸಂಹರಿಸಿ ಸೂರ್ಯನನ್ನೂ ಉಷಸ್ಸನ್ನೂ ಸೃಷ್ಟಿಸಿ ದನೋ, ಯಾರು ಮೇಘವನ್ನು ಭೇದಿಸಿ ಉದಕಗಳಿಗೆ ಪ್ರೇರಕನಾಗಿದ್ದಾನೆಯೋ ಅವನೇ ಇಂದ್ರನು.

ಎಲೈ ಜನರೇ, ದೇವಸೇನೆಯೂ ಮಾನವಸೇನೆಯೂ ಒಟ್ಟಿಗೆ ಶಬ್ದಮಾಡಿಕೊಂಡು ಯಾವನನ್ನು ರಕ್ಷಣಾರ್ಥ ವಾಗಿ ಕರೆಯುತ್ತವೆಯೋ ಮತ್ತು ಉತ್ಕೃಷ್ಟರೂ ಅಧಮರೂ ಆದ ಶತ್ರುಗಳೂ ಸಹ ಕರೆಯುತ್ತಾರೆಯೋ, ಮತ್ತು ಇಂದ್ರರಥಕ್ಕೆ ಸದೃಶವಾದ ರಥವನ್ನು ಹತ್ತಿ ಕುಳಿತಿರುವ ಮತ್ತು ಇಬ್ಬರು ರಥಿಕರೂ (ರಕ್ಷಣಾರ್ಥವಾಗಿ) ಯಾರನ್ನು ಬೇರೆಬೇರೆಯಾಗಿ ಕರೆಯುತ್ತಾರೆಯೋ, ಅವನೇ ಇಂದ್ರನು.

ಎಲೈ ಜನರೇ, ಯಾವನನ್ನು ಬಿಟ್ಟು ಜನರು ಜಯವನ್ನು ಪಡೆಯಲಾರರೋ ಆದುದರಿಂದಲೇ, ಯುದ್ಧದಲ್ಲಿ ನಿರತರಾಗಿರುವವರು ರಕ್ಷಣಾರ್ಥವಾಗಿ ಯಾರನ್ನು ಕರೆಯುತ್ತಾರೆಯೋ, ಯಾವನು ಸಕಲ ಜಗತ್ತಿನ ಪ್ರತಿನಿಧಿ ಯಾಗಿರುವನೋ ಮತ್ತು ಯಾವನು ಅಚಲಿತವಾದ ಪರ್ವತಾದಿಗಳನ್ನು ಚಲಿಸುವಂತೆ ಮಾಡಿದನೋ ಅವನೇ ಇಂದ್ರನು.

ಎಲೈ ಜನರೇ, ಯಾವನು ಮಹತ್ತಾದ ಪಾಪವನ್ನು ಹೊತ್ತಿರುವವರೂ, ಬಹುಸಂಖ್ಯಾಕರೂ, ಅಹಂಕಾರದಿಂದ ಕೂಡಿದವರೂ ಆದ ಜನರನ್ನು ವಜ್ರಾಯುಧದಿಂದ ಕೊಂದನೋ, ಯಾವನು ಅನಾತ್ಮಜ್ಞನಿಗೆ ಉತ್ಸಾಹಕಾರಕವಾದ ಸಹಾಯವನ್ನು ಕೊಡುವುದಿಲ್ಲವೋ, ಯಾವನು ಕ್ಷಯಕಾರಕನಾದ ಶತ್ರುವಿನ ನಾಶಕನಾಗಿರುವನೋ ಅವನೇ ಇಂದ್ರನು.

ಎಲೈ ಜನರೇ, ಪರ್ವತಗಳಲ್ಲಿ ತಲೆಮರೆಸಿಕೊಂಡು ನಲವತ್ತು ವರ್ಷಗಳಕಾಲ ವಾಸಿಸುತ್ತಿದ್ದ ಶಂಬರನೆಂಬ ಅಸುರನನ್ನು ಹುಡುಕಿ ಯಾವನು ಕೊನೆಗೆ ಕಂಡುಹಿಡಿದನೋ, ಬಲಶಾಲಿಯಾಗಿಯೂ, ಹಂತಕನಾಗಿಯೂ ಇದ್ದ ಆ ದಾನವನನ್ನು ಯಾವನು ಕೊಂದನೋ ಅವನೇ ಇಂದ್ರನು.

ಎಲೈ ಜನರೇ, ಯಾರು ಸಪ್ತಸಂಖ್ಯಾಕವಾದ ರಶ್ಮಿಯುಳ್ಳವನೂ, ವೃಷ್ಟಿಯನ್ನು ಸುರಿಸುವವನೂ, ಬಲಶಾಲಿಯೂ ಆಗಿ ಗಂಗಾದಿ ಸಪ್ತನದಿಗಳನ್ನು ಪ್ರವಹಿಸುವುದಕ್ಕಾಗಿ ಅಹಿಯಿಂದ ಬಿಡಿಸಿದನೋ, ಯಾರು ವಜ್ರಾಯುಧವನ್ನು ಕೈಯ್ಯಲ್ಲಿ ಹಿಡಿದವನಾಗಿ ದ್ಯುಲೋಕವನ್ನು ಹತ್ತುತ್ತಿದ್ದ ರೌಹಿಣನೆಂಬ ಅಸುರನನ್ನು ಕೊಂದನೋ ಅವನೇ ಇಂದ್ರನು.

ಈ ಇಂದ್ರನಿಗೆ ದ್ಯಾವಾಪೃಥಿವಿಗಳೆರಡೂ ವಿನಯದಿಂದ ನಮಸ್ಕರಿಸುವುವು ಮತ್ತು ಈ ಇಂದ್ರನ ಬಲದಿಂದಲೇ ಪರ್ವತಗಳು ಭಯಪಡುತ್ತವೆ. ಯಾವನು ಸೋಮರಸವನ್ನು ಪಾನಮಾಡುವವನಾಗಿಯೂ, ದೃಢಕಾಯನಾಗಿಯೂ, ವಜ್ರಾಯುಧಕ್ಕೆ ಸಮಾನವಾದ ಬಾಹುಗಳುಳ್ಳವನಾಗಿಯೂ ಇರುವನೋ, ಯಾವನು ಕೈಯ್ಯಲ್ಲಿ ವಜ್ರಾಯುಧವನ್ನು ಹಿಡಿದಿರುವನೋ ಅವನೇ ಇಂದ್ರನು.

ಎಲೈ ಜನರೇ, ಯಾರು ಸೋಮರಸವನ್ನು ಹಿಂಡುವ ಯಜಮಾನನನ್ನು ರಕ್ಷಿಸುತ್ತಾನೆಯೋ, ಯಾರು ಪುರೋಡಾಶಾದಿಗಳನ್ನು ಪಕ್ವಮಾಡುವವನನ್ನು ರಕ್ಷಿಸುವನೋ, ಯಾರು ರಕ್ಷಣಾರ್ಥವಾಗಿ ಯಾಚಿಸುವವರನ್ನು ರಕ್ಷಿಸುವನೋ, ಯಾರು ಸ್ತುತಿಕರ್ತರನ್ನು ರಕ್ಷಿಸುವನೋ ಮತ್ತು ಯಾರಿಗೆ ಸ್ತೋತ್ರವೂ, ಸೋಮರಸವೂ, ಪುರೋಡಾಶಾದ್ಯನ್ನಗಳೂ, ವೃದ್ಧಿಕಾರಕವೂ ಆಗಿವೆಯೋ ಅವನೇ ಇಂದ್ರನು.

ಎಲೈ ಇಂದ್ರನೇ, ಅಪ್ರತಿಹತನಾದ ಯಾವನು ಸೋಮರಸವನ್ನು ಹಿಂಡುವವನೂ, ಪುರೋಡಾಶಾದಿಗಳನ್ನು ಪಕ್ವಮಾಡುವವನೂ ಆದ ಯಜಮಾನನಿಗೆ ಅನ್ನವನ್ನೂ, ಬಲವನ್ನೂ ಪ್ರಭೂತವಾಗಿ ಕೊಡುವನೋ ಅಂತಹ ನೀನು ಸತ್ಯಾತ್ಮಕನಾಗಿ ಆಗಿದ್ದೀಯಲ್ಲವೇ ? ನಿನಗೆ ಪ್ರಿಯರಾದವರೂ, ನಿನ್ನ ಅನುಗ್ರಹದಿಂದ ಕಲ್ಯಾಣಾತ್ಮಕರಾದ ಪುತ್ರಪೌತ್ರಾದಿಗಳಿಂದ ಕೂಡಿದವರೂ ಆದ ನಾವು ಸಕಲ ದಿನಗಳಲ್ಲಿಯೂ ಸ್ತೋತ್ರವನ್ನು ಪಠಿಸುತ್ತೇವೆ.

## ಇಂದ್ರನ ಉತ್ಪತ್ತಿ ; ಮಾತಾಪಿತೃಗಳು ಮತ್ತು ತತ್ಪತ್ನೀ.

ಅತ್ಯಂತ ಶ್ರೇಷ್ಠವಾದುದೂ ಕಾವ್ಯಾತ್ಮಕವಾದುದೂ ಆದ ಶೈಲಿಯಲ್ಲಿ ಇಂದ್ರನ ಮಾಹಾತ್ಮ್ಯವು ವರ್ಣಿತವಾಗಿದ್ದರೂ ಸಹ ಇಂದ್ರನು ಜನ್ಮರಹಿತನಾದ ಪರದೈವವೆಂದು ಎಲ್ಲಿಯೂ ವರ್ಣಿತನಾಗಿಲ್ಲ. ಹಿಂದೆ ಅನೇಕ ಸಂದರ್ಭಗಳಲ್ಲಿ ಗಮನಿಸಿರುವಂತೆ ಇಂದ್ರನಿಗೆ ಮಾತೃವೂ ಪಿತೃವೂ ನಿರ್ದಿಷ್ಟರಾಗಿದ್ದಾರೆ. ಮತ್ತು ಇಂದ್ರನ ಉತ್ಪತ್ತಿಸ್ವರೂಪವೂ ಸಹ ಅನೇಕಕಡೆಗಳಲ್ಲಿ ಅತಿ ವಿಸ್ತೃತವಾಗಿ ಪ್ರಶಂಸಿಸಲ್ಪಟ್ಟಿದೆ. ಉದಾಹರಣೆಗೆ, ಕೆಳಗೆ ಉದಾಹೃತವಾಗುವ ಕೆಲವು ಮಂತ್ರಗಳಲ್ಲಿ ಇಂದ್ರನ ಜನ್ಮದ ವಿಷಯವನ್ನು ತಿಳಿಸಿದೆ.

" ಎಲೈ ಇಂದ್ರನೇ, ನೀನು ಉತ್ಪನ್ನನಾದ ದಿನವೇ, ಪರ್ವತಪ್ರಾಂತದಲ್ಲಿ ಹುಟ್ಟಿದ ಸೋಮಲತೆಯ ರಸವನ್ನು ಕುಡಿದು ಅದರಲ್ಲಿ ನಿನ್ನ ಆದರಾತಿಶಯವನ್ನು ತೋರಿಸಿದೆ. ನಿನ್ನನ್ನು ಹಡೆದವಳೂ ತರುಣಿಯೂ ಆದ ನಿನ್ನ ಮಾತೆಯು ಮಹತ್ಪ್ರಭಾವವುಳ್ಳ ನಿನ್ನ ಜನಕನ ಗೃಹದಲ್ಲಿ ನಿನಗೆ ಆ ಸೋಮರಸವನ್ನು ಕೊಟ್ಟು ತೃಪ್ತಿಪಡಿಸಿದಳು. ಇದೇ ಇಂದ್ರನು ಉತ್ಪನ್ನನಾದೊಡನೆಯೇ ತನ್ನ ಮಾತೆಯನ್ನು ಸಮೀಪಿಸಿದಾಗ ಅವಳ ಸ್ತನದಲ್ಲಿ ಸೋಮರಸವನ್ನು ಕಂಡುಕೊಂಡನು."

(೩–೪೮–೨, ೩)

" ಎಲೈ ಇಂದ್ರನೇ. ಅಂತರಿಕ್ಷವು ನಿರೀಕ್ಷಿಸಿದಂತೆ ನಿನ್ನ ಪಿತೃವು ಅತ್ಯಂತ ದೃಢಕಾಯನು. ಅಂತರಿಕ್ಷದಲ್ಲಿ ಗರ್ಜಿಸುವವನೂ, ಪೃಥ್ವಿಯಂತೆ ಸ್ಥಿರನೂ ಆದ ಇಂದ್ರನ ಜನಕನು ಅತ್ಯಂತ ಕುಶಲನಾದ ಕರ್ಮಕರ್ತನು. ಇಂದ್ರನಿಗೆ ತನ್ನ ಪಿತೃವಿನಲ್ಲಿಯೂ ಮತ್ತು ಮಾತೃವಿನಲ್ಲಿಯೂ ಅತ್ಯತಿಶಯವಾದ ಭಕ್ತಿಯಿರುತ್ತದೆ.

(೪-೧೭-೪).

" ಹಿಂದೆಲ್ಲಾ ದೇವತೆಗಳೂ ಯಾವುದರಮೂಲಕ ಜನಿಸಿದರೋ, ಇದೂ (ಯೋನಿಯು) ಸಹ ಅದೇ ಪ್ರಾಚೀನವಾದ ದ್ವಾರವಾಗಿರುತ್ತದೆ. ಪೂರ್ಣವಾಗಿ ಬೆಳೆದಿರುವ ಗರ್ಭವು ಈ ದ್ವಾರದಿಂದಲೇ ಹೊರಕ್ಕೆ ಬರಲಿ, ಇದರಿಂದ ಉತ್ಪನ್ನನಾಗತಕ್ಕ ಇಂದ್ರನು ಅನವಶ್ಯವಾಗಿ ತನ್ನ ಮಾತೆಯನ್ನು ಹಿಂಸಿಸದಿರಲಿ."

(೪-೧೮-೧)

ಇಂದ್ರನ ಉತ್ಪತ್ತಿಯು ದೋಷಪ್ರಕಾಶಕವಾಗುವುದೆಂದರಿತು ಇಂದ್ರಮಾತೆಯು ಅವನನ್ನು ಮರೆಸಿಟ್ಟಳು ಅತ್ಯಂತ ಶಕ್ತಿಯುತನಾದ ಅವನು ಅತ್ಯಂತ ಆಕರ್ಷಕವಾದ ಶಸ್ತ್ರಧಾರಿಯಾಗಿ ತಾನೇ ಉದಯಿಸಿ, ಆ ಒಡನೆಯೆ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿದನು. (೪-೧೮-೫)

ಅತ್ಯಂತ ಶಕ್ತಿಯುತನೂ, ದೃಢಕಾಯನೂ, ಅಪ್ರತಿಹತವಾದ ಶಕ್ತಿಯುಳ್ಳವನೂ, ವೀರ್ಯವಂತನೂ, ಪುಷ್ಟನೂ ಆದ ಇಂದ್ರನು, ತಾನೇ ಸ್ವತಂತ್ರನಾಗಿ ಸಂಚರಿಸಿ ತನ್ನ ಶಕ್ತಿಯನ್ನು ಪ್ರಕಟಿಸಲೆಂದು ಅವನನ್ನು ಅವನ ಮಾತೆಯು ಗೋವು ವತ್ಸವನ್ನು ಹಡೆದಂತೆ ಪ್ರಸವಿಸಿದಳು. (೪-೧೮-೧೦)

ಮಹಚ್ಛಕ್ತಿಯುಳ್ಳ ಇಂದ್ರನು ಉತ್ಪನ್ನನಾದಾಗ ಅವನ ಮಾತೆಯು ಅವನನ್ನು ಕುರಿತು "ಎಲೈ ಪುತ್ರನೇ, ಈ ದೇವತೆಗಳು ಯಾರೂ ನಿನಗೆ ಸಹಾಯಮಾಡದೇ ಎಲ್ಲರೂ ನಿನ್ನನ್ನು ತ್ಯಜಿಸಿದರು" ಎಂದು ಪುತ್ರನಮೇಲಿನ ಅಭಿಮಾನದಿಂದ ಎಚ್ಚರಿಸಿದಳು. ಆಗ ಇಂದ್ರನು "ಎಲೈ ವಿಷ್ಣುವೇ, ವೃತ್ರಾಸುರನನ್ನು ಹನನಮಾಡುವ ಆವಶ್ಯಕತೆಯಿರುವುದರಿಂದ ನೀನು ಲೋಕಗಳನ್ನೆಲ್ಲಾ ವ್ಯಾಪಿಸುವ ಸ್ವರೂಪವನ್ನೂ ಶಕ್ತಿಯನ್ನೂ ಹೊಂದುವವನಾಗು." ಎಂದು ತಿಳಿಸಿದನು. (೧-೧೮-೧೧)

ಎಲೈ ಇಂದ್ರನೇ, ನಿನ್ನ ಮಾತೆಯನ್ನು ವಿಧವೆಯನ್ನಾಗಿ ಮಾಡಿದವರಾರು ? ನೀನು ಸುಪ್ತನಾಗಿರುವಾಗಾಗಲಿ ಅಥವಾ ಸಂಚರಿಸುವಾಗಾಗಲಿ, ನಿನ್ನನ್ನು ಸಂಹರಿಸಬೇಕೆಂದಿಚ್ಛಿಸಿದವರಾರು ? ನಿನ್ನ ಪಿತೃವನ್ನು ಪಾದದಿಂದ ಹಿಡಿದು ಹಿಂಸಿಸಿದಾಗ ನಿನ್ನ ಸಮೀಪದಲ್ಲಿದ್ದ ದೇವತೆಯಾರು ? (೪-೧೮-೧೨).

" ವೀರ್ಯವಂತನಾದ ಪಿತೃವು ಯುದ್ಧದಲ್ಲಿ ಶತ್ರುನಾಶಕ್ಕೆ ತಕ್ಕ ವೀರ್ಯವುಳ್ಳ ಪುತ್ರನನ್ನು ಉತ್ಪನ್ನಮಾಡಿದನು ತೇಜೋಯುತಳಾದ ನಾರಿಯು ತೇಜಸ್ವಿಯಾದ ಪುತ್ರನನ್ನು ಹಡೆದಳು." (೭-೨೦-೫)

" ಎಲೈ ಇಂದ್ರನೇ, ನೀನು ಉತ್ಪನ್ನನಾದೊಡನೆಯೇ, ನಿನ್ನ ಶಕ್ತಿಸಂಪಾದನೆಗಾಗಿ ಸೋಮವನ್ನು ಪಾನಮಾಡಿದೆ. ನಿನ್ನ ತಾಯಿಯು ನಿನ್ನ ಮಹತ್ತ್ವವನ್ನು ಪ್ರಕಾಶಪಡಿಸಿದಳು." (೭-೯೮-೩)

" ಅಪ್ರತಿಹತವಾದ ಶಕ್ತಿಯನ್ನು ಪ್ರಕಾಶಪಡಿಸಲು ನೀನು ಭಯಂಕರಸ್ವರೂಪವುಳ್ಳವನಾಗಿ ಜನಿಸಿದೆ. ಮತ್ತು ಕ್ರೋಧವನ್ನು ಪ್ರಕಟಿಸುತ್ತಾ ನಿನ್ನ ಅಭಿಮಾನಯುತವಾದ ಪರಾಕ್ರಮವನ್ನೂ ತಿಳಿಯಪಡಿಸಿ ನಿನ್ನ ಆತ್ಮವಿಶ್ವಾಸವನ್ನೂ ತೋರಿಸಿಕೊಂಡೆ. ಐಶ್ವರ್ಯಯುಕ್ತಳಾದ ಇಂದ್ರಮಾತೆಯು ಇಂದ್ರನನ್ನು ಹಡೆದಾಗ ಮರುತ್ತುಗಳು ಪ್ರಭಾವಯುತನಾದ ಈ ಇಂದ್ರನನ್ನು ಪ್ರವೃದ್ಧವಾನನಾಗಿ ಬೆಳೆಯುವಂತೆ ಅವನನ್ನು ಉಪಚರಿಸಿ ಪೋಷಿಸಿದರು." (೧೦ ೭೩.೧)

ಭಯಂಕರಸ್ವರೂಪನೂ, ಅಪ್ರತಿಹತವಾದ ಶಕ್ತಿಯುಳ್ಳವನೂ ಆದ ಈ ಇಂದ್ರನನ್ನು ಉತ್ಪನ್ನಮಾಡಿದ ದೇವನು ವಿಶ್ವದಲ್ಲೆಲ್ಲಾ ಅತ್ಯಧಿಕವಾದ ಪ್ರಭಾವವುಳ್ಳವನು. (೧೧-೨೦-೧)

" ಎಲೈ ಇಂದ್ರನೇ, ಉಷೋದೇವಿಯು ಜಗತ್ತನ್ನೆಲ್ಲಾ ವ್ಯಾಪಿಸುವಂತೆ, ನೀನೂ ಸಹ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿ ನಿಂತಾಗ, ಜಗತ್ತಿನ ಪ್ರಜೆಗಳಲ್ಲೆಲ್ಲಾ ಉತ್ತಮ ಪ್ರಜೆಗಳಾದ ದೇವತೆಗಳಿಗೆಲ್ಲಾ ಪ್ರಭುವಾದ ನಿನ್ನನ್ನು ದೇವತಾತ್ಮಳೂ, ಮಹತ್ಸ್ವರೂಪವುಳ್ಳವಳೂ ಆದ ಮಾತೆಯು ನಿನ್ನನ್ನು ಪಡೆದಳು." (೧೦-೧೩೪-೧)

" ನಮಗೆ ಹಿಂದೆಯೇ ತಿಳಿದಂತೆ, ಈ ಇಂದ್ರನು ನಿಷ್ಟಿಗ್ರಿಯ ಪುತ್ರನಾಗಿದ್ದಾನೆ. (ನಿಷ್ಟಿಗ್ರಿಯೆಂದರೆ ಅದಿತಿಯೆಂದು ಸಾಯಣರು ಅರ್ಥಮಾಡಿದ್ದಾರೆ). ೧೦-೧೦೧-೧೨)

ಪುರಾಣಾದಿಗಳಲ್ಲಿ ಇಂದ್ರನು ಆದಿತ್ಯರಲ್ಲೊಬ್ಬನೆಂದೂ, ವರುಣನ ಸಹಚಾರಿಯೆಂದೂ ಪ್ರಸಿದ್ಧನಾಗಿದ್ದರೂ ಸಹ (ಋ. ಸಂ. ೭-೮೫-೪) ಋಕ್ಸಂಹಿತೆಯ ಇತರ ಭಾಗಗಳಲ್ಲಿ ಈ ರೀತಿಯಿಂದ ಎಂದರೆ ಆದಿತ್ಯರಲ್ಲೊಬ್ಬನೆಂದು ಪ್ರಾಯಃ ವರ್ಣಿತನಾಗಿಲ್ಲ. ೪-೨೬-೧ ರಲ್ಲೂ ಮನು ಮತ್ತು ಸೂರ್ಯ ಇವರೊಂದಿಗೆ ತಾದಾತ್ಮ್ಯವನ್ನು ತೋರಿಸಿದೆ. ೮.೮.೨-೧ ಮತ್ತು ೪ ; ೧೦.೮೯.೨ ಈ ಮಂತ್ರಗಳಲ್ಲಿ ಅವನು ಸೂರ್ಯಶಬ್ದವಾಚ್ಯನಾಗಿದ್ದಾನೆ. ೨-೩೦-೧ ರಲ್ಲಿ **ಸವಿತೃ** ಎಂಬ ವಿಶೇಷಣದಿಂದ ವರ್ಣಿತನಾಗಿದ್ದಾನೆ.

ಅಥರ್ವವೇದದಲ್ಲಿ ಇಂದ್ರನ ಪ್ರಭಾವದ ವರ್ಣನವು ಕೆಳಗೆ ಉದಹರಿಸಿರುವ ವಾಕ್ಯಗಳಿಂದ ಈ ರೀತಿ ವರ್ಣಿತವಾಗಿದೆ.

**ಏಕಾಷ್ಟಕಾ ತಪಸಾ ತಪ್ಯಮಾನಾ ಜಜಾನ ಗರ್ಭಂ ಮಹಿಮಾನಮಿಂದ್ರಂ ।**
**ತೇನ ದೇವಾ ಅಸಹಂತ ಶತ್ರೂನ್ ಹಂತಾ ದಸ್ಯೂನಾಮಭವಚ್ಛಚೀಪತಿಃ ॥**

(ಅ. ವೇ. ೩-೧೦-೧೨)

ಪ್ರಭಾವಯುತವಾದ ತಪಸ್ಸನ್ನಾಚರಿಸಿ ಏಕಾಷ್ಟಕೆಯು ಮಹತ್ತ್ವವುಳ್ಳ ಇಂದ್ರನನ್ನು ಹಡೆದಳು. ಈ ಇಂದ್ರನ ಸಹಾಯದಿಂದಲೇ ದೇವತೆಗಳು ತಮ್ಮ ಶತ್ರುಗಳನ್ನು ಜಯಿಸಿದರು. ಶಚೀಪತಿಯಾದ ಇಂದ್ರನು ದಸ್ಯುಹಂತಕನಾದನು

ಇದಕ್ಕೆ ಮುಂದಿನ ಋಕ್ಕಿನಲ್ಲಿ ಏಕಾಷ್ಟಕೆಯು ಇಂದ್ರ ಮತ್ತು ಸೋಮ ಇವರಿಬ್ಬರ ಮಾತೆಯೆಂದೂ ಪ್ರಜಾಪತಿಯ ದುಹಿತೆಯೆಂದೂ ನಿರ್ದಿಷ್ಟಳಾಗಿದ್ದಾಳೆ. ಅಥರ್ವವೇದದಲ್ಲಿ ಇಂದ್ರಮಾತೆಯು ಸಂಬೋಧಿತಳಾಗಿದ್ದಾಳೆ (೬.೩೮). ಆದರೆ ಅವಳ ನಾಮನಿರ್ದೇಶವಿಲ್ಲ. ದಕ್ಷಪುತ್ರಿಯೂ ಅದಿತಿಯೆಂಬ ಅಪರನಾಮವುಳ್ಳವಳೂ ಆದ ದಾಕ್ಷಾಯಣಿಯಲ್ಲಿ ಕಶ್ಯಪನಿಗೆ ಉತ್ಪನ್ನರಾದ ಪುತ್ರರಲ್ಲಿ ಇಂದ್ರನೂ ಒಬ್ಬನೆಂದು ಮಹಾಭಾರತದಲ್ಲಿ ತಿಳಿಸಿದೆ. (ಆ. ಪ.) ಅಥರ್ವವೇದದ ೮-೫೮-೪ ರಲ್ಲಿ ಸತ್ಯಪುತ್ರನೆಂದು (**ಸೂನುಂ ಸತ್ಯಸ್ಯ**) ಕರೆದಿದೆ.

ಬೇರೊಂದು ಕಡೆಯಲ್ಲಿ, ಇಂದ್ರನು ಶತ್ರುನಾಶಕ್ಕಾಗಿ ದೇವತೆಗಳಿಂದ ಸೃಷ್ಟನಾದವನೆಂದು ತಿಳಿಸಿದೆ. (೩.೪೯-೧) **ಘನಂ ವೃತ್ರಾಣಾಂ ಜನಯಂತ ದೇವಾಃ.** (೨-೧೩.೫ ; ೩-೫೧.೮)

ಅಗ್ನಿಯೊಡನೆ ಇಂದ್ರನು ಪುರುಷನ ಮುಖದಿಂದ ಉತ್ಪನ್ನನಾದನೆಂದು ಪುರುಷಸೂಕ್ತದಲ್ಲಿ ತಿಳಿಸಿದೆ. (**ಮುಖಾದಿಂದ್ರಶ್ಚಾಗ್ನಿಶ್ಚ**).

(೧೦-೯೦-೧೩)

ಸೋಮನಿಂದ ಜನಿತರಾದ ದೇವತೆಗಳಲ್ಲಿ ಇಂದ್ರನೂ ಒಬ್ಬನೆಂದು ಋಕ್ಸಂಹಿತೆಯ ಬೇರೊಂದು ಕಡೆಯಲ್ಲಿ ನಿಷ್ಕೃಷ್ಟವಾಗಿ ತಿಳಿಸಿದೆ.

(೯-೯೬-೫)

ಇಂತಹ ಪರಾಕ್ರಮವುಳ್ಳ ಇಂದ್ರನು ತನ್ನ ತಪಃಪ್ರಭಾವದಿಂದ ಸ್ವರ್ಗವನ್ನು ಜಯಿಸಿದನು.

(೧೦-೧೬೭-೧)

ಶತಪಥಾದಿಬ್ರಾಹ್ಮಣಗಳಲ್ಲಿ ಇಂದ್ರನ ಉತ್ಪತ್ತಿವಿಷಯಕವಾದ ಕಥೆಯು ಬೇರೆ ಬೇರೆ ವಿಧಗಳಲ್ಲಿ ವಿವೃತವಾಗಿದೆ. ಉದಾಹರಣೆಗೆ ಶತಪಥಬ್ರಾಹ್ಮಣದ ವಿವರಣವು ಈ ರೀತಿಯಿರುತ್ತದೆ.

**ತಾ ವಾ ಏತಾಃ ಪ್ರಜಾಪತೇರಧಿ ದೇವತಾಃ ಅಸೃಜ್ಯಂತ ಅಗ್ನಿರಿಂದ್ರಃ ಸೋಮಃ ಪರಮೇಷ್ಠೀ ಪ್ರಾಜಾಪತ್ಯಃ । ತಾಃ ಸಹಸ್ರಾಯುಷೋ ಜಜ್ಞಿರೇ । ತಾ ಯಥಾ ನದ್ಯೈ ಪಾರಂ ಪರಾಪಶ್ಯೇದೇವಂ ಸ್ವಸ್ಯಾಯುಷಃ ಪಾರಂ ಪರಾಚಖ್ಯುಃ ।।**

(ಶ. ಬ್ರಾ. ೧೧.೧.೬.೧೪)

ಅಗ್ನಿ, ಇಂದ್ರ, ಸೋಮ ಮತ್ತು ಪಾರಮೇಷ್ಠಿಪ್ರಾಜಾಪತ್ಯ ಇವರೆಲ್ಲರೂ ಪ್ರಜಾಪತಿಯಿಂದ ಸೃಷ್ಟರಾದ ದೇವತೆಗಳು. ಇವರೆಲ್ಲರೂ ಸಹಸ್ರಾಯುಃವುಳ್ಳವರಾಗಿ ಉತ್ಪನ್ನರಾದರು. ನದಿಯ ಆಚೆ ದಡವನ್ನು ಪುರುಷನಾದವನು ಯಾವ ರೀತಿಯಲ್ಲಿ ನೋಡಬಲ್ಲನೋ ಅದೇರೀತಿಯಲ್ಲಿ ಇವರೆಲ್ಲರೂ ತಮ್ಮ ಆಯುಸ್ಸಿನ ಅಂತರಕ್ಕಿಂತಲೂ ಆಚೆ ನೋಡಬಲ್ಲ ಸಾಮರ್ಥ್ಯವುಳ್ಳವರಾಗಿದ್ದರು ಎಂದಿದೆ. ತೈತ್ತಿರೀಯಬ್ರಾಹ್ಮಣದ ವಿವರಣವು ಇಂದ್ರನ ಉತ್ಪತ್ತಿಯ ವಿಷಯವನ್ನು ಈರೀತಿ ತಿಳಿಸುತ್ತದೆ—

**ಪ್ರಜಾಪತಿರ್ದೇವಾಸುರಾನಸೃಜತ । ಸ ಇಂದ್ರಮಪಿ ನಾ ಸೃಜತ । ತಂ ದೇವಾ ಅಬ್ರುವನ್ । ಇಂದ್ರಂ ನೋ ಜನಯೇತಿ । ಸೋಽಬ್ರವೀತ್ । ಯಥಾಹಂ ಯುಷ್ಮಾಗ್ಂಸ್ತಪಸಾಸೃಕ್ಷಿ । ಏವಮಿಂದ್ರಂ ಜನಯಧ್ವಮಿತಿ । ತೇ ತಪೋಽತಪ್ಯಂತ । ತ ಆತ್ಮನ್ನಿಂದ್ರಮಪಶ್ಯನ್ । ತಮಬ್ರುವನ್ । ಜಾಯಸ್ವೇತಿ । ಸೋಽಬ್ರವೀತ್ । ಕಿಂಭಾಗಧೇಯಮಭಿ ಜನಿಷ್ಯ ಇತಿ । ಋತೂನ್ತ್ಸಂವತ್ಸರಂ । ಪ್ರಜಾಃ ಪಶೂನ್ । ಇಮಾನ್ಲೋಕಾನಿತ್ಯಬ್ರುವನ್ । ತಂ ವೈ ಮಾಹುತ್ಯಾಪ್ರಜನಯತೇತ್ಯಬ್ರವೀತ್ । ತಂ ಚತುರ್ಹೋತ್ರಾ ಪ್ರಾಜನಯನ್ ।**

(ತೈ. ಬ್ರಾ. ೨-೨-೩-೩, ೪)

ಪ್ರಜಾಪತಿಯು ದೇವತೆಗಳನ್ನೂ ಅಸುರರನ್ನೂ ಸೃಷ್ಟಿಸಿದನು. ಇಂದ್ರನನ್ನು ಮಾತ್ರ ಸೃಷ್ಟಿಸಲಿಲ್ಲ. ಆಗ ಅವರು ಪ್ರಜಾಪತಿಯನ್ನುದ್ದೇಶಿಸಿ "ನಮಗಾಗಿ ಇಂದ್ರನನ್ನು ಸೃಷ್ಟಿಸು" ಎಂದು ಪ್ರಾರ್ಥಿಸಿದರು. ಆಗ ಅವನು ದೇವತೆಗಳನ್ನು ಕುರಿತು "ಯಾವರೀತಿ ನಾನು ನನ್ನ ತಪಃಪ್ರಭಾವದಿಂದ ನೀವೆಲ್ಲರೂ ಉತ್ಪನ್ನರಾಗುವಂತೆ ಮಾಡಿದೆನೋ, ಅದೇ ರೀತಿ ನೀವೂ ಸಹ ತಪಃಕ್ಲೇಶದ ಫಲವಾಗಿ ಇಂದ್ರನನ್ನು ಸೃಷ್ಟಿಸಿರಿ" ಎಂದನು. ಆಗ ಆ ದೇವತೆಗಳೆಲ್ಲರೂ ತಪಸ್ಸನ್ನಾಚರಿಸಿದರು. ಆಗ ಇಂದ್ರನನ್ನು ತಮ್ಮಲ್ಲೇ ಕಂಡುಕೊಂಡರು. ನಂತರ ಹವಿರ್ಭಾಗವನ್ನು ಹೊಂದುವಂತೆ ತಿಳಿಸಿದರು ಆಗ ಇಂದ್ರನು "ನಾನು ಯಾವ ಉದ್ದಿಶ್ಯಕ್ಕಾಗಿ ಹೊರಗೆ ಆವಿರ್ಭೂತನಾಗಬೇಕೆಂದನು. ಆಗ ಅವರು "ಋತು ಪೋಷಣೆಗೂ ಸಂವತ್ಸರ, ಸಕಲಭೂತಗಳು ಸಕಲಲೋಕಗಳು ಇವುಗಳೆಲ್ಲದರ ಸಂರಕ್ಷಣೆಗಾಗಿಯೂ ನೀನು ಉತ್ಪನ್ನನಾಗ ತಕ್ಕದ್ದು" ಎಂದರು. ಆದರೆ, ಇದೇ ಬ್ರಾಹ್ಮಣದ ಬೇರೊಂದು ಕಡೆಯಲ್ಲಿ ಇಂದ್ರನ ಉತ್ಪತ್ತಿಯ ವಿಷಯದಲ್ಲಿ ಸ್ವಲ್ಪ ವ್ಯತ್ಯಸ್ತವಾದ ವಿವರಣೆಯಿರುತ್ತದೆ. ಅದರ ವಿವರಣೆಯು ಇರೀತಿಯಿದೆ—

**ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ । ತಂ ಪ್ರಾಹಿಣೋತ್ । ಪರೇಹಿ । ಏತೇಷಾಂ ದೇವಾನಾಮಧಿಪತಿರೇಧೀತಿ । ತಂ ದೇವಾ ಅಬ್ರುವನ್ । ಕಸ್ತ್ವಮಸಿ । ವಯಂ ವೈ ತ್ವಚ್ಛ್ರೇಯಾಗ್ಂಸಸ್ಮ ಇತಿ । ಸೋಽಬ್ರವೀತ್ । ಕಸ್ತ್ವಮಸಿ ವಯಂ ವೈ ತ್ವಚ್ಛ್ರೇಯಾಗ್ಂಸಸ್ಸ ಇತಿ ಮಾ ದೇವಾ ಅವೋಚನ್ನಿತಿ । ಅಥ ವಾ ಇದಂ ತರ್ಹಿ ಪ್ರಜಾಪತೌ ಹರ ಆಸೀತ್ । ಯದಸ್ಮಿನ್ನಾದಿತ್ಯೇ । ತದೇನಮಬ್ರವೀತ್ । ಏತನ್ಮೇ ಪ್ರಯಚ್ಛ । ಅಥಾ-**

ಸೋಮೋ ವಿಶ್ವಾನಿ ಸರ್ವಾಣ್ಯತಸಾತಸಮಯಾನಿ ವನಾನ್ಯರಣ್ಯಾನಿ ವರ್ಧಯತೀತಿ ಶೇಷಃ । ಪ್ರತಿಮಾನಾನಿ ಪ್ರತಿಮಾನಭೂತಾನಿ । ಸಮಾನಾನಿ ದ್ರವ್ಯಾಣೀತ್ಯರ್ಥಃ । ಇಂದ್ರಮರ್ವಾಗ್ನ ದೇಭುಃ । ದಭ್ನೋತಿ-ರತ್ರಾಕರ್ಷಣಕರ್ಮಾ । ತುಲಯಾ ಮೀಯಮಾನಾನ್ಯಾತ್ಮಾಭಿಮುಖತಯಾ ನಾಕರ್ಷಯಂತಿ । ಲಘೂನಿ ಭವಂತೀತ್ಯರ್ಥಃ । ಅನ್ಯತ್ರ ಪ್ರತಿನಿಧೀಯಮಾನಾನಿ ಪುರೂಣಿ ತಾನ್ಯಾತ್ಮಾಭಿಮುಖಮಾಕರ್ಷಂತಿ ನೈವ-ಮಿಂದ್ರಂ ಕುರ್ವಂತೀತಿ । ಸರ್ವೇಭ್ಯೋ ಮಹಾನಿಂದ್ರ ಇತ್ಯರ್ಥಃ । ತ್ರಯಃ ಪಾದಾಃ ಸೌಮ್ಯಾಸ್ತೃತೀ-ಯಸ್ತ್ವೈಂದ್ರಃ । ತಥಾ ಚ ಯಾಸ್ಕಃ । ಆಶಾತಿತಮನ್ಯುಸ್ತೃಪ್ರಪ್ರಹಾರೀ ಕ್ಷಿಪ್ರಪ್ರಹಾರೀ ಸೋಮೋ ವೇಂದ್ರೋ ವಾ ಧುನಿರ್ಧೂನೋತೇಃ ಶಿಮೀತಿ ಕರ್ಮನಾಮ ಶಮಯತೇರ್ವಾ ಶಕ್ನೋತೇರ್ವರ್ಜೀಷೀ ಸೋಮೋ ಯತ್ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮೋಽಥಾಪ್ಯೈಂದ್ರೋ ನಿಗಮೋ ಭವತ್ಯೃಜೀಷೀ ವಜ್ರೀತಿ । ಸೋಮಃ ಸರ್ವಾಣ್ಯತಸಾನಿ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದಭ್ನುವಂತಿ ಯೈರೇನಂ ಪ್ರತಿಮಿಮತೇ ನೈನಂ ತಾನಿ ದಭ್ನುವಂತಿ । ನಿ. ೫-೧೨ । ಇತಿ ॥

॥ ಪ್ರತಿಪದಾರ್ಥ ॥

**ಆಶಾಂತಮನ್ಯುಃ**—ಕೋಪವನ್ನು ಪ್ರಕಟಿಸುವಂತೆ ಮಾಡುವವನೂ । **ತೃಪಲಪ್ರಭರ್ಮಾ**—ಗ್ರಾವಗಳಿಂದ ಮರ್ದಿಸಲ್ಪಡುವವನೂ । **ಧುನಿಃ**—ಶತ್ರುಗಳನ್ನು ನಡುಗಿಸುವವನೂ । **ಶಿಮೀವಾನ್**—ಕರ್ಮವಂತನೂ । **ಶರುಮಾನ್**—ಆಯುಧವುಳ್ಳವನೂ । **ಋಜೀಷೀ**—ಋಜೀಷಸಂಜ್ಞಕನೂ ಆದ । **ಸೋಮಃ**—ಸೋಮದೇವನು । ವಿಶ್ವಾನಿ—ಸಮಸ್ತವಾದ । **ಅತಸಾ ವನಾನಿ**—ಅತಸವೃಕ್ಷಪೂರಿತವಾದ ವನಗಳನ್ನು ಬೆಳೆಯುವಂತೆ ಮಾಡುತ್ತಾನೆ । ಪ್ರತಿಮಾನಾನಿ—ಇಂದ್ರನನ್ನು ಪ್ರತಿಬಿಂಬಿಸುವ ಅವು । **ಇಂದ್ರಮರ್ವಾಕ್**—ಇಂದ್ರನಿಗೆ ಅಭಿಮುಖವಾಗಿ । **ನ ದೇಭುಃ**—ಗರ್ವವನ್ನು ತೋರಿಸುವುದಿಲ್ಲ.

। ಭಾವಾರ್ಥ ।

ಕೋಪವನ್ನು ಪ್ರಕಟಿಸುವಂತೆ ಮಾಡುವವನೂ, ಕಲ್ಲುಗಳಿಂದ ಮರ್ದಿಸಲ್ಪಡುವವನೂ, ಶತ್ರುಗಳನ್ನು ನಡುಗಿಸುವವನೂ, ಕರ್ಮವಂತನೂ, ಆಯುಧವುಳ್ಳವನೂ, ಋಜೀಷಸಂಜ್ಞಕನೂ ಆದ ಸೋಮದೇವನು ಸಕಲವಾದ ಅತಸಪೂರಿತವಾದ ವನಗಳನ್ನೂ ಪುಷ್ಟವಾಗುವಂತೆ ಮಾಡುತ್ತಾನೆ. ಇಂದ್ರನನ್ನು ಪ್ರತಿಬಿಂಬಿಸುವ ಅವು ಅವನೆದುರಿಗೆ ಗರ್ವವನ್ನು ಪ್ರಕಟಿಸುವುದಿಲ್ಲ.

English Translation

Appeasing wrath, striking quickly, intimidating foes, doer of great deeds, armed with weapons, possessing the stale residue, Soma nourishes all the Atasa woods, they oppose no impediments against Indra.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ **ಆಶಾಂತಮನ್ಯುಃ** ಎಂಬ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

**ಅಪಾಂತಮನ್ಯುಃ । ಅಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾ ಋಜೀಷೀ । ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥ ಅಪಾತಿತಮನ್ಯುಸ್ತೃಪ್ರಪ್ರಹಾರೀ ಕ್ಷಿಪ್ರಪ್ರಹಾರೀ (ತೃಪ್ರಪ್ರಹಾರೀ) ಸೋಮೋ ವೇಂದ್ರೋ ವಾ ॥ ಧುನಿರ್ಧುನೋತೇಃ । ಶಿಮೀತಿ ಕರ್ಮನಾಮ । ಶಮಯತೇರ್ವಾ ಶಕ್ನೋತೇರ್ವಾ । ಋಜೀಷೀ ಸೋಮೋ ಯತ್ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮಃ । ಅಥಾಪ್ಯೈಂದ್ರೋ ನಿಗಮೋ ಭವತಿ । ಋಜೀಷೀ ವಜ್ರೀ ಇತಿ । ಹರ್ಯೋರಸ್ಯ ಸ ಭಾಗೋ ಧಾನಾಶ್ಚೇತಿ । ಧಾನಾ ಭ್ರಾಷ್ಟ್ರೇ ಹಿತಾ ಭವಂತಿ ಫಲೇ ಹಿತಾ ಭವಂತೀತಿ ವಾ । ಬಬ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ । ಇತ್ಯಪಿ ನಿಗಮೋ ಭವತಿ । ಆದಿನಾಭ್ಯಾಸೇನೋಪಹಿತೇನೋಪಧಾಮಾದತ್ತೇ । ಬಭಸ್ತಿರತ್ತಿಕರ್ಮಾ । ಸೋಮಃ ಸರ್ವಾಣ್ಯತಸಾನಿ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದಭ್ನುವಂತಿ ಯೈರೇನಂ ಪ್ರತಿಮಿಮತೇ ನೈನಂ ತಾನಿ ದಭ್ನುವಂತ್ಯರ್ವಾಗೇವೈನಮಪ್ರಾಪ್ಯ ವಿನಶ್ಯಂತೀತಿ । ಇಂದ್ರಪ್ರಧಾನೇತ್ಯೇಕೇ ನೈಘಂಟುಕಂ ಸೋಮಕರ್ಮೋಭಯಪ್ರಧಾನೇತ್ಯಪರಂ ॥**

(ನಿ. ೫–೧೨)

ಇಲ್ಲಿ **ಅಪಾಂತಮನ್ಯುಃ** ಎಂದರೆ **ಅಪಾತಿತಮನ್ಯುಃ ಅಪಾದಿತದೀಪ್ತಿಃ ಉತ್ಪಾದಿತಮನ್ಯುರ್ವಾ ಶತ್ರುಭಿಃ ಸಂಗ್ರಾಮೇ ।** ಕ್ರೋಧದಿಂದ ತಪ್ತನಾದ ಪುರುಷನು, ಕೋಪವು ಉಕ್ಕಿಬರುತ್ತಿರುವ ಪುರುಷನು, ಶತ್ರುಗಳೊಡನೆ ಯುದ್ಧಮಾಡುವಾಗ ಕೋಪದಿಂದ ಆವಿಷ್ಟನಾಗಿ ಶತ್ರುಗಳ ಮೇಲೆ ಮುನ್ನುಗ್ಗಿಹೋಗುವವನು ಅಥವಾ ಕ್ರೋಧದಿಂದ ಮುನ್ನುಗ್ಗುತ್ತಿರವಾಗಲೇ ಶತ್ರುಗಳನ್ನು ಪ್ರಹರಿಸುವವನು ಎಂದರ್ಥವು. **ತೃಪಲಪ್ರಭರ್ಮಾ** ಎಂದರೆ ತೃಪ್ರಪ್ರಹಾರೀ ಕ್ಷಿಪ್ರಪ್ರಹಾರೀ **ಸೋಮೋ ವೇಂದ್ರೋ ವಾ ।** ವೇಗವಾಗಿ ಅಥವಾ ಶೀಘ್ರವಾಗಿ ಶತ್ರುಗಳನ್ನು ಪ್ರಹರಿಸುವವನು ಎಂದರ್ಥವು. ಈ ಶಬ್ದಗಳು ಸೋಮದೇವತೆಗಾಗಲಿ, ಇಂದ್ರನಿಗಾಗಲಿ ಅನ್ವಯಿಸುವವು. ಇಬ್ಬರಲ್ಲಿಯೂ ಈ ವಿಧವಾದ ಶಕ್ತಿಸಾಮರ್ಥ್ಯಗಳಿವೆ. **ಧುನಿಃ** ಎಂಬ ಶಬ್ದವು ಕಂಪಿಸು, ಅಲ್ಲಾಡಿಸು ಎಂಬರ್ಥವುಳ್ಳ **ಧುನೋತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಶತ್ರುಗಳು ಭಯದಿಂದ ನಡುಗುವಂತೆ ಮಾಡುವವನು ಎಂದರ್ಥವು. **ಶಿಮಿ** ಎಂದರೆ ಕರ್ಮ, ಕೆಲಸ. **ಶಿಮೀವಾನ್** ಎಂದರೆ ಸಾಹಸಕೃತ್ಯಗಳನ್ನು ಅಥವಾ ಪರಾಕ್ರಮಯುಕ್ತವಾದ ಕಾರ್ಯವನ್ನು ಮಾಡುವವನ್ನು ಎಂದರ್ಥವು. ಅಥವಾ **ಶಿಮಿ** ಶಬ್ದವು **ಶಕ್ನೋತಿ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ **ಶಿಮೀವಾನ್** ಎಂದರೆ ಶಕ್ತಿಸಾಮರ್ಥ್ಯಗಳುಳ್ಳವನು ಎಂದರ್ಥವು. **ಶರುಮಾನ್** ಎಂದರೆ ಹಿಂಸಾವಾನ್, ಶತ್ರುಗಳನ್ನು ಹಿಂಸೆಮಾಡತಕ್ಕವನು. **ಋಜೀಷೀ** ಎಂಬ ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆದ ಮೇಲೆ ಉಳಿದಿರುವ ಸಿಪ್ಪೆಗೆ ಋಜೀಷವೆಂದು ಹೆಸರು. ಋಜೀಷವೆಂದರೆ ಉಪಯೋಗವಿಲ್ಲದ್ದರಿಂದ ಎಸೆದುಬಿಡುವ ಪದಾರ್ಥವೆಂದಭಿಪ್ರಾಯವು. ಆ ಸಿಪ್ಪೆಯಿಂದ ತೃತೀಯಸವನಕಾಲದಲ್ಲಿ ಮತ್ತೊಂದಾವರ್ತಿ ಅಲ್ಪಸ್ವಲ್ಪ ರಸವನ್ನು ಹಿಂಡಿ ತೆಗೆದು ಅದಕ್ಕೆ ಹಾಲು, ಮೊಸರು, ಹಿಟ್ಟು ಇವುಗಳಲ್ಲಿ ಯಾವುದಾದರೂ ಒಂದನ್ನು ಸೇರಿಸಿ ಪಾನಯೋಗ್ಯಮಾಗುವಂತೆ (ರುಚಿಕರವಾಗುವಂತೆ) ಮಾಡುವರು. ಈ ವಿಧವಾದ ಸೋಮರಸಕ್ಕೆ ಋಜೀಷೀ ಎಂದು ಹೆಸರು, ಅಥವಾ ಈ ವಿಧವಾದ ಸೋಮರಸವನ್ನು ಪಾನಮಾಡತಕ್ಕ ಇಂದ್ರನಿಗೆ ಋಜೀಷೀ ಎಂದೂ ಹೆಸರು.

ಈ ವಿಷಯದಲ್ಲಿ **ಋಜೀಷೀ ವಜ್ರೀ** (ಋ. ಸಂ. ೫-೪೦-೪) ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು. ಈ ಋಜೀಷವನ್ನೂ ಧಾನ್ಯಾದಿಗಳೊಡನೆ ಸೇರಿಸಿ ಇಂದ್ರನ ಕುದುರೆಗೆ ಆಹಾರವನ್ನಾಗಿ ಉಪಯೋಗಿಸಲ್ಪಡುವುದು. **ಧಾನಾಃ** (ಧಾನ್ಯಗಳು) ಎಂಬ ಶಬ್ದಕ್ಕೆ ಒರಳಿನಲ್ಲಿ ಕುಟ್ಟಿದ್ದು ಅಥವಾ ಹಲಗೆಗಳ ಮೇಲೆ ಇಟ್ಟಿರುವುದು ಎಂದರ್ಥವು. ಈ ಧಾನ್ಯವೂ, ಋಜೀಷವೂ ಸೇರಿ ಇಂದ್ರನ ಕುದುರೆಗಳ ಆಹಾರವಾಗುವುದು. ಈ ವಿಷಯದಲ್ಲಿ—**ಬಬ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ** ಎಂದು ಶ್ರುತಿಪ್ರಮಾಣವಿರುವುದು. ಇಲ್ಲಿ **ಬಬ್ಧಾಂ** ಎಂಬ ಶಬ್ದವು ತಿನ್ನು, ಭಕ್ಷಿಸು ಎಂಬರ್ಥವುಳ್ಳ ಬಭಸ್ತಿ ಧಾತುವಿನಿಂದ ನಿಷ್ಪನ್ನವಾಗಿದೆ. **ಬಬ್ಧ** ಎಂಬ ಶಬ್ದವು **ಭಸ್**- ಭಕ್ಷಿಸು ಎಂಬ ಧಾತುವಿನಲ್ಲಿರುವ ಭಕಾರವು ಅಭ್ಯಾಸದಿಂದ ಎಂದರೆ ದ್ವಿರುಕ್ತಿಯಿಂದ ಪಠಿತವಾಗಿ ಕೊನೆಯ ಅಕ್ಷರವಾದ ಸಕಾರವು ಲೋಪವಾಗಿ ಬಬ್ ಎಂದಾಗಿ ಅದಕ್ಕೆ **ಧಾ** ಎಂಬ ಉಪಸರ್ಗವನ್ನು ಸೇರಿಸಿರುವುದರಿಂದ **ಬಬ್ಧಾಂ** ಎಂದಾಗಿದೆ-

ಇನ್ನು **ಸೋಮಃ ಸರ್ವಾಣ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ** ಎಂಬ ವಾಕ್ಯಕ್ಕೆ—ಸೋಮನು ಸಮಸ್ತ ಲತೆಗಳನ್ನೂ, ವೃಕ್ಷಗಳನ್ನೂ ತನ್ನ ಮಹಿಮೆಯಿಂದ ಮೀರಿಸಿ ಎಲ್ಲವನ್ನೂ ವ್ಯಾಪಿಸಿರುವನು. ಆದರೆ ಆ ವಿಧವಾದ ಮಹಿಮೆ ಅಥವಾ ಶಕ್ತಿಸಾಮರ್ಥ್ಯಗಳೆಲ್ಲವೂ ಇಂದ್ರನ ಮುಂದೆ ಉಪಯೋಗಕ್ಕೆ ಬರುವುದಿಲ್ಲ. ಅವೆಲ್ಲವೂ ಇಂದ್ರನ ಸಮೀಪಕ್ಕೆ ಸಹ ಬರಲಾರವು ಅಥವಾ ಸಮೀಪಿಸುವುದರೊಳಗಾಗಿ ನಾಶವನ್ನೈದುವವು. ಕೆಲವರು ಈ ಋಕ್ಕಿನಲ್ಲಿ ಇಂದ್ರನೇ ಮುಖ್ಯವಾಗಿ ಸ್ತುತಿಸಲ್ಪಟ್ಟಿರುವನೆಂದೂ, ಸೋಮದೇವತೆಯ ಪ್ರಸ್ತಾಪವು ಅಷ್ಟು ಮುಖ್ಯವಲ್ಲವೆಂದೂ ಹೇಳುವರು. ಮತ್ತೆ ಕೆಲವರು ಈ ಋಕ್ಕಿನಲ್ಲಿ ಇಂದ್ರ ಮತ್ತು ಸೋಮ ಎಂಬ ಇಬ್ಬರು ದೇವತೆಗಳೂ ಸ್ತುತಿಸಲ್ಪಟ್ಟಿರುವರೆಂದು ಹೇಳುವರು.

ಈ ಋಕ್ಕಿನಲ್ಲಿ ಮೊದಲ ಮೂರು ಪಾದಗಳೂ ಸೋಮದೇವತಾಕವಾಗಿವೆಯೆಂದೂ, ಕೊನೆಯ ಪಾದವು ಮಾತ್ರ ಇಂದ್ರನ ಪರವಾಗಿದೆಯೆಂದೂ ಕೆಲವರ ಮತವು. ಇತರ ದೇವತೆಗಳ ಮಹಿಮೆ ಮತ್ತು ಸಾಹಸಕಾರ್ಯಗಳು ಎಷ್ಟೇ ಅತಿಶಯವಾಗಿದ್ದರೂ ಅವು ಇಂದ್ರನ ಸಾಹಸಕೃತ್ಯ ಮತ್ತು ಪರಾಕ್ರಮವನ್ನು ಸರಿಗಟ್ಟಲಾರವು. ಎಲ್ಲರಿಗಿಂತಲೂ ಇಂದ್ರನು ಅತ್ಯಂತ ಮಹಿಮಾನ್ವಿತನು ಎಂದು ವರ್ಣಿಸುವುದಕ್ಕಾಗಿಯೇ ಇಲ್ಲಿ ಸೋಮದೇವತೆಯ ಶಕ್ತಿಸಾಮರ್ಥ್ಯಗಳ ವರ್ಣನೆ ಇದೆ ಎಂದು ಕೆಲವರ ಮತವು.

। ಸಂಹಿತಾಪಾಠಃ ।

ನ ಯಸ್ಯ ದ್ಯಾವಾಪೃಥಿವೀ ನ ಧನ್ವ ನಾಂತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ ।
ಯದಸ್ಯ ಮನ್ಯುರಧಿನೀಯಮಾನಃ ಶೃಣಾತಿ ವೀಳು ರುಜತಿ ಸ್ಥಿರಾಣಿ ॥ ೬ ॥

। ಪದಪಾಠಃ ॥

ನ । ಯಸ್ಯ । ದ್ಯಾವಾಪೃಥಿವೀ ಇತಿ । ನ । ಧನ್ವ । ನ । ಅಂತರಿಕ್ಷಂ । ನ । ಅದ್ರಯಃ । ಸೋಮಃ । ಅಕ್ಷಾರಿತಿ ।

ಯತ್ । ಅಸ್ಯ । ಮನ್ಯುಃ । ಅಧಿऽನೀಯಮಾನಃ । ಶೃಣಾತಿ । ವೀಳು । ರುಜತಿ । ಸ್ಥಿರಾಣಿ ॥ ೬ ॥

॥ ಸಾಯಣಭಾಷ್ಯಂ ॥

ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಯಸ್ಯೇಂದ್ರಸ್ಯ ಪ್ರತಿಮಾನಭೂತೇ ನ ಭವತಃ । ನ ಧನ್ವ । ಉದಕಮಪಿ ಪ್ರತಿಮಾನಭೂತಂ ನ ಭವತಿ । ನಾಂತರಿಕ್ಷಂ । ಅಂತರಿಕ್ಷಮಪಿ ಪ್ರತಿಮಾನಭೂತಂ ನ ಭವತಿ । ನಾದ್ರಯಃ । ಪರ್ವತಾಶ್ಚ ಪ್ರತಿಮಾನಭೂತಾ ನ ಭವಂತಿ । ತಸ್ಯೇಂದ್ರಸ್ಯ ಸೋಮೋಽಕ್ಷಾಃ । ಕ್ಷರತಿ । ಕಿಂಚ ಯದ್ಯದಾಸ್ಯೇಂದ್ರಸ್ಯ ಮನ್ಯುಃ ಕ್ರೋಧೋಽಧಿನೀಯಮಾನಃ ಶತ್ರೂಣಾಮುಪರಿ ಪ್ರಾಪ್ಯಮಾಣೋ ಭವತಿ ತದಾನೀಮಯಮಿಂದ್ರೋ ವೀಳು ದೃಢಂ ಶೃಣಾತಿ । ಹಿನಸ್ತಿ । ಸ್ಥಿರಾಣಿ ರುಜತಿ । ಭಿನತ್ತಿ ಚ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಇಂದ್ರನಿಗೆ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ನ**—ಸಮಾನವಾಗಲಾರವೋ। **ಧನ್ವ**—ಉದಕಗಳು । **ನ**—ಸಮಾನವಾಗಲಾರವೋ । **ಅಂತರಿಕ್ಷಂ**—ಅಂತರಿಕ್ಷವೂ । **ನ**—ಎದುರಾಗಲಾರದೋ । **ಅದ್ರಯಃ**—ಪರ್ವತಗಳು । **ನ**—ಸಮಾನವಾಗಲಾರವೋ ಅಂತಹ ಇಂದ್ರನಿಗಾಗಿ । **ಸೋಮಃ**—ಸೋಮವು । **ಅಕ್ಷಾಃ**—ಪ್ರವಹಿಸುತ್ತದೆ । **ಯತ್**—ಯಾವಾಗ । **ಅಸ್ಯ**—ಇಂದ್ರನ । **ಮನ್ಯುಃ**—ಕ್ರೋಧವು । **ಅಧಿನೀಯಮಾನಃ**—ಶತ್ರುಗಳ ಮೇಲೆ ಪ್ರಯೋಗಿಸಲ್ಪಡುವುದೋ ಆಗ ಇಂದ್ರನು । **ವೀಳು**—ಧೃಢವಾದ ಶತ್ರುಗಳನ್ನೂ । **ಶೃಣಾತಿ**—ಹಿಂಸಿಸುತ್ತಾನೆ । **ಸ್ಥಿರಾಣಿ**—ಭದ್ರವಾದ ಶತ್ರುನೆಲೆಗಳನ್ನೂ । **ರುಜತಿ**—ಸೀಳುತ್ತಾನೆ.

॥ ಭಾವಾರ್ಥ ॥

ಯಾವ ಇಂದ್ರನಿಗೆ ದ್ಯಾವಾಪೃಥಿವಿಗಳು ಸಮಾನವಾಗಲಾರವೋ, ಉದಕಗಳಾಗಲಿ, ಅಂತರಿಕ್ಷವಾಗಲಿ, ಪರ್ವತಗಳಾಗಲಿ ಸಮಾನವಾಗಲಾರವೋ, ಆ ಇಂದ್ರನಿಗಾಗಿ ಸೋಮವು ಪ್ರವಹಿಸುತ್ತದೆ. ಯಾವಾಗ ಇಂದ್ರನ ಕ್ರೋಧವು ಶತ್ರುಗಳಮೇಲೆ ಪ್ರಯೋಗಿಸಲ್ಪಡುವುದೋ, ಆಗ ಇಂದ್ರನು ದೃಢವಾದ ಶತ್ರುಗಳನ್ನೂ ಹಿಂಸಿಸಿ, ಭದ್ರವಾದ ಅವರ ನೆಲೆಗಳನ್ನೂ ಸೀಳುತ್ತಾನೆ.

English Translation

Of whom neither heaven and earth, nor the water, nor the firmament, nor the mountains (are the obstructions) for him both the Soma exude, when his wrath reaching his enemies destroys the strong and breaks the firm.

॥ ಸಂಹಿತಾಪಾಠಃ ॥

ಜಘಾನ ವೃತ್ರಂ ಸ್ವಧಿತಿರ್ವನೇವ ರುರೋಜ ಪುರೋ ಅರದನ್ನ ಸಿಂಧೂನ್ ।
ಬಿಭೇದ ಗಿರಿಂ ನವಮಿನ್ನ ಕುಂಭಮಾ ಗಾ ಇಂದ್ರೋ ಅಕೃಣುತ ಸ್ವಯುಗ್ಭಿಃ ॥

॥ ಪದಪಾಠಃ ॥

ಜಘಾನ । ವೃತ್ರಂ । ಸ್ವಽಧಿತಿಃ । ವನಾಽಇವ । ರುರೋಜ । ಪುರಃ । ಅರದತ್ । ನ । ಸಿಂಧೂನ್ ।
ಬಿಭೇದ । ಗಿರಿಂ । ನವಂ । ಇತ್ । ನ । ಕುಂಭಂ । ಆ । ಗಾಃ । ಇಂದ್ರಃ । ಅಕೃಣುತ । ಸ್ವಯುಕ್ಽಭಿಃ ॥

॥ ಸಾಯಣಭಾಷ್ಯಂ ॥

ಇಂದ್ರೋ ವೃತ್ರಮಸುರಂ ಜಘಾನ । ಹತವಾನ್ । ಅಪಿ ಚ ಸ್ವಧಿತಿಃ ಪರಶುರ್ವನೇವ ವನಾನೀವ ಪುರಃ ಶತ್ರುನಗರೀಃ ರುರೋಜ । ರುಜತಿ । ಭಿನತ್ತಿ । ಶತ್ರುನಗರೀರ್ಭಿತ್ತ್ವಾ ಚ ಸಿಂಧೂನ್ನದೀರರದತ್ । ವೃಷ್ಟ್ಯುದಕೇನಾಲಿಖತ್ । ನೇತಿ ಸಂಪ್ರತ್ಯರ್ಥೇ । ಕಿಂಚ ಗಿರಿಂ ಮೇಘಂ ನವಂ ನ ನವಮಿವ ಕುಂಭಂ ಕಲಶಂ ಬಿಭೇದೇತ್ । ಭಿನತ್ತ್ಯೇವ । ಕಿಂಚೇಂದ್ರಃ ಸ್ವಯುಗ್ಭಿಃ ಸ್ವಯಂ ಯುಜ್ಯಮಾನೈರ್ಮರುದ್ಭಿರ್ಗಾ ಉದಕಾನ್ಯಾಕೃಣುತ । ಅಸ್ಮದಭಿಮುಖಂ ಕರೋತಿ ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ವೃತ್ರಂ**—ಶತ್ರುವನ್ನು । **ಜಘಾನ**—ನಾಶಮಾಡಿದ್ದಾನೆ । **ಸ್ವಧಿತಿಃ**-ಕೊಡಲಿಯು। **ವನೇವ**—ವನವೃಕ್ಷಗಳನ್ನು ಸೀಳುವಂತೆ । **ಪುರಃ**—ಶತ್ರುಪಟ್ಟಣಗಳನ್ನು । **ರುರೋಜ**—ಸೀಳಿಹಾಕುತ್ತಾನೆ । **ಸಿಂಧೂನ್**—ನದಿಗಳನ್ನು । **ಅರದತ್**—ಹರಿಯುವಂತೆ ಮಾಡಲು ಮಾರ್ಗಗಳನ್ನು ನಿರ್ಮಿಸಿದನು । **ನವಂ ಕುಂಭಃ ನ**—ಉದಕಪೂರಿತವಾದ ಹೊಸ ಮೃತ್ಪಾತ್ರೆಯನ್ನು ಒಡೆಯುವಂತೆ । **ಗಿರಿಂ**—ಮೇಘವನ್ನು । **ಬಿಭೇದ ಇತ್**—ಸೀಳಿಹಾಕಿದನು । ಇಂದ್ರಃ—ಇಂದ್ರನು । **ಸ್ವಯುಗ್ಭಿಃ**—ತನ್ನೊಡನೆ ಕೂಡಿರುವ ಮರುತ್ತುಗಳೊಡಗೂಡಿ। **ಗಾಃ**—ಉದಕಗಳನ್ನು । **ಅಕೃಣುತ**—ನಮ್ಮೆದುರಿಗೆ ಪ್ರವಹಿಸುವಂತೆ ಮಾಡಿದನು.

॥ ಭಾವಾರ್ಥ ॥

ಇಂದ್ರನು ವೃತ್ರಾಸುರನನ್ನು ನಾಶಮಾಡಿದ್ದಾನೆ. ಕೊಡಲಿಯು ವನವೃಕ್ಷಗಳನ್ನು ಕಡಿಯುವಂತೆ ಶತ್ರುಪಟ್ಟಣಗಳನ್ನು ಸೀಳಿಹಾಕುತ್ತಾನೆ. ನದಿಗಳು ಹರಿಯುವಂತೆ ಮಾಡಲು ಮಾರ್ಗಗಳನ್ನು ಸೀಳಿ ಸರಿಪಡಿಸಿದ್ದಾನೆ. ಉದಕಪೂರಿತವಾದ ಹೊಸ ಮೃತ್ಪಾತ್ರೆಯನ್ನು ಒಡೆಯುವಂತೆ ಮೇಘವನ್ನು ಸೀಳಿಹಾಕಿದ್ದಾನೆ. ತನ್ನೊಡನೆ ಕೂಡಿರುವ ಮರುತ್ತುಗಳೊಡಗೂಡಿ ನಮ್ಮೆದುರಿಗೆ ಉದಕಗಳನ್ನು ಪ್ರವಹಿಸುವಂತೆ ಮಾಡಿದ್ದಾನೆ.

## English Translation

(Indra) slew Vritra as an axe (cuts down) a tree ; he demolished the cities (of the foes), he dug out the rivers ; he shattered the cloud like a new pitcher ; with his allies (the Maruts) he recovered the cattle.

॥ ಸಂಹಿತಾಪಾಠಃ ॥

ತ್ವಂ ಹ ತ್ಯದೃಣಯಾ ಇಂದ್ರ ಧೀರೋಽಸಿರ್ನ ಪರ್ವ ವೃಜಿನಾ ಶೃಣಾಸಿ ।

ಪ್ರ ಯೇ ಮಿತ್ರಸ್ಯ ವರುಣಸ್ಯ ಧಾಮ ಯುಜಂ ನ ಜನಾ ಮಿನಂತಿ ಮಿತ್ರಂ॥

॥ ಪದಪಾಠಃ ॥

ತ್ವಂ । ಹ । ತ್ಯತ್ । ಋಣ್ಽಯಾಃ । ಇಂದ್ರ । ಧೀರಃ । ಅಸಿಃ । ನ । ಪರ್ವ । ವೃಜಿನಾ । ಶೃಣಾಸಿ ।

ಪ್ರ । ಯೇ । ಮಿತ್ರಸ್ಯ । ವರುಣಸ್ಯ । ಧಾಮ । ಯುಜಂ । ನ । ಜನಾಃ । ಮಿನಂತಿ । ಮಿತ್ರಂ ॥ ೮ ॥

॥ ಸಾಯಣಭಾಷ್ಯಂ ॥

ಇಂದ್ರ ಧೀರಃ ಪ್ರಾಜ್ಞಸ್ತ್ವಂ ಹ ತ್ವಂ ಖಲು ತ್ಯತ್ತದೃಣಯಾಃ ಸ್ತೋತೃವಿಷಯಾಣಾನ್ಯೃಣಾನಾಂ ಪ್ರಾಪಯಿತಾಸಿ । ಕಿಂಚ ತ್ವಮಸಿರ್ನ ಶಸ್ತ್ರಮಿವ ಪರ್ವ ಪಶೂನಾಂ ಪರ್ವಾಣಿ ವೃಜಿನಾ ವೃಜಿನಾನಿ ಸ್ತೋತೄಣಾಮುಪದ್ರವಾಣಿ ಶೃಣಾಸಿ । ಹಂಸಿ । ಕಿಂಚ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋರ್ಧಾಮ ಧಾರಕಂ ಕರ್ಮ ಯುಜಂ ನ ಯುಕ್ತಮಿವ ಮಿತ್ರಂ ಯೇಽಜ್ಞಾ ನೃಶಂಸಾ ಜನಾಃ ಪ್ರ ಮಿನಂತಿ ಪ್ರಕರ್ಷೇಣ ಹಿಂಸಂತಿ ತಾನಪಿ ಶೃಣಾಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಧೀರಃ**—ಪ್ರಾಜ್ಞನಾದ । **ತ್ವಂ ಹ**—ನೀನು। **ತ್ಯತ್**—ಎಲ್ಲರಿಗೂ ತಿಳಿದಂತೆ। **ಋಣಯಾಃ**—ನಿನಗೆ ಅರ್ಪಿತವಾಗಬೇಕಾದ ಹವಿಸ್ಸುಗಳನ್ನು ಯಜಮಾನರಿಂದ ನಿರೀಕ್ಷಿಸುವವನಾಗಿದ್ದೀಯೆ । **ಅಸಿಃ**—ಖಡ್ಗವು । **ಪರ್ವ ನ**—ಪಶುಗಳ ಸಂಧಿಭಾಗಗಳನ್ನು ಕತ್ತರಿಸುವಂತೆ । **ವೃಜಿನಾ**—ಸ್ತುತಿಕರ್ತರ ಪಾಪಗಳನ್ನು । **ಶೃಣಾಸಿ**—ನಾಶಪಡಿಸುತ್ತೀಯೆ । **ಮಿತ್ರಂ ನ**—ಸ್ನೇಹಿತನಂತೆ । **ಯುಜಂ**—ಒಂದಾಗಿ ಸೇರಿರುವ । **ಮಿತ್ರಸ್ಯ ವರುಣಸ್ಯ**—ಮಿತ್ರಾವರುಣರ। **ಧಾಮ**—ಜಗದ್ಧಾರಕವಾದ ಕರ್ಮವನ್ನು । **ಯೇ ಜನಾಃ**—ಯಾವ ಅವಿವೇಕಿಗಳು **ಪ್ರ ಮಿನಂತಿ**—ಹಿಂಸಿಸುವರೋ ಅವರನ್ನೂ ನೀನು ನಾಶಪಡಿಸುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಾಜ್ಞನಾದ ನೀನು ಎಲ್ಲರಿಗೂ ತಿಳಿದಂತೆ ನಿನಗೆ ಅರ್ಪಿತವಾಗಬೇಕಾದ ಹವಿಸ್ಸುಗಳನ್ನು ಯಜಮಾನರಿಂದ ನಿರೀಕ್ಷಿಸುವವನಾಗಿದ್ದೀಯೆ. ಖಡ್ಗವು ಮೃತಪಶುಗಳ ಸಂಧಿಭಾಗವನ್ನು ಕತ್ತರಿಸುವಂತೆ ಸ್ತುತಿಕರ್ತರ ಪಾಪಗಳನ್ನೂ ನಾಶಪಡಿಸುತ್ತೀಯೆ. ಸ್ನೇಹಿತರಂತೆ ಒಂದಾಗಿ ಸೇರಿರುವ ಮಿತ್ರಾವರುಣರ ಜಗದ್ಧಾರಕವಾದ ಕರ್ಮವನ್ನು ಹಿಂಸಿಸುವ ಅವಿವೇಕಿಗಳನ್ನೂ ನಾಶಪಡಿಸುತ್ತೀಯೆ.

## English Translation

You, Indra, who are wise, punish the guilt (of worshippers : you cut off their sins as a sword (cuts off) the limbs (of victims) ; (you

cut off) the people who (ignorantly) injure the supporting (function) of Trita and Varuna, (which is) as it were their close friend.

। ಸಂಹಿತಾಪಾಠಃ ।

ಪ್ರ ಯೇ ಮಿತ್ರಂ ಪ್ರಾರ್ಯಮಣಂ ದುರೇವಾಃ ಪ್ರ ಸಂಗಿರಃ ಪ್ರ ವರುಣಂ ಮಿನಂತಿ ।
ನ್ಯ೧ ಮಿತ್ರೇಷು ವಧಮಿಂದ್ರ ತುಮ್ರಂ ವೃಷನ್ವೃಷಾಣಮರುಷಂ ಶಿಶೀಹಿ॥

॥ ಪದಪಾಠಃ ॥

ಪ್ರ । ಯೇ । ಮಿತ್ರಂ । ಪ್ರ । ಅರ್ಯಮಣಂ । ದುಃಽಏವಾಃ । ಪ್ರ । ಸಂಽಗಿರಃ । ಪ್ರ । ವರುಣಂ । ಮಿನಂತಿ ।
ನಿ । ಅಮಿತ್ರೇಷು । ವಧಂ । ಇಂದ್ರ । ತುಮ್ರಂ । ವೃಷನ್ । ವೃಷಾಣಂ । ಅರುಷಂ । ಶಿಶೀಹಿ ॥ ೯ ॥

॥ ಸಾಯಣಭಾಷ್ಯಂ ॥

ಯೇ ದುರೇವಾ ದುಷ್ಟಗಮನಾ ಜನಾ ಮಿತ್ರಂ ದೇವಂ ಪ್ರ ಮಿನಂತಿ ಪ್ರಹಿಂಸಂತಿ ಅರ್ಯಮಣಂ ಚ ದೇವಂ ಪ್ರ ಮಿನಂತಿ ಸಂಗಿರಃ ಸಮೀಚೀನಸ್ತುತಿಮತೋ ಮರುತಶ್ಚ ಪ್ರ ಮಿನಂತಿ ವರುಣಂ ಚ ದೇವಂ ಪ್ರ ಮಿನಂತಿ ತೇಷ್ವಮಿತ್ರೇಷು ಶತ್ರುಷು । ತಾನುದ್ದಿಶ್ಯೇತ್ಯರ್ಥಃ । ಹೇ ವೃಷನ್ ಕಾಮಾನಾಂ ವರ್ಷಕೇಂದ್ರ ತ್ವಂ ತುಮ್ರಂ ಗಮನಶೀಲಂ ವೃಷಾಣಂ ಕಾಮಾನಾಂ ವರ್ಷಕಮರುಷಮಾರೋಚಮಾನಂ ವಧಂ ವಜ್ರಂ । ವಧೋ ವಜ್ರ ಇತಿ ವಜ್ರನಾಮಸು ಪಾಠಾತ್ । ನಿ ಶಿಶೀಹಿ । ತೀಕ್ಷ್ಣೀಕುರು ॥

॥ ಪ್ರತಿಪದಾರ್ಥ ॥

ವೃಷನ್—ಕಾಮವರ್ಷಕನಾದ । ಇಂದ್ರ—ಎಲೈ ಇಂದ್ರನೇ । ಯೇ ದುರೇವಾಃ—ಯಾವ ದುಷ್ಟ ಜನರು । ಮಿತ್ರಂ— ಮಿತ್ರ ದೇವನನ್ನು । ಅರ್ಯಮಣಂ—ಅರ್ಯಮನನ್ನು ಹಿಂಸಿಸುವರೋ। ಸಂಗಿರಃ—ಉತ್ತಮವಾದ ಸ್ತುತಿಯುಕ್ತರಾದ ಮರುತ್ತುಗಳನ್ನು । ಪ್ರ—ಹಿಂಸಿಸುವರೋ । ವರುಣಂ—ವರುಣನನ್ನು । ಪ್ರ—ಹಿಂಸಿಸುವರೋ। ಅಮಿತ್ರೇಷು—ಅಂತಹ ಶತ್ರುಗಳ ಮೇಲೆ ಪ್ರಯೋಗಿಸಲು । ತುಮ್ರಂ—ಶೀಘ್ರಗಾಮಿಯೂ । ವೃಷಾಣಂ—ಇಷ್ಟಾರ್ಥಪ್ರದವೂ । ಅರುಷಂ—ಹೊಂಬಣ್ಣವುಳ್ಳದ್ದೂ । ವಧಂ—ಶತ್ರುನಾಶಕವೂ । ಆದ ವಜ್ರಾಯುಧವನ್ನು । ನಿ ಶಿಶೀಹಿ—ತೀಕ್ಷ್ಣಪಡಿಸು.

। ಭಾವಾರ್ಥ ।

ಕಾಮವರ್ಷಕನಾದ ಎಲೈ ಇಂದ್ರನೇ, ಯಾವ ದುಷ್ಟಜನರು ಮಿತ್ರದೇವನನ್ನೂ, ಅರ್ಯಮನನ್ನೂ, ವರುಣನನ್ನೂ, ಉತ್ತಮವಾದ ಸ್ತುತಿಯುಕ್ತರಾದ ಮರುತ್ತುಗಳನ್ನೂ ಹಿಂಸಿಸುವರೋ ಅಂತಹ ಶತ್ರುಗಳಮೇಲೆ ಪ್ರಯೋಗಿಸಲು ಶೀಘ್ರಗಾಮಿಯೂ, ಹೊಂಬಣ್ಣವುಳ್ಳದ್ದೂ, ಶತ್ರುನಾಶಕವೂ ಆದ ವಜ್ರಾಯುಧವನ್ನು ಹರಿತಮಾಡು.

English Translation

Against those who sinfully offend against Mitra, Aryaman, your companions (the Maruts) and Varuna, against these your enemies sharpen, Indra, showerer (of benefits), your rapid showering radiant thunderbolt.

। ಸಂಹಿತಾಪಾಠಃ ।

ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾ ಇಂದ್ರೋ ಅಪಾಮಿಂದ್ರ ಇತ್ಪರ್ವತಾನಾಂ ।

ಇಂದ್ರೋ ವೃಧಾಮಿಂದ್ರ ಇನ್ಮೇಧಿರಾಣಾಮಿಂದ್ರಃ ಕ್ಷೇಮೇ ಯೋಗೇ ಹವ್ಯ ಇಂದ್ರಃ ॥ ೧೦ ॥

॥ ಪದಪಾಠಃ ॥

ಇಂದ್ರಃ । ದಿವಃ । ಇಂದ್ರಃ । ಈಶೇ । ಪೃಥಿವ್ಯಾಃ । ಇಂದ್ರಃ । ಅಪಾಂ । ಇಂದ್ರಃ । ಇತ್ । ಪರ್ವತಾನಾಂ। ಇಂದ್ರಃ । ವೃಧಾಂ । ಇಂದ್ರಃ । ಇತ್ । ಮೇಧಿರಾಣಾಂ । ಇಂದ್ರಃ । ಕ್ಷೇಮೇ । ಯೋಗೇ । ಹವ್ಯಃ । ಇಂದ್ರಃ ॥ ೧೦ ॥

। ಸಾಯಣಭಾಷ್ಯಂ ।

ದಿವೋ ದ್ಯುಲೋಕಸ್ಯೇಂದ್ರ ಈಶೇ । ಈಷ್ಟೇ। ಪೃಥಿವ್ಯಾ ಭೂಮೇರಪೀಂದ್ರ ಈಶೇ। ಈಶ್ವರೋ ಭವತಿ । ಅಪಾಮುದಕಾನಾಮಪೀಂದ್ರ ಈಶ್ವರೋ ಭವತಿ । ಪರ್ವತಾನಾಂ ಮೇಘಾನಾಮಪೀಂದ್ರ ಈಶ್ವರೋ ಭವತಿ । ವೃಧಾಂ ವೃದ್ಧಾನಾಮಪೀಂದ್ರ ಏವೇಶ್ವರಃ । ಮೇಧಿರಾಣಾಂ ಪ್ರಾಜ್ಞಾನಮಪೀಂದ್ರ ಏವೇಶ್ವರೋ ಭವತಿ । ಕಿಂಚೇಂದ್ರಃ ಕ್ಷೇಮೇ ಲಬ್ಧಸ್ಯ ಧನಸ್ಯ ಪರಿಪಾಲನೇ ಹವ್ಯೋ ಹ್ವಾತವ್ಯೋ ಯೋಗೇಽಲಬ್ಧಸ್ಯ ಧನಸ್ಯ ಲಾಭೇಽಪೀಂದ್ರ ಏವ ಹ್ವಾತವ್ಯೋ ಭವತಿ ॥

।ಪ್ರತಿಪದಾರ್ಥ।

ಇಂದ್ರಃ—ಇಂದ್ರನು । ದಿವಃ—ದ್ಯುಲೋಕಕ್ಕೆ। ಈಶೇ—ಪ್ರಭುವಾಗಿದ್ದಾನೆ। ಪೃಥಿವ್ಯಾಃ—ಪೃಥ್ವಿಗೂ। ಇಂದ್ರಃ—ಇಂದ್ರನೇ ಪ್ರಭುವಾಗಿದ್ದಾನೆ । ಇಂದ್ರಃ—ಇಂದ್ರನು । ಅಪಾಂ—ಉದಕಗಳಿಗೂ ಪ್ರಭುವಾಗಿದ್ದಾನೆ ।

**ಪರ್ವತಾನಾಂ ಇತ್**—ಮೇಘಗಳಿಗೂ । ಇಂದ್ರಃ—ಇಂದ್ರನೇ ಪ್ರಭುವಾಗಿದ್ದಾನೆ । **ವೃಧಾಂ**—ವೃದ್ಧರಿಗೂ । **ಇಂದ್ರಃ**—ಇಂದ್ರನೇ ಪ್ರಭುವು । **ಮೇಧಿರಾಣಾಂ**—ಪ್ರಾಜ್ಞರಿಗೂ । **ಇಂದ್ರಃ**—ಇಂದ್ರನೇ ಪ್ರಭುವು । **ಕ್ಷೇಮೇ**—ಸಂಪಾದಿಸಿದ ಧನವನ್ನು ರಕ್ಷಿಸಲು । **ಇಂದ್ರಃ**—ಇಂದ್ರನು । **ಹವ್ಯಃ**—ಪ್ರಾರ್ಥಿತನಾಗುತ್ತಾನೆ । **ಯೋಗೇ**—ಇಲ್ಲದಿರುವ ಧನವನ್ನು ಸಂಪಾದಿಸಲು ಸಹ । **ಇಂದ್ರಃ**—ಇಂದ್ರನೇ ಪ್ರಾರ್ಥಿತನಾಗುತ್ತಾನೆ

॥ ಭಾವಾರ್ಥ ॥

ದ್ಯಾವಾಪೃಥಿವಿಗಳಿಗೆಲ್ಲ ಇಂದ್ರನೇ ಪ್ರಭುವು. ಉದಕಗಳಿಗೂ ಮತ್ತು ಮೇಘಗಳಿಗೂ ಇಂದ್ರನೇ ಪ್ರಭುವು. ವೃದ್ಧರಿಗೂ ಮತ್ತು ಪ್ರಾಜ್ಞರಿಗೂ ಸಹ ಇಂದ್ರನೇ ಪ್ರಭುವು. ಸಂಪಾದಿಸಿದ ಧನವನ್ನು ರಕ್ಷಿಸಲೂ ಮತ್ತು ಸಂಪಾದಿಸಬೇಕಾದ ಧನವನ್ನು ಪಡೆಯಲೂ ಇಂದ್ರನನ್ನೇ ಸ್ತುತಿಸಿ ಪ್ರಾರ್ಥಿಸಬೇಕು.

English Translation

Indra rules over heaven, Indra rules over earth, over the waters, and over the clouds ; Indra rules over the great and over the wise ; Indra, is to be invoked for the acquirement and preservation (of wealth).

॥ ಸಂಹಿತಾಪಾಠಃ ॥

ಪ್ರಾಕ್ತುಭ್ಯ ಇಂದ್ರಃ ಪ್ರ ವೃಧೋ ಅಹಭ್ಯಃ ಪ್ರಾಂತರಿಕ್ಷಾತ್ಪ್ರ ಸಮುದ್ರಸ್ಯ ಧಾಸೇಃ ।
ಪ್ರ ವಾತಸ್ಯ ಪ್ರಥಸಃ ಪ್ರ ಜ್ಮೋ ಅಂತಾತ್ಪ್ರ ಸಿಂಧುಭ್ಯೋ ರಿರಿಚೇ ಪ್ರ ಕ್ಷಿತಿಭ್ಯಃ ॥ ೧೧ ॥

॥ ಪದಪಾಠಃ ॥

ಪ್ರ । ಅಕ್ತುಽಭ್ಯಃ । ಇಂದ್ರಃ । ಪ್ರ । ವೃಧಃ । ಅಹಽಭ್ಯಃ । ಪ್ರ । ಅಂತರಿಕ್ಷಾತ್ । ಪ್ರ । ಸಮುದ್ರಸ್ಯ । ಧಾಸೇಃ ।
ಪ್ರ । ವಾತಸ್ಯ । ಪ್ರಥಸಃ । ಪ್ರ । ಜ್ಮಃ । ಅಂತಾತ್ । ಪ್ರ । ಸಿಂಧುಽಭ್ಯಃ । ರಿರಿಚೇ । ಪ್ರ । ಕ್ಷಿತಿಽಭ್ಯಃ ॥

॥ ಸಾಯಣಭಾಷ್ಯಂ ॥

ಇಂದ್ರೋಽಕ್ತುಭ್ಯೋ ರಾತ್ರಿಭ್ಯಃ ಪ್ರ ವೃಧಃ । ಪ್ರವೃದ್ಧಃ । ಅಹಭ್ಯೋ ದಿವಸೇಭ್ಯೋಽಪಿ ಪ್ರ ವೃಧಃ । ಅಧಿಕಃ । ಅಂತರಿಕ್ಷಾದಪಿ ಪ್ರವೃದ್ಧಃ । ಸಮುದ್ರಸ್ಯಾಬ್ಧೇರ್ಧಾಸೇರ್ಧಾರಕಾತ್ಸ್ಥಾನಾದಪಿ

ಪ್ರವೃದ್ಧಃ। ವಾತಸ್ಯ ವಾಯೋಃ ಪ್ರಥಸಃ ಪ್ರಥಿನ್ನೋಽಪಿ ಪ್ರವೃದ್ಧಃ । ಜ್ಮಃ ಪೃಥಿವ್ಯಾ ಅಂತಾತ್ಪರ್ಯಂತಾದಪಿ ಪ್ರವೃದ್ಧಃ । ಸಿಂಧುಭ್ಯೋ ನದೀಭ್ಯಶ್ಚ ಪ್ರ ರಿರಿಚೇ । ಅತಿರಿಚ್ಯತೇ । ಮಹಾನ್ಭವತೀತ್ಯರ್ಥಃ ಕ್ಷಿತಿಭ್ಯೋ ಮನುಷ್ಯೇಭ್ಯೋಽಪಿ ಪ್ರ ರಿರಿಚೇ ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಅಕ್ತುಭ್ಯಃ**—ರಾತ್ರಿಗಳಿಗಿಂತಲೂ। **ಪ್ರ ವೃಧಃ**—ಅಧಿಕವಾಗಿ ಮೀರಿ ಬೆಳೆದಿದ್ದಾನೆ। **ಅಹಭ್ಯಃ**—ಅಹಸ್ಸುಗಳಿಗಿಂತಲೂ । **ಪ್ರ**—ಮೀರಿ ಬೆಳೆದಿದ್ದಾನೆ । **ಅಂತರಿಕ್ಷಾತ್**—ಅಂತರಿಕ್ಷಕ್ಕಿಂತಲೂ । **ಪ್ರ**—ಮೀರಿದ್ದಾನೆ । **ಸಮುದ್ರಸ್ಯ**—ಸಮುದ್ರಗಳಿಗೆ । **ಧಾಸೇಃ**—ಧಾರಕವಾದ ಸ್ಥಾನಗಳಿಗಿಂತಲೂ । **ಪ್ರ**—ಮೀರಿ ಬೆಳೆದಿದ್ದಾನೆ। **ವಾತಸ್ಯ**—ವಾಯುವಿಗಿಂತಲೂ । **ಪ್ರಥಸಃ**—ವ್ಯಾಪಕವಾದ ದಿಗಂತಗಳಿಗಿಂತಲೂ । **ಪ್ರ**—ಮೀರಿದ್ದಾನೆ। **ಜ್ಮಃ**—ಪೃಥ್ವಿಯ । **ಅಂತಾತ್**—ಕೊನೆಗಿಂತಲೂ ಅಧಿಕನಾಗಿದ್ದಾನೆ । **ಸಿಂಧುಭ್ಯಃ**—ನದಿಗಳಿಗಿಂತಲೂ । **ಪ್ರ ರಿರಿಚೇ**—ಅಧಿಕವಾಗಿ ಬೆಳೆದಿದ್ದಾನೆ । **ಕ್ಷಿತಿಭ್ಯಃ**—ಮಾನವರಿಗಿಂತಲೂ । **ಪ್ರ**—ಅಧಿಕನಾಗಿ ಬೆಳೆದಿದ್ದಾನೆ.

॥ ಭಾವಾರ್ಥ ॥

ಇಂದ್ರನು ಅಹೋರಾತ್ರಿಗಳಿಗಿಂತಲೂ ಬೆಳೆದಿದ್ದಾನೆ. ಅಂತರಿಕ್ಷವನ್ನೂ, ಜಲನಿಧಿಗಳಾದ ಸಾಗರಗಳನ್ನೂ ಮೀರಿಸಿದ್ದಾನೆ. ವಾಯುಗಳಿಗಿಂತಲೂ ಅಧಿಕನು, ಪೃಥ್ವಿಗಿಂತಲೂ ಅಧಿಕನು, ದಿಗಂತಗಳನ್ನೂ ಮೀರಿಸಿದ್ದಾನೆ ನದಿಗಳಿಗಿಂತಲೂ ಅಧಿಕನು, ಮಾನವರನ್ನು ಮೀರಿಸಿದ್ದಾನೆ.

English Translation

Indra is vaster than the nights, vaster than the days, vaster than the firmament or the receptacle of the ocean, vaster than the wind, or space or the ends of the earth ; Indra exceeds the rivers and mankind.

॥ ಸಂಹಿತಾಪಾಠಃ ॥

ಪ್ರ ಶೋಶುಚತ್ಯಾ ಉಷಸೋ ನ ಕೇತುರಸಿನ್ವಾ ತೇ ವರ್ತತಾಮಿಂದ್ರ ಹೇತಿಃ ।

ಅಶ್ಮೇವ ವಿಧ್ಯ ದಿವ ಆ ಸೃಜಾನಸ್ತಪಿಷ್ಠೇನ ಹೇಷಸಾ ದ್ರೋಘಮಿತ್ರಾನ್ ॥

॥ ಪದಪಾಠಃ ॥

ಪ್ರ । ಶೋಶುಚತ್ಯಾಃ । ಉಷಸಃ । ನ । ಕೇತುಃ । ಅಸಿನ್ವಾ । ತೇ । ವರ್ತತಾಂ । ಇಂದ್ರ । ಹೇತಿಃ ।

ಅಶ್ಮಾಽಇವ । ವಿಧ್ಯ । ದಿವಃ । ಆ । ಸೃಜಾನಃ । ತಪಿಷ್ಠೇನ । ಹೇಷಸಾ । ದ್ರೋಘಽಮಿತ್ರಾನ್ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವಾಸಿನ್ವಾ ಭೇದನರಹಿತಂ ಹೇತಿರ್ವಜ್ರಾಖ್ಯಮಾಯುಧಂ ಶೋಶುಚತ್ಯಾ ಜ್ವಲಂತ್ಯಾ ಉಷಸೋ ನ ಯಥೋಷಸಃ ಕೇತುಃ ಪತಾಕಸ್ಥಾನೀಯೋ ರಶ್ಮಿಸ್ತದ್ವಚ್ಛತ್ರುಷು ಪ್ರ ವರ್ತತಾಂ । ಕಿಂಚ ತಪಿಷ್ಠೇನಾತಿಶಯೇನ ಶತ್ರೂಣಾಂ ತಾಪಯಿತ್ರ್ಯಾ ಹೇಷಸಾ ಶಬ್ದಕಾರಿಣ್ಯಾ ಹೇತ್ಯಾ ದ್ರೋಘಮಿತ್ರಾನ್ ದ್ರುಗ್ಧಾನಿ ಮಿತ್ರಾಣಿ ಯೇಷಾಂ ತೇ ದ್ರೋಘಮಿತ್ರಾಃ । ತಾಞ್ಛತ್ರೂನ್ವಿಧ್ಯ । ತಾಡಯ ತತ್ರ । ದೃಷ್ಟಾಂತಃ । ದಿವ ಆ ಸೃಜಾನಃ ಸೃಜ್ಯಮಾನೋಽಶ್ಮೇವ । ಯಥಾಶನಿರ್ವೃಕ್ಷಾನ್ವಿಧ್ಯತಿ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಶೋಶುಚತ್ಯಾಃ**—ಪ್ರಕಾಶಮಾನಳಾದ । **ಉಷಸಃ**—ಉಷಸ್ಸಿನ । **ಕೇತುಃ ನ**—ಪತಾಕೆಯಂತಿರುವ ರಶ್ಮಿಯಂತೆ ಇರುವ । **ಅಸಿನ್ವಾ**—ಅಂಕುಠಿತವಾದ । **ತೇ ಹೇತಿಃ**—ನಿನ್ನ ವಜ್ರಾಯುಧವು । **ಪ್ರ ವರ್ತತಾಂ**—ಶತ್ರುಗಳ ಮೇಲೆ ಪ್ರಯೋಗಿಸಲ್ಪಡಲಿ । **ದಿವಃ**—ಅಂತರಿಕ್ಷದಿಂದ । **ಆ ಸೃಜಾನಃ**—ವೇಗವಾಗಿ ಎಸೆಯಲ್ಪಟ್ಟ । **ಅಶ್ಮೇವ**—ವಜ್ರಾಯುಧದಂತೆ । **ತಪಿಷ್ಠೇನ**—ದಾಹಾತ್ಮಕವಾದುದೂ । **ಹೇಷಸಾ**......ಶಬ್ದಮಾಡುವುದೂ ಆದ ನಿನ್ನ ಆಯುಧದಿಂದ । **ದ್ರೋಘಮಿತ್ರಾನ್**—ಕೇಡನ್ನು ಬಯಸುವ ಶತ್ರುಗಳನ್ನು । **ವಿಧ್ಯ**—ಪ್ರಹರಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಕಾಶಮಾನಳಾದ ಉಷಸ್ಸಿನ ಪತಾಕೆಯಂತಿರುವ ರಶ್ಮಿಯಂತೆ ಇರುವ ಅಕುಂಠಿತವಾದ ನಿನ್ನ ವಜ್ರಾಯುಧವು ಶತ್ರುಗಳಮೇಲೆ ಪ್ರಯೋಗಿಸಲ್ಪಡಲಿ. ಅಂತರಿಕ್ಷದಿಂದ ವೇಗವಾಗಿ ಎಸೆಯಲ್ಪಟ್ಟ ವಜ್ರಾಯುಧದಂತೆ ದಾಹಾತ್ಮಕವಾದುದೂ, ಶಬ್ದಮಾಡುವುದೂ ಆದ ನಿನ್ನ ಆಯುಧದಿಂದ ಕೇಡನ್ನು ಬಯಸುವ ಶತ್ರುಗಳನ್ನು ಪ್ರಹರಿಸು.

English Translation

May your unbroken weapon, Indra, proceed (against your foes) like the banner of the shining dawn, like a stone cast down from heaven pierce those whose friendship is deceitful with your consuming loud-sounding (weapon).

॥ ಸಂಹಿತಾಪಾಠಃ ॥

ಅನ್ವಹ ಮಾಸಾ ಅನ್ವಿದ್ವನಾನ್ಯನ್ವೋಷಧೀರನು ಪರ್ವತಾಸಃ ।
ಅನ್ವಿಂದ್ರಂ ರೋದಸೀ ವಾವಶಾನೇ ಅನ್ವಾಪೋ ಅಜಿಹತ ಜಾಯಮಾನಂ ॥

ಪದಪಾಠಃ ॥

ಅನು । ಅಹ । ಮಾಸಾಃ । ಅನು । ಇತ್ । ವನಾನಿ । ಅನು । ಓಷಧೀಃ । ಅನು । ಪರ್ವತಾಸಃ ।
ಅನು । ಇಂದ್ರಂ । ರೋದಸೀ ಇತಿ । ವಾವಶಾನೇ ಇತಿ । ಅನು । ಆಪಃ । ಅಜಿಹತ । ಜಾಯಮಾನಂ ।

॥ ಸಾಯಣಭಾಷ್ಯಂ ॥

ಜಾಯಮಾನಂ ಪ್ರಾದುರ್ಭವಂತಮಿಂದ್ರಂ ಮಾಸಾಶ್ಚೈತ್ರಾದಯೋಽನ್ವಜಿಹತ । ಅನುಗಚ್ಛಂತಿ । ಅಹೇತಿ ಪೂರಣಃ । ವನಾನ್ಯರಣ್ಯಾನ್ಯಪೀಂದ್ರಮನ್ವಜಿಹತ । ಇದಿತಿ ಪೂರಣಃ । ಓಷಧೀರೋಷಧ್ಯೋಽಪೀಂದ್ರಮನುಗಚ್ಛಂತಿ । ಪರ್ವತಾಸಃ ಪರ್ವತಾ ಅಪೀಂದ್ರಮನುಗಚ್ಛಂತಿ । ವಾವಶಾನೇ ಕಾಮಯಮಾನೇ ರೋದಸೀ ದ್ಯಾವಾಪೃಥಿವ್ಯಾವಪೀಂದ್ರಮನುಗಚ್ಛತಃ । ಆಪ ಉದಕಾನ್ಯಪೀಂದ್ರಮನುಗಚ್ಛಂತಿ । ಮಾಸಾದ್ಯಧಿಷ್ಠಾತೃದೇವತಾಃ ಪ್ರಾದುರ್ಭವಂತಮಿಂದ್ರಮನುಗಚ್ಛಂತೀತ್ಯರ್ಥಃ ॥

। ಪ್ರತಿಪದಾರ್ಥ ।

**ಜಾಯಮಾನಂ ಇಂದ್ರಂ**—ಇಂದ್ರನು ಉತ್ಪನ್ನನಾಗುವಾಗಲೇ । **ಮಾಸಾಃ**—ಚೈತ್ರಾದಿ ಮಾಸಗಳು । **ಅನ್ವಜಿಹತ**—ಅವನನ್ನು ಅನುಸರಿಸುತ್ತವೆ । **ವನಾನಿ**—ವನ ವೃಕ್ಷಗಳೂ । **ಅನು**—ಅವನ ಆಜ್ಞೆಯನ್ನು ಪಾಲಿಸುತ್ತವೆ । **ಓಷಧೀಃ**—ಮೂಲಿಕೆಗಳೂ । **ಅನು**—ಇಂದ್ರನ ಆಜ್ಞಾವರ್ತಿಗಳಾಗಿರುತ್ತವೆ । **ಪರ್ವತಾಸಃ**—ಪರ್ವತಗಳೂ । **ಅನು**—ಇಂದ್ರನಿಗೆ ತಲೆಬಾಗುತ್ತವೆ । **ವಾವಶಾನೇ**—ಪರಸ್ಪರ ಪ್ರೀತಿಸುವ । **ರೋದಸೀ**—ದ್ಯಾವಾಪೃಥಿವಿಗಳೂ । **ಇಂದ್ರಂ**—ಇಂದ್ರನನ್ನು ಅನುಸರಿಸುತ್ತವೆ । **ಆಪಃ**—ಉದಕಗಳೂ । **ಅನು**—ಇಂದ್ರನ ಆಜ್ಞೆಯನ್ನು ಪಾಲಿಸುತ್ತವೆ.

। ಭಾವಾರ್ಥ ।

ಇಂದ್ರನು ಉತ್ಪನ್ನನಾಗುವಾಗಲೇ, ಚೈತ್ರಾದಿಮಾಸಗಳು ಅವನನ್ನು ಅನುಸರಿಸುತ್ತವೆ. ವನವೃಕ್ಷಗಳೂ ಅವನ ಆಜ್ಞೆಯನ್ನು ಪಾಲಿಸುತ್ತವೆ. ಮೂಲಿಕೆಗಳೂ ಇಂದ್ರನ ಆಜ್ಞಾವರ್ತಿಗಳಾಗಿರುತ್ತವೆ. ಪರ್ವತಗಳೂ ಇಂದ್ರನಿಗೆ ತಲೆಬಾಗುತ್ತವೆ. ಪರಸ್ಪರ ಪ್ರೀತಿಸುವ ದ್ಯಾವಾಪೃಥಿವಿಗಳೂ, ಉದಕಗಳೂ ಇಂದ್ರನ ಆಜ್ಞೆಯನ್ನು ಪಾಲಿಸುತ್ತವೆ.

## English Translation

The months attend upon Indra as soon as born, the forests attend upon him, the plants, the mountains, the affectionate heaven and earth and the waters (attend upon) him.

। ಸಂಹಿತಾಪಾಠಃ ।

ಕರ್ಹಿ ಸ್ವಿತ್ಸಾ ತ ಇಂದ್ರ ಚೇತ್ಯಾಸದಘಸ್ಯ ಯದ್ಭಿನದೋ ರಕ್ಷ ಏಷತ್ ।
ಮಿತ್ರಕ್ರುವೋ ಯಚ್ಛಸನೇ ನ ಗಾವಃ ಪೃಥಿವ್ಯಾ ಆಪೃಗಮುಯಾ ಶಯಂತೇ ॥

। ಪದಪಾಠಃ ।

ಕರ್ಹಿ । ಸ್ವಿತ್ । ಸಾ । ತೇ । ಇಂದ್ರ । ಚೇತ್ಯಾ । ಅಸತ್ । ಅಘಸ್ಯ । ಯತ್ । ಭಿನದಃ । ರಕ್ಷಃ । ಆಽಈಷತ್ ।

ಮಿತ್ರ॒ಽಕ್ರುವಃ । ಯತ್ । ಶಸ॑ನೇ । ನ । ಗಾವಃ॑ । ಪೃ॒ಥಿ॒ವ್ಯಾಃ । ಆ॒ಽಪೃಕ್ । ಅ॒ಮು॒ಯಾ । ಶಯ॑ಂತೇ ॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವ ಸಾ ಹೇತಿರಿಷುರ್ವಾ ಚೇತ್ಯಾ ಚೇತಯಿತವ್ಯಾ ಶತ್ರುಷು ಕ್ಷೇಪ್ತವ್ಯಾ ಕರ್ಹಿಸ್ವಿತ್ ಕದಾ ಪಾಸತ್ । ಭವಿಷ್ಯತಿ । ಯದ್ಯದಾ ಹೇತ್ಯಾ ತ್ವಮಘಸ್ಯ । ದ್ವಿತೀಯಾರ್ಥೇ ಷಷ್ಠೀ । ಅಹತಮೇಷದ್ಯುದ್ಧಾರ್ಥಮಾಗಚ್ಛದ್ರಕ್ಷೋ ಭಿನದಃ ಅಭಿನತ್ । ಯದ್ಯದಾ ಚ ಶಕ್ತ್ಯಾ ಮಿತ್ರಕ್ರುವೋ ಮಿತ್ರಾಣಾಂ ಕ್ರೂರಸ್ಯ ಕರ್ಮಣಃ ಕರ್ತಾರೋ ಜನಾಃ ಪೃಥಿವ್ಯಾಃ ಸಂಬಂಧಿನಿ ಶಸನೇ ವಿಶಸನಸ್ಥಾನೇ ಗಾವೋ ನ ಪಶವ ಇವಾಪೃಗಾಪರ್ಚನಾಹತಾಃ ಸಂತೋಽಮುಯಾನಯಾ ಪೃಥಿವ್ಯಾ ಸಂಗತಾ ಯುದ್ಧೇ ಶಯಂತೇ ಶೇರತೇ ॥

। ಪ್ರತಿಪದಾರ್ಥ ।

**ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಅಘಸ್ಯ**—ಪಾಪಕರ್ಮವುಳ್ಳವನೂ । **ವಿಷತ್**—ಯುದ್ಧಕ್ಕೆ ಆತುರಪಡುವವನೂ ಆದ । **ರಕ್ಷಃ**—ರಾಕ್ಷಸನನ್ನು । **ಭಿನದಃ**—ಸೀಳುವೆಯೋ । **ಯತ್**—ಯಾವಾಗ । **ಪೃಥಿವ್ಯಾಃ**—ಪೃಥ್ವಿಗೆ ಸೇರಿದ । **ಮಿತ್ರಕ್ರುವಃ**—ಮಿತ್ರರಿಗೆ ದ್ರೋಹಮಾಡುವ ಕೆಡುಕರು । **ಶಸನೇ**—ಛೇದನ ಕಾಲದಲ್ಲಿ । **ಗಾವೋ ನ**—ಪಶುಗಳು ನೆಲದ ಮೇಲೆ ಬಿದ್ದು ಒದ್ದಾಡುವಂತೆ । **ಆಪೃಕ್**—ವಜ್ರಾಯುಧದಿಂದ ಹೊಡೆಯಲ್ಪಟ್ಟಾಗ । **ಅಮುಯಾ**—ಪೃಥ್ವಿಯೊಡನೆ ಸೇರಿ । **ಶಯಂತೇ**—ಹೊರಳಾಡುವರೋ ಆಗ । **ತೇ**—ನಿನ್ನ । **ಸಾ ಚೇತ್ಯಾ**-ಶತ್ರುಗಳ ಮೇಲೆ ಪ್ರಯೋಗಿಸಬೇಕಾದ ಆಯುಧವು । **ಕರ್ಹಿ ಸ್ವಿತ್**—ಯಾವ ಸ್ಥಾನದಲ್ಲಿ । **ಅಸತ್**—ಇರುತ್ತದೆ?

॥ ಭಾವಾರ್ಥ ॥

ಎಲೈ ಇಂದ್ರನೇ, ಪಾಪಕರ್ಮವುಳ್ಳವನೂ, ಯುದ್ಧಕ್ಕೆ ಆತುರಪಡುವವನೂ ಅದ ರಾಕ್ಷಸನನ್ನು ನೀನು ಯಾವಾಗ ಸೀಳುವೆಯೋ, ಯಾವಾಗ ಪೃಥ್ವಿಗೆ ಸೇರಿದವರೂ, ಮಿತ್ರರಿಗೆ ದ್ರೋಹಮಾಡುವವರೂ ಆದ ಕೆಡುಕರು ನಿನ್ನ ವಜ್ರಾಯುಧದಿಂದ ಹತರಾಗಿ, ಪಶುಗಳು ನೆಲದಮೇಲೆ ಬಿದ್ದು ತಮ್ಮ ಛೇದನಕಾಲದಲ್ಲಿ ಹೊರಳಾಡುವಂತೆ, ನೆಲದಮೇಲೆ ಹೊರಳಾಡುವರೋ, ಆಗ ಆ ಶತ್ರುಗಳ ಮೇಲೆ ಪ್ರಯೋಗಿಸಲ್ಪಡಬೇಕಾದ ನಿನ್ನ ಆಯುಧವು ಎಲ್ಲಿರುತ್ತದೆ?

## English Translation

Where was your (shaft), Indra, (which ought) to be hurled (against your enemies) when you clove the Rakshasas hastening to war, and when the Mitrakrus lay on the ground there in confusion like cattle at the place of immolation ?

। ಸಂಹಿತಾಪಾಠಃ ।

ಶತ್ರೂ॒ಯಂತೋ॑ ಅ॒ಭಿ ಯೇ ನ॑ಸ್ತತ॒ಸ್ರೇ ಮಹಿ॒ ವ್ರಾಧ॑ಂತ ಓಗ॒ಣಾಸ॑ ಇಂದ್ರ ।

ಅಂಧೇನಾಮಿತ್ರಾಸ್ತಮಸಾ ಸಚಂತಾಂ ಸುಜ್ಯೋತಿಷೋ ಅಕ್ತವಸ್ತಾ ಅಭಿ

ಷ್ಯುಃ ॥ ೧೫ ॥

॥ ಪದಪಾಠಃ ॥

ಶತ್ರುsಯಂತಃ । ಅಭಿ । ಯೇ । ನಃ । ತತಸ್ರೇ । ಮಹಿ । ವ್ರಾಧಂತಃ । ಓಗಣಾಸಃ । ಇಂದ್ರ । ಅಂಧೇನ । ಅಮಿತ್ರಾಃ । ತಮಸಾ । ಸಚಂತಾಂ । ಸುsಜ್ಯೋತಿಷಃ । ಅಕ್ತವಃ । ತಾನ್ । ಅಭಿ । ಸ್ಯುರಿತಿಸ್ಯುಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶತ್ರೂಯಂತೋ ಮಹ್ಯತ್ಯಂತಂ ವ್ರಾಧಂತೋsಸ್ಮಾನ್ಬಾಧಮಾನಾಃ ಓಗಣಾಸಃ ಸಂಘೀಭೂತಾ ಯೇ ಶತ್ರವೋ ನೋsಸ್ಮಾನಭಿ ತತಸ್ರೇ ನಿಕ್ಷಿಪಂತಿ ತೇsಮಿತ್ರಾಃ ಶತ್ರವೋsಂಧೇನ ತಮಸಾ ಮಹತಾಂಧಕಾರೇಣ ಸಚಂತಾಂ । ಸಂಗಚ್ಛಂತಾಂ । ಕಿಂಚ ತಾನಮಿತ್ರಾನ್ ಸುಜ್ಯೋತಿಷೋ ದಿವಸಾ ಅಕ್ತವೋ ರಾತ್ರಯಶ್ಚಾಭಿ ಷ್ಯುಃ । ಅಭಿಭವಂತು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಶತ್ರೂಯಂತಃ**—ನಮಗೆ ಕೇಡನ್ನು ಬಯಸುವವರೂ । **ಮಹಿ**—ಅತ್ಯಧಿಕವಾಗಿ । ವ್ರಾಧಂತಃ—ಹಿಂಸಿಸುವವರೂ । **ಓಗಣಾಸಃ**—ಒಟ್ಟುಗೂಡಿ ಗುಂಪುಮಾಡಿಕೊಂಡಿರುವವರೂ ಆದ । **ಯೇ**—ಯಾವ ನಮ್ಮ ಶತ್ರುಗಳು । **ನಃ**—ನಮ್ಮನ್ನು । **ಅಭಿ ತತಸ್ರೇ**—ಮೇಲೆ ಬಿದ್ದು ಹಿಂಸಿಸುವರೋ । **ತೇ ಅಮಿತ್ರಾಃ**—ಆ ಶತ್ರುಗಳು । **ಅಂಧೇನ ತಮಸಾ**—ಅಧಿಕವಾದ ಕಗ್ಗತ್ತಲೆಯಿಂದ। **ಸಚಂತಾಂ**—ಕವಿಯಲ್ಪಡಲಿ । **ತಾನ್**—ಆ ಶತ್ರುಗಳನ್ನು । **ಸುಜ್ಯೋತಿಷಃ**—ಪ್ರಕಾಶಮಾನವಾದ ದಿವಸಗಳೂ । **ಅಕ್ತವಃ**—ರಾತ್ರಿಗಳೂ । **ಅಭಿ ಷ್ಯುಃ**—ಕೆಳಗುರುಳಿಸಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ಕೇಡನ್ನು ಬಯಸುವವರೂ, ಅತ್ಯಧಿಕವಾಗಿ ಹಿಂಸಿಸುವವರೂ, ಒಟ್ಟುಗೂಡಿ ಗುಂಪು ಮಾಡಿಕೊಂಡಿರುವವರೂ ಆದ ಯಾವ ನಮ್ಮ ಶತ್ರುಗಳು ನಮ್ಮಮೇಲೆ ಬಿದ್ದು ಹಿಂಸಿಸುವರೋ, ಆ ಶತ್ರುಗಳು ಅಧಿಕವಾದ ಕಗ್ಗತ್ತಲೆಯಿಂದ ಕವಿಯಲ್ಪಡಲಿ. ಆ ಶತ್ರುಗಳನ್ನು ಪ್ರಕಾಶಮಾನವಾದ ದಿವಸಗಳೂ, ರಾತ್ರಿಗಳೂ ಕೆಳಗುರುಳಿಸಲಿ.

## English Translation

May those adversaries, Indra, who press upon us, fiercely opposing us, and assembled in numbers, be overwhelmed with thick darkness, and may the bright (days) and nights overpower them.

॥ ಸಂಹಿತಾಪಾಠಃ ॥

ಪುರೂಣಿ ಹಿ ತ್ವಾ ಸವನಾ ಜನಾನಾಂ ಬ್ರಹ್ಮಾಣಿ ಮಂದನ್ಗೃಣತಾಮೃಷೀಣಾಂ ।
ಇಮಾಮಾಘೋಷನ್ನವಸಾ ಸಹೂತಿಂ ತಿರೋ ವಿಶ್ವಾ ಅರ್ಚತೋ ಯಾಹ್ಯರ್ವಾಙ್ ॥ ೧೬ ॥

॥ ಪದಪಾಠಃ ॥

ಪುರೂಣಿ । ಹಿ । ತ್ವಾ । ಸವನಾ । ಜನಾನಾಂ । ಬ್ರಹ್ಮಾಣಿ । ಮಂದನ್ । ಗೃಣತಾಂ । ಋಷೀಣಾಂ ।
ಇಮಾಂ । ಆಽಘೋಷನ್ । ಅವಸಾ । ಸಽಹೂತಿಂ । ತಿರಃ । ವಿಶ್ವಾನ್ । ಅರ್ಚತಃ । ಯಾಹಿ । ಅರ್ವಾಙ್ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಜನಾನಾಂ ಸಂಬಂಧೀನಿ ಪುರೂಣಿ ಬಹೂನಿ ಸವನಾ ಸವನಾನಿ ಬ್ರಹ್ಮಾಣಿ ಸ್ತೋತ್ರಾಣಿ ಚ ಮಂದನ್ । ಸ್ತುವಂತಿ ಮೋದಯಂತಿ ವಾ । ಗೃಣತಾಂ ಸ್ತುವತಾಮೃಷೀಣಾಮಿಮಾಂ ಸಹೂತಿಂ ಸ್ತುತಿಂ ತ್ವಮಾಘೋಷನ್ ಮಹತೀ ಶಬ್ದವತೀ ಚೇಯಂ ಸ್ತುತಿರಿತಿ ವದನ್ನರ್ಚತಃ ಸ್ತುವತೋಽನ್ಯಾನ್ವಿಶ್ವಾನ್ಸರ್ವಾನಪಿ ತಿರಸ್ತಿರಸ್ಕೃತ್ಯಾವಸಾ ರಕ್ಷಣೇನ ಸಹಾರ್ವಾಙಸ್ಮದಭಿಮುಖಂ ಯಾಹಿ । ಗಚ್ಛ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) **ತ್ವಾ**—ನಿನ್ನನ್ನು । **ಜನಾನಾಂ**—ಜನರಿಂದ ಅರ್ಪಿತವಾದವೂ । **ಪುರೂಣಿ**—ಅಧಿಕವಾದವೂ ಆದ । **ಸವನಾ**—ಯಜ್ಞಹವಿಸ್ಸುಗಳೂ । **ಬ್ರಹ್ಮಾಣಿ**—ಸ್ತುತಿಗಳೂ । **ಮಂದನ್**—ಹರ್ಷಗೊಳಿಸುತ್ತವೆ । **ಗೃಣತಾಂ**—ನಿನ್ನನ್ನು ಸ್ತುತಿಸುವ । **ಋಷೀಣಾಂ**—ಋಷಿಗಳ । **ಇಮಾಂ ಸಹೂತಿಂ**—ಈ ಸ್ತುತಿಗಳನ್ನು । **ಆಘೋಷನ್**—ಗಟ್ಟಿಯಾಗಿ ಪ್ರಶಂಸಿಸುತ್ತಲೂ । **ಅರ್ಚತಃ**—ನಿನ್ನನ್ನು ಪೂಜಿಸುವ । **ವಿಶ್ವಾನ್**—ಇತರ ಎಲ್ಲರನ್ನೂ । **ತಿರಃ**—ತಿರಸ್ಕರಿಸುತ್ತಲೂ । **ಅವಸಾ**—ನಿನ್ನ ರಕ್ಷಣೆಯೊಂದಿಗೆ । **ಅರ್ವಾಙ್**—ನಮಗಭಿಮುಖವಾಗಿ । **ಯಾಹಿ**—ದಯಮಾಡು.

॥ ಭಾವಾರ್ಥ ।

ಎಲೈ ಇಂದ್ರನೇ, ಯಜಮಾನರಿಂದ ಅರ್ಪಿತವಾದ ಅನೇಕವಾದ ಹವಿಸ್ಸುಗಳೂ, ಸ್ತುತಿಗಳೂ ನಿನ್ನನ್ನು ಹರ್ಷಗೊಳಿಸುತ್ತವೆ. ನೀನು ಈ ಋಷಿಗಳ ಸ್ತುತಿಗಳನ್ನು ಗಟ್ಟಿಯಾಗಿ ಪ್ರಶಂಸಿಸುತ್ತಲೂ, ನಿನ್ನನ್ನು ಪೂಜಿಸುವ ಇತರ ಎಲ್ಲರನ್ನೂ ತಿರಸ್ಕರಿಸುತ್ತಲೂ ನಿನ್ನ ರಕ್ಷಣೆಯೊಂದಿಗೆ ನಮಗಭಿಮುಖವಾಗಿ ದಯಮಾಡು.

## English Translation

Many oblations and praises of men exhilarate you; praising this invocation of this Rishis, who hymn you, and disregarding all other worshippers, come to us with your protection.

॥ ಸಂಹಿತಾಪಾಠಃ ॥

ಏವಾ ತೇ ವಯಮಿಂದ್ರ ಭುಂಜತೀನಾಂ ವಿದ್ಯಾಮ ಸುಮತೀನಾಂ ನವಾನಾಂ ।
ವಿದ್ಯಾಮ ವಸ್ತೋರವಸಾ ಗೃಣಂತೋ ವಿಶ್ವಾಮಿತ್ರಾ ಉತ ತ ಇಂದ್ರ ನೂನಂ ॥ ೧೭ ॥

॥ ಪದಪಾಠಃ ॥

ಏವ । ತೇ । ವಯಂ । ಇಂದ್ರ । ಭುಂಜತೀನಾಂ । ವಿದ್ಯಾಮ । ಸುಽಮತೀನಾಂ । ನವಾನಾಂ ।
ವಿದ್ಯಾಮ । ವಸ್ತೋಃ । ಅವಸಾ । ಗೃಣಂತಃ । ವಿಶ್ವಾಮಿತ್ರಾಃ । ಉತ । ತೇ । ಇಂದ್ರ । ನೂನಂ ॥೧೭॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವೈವ ಭುಂಜತೀನಾಂ ರಕ್ಷಂತೀಃ ಕ್ರಿಯಾ ವಯಂ ವಿಶ್ವಾಮಿತ್ರಪುತ್ರಾ ರೇಣವೋ ವಿದ್ಯಾಮ । ಲಭೇಮಹಿ । ಉತಾಪಿ ಚ ಹೇ ಇಂದ್ರ ತೇ ತವ ನವಾನಾಂ ನೂತನಾಃ ಸುಮತೀನಾಮನುಗ್ರಹಬುದ್ಧೀರ್ವಸ್ತೋರಹನ್ಯವಸಾ ರಕ್ಷಣಾರ್ಥಂ ಗೃಣಂತೋ ನೂನಂ ತ್ವಾಂ ಸ್ತುವಂತ ಏವ ವಿಶ್ವಾಮಿತ್ರಾ ವಿಶ್ವಾಮಿತ್ರಪುತ್ರಾ ವಯಂ ವಿದ್ಯಾಮ । ಲಭೇಮ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ವಿಶ್ವಾಮಿತ್ರಾಃ**—ವಿಶ್ವಾಮಿತ್ರಪುತ್ರರಾದ । **ವಯಂ**—ನಾವು । **ತೇ**—ನಿನ್ನ । **ಭುಂಜತೀನಾಂ**—ರಕ್ಷಕವಾದ ಅನುಗ್ರಹಗಳನ್ನು । **ವಿದ್ಯಾಮ**—ಹೊಂದುವಂತಾಗಲಿ । **ಉತ**—ಮತ್ತು । **ಇಂದ್ರ**—ಎಲೈ ಇಂದ್ರನೇ । **ವಸ್ತೋಃ**—ಅಹಸ್ಸಿನಲ್ಲಿ । **ಅವಸಾ**—ರಕ್ಷಣಾರ್ಥವಾಗಿ । **ಗೃಣಂತಃ**—ನಿನ್ನನ್ನು ಸ್ತುತಿಸುವ ನಾವು । **ತೇ**—ನಿನ್ನ । **ನವಾನಾಂ**—ನೂತನಗಳಾದ । **ಸುಮತೀನಾಂ**—ಅನುಗ್ರಹ ಬುದ್ಧಿಗೆ । **ವಿದ್ಯಾಮ**—ಪಾತ್ರರಾಗುವಂತಾಗಲಿ.

। ಭಾವಾರ್ಥ ।

ಎಲೈ ಇಂದ್ರನೇ, ವಿಶ್ವಾಮಿತ್ರಪುತ್ರರಾದ ನಾವು ನಮ್ಮನ್ನು ರಕ್ಷಿಸುವ ನಿನ್ನ ಅನುಗ್ರಹವನ್ನು ಹೊಂದುವಂತಾಗಲಿ. ಎಲೈ ಇಂದ್ರನೇ, ಅಹಸ್ಸಿನಲ್ಲಿ ರಕ್ಷಣಾರ್ಥವಾಗಿ ನಿನ್ನನ್ನು ಸ್ತುತಿಸುವ ನಾವು ನಿನ್ನ ನೂತನಗಳಾದ ಅನುಗ್ರಹಬುದ್ಧಿಗೆ ಪಾತ್ರರಾಗುವಂತಾಗಲಿ.

English Translation

May we, the descendants of Vishwamitra, sincerely praising you, Indra, by day for your protection, obtain your protecting (favours), may we obtain your recent (favours).

। ಸಂಹಿತಾಪಾಠಃ ।

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ
ಧನಾನಾಂ ॥ ೧೮ ॥

॥ ಪದಪಾಠಃ ॥

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

॥ ಸಾಯಣಭಾಷ್ಯಂ ॥

ಅಸ್ಮಿನ್ಭರೇ ಸಂಗ್ರಾಮೇ ಶುನಂ ವೃದ್ಧಂ ಮಘವಾನಂ ಧನವಂತಂ ಶೃಣ್ವಂತಮಸ್ಮದೀಯಸ್ಯಾಹ್ವಾನಸ್ಯ ಶ್ರೋತಾರಮುಗ್ರಮುದ್ಗೂರ್ಣಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ಶತ್ರೂನ್ಘ್ನಂತಂ ಮಾರಯಂತಂ ಧನಾನಾಂ ಶತ್ರುಧನಾನಾಂ ಸಂಜಿತಂ ಸಮ್ಯಗೇವ ಜೇತಾರಮಿಂದ್ರಂ ವಾಜಸಾತಾವನ್ನಸ್ಯ ಲಾಭಾಯೋತಯೇ ರಕ್ಷಣಾಯ ಚ ಹುವೇಮ । ಆಹ್ವಯೇಮ ॥

। ಪ್ರತಿಪದಾರ್ಥ ।

**ಅಸ್ಮಿನ್ ಭರೇ**— ಈ ಯುದ್ಧದಲ್ಲಿ । **ಶುನಂ**—ಪ್ರವೃದ್ಧನೂ । **ಮಘವಾನಂ**—ಧನವಂತನೂ । **ಶೃಣ್ವಂತಂ**—ನಮ್ಮ ಸ್ತುತಿಗಳನ್ನು ಕೇಳುವವನೂ । **ಉಗ್ರಂ**—ಭಯಂಕರನೂ । **ಸಮತ್ಸು**— ಯುದ್ಧಗಳಲ್ಲಿ । **ವೃತ್ರಾಣಿ**—ಶತ್ರುಗಳನ್ನು । **ಘ್ನಂತಂ**—ಕೊಲ್ಲುವವನೂ । **ಧನಾನಾಂ**—ಶತ್ರುಧನಗಳನ್ನು । **ಸಂಜಿತಂ**—ಜಯಿಸುವವನೂ ಆದ । **ಇಂದ್ರಂ**—ಇಂದ್ರನನ್ನು । **ವಾಜಸಾತೌ**—ಅನ್ನಲಾಭಾರ್ಥವಾಗಿಯೂ । **ಊತಯೇ**—ರಕ್ಷಣಾರ್ಥವಾಗಿಯೂ । **ಹುವೇಮ**—ನಾವು ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಈ ಯುದ್ಧದಲ್ಲಿ ಶಕ್ತಿಯುತನೂ, ಧನವಂತನೂ, ನಮ್ಮ ಸ್ತುತಿಗಳನ್ನು ಕೇಳುವವನೂ, ಭಯಂಕರನೂ, ಯುದ್ಧಗಳಲ್ಲಿ ಶತ್ರುಗಳನ್ನು ಕೊಲ್ಲುವವನೂ, ಶತ್ರುಧನಗಳನ್ನು ಜಯಿಸುವವನೂ ಆದ ಇಂದ್ರನನ್ನು ಅನ್ನಲಾಭಾರ್ಥವಾಗಿಯೂ, ರಕ್ಷಣಾರ್ಥವಾಗಿಯೂ ನಾವು ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke in this conflict for our protection the pure, the opulent Indra, the most heroic in the fight, hearing (our prayers), fierce, slaying the Vritras in battles, the despoiler of their wealth.



## ತೊಂಭತ್ತನೆಯ ಸೂಕ್ತವು.

### ಪೀಠಿಕೆ.

ಋಗ್ವೇದದಲ್ಲಿ ಗಾಯತ್ರೀಮಂತ್ರವನ್ನು ಬಿಟ್ಟರೆ ಪುರುಷಸೂಕ್ತವೇ ಹೆಚ್ಚಾಗಿ ಬಳಕೆಯಲ್ಲಿದೆ. ಶ್ರೇಷ್ಠತೆಯಲ್ಲಿಯೂ, ವಿಷಯನಿರೂಪಣೆಯಲ್ಲಿಯೂ ಇದರಲ್ಲಿ ವಿವರಿಸಿರುವ ತತ್ತ್ವಗಳು ಅತಿ ಗಹನವಾಗಿರುವುದರಿಂದಲೂ, ಪರಮಪುರುಷನ (ಪರಬ್ರಹ್ಮನ) ಸ್ವರೂಪ, ಅವನ ಶಕ್ತಿಸಾಮರ್ಥ್ಯಗಳು, ಸೃಷ್ಟಿಯ ವಿವರಣೆ, ವೇದಾದಿಗಳ ಉತ್ಪತ್ತಿ ಯಜ್ಞದ ಸ್ವರೂಪ ಮೊದಲಾದ ಮಹತ್ತ್ವದ ಸಂಗತಿಗಳು ಇದರಲ್ಲಿ ಅಡಕವಾಗಿರುವುದರಿಂದಲೂ ಈ ಪುರುಷಸೂಕ್ತಕ್ಕೆ ಅತಿಶಯವಾದ ಪ್ರಾಧಾನ್ಯತೆ ಇದೆ. ಈ ಪುರುಷಸೂಕ್ತವು ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಕೃಷ್ಣಯಜುರ್ವೇದದ ತೈತ್ತಿರೀಯ ಆರಣ್ಯಕದಲ್ಲಿಯೂ (ತೈ. ಆ. ೩-೧೨, ೧೩) ಶುಕ್ಲಯಜುರ್ವೇದದ ವಾಜಸನೇಯಸಂಹಿತೆಯಲ್ಲಿಯೂ, (ವಾ. ಸಂ. ೩೧-೧ ರಿಂದ ೧೬) ಅಥರ್ವವೇದದಲ್ಲಿಯೂ (ಅಥರ್ವವೇದ ೧೯-೬) ಪಠಿತವಾಗಿದೆ. ಇದಲ್ಲದೆ ಈ ಸೂಕ್ತದ ಕೆಲವು ಭಾಗಗಳ ವಿವರಣೆಯು ಶತಪಥಬ್ರಾಹ್ಮಣ, ತೈತ್ತಿರೀಯಬ್ರಾಹ್ಮಣ, ತೈತ್ತಿರೀಯ ಆರಣ್ಯಕ, ನಿರುಕ್ತ, ಶ್ವೇತಾಶ್ವತರೋಪನಿಷತ್ತು, ಬೃಹದಾರಣ್ಯಕೋಪನಿಷತ್ತು ಮೊದಲಾದ ಗ್ರಂಥಗಳಲ್ಲಿ ಕಂಡುಬರುವುದು.

ಈ ಸೂಕ್ತದ ಪ್ರಾಚೀನತೆಯ ವಿಷಯದಲ್ಲಿ ಆಂಗ್ಲಪಂಡಿತರಲ್ಲೇ ವಿಧವಿಧವಾದ ಅಭಿಪ್ರಾಯಭೇದವಿವೆ. ಈ ಸೂಕ್ತದಲ್ಲಿ ಬ್ರಾಹ್ಮಣಾದಿ ಚತುರ್ವರ್ಣಗಳ ಉತ್ಪತ್ತಿಕ್ರಮವನ್ನು ವಿವರಿಸಿರುವುದರಿಂದಲೂ ಅತಿ ಪ್ರಾಚೀನಕಾಲದಲ್ಲಿ ಈ ವಿಧವಾದ ವರ್ಣಭೇದವು ಇರಲಿಲ್ಲವೆಂತಲೂ ಆದ್ದರಿಂದ ಈ ಸೂಕ್ತವು ಅಷ್ಟೇನೂ ಪ್ರಾಚೀನವೆಂದು ಪರಿಗಣಿಸಲ್ಪಡುವುದಕ್ಕೆ ಸಾಧ್ಯವಿಲ್ಲವೆಂದು Max Muller ಮೊದಲಾದ ಪಂಡಿತರ ಮತವು. ಬ್ರಾಹ್ಮಣಾದಿ ಶಬ್ದಗಳು ಋಗ್ವೇದದ ಇತರ ಮಂತ್ರಗಳಲ್ಲಿಯೂ ಕಂಡುಬರುವುದರಿಂದಲೂ ಇದರ ಭಾಷೆಯು ಆಧುನಿಕವಲ್ಲವೆಂದೂ, ಪುರುಷಮೇಧವಿಚಾರವು ಇದರಲ್ಲಿ ಉಕ್ತವಾಗಿರುವುದರಿಂದಲೂ ಈ ಸೂಕ್ತವು ಪ್ರಾಚೀನಸೂಕ್ತಗಳ ಗುಂಪಿಗೇ ಸೇರಬೇಕಾದದ್ದು ಯುಕ್ತವೆಂದು Dr. Haug ಮೊದಲಾದ ಪಂಡಿತರ ಅಭಿಪ್ರಾಯವು. ಈ ವಿಷಯವನ್ನು ನಾವು ಮತ್ತೊಂದು ಸಂದರ್ಭದಲ್ಲಿ ವಿಮರ್ಶೆ ಮಾಡುವೆವು.

ಈ ಸೂಕ್ತಕ್ಕೆ ಪುರುಷಸೂಕ್ತವೆಂದು ಹೆಸರು ಬರಲು ಪುರುಷನ ಮಹತ್ತ್ವವು ಇದರಲ್ಲಿ ಪ್ರತಿಪಾದಿಸಲ್ಪಟ್ಟಿರುವುದೇ ಕಾರಣವು. ಪುರುಷನೆಂದರೆ ಇಲ್ಲಿ ಲೋಕವ್ಯವಹಾರದಲ್ಲಿರುವ ಸ್ತ್ರೀಪುರುಷರು ಎಂಬ ಲಿಂಗವ್ಯತ್ಯಾಸವನ್ನು ಸೂಚಿಸುವುದಕ್ಕಾಗಿ ಉಪಯೋಗಿಸುವ ಪುರುಷಶಬ್ದದ ಎಂದರೆ ಗಂಡಸು ಎಂಬ ಅರ್ಥವಲ್ಲ. ಸರ್ವೇಶ್ವರನಾದ ಪರಮಪುರುಷನೆಂದೇ ಅರ್ಥವು. ಆ ಪರಮಪುರುಷನಿಗೆ ಅಥವಾ ಪರಬ್ರಹ್ಮನಿಗೆ ಲಿಂಗಭೇದವಾಗಲೀ, ಆಕಾರವಾಗಲೀ ಇಲ್ಲ. ಪುರುಷನೆಂದರೆ ಪರಬ್ರಹ್ಮವೆಂಬ ಅರ್ಥವನ್ನು ಪ್ರತಿಪಾದಿಸುವ ಶ್ರುತಿಗಳು ಬೇಕಾದಷ್ಟಿವೆ. ಅವುಗಳಲ್ಲಿ ತೈತ್ತಿರೀಯಾರಣ್ಯಕ, ತೈತ್ತಿರೀಯೋಪನಿಷತ್, ಬೃಹದಾರಣ್ಯಕೋಪನಿಷತ್, ಶ್ವೇತಾಶ್ವತರೋಪನಿಷತ್, ವಾಜಸನೇಯ ಸಂಹಿತಾ, ಅಥರ್ವವೇದ, ನಿರುಕ್ತ ಮೊದಲಾದ ಗ್ರಂಥಗಳು ಮುಖ್ಯವಾದವು. ಇದಲ್ಲದೆ ಭಾಗವತ, ವಿಷ್ಣುಪುರಾಣ ಮೊದಲಾದ ಪುರಾಣಗಳಲ್ಲಿಯೂ ಇದರ ವಿಸ್ತಾರವಾದ ವಿವರಣೆ ಇದೆ.

ತೈತ್ತಿರೀಯಾರಣ್ಯಕದಲ್ಲಿ ಪರಮೇಶ್ವರ, ಪ್ರಜಾಪತಿ ಮೊದಲಾದ ಶಬ್ದವಾಚ್ಯನಾದ ಪರಬ್ರಹ್ಮನಿಗೆ ಪುರುಷ ಎಂಬ ಹೆಸರು ಹೇಗೆ ಬಂತೆಂಬ ವಿಷಯದಲ್ಲಿ ಒಂದು ಉಪಾಖ್ಯಾನವಿದೆ. ಅದನ್ನು ಇಲ್ಲಿ ವಿವರಿಸಿವೇವೆ.

ಸೃಷ್ಟಿಗೆ ಪೂರ್ವದಲ್ಲಿ ಸರ್ವವೂ ಜಲಮಯವಾಗಿದ್ವಿತೆಂದೂ- ಆಗ ಪ್ರಜಾಪತಿಯು ಸೃಷ್ಟಿಯನ್ನು ಹೇಗೆ ಮಾಡಿದನೆಂಬ ವಿಚಾರವೂ ತೈತ್ತಿರೀಯಾರಣ್ಯಕದಲ್ಲಿ (ತೈ. ಆ. ೧-೨೩) ಈ ರೀತಿ ಹೇಳಿದೆ—

**ಆಪೋ ವಾ ಇದಮಾಸನ್ತ್ಸಲಿಲಮೇವ । ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ । ತಸ್ಯಾಂತರ್ಮನಸಿ ಕಾಮಃ ಸಮವರ್ತತ । ಇದಗ್ಂ ಸೃಜೇಯಮಿತಿ । ತಸ್ಮಾದ್ಯತ್ಪುರುಷೋ ಮನಸಾಭಿಗಚ್ಛತಿ । ತದ್ವಾಚಾ ವದತಿ । ತತ್ಕರ್ಮಣಾ ಕರೋತಿ । ತದೇಷಾಭ್ಯನೂಕ್ತಾ । ಕಾಮಸ್ತದಗ್ರೇ ಸಮವರ್ತತಾಧಿ । ಮನಸೋ ರೇತಃ ಪ್ರಥಮಂ ಯದಾಸೀತ್ । ಸತೋ ಬಂಧುಮಸತಿ ನಿರವಿಂದನ್ । ಹೃದಿ ಪ್ರತೀಷ್ಯಾ ಕವಯೋ ಮನೀಷೇತಿ । ಉಪೈನಂ ತದುಪ ನಮತಿ । ಯತ್ಕಾಮೋ ಭವತಿ । ಯ ಏವಂ ವೇದ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಶರೀರಮಧೂನುತ ॥**

(ತೈ. ಆ. ೧-೨೩-೧,೨)

ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಜಗತ್ತಿನ ಸೃಷ್ಟಿಗೆ ಪೂರ್ವದಲ್ಲಿ ಎಲ್ಲೆಲ್ಲಿಯೂ ನೀರು ಮಾತ್ರ ತುಂಬಿಕೊಂಡಿದ್ದಿತು. ಇನ್ನೇನೂ ಇರಲಿಲ್ಲ. ದೇವತೆಗಳು, ಮನುಷ್ಯರು, ಇತರ ಭೌತಿಕವಸ್ತುಗಳು ಯಾವವೂ ಇರಲಿಲ್ಲ. ಎಲ್ಲೆಲ್ಲಿಯೂ ಆವರಿಸಿದ ಆ ನೀರಿನ ಮಧ್ಯದಲ್ಲಿ ಒಂದು ಪುಷ್ಕರಪರ್ಣದ (ಎಲೆಯ) ಮೇಲೆ ಪ್ರಜಾಪತಿಯೊಬ್ಬನು ಮಾತ್ರ ಸ್ಥಿತನಾಗಿದ್ದನು. ಆಗ ಆ ಪ್ರಜಾಪತಿಯ ಮನಸ್ಸಿನಲ್ಲಿ ಈ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯುಂಟಾಯಿತು. ಲೋಕದಲ್ಲಿ ಪ್ರಜಾಪತಿಯಿಂದ ಸೃಷ್ಟರಾದ ಮನುಷ್ಯಾದಿಗಳಲ್ಲಿ ಯಾವುದಾದರೂ ಒಂದು ಕಾರ್ಯವನ್ನು ಮಾಡುವುದಕ್ಕೆ ಮೊದಲು ಆ ಕಾರ್ಯವನ್ನು ಮಾಡಬೇಕೆಂಬ ಕಾಮವು ಅಥವಾ ಇಚ್ಛೆಯುಂಟಾದಾಗ ಆ ಇಚ್ಛೆಯನ್ನು ಆ ಪುರುಷನು ಮಾತಿನಲ್ಲಿ ಹೇಳುವನು. ಅನಂತರ ಆ ಕಾರ್ಯವನ್ನು ಮಾಡಲು ಪ್ರವೃತ್ತನಾಗುವನು ಈ ಲೋಕವ್ಯವಹಾರದಂತೆಯೇ ಪ್ರಜಾಪತಿಗೆ ಸಹ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯುಂಟಾದಾಗ ಅದನ್ನು ವಾಕ್ಯದಿಂದ ಉಚ್ಚರಿಸಿ ಕಾರ್ಯದಲ್ಲಿ ಪ್ರವೃತ್ತನಾದನು. ಈ ವಿಷಯವು—

**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್ ।**
**ಸತೋ ಬಂಧುಮಸತಿ ನಿರವಿಂದನ್ ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥**

(ಋ. ಸಂ. ೧೦-೧೨೯-೪)

ಎಂಬ ಋಕ್ಕಿನಲ್ಲಿ ಹೇಳಿರುವುದು. ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯು ಮೊದಲು ಪರಮೇಶ್ವರನ(ಪ್ರಜಾಪತಿಯ) ಮನಸ್ಸಿನಲ್ಲಿ ಅಂಕುರಿಸಿತು. ಪ್ರಜೋತ್ಪತ್ತಿಗೆ ಪುರುಷನ ವೀರ್ಯವು ಅಥವಾ ರೇತಸ್ಸು ಹೇಗೆ ಮೊದಲು ಕಾರಣವಾಗುವುದೋ ಅದರಂತೆ ಪರಮೇಶ್ವರನ ಜಗತ್ಸೃಷ್ಟಿಗೆ, ಸೃಷ್ಟಿಮಾಡಬೇಕೆಂಬ ಅವನ ಇಚ್ಛೆಯೇ ರೇತಸ್ಸಾಗುವುದು ಅಂದರೆ ಕಾರಣ ವಾಗುವುದು. ಈ ಇಚ್ಛೆಯು ಮೊದಲು ಪ್ರಜಾಪತಿಯಲ್ಲಿ ಉತ್ಪನ್ನವಾಯಿತು. ಆ ಇಚ್ಛೆಯೇ ಕಾರ್ಯರೂಪವಾಗಿ ಪರಿಣಮಿಸಿ ಜಗತ್ಸೃಷ್ಟಿಯಾಯಿತು. ಹಿಂದಿನ ಕಲ್ಪದಲ್ಲಿ ಪ್ರಾಣಿಗಳು ಮಾಡಿದ ಕರ್ಮಾದಿಗಳಿಂದ ಬಂಧನಭೂತವಾದ ಜನ್ಮಾಂತರಪ್ರಾಪ್ತಿ ಮೊದಲಾದ ವಿಷಯಗಳನ್ನು ಕ್ರಾಂತಪ್ರಜ್ಞರೂ ಮೇಧಾವಿಗಳೂ ಆದ ಪ್ರಾಜ್ಞರು ಮನಸ್ಸಿನಲ್ಲಿ ಚೆನ್ನಾಗಿ ವಿಮರ್ಶೆಮಾಡಿ ಅದರ ರಹಸ್ಯವನ್ನು ತಿಳಿಯಬಲ್ಲರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಆದ್ದರಿಂದ ಕಾಮದ (ಇಚ್ಛೆಯ) ಮಹತ್ತನ್ನು ತಿಳಿದ ಪುರುಷನು ಅದನ್ನು ಹೊಂದುತ್ತಾನೆ. ಈ ರೀತಿ ಪ್ರಜಾಪತಿಯು ಸೃಷ್ಟಿ ಮಾಡಬೇಕೆಂಬ ಇಚ್ಛೆಯಿಂದ ತಪಸ್ಸನ್ನಾಚರಿಸಿದನು. ಋಷಿಗಳು, ಮನುಷ್ಯರು ಮೊದಲಾದವರು ತಪಸ್ಸನ್ನು ಮಾಡುವಾಗ ದೇಹಶೋಷಣೆ, ವ್ರತಾಚರಣೆ ಮೊದಲಾದ ಕ್ಲಿಷ್ಟಕರ್ಮಗಳಿಂದ ಶರೀರವನ್ನು ಶ್ರಮದಿಂದ ಬಳಲಿಸುವರು. ಆದರೆ ಪ್ರಜಾಪತಿಯು ತಪಸ್ಸುಮಾಡುವ ವಿಚಾರದಲ್ಲಿ ಈ ವಿಧವಾದ ಶರೀರಶೋಷಣೆ ಮೊದಲಾದವುಗಳಿಲ್ಲ. ಕೇವಲ ಪರ್ಯಾಲೋಚನೆ ಅಥವಾ ಧ್ಯಾನವೊಂದೇ ಇರುವುದು. ಏಕೆಂದರೆ ಇವನು ಸತ್ಯಸಂಕಲ್ಪನು. ಹೀಗೆ ಆಗಬೇಕೆಂದು ಧ್ಯಾನಮಾಡಿದರೆ ಸಾಕು ಹಾಗೇ ಆಗುವುದು. ಇತರರಂತೆ ಶರೀರದಿಂದ ಅಥವಾ ಹಸ್ತಾದ್ಯವಯವಗಳಿಂದ ಕಾರ್ಯಗಳಲ್ಲಿ ಪ್ರವೃತ್ತಿಸಬೇಕಾಗಿಲ್ಲ. ಪ್ರಜಾಪತಿಯು ಈ ರೀತಿ ಧ್ಯಾನರೂಪವಾದ ತಪಸ್ಸನ್ನು ಮಾಡಿ ತನ್ನ ಶರೀರವನ್ನು ಒಂದುಸಲ ಕಂಪನಮಾಡಿದನು (ಅಲುಗಾಡಿಸಿದನು).

**ತಸ್ಯ ಯನ್ಮಾಗ್ಂಸಮಾಸೀತ್ । ತತೋಽರುಣಾಃ ಕೇತವೋ ವಾತರಶನಾ ಋಷಯ ಉದತಿಷ್ಠನ್ । ಯೇ ನಖಾಃ । ತೇ ವೈಖಾನಸಾಃ । ಯೇ ವಾಲಾಃ । ತೇ ವಾಲಖಿಲ್ಯಾಃ । ಯೋ ರಸಃ । ಸೋಽಪಾಂ । ಅಂತರತಃ ಕೂರ್ಮಂ ಭೂತಗ್ಂ ಸರ್ಪಂತಂ । ತಮಬ್ರವೀತ್ । ಮಮ ವೈ ತ್ವಙ್ಮಾಗ್ಂಸಾ । ಸಮಭೂತ್ । ನೇತ್ಯಬ್ರವೀತ್ । ಪೂರ್ವಮೇವಾಹಮಿಹಾ-ಸಮಿತಿ । ತತ್ಪುರುಷಸ್ಯ ಪುರುಷತ್ವಂ । ಸ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರ-ಪಾತ್ । ಭೂತ್ವೋದತಿಷ್ಠತ್ । ತಮಬ್ರವೀತ್ । ತ್ವಂ ವೈ ಪೂರ್ವಗ್ಂ ಸಮಭೂಃ । ತ್ವಮಿದಂ ಪೂರ್ವಃ ಕುರುಷ್ವೇತಿ । ಸ ಇತ ಆದಾಯಾಪಃ । ಅಂಜಲಿನಾ ಪುರಸ್ತಾದು-ಪಾದಧಾತ್ । ಏವಾ ಹ್ಯೇವೇತಿ । ತತ ಆದಿತ್ಯ ಉದತಿಷ್ಠತ್ । ಸಾ ಪ್ರಾಚೀದಿಕ್ । ಅಥಾರುಣಃ ಕೇತುರ್ದಕ್ಷಿಣತ ಉಪಾದಧಾತ್ । ಏವಾಹ್ಯಗ್ನ ಇತಿ । ತತೋ ವಾ ಅಗ್ನಿರುದ-ತಿಷ್ಠತ್ । ಸಾ ದಕ್ಷಿಣಾದಿಕ್ । ಅಥಾರುಣಃ ಕೇತುಃ ಪಶ್ಚಾದುಪಾದಧಾತ್ । ಏವಾ ಹಿ ವಾಯೋ ಇತಿ । ತತೋ ವಾಯುರುದತಿಷ್ಠತ್ । ಸಾ ಪ್ರತೀಚೀದಿಕ್ । ಅಥಾರುಣಃ ಕೇತುರುತ್ತರತ ಉಪಾದಧಾತ್ । ಏವಾಹೀಂದ್ರೇತಿ । ತತೋ ವಾ ಇಂದ್ರ ಉದತಿಷ್ಠತ್ ।**

**ಸೋದೀಚೀ ದಿಕ್ । ಅಥಾರುಣಃ ಕೇತುರ್ಮಧ್ಯ ಉಪಾದಧಾತ್ । ಏವಾ ಹಿ ಪೂಷನ್ನಿತಿ । ತತೋ ವೈ ಪೂಷೋದತಿಷ್ಠತ್ । ಸೇಯಂ ದಿಕ್ । ಅಥಾರುಣಃ ಕೇತುರುಪರಿಷ್ಟಾದುಪಾದಧಾತ್ । ಏವಾ ಹಿ ದೇವಾ ಇತಿ । ತತೋ ದೇವಮನುಷ್ಯಾಃ ಪಿತರಃ । ಗಂಧರ್ವಾಪ್ಸರಸಶ್ಚೋದತಿಷ್ಠನ್ । ಸೋರ್ಧ್ವಾ ದಿಕ್ । ಯಾ ವಿಪ್ರುಷೋ ವಿ ಪರಾಪತನ್ । ತಾಭ್ಯೋಽಸುರಾ ರಕ್ಷಾಗ್ಂಸಿ ಪಿಶಾಚಾಶ್ಚೋದತಿಷ್ಠನ್ । ತಸ್ಮಾತ್ತೇ ಪರಾಭವನ್ । ವಿಪ್ರುಡ್ಭ್ಯೋ ಹಿ ತೇ ಸಮಭವನ್ ॥**

(ತೈ. ಆ. ೧–೨೩-೨, ೩, ೪, ೫, ೬, ೭)

ಹಾಗೆ ಅಲುಗಾಡಿಸಿದಾಗ ಅವನ ಮಾಂಸದಿಂದ ಅರುಣರು, ಕೇತುಗಳು, ವಾತರಶನರು ಎಂಬ ಮೂರು ವಿಧವಾದ ಋಷಿಗಳ ಉತ್ಪತ್ತಿಯಾಯಿತು. ನಖ (ಉಗುರು) ದಿಂದ ವೈಖಾನಸರೆಂಬ ಮುನಿಗಳೂ, ಕೇಶದಿಂದ ವಾಲಖಿಲ್ಯ ನಾಮಕಋಷಿಗಳೂ ಉತ್ಪನ್ನರಾದರು. ಶರೀರದ ಸಾರಾಂಶವಾದ ರಸ (ರಕ್ತ) ದಿಂದ ಒಂದು ಕೂರ್ಮವು (ಆಮೆಯು) ಜನಿಸಿತು. ನೀರಿನ ಮಧ್ಯದಲ್ಲಿ ಸಂಚರಿಸುತ್ತಿರುವ ಆ ಆಮೆಯನ್ನು ಪ್ರಜಾಪತಿಯು ನೋಡಿ ಇಂತೆಂದನು—ಎಲೈ ಕೂರ್ಮವೇ, ನೀನು ನನ್ನ ಮಾಂಸ ಮತ್ತು ಚರ್ಮದಿಂದ ಉತ್ಪನ್ನನಾಗಿದ್ದೀಯೆ ಎನ್ನಲು, ಆ ಕೂರ್ಮವು—ಹಾಗಲ್ಲ, ನಾನು ನಿನ್ನ ಮಾಂಸದಿಂದ ಉತ್ಪನ್ನನಾದವನಲ್ಲ. ನನ್ನ ಶರೀರವಾದ ಈ ಕೂರ್ಮಾಕಾರವು ಮಾತ್ರ ಉತ್ಪನ್ನವಾಯಿತು. ಸಮಸ್ತ ವಸ್ತುಗಳಲ್ಲಿಯೂ ಚೈತನ್ಯರೂಪದಿಂದ ಇರುವ ನಾನು ಕೂರ್ಮದ ಉತ್ಪತ್ತಿಗೆ ಮೊದಲೇ ನೀರಿನಲ್ಲಿದ್ದೆನು. ಪೂರ್ವದಿಂದಲೂ ಇದ್ದದ್ದರಿಂದ ನನಗೆ ಪುರುಷನೆಂಬ ಹೆಸರು ಬಂದಿದೆ ಎಂದು ಹೇಳಿ ತನ್ನ ಸ್ವಸಾಮರ್ಥ್ಯವನ್ನು ಪ್ರಕಟಿಸುವುದಕ್ಕಾಗಿ ವಿರಾಡ್ರೂಪವನ್ನು(ದೊಡ್ಡರೂಪವನ್ನು)ತಾಳಿ ಸಾವಿರಾರು ಶಿರಸ್ಸುಗಳು, ಸಾವಿರಾರು ಕಣ್ಣುಗಳು, ಸಾವಿರಾರು ಪಾದಗಳು ಮೊದಲಾದ ಅಸಂಖ್ಯಾತ ಅವಯವಗಳಿಂದ ಅಲ್ಲಿ ಪ್ರಾದುರ್ಭೂತವಾಯಿತು. ಆಗ ಪ್ರಜಾಪತಿಯು ವಿರಾಡ್ರೂಪದಿಂದಿರುವ ಪರಮಾತ್ಮನನ್ನು ನೋಡಿ—ಜಗತ್ತನ್ನು ನೀನೇ ನಿರ್ಮಾಣಮಾಡು ಎಂದನು. ಅದರಂತೆ ಆ ಪರಮಾತ್ಮನು ತನ್ನ ಕೈಯಿಂದ (ಬೊಗಸೆಯಿಂದ) ನೀರನ್ನು ತುಂಬಿಕೊಂಡು ಪೂರ್ವಾಭಿಮುಖವಾಗಿ **ಏವಾಹ್ಯೇವ** ಎಂಬ ಶಬ್ದಗಳನ್ನುಚ್ಚರಿಸಿ ಆ ನೀರನ್ನು ಮೇಲಕ್ಕೆರಚಿದನು. ಆದರಿಂದ ಆದಿತ್ಯನು ಉತ್ಪನ್ನನಾದನು. ಮತ್ತು ಆ ದಿಕ್ಕಿಗೆ ಪೂರ್ವದಿಕ್ಕೆಂದು ಹೆಸರಾಯಿತು. ಅದರಂತೆ ಮತ್ತೊಂದು ದಿಕ್ಕಿಗೆ **ಏವಾಹ್ಯಗ್ನೇ** ಎಂದು ನೀರನ್ನು ಎರಚಿದಾಗ ಅಲ್ಲಿ ಅಗ್ನಿಯ ಉತ್ಪತ್ತಿಯಾಗಿ ಅದು ದಕ್ಷಿಣ ದಿಕ್ಕಾಯಿತು. ಮತ್ತೊಂದಾವರ್ತಿ **ಏವಾ ಹಿ ವಾಯೋ** ಎಂದು ನೀರನ್ನು ಎರಚಿದಾಗ ವಾಯುವಿನ ಉತ್ಪತ್ತಿಯಾಗಿ ಅದು ಪಶ್ಚಿಮ ದಿಕ್ಕಾಯಿತು. ಬಳಿಕ **ಏವಾಹೀಂದ್ರ** ಎಂದು ಎರಚಿದಾಗ ಇಂದ್ರನ ಉತ್ಪತ್ತಿಯಾಗಿ ಅದು ಉತ್ತರ ದಿಕ್ಕಾಯಿತು. ಮಧ್ಯಭಾಗದಲ್ಲಿ **ಏವಾ ಹಿ ಪೂಷನ್** ಎಂದು ನೀರನ್ನೆರಚಿದಾಗ ಪೂಷದೇವನ ಉತ್ಪತ್ತಿಯಾಯಿತು ಅದುಕೆಳಭಾಗವು. ಮೇಲುಭಾಗದಲ್ಲಿ **ಏವಾ ಹಿ ದೇವಾಃ** ಎಂದು ನೀರನ್ನೆರಚಿದಾಗ ಅಲ್ಲಿ ಇತರ ದೇವತೆಗಳು, ಮನುಷ್ಯರು, ಪಿತೃಗಳು, ಗಂಧರ್ವರು, ಅಪ್ಸರಸ್ಸುಗಳು. ಇವರ ಉತ್ಪತ್ತಿಯಾಯಿತು. ಅದೇ ಊರ್ಧ್ವದಿಕ್ಕೆಂದು ಪ್ರಸಿದ್ಧಿಯಾಯಿತು. ಹೀಗೆ ಪರಮಾತ್ಮನು ಸುತ್ತಲೂ ನೀರನ್ನು ಎರಚುತ್ತಿರುವಾಗ ಆ ನೀರಿನಿಂದ ದೂರ ಸಿಡಿದುಬಿದ್ದ ಕೆಲವುಜಲಬಿಂದುಗಳಿಂದ ಅಸುರರು, ರಕ್ಷೋಗಣಗಳು, ಪಿಶಾಚಿಗಳು ಇವರ ಉತ್ಪತ್ತಿಯಾಯಿತು. ದೂರ ಸಿಡಿದುಬಿದ್ದ ಜಲಬಿಂದುಗಳಿಂದ ಉತ್ಪನ್ನರಾದ ಕಾರಣ ಈ ಅಸುರಾದಿಗಳು ದೇವತೆಗಳಿಂದ ಪರಾಜಿತರಾದರು.

**ತದೇಷಾಭ್ಯನೂಕ್ತಾ । ಆಪೋ ಹ ಯದ್ಬೃಹತೀರ್ಗರ್ಭಮಾಯನ್ । ದಕ್ಷಂ ದಧಾನಾ**

**ಜನಯಂತೀಃ ಸ್ವಯಂಭುಂ । ತತ ಇಮೇಽಧ್ಯಸೃಜ್ಯಂತ ಸರ್ಗಾಃ । ಅದ್ಭ್ಯೋ ವಾ ಇದಗ್ಂ ಸಮಭೂತ್ । ತಸ್ಮಾದಿದಗ್ಂ ಸರ್ವಂ ಬ್ರಹ್ಮ ಸ್ವಯಂಭ್ವಿತಿ । ತಸ್ಮಾದಿದಗ್ಂ ಸರ್ವಗ್ಂ ಶಿಥಿಲಮಿವಾಧ್ರುವಮಿವಾಭವತ್ । ಪ್ರಜಾಪತಿರ್ವಾವ ತತ್ । ಆತ್ಮನಾತ್ಮಾನಂ ವಿಧಾಯ । ತದೇವಾನು ಪ್ರಾವಿಶತ್ ॥**

(ತೈ. ಆ. ೧-೨೩-೮)

ನೀರಿನಿಂದ ಈ ರೀತಿ ದೇವಮನುಷ್ಯಾದಿಗಳು ಸೃಷ್ಟಿಯಾದ ವಿವರವು ಋಗ್ವೇದದ—

**ಆಪೋ ಹ ಯದ್ಬೃಹತೀರ್ವಿಶ್ವಮಾಯನ್ಗರ್ಭಂ ದಧಾನಾ ಜನಯಂತೀರಗ್ನಿಂ ।**
**ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

(ಋ. ಸಂ. ೧೦-೧೨೧-೭ ; ಅಥರ್ವ ೪-೨-೬ ; ವಾಜಸನೇಯ ಸಂ ೨೭,-೨೫ ;೩೨.೭ ; ತೈ. ಸಂ. ೨-೨-೧೧-೧ ; ೪.೧-೮-೫ ; ತೈ. ಆ. ೧-೨೩-೮)

ಎಂಬ ಋಕ್ಕಿನಲ್ಲಿ ಸ್ಪಷ್ಟವಾಗಿ ಹೇಳಿದೆ. ಸೃಷ್ಟಿಗೆ ಪೂರ್ವದಲ್ಲಿ ಎಲ್ಲೆಲ್ಲಿಯೂ ಆವರಿಸಿದ್ದ ಉದಕವು ಗರ್ಭವನ್ನು ಧರಿಸಿತು. ಆ ಗರ್ಭವು ವೃದ್ಧಿಯನ್ನೈದಿ ಕೂರ್ಮರೂಪನಾದ ಸ್ವಯಂಭುವೆಂಬ ನಾಮಧೇಯನಾದ ಪರಮಾತ್ಮ (ಪ್ರಜಾಪತಿ) ಯನ್ನು ಉತ್ಪತ್ತಿಮಾಡಿತು. ಎಂದರೆ ಪರಮಾತ್ಮನೇ ನೀರಿನಿಂದ ಕೂರ್ಮರೂಪನಾಗಿ ಆವಿರ್ಭೂತನಾದನು. ಅನಂತರ ಆ ಕೂರ್ಮರೂಪಪ್ರಜಾಪತಿಯಿಂದ ಇತರ ಸೃಷ್ಟಿಗಳೆಲ್ಲವೂ ಮುಂದುವರೆದವು. ಆದ್ದರಿಂದ ಈ ಉದಕಗಳಿಂದಲೇ ಸರ್ವವೂ ಉತ್ಪನ್ನವಾಯಿತು. ಆದ್ದರಿಂದ ಉತ್ಪನ್ನವಾದ ಸಕಲ ಜಗತ್ತು ಸಹ ಸ್ವಯಂಭು ಎಂಬ ಬ್ರಹ್ಮಸ್ವರೂಪವೇ ಆಗಿದೆ. ನೀರಿನಿಂದ ಉತ್ಪನ್ನವಾದುದರಿಂದ ಜಗತ್ತೆಲ್ಲವೂ ಒಂದು ದೃಢವಾದ ನೆಲೆಯಿಲ್ಲದೆ ನೀರಿನ ಮಧ್ಯದಲ್ಲಿ ಅಲೆಗಳಂತೆ ಅಲ್ಲಾಡುತ್ತಿದ್ದವು. ಅದ್ದರಿಂದ ಸಚ್ಚಿದಾನಂದಸ್ವರೂಪನಾದ ಪ್ರಜಾಪತಿಯು ತನ್ನ ಸಾಮರ್ಥ್ಯದಿಂದ ಆಯಾ ವಸ್ತುಗಳ ಆಕಾರಕ್ಕನುಸಾರವಾಗಿ ತನ್ನ ಅಂಶವನ್ನು ಅವುಗಳಲ್ಲಿ ಹೊಂದಿಸಿ ಎಂದರೆ ತಾನೇ ತನ್ನ ಚೈತನ್ಯದಿಂದ (ಚಿದ್ರೂಪದಿಂದ) ಅವುಗಳಲ್ಲಿ ಪ್ರವೇಶಿಸಿ ಅವುಗಳು ಅಲ್ಲಾಡದಂತೆ ದೃಢವಾಗಿ ಸ್ಥಾಪಿಸಿದನು.

**ತದೇಷಾಭ್ಯನೂಕ್ತಾ । ವಿಧಾಯ ಲೋಕಾನ್ವಿಧಾಯ ಭೂತಾನಿ । ವಿಧಾಯ ಸರ್ವಾಃ ಪ್ರದಿಶೋ ದಿಶಶ್ಚ । ಪ್ರಜಾಪತಿಃ ಪ್ರಥಮಜಾ ಋತಸ್ಯ । ಆತ್ಮಾನಾತ್ಮಾನಮಭಿಸಂವಿವೇಶೇತಿ । ಸರ್ವಮೇವೇದಮಾಪ್ತ್ವಾ । ಸರ್ವಮವರುಧ್ಯ । ತದೇವಾನುಪ್ರವಿಶತಿ । ಯ ಏವಂ ವೇದ ॥**

(ತೈ. ಆ. ೧-೨೩.೯)

ಈ ವಿವರವು ಋಗ್ವೆದದಲ್ಲಿ ಈರೀತಿ ತಿಳಿಸಿದೆ.

**ವಿಧಾಯ ಲೋಕಾನ್ವಿಧಾಯ ಭೂತಾನಿ ವಿಧಾಯ ಸರ್ವಾಃ ಪ್ರದಿಶೋ ದಿಶಶ್ಚ ।**
**ಪ್ರಜಾಪತಿಃ ಪ್ರಥಮಜಾ ಋತಸ್ಯ ಆತ್ಮನಾತ್ಮಾನಮಭಿಸಂವಿವೇಶ ॥**

ಪ್ರಜಾಪ್ರತಿಯು ಎಲ್ಲಕ್ಕೂ ಮೊದಲಿದ್ದ ನೀರಿನಿಂದಲೇ ಸೃಷ್ಟಿಕಾರ್ಯವನ್ನು ಮುಂದುವರಿಸಿದನು. ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಲೋಕವನ್ನೂ ಅವುಗಳಲ್ಲಿ ವಾಸಿಸುವ ಸಮಸ್ತ ಭೂತಜಾತಗಳನ್ನು ಎಂದರೆ ಪ್ರಾಣಿಗಳನ್ನೂ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ನಿರ್ಮಿಸಿ ಅವುಗಳಲ್ಲಿ ತಾನು ಚೈತನ್ಯರೂಪದಿಂದ ಪ್ರವೇಶಿಸಿದನು ಎಂದು ಈ

ಮಂತ್ರದ ಮುಖ್ಯಾಭಿಪ್ರಾಯವು. (ಈ ಮಂತ್ರವು ಋಗ್ವೇದದಲ್ಲಿ ಇರುವುದಿಲ್ಲ. ಶಾಖಾಂತರದಲ್ಲಿರುವುದೆಂದು ಭಾಷ್ಯಕಾರರು ಹೇಳಿದಾರೆ. ಯಾವ ಶಾಖೆಯೆಂಬುವುದು ಗೊತ್ತಾಗುವುದಿಲ್ಲ). ಪ್ರಜಾಪತಿಯು ಈರೀತಿ ಸಮಸ್ತವಾದ ಸೃಷ್ಟಿಕಾರ್ಯವನ್ನು ಮುಗಿಸಿ, ಸೃಷ್ಟವಾದ ವಸ್ತುಗಳಲ್ಲಿ ತಾನು ಚಿದ್ರೂಪದಿಂದ ಪ್ರವೇಶಿಸಿ, ಅವುಗಳ ಮಧ್ಯದಲ್ಲಿ ಅಂತಃಸ್ಥಿತನಾಗಿದ್ದು ಜಗದ್ವ್ಯವಹಾರಗಳನ್ನು ನಡೆಸುತ್ತಿರುವನು. ಪರಮಾತ್ಮನ ಈ ಸೃಷ್ಟಿಕ್ರಮವನ್ನು ತಿಳಿಯುವ ಪುರುಷನು ಈ ಜಗತ್ತಿನಲ್ಲಿ ಪುರುಷನು ಪಡೆಯಬೇಕಾದ ಫಲಗಳನ್ನು ಪಡೆದು ಅನುಭವಿಸಿ ಸುಖಿಸುವನು.

ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ ಗಹನವಾದ ಅನೇಕ ವೇದಾಂತ ತತ್ತ್ವಗಳು ಅಡಕವಾಗಿರುವುದರಿಂದ ಆ ವಿಷಯಗಳನ್ನು ಆಯಾ ಸಂದರ್ಭದಲ್ಲಿ ವಿವರಿಸಲಾಗುವುದು.

ಪರಮಪುರುಷನನ್ನುದ್ದೇಶಿಸಿ ಪರಮಪುರುಷನ ಮಹಿಮೆಯನ್ನು ಪ್ರಶಂಸಿಸುವ ಸೂಕ್ತಕ್ಕೆ ಪುರುಷಸೂಕ್ತ ವೆಂದು ಹೆಸರು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥** (ಭ. ಗೀ. ೧೫-೧೬, ೧೭)

ಕ್ಷರ, ಅಕ್ಷರ ಎಂಬೆರಡು ತತ್ತ್ವಗಳೂ ಈಶ್ವರನ ವಿಭೂತಿ ವಿಶೇಷಗಳು. ಉತ್ಪನ್ನವನ್ನು ಹೊಂದಿ ಅನಂತರ ನಾಶವನ್ನು ಹೊಂದತಕ್ಕ ಜಗತ್ತಿನ ರಾಶಿಯು **ಕ್ಷರ**ಸಂಜ್ಞಕವಾದ ಪುರುಷರೂಪವುಳ್ಳದ್ದು. ಇದಕ್ಕೆ ವ್ಯತ್ಯಸ್ತವಾಗಿ ನಿತ್ಯಸ್ಥಿತಿಯನ್ನು ಹೊಂದಿ ಅಚಿದಾತ್ಮಕವಾದ ಜಗತ್ತಿನ ಸಂಬಂಧವಿಲ್ಲದೆ ಶುದ್ಧವಾದ ಸ್ವರೂಪಸ್ಥಿತಿಯಲ್ಲೇ ಇರತಕ್ಕ ಆತ್ಮನು **ಅಕ್ಷರ** ಸಂಜ್ಞಕವಾದ ಪುರುಷನೆಂದು ಕರೆಯಲ್ಪಡುತ್ತಾನೆ. ಈ ರೀತಿ ಕ್ಷರ, **ಅಕ್ಷರ** ಎಂಬ ಎರಡು ಗುಂಪಿನ ವಸ್ತುಗಳಿಗಿಂತಲೂ ಅತಿರಿಕ್ತನು ಈಶ್ವರನು. ಇವನನ್ನೇ ಶ್ರುತಿಗಳು ಉತ್ತಮಪುರುಷನೆಂದು ಪ್ರಶಂಸಿವೆ. ಇವನೇ ಪರಮಾತ್ಮನು. ಈ ಪರಮಪುರುಷನು ಮೂರು ಲೋಕಗಳನ್ನೂ ವ್ಯಾಪಿಸಿ ಅವೆಲ್ಲವನ್ನೂ ತನ್ನಲ್ಲೇ ಧರಿಸಿದ್ದಾನೆ. ಇಂತಹ ಜಗದ್ವ್ಯಾಪಕನೂ, ಜಗದತಿರಿಕ್ತನೂ ಆದ ಪರಮಪುರುಷನ ಮಹಿಮೆಯನ್ನು ಪ್ರಶಂಸಿಸುವುದೇ ಪುರುಷಸೂಕ್ತದ ಉದ್ದಿಶ್ಯ.

**ಅವ್ಯಯಃ ಕಃ ? ಈಶ್ವರಃ ಸರ್ವಜ್ಞಃ ನಾರಾಯಣಾಖ್ಯಃ ಈಶನಶೀಲಃ ।**

(ಭ. ಗೀ. ಶಂ. ಭಾ. ೧೫-೧೭)

ವ್ಯಯರಹಿತನಾದ ಈಶ್ವರನು ಯಾರು ಎಂದರೆ ಸಕಲ ಜಗತ್ತಿಗೂ ಪ್ರಭುವಾಗಿರುವ ನಾರಾಯಣರೂಪಿಯಾದ ಪರಮಾತ್ಮನು ಎಂದು ಶಂಕರಾಚಾರ್ಯರು ಭಗವದ್ಗೀತಾಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ. ಪುರುಷಸೂಕ್ತದ ಮಂತ್ರಗಳು ಪುರುಷೋತ್ತಮನಾದ ನಾರಾಯಣನನ್ನು ಉದ್ದೇಶಿಸಿರುವುದರಿಂದ ಇದಕ್ಕೆ **ನಾರಾಯಣ** ಅಥವಾ **ನಾರಾಯಣೀಯ** ಎಂಬ ಹೆಸರು.

ಅಲ್ಲದೇ, ಈ ಸೂಕ್ತವು **ನಾರಾಯಣ** ಎಂಬ ಹೆಸರುಳ್ಳ ಮಹರ್ಷಿಯಿಂದ ದೃಷ್ಟವಾಗಿ ಪಠಿತವಾಗಿರುವುದರಿಂದ ಇದಕ್ಕೆ **ನಾರಾಯಣ** ಅಥವಾ **ನಾರಾಯಣೀಯ** ಎಂಬ ಹೆಸರು ಎಂದೂ ಸಹ ಈ ಸೂಕ್ತದ ಹೆಸರಿನ ರೂಪನಿಷ್ಪತ್ತಿಯನ್ನು ಹೇಳಬಹುದು. ಪೂರ್ವನಾರಾಯಣ ಮತ್ತು ಉತ್ತರನಾರಾಯಣ ಎಂದು ಈ ಪ್ರಕರಣವು

ತೈತ್ತಿರೀಯಾರಣ್ಯಕದಲ್ಲಿ ಎರಡು ಭಾಗಗಳಾಗಿರುತ್ತದೆ. ಅವುಗಳಲ್ಲಿ ಪೂರ್ವನಾರಾಯಣವೇ ಪುರುಷಸೂಕ್ತವೆಂದು ಪ್ರಸಿದ್ಧವಾಗಿದೆ.

ಪುರುಷ ಸೂಕ್ತದ ದ್ರಷ್ಟೃವಾದ **ನಾರಾಯಣ** ಎಂಬ ಮಹರ್ಷಿಯು ಯಾರು? ಈ ಋಷಿಯು ಗೋತಮ, ವಿಶ್ವಾಮಿತ್ರ ಇವರಂತೆ ಐತಿಹಾಸಿಕ ವ್ಯಕ್ತಿಯೇ ಎಂಬ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಹೇಳುವುದು ಸುಲಭವಲ್ಲ. ನಾರಾಯಣನೆಂಬ ಹೆಸರು ಋಕ್ಸಂಹಿತೆಯಲ್ಲೆಲ್ಲೂ ನಿರ್ದಿಷ್ಟವಾಗಿಲ್ಲ. ಬ್ರಾಹ್ಮಣಾದಿಗಳಲ್ಲಾಗಲಿ ಅಥವಾ ಉಪನಿಷತ್ತುಗಳಲ್ಲಾಗಲಿ ನಾರಾಯಣನೆಂಬ ಸೂಕ್ತದ್ರಷ್ಟೃವು ನಿರ್ದೇಶಿಸಲ್ಪಟ್ಟಿಲ್ಲ. ನಿರುಕ್ತಕಾರರಾಗಲಿ ಅಥವಾ ಬೃಹದ್ದೇವತಾಕಾರರಾಗಲಿ ಈ ವಿಷಯವನ್ನು ತಿಳಿಸಿಲ್ಲ. ಆದುದರಿಂದ ಇತರ ಕೆಲವೆಡೆಗಳಲ್ಲಿ ಸೂಕ್ತಗಳ ವಿಷಯಾನುಸಾರವಾಗಿ ಸೂಕ್ತದ್ರಷ್ಟೃವಿನ ಹೆಸರನ್ನು ತಿಳಿಸುವಂತೆ ಈ ಸೂಕ್ತಕ್ಕೂ ಸಹ ಸೂಕ್ತದ ವಿಷಯಕ್ಕನುಸಾರವಾಗಿ ದ್ರಷ್ಟೃವಿನ ನಾಮನಿರ್ದೇಶವಿರುತ್ತದೆ. ಇದೇ ರೀತಿ ಉಳಿದ ಕೆಲವು ನಿದರ್ಶನಗಳನ್ನು ತೋರಿಸಬಹುದು. ಉದಾಹರಣೆಗೆ—**ಹಿರಣ್ಯಗರ್ಭಃ ಸಮವರ್ತತಾಗ್ರೇ** ಎಂಬ (೧೦-೧೨೧) ಹಿರಣ್ಯಗರ್ಭಪರವಾದ ಸೂಕ್ತಕ್ಕೆ ಪ್ರಜಾಪತಿಯ ಪುತ್ರನಾದ ಹಿರಣ್ಯಗರ್ಭಪ್ರಾಜಾಪತ್ಯನೇ ಸೂಕ್ತದ್ರಷ್ಟೃವೆಂದು ತಿಳಿಸಿದೆ. ೧೦-೮೧ ಮತ್ತು ೮೨ನೇ ಸೂಕ್ತಗಳು ವಿಶ್ವಕರ್ಮನ ಮಹತ್ತ್ವವನ್ನು ಪ್ರಶಂಸಿಸುವುದಾಗಿದೆ. ವಿಶ್ವಕರ್ಮಾ ಭೌವನನು ಎಂದರೆ ಭುವನನ ಪುತ್ರನಾದ ವಿಶ್ವಕರ್ಮನೇ ಈ ಸೂಕ್ತಗಳ ದ್ರಷ್ಟೃವೆಂದು ತಿಳಿಸಿದೆ. ಹೀಗೆಯೇ, **ಯಸ್ತೇ ಮನ್ಯೋಽವಿಧದ್ವಜ್ರ ಸಾಯಕ, ತ್ವಯಾ ಮನ್ಯೋ ಸರಥಮಾರುಜಂತಃ** ಎಂಬ ೧೦-೮೩ ಮತ್ತು ೮೪ನೇ ಸೂಕ್ತಗಳು ತಪಸ್ಸಿನ ಪುತ್ರನಾದ **ಮನ್ಯು**ಮಹರ್ಷಿಪ್ರಣೀತವೆಂದೂ ಪ್ರಸಿದ್ಧವಾಗಿದೆ. **ನಾಸದಾಸೀನ್ನೋ ಸದಾಸೀತ್** (೧೦-೧೨೯) ಎಂಬ ಸೂಕ್ತವು ಪ್ರಜಾಪತಿಯನ್ನು ಪ್ರಶಂಸಿಸುವ ಸೂಕ್ತವು. ಪ್ರಜಾಪತಿ ಪಾರಮೇಷ್ಠ್ಯನಿಂದ ಈ ಸೂಕ್ತವು ದೃಷ್ಟವಾಯಿತೆಂದು ಹೇಳುವುದೂ ಮೇಲಿನ ಸಂಪ್ರದಾಯವನ್ನೇ ಅನುಸರಿಸಿರುತ್ತದೆ. ಇದರಂತೆಯೇ **ಯೋ ಯಜ್ಞೋ ವಿಶ್ವತಸ್ತಂತುಭಿಃ** (೧೦-೧೩೦) ಎಂಬ ಪ್ರಶಂಸಾತ್ಮಕವಾದ ಸೂಕ್ತವು ಯಜ್ಞಪ್ರಾಜಾಪತ್ಯನಿಂದ ದೃಷ್ಟವಾದುದು ಎಂಬ ಅಭಿಪ್ರಾಯವೂ ಹೀಗೆಯೇ ಸೂಕ್ತದ ಪ್ರಧಾನವಿಷಯವನ್ನು ಕುರಿತು ಹೇಳಿರುವುದಾಗಿರುತ್ತದೆ.

ಈ ಅನೇಕ ಉದಾಹರಣೆಗಳನ್ನು ಪರಿಶೀಲಿಸಿದರೆ ಪ್ರಕೃತವಾದ ಪುರುಷಸೂಕ್ತಕ್ಕೂ ಸಹ ಈ ಸೂಕ್ತದ ವಿಷಯಕ್ಕನುಸಾರವಾಗಿ ಅದೇ ನಾಮಾಂಕಿತವು ಸೂಕ್ತದ್ರಷ್ಟೃವಿಗೂ ಪ್ರಯುಕ್ತವಾಗಿದೆಯೆಂದು ಹೇಳಬಹುದು. ಆದರೆ, ಇಲ್ಲಿ ಇನ್ನೊಂದು ಪ್ರಶ್ನೆಗೆ ಅವಕಾಶವಿರುತ್ತದೆ. ಅದೇನೆಂದರೆ, ಪುರುಷಸೂಕ್ತದ ಪ್ರಧಾನ ವಿಷಯ **ಪುರುಷ, ಪರಮಪುರುಷ, ಪರಮಾತ್ಮ** ಇತ್ಯಾದಿ ಹೆಸರುಗಳಿಂದ ಪ್ರಸಿದ್ಧವಾದ ಈಶ್ವರನ ವಿಷಯ. ಇಲ್ಲಿ ನಾರಾಯಣ ಶಬ್ದವೇ ಇಲ್ಲ. ಅದು ಹೇಗೆ ಸೂಕ್ತದ್ರಷ್ಟೃವಿನ ಹೆಸರು ನಾರಾಯಣನೆಂದು ಪ್ರಸಿದ್ಧವಾಗಿದೆ ? ಎಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರ **ಪುರುಷ, ನಾರಾಯಣ** ಎರಡು ಹೆಸರುಗಳೂ ಅದ್ವಿತೀಯನಾದ ಈಶ್ವರನ ವಿಭೂತಿವಿಶೇಷಗಳೇ ವಿನಾ ಬೇರೆಯಲ್ಲ. ಎಂದು ಶ್ರುತಿವಾಕ್ಯಗಳ ಆಧಾರದ ಮೇಲೆ ಹೇಳಬಹುದು.

ರಾಮನಿಗೆ ಸಂಬಂಧಿಸಿದುದು ರಾಮಾಯಣವೆನ್ನುವಂತೆ **ನರ**ನಿಗೆ ಸಂಬಂಧಿಸಿದವನು **ನಾರಾಯಣ**ನೆಂದು ಹೇಳಬಹುದು. ಇಲ್ಲಿ ನರನ ಪುತ್ರನೆಂದೂ ಅರ್ಥಮಾಡಬಹುದು. ಪುರುಷನೆಂಬರ್ಥದಲ್ಲೇ ನರಶಬ್ದದ ಪ್ರಯೋಗವೂ ಇರುತ್ತದೆ. ವಿರಾಡಾಖ್ಯನಾದ ಈಶ್ವರನಿಂದ ಪುರುಷನ ಉತ್ಪತ್ತಿ ಮತ್ತು ಪರಮಪುರುಷನಿಂದ ವಿರಾಡಿನ ಉತ್ಪತ್ತಿ

ಎಂದು ಪುರುಷಸೂಕ್ತದಲ್ಲೇ ತಿಳಿಸಿರುವಂತೆ ಪುರುಷನ ಪುತ್ರನೇ ನಾರಾಯಣನು. ನಾರಾಯಣನೇ ಪುರುಷನು ಪಿತೃ ಮತ್ತು ಪುತ್ರ ಇಬ್ಬರೂ ಒಂದೇ. ಇದು ಲೌಕಿಕವಾದ ಅರ್ಥದಲ್ಲಲ್ಲ. ಆಧ್ಯಾತ್ಮಿಕವಾದ ಅರ್ಥದಲ್ಲಿ.

ಅಥವಾ ಪ್ರಜಾಪತಿ, ವಿಶ್ವಕರ್ಮ, ಹಿರಣ್ಯಗರ್ಭ ಇತ್ಯಾದಿ ಪದಗಳೆಲ್ಲವೂ ಪುರುಷಾಖ್ಯವಾದ ಪರಮಾತ್ಮನ ಪರ್ಯಾಯನಾಮಗಳು. ಈ ಪರ್ಯಾಯನಾಮಗಳಿಂದ ಪರಮಾತ್ಮನ ಮೂಲತತ್ತ್ವವನ್ನು ವರ್ಣಿಸುವಾಗಲೆಲ್ಲ **ಅಪ್ಪಿನ** (ಉದಕದ) ಆಧಾರದಮೇಲೆ ಪರಮಾತ್ಮನು ಸೃಷ್ಟಿಗೆ ಪೂರ್ವದಲ್ಲಿ ವಿಹರಿಸುತ್ತಿದ್ದನು ಎಂಬ ವರ್ಣನವಿರುತ್ತದೆ.

**ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಗಚ್ಛಂತ ವಿಶ್ವೇ ।**
**ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ ॥**

(ಋ. ಸಂ. ೧೦-೮೨-೬)

ಯಾವ ಪರಮಾತ್ಮನಲ್ಲಿ ಸಕಲ ದೇವತೆಗಳೂ ಒಂದುಗೂಡಿ ಸೇರಿರುವರೋ ಆ ವಿಶ್ವಕರ್ಮರೂಪನಾದ ಪರಮಾತ್ಮನನ್ನು ಉದಕಗಳು ಪ್ರಥಮತಃ ಧರಿಸಿದವು. ಅದ್ವಿತೀಯನಾದ ಈ ಪರತತ್ತ್ವವು ಸಕಲ ವಿಶ್ವಗಳನ್ನೂ ಒಳಗೊಂಡಿರುತ್ತದೆ ಎಂದು ವಿಶ್ವಕರ್ಮನನ್ನು ಪ್ರಶಂಸಿಸುವುದೂ ಆಧ್ಯಾತ್ಮಿಕವಾದ ತತ್ತ್ವವನ್ನು ವಿವರಿಸುವುದೂ ಆದ ಸೂಕ್ತವು ತಿಳಿಸುತ್ತದೆ ಇದರಂತೆಯೇ,

**ಆಪೋ ಹ ಯದ್ಬೃಹತೀರ್ಗರ್ಭಮಾಯನ್ ಗರ್ಭಂ ದಧಾನಾ ಜನಯಂತೀರಗ್ನಿಂ ।**
**ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

(ಋ. ಸಂ. ೧೦-೧೨೧-೭)

ಸಕಲ ಭೂತಜಾತಕಗಳನ್ನೂ ಉತ್ಪನ್ನಮಾಡುವ ಸ್ವರೂಪಯೋಗ್ಯತೆಯುಳ್ಳ ಉದಕಗಳು ಹಿರಣ್ಯಗರ್ಭರೂಪನಾದ ಪ್ರಜಾಪತಿಯನ್ನು ತಮ್ಮ ಗರ್ಭದಲ್ಲಿ ಧರಿಸಿದವು ಎಂದು ಹಿರಣ್ಯಗರ್ಭನನ್ನು ಪ್ರಶಂಸಿಸುವ ಸೂಕ್ತವೂ, ಹೀಗೆಯೇ **ಸಲಿಲಂ ಸರ್ವಮಾ ಇದಂ** (೧೦.೧೨೯-೩) ಇತ್ಯಾದಿ ವಾಕ್ಯಗಳೂ ಸೃಷ್ಟಿಗೆ ಪೂರ್ವಭಾವಿಯಾಗಿ ಉದಕದಮೇಲೆ ವಿಹರಿಸುತ್ತಿದ್ದ ಪರಮಾತ್ಮನನ್ನು ಪ್ರಶಂಸಿಸುತ್ತವೆ. ಅದರಂತೆಯೇ ಪ್ರಕೃತದಲ್ಲಿಯೂ ಸಹ **ನಾರಾಯಣ** ಎಂಬ ಪದವು ಪರಮಾತ್ಮನಿಗೂ ಉದಕಕ್ಕೂ ಇರುವ ಸಾಕ್ಷಾತ್ಸಂಬಂಧವನ್ನು ತಿಳಿಸುತ್ತದೆ ಎಂದೂ ಹೇಳಬಹುದು. ಸ್ಮೃತಿ ಕಾರರೂ ಮತ್ತು ಪೌರಾಣಿಕರೂ ಈ ಅರ್ಥವನ್ನೇ ವಿಶದಪಡಿಸುತ್ತಾರೆ. ಹೇಗೆಂದರೆ,

**ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।**
**ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥**

(ಮನು ೧-೧೦)

ಅಪಗಳಿಗೆ (ಉದಕಗಳಿಗೆ) **ನಾರಾ** ಎಂಬ ಹೆಸರು ಪ್ರಸಿದ್ಧವಾಗಿದೆ. ಈ ಉದಕಗಳೇ ನರಸಂಜ್ಞಕನಾದ ಪರಮಾತ್ಮನಿಂದ ಉತ್ಪನ್ನವಾಗಿವೆ. ಈ ಪರಮಾತ್ಮನಿಗೆ, ಅವನು ಬ್ರಹ್ಮರೂಪನಾಗಿದ್ದಾಗ ಆಶ್ರಯ ವಾಗಿದ್ದವು. ಆದುದರಿಂದಲೇ ಪರಮಾತ್ಮನಿಗೆ **ನಾರಾಯಣ** ಎಂಬ ಹೆಸರು. ಎಂದರೆ, **ನಾರಗಳೇ** (ಉದಕ) **ಅಯನ** (ಆಶ್ರಯ) ವಾಗಿ ಉಳ್ಳವನು **ನಾರಾಯಣ**. ಯಾವ ಉದಕಗಳು ವಿಶ್ವಕರ್ಮ, ಹಿರಣ್ಯಗರ್ಭ ಮತ್ತು ಪ್ರಜಾಪತಿ ಸಂಜ್ಞಕವಾದ ಪರಮಾತ್ಮನನ್ನು ಧರಿಸಿದವೋ, ಅದೇ ಉದಕಗಳು **ನಾರಾಯಣ** ಸಂಜ್ಞಕನಾದ ಪರಮಾತ್ಮ

ನನ್ನು ಧರಿಸಿದವು ಎಂದರೆ ಒಂದೇ ವರ್ಣನವನ್ನು ಬೇರೆ ಬೇರೆ ಸೂಕ್ತಗಳು ಬೇರೆ ಬೇರೆ ರೀತಿಯಲ್ಲಿ ಪಠಿಸಿವೆಯೆಂದು ಹೇಳಬಹುದೇ ವಿನಾ ಈ ವರ್ಣನದ ಅಂಶಗಳು ಬೇರೆ ಬೇರೆಯೆಂದು ಹೇಳಲಾಗದು. ಆದುದರಿಂದ ಪರಮಪುರುಷ, ನಾರಾಯಣ—ಇವೆರಡೂ ಪರ್ಯಾಯನಾಮಗಳು. ಪುರುಷನ ಮಹಿಮೆಯನ್ನು ವರ್ಣಿಸುವ ಸೂಕ್ತಕ್ಕೆ ನಾರಾಯಣಾಖ್ಯನಾದ ಪುರುಷನೇ ವಿಷಯನಾದುದರಿಂದ, ಸೂಕ್ತದ ವಿಷಯಕ್ಕನುಗುಣವಾಗಿ ಋಷಿಯ ಹೆಸರೂ ನಾರಾಯಣನೆಂದೇ ಇರುತ್ತದೆ ಎಂದು ಹೇಳಿದರೆ ತಪ್ಪಾಗಲಾರದು. ಇದಕ್ಕೆ ಶ್ರುತಿವಾಕ್ಯಗಳೂ ಪ್ರಮಾಣವಾಗಿರುತ್ತವೆ. ಉದಾಹರಣೆಗೆ; ಶತಪಥಬ್ರಾಹ್ಮಣವು **ಪುರುಷನಾರಾಯಣ** ಎಂಬ ತಾದಾತ್ಮ್ಯವನ್ನು ನಿರ್ದೇಶಿಸುವ ಸಂದರ್ಭವನ್ನು ಈ ರೀತಿ ವರ್ಣಿಸುತ್ತದೆ.

**ಪುರುಷೋ ಹ ನಾರಾಯಣೋಽಕಾಮಯತ। ಅತಿತಿಷ್ಠೇಯಗ್ಂ ಸರ್ವಾಣಿ ಭೂತಾನ್ಯಹಮೇ-ವೇದಗ್ಂ ಸರ್ವಗ್ಂ ಸ್ಯಾಮಿತಿ ಸ ಏತಂ ಪುರುಷಮೇಧಂ ಪಂಚರಾತ್ರಂ ಯಜ್ಞಕ್ರತು-ಮಪಶ್ಯತ್ತಮಾಹರತ್ತೇನಾಯಜತ ತೇನೇಷ್ಟ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವ-ಮಭವದತಿತಿಷ್ಠತಿ ಸರ್ವಾಣಿ ಭೂತಾನೀದಗ್ಂ ಸರ್ವಂ ಭವತಿ ಯ ಏವಂ ವಿದ್ವಾನ್ ಪುರುಷ-ಮೇಧೇನ ಯಜತೇ ಯೋ ವೈ ತದೇವಂ ವೇದ ॥**

(ಶ. ಬ್ರಾ. ೧೩-೬-೧-೧)

ನಾನು ಸಕಲ ಜಗತ್ತನ್ನೂ ಮೀರಿರಬೇಕು, ನಾನೇ ಸಕಲವನ್ನೂ ವ್ಯಾಪಿಸಿ ಅದ್ವಿತೀಯನಾಗಿರಬೇಕು ಎಂದು ಪುರುಷ ನಾರಾಯಣನು ಇಚ್ಛಿಸಿದನು. ಆಗ ಪುರುಷಮೇಧರೂಪವಾದ **ಪಂಚರಾತ್ರ** ಸಂಜ್ಞಕವಾದ ಕರ್ಮದ ಮಹತ್ತ್ವವನ್ನು ಧ್ಯಾನಿಸಿ ಅರಿತನು. ಅನಂತರ ಆ ಯಜ್ಞವನ್ನೂ ನೆರವೇರಿಸಿದನು. ಇದರ ಫಲವಾಗಿ ಅವನು ಸಕಲ ಜಗತ್ತನ್ನೂ ವ್ಯಾಪಿಸಿದನು ಮತ್ತು ತದತಿರಿಕ್ತನಾಗಿಯೂ ವಿಸ್ತೃತನಾದನು. ಈ ತತ್ತ್ವವನ್ನರಿತು ಇದರಂತೆಯೇ ಪುರುಷಮೇಧವನ್ನಾಚರಿಸುವವನು ಸಕಲವನ್ನೂ ವ್ಯಾಪಿಸಿ, ಸಕಲವನ್ನೂ ಮೀರಿ ವೃದ್ಧಿಯನ್ನು ಹೊಂದುತ್ತಾನೆ, ಎಂಬುದಾಗಿ ಪುರುಷನಾರಾಯಣನ ಪ್ರಶಂಸೆಯಿರುತ್ತದೆ. ಅಲ್ಲದೇ, ಪಂಚರಾತ್ರಾತ್ಮಕವಾದ ಈ ಯಜ್ಞವನ್ನು ಆಚರಿಸುವುದರಿಂದ ಪುರುಷನನ್ನುದ್ದೇಶಿಸಿ, ಪ್ರಶಂಸಿಸುವ ಸೂಕ್ತಕ್ಕೇ ಒಂದು ಮಹಿಮೆಯುಂಟಾಗಿ ಅದು ಲೋಕದಲ್ಲೆಲ್ಲ ಪ್ರಸಿದ್ಧಿಯನ್ನು ಹೊಂದುತ್ತದೆ ಎಂಬ ವರ್ಣನವೂ ಶಥಪಥಬ್ರಾಹ್ಮಣದಲ್ಲಿರುತ್ತದೆ.

**ಪುರುಷಗ್ಂ ಹ ನಾರಾಯಣಂ ಪ್ರಜಾಪತಿರುವಾಚ । ಯಜಸ್ವ ಯಜಸ್ವೇತಿ ಸ ಹೋವಾಚ ಯಜಸ್ವ ಯಜಸ್ವೇತಿ ವಾವ ತ್ವಂ ಮಾಮಾತ್ಥ ತ್ರಿರಯಕ್ಷಿ ವಸವಃ ಪ್ರಾತಃಸವನೇನ ರುದ್ರಾ ಮಾಧ್ಯಂದಿನೇನ ಸವನೇನಾದಿತ್ಯಾಸ್ತೃತೀಯಸವನೇನಾಥ ಮಮ ಯಜ್ಞವಾಸ್ತ್ವೇ-ವಾಹವಮಾಸ ಇತಿ ॥**

(ಶ. ಬ್ರಾ. ೧೨-೩-೪-೧)

ಯಜ್ಞವನ್ನಾಚರಿಸಿ ಯಜ್ಞಾಹುತಿಯನ್ನರ್ಪಿಸು ಎಂದು ಪ್ರಜಾಪತಿಯು ಪುರುಷನಾರಾಯನಿಗೆ ನಿರ್ದೇಶವನ್ನಿತ್ತನು. ಆಗ ಪುರುಷನಾರಾಯಣನು ಅದಕ್ಕೆ ಉತ್ತರವಾಗಿ, ನಿನ್ನ ನಿರ್ದೇಶವೇನೋ ಸರಿ, ನಾನೂ ಸಹ ಮೂರು ಸಲ ಯಜ್ಞವನ್ನಾಚರಿಸಿ ಯಜ್ಞಾಹುತಿಯನ್ನರ್ಪಿಸಿದೆನು. ಪ್ರಾತಃಸವನವನ್ನರ್ಪಿಸಿದಾಗ ವಸುಗಳೂ, ಮಾಧ್ಯಂದಿನ ಸವನಕಾಲದಲ್ಲಿ ರುದ್ರರೂ ಮತ್ತು ತೃತೀಯಸವನಕಾಲದಲ್ಲಿ ಆದಿತ್ಯರೂ ಪುಷ್ಟರಾದರು. ಎಲ್ಲರೂ ಎಲ್ಲ ಪ್ರದೇಶಗಳನ್ನೂ ಆಕ್ರಮಿಸಿದರು. ನನಗೆ ಮಾತ್ರ ಯಜ್ಞಾಹುತಿಯ ಸ್ಥಾನ ಮಾತ್ರ ಉಳಿಯಿತು. ನಾನು ಅದರ ಮೇಲೆ ಮಾತ್ರ ಕುಳಿತಿದ್ದೇನೆ ಎಂದು ತಿಳಿಸಿದನು. ಆಗ ಪುನಃ ಪ್ರಜಾಪತಿಯು,

**ಯಜ್ಞಸ್ಯೈವಾಹಂ ವೈ ತೇ ತದ್ವಕ್ಷ್ಯಾಮಿ ಯಥಾ ತ ಉಕ್ಥಾನಿ ಮಣಿರಿವ ಸೂತ್ರೇ ಓತಾನಿ ಭವಿಷ್ಯಂತಿ ಸೂತ್ರಮಿವ ವಾ ಮಣಾವಿತಿ ।**

(ಶ. ಬ್ರಾ. ೧೨-೩-೪-೨)

ನೀನು ಪುನಃ ಯಜ್ಞವನ್ನಾಚರಿಸಿ ಆಹುತಿಯನ್ನರ್ಪಿಸು. ಅದರ ಫಲವಾಗಿ ಪುರುಷನಾರಾಯಣನಾದ ನಿನ್ನನ್ನು ಪ್ರಶಂಸಿಸುವ ಮಂತ್ರಗಳು ಜಗತ್ಪ್ರಸಿದ್ಧವಾಗುತ್ತವೆ. ಯಾವ ರೀತಿ ಮಣಿಗಳು ಸೂತ್ರದಲ್ಲಿ ಜೋಡಿಸಲ್ಪಡುವುವೋ ಅಥವಾ ಯಾವ ರೀತಿ ಮಣಿಗಳನ್ನು ಸೇರಿಸುವ ಸೂತ್ರವು ಮಣಿಗಳೊಂದಿಗೆ ಸೇರಿಕೊಂಡು ಯಾವ ರೀತಿ ಸೌಂದರ್ಯ ಸಾಧಕವಾಗುವುದೋ ಆ ರೀತಿ ನಿನ್ನನ್ನು ಪ್ರಶಂಸಿಸುವ ಮಂತ್ರಗಳು ಆನಂದದಾಯಕವಾಗುತ್ತವೆ ಎಂದು ತಿಳಿಸಿದನು. ಆದರೆ ಈ ಯಜ್ಞವಾವುದು ? ಇದರ ಸ್ವರೂಪವೇನು ? ಪಂಚರಾತ್ರರೂಪವಾದ ಸತ್ರವಾವುದು ಎಂಬುದನ್ನು ಪ್ರಕೃತ ದಲ್ಲಿ ಪರಿಶೀಲಿಸಿ ಅನಂತರ ಈ ಯಜ್ಞನಿರ್ವಾಹಕನಾದ ಪರಮಪುಷನ ಸ್ವರೂಪವನ್ನು ಶ್ರುತಿವಾಕ್ಯಗಳು ಯಾವ ರೀತಿ ವರ್ಣಿಸಿವೆ ಎಂಬುದನ್ನು ವಿವರಿಸಲಾಗುತ್ತದೆ. ಮೇಲಿನ ವಿವರಣೆಗಳು, ಪುರುಷರೂಪದ ನಾರಾಯಣನೇ ಸೂಕ್ತ ನಿರ್ಮಾತೃವಾದ ನಾರಾಯಣನೆಂಬ ಋಷಿಯೆಂದೂ ಪರಮಾತ್ಮನಾದ ನಾರಾಯಣನೇ ಪಾಂಚರಾತ್ರರೂಪವಾದ ಯಜ್ಞನಿರ್ವಾಹಕನೆಂದೂ ತಿಳಿಸುತ್ತವೆ. ಯಾವ ಪುರುಷಮೇಧದಿಂದ ಪಂಚರಾತ್ರಾತ್ಮಕವಾದ ಯಜ್ಞವು ಆಚರಿಸಲ್ಪಟ್ಟು ಜಗದ್ವ್ಯವಹಾರಕ್ಕೆ ಅದು ಸಾಧಕವಾಯಿತೋ ಅದೇ ಯಜ್ಞವು ಪುರುಷಸೂಕ್ತದಲ್ಲೂ ನಿರ್ದಿಷ್ಟ ವಾಗಿದೆ. ಪುರುಷರೂಪವಾದ ಹವಿಸ್ಸನ್ನರ್ಪಿಸಿ ದೇವತೆಗಳು ಯಜ್ಞವನ್ನಾಚರಿಸಿದರು ಎಂದು ಇಲ್ಲಿ ವಿವರಣೆಯಿರು ತ್ತದೆ. ಈ ಯಜ್ಞದ ಫಲವಾಗಿ ಐದು ವಿಧವಾದ ಸೃಷ್ಟಿಯುಂಟಾಗುತ್ತದೆ. ಅವು ಯಾವುವೆಂದರೆ—

೧) **ಪಶೂನ್ ತಾँಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ।**

ಈ ಯಜ್ಞದ ಫಲವಾಗಿ ಅಂತರಿಕ್ಷಸಂಚಾರಿಯಾದ ಪಕ್ಷಿಗಳೂ, ಆರಣ್ಯಕವಾದ ಮೃಗಗಳೂ ಮತ್ತು ಗ್ರಾಮವಾಸಿಗಳಾದ ಗವಾಶ್ವಾದಿಗಳೂ ಉತ್ಪನ್ನವಾದವು.

೨) **ಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥**

ಅದೇ ವಿರಾಟ್ಪುರುಷನಿಂದ, ಯಜ್ಞದ ಫಲವಾಗಿ, ಋಙ್ಮಂತ್ರಗಳೂ, ಸಾಮಗಳೂ ಉತ್ಪನ್ನವಾದವು. ಅದರಿಂದಲೇ ಗಾಯತ್ರ್ಯಾದಿಛಂದಸ್ಸುಗಳೂ, ಯಜುಸ್ಸುಗಳೂ ಉತ್ಪನ್ನವಾದವು.

೩) **ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ ॥**

ಈ ಯಜ್ಞದ ಫಲವಾಗಿ ಪುರುಷನ ಮುಖದಿಂದ ಬ್ರಾಹ್ಮಣನೂ, ಬಾಹುಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ ಮತ್ತು ಪಾದಗಳಿಂದ ಶೂದ್ರರೂ ಸಮಸ್ತ ಮಾನವರೂ ಉತ್ಪನ್ನರಾದರು.

೪) **ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾ-ಗ್ನಿಶ್ಚ ಪ್ರಾಣಾದ್ವಾಯುರಜಾಯತ ॥**

ಈ ವಿರಾಟ್ಪುರುಷನ ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ ಮುಖದಿಂದ ಇಂದ್ರಾಗ್ನಿಗಳೂ ಹೀಗೆಯೇ ಸಕಲ ದೇವತೆಗಳೂ ಉತ್ಪನ್ನರಾದರು.

೫) **ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾಁ ಅಕಲ್ಪಯನ್ ॥**

ವಿರಾಡ್ಯಜ್ಞದ ಫಲವಾಗಿ ವಿರಾಟ್ಪುರುಷನ ಹೊಕ್ಕಳಿನಿಂದ ಅಂತರಿಕ್ಷವೂ, ಶಿರಸ್ಸಿನಿಂದ ದ್ಯುಲೋಕವೂ, ಪಾದಗಳಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ ಹೀಗೆ ಸಕಲ ಲೋಕಗಳೂ ಉತ್ಪನ್ನವಾದವು. ಪಂಚರಾತ್ರಾತ್ಮಕವಾದ ಯಜ್ಞದ ಫಲವಾಗಿ ಈ ಐದು ವಿಭಾಗಾತ್ಮಕವಾದ ಜಗತ್ತಿನ ಸೃಷ್ಟಿಯಾಯಿತು ಎಂದು ಕೆಲವು ಕಡೆಗಳಲ್ಲಿ ಕಾರ್ಯಕಾರಣ ಸಂಬಂಧವು ತೋರಿಸಲ್ಪಟ್ಟಿದೆ. ಈ ಐದು ಭಾಗಗಳು ಒಂದೊಂದೆಡೆಯಲ್ಲಿ ಒಂದೊಂದು ವಿಧವಾಗಿ ವರ್ಣಿತವಾಗಿರುತ್ತದೆ. ಇದೇ ಐದಂಶಗಳನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ವಿವರಿಸುತ್ತ ಈ ರೀತಿ ತಿಳಿಸಿದೆ.

**ಸ ಏಷ ಪಾಂಕ್ತೋ ಯಜ್ಞಃ ಪಾಂಕ್ತಃ ಪಶುಃ ಪಾಂಕ್ತಃ ಪುರುಷಃ ಪಾಂಕ್ತಮಿದಂ ಸರ್ವಂ ಯದಿದಂ ಕಿಂ ಚ ತದಿದಂ ಸರ್ವಮಾಪ್ನೋತಿ ॥**

(ಬೃ. ಉ. ೧-೪-೧೩)

ಯಜ್ಞವು ಪಂಚವಿಧ. ಯಜ್ಞಪಶುವೂ ಪಂಚವಿಧ, ಪುರುಷನೂ ಐದು ಪ್ರಕಾರವುಳ್ಳವನು. ಈ ವಿಶ್ವವೂ, ವಿಶ್ವದಲ್ಲಿ ಅಡಗಿರುವ ಸಮಸ್ತವೂ ಐದು ವಿಧವಾಗಿಯೇ ಇರುತ್ತದೆ. ಈ ತತ್ತ್ವವನ್ನರಿತವನು ಸಕಲ ಶ್ರೇಯಸ್ಸನ್ನೂ ಪಡೆಯುತ್ತಾನೆ ಎಂದಿರುತ್ತದೆ. ಹೀಗೆಯೇ ಇದೇ ವಿಷಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ತಿಳಿಸುತ್ತ,

**ಪಾಙ್ಕ್ತಂ ವಾ ಇದಗ್ಂ ಸರ್ವಂ । ಪಾಙ್ಕ್ತೇನೈವ ಪಾಙ್ಕ್ತಗ್ಂ ಸ್ಪೃಣೋತೀತಿ ।**

(ತೈ. ಉ. ೧-೭)

ಈ ಸಕಲ ವಿಶ್ವವೂ ಐದು ವಿಧವುಳ್ಳದ್ದಾಗಿರುತ್ತದೆ. ಈ ಐದು ವಿಧವಾದ ತತ್ತ್ವಗಳನ್ನೊಳಗೊಂಡ ವಿಶ್ವವನ್ನರಿತ ಪಂಡಿತನೂ ಪಂಚವಿಧವಾದ ಶ್ರೇಯಸ್ಸನ್ನೂ ಪಡೆಯುತ್ತಾನೆ ಎಂದು ಪ್ರಶಂಸಿಸಿದೆ.

ಪುರುಷನಾರಾಯಣನು ಪಂಚರಾತ್ರಾತ್ಮಕವಾದ ವಿಶ್ವಯಜ್ಞವನ್ನು ನೆರವೇರಿಸಿದನು. ಇದರ ಫಲವಾಗಿ ಇವನು ಸರ್ವವ್ಯಾಪಿಯಾದನು. ಸರ್ವಾತಿರಿಕ್ತನಾದನು, **ವಿಶ್ವಕರ್ಮನ್ ಹವಿಷಾ ವಾವೃಧಾನಃ** ಇತ್ಯಾದಿಯಾಗಿ ವಿಶ್ವಕರ್ಮನನ್ನು ಸ್ತುತಿಸಿ, ತನ್ನನ್ನೇ ಆಹುತಿಯನ್ನಾಗಿ ಅರ್ಪಿಸಿ, ಜಗದ್ವ್ಯಾಪಿಯಾದನೆಂದು ಯಾವ ರೀತಿ ಪ್ರಶಂಸಿಸಿದೆಯೋ (೧೦-೮೧-೬) ಅದೇ ರೀತಿ ಇಲ್ಲಿ ಪರಮಪುರುಷಕೃತವಾದ ಯಜ್ಞ ಮತ್ತು ತತ್ಫಲಗಳನ್ನು ಪ್ರಶಂಸಿಸಿದೆ. ಜಗನ್ನಿಯಾಮಕನೂ, ಜಗದೀಶ್ವರನೂ ಇಲ್ಲಿ ಪುರುಷಶಬ್ದದಿಂದ ವ್ಯವಹೃತನಾದರೆ, ಇಲ್ಲಿ ಪುರುಷಶಬ್ದದ ನಿರ್ವಚನವೇನು, ಈ ಪುರುಷಶಬ್ದವು ಜಗದೀಶ್ವರತ್ವವನ್ನೂ, ಜಗನ್ನಿಯಾಮಕತ್ವವನ್ನೂ ಯಾವ ರೀತಿ ತೋರಿಸುತ್ತದೆ ಎಂಬ ವಿಷಯವನ್ನು ಪ್ರಕೃತದಲ್ಲಿ ವಿಮರ್ಶಿಸಬೇಕಾಗಿರುತ್ತದೆ.

**ಪುರುಷ** ಶಬ್ದಕ್ಕೆ ಎರಡು ವಿಧವಾದ ನಿರ್ವಚನವಿರುತ್ತದೆ. ಈ ಎರಡು ವಿಧವಾದ ನಿರ್ವಚನಗಳೂ ಪುರುಷನ ಪರಮಾತ್ಮಸ್ವರೂಪವನ್ನೇ ವಿವರಿಸುತ್ತವೆ. ಮೊದಲನೆಯದಾಗಿ—

**ಆತ್ಮೈವೇದಮಗ್ರ ಆಸೀತ್ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ಸೋಽಹಮಸ್ಮೀತ್ಯಗ್ರೇ ವ್ಯಾಹರತ್ತತೋಽಹಂ ನಾಮಾಭವತ್ತಸ್ಮಾದಪ್ಯೇತರ್ಹ್ಯಾಮಂತ್ರಿತೋಽಹಮಯಮಿತ್ಯೇವಾಗ್ರ ಉಕ್ತ್ವಾಥಾನ್ಯನ್ನಾಮ ಪ್ರಬ್ರೂತೇ ಯದಸ್ಯ ಭವತಿ ಸ ಯತ್ಪೂ-**

**ಪೂರ್ವೋಽಸ್ಮಾತ್ಸರ್ವಸ್ಮಾತ್ಸರ್ವಾನ್ಪಾಪ್ಮನ ಔಷತ್ತಸ್ಮಾತ್ಪುರುಷ ಓಷತಿ ಹ ವೈ ಸ ತಂ ಯೋಽಸ್ಮಾತ್ಪೂರ್ವೋ ಬುಭೂಷತಿ ಯ ಏವಂ ವೇದ ।**

(ಬೃ. ಉ. ೧-೪-೧)

ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ **ಪುರುಷ**ರೂಪದಲ್ಲಿ ಆತ್ಮನು ಅದ್ವಿತೀಯನಾಗಿದ್ದನು. ತನ್ನ ವಿನಾ ಇನ್ನಾರೂ ಇಲ್ಲದಿರುವುದನ್ನು ನೋಡಿ ನಾನು ಇಲ್ಲಿದ್ದೇನೆ ಎಂದು ತಿಳಿದನು. ಈ **ಅಹಂ** ಪ್ರತ್ಯಯವೇ ಲೋಕದಲ್ಲೂ ಸಕಲ ವ್ಯಕ್ತಿಗಳ ವೈಯಕ್ತಿಕ ವ್ಯವಹಾರಗಳಿಗೂ ಮೂಲವಾಗಿರುತ್ತದೆ. ಈ ಆತ್ಮನಿಗೆ ಪುರುಷನೆಂಬ ವ್ಯವಹಾರವು ಹೇಗೆಂದರೆ– ಜಗತ್ಸೃಷ್ಟಿಗೆ ಪೂರ್ವದಲ್ಲಿ (**ಪೂರ್ವ**) ಸಕಲವಾದ ಪಾಪಗಳನ್ನೂ ದಹಿಸಿದನು (**ಉಷ್-ಔಷತ್**). ಆದುದರಿಂದ (**ಪೂರ್ವ+ಉಷ್**) **ಪೂರುಷಃ** (**ಪುರುಷಃ**) ಎಂಬ ಹೆಸರು ಪ್ರಸಿದ್ಧವಾಯಿತು ಎಂದು ಒಂದುವಿಧವಾದ ನಿರ್ವಚನ. ಎರಡನೆಯದಾಗಿ—

**ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।**
**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರಷ ಆವಿಶದಿತಿ ॥**
**ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋಽನೈನೇವ ಕಿಂಚನಾನಾವೃತಂ ನೈನೇನ ಕಿಂಚನಾಸಂವೃತಂ ॥**

(ಬೃ. ಉ. ೨-೫-೧೮)

ಈಶ್ವರನು ಎರಡು ಪಾದಗಳುಳ್ಳ ಮಾನವರೂಪದ ಪುರಗಳನ್ನು ಉತ್ಪನ್ನಮಾಡಿದನು. ನಾಲ್ಕು ಕಾಲುಗಳುಳ್ಳ ಪಶ್ವಾದಿ ರೂಪದ ಪುರಗಳನ್ನೂ ಉತ್ಪತ್ತಿಮಾಡಿದನು ಮತ್ತು ಪಕ್ಷೀರೂಪವನ್ನೂ ಹೊಂದಿ ಆ ರೂಪದ ಪುರಗಳನ್ನು ಪ್ರವೇಶಿಸಿದನು. ಹೀಗೆ ತನ್ನಿಂದಲೇ ಉತ್ಪನ್ನವಾದ ಸಕಲ ಪುರಗಳನ್ನೂ (ದೇಹಗಳನ್ನೂ ಪ್ರವೇಶಿಸಿದುದರಿಂದಲೂ ಮತ್ತು ಈ ಪುರಗಳಲ್ಲಿ ಶಯನಮಾಡುವುದರಿಂದಲೂ **ಪುರುಷ** ಎಂಬ ಹೆಸರು ಎಂದಿರುತ್ತದೆ. ಈ ಪುರುಷನನ್ನು ಆವರಿಸದಿರುವುದಾಗಲಿ ಅಥವಾ ಆಚ್ಛಾದಮಾಡದಿರುವುದಾಗಲಿ ಯಾವುದೂ ಇಲ್ಲ. ಎಂದರೆ, ಇವನು ಸರ್ವವ್ಯಾಪಿ ಮತ್ತು ಸರ್ವಾಂತರ್ಯಾಮಿಯೆಂದರ್ಥ. ಈ ವಿಷಯವನ್ನೇ ವಿವರಿಸುತ್ತ ಶತಪಥಬ್ರಾಹ್ಮಣದಲ್ಲಿ,

**ಇಮೇ ವೈ ಲೋಕಾಃ ಪೂರಯಮೇವ ಪುರುಷೋ ಯೋಽಯಂ ಪವತೇ ಸೋಽಸ್ಯಾಂ ಪುರಿ ಶೇತೇ ತಸ್ಮಾತ್ಪುರುಷಃ ॥**

(ಶ. ಬ್ರಾ. ೧೩-೬.೨-೧)

ಸಕಲ ಲೋಕಗಳೂ ಕೋಟೆಯ ರೂಪದಂತಿವೆ. ಪುರುಷನು ಇವುಗಳಲ್ಲಿ ವಾಯುವನ್ನು (ಚೈತನ್ಯವನ್ನು) ತುಂಬುತ್ತಾನೆ ಮತ್ತು ಈ ಕೋಟೆಯಂತಿರುವ ಸಕಲ ವಿಶ್ವಗಳಲ್ಲೂ ವ್ಯಾಪಿಸಿ ಸ್ಥಿತನಾಗಿರುವುದರಿಂದ ಇವನಿಗೆ (**ಪುರಿ ಶೇತೇ**) ಪುರುಷನೆಂಬ ಹೆಸರು ಎಂದು ತಿಳಿಸಿದೆ.

ದೇಹವನ್ನು ಆಶ್ರಯಿಸಿರುವ ಮಾನವಪುರುಷನ ಉಪಮಾನದಿಂದ ವಿಶ್ವಾತ್ಮನಾದ ಪರಮಪುರುಷನ ಸ್ವರೂಪವೂ ಮಾನವನಂತೆ ಅಂತರವುಳ್ಳದ್ದು ಮತ್ತು ಉಪಾಧಿಗಳಿಂದ ಕೂಡಿದುದು ಎಂಬ ತಾತ್ಪರ್ಯವಲ್ಲ. ಸಕಲ ವಿಶ್ವವೂ ಈ ಪರಮಪುರುಷನ ದೇಹವು ಮತ್ತು ಇವನ ಸ್ವರೂಪವು ವಿಶ್ವವನ್ನು ಮೀರಿರುತ್ತದೆ. ಆದರೆ ವರ್ಣನವು ಪುರುಷದೇಹದ ವರ್ಣನದಂತೆಯೇ ಇರುತ್ತದೆ. ಹೇಗೆಂದರೆ—

**ಪಂಚ ಸಂಪದ್ಯಂತೇ ಪಾಂಕ್ತೋಽಯಂ ಪುರುಷಃ ಪಂಚಧಾ ವಿಹಿತೋ ಲೋಮಾನಿ ತ್ವಙ್ಮಾಂಸಮಸ್ಥಿಮಜ್ಜಾ ಸ ಯಾವಾನೇವ ಪುರುಷಸ್ತಾವಂತಂ ಯಜಮಾನಂ ಸಂಸ್ಕೃತ್ಯಾಗ್ನೌ ದೇವಯೋನ್ಯಾಂ ಜುಹೋತ್ಯಗ್ನಿರ್ವೈ ದೇವಯೋನಿಃ ಸೋಽಗ್ನೇರ್ದೇವಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ ಊರ್ಧ್ವಃ ಸ್ವರ್ಗಂ ಲೋಕಮೇತಿ ।**

(ಐ. ಬ್ರಾ. ೨-೧೪)

(ಅನ್ಯತಾಹುತಿಯ ಅರ್ಪಣದಿಂದ ಸಕಲ ಸಂಪತ್ತೂ ಲಭಿಸುತ್ತದೆ). ಇದು ಪಂಚವಿಧವಾಗಿರುತ್ತದೆ. ಪುರುಷನೂ ಐದು ವಿಧವಾದ ತತ್ತ್ವಗಳಿಂದ ಕೂಡಿರುತ್ತಾನೆ. ರೋಮ, ಚರ್ಮ, ಮಾಂಸ, ಮೂಳೆ ಮತ್ತು ಕೊಬ್ಬು ಈ ಐದು ತತ್ತ್ವಗಳಿಗನುಸಾರವಾದ ಆಹುತಿಯನ್ನು ಅರ್ಪಿಸುವುದರಿಂದ ದೇವತೆಗಳಿಗೆಲ್ಲ ಉತ್ಪತ್ತಿಸ್ಥಾನವಾದ ಅಗ್ನಿಯಲ್ಲಿ ಅರ್ಪಿಸಿದಂತಾಗುತ್ತದೆ. ಅಗ್ನಿಯ ಸ್ವರೂಪವೂ ಈ ಐದುವಿಧವಾಗಿರುವುದರಿಂದ ಈ ವಿಭಾಗಾತ್ಮಕವಾದ ಅರ್ಪಣದಿಂದ (ಈ ಅಗ್ನಿಯೇ ಪರಮಪುರುಷನ ತೇಜೋರೂಪವಾದ ಪ್ರತಿಬಿಂಬವು). ಈ ಅಗ್ನಿಯೇಅಗ್ನಿಗೆ ತೃಪ್ತಿಯಾಗುತ್ತದೆ. ಪ್ರಜಾಪತಿಯೇ ಪರಮ ಪುರುಷನು, ಹದಿನೇಳು ವಿಭಾಗಾತ್ಮಕವಾದ ದೇಹವನ್ನೊಳಗೊಂಡ ಪುರುಷನೇ ಪ್ರಜಾಪತಿಯು. ಪ್ರಜಾಪತಿ ಮತ್ತು ಪುರುಷನೇ ಅಗ್ನಿರೂಪನು. ಅದು ಹೇಗೆಂದರೆ—

**ಯದ್ವೇವ ಸಪ್ತದಶ । ಸಪ್ತದಶೋ ವೈ ಪುರುಷೋ ದಶ ಪ್ರಾಣಾಶ್ಚತ್ವಾರ್ಯಂಗಾನಿ ಆತ್ಮಾ ಪಂಚದಶೋ ಗ್ರೀವಾಃ ಷೋಡಶ್ಯಃ ಶಿರಃ ಸಪ್ತದಶಂ ಪುರುಷಃ ಪ್ರಜಾಪತಿಃ ಪ್ರಜಾಪತಿರಗ್ನಿ-ರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈನಮೇತತ್ಸಮಿಂಧೇ ॥**

(ಶ. ಬ್ರಾ. ೬-೨-೨-೯)

ಪುರುಷನು ಹದಿನೇಳು ತತ್ತ್ವಗಳನ್ನೊಳಗೊಂಡಿರುತ್ತಾನೆ. ಅವು ಯಾವುವೆಂದರೆ—ಹತ್ತು ಪ್ರಾಣಗಳು. ನಾಲ್ಕು ಅಂಗಗಳು. ಆತ್ಮವೇ (ದೇಹ ?) ಹದಿನೈದನೆಯದು. ಕಂಠವು ಹದಿನಾರನೆಯದು. ಶಿರಸ್ಸು ಹದಿನೇಳನೆಯದು. ಈ ಹದಿನೇಳು ತತ್ತ್ವಗಳನ್ನೊಳಗೊಂಡ ಪುರುಷನೇ ಪ್ರಜಾಪತಿಯು. ಪ್ರಜಾಪತಿಯೇ ಅಗ್ನಿಯು. ಅಗ್ನಿಯ ಪ್ರಮಾಣ ವೆಷ್ಟಿರುವುದೋ ಪ್ರಜಾಪತಿಯ ಪ್ರಮಾಣವೂ ಅಷ್ಟೇ. ಹಾಗಾದರೆ, ವಿಶ್ವಾತ್ಮನಾದ ಈ ಪರಮಪುರುಷನ ದೇಹದ ಸ್ವರೂಪವೇನು ? ಇವನ ಶಿರಸ್ಸಾವುದು ? ಚಕ್ಷುಸ್ಸಾವುದು, ಪ್ರಾಣವು ಯಾವುದು ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವು ಈ ರೀತಿಯಿರುತ್ತದೆ—

**ತಾನ್ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ ವೈಶ್ವಾನರಂ ವಿದ್ವಾಂ-ಸೋಽನ್ನಮತ್ಥ ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾ-ನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ॥**

(ಛಾ, ಉ. ೫-೧೮-೧)

ಈ ವಿಶ್ವಾತ್ಮನು ನಿನಗಿಂತಲೂ ಬೇರೆಯಾದವನು ಎಂದು ತಿಳಿದು ಅನ್ನವನ್ನು ಭುಜಿಸುತ್ತೀರಿ. ಆದರೆ, **ಪ್ರಾದೇಶ** ಮಾತ್ರನಾದ (**ಪ್ರಾದೇಶಮಾತ್ರ** ಎಂಬ ವರ್ಣನೆಯ ವಿವರವನ್ನು **ಅತ್ಯತಿಷ್ಠದ್ದ ಶಾಂಗುಲಂ** ಎಂಬ ಮೊದಲನೆಯ

ಋಕ್ಕಿನ ಪಾದವನ್ನು ವಿವರಿಸುವಾಗ ತಿಳಿಸಲಾಗುತ್ತದೆ) ಈ ವಿಶ್ವಾತ್ಮನನ್ನು ಯಾರು ಆರಾಧಿಸುವರೋ ಅವರು ಸಕಲ ಲೋಕಕ್ಕೂ ಸೇರಿದ ಅನ್ನವನ್ನು ಸಕಲ ಭೂತಗಳಲ್ಲಿಯೂ ಸಕಲ ಆತ್ಮಗಳಲ್ಲೂ ಅಡಗಿರುವ ವಿಶ್ವಾತ್ಮನ ವ್ಯಾಪಕಶಕ್ತಿಯಿಂದಲೇ ಭುಜಿಸುತ್ತಾರೆ.

**ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸತೇಜಾ ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ ॥**

(ಛಾ. ಉ. ೫-೧೮-೨)

ಪ್ರಕಾಶಮಾನವಾದ ದ್ಯುಲೋಕವೇ ವಿಶ್ವಾತ್ಮನ ಶಿರಸ್ಸು. ವಿಶ್ವರೂಪನಾದ ಆದಿತ್ಯನೇ ಚಕ್ಷುಸ್ಸು. ನಾನಾಗತಿಗಳುಳ್ಳ ವಾಯುವೇ ಪ್ರಾಣವು. ವಿಸ್ತೃತಿಯನ್ನು ಹೊಂದಿರುವ ಆಕಾಶವೇ ದೇಹವು. ಉದರವೇ ಸಂಪತ್ತಿನ ಖನಿಯು. ಸಕಲಕ್ಕೂ ಆಧಾರವಾದ ಪೃಥ್ವಿಯೇ ಪಾದವು. ಯಜ್ಞಭೂಮಿಯೇ ಹೃದಯವು. ದರ್ಭೆಗಳೇ ರೋಮಗಳು. ಗಾರ್ಹಪತ್ಯಾಗ್ನಿಯೇ ಹೃದಯವು. ಅನ್ವಾಹಾರ್ಯಪಚನವೇ ಮನಸ್ಸು. ಆಹವನೀಯವೇ ಮುಖವು.

**ಅಣೋರಣೀಯಾನ್ ಮಹತೋ ಮಹೀಯಾನ್** । ಈ ಪರಮ ಪುರುಷನು ಅತ್ಯಂತ ಸೂಕ್ಷ್ಮವಾದ ವಸ್ತುವಿಗಿಂತಲೂ ಸಣ್ಣವನು ಮತ್ತು ಅತ್ಯಂತ ಮಹತ್ತಾದ ವಸ್ತುವಿಗಿಂತಲೂ ದೊಡ್ಡವನು ಎಂಬ ವರ್ಣನೆಯಿರುತ್ತದೆ. **ಮಹತೋ ಮಹೀಯಾನ್** ಎಂಬ ವರ್ಣನೆಗೆ ಅನುಗುಣವಾದ ಉದಾಹರಣಗಳನ್ನು ತೋರಿಸಿ ಯಾವ ರೀತಿ ಈ ಪರಮಾತ್ಮನು ಸಕಲ ವಿಶ್ವವ್ಯಾಪಿಯಾಗಿದ್ದಾನೆಯೆಂದು ತಿಳಿಸಿದೆ. ಇದೇ ರೀತಿ **ಅಣೋರಣೀಯಾನ್** ಎಂಬ ವರ್ಣನವನ್ನು ಕೆಳಗಿನ ಕೆಲವು ಉಪನಿಷದ್ವಾಕ್ಯಗಳು ಸ್ಪಷ್ಟಪಡಿಸುತ್ತದೆ. ಮತ್ತು ಈ ಇಂದ್ರಿಯ ಪ್ರತ್ಯಕ್ಷಕ್ಕೆ ಮೀರಿದ ಮಹತ್ತತ್ತ್ವವು ಅತ್ಯಧಿಕವಾದ ಜ್ಯೋತಿಯಿಂದ ಬೆಳಗುತ್ತಿರುವುದು ಎಂದೂ ವರ್ಣಿತವಾಗಿರುತ್ತದೆ.

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥** (ಕಠ. ೪-೧೨)

ಅಂಗುಷ್ಠಪ್ರಮಾಣದಷ್ಟು ಮಾತ್ರವಿರತಕ್ಕ ಈ ಪರಮಪುರುಷನು ಪ್ರತಿಯೊಂದು ವ್ಯಕ್ತಿಯ ಆತ್ಮನಲ್ಲೂ ಅಂತರ್ಯಾಮಿಯಾಗಿರುತ್ತಾನೆ. ಹಿಂದೆ ಇದ್ದ ಸಕಲ ಭೂತಗಳಿಗೂ ಮುಂದೆ ಸಂಭವಿಸುವ ಸಕಲ ವಸ್ತುವಿಗೂ ಇವನೇ ಪ್ರಭುವಾಗಿರುತ್ತಾನೆ. ಅವನಿಂದ ಯಾರೂ ಜುಗುಪ್ಸಿತರಾಗುವುದಿಲ್ಲ.

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥**

(ಕಠ. ೪-೧೩)

ಅಂಗುಷ್ಠಮಾತ್ರದ ಪ್ರಮಾಣವುಳ್ಳ ಈ ಪರಮಪುರುಷನು ಧೂಮವಿಲ್ಲದೆ ಅತ್ಯಧಿಕವಾದ ಪ್ರಭೆಯಂತಿದ್ದಾನೆ. ಇವನೇ ಸಕಲ ಜಗತ್ತಿಗೂ ಪ್ರಭುವು. ಇಂದಿಗೂ ಮತ್ತು ಮುಂದಿನ ಯುಗಗಳಿಗೂ ಅವನೇ ಅದ್ವಿತೀಯನಾದ ಪ್ರಭುವು.

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ।**
**ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥**

(ಕಠ. ೬-೧೭)

ಅಂಗುಷ್ಠಮಾತ್ರಪ್ರಮಾಣವುಳ್ಳ ಈ ಪುರುಷನು ಸರ್ವದಾ ಜನರ ಹೃದಯದಲ್ಲಿಯೇ ಸ್ಥಾಪಿತನಾಗಿದ್ದಾನೆ. ಜೊಂಡಿನಿಂದ ಹೊರಕ್ಕೆ ಬಾಣವನ್ನು ತೆಗೆಯುವಂತೆ, ದೇಹದಿಂದ ಹೊರಕ್ಕೆ ಈ ಆತ್ಮನು ಬರುವಂತೆ ಮಾಡಬೇಕು ಎಂದರೆ, ಇವನ ದೇಹದ ಕಲ್ಮಷವು ಇವನಿಗೆ ಅಂಟದಂತೆ ಧೈರ್ಯವಾಗಿ ನೋಡಿಕೊಳ್ಳತಕ್ಕದ್ದು. ಶುಭ್ರನೂ, ಶಾಶ್ವತನೂ ಆದ ಈ ಪರಮಾತ್ಮನ ಸ್ವರೂಪವನ್ನರಿಯಬೇಕು.

ಈ ಪರಮಾತ್ಮನು ವೈಯಕ್ತಿಕವಾದ ಜನರ ಹೃದಯದಲ್ಲಿ ಸ್ಥಾಪಿತನಾಗಿರುವುದಲ್ಲದೆ, ಇವನೇ ಸಕಲ ಜ್ಯೋತಿರ್ಮಂಡಲದಲ್ಲೂ ವ್ಯಾಪಿಸಿ ಅತ್ಯಧಿಕವಾಗಿ ಪ್ರಕಾಶಿಸುತ್ತಿದ್ದಾನೆ.

**ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ ॥**

(ಛಾ. ಉ. ೧-೬-೬)

ಜಗಚ್ಚಕ್ಷುವಾದ ಆದಿತ್ಯನಲ್ಲಿ ಅಂತರ್ಗತನಾಗಿರುವ ಪರಮಪುರುಷನಿಗೆ ಶ್ಮಶ್ರುವೂ, ಕೇಶವೂ ಹಿರಣ್ಮಯವಾಗಿಯೇ ಇರುತ್ತದೆ. ಅವನ ನಖದಿಂದ ಹಿಡಿದು ಸಕಲ ಅವಯವೂ ಜ್ಯೋತೀರೂಪವುಳ್ಳದ್ದಾಗಿಯೇ ಇರುತ್ತದೆ. ಅಲ್ಲದೆ ಯಾವುದು ಸತ್ಯವೂ ಶಾಶ್ವತವೂ ಆದ ಬ್ರಹ್ಮರೂಪವುಳ್ಳದ್ದೋ ಅದೇ ಪರಮಪುರುಷ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಯಾವ ಉದಕವು ಪರಮಪುರುಷನಿಗೆ ಅಯನವಾಗಿದ್ದುದರಿಂದಲೇ ಪುರುಷನು **ನಾರಾಯಣ** ಎಂಬ ಹೆಸರಿನಿಂದ ಕರೆಯಲ್ಪಡುವನೋ, ಅದೇ ಉದಕವು **ಸತ್ಯ**ರೂಪಿಯಾದ ಆದಿತತ್ತ್ವಕ್ಕೆ ಮೂಲವು ಮತ್ತು ಆ ತತ್ತ್ವವೇ ಪರಮಪುರುಷ, ಪ್ರಜಾಪತಿ, ನಾರಾಯಣ ಇತ್ಯಾದಿ ನಾಮಧೇಯಗಳಿಂದ ಪ್ರಸಿದ್ಧವಾಗಿದೆ. ಹೇಗೆಂದರೆ—

**ಆಪ ಏವೇದಮಗ್ರ ಆಸುಸ್ತಾ ಆಪಃ ಸತ್ಯಮಸೃಜಂತ ಸತ್ಯಂ ಬ್ರಹ್ಮ ಬ್ರಹ್ಮ ಪ್ರಜಾಪತಿಂ ಪ್ರಜಾಪತಿರ್ದೇವಾಂಸ್ತೇ ದೇವಾಃ ಸತ್ಯಮೇವೋಪಾಸತೇ ತದೇತತ್ತ್ರ್ಯಕ್ಷರಂ ಸತ್ಯಮಿತಿ ಸ ಇತ್ಯೇಕಮಕ್ಷರಂ ತೀತ್ಯೇಕಮಕ್ಷರಂ ಯಮಿತ್ಯೇಕಮಕ್ಷರಂ ಪ್ರಥಮೋತ್ತಮೇ ಅಕ್ಷರೇ ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಃ ಸತ್ಯೇನ ಪರಿಗೃಹೀತಂ ಸತ್ಯಭೂಯಮೇವ ಭವತಿ ನೈವಂ ವಿದ್ವಾಂಸಮನೃತಂ ಹಿನಸ್ತಿ ॥**

(ಬೃ. ಉ. ೫-೫-೧)

ಸೃಷ್ಟಿಗೆ ಪೂರ್ವದಲ್ಲಿ ಉದಕಮಾತ್ರವಿದ್ದಿತು. ಆ ಉದಕದಿಂದ ಸತ್ಯಾತ್ಮಕನಾದ ಬ್ರಹ್ಮನು ಆವಿರ್ಭವಿಸಿ ಆ ಬ್ರಹ್ಮನಿಂದ ಪ್ರಜಾಪತಿಯು ಉತ್ಪನ್ನವಾಯಿತು. ಪ್ರಜಾಪತಿಯಿಂದ ದೇವತೆಗಳು ಉತ್ಪನ್ನರಾದರು. ಅನಂತರ ದೇವತೆಗಳು ಸಕಲ ವಿಶ್ವಕ್ಕೂ ಮೂಲವಾದ **ಸತ್ಯ**ವನ್ನು ಉಪಾಸಿಸಿದರು. ಈ ಸತ್ಯವು ಮೂರು ಅಕ್ಷರಗಳುಳ್ಳದ್ದು. **ಸ, ತ್, ಯ** ಎಂಬವೇ ಆ ಮೂರು ಅಕ್ಷರಗಳು. ಇವುಗಳಲ್ಲಿ **ಸ** ಮತ್ತು **ಯ** ಎಂಬುವು ಶಾಶ್ವತವಾದ ಮತ್ತು ಪಾರಮಾರ್ಥಿಕವಾದ ತತ್ತ್ವವನ್ನು ಪ್ರತಿಬಿಂಬಿಸುತ್ತವೆ. **ತ್** ಎಂಬುದು ಅಶಾಶ್ವತವೂ ಮತ್ತು ಅಪಾರಮಾರ್ಥಿಕವೂ ಆದ ಜಗತ್ತತ್ತ್ವವನ್ನು ಪ್ರತಿ

ಬಿಂಬಿಸುತ್ತದೆ. ಅಶಾಶ್ವತವಾದ ಜಗತ್ತು ತನ್ನ ಎರಡು ಕಡೆಗಳಲ್ಲಿಯೂ ಶಾಶ್ವತವಾದ ನಿತ್ಯವಸ್ತುವಿನಿಂದ ಅನ್ವಿತವಾಗಿದೆ. ಈ ತತ್ತ್ವವನ್ನರಿತವನು ಅನಿತ್ಯ ಮತ್ತು ಅಸತ್ಯಾತ್ಮಕವಾದ ವಸ್ತುವಿನಿಂದ ಬಾಧಿತನಾಗುವುದಿಲ್ಲ.

**ತದ್ಯತ್ತತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಸ್ತಾವೇತಾವನ್ಯೋನ್ಯಸ್ಮಿನ್ಪ್ರತಿಷ್ಠಿತೌ ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ ಪ್ರಾಣೈರಯಮಮುಷ್ಮಿನ್ ಸ ಯದೋತ್ಕ್ರಮಿಷ್ಯನ್ ಭವತಿ ಶುದ್ಧಮೇವೈತನ್ಮಂಡಲಂ ಪಶ್ಯತಿ ನೈನಮೇತೇ ರಶ್ಮಯಃ ಪ್ರತ್ಯಾಯಂತಿ ॥** (ಬೃ. ಉ. ೫-೫-೨)

ದ್ಯುಲೋಕದಲ್ಲಿ ಪ್ರಕಾಶಿಸುವ ಆದಿತ್ಯನೇ ಆ ಸತ್ಯವನ್ನು ಪ್ರತಿಬಿಂಬಿಸುತ್ತಾನೆ. ಆದಿತ್ಯಮಂಡಲಾಂತರ್ಗತನಾದ ಪುರುಷನೂ, ಇಲ್ಲಿ ದಕ್ಷಿಣಭಾಗದ ಅಕ್ಷಿಯಲ್ಲಿ ಪ್ರಕಾಶಿಸುವ ಪುರುಷನೂ ಪರಸ್ಪರ ಒಬ್ಬರನ್ನೊಬ್ಬರು ಆಶ್ರಯಿಸಿದ್ದಾರೆ. ಆ ಪುರುಷನ ರಶ್ಮಿಯಿಂದ ಈ ಪುರುಷನೂ ಇವನ ಪ್ರಾಣದಿಂದ ಆ ಪುರುಷನೂ ಚೈತನ್ಯಯುಕ್ತರಾಗಿದ್ದಾರೆ. ಮರಣಕಾಲದಲ್ಲಿ ಈ ಎರಡು ಅಂಶಗಳೂ ಒಂದೇ ಪುರುಷನಿಗೆ ಸೇರಿದ ತತ್ತ್ವಗಳೆಂಬ ಅರಿವುಂಟಾಗುತ್ತದೆ.

**ಯ ಏಷ ಏತಸ್ಮಿನ್ಮಂಡಲೇ ಪುರುಷಸ್ತಸ್ಯ ಭೂರಿತಿ ಶಿರ ಏಕಂ ಶಿರ ಏಕಮೇತದಕ್ಷರಂ ಭುವ ಇತಿ ಬಾಹೂ ದ್ವೌ ಬಾಹೂ ದ್ವೇ ಏತೇ ಅಕ್ಷರೇ ಸ್ವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹರಿತಿ ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ ।** (ಬೃ. ಉ. ೫-೫-೩)

ಆದಿತ್ಯಮಂಡಲಾಂತರ್ಗತನಾದ ಪುರುಷನ ಶಿರಸ್ಸು **ಭೂಃ** ಎಂಬ ಒಂದು ಅಕ್ಷರನಿರ್ದೇಶಕವಾದ ತತ್ತ್ವ. **ಭುವಃ** ಎಂಬ ಎರಡು ಬಾಹುಗಳು, **ಸ್ವರ್** ಎಂಬುದು ಎರಡು ಅಕ್ಷರಗಳಿಂದ ಕೂಡಿ ಎರಡು ಪಾದಗಳನ್ನು ಪ್ರತಿಬಿಂಬಿಸುತ್ತದೆ. **ಔಪನಿಷತ್ತತ್ತ್ವವು** ಅಹಸ್ಸನ್ನು ಪ್ರತಿಬಿಂಬಿಸುತ್ತದೆ. ಈ ತತ್ತ್ವವನ್ನರಿತವನು ಪಾಪರಹಿತನಾಗುತ್ತಾನೆ. ಇದು ಆದಿತ್ಯಮಂಡಲಾಂತರ್ಗತನಾದ ಪುರುಷನ ಸ್ವರೂಪವರ್ಣನವು. ಅಲ್ಲದೆ—

**ಯೋಽಯಂ ದಕ್ಷಿಣೇಽಕ್ಷನ್ಪುರುಷಸ್ತಸ್ಯ ಭೂರಿತಿ ಶಿರ ಏಕಂ ಶಿರ ಏಕಮೇತದಕ್ಷರಂ ಭುವ ಇತಿ ಬಾಹೂ ದ್ವೌ ಬಾಹೂ ದ್ವೇ ಏತೇ ಅಕ್ಷರೇ ಸ್ವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹಮಿತಿ ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ ॥** (ಬೃ. ಉ ೫-೫-೪)

ದಕ್ಷಿಣಾಕ್ಷಿಯಲ್ಲಿರುವ ಪುರುಷನ ಶಿರಸ್ಸು **ಭೂಃ** ಎಂಬ ಅಕ್ಷರದಿಂದ ಪ್ರತಿಬಿಂಬಿತವಾಗಿದೆ. ಒಂದು ಶಿರಸ್ಸಿನ ಪ್ರತಿನಿಧಿ ಒಂದಕ್ಷರ, **ಭುವಃ** ಎಂಬ ಎರಡಕ್ಷರಗಳು ಎರಡು ಬಾಹುಗಳ ಪ್ರತಿನಿಧಿ **ಸ್ವರ್** ಎಂಬ ಎರಡು ಅಕ್ಷರಗಳು ಎರಡು ಪಾದಗಳನ್ನು ಪ್ರತಿಬಿಂಬಿಸುತ್ತವೆ. **ಉಪನಿಷತ್** ಎಂಬ ರಹಸ್ಯಾತ್ಮಕವಾದ ತತ್ತ್ವವು **ಅಹಂ** ಪ್ರತ್ಯಯವನ್ನು ತಿಳಿಸುತ್ತದೆ ಈ ತತ್ತ್ವವನ್ನರಿತವನು ಪಾಪರಹಿತನಾಗುತ್ತಾನೆ

**ಮನೋಮಯೋಽಯಂ ಪುರುಷೋ ಭಾಃ ಸತ್ಯಸ್ತಸ್ಮಿನ್ನಂತರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂಚ ॥** (ಬೃ ಉ. ೫-೫-೫)

ಹೃದಯಾಂತರಾಳದಲ್ಲಿರುವ ಈ ಪುರುಷನು ಮನೋಮಯನು, ಜ್ಯೋತೀರೂಪನು, ವ್ರೀಹಿರೂಪದಲ್ಲಿಯೂ ಯವಕಣದ ರೂಪದಲ್ಲಿಯೂ ಇರುತ್ತಾನೆ. ಇವನು ಸರ್ವಲೋಕಕ್ಕೂ ಪ್ರಭುವು. ಈ ಸಕಲ ವಿಶ್ವವನ್ನೂ ಆಳುತ್ತಾನೆ. ಸಕಲವೂ ಇವನ ಸಂಕಲ್ಪಾಧೀನವಾಗಿರುತ್ತದೆ. ಇತ್ಯಾದಿಯಾಗಿ ಪರಮಪುರುಷನ ದಿವ್ಯಸ್ವರೂಪವು ವರ್ಣಿತವಾಗಿರುತ್ತದೆ.

ಪ್ರಕೃತದಲ್ಲಿ, ಋಕ್ಸಂಹಿತೆಯ ಈ ಸೂಕ್ತದಲ್ಲಿ ವರ್ಣಿತವಾಗಿರುವ ಪುರುಷನ ಮುಖ್ಯವಾದ ಅಂಶಗಳೇನು ಎಂಬುದನ್ನು ಸ್ಥೂಲವಾಗಿ ಪರಿಶೀಲಿಸಬಹುದು. ಋಕ್ಸಂಹಿತೆಯಲ್ಲಿ ವರ್ಣಿತವೂ ಪ್ರಶಂಸಿತವೂ ಆದ ದೇವತೆಗಳೆಲ್ಲರೂ ಈ ಪರಮಪುರುಷನ ವಿಭೂತಿವಿಶೇಷಗಳೇ ಎಂದು ಹಿಂದೆ ತಿಳಿಸಿದೆ. ಆದರೂ ಸಹ ಈ ಪುರುಷನ ವೈಯಕ್ತಿಕವಾದ ಅಂಶಗಳನ್ನು ಪ್ರತಿಬಿಂಬಿಸುವ ಅಗ್ನ್ಯಾದಿ ದೇವತೆಗಳಲ್ಲಿ ಯಾವಯಾವ ದೇವತೆಯ ಮುಖ್ಯವಾದ ಸ್ವರೂಪಗಳು ಈ ಸೂಕ್ತಕ್ಕೆ ಉದ್ದಿಷ್ಟವಾದ ಪುರುಷನಲ್ಲಿ ವರ್ಣಿತವಾಗಿವೆ ಎಂಬುದನ್ನು ಪರಿಶೀಲಿಸಿದರೆ, ಅಗ್ನಿ, ಸೂರ್ಯ ಮತ್ತು ವಿಷ್ಣು ಈ ಮೂರು ದೇವತೆಗಳ ಸ್ವರೂಪಗಳೆಲ್ಲವೂ ಪುರುಷನಲ್ಲಿ ಪ್ರಕಟಿತವಾಗಿ ಪುರುಷನ ಮಹಾಮಹಿಮೆಯನ್ನು ತಿಳಿಸುತ್ತವೆ ಯೆಂಬುದನ್ನು ಹೇಳಬಹುದು.

೧. ಸಕಲ ಚರಾಚರವಸ್ತುಗಳಿಗೂ ಗರ್ಭರೂಪನು; ಓಷಧಿಗಳಿಗೂ, ಉದಕಗಳಿಗೂ ಪತಿಯು; ಯಜ್ಞಕ್ಕೆ ಮುಖ್ಯ ಪ್ರತಿನಿಧಿ ಇತ್ಯಾದಿಯಾಗಿ ಯಾವ ವಿಶೇಷಗುಣಗಳು ಅಗ್ನಿಯಲ್ಲಿ ಕಂಡುಬರುವುವೋ ಅದೇ ಅಂಶಗಳು ಪುರುಷ ನಲ್ಲೂ ವರ್ಣಿತವಾಗಿವೆ.

೨. ಸಕಲ ಲೋಕಗಳನ್ನೂ ಮೀರಿ ಊರ್ಧ್ವಸ್ಥಾನವನ್ನಾಕ್ರಮಿಸಿ ಪ್ರತಿಷ್ಠಾಪಿತವಾಗಿರುವ ಯಾವ ಮಹಿಮೆಯು ಸೂರ್ಯನಲ್ಲಿರುವುದೋ ಆ ಮಹಿಮೆಯು ಪುರುಷನಲ್ಲೂ ಇರುತ್ತದೆಯೆಂದು ತಿಳಿಸಿದೆ.

೩. ದ್ಯಾವಾಪೃಥಿವಿಗಳು ಮತ್ತು ಅಂತರಿಕ್ಷ ಇತ್ಯಾದಿ ಸಕಲ ಲೋಕಗಳನ್ನೂ ವ್ಯಾಪಿಸುವ ಯಾವ ವಿಷ್ಣುವಿನ ಅಲೌಕಿಕವಾದ ಧರ್ಮವಿರುವುದೋ ಅದೇ ಪುರುಷನ ವಿಶೇಷಧರ್ಮವಾಗಿರುತ್ತದೆ. ಹೇಗೆಂದರೆ—

**ಸಹಸ್ರ** ಎಂಬ ವಿಶೇಷಣಸೂಚಕವಾದ ಪದವು ಅಗ್ನಿಪರವಾಗಿ ಅನೇಕ ಸಂದರ್ಭಗಳಲ್ಲಿ ಪ್ರಯುಕ್ತವಾಗಿರು ತ್ತದೆ. ಉದಾಹರಣೆಗೆ—

**ಸಹಸ್ರಾಕ್ಷೋ ವಿಚರ್ಷಣಿರಗ್ನೀ ರಕ್ಷಾಂಸಿ ಸೇಧತಿ ।**
**ಹೋತಾ ಗೃಣೀತ ಉಕ್ಥ್ಯಃ ॥**

(ಋ. ಸಂ. ೧-೭೯-೧೨)

**ಸಹಸ್ರಾಕ್ಷಃ ಸಹಸ್ರಪಾತ್** ಎಂಬ ವಿಶೇಷಣಗಳು ಪುರುಷನ ಅಸಂಖ್ಯಾಕವಾದ ಚಕ್ಷುಸ್ಸು ಮತ್ತು ವ್ಯಾಪಕವಾದ ಪಾದಗಳನ್ನು ವರ್ಣಿಸುವಂತೆ, ಈ ಋಕ್ಕಿನಲ್ಲಿ ಅಗ್ನಿಯ ಅಸಂಖ್ಯಾಕವಾದ ಜ್ಯೋತಿಃಪ್ರಸರವನ್ನು ತಿಳಿಸಿದೆ. **ತಸ್ಮೈ ಸಹಸ್ರಮಕ್ಷಭಿರ್ವಿ ಚಕ್ಷೇ** (೧೦-೭೯-೫) ಇತ್ಯಾದಿ ಋಕ್ಕುಗಳಲ್ಲಿ ಪ್ರಯುಕ್ತವಾಗಿರುವ ಅಗ್ನಿಪರವಾದ ಈ ವಿಶೇಷಣಗಳು ಅಗ್ನಿರೂಪನಾದ ಪುರುಷನ ವರ್ಣನವೇ ಆಗಿರುತ್ತದೆಂದು ಹೇಳಬಹುದು. ಹೀಗೆಯೇ,

**ಉಕ್ಷಾ ಸಮುದ್ರೋ ಅರುಷಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾ ವಿವೇಶ ।**
**ಮಧ್ಯೇ ದಿವೋ ನಿಹಿತಃ ಪೃಶ್ನಿರಶ್ಮಾ ವಿ ಚಕ್ರಮೇ ರಜಸಸ್ಪಾತ್ಯಂತೌ ॥**

(ಋ. ಸಂ. ೫-೪೭-೩)

ಕಾಮವರ್ಷಕನೂ, ಆಕರ್ಷಕವಾದ ರೂಪವುಳ್ಳವನೂ ಆದ ಸೂರ್ಯನು ಉದಕಕ್ಕೆ ಉತ್ಪಾದಕವಾದ ಅಂತರಿಕ್ಷವನ್ನು ಪ್ರವೇಶಿಸಿದ್ದಾನೆ. ಅನಂತರ ದ್ಯುಲೋಕವನ್ನು ಪ್ರವೇಶಿಸಿ ಸರ್ವತ್ರ ವ್ಯಾಪಿಸಿದ್ದಾನೆ. ದ್ಯುಲೋಕ ಮತ್ತು ಅಂತರಿಕ್ಷ ಲೋಕಗಳನ್ನು ವ್ಯಾಪಿಸಿ ಸರ್ವತ್ರ ಸಂಚರಿಸುತ್ತಾನೆ ಎಂದು ಸೂರ್ಯನ ಮಹಿಮೆಯು ತಿಳಿಸಲ್ಪಡುವಾಗ ಪುರುಷನ ವ್ಯಾಪಕಧರ್ಮವೇ ವರ್ಣಿತವಾಗಿರುತ್ತದೆ. ಅಲ್ಲದೇ—

**ವಿಭ್ರಾಜಞ್ಜ್ಯೋತಿಷಾ ಸ್ವರಗಚ್ಛೋ ರೋಚನಂ ದಿವಃ ।**
**ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ ವಿಶ್ವದೇವ್ಯಾವತಾ ॥**

(ಋ. ಸಂ. ೧೦-೧೭೦-೪)

ಎಲೈ ಆದಿತ್ಯನೇ, ನಿನ್ನ ದಿವ್ಯತೇಜಸ್ಸಿನಿಂದ ನೀನು ಸಕಲ ಜಗತ್ತನ್ನೂ ಬೆಳಗಿಸುತ್ತೀಯೆ. ಅತ್ಯುತ್ತಮವಾದ ದಿವ್ಯ ಲೋಕವನ್ನು ನೀನು ಆಶ್ರಯಿಸಿದ್ದೀಯೆ. ಸಕಲ ಯಜ್ಞಗಳಿಗೂ ಹೇತುವಾದುದೂ, ಸಕಲ ದೇವತೆಗಳಿಗೂ ತೃಪ್ತಿಕರ ವಾದುದೂ ಆದ ನಿನ್ನ ದಿವ್ಯತೇಜಸ್ಸನ್ನು ಪ್ರಸರಿಸಿ ಸಕಲ ಲೋಕಗಳನ್ನೂ ಪುಷ್ಟಿಗೊಳಿಸುತ್ತೀಯೆ ಇತ್ಯಾದಿ ವರ್ಣನವು ಆದಿತ್ಯರೂಪನಾದ ಪರಮೇಶ್ವರನ ವರ್ಣನವೇ ಆಗಿರುತ್ತದೆ.

ಈ ಆದಿತ್ಯಾಂತರ್ಗತನಾದ ಪರಮಪುರುಷನೇ ಈ ಸಕಲ ವ್ಯಾಪಾರಗಳಿಗೂ ಪ್ರೇರಕನು ಮತ್ತು ನಿಯಾಮಕನು, ಪೋಷಕನು ಮತ್ತು ರಕ್ಷಕನು.

**ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ ।**
**ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋಽಸಾವಸೌ ಪುರುಷಃ**
**ಸೋಽಹಮಸ್ಮಿ ॥**

(ಈಶ ೧೬)

ಪ್ರಜಾಪತಿರೂಪನಾದ ಎಲೈ ಆದಿತ್ಯನೇ, ನೀನೇ ಜಗತ್ಪೋಷಕನು. ನೀನೇ ಸಕಲ ಲೋಕಗಳನ್ನೂ ವೀಕ್ಷಿಸುವ ದರ್ಶನಸಾಮರ್ಥ್ಯವುಳ್ಳವನು. ನೀನೇ ಜಗನ್ನಿಯಾಮಕನು. ನಿನ್ನ ರಶ್ಮಿಯನ್ನು ಜಗತ್ಪ್ರಕಾಶನಕ್ಕಾಗಿ ಹರಡು. ನಿನ್ನ ತೇಜಸ್ಸನ್ನು ಪ್ರಸರಿಸು. ನಿನ್ನ ದಿವ್ಯರೂಪವು ನನಗೆ ಗೋಚರವಾಗುತ್ತಿದೆ. ದಿವ್ಯಲೋಕಸ್ಥನಾದ ಪರಮ ಪುರುಷವೇ ನನ್ನ ಹೃದಯಾಂತರಾಳದಲ್ಲೂ ಅಂತರ್ಗತನಾಗಿದ್ದಾನೆ.

ಇತ್ಯಾದಿಯಾಗಿ ಅನೇಕವಿಧದಲ್ಲಿ ಪ್ರಶಂಸಿತನಾಗಿರುವ ಪರಮಪುರುಷನ ದಿವ್ಯಮಹಿಮೆಯನ್ನು ವರ್ಣಿಸಿ ಸ್ತುತಿಸುವುದೇ ಪುರುಷಸೂಕ್ತದ ಮುಖ್ಯ ವಿಷಯವಾಗಿರುತ್ತದೆ. ಈ ಸೂಕ್ತದಲ್ಲಿರುವ ಮಂತ್ರಗಳ ಮುಖ್ಯ ತಾತ್ಪರ್ಯ ವನ್ನು ಯಥಾಮತಿ ವಿವರಿಸಲಾಗುತ್ತದೆ. ಆಧ್ಯಾತ್ಮಿಕತತ್ತ್ವನಿರೂಪಣವಿರುವುದರಿಂದ ಈ ಸಂದರ್ಭದಲ್ಲಿ ಅನೇಕ ಲೋಪದೋಷಗಳು ಸಹಜವಾಗಿರುತ್ತವೆ. ಆದರೂ ಸಹ ಶ್ರುತಿವಾಕ್ಯಗಳನ್ನೇ ಆಧಾರವಾಗಿಟ್ಟುಕೊಂಡು ಮಂತ್ರಗಳ ತಾತ್ಪರ್ಯವನ್ನು ವಿವರಿಸಲಾಗುತ್ತದೆ.

ಈ ಸೂಕ್ತದ ವಿನಿಯೋಗ, ಫಲಶ್ರುತಿ, ಮಹಾತ್ಮ್ಯೆ, ಮೊದಲಾದ ವಿಷಯಗಳಲ್ಲಿ ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ರೀತಿ ಹೇಳಿದಾರೆ—

ಶುಕ್ಲ ಪಕ್ಷೇ ಶುಭೇ ವಾರೇ ಸುನಕ್ಷತ್ರೇ ಸುಗೋಚರೇ ।
ದ್ವಾದಶ್ಯಾಂ ಪುತ್ರಕಾಮಾಯ ಚರುಂ ಕುರ್ವೀತ ವೈಷ್ಣವಂ ॥
ದಂಪತ್ಯೋರುಪವಾಸಃ ಸ್ಯಾದೇಕಾದಶ್ಯಾಂ ಸುರಾಲಯೇ ।
ಋಗ್ಭಿಃ ಷೋಡಶಭಿಃ ಸಮ್ಯಗರ್ಚಯಿತ್ವಾ ಜನಾರ್ದನಂ ।
ಚರುಂ ಪುರುಷಸೂಕ್ತೇನ ಶ್ರಪಯೇತ್ಪುತ್ರಕಾಮ್ಯಯಾ ।
ಪ್ರಾಪ್ನುಯಾದ್ವೈಷ್ಣವಂ ಪುತ್ರಮಚಿರಾತ್ಸಂತತಿಕ್ಷಮಂ ॥

ಒಳ್ಳೆಯ ಪುತ್ರನಾಗಬೇಕೆಂದು ಬಯಸುವ ಪುರುಷನು ತನ್ನ ಪತ್ನಿಯೊಡನೆ ಏಕಾದಶೀ ತಿಥಿಯಲ್ಲಿ ನಿಯಮದಿಂದ ಉಪವಾಸವಿದ್ದು ಶುಕ್ಲಪಕ್ಷದಲ್ಲಿ ಒಳ್ಳೆಯ ವಾರ ಮತ್ತು ನಕ್ಷತ್ರಸಹಿತವಾದ ದ್ವಾದಶೀ ತಿಥಿಯಲ್ಲಿ ಈ ಪುರುಷಸೂಕ್ತದ ಹದಿನಾರು ಋಕ್ಕುಗಳನ್ನು ಪಠಿಸುತ್ತಾ ವಿಷ್ಣುದೇವತೆಯನ್ನುದ್ದೇಶಿಸಿ ಕಲ್ಪೋಕ್ತವಿಧಾನದಿಂದ ಪೂಜಿಸಿ ಅನಂತರ ಹೋಮಮಾಡಿದರೆ ಶೀಘ್ರದಲ್ಲಿಯೇ ಅವನಿಗೆ ಕುಲಾಭಿವೃದ್ಧಿಯಾಗುವ ಪುತ್ರಸಂತಾನವು ಪ್ರಾಪ್ತವಾಗುವುದು.

ತ್ವಾದಶ ದ್ವಾದಶೀಃ ಸಮ್ಯಕ್ ಪಯಸಾ ನಿರ್ವಪೇಚ್ಚರುಂ ।
ಯಃ ಕರೋತಿ ಸಹಸ್ರಂ ಸ್ಯಾದ್ಯಾತಿ ವಿಷ್ಣೋಃ ಪರಂ ಪದಂ ॥

ಈ ರೀತಿ ಹನ್ನೆರಡು ದ್ವಾದಶೀ ದಿನಗಳಲ್ಲಿ ಹಾಲಿನಿಂದ ಸಿದ್ಧಪಡಿಸಿದ ಪರಮಾನ್ನದಿಂದಲೂ ಚರು (ಅನ್ನ) ವಿನಿಂದಲೂ ಸಹಸ್ರಸಂಖ್ಯೆಯಷ್ಟು ಹೋಮಮಾಡುವ ಪುರುಷನು ಮರಣಾನಂತರ ವಿಷ್ಣುವಿನ ಪರಮಪದವೆಂದು ಹೇಳಲ್ಪಡುವ ಉತ್ತಮ ಪದವಿಯನ್ನು ಪಡೆಯುವನು.

ಹುತ್ವಾಗ್ನಿಂ ವಿಧಿವತ್ಸಮ್ಯಗೃಗ್ಭಿಃ ಷೋಡಶಭಿರ್ದ್ವಿಜಃ ।
ಕೃತಾಂಜಲಿಪುಟೋ ಭೂತ್ವಾ ಸ್ತವಂ ತಾಭಿಃ ಪ್ರಯೋಜಯೇತ್ ॥

ದ್ವಿಜನಾದವನು ಅಗ್ನಿಯನ್ನು ವಿಧ್ಯುಕ್ತವಾಗಿ ಪ್ರತಿಷ್ಠಾಪನೆಮಾಡಿ ಈ ಪುರುಷಸೂಕ್ತದ ಹದಿನಾರು ಋಕ್ಕುಗಳಿಂದಲೂ ಹೋಮಮಾಡಿ ಅನಂತರ ಕೈಮುಗಿದುಕೊಂಡು ಆ ಹದಿನಾರು ಮಂತ್ರಗಳನ್ನೇ ಪಠಿಸುತ್ತಾ ಸ್ತೋತ್ರಮಾಡಬೇಕು.

ಕೇಶವಂ ಮಾರ್ಗಶೀರ್ಷೇ ತು ಪೌಷೇ ನಾರಾಯಣಂ ಸ್ಮೃತಂ ।
ಮಾಧವಂ ಮಾಘಮಾಸೇ ತು ಗೋವಿಂದಂ ಫಾಲ್ಗುನೇ ತಥಾ ॥
ಚೈತ್ರೇ ಚೈವ ತಥಾ ವಿಷ್ಣುಂ ವೈಶಾಖೇ ಮಧುಸೂದನಂ ।
ಜ್ಯೇಷ್ಠೇ ತ್ರಿವಿಕ್ರಮಂ ವಿದ್ಯಾದಾಷಾಢೇ ವಾಮನಂ ವಿದುಃ ॥
ಶ್ರಾವಣೇ ಶ್ರೀಧರಂ ವಿದ್ಯಾದ್ಧೃಷೀಕೇಶಂ ತತಃ ಪರೇ ।
ಆಶ್ವಿನೇ ಪದ್ಮನಾಭಂ ತು ದಾಮೋದರಂ ಚ ಕಾರ್ತಿಕೇ ॥
ದ್ವಾದಶೈತಾನಿ ನಾಮಾನಿ ಋಷ್ಯಶೃಂಗೋಽಬ್ರವೀನ್ಮುನಿಃ ।
ಪೂಜಯೇನ್ಮಾಸನಾಮಭಿಃ ಸರ್ವಾನ್ಕಾಮಾನ್ಸಮಶ್ನುತೇ ॥

ಮೇಲೆ ಹೇಳಿದ ಪೂಜಾ ಮತ್ತು ಹೋಮವಿಧಾನಗಳಲ್ಲಿ ಒಂದೊಂದು ಮಾಸದಲ್ಲಿ ವಿಷ್ಣುವಿನ ಒಂದೊಂದು ಮೂರ್ತಿಯ ನಾಮಗಳನ್ನು ಪಠಿಸಿ ಪೂಜಾದಿಗಳನ್ನು ನೆರವೇರಿಸಬೇಕು. ಹೇಗೆಂದರೆ—ಮಾರ್ಗಶೀರ್ಷಮಾಸದಲ್ಲಿ ಕೇಶವ, ಪುಷ್ಯ

ಮಾಸದಲ್ಲಿ ನಾರಾಯಣ, ಮಾಘಮಾಸದಲ್ಲಿ ಮಾಧವ, ಫಾಲ್ಗುನಮಾಸದಲ್ಲಿ ಗೋವಿಂದ, ಚೈತ್ರಮಾಸದಲ್ಲಿ ವಿಷ್ಣು, ವೈಶಾಖಮಾಸದಲ್ಲಿ ಮಧುಸೂದನ, ಜ್ಯೇಷ್ಠಮಾಸದಲ್ಲಿ ತ್ರಿವಿಕ್ರಮ, ಆಷಾಢಮಾಸದಲ್ಲಿ ವಾಮನ, ಶ್ರಾವಣಮಾಸದಲ್ಲಿ ಶ್ರೀಧರ, ಭಾದ್ರಪದಮಾಸದಲ್ಲಿ ಹೃಷೀಕೇಶ, ಆಶ್ವಯುಜಮಾಸದಲ್ಲಿ ಪದ್ಮನಾಭ, ಕಾರ್ತಿಕಮಾಸದಲ್ಲಿ ದಾಮೋದರ ಈ ರೀತಿ ಹನ್ನೆರಡು ಮಾಸಗಳಲ್ಲಿಯೂ ಹನ್ನೆರಡು ವಿಧವಾದ ಬೇರೆ ಬೇರೆ ಮೂರ್ತಿಗಳನ್ನು ಪೂಜಿಸಬೇಕು. ಈ ಕ್ರಮವನ್ನು ಋಷ್ಯಶೃಂಗನೆಂಬ ಋಷಿಯು ಹೇಳಿರುವನು. ಈ ರೀತಿ ವಿಧ್ಯುಕ್ತಕ್ರಮದಿಂದ ಪೂಜಿಸುವ ಪುರುಷನು ಸಕಲ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು.

**ಆಯುಷ್ಮಂತಂ ಸುತಂ ಸೂತೇ ಯಶೋಮೇಧಾಸಮನ್ವಿತಂ ।**
**ಧನವಂತಂ ಪ್ರಜಾವಂತಂ ಧಾರ್ಮಿಕಂ ಸಾತ್ವಿಕಂ ತಥಾ ॥**

ಮೇಲೆ ಹೇಳಿದ ಕ್ರಮಗಳಿಂದ ಪೂಜಾದಿಗಳನ್ನು ಮಾಡುವ ಪುರುಷನು ಒಳ್ಳೆಯ ಪುತ್ರನನ್ನು ಪಡೆಯುವನು. ಆ ಪುತ್ರನು ದೀರ್ಘಾಯುಷ್ಮಂತನಾಗಿಯೂ, ಕೀರ್ತಿ, ಬುದ್ಧಿ, ಧನ, ಪುತ್ರಸಂತತಿ, ಧರ್ಮಪ್ರವೃತ್ತಿ ಇವುಗಳಿಂದ ಕೂಡಿ ಸುಪುತ್ರನೆನಿಸುವನು.

**ಸಮಿಧೋಽಶ್ವತ್ಥವೃಕ್ಷಸ್ಯ ಹುತ್ವಾಗ್ನಿಂ ಜುಹುಯಾತ್ಪುನಃ ।**
**ಉಪಸ್ಥಾನಂ ಹುತಾಶಸ್ಯ ಧ್ಯಾತ್ವಾರ್ಚ್ಯ ಮಧುಸೂದನಂ ॥**

**ಹವಿರ್ಹೋಮಂ ತತಃ ಕುರ್ಯಾತ್ಪ್ರತ್ಯೃಚಂ ವಾಗ್ಯತಃ ಶುಚಿಃ ।**
**ಸೂಕ್ತೇನ ಜುಹುಯಾದಾಜ್ಯಮಾದಾವಂತೇ ಚ ಪೂರ್ವವತ್ ॥**

**ಹವಿಶ್ಶೇಷಂ ನಮಸ್ಕೃತ್ವಾ ನಾರೀ ನಾರಾಯಣಂ ಪತಿಂ ।**
**ಭಕ್ಷಯಿತ್ವಾ ಹವಿಶ್ಶೇಷಂ ಲಬ್ಧಾಶೀಃ ಸಂವಿಶೇತ್ ಕ್ಷಪಾಂ ॥**

**ತತಸ್ತು ಕರ್ಮ ಕೃತ್ವೇದಂ ಕರ್ತವ್ಯಂ ದ್ವಿಜತರ್ಪಣಂ ।**
**ದ್ವಿತೀಯಾ ಸ್ತ್ರೀ ನಿವರ್ತೇತ ಯಾವದ್ಗರ್ಭಂ ನ ವಿಂದತಿ ॥**

**ಅಪುತ್ರಾ ಮೃತಪುತ್ರಾ ವಾ ಯಾ ಚ ಕನ್ಯಾಂ ಪ್ರಸೂಯತೇ ।**
**ಕ್ಷಿಪ್ರಂ ಸಾ ಜನಯೇತ್ಪುತ್ರಮೃಷ್ಯಶೃಂಗೋ ಯಥಾಬ್ರವೀತ್ ॥**

ಈಗ ಹೋಮವಿಧಾನವನ್ನು ವಿವರಿಸಲಾಗುವುದು. ವಿಧ್ಯುಕ್ತವಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಅದರಲ್ಲಿ ಅಶ್ವತ್ಥವೃಕ್ಷದ ಸಮಿತ್ತುಗಳಿಂದ ಹೋಮಮಾಡಬೇಕು. ಹೋಮಾನಂತರ ಮಧುಸೂದನಮೂರ್ತಿಯನ್ನು ಧ್ಯಾನಿಸುತ್ತಾ ಅಗ್ನಿಯನ್ನು ಪ್ರಾರ್ಥಿಸಬೇಕು. ಅನಂತರ ಪುನಃ ಅಗ್ನಿಯಲ್ಲಿ ಹವಿಸ್ಸನ್ನು ಪ್ರತಿಮಂತ್ರದಿಂದಲೂ ಹೋಮಮಾಡಬೇಕು. ಹೋಮಮಾಡುವಾಗ ಶುಚಿರ್ಭೂತನಾಗಿಯೂ, ಹೆಚ್ಚು ಮಾತನಾಡದೆ ಮಂತ್ರಗಳನ್ನು ಮಾತ್ರ ಪಠಿಸುತ್ತಲೂ ಹೋಮಮಾಡಬೇಕು. ಈ ಸೂಕ್ತಮಂತ್ರಗಳಿಂದ ಹೋಮಮಾಡುವಾಗ ಮೊದಲು ಮತ್ತು ಕೊನೆಯಲ್ಲಿ ಆಜ್ಯ (ತುಪ್ಪ)ದಿಂದ ಹೋಮಮಾಡಬೇಕು. ಅನಂತರ ಆ ಪುರುಷನ ಪತ್ನಿಯು, ಹವಿಶ್ಶೇಷವನ್ನೂ ನಾರಾಯಣನನ್ನೂ ತನ್ನ ಪತಿಯನ್ನೂ ನಮಸ್ಕರಿಸಿ ಹವಿಶ್ಶೇಷವನ್ನು ಭಕ್ಷಿಸಿ ಬ್ರಾಹ್ಮಣರಿಂದ ಆಶೀರ್ವಾದವನ್ನು ಪಡೆದು ರಾತ್ರಿಯಲ್ಲಿ ಪತಿಯೊಡನೆ ಸೇರಬೇಕು.

ಬ್ರಾಹ್ಮಣರನ್ನು ಭೋಜನಾದಿಗಳಿಂದ ಸಂತೋಷಗೊಳಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸಬೇಕು. ಪ್ರಥಮದಿವಸದಲ್ಲಿಯೇ ತನ್ನ ಪತ್ನಿಯು ಗರ್ಭವನ್ನು ಧರಿಸದಿದ್ದಲ್ಲಿ ಎರಡನೆಯ ದಿವಸ ಪುರುಷನು ಗರ್ಭಧಾರಣಕ್ಕಾಗಿ ಪ್ರಯತ್ನಿಸಬೇಕು. ಒಂದು ವೇಳೆ ಪ್ರಥಮ ಗರ್ಭದಲ್ಲಿ ಹುಟ್ಟಿದ ಶಿಶುವು ಮೃತವಾದರೂ, ಪುತ್ರಜನನವಾಗದೆ ಪುತ್ರಿಯ ಜನನವಾದರೂ ದ್ವಿತೀಯಗರ್ಭದಲ್ಲಿ ನಿಶ್ಚಯವಾಗಿಯೂ ಪುತ್ರಸಂತಾನವು ಲಭಿಸುವುದು. ಇದನ್ನು ಋಷ್ಯಶೃಂಗಮಹಾಮುನಿಯೇ ಹೇಳಿರುವನು.

**ಅರ್ಚನಂ ಸಂಪ್ರವಕ್ಷ್ಯಾಮಿ ವಿಷ್ಣೋರಮಿತತೇಜಸಃ ।**
**ಯತ್ಕೃತ್ವಾ ಮುನಯಃ ಸರ್ವೇ ಬ್ರಹ್ಮನಿರ್ವಾಣಮಾಪ್ನುಯುಃ ॥**

**ಅಪ್ಸ್ವಗ್ನೌ ಹೃದಯೇ ಸೂರ್ಯೇ ಸ್ಥಂಡಿಲೇ ಪ್ರತಿಮಾಸು ಚ ।**
**ಷಟ್ಸ್ವೇತೇಷು ಹರೇಃ ಸಮ್ಯಗರ್ಚನಂ ಮುನಿಭಿಃ ಸ್ಮೃತಂ ॥**

**ಅಗ್ನೌ ಕ್ರಿಯಾವತಾಂ ದೇವೋ ದಿವಿ ದೇವೋ ಮನೀಷಿಣಾಂ ।**
**ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿಃ ॥**

**ಆಪೋ ಹ್ಯಾಯತನಂ ತಸ್ಯ ತಸ್ಮಾತ್ತಾಸು ಸದಾ ಹರಿಃ ।**
**ತಸ್ಯ ಸರ್ವಗತತ್ವಾಚ್ಚ ಸ್ಥಂಡಿಲೇ ಭಾವಿತಾತ್ಮನಾಂ ॥**

ಈಗ ಮಹಾಮಹಿಮನೂ ತೇಜಸ್ವಿಯೂ ಆದ ವಿಷ್ಣುಮೂರ್ತಿಯ ಪೂಜಾವಿಧಾನವನ್ನು ಹೇಳುವೆನು. ಸಮಸ್ತಋಷಿಗಳೂ ಸಹ ಈ ವಿಷ್ಣುವನ್ನು ಪೂಜಿಸಿ ಅದರಿಂದಲೇ ಬ್ರಹ್ಮಪದವಿಯನ್ನು ಪಡೆದರು. ಈ ವಿಷ್ಣುವನ್ನು ಪೂಜಿಸಬೇಕಾದರೆ—ಉದಕ (ನೀರು) ಅಗ್ನಿ, ಹೃದಯ, ಸೂರ್ಯ, ಸ್ಥಂಡಿಲ (ಮಂಡಲ), ಪ್ರತಿಮೆಗಳು ಎಂಬ ಆರುವಿಧ ವಸ್ತುಗಳಲ್ಲಿ ದೇವತೆಯನ್ನು ಆವಾಹನೆಮಾಡಿ ಪೂಜಿಸಬಹುದು. ಕರ್ಮನಿಷ್ಠರಾದ ಯಾಜ್ಞಿಕರು ಅಗ್ನಿಯಲ್ಲಿ ವಿಷ್ಣುಮೂರ್ತಿಯನ್ನು ಧ್ಯಾನಿಸಿ ಪೂಜಿಸಬಹುದು. ಬುದ್ಧಿವಂತರಾದ ವೇದಾಂತಿಗಳು ಸೂರ್ಯಮಂಡಲದಲ್ಲಿ ಭಗವಂತನನ್ನು ಧ್ಯಾನಮಾಡಿ ಪೂಜಿಸಬಹುದು. ಅಲ್ಪಬುದ್ಧಿಯುಳ್ಳ ಸಾಮಾನ್ಯ ಮನುಷ್ಯರು ಪ್ರತಿಮೆಗಳನ್ನಿಟ್ಟು ಅವುಗಳಲ್ಲಿ ದೇವತೆಯನ್ನು ಆವಾಹನೆಮಾಡಿ ಪೂಜಿಸಬಹುದು. ಯೋಗಿಗಳೂ ತಪಸ್ವಿಗಳೂ ಆದವರು ತಮ್ಮ ಹೃದಯಕಮಲದಲ್ಲಿರುವ ಪರಮಾತ್ಮನನ್ನೇ ಸಾಕ್ಷಾತ್ಕರಿಸಿ ಆರಾಧಿಸಬಹುದು. ವಿಷ್ಣುವಿಗೆ ನೀರೇ (ಕ್ಷೀರಸಮುದ್ರ) ಯಾವಾಗಲೂ ವಾಸಸ್ಥಾನವು. ಆದ್ದರಿಂದ ನೀರಿನಲ್ಲಿ ಯಾವಾಗಲೂ ಪರಮಾತ್ಮನ ಸಾನ್ನಿಧ್ಯವಿರುವುದು. ನಾರಾಯಣಶಬ್ದಕ್ಕೆ ನೀರಿನಲ್ಲಿ ವಾಸಮಾಡುವವನು ಎಂದರ್ಥವು. ಆದ್ದರಿಂದ ಉದಕದಲ್ಲಿಯೂ ವಿಷ್ಣುಮೂರ್ತಿಯನ್ನು ಧ್ಯಾನಿಸಿ ಪೂಜಿಸಬಹುದು. ಪರಮಾತ್ಮನು ಸರ್ವ ವಸ್ತುಗಳಲ್ಲಿಯೂ ಅಂತರ್ಗತನಾಗಿ ವ್ಯಾಪಿಸಿರುವವನೆಂದು ಭಾವಿಸುವವರು ಸ್ಥಂಡಿಲ ಅಥವಾ ಮಂಡಲದಲ್ಲಿ ವಿಷ್ಣುವನ್ನು ಧ್ಯಾನಿಸಿ ಪೂಜಿಸಿ ಧ್ಯಾನಿಸಬಹುದು. ಈ ಆರು ವಿಧಗಳಲ್ಲಿಯೂ ವಿಷ್ಣುವನ್ನು ಪೂಜಿಸಬಹುದೆಂದು ಪ್ರಾಜ್ಞರಾದ ಮುನಿಗಳು ಹೇಳುವರು.

**ದದ್ಯಾತ್ಪುರುಷಸೂಕ್ತೇನ ಯಃ ಪುಷ್ಪಾಣ್ಯಪ ಏವ ವಾ ।**
**ಅರ್ಚಿತಂ ಸ್ಯಾಜ್ಜಗದಿದಂ ತೇನ ಸರ್ವಂ ಚರಾಚರಂ ॥**

ಈ ಪುರುಷಸೂಕ್ತಮಂತ್ರಗಳಿಂದ ಪೂಜಿಸುತ್ತಾ ಪುಷ್ಪಗಳನ್ನೂ, ಉದಕವನ್ನೂ ಇತರ ಪೂಜಾದ್ರವ್ಯಗಳನ್ನೂ ದೇವತೆಗೆ ಅರ್ಪಿಸಬೇಕು. ಹಾಗೆ ಮಾಡಿದರೆ ಚರಾಚರಾತ್ಮಕವಾದ ಸಮಸ್ತ ಜಗತ್ತನ್ನೂ ಪೂಜಿಸಿದಂತಾಗುವುದು.

**ಆನುಷ್ಟುಭಸ್ಯ ಸೂಕ್ತಸ್ಯ ತ್ರಿಷ್ಟುಬಂತಸ್ಯ ದೇವತಾ ।**
**ಪುರುಷೋ ವೈ ಜಗದ್ಬೀಜಮೃಷಿರ್ನಾರಾಯಣಃ ಸ್ಮೃತಃ ॥**

**ನಾರಾಯಣ ಮಹಾಬಾಹೋ ಶೃಣುಷ್ವೈಕಮನಾಃ ಪ್ರಭೋ ।**
**ವಕ್ಷ್ಯೇ ಪುರುಷಸೂಕ್ತಸ್ಯ ವಿಧಾನಂ ತ್ವರ್ಚನಂ ಪ್ರತಿ ॥**

**ಅಗ್ನಿಕಾರ್ಯಂ ಜಪವಿಧಿಂ ಸ್ತೋತ್ರಂ ಚೈವ ಸದಾತ್ಮಕಂ ।**

ಈಪುರುಷಸೂಕ್ತಕ್ಕೆ ನಾರಾಯಣನು ಋಷಿಯು ; ಜಗತ್ತಿಗೆ ಕಾರಣವಾದ ಪರಮಪುರುಷನೇ ದೇವತೆಯು; ಅನುಷ್ಟುಪ್ ಛಂದಸ್ಸು, ಕೊನೆಯ ಋಕ್ಕು ಮಾತ್ರ ತ್ರಿಷ್ಟುಪ್‌ಛಂದಸ್ಸು. ಸಕಲರಿಗೂ ಪ್ರಭುವೂ, ಮಹಾ ಪರಾಕ್ರಮಶಾಲಿಯೂ ಆದ ಎಲೈ ನಾರಾಯಣನೇ, ದಯವಿಟ್ಟು ಒಂದೇ ಮನಸ್ಸಿನಿಂದ ನಾನು ಹೇಳುವುದನ್ನು ಕೇಳು. ಈಗ ನಾನು ಈ ಪುರುಷಸೂಕ್ತದ ಅರ್ಚನವಿಧಾನವನ್ನೂ, ಜಪಕ್ರಮವನ್ನೂ, ಹೋಮವಿಧಾನವನ್ನೂ, ಸ್ತೋತ್ರಪಠನಕ್ರಮವನ್ನೂ ವಿಶದವಾಗಿ ಹೇಳುವೆನು.

**ಸ್ನಾತ್ವಾ ಯಥೋಕ್ತವಿಧಿನಾ ಪ್ರಾಙ್ಮುಖಃ ಶುದ್ಧಮಾನಸಃ ।**
**ಪ್ರಥಮಾಂ ವಿನ್ಯಸೇದ್ವಾಮೇ ದ್ವಿತೀಯಾಂ ದಕ್ಷಿಣೇ ಕರೇ ।**
**ತೃತೀಯಾಂ ವಾಮಪಾದೇ ತು ಚತುರ್ಥೀಂ ದಕ್ಷಿಣೇ ನ್ಯಸೇತ್ ॥**

**ಪಂಚಮೀಂ ವಾಮಜಾನುನಿ ಷಷ್ಠೀಂ ವೈ ದಕ್ಷಿಣೇ ನ್ಯಸೇತ್ ।**
**ಸಪ್ತಮೀಂ ವಾಮಕಟ್ಯಾಂ ತು ಅಷ್ಟಮೀಂ ದಕ್ಷಿಣೇ ಕಟೌ ॥**

**ನವಮೀಂ ನಾಭಿಮಧ್ಯೇ ತು ದಶಮೀಂ ಹೃದಯೇ ನ್ಯಸೇತ್ ।**
**ಏಕಾದಶೀಂ ಕಂಠದೇಶೇ ದ್ವಾದಶೀಂ ವಾಮಬಾಹುಕೇ ॥**

**ತ್ರಯೋದಶೀಂ ದಕ್ಷಿಣೇ ಬಾಹಾವಾಸ್ಯೇ ಚೈವ ಚತುರ್ದಶೀಂ ।**
**ಅಕ್ಷ್ಣೋಃ ಪಂಚದಶೀಂ ಚೈವ ಷೋಡಶೀಂ ಮೂರ್ಧ್ನಿ ವಿನ್ಯಸೇತ್ ॥**

**ಏವಂ ನ್ಯಾಸವಿಧಿಂ ಕೃತ್ವಾ ಪಶ್ಚಾತ್ಪೂಜಾಂ ಸಮಾರಭೇತ್ ॥**

ವಿಧ್ಯುಕ್ತವಾಗಿ ಸ್ನಾನಮಾಡಿದನಂತರ ಶುದ್ಧಮನಸ್ಕನಾಗಿ ಪೂರ್ಖಾಭಿಮುಖವಾಗಿ ಕುಳಿತುಕೊಂಡು ಪೂಜೆಮಾಡುವುದಕ್ಕೆ ಪೂರ್ವಭಾವಿಯಾಗಿ ಪುರುಷಸೂಕ್ತದ ಹದಿನಾರು ಋಕ್ಕುಗಳಿಂದ ನಾನಾ ಅವಯವಗಳಲ್ಲಿ ಕೆಳಗೆ ಹೇಳಿರುವಂತೆ ನ್ಯಾಸಮಾಡಬೇಕು. ಹೇಗೆಂದರೆ—ಎಡಕೈಯಲ್ಲಿ ಮೊದಲನೆಯ ಋಕ್ಕನ್ನೂ, ಬಲಗೈಯಲ್ಲಿ ಎರಡನೆಯ ಋಕ್ಕನ್ನೂ , ಎಡಪಾದದಲ್ಲಿ ಮೂರನೆಯ ಋಕ್ಕನ್ನೂ, ಬಲಪಾದದಲ್ಲಿ ನಾಲ್ಕನೆಯ ಋಕ್ಕನ್ನೂ ವಾಮಜಾನುವಿನಲ್ಲಿ ಐದನೆಯ ಋಕ್ಕನ್ನೂ , ದಕ್ಷಜಾನುವಿನಲ್ಲಿ ಆರನೆಯ ಋಕ್ಕನ್ನೂ , ವಾಮ (ಎಡ) ಕಟಿಭಾಗದಲ್ಲಿ ಏಳನೆಯ ಋಕ್ಕನ್ನೂ, ದಕ್ಷಿಣಕಟಿಯಲ್ಲಿ ಎಂಟನೆಯ ಋಕ್ಕನ್ನೂ, ನಾಭಿಯಲ್ಲಿ ಒಂಭತ್ತನೆಯ ಋಕ್ಕನ್ನೂ, ಹೃದಯಪ್ರದೇಶದಲ್ಲಿ ಹತ್ತನೆಯ

ಋಕ್ಕನ್ನೂ, ಕಂಠಪ್ರದೇಶದಲ್ಲಿ ಹನ್ನೊಂದನೆಯ ಋಕ್ಕನ್ನೂ, ವಾಮಬಾಹುವಿನಲ್ಲಿ ಹನ್ನೆರಡನೆಯ ಋಕ್ಕನ್ನೂ, ದಕ್ಷಿಣಬಾಹುವಿನಲ್ಲಿ ಹದಿಮೂರನೆಯ ಋಕ್ಕನ್ನೂ, ಮುಖದಲ್ಲಿ ಹದಿನಾಲ್ಕನೆಯ ಋಕ್ಕನ್ನೂ, ನೇತ್ರಗಳಲ್ಲಿ ಹದಿನೈದನೆಯ ಋಕ್ಕನ್ನೂ, ಶಿರಸ್ಸಿನಲ್ಲಿ ಹದಿನಾರನೆಯ ಋಕ್ಕನ್ನು ಪಠಿಸಿ ನ್ಯಾಸಮಾಡಬೇಕು. ಈ ರೀತಿ ನ್ಯಾಸವಿಧಿಯನ್ನು ಮಾಡಿ ಅನಂತರ ಪೂಜೆಯನ್ನು ಪ್ರಾರಂಭಿಸಬೇಕು.

**ಯಥಾ ದೇಹೇ ತಥಾ ದೇವೇ ನ್ಯಾಸಂ ಕೃತ್ವಾ ವಿಧಾನತಃ ॥**

**ಮಂತ್ರನ್ಯಾಸಂ ಪುರಾ ಕೃತ್ವಾ ಸ್ವದೇಹೇ ದೇವತಾಸು ಚ ।**
**ಗಾಯತ್ರ್ಯೋಂಕಾರಂ ನ್ಯಸ್ತಾಂಗ್ಯಃ ಪೂಜಯೇದ್ವಿಷ್ಣುಮವ್ಯಯಂ ॥**

ಹಿಂದೆ ಹೇಳಿದಂತೆ ಎಂದರೆ ತನ್ನ ದೇಹದ ಅವಯವಗಳಲ್ಲಿ ನ್ಯಾಸಮಾಡಿದಂತೆ ಉದ್ದಿಷ್ಟದೇವತೆಯ ಅವಯವಗಳಲ್ಲಿಯೂ ವಿಧಿವತ್ತಾಗಿಯೂ ಮಂತ್ರಪೂರ್ವಕವಾಗಿಯೂ ನ್ಯಾಸಮಾಡಬೇಕು. ಮೊದಲು ಮಂತ್ರನ್ಯಾಸವನ್ನು ಮಾಡಿ ಅನಂತರ ಗಾಯತ್ರೀ ಮಂತ್ರದಿಂದಲೂ ಓಂಕಾರ ಎಂದರೆ ಪ್ರಣವಮಂತ್ರದಿಂದಲೂ ನ್ಯಾಸಮಾಡಿ ಅನಂತರ ನಾಶರಹಿತನಾದ ವಿಷ್ಣುವನ್ನು ಪೂಜಿಸಬೇಕು.

**ಉಚ್ಛ್ವಾಸಾವಾಹನೇ ನ್ಯಸ್ತಃ ಸ್ಥಿರಾಯಾಮುದ್ಧವಾರ್ಚನೇ ।**
**ಅಸ್ಥಿರಾಯಾಂ ವಿಕಲ್ಪಃ ಸ್ಯಾತ್ ಸ್ಥಂಡಿಲೇ ತು ಭವೇದ್ದ್ವಯಂ ॥**

**ಉಚ್ಛ್ವಾಸಾವಾಹನೇ ನ್ಯಸ್ತಃ ಸ್ಥಾವರೇ ವೈ ಯಥಾ ತಥಾ ।**
**ಶಾಲಿಗ್ರಾಮಾರ್ಚನೇ ನೈವ ಹ್ಯಾವಾಹನವಿಸರ್ಜನೇ ॥**

**ಶಾಲಿಗ್ರಾಮೇ ತು ಭಗವಾನಾದಿಭೂತೋ ಯಥಾ ಹರಿಃ ।**
**ನ ತಥಾನ್ಯತ್ರ ಸೂರ್ಯಾದೌ ವೈಕುಂಠೇ ವಾಪಿ ಸರ್ವಗಃ ॥**

ದೇವತೆಯನ್ನು ಆವಾಹನೆ ಮಾಡುವಾಗ ಉಚ್ಛ್ವಾಸ (ಪೂರಕ) ಕ್ರಮದಿಂದಲೂ ಅರ್ಚನೆಮಾಡುವಾಗ ಸ್ಥಿರ (ಕುಂಭಕ) ಕ್ರಮದಿಂದಲೂ ವಿಸರ್ಜನೆಮಾಡುವಾಗ ಉದ್ವಾಸನ (ರೇಚಕ) ಕ್ರಮದಿಂದಲೂ ಮಾಡಬೇಕು. ಅಸ್ಥಿರವಾದ ಸ್ಥಂಡಿಲ (ಮಂಡಲ) ಪ್ರತಿಮೆ ಮೊದಲಾದುವುಗಳಲ್ಲಿ ಎರಡು ವಿಧವಾಗಿಯೂ ಮಾಡಬಹುದು. ಸಾಲಿಗ್ರಾಮದಲ್ಲಿ ಯಾವಾಗಲೂ ದೇವತಾಸಾನ್ನಿಧ್ಯವಿರುವುದರಿಂದ ಅದಕ್ಕೆ ಆವಾಹನೆ ವಿಸರ್ಜನೆಗಳ ಆವಶ್ಯಕತೆ ಇರುವುದಿಲ್ಲ. ಆದರೆ ಸೂರ್ಯಾದಿಗಳಲ್ಲಿ ಹಾಗೆ ಮಾಡಲಾಗುವುದಿಲ್ಲ. ಪರಮಪುರುಷನು ವೈಕುಂಠದಲ್ಲಿಯೂ ಇತರ ಸರ್ವಸ್ಥಳಗಳಲ್ಲಿಯೂ ಯಾವಾಗಲೂ ವ್ಯಾಪಿಸಿರುವವನಾದ್ದರಿಂದ ಸೂರ್ಯಾದಿಗಳಲ್ಲಿಯೂ ಪರಮಪುರುಷನು ಇರುವನೆಂದು ಭಾವಿಸಿ ಧ್ಯಾನಮಾಡಬೇಕು.

**ಆದ್ಯಯಾವಾಹಯೇದ್ದೇವಮೃಚಾ ತು ಪುರುಷೋತ್ತಮಂ ।**
**ದ್ವಿತೀಯಯಾಸನಂ ದದ್ಯಾತ್ಪಾದ್ಯಂ ಚೈವ ತೃತೀಯಯಾ ॥**

**ಅರ್ಘ್ಯಂ ಚತುರ್ಥ್ಯಾ ದಾತವ್ಯಂ ಪಂಚಮ್ಯಾಚಮನೀಯಕಂ ।**
**ಷಷ್ಠ್ಯಾ ಸ್ನಾನಂ ಪ್ರಕುರ್ವೀತ ಸಪ್ತಮ್ಯಾ ವಸ್ತ್ರಮೇವ ಚ ॥**

**ಯಜ್ಞೋಪವೀತಮಷ್ಟಮ್ಯಾ ನವಮ್ಯಾ ಚಾನುಲೇಪನಂ ।**
**ಪುಷ್ಪಂ ದಶಮ್ಯಾ ದಾತವ್ಯಮೇಕಾದಶ್ಯಾ ತು ಧೂಪಕಂ ॥**

**ದ್ವಾದಶ್ಯಾ ದೀಪಕಂ ದದ್ಯಾತ್ ತ್ರಯೋದಶ್ಯಾ ನಿವೇದನಂ ।**
**ಚತುರ್ದಶ್ಯಾ ನಮಸ್ಕಾರಂ ಪಂಚದಶ್ಯಾ ಪ್ರದಕ್ಷಿಣಂ ॥**

**ಸ್ನಾನೇ ವಸ್ತ್ರೇ ಚ ನೈವೇದ್ಯೇ ದದ್ಯಾದಾಚಮನೀಯಕಂ ।**
**ದಕ್ಷಿಣಾಂ ತು ಯಥಾಶಕ್ತ್ಯಾ ಷೋಡಶ್ಯಾ ತು ಪ್ರದಾಪಯೇತ್ ॥**

ಪುರುಷಸೂಕ್ತವಿಧಾನದಂತೆ ಷೋಡಶೋಪಚಾರಪೂಜಾವಿಧಿಯನ್ನು ಹೇಳುವರು. ಮೊದಲನೆಯ ಋಕ್ಕಿನಿಂದ (**ಸಹಸ್ರಶೀರ್ಷಾ**) ಆವಾಹನೆಯನ್ನು ಮಾಡಬೇಕು. ಎರಡನೆಯ ಋಕ್ಕಿನಿಂದ (**ಪುರುಷ ಏವೇದಂ**) ಆಸನವನ್ನು ಅರ್ಪಿಸಬೇಕು. ಮೂರನೆಯ ಋಕ್ಕಿನಿಂದ (**ಏತಾವಾನಸ್ಯ**) ಪಾದ್ಯವನ್ನೂ, ನಾಲ್ಕನೆಯ ಋಕ್ಕಿನಿಂದ (**ತ್ರಿಪಾದೂರ್ಧ್ವ**) ಅರ್ಘ್ಯವನ್ನೂ, ಐದನೆಯ ಋಕ್ಕಿನಿಂದ (**ತಸ್ಮಾದ್ವಿರಾಳಜಾಯತ**) ಆಚಮನವನ್ನೂ ಸಮರ್ಪಿಸಬೇಕು. ಆರನೆಯ ಋಕ್ಕಿನಿಂದ (**ಯತ್ಪುರುಷೇಣ**) ಸ್ನಾನವಿಧಿಯನ್ನು ನೆರವೇರಿಸಬೇಕು. ಏಳನೆಯ ಋಕ್ಕಿನಿಂದ (**ತಂ ಯಜ್ಞಂ ಬರ್ಹಿಷಿ**) ವಸ್ತ್ರವನ್ನೂ, ಎಂಟನೆಯ ಋಕ್ಕಿನಿಂದ (**ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ**) ಯಜ್ಞೋಪವೀತವನ್ನು ಸಮರ್ಪಿಸಿ, ಒಂಭತ್ತನೆಯ ಋಕ್ಕಿನಿಂದ (**ತಸ್ಮಾದ್ಯಜ್ಞಾತ್ಸರ್ವಹುತ ಋಚಃ**) ಗಂಧಾನುಲೇಪನಮಾಡಬೇಕು. ಹತ್ತನೇ ಋಕ್ಕಿನಿಂದ (**ತಸ್ಮಾದಶ್ವಾ**) ಪುಷ್ಪವನ್ನುಅರ್ಪಿಸಿ ಪೂಜಿಸಬೇಕು. ಹನ್ನೊಂದನೇ ಋಕ್ಕಿನಿಂದ (**ಯತ್ಪುರುಷಂ ವ್ಯದಧುಃ**) ಧೂಪವನ್ನುಆಘ್ರಾಪಿಸಬೇಕು. ಹನ್ನೆರಡನೇ ಋಕ್ಕಿನಿಂದ (**ಬ್ರಾಹ್ಮಣೋಽಸ್ಯ**) ದೀಪವನ್ನು ಬೆಳಗಬೇಕು. ಹದಿಮೂರನೆಯ ಋಕ್ಕಿನಿಂದ (**ಚಂದ್ರಮಾ ಮನಸೋ**) ನೈವೇದ್ಯವನ್ನು ಅರ್ಪಿಸಬೇಕು. ಹದಿನಾಲ್ಕನೆಯ ಋಕ್ಕಿನಿಂದ (**ನಾಭ್ಯಾ ಆಸೀತ್**) ಪ್ರದಕ್ಷಿಣೆಯನ್ನು ಮಾಡಿ ಹದಿನೈದನೆಯ ಋಕ್ಕಿನಿಂದ (**ಸಪ್ತಾಸ್ಯಾಸನ್ಪರಿಧಯಃ**) ನಮಸ್ಕಾರವನ್ನು ಮಾಡಬೇಕು. ಈ ರೀತಿ ಸ್ನಾನ ವಸ್ತ್ರ ನೈವೇದ್ಯಾಚಮನ ಸಮರ್ಪಣೆ ಮಾಡಿದನಂತರ ಹದಿನಾರನೆಯ ಋಕ್ಕಿನಿಂದ (**ಯಜ್ಞೇನ ಯಜ್ಞಂ**) ಯಥಾಶಕ್ತಿ ದಕ್ಷಿಣೆಯನ್ನು ಅರ್ಪಿಸಬೇಕು. ಇದು ಷೋಡಶೋಪಚಾರಕ್ರಮವು.

**ತತಃ ಪ್ರಾದಕ್ಷಿಣ್ಯಂ ಕೃತ್ವಾ ಜಪನ್ಕುರ್ಯಾತ್ಸಮಾಹಿತಃ ।**
**ಯಥಾಶಕ್ತಿ ಜಪಿತ್ವಾ ತು ಸೂಕ್ತಂ ತಸ್ಯ ನಿವೇದಯೇತ್ ॥**

ಪೂಜಾನಂತರ ದೇವತೆಯನ್ನು ಪ್ರದಕ್ಷಿಣೆಮಾಡಿ ಸಮಾಹಿತ ಮನಸ್ಕನಾಗಿ ಶ್ರದ್ಧೆಯಿಂದ ಸೂಕ್ತಜಪವನ್ನು ಯಥಾಶಕ್ತಿ ಮಾಡಿ ಅದನ್ನು ದೇವನಲ್ಲಿ ನಿವೇದಿಸಬೇಕು. ಇದು ಜಪವಿಧಿಯು,

**ದೇವಸ್ಯ ದಕ್ಷಿಣೇ ಪಾರ್ಶ್ವೇ ಕುಂಡಂ ಸ್ಥಂಡಿಲಮೇವ ವಾ ।**
**ಕಾರಯೇತ್ಪ್ರಥಮೇನೈವ ದ್ವಿತೀಯೇನ ತು ಪ್ರೋಕ್ಷಣಂ ॥**

**ತೃತೀಯೇನಾಗ್ನಿಮಾದಧ್ಯಾಚ್ಚತುರ್ಥೇನ ಸಮಿಂಧನಂ ।**
**ಪಂಚಮೇನಾಜ್ಯಶ್ರಪಣಂ ಚರೋಶ್ಚ ಶ್ರಪಣಂ ತಥಾ ॥**

ಷಷ್ಠೇನೈವಾಗ್ನಿಮಧ್ಯೇ ತು ಕಲ್ಪಯೇತ್ಪಾದ್ಮಮಾಸನಂ ।
ಚಿಂತಯೇದ್ದೇವದೇವೇಶಂ ಕಾಲಾನಲಸಮಪ್ರಭಂ ॥
ತತೋ ಗಂಧಂ ಚ ಪುಷ್ಪಂ ಚ ಧೂಪದೀಪನಿವೇದನಂ ।
ಅನುಜ್ಞಾಪ್ಯ ತತಃ ಕುರ್ಯಾತ್ಸಪ್ತಮ್ಯಾದಿ ಯಥಾಕ್ರಮಂ ॥
ಸಮಿಧಸ್ತಾವತೀಃ ಪೂರ್ವಂ ಜುಹುಯಾದಭಿಘಾರಿತಾಃ ।
ತತೋ ಘೃತೇನ ಜುಹುಯಾಚ್ಚರುಣಾ ಚ ತತಃ ಪುನಃ ॥

ಈಗ ಹೋಮವಿಧಿಯನ್ನು ಹೇಳುವರು—ದೇವತೆಯ ದಕ್ಷಿಣಭಾಗದಲ್ಲಿ ಸ್ಥಂಡಿಲಪೂರ್ವಕವಾಗಿ ಅಗ್ನಿಯನ್ನು ಸ್ಥಾಪಿಸಬೇಕು ಅಥವಾ ಕುಂಡದಲ್ಲಿಯಾಗಲಿ ಅಗ್ನಿಯನ್ನು ಪ್ರತಿಷ್ಠಿಸಬಹುದು. ಈ ಅಗ್ನಿಪ್ರತಿಷ್ಠಾಪನಕಾರ್ಯದಲ್ಲಿ ಅಗ್ನಿಕುಂಡವನ್ನು ಅಥವಾ ಸ್ಥಂಡಿಲವನ್ನು ಮೊದಲನೆಯ ಋಕ್ಕಿನಿಂದ ಎಂದರೆ ಮೊದಲನೆಯ ಋಕ್ಕನ್ನು ಪಠಿಸಿ ನಿರ್ಮಿಸಬೇಕು. ಎರಡನೆಯ ಋಕ್ಕಿನಿಂದ ಅದನ್ನು ಜಲದಿಂದ ಪ್ರೋಕ್ಷಿಸಬೇಕು. ಮೂರನೆಯ ಋಕ್ಕಿನಿಂದ ಅಗ್ನಿಯನ್ನು ಶ್ರೋತ್ರಿಯ ಗೃಹದಿಂದ ತರಬೇಕು. ನಾಲ್ಕನೆಯ ಋಕ್ಕಿನಿಂದ ಅಗ್ನಿಯನ್ನು ಪ್ರಜ್ವಲನಗೊಳಿಸಬೇಕು. ಐದನೆಯ ಋಕ್ಕಿನಿಂದ ಆಜ್ಯವನ್ನೂ ಚರುವನ್ನೂ ಅಗ್ನಿಯ ಸಮೀಪದಲ್ಲಿಟ್ಟು ಸಂಸ್ಕರಿಸಬೇಕು. ಆರನೆಯ ಋಕ್ಕಿನಿಂದ ಅಗ್ನಿಯ ಸಮೀಪದಲ್ಲಿ ಪೂರ್ವಾಭಿಮುಖವಾಗಿ ಪದ್ಮಾಸನವನ್ನು ಹಾಕಿ ಕುಳಿತುಕೊಂಡು ಪ್ರಳಯಕಾಲದ ಸೂರ್ಯನಂತೆ ಅತಿ ಪ್ರಕಾಶಮಾನವಾಗಿ ಬೆಳಗುತ್ತಿರುವ ದೇವದೇವನನ್ನು ಧ್ಯಾನಿಸಬೇಕು. ಅನಂತರ ಗಂಧಪುಷ್ಪಧೂಪದೀಪನೈವೇದ್ಯಾದಿಗಳನ್ನು ಅರ್ಪಿಸಿ ಅಗ್ನಿದೇವನ ಅನುಜ್ಞೆಯನ್ನು ಪಡೆದು ಏಳನೆಯ ಋಕ್ಕಿನಿಂದ ಸಮಿತ್ತುಗಳನ್ನು ತುಪ್ಪದಿಂದ ಅಭಿಘಾರಮಾಡಿ ಅಗ್ನಿಯಲ್ಲಿ ಹೋಮಮಾಡಬೇಕು. ಅನಂತರ ಆಜ್ಯ (ತುಪ್ಪ) ದಿಂದಲೂ, ಅದಾದಬಳಿಕ ಚರು (ಅನ್ನ) ವಿನಿಂದಲೂ ಹೋಮಮಾಡಬೇಕು.

ಏವಂ ಹುತ್ವಾ ತತಶ್ಚೈವ ಅನುಜ್ಞಾಪ್ಯ ಯಥಾಕ್ರಮಂ ।
ಅಗ್ನೇರ್ಭಗವತಸ್ತಸ್ಯ ಸಮೀಪೇ ಸ್ತೋತ್ರಮುಚ್ಚರೇತ್ ॥

ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।
ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥

ದೇವಾನಾಂ ದಾನವಾನಾಂ ಚ ಸಾಮಾನ್ಯಮಧಿದೈವತಂ ।
ಸರ್ವದಾ ಚರಣದ್ವಂದ್ವಂ ವ್ರಜಾಮಿ ಶರಣಂ ತವ ॥

ಏಕಸ್ತ್ವಮಸಿ ಲೋಕಸ್ಯ ಸ್ರಷ್ಟಾ ಸಂಹಾರಕಸ್ತಥಾ ।
ಅವ್ಯಕ್ತಶ್ಚಾನುಮಂತಾ ಚ ಗುಣಮಾಯಾಸಮಾವೃತಃ ॥

ಸಂಸಾರಸಾಗರಂ ಘೋರಮನಂತಂ ಕ್ಲೇಶಭಾಜನಂ ।
ತ್ವಮೇವ ಶರಣಂ ಪ್ರಾಪ್ಯ ನಿಸ್ತರಂತಿ ಮನೀಷಿಣಃ ॥

ನ ತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ ।
ತಥಾಪಿ ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ ॥

ನೈವ ಕಿಂಚಿತ್ಪರೋಕ್ಷಂ ತೇ ಪ್ರತ್ಯಕ್ಷೋಽಸಿ ನ ಕಸ್ಯಚಿತ್ ।
ನೈವ ಕಿಂಚಿದಸಾಧ್ಯಂ ತೇ ನ ಚ ಸಾಧ್ಯೋಽಸಿ ಕಸ್ಯಚಿತ್ ॥

ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮಂ ।
ಯೋಗಿನಾಂ ಪರಮಾ ಸಿದ್ಧಿಃ ಪರಮಂ ತೇ ಪದಂ ವಿದುಃ ॥

ಅಹಂ ಭೀತೋಽಸ್ಮಿ ದೇವೇಶ ಸಂಸಾರೇಽಸ್ಮಿನ್ಮಹಾಭಯೇ ।
ತ್ರಾಹಿ ಮಾಂ ಪುಂಡರೀಕಾಕ್ಷ ನ ಜಾನೇ ಪರಮಂ ಪದಂ ॥

ಕಾಲೇಷ್ವಪಿ ಚ ಸರ್ವೇಷು ದಿಕ್ಷು ಸರ್ವಾಸು ಚಾಚ್ಯುತ ।
ಶರೀರೇ ಜಗತಶ್ಚಾಸಿ ವರ್ತತೇ ಮೇ ಮಹದ್ಭಯಂ ॥

ತ್ವತ್ಪಾದಕಮಲಾದನ್ಯನ್ನ ಮೇ ಜನ್ಮಾಂತರೇಷ್ವಪಿ ।
ವಿಜ್ಞಾನಂ ಯದಿದಂ ಪ್ರಾಪ್ಯ ಯದಿದಂ ಸ್ಥಾನಮರ್ಜಿತಂ ॥

ಜನ್ಮಾಂತರೇಽಪಿ ಮೇ ದೇವ ಮಾ ಭೂದಸ್ಯ ಪರಿಕ್ಷಯಃ
ದುರ್ಗತಾವಪಿ ಜ್ಞಾತಸ್ಯ ತ್ವದ್ಗತೋ ಮೇ ಮನೋರಥಃ ॥

ಯದಿ ನಾಶಂ ನ ವಿಂದೇತ ತಾವತಾಸ್ಮಿ ಕೃತೀ ಸದಾ ।
ಕಾಮಯೇ ವಿಷ್ಣುಪಾದೌ ತು ಸರ್ವಜನ್ಮಸು ಕೇವಲಂ ॥

ಈ ರೀತಿ ಹೋಮಮಾಡಿ ದೇವದೇವನ ಅನುಜ್ಞೆಯನ್ನು ಪಡೆದು ಅಗ್ನಿಯ ಸಮೀಪದಲ್ಲಿ ಕುಳಿತುಕೊಂಡು ಕೆಳಗೆ ಹೇಳುವಂತೆ ಭಗವಂತನನ್ನು ಸ್ತೋತ್ರ ಮಾಡಬೇಕು–ಎಲೈ ಪುಂಡರೀಕಾಕ್ಷ, ಎಲೈ ವಿಶ್ವಭಾವನ, ಎಲೈ ಹೃಷೀಕೇಶ ಎಲೈ ಮಹಾಮಹಿಮನೇ, ನೀನು ದೇವತೆಗಳಿಗೂ ದಾನವರಿಗೂ ದೇವನಾಗಿದ್ದೀಯೆ ಎಂದರೆ ಪ್ರಭುವಾಗಿದ್ದೀಯೆ. ನಾನು ನಿನ್ನ ಪಾದದ್ವಯವನ್ನು ಯಾವಾಗಲೂ ಆಶ್ರಯಿಸುತ್ತೇನೆ. ಈ ಲೋಕದ ಸೃಷ್ಟಿಕರ್ತನೂ, ಸಂಹಾರ ಕರ್ತನೂ ನೀನೊಬ್ಬನೇ. ನೀನು ಅವ್ಯಕ್ತಸ್ವರೂಪನು, ನಿನ್ನನ್ನು ಧ್ಯಾನಮಾಡಲೂ ಸಹ ಸಾಧ್ಯವಿಲ್ಲ. ನೀನು ಸತ್ತ್ವರಜಸ್ತಮೋಗುಣಗಳಿಂದಲೂ, ಮಾಯಾ (ಪ್ರಕೃತಿ)ಯಿಂದಲೂ ಕೂಡಿರುವವನು. ವಿವೇಕಿಗಳಾದವರು ನಿನ್ನ ಮರೆಹೊಕ್ಕೀ ಭಯಂಕರವಾದುದೂ, ದುಃಖಕರವಾದುದೂ ಆದ ಈ ಸಂಸಾರ ಸಾಗರವನ್ನು ದಾಟಲು ಶಕ್ತರಾಗುತ್ತಾರೆ. ನಿನಗೆ ನಿರ್ದಿಷ್ಟವಾದ ಯಾವ ರೂಪವಾಗಲಿ ಆಕಾರವಾಗಲಿ ಇಲ್ಲ. ಆಯುಧವಾಗಲಿ, ಆಶ್ರಯವಾಗಲಿ ನಿನಗೆ ಬೇಗಲ್ಲ. ಆದರೂ ನಿನ್ನ ಭಕ್ತರುಗಳನ್ನು ಅನುಗ್ರಹಿಸುವುದಕ್ಕಾಗಿಯೇ ನೀನು ಪುರುಷಾಕಾರವನ್ನು ತಳೆದು ಪ್ರಕಾಶಿಸುವೆ. ಪ್ರಪಂಚದಲ್ಲಿ ನಿನಗೆ ಕಾಣಿಸದ ಅಥವಾ ತಿಳಿಯದ ವಸ್ತುವು ಯಾವುದೂ ಇಲ್ಲ ಆದರೂ ನೀನು ಮಾತ್ರ ಯಾರಿಗೂ ಪ್ರತ್ಯಕ್ಷಗೋಚರನಲ್ಲ. ನಿನಗೆ ಅಸಾಧ್ಯವಾದ ಕಾರ್ಯವು ಯಾವುದೂ ಇಲ್ಲ. ನಿನ್ನ ಸ್ವರೂಪವನ್ನು ಯಾರೂ ತಿಳಿಯಲಾರರು. ಕಾರ್ಯಗಳಿಗೆಲ್ಲಾ ನೀನೇ ಕಾರಣನಾಗಿರುವೆ. ವಾಕ್ಯಗಳಿಂದ ಸ್ತುತಿಸಲ್ಪಡುವೆ. ಯೋಗಿಗಳಿಗೆ ನೀನೇ ಸಿದ್ಧಿಯು ಎಂದರೆ ನಿರ್ದಿಷ್ಟಸ್ಥಾನವು. ನಿನ್ನ ಸ್ಥಾನವು ಅತಿಶ್ರೇಷ್ಠವಾದ ಪರಮಪದವೆಂದು ಪ್ರಸಿದ್ಧವಾಗಿರುವುದು. ಎಲೈ ದೇವೇಶನೇ, ಭಯಂಕರವಾದ ಈ ಸಂಸಾರಸಾಗರದಲ್ಲಿ ಬಿದ್ದು ಕಷ್ಟಪಡುತ್ತಾ ಇದರಿಂದ ಪಾರಾಗುವ ದಾರಿಯನ್ನು ಕಾಣದೆ ಭಯಗೊಂಡಿದ್ದೇನೆ. ಎಲೈ ಪುಂಡರೀಕಾಕ್ಷನೇ ನನ್ನನ್ನು ಕಾಪಾಡು. ನಿನ್ನ ಪರಮಪದವ

ಯನ್ನು ನಾನು ತಿಳಿಯಲಾರೆನು. ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಪ್ರದೇಶಗಳಲ್ಲಿಯೂ, ನನ್ನ ಶರೀರದಲ್ಲಿಯೂ, ಈ ಜಗತ್ತಿನಲ್ಲಿಯೂ ನನಗೆ ಮಹಾಭಯವುಂಟಾಗುತ್ತದೆ. ಜನ್ಮಜನ್ಮಾಂತರಗಳಲ್ಲಿಯೂ ಕೂಡ ನಿನ್ನ ಪಾದಪದ್ಮವನ್ನು ಬಿಟ್ಟು ನನಗೆ ಬೇರೆ ಗತಿಯಿಲ್ಲ. ನಿನ್ನ ಸಂಬಂಧವಾದ ಜ್ಞಾನವೂ, ನಿನ್ನಲ್ಲಿ ಭಕ್ತಿಯೂ ನನಗೆ ಮುಂದಿನ ಜನ್ಮದಲ್ಲಿಯೂ ಲಭಿಸಲಿ, ಅದರ ನಾಶವು ಯಾವಾಗಲೂ ಆಗದಿರಲಿ. ಎಂತಹ ದುರ್ಗತಿ ಪ್ರಾಪ್ತಿಯಾದರೂ ಎಂದರೆ ಎಂತಹ ಕಷ್ಟಕಾಲ ಬಂದರೂ ನನ್ನ ಮನಸ್ಸು ಯಾವಾಗಲೂ ನಿನ್ನಲ್ಲಿಯೇ ನೆಲಸಿರಲಿ. ಅದು ನಾಶವಾಗದಿರಲಿ, ಹಾಗಿದ್ದರೆ ನಾನು ಧನ್ಯನೆಂದೆಣಿಸುವೆನು. ಸಮಸ್ತ ಜನ್ಮಗಳಲ್ಲಿಯೂ ಸಹ ವಿಷ್ಣುವಿನ ಪಾದಗಳಲ್ಲಿಯೇ ನನ್ನ ಮನಸ್ಸು ನೆಲಸಿರಲೆಂದು ಅಪೇಕ್ಷಿಸುವೆನು.

ಪುರುಷಸ್ಯ ಹರೇಃ ಸೂಕ್ತಂ ಸ್ವರ್ಗ್ಯಂ ಧನ್ಯಂ ಯಶಸ್ಕರಂ ।
ಆತ್ಮಜ್ಞಾನಮಿದಂ ಪುಣ್ಯಂ ಯೋಗಧ್ಯಾನಮಿದಂ ಪರಂ ॥

ಈ ಪುರುಷಸೂಕ್ತವು ಅತಿ ಶ್ರೇಷ್ಠವಾದುದು. ಇದನ್ನು ಪಠಿಸುವ ಪುರುಷನು ಧನ್ಯನು. ಇದು ಕೀರ್ತಿಯನ್ನೂ ಸ್ವರ್ಗಲೋಕವನ್ನೂ ಆತ್ಮಜ್ಞಾನವನ್ನೂ , ಯೋಗಸಿದ್ಧಿಯನ್ನೂ ಗಳಿಸಿಕೊಡುವುದು.

ಫಲಾಹಾರೋ ಭವೇನ್ಮಾಸಂ ಪಶ್ಯತ್ಯಾತ್ಮಾನಮಾತ್ಮನಿ ।
ಫಲಾನಿ ಭುಕ್ತ್ವೋಪವಸೇನ್ಮಾಸಮದ್ಭಿಶ್ಚ ವರ್ತಯೇತ್ ॥

ಅರಣ್ಯೇ ನಿವಸೇನ್ನಿತ್ಯಂ ಜಪನ್ನೇತಮೃಷಿಂ ಸದಾ ।
ತ್ರಿಸ್ತ್ರಿಷವಣಕಾಲೇಷು ಸ್ನಾಯಾದಪ್ಸು ಸಮಾಹಿತಃ ॥

ಆದಿತ್ಯಮುಪತಿಷ್ಠೇತ ಸೂಕ್ತೇನಾನೇನ ನಿತ್ಯಶಃ ।
ಆಜ್ಯಾಹುತೀರನೇನೈವ ಹುತ್ವೈತಂ ಚಿಂತಯೇದೃಷಿಂ ॥

ಊರ್ಧ್ವಂ ಮಾಸಾತ್ಫಲಾಹಾರಸ್ತ್ರಿಭಿರ್ವರ್ಷೈರ್ಜಯೇದ್ದಿವಂ ।
ತದ್ಭಕ್ತಸ್ತನ್ಮನಾಯುಕ್ತೋ ದಶ ವರ್ಷಾಣ್ಯನನ್ಯಭಾಕ್ ।
ಸಾಕ್ಷಾತ್ಪಶ್ಯತಿ ತಂ ದೇವಂ ನಾರಾಯಣಮನಾಮಯಂ ।
ಗ್ರಾಹ್ಯಮತ್ಯಂತಯತ್ನೇನ ಸ್ರಷ್ಟಾರಂ ಜಗತೋಽವ್ಯಯಂ ॥

ಈ ಪುರುಷಸೂಕ್ತವಿಧಾನದಿಂದ ದೇವದೇವನನ್ನು ಉಪಾಸಿಸುವ ಕ್ರಮವನ್ನು ಹೇಳುವರು. ಒಂದು ತಿಂಗಳವರೆಗೂ ಫಲಗಳನ್ನು ಮಾತ್ರ ಭಕ್ಷಿಸುತ್ತಾ ಉಪವಾಸಮಾಡಬೇಕು. ನೀರನ್ನು ಮಾತ್ರ ಪಾನಮಾಡಬಹುದು. ಮತ್ತೇನನ್ನೂ ಸೇವಿಸಕೂಡದು. ಈರೀತಿ ಒಂದು ತಿಂಗಳವರೆಗೆ ಮಾಡಿದರೆ ಆ ಪುರುಷನಿಗೆ ಆತ್ಮಸಾಕ್ಷಾತ್ಕಾರವಾಗುವುದು. ಈ ವಿಧವಾದ ವ್ರತಾಚರಣೆಮಾಡುವಾಗ ಯಾವಾಗಲೂ ಅರಣ್ಯದಲ್ಲಿಯೇ ವಾಸಮಾಡುತ್ತಿರಬೇಕು. ಈ ಸೂಕ್ತದ ಋಷಿಯಾದ ನಾರಾಯಣನನ್ನು ಯಾವಾಗಲೂ ಧ್ಯಾನಿಸುತ್ತಿರಬೇಕು. ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರು ಕಾಲಗಳಲ್ಲಿಯೂ ನದ್ಯಾದಿಗಳಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಈ ಪುರುಷಸೂಕ್ತವನ್ನು ಪಠಿಸುತ್ತಾ ಆದಿತ್ಯನನ್ನು ಪ್ರಾರ್ಥಿಸಬೇಕು (ಉಪಾಸಿಸಬೇಕು). ಸಂಸ್ಕೃತಾಗ್ನಿಯಲ್ಲಿ ಈ ಸೂಕ್ತದ ಮಂತ್ರಗಳ ಪಠನಪೂರ್ವಕ

ವಾಗಿ ನಾರಾಯಣನನ್ನು ಧ್ಯಾನಿಸುತ್ತಾ ಆಜ್ಯಾಹುತಿಗಳನ್ನು ಹೋಮಮಾಡಬೇಕು. ಈರೀತಿ ಪ್ರತಿದಿನವೂ ಮಾಡುತ್ತಿರಬೇಕು. ಒಂದು ತಿಂಗಳು ಕಳೆದನಂತರ ಫಲಾಹಾರಮಾಡಬೇಕು. ಈರೀತಿ ಮೂರುವರ್ಷಗಳವರೆಗೆ ಮಾಡುತ್ತಿದ್ದರೆ ಆ ಪುರುಷನಿಗೆ ಸ್ವರ್ಗಲೋಕವೂ ಕರಗತವಾಗುವುದು. ಈ ಕ್ರಮದಿಂದ ದೇವದೇವನನ್ನಲ್ಲಿಯೇ ಮನಸ್ಸನ್ನು ಇರಿಸಿ ಹತ್ತುವರ್ಷಗಳವರೆಗೂ ಉಪಾಸನೆಮಾಡಿದರೆ ಸಾಕ್ಷಾನ್ನಾರಾಯಣನೇ ಪ್ರತ್ಯಕ್ಷನಾಗುವನು. ಜಗತ್ತನ್ನು ಸೃಷ್ಟಿಸುವವನೂ, ನಾಶರಹಿತನೂ, ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವನೂ ಆದ ನಾರಾಯಣನನ್ನು ಪ್ರಯತ್ನಪೂರ್ವಕವಾಗಿ ಉಪಾಸಿಸಬೇಕು.

**ಗೃಹಸ್ಥಧರ್ಮೇ ವರ್ತೇತ ನ್ಯಾಯಕ್ಲೃಪ್ತಃ ಶುಚಿವ್ರತಃ ।**
**ಏತಂ ದೇವಂ ಚಿಂತಯೇತ ನಾರಾಯಣಮನಾಮಯಂ ॥**

**ಅರ್ಧರಾತ್ರೇ ತ್ಯಕ್ತನಿದ್ರ ಉತ್ಥಾಯ ಶುಚಿರ್ವಾಗ್ಯತಃ ॥**

**ಸಂಪ್ರಸುಪ್ತೇಷು ಭೂತೇಷು ಯೋಗಂ ಯುಂಜೀತ ಯೋಗವಿತ್ ।**
**ಋಜ್ವಾಸೀನಃ ಸಮೇ ದೇಶೇ ನಿವಾತೇ ಶಬ್ದವರ್ಜಿತೇ ।**
**ಸವ್ಯಂ ಪಾದ್ಮಂ ದಕ್ಷಿಣಸ್ಯ ಜಾನುನಿ ಶ್ಲೇಷಯೇತ್ತತಃ ॥**

**ಸಂಹೃತ್ಯ ದಕ್ಷಿಣಂ ಪಾದ್ಮಂ ಸವ್ಯೇ ಜಾನುನಿ ಯುಚ್ಛತಿ ॥**
**ಬ್ರಹ್ಮಾಂಜಲಿಕೃತಃ ಸ್ವಸ್ಥೋ ಯೋಗಸಂಮೀಲಿತೇಕ್ಷಣಃ ॥**

**ಓಮಿತ್ಯುಕ್ತ್ವಾ ಸ್ವಂ ಹೃದಯಂ ಚಿಂತಯೇದವಿಶಂಕಿತಃ ।**
**ತತ್ರಾತ್ಮಾನಂ ಸಮಾದಧ್ಯಾದಿಂದ್ರಿಯಾಣಿ ಮನಸ್ತಥಾ ॥**

**ನ ಚೇದ್ಬುಧ್ಯೇತ ಕಿಂಚಾನ್ಯನ್ನ ಪಶ್ಯೇಚ್ಛೃಣುಯಾನ್ನಚ ।**
**ನ ಮನಸ್ಯೇದ್ಯದಾ ಯೋಗಂ ತದಾ ಪ್ರಾಪ್ತಃ ಸ ಉಚ್ಯತೇ ॥**

**ಹೃದ್ಯೇತವ್ಯೃಷಿಮಭ್ಯಸೇತ್ಪಶ್ಯನ್ನಿವ ಯಥಾಶ್ರುತಿ ।**

ಗೃಹಸ್ಥಾಶ್ರಮಿಯಾದ ಪುರುಷನು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಶ್ರೇಷ್ಠನಾದ ನಾರಾಯಣನನ್ನುಧ್ಯಾನಿಸಬೇಕು. ಅರ್ಧರಾತ್ರಿಯ ಸಮಯದಲ್ಲಿ ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ ತಾನು ನಿದ್ರೆಯನ್ನು ಬಿಟ್ಟು ಹಾಸಿಗೆಯಿಂದೆದ್ದು ಶುಚಿರ್ಭೂತನಾಗಿ ಯೋಗಾಭ್ಯಾಸವನ್ನು ಮಾಡಬೇಕು. ಶುಚಿಯಾಗಿಯೂ, ಹಳ್ಳತಿಟ್ಟುಗಳಿಲ್ಲದೆ ಸಮನಾಗಿಯೂ, ಜನರ ಗಲಾಟೆಗಳು ಮೊದಲಾದ ಶಬ್ದರಹಿತವಾಗಿಯೂ ಇರುವ ನಿರ್ಜನಪ್ರದೇಶದಲ್ಲಿ ಸುಖಾಸೀನನಾಗಿ ಕುಳಿತು ಯೋಗದಲ್ಲಿ ನಿರತನಾಗಿರಬೇಕು. ಎಡಗಾಲಿನಮೇಲೆ ಬಲಗಾಲನ್ನು ಮಡಿಸಿ ಜಾನುಸಂಧಿಯಿಲ್ಲಿ ಸೇರಿಸಿ ಅದರಂತೆ ಬಲಗಾಲನ್ನು ಮಡಿಸಿ ಎಡಗಾಲಿನ ಜಾನುಸಂಧಿಯಲ್ಲಿ ಸೇರಿಸಿ ಎಂದರೆ ಪದ್ಮಾಸನಾಸೀನನಾಗಿ ಕುಳಿತು ಅಂಜಲಿಬದ್ಧನಾಗಿ ಮನಸ್ಸಿನಲ್ಲಿ ಯಾವ ಚಿಂತೆಯನ್ನೂ ಮಾಡದೆ ದೃಷ್ಟಿಯನ್ನು ನಾಸಿಕಾಗ್ರ ಅಥವಾ ಭ್ರೂಮಧ್ಯಪ್ರದೇಶದಲ್ಲಿ ನಿಲ್ಲಿಸಿ ಓಂ ಎಂಬ ಪ್ರಣವಮಂತ್ರವನ್ನೂ ಜಪಿಸುತ್ತಾ ತನ್ನ ಹೃದಯಕಮಲದಲ್ಲಿರುವ ಆತ್ಮನನ್ನು ಧ್ಯಾನಿಸಬೇಕು. ಇಂದ್ರಿಯಗಳನ್ನೂ, ಮನಸ್ಸನ್ನೂ ನಿಯಮನಮಾಡಬೇಕು ಎಂದರೆ ಅವುಗಳ ಬಹಿರ್ವ್ಯಾಪಾರವನ್ನೂ ನಿಲ್ಲಿಸಬೇಕು. ಇತರ

ವಸ್ತುಗಳಲ್ಲಿ ದೃಷ್ಟಿಯನ್ನಿಡಕೂಡದು, ಕಿವಿಗಳಿಂದ ಯಾವ ಶಬ್ದವನ್ನೂ ಕೇಳಕೂಡದು, ಮನಸ್ಸಿನಲ್ಲಿ ತಾನು ಮಾಡುತ್ತಿರುವ ಧ್ಯಾನವನ್ನು ಬಿಟ್ಟು ಬೇರೆ ವಿಷಯಗಳಕಡೆ ಗಮನವಿಡಕೂಡದು. ಹೀಗೆ ಮಾಡಿದರೆ ಯೋಗವು ಸಿದ್ಧಿಸುವುದು. ತಾನು ಕೇಳಿರುವಂತೆಯೂ, ನೋಡಿರುವಂತೆಯೂ ತನ್ನ ಹೃದಯದಲ್ಲಿ ಸೂಕ್ತದ ಋಷಿಯಾದ ನಾರಾಯಣನನ್ನು ಚಿಂತಿಸಬೇಕು.

ಪ್ರಾಣಾನಾಯಮ್ಯ ಚಾಸೀನೋ ಯಾವತ್ತಂ ಚಿಂತಯೇದೃಷಿಂ |
ಉಚ್ಛ್ವಸಿಷ್ಯನ್ನಧೋ ನಾಭಿಂ ಗಮಯಿತ್ವಾ ಮನಸ್ತಥಾ |
ಉಚ್ಛ್ವಸೇದೇವಮಸಕೃತ್ತನ್ಮನಾ ಯೋಗಮುನ್ನಯೇತ್

ಏವಂ ಹಿ ಯುಂಜನ್ನಾವಾನ್ಯಂ ನ ಪಶ್ಯೇಚ್ಛೃಣುಯಾನ್ನ ಚ |
ತದಾ ಶನೈರ್ನಯೇಚ್ಚೇತೋ ಹೃದಯಾದೂರ್ಧ್ವಮೇವ ತು |
ಸಮೌ ತು ಜತ್ರೂ ಚಾಸ್ಯಂ ಚ ನಾಸಿಕಾನಯನೇ ಭ್ರುವೌ |
ಭ್ರುವೋರ್ಮಧ್ಯೇ ಪರಂ ಸ್ಥಾನಂ ತತ್ರೈತದ್ಧಾರಯೇತ್ಸ್ಥಿರಂ ||
ಲಲಾಟದೇಶೇ ಧಾರ್ಯಾಥ ಮೂರ್ಧಾನಂ ಗಮಯೇತ್ತತಃ ||
ಉಚ್ಛ್ವಸಂಶ್ಚ ಯಥಾಕಾಲಂ ನಾಭಿಂ ಗತ್ವೋಚ್ಛ್ವಸೇತ್ಪುನಃ ||
ಏತತ್ಪರಂ ಸ್ಥಾನಮುಕ್ತಂ ಬ್ರಹ್ಮಣಃ ಪರಮಾತ್ಮನಃ |
ಏವಂ ಯುಕ್ತೋ ಮಹಾತ್ಮಾನಮಾತ್ಮಾನಂ ಪ್ರತಿಪದ್ಯತೇ ||

ಮೊದಲು ಆಸನದಲ್ಲಿ ಸುಖಾಸೀನನಾಗಿ ಋಷಿಯಾದ ನಾರಾಯಣನನ್ನು ಧ್ಯಾನಿಸುತ್ತಾ ಪ್ರಾಣಾಯಾಮವನ್ನು ಮಾಡಬೇಕು. ಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಂಡು ನಾಭಿಯಿಂದ ಕೆಳಭಾಗದವರೆಗೂ ವ್ಯಾಪಿಸುವಂತೆ ಉಚ್ಛ್ವಾಸನಿಃಶ್ವಾಸಗಳಿಂದ ಪ್ರಾಣವಾಯುವನ್ನು ನಿಯಮನಮಾಡಬೇಕು ಎಂದರೆ ಪ್ರಾಣಾಯಾಮಕ್ರಮದಂತೆ ಕ್ಲೃಪ್ತಮಾತ್ರೆಗಳ ಕಾಲ ರೇಚಕ ಪೂರಕ ಕುಂಭಕ ಎಂಬ ಉಚ್ಛ್ವಾಸ, ನಿಃಶ್ವಾಸ, ಕುಂಭಕ (ವಾಯುವನ್ನು ಹೃದಯದಲ್ಲಿ ತಡೆದು ನಿಲ್ಲಿಸುವುದು) ಇತ್ಯಾದಿಗಳನ್ನು ಗುರೂಪದೇಶದಂತೆ ಮಾಡಬೇಕು. ಆ ಕಾಲದಲ್ಲಿ ಇತರ ವಿಷಯಗಳಲ್ಲಿ ಮನಸ್ಸನ್ನಿಡಕೂಡದು. ಯಾವುದನ್ನೂ ನೋಡಕೂಡದು, ಏನನ್ನೂ ಕೇಳಬಾರದು. ಹೀಗೆ ಮಾಡುತ್ತಾ ತನ್ನ ಚಿತ್ತವನ್ನು ಮೆಲ್ಲಮೆಲ್ಲನೆ ಹೃದಯದಿಂದ ಮೇಲಕ್ಕೆ ತಂದು ದೃಷ್ಟಿಯನ್ನು ನಾಸಿಕಾಗ್ರದಲ್ಲಿ ಅಥವಾ ಭ್ರೂ (ಹುಬ್ಬುಗಳು) ಮಧ್ಯಪ್ರದೇಶದಲ್ಲಿ ಸ್ಥಿರವಾಗಿ ನಿಲ್ಲಿಸಬೇಕು. ಅನಂತರ ಲಲಾಟ, ಶಿರಸ್ಸು ಇವುಗಳಲ್ಲಿ ಕ್ರಮವಾಗಿ ಧಾರಣಮಾಡಬೇಕು. ಉಚ್ಛ್ವಾಸನಿಃಶ್ವಾಸಗಳಲ್ಲಿ ಕ್ರಮವಿರಬೇಕು. ಮೂರ್ಧಪ್ರದೇಶ ಎಂದರೆ ನೆತ್ತಿಯಮೇಲೆ ಇರುವ ಸ್ಥಾನವು ಬ್ರಹ್ಮಸ್ಥಾನ (ಬ್ರಹ್ಮರಂಧ್ರ) ವೆಂದು ಹೇಳಲ್ಪಡುವುದು. ಯೋಗಾಭ್ಯಾಸದಿಂದ ಚಿತ್ತವನ್ನು ಕ್ರಮಕ್ರಮವಾಗಿ ತಂದು ಆ ಬ್ರಹ್ಮಸ್ಥಾನದಲ್ಲಿ ನಿಲ್ಲಿಸಿದರೆ ಯೋಗಸಿದ್ಧಿಯಾಗಿ ಆತ್ಮಸಾಕ್ಷಾತ್ಕಾರವಾಗುವುದು.

ಯದಿ ಸ್ಯಾತ್ಸುಕೃತೀ ಶುದ್ಧೋ ಯದಿ ವಾ ಪಾಪಕೃತ್ತಮಃ |
ಉಪಲಭ್ಯ ಪರಂ ಬ್ರಹ್ಮ ಗತಿಂ ಜ್ಞಾತ್ವಾ ಭವೇಚ್ಛುಚಿಃ ||
ಸರ್ವಪಾಪಾನುಬದ್ಧಶ್ಚೇತ್ ಬುಧ್ವೈತತ್ಪ್ರಯತೋ ಜಪೇತ್ |
ಅಭಿಜಿಜ್ಞಾಸನಾದೇವ ಗಚ್ಛೇತ ಪರಮಾಂ ಗತಿಂ ||

ಈರೀತಿ ಯೋಗಸಾಧನೆ ಮಾಡುವ ಪುರುಷನು ಒಳ್ಳೆಯ ಕಾರ್ಯವನ್ನು ಮಾಡುತ್ತಿರುವ ಪುಣ್ಯವಂತನಾಗಿರಲಿ ಅಥವಾ ಪಾಪಗಳನ್ನು ಆಚರಿಸುತ್ತಿರುವ ಪಾಪಾತ್ಮನಾಗಿರಲಿ ಬ್ರಹ್ಮಸಾಕ್ಷಾತ್ಕಾರವನ್ನು ಸಾಧಿಸಿದ್ದೇ ಆದರೆ ಅವನು ಶುದ್ಧನೂ ಸರ್ವಪಾಪವಿನಿರ್ಮುಕ್ತನೂ ಆಗುವನು. ಆದ್ದರಿಂದ ವಿವೇಕಿಯಾದವನು ಈ ವಿಧವಾಗಿ ಮಂತ್ರಜಪವನ್ನು ಮಾಡಿ ಯೋಗಾದಿಗಳಿಂದ ಪಾಪರಹಿತನಾಗಿ ಉತ್ತಮವಾದ ಗತಿಯನ್ನು ಪಡೆಯಬೇಕು.

**ಧಾರಣಾ ತು ಪೃಥಕ್ಕಾರ್ಯಾ ಧರ್ಮೇಣಾನೇನ ನಿತ್ಯಶಃ ।**
**ಆದಿತ್ಯೇಽಗ್ನೌ ಚಂದ್ರಮಸಿ ವೃಕ್ಷಾಗ್ರೇಷು ಚ ಧಾರಯೇತ್ ॥**

**ಪರ್ವತಾಗ್ರೇ ಸಮುದ್ರೇ ವಾ ಯತ್ರ ವಾಪಿ ಮನೋ ರಮೇತ್ ।**
**ನ ತ್ವೇವ ವಿಷಯಾನ್ಪ್ರಾಪ್ಯ ಧಾರಯೀತ ಕದಾಚನ ।**
**ಬಹ್ವತ್ರ ದುಃಖಂ ಜಾನೀಯಾತ್ಪ್ರಧ್ವಂಸೇ ಧಾರಣಾಕೃತೇ ।**

ಯೋಗಾಭ್ಯಾಸಕ್ರಮದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಎಂಟು ಅಂಗಗಳಿರುವವು. ಇವುಗಳಲ್ಲಿ ಮೊದಲನೇ ಐದು ಬಾಹ್ಯಾಂಗಗಳೆಂದೂ ಕೊನೆಯ ಮೂರು ಅಂತರಂಗಗಳೆಂದೂ ಪ್ರಸಿದ್ಧಿಯು. ಇಲ್ಲಿ ಈ ಎಂಟು ಅಂಗಗಳ ಸ್ವರೂಪವನ್ನೆಲ್ಲಾ ವಿವರಿಸುವುದು ಅಪ್ರಕೃತ. ಧಾರಣಾ ಎಂಬ ವಿಷಯವನ್ನು ಮಾತ್ರ ಇಲ್ಲಿ ಹೇಳಿರುವುದರಿಂದ ಅದನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವು. ಒಂದು ವಸ್ತುವಿನ ವಿಷಯವನ್ನು ಧ್ಯಾನಿಸುವಾಗ ಆ ವಸ್ತುವನ್ನೇ ಚಿಂತಿಸುತ್ತಾ ಅದರಲ್ಲಿಯೇ ಮನಸ್ಸನ್ನು ನೆಲಸುವಂತೆ ಮಾಡುವುದೇ ಧಾರಣವೆನಿಸುವುದು. ಧಾರಣವೆಂದರೆ ಇತರ ವಿಷಯಗಳಲ್ಲಿ ಮನಸ್ಸು ಚಲಿಸದಂತೆ ನಿರ್ದಿಷ್ಟ ವಸ್ತುವಿನಲ್ಲಿ ಮಾತ್ರ ಮನಸ್ಸು ಏಕಾಗ್ರತೆಯಿಂದ ನೆಲೆಸಿರುವಂತೆ ಮಾಡುವುದು. ಮನಸ್ಸು ಚಂಚಲವಾದ್ದರಿಂದಲೂ, ಜಾಗ್ರದವಸ್ಥೆಯಲ್ಲಿ ಒಂದು ಕ್ಷಣವೂ ಸಹ ಕೆಲಸಮಾಡದೆ ಮನಸ್ಸುಇರುವುದಿಲ್ಲವಾದ್ದರಿಂದಲೂ ಮನಸ್ಸನ್ನುಒಂದೇ ವಿಷಯದಲ್ಲಿ ಸ್ಥಿರವಾಗಿ ನಿಲ್ಲಿಸುವುದು ಬಹಳ ಕಷ್ಟಸಾಧ್ಯವು. ಇದು ಅನೇಕಕಾಲ ಅಭ್ಯಾಸ ಮಾಡುವುದರಿಂದ ಮಾತ್ರ ಸಿದ್ಧಿಸುವುದು. ಒಂದು ವಿಷಯವನ್ನು ಕುರಿತು ಚಿಂತಿಸುವಾಗ ಆ ವಸ್ತುವು ಅಥವಾ ವಿಷಯವು ಒಂದಾವರ್ತಿಯಾದರೂ ಅನುಭವವೇದ್ಯವಾಗಿರಬೇಕು. ಎಂದರೆ, ಸಮುದ್ರವನ್ನು ಧ್ಯಾನಿಸುವಾಗ ಸಮುದ್ರವನ್ನು ಒಂದಾವರ್ತಿಯಾದರೂ ನೋಡಿರಬೇಕು. ಹಾಗೆ ನೋಡಿಲ್ಲದಿದ್ದರೆ ಅದರ ವಿಷಯವನ್ನು ಸಂಪೂರ್ಣವಾಗಿ ಧ್ಯಾನಿಸುವುದಕ್ಕಾಗುವುದಿಲ್ಲ. ಆದ್ದರಿಂದಲೇ ನಾವು ಎಂದೂ ನೋಡಿಲ್ಲದ ದೇವತೆಗಳನ್ನು ಧ್ಯಾನಿಸುವುದು ಪ್ರಾರಂಭದೆಶೆಯಲ್ಲಿ ಸಾಧ್ಯವಿಲ್ಲ. ಈ ಕಾರಣಕ್ಕಾಗಿಯೇ ಎಂದರೆ ಒಂದು ವಸಸ್ತುವನ್ನುಧ್ಯಾನಿಸುವ ಕ್ರಮವನ್ನುಮಾಡುವಾಗ ನಮಗೆ ಕಣ್ಣಿಗೆ ಕಾಣುತ್ತಿರುವುದೂ ಅನುಭವವೇದ್ಯವಾದುದೂಆದ ವಸ್ತುವನ್ನೇ ಆರಿಸಿಕೊಂಡು ಅದರಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ಧ್ಯಾನಿಸಬೇಕು. ಅದನ್ನು ಇಲ್ಲಿ ಉದಾಹರಣೆಗಳ ಮೂಲಕ ಹೇಳಿದೆ. ಎಂದರೆ ಅಭ್ಯಾಸಮಾಡುವಾಗ ಮೊದಲು ಆದಿತ್ಯ (ಸೂರ್ಯ) ಅಗ್ನಿ, ಚಂದ್ರ, ವೃಕ್ಷ, ಪರ್ವತ, ಸಮುದ್ರ ಅಥವಾ ತನಗೆ ಬೇಕಾದ ಯಾವ ವಸ್ತುವಿನಲ್ಲಾಗಲಿ ಮನಸ್ಸನ್ನು ನೆಲೆಗೊಳಿಸಿ ಧ್ಯಾನಮಾಡುವ ಕ್ರಮವನ್ನು ಅಭ್ಯಾಸಮಾಡಬೇಕು. ಆದರೆ, ಕಾಮ, ಸ್ತ್ರೀಯರು ಮೊದಲಾದ ವಿಷಯಾದಿಸುಖಗಳನ್ನು ಮಾತ್ರ ಎಂದಿಗೂ ಧ್ಯಾನಿಸಬಾರದು. ಅದರಿಂದ ಬಹಳ ಹಾನಿಯೂ ದುಃಖವೂ ಉಂಟಾಗುವುದು. ಅದರಿಂದ ಯೋಗಸಿದ್ಧಿಯುಂಟಾಗುವುದಿಲ್ಲ ಪ್ರತ್ಯಕ್ಷವಸ್ತುಗಳಾದ ಸೂರ್ಯಾದಿಗಳನ್ನು ಧ್ಯಾನಿಸಿ ಅಭ್ಯಾಸವನ್ನು ಬಲಗೊಳಿಸಿ ಅನಂತರ ಪ್ರತ್ಯಕ್ಷವಲ್ಲದ ದೇವತಾದಿಗಳನ್ನು ಧ್ಯಾನಿಸಬೇಕು.

**ಧಾರ್ಮಿಕಾಣಾಂ ಕುಲೇ ಶುದ್ಧೇ ಯೋಗಭ್ರಷ್ಟೋಽಭಿಜಾಯತೇ ।**
**ಮೂರ್ಧ್ನಿ ಬ್ರಹ್ಮ ಯದಾ ವಿಂದೇತ್ ತನೋತೇವ ಋಷಿಸತ್ತಮಂ ।**
**ತದಾ ಮೂರ್ಧ್ನಃ ಪರಂ ಜ್ಯೋತಿರ್ನಕ್ಷತ್ರಪಥಮುನ್ನಯೇತ್ ॥**

**ಯೋಗೀ ಯೋಗೇಶ್ವರಂ ಪ್ರಾಪ್ಯ ನಿರ್ದ್ವಂದ್ವಃ ಪರಮಾತ್ಮವಿತ್ ।**
**ಸರ್ವತ್ರೈವಾತ್ಮನಾತ್ಮಾನಂ ಪಶ್ಯೇದೃಷಿಪರಾಯಣಃ ॥**

ಯೋಗಾಭ್ಯಾಸದಲ್ಲಿ ನಿರತನಾದ ಯೋಗಿಯು ಸಿದ್ಧಿಯನ್ನು ಪಡೆಯುವುದಕ್ಕೆ ಮೊದಲೇ ಮೃತನಾದಲ್ಲಿ ಅದುವರೆಗೆ ಅವನು ಆಚರಿಸಿದ ಯೋಗವು ವ್ಯರ್ಥವಾಗುವುದಿಲ್ಲ. ಅದಕ್ಕೆ ಪ್ರತಿಫಲರೂಪವಾಗಿ ಅವನು ಮುಂದಿನ ಜನ್ಮದಲ್ಲಿ ಶುದ್ಧ ಸತ್ಕುಲದಲ್ಲಿ ಜನಿಸುವನು. ಯೋಗದಲ್ಲಿ ನಿರತನಾದವನು ತನ್ನ ಚಿತ್ತವನ್ನು ಕ್ರಮಕ್ರಮವಾಗಿ ಮೂರ್ಧದಲ್ಲಿ ಎಂದರೆ ಶಿರಸ್ಸಿನಲ್ಲಿರುವ ಬ್ರಹ್ಮರಂಧ್ರದಬಳಿಗೆ ಒಯ್ಯಬೇಕು. ಹಾಗೆ ಮಾಡಿದರೆ ಆ ಬ್ರಹ್ಮರಂಧ್ರದಿಂದ ದಿವ್ಯಜ್ಯೋತಿಯು ಹೊರ ಹೊರಟು ನಕ್ಷತ್ರಮಂಡಲವನ್ನು ಸೇರುವುದು. ಎಂದರೆ ಸಾಧಕನಿಗೆ ಯೋಗೇಶ್ವರನಾದ ಪರಮಾತ್ಮನ ಸಾಕ್ಷಾತ್ಕಾರ ವಾಗುವುದು. ಆತ್ಮಸಾಕ್ಷಾತ್ಕಾರವಾದನಂತರ ಯೋಗಿಗೆ ಪರಮಾತ್ಮನ ಸ್ವರೂಪವು ಚೆನ್ನಾಗಿ ತಿಳಿಯುವುದು. ಅವನು ನಿರ್ದ್ವಂದ್ವನಾಗುವನು ಎಂದರೆ ಅವನಿಗೆ ಸುಖದುಃಖಾದಿಗಳಲ್ಲಿ ಯಾವ ವ್ಯತ್ಯಾಸವೂ ಕಂಡು ಬರುವುದಿಲ್ಲ. ಅವ ನಿಗೆ ಸುಖವೂ ಒಂದೇ ದುಃಖವೂ ಒಂದೇ. ದುಃಖವಿಲ್ಲದೇ ಯಾವಾಗಲೂ ಶಾಂತಮನಸ್ಸಿನಿಂದ ಪರಮ ಸುಖವನ್ನೇ ಅನುಭವಿಸುತ್ತಿರುವನು. ಇದಲ್ಲದೆ ನಿರ್ದ್ವಂದ್ವ ಎಂದರೆ ಇನ್ನೊಂದುವಿಧವಾದ ಅರ್ಥವನ್ನು ಹೇಳಬಹುದು. ನಿರ್ದ್ವಂದ್ವವೆಂದರೆ ದ್ವಂದ್ವರಹಿತ. ಎರಡನೇ ವಸ್ತುವಿಲ್ಲದಿರುವುದು ಎಂದರೆ ಒಂದೇ ವಸ್ತು. ಚರಾ ಚರಾತ್ಮಕವಾದ ಸಮಸ್ತ ವಿಶ್ವವೂ ಪರಮಾತ್ಮನ ಸ್ವರೂಪವು. ಆ ಪರಮಾತ್ಮನನ್ನು ಬಿಟ್ಟು ಬೇರೆ ಎರಡನೇ ವಸ್ತುವೇ ಇಲ್ಲವೆಂದು ಅನುಭವದಿಂದ ತಿಳಿಯುವುದೇ ನಿರ್ದ್ವಂದ್ವಮನೋಭಾವವೆಂದೆನಿಸುವುದು. ಈ ವಿಧವಾದ ಮನೋಭಾವ ವನ್ನು ಸಾಧಿಸಿದ ಯೋಗಿಗೆ ಸರ್ವಪ್ರಾಣಿಗಳಲ್ಲಿಯೂ ಸಮಸ್ತ ಚರಾಚರವಸ್ತುಗಳಲ್ಲಿಯೂ ಒಬ್ಬನೇ ಆದ ಆತ್ಮನಿರುವ ನೆಂದೂ ಆತ್ಮವ್ಯತಿರಿಕ್ತವಾದ ವಸ್ತುವೇ ವಿಶ್ವದಲ್ಲಿಲ್ಲವೆಂದೂ ತಿಳಿದು ಎಂದರೆ ಸತ್ಯಸ್ವರೂಪವನ್ನು ತಿಳಿದು ಸುಖಿಸುವನು.

**ಜಪೇಚ್ಚೈವ ಸದಾ ಸ್ನಾತಃ ಪವಿತ್ರಮಿದಮುತ್ತಮಂ ।**
**ಅಪಿ ಪಾತಕಸಂಯುಕ್ತಃ ಕಾಲೇನ ಸುಕೃತೀ ಭವೇತ್ ।**
**ತಪಃಪರಾಯಣೋ ನಿತ್ಯಂ ಸತ್ಯವಾಗನಸೂಯಕಃ ।**
**ಜಪನ್ನೇತಮೃಷಿಂ ವಿಪ್ರಃ ಕಾಲೇನ ಸ ವನೀ ಭವೇತ್ ।**
**ಯೇನ ಯೇನ ಸ ಕಾಮೇನ ಜಪೇದಿಮಮೃಷಿಂ ಸದಾ ।**
**ಸ ಸ ಕಾಮಃ ಸಮೃದ್ಧಃ ಸ್ಯಾಚ್ಛ್ರದ್ಧಧಾನಸ್ಯ ಕುರ್ವತಃ ॥**

ಈ ಸೂಕ್ತಮಂತ್ರಗಳನ್ನು ಜಪಿಸಬೇಕಾದರೆ ಸ್ನಾನಮಾಡಿ ಶುಚಿರ್ಭೂತನಾಗಿಯೇ ಈ ಶ್ರೇಷ್ಠವಾದ ಮಂತ್ರವನ್ನು ಜಪಿಸಬೇಕು. ಅನೇಕ ಪಾಪಗಳನ್ನೂ, ಪಾತಕಗಳನ್ನೂ ಮಾಡಿದ್ದರೂ ಸಹ ಈ ಮಂತ್ರವನ್ನು ಜಪಿಸುವ ಪುರುಷನು ಕಾಲಕ್ರಮದಲ್ಲಿ ಪಾಪಪರಿಹಾರವನ್ನು ಮಾಡಿಕೊಂಡು ಪುಣ್ಯಾತ್ಮನಾಗುವನು. ಈ ಮಂತ್ರಜಪಮಾಡುವಾಗ ಸಾಧಕನು ತಪಸ್ಸಿನಲ್ಲಿಯೇ ನಿರತನಾಗಿ ಸತ್ಯವಾಕ್ಯಗಳನ್ನೇ ನುಡಿಯುತ್ತಾ ಯಾರಲ್ಲಿಯೂ ದ್ವೇಷಾಸೂಯೆಗಳಿಲ್ಲದೆ ಶಾಂತಮನಸ್ಸಿ ನಿಂದ ಇರಬೇಕು. ಈ ಸೂಕ್ತಮಂತ್ರಗಳನ್ನು ನಿರ್ಜನಪ್ರದೇಶವಾದುದೂ, ಬಾಧಾರಹಿತವಾದುದೂ ಆದ ಶುದ್ಧವಾದ

ಅರಣ್ಯಪ್ರದೇಶದಲ್ಲಿ ಜಪಿಸಬೇಕು. ಈ ಸೂಕ್ತದ ಋಷಿಯಾದ ನಾರಾಯಣನನ್ನು ಎಂದರೆ ಪರಮೇಶ್ವರನನ್ನು ಧ್ಯಾನಿಸುವಾಗ ಯಾವಯಾವ ಅಭೀಷ್ಟಗಳನ್ನು ಮನಸ್ಸಿನಲ್ಲಿ ಬಯಸಿ ಶ್ರದ್ಧೆಯಿಂದ ಧ್ಯಾನಮಾಡುವನೋ ಆಯಾ ಅಭೀಷ್ಟಗಳು ತಪ್ಪದೆ ಸಿದ್ಧಿಸುವವು.

**ಹೋಮಂ ವಾಪ್ಯಥವಾ ಜಾಪ್ಯಮುಪಹಾರಮಥೋ ಚರುಂ ।**
**ಕುರ್ವೀತ ಯೇನ ಕಾಮೇನ ತತ್ಸಿದ್ಧಿಮವಧಾರಯೇತ್ ॥**

**ಜ್ಞಾತಿಶ್ರೈಷ್ಠ್ಯಂ ಮಹದ್ವಿತ್ತಂ ಯಶೋ ಲೋಕೇ ಪರಾಂ ಗತಿಂ ।**
**ಜ್ಞಾನೇನ ವಿಪ್ರನೋಕ್ಷಂ ಚ ತತ್ಸಿದ್ಧಿಮವಧಾರಯೇತ್ ॥**

**ಜ್ಞಾನಗಮ್ಯಂ ಪರಂ ಸೂಕ್ಷ್ಮಂ ವ್ಯಾಪ್ಯ ಸರ್ವಮವಸ್ಥಿತಂ ।**
**ಗ್ರಾಹ್ಯಮತ್ಯಂತಯತ್ನೇನ ಬ್ರಹ್ಮಾಭ್ಯೇತಿ ಸನಾತನಂ ॥**

ಈ ಪುರುಷಸೂಕ್ತಮಂತ್ರಗಳನ್ನು ಜಪಮಾಡಿ ಅಥವಾ ಸೂಕ್ತಮಂತ್ರಗಳಿಂದ ಅಗ್ನಿಯಲ್ಲಿ ಹೋಮಮಾಡಿ ಮಿಕ್ಕ ಹವಿಶ್ಶೇಷವನ್ನು ಪ್ರಾಶನಮಾಡಿದರೆ ಮನಸ್ಸಿನಲ್ಲಿ ಯಾವ ಯಾವ ಇಷ್ಟವಿರುವುದೋ ಅದೆಲ್ಲವೂ ಸಿದ್ಧಿಸುವುದು. ಈ ರೀತಿ ಮಾಡುವ ಪುರುಷನು ತನ್ನ ಬಂಧುಗಳಲ್ಲಿ ಗಣ್ಯನೂ ಗೌರವಾನ್ವಿತನೂ ಆಗಿ ಯಶಸ್ಸನ್ನೂ ಸಂಪತ್ತನ್ನೂ ಗಳಿಸಿ ಸುಖಿಸುವನು. ಅಂತ್ಯದಲ್ಲಿ ಉತ್ತಮವಾದ ಸದ್ಗತಿಯನ್ನೂ ಪಡೆಯುವನು. ಇದಲ್ಲದೆ ಉತ್ತಮವಾದ ಬ್ರಹ್ಮಜ್ಞಾನದಿಂದ ಮುಕ್ತಿಯನ್ನೂ ಪಡೆಯುವನು. ಆದ್ದರಿಂದ ವಿವೇಕಿಯಾದ ಪುರುಷನು ಕೇವಲಜ್ಞಾನದಿಂದ ತಿಳಿಯಲ್ಪಡುವವನೂ, ಅತ್ಯಂತಸೂಕ್ಷ್ಮನೂ, ಸರ್ವವಸ್ತುಗಳಲ್ಲಿಯೂ ವ್ಯಾಪಿಸಿ ಇರುವವನೂ, ಸನಾತನನೂ ಆದ ಪರಬ್ರಹ್ಮನನ್ನು ಅತ್ಯಂತಪ್ರಯತ್ನದಿಂದ ಧ್ಯಾನಿಸಿ ಸಿದ್ಧಿಯನ್ನು ಪಡೆಯಬೇಕು.

**ಸಹಸ್ರಶೀರ್ಷೇತಿ ಸೂಕ್ತಂ ಸರ್ವಕಾಮಫಲಪ್ರದಂ ।**
**ವೇದಗರ್ಭಶರೀರೇಣ ಸ ವೈ ನಾರಾಯಣಃ ಸ್ಮೃತಃ ॥**

**ಬ್ರಹ್ಮೇಂದ್ರರುದ್ರಪರ್ಜನ್ಯಾ ಅತ್ರ ಸೂಕ್ತೇ ವ್ಯವಸ್ಥಿತಾಃ ।**
**ಅತ್ರಸ್ಥನೇತದ್ದ್ರಷ್ಟವ್ಯಂ ಜಗತ್ಸ್ಥಾವರಜಂಗಮಂ ।**
**ಅನಾಸಾದಯಮಾನೋಽಪಿ ಭಕ್ತಿಂ ನ ಪರಿಹಾಪಯೇತ್ ।**
**ಭಕ್ತಾನುಕಂಪೀ ಭಗವಾನ್ ಶ್ರೂಯತೇ ಪುರುಷೋತ್ತಮಃ ॥**

ಸಹಸ್ರಶೀರ್ಷಾ ಎಂಬ ಈ ಸೂಕ್ತವು ಜಪಿಸುವವರಿಗೆ ಸಮಸ್ತ ಇಷ್ಟಾರ್ಥಗಳನ್ನು ಒದಗಿಸಿಕೊಡುವುದು. ಈ ಸೂಕ್ತದಲ್ಲಿ ವೇದಗಳಲ್ಲಿ ಪ್ರತಿಪಾದ್ಯವಾದ ನಾರಾಯಣನೇ ಸ್ತುತಿಸಲ್ಪಟ್ಟಿರುವನು. ಇದಲ್ಲದೆ ಇದರಲ್ಲಿ ಬ್ರಹ್ಮ, ಇಂದ್ರ ರುದ್ರ, ಪರ್ಜನ್ಯ ಮೊದಲಾದ ಇತರದೇವತೆಗಳೂ ಸ್ಥಾವರಜಂಗಮಾತ್ಮಕವಾದ ಜಗತ್ತೂ ಸಹ ಪ್ರತಿಪಾದಿಸಲ್ಪಟ್ಟಿರುವರು. ಈ ಸೂಕ್ತದಲ್ಲಿ ಪ್ರತಿಪಾದಿತವಾದ ಪಾರಮಾರ್ಥಿಕವಾದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗದಿದ್ದರೂ ಈ ಸೂಕ್ತದಲ್ಲಿಯೂ, ಸೂಕ್ತಪ್ರತಿಪಾದ್ಯನಾದ ನಾರಾಯಣನಲ್ಲಿಯೂ ಭಕ್ತಿಯನ್ನು ಮಾತ್ರ ಬಿಡಬಾರದು. ಏಕೆಂದರೆ ಭಗವಂತನಾದ ಪರಮಪುರುಷನು ಭಕ್ತರನ್ನು ದಯಾರ್ದ್ರದೃಷ್ಟಿಯಿಂದ ನೋಡಿ ಅವರ ಪ್ರಾರ್ಥನೆಗಳನ್ನು ಈಡೇರಿಸುವನೆಂದು ಪ್ರಸಿದ್ಧಿಯು.

ಪೂಜಾರ್ಥಂ ತಸ್ಯ ದೇವಸ್ಯ ವನ್ಯಾನ್ಸ್ವಯಮುಪಾರ್ಜಿತಾನ್ ।
ಆರಣ್ಯಕವಿಧಾನೇನ ನಿರ್ವಪೇತ್ಪ್ರತ್ಯಹಂ ಚರುಂ ॥

ನಾರಾಯಣಾಯ ಸ್ವಾಹೇತಿ ಮಂತ್ರಾಂತೇ ಜುಹುಯಾದ್ಧವಿಃ ।
ಆಸಹಸ್ರಾತ್ತತಶ್ಚಕ್ಷುರ್ದಿವ್ಯಂ ಹೋತುರ್ದದಾತಿ ಸಃ ॥

ಅಪಿ ವಾ ಚರುಸಹಸ್ರಂ ತಂತ್ರೇಣೈಕೇನ ನಿರ್ವಪೇತ್ ।
ಯಾವಂತೋ ವಾಪಿ ಶಕ್ಯಂತೇ ಅಹ್ನಾ ಸರ್ವಾನ್ಸಮಾಪಯೇತ್ ॥

ಸಹಸ್ರಸ್ಯೇಪ್ಸಿತಾನಾಂ ಚ ಕಾಮಾನಾಂ ಲಭತೇ ಫಲಂ ।
ಪುರುಷಾಯುಃಸಮಾಯುಕ್ತಃ ಸಿದ್ಧೋ ವಾಪಿ ಚರೇನ್ಮಹೀಂ ॥

ಈ ಸೂಕ್ತ ಪ್ರತಿಪಾದ್ಯನಾದ ನಾರಾಯಣದೇವನನ್ನು ವನಗಳಲ್ಲಿ ಸಿಕ್ಕುವ ಪುಷ್ಪಾದಿಗಳನ್ನು ತಾನೇ ತಂದು ಆರಣ್ಯಕ ಶ್ರುತಿಯಲ್ಲಿ ಹೇಳಿರುವ ಪ್ರಕಾರ ಪೂಜಿಸಿ ಪ್ರತಿದಿನವೂ ಚರುವಿನಿಂದ ಹೋಮಮಾಡಬೇಕು. ಹೋಮಮಾಡುವಾಗ ಪ್ರತಿಮಂತ್ರದ ಕೊನೆಯಲ್ಲಿಯೂ ನಾರಾಯಣಾಯ ಸ್ವಾಹಾ ಎಂಬ ಪದಗಳನ್ನು ಸೇರಿಸಿ ಹೋಮಮಾಡಬೇಕು. ಈ ರೀತಿ ಸಹಸ್ರಸಂಖ್ಯೆಯಷ್ಟು ಹೋಮಮಾಡಿದರೆ, ಪರಮಾತ್ಮನು ಹೋಮಮಾಡಿದ ಪುರುಷನಿಗೆ ದಿವ್ಯಚಕ್ಷುಸ್ಸನ್ನು ಎಂದರೆ ಸಾಮಾನ್ಯಜನರಿಗೆ ಸಾಧ್ಯವಲ್ಲದ ಸಮಸ್ತವಿಷಯಗಳನ್ನೂ ನೋಡಿ ತಿಳಿದುಕೊಳ್ಳುವ ಶಕ್ತಿಯನ್ನು ಅನುಗ್ರಹಿಸುವನು. ಅಥವಾ ಈ ಚರುಹೋಮವನ್ನು ತಂತ್ರೋಕ್ತವಿಧಾನದಿಂದಲಾದರೂ ಮಾಡಬಹುದು. ಸಾಧ್ಯವಾದ ಮಟ್ಟಿಗೂ ಈ ಹೋಮಾದಿ ಕಾರ್ಯಗಳನ್ನು ಹಗಲಿನಲ್ಲಿಯೇ ಮಾಡಿ ಮುಗಿಸಬೇಕು. ಈ ರೀತಿ ಆಚರಿಸುವ ಪುರುಷನು ತಾನು ಬಯಸುವ ಸಾವಿರಾರು ಇಷ್ಟಾರ್ಥಗಳನ್ನು ಪಡೆದು ಈ ಲೋಕದಲ್ಲಿ ಪುರುಷನ ಜೀವಿತದ ಆಯುಃಪ್ರಮಾಣವನ್ನು ಎಂದರೆ ನೂರುವರ್ಷಗಳವರೆಗೆ ಬದುಕಿ ಸುಖಿಸುವನು. ಅಥವಾ ಸಿದ್ಧನಾಗಿ ಈ ಭೂಮಂಡಲವನ್ನೆಲ್ಲಾ ಸಂಚರಿಸಲು ಶಕ್ತನಾಗುವನು.

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।

ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥

ಸೂಕ್ತಪ್ರತಿಪಾದ್ಯನಾದ ನಾರಾಯಣನನ್ನು ಈ ರೀತಿ ಧ್ಯಾನಮಾಡಬೇಕು—ಈ ನಾರಾಯಣಮೂರ್ತಿಯು ಯಾವಾಗಲೂ ಆದಿತ್ಯಮಂಡಲದ ಮಧ್ಯದಲ್ಲಿ ಅಂತರ್ಗತನಾಗಿ ಪ್ರಕಾಶಿಸುತ್ತಿರುವನು. ಕಮಲಾಸನದಲ್ಲಿ ಮಂಡಿಸಿರುವನು. ಕೇಯೂರ, ಮಕರಕುಂಲ, ಕಿರೀಟ, ಹಾರ ಮೊದಲಾದ ದಿವ್ಯಾಭರಣಗಳನ್ನು ಧರಿಸಿರುವನು. ಕೈಗಳಲ್ಲಿ ಶಂಖಚಕ್ರಗಳನ್ನು ಧರಿಸಿ ಸುವರ್ಣಮಯವಾದ ಶರೀರಕಾಂತಿಯಿಂದ ರಾರಾಜಿಸುತ್ತಿರುವನು.

ಏತತ್ತು ಯಃ ಪಠತಿ ಕೇವಲಮೇವ ಸೂಕ್ತಂ
ನಾರಾಯಣಸ್ಯ ಚರಣಾವಭಿವಂದ್ಯ ವಂದ್ಯೌ ।

ಪಾಠೇನ ತೇನ ಪರಮೇಣ ಸನಾತನಸ್ಯ
ಸ್ಥಾನಂ ಜರಾಮರಣವರ್ಜಿತಮೇತಿ ವಿಷ್ಣೋಃ ||

ಯಾವ ಪುರುಷನು ಈ ನಾರಾಯಣನ ಪರಮಪೂಜ್ಯವಾದ ಪಾದಾರವಿಂದಗಳನ್ನು ಭಕ್ತಿಯಿಂದ ನಮಸ್ಕರಿಸಿ ಈ ಪುರುಷ ಸೂಕ್ತವನ್ನು ಕೇವಲ (ಒಂದುಸಲ ಮಾತ್ರವಾದರೂ) ಪಠಿಸುವನೋ ಆ ಪುರುಷನು ಆ ಸೂಕ್ತಪಠನಪ್ರಭಾವದಿಂದ ಸನಾತನನಾದ ಆ ವಿಷ್ಣುವಿನ ಜರಾಮರಣರಹಿತವಾದ ಪರಮಪದವೆಂಬ ಮುಕ್ತಿಸ್ಥಾನವನ್ನು ಪಡೆಯುವನು.

ಹವಿಷಾಗ್ನೌ ಜಲೇ ಪುಷ್ಪೈರ್ಧ್ಯಾನೇನ ಹೃದಯೇ ಹರಿಂ |
ಯಜಂತಿ ಸೂರಯೋ ನಿತ್ಯಂ ಜಪ್ಯೇನ ರವಿಮಂಡಲೇ ||

ಈ ದೇವದೇವನನ್ನು ಅರ್ಚಿಸುವ ಕ್ರಮವು ಹೇಗೆಂದರೆ—ಅಗ್ನಿಯಲ್ಲಾದರೆ ಹವಿರಾದಿಗಳನ್ನು ಹೋಮಮಾಡಬೇಕು. ಜಲದಲ್ಲಿ ಪುಷ್ಪಗಳಿಂದ ಅರ್ಚಿಸಬೇಕು. ಹೃದಯದಲ್ಲಿ ಧ್ಯಾನದಿಂದ ಉಪಾಸಿಸಬೇಕು. ಸೂರ್ಯಮಂಡಲದಲ್ಲಿ ದೇವನನ್ನು ಧ್ಯಾನಿಸಿ ಜಪಮಾಡಬೇಕು. ಈರೀತಿ ನಾನಾವಿಧಕ್ರಮಗಳಿಂದ ವಿವೇಕಿಗಳಾದ ಪುರುಷರು ಪ್ರತಿದಿನವೂ ನಾರಾಯಣನನ್ನು ಆರಾಧಿಸುವರು.

ಬಿಲ್ವಪತ್ರಂ ಶಮೀಪತ್ರಂ ಪತ್ರಂ ಭೃಂಗಾರಕಸ್ಯ ಚ |
ಮಾಲತೀಕುಶಪದ್ಮಂ ಚ ಸದ್ಯಸ್ತುಷ್ಟಿಕರಂ ಹರೇಃ ||

ಯನ್ನೋಪಪದ್ಯತೇ ಕಿಂಚಿತ್ತಂ ಧ್ಯಾಯೇನ್ಮನಸೈವ ತು |
ಸಂಪದ್ಯಂತೇ ಪ್ರಸಾದಾತ್ತು ದೇವದೇವಸ್ಯ ಚಕ್ರಿಣಃ ||

ಬಿಲ್ವಪತ್ರ, ಶಮೀಪತ್ರ, ಭೃಂಗಾರಕಪತ್ರ, ಮಾಲತೀಪುಷ್ಪ, ಕುಶ (ದರ್ಭಪತ್ರ) ಪದ್ಮ ಅಥವಾ ತಾವರೇಹೂವು ಇವು ಗಳೆಲ್ಲಾ ನಾರಾಯಣನಿಗೆ ಅತ್ಯಂತ ಪ್ರೀತಿಕರವಾದವು. ಆದ್ದರಿಂದ ಅವುಗಳಿಂದ ಪೂಜಿಸಬೇಕು. ಒಂದುವೇಳೆ ಇವು ಗಳಲ್ಲಿ ಯಾವುದಾದರೂ ದೊರೆಯದಿದ್ದರೆ ಅದನ್ನು ಮನಸ್ಸಿನಲ್ಲಿಯೇ ಭಾವಿಸಿ ಪೂಜಿಸಬೇಕು. ಹೀಗೆ ಮಾಡಿದರೆ ದೇವದೇವನಾದ ಆ ಚಕ್ರಧಾರಿಯ ಪ್ರಸಾದದಿಂದ ಸಕಲಾಭೀಷ್ಟಗಳೂ ಸಿದ್ಧಿಸುವವು.

ಪತ್ರೈಶ್ಚ ಪುಷ್ಪೈಶ್ಚ ಫಲೈಶ್ಚ ತೋಯೈ-
ರಕ್ರೀತಲಬ್ಧೈಶ್ಚ ಸದೈವ ಸತ್ಸು |
ಭಕ್ತ್ಯೈಕಲಭ್ಯೇ ಪುರುಷೇ ಪುರಾಣೇ
ಮುಕ್ತ್ಯೈ ಕಿಮರ್ಥಂ ಕ್ರಿಯತೇ ನ ಯತ್ನಃ ||

ಭಕ್ತಿಮಾತ್ರದಿಂದ ಲಭ್ಯನೂ, ಪುರಾತನನೂ ಆದ ಆ ಪರಮಪುರುಷನನ್ನು, ಧನಾದಿಗಳನ್ನು ಕೊಟ್ಟುಕೊಳ್ಳದೆ ಸ್ವಯಾರ್ಜಿತವಾಗಿ ಅಥವಾ ಸ್ವಶ್ರಮದಿಂದ ಸಂಪಾದಿಸಿದ ಪತ್ರ, ಪುಷ್ಪ, ಫಲ, ಜಲ ಇವುಗಳಿಂದ ಆರಾಧಿಸಿ ಮುಕ್ತಿ ಯನ್ನು ಪಡೆಯಲು ಪ್ರಯತ್ನಿಸದಿರುವುದರಿಂದ ಏನು ಪ್ರಯೋಜನ ?

ಇತ್ಯೇವಮುಕ್ತಃ ಪುರುಷಸ್ಯ ವಿಷ್ಣೋ-
ರರ್ಚಾವಿಧಿಃ ವಿಷ್ಣುಕುಮಾರನಾಮ್ನಾ |

**ಮುಕ್ತ್ಯೈಕಮಾರ್ಗಪ್ರತಿಬೋಧನಾಯ**
**ದೃಷ್ಟ್ವಾ ವಿಧಾನಂ ತ್ವಿಹ ನಾರದೋಕ್ತಂ ॥**

ನಾರದಮಹರ್ಷಿಯಿಂದ ಹೇಳಲ್ಪಟ್ಟಿರುವುದೂ, ಮುಕ್ತಿಮಾರ್ಗಕ್ಕೆ ಸಾಧನಭೂತವಾದುದೂ ಆದ ಈ ಪೂಜಾವಿಧಾನವನ್ನು ಅನುಸರಿಸಿ ಪರಮಪುರುಷನಾದ ಶ್ರೀ ವಿಷ್ಣುವಿನ (ನಾರಾಯಣನ) ಪೂಜಾಕ್ರಮವನ್ನು ವಿಷ್ಣುಕುಮಾರ ಎಂಬುವರು ಈರೀತಿ ವಿವರಿಸಿರುವರು.

**ಇಲ್ಲಿಗೆ ಶೌನಕೋಕ್ತನಾದ ಋಗ್ವಿಧಾನದಲ್ಲಿ ಪುರುಷಸೂಕ್ತಸಂಬಂಧವಾದ ಪೀಠಿಕೆ ಸಮಾಪ್ತವು.**

...

॥ ಸಾಯಣಭಾಷ್ಯಂ ॥

**ಸಹಸ್ರಶೀರ್ಷೇತಿ ಷೋಡಶರ್ಚಂ ಷಷ್ಠಂ ಸೂಕ್ತಂ । ನಾರಾಯಣೋ ನಾಮರ್ಷಿಃ ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಅನುಷ್ಟುಭಃ । ಅವ್ಯಕ್ತಮಹದಾದಿವಿಲಕ್ಷಣಶ್ಚೇತನೋ ಯಃ ಪುರುಷಃ । ವೇ. ಸೂ. ೧-೪-೧ । ಪುರುಷಾನ್ನ ಪರಂ ಕಿಂಚಿತ್ । ಕ. ಉ. ೩-೧೧ । ಇತ್ಯಾದಿಶ್ರುತಿಷು ಪ್ರಸಿದ್ಧಃ ಸ ದೇವತಾ । ತಥಾ ಚಾನುಕ್ರಾಂತಂ । ಸಹಸ್ರಶೀರ್ಷಾ ಷೋಳಶ ನಾರಾಯಣಃ ಪೌರುಷಮಾನುಷ್ಟುಭಂ ತ್ರಿಷ್ಟುಬಂತಂ ತ್ವಿತಿ ॥ ಗತೋ ವಿನಿಯೋಗಃ ॥**

ಅನುವಾದವು— **ಸಹಸ್ರಶೀರ್ಷಾ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು ಈ ಸೂಕ್ತಕ್ಕೆ ನಾರಾಯಣ ಎಂಬ ಋಷಿಯು ಋಷಿಯು ; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅವ್ಯಕ್ತ, ಮಹತ್ ಮೊದಲಾದ ಗುಣವಿಶಿಷ್ಟನಾದ (ವೇದಾಂತಸೂತ್ರ. ೧-೪-೧) ಮತ್ತು ಈ ಪುರುಷನಿಗಿಂತ ಬೇರೆ ವಸ್ತುವೇ ಇಲ್ಲವೆಂದು ( ಕ. ಉ. ೩-೧೧ ) ಶ್ರುತಿವಾಕ್ಯಗಳಲ್ಲಿ ಪ್ರಸಿದ್ಧನಾಗಿರುವ ಪರಮಪುರುಷನೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ— **ಸಹಸ್ರಶೀರ್ಷಾ ಷೋಳಶ ನಾರಾಯಣಃ ಪೌರುಷಮಾನುಷ್ಟುಭಂ ತ್ರಿಷ್ಟುಬಂತಂ ತು** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

---

## ಸೂಕ್ತ—೯೦

ಮಂಡಲ— ೧೦ । ಅನುವಾಕ—೭ । ಸೂಕ್ತ—೯೦ ॥
ಅಷ್ಟಕ—೮ । ಅಧ್ಯಾಯ—೪ । ವರ್ಗ—೧೭, ೧೮, ೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
ಋಷಿಃ—ನಾರಾಯಣಃ ॥
ದೇವತಾ—ಪುರುಷಃ ॥
ಛಂದಃ—೧-೧೫. ಅನುಷ್ಟುಪ್ । ೧೬. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।

ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥ ೧ ॥

॥ ಪದಪಾಠಃ ॥

ಸಹಸ್ರಽಶೀರ್ಷಾ । ಪುರುಷಃ । ಸಹಸ್ರಽಅಕ್ಷಃ । ಸಹಸ್ರಪಾಽತ್ ।

ಸಃ । ಭೂಮಿಂ । ವಿಶ್ವತಃ । ವೃತ್ವಾ । ಅತಿ । ಅತಿಷ್ಠತ್ । ದಶಽಅಂಗುಲಂ ॥ ೧ ॥

॥ ಸಾಯಣಭಾಷ್ಯಂ ॥

ಸರ್ವಪ್ರಾಣಿಸಮಷ್ಟಿರೂಪೋ ಬ್ರಹ್ಮಾಂಡದೇಹೋ ವಿರಾಡಾಖ್ಯೋ ಯಃ ಪುರುಷಃ ಸೋಽಯಂ ಸಹಸ್ರಶೀರ್ಷಾ ।ಸಹಸ್ರಶಬ್ದಸ್ಯೋಪಲಕ್ಷಣತ್ವಾದನಂತೈಃ ಶಿರೋಭಿರ್ಯುಕ್ತ ಇತ್ಯರ್ಥಃ । ಯಾನಿ ಸರ್ವಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾಂತಃಪಾತಿತ್ವಾತ್ತದೀಯಾನ್ಯೇವೇತಿ ಸಹಸ್ರಶೀರ್ಷತ್ವಂ । ಏವಂ ಸಹಸ್ರಾಕ್ಷಿತ್ವಂ ಸಹಸ್ರಪಾದತ್ವಂ ಚ । ಸ ಪುರುಷೋ ಭೂಮಿಂ ಬ್ರಹ್ಮಾಂಡಗೋಲಕರೂಪಾಂ ವಿಶ್ವತಃ ಸರ್ವತೋ ವೃತ್ವಾ ಪರಿವೇಷ್ಟ್ಯ ದಶಾಂಗುಲಂ ದಶಾಂಗುಲಪರಿಮಿತಂ ದೇಶಮತ್ಯತಿಷ್ಠತ್ । ಅತಿಕ್ರಮ್ಯ ವ್ಯವಸ್ಥಿತಃ । ದಶಾಂಗುಲಮಿತ್ಯುಪಲಕ್ಷಣಂ । ಬ್ರಹ್ಮಾಂಡಾದ್ಬಹಿರಪಿ ಸರ್ವತೋ ವ್ಯಾಪ್ಯಾವಸ್ಥಿತ ಇತ್ಯರ್ಥಃ ।

॥ ಪ್ರತಿಪದಾರ್ಥ ॥

**ಪುರುಷಃ**—ಆದಿ ಪುರುಷನು । **ಸಹಸ್ರಶೀರ್ಷಾ**—ಅಸಂಖ್ಯಾಕವಾದ ಶಿರಸ್ಸುಗಳಿಂದ ಕೂಡಿದವನು । **ಸಹಸ್ರಾಕ್ಷಃ**—ಅಸಂಖ್ಯಾಕವಾದ ಚಕ್ಷುಸ್ಸುಗಳುಳ್ಳವನು । **ಸಹಸ್ರಪಾತ್**—ಅಸಂಖ್ಯಾಕವಾದ ಪಾದಗಳುಳ್ಳವನು । **ಸಃ**—ಈ ಪುರುಷನು । **ಭೂಮಿಂ**—ಬ್ರಹ್ಮಾಂಡಗೋಳರೂಪವಾದ ಭೂಮಿಯನ್ನು (ಸಕಲ ವಿಶ್ವವನ್ನೂ) । **ವಿಶ್ವತಃ**—ಸುತ್ತಲೂ । **ವೃತ್ವಾ**—ಸುತ್ತುವರಿದು । **ದಶಾಂಗುಲಂ**—ಅದಕ್ಕಿಂತಲೂ ಹತ್ತುಅಂಗುಲದಷ್ಟು । **ಅತ್ಯತಿಷ್ಠತ್**—ಅತಿಕ್ರಮಿಸಿಯೂ ಸ್ಥಾಪಿತನಾಗಿದ್ದಾನೆ.

॥ ಭಾವಾರ್ಥ ॥

ಆದಿಪುರುಷನು ಅಸಂಖ್ಯಾಕವಾದ ಶಿರಸ್ಸುಗಳುಳ್ಳವನು, ಅಸಂಖ್ಯಾಕವಾದ ಚಕ್ಷುಸ್ಸುಗಳನ್ನೂ, ಪಾದಗಳನ್ನೂ ಹೊಂದಿದವನು. ಈ ವಿರಾಟ್‌ಪುರುಷನು ಬ್ರಹ್ಮಾಂಡರೂಪವಾದ ವಿಶ್ವವನ್ನು ಸಕಲ ದಿಕ್ಕುಗಳಿಂದಲೂ ಸುತ್ತುವರಿದು ಅದಕ್ಕಿಂತಲೂ ಹತ್ತು ಅಂಗುಲದಷ್ಟು ಅತಿಕ್ರಮಿಸಿಯೂ ಸ್ಥಾಪಿತನಾಗಿದ್ದಾನೆ.

## English Translation

Purusha, who has a thousand heads, a thousand eyes, a thousand feet, investing the earth in all directions, exceeds (it by a space) measuring ten fingers.

|| ವಿಶೇಷವಿಷಯಗಳು ||

**ಸಹಸ್ರಶೀರ್ಷಾ ಪುರುಷಃ** ಇತ್ಯಾದಿ ವಿಶೇಷಣಗಳಿಂದ ಈ ಋಕ್ಕಿನಲ್ಲಿ ಪರಮಪುರುಷನನ್ನು ಪ್ರಶಂಸಿಸಿ ವರ್ಣಿಸಿದೆ. ಪುರುಷನು ಸಾವಿರ ತಲೆಗಳುಳ್ಳವನು, ಸಾವಿರಕಣ್ಣುಗಳುಳ್ಳವನು ಮತ್ತು ಸಾವಿರಪಾದಗಳುಳ್ಳವನು ಎಂದು ಸ್ತುತಿಸಿದೆ. ಇಲ್ಲಿ **ಸಹಸ್ರ**ಶಬ್ದಕ್ಕೆ ಕೇವಲ ಸಾವಿರವೆಂದೇ ಅರ್ಥವಲ್ಲ; ಸಹಸ್ರವೆಂದರೆ ಅನಂತಸಂಖ್ಯಾಕವೆಂದರ್ಥ. **ಸಹಸ್ರಶಬ್ದಸ್ಯೋಪಲಕ್ಷಣತ್ವಾದನಂತೈಃ ಶಿರೋಭಿಃ ಯುಕ್ತಃ। ಯಾನಿ ಸರ್ವಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾಂತಃಪಾತಿತ್ವಾತ್ತದೀಯಾನ್ಯೇವ ಇತಿ ಸಹಸ್ರಶೀರ್ಷತ್ವಂ** । ಪರಮೇಶ್ವರನು ಸಕಲ ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿದ್ದಾನೆ. ಆದುದರಿಂದ ಅನಂತಸಂಖ್ಯೆಯುಳ್ಳ ಪ್ರಾಣಿಗಳ ಶಿರಸ್ಸೆಲ್ಲವೂ ಪರಮೇಶ್ವರನ ಶಿರಸ್ಸೇ ಆದವು. ಆದುದರಿಂದ ಇಲ್ಲಿ ಸಹಸ್ರಶಬ್ದವು ಅನಂತ ಎಂಬ ತಾತ್ಪರ್ಯವನ್ನು ಕೊಡುತ್ತದೆ. ಎಂದು ಸಾಯಣರು ವಿವರಿಸಿದ್ದಾರೆ. **ಶಿರಸ್ಸು, ಅಕ್ಷಿ, ಪಾದ** ಇವು ಈಶ್ವರನ ಸಂಕಲ್ಪ, ದರ್ಶನ ಮತ್ತು ಚಲನರೂಪವಾದ ವ್ಯವಹಾರ ಇವನ್ನು ನಿರ್ದೇಶಿಸುತ್ತವೆ. ಇದನ್ನೇ ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.

**ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಹಸ್ತ ಉತ ವಿಶ್ವತಸ್ಪಾತ್ ।**
**ಸಂ ಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾಭೂಮೀ ಜನಯನ್ ದೇವ ಏಕಃ ||**

(ಶ್ವೇ. ಉ. ೩-೩)

ಪರಮೇಶ್ವರನು ಸರ್ವತ್ರ ಪ್ರಸರಿಸಿದ ಕಣ್ಣುಗಳುಳ್ಳವನು. ಸರ್ವತ್ರ ತಿರುಗಿಸಿದ ಶಿರಸ್ಸುಳ್ಳವನು. ಹಾಗೆಯೇ ತನ್ನ ಬಾಹುಗಳನ್ನೂ ಮತ್ತು ಪಾದಗಳನ್ನೂ ಸಾವಿರಾರು ಪ್ರದೇಶಕ್ಕೆ ಹರಡಿ ಜಗತ್ತನ್ನು ಚೈತನ್ಯಗೊಳಿಸುತ್ತಾನೆ. ಆದುದರಿಂದ ವಿಶ್ವದಲ್ಲಿರುವ ಸಕಲ ಶಿರಸ್ಸುಗಳೂ, ಚಕ್ಷುಸ್ಸುಗಳೂ, ಬಾಹುಗಳೂ, ಪಾದಗಳೂ ಇವನದೇ ಆಗಿವೆ. ಅದ್ವಿತೀಯನಾದ ಇವನೇ ಸಕಲ ಜಗನ್ನಿರ್ಮಾಪಕನು.

**ಸರ್ವಾನನಶಿರೋಗ್ರೀವಃ ಸರ್ವಭೂತಗುಹಾಶಯಃ ।**
**ಸರ್ವವ್ಯಾಪೀ ಸ ಭಗವಾಂಸ್ತಸ್ಮಾತ್ ಸರ್ವಗತಃ ಶಿವಃ ||**

(ಶ್ವೇ. ಉ. ೩-೧೧)

ಸರ್ವವ್ಯಾಪಿಯಾದ ಈ ಪರಮೇಶ್ವರನು ಸಕಲರ ಹೃದಯದಲ್ಲೂ ವಾಸಿಸುತ್ತಾ ಸಕಲರ ಶಿರಸ್ಸುಗಳನ್ನೂ, ಕತ್ತುಗಳನ್ನೂ ಸಕಲ ಮುಖಗಳನ್ನೂ ತನ್ನದನ್ನಾಗಿಯೇ ಮಾಡಿಕೊಳ್ಳುತ್ತಾನೆ, ಅಸಂಖ್ಯಾಕವಾದ ಶಿರಸ್ಸುಳ್ಳ ಈಶ್ವರನು ಇಲ್ಲಿ ಪುರುಷಶಬ್ದವಾಚ್ಯನು.

೧) **ಯತ್ಪೂರ್ವೋಽಸ್ಮಾತ್ಸರ್ವಸ್ಮಾತ್ಸರ್ವಾನ್ಪಾಪ್ಮನ ಔಷತ್ತಸ್ಮಾತ್ಪುರುಷಃ ।**

(ಬೃ. ಉ. ೧-೪-೧)

೨) **ಅಸ್ಯಾಂ ಪುರಿ ಶೇತೇ ತಸ್ಮಾತ್ಪುರುಷಃ ।** (ಶ. ಬ್ರಾ. ೧೩-೬-೨-೧)

ಎಂಬ ನಿರ್ವಚನಗಳನ್ನು ತಿಳಿಸಿ ಪೀಠಿಕೆಯಲ್ಲಿ ಪುರುಷಶಬ್ದದ ತಾತ್ಪರ್ಯವನ್ನು ವಿವರಿಸಿದೆ. **ಪೂಃ** ಎಂಬ ಪದಕ್ಕೆ ದೇಹವೆಂದರ್ಥ. ಸಕಲ ದೇವಮಾನವತಿರ್ಯಗಾದಿಶರೀರಗಳಲ್ಲಿಯೂ ಸ್ಥಾಪಿತನಾಗಿದ್ದಾನೆಂದು ತಾತ್ಪರ್ಯ. ಇದನ್ನೇ ಶ್ವೇತಾಶ್ವತರೋಪನಿಷತ್ತಿನಲ್ಲಿ ವಿವರಿಸುತ್ತ **ಏಕೋ ದೇವಃ ಸರ್ವಭೂತೇಷು ಗೂಢಃ** (ಶ್ವೇ. ಉ. ೬-೧೧) ಎಂದು ವರ್ಣಿಸಿದೆ

ಮೂರನೆಯದಾಗಿ ;—**ಪುರ ಉಷತಿ ಪ್ರಕಾಶಯತೀತಿ ಪುರುಷಃ। ದಾಹಪ್ರಕಾಶಯೋರೇಕಾಧಿಕರಣತ್ವಾತ್ । ಉಷತಿ** ಎಂಬುದಕ್ಕೆ ಹಿಂದೆ (ಪಾಪವನ್ನು) ದಹಿಸುತ್ತಾನೆ ಎಂದರ್ಥಮಾಡಿದೆ. ಪ್ರಕಾಶಪಡಿಸು ಎಂಬ ರ್ಥವೂ ಈ ಪದಕ್ಕೆ ಸಾಧ್ಯವಾಗುವುದರಿಂದ ಪ್ರಕೃತದಲ್ಲಿ ಜಗದ್ರೂಪವಾದ ಶರೀರವನ್ನೆಲ್ಲಾ ಪ್ರಕಾಶಪಡಿಸುವವನಾದುದರಿಂದ **ಪುರುಷ** ಎಂಬ ಹೆಸರು ಎಂಬ ನಿರ್ವಚನವನ್ನೂ ಹೇಳಬಹುದು. ದಾಹ, ಮತ್ತು ಪ್ರಕಾಶ ಎರಡಕ್ಕೂ ಅಧಿಕರಣವು ಒಂದೇ ಆಗಿರುತ್ತದೆ. ಆದುದರಿಂದಲೇ **ಸಹಸ್ರಾಕ್ಷಃ** ಎಂಬ ವಿಶೇಷಣವೂ ಇರುತ್ತದೆ. ಹೇಗೆಂದರೆ—

**ಯ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತದೃಚಾಭ್ಯುಕ್ತಂ ।**
**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥**

(ಪ್ರಶ್ನ. ೧-೮)

ಸರ್ವಾತ್ಮನೂ, ವಿಶ್ವರೂಪನೂ, ಜಗತ್ಪ್ರಾಣರೂಪನೂ ಆದ ಅಗ್ನಿಯು ಉದಯಿಸುತ್ತಾನೆ. ಜಗತ್ತಿನ ಸಕಲ ರೂಪವನ್ನು ಹೊಂದಿರುವವನೂ, ಸರ್ವಜ್ಞನೂ, ಸ್ವರ್ಣರೂಪನೂ, ಅತ್ಯುತ್ತಮನಾದ ಆಶ್ರಯನೂ, ಜಗತ್ತಿಗೆಲ್ಲ ಒಂದೇ ಜ್ಯೋತಿರೂಪನೂ ಸ್ವಯಂಪ್ರಕಾಶಕನೂ ಆದ ಪರಬ್ರಹ್ಮನನ್ನು ತತ್ತ್ವವೇತ್ತರು ಅರಿಯುತ್ತಾರೆ. ಅಗ್ನಿರೂಪದಲ್ಲಿಯೂ ಸೂರ್ಯರೂಪದಲ್ಲಿಯೂ ಪ್ರಕಾಶಿಸುವ ಈ ಪರಬ್ರಹ್ಮನು ಅಸಂಖ್ಯಾಕವಾದ ರಶ್ಮಿಗಳಿಂದ ಕೂಡಿ ಅನೇಕವಿಧದಲ್ಲಿ ತನ್ನ ಸ್ವರೂಪವನ್ನು ಪ್ರಕಾಶಪಡಿಸುತ್ತ ಸಕಲ ಪ್ರಜೆಗಳಿಗೂ ಪ್ರಾಣರೂಪನಾಗಿ ಪ್ರಕಾಶಿಸುತ್ತಿರುತ್ತಾನೆ. ಆದುದರಿಂದ **ಸಹಸ್ರ**ಪದವು ಸಕಲವನ್ನು ನಿರ್ದೇಶಿಸುತ್ತದೆ. ಸಹಸ್ರಶಬ್ದಕ್ಕೆ ಸಕಲ ಎಂಬ ತಾತ್ಪರ್ಯವು ಹೇಗೆಂದರೆ—

**ಸಹಸ್ರಸ್ಯ ಪ್ರಮಾಸಿ । ಸಹಸ್ರಸ್ಯ ಪ್ರತಿಮಾಸಿ ಸಹಸ್ರಸ್ಯೋನ್ಮಾಸಿ ಸಾಹಸ್ರೋಽಸಿ ಸಹಸ್ರಾಯ ತ್ವೇತಿ ಸರ್ವಂ ವೈ ಸಹಸ್ರಂ ಸರ್ವಮಸಿ ಸರ್ವಸ್ಮೈ ತ್ವೇತ್ಯೇತತ್ ॥**

(ಶ. ಬ್ರಾ. ೮-೭-೪-೧೧)

ಎಲೈ ಅಗ್ನಿಯೇ, ನೀನು ಸಹಸ್ರಕ್ಕೆಪ್ರಮಾ (ಅಳತೆ) ಉಳ್ಳವನಾಗಿದ್ದೀಯೆ. ಸಹಸ್ರಕ್ಕೆ ಪ್ರತಿಮನೂ, ಮತ್ತು ಸಹಸ್ರವಾದ ಗುಣಕವುಳ್ಳವನೂ ಆಗಿದ್ದೀಯೆ. ಸಹಸ್ರವೆಂದರೆ ಸಕಲವೆಂದರ್ಥ. ಆದುದರಿಂದ ನೀನೇ ಸರ್ವ ಪ್ರಮಾಣವೂ ಪ್ರತಿಪ್ರಮಾಣವೂ ಆಗಿದ್ದೀಯೆ ಎಂದು ಸಹಸ್ರಶಬ್ದಕ್ಕೆ ತಾತ್ಪರ್ಯವನ್ನು ತಿಳಿಸಿದೆ. **ವಿಶ್ವತೋ ವೃತ್ವಾ**

ಎಂಬ ವಾಕ್ಯದಿಂದ ವರ್ಣಿತವಾಗಿರುವ ಅಂಶವೂ ಇದೇ ಆಗಿದೆ. ಇದೇ ವಿಷಯವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ರೀತಿ ವಿವರಿಸಿದೆ—

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥** (ಶ್ವೇ. ಉ. ೩-೧೬)

ಈಶ್ವರನ ಪಾಣಿ ಮತ್ತು ಪಾದಗಳು ಸರ್ವತ್ರ ವಿಸ್ತರಿಸಿವೆ. ಅವನ ಚಕ್ಷುಸ್ಸುಗಳೂ, ಶಿರಸ್ಸೂ ಮತ್ತು ಮುಖಗಳೂ ಎಲ್ಲೆಲ್ಲೂ ವ್ಯಾಪಿಸಿವೆ. ಅವನ ಶ್ರೋತ್ರವೂ ಸರ್ವವ್ಯಾಪಿಯಾಗಿದೆ. ಈ ಈಶ್ವರತತ್ತ್ವವು ಜಗತ್ತಿನಲ್ಲಿ ಸಕಲವನ್ನೂ ವ್ಯಾಪಿಸಿ ಸ್ಥಿತವಾಗಿದೆ. ಇಂತಹ ಪರಮಪುರುಷನು ಸಕಲಜಗತ್ತನ್ನೂ ವ್ಯಾಪಿಸಿರುವುದಲ್ಲದೇ, ಅದನ್ನು ಮೀರಿದ್ದಾನೆ. **ಅತ್ಯತಿಷ್ಠದ್ದಶಾಂಗುಲಂ** ಎಂದು ಜಗತ್ತಿಗಿಂತಲೂ ಅಧಿಕನಾಗಿ ಜಗತ್ತಿಗೆಲ್ಲ ಪ್ರಭುವಾಗಿರುವ ಈಶ್ವರನ ಪ್ರಶಂಸೆ ಯಿರುತ್ತದೆ. **ಅತ್ಯತಿಷ್ಠದ್ದಶಾಂಗುಲಂ** ಎಂಬಲ್ಲಿ ದಶಾಂಗುಲ ವೆಂದರೇನು, **ಅತ್ಯತಿಷ್ಠತ್** ಎಂಬುದರ ತಾತ್ಪರ್ಯ ವೇನು ಎಂಬುದನ್ನು ಗಮನಿಸಬೇಕಾದುದು ಪ್ರಕೃತದಲ್ಲಿ ಅತ್ಯವಶ್ಯವಾಗಿರುತ್ತದೆ

**ದಶಾಂಗುಲಪರಿಮಿತಂ ದೇಶಮತ್ಯತಿಷ್ಠದತಿಕ್ರಮ್ಯ ವ್ಯವಸ್ಥಿತಃ । ದಶಾಂಗುಲಮಿತ್ಯುಪ-ಲಕ್ಷಣಂ । ಬ್ರಹ್ಮಾಂಡಾದ್ಬಹಿರಪಿ ಸರ್ವತೋ ವ್ಯಾಪ್ಯಾವಸ್ಥಿತ ಇತ್ಯರ್ಥಃ ।**

(ಸಾ. ಭಾ.)

ದಶಾಂಗುಲಪರಿಮಿತವಾದ ದೇಶವನ್ನು ಅತಿಕ್ರಮಿಸಿ ಸ್ಥಾಪಿತನಾಗಿದ್ದಾನೆ. ದಶಾಂಗುಲವೆಂಬುದು ಕೇವಲ ಉಪಲಕ್ಷಣ ಬ್ರಹ್ಮಾಂಡಕ್ಕಿಂತಲೂ ಮೀರಿ ಸರ್ವತ್ರ ವ್ಯಾಪಿಸಿ ಸ್ಥಿತನಾಗಿದ್ದಾನೆಂದು ತಾತ್ಪರ್ಯವೆಂದು ಸಾಯಣರು ವಿವರಿಸಿದ್ದಾರೆ. ಮಂಗಳಾಚಾರ್ಯರ ವ್ಯಾಖ್ಯಾನವೂ ಇದೇ ತಾತ್ಪರ್ಯವನ್ನು ಕೊಡುತ್ತದೆ.

**ಸ ಏತಾದೃಶಃ ಪರಮೇಶ್ವರಃ ಬ್ರಹ್ಮಾಂಡಶರೀರವಾನ್ ಭೂಮಿಂ ಭೂಶಬ್ದೋಪಲಕ್ಷಿತ-ಭೂರ್ಭುವಃಸ್ವರಾಖ್ಯತ್ರೈಲೋಕ್ಯಮಿತ್ಯರ್ಥಃ । ಅತ ಏವ ವಿಶ್ವತಃ ಸಮಂತತಃ ಸರ್ವಂ ಜಗದಿತಿ ಯಾವತ್ ವೃತ್ವಾ ಆವೃತ್ಯ ಅಧಿಷ್ಠಾಯ । ದಶಾಂಗುಲಾನಿ ಮೀಯಂತೇ ಯಸ್ಮಿನ್ ಕರ್ಮಣಿ ತದ್ದಶಾಂಗುಲಂ ಅತ್ಯತಿಷ್ಠತ್ ಅತಿಕ್ರಮ್ಯ ಸ್ಥಿತವಾನ್ । ಔಪಚಾರಿಕ-ಮಿದಂ ವಚಃ ಪರಿಮಾತುಮಶಕ್ಯತ್ವಾತ್ ಸರ್ವತೋಽಧಿಕಂ ವ್ಯಾಪ್ಯ ತಿಷ್ಠತೀತಿ ಭಾವಃ ॥**

**ಭೂಮಿ ಭೂಃ, ಭುವಃ** ಮತ್ತು **ಸ್ವಃ** ಎಂಬ ಶಬ್ದಗಳಿಂದ ಮೂರುಲೋಕಗಳೂ ವಿವಕ್ಷಿತವಾಗಿವೆ. ಆದುದರಿಂದ ಸಕಲವನ್ನೂ ವ್ಯಾಪಿಸಿದ್ದಾನೆ ಎಂಬ ತಾತ್ಪರ್ಯದ ಸಮನ್ವಯವಿರುತ್ತದೆ **ದಶಾಂಗುಲ**ವೆಂಬುದು ಕೇವಲ ಔಪಚಾರಿಕ ವಾದ ಪದವಾಗಿರುತ್ತದೆ. ಅಳತೆಯನ್ನು ಮಾಡಲು ಸಾಧ್ಯವಲ್ಲವಾದುದರಿಂದ ಈ ಪದಪ್ರಯೋಗವು ಕೇವಲ ಅನಂತ್ಯ ಸೂಚಕವಾದುದು. ಎಲ್ಲಕ್ಕಿಂತಲೂ ಮೀರಿ ಜಗದ್ವ್ಯತಿರಿಕ್ತನಾಗಿಯೂ ಸ್ಥಾಪಿತನಾಗಿದ್ದಾನೆಂದು ತಾತ್ಪರ್ಯವೆಂದು ಮಂಗಳಾಚಾರ್ಯರು ವಿವರಿಸಿದ್ದಾರೆ. ದಶಾಂಗುಲವು ಹೃತ್ಪದ್ಮವನ್ನು ಸೂಚಿಸುವುದಾಗಿದೆಯೆಂದು ಮಹೀಧರ ಮತ್ತು ರಾಮಾನುಜರ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವು ಸರಿಯೇ ಎಂಬ ವಿಮರ್ಶೆಯು ಪ್ರಕೃತದಲ್ಲಿ ಆವಶ್ಯವಾಗಿರುತ್ತದೆ.

**ಅತ್ಯತಿಷ್ಠತ್** ಎಂಬುದಕ್ಕೆ ಅರ್ಥವೇನು ? ಅತಿಕ್ರಮಿಸಿ ಸ್ಥಾಪಿತನಾಗುವುದು ಎಂಬುದು ಒಂದರ್ಥ ಅಥವಾ ಸರ್ವಕ್ಕಿಂತಲೂ ಅಧಿಕನಾಗಿರುವುದರಿಂದ ಎಲ್ಲದರಮೇಲೂ ಪ್ರಭುತ್ವವನ್ನು ಮಾಡುವುದು ಎಂದು ಇನ್ನೊಂದರ್ಥ. ಈ ಎರಡನೆಯ ಅರ್ಥವು ಹೇಗೆ ಸಾಧ್ಯ ಮತ್ತು ಇದಕ್ಕೆ ಆಧಾರವೇನು ಎಂದರೆ ಇದರ ಪ್ರಯೋಗವನ್ನು ಬೇರೆ ಕಡೆಯಲ್ಲಿ ಯಾವ ಅರ್ಥದಲ್ಲಿ ಮಾಡಿದ್ದಾರೆ ಎಂಬುದನ್ನು ಗಮನಿಸಬೇಕು.

**ಯೋ ಜನಾನ್ ಮಹಿಷಾಁ ಇವಾತಿತಸ್ಥೌ ಪವೀರವಾನ್ । ಉತಾಪವೀರವಾನ್ ಯುಧಾ ॥**

(ಋ. ಸಂ. ೧೦-೬೦-೩)

ಈ ರಾಜನು ತನ್ನ ವಿರೋಧಿಗಳನ್ನು ಸೆದೆಬಡಿದು ಅವರಮೇಲೆ ತನ್ನ ಪ್ರಭಾವವನ್ನು ತೋರಿಸುತ್ತಾನೆ ಎಂಬ ತಾತ್ಪರ್ಯವುಳ್ಳ ಈ ಋಕ್ಕಿನಲ್ಲಿ **ಅತಿತಸ್ಥೌ** ಎಂಬ ಕ್ರಿಯಾಪದಕ್ಕೆ (ಶತ್ರುಗಳಲ್ಲಿ) ಎಲ್ಲರನ್ನೂ ಬೀಳಿಸಿ ಅವರಮೇಲೆ ತನ್ನ ಅಧಿಕಾರವನ್ನು ತೋರಿಸುವುದು ಎಂದು ತಾತ್ಪರ್ಯ. ಹೀಗೆಯೇ,

**ಪ್ರ ನೂ ಸ ಮರ್ತಃ ಶವಸಾ ಜನಾಁ ಅತಿ ತಸ್ಥೌ ವ ಊತೀ ಮರುತೋ ಯಮಾವತ ।**
**ಅರ್ವದ್ಭಿರ್ವಾಜಂ ಭರತೇ ಧನಾ ನೃಭಿರಾಪೃಚ್ಛ್ಯಂ ಕ್ರತುಮಾ ಕ್ಷೇತಿ ಪುಷ್ಯತಿ ॥**

(ಋ. ಸಂ. ೧-೬೪-೧೩)

ಎಲೈ ಮರುತ್ತುಗಳೇ, ನಿಮ್ಮ ರಕ್ಷಣೆಗಳಿಂದ ನೀವು ಯಾವ ಮಾನವನನ್ನು ಕಾಪಾಡುತ್ತೀರೋ ಅವನು ತನ್ನಪರಾಕ್ರಮದಿಂದ ಇತರ ಜನರನ್ನು ಮೀರಿ ಅವರಮೇಲೆ ತನ್ನ ಪ್ರಭಾವವನ್ನು ಬೀರುತ್ತಾನೆ ಎಂಬ ತಾತ್ಪರ್ಯವುಳ್ಳ ಈ ಋಕ್ಕಿನಲ್ಲಿಯೂ **ಅತಿತಸ್ಥೌ** ಎಂಬ ಕ್ರಿಯಾಪದಕ್ಕೆ ಇದೇ ಅರ್ಥವನ್ನು ಹೇಳಿದೆ. ಈ ಅರ್ಥದಲ್ಲಿ ಈ ಪ್ರಯೋಗವು ಋಕ್ಸಂಹಿತೆಯಲ್ಲಿ ಮಾತ್ರವಲ್ಲದೇ, ಶತಪಥಾದಿಬ್ರಾಹ್ಮಣಗಳಲ್ಲೂ ಇರುತ್ತದೆ. ಉದಾಹರಣೆಗೆ—

**ಸಾಯವಸ ಕಂ ತ್ವಂ ವೈಶ್ವಾನರಂ ವೇತ್ಥೇತಿ ದಿವಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವಾ ಅತಿಷ್ಠಾ ವೈಶ್ವಾನರ ಏತಗ್ಂ ಹಿ ವೈ ತ್ವಮತಿಷ್ಠಾಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಗ್ಂ ಸಮಾನಾನತಿತಿಷ್ಠಸಿ ಯೋ ವಾ ಏತಮತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ॥**

(ಶ. ಬ್ರಾ. ೧೦-೬-೧-೯)

ಎಲೈ ಸಾಯವಸನೇ, ವೈಶ್ವಾನರನು ಯಾರೆಂದು ತಿಳಿದಿರುವೆ ? ಎಂಬ ಪ್ರಶ್ನೆಗೆ ಉತ್ತರವಾಗಿ ಎಲೈ ರಾಜನೇ, ದ್ಯುಲೋಕವೇ, ವೈಶ್ವಾನರನು ಎಂದು ತಿಳಿದಿರುತ್ತೇನೆ ಎಂದು ಉತ್ತರವಿತ್ತನು, ನಿಜ. ಅದೇ ವೈಶ್ವಾನರನು ಸರ್ವರಿಗೂ ಪ್ರಭುವಾಗಿರುವ ಅದೇ ವೈಶ್ವಾನರನ ಸ್ವರೂಪವನ್ನು ತಿಳಿದಿರುವುದರಿಂದ ನೀನೂ ಸಹ ನಿನ್ನ ಸಮಾನರಲ್ಲಿ ಅಧಿಕಾರವನ್ನು ನಡೆಸುವೆ. ಈ ತತ್ತ್ವವನ್ನರಿತವನು ಮೃತ್ಯುವನ್ನು ಜಯಿಸುತ್ತಾನೆ ಎಂದು **ಅತಿಷ್ಠಾಃ** ಎಂಬ ಪದಕ್ಕೆ ಮೇಲಿನ ತಾತ್ಪರ್ಯವನ್ನೇ ತಿಳಿಸಿದೆ.

**ದಶಾಂಗುಲ**ಶಬ್ದವು ಹೃದಯವನ್ನು ಸೂಚಿಸುವುದಾಗಿದೆ ಎಂದು ಕೆಲವರ ಅಭಿಪ್ರಾಯವೆಂದು ಮೇಲೆ ತಿಳಿಸಿದೆ. ಇದು ಸರಿಯೇ ಎಂಬ ಪ್ರಶ್ನೆಯನ್ನು ಪ್ರಕೃತಪರಿಶೀಲಿಸಬೇಕಾಗಿರುತ್ತದೆ.

**ಯದ್ವಾ ನಾಭೇಃ ಸಕಾಶಾದ್ದಶಾಂಗುಲಮತಿಕ್ರಮ್ಯ ಹೃದಿ ಸ್ಥಿತಃ । ನಾಭಿತ ಇತಿ ಕುತೋ ಲಭ್ಯತೇ ಕತಮ ಆತ್ಮಾ ಇತ್ಯುಪಕ್ರಮ್ಯ ಸೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿರಿತಿ ಶ್ರುತೇಃ ವಿಜ್ಞಾನಾತ್ಮನಃ ಹೃದ್ಯವಸ್ಥಾನಂ ಕರ್ಮಫಲೋಪ-ಭೋಗಾಯ ॥**

(ಮಹೀಧರಭಾಷ್ಯಂ)

ನಾಭಿಯಿಂದ ದಶಾಂಗುಲದ ಪರಿಮಿತಿಯನ್ನು ಮೀರಿ ಹೃದಯದಲ್ಲಿ ಪುರುಷನು ಅವಸ್ಥಿತನಾಗಿರುತ್ತಾನೆ. ಈ ವಿಜ್ಞಾನಾತ್ಮನು ಕರ್ಮಫಲವನ್ನು ಅನುಭವಿಸಲು ಪ್ರಾಣಿಗಳ ಹೃದಯದಲ್ಲಿ ಅಂತರ್ಜ್ಯೋತೀರೂಪನಾಗಿದ್ದಾನೆ ಎಂಬ ಶ್ರುತಿ ವಾಕ್ಯದ ಆಧಾರದಮೇಲೆ ಪ್ರಕೃತದಲ್ಲಿಯೂ ಸಹ ಹೃದಯ ಎಂಬ ತಾತ್ಪರ್ಯವನ್ನು ಹೇಳಬೇಕಾಗುತ್ತದೆ ಎಂದು ಮಹೀಧರಾಚಾರ್ಯರ ಭಾಷ್ಯವು ತಿಳಿಸುತ್ತದೆ. ಇದೇ ಮತವನ್ನು ಅನುಸರಿಸಿ ರಾಮಾನುಜಾಚಾರ್ಯರೂ ಸಹ

**ನಾಭೇರೂರ್ಧ್ವಂ ದ್ವಾದಶಾಂಗುಲಮತಿಕ್ರಮ್ಯಾತಿಷ್ಠತ್ । ಹೃತ್ಪದ್ಮೇ ಇತಿ ಯಾವತ್ ॥**

(ರಾಮಾನುಜಭಾಷ್ಯಂ)

ನಾಭಿಗೆ ಊರ್ಧ್ವಭಾಗದಲ್ಲಿ ದ್ವಾದಶಾಂಗುಲ ಪ್ರಮಾಣವನ್ನು ಮೀರಿದ ಹೃತ್ಪದ್ಮದಲ್ಲಿ ಆತ್ಮನು ಅವಸ್ಥಿತನಾಗಿದ್ದಾನೆಂದು ತಾತ್ಪರ್ಯವನ್ನು ಹೇಳಿದ್ದಾರೆ.

ಆದರೆ, ಪ್ರಕೃತದಲ್ಲಿ **ದಶಾಂಗುಲವು ಹೃದಯ**ಸೂಚಕವಾದ ಪದವೆಂದು ಹೇಳುವುದು ಅಷ್ಟು ಉಚಿತವಲ್ಲವೆಂದು ತೋರುತ್ತದೆ. ಹೃದಯಸೂಚಕ ಎಂಬ ಅಭಿಪ್ರಾಯವನ್ನು ನಿಷೇಧಿಸಲು **ಅನೇಕ ಕಾರಣಗಳೂ** ಇರುತ್ತವೆ. ಉದಾಹರಣೆಗೆ, ಹೃದಯಸ್ಥಿತನಾದ ಈ ಪುರುಷನನ್ನು ವರ್ಣಿಸುವ ಸಂದರ್ಭದಲ್ಲಿ ಯಾವಾಗಲೂ **ದಶಾಂಗುಲ**ಪದದ ಪ್ರಯೋಗವಿರುವುದಿಲ್ಲ. ಸಾಧಾರಣವಾಗಿ **ಅಂಗುಷ್ಠಮಾತ್ರಃ** ಎಂಬ ಪ್ರಯೋಗವೇ ಇರುತ್ತದೆ.

**ಅಂಗುಷ್ಠಮಾತ್ರಃ ಪುರುಷಃ................ಹೃದಯೇ ಸನ್ನಿವಿಷ್ಟಃ ।**

(ಕಾ. ಉ. ೪-೧೨; ೬-೧೭)

ಎಂಬ ವರ್ಣನವೇ ಅಧಿಕವಾಗಿರುತ್ತದೆ. ಅಲ್ಲದೇ, ಪುರುಷಸೂಕ್ತದಲ್ಲಿ ಪ್ರಶಂಸಿತನಾಗಿರುವ ಪುರುಷನು ವಿಶ್ವವ್ಯಾಪಿಯಾದ ಪುರುಷನೇ ವಿನಾ, ಹೃದಯಾಂತರ್ಗತನಾದ ಪುರುಷನಲ್ಲ. ಪೃಥ್ವಿಯೇ ಅವನ ಪಾದವು, ಅಂತರಿಕ್ಷವೇ ಶಿರಸ್ಸು, ಸೂರ್ಯನೇ ಚಕ್ಷುಸ್ಸು ಇತ್ಯಾದಿ ವರ್ಣನಗಳಿರುವುದರಿಂದ ಇದು ವಿಶ್ವವ್ಯಾಪಕನಾದ ಪುರುಷನ ವರ್ಣನವಾಗಿದೆ- ಆದುದರಿಂದ **ಅತ್ಯತಿಷ್ಠತ್** ಎನ್ನುವಾಗ, ಪೃಥ್ವಿಯಿಂದ ಹಿಡಿದು ಹೃದಯದವರೆಗೆ ವ್ಯಾಪಿಸಿ ದಶಾಂಗುಲವನ್ನು ಮೀರಿದನು ಎಂಬುದಕ್ಕಿಂತ ಪೃಥ್ವಿಯಿಂದ ಹಿಡಿದು ಅಂತರಿಕ್ಷವನ್ನು ವ್ಯಾಪಿಸಿ ಅದನ್ನೂ ಮೀರಿದನು ಎಂಬ ತಾತ್ಪರ್ಯವೇ ಸಹಜವಾಗಿರುತ್ತದೆ. ಈ ತಾತ್ಪರ್ಯಕ್ಕೆ ಶ್ರುತಿವಾಕ್ಯವನ್ನು ಆಧಾರವಾಗಿ ತೋರಿಸಬಹುದು. ಉದಾಹರಣೆಗೆ—

**ಮೂರ್ಧಾನಮುಪದಿಶನ್ನೇಷ ವಾ ಅತಿಷ್ಠಾ ವೈಶ್ವಾನರ ಇತಿ...........ಮುಖ್ಯಮಾಕಾಶಮುಪದಿ-ಶನ್ನುವಾಚೈಷ ವೈ ಬಹುಲಃ ॥**

(ಶ. ಬ್ರಾ. ೧೦-೬-೧-೧೧)

ಇತ್ಯಾದಿ ವರ್ಣನಗಳಿಂದ ಅಗ್ನಿವೈಶ್ವಾನರರೂಪನಾದ ಪರಮಪುರುಷನು ಅಂತರಿಕ್ಷಾದಿಲೋಕಗಳನ್ನು ಆವರಿಸಿರುವುದನ್ನು ತಿಳಿಸಿ ಈ ವ್ಯಾಪನದ ವೈಶಾಲ್ಯವನ್ನು ವಿವರಿಸಿದೆ. ಅಲ್ಲದೇ. ಬ್ರಹ್ಮಾಂಡದ ವಿಶಾಲವಾದ ಯಾವಯಾವ ಅವಯವಗಳಿವೆಯೋ ಅವೆಲ್ಲವನ್ನೂ ಬ್ರಹ್ಮಾಂಡದ ಸಂಕ್ಷೇಪರೂಪವಾದ ಮಾನವನ ದೇಹದ ಅವಯವಗಳಿಗೆ ಹೋಲಿಸಿ ವರ್ಣಿಸಿರುವ ಸಂದರ್ಭಗಳೂ ಈ ವಿಷಯವನ್ನು ವಿಶದಪಡಿಸುತ್ತವೆ. ಈ ಹೋಲಿಕೆಯಲ್ಲಿ ಮೂರು ವಿಧಗಳಿರುತ್ತವೆ.

೧. ಮಾನವನ ಪೂರ್ಣದೇಹದೊಡನೆ ಬ್ರಹ್ಮಾಂಡರೂಪವಾದ ಅವಯವವನ್ನು ಹೋಲಿಸುವುದು.
(ಛಾ. ಉ. ೫-೧೮ ; ಮೈ. ಉ. ೬-೭)

೨. ಅಥವಾ ಮಾನವನ ಶಿರಸ್ಸಿನೊಂದಿಗೆ ಮಾತ್ರ ಹೋಲಿಸುವುದು.
(ಶ. ಬ್ರಾ. ೯-೩-೧-೩ ರಿಂದ ೬ ; ಬ್ರ. ಸೂ. ಭಾ. ೧-೨-೩೧, ೩೨)

೩. ಅಥವಾ ಮಾನವನ ಚಕ್ಷುಸ್ಸಿನೊಂದಿಗೆ ಮಾತ್ರ ಹೋಲಿಸುವುದು.
(ಬೃ. ಉ. ೨-೨-೨)

ಈ ವಿಧವಾದ ಹೋಲಿಕೆಯಲ್ಲಿರುವ ಪರಿಮಿತಿಯನ್ನು **ಪ್ರಾದೇಶಮಾತ್ರ** ಎಂದು ತಿಳಿಸಿದೆ. ಈ ಪರಿಮಿತಿಯು ಆಯಾ ಸಂದರ್ಭಗಳಿಗನುಸಾರವಾದ ಪ್ರಮಾಣವುಳ್ಳದ್ದಾಗಿರುವುದು. **ದಶಾಂಗುಲ** ಎಂಬ ಪ್ರಮಾಣಸೂಚಕವಾದ ಪದದಿಂದ ಪ್ರಕೃತದಲ್ಲಿ ಮಾನವನ ದೇಹದ ಪ್ರಮಾಣವೇ ಇಲ್ಲಿ ನಿರ್ದಿಷ್ಟವಾಗಿದೆಯೆಂದರಿಯಬೇಕು. ಹೇಗೆಂದರೆ—

**ತಾಂ ವಾ ಅಂಗುಲಿಭಿರ್ಮಿಮೀತೇ । ಪುರುಷೋ ವೈ ಯಜ್ಞಸ್ತೇನೇದಗ್ಂ ಸರ್ವಂ ಮಿತಂ ತಸ್ಯೈಷಾವಮಾ ಮಾತ್ರಾ ಯದಂಗುಲಯಃ ॥** (ಶ. ಬ್ರಾ. ೧೦-೨-೧-೨)

ಯಜ್ಞವೇದಿಯನ್ನು ಅಂಗುಲಿಗಳ ಪ್ರಮಾಣದಿಂದ ಅಳೆಯುತ್ತಾನೆ. ಯಜ್ಞವು ಪುರುಷರೂಪಿಯಾದುದರಿಂದ, ಆ ಪುರುಷಪ್ರಮಾಣದಿಂದಲೇ ಯಜ್ಞಸಂಬಂಧಿಯಾದ ಸಕಲವೂ ಅಳೆಯಲ್ಪಡುತ್ತದೆ. ಆದುದರಿಂದ ಪ್ರಕೃತದಲ್ಲಿ **ದಶಾಂಗುಲವು** ಪುರುಷನ (ಮಾನವನ) ಪ್ರಮಾಣವನ್ನು ನಿರ್ದೇಶಿಸುವುದಾದರೆ, ಅದು ಪೂರ್ಣವಾದ ದೇಹವನ್ನು ನಿರ್ದೇಶಿಸುವುದಿಲ್ಲ. ಪುರುಷನ ದೇಹವು ಹತ್ತು ಅಂಗುಲಕ್ಕಿಂತ ಅಧಿಕವಾದುದು. ಚಕ್ಷುಸ್ಸಿನ ಪ್ರಮಾಣವಲ್ಲ. ಚಕ್ಷುಸ್ಸು ಹತ್ತು ಅಂಗುಲದ ಪ್ರಮಾಣವಿಲ್ಲ. ಆದುದರಿಂದ ಇಲ್ಲಿ ದಶಾಂಗುಲದ ಪ್ರಮಾಣವು **ಶಿರಸ್ಸಿನ** ಪ್ರಮಾಣವನ್ನೇ ನಿರ್ದೇಶಿಸಿರಬೇಕು.

ಶತಪಥಬ್ರಾಹ್ಮಣದಲ್ಲೂ (೧೦–೬–೧೧–೧೧) ಮತ್ತು ಛಾಂದೋಗ್ಯೋಪನಿಷತ್ತಿನಲ್ಲೂ (೫-೧೨-೧೮) ಅಶ್ವಪತಿ ಕೈಕೇಯನು ಈ ವಿಶ್ವಾತ್ಮನಾದ ಪರಮಪುರುಷನ ಸ್ವರೂಪವನ್ನು ವರ್ಣಿಸುತ್ತ ಆ ಬ್ರಹ್ಮಾಂಡದ ಸಂಕ್ಷೇಪರೂಪವಾದ ಮಾನವದೇಹದ ಹೋಲಿಕೆಯನ್ನು ತೋರಿಸಿದ್ದಾನೆ. ಆ ವರ್ಣನದ ಪ್ರಕಾರ ಪೃಥ್ವಿಯೇ ಪುರುಷನ ಆಧಾರ- ಇದನ್ನು ಪಾದಗಳಿಗೆ ಹೋಲಿಸಿದೆ. ಹೀಗೆಯೇ ಪುರುಷನ ಉದಕರೂಪವಾದ ಸಂಪತ್ತನ್ನು ಶರೀರದ ಒಳಗಿನ ಜಠರಕ್ಕೂ ಅವನ ಬಹುಲತ್ವವನ್ನು ತೋರಿಸುವ ಆಕಾಶವನ್ನು ಒಳಗಿನ ಆತ್ಮಕ್ಕೂ, ನಾನಾ ಸಂಚಾರವುಳ್ಳ ವಾಯುವನ್ನು ಶರೀರದ ಪ್ರಾಣಕ್ಕೂ, ಸುತತೇಜಸ್ಕನಾದ ಸೂರ್ಯನನ್ನು ದೇಹದ ಚಕ್ಷುಸ್ಸಿಗೂ, ಅವನ ಪ್ರಭುತ್ವಕ್ಕೆ ಸಾಧಕವಾದ ದ್ಯುಲೋಕವನ್ನು ಶಿರಸ್ಸಿಗೂ ಹೋಲಿಸಿದೆ. ಈ ಭಾಗದ ಕೊನೆಯ ಪ್ರಕರಣವು ಪ್ರಕೃತದಲ್ಲಿ **ದಶಾಂಗುಲದ** ತಾತ್ಪರ್ಯವನ್ನು ನಿಷ್ಕರ್ಷಿಸುವುದರಲ್ಲಿ ಸಹಾಯಮಾಡುತ್ತದೆ.

**ತಾನ್ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ ವೈಶ್ವಾನರಂ ವಿದ್ವಾಂ-**
**ಸೋಽನ್ನಮತ್ಥ ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರ-**
**ಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ॥**

(ಛಾ. ಉ. ೫-೧೮)

ಈ ವಿಶ್ವಾತ್ಮನ ಪೃಥಗ್ರೂಪಗಳನ್ನು ಮಾತ್ರ ತಿಳಿದವರಾಗಿ ಅನ್ನವನ್ನು ಭುಜಿಸುತ್ತಿದ್ದೀರಿ. ಆದರೆ ಪ್ರಾದೇಶಮಾತ್ರನಾದ ಈ ವೈಶ್ವಾನರಾತ್ಮನನ್ನು ಯಾರು ಉಪಾಸಿಸುವರೋ ಅವರು ಸಕಲ ಲೋಕದಲ್ಲೂ, ಸಕಲ ಭೂತಗಳಲ್ಲೂ, ಸಕಲ ಆತ್ಮಗಳಲ್ಲೂ ವ್ಯಾಪಿಸಿ ಸರ್ವತ್ರ ಆತ್ಮವನ್ನು ಭುಜಿಸುತ್ತಾರೆ ಎಂದಿರುತ್ತದೆ.

**ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ**
**ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದ..............ವೈಶ್ವಾನರೋ ಹಿನಸ್ತಿ ॥**

(ಶ. ಬ್ರಾ. ೧೦-೬-೧-೧೧)

ಈ ವೈಶ್ವಾನರಾಗ್ನಿಯು ಪರಮಪುರುಷನಲ್ಲದೇ ಬೇರೆಯಲ್ಲ. ಇವನ ಉಪಾಸನವು ಪರಮಪುರುಷನ ಪೂಜೆಯೇ ಆಗಿರುತ್ತದೆ ಎಂದು ಪ್ರಾದೇಶಮಾತ್ರನಾದ ಪರಮಪುರುಷನ ಸ್ತುತಿಯಿದೆ.

ಈ ವಿಧವಾದ ವರ್ಣನದಲ್ಲಿ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಬ್ರಹ್ಮಾಂಡದ ಸಂಕ್ಷೇಪರೂಪವಾದ ಮಾನವಶರೀರದ ಹೋಲಿಕೆಯನ್ನು ವಿವರಿಸಿ ಈ ಪ್ರಕರಣದಲ್ಲಿ **ದಶಾಂಗುಲ** ಪ್ರಮಾಣವು ಪುರುಷನ ತಲೆಯಭಾಗವನ್ನು ಮಾತ್ರ ನಿರ್ದೇಶಿಸುತ್ತದೆ ಎಂಬುದು ಒಂದು, ಎರಡನೆಯದಾಗಿ, ಸಪ್ತ (ಏಳು) ವಿಧವಾದ ಅವಯವಗಳಿಂದ ಕೂಡಿದ ಅವಯವಿ ಎಂದರೆ ಪುರುಷನು ಎಂಬ ತಾತ್ಪರ್ಯವು ಎರಡನೆಯದು.

**ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಃ ।**

(ಶ. ಬ್ರಾ. ೧೦-೬-೧-೧೦)

ಈ ಪ್ರಾದೇಶಮಾತ್ರನಾದ ಪುರುಷನಲ್ಲಿ ಸಕಲ ದೇವತೆಗಳೂ ಒಂದುಗೂಡಿ ಐಕ್ಯರಾಗಿದ್ದಾರೆ. (ಪ್ರಾದೇಶಮಾತ್ರವೆಂದರೆ ೧೦ ಅಥವಾ ೧೨ ಅಂಗುಲಗಳೆಂದು ಭಾಷ್ಯಕಾರರು ತಿಳಿಸಿದ್ದಾರೆ). ಇವೇ ಈಶ್ವರನ ಮಹಿಮೆ ಇದೇ ಶತಪಥ ಬ್ರಾಹ್ಮಣದ ವಾಕ್ಯವನ್ನು ವಿವರಿಸುತ್ತ ಶಂಕರಾಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ ಈ ರೀತಿ ತಿಳಿಸಿದ್ದಾರೆ.

**ಸಂಪತ್ತಿನಿಮಿತ್ತಾ ವಾ ಸ್ಯಾತ್ಪ್ರಾದೇಶಮಾತ್ರಶ್ರುತಿಃ । ಕುತಃ । ತಥಾಹಿ ; ಸಮಾನಪ್ರಕರಣಂ**
**ವಾಜಸನೇಯಿಬ್ರಾಹ್ಮಣಂ ದ್ಯುಪ್ರಭೃತೀನ್ಪೃಥಿವೀಪರ್ಯಂತಾಂಸ್ತ್ರೈಲೋಕ್ಯಾತ್ಮನೋ ವೈ-**
**ಶ್ವಾನರಸ್ಯಾವಯವಾನಧ್ಯಾತ್ಮಮೂರ್ಧಪ್ರಭೃತಿಷು ಚುಬುಕಪರ್ಯಂತೇಷು ದೇಹಾ-**
**ವಯವೇಷು ಸಂಪಾದಯತ್ಪ್ರಾದೇಶಮಾತ್ರಸಂಪತ್ತಿಂ ಪರಮೇಶ್ವರಸ್ಯ ದರ್ಶಯತಿ ।**

(ಬ್ರ. ಸೂ. ಶಂ. ಭಾ. ೧-೨-೩೧)

ತನ್ನ ಪ್ರಾದೇಶಮಾತ್ರವಾದ ಪರಿಮಿತಿಯಲ್ಲಿಯೇ ಸಕಲವೂ ಅಡಗಿರುವುದರಿಂದ ಈ ವರ್ಣನವಿರುತ್ತದೆ. ದ್ಯುಲೋಕ, ಅಂತರಿಕ್ಷ ಮತ್ತು ಪೃಥ್ವೀ ಈ ಸಕಲ ಲೋಕಗಳೂ ಈ ಪ್ರಾದೇಶಮಾತ್ರದಲ್ಲಿ ಅಡಕವಾಗಿರುತ್ತವೆ. ಸಕಲ ಲೋಕಗಳ ಮತ್ತು ಸಕಲದೇವತೆಗಳ ಸಮುದಾಯಸಂಪತ್ತನ್ನು ಹೊಂದಿರುವ ಈಶ್ವರವರ್ಣನವೇ ಈ ಪ್ರಕರಣದ ಉದ್ದಿಶ್ಯ

ವೆಂದು ಈ ಪ್ರಕರಣದ ತಾತ್ಪರ್ಯವನ್ನು ವಿವರಿಸಿದೆ. ವಿಶ್ವವ್ಯಾಪಕನಾದ ಈ ಪರಮಪುರುಷನಿಗೆ ಕೇವಲ ಪ್ರಾದೇಶ ಮಾತ್ರವಾದ ಸಂಕೋಚವು ಏತಕ್ಕೆಂದರೆ ;—

**ದ್ಯುಪ್ರಭೃತಿಪೃಥಿವ್ಯಂತಪ್ರದೇಶಸಂಬಧಿನ್ಯಾ ಮಾತ್ರಯಾ ಪರಿಚ್ಛಿನ್ನತ್ವಂ ಅನವಚ್ಛಿನ್ನಸ್ಯ ಪರಮಾತ್ಮನೋ ವೈಶ್ವಾನರಸ್ಯ ಕಥಂ ಉಪಪದ್ಯತ ಇತ್ಯತ್ರಾಹ-ಅನವಚ್ಛಿನ್ನಸ್ಯೈವ ಪರಮಾತ್ಮನಃ ಉಪಾಸನಾಭಿವ್ಯಕ್ತ್ಯರ್ಥಂ ॥** (ಬ್ರ. ಸೂ. ಶಾ. ಭಾ. ೧-೨-೩೦)

ಈ ವಿಧವಾಗಿ ಅವಿಭಕ್ತನೂ, ಅನಂತನೂ, ಅನವಚ್ಛಿನ್ನನೂ ಆದ ಈಶ್ವರನಿಗೆ **ಪ್ರಾದೇಶಮಾತ್ರ** ಎಂಬ ಪರಿಚ್ಛೇದವು ನ್ಯಾಯವೇ ಎಂಬ ಪ್ರಶ್ನೆಯು ಸಂಭವಿಸಿದರೆ, ಅದಕ್ಕೆ ಉತ್ತರವಾಗಿ, ಈ ಪರಿಚ್ಛೇದರೂಪವಾದ ವರ್ಣನವು ಪಾರಮಾರ್ಥಿಕವಲ್ಲ. ಇದು ಕೇವಲ ಉಪಾಸನೆಗೆ ಸಾಧನರೂಪವಾಗಿ ಮಾತ್ರ ಇರುತ್ತದೆ ಎಂದು ಸಮಾಧಾನವನ್ನು ಹೇಳಿದೆ.

ಮೇಲೆ ಉದಾಹರಿಸಿರುವ ಶತಪಥಬ್ರಾಹ್ಮಣದ ವಾಕ್ಯಗಳಲ್ಲಿ ವರ್ಣಿತವಾಗಿರುವ ವೈಶ್ವಾನರಪುರುಷನ ಪ್ರಾದೇಶಮಾತ್ರತ್ವವನ್ನು ವಿವರಿಸುತ್ತ ಶಂಕರಾಚಾರ್ಯರು ಅದರ ತಾತ್ಪರ್ಯವನ್ನು ಮತ್ತು ಈ ವರ್ಣನೆಯ ಉದ್ದಿಶ್ಯ ವನ್ನು ಬ್ರಹ್ಮಸೂತ್ರಭಾಷ್ಯದಲ್ಲಿ ಈ ರೀತಿ ತಿಳಿಸಿದ್ದಾರೆ.

**೧- ಮೂರ್ಧಾದಿಚುಬುಕಾಂತೇಷು ಪುರುಷಾವಯವೇಷು ಪುರುಷವಿಧತ್ವಂ ಕಲ್ಪಿತಂ ತದಭಿಪ್ರಾಯೇಣೇದಮುಚ್ಯತೇ—ಪುರುಷವಿಧಂ ಪುರುಷೇऽನ್ತಃ ಪ್ರತಿಷ್ಠಿತಂ ವೇದ ಇತಿ ॥**
(ಶ. ಭಾ. ೧-೨-೨೮)

ಈ ಪರಮಾತ್ಮನು ಪುರುಷನಲ್ಲಿ ಅಂತರ್ಗತವಾಗಿ ಪುರುಷರೂಪದಲ್ಲಿರುತ್ತಾನೆ ಎಂಬ ವರ್ಣನವು ಪುರುಷನ ಶಿರಸ್ಸಿನಿಂದ ಹಿಡಿದು ಗಲ್ಲದವರೆಗಿರುವ ಪ್ರಾಂತದ ವರ್ಣನವು ಮಾತ್ರವಾಗಿರುತ್ತದೆ.

**೨. ಅತಿಮಾತ್ರಸ್ಯಾಪಿ ಪರಮೇಶ್ವರಸ್ಯ ಪ್ರಾದೇಶಮಾತ್ರತ್ವಂ ಅಭಿವ್ಯಕ್ತಿನಿಮಿತ್ತಂ ।**
(ಶ. ಭಾ. ೧-೨-೨೯)

ಅವರ್ಣ್ಯನಾದ ಪರಮೇಶ್ವರನ ಅಭಿವ್ಯಕ್ತಿರೂಪವಾದ ವರ್ಣನಕ್ಕಾಗಿ ಮಾತ್ರ ಈ ಪ್ರಾದೇಶವರ್ತಿತ್ವವು ಪಠಿತವಾಗಿದೆ.

**೩- ಪ್ರಾದೇಶಮಾತ್ರಹೃದಯಪ್ರತಿಷ್ಠೇನ ವಾಯಂ ಮನಸಾನುಸ್ಮರ್ಯತೇ ತೇನ ಪ್ರಾದೇಶ ಮಾತ್ರ ಇತ್ಯುಚ್ಯತೇ । ...... ...... ...... । ನಚೇಹ ಪರಮೇಶ್ವರಗತಂ ಕಿಂಚಿತ್ಪರಿಮಾಣಸ್ತಿಮು ಯದ್ಧೃದಯಸಂಬಂಧಾದ್ವ್ಯಜ್ಯತೇ । ಪ್ರಾದೇಶಮಾತ್ರತ್ವೇನ ವಾಯಮುಪ್ರಾದೇಶಮಾತ್ರೋऽಪ್ಯನುಸ್ಮರಣೀಯಃ ಪ್ರಾದೇಶಮಾತ್ರಶ್ರುತ್ಯರ್ಥವತ್ತಾಯೈ ।**
(ಶ. ಭಾ. ೧-೨-೩೦)

ಅನುಸ್ಮರಣಕ್ಕಾಗಿ ಮಾತ್ರ ಈ ಪ್ರಾದೇಶವರ್ತಿತ್ವ ಎಂಬ ನಿರ್ದೇಶವಿದೆಯೆಂದು ಬಾದರಿಯವರ ಮತ. ಹೃದಯ ಪ್ರತಿಷ್ಠಿತವಾದ ಈ ಪರಮೇಶ್ವರನನ್ನು ಮನಸ್ಸಿನ ಸಹಾಯದಿಂದ ಧ್ಯಾನಮಾಡುವುದಕ್ಕಾಗಿ ಈ ವರ್ಣನವು. ಆದರೆ, ಯಥಾರ್ಥಸ್ಥಿತಿಯನ್ನು ಪರಿಶೀಲಿಸಿದರೆ, ಪರಮಪುರುಷನು ಇಂತಹ ಪರಿಮಿತಿಗೆ ವಸ್ತುವಾಗಿಲ್ಲ. ಅವನು ಪ್ರಾದೇಶಮಾತ್ರನಲ್ಲವೇ ಅಲ್ಲ.

೪ ೧-೨-೩೧ನೇ ಸೂತ್ರದ ಭಾಷ್ಯದ ತಾತ್ಪರ್ಯವನ್ನು ಮೇಲೆ ತಿಳಿಸಿದೆ.

೫- **ಆಮನಂತಿ ಚೈನಂ ಪರಮೇಶ್ವರಮಸ್ಮಿನ್ ಮೂರ್ಧಚುಬುಕಾಂತರಾಳೇ ಜಾಬಾಲಾಃ। ಪುನರಾಮನಂತಿ ಕತಮಚ್ಚಾಸ್ಯ ಸ್ಥಾನಂ ಭವತೀತಿ। ಭ್ರುವೋರ್ಘ್ರಾಣಸ್ಯ ಚ ಯಃ ಸಂಧಿಃ ಸ ಏಷ ದ್ಯುಲೋಕಸ್ಯ ಪರಸ್ಯ ಚ ಸಂಧಿರ್ಭವತೀತಿ ...... .... ....॥**

(ಶ. ಭಾ. ೧.೨-೩೨)

ಈ ಪರಮೇಶ್ವರರ ಸ್ಥಾನವು ಮೂರ್ಧ (ಶಿರಸ್ಸು) ಮತ್ತು ಚುಬುಕ (ಗಲ್ಲ) ಇವುಗಳ ನಡುವೆಯಿದೆ. ಎಂದರೆ ನಿಷ್ಕೃಷ್ಟವಾದ ಸ್ಥಾನವು ಭ್ರೂ (ಹುಬ್ಬು) ಮತ್ತು ಘ್ರಾಣ (ನಾಸಿಕ) ಇವೆರಡರ ನಡುವೆ ಇರುತ್ತದೆ. ಈ ಸ್ಥಾನವು ದ್ಯುಲೋಕಕ್ಕೂ ಮತ್ತು ಆದಕ್ಕೂ ಮೀರಿದ ಉತ್ತಮಲೋಕಕ್ಕೂ ಇರುವ ಸಂಧಿಸ್ಥಾನವಾಗಿರುತ್ತದೆ. ಮೇಲೆ ಉದಾಹರಿಸಿರುವ ಛಾಂದೋಗ್ಯೋಪನಿಷತ್ತಿನ ವಾಕ್ಯದ ತಾತ್ಪರ್ಯವನ್ನು ವಿವರಿಸುವಾಗ ಶಂಕರಾಚಾರ್ಯರು **ಪ್ರಾದೇಶ** ಮಾತ್ರ ಎಂಬ ಪದಕ್ಕೆ ವೈಕಲ್ಪಿಕವಾದ ಅರ್ಥವನ್ನು ತಿಳಿಸಿದ್ದಾರೆ.

೧. **ಯಸ್ತ್ವೇತಮೇವಂ ಯಥೋಕ್ತಾವಯವೈರ್ದ್ಯುಮೂರ್ಧಾದಿಭಿಃ ಪೃಥಿವೀಪಾದಾನ್ತೈರ್ವಿಶಿಷ್ಟಮೇಕಂ ಪ್ರಾದೇಶಮಾತ್ರಂ ಪ್ರಾದೇಶೈಃ ದ್ಯುಮೂರ್ಧಾದಿಭಿಃ ಪೃಥಿವೀಪಾದಾನ್ತೈರಧ್ಯಾತ್ಮಂ ಮೀಯತೇ ಜ್ಞಾಯತ ಇತಿ ಪ್ರಾದೇಶಮಾತ್ರಂ।**

(ಛಾ. ಉ. ಶ. ಭಾ. ೫-೧೮)

ಶರೀರದ ತಲೆಯ ಭಾಗದಿಂದ ಪಾದದವರೆಗೆ ಯಾವ ಪ್ರದೇಶವು ಇರುವುದೋ ಇದು ದ್ಯಾವಾಪೃಥಿವಿಗಳ ಅಂತರದಲ್ಲಿರುವ ಪ್ರದೇಶವನ್ನು ಪ್ರತಿಬಿಂಬಿಸುತ್ತದೆ. ಈ ಪ್ರದೇಶಜ್ಞಾನವು ಅಧ್ಯಾತ್ಮಜ್ಞಾನಕ್ಕೆ ಸಾಧಕವಾಗಿರುತ್ತದೆ.

೨. **ಮುಖಾದಿಷು ವಾ ಕರಣೇಷ್ವತ್ತೃತ್ವೇನ ಮೀಯತ ಇತಿ ಪ್ರಾದೇಶಮಾತ್ರಃ।**

ಮೇಲಿನ ಮತ್ತು ಕೆಳಗಿನ ದವಡೆಗಳುಳ್ಳ ಮುಖವು ತನ್ನ ವಿಸ್ತೃತವಾದ ಮತ್ತು ಅನ್ನಕ್ಕೆ ಪ್ರವೇಶವನ್ನು ಕೊಡುವ ಅವಕಾಶವನ್ನು ಹೊಂದಿರುವುದರಿಂದ ಈ ಮಧ್ಯವರ್ತಿಯಾದ ಆಕಾಶಪ್ರದೇಶವು ಪ್ರಾದೇಶವಾಗಿರುತ್ತದೆ. ವಿಶ್ವವ್ಯಾಪಕ ವಾದ ಆಕಾಶಕ್ಕೆ ಇದು ಪ್ರತಿಬಿಂಬವಾಗಿರುತ್ತದೆ.

೩. **ದ್ಯುಲೋಕಾದಿಪೃಥಿವ್ಯಂತಪ್ರದೇಶಪರಿಮಾಣೋ ವಾ ಪ್ರಾದೇಶಮಾತ್ರಃ।**

ದ್ಯುಲೋಕ ಮತ್ತು ಪೃಥ್ವಿ ಇವುಗಳಿಗಿರುವ ಅಂತರವು ಪ್ರಾದೇಶಮಾತ್ರವೆಂದು ಕರೆಯಲ್ಪಡಬಹುದು. ಅಥವಾ

೪. **ಪ್ರಕರ್ಷೇಣ ಶಾಸ್ತ್ರೇಣಾದಿಶ್ಯಂತೆ ಇತಿ ಪ್ರಾದೇಶಾ ದ್ಯುಲೋಕಾದಯ ಏವ ತಾವತ್ಪರಿಮಾಣಃ ಪ್ರಾದೇಶಮಾತ್ರಃ।**

ದ್ಯುಲೋಕಾದಿಗಳ ವಿಷಯದಲ್ಲಿ ಶಾಸ್ತ್ರಗಳು ಏನನ್ನು ಹೇಳುತ್ತವೆಯೋ ಆ ಪರಿಮಾಣವೇ ಪ್ರಾದೇಶಮಾತ್ರವು. ಅಥವಾ

೫. **ಶಾಖಾಂತರೇ ತು ಮೂರ್ಧಾದಿಚಿಬುಕಪ್ರತಿಷ್ಠ ಇತಿ ಪ್ರಾದೇಶಮಾತ್ರಂ ಕಲ್ಪಯಂತಿ।**

ಶಿರಸ್ಸಿನಿಂದ ಗಲ್ಲದವರೆಗಿರುವ ಪ್ರದೇಶವು ಪ್ರಾದೇಶಮಾತ್ರವೆಂದು ಕೆಲವು ಶಾಸ್ತ್ರಗಳು ತಿಳಿಸುತ್ತವೆ.

ಇಷ್ಟು ಅರ್ಥಗಳಲ್ಲಿ ಮೂರನೆಯ ಅರ್ಥವೇ ಪ್ರಕೃತದಲ್ಲಿ **ದಶಾಂಗುಲ** ಶಬ್ದದ ತಾತ್ಪರ್ಯವನ್ನು ವಿವರಿಸುವುದಾಗಿದೆ. ಆದರೆ ದ್ಯುಲೋಕಕ್ಕೂ ಪೃಥ್ವಿಗೂ ಇರುವ ಅಂತರವು ಕೇವಲ **ದಶಾಂಗುಲ**ಮಾತ್ರವುಳ್ಳದ್ದೇ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಇದು ಕೇವಲಸಂಕೇತಮಾತ್ರವೆಂದರಿಯಬೇಕು. ಇತಹ ಸಂಕೇತಗಳು ಅನೇಕ ಸಂದರ್ಭಗಳಲ್ಲಿ ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತವೆ. ಉದಾಹರಣೆಗೆ—ಯಜ್ಞವೇದಿ, ಅದರ ಪ್ರಮಾಣ, ಯಜ್ಞವೇದಿಯು ವಿಶ್ವವೈಶಾಲ್ಯವನ್ನು ಪ್ರತಿಬಿಂಬಿಸುವುದು ಇವೆಲ್ಲ ಇಂತಹ ಸಂಕೇತಸಂಜ್ಞಕವಾದ ಪರಿಭಾಷೆಗಳಿಂದಲೇ ವರ್ಣಿತವಾಗಿವೆ.

ವಿಶ್ವವನ್ನೇ ಪ್ರತಿಬಿಂಬಿಸುವ ಯಜ್ಞವೇದಿಯ ಪ್ರಮಾಣವೂ ಅಂಗುಲಿಪ್ರಮಾಣವನ್ನೇ ಅನುಸರಿಸುತ್ತದೆ. ಯಜ್ಞವೇದಿಯೂ ಪುರುಷನೂ ಸಮಪ್ರಮಾಣವುಳ್ಳವು. ಪುರುಷನ ದೇಹವನ್ನು ಯಾವ ಪ್ರಮಾಣದಿಂದ ಅಳೆಯುವರೋ, ಯಜ್ಞವೇದಿಯನ್ನೂ ಅದೇ ಪ್ರಮಾಣದಿಂದ ಅಳೆಯತಕ್ಕದ್ದು. ಹೇಗೆಂದರೆ—

**ತಂ ವಾ ಅಂಗುಲಿಭಿರ್ಮಿಮೀತೇ । ಪುರುಷೋ ವೈ ಯಜ್ಞಸ್ತೇನೇದಗ್ಂ ಸರ್ವಂ ಮಿತಂ ತಸ್ಯೈಷಾವಮಾ ಮಾತ್ರಾ ಯದಂಗುಲಯಸ್ತದ್ಯಾಸ್ಯಾವಮಾ ಮಾತ್ರಾ ತಾಮಸ್ಯ ತದಾಪ್ನೋತಿ ತಯೈನಂ ತನ್ಮಿಮೀತೇ ।**

(ಶ. ಬ್ರಾ. ೧೦-೨-೧-೨)

ಯಜ್ಞವೇದಿಯನ್ನು ಅಂಗುಲಿಗಳಿಂದ ಅಳೆಯುತ್ತಾನೆ. ಯಜ್ಞವೇ ಪುರುಷನನ್ನುಪ್ರತಿಬಿಂಬಿಸುವ ಮತ್ತು ಅವನೊಂದಿಗೆ ಸಮಪ್ರಮಾಣವುಳ್ಳದ್ದಾದುದರಿಂದ ಅವನನ್ನು ಅಳೆಯುವ ಪ್ರಮಾಣದಿಂದಲೇ ಅದನ್ನೂ ಅಳೆಯತಕ್ಕದ್ದು. ಪುರುಷನನ್ನು ಅಳೆಯಲು ಕನಿಷ್ಠಪ್ರಮಾಣವಾವುದೆಂದರೆ ಅದು ಅಂಗುಲಿಯ ಪ್ರಮಾಣ. ಆದುದರಿಂದ ಅದೇ ಪ್ರಮಾಣದಿಂದಲೇ ಯಜ್ಞವೇದಿಯನ್ನೂ ಅಳೆಯತಕ್ಕದ್ದು. ಇದೇ ಯಜ್ಞಪುರುಷನನ್ನು ಅಳೆಯುವ ಕ್ರಮ.

ವಿಶ್ವಸೃಷ್ಟಿಯೂ, ಈ ಸೃಷ್ಟಿಯನ್ನು ಅನುಕರಿಸುವ ಯಜ್ಞವೂ ಸಹ ಪ್ರಮಾಣಾತ್ಮಕವಾದ ಮಾನ (ಅಳೆಯುವ) ಕ್ರಿಯೆಗಳಿಂದೇ ಸ್ತುತವಾಗಿವೆ. ಉದಾಹರಣೆಗೆ—

**ಕಾಸೀತ್ಪ್ರಮಾ ಪ್ರತಿಮಾ ಕಿಂ ನಿದಾನಮಾಜ್ಯಂ ಕಿಮಾಸೀತ್ಪರಿಧಿಃ ಕ ಆಸೀತ್ ।**
**ಛಂದಃ ಕಿಮಾಸೀತ್ಪ್ರಉಗಂ ಕಿಮುಕ್ಥಂ ಯದ್ದೇವಾ ದೇವಮಯಜಂತ ವಿಶ್ವೇ ॥**

(ಋ. ಸಂ. ೧೦-೧೩೦-೩)

ವಿಶ್ವೇದೇವತೆಗಳು ಪರಮಾತ್ಮನಾದ ಈಶ್ವರನನ್ನುದ್ದೇಶಿಸಿ ಯಾಗವನ್ನರ್ಪಿಸಿದಾಗ, ಈ ಯಜ್ಞಕ್ಕೆ ಪ್ರಮಾಣವಾವುದು ? ಪ್ರತಿಮೆಯಾವುದು ? ಆದಿಕಾರಣವಾವುದು ? ಆಜ್ಯವಾವುದು ? ಪರಿಧಿಯಾವುದು ? ಛಂದಸ್ಸಾವುದು ? ಇತ್ಯಾದಿಯಾಗಿ ಪ್ರಶ್ನೆಯನ್ನು ಕೇಳುವಾಗ ಯಜ್ಞದ ಪ್ರಮಾಣವು ಸೂಚಿತವಾಗಿದೆ. ಪುರುಷಪ್ರಮಾಣವೇ ಯಜ್ಞದ ಪ್ರಮಾಣವೆಂದೂ ಅನೇಕ ವಾಕ್ಯಗಳು ತಿಳಿಸುತ್ತವೆ. ಪಾರ್ಥಿವವಾದ ಯಜ್ಞಕ್ಕೆ ಪಾರ್ಥಿವಪುರುಷನ ಪ್ರಮಾಣ ; ವಿಶ್ವಾತ್ಮಕವಾದ ಯಜ್ಞಕ್ಕೆ ಪರಮಪುರುಷನ ಪ್ರಮಾಣ.

ಯಾವರೀತಿ ಬ್ರಹ್ಮಾಂಡದ ಸಕಲ ತತ್ತ್ವಗಳೂ ಅದಕ್ಕೆ ಸಂಕ್ಷೇಪರೂಪವಾದ ಮಾನವನ ದೇಹದ ಅವಯವಗಳಲ್ಲಿ ಪ್ರತಿಬಿಂಬಿತವಾಗಿವೆಯೆಂದು ವರ್ಣಿತವಾಗಿವೆಯೋ, ಅದರಂತೆಯೇ, ವಿಶ್ವಯಜ್ಞಕ್ಕೆ ಪ್ರಧಾನನಾದ ಪರಮಪುರುಷನ ಮುಖದ ಪ್ರಮಾಣವೂ ಮಾನವನ ಮುಖದ ಪ್ರಮಾಣದಲ್ಲಿ ಪ್ರತಿಬಿಂಬಿತವಾಗಿದೆ. ಈ ಮುಖಪ್ರಮಾಣವು

**ದಶಾಂಗುಲ** ಪರಿಮಿತಿಯುಳ್ಳದ್ದು. ಇದನ್ನೇ ವಿಶ್ವಾತ್ಮನ ಪರವಾಗಿ ಅರ್ಥಮಾಡಿದರೆ, ಆಗ **ದಶಾಂಗುಲಕ್ಕೆ** ಪೃಥ್ವಿ ಮತ್ತು ದ್ಯುಲೋಕದ ನಡುವೆ ಇರುವ ಅಂತರವೆಂದು ತಾತ್ಪರ್ಯವಾಗುತ್ತದೆ. ಆದುದರಿಂದ **ಅತ್ಯತಿಷ್ಠದ್ದಶಾಂಗುಲಂ** ಎಂಬುದಕ್ಕೆ ದಶಾಂಗುಲ ಪ್ರಮಾಣದಿಂದ ಸೂಚಿತವಾದ ದ್ಯಾವಾಪೃಥಿವಿಗಳ ಅಂತರವನ್ನೆಲ್ಲಾ ವ್ಯಾಪಿಸಿ ಪುರುಷನು ಸಕಲ ವಿಶ್ವದಲ್ಲೂ ತನ್ನ ಪ್ರಭುತ್ವವನ್ನು ಪ್ರಕಟಿಸಿದ್ದಾನೆ ಎಂದು ತಾತ್ಪರ್ಯವನ್ನು ಹೇಳಬಹುದು ಅಥವಾ **ದಶಾಂಗುಲ** ಪ್ರಮಾಣದಿಂದ ಸೂಚಿತವಾದ ದ್ಯಾವಾಪೃಥಿವಿಗಳ ಅಂತರವನ್ನೆಲ್ಲ ವ್ಯಾಪಿಸಿ ಅದನ್ನೂ ಮೀರಿ ಸ್ಥಾಪಿತನಾಗಿದ್ದಾನೆ ಎಂದೂ ತಾತ್ಪರ್ಯಮಾಡಬಹುದು. ಭಟ್ಟಭಾಸ್ಕರರು ತೈತ್ತಿರೀಯಾರಣ್ಯಕಪ್ರಕರಣದಲ್ಲಿ ಈ ವಿಷಯವನ್ನು ವಿವರಿಸುತ್ತ ಈ ಎರಡರ್ಥಗಳೂ ಸಾಧ್ಯವೆಂದು ಈರೀತಿ ತಿಳಿಸಿದ್ದಾರೆ.

> **ದಶಾಂಗುಲಂ ದಶಾಂಗುಲಪ್ರಮಾಣಾವಚ್ಛಿನ್ನಂ । ದಶ ಅಂಗುಲಯಃ ಪ್ರಮಾಣಂ ಅಸ್ಯ ಇತಿ । ಅತ್ರ ಸಾಮರ್ಥ್ಯಾತ್ ಹೃದಯಾಕಾಶಪರಿಗ್ರಹಃ। ಹೃದಯಾಕಾಶಸ್ಯೈವ ದಶಾಂಗುಲಮಿತ್ಯಾಖ್ಯೇತಿ ಕೇಚಿತ್ । ಹೃದಯಂ ದಹರಂ ಗಗನಂ ಪುರುಷ ಇತಿ ಪರ್ಯಾಯಃ ॥**
>
> (ತೈ. ಆ. ಭಾ. ೨-೧೨-೧).

ಹತ್ತು ಅಂಗುಲಗಳ ಅಳತೆಯುಳ್ಳದ್ದರಿಂದ ದಶಾಂಗುಲ ಪ್ರಮಾಣವನ್ನು ಸೂಚಿಸುವ ಪ್ರಯೋಗವಿದೆ. ಈ ವಿವರಣವು ಹೃದಯಾಕಾಶದ ಸ್ವರೂಪವನ್ನು ತಿಳಿಸುವುದಾಗಿದೆ. ದಶಾಂಗುಲದ ಪ್ರಯೋಗವು ಸಾಧಾರಣವಾಗಿ ಹೃದಯಾಕಾಶವನ್ನು ನಿರ್ದೇಶಿಸುವಾಗ ಮಾತ್ರ ಇರುತ್ತದೆ ಎಂದು ಕೆಲವರ ಮತ. ಹೃದಯ, ದಹರ, ಗಗನ, ಪುರುಷ, ಇವೆಲ್ಲವೂ ಪರ್ಯಾಯ ನಾಮಗಳು ಎಂದು ಒಂದು ವಿಧವಾದ ತಾತ್ಪರ್ಯವಿವರಣೆ. ಎರಡನೆಯದಾಗಿ ;—

> ಯದ್ವಾ । **ಸರ್ಗಪ್ರಕರಣಮಿದಂ । ಅತೋ ವಿಕಾರಜಾತಂ ಭೂಮ್ಯಾದಿಕಂ ಸರ್ವಂ ವೃತ್ವಾ ಪದೇನೈವ ಪುನರಾವೃತ್ಯ ಶಶಾಂಗುಲಮತಿತಿಷ್ಠತಿ ದಶಾಂಗುಲಾದಧೋಽಧಿಷ್ಠಾನಂ ನ ಕರೋತಿ ಅತ ಏವ ಭೂಮೇರ್ದಶಾಂಗುಲಾದಧೋಽಂಕುರಾದೇರನುತ್ಪತ್ತಿಃ । ಸರ್ವಗಸಿಸೃಕ್ಷೋಃಪಧಾನಮೂಲ ಶಕ್ತೇಽಪಿ ಪುರುಷಸ್ಯ ಕಾರಣಾತ್ಮಕತ್ವಾತ್ ಸರ್ವಕಾರ್ಯದೇಶವ್ಯಾಪ್ತ್ಯೈವ ಸ್ವಪ್ರಯೋಜನಸಂಪಾದನಾತ್ ತದೇವ ತಸ್ಯ ಸರ್ವಗತತ್ವಮಿತಿ ದಶಾಂಗುಲಾತ್ಪರತೋ ನ ವ್ಯಾಪ್ನೋತಿ ಪ್ರಯೋಜನಾಭಾವಾದಿತಿ ಕೇಚಿತ್ ॥**
>
> (ತೈ. ಆ. ಭಾ. ೩-೧೨-೧)

ಮೂಲ ಪ್ರಕೃತಿಯು ವಿಕಾರವನ್ನು ಹೊಂದಿ ಜಗತ್ತಿನ ರೂಪದಲ್ಲಿ ಪರಿಣಾಮವನ್ನು ಹೊಂದಿದನಂತರ ತನ್ನ ಪಾದವನ್ನು ಊರಿ ಕೇವಲ ಹತ್ತು ಅಂಗುಲದಷ್ಟು ಮಾತ್ರ ಸ್ಥಾನವನ್ನು ಆಕ್ರಮಿಸುವಂತೆ ನೆಲಕ್ಕೆ ಪೂರಿ ನಿಲ್ಲುತ್ತದೆ. ಅದೇ ಆ ಆಳದ ಪರಮಾವಧಿ ಇತ್ಯಾದಿಯಾಗಿ ಇನ್ನೊಂದು ವಿಧವಾದ ತಾತ್ಪರ್ಯವನ್ನು ತಿಳಿಸಿದೆ. ಆದರೆ ಮೇಲೆ ವಿವರಿಸಿರುವ ಮತವು **ದಶಾಂಗುಲದ** ಆಧ್ಯಾತ್ಮಿಕಪರವಾದ ತಾತ್ಪರ್ಯವನ್ನು ಯುಕ್ತಿಯುತವಾಗಿ ತಿಳಿಸುತ್ತದೆ.

## ಮುಖ್ಯಾಭಿಪ್ರಾಯವು

ಈ ಋಕ್ಕಿನಲ್ಲಿ ಮೂರು ಮುಖ್ಯವಾದ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಮೊದಲನೆಯದು–ಪುರುಷ ಶಬ್ದಕ್ಕೆ **ಅರ್ಥವೇನು?** ಪುರುಷ ಎಂದರೆ ಯಾರು? ಈ ಋಕ್ಕಿನಲ್ಲಿ ಪ್ರಯುಕ್ತವಾಗಿರುವ ಪುರುಷಶಬ್ದವು ಏನನ್ನು ಸೂಚಿಸುತ್ತದೆ ಇತ್ಯಾದಿ ವಿಷಯಗಳನ್ನು ವಿಮರ್ಶೆ ಮಾಡಬೇಕಾಗಿದೆ. ಪುರುಷ ಶಬ್ದಕ್ಕೆ ಸಾಮಾನ್ಯ ಭಾಷೆಯಲ್ಲಿ

ಮೂರು ಲಿಂಗಗಳಲ್ಲಿ ಒಂದು ಎಂದರ್ಥವು. ಎಂದರೆ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳಲ್ಲಿ ಪುಲ್ಲಿಂಗವನ್ನು ಸೂಚಿಸುವ ಶಬ್ದವೇ ಪುರುಷ ಶಬ್ದವು, ಚಲಿಸದಿರುವ ಮತ್ತು ಚೈತನ್ಯರಹಿತವಾದ ವೃಕ್ಷ, ಪರ್ವತಾದಿಗಳು ನಪುಂಸಕ ಲಿಂಗವೆಂಬ ವರ್ಗಕ್ಕೆ ಸೇರಿದವು. ಚಲಿಸುವ ಶಕ್ತಿಯುಳ್ಳ ಪ್ರಾಣಿಗಳು ಮತ್ತು ಮನುಷ್ಯರಲ್ಲಿ ಎರಡು ವಿಧವಾದ ವರ್ಗವು (ಗುಂಪು) ಕಂಡು ಬರುವುದು ಒಂದು ಗಂಡು ಮತ್ತೊಂದು ಹೆಣ್ಣು. ಈ ವರ್ಗಗಳನ್ನೇ ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳಿಂದ ನಿರ್ದೇಶಿಸಲಾಗಿದೆ. ಪ್ರಜಾಭಿವೃದ್ಧಿಯು ಸಂತತವಾಗಿ ನಡೆದುಕೊಂಡು ಬರುವುದಕ್ಕಾಗಿ ಪರಮೇಶ್ವರನೇ ಸಕಲ ಪ್ರಾಣಿಗಳಲ್ಲಿಯೂ ಈ ಎರಡು ವಿಧವಾದ ವ್ಯತ್ಯಾಸವನ್ನು ಕಲ್ಪಿಸಿದ್ದಾನೆ. ಈ ಸ್ತ್ರೀಪುರುಷರ (ಅಥವಾ ಪ್ರಾಣಿಗಳ) ಸಮಾಗಮದಿಂದ ಸಂತತಿಯು ವುಂಟಾಗಿ ಸೃಷ್ಟಿಕಾರ್ಯವು ಮುಂದುವರೆಯುತ್ತಿರುವುದು. ಆದರೆ ಸ್ತ್ರೀಪುರುಷರೆಂಬ ವ್ಯತ್ಯಾಸವನ್ನು ಕಲ್ಪಿಸಿದ ಪರಮೇಶ್ವರನಿಗೆ ಸ್ತ್ರೀ ಅಥವಾ ಪುರುಷ ಎಂಬ ನಿರ್ದಿಷ್ಟವಾದ ಲಿಂಗವುಂಟೇ ಎಂದರೆ ಪರಮೇಶ್ವರನಿಗೆ ಈ ವಿಧವಾದ ಲಿಂಗ ವ್ಯತ್ಯಾಸವಿಲ್ಲ. ಆವನು ಇಷ್ಟಬಂದಲ್ಲಿ ಯಾವ ಆಕಾರವನ್ನು ಬೇಕಾದರೂ ಧರಿಸಬಹುದು. ಚರಾಚರಾತ್ಮಕವಾದ ಸಕಲ ವಸ್ತುಗಳೂ, ಸಮಸ್ತ ಜಗತ್ತೂ ಸಹ ಪರಮಾತ್ಮನ ಅಂಶವೇ ಎಂದರೆ ಸ್ವರೂಪವೇ ಆಗಿರುವುದರಿಂದ ಪರಮಾತ್ಮ ಎಂದರೆ ಬ್ರಹ್ಮವ್ಯತಿರಿಕ್ತವಾದ ವಸ್ತುವೇ ಇರುವುದಿಲ್ಲ. ಇರುವುದೆಲ್ಲಾ ಒಂದೇ ವಸ್ತು (ಅದೇ ಪರಬ್ರಹ್ಮ ಅಥವಾ ಪರಮಾತ್ಮ, ಪರಮೇಶ್ವರ ಇತ್ಯಾದಿ) ಅದನ್ನು ಯಾವ ಲಿಂಗವೆಂದು ಬೇಕಾದರೂ ಕರೆಯಬಹುದು ಎಂದರೆ ಅದಕ್ಕೆ ಯಾವ ನಿರ್ದಿಷ್ಟವಾದ ಲಿಂಗವೂ ಇಲ್ಲವೆಂದಾಯಿತು. ಸಂದರ್ಭಾನುಸಾರ ಭಕ್ತರುಗಳು ತಮ್ಮ ತಮ್ಮ ಇಷ್ಟಬಂದಂತೆ ಆ ಪರವಸ್ತುವಿಗೆ ನಾನಾ ಲಿಂಗಗಳ ಮೂರ್ತಿಗಳನ್ನು ಆರೋಪಿಸಿ ಆರಾಧಿಸುವರು. ದುರ್ಗಾ, ಚಾಮುಂಡಾ ಇತ್ಯಾದಿಗಳು ಸ್ತ್ರೀಲಿಂಗ ಶಬ್ದಗಳೂ (ಅಥವಾ ಮೂರ್ತಿಗಳೂ) ಪ್ರಜಾಪತಿ, ರಾಮ, ಕೃಷ್ಣ ಇತ್ಯಾದಿ ಪುಲ್ಲಿಂಗ ಶಬ್ದಗಳು (ಅಥವಾ ಮೂರ್ತಿ ಭೇದಗಳೂ) ನಿರ್ವಿಕಾರವೂ, ಚಕ್ಷುರಾದಿ ಇಂದ್ರಿಯಗಳಿಗೆ ಅಗೋಚರವೂ ಆದ ಪರಬ್ರಹ್ಮವಸ್ತುವು ನಪುಂಸಕಲಿಂಗ ಶಬ್ದವು. ಇವೆಲ್ಲವೂ ಒಂದೇ ಆದ ಪರವಸ್ತುವನ್ನು ನಿರ್ದೇಶಿಸುವುದರಿಂದ ಆ ಪರವಸ್ತುವನ್ನು ಯಾವ ಲಿಂಗ ಅಥವಾ ಶಬ್ದದಿಂದಲಾದರೂ ಕರೆಯಬಹುದು. ಪ್ರಕೃತ ಋಕ್ಕಿನಲ್ಲಿ ಪುರುಷಶಬ್ದದಿಂದ ನಿರ್ದೇಶಿಸಲಾಗಿದೆ. ಈ ಪರಮೇಶ್ವರನನ್ನು ಆದಿಪುರುಷ, ಬ್ರಹ್ಮಾಂಡವೇ ದೇಹವಾಗಿವುಳ್ಳ ವಿರಾಟ್ಪುರುಷ ಇತ್ಯಾದಿ ನಾಮಗಳಿಂದಲೂ ನಿರ್ದೇಶಿಸಲಾಗಿದೆ. ಆದ್ದರಿಂದ ಈ ಋಕ್ಕಿನಲ್ಲಿರುವ ಪುರುಷ ಶಬ್ದಕ್ಕೆ ಪರಮೇಶ್ವರನೆಂದೇ ಅರ್ಥವು.

ಎರಡನೆಯದಾಗಿ—ಮೇಲೆ ಹೇಳಿದ ಪುರುಷಶಬ್ದವಾಚ್ಯನಾದ ಪರಮೇಶ್ವರನು **ಸಹಸ್ರಶೀರ್ಷಾ, ಸಹಸ್ರಾಕ್ಷಃ, ಸಹಸ್ರಪಾತ್**—ಎಂದರೆ ಸಾವಿರಾರು ಶಿರಸ್ಸುಗಳುಳ್ಳವನು ಸಾವಿರಾರು ಕಣ್ಣುಗಳುಳ್ಳವನು, ಸಾವಿರಾರು ಪಾದಗಳುಳ್ಳವನು ಎಂದು ಇಲ್ಲಿ ಹೇಳಿದೆ. ಇಲ್ಲಿ ಸಹಸ್ರಶಬ್ದಕ್ಕೆ ಸಾವಿರ ಎಂಬ ಸಂಖ್ಯಾವಾಚಕ ಅರ್ಥವಿಲ್ಲ. ಅನಂತವಾದ, ಅಸಂಖ್ಯಾಕವಾದ ಎಂದರ್ಥವಿರುವುದು. ಎಂದರೆ ಸಹಸ್ರಶೀರ್ಷಾ ಎಂಬ ಪದಕ್ಕೆ ಸಾವಿರ ಶಿರಸ್ಸುಳ್ಳವನು ಎಂದು ಮಾತ್ರ ಅರ್ಥವನ್ನು ಹೇಳಕೂಡದು, ಸಾವಿರಾರು, ಅಥವಾ ಅಸಂಖ್ಯಾಕವಾದ, ಎಣಿಸುವುದಕ್ಕೆ ಸಾಧ್ಯವಿಲ್ಲದ, ಅನಂತವಾದ ಶಿರಸ್ಸುಗಳುಳ್ಳವನು ಎಂದು ಹೇಳಬೇಕು. ಇದೇ ರೀತಿ ಅನಂತವಾದ ಚಕ್ಷುಸ್ಸುಗಳೂ, ಅನಂತವಾದ ಪಾದಗಳೂ ಇವನಿಗೆ ಇರುವವು ಎಂದು ತಿಳಿಯಬೇಕು. ಸಾಧಾರಣವಾಗಿ ನಮ್ಮ ಅನುಭವದಲ್ಲಿರುವಂತೆ ಒಬ್ಬ ಪುರುಷನಿಗೆ ಒಂದು ಶಿರಸ್ಸು, ಎರಡು ಕಣ್ಣುಗಳು, ಎರಡು ಪಾದಗಳು ಮಾತ್ರವಿರುವವು. ಕೆಲವು ಪ್ರಾಣಿಗಳಿಗೆ ಎರಡಕ್ಕಿಂತ ಹೆಚ್ಚಾದ ಕಾಲುಗಳೂ ಇರುವುದುಂಟು. ಆದರೆ ಸಾವಿರ ಅಥವಾ ಅನಂತಸಂಖ್ಯಾಕವಾದ ಶಿರಸ್ಸುಗಳು ಇರುವುದು ಸಾಧ್ಯವೇ ಎಂದರೆ ಪರಮೇಶ್ವರನ ವಿಷಯದಲ್ಲಿ ಮಾತ್ರ ಸಾಧ್ಯವು. ಪ್ರಪಂಚದಲ್ಲಿರುವ ಮನುಷ್ಯರು,

ಇತರ ಪ್ರಾಣಿಗಳು ಮೊದಲಾದ ಸಮಸ್ತ ಜೀವರಾಶಿಗಳೂ ಪರಮೇಶ್ವರನ ಅಂಶಗಳೇ ಆದ್ದರಿಂದ ಎಂದರೆ ಪರಮೇಶ್ವರನೇ ಸಮಸ್ತ ಪ್ರಾಣಿಗಳ ರೂಪದಲ್ಲಿಯೂ ಅವುಗಳ ಶರೀರಾಂತರ್ಗತನಾಗಿ ಚೈತನ್ಯರೂಪದಿಂದ ಇರುವವನಾದ್ದರಿಂದ ಅನಂತ ಸಂಖ್ಯಾಕವಾದ ಆ ಪ್ರಾಣಿಗಳ ಶಿರಸ್ಸು ಮೊದಲಾದವುಗಳೆಲ್ಲವೂ ಪರಮೇಶ್ವರನ ಶಿರಸ್ಸುಗಳೇ ಆದಂತಾಯಿತು. ಈ ಜೀವರಾಶಿಗಳ ಶಿರಸ್ಸು, ಕಣ್ಣುಗಳು ಕಾಲಗಳು ಅಸಂಖ್ಯಾತವಾಗಿರುವುದರಿಂದ ಪರಮೇಶ್ವರನು ಅನಂತ ಶಿರಸ್ಸುಗಳು, ಅನಂತ ಕಣ್ಣುಗಳು, ಅನಂತ ಪಾದಗಳು ಉಳ್ಳವನೆಂದು ಇಲ್ಲಿ ವರ್ಣಿಸಿದೆ. ಇದು ಭಾಷ್ಯಕಾರರಾದ ಸಾಯಣರ ವಿವರಣೆಯು.

ಆದರೆ ಇಲ್ಲಿ ಇನ್ನೊಂದು ಮುಖ್ಯವಾದ ವಿಷಯವನ್ನು ಪರಿಶೀಲಿಸಬೇಕಾಗಿದೆ. ಪರಮೇಶ್ವರನಿಗೆ ಅವ್ಯಕ್ತಾವಸ್ಥೆಯಲ್ಲಿ ಯಾವ ನಿರ್ದಿಷ್ಟವಾದ ಆಕಾರವೂ ಇರುವುದಿಲ್ಲವೆಂದೂ ಆವನು ಸರ್ವವ್ಯಾಪಿಯೆಂದೂ ಶ್ರುತ್ಯಾದಿವಾಕ್ಯಗಳಲ್ಲಿ ವರ್ಣಿಸಲಾಗಿದೆ. ಹೀಗಿರುವಾಗ ಈ ಪರಮಾತ್ಮನಿಗೆ ಶಿರಸ್ಸುಗಳು, ಕಣ್ಣುಗಳು, ಕಾಲುಗಳು ಅಸಂಖ್ಯಾತವಾಗಿ ಇರುವವು ಎಂಬುದರ ಅರ್ಥವೇನು ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುವುದು. ನಮ್ಮ ಅನುಭವದಲ್ಲಿರುವಂತೆ ಎಂದರೆ ನಮಗಿರುವಂತೆ ಪರಮಾತ್ಮನಿಗೆ ಶಿರಸ್ಸುಗಳು, ಕಣ್ಣುಗಳು, ಕಾಲುಗಳು ಇರುವುದಿಲ್ಲ. ನಮಗೆ ಕಣ್ಣುಗಳಿಲ್ಲದಿದ್ದರೆ ನಾವು ಏನನ್ನೂ ನೋಡಲಾರೆವು. ಕಿವಿಗಳಿಲ್ಲದಿದ್ದರೆ ಕೇಳಲಾರೆವು, ಕಾಲುಗಳಿಲ್ಲದಿದ್ದರೆ ಸಂಚರಿಸಲಾರೆವು. ಪರಮಾತ್ಮನ ವಿಷಯವು ಹಾಗಲ್ಲ. ಅವನಿಗೆ ಕಣ್ಣು ಮೊದಲಾದವುಗಳಿಲ್ಲದಿದ್ದರೂ ಅವನು ನೋಡಬಲ್ಲನು, ತಿಳಿಯಬಲ್ಲನು, ಸಂಚರಿಸಬಲ್ಲನು. ಅವನಿಗೆ ಚಕ್ಷುರಾದಿ ಇಂದ್ರಿಯಗಳ ಅವಶ್ಯಕತೆ ಇರುವುದಿಲ್ಲ. ಚೈತನ್ಯಸ್ವರೂಪನೇ ಅವನಾದ್ದರಿಂದ ಇಂದ್ರಿಯಗಳ ಮೂಲಕ ವಸ್ತುಸ್ವರೂಪವನ್ನು ಅವನು ಗ್ರಹಿಸಬೇಕಾಗಿಲ್ಲ. ಅವಯವಗಳಿಲ್ಲದೆಯೇ ಎಲ್ಲಾ ಅವಯವಗಳ ಕೆಲಸ ಕಾರ್ಯಗಳನ್ನು ಅವನು ನಿರ್ವಹಿಸಬಲ್ಲನು. ಆದ್ದರಿಂದ ಇಲ್ಲಿ ಹೇಳಿರುವ ಸಹಸ್ರಶೀರ್ಷಾ ಇತ್ಯಾದಿ ಶಬ್ದಗಳು ಆ ಪರಮಾತ್ಮನಿಗೆ ಸಾವಿರಾರು ಅಥವಾ ಅಸಂಖ್ಯಾತವಾದ ಶಿರಸ್ಸುಗಳು ಮೊದಲಾದ ಇಂದ್ರಿಗಳು ಇವೆ ಎಂದು ವರ್ಣಿಸುವುದಕ್ಕಾಗಿ ಪ್ರಯೋಗಿಸಲ್ಪಟ್ಟಿಲ್ಲ, ಆದರೆ ಅವನ ಅಪಾರವಾದ ಶಕ್ತಿ ಸಾಮರ್ಥ್ಯಗಳನ್ನು ನಮಗೆ ಬಳಕೆಯಲ್ಲಿರುವ ಭಾಷೆಯಲ್ಲಿ ಸ್ವಲ್ಪಮಟ್ಟಿಗಾದರೂ ತಿಳಿಸುವುದಕ್ಕಾಗಿಯೇ ಆ ಶಬ್ದಗಳ ಪ್ರಯೋಗವಿದೆ ಎಂದು ತಿಳಿಯಬೇಕು.

ಮೂರನೆಯದಾಗಿ—**ಸ ಭೂಮಿಂ ವಿಶ್ವತೋ ವೃತ್ವಾ ದಶಾಂಗುಲಂ ಅತ್ಯತಿಷ್ಠತ್** ಎಂಬ ವಾಕ್ಯದಲ್ಲಿ ಪ್ರತಿಪಾದಿತವಾಗಿರುವ ತತ್ತ್ವವು ಬಹಳ ಗಹನವಾದುದು. ಈ ವಾಕ್ಯದಲ್ಲಿ ಭೂಮಿ ಎಂಬ ಶಬ್ದವು ನಾವು ವಾಸಮಾಡುತ್ತಿರುವ ಭೂಮಿ ಅಥವಾ ಪ್ರಪಂಚವನ್ನು ಮಾತ್ರ ಸೂಚಿಸುವುದಿಲ್ಲ. ನಾವು ವಾಸಮಾಡುವ ಭೂಮಿಯನ್ನೂ ಇದರಂತೆ ವಿಶ್ವದಲ್ಲಿರುವ ಅಸಂಖ್ಯಾತವಾದ ಇತರ ಭೂಮಿ ಅಥವಾ ಬ್ರಹ್ಮಾಂಡಗಳನ್ನೂ ಎಂದರೆ ಸಕಲ ವಿಶ್ವವನ್ನೂ ಸೂಚಿಸುವ ಸಾಮಾನ್ಯ ಅರ್ಥವನ್ನು ಈ ಭೂಮಿಶಬ್ದವು ವಿವರಿಸುವುದಾಗಿದೆ. ಆದ್ದರಿಂದ ಭೂಮಿಯೆಂದರೆ ವಿಶ್ವವೆಂದರ್ಥ. ನಮಗೆ ಅನುಭವದಲ್ಲಿರುವ ವಿಷಯವನ್ನು ಸುಲಭಭಾಷೆಯಿಂದ ತಿಳಿಸುವುದಕ್ಕಾಗಿಯೇ ಅನುಭವ ಗೋಚರವಲ್ಲದ ವಿಶ್ವವನ್ನು ಅನುಭವವೇದ್ಯವಾದ ಭೂಮಿಶಬ್ದದಿಂದ ವಿವರಿಸಲಾಗಿದೆ. ಇದರಂತೆಯೇ ದಶಾಂಗುಲಂ ಎಂಬ ಶಬ್ದದ ಅರ್ಥವೂ ಉಪಲಕ್ಷಣ ಎಂದರೆ ಸಾಮಾನ್ಯಾರ್ಥವನ್ನು ಒಳಗೊಂಡಿದೆ. **ದಶಾಂಗುಲ**ವೆಂದರೆ—ಹತ್ತು ಅಂಗುಲದ ಪ್ರಮಾಣವು ಎಂದು ಅರ್ಥವಲ್ಲ. ದಶಾಂಗುಲವೆಂದರೆ ಹತ್ತು ಪಾಲು ಅಥವಾ ಎಷ್ಟೋ ಅಧಿಕವಾಗಿರುವುದೆಂದು ಅಭಿಪ್ರಾಯವು. ಹಿಂದೆ ಈ ಪರಮಾತ್ಮನು ಸೃಷ್ಟಿಕಾಲದಲ್ಲಿ ತಾನೇ ಚರಾಚರಾತ್ಮಕವಾದ ಪ್ರಪಂಚವಾಗಿ ಪರಿವರ್ತಿತನಾಗಿ ಅಂತರ್ಯಾಮಿರೂಪದಿಂದ ಪ್ರವೇಶಿಸಿ ಇರುವನೆಂದು ಹೇಳಿದೆಯಷ್ಟೆ. ಇದರಿಂದ ಈ ಪ್ರಪಂಚವೂ

ಅಥವಾ ವಿಶ್ವವೂ ಇದರಲ್ಲಿರುವ ಸಮಸ್ತ ಚರಾಚರವಸ್ತುಗಳೂ ಅನೇಕ ಲೋಕಗಳೂ ಬ್ರಹ್ಮಾಂಡಗಳೂ ಇವೆಲ್ಲವೂ ಪರಮಾತ್ಮನೇ ಎಂದಾಯಿತು. ಇಲ್ಲಿ ಒಂದು ಸಂಶಯವು ತಲೆದೋರುವುದು. ಪರಮಾತ್ಮನೇ ಸಕಲ ಬ್ರಹ್ಮಾಂಡಗಳ ರೂಪದಲ್ಲಿ ಪರಿವರ್ತಿತನಾಗಿರುವಾಗ ಪರಮಾತ್ಮನು ಇಲ್ಲದೇ ಬ್ರಹಾಂಡಗಳು ಮಾತ್ರ ಇರುವವೇ ಎಂದರೆ ಹಾಗಲ್ಲ. ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತಸ್ವರೂಪದಲ್ಲಿದ್ದ ಪರಮಾತ್ಮನ (ಪರಬ್ರಹ್ಮದ) ಸ್ವಲ್ಪ ಭಾಗ ಮಾತ್ರ ಈ ಜಗದಾದಿಗಳಾಗಿ ಪರಿವರ್ತಿತವಾಯಿತು. ಬಹುಭಾಗವು ಹಾಗೆಯೇ ಉಳಿಯಿತು. ಈಗಲೂ ಹಾಗೆಯೇ ಇದೆ. ಎಂದರೆ ಕಣ್ಣಿಗೆ ಕಾಣಿಸುತ್ತಿರುವ ಜಗದಾದಿಗಳು ಪರಮಾತ್ಮನ ಕೆಲವು ಅಂಶಗಳು ಮಾತ್ರ. ಅವ್ಯಕ್ತಸ್ವರೂಪದಲ್ಲಿಯೇ ಇರುವ ಭಾಗವು ಅತ್ಯಧಿಕವಾಗಿರುವುದು. ಅದು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಆದ್ದರಿಂದ ಪರಮಾತ್ಮನು ಸೃಷ್ಟಿಕಾಲದಲ್ಲಿ ವ್ಯಕ್ತಸ್ವರೂಪಗಳಾದ ಜಗದಾದಿರೂಪದಲ್ಲಿಯೂ, ಅವ್ಯಕ್ತಸ್ವರೂಪದಲ್ಲಿಯೂ ಎಂದರೆ ಎರಡು ವಿಧ ಸ್ವರೂಪಗಳಲ್ಲಿಯೂ ಇರುವನು. ಜಗದಾದಿರೂಪದಲ್ಲಿರುವುದು ಸ್ವಲ್ಪಭಾಗ, ಅವ್ಯಕ್ತಸ್ವರೂಪದಲ್ಲಿರುವುದು ಬಹುಭಾಗ. ಈ ಅರ್ಥವನ್ನು ಸೂಚಿಸುವುದಕ್ಕಾಗಿಯೇ ಇಲ್ಲಿ ಕಣ್ಣಿಗೆ ಕಾಣಿಸುವ ಭೂಮಿ (ಜಗತ್ತು, ವಿಶ್ವ) ಯನ್ನು ಆವರಿಸಿ (ಜಗದಾದಿರೂಪದನ ಪರಿವರ್ತಿತನಾಗಿ) ದ್ದರೂ ಇವನ ಬಹುಭಾಗವಾದ ಅವ್ಯಕ್ತಸ್ವರೂಪವು ಇನ್ನೂ ಅಧಿಕವಾಗಿಯೇ ಇರುವುದು ಎಂಬರ್ಥವನ್ನು ಸೂಚಿಸುವುದಕ್ಕಾಗಿ **ಅತ್ಯತಿಷ್ಠತ್** ಎಂಬ ಶಬ್ದಪ್ರಯೋಗವಿದೆ. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಡಬಹುದು. ಸಮುದ್ರದ ನೀರು ಸೂರ್ಯನ ತೀಕ್ಷ್ಣಕಿರಣಗಳಿಂದ ಕಾದು ಆವಿಯ ರೂಪದಿಂದ ಮೇಘಗಳಾಗಿ ಪರಿವರ್ತಿತವಾಗುವವು. ಅನಂತರ ಮೇಘಗಳಲ್ಲಿರುವ ನೀರು ವೃಷ್ಟಿರೂಪದಿಂದ ಭೂಮಿಯಮೇಲೆ ಬಿದ್ದು ನದಿಗಳಾಗಿ ಪ್ರವಹಿಸಿ ಪುನಃ ಸಮುದ್ರವನ್ನೇ ಸೇರುವವು. ಈ ವಿಷಯವು ಎಲ್ಲರಿಗೂ ಅನುಭವವಾದುದು ಇಲ್ಲಿ ಸಮುದ್ರವನ್ನು ಪರಮಾತ್ಮನಿಗೂ, ಮೇಘಗಳನ್ನು ಜಗದಾದಿಗಳಿಗೂ ಹೋಲಿಸಬಹುದು. ಸಮುದ್ರದ ನೀರು ಮೇಘಗಳಾಗಿ ಪರಿವರ್ತಿತವಾದಾಗ ಸಮುದ್ರದ ನೀರೆಲ್ಲವೂ ಮೇಘಗಳಾಗುವುದಿಲ್ಲ. ಎಲ್ಲೋ ಸ್ವಲ್ಪ ಭಾಗ ಮಾತ್ರ. ಸಮುದ್ರದ ಬಹುಭಾಗವು ಮೇಘಗಳಾಗದೆ ಹಾಗೆಯೇ ಉಳಿದಿರುವುದು. ಅದರಂತೆ ಪರಮಾತ್ಮನು ಜಗದಾದಿಗಳ ರೂಪದಲ್ಲಿ ಪರಿವರ್ತಿತನಾದಾಗಲೂ ಪರಮಾತ್ಮನ ಬಹುಭಾಗವಾದ ಅವ್ಯಕ್ತಸ್ವರೂಪವು ಹಾಗೆಯೇ ಎಂದರೆ ಅವ್ಯಕ್ತಾವಸ್ಥೆಯಲ್ಲಿಯೇ ಉಳಿದಿರುವುದು. ಆದ್ದರಿಂದ ಪರಮಾತ್ಮನ ಸ್ವರೂಪಗಳಾದ ಜಗದಾದಿಗಳು ಸ್ವಲ್ಪಭಾಗವಿದ್ದು ಈ ಜಗದಾದಿಗಳನ್ನೆಲ್ಲಾ ಮೀರಿಸುವ ಅವ್ಯಕ್ತಸ್ವರೂಪವು ಬಹುಭಾಗದಲ್ಲಿರುವುದು ಎಂದಭಿಪ್ರಾಯವು. ಈ ವಿಷಯವನ್ನೇ ಮುಂದೆ ಪ್ರಕೃತಸೂಕ್ತದ **ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ** ಎಂಬ ಮೂರನೆಯ ಋಕ್ಕಿನ ಉತ್ತರಾರ್ಧದಲ್ಲಿ ವಿವರಿಸಲ್ಪಟ್ಟಿರುವುದು. ಇದನ್ನು ಅ ಸಂದರ್ಭದಲ್ಲಿ ವಿವರಿಸಲಾಗುವುದು.

। ಸಂಹಿತಾಪಾಠಃ ।

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥

। ಪದಪಾಠಃ ।

ಪುರುಷಃ । ಏವ । ಇದಂ । ಸರ್ವಂ । ಯತ್ । ಭೂತಂ । ಯತ್ । ಚ । ಭವ್ಯಂ ।
ಉತ । ಅಮೃತತ್ವಸ್ಯ । ಈಶಾನಃ । ಯತ್ । ಅನ್ನೇನ । ಅತಿರೋಹತಿ ॥ ೨ ॥

॥ ಸಾಯಣಭಾಷ್ಯಂ ॥

ಯದಿದಂ ವರ್ತಮಾನಂ ಜಗತ್ತತ್ಸರ್ವಂ ಪುರುಷ ಏವ। ಯಚ್ಚ ಭೂತಮತೀತಂ ಜಗದ್ಯಚ್ಚ ಭವ್ಯಂ ಭವಿಷ್ಯಜ್ಜಗತ್ ತದಪಿ ಪುರುಷ ಏವ। ಯಥಾಸ್ಮಿನ್ಕಲ್ಪೇ ವರ್ತಮಾನಾಃ ಪ್ರಾಣಿದೇಹಾಃ ಸರ್ವೇऽಪಿ ವಿರಾಟ್ಪುರುಷಸ್ಯಾವಯವಾಃ ತಥೈವಾತೀತಾಗಾಮಿನೋರಪಿ ಕಲ್ಪಯೋರ್ದ್ರಷ್ಟವ್ಯಮಿತ್ಯಭಿಪ್ರಾಯಃ। ಉತಾಪಿ ಚಾಮೃತತ್ವಸ್ಯ ದೇವತ್ವಸ್ಯಾಯಮೀಶಾನಃ ಸ್ವಾಮೀ। ಯದ್ಯಸ್ಮಾತ್ಕಾರಣಾದನ್ನೇನ ಪ್ರಾಣಿನಾಂ ಭೋಗ್ಯೇನಾನ್ನೇನ ನಿಮಿತ್ತಭೂತೇನಾತಿರೋಹತಿ ಸ್ವಕೀಯಾಂ ಕಾರಣಾವಸ್ಥಾಮತಿಕ್ರಮ್ಯ ಪರಿದೃಶ್ಯಮಾನಾಂ ಜಗದವಸ್ಥಾಂಪ್ರಾಪ್ನೋತಿ ತಸ್ಮಾತ್ಪ್ರಾಣಿನಾಂ ಕರ್ಮಫಲಭೋಗಾಯ ಜಗದವಸ್ಥಾಸ್ವೀಕಾರಾನ್ನೇದಂ ತಸ್ಯ ವಸ್ತುತ್ವಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇದಂ ಸರ್ವಂ**-ನಮಗೆ ಗೋಚರವಾಗುವ ಈ ಸಕಲ ಜಗತ್ತೂ (ವರ್ತಮಾನಕಾಲದ ಜಗತ್ತೆಲ್ಲ)। **ಪುರುಷ ಏವ**—ಆ ಆದಿಪುರುಷನೇ (ಅವನ ಅಂಶವೇ ಆಗಿದೆ) । **ಯತ್ ಭೂತಂ**—ಯಾವುದು ಹಿಂದೆಲ್ಲ ಇದ್ದಿತೋ । **ಯಚ್ಚ ಭವ್ಯಂ**—ಮುಂದೆ ಯಾವುದು ಸಂಭವಿಸುವುದೋ (ಆ ಸಕಲ ಜಗತ್ತೂ ಈಶ್ವರಾಂಶವೇ ಅಲ್ಲದೆ ಬೇರೆಯಲ್ಲ) । **ಉತ**—ಮತ್ತು । **ಅಮೃತತ್ವಸ್ಯ**—ಮರಣರಾಹಿತ್ಯಕ್ಕೆ । **ಈಶಾನಃ**—ಅವನೇ ಪ್ರಭುವು । **ಯತ್**—ಯಾವ ನಿಮಿತ್ತವಾಗಿ । **ಅನ್ನೇನ**—ಪ್ರಾಣಿಗಳ ಭೋಗಸಾಧನವಾದ ಅನ್ನದಿಂದ । **ಅತಿರೋಹತಿ**—ಅವನು ಬೆಳೆಯುವನೋ (ಆದುದರಿಂದ ಅವನು ಈಗ ಕಾಣಿಸಿಕೊಳ್ಳುವುದಕ್ಕಿಂತಲೂ ಅಧಿಕವಾದ ಮಾಹಾತ್ಮ್ಯವುಳ್ಳವನು).

॥ ಭಾವಾರ್ಥ ॥

ನಮಗೆ ಗೋಚರವಾಗುವ ಸಕಲ ಜಗತ್ತೂ ಎಂದರೆ ವರ್ತಮಾನಕಾಲದ ಸಕಲ ಜಗತ್ತೂ ಆ ಆದಿಪುರುಷನ ಅಂಶವೇ ಆಗಿದೆ. ಹಿಂದೆ ಇದ್ದ ಜಗತ್ತೂ ಅವನೇ, ಮುಂದೆ ಸಂಭವಿಸುವುದೂ ಅವನೇ ಎಂದರೆ ಈಶ್ವರಾಂಶವಲ್ಲದೆ ಬೇರೆಯಲ್ಲ. ಅವನು ಅಮೃತತ್ವಕ್ಕೆ ಒಡೆಯನು. ಪ್ರಾಣಿಗಳಿಗೆ ಭೋಗಸಾಧನವಾದ ಅನ್ನದಿಂದ ಅವನು ಬೆಳೆಯುವಂತೆ ಕಾಣುತ್ತಾನೆ. ಆದರೆ ಅವನ ಸ್ವರೂಪವು ಗೋಚರಾತೀತವಾದುದು.

## English Translation

Purusha is verily all this (visible world), all that is, and all that is to be ; he is also the lord of immortality ; for for he mounts beyond (his own conditon) for the food (of living beings).

॥ ವಿಶೇಷವಿಷಯಗಳು ॥

ಜಗತ್ತೆಲ್ಲವೂ ಈಶ್ವರಮಯ, ಈಶ್ವರನೇ ಜಗತ್ತಿಗೆಲ್ಲ ಪ್ರಭು, ಭೂತ, ವರ್ತಮಾನ ಮತ್ತು ಭವಿಷ್ಯತ್ತು ಇತ್ಯಾದಿ ಕಾಲವಿಶೇಷಗಳೆಲ್ಲವೂ ಇವನ ಪ್ರಭಾವವೇ ಇತ್ಯಾದಿ ಪರಮಪುರುಷನ ಮಹಿಮೆಯನ್ನು ಈ ಋಕ್ಕಿನಲ್ಲಿ ಪ್ರಶಂಸಿಸಿದೆ.

**ಇದಂ ವರ್ತಮಾನಂ ಜಗತ್ ಸರ್ವಂ ಪುರುಷ ಏವ । ಅತೀತಂ ಜಗತ್, ಭವಿಷ್ಯಜ್ಜಗತ್ ತದಪಿ ಪುರುಷ ಏವ ।** ಸಕಲ ಜಗತ್ತೂ ಪುರುಷನ ಅವಯವವಿಶೇಷವೇ ಆಗಿದೆ. ಪುರುಷನಲ್ಲದೇ ಎರಡನೆಯ ಸ್ವತಂತ್ರ ವಾದ ತತ್ತ್ವವಿಲ್ಲ ಎಂಬ ವಿಷಯವನ್ನು **ಪುರುಷ ಏವೇದಗ್ಂ ಸರ್ವಂ** ಎಂಬ ವಾಕ್ಯವು ತಿಳಿಸುತ್ತದೆ. ಇದನ್ನೇ ಶಂಕರಾಚಾರ್ಯರು ತಮ್ಮಭಾಷ್ಯದಲ್ಲಿ ವಿವರಿಸುತ್ತಾ, **ಸತ್ಯಂ ನೇಶ್ವರಾದನ್ಯಃ ಸಂಸಾರೀ ।** (ಬ್ರ.ಸೂ.ಶ.ಭಾ. ೧-೧-೫) ಈಶ್ವರನೊಬ್ಬನೇ ಶಾಶ್ವತವಾದ ಸತ್ಯಾತ್ಮಕನು. ಇವನೇ ಸಂಸಾರರೂಪದಲ್ಲಿ ಪರಿಣಮಿಸುತ್ತಾನೆ. ಇವನಲ್ಲದೇ ಬೇರೊಬ್ಬ ಸಂಸಾರಿಯಿಲ್ಲ ಎಂದು ತಿಳಿಸಿದ್ದಾರೆ. ಆದರೆ ಜಗತ್ತಿನಲ್ಲಿ ಅನೇಕ ವೈವಿಧ್ಯವಿರುತ್ತವೆ. ಅನೇಕ ಜೀವರಾಶಿಗಳಿರುತ್ತವೆ. ಅವೆಲ್ಲವೂ ವೈಯಕ್ತಿಕವಾದ ಸ್ವಾತಂತ್ರ್ಯವನ್ನು ಹೊಂದಿವೆ. ಹೀಗಿರುವಾಗ, ಈಶ್ವರ ನೊಬ್ಬನೇ ಸಂಸಾರೀ, ಅದಲ್ಲದೆ ಬೇರೆ ಎರಡನೆಯ ತತ್ತ್ವವಿಲ್ಲ ಎಂಬುದುಸರಿಯೇ ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ. ಈ ವಿಧವಾದ ಆಕ್ಷೇಪಗಳಿಗೆ ಶ್ರುತಿವಾಕ್ಯಗಳ ಆಧಾರದ ಮೇಲೆ ಭಾಷ್ಯಾದಿಗಳಲ್ಲಿ ಸಮಾಧಾನವನ್ನೂ ತಿಳಿಸಿದೆ.

**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ।** (ಋ. ಸಂ. ೧-೧೧೫-೧) ಎಂಬ ಯಾವ ಸೂರ್ಯಾತ್ಮನು ವರ್ಣಿತನಾಗಿ ದ್ದಾನೆಯೋ ಅವನನ್ನೇ ಶಂಕರಾಚಾರ್ಯರು ಈಶ್ವರನೆಂದು ನಿರ್ದೇಶಿಸಿದ್ದಾರೆ. ಇವನನ್ನೇ ಬ್ರಹ್ಮ, ಇಂದ್ರ ಇತ್ಯಾದಿ ನಾಮಗಳಿಂದ ನಿರ್ದೇಶಿಸಿದೆ.

> **ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏತ ಆತ್ಮಾನಃ ಸಮರ್ಪಿತಾಃ ।**
>
> (ಬೃ. ಉ. ೨-೫-೧೫)

ಈ ಪರಮಾತ್ಮನೇ, ಸಕಲ ಭೂತಗಳಿಗೂ ಅಧಿಪತಿಯು. ಸಕಲ ಭೂತಗಳಿಗೂ ರಾಜನು. ರಥಚಕ್ರದಲ್ಲಿ ಸಕಲ ಅರಗಳೂ ಒಂದೆಡೆ ಸೇರಿರುವಂತೆ ಈ ಪರಮಾತ್ಮನಲ್ಲಿ ಸಕಲ ಭೂತಗಳೂ, ಸಕಲ ದೇವತೆಗಳೂ, ಸಕಲ ಪ್ರಾಣಗಳೂ ಸಕಲ ಆತ್ಮಗಳೂ ಒಂದಾಗಿ ಸೇರಿವೆ. ಈ ವಿಷಯವನ್ನು ಹಿಂದೆ **ರೂಪಂ ರೂಪಂ ಪ್ರತಿರೂಪೋ ಬಭೂವ**, (ಋ. ಸಂ. ೬-೪೭-೧೮) ಎಂಬ ಋಕ್ಕಿನ ವಿಶೇಷವಿಷಯವನ್ನು ತಿಳಿಸುವಾಗ ಸೂಕ್ಷ್ಮವಾಗಿ ತಿಳಿಸಿದೆ. ಪ್ರಕೃತದಲ್ಲಿ ಇದರ ವಿಸ್ತೃತವಾದ ವಿವರಣವು ಅತ್ಯವಶ್ಯಕವಾಗಿರುವುದರಿಂದ ಉಪನಿಷದಾದಿ ವಾಕ್ಯಗಳನ್ನು ಉದಾಹರಿಸಿ ಈ ಅಂಶ ವನ್ನು ಸ್ಪಷ್ಟಪಡಿಸಲಾಗುತ್ತದೆ. ಸಕಲ ಸ್ಥಾವರಜಂಗಮಾತ್ಮಕವಾದ ಪ್ರಪಂಚವೂ ಈಶ್ವರಮಯವೆಂಬುದನ್ನೂ, ಈಶ್ವರಾಂಶವಲ್ಲದೆ ಬೇರೆಯಿಲ್ಲವೆಂಬುದನ್ನು ಶ್ರುತಿವಾಕ್ಯಗಳು ಯಾವರೀತಿ ವರ್ಣಿಸುತ್ತವೆ ಎಂಬುದನ್ನು ಪರಿಶೀಲಿಸ ಲಾಗುತ್ತದೆ.

> **ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧು ಅಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ**

**ಯಶ್ಚಾಯಮಧ್ಯಾತ್ಮಂ ಶಾರೀರಸ್ತೇಜೋಮಯೋಽಮೃತಮೃತಮಯಃ ಪುರುಷೋಽಯ-
ಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ |**

(ಬೃ. ಉ. ೨-೫-೧)

ಈ ಪೃಥ್ವಿಯು ಸಕಲ ಭೂತಗಳಿಗೂ ಮಧುವು. ಸಕಲ ಭೂತಗಳೂ ಈ ಪೃಥ್ವಿಗೆ ಮಧುವು. ತೇಜೋಮಯನೂ, ಅಮೃತಮಯನೂ, ಆದ ಈ ಪುರುಷನು ಸಕಲ ಶರೀರದಲ್ಲೂ ಅಂತರ್ಗತನಾಗಿದ್ದಾನೆ. ಪೃಥ್ವಿಯಲ್ಲಿ ವ್ಯಾಪಿಸಿರುವ ಈ ಪರಮಾತ್ಮನೇ ಸರ್ವಾಂತರ್ಯಾಮಿಯೂ ಸರ್ವವ್ಯಾಪಿಯೂ ಸರ್ವಕಾರಣನೂ ಆದ ಪರಬ್ರಹ್ಮನು. ಇವನೇ ಸರ್ವಾತ್ಮನು.

**ಇಮಾ ಆಪಃ ಸರ್ವೇಷಾಂ ಭೂತಾನಾಂ ಮಧು .................. ಯಶ್ಚಾಯಮಧ್ಯಾತ್ಮಂ ರೈತಸಸ್ತೇಜೋಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ||**

(ಬೃ.ಉ. ೨-೫-೨)

ಉದಕವು ಸಕಲ ಭೂತಗಳಿಗೂ ಮಧುವು. ಸಕಲ ಭೂತಗಳೂ ಈ ಉದಕಕ್ಕೆ ಮಧುವು. ತೇಜೋಮಯನೂ, ಅಮೃತಮಯನೂ ಆದ ಈ ಪುರುಷನು ರೇತಸ್ಸಿನ ರೂಪವಾಗಿದ್ದಾನೆ. ಉದಕದಲ್ಲಿ ವ್ಯಾಪಿಸಿರುವ ಈ ಪರಮಾತ್ಮನೇ ಸರ್ವಾಂತರ್ಯಾಮಿಯೂ, ಸರ್ವವ್ಯಾಪಿಯೂ, ಸರ್ವಕಾರಣನೂ, ಅಮೃತಮಯನೂ ಆದ ಪರಬ್ರಹ್ಮನು. ಇವನೇ ಸರ್ವಾತ್ಮನು.

**ಅಯಂ ವಾಯುಃ............... ಯಶ್ಚಾಯಮಸ್ಮಿನ್ವಾಯೌ ತೇಜೋಮಯೋಽಮೃತಮಯಃ .......... ಯಶ್ಚಾಯಮಧ್ಯಾತ್ಮಂ ಪ್ರಾಣಃ ...............ಯೋಽಯಮಾತ್ಮೇದಂ ಬ್ರಹ್ಮೇದಂ ಸರ್ವಂ |**

(ಬೃ. ಉ. ೨-೫-೩,)

ವಾಯುರೂಪದಲ್ಲಿ ಸರ್ವಾಂತರ್ಯಾಮಿಯೂ ಸರ್ವವ್ಯಾಪಕನೂ ಆದ ಈ ಪರಬ್ರಹ್ಮನು ಪ್ರಾಣರೂಪದಲ್ಲಿ ಸಕಲ ಶರೀರದಲ್ಲಿಯೂ ಪ್ರವೇಶಿಸಿದ್ದಾನೆ. ಇವನೇ ಸರ್ವಾತ್ಮಕನಾದ ಪರಬಹ್ಮನು.

**ಅಯಮಾದಿತ್ಯಃ.................... ಯಶ್ಚಾಯಮಧ್ಯಾತ್ಮಂ ಚಾಕ್ಷುಷಃ ............ಆತ್ಮೇದಮಮೃತ-ಮಿದಂ ಬ್ರಹ್ಮೇದಂ ಸರ್ವಂ |**

(ಬೃ. ಉ. ೨-೫-೪)

ಆದಿತ್ಯರೂಪದಲ್ಲಿ ಸಕಲ ಭೂತಗಳಿಗೂ ಮಧುವಾದ ಈ ಪರಮಾತ್ಮನು ಸಕಲ ಭೂತಗಳಲ್ಲಿ ಚಕ್ಷುಸ್ಸಿನ ರೂಪದಲ್ಲಿರುತ್ತಾನೆ. ಇವನೇ ಸರ್ವಾತ್ಮಕನಾದ ಪರಬ್ರಹ್ಮನು.

**ಇಮಾ ದಿಶಃ ........... ಯಶ್ಚಾಯಮಧ್ಯಾತ್ಮಂ ಶ್ರೌತ್ರಃ ..........ಆತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ||**

(ಬೃ. ಉ. ೨-೫-೫)

ದಿಕ್ಕುಗಳ ರೂಪದಲ್ಲಿ ಸಕಲ ಭೂತಗಳಿಗೂ ಮಧುವಾಗಿಯೂ, ಸರ್ವವ್ಯಾಪಿಯಾಗಿಯೂ ಇರುವ ಈ ಪರಮಪುರುಷನು ಅಮೃತಮಯನೂ, ತೇಜೋಮಯನೂ ಆಗಿ ಸಕಲ ಭೂತಗಳಲ್ಲಿಯೂ ಶ್ರೋತ್ರರೂಪದಿಂದಿರುತ್ತಾನೆ. ಇವನೇ ಸರ್ವಾತ್ಮಕನಾದ ಪರಬ್ರಹ್ಮನು.

**ಅಯಂ ಚಂದ್ರಃ............ಯಶ್ಚಾಯಮಧ್ಯಾತ್ಮಂ ಮಾನಸಸ್ತೇಜಃ............ಆತ್ಮೇದಮಮೃತ-ಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೬)

ಈ ಪರಮಪುರುಷನು ಸಕಲ ಭೂತಗಳಿಗೂ ಮಧುವಾದ ಚಂದ್ರನಲ್ಲಿ ತೇಜೋಮಯನೂ, ಅಮೃತಮಯನೂ ಆಗಿದ್ದಾನೆ. ಇದೇ ಪರಮಾತ್ಮನು ಸಕಲ ಭೂತಗಳಲ್ಲಿಯೂ ಮಾನಸರೂಪವಾದ ತೇಜೋಯುತನಾಗಿದ್ದಾನೆ. ಇವನೇ ಸರ್ವಾತ್ಮಕನಾದ ಪರಬ್ರಹ್ಮನು.

**ಅಯಮಗ್ನಿಃ............ಯಶ್ಚಾಯಮಧ್ಯಾತ್ಮಂ ವಾಙ್ಮಯಸ್ತೇಜೋಮಯಃ............ಅಯ-ಮಾತ್ಮೇದಮಮೃತಮಿದಂ ಸರ್ವಂ ॥**

(ಬೃ ಉ. ೨-೫-೭)

ಸಕಲ ಭೂತಗಳಿಗೂ ಮಧುವಾದ ಅಗ್ನಿಯೇ ಈ ಪರಮಪುರುಷನು. ಇವನು ಸಕಲ ಭೂತಗಳಲ್ಲಿಯೂ ವಾಙ್ಮಯರೂಪದಲ್ಲಿ ಸ್ಥಾಪಿತನಾಗಿದ್ದಾನೆ. ತೇಜೋಮಯನೂ, ಅಮೃತಮಯನೂ ಆದ ಈ ಪರಮಪುರುಷನೇ ಸರ್ವಾತ್ಮಕನಾದ ಪರಬ್ರಹ್ಮನು.

**ಇಯಂ ವಿದ್ಯುತ್............ಯಶ್ಚಾಯಮಧ್ಯಾತ್ಮಂ ತೈಜಸಸ್ತೇಜೋಮಯಃ............ಅಯ-ಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೮)

ತೇಜೋಮಯನೂ, ಅಮೃತಮಯನೂ ಆದ ಈ ಪರಮಪುರುಷನು ವಿದ್ಯುದ್ರೂಪದಿಂದ ಸಕಲ ಭೂತಗಳಿಗೂ ಮಧುವಾಗಿದ್ದಾನೆ. ಸಕಲ ಭೂತಗಳಲ್ಲಿಯೂ ತೇಜೋಮಯನಾಗಿದ್ದಾನೆ. ಈ ಪರಮಪುರುಷನೇ ಸರ್ವಾತ್ಮಕನಾದ ಪರಬ್ರಹ್ಮನು. ಸರ್ವಾಂತರ್ಯಾಮಿಯೂ, ಸರ್ವಮಯನೂ ಆಗಿದ್ದಾನೆ.

**ಅಯಂ ಸ್ತನಯಿತ್ನುಃ............ಯಶ್ಚಾಯಮಧ್ಯಾತ್ಮಂ ಶಾಬ್ದಃ ಸೌವರಸ್ತೇಜೋಮಯಃ ............ಅಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೯)

ಮೇಘರೂಪದಲ್ಲಿಯೂ ಗುಡುಗಿನರೂಪದಲ್ಲಿಯೂ ಇರುವ ಈ ಪರಮಪುರುಷನು ಸಕಲ ಭೂತಗಳಲ್ಲಿಯೂ ಶಬ್ದರೂಪನಾಗಿದ್ದಾನೆ. ತೇಜೋಮಯನೂ, ಅಮೃತಮಯನೂ ಆದ ಈ ಪರಮಪುರುಷನೇ ಸರ್ವಾತ್ಮಕನೂ, ಸರ್ವಾಂತರ್ಯಾಮಿಯೂ ಆದ ಪರಬ್ರಹ್ಮನಾಗಿದ್ದಾನೆ.

**ಅಯಮಾಕಾಶಃ................ಯಶ್ಚಾಯಮಧ್ಯಾತ್ಮಂ ಹೃದ್ಯಾಕಾಶಃ..............ಅಯಮಾತ್ಮೇದ-ಮಮೃತಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೧೦)

ಸರ್ವವ್ಯಾಪಕವಾದ ಆಕಾಶರೂಪದ ಈ ಪರಮಪುರುಷನು ಸಕಲ ಭೂತಗಳಲ್ಲಿಯೂ, ಹೃದಯರೂಪದಲ್ಲಿಯೂ ಹೃದಯಾಕಾಶರೂಪದಲ್ಲಿಯೂ ಸ್ಥಾಪಿತನಾಗಿದ್ದಾನೆ. ತೇಜೋಮಯನೂ, ಅಮೃತಮಯನೂ ಆದ ಈ ಪರಬ್ರಹ್ಮನೇ ಸರ್ವಾತ್ಮಕನಾಗಿದ್ದಾನೆ.

**ಅಯಂ ಧರ್ಮಃ ................ ಯಶ್ಚಾಯಮಧ್ಯಾತ್ಮಂ ಧಾರ್ಮಸ್ತೇಜೋಮಯಃ................ ಅಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೪-೧೧)

ತೇಜೋಮಯನಾದ ಈ ಪರಮಪುರುಷನು ಸಕಲ ಭೂತಗಳಲ್ಲಿಯೂ ಧರ್ಮರೂಪದಲ್ಲಿ ಬೆಳಗುತ್ತಾನೆ. ಸರ್ವವ್ಯಾಪಿಯಾದ ಈ ಪುರುಷನೇ ಸರ್ವಾತ್ಮಕನಾದ ಪರಬ್ರಹ್ಮನು

**ಇದಂ ಸತ್ಯಂ ..................ಯಶ್ಚಾಯಮಧ್ಯಾತ್ಮಂ ಸಾತ್ಯಃ ........ ಅಯಮಾತ್ಮೇದಂ ಬ್ರಹ್ಮೇದಂ ಸರ್ವಂ ॥** (ಬೃ. ಉ. ೨-೫-೧೨))

ಅಮೃತಮಯನಾದ ಪರಮಪುರುಷನು ಸಕಲ ಭೂತಗಳಲ್ಲಿಯೂ ಸತ್ಯಾತ್ಮಕನಾಗಿರುತ್ತಾನೆ. ಸರ್ವಾತ್ಮಕನಾದ ಪರಬ್ರಹ್ಮನೇ ಇವನು ಸರ್ವಮಯನು.

**ಇದಂ ಮಾನುಷಂ .... .... .... .... ಯಶ್ಚಾಯಮಧ್ಯಾತ್ಮಂ ಮಾನುಷಸ್ತೇಜೋಮಯಃ ಅಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೧೩)

ಪರಮಪುರುಷನಾದ ಈ ಪರಬ್ರಹ್ಮನು ಮಾನುಷರೂಪದಲ್ಲಿ ಸಕಲ ಭೂತಗಳಲ್ಲಿಯೂ ಪ್ರವೇಶಿಸಿ ಅಮೃತಮಯನೂ ತೆಜೋಮಯನೂ ಆಗಿ ಸರ್ವಾತ್ಮಕನಾಗಿದ್ದಾನೆ.

**ಅಯಮಾತ್ಮಾ..................ಯಶ್ಚಾಯಮಾತ್ಮಾ ........ಬ್ರಹ್ಮೇದಂ ಸರ್ವಂ ॥**

(ಬೃ. ಉ. ೨-೫-೧೪)

ತೇಜೋಮಯನೂ ಅಮೃತಮಯನೂ ಆದ ಈ ಪರಮಪುರುಷನೇ ಸರ್ವಾತ್ಮನು, ಸರ್ವಮಯನು. ಇವನೇ ಪರಬ್ರಹ್ಮನು. ಸಕಲ ಭೂತಗಳಿಗೂ ಆತ್ಮಸ್ವರೂಪನಾಗಿದ್ದಾನೆ. **ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ** ” ಸಕಲ ಚರಾಚರಜಗತ್ತಿಗೂ ಆತ್ಮರೂಪನಾದ ಇವನೇ ಸಕಲಕ್ಕೂ ಪ್ರಭುವು.

ಈ ಪರಮಾತ್ಮನು ಕೇವಲ ಸಕಲ ಭೂತಗಳಲ್ಲಿ ಅಂತರ್ಯಾಮಿಯಾಗಿ ವ್ಯಾಪಿಸಿರುವುದು ಮಾತ್ರವಲ್ಲದೆ, ಸಕಲ ಭೂತಗಳ ಕ್ರಿಯಾದಿಗಳನ್ನು ಪ್ರೇರಿಸುವವನಾಗಿಯೂ ಇರುತ್ತಾನೆ. ಹೇಗೆಂದರೆ—

**ಆ ನಖಾಗ್ರೇಭ್ಯೋ ಯಥಾ ಕ್ಷುರಃ ಕ್ಷುರಧಾನೇಽವಹಿತಃ ಸ್ಯಾದ್ವಿಶ್ವಂಭರೋ ವಾ ವಿಶ್ವಂಭರ-ಕುಲಾಯೇ ತಂ ನ ಪಶ್ಯಂತಿ । ಅಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ । ವದನ್ವಾಕ್ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ ॥**

(ಬೃ. ಉ. ೧-೪-೭)

ಕತ್ತಿಯು ಕೋಶದಲ್ಲಿ ಕತ್ತಿಯು ಅಲಗು ಅಂತರ್ಗತವಾಗಿ ಅಡಗಿಕೊಳ್ಳುವಂತೆಯೂ, ಅಗ್ಗಿಷ್ಟಿಕೆಯಲ್ಲಿ (ಅಥವಾ ಅರಣಿಯಲ್ಲಿ) ಅಗ್ನಿಯು ಅಡಕವಾಗಿರುವಂತೆಯೂ ಸಕಲ ಭೂತಗಳಲ್ಲಿಯೂ ಅಡಗಿರುವ ಈ ಪರಮಾತ್ಮನನ್ನು ಯಾರೂ ನೋಡಲಾರರು. ಉಸಿರಾಡುವಾಗ ಇವನು ಪ್ರಾಣರೂಪನು. ಮಾತನಾಡುವಾಗ ಶಬ್ದರೂಪನು. ನೋಡುವ ಕಾಲದಲ್ಲಿ ಚಕ್ಷೂರೂಪನು. ಕೇಳುವಾಗ ಶ್ರೋತ್ರರೂಪನು. ಚಿಂತನಕಾಲದಲ್ಲಿ ಮನೋರೂಪನು. ಇವೆಲ್ಲವೂ ಈ ಪರಮಾತ್ಮನ ಕರ್ಮನಾಮಗಳು.

**ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತ್ಯಾತ್ಮೇ-ತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವಂತಿ । ತದೇತತ್ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾನೇನ ಹ್ಯೇತತ್ಸರ್ವಂ ವೇದ । ಯಥಾ ವೈ ಪದೇನಾನುವಿಂದೇದೇವಂ ಕೀರ್ತಿಂ ಶ್ಲೋಕಂ ವಿಂದತೇ ಯ ಏವಂ ವೇದ ॥**

(ಬೃ. ಉ. ೧.೪-೭)

ಇವುಗಳಲ್ಲಿ ಯಾವುದನ್ನಾದರೂ ಒಂದಂಶವನ್ನು ಮಾತ್ರ ಉಪಾಸಿಸಿದರೆ ಆಗ ಬ್ರಹ್ಮನ ಸ್ವರೂಪವು ಪೂರ್ಣವಾಗಿ ಅರ್ಥವಾಗುವುದಿಲ್ಲ. ವೈಯಕ್ತಿಕವಾಗಿ ಪರಿಶೀಲಿಸಿದರೆ ಇವೆಲ್ಲವೂ ಅಪೂರ್ಣ. ಇವೆಲ್ಲಕ್ಕೂ ಒಂದೇ ಮೂಲವಾದ ಮತ್ತು ಎಲ್ಲವೂ ಒಟ್ಟಿಗೆ ಕಲೆತು ಕೂಡಿಕೊಳ್ಳುವ ಆತ್ಮನನ್ನು ಉಪಾಸನೆಮಾಡಿದರೆ ಮಾತ್ರ ಪೂರ್ಣಾತ್ಮನ ಸ್ವರೂಪವು ಅರ್ಥವಾಗುತ್ತದೆ. ಸಕಲವಾದ ಜ್ಞಾನದರ್ಶನಕ್ಕೂ ಈ ಆತ್ಮನೇ ಮಾರ್ಗದರ್ಶಕವಾದುದರಿಂದ ಇದು **ಪದನೀಯ** ಎಂದು ಪ್ರಶಂಸಿತವಾಗಿದೆ. ಈ ತತ್ತ್ವವನ್ನರಿತವನು ಕೀರ್ತಿಯನ್ನೂ, ಪ್ರಶಂಸೆಯನ್ನೂ ಪಡೆಯುತ್ತಾನೆ. ಹೀಗೆ ಸರ್ವಾತ್ಮನೂ, ಸರ್ವಜ್ಞಾನಕ್ಕೂ ಮಾರ್ಗದರ್ಶಕನೂ ಆದ ಪರಮಪುರುಷನನ್ನು ಈಶಾವಾಸ್ಯೋಪನಿಷತ್ತಿನಲ್ಲಿ ಈರೀತಿ ಸ್ತುತಿಸಿದೆ.

**ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**

(ಈಶ ೧)

ಜಂಗಮಾತ್ಮಕವಾದ ಈ ಜಗತ್ತಿನಲ್ಲಿ ಯಾವಯಾವ ವಸ್ತುಗಳಿರುವುವೋ, ಅವೆಲ್ಲವೂ ಈಶ್ವರನಿಂದ ವ್ಯಾಪ್ತವಾಗಿವೆ. ಇವನು ಆ ರೂಪಗಳಲ್ಲಿಯೇ ಆವಿರ್ಭೂತನಾಗಿದ್ದಾನೆ. ಇವನೇ ಸನ್ಮಾರ್ಗದರ್ಶಕನು. ಆದುದರಿಂದಲೇ,

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**

(ಈಶ ೧೮)

ಎಲೈ ಅಗ್ನಿಯೇ, ನೀನು ಸಕಲ ಸನ್ಮಾರ್ಗಗಳನ್ನೂ ತಿಳಿದವನಾಗಿದ್ದೀಯೆ. ನಮ್ಮನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವವನಾಗು. ಅಸನ್ಮಾರ್ಗದಿಂದ ನಮ್ಮನ್ನು ದೂರವಿಡು, ನಿನಗೆ ನಮಸ್ಕಾರವು ಎಂಬ ಈ ಪ್ರಾರ್ಥನೆಯು ಮೇಲಿನ ಬೃಹದಾರಣ್ಯಕದಲ್ಲಿ ವರ್ಣಿಸಿರುವ **"ಪದನೀಯ"** ಎಂಬ ವಿಶೇಷಣದ ತಾತ್ಪರ್ಯವನ್ನು ತಿಳಿಸುತ್ತದೆ. ಆದುದರಿಂದಲೇ ಇವನು ಪ್ರಭುವೆಂದೂ ಸ್ತುತನಾಗಿದ್ದಾನೆ. ಈ ಪರಮಪುರುಷನು ಯಾವಯಾವ ವಿಧದಲ್ಲಿ ಜಗತ್ತನ್ನು ಪ್ರವೇಶಿಸಿ ತನ್ನ ಸ್ವರೂಪವನ್ನು ಪ್ರಕಟಿಸುತ್ತಾನೆ ಎಂಬ ವಿವರವು ಈರೀತಿಯಿರುತ್ತದೆ.

**ಯಾದೃಗೇವ ದದೃಶೇ ತಾದೃಗುಚ್ಯತೇ ಸಂ ಛಾಯಯಾ ದಧಿರೇ ಸಿಧ್ರಯಾಪ್ಸ್ವಾ ।**
**ಮಹೀಮಸ್ಮಭ್ಯಮುರುಷಾಮುರು ಜ್ರಯೋ ಬೃಹತ್ಸುವೀರಮನಪಚ್ಯುತಂ ಸಹಃ ॥**

(ಋ. ಸಂ. ೫-೪೪-೬)

ಈ ಪರತತ್ತ್ವವು ಎಲ್ಲೆಲ್ಲೂ ವ್ಯಾಪಿಸಿರುವುದರಿಂದ ಯಾರ ಯಾರ ದೃಷ್ಟಿಗೆ ಹೇಗೆ ಕಾಣಿಸಲ್ಪಡುವುದೋ ಆ ರೀತಿಯಲ್ಲೆಲ್ಲಾ ಪ್ರಶಂಸಿತವಾಗುತ್ತದೆ. **"ಏಕಂ ಸದ್ವಿಪ್ರಾ ಬಹುಧಾ ವದಂತಿ"** (೧. ೧೬೪. ೪೬) ಎಂಬ ಋಕ್ಕಿನಲ್ಲಿ ವರ್ಣಿತವಾಗಿರುವಂತೆ (ಋಗ್ವೇದ ಸಂಹಿತಾ. ಭಾಗ ೧೨. ಪುಟ ೬೨೬) ಇಂದ್ರ, ಅಗ್ನಿ, ಯಮ, ಸೂರ್ಯ, ಸವಿತೃ, ಬ್ರಹ್ಮ, ಪ್ರಜಾಪತಿ ಎಲ್ಲರೂ ಈಶ್ವರನ ವಿಭೂತಿ ವಿಶೇಷಗಳೇ ಆಗಿದ್ದಾರೆ. ಅಥವಾ ಇವೆಲ್ಲವೂ ಈಶ್ವರನ ಪರ್ಯಾಯನಾಮಗಳೆಂದೂ ಹೇಳಬಹುದು.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥**
**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥**

(ಭ. ಗೀ. ೭. ೬,೭)

ಜಗತ್ತಿನಲ್ಲಿ ಯಾವ ಯಾವ ವಸ್ತುಗಳಿವೆಯೋ ಅವೆಲ್ಲಕ್ಕೂ ನಾನೇ ಯೋನಿಯು (ಉತ್ಪತ್ತಿ ಸ್ಥಾನವು). ಸಕಲ ಜಗತ್ತೂ ನನ್ನಿಂದಲೇ ಉತ್ಪನ್ನನಾಗಿ ನನ್ನಲ್ಲೇ ಲಯವಾಗುತ್ತದೆ. ನನ್ನನ್ನು ಬಿಟ್ಟು ಬೇರೆ ಯಾವ ತತ್ತ್ವವೂ ವಿಶ್ವದಲ್ಲಿಲ್ಲ. ಮಣಿಗಳು ನೂಲಿನಲ್ಲಿ ಯಾವರೀತಿ ಒಟ್ಟಿಗೆ ಸೇರಿಕೊಂಡಿವೆಯೋ ಅದೇ ರೀತಿ ಸಕಲ ವಸ್ತುಗಳೂ ನನ್ನಲ್ಲಿ ಸೇರಿಕೊಂಡಿವೆ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥**

(ಭ. ಗೀ. ೭-೭)

ಎಲೈ ಅರ್ಜುನನೇ, ಸಕಲ ಭೂತಗಳೂ ನನ್ನ ಶರೀರರೂಪವಾದ ವಿಕಾರಾವಸ್ಥೆಯನ್ನೇ ಹೊಂದುತ್ತವೆ. ಕಲ್ಪದ ಕೊನೆಯಕಾಲದಲ್ಲಿ ನನ್ನಲ್ಲೇ ಅಂತರ್ಗತವಾಗುತ್ತವೆ. ಮತ್ತು ಪುನಃ ಕಲ್ಪದ ಆದಿಕಾಲದಲ್ಲಿ ನಾನು ಅವನ್ನು ಸೃಷ್ಟಿರೂಪದಲ್ಲಿ ಪ್ರಕಾಶಪಡಿಸುತ್ತೇನೆ. ಎಲ್ಲವೂ ನನ್ನ ಅವಸ್ಥಾವಿಶೇಷಗಳೇ. ಹೇಗೆಂದರೆ—

ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ವಿಶ್ವಾನಿ ರೂಪಾಣಿ ಯೋನೀಶ್ಚ ಸರ್ವಾಃ ।
ಏಕೈಕಂ ಜಾಲಂ ಬಹುಧಾ ವಿಕುರ್ವನ್ನಸ್ಮಿನ್ ಕ್ಷೇತ್ರೇ ಸಂಹರತ್ಯೇಷ ದೇವಃ ।
ಭೂಯಃ ಸೃಷ್ಟ್ವಾ ಪತಯಸ್ತಥೇಶಃ ಸರ್ವಾಧಿಪತ್ಯಂ ಕುರುತೇ ಮಹಾತ್ಮಾ ॥

(ಶ್ವೇ. ಉ. ೫-೨,೩)

ಈಶ್ವರನು ಪ್ರತಿಯೊಂದು ಉತ್ಪತ್ತಿಸ್ಥಾನಕ್ಕೂ ನಿಯಾಮಕನು. ಎಲ್ಲ ರೂಪಗಳೂ ಎಲ್ಲ ಉತ್ಪತ್ತಿ ಸ್ಥಾನಗಳೂ ಇವನ ಸ್ವರೂಪವನ್ನೇ ಪ್ರತಿಬಿಂಬಿಸುವ ಸಂಕಲ್ಪವಿಶೇಷಗಳಾಗಿವೆ. ತನ್ನ ಬಲೆಯ ಪ್ರತಿಯೊಂದು ಜಾಲಗಳನ್ನೂ ಹರಡಿ ಪ್ರತಿಯೊಂದು ವಸ್ತುವನ್ನೂ ತನ್ನ ನಿಯಮನದಲ್ಲಿಟ್ಟುಕೊಳ್ಳುತ್ತಾನೆ. ತನ್ನ ನಿರ್ದಿಷ್ಟಕಾಲದಲ್ಲಿ ಎಲ್ಲವನ್ನೂ ಎಳೆದು ಕೊಂಡು ಮಹಾತ್ಮನಾದ ಈಶ್ವರನು ಪುನಃ ಸಂಕಲ್ಪಕಾದಲ್ಲಿ ಉತ್ಪನ್ನಮಾಡುತ್ತಾನೆ. ಎಂದರೆ ತಾನೇ ಆ ರೂಪಗಳಲ್ಲಿ ವಿಸ್ತೃತನಾಗುತ್ತಾನೆ. ಆದರೆ ತಾನು ಮಾತ್ರ ಬೇರೆ ಬೇರೆ ಅವಸ್ಥೆಯನ್ನು ಹೊಂದುವುದರಿಂದ ಅಜ್ಞಾನಿಗಳು ಅವೆಲ್ಲ ಪೃಥಕ್ಕಾದ (ಬೇರೆ ಬೇರೆಯಾದ) ವ್ಯಕ್ತಿತ್ವವನ್ನು ಹೊಂದಿವೆ, ಅವೇ ಸತ್ಯ ಎಂದು ತಿಳಿದಿರುತ್ತಾರೆ. ಆದರೆ ಒಬ್ಬನೇ ಪುರುಷನು ಆ ಎಲ್ಲ ಅವಸ್ಥೆಗಳನ್ನೂ ಹೊಂದಿರುತ್ತಾನೆ. ಹೇಗೆಂದರೆ—

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ ॥

(ಭ. ಗೀ. ೧೩-೧೬,೧೭)

ನಾನು ಸಕಲ ಭೂತಗಳಲ್ಲಿಯೂ ವ್ಯಾಪಿಸಿದ್ದೇನೆ. ಆದರೆ ಅವುಗಳಲ್ಲಿ ಬೇರೆಬೇರೆ ರೂಪದಿಂದಿರುವುದರಿಂದ ಬೇರೆಬೇರೆ ಯಾಗಿ ಕಾಣುತ್ತೇನೆ. ಆದರೆ, ತತ್ತ್ವತಃ ನನ್ನ ರೂಪವು ವಿಭಕ್ತವಾಗಿಲ್ಲ, (ಬೇರೆಬೇರೆಯಾಗಿಲ್ಲ). ಲೋಕದ ಪ್ರಳಯ ಕಾಲದಲ್ಲಿ ಎಲ್ಲವನ್ನೂ ನುಂಗುವವನು ನಾನೇ; ಪುನಃ ಉತ್ಪನ್ನಕಾಲದಲ್ಲಿ ಉತ್ಪತ್ತಿಹೇತುವೂ ನಾನೇ. ಆದಿತ್ಯಾದಿ ಜ್ಯೋತಿಃಪುಂಜಗಳಿಗೆಲ್ಲಕ್ಕಿಂತಲೂ ನಾನೇ ಅಧಿಕವಾದ ಪ್ರಕಾಶಮಾನವುಳ್ಳವನು. ನಾನೇ ಜ್ಞಾನಕ್ಕೆ ವಿಷಯನು. ನಾನೇ ಜ್ಞಾನರೂಪನು. ಸಕಲರ ಹೃದಯದಲ್ಲಿ ಪ್ರತಿಷ್ಠಾಪಿತನಾಗಿರುವವನೂ ನಾನೇ. ಇದನ್ನೇ ಪ್ರಶ್ನೋಪನಿಷತ್ತಿನಲ್ಲಿ ಈರೀತಿ ಪ್ರಶಂಸಿಸಿದೆ.

ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ ।
ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾ ಬಲಿಂ ಹರಂತಿ ಯಃ ಪ್ರಾಣೈಃ ಪ್ರತಿತಿಷ್ಠಸಿ ॥

(ಪ್ರಶ್ನ. ೨-೭)

ಎಲೈ ಅಗ್ನಿಯೇ, ನೀನೇ ಪ್ರಜಾಪತಿರೂಪದಲ್ಲಿ ಸಕಲ ಗರ್ಭಗಳನ್ನೂ ಪ್ರವೇಶಿಸಿ ಗರ್ಭರೂಪದಲ್ಲಿ ಸಂಚರಿಸುತ್ತೀಯೆ. ನೀನೇ ಪುನಃ ಸಕಲ ಪ್ರಾಣಿಗಳ ರೂಪದಲ್ಲಿಯೂ ಉತ್ಪನ್ನನಾಗುತ್ತೀಯೆ. ನೀನೇ ಸಕಲ ಪ್ರಾಣಿಗಳಲ್ಲೂ ಪ್ರಾಣರೂಪ ದಲ್ಲಿ ವಾಸಿಸುವುದರಿಂದ ಸಕಲ ಪ್ರಾಣಿಗಳೂ ನಿನಗೆ ಪೂಜೆಯನ್ನು ಅರ್ಪಿಸುತ್ತವೆ.

**ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುಃ ।**
**ಏಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥**

(ಪ್ರಶ್ನ ೨-೫)

ಅಗ್ನಿಯ ರೂಪದಲ್ಲಿ ಈ ಪರಮಾತ್ಮನು ದಹಿಸುತ್ತಾನೆ. ಸೂರ್ಯನ ರೂಪದಲ್ಲಿ ಪ್ರಭೆಯೊಡನೆ ಪ್ರಕಾಶಿಸುತ್ತಾನೆ. ಪರ್ಜನ್ಯರೂಪದಲ್ಲಿ ವೃಷ್ಟಿಕಾರಕನಾಗುತ್ತಾನೆ. ವಾಯುರೂಪದಲ್ಲಿ ಸರ್ವತ್ರ ಸಂಚರಿಸುತ್ತಾನೆ. ಇವನೇ ಪೃಥ್ವೀ ರೂಪನು, ಸಕಲ ಸಂಪತ್ತೂ ಇವನೇ, ದೇವತಾತ್ಮನಾದ ಇವನೇ ಸತ್, ಅಸತ್, ಅಮೃತ ಇತ್ಯಾದಿ ನಾನಾ ಅವಸ್ಥೆಗಳೂ ಇವನದೇ ಆಗಿವೆ.

**ಯಾ ತೇ ತನೂರ್ವಾಚಿ ಪ್ರತಿಷ್ಠಿತಾ ಯಾ ಶ್ರೋತ್ರೇ ಯಾ ಚ ಚಕ್ಷುಷಿ ।**
**ಯಾ ಚ ಮನಸಿ ಸಂತತಾ ಶಿವಾಂ ತಾಂ ಕುರು ಮೋತ್ಕ್ರಮೀಃ ॥**

(ಪ್ರಶ್ನ ೨.೧೨)

ಎಲೈ ದೇವನೇ, ವಾಕ್ಕಿನಲ್ಲಿ ನಿನ್ನ ಯಾವ ರೂಪವು ಅಡಕವಾಗಿರುವುದೋ, ಯಾವುದು ಶ್ರೋತ್ರದಲ್ಲಿ ಅಂತರ್ಗತವಾಗಿದೆಯೋ, ಯಾವ ನಿನ್ನ ದಿವ್ಯರೂಪವು ಚಕ್ಷುಸ್ಸಿನಲ್ಲಿ ಅಂತರ್ಗತವಾಗಿರುವುದೋ, ಯಾವುದು ಮನಸ್ಸಿನಲ್ಲಿ ವ್ಯಾಪ್ತವಾಗಿರುವುದೋ, ಅವೆಲ್ಲವೂ ಮಂಗಳಕರವಾಗಲಿ ಎಂದು ಮಾನವದೇಹದಲ್ಲಿ ವ್ಯಾಪಿಸಿರುವ ಈಶ್ವರನ ಅಂಶಗಳು ವರ್ಣಿತವಾಗಿವೆ.

ವೈಯಕ್ತಿಕವಾಗಿ ಮಾನವ ದೇಹದಲ್ಲಿ ನಾನಾರೂಪಗಳಲ್ಲಿ ಅಂತರ್ಗತನಾಗಿರುವುದರಿಂದ ಆಯಾ ದೇಹಗಳು ನಷ್ಟವಾದಾಗ ಪರಮಾತ್ಮನು ನಷ್ಟವಾದಂತೆ ಕಂಡರೂ ಇವನಿಗೆ ನಾಶವಿಲ್ಲ. ಇವನು ಅಮರ್ತ್ಯನು. ದೇಹದ ನಾಶವಾದರೆ ಅದರಿಂದ ಆತ್ಮನಾಶವಿಲ್ಲ. ಹೇಗೆಂದರೆ—

**ಏಕೋ ಮೃತ್ಯುರ್ಬಹವಾ ಇತ್ಯೇಕಶ್ಚ ಬಹವಶ್ಚೇತಿ ಹ ಬ್ರೂಯಾದ್ಯದಹಾಸಾವಮುತ್ರ ತೇನೈಕೋಽಥ ಯದಿಹ ಪ್ರಜಾಸು ಬಹುಧಾ ವ್ಯಾವಿಷ್ಟಸ್ತೇನೋ ಬಹವಃ ॥**

(ಶ. ಬ್ರಾ. ೧೦.೫-೨-೧೬)

ಮೃತ್ಯುವು ಒಂದೇ, ಅನೇಕವೇ ಎಂಬ ಪ್ರಶ್ನೆಯು ಒಂದು ಸಲ ಉದ್ಭವಿಸುತ್ತದೆ. ಅದಕ್ಕೆ ಉತ್ತರವಾಗಿ ಒಂದು ಎಂದು ಹೇಳಿದರೂ ಸರಿ ಅಥವಾ ಅನೇಕ ಎಂದು ಹೇಳಿದರೂ ಸರಿ. ದ್ಯುಲೋಕದಲ್ಲಿ ಪ್ರಕಾಶಿತನಾಗುವ ಆದಿತ್ಯನ ಪರವಾಗಿ ಪ್ರಶ್ನಿಸಿದರೆ ಅವನೊಬ್ಬನೇ ಅದ್ವಿತೀಯವಾದ ತತ್ತ್ವವು. ಅವನಲ್ಲದೆ ಬೇರೆಯಿಲ್ಲ. ಅಥವಾ ಪೃಥಿವ್ಯಾದಿ ಲೋಕಗಳಲ್ಲಿ ಅವನು ಅನೇಕ ವಿಧವಾಗಿ ವಿಭಕ್ತನಾದಂತೆ ಬೇರೆ ಬೇರೆ ರೂಪಗಳಲ್ಲಿ ಪ್ರಕಾಶಿತವಾಗಿರುವುದರಿಂದ ಅನೇಕ ಎಂದು ಹೇಳಿದರೂ ತಪ್ಪಿಲ್ಲ ಇತ್ಯಾದಿಯಾಗಿ ವೈವಿಧ್ಯದಲ್ಲಿ ಏಕತ್ವವನ್ನು ತೋರಿಸಿದೆ.

ಹೀಗೆಯೇ ಇನ್ನೂ ಅನೇಕ ವಾಕ್ಯಗಳನ್ನು ಉದಾಹರಿಸಿ ಈ ವಿಷಯವನ್ನು ಸ್ಪಷ್ಟವಾಗಿ ವಿವರಿಸಬಹುದಾದರೂ, ಸ್ಥಳ ಸಂಕೋಚದಿಂದ ಇನ್ನು ಕೆಲವು ಪ್ರಕರಣಗಳನ್ನು ಮಾತ್ರ ವಿವರಿಸಿ ಮುಂದಿನ ವಿಷಯವನ್ನು ಪರಿಶೀಲಿಸಲಾಗುತ್ತದೆ. ಸೃಷ್ಟಿಗೆ ಪೂರ್ವ ಬ್ರಹ್ಮನು ಅದ್ವಿತೀಯನಾಗಿ ಇದ್ದನು; ಅವನು ಸೃಷ್ಟಿಯನ್ನು ಅಪೇಕ್ಷಿಸಿ ಸಂಕಲ್ಪಿಸಿದನು; ಜಗತ್ ಸೃಷ್ಟಿಯೆಲ್ಲವೂ ಅವನ ವಿಭೂತಿಗಳ ಅಭಿವ್ಯಕ್ತಿಯೇ ಆಗಿದೆ ಎಂಬ ವಿಷಯದಲ್ಲಿ ಶ್ರುತಿವಾಕ್ಯ

ಗಳನ್ನುದಾಹರಿಸಿ ಹಿಂದೆ ಕೆಲವೆಡೆಗಳಲ್ಲಿ ತಿಳಿಸಿದೆ. (ಋ. ಸಂ. ೧೦-೮೧ ಮತ್ತು ೮೨ನೇ ಸೂಕ್ತಗಳು). ಹೀಗೆ ಸೃಷ್ಟಿಯಾದನಂತರ ಬ್ರಹ್ಮನು ಬೇರೆ, ಜಗತ್ತು ಬೇರೆಯಲ್ಲ; ಜಗತ್ತೆಲ್ಲವೂ ಬ್ರಹ್ಮನ ಅಂಶವೇ ಎಂಬ ವಿಷಯದಲ್ಲಿ ಕೆಲವು ವಾಕ್ಯಗಳನ್ನು ಮಾತ್ರ ಉದಾಹರಿಸಿ " **ಪುರುಷ ಏವೇದಂ ಸರ್ವಂ** " ಎಂಬ ವಾಕ್ಯದಲ್ಲಿರುವ ಅಭಿಪ್ರಾಯ ವನ್ನು ವಿಶದಪಡಿಸಲಾಗುತ್ತದೆ.

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ |**

(ಛಾ. ಉ. ೩-೧೪-೧)

ಸಕಲ ವಿಶ್ವವೂ ಬ್ರಹ್ಮಮಯವು. ಅವನಿಂದಲೇ ಸೃಷ್ಟಿ, ಅವನಲ್ಲಿಯೇ ಲಯ, ಅವನಲ್ಲಿಯೇ ಉಸಿರಾಡುವುದು, ಸೃಷ್ಟಿಸ್ಥಿತಿಲಯಗಳೆಲ್ಲವೂ ಅವನಲ್ಲಿಯೇ.

**ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪಃ ಆಕಾಶ ಆತ್ಮಾ ಸರ್ವಕರ್ಮಾ**
**ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ |**

(ಛಾ. ಉ. ೩-೧೪-೨)

ಈಶ್ವರನು ಮನೋಮಯನು. ಪ್ರಾಣವೇ ಶರೀರವಾಗಿ ಉಳ್ಳವನು, ತೇಜೋರೂಪನು, ಸತ್ಯಾತ್ಮಕವಾದ ಸಂಕಲ್ಪ ವುಳ್ಳವನು, ಸರ್ವ ಆತ್ಮವೂ ತನ್ನಲ್ಲೇ ಐಕ್ಯವಾಗಿರುವವನು, ಸಕಲ ಕರ್ಮಗಳೂ, ಸಕಲ ಕಾಮಗಳೂ, ಸಕಲ ಗಂಧವೂ, ಸಕಲ ರಸವೂ, ಶ್ಲಾಘ್ಯವೂ, ಶ್ಲಾಘ್ಯರಹಿತವೂ ಆದ ಆ ಎಲ್ಲ ಜಗದ್ವ್ಯವಹಾರಗಳೂ ಈಶ್ವರನ ಕ್ರಿಯಾವಿಶೇಷಗಳೇ ಆಗಿವೆ.

**ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ**
**ದಕ್ಷಿಣತ ಆತ್ಮೋತ್ತರತ ಆತ್ಮೈವೇದಂ ಸರ್ವಮಿತಿ ||**

(ಛಾ. ಉ. ೭-೨೫-೨)

ಈ ವಿಶ್ವಾತ್ಮನೇ ಅಧೋಭಾಗವು. ಊರ್ಧ್ವಭಾಗವೂ ಇದೇ. ಪಶ್ಚಿಮ, ಪೂರ್ವ, ದಕ್ಷಿಣ ಮತ್ತು ಉತ್ತರ ಈ ದಿಕ್ಕು ಗಳಲ್ಲೂ, ದಿಗಂತರಗಳಲ್ಲೂ ಯಾವ ತತ್ತ್ವವಿರುವುದೋ ಅದೆಲ್ಲವೂ ಈ ಆತ್ಮನೇ. ಸಕಲವಾದ ವಿಶ್ವವೂ ಆತ್ಮಮಯ ಮತ್ತು ಆತ್ಮರೂಪ.

**ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ |**
**ತಂ ದೇವಾಃ ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ ||**

(ಕಠ. ೪-೯)

ಯಾವ ಪರಮಾತ್ಮನಿಂದ ಸೂರ್ಯನು ಉದಯಿಸುವನೋ, ಯಾವ ಪರಮಾತ್ಮನಲ್ಲೇ ಅಸ್ತವನ್ನು ಹೊಂದುವನೋ ಆ ವಿಶ್ವಾತ್ಮನಲ್ಲೇ ಸಕಲ ದೇವತೆಗಳೂ ಆಶ್ರಯವನ್ನು ಹೊಂದಿದ್ದಾರೆ. ಈ ಪರಮಾತ್ಮನನ್ನು ಮೀರಿ ಯಾರೂ ಇರು ವಂತಿಲ್ಲ. ಪ್ರತಿಯೊಂದು ದೇವತೆಯೂ ಈ ವಿಶ್ವಾತ್ಮಾಂಶವೇ ಅಲ್ಲದೆ ಬೇರೆಯಲ್ಲ, ಎಂಬ ಇವೇ ವಿಷಯವನ್ನು ಮುಂಡಕೋಪನಿಷತ್ತಿನಲ್ಲಿ ಈರೀತಿ ವರ್ಣಿಸಿದೆ.

**ತದೇತತ್ಸತ್ಯಂ ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ।**
**ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಂತಿ ॥**

(ಮು. ಉ. ೨-೧-೧)

ಪ್ರಜ್ವಲಿಸುವ ಅಗ್ನಿಯಿಂದ ಜ್ವಾಲೆಯು ಹೊರಟು ಸಾವಿರಾರು ಕಿಡಿಗಳು ಅದರಿಂದ ಉದ್ಭವಿಸಿ ಪ್ರಸರಿಸುವಂತೆ, ಎಲೈ ಸೌಮ್ಯನೇ, ಈ ವಿಶ್ವಾತ್ಮನಿಂದ ಅನೇಕ ಜೀವರಾಶಿಗಳೂ, ಇತರ ಅಚೇತನವಸ್ತುಗಳೂ ಉದ್ಭವಿಸಿ ಜಗತ್ತಿನಲ್ಲಿ ಹರಡಿ ನಂತರ ಕೊನೆಯಲ್ಲಿ ಇಲ್ಲಿಯೇ ಲಯವನ್ನು ಹೊಂದುತ್ತವೆ.

**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥**

(ಮು. ಉ. ೨-೧-೩)

ಪ್ರಾಣ, ಮನಸ್ಸು, ಸಕಲ ಇಂದ್ರಿಯಗಳು, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವೀ ಇವೆಲ್ಲವೂ ಈ ಪರಮಾತ್ಮನಿಂದಲೇ ಉತ್ಪನ್ನವಾಗಿವೆ.

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ ।**
**ವಾಯುಃ ಪ್ರಾಣೋ ಹೃದಯಾ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ॥**

(ಮು. ಉ. ೨-೧-೪)

ಜಗತ್ತಿನ ಸಕಲ ತತ್ತ್ವಗಳಲ್ಲೂ ಇವನೇ ಅಂತರ್ಯಾಮಿಯಾಗಿರುತ್ತಾನೆ. ಅಗ್ನಿಯೇ ಇವನ ಶಿರಸ್ಸು. ಸೂರ್ಯ ಮತ್ತು ಚಂದ್ರರೇ ಇವನ ಕಣ್ಣುಗಳು. ದಿಕ್ಕುಗಳೇ ಇವನ ಕಿವಿಗಳು. ವೇದವೇ ಇವನ ಶಬ್ದವು. ವಾಯುವೇ ಪ್ರಾಣವು. ಸಕಲ ವಿಶ್ವವೇ ಇವನ ಹೃದಯವು. ಇವನ ಪಾದದಿಂದ ಪೃಥ್ವಿಯು ಹೊರಟು ವಿಸ್ತೃತವಾಗಿ ಹರಡಿದೆ.

**ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್ ಸಪ್ತಾರ್ಚಿಷಃ ಸಮಿಧಃ ಸಪ್ತ ಹೋತ್ರಾಃ ।**
**ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾ ಗುಹಾಶಯಾ ನಿಹಿತಾಃ ಸಪ್ತ ಸಪ್ತ ॥**

(ಮು. ೨-೧-೮)

ತಲೆಯಲ್ಲಿರುವ ಏಳು ಪ್ರಾಣಗಳೂ (ಎಂದರೆ ಚಕ್ಷುರಾದಿಗಳು) ಅವುಗಳ ಜ್ಞಾನಶಕ್ತಿಗಳೂ, ಅವುಗಳ ಜ್ಞಾನಕ್ಕೆ ವಿಷಯಗಳೂ, ಏಳು ವಿಧವಾದ ಯಜ್ಞಾಹುತಿಗಳೂ, ಸಕಲ ಜೀವರಾಶಿಗಳ ಹೃದಯದಲ್ಲೂ ಏಳು ವಿಧವಾಗಿರುವ ಪ್ರಾಣಗಳೂ ಇವನಿಂದಲೇ ಉತ್ಪತ್ತಿಯನ್ನು ಪಡೆದಿವೆ.

**ಅತಃ ಸಮುದ್ರಾ ಗಿರಯಶ್ಚ ಸರ್ವೇಽಸ್ಮಾತ್ಸ್ಯಂದಂತೇ ಸಿಂಧವಃ ಸರ್ವ ರೂಪಾಃ ।**
**ಅತಶ್ಚ ಸರ್ವಾ ಓಷಧಯೋ ರಸಾಶ್ಚ ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ ॥**

(ಮು. ಉ. ೨-೧-೯)

ಸಕಲ ಸಮುದ್ರಗಳೂ ಪರ್ವತಗಳೂ ಈ ಪರಮಾತ್ಮನಿಂದಲೇ ಆವಿರ್ಭಾವವನ್ನು ಹೊಂದಿವೆ. ಸಕಲ ವಿಧವಾದ ನದಿಗಳೂ ಇವನಿಂದಲೇ ಉತ್ಪನ್ನವಾಗಿ ಹರಿಯುತ್ತವೆ. ಯಾವ ಓಷಧಿಗಳ ಸಹಾಯದಿಂದ ಈ ದೇಹವು ಸುಸ್ಥಿತಿಯನ್ನು ಹೊಂದಿದೆಯೋ ಆ ಓಷಧಿಗಳೂ ಇವನಿಂದಲೇ ಉತ್ಪತ್ತಿಯನ್ನು ಹೊಂದಿವೆ.

**ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ ।**
(ಮು. ೨-೧-೧೦)

ವಿಶ್ವದಲ್ಲಿ ಸಕಲವೂ ಪುರುಷಮಯವೇ ಆಗಿದೆ.

**ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ ।**
**ಅಧಶ್ಚೋರ್ಧ್ವಂ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ ॥**
(ಮು. ಉ. ೨-೨-೧೧)

ಸಕಲವೂ ಬ್ರಹ್ಮಮಯವು. ಬ್ರಹ್ಮನೇ ಸರ್ವಗತನು. ಊರ್ಧ್ವಭಾಗದಲ್ಲೂ, ಅಧೋಭಾಗದಲ್ಲೂ, ಮುಂಭಾಗದಲ್ಲೂ, ಹಿಂಭಾಗದಲ್ಲೂ, ಬಲಭಾಗದಲ್ಲೂ ಮತ್ತು ಎಡಭಾಗದಲ್ಲೂ ಆ ಬ್ರಹ್ಮನೇ ವ್ಯಾಪಿಸಿದ್ದಾನೆ. ಸಕಲ ವಿಶ್ವವೂ ಆ ಬ್ರಹ್ಮಮಯವೇ ಆಗಿದೆ ಎಂಬ ಈ ವಿಷಯವನ್ನು ಪ್ರಕೃತವಾದ ಋಕ್ಕಿನಲ್ಲಿ **ಪುರುಷ ಏವೇದಂ ಸರ್ವಂ** ಎಂದು ವರ್ಣಿಸಿ ಸ್ತುತಿಸಿದೆ ಮತ್ತು ಬ್ರಹ್ಮನಿಂದ ಸೃಷ್ಟವಾದ ಜಗತ್ತಿಗೂ, ಸೃಷ್ಟಿಗೆ ಮೂಲಕಾರಣವಾದ ಬ್ರಹ್ಮನಿಗೂ ಇರುವ ಸಂಬಂಧವನ್ನು **ಅತೋ ಜ್ಯಾಯಾಂಶ್ಚ ಪೂರುಷಃ** ಎಂಬ ವಾಕ್ಯದ ತಾತ್ಪರ್ಯವನ್ನು ವಿವರಿಸುವಾಗ ತಿಳಿಸಲಾಗುತ್ತದೆ.

**ಯದ್ಭೂತಂ ಯಚ್ಚ ಭವ್ಯಂ—ಇದಂ ಸರ್ವಂ** ಯಾವುದು ವರ್ತಮಾನಕಾಲದಲ್ಲಿರುವುದೋ, ಯಾವುದು ಭೂತಕಾಲದಲ್ಲಿದ್ದಿತೋ, ಯಾವುದು ಮುಂದೆ ಸಂಭವಿಸುವುದೋ ಅದೆಲ್ಲವೂ ಪುರುಷನೇ. ಜಗತ್ತೆಲ್ಲವೂ ಕಾಲಾಧೀನವಾದರೆ, ಜಗನ್ನಿಯಾಮಕವಾದ ಕಾಲವು ಈಶ್ವರಾಧೀನವಾಗಿರುತ್ತದೆ. ಹೇಗೆಂದರೆ—

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥**
(ಕಠ ಉ ೪-೧೨-೧೩)

ಪುರುಷನು ಅಂಗುಷ್ಠಮಾತ್ರನು. ದೇಹದ ಮಧ್ಯವರ್ತಿಯಾಗಿದ್ದಾನೆ. ಇವನೇ ಭೂತಕಾಲಕ್ಕೂ ಪ್ರಭುವು. ಭವಿಷ್ಯತ್ತಿಗೂ ನಿಯಾಮಕನು. ಧೂಮವಿಲ್ಲದ ಪ್ರಭೆಯೊಂದಿಗೆ ಕೂಡಿ ಜ್ವಲಿಸುವ ಅಗ್ನಿಯಂತೆ ಪ್ರಭಾಯುತನಾಗಿದ್ದಾನೆ. ಭೂತಕಾಲ ಮತ್ತು ಭವಿಷ್ಯತ್ಕಾಲಗಳಿಗೆ ಒಡೆಯನು, ಇಂದಿರುವವನೂ ಅವನೇ; ನಾಳೆ ಇರುವವನೂ ಅವನೇ. ಅವನಲ್ಲದೆ ಬೇರೆಯಿಲ್ಲ. ಇವನು ಮಾತ್ರ ಕಾಲಾಧೀನನಲ್ಲ. ಹೇಗೆಂದರೆ—

**ಯಸ್ಮಾದರ್ವಾಕ್ಸಂವತ್ಸರೋಽಹೋಭಿಃ ಪರಿವರ್ತತೇ ।**
**ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಂ ।**
(ಬೃ. ಉ. ೪-೪-೧೬)

ಸಕಲ ವ್ಯವಹಾರಗಳಿಗೂ ನಿಯಾಮಕವಾದ ಸಂವತ್ಸರವೂ ಸಹ ಈ ಪರಬ್ರಹ್ಮನ ಮುಂದೆ ತನ್ನ ಅಹೋರಾತ್ರಗಳಿಂದ ಕೂಡಿ ಪರಿಭ್ರಮಣವನ್ನು ಹೊಂದುತ್ತಿರುತ್ತದೆ. ಕಾಲಕ್ಕೂ ನಿಯಾಮಕನಾದ ಈ ಪರಮಾತ್ಮನನ್ನು ಜ್ಯೋತಿ

ರ್ಮಂಡಲಕ್ಕೂ ಪ್ರಕಾಶವನ್ನು ಕೊಡತಕ್ಕ ಜ್ಯೋತಿಯೆಂದೂ, ಅಮೃತನೆಂದೂ ಆರಾಧಿಸುತ್ತಾರೆ. ಇದೇ ವಿಷಯವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ವರ್ಣಿಸುತ್ತ ಈರೀತಿ ಪ್ರಶಂಸಿಸಿದೆ.

**ಆದಿಃ ಸ ಸಂಯೋಗನಿಮಿತ್ತಹೇತುಃ ಪರಸ್ತ್ರಿಕಾಲಾದಕಲೋಽಪಿ ದೃಷ್ಟಃ ।**
**ತಂ ವಿಶ್ವರೂಪಂ ಭವಭೂತ ಮೀಡ್ಯಂ ದೇವಂ ಸ್ವಚಿತ್ತಸ್ಥಮುಪಾಸ್ಯ ಪೂರ್ವಂ ॥**

(ಶ್ವೇ. ಉ. ೬-೫)

ವೈಯಕ್ತಿಕವಾದ ಸಕಲ ವಸ್ತುಗಳಿಗೂ ಸಂಯೋಗಸಂಬಂಧವನ್ನು ಕಲ್ಪಿಸುವ ಒಂದು ನಿಮಿತ್ತನಾದ ಈ ಪರಬ್ರಹ್ಮನು ಕಾಲಾತೀತನು. ವರ್ತಮಾನ, ಭೂತ ಮತ್ತು ಭವಿಷ್ಯತ್ತು ಈ ವಿಭಾಗಗಳಿಲ್ಲದವನು. ವಿಭಾಗರಹಿತನು. ಸಕಲ ವಿಭಾಗಗಳಿಗೂ ಐಕ್ಯವನ್ನು ತೋರಿಸುವ ವಿಶ್ವರೂಪನು, ಪುರಾತನನು. ಹೀಗೆ ವಿಭಕ್ತವಾದ ವಸ್ತುಗಳಲ್ಲಿ ಅವಿಭಕ್ತನಾಗಿರುವುದರಿಂದ ಇವನು ವಿಭಕ್ತಸ್ಥಿತಿಯಲ್ಲಿ ಕಾಲಾಧೀನನು. ಅವಿಭಕ್ತಸ್ಥಿತಿಯಲ್ಲಿ ಕಾಲಾತೀತನು. ಈ ಎರಡು ವಿಧವಾದ ಸ್ವರೂಪವು ಪರಬ್ರಹ್ಮನ ದ್ವೈಧೀಭಾವವನ್ನು ತೋರಿಸುತ್ತದೆ. ಇದನ್ನೇ ಮೈತ್ರ್ಯುಪನಿಷತ್ತಿನಲ್ಲಿ ಪ್ರಶಂಸಿಸಿದೆ.

ಕಾಲ ಮತ್ತು ಅಕಾಲ ಎಂದು ಬ್ರಹ್ಮನ ಸ್ವರೂಪಗಳೆರಡು. ಸೂರ್ಯನಿಗಿಂತಲೂ ಪೂರ್ವಭಾವಿಯಾದ ಬ್ರಹ್ಮನು ಅಕಾಲಾತ್ಮಕನು. ಸೂರ್ಯನ ಆವಿರ್ಭಾವದೊಂದಿಗೆ ಪ್ರಕಾಶಿತನಾಗುವವನು ಕಾಲಾತ್ಮಕನು. ಈ ಸ್ವರೂಪವು ವಿಭಾಗಾತ್ಮಕವಾದುದು.

ಹೀಗೆ ಸಕಲ ಜಗತ್ತಿಗೂ ನಿಯಾಮಕವಾದ ಕಾಲಕ್ಕೂ ಅತೀತನಾಗಿ ಅದಕ್ಕೂ ನಿಯಾಮಕನಾಗಿರುವ ಈಶ್ವರನು **ಅಮೃತತ್ವಸ್ಯ ಈಶಾನಃ** ಎಂದು ಪ್ರಶಂಸಿತನಾಗಿರುತ್ತಾನೆ. **ಅಮೃತತ್ವಸ್ಯ** ಎಂಬ ಪದಕ್ಕೆ ಸಾಯಣರು **ದೇವತ್ವಸ್ಯ** ಎಂದರ್ಥ ಮಾಡಿದ್ದಾರೆ. ದೇವತೆಗಳೆಲ್ಲರೂ ಅಮೃತರಾದುದರಿಂದ ಆ ದೇವತೆಗಳಿಗೆ ಒಡೆಯ ಎಂದು ತಾತ್ಪರ್ಯವಾಗಬಹುದು ಅಥವಾ ಅನಾದ್ಯನಂತನಾದುದರಿಂದ ಜನನ ಮರಣಾತೀತನು ಆದುದರಿಂದಲೇ **ಅಮೃತತ್ವಸ್ಯ ಈಶಾನಃ** ಎಂಬ ವರ್ಣನೆಯಿರುತ್ತದೆ. ಎರಡು ವಿವರಣೆಯ ತಾತ್ಪರ್ಯವೂ ಕೊನೆಯಲ್ಲಿ ಒಂದೇ ಆಗುತ್ತದೆ. ಆದುದರಿಂದಲೇ ಈಶ್ವರನು **ಅಕ್ಷರ ಶಬ್ದವಾಚ್ಯನು** (ನಾಶರಹಿತನು ಎಂದರ್ಥ). ಅಕ್ಷರಸಂಜ್ಞಕನಾದ ಈ ಈಶ್ವರನು ಸಕಲ ಜಗತ್ತಿಗೂ ಪ್ರಭುವಾಗಿರುತ್ತಾನೆ. ಇದನ್ನೇ ಯಾಜ್ಞವಲ್ಕ್ಯರು ಗಾರ್ಗಿಗೆ ವಿವರಿಸುತ್ತ **ಅಕ್ಷರನ** ಪ್ರಭುತ್ವವನ್ನು ಈ ರೀತಿ ವರ್ಣಿಸಿದ್ದಾರೆ.

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠನ್ತ್ಯೇತಸ್ಯ ವಾ ಅಕ್ಷರಸ್ಯಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ। ದದತೋ ಮನುಷ್ಯಾಃ ಪ್ರಶಂಸಂತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ ॥**

(ಬೃ. ಉ. ೩-೮-೯)

ಎಲೈ ಗಾರ್ಗಿಯೇ, ನಾಶರಹಿತನಾದ ಈ ಅಕ್ಷರನ ಆಜ್ಞೆಯಿಂದಲೇ ಸೂರ್ಯ ಮತ್ತು ಚಂದ್ರ ಇವರು ತಮ್ಮ ನಿಯತವಾದ ಸ್ಥಾನದಲ್ಲಿ ಸ್ಥಾಪಿತರಾಗಿದ್ದಾರೆ. ಎಲೈ ಗಾರ್ಗಿಯೇ, ಈ ಅಕ್ಷರಸಂಜ್ಞಕನಾದ ಈಶ್ವರನ ಆಜ್ಞೆಯಿಂದಲೇ ಪೃಥ್ವಿ ಮತ್ತು ದ್ಯುಲೋಕಗಳು ಬೇರೆಬೇರೆಯಾಗಿ ಸ್ಥಾಪಿತವಾಗಿವೆ. ಎಲೈ ಗಾರ್ಗಿಯೇ, ಈ ಅಕ್ಷರನ ನಿಯಮನದಿಂದಲೇ ನಿಮಿಷಗಳೂ, ಮುಹೂರ್ತಗಳೂ, ಅಹೋರಾತ್ರಗಳೂ, ಅರ್ಧಮಾಸಗಳೂ, ಮಾಸಗಳೂ, ಋತುಗಳೂ ಮತ್ತು ಸಂವತ್ಸರಗಳೂ ತಮ್ಮ ತಮ್ಮ ಸ್ವರೂಪಗಳಿಗನುಗುಣವಾದ ಇರುವಿಕೆಯನ್ನು ಹೊಂದಿರುತ್ತವೆ. ಎಲೆ ಗಾರ್ಗಿಯೇ, ಈ ಅಕ್ಷರದ ನಿಯಮನದಿಂದಲೇ ಪರ್ವತಗಳಿಂದ ಪ್ರವಹಿಸುವ ನದಿಗಳೂ ತಮ್ಮ ತಮ್ಮ ದಿಕ್ಕುಗಳಿಗನುಸಾರವಾಗಿ ಪ್ರವಹಿಸಿ ಸಮುದ್ರಗಳನ್ನು ಸೇರುತ್ತವೆ. ಈ ಅಕ್ಷರರೂಪನಾದ ಪರಮಪುರುಷನ ನಿಯಮನದಿಂದಲೇ, ಮಾನವರು ಉದಾರವಾಗಿ ದಾನಮಾಡುವವರನ್ನು ಪ್ರಶಂಸಿಸುತ್ತಾರೆ. ದೇವತೆಗಳು ಯಜ್ಞಕರ್ತನನ್ನಿಚ್ಛಿಸುತ್ತಾರೆ. ಪಿತೃಗಳು ತರ್ಪಣಾದಿಗಳನ್ನು ಮಾಡಿ ಪಿತೃದೇವತೆಗಳಿಗೆ ತೃಪ್ತಿಯನ್ನುಂಟುಮಾಡಲು ಆಸಕ್ತರಾಗಿದ್ದಾರೆ.

**ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟೃಶ್ರುತಂ ಶ್ರೋತ್ರಮತಂ ಮಂತ್ರವಿಜ್ಞಾತಂ ವಿಜ್ಞಾತೃ ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃನಾನ್ಯದತೋಽಸ್ತಿ ಮಂತೃ ನಾನ್ಯದ-ತೋಽಸ್ತಿ ವಿಜ್ಞಾತ್ರೇತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ |**

(ಬೃ. ಉ. ೩-೮-೧೧)

ಎಲೈ ಗಾರ್ಗಿಯೇ, ಈ ಅಕ್ಷರನನ್ನು ಯಾರೂ ನೋಡಲಾಗುವುದಿಲ್ಲ. ಅವನು ಸಕಲವನ್ನೂ ನೋಡಬಲ್ಲವನು. ಇವನನ್ನು ಯಾರೂ ಕಿವಿಯಿಂದ ಕೇಳಲಾಗುವುದಿಲ್ಲ. ಇವನು ಸಕಲವನ್ನೂ ಕೇಳಬಲ್ಲವನು. ಇವನು ಯಾರ ಚಿಂತನೆಗೂ ಸಿಲುಕದವನು ಆದರೆ ಜಗತ್ತೆಲ್ಲ ಇವನ ಚಿಂತನೆಗೆ ವಿಷಯವಾಗಿದೆ. ಯಾರೂ ಇವನನ್ನು ಅರಿಯಲಾರರು. ಜಗತ್ತೆಲ್ಲವೂ ಇವನ ಜ್ಞಾನಕ್ಕೆ ವಿಷಯವಾಗಿದೆ. ಇವನನ್ನು ಬಿಟ್ಟರೆ ಇಂತಹ ಶ್ರೋತೃವಾರೂ ಇಲ್ಲ. ಇವನಲ್ಲದೆ ಬೇರೆ ಇಂತಹ ಶ್ರೋತೃವಾಗಲಿ, ಮಂತೃವಾಗಲಿ ಅಥವಾ ವಿಜ್ಞಾತೃವಾಗಲಿ ಯಾರೂ ಖಂಡಿತ ಇಲ್ಲ. ಈ ಅಕ್ಷರರೂಪನಾದ ಪರಮಾತ್ಮನಲ್ಲಿ ಆಕಾಶವು ಹಾಸುಹೊಕ್ಕುಗಳಂತೆ ಸೇರಿಕೊಂಡಿದೆ ಎಂದು ಅಮೃತತ್ವಕ್ಕೆ ಈಶಾನ (ಪ್ರಭು) ನಾದ ಪುರುಷನ ಮಹಿಮೆಯು ಸ್ತುತವಾಗಿದೆ. ಅಲ್ಲದೇ;—

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ |**
**ಸರ್ವಸ್ಯ ಪ್ರಭುಮೀಶಾನಂ ಸರ್ವಸ್ಯ ಶರಣಂ ಸುಹೃತ್ ||**

(ಶ್ವೇ. ಉ. ೩-೧೭)

ಸಕಲ ಇಂದ್ರಿಯಗಳ ಗುಣಗಳೂ ಈ ಪರಮಪುರುಷನಲ್ಲಿರುವಂತೆ ಭಾಸವಾಗುತ್ತವೆ. ಆದರೆ, ಈ ಪರಮಾತ್ಮನು ಇಂದ್ರಿಯಗಳ ಗುಣಗಳಿಗಿಂತಲೂ ಅತೀತನು. ಸಕಲರಿಗೂ ಪ್ರಭುವು ಮತ್ತು ನಿಯಾಮಕನು. ಇವನನ್ನು ಬಿಟ್ಟರೆ ಬೇರೆ ಯಾರೂ ಇಂತಹ ಉತ್ತಮವಾದ ರಕ್ಷಕರಿರುವುದಿಲ್ಲ.

ಸೃಷ್ಟಿ, ಸ್ಥಿತಿ ಮತ್ತು ಪ್ರಳಯಗಳಿಗೆಲ್ಲ ಈಶ್ವರನೊಬ್ಬನೇ ಕಾರಣನಾದುದರಿಂದ ಜನನ ಮತ್ತು ಮರಣಗಳೆಲ್ಲವೂ ಇವನ ಅಧೀನ **ಜಾತಸ್ಯ ಮರಣಂ ಧ್ರುವಂ** ಎಂಬ ಮಾತು ಇವನ ಸೃಷ್ಟಿಸಂಕಲ್ಪದಲ್ಲಿಯೇ ಅಡಗಿರುತ್ತದೆ ಉತ್ಪನ್ನವಾದ ಜಗತ್ತಿನಲ್ಲಿ ದೇವಮಾನವಾದಿಗಳಾರೂ ಸಾವನ್ನು ಎದುರಿಸಲಾರರು. ಕಲ್ಪಾಂತದಲ್ಲಿ ಸಕಲ ದೇವತೆಗಳೂ ಮತ್ತು ಸಕಲ ಮಾನವರೂ, ಸಕಲ ಚರಾಚರವಸ್ತುಗಳೂ ತಮ್ಮ ಜಗದ್ವ್ಯವಹಾರವನ್ನು ಕೊನೆಗಾಣಿಸಿ ಇವನಲ್ಲಿ ಐಕ್ಯ

ರಾಗಲೇ ಬೇಕು. ಆದರೆ, ಈಶ್ವರನು ಮಾತ್ರ ಇತರ ವಸ್ತುವಿನಲ್ಲಿ ಐಕ್ಯವಾಗಬೇಕಾಗಿಲ್ಲ. ಇತರ ಆಶ್ರಯವು ಅವನಿಗಿಲ್ಲ. ಅವನು ಜಗತ್ತಿನ ಮರ್ತ್ಯತ್ವಕ್ಕೆ ಕಾರಣನು. ತಾನು ಅಮರ್ತ್ಯನು. ಅಮೃತತ್ವಕ್ಕೆ (ಸಾವಿಲ್ಲದಿರುವುದಕ್ಕೆ) ಅವನೇ ಪ್ರಭುವು. ಈ ಪ್ರಭುವನ್ನು **ಸೇತುವೆ** ಗೆ ಹೋಲಿಸಿದೆ. ಸೇತುವೆಯು ಎರಡು ವಿಭಕ್ತವಾದ ಪ್ರದೇಶಗಳನ್ನು ಒಟ್ಟುಗೂಡಿಸುತ್ತದೆ. ಹಾಗೆಯೇ, ಎರಡು ಪ್ರದೇಶಗಳಿಗೂ ಭೇದವನ್ನು ಕಲ್ಪಿಸುತ್ತದೆ. ಅದರಂತೆ ಈಶ್ವರನು, ತನಗೂ ಜಗತ್ತಿಗೂ ಸಂಬಂಧವನ್ನು ಕಲ್ಪಿಸುವುದರಿಂದ ಈ ಮಾರ್ಗಕ್ಕೆ ಅನುಕೂಲನಾದ ಸೇತುವೆಯೆಂದು ಅರ್ಥ. ಹಾಗೆಯೇ ತನಗೂ ಜಗತ್ತಿಗೂ ಭೇದವನ್ನು ತೋರಿಸುವ ಸೇತುವೆಯೂ ಆಗಿದ್ದಾನೆ. ಆದುದರಿಂದ ಮರ್ತ್ಯವಾದ ಜಗತ್ತಿಗಿಂತಲೂ ಭಿನ್ನನಾದ ಅಮರ್ತ್ಯ ಮತ್ತು ಮರ್ತ್ಯವಾದ ಜಗತ್ತಿಗೆ ಒಡೆಯನು ಹೇಗೆಂದರೆ—

> **ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನೇಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ಸಮೇತಂ............** (ಬೃ. ಉ. ೪-೪-೨೨)

ಈ ಪರಮಾತ್ಮನು ಮಹಾತ್ಮನು, ಅಜನು, (ಜನ್ಮರಹಿತನು) ವಿಜ್ಞಾನಮಯನು. ಹೃದಯಾಕಾಶದಲ್ಲಿ ಸುಸ್ಥಿತನಾಗಿ ಸಕಲಕ್ಕೂ ಯಜಮಾನನೂ, ಸರ್ವಕ್ಕೂ ಅಧಿಪತಿಯೂ ಆಗಿರುತ್ತಾನೆ. ಸಕಲಕ್ಕೂ ನಿಯಾಮಕನಾಗಿರುತ್ತಾನೆ. ಇತರ ಜೀವರುಗಳಂತೆ ಇವನಿಗೆ ಕರ್ಮಫಲವಿಲ್ಲ. ಸಾಧುವಾದ ಕಾರ್ಯಕ್ಕೆ ಸತ್ಫಲ, ಅಸಾಧುವಾದ ಕಾರ್ಯಕ್ಕೆ ಅಸತ್ಫಲ ಎಂಬ ವ್ಯತ್ಯಾಸವಿರುವುದಿಲ್ಲ. ಸಕಲ ಕರ್ಮ ಮತ್ತು ಕರ್ಮಫಲಗಳಿಗೂ ಇವನೇ ಸರ್ವೇಶ್ವರನು. ಸಕಲ ಲೋಕಗಳನ್ನೂ ಬೇರೆಬೇರೆಯಾಗಿಡಲು ಸಾಧಕವಾಗುವಂತೆ ಇವನು ಒಂದು ವಿಸ್ತೃತವಾದ ಸೇತುವಿನಂತೆ ಇದ್ದಾನೆ. ಇದೇ ವಿಷಯವು ಛಾಂದೋಗ್ಯೋಪನಿಷತ್ತಿನಲ್ಲಿ ಈ ರೀತಿ ವರ್ಣಿತವಾಗಿದೆ.

> **ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ನೈತಂ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋಽತೋ ನಿವರ್ತಂತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ ||** (ಛಾ. ಉ. ೮-೪-೧)

ಈ ಲೋಕಗಳು ಒಂದಕ್ಕೊಂದಕ್ಕೆ ಘರ್ಷಿತವಾಗದಿರುವಂತೆಯೂ, ಸುರಕ್ಷಿತವಾಗಿರುವಂತೆಯೂ ಮಾಡಲು ಈ ಮಹಾಸೇತುವೆಯು ಸಾಧಕವಾಗಿರುತ್ತದೆ. ಈ ಮಹಾಸೇತುವೆಯನ್ನು ಅಹೋರಾತ್ರಗಳು ದಾಟಲಾರವು. ಜರೆಯಾಗಲೀ (ಮುಪ್ಪು), ಮೃತ್ಯುವಾಗಲೀ ದಾಟಲಾರವು. ಸುಕೃತವಾಗಲೀ ಅಥವಾ ದುಷ್ಕೃತವಾಗಲೀ ಇದನ್ನು ದಾಟಲಾರವು. ಇದನ್ನು ಸಮೀಪಿಸಿದರೆ ಸಕಲ ಪಾಪಗಳೂ ನಾಶವಾಗುವುವು. ಇದೇ ಬ್ರಹ್ಮಲೋಕವು.

> **ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಂಧಃ ಸನ್ನನಂಧೋ ಭವತಿ, ವಿದ್ಧಃ ಸನ್ನವಿದ್ಧೋ ಭವತ್ಯುಪತಾಪೀ ಸನ್ನನುಪತಾಪೀ ಭವತಿ ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ |**
>
> (ಛಾ. ಉ. ೮-೪-೨)

ಈ ಮಹಾಸೇತುವೆಯನ್ನು ದಾಟಿದರೆ ಅಂಧನು ಕಣ್ಣನ್ನು ಹೊಂದುತ್ತಾನೆ. ವ್ಯಾಧಿಗ್ರಸ್ತನು ಆರೋಗ್ಯವನ್ನು ಹೊಂದುತ್ತಾನೆ. ಈ ಮಹಾಸೇತುವೆಯನ್ನು ದಾಟುವುದರಿಂದ ರಾತ್ರಿಯೂ ಹಗಲಿನಂತೆ ಪ್ರಕಾಶಗೊಳ್ಳುತ್ತದೆ. ಈ ಬ್ರಹ್ಮಲೋಕವು ಸ್ವಯಂಪ್ರಕಾಶಿತವೂ ಪರಪ್ರಕಾಶಕವೂ ಆಗಿರುತ್ತದೆ. ಇದೇ ಅಮೃತತ್ವರೂಪವಾದ ಸೇತುವೆ. ಇದರ ಸ್ವರೂಪವು ಅತ್ಯತಿಶಯವಾದುದು. ಇತರ ಲೌಕಿಕವಾದ ಸೇತುವೆಗಳಿಗಿಂತ ಭಿನ್ನವಾದುದು. ಹೇಗೆಂದರೆ—

**ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ ।**
**ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಲಂ ॥**

(ಶ್ವೇ. ಉ. ೬-೧೯)

ಇದು ಅವಿಭಕ್ತವಾದುದು (ಭಾಗರಹಿತವು). ಕ್ರಿಯಾರಹಿತವಾದುದು, ಶಾಂತಸ್ವರೂಪವುಳ್ಳದ್ದು, ದೋಷರಹಿತವಾದುದು ಮತ್ತು ನಿರ್ಮಲವಾದುದು. ಅಮೃತತ್ವಕ್ಕೆ ಇದು ಅತ್ಯುತ್ತಮವಾದ ಸೇತುವೆಯಾಗಿದೆ. ಕೆಂಡದರೂಪದಲ್ಲಿ ಪರಿಣತವಾದ ಸೌದೆಯು ಪ್ರಕಾಶವನ್ನು ಹೊಂದುವಂತೆ ಇದು ಶುದ್ಧವೂ ಪ್ರಕಾಶಿತವೂ ಆಗಿರುತ್ತದೆ. ಹೀಗಿರುವ ಈ ವರ್ಣನೆಗಳಲ್ಲಿ ಆತ್ಮರೂಪವಾದ ಈ ಸೇತುವೆಯು ವಿಭಕ್ತವಾಗಿರುವ ಲೋಕಗಳಿಗೆ ಸಂಬಂಧವನ್ನು ಕಲ್ಪಿಸುತ್ತದೆ ಎಂಬರ್ಥದಲ್ಲಿ ವರ್ಣಿತವಾಗಿರುತ್ತದೆ. ಮೇಲೆ ಬೃಹದಾರಣ್ಯಕಾದಿಗಳಲ್ಲಿ ಸಕಲ ಲೋಕಗಳೂ ಬೇರೆ ಬೇರೆಯಾಗಿ ಅವುಗಳ ನಿಯತವಾದ ಸ್ಥಾನಗಳಲ್ಲಿ ಭದ್ರವಾಗಿರಲು ಈ ಸೇತುವೆಯು ಸಾಧಕವಾಗಿರುತ್ತದೆ ಎಂದು ತಿಳಿಸಿರುತ್ತದೆ. ಪ್ರಕೃತದಲ್ಲಿ ಉದಾಹರಿಸಿರುವ ಶ್ವೇತಾಶ್ವತರೋಪನಿಷತ್ತಿನಲ್ಲಿ ಬೇರೆ ಬೇರೆಯಾಗಿರುವ ತತ್ತ್ವಗಳಿಗೆ ಐಕ್ಯವನ್ನು ತೋರಿಸುವ ಸೇತುವೆಯೆಂದು ವರ್ಣಿತವಾಗಿದೆ. ಇದೇ ಅರ್ಥದಲ್ಲಿಯೇ ಮುಂಡಕೋಪನಿಷತ್ತಿನಲ್ಲಿಯೂ ಈ ರೀತಿ ತಿಳಿಸಿದೆ—ಈ ವರ್ಣನವು ಪುರುಷಸೂಕ್ತದಲ್ಲಿ ಪರಮಪುರುಷನನ್ನು ವರ್ಣಿಸುವ ರೀತಿಯಲ್ಲಿದೆ.

**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।**
**ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥**

(ಮು. ಉ. ೨.೨-೫)

ಯಾವ ಪರಮಾತ್ಮನಲ್ಲಿ ದ್ಯಾವಾಪೃಥಿವಿಗಳೂ, ಅಂತರಿಕ್ಷವೂ ಹಾಸುಹೊಕ್ಕುಗಳಂತೆ ಸೇರಿಕೊಂಡಿವೆಯೋ, ಸಕಲ ಪ್ರಾಣಗಳೊಂದಿಗೂ ಕೂಡಿದ ಮನಸ್ಸು ಸುಸ್ಥಿತವಾಗಿದೆಯೋ ಅವನೇ ಸರ್ವೇಶ್ವರನು. ಇವನನ್ನು ಉಪಾಸಿಸುವ ಮಂತ್ರಗಳನ್ನು ಮಾತ್ರ ಪಠಿಸು. ಉಳಿದ ವಾಗ್ವ್ಯವಹಾರಗಳನ್ನು ಬಿಡು. ಈ ಪರಮಾತ್ಮನೇ ಅಮೃತತ್ವಕ್ಕೆ ಸೇತುವೆಯಂತಿದ್ದಾನೆ.

ಈರೀತಿಯಲ್ಲಿ ವರ್ಣಿತನಾದ ಪರಮಪುರುಷನಿಗೆ ಎರಡು ವಿಧವಾದ ಕಾರ್ಯವು ಸೂಚಿತವಾಗಿದೆ. ಮೊದಲನೆಯದಾಗಿ, ಜಗದ್ರಕ್ಷಕತ್ವ ಮತ್ತು ಎರಡನೆಯದಾಗಿ ಲೋಕಗಳ ನಿಯಾಮಕತ್ವ. **ಅಮೃತತ್ವಸ್ಯ ಈಶಾನಃ** ಎಂಬುದರಿಂದ ಈ ಎರಡು ಅಂಶಗಳೂ ತಿಳಿಯುತ್ತವೆ ಜಗದ್ರಕ್ಷಕತ್ವವು ಹೇಗೆ ಎಂಬುದನ್ನು ಹಿಂದೆ ಸೂಚಿಸಿದೆ. ಮತ್ತು ಮುಂದೆಯೂ ಸಂದರ್ಭಾನುಸಾರವಾಗಿ ವಿವರಿಸಲಾಗುತ್ತದೆ. ಪ್ರಕೃತದಲ್ಲಿ ಈಶಾನಶಬ್ದದಿಂದ ಸೂಚಿತವಾಗುವ ಲೋಕನಿಯಾಮಕತ್ವವು ಹೇಗೆ ಎಂಬುದನ್ನು ಪರಿಶೀಲಿಸಲಾಗುತ್ತವೆ. ಈಶ್ವರನು ಜಗನ್ನಿಯಾಮಕನೆಂದು ಹೇಳುವ ವಾಕ್ಯಗಳೆಲ್ಲವೂ ಅವನು ಸರ್ವಾಂತರ್ಯಾಮಿಯೆಂದೂ ಪ್ರಶಂಸಿಸುತ್ತವೆ.

ಯಾಜ್ಞವಲ್ಕ್ಯಾಂತರ್ಯಾಮಿಣಂ ಬ್ರೂಹಿ (ಬೃ. ಉ. ೩-೭-೨) ಎಲೈ ಯಾಜ್ಞವಲ್ಕ್ಯನೇ, ಈ ಅಂತರ್ಯಾಮಿಯ ಸ್ವರೂಪವನ್ನು ವಿವರಿಸು ಎಂದು ಉದ್ದಾಲಕ ಆರುಣಿಯು ಯಾಜ್ಞವಲ್ಕ್ಯನನ್ನು ಪ್ರಾರ್ಥಿಸಿದಾಗ ಯಾಜ್ಞವಲ್ಕ್ಯನು ಅಂತರ್ಯಾಮಿಯಾದ ಪರಮೇಶ್ವರನ ಸ್ವರೂಪವನ್ನು ಈರೀತಿ ವರ್ಣಿಸಿದ್ದಾನೆ. ಈ ವರ್ಣನವು ಪ್ರಕೃತವಾದ ಋಕ್ಕಿನಲ್ಲಿ ಪ್ರಶಂಸಿತವಾಗಿರುವಂತೆ ಅವನ ಅಮೃತತ್ವವನ್ನೂ ತಿಳಿಸುತ್ತದೆ.

**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ ॥**

(ಬೃ. ಉ. ೩-೭-೩)

ಸರ್ವಾಂತರ್ಯಾಮಿಯಾದ ಈ ಪರಮಾತ್ಮನು ಪೃಥ್ವಿಯಲ್ಲಿ ಸ್ಥಾಪಿತನಾಗಿ, ಪೃಥ್ವಿಯನ್ನೇ ತನ್ನ ಶರೀರವನ್ನಾಗಿ ಮಾಡಿಕೊಂಡಿದ್ದಾನೆ. ಆದರೂ ಪೃಥ್ವಿಗೆ ಇವನ ಪೂರ್ಣವಾದ ಅರಿವಿಲ್ಲ. ಪೃಥ್ವಿಯಲ್ಲಿ ವ್ಯಾಪಿಸಿದ್ದರೂ, ಇವನು ಪೃಥ್ವಿಗಿಂತಲೂ ಅಧಿಕನು. ಪೃಥ್ವಿಯ ಅಂತರ್ಯಾಮಿಯಾಗಿಯೇ ಇದ್ದು ಪೃಥ್ವಿಯ ವ್ಯವಹಾರಗಳಿಗೆಲ್ಲ ನಿಯಾಮಕನಾಗಿರುತ್ತಾನೆ. ಇವನು ಅಮೃತನು.

ಹೀಗೆಯೇ, ಜಲ, ಅಗ್ನಿ, ಅಂತರಿಕ್ಷ, ವಾಯು, ದ್ಯುಲೋಕ, ಆದಿತ್ಯ, ದಿಕ್, ಚಂದ್ರ, ನಕ್ಷತ್ರ, ಆಕಾಶ, ತಮಸ್, ತೇಜಸ್ ಇತ್ಯಾದಿ ತತ್ತ್ವಗಳಲ್ಲೆಲ್ಲ ಅಂತರ್ಯಾಮಿಯಾಗಿ ಅವುಗಳನ್ನೇ ತನ್ನ ದೇಹಗಳನ್ನಾಗಿ ಮಾಡಿಕೊಂಡಿರುತ್ತಾನೆ. ಅವುಗಳಿಗೆಲ್ಲ ನಿಯಾಮಕನಾಗಿರುತ್ತಾನೆ. ಅವುಗಳಲ್ಲಿ ಯಾವುವೂ ಇವನನ್ನು ಪೂರ್ಣವಾಗಿ ಅರಿಯಲಾರವು. ಇದರಂತೆಯೇ, ಆದಿಭೌತಿಕ ಮತ್ತು ಆಧ್ಯಾತ್ಮಿಕತತ್ತ್ವವನ್ನು ವಿವರಿಸುತ್ತ—

**ಯಃ ಸರ್ವೇಷು ಭೂತೇಷು ತಿಷ್ಠನ್ತ್ಸರ್ವೇಭ್ಯೋ ಭೂತೇಭ್ಯೋ ಅಂತರೋ ಯಂ ಸರ್ವಾಣಿ ಭೂತಾನಿ ನ ವಿದುರ್ಯಸ್ಯ ಸರ್ವಾಣಿ ಭೂತಾನಿ ಶರೀರಂ ಯಃ ಸರ್ವಾಣಿ ಭೂತಾನ್ಯಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತ ಇತ್ಯಧಿಭೂತಮಥಾಧ್ಯಾತ್ಮಂ ॥**

(ಛಾ. ಉ. ೩-೭-೧೫)

ಈ ಪರಮಾತ್ಮನು ಸಕಲ ಭೂತಗಳಲ್ಲಿಯೂ ಸ್ಥಾಪಿತನಾಗಿದ್ದಾನೆ. ಸಕಲ ಭೂತಗಳಿಗಿಂತಲೂ ಅಧಿಕನು. ಇವನನ್ನು ಇವಾವುವೂ ಪೂರ್ಣವಾಗಿ ಅರಿಯವು. ಆದರೆ ಅವೆಲ್ಲ ಇವನ ಶರೀರ. ಅವುಗಳಲ್ಲೆಲ್ಲ ಅಂತರ್ಯಾಮಿಯಾಗಿದ್ದುಕೊಂಡು ಅವುಗಳಿಗೆಲ್ಲ ನಿಯಾಮಕನಾಗಿರುತ್ತಾನೆ. ಇವನು ಅಮೃತನು. ಇದು ಆಧಿಭೌತಿಕತತ್ತ್ವ. ಇದರಂತೆಯೇ ಆಧ್ಯಾತ್ಮಿಕತತ್ತ್ವದ ವಿವರಣೆಯೂ ಇರುತ್ತದೆ. ಮೇಲೆ ವಿವರಿಸಿದಂತೆಯೂ ಈ ಪ್ರಕರಣವನ್ನು ವಿವರಿಸುತ್ತ,

**ಯಃ ಪ್ರಾಣೇ ತಿಷ್ಠನ್ .... .... .... .... ಏಷ ತ ಆತ್ಮಾಂತರ್ಯಾಮ್ಯಮೃತೋಽತೋಽನ್ಯದಾರ್ತಂ ತತೋ ಹೋದ್ದಾಲಕ ಅರುಣಿರುಪರರಾಮ ॥**

(ಬೃ. ಉ. ೭-೭-೧೬ ರಿಂದ ೨೩)

ಪ್ರಾಣ, ವಾಕ್, ಚಕ್ಷುಸ್, ಶ್ರೋತ್ರ, ಮನಸ್, ತ್ವಕ್, ವಿಜ್ಞಾನ, ರೇತಸ್, ಇತ್ಯಾದಿಯಾದ ಆಧ್ಯಾತ್ಮಿಕತತ್ವಗಳಲ್ಲೆಲ್ಲ ಅಂತರ್ಯಾಮಿಯಾಗಿರುವ ಈ ಪುರುಷನಿಗೆ ಅವೆಲ್ಲವೂ ಶರೀರಗಳಾಗಿದ್ದರೂ ಅವುಗಳಲ್ಲಿ ಯಾವುವೂ ಇವನನ್ನು ಪೂರ್ಣ

ವಾಗಿ ಅರಿಯವು. ಇವನು ಅವುಗಳಿಗೆಲ್ಲ ನಿಯಮಕನಾಗಿರುತ್ತಾನೆ. ಇವನು ಅಮೃತನು ಎಂದು ಪರಮೇಶ್ವರನ ಅಮೃತತ್ವವನ್ನು ವಿವರಿಸಿರುತ್ತದೆ. ಈ ಮಾಹಾತ್ಮ್ಯವನ್ನೇ ಮಾಂಡೂಕ್ಯದಲ್ಲಿ ಪ್ರಶಂಸಿಸುತ್ತ—

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ॥**

(ಮಾ. ಉ. ೬)

ಈ ಸರ್ವೇಶ್ವರನು ಸರ್ವಜ್ಞನು, ಅಂತರ್ಯಾಮಿಯಾದ ನಿಯಾಮಕನು, ಸಕಲ ಜಗತ್ತಿಗೂ ಮೂಲನು, ಪಾಲಕನು ಮತ್ತು ಸರ್ವರಕ್ಷಕನು ಎಂದು ವರ್ಣಿಸಿದೆ. ತೇಜೋಮಯನೂ, ಅಮೃತಮಯನೂ ಆದ ಯಾವ ಪುರುಷನು ಸಕಲ ಜಗತ್ತಿಗೂ ಮಧುವೆಂದು ವರ್ಣಿತನಾಗಿದ್ದಾನೋ (ಬೃ. ಉ. ೨-೫) ಅವನೇ ಇಲ್ಲಿ ಅಂತರ್ಯಾಮಿಯೆಂದು ಸ್ತುತನಾಗಿದ್ದಾನೆ. ಈ ಪರಮಪುರುಷನನ್ನೇ **ಅಮೃತತ್ವಸ್ಯ ಈಶಾನಃ** ಎಂದು ಪ್ರಕೃತವಾದ ಮಂತ್ರದಲ್ಲಿ ಸ್ತುತಿಸಿದೆ.

**ಯದನ್ನೇನಾತಿರೋಹತಿ :—**

**ಯೆತ್ ಯಸ್ಮಾತ್ಕಾರಣಾದನ್ನೇನ ಪ್ರಾಣಿನಾಮನ್ನೇನ ಭೋಗ್ಯೇನ ನಿಮಿತ್ತೇನ ಅತಿರೋಹತಿ ಸ್ವಕೀಯಾಂ ಕಾರಣಾವಸ್ಥಾಮತಿಕ್ರಮ್ಯ ಪರಿದೃಶ್ಯಮಾನಾಂ ಜಗದವಸ್ಥಾಂ ಪ್ರಾಪ್ನೋತಿ ॥**

ಯಾವ ಕಾರಣದಿಂದ ಎಂದರೆ ಯಾವ ಮಾಹಾತ್ಮ್ಯದಿಂದ ಈಶ್ವರನು ಸಕಲ ಜಗತ್ತಿಗೂ ಪ್ರಭುವಾಗಿರುವನೋ ಆದುದರಿಂದಲೇ ತನ್ನಿಂದಲೇ ಸೃಷ್ಟವಾದ ಜಗತ್ತಿನ ರಕ್ಷಣೆಗಾಗಿ ಜಗತ್ತಿಗೆ ಭೋಗ್ಯವಾದ ಅನ್ನದ ನಿಮಿತ್ತವಾಗಿ ತನ್ನ ಕಾರಣಾವಸ್ಥೆಯನ್ನು ಮೀರಿ ಕಾರ್ಯಾವಸ್ಥೆಯಲ್ಲಿ ಪರಿಣಾಮವನ್ನು ಹೊಂದಿ ಜಗದ್ರೂಪದಲ್ಲಿ ಪ್ರಕಾಶಿತನಾಗುತ್ತಾನೆ ಎಂದು ಸಾಯಣರು ವಿವರಿಸಿದ್ದಾರೆ. ಕಾರಣಾವಸ್ಥೆಯು ಇಂದ್ರಿಯಕ್ಕೆ ಗೋಚರವಾಗತಕ್ಕದ್ದಲ್ಲ. ಕಾರ್ಯಾವಸ್ಥೆಯು ಪರಿದೃಶ್ಯಮಾನವಾದುದು ಎಂದರೆ ಇಂದ್ರಿಯಗೋಚರವಾಗತಕ್ಕದ್ದು. ಇಂದ್ರಿಯಪ್ರತ್ಯಕ್ಷಕ್ಕೆ ಗೋಚರವಾಗತಕ್ಕದ್ದೂ ಮತ್ತು ವ್ಯಾವಹಾರಿಕವಾದುದೂ ಆದ ಸ್ಥೂಲಪ್ರಪಂಚದ ರೂಪದಿಂದ ಈಶ್ವರನು ಅನ್ನನಿಮಿತ್ತವಾಗಿ ವಿಸ್ತೃತನಾಗಿ ವ್ಯಾಪಿಸುತ್ತಾನೆಂದರ್ಥ. ಪ್ರಾಣಿಗಳ ಕರ್ಮಫಲಭೋಗಕ್ಕಾಗಿ ಜಗದವಸ್ಥೆಯು ಈಶ್ವರನಿಂದ ಸ್ವೀಕೃತವಾಗಿದೆ, ಈ ಅವಸ್ಥೆಯು ಕೇವಲ ನಿಮಿತ್ತ ಮಾತ್ರವೇ ವಿನಾ ವಸ್ತುತಃ ಕಾರಣಾತ್ಮನಾದ ಈಶ್ವರನು ಮಾತ್ರ ಸತ್ಯನು. ಎಂದು ಸಾಯಣರು ವಿವರಿಸಿದ್ದಾರೆ. ಇದಲ್ಲದೆ ಮಂಗಲಭಾಷ್ಯದಲ್ಲಿ ಈ ಪ್ರಕರಣಕ್ಕೆ ಎರಡು ವಿಧವಾದ ಅರ್ಥವು ಹೇಳಲ್ಪಟ್ಟಿದೆ. ಮೊದಲನೆಯದಾಗಿ—

**೧. ಯದಮೃತತ್ವಂ ತತ್ ಅನ್ನೇನ ಕರ್ಮಫಲಾಭಿಧೇನ ಅಸತಾ ಐಹಿಕಾಮುಷ್ಮಿಕಪ್ರಪಂಚೇನ ಅತಿರೋಹತಿ ನ ತಿರೋಧಾನಂ ಗಚ್ಛತಿ ।**

ಯಾವ ಅಮೃತತ್ವಕ್ಕೆ ಪರಮಪುರುಷನು ಪ್ರಭುವಾಗಿರುವನೋ, ಆ ಅಮೃತವೂ ಭೋಗ್ಯವಸ್ತುವಲ್ಲವೇ; ಅದು ಭೋಗ್ಯವಸ್ತುವಾದರೆ ಆಗ ಲೌಕಿಕವಾದ ವಿಕಾರವನ್ನು ಹೊಂದುವ ಅನ್ನಕ್ಕೆ ಸಮಾನವಾಗಿ, ಅದೂ ಸಹ ವಿಕಾರವನ್ನು ಹೊಂದುತ್ತದೆಯೇ ಎಂದರೆ, ಇಲ್ಲಿ ಅಮೃತತ್ವವು ಲೌಕಿಕವಾದ ಅನ್ನದಂತೆ ವಿಕಾರವನ್ನು ಹೊಂದುವುದಿಲ್ಲ. ಮತ್ತು ಅಸತ್ಯವಾದುದೂ, ಕರ್ಮಫಲಸಂಜ್ಞಕವಾದುದೂ ಐಹಿಕಾಮುಷ್ಮಿಕಪ್ರಪಂಚರೂಪವಾದುದೂ ಆದ

ಅನ್ನದಿಂದ ಅಮೃತತ್ವವು ಮುಚ್ಚಲ್ಪಡುವುದಿಲ್ಲ. ಆದರ ಭೋಗ್ಯತ್ವವೇ ಬೇರೆ, ಲೌಕಿಕಾನ್ನದ ಭೋಗ್ಯತ್ವವೇ ಬೇರೆ ಎಂದು ಎರಡಕ್ಕೂ ವ್ಯತ್ಯಾಸವನ್ನು ತೋರಿಸಿದೆ. ಎರಡನೆಯದಾಗಿ—

**೨. ಯದ್ವಾ ಅನ್ನೇ ಅನ್ನಶಬ್ದೋಪಲಕ್ಷಿತಪೃಥಿವ್ಯಾದಿಪಾಂಚಭೌತಿಕಪ್ರಪಂಚೇ ನಾತಿಶಯೇನ ರೋಹತಿ ನಾಭಿಮನ್ಯತೇ ಮಿಥ್ಯಾತ್ವಾತ್ ॥**

ಅನ್ನ ಶಬ್ದದಿಂದ ಉಪಲಕ್ಷಿತವಾದ ಪೃಥಿವ್ಯಾದಿ (ಪೃಥಿವೀ, **ಅಪ್** ತೇಜಸ್, ವಾಯು, ಆಕಾಶ) ಪಾಂಚಭೌತಿಕ ಪ್ರಪಂಚದಲ್ಲಿ ಅಭಿಮಾನವನ್ನು ಹೊಂದಿಲ್ಲ. ಅದು ಅಸತ್ಯವೆಂಬ ಪರಿಜ್ಞಾನದಿಂದ ಅದರೊಡನೆ ತನ್ನ ತಾದಾತ್ಮ್ಯವನು ಹೊಂದಿಲ್ಲ ಎಂದೂ ಅರ್ಥವಾಗುತ್ತದೆ. ಇದಲ್ಲದೆ ಮೂರನೆಯದಾಗಿ (ಮಹೀಧರಭಾಷ್ಯ)

**೩. ಅಮೃತತ್ವಸ್ಯ ಈಶಾನಃ** ಎಂಬುದು ಹೇಗೋ ಹಾಗೆ ಮರಣಧರ್ಮವುಳ್ಳ ಭೂತಗಳಿಗೂ ಒಡೆಯನು ಎಂದೂ ಒಂದು ವಿಧವಾಗಿ ತಾತ್ಪರ್ಯವನ್ನು ಹೇಳಿದೆ

**ಅಮೃತತ್ವಸ್ಯ ಅಮರಣಧರ್ಮಸ್ಯ ಈಶಾನಃ ಮುಕ್ತೇರೀಶಃ । ಯೋಽಸೌ ನಾಸೌ ಮ್ರಿಯತ ಇತ್ಯರ್ಥಃ । ಕಿಂ ಚ ಯತ್ ಜೀವಜಾತಂ ಅನ್ನೇನ ಅತಿರೋಹತಿ ಉತ್ಪದ್ಯತೇ ತಸ್ಯ ಸರ್ವಸ್ಯ ಚೇಶಾನಃ ಬ್ರಹ್ಮಾದಿಸ್ತಂಬಪರ್ಯಂತೋ ಭೂತಗ್ರಾಮ ಉಕ್ತಃ ತಸ್ಯಾನ್ನೇನೈವ ಸ್ಥಿತೇಃ ॥**

(ಮಹೀಧರ ಭಾಷ್ಯ)

ಮರಣಧರ್ಮರಹಿತವಾದ ಅಮೃತತ್ವಕ್ಕೆ ಪ್ರಭುವಾಗಿರುವಂತೆಯೇ, ಅನ್ನಾದಿಗಳಿಂದ ಉತ್ಪನ್ನವೂ ಪೋಷಿತವೂ ಆಗುವ ಮತ್ತು ಮರಣಧರ್ಮವುಳ್ಳ ಸಕಲ ಭೂತಜಾತಗಳಿಗೂ ಪ್ರಭುವೆಂದೂ ತಾತ್ಪರ್ಯವಾಗುತ್ತದೆ. ಸೃಷ್ಟ್ಯನಂತರ ಉತ್ಪನ್ನವಾದ ಬ್ರಹ್ಮಾದಿಸ್ತಂಬ ಪರ್ಯಂತವಾಗಿ ಸಕಲ ಭೂತಗ್ರಾಮಗಳಿಗೂ ಈಶ್ವರನೇ ಪ್ರಭುವು ಎಂದು ಸ್ತುತವಾಗಿದೆ. ಈ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆಗೆ ಅವಕಾಶವಿರುತ್ತದೆ. ಬ್ರಹ್ಮನೇ ಅನ್ನರೂಪದಲ್ಲಿ ಪರಿಣಾಮವನ್ನು ಹೊಂದುತ್ತಾನೆಯೇ ಅಥವಾ ಅವನಿಗಿಂತಲೂ ಭಿನ್ನವಾದ ಬೇರೆ ಅನ್ನವನ್ನು ಉತ್ಪನ್ನಮಾಡುತ್ತಾನೆಯೇ ಎಂದರೆ, ಉತ್ಪನ್ನವಾದ ಸಕಲ ವಸ್ತುಗಳೂ ಬ್ರಹ್ಮನಿಗಿಂತ ಬೇರೆಯಲ್ಲವಾದುದರಿಂದ ಅನ್ನವೂ ಬ್ರಹ್ಮಾಂಶವೇ ಆಗಿರುತ್ತದೆಂದು ಹೇಳಬೇಕು. ಅವನೇ ಅನ್ನ, ಅವನೇ ಭೋಕ್ತಾ, ತಿನ್ನುವವನೂ ಅವನೇ, ತಿನ್ನುವ ವಿಷಯವೂ ಅವನೇ ಆದುದರಿಂದಲೇ **ಅದ್ಯತೇಽತ್ತಿ ಚ ಭೂತಾನಿ** ಅವನು ಭುಜಿಸುತ್ತಾನೆ ಮತ್ತು ಭಕ್ಷಿಸಲ್ಪಡುತ್ತಾನೆ ಎಂದು ವರ್ಣಿತನಾಗಿದ್ದಾನೆ. ಜಗತ್ತಿನಲ್ಲಿ ಉತ್ಪನ್ನವಾದ ಪ್ರಾಣಿಗಳ ಸ್ಥಿತಿಗಾಗಿ ಬ್ರಹ್ಮನಿಂದ ಉತ್ಪನ್ನವಾದ ಅನ್ನದ ಸ್ವರೂಪವೇನು ಮತ್ತು ಅದರ ಮಾಹಾತ್ಮ್ಯವೇನು ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗುತ್ತದೆ. ಬ್ರಹ್ಮನಿಗೂ ಅನ್ನಕ್ಕೂ ಇರುವ ಸಂಬಂಧವನ್ನು ಬೃಹದಾರಣ್ಯಕದಲ್ಲಿ ಈ ರೀತಿ ವರ್ಣಿಸಿದೆ.

**ಅನ್ನಂ ಬ್ರಹ್ಮೇತ್ಯೇಕ ಆಹುಸ್ತನ್ನ ತಥಾ ಪೂಯಂತಿ ವಾ ಅನ್ನಮೃತೇ ಪ್ರಾಣಾತ್ಪ್ರಾಣೋ ಬ್ರಹ್ಮೇತ್ಯೇಕ ಆಹುಸ್ತನ್ನ ತಥಾ ಶುಷ್ಯತಿ ವೈ ಪ್ರಾಣ ಋತೇಽನ್ನಾದೇತೇ ಹ ತ್ವೇವ ದೇವತೇ ಏಕಧಾಭೂಯಂ ಭೂತ್ವಾ ಪರಮತಾಂ ಗಚ್ಛತಸ್ತದ್ಧ ಸ್ಮಾಹಪ್ರಾತೃದಃ ಪಿತರಂ ॥**

ಬ್ರಹ್ಮನೇ ಅನ್ನವೆಂದು ಕೆಲವರ ಮತ. ಕೇವಲ ಹೀಗೆ ಮಾತ್ರ ಹೇಳುವುದು ಸರಿಯಲ್ಲ. ಪ್ರಾಣವಿಲ್ಲದೆ ಎಂದರೆ ಅದರ ಸಂಬಂಧವಿಲ್ಲದಿರುವ ಅನ್ನವು ಅಸಹ್ಯಕರವಾಗುತ್ತದೆ.

ಪ್ರಾಣವೇ ಬ್ರಹ್ಮನೆಂದು ಇನ್ನು ಕೆಲವರ ಮತ. ಕೇವಲ ಹೀಗೆ ಹೇಳುವುದೂ ಸರಿಯಲ್ಲ. ಅನ್ನವಿಲ್ಲದ ಪ್ರಾಣವು ಬಾಡಿಹೋಗುತ್ತದೆ. ಹೀಗೆ ಇವೆರಡೂ ಅನ್ಯೋನ್ಯಾಶ್ರಯವನ್ನು ಹೊಂದಿರುವುದರಿಂದ ಇವೆರಡಕ್ಕೂ ಪರಸ್ಪರ ಸಾಮರಸ್ಯವು ಸಂಭವಿಸಿದರೆ ಮಾತ್ರ ಎರಡೂ ಜಗತ್ತಿಗೆ ಶ್ರೇಯಸ್ಕರವಾಗುತ್ತವೆ. ಆದುದರಿಂದಲೇ ಪ್ರಾತೃದನು ತನ್ನ ತಂದೆಯನ್ನು ಕುರಿತು ಈ ರೀತಿ ತಿಳಿಸಿದ್ದಾನೆ.

**ಕಿಂ ಸ್ವಿದೇವೈವಂ ವಿದುಷೇ ಸಾಧು ಕುರ್ಯಾಂ ಕಿಮೇವಾಸ್ಮಾ ಅಸಾಧು ಕುರ್ಯಾಮಿತಿ ಸ ಹ ಸ್ಮಾಹ ಪಾಣಿನಾ ಮಾ ಪ್ರಾತೃದ ಕಸ್ತ್ವೇನಯೋರೇಕಧಾಭೂಯಂ ಭೂತ್ವಾ ಪರಮತಾಂ ಗಚ್ಛತೀತಿ ತಸ್ಮಾ ಉ ಹೈತದುವಾಚ ॥**

ಈ ತತ್ತ್ವವನ್ನರಿತವನಿಗೆ ನಾನು ಯಾವ ಉಪಕಾರವನ್ನು ಮಾಡಬಲ್ಲೆನು ? ಅಥವಾ ನನ್ನಿಂದ ಅವನಿಗೆ ಅಪಕಾರ ವಾದೀತೇ ಎಂದು ಅವನು ಶಂಕಿಸಿದಾಗ ತಂದೆಯು ಪುತ್ರನನ್ನು ಕುರಿತು ಅಂತಹ ಪ್ರಮಾದವೇನೂ ಇಲ್ಲ. ಈ ಎರಡರ ಸಾಮರಸ್ಯದಿಂದ ಲಭಿಸುವ ಉತ್ತಮವಾದ ಫಲವಾವುದು ಹೇಳು ಎಂದು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ—

**ವೀತ್ಯನ್ನಂ ವೈವ್ಯನ್ನೇ ಹೀಮಾನಿ ಸರ್ವಾಣಿ ಭೂತಾನಿ ವಿಷ್ಟಾನಿ ರಮಿತಿ ಪ್ರಾಣೋ ವೈ ರಂ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ರಮಂತೇ ಸರ್ವಾಣಿ ಹ ವಾ ಅಸ್ಮಿನ್ಭೂತಾನಿ ವಿಶಂತಿ ಸರ್ವಾಣಿ ಭೂತಾನಿ ರಮಂತೇ ಯ ಏವಂ ವೇದ ॥**

(ಬೃ. ಉ ೫-೧೨)

ಸಕಲ ಭೂತಗಳೂ ಅನ್ನವನ್ನೇ ಪ್ರವೇಶಿಸುವುದರಿಂದ **ವಿ** ಎಂದರೆ ಅನ್ನವೆಂದರ್ಥ. ಮತ್ತು ಸಕಲ ಭೂತಗಳೂ ಪ್ರಾಣ ದಿಂದಲೇ ರಮಿಸುವುದರಿಂದ **ರಂ** ಎಂದರೆ ಪ್ರಾಣ. ಹೀಗೆ ಇವೆರಡಕ್ಕೂ ಇರುವ ಸಂಬಂಧವನ್ನರಿಯುವುದರಿಂದಲೇ ಶ್ರೇಯಸ್ಸು ಎಂದು ತಿಳಿಸಿದೆ. ಈ ವರ್ಣನವು ಬ್ರಹ್ಮನಿಗೂ ಅನ್ನಕ್ಕೂ ಇರುವ ಸಾಕ್ಷಾತ್ಸಂಬಂಧವನ್ನು ಅಷ್ಟು ವಿಶದ ವಾಗಿ ತಿಳಿಸುವುದಿಲ್ಲ. ತೈತ್ತಿರೀಯೋಪನಿಷತ್ತಿನಲ್ಲಿ ಜಗತ್ತಿಗೆ ಪ್ರಾಣದಾತೃವಾದ ಅನ್ನಕ್ಕೂ ಜಗನ್ಮೂಲನಾದ ಬ್ರಹ್ಮನಿಗೂ ಇರುವ ಸಾಕ್ಷಾತ್ಸಂಬಂಧವನ್ನು ಈರೀತಿ ತಿಳಿಸಿದೆ—

**ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿಯಂತ್ಯಂತತಃ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸ-ರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ।**

(ತೈ. ಉ. ೨-೧)

ಸಕಲ ಪ್ರಜೆಗಳೂ ಅನ್ನದಿಂದಲೇ ಉತ್ಪನ್ನವಾಗುತ್ತವೆ. ಪೃಥ್ವಿಯನ್ನಾಶ್ರಯಿಸಿರುವ ಜೀವರಾಶಿಗಳೆಲ್ಲವೂ ಅನ್ನ ವಿಲ್ಲದೇ ಜೀವಿಸುವುದಿಲ್ಲ. ಅನ್ನವೇ ಅವುಗಳಿಗೆ ಜೀವನಾಧಾರ. ಆದುದರಿಂದಲೇ ಸಕಲ ಭೂತಗಳಿಗಿಂತಲೂ ಅನ್ನವೇ **ಜ್ಯೇಷ್ಠವು**. ಈ ಮಹತತ್ತ್ವ ಕಾರಣದಿಂದ ಇದು **ವಿಶ್ವೌಷಧ** ಎಂದು ಪ್ರಶಂಸಿತವಾಗಿದೆ.

ಅನ್ನವನ್ನೇ ಬ್ರಹ್ಮವೆಂದು ಆರಾಧಿಸುವವರು ಸಕಲವಿಧವಾದ ಅನ್ನವನ್ನೂ ಪಡೆಯುತ್ತಾರೆ. ಬ್ರಹ್ಮರೂಪವಾದ ಈ ಅನ್ನದಿಂದಲೇ ಸಕಲ ಭೂತಗಳ ಉತ್ಪತ್ತಿಯಿರುತ್ತದೆ. ಉತ್ಪನ್ನವಾದ ಸಕಲ ಭೂತಗಳೂ ಅನ್ನದಿಂದಲೇ ಪುಷ್ಟಿಯನ್ನು ಹೊಂದುತ್ತವೆ. ಈ ಅನ್ನವು ಸಕಲ ಭೂತಗಳಿಂದಲೂ ಭಕ್ಷಿಸಲ್ಪಡುತ್ತದೆ ಮತ್ತು ಸಕಲ ಭೂತಗಳನ್ನೂ ಭಕ್ಷಿಸುತ್ತದೆ. ಆದುದರಿಂದಲೇ ಇದಕ್ಕೆ ಅನ್ನವೆಂದು ಹೆಸರು.

ಈ ವರ್ಣನೆಯಲ್ಲಿ ಯದನ್ನೇನಾತಿ ರೋಹತಿ ಎಂಬ ವಾಕ್ಯದ ತಾತ್ಪರ್ಯವು ಯಾವರೀತಿ ವಿವೃತವಾಗಿವೆ ಎಂಬುದನ್ನು ಗಮನಿಸಬೇಕು.

**ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಂ ॥**
(ಮು. ಉ. ೧-೧-೮)

ತಪಸ್ಸಿನಿಂದ ಬ್ರಹ್ಮನು ಪೌಷ್ಕಲ್ಯವನ್ನು ಹೊಂದುತ್ತಾನೆ. ಆದರಿಂದಲೇ ಅನ್ನವು ಉತ್ಪನ್ನವಾಗುತ್ತದೆ. ಅನ್ನದಿಂದ ಪ್ರಾಣ, ಮನಸ್ಸು, ಸತ್ಯ, ಸಕಲ ಲೋಕಗಳು ಮತ್ತು ಕರ್ಮಗಳಲ್ಲಿ ಅಮೃತತ್ವವೂ, ಅನಂತತ್ವವೂ ಉತ್ಪನ್ನವಾಗುತ್ತವೆ ಎಂದು ಜಗದುತ್ಪತ್ತಿಗೆ ಮೂಲವೂ ಜಗತ್ಪೋಷಕವೂ ಆದ ಅನ್ನವನ್ನು ಬೃಹದಾರಣ್ಯಕದಲ್ಲಿ ಈರೀತಿ ಸ್ತುತಿಸಿದೆ.

**ಇದಂ ಸರ್ವಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ।**
(ಬೃ. ಉ. ೧-೪-೬)

ಈ ಸಕಲ ವಿಶ್ವವೂ ಅನ್ನ ಮತ್ತು ಅದೇ ಕಾಲದಲ್ಲಿಯೇ ಅನ್ನಭಕ್ಷಕವು. ಸಕಲವೂ ಅನ್ನಮಯ, ಸಕಲವೂ ಅನ್ನದಿಂದ ಪೋಷಿತವಾಗತಕ್ಕದ್ದು. ಆದುದರಿಂದಲೇ ಅನ್ನವು ಬ್ರಹ್ಮರೂಪಿಯಾದುದು.

**ಅನ್ನಂ ವೈ ಪ್ರಜಾಪತಿಸ್ತತೋ ಹ ವೈ ತದ್ರೇತಸ್ತಸ್ಮಾದಿಮಾಃ ಪ್ರಜಾಃ ಪ್ರಜಾಯಂತ ಇತಿ ।**
(ಪ್ರಶ್ನ. ೧-೧೪)

ಅನ್ನವೇ ಪ್ರಜಾಪತಿಯು. ಅದರಿಂದಲೇ ರೇತಸ್ಸಿನ ಉತ್ಪತ್ತಿ, ಅದರಿಂದಲೇ ಸಕಲ ಪ್ರಜೆಗಳ ಉತ್ಪತ್ತಿ. ಜಗತ್ತಿನ ಪೋಷಣೆಯೆಲ್ಲವೂ ಅದರಿಂದ. ಆದುದರಿಂದಲೇ ವರುಣನು ತನ್ನ ಪುತ್ರನಾದ ಭೃಗುವಿಗೆ ಬ್ರಹ್ಮನ ಸ್ವರೂಪವನ್ನು ವಿವರಿಸುವಾಗ ಅನ್ನದ ಮಹತ್ತ್ವವನ್ನು ಬಹಳವಾಗಿ ಪ್ರಶಂಸಿಸಿದ್ದಾನೆ.

**ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥**
(ತೈ. ಉ. ೩-೨)

ಅನ್ನವೇ ಬ್ರಹ್ಮವೆಂದೂ, ಅದನ್ನು ಪೂರ್ಣವಾಗಿ ಉಪಾಸಿಸಬೇಕೆಂದೂ ತಿಳಿಸಿದ್ದಾನೆ. ಅನ್ನವೇ ಪ್ರಾಣ, ಮನಸ್ಸು, ಇತ್ಯಾದಿ ಸಕಲ ತತ್ತ್ವಗಳು. ಆದುದರಿಂದಲೇ,

**ಅನ್ನಂ ನ ನಿಂದ್ಯಾತ್ । ತದ್ವ್ರತಂ । ಪ್ರಾಣೋ ವಾ ಅನ್ನಂ । ಶರೀರಮನ್ನಾದಂ । ಪ್ರಾಣೇ ಶರೀರಂ ಪ್ರತಿಷ್ಠಿತಂ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ**

**ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥**

(ತೈ. ಉ. ೩-೭)

ಅನ್ನವನ್ನು ನಿಂದಿಸಬಾರದು. ಅದನ್ನು ವ್ರತವೆಂದರಿಯಬೇಕು. ಪ್ರಾಣವೇ ಅನ್ನವು. ಶರೀರವೇ ಈ ಅನ್ನವನ್ನು ಭುಜಿಸುವುದು. ಪ್ರಾಣವು ಶರೀರದಲ್ಲಿ ಪ್ರತಿಷ್ಠಿತವಾಗಿದೆ. ಶರೀರವೂ ಪ್ರಾಣವನ್ನು ಆಶ್ರಯಿಸಿದೆ. ಆದುದರಿಂದ ಅನ್ನವು ಅನ್ನದಲ್ಲಿಯೇ ಪ್ರತಿಷ್ಠಾಪಿತವಾದಂತಾಯಿತು. ಈರೀತಿ ಅನ್ನವು ಅನ್ನದಲ್ಲಿಯೇ ಪ್ರತಿಷ್ಠಾಪಿತವಾಗಿರುವುದನ್ನು ಅರಿತವನು ಅನ್ನವಂತನಾಗುತ್ತಾನೆ. ಪೂರ್ಣವಾದ ಪುತ್ರಾದಿಸಂಪತ್ತನ್ನು ಹೊಂದುತ್ತಾನೆ.

**ಅನ್ನಂ ನ ಪರಿಚಕ್ಷೀತ । ತದ್ವ್ರತಂ । ಆಪೋ ವಾ ಅನ್ನಂ। ಜ್ಯೋತಿರನ್ನಾದಂ । ಅಪ್ಸು ಜ್ಯೋತಿಃ ಪ್ರತಿಷ್ಠಿತಂ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ ॥**

(ತೈ. ಉ. ೩-೮)

ಅನ್ನವನ್ನು ಯಾರೂ ತಿರಸ್ಕರಿಸಬಾರದು. ಇದನ್ನೇ ಜೀವನದಲ್ಲಿ ವ್ರತವಾಗಿಟ್ಟಿರಬೇಕು. ಜಲವೇ ಅನ್ನವು. ತೇಜಸ್ಸೇ ಅನ್ನಭಕ್ಷಕವು. ತೇಜಸ್ಸು ಜಲದಲ್ಲಿ ಪ್ರತಿಷ್ಠಿತವಾಗಿದೆ. ಜಲವು ತೇಜಸ್ಸಿನಲ್ಲಿ ಪ್ರತಿಷ್ಠಿತವಾಗಿದೆ. ಆದುದರಿಂದಲೇ ಅನ್ನದಲ್ಲಿ ಅನ್ನವು ಪ್ರತಿಷ್ಠಿತವಾಗಿದೆ.

**ಅನ್ನಂ ಬಹುಕುರ್ವೀತ । ತದ್ವ್ರತಂ । ಪೃಥಿವೀ ವಾ ಅನ್ನಂ । ಆಕಾಶೋऽನ್ನಾದಃ। ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಂ ॥**

(ತೈ. ಉ. ೩-೯)

ಅನ್ನವನ್ನು ಪುಷ್ಕಳವಾಗಿ ವೃದ್ಧಿಪಡಿಸಬೇಕು. ಇದನ್ನೇ ಜೀವನದಲ್ಲಿ ವ್ರತವಾಗಿಟ್ಟಿರಬೇಕು. ಪೃಥ್ವಿಯೇ ಅನ್ನವು. ಆಕಾಶವೇ ಈ ಅನ್ನಭಕ್ಷಕವು. ಆಕಾಶವು ಪೃಥ್ವಿಯಲ್ಲಿ ಪ್ರತಿಷ್ಠಿತವಾಗಿದೆ. ಪೃಥ್ವಿಯು ಆಕಾಶದಲ್ಲಿ ಪ್ರತಿಷ್ಠಿತವಾಗಿದೆ. ಆದುದರಿಂದಲೇ ಅನ್ನದಲ್ಲಿ ಅನ್ನವು ಪ್ರತಿಷ್ಠಿತವಾಗಿದೆ.

ಹೀಗೆ ಸಕಲ ತತ್ತ್ವವನ್ನೂ ಅನ್ನರೂಪವೆಂದು ವರ್ಣಿಸಿ ಕೊನೆಯಲ್ಲಿ ಅನ್ನವೇ ಬ್ರಹ್ಮವೆಂದೂ ಸ್ತುತಿಸಿದೆ. **ಯದನ್ನೇನಾತಿರೋಹತಿ**।ಎಂಬ ವಾಕ್ಯಕ್ಕೆ ಹೇಳಿರುವ ಎಲ್ಲ ಅರ್ಥಗಳಿಗೂ ಅನ್ವಯವಾಗುವಂತೆ ಉಪನಿಷದ್ವಾಕ್ಯಗಳು ಉದಾಹೃತವಾಗಿವೆ. ಸೂಕ್ಷ್ಮರೂಪದ ಬ್ರಹ್ಮನು ಅನ್ನನಿಮಿತ್ತವಾಗಿ ಸ್ಥೂಲರೂಪದಲ್ಲಿ ಪರಿಣಾಮವನ್ನು ಹೊಂದುವನು ಎಂದು ಹೇಳಿರುವ ಅರ್ಥದಲ್ಲಿ ಬ್ರಹ್ಮನೇ ಅನ್ನರೂಪದಲ್ಲಿ ಪ್ರಕಾಶಿತನಾಗುವನು ಎಂದು ತಾತ್ಪರ್ಯಮಾಡಲು ಅವಕಾಶವಿರುವಂತೆಯೇ, ತನಗಿಂತಲೂ ಭಿನ್ನವಾದ ಅನ್ನವನ್ನು ಉತ್ಪನ್ನಮಾಡುವನು ಎಂದು ಹೇಳಲೂ ಅವಕಾಶವಿರುತ್ತದೆ ಎರಡನೆಯ ಅರ್ಥಕ್ಕೆ ಪೋಷಕವಾದ ಐತರೇಯೋಪನಿಷತ್ತಿನ ವಾಕ್ಯಗಳು ಈ ರೀತಿ ಇರುತ್ತವೆ.

**ಸ ಈಕ್ಷತೇಮೇ ನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ।**

(ಐ. ಉ. ೧-೩-೧)

ಬ್ರಹ್ಮನು ತನ್ನಿಂದ ಸೃಷ್ಟವಾದ ಲೋಕಗಳನ್ನೂ ಲೋಕಪಾಲಕರನ್ನೂ ಪೋಷಿಸಬೇಕೆಂದು ಯೋಚಿಸಿ ಅವರಿಗಾಗಿ ಅನ್ನವನ್ನು ಉತ್ಪನ್ನಮಾಡಬೇಕೆಂದಿಚ್ಛಿಸಿದನು.

**ಸೋऽಪೋऽಭ್ಯತಪತ್ತಾಭ್ಯೋऽಭಿತಪ್ತಾಭ್ಯೋ ಮೂರ್ತಿರಜಾಯತ। ಯಾ ವೈ ಸಾ ಮೂರ್ತಿರ-ಜಾಯತಾನ್ನಂ ವೈ ತತ್ ॥**

(ಐ. ಉ. ೧-೩-೨)

ಆಗ ಅವನು ಜಲದ ಮೇಲೆ ತಪಸ್ಸುಮಾಡಿದನು. ಆಗ ಆ ಜಲದಿಂದ ಒಂದು ಮೂರ್ತರೂಪವು ಉದ್ಭವಿಸಿತು. ಆ ರೀತಿ ಉತ್ಪನ್ನವಾದ ಮೂರ್ತರೂಪವೇ ಅನ್ನವಾಗಿ ಪರಿಣಮಿಸಿತು.

**ತದೇತದಭಿಸೃಷ್ಟಂ ಪರಾಙ್ತ್ಯಜಿಘಾಂಸತ್ । ತದ್ವಾಚಾಜಿಘೃಕ್ಷತ್ ತನ್ನಾಶಕ್ನೋದ್ವಾಚಾ ಗ್ರಹೀತುಂ ॥**

(ಐ. ಉ. ೧-೩-೨)

ಬ್ರಹ್ಮನಿಂದ ಸೃಷ್ಟವಾದ ಈ ಅನ್ನವು ತಪ್ಪಿಸಿಕೊಂಡು ಹೋಗಲು ಯತ್ನಿಸಿತು. ಆಗ ಅದನ್ನು ವಾಕ್ಕಿನ ಸಹಾಯದಿಂದ ಹಿಡಿಯಲು ಪ್ರಯತ್ನಿಸಿದನು. ವಾಕ್ಕಿನ ಸಹಾಯದಿಂದ ಅದನ್ನು ಹಿಡಿಯಲು ಸಾಧ್ಯವಾಗಲಿಲ್ಲ. ಕೇವಲ ವಾಕ್ಕಿನಿಂದಲೇ ಅದನ್ನು ಹಿಡಿಯಲು ಸಾಧ್ಯವಾಗಿದ್ದರೆ, **ಅನ್ನ** ಎಂದು ಉಚ್ಚಾರಮಾತ್ರದಿಂದಲೇ ಅನ್ನವು ಲಭಿಸಿ ತೃಪ್ತಿಯನ್ನು ಪಡೆಯಬಹುದಾಗಿದ್ದಿತು.

**ತತ್ಪ್ರಾಣೇನಾಜಿಘೃಕ್ಷತ್ । ತನ್ನಾಶಕ್ನೋತ್ ಪ್ರಾಣೇನ ಗ್ರಹೀತುಂ । ಸ ಯದ್ಧೈನಂ ಪ್ರಾಣೇನಾಗ್ರ ಹೈಷ್ಯದಭಿಪ್ರಾಣ್ಯ ಹೈವಾನ್ನಮತ್ರಪ್ಸ್ಯತ್ । ತಚ್ಚಕ್ಷುಷಾಜಿಘೃಕ್ಷತ್ । ತನ್ನಾಶಕ್ನೋಚ್ಚಕ್ಷುಷಾ ಗ್ರಹೀತುಂ । ಸ ಯದ್ಧೈನಚ್ಚಕ್ಷುಷಾಗ್ರಹೈಷ್ಯದ್ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ।**

(ಐ. ಉ. ೧-೩-೩, ೪)

ಆಗ ತಪ್ಪಿಸಿಕೊಂಡು ಹೋಗಲು ಯತ್ನಿಸಿದ ಅನ್ನವನ್ನು ಪ್ರಾಣದಿಂದಲೂ ಚಕ್ಷುಸ್ಸಿನಿಂದಲೂ ಹಿಡಿಯಲು ಯತ್ನಿಸಿದನು. ಅದು ಸಾಧ್ಯವಾಗಲಿಲ್ಲ. ಕೇವಲ ಪ್ರಾಣದಿಂದಲೂ ಚಕ್ಷುಸ್ಸಿನಿಂದಲೂ ಹಿಡಿಯಲು ಸಾಧ್ಯವಾಗಿದ್ದರೆ, ಕೇವಲ ಉಸಿರಾಡುವುದರಿಂದಲೂ ಮತ್ತು ದರ್ಶನಮಾತ್ರದಿಂದಲೂ ಅನ್ನವನ್ನು ಪಡೆದು ತೃಪ್ತಿಯನ್ನು ಹೊಂದಬಹುದಾಗಿದ್ದಿತು

ಹೀಗೆಯೇ, ಶ್ರವಣ, ತ್ವಕ್, ಮನಸ್ಸು ಇವುಗಳ ಸಹಾಯದಿಂದಲೂ ಅದನ್ನು ಪಡೆಯಲು ಸಾಧ್ಯವಾಗಲಿಲ್ಲ. ಆಗ ಕೊನೆಯ ಪ್ರಯತ್ನವಾಗಿ,

**ತದಪಾನೇನಾಜಿಘೃಕ್ಷತ್ । ತದಾವಯತ್ । ಸೈಷೋऽನ್ನಸ್ಯ ಗ್ರಹೋ ಯದ್ವಾಯು-ರನ್ನಾಯುರ್ವಾ ಏಷ ಯದ್ವಾಯುಃ ।**

(ಐ. ಉ. ೧-೩-೧೦)

ಆ ಅನ್ನವನ್ನು ಅಪಾನದ ಸಹಾಯದಿಂದ ಹಿಡಿಯಲು ಯತ್ನಿಸಿದಾಗ ಅದು ಸಿಕ್ಕಿ ಅದನ್ನು ಭಕ್ಷಿಸಿದನು. ಋ. ಸಂ. ೧೦.೧೧೩-೮. ಆವಯತಿರತ್ತಿಕರ್ಮಾ). ಅನ್ನವನ್ನು ಸ್ವಾಧೀನಪಡಿಸಿಕೊಳ್ಳಬಲ್ಲ ಈ ಶಕ್ತಿಯು ವಾಯುಸಂಬಂಧವಾದುದು. ವಾಯುವೇ ಅನ್ನಾಯುವೆನ್ನಿಸಿಕೊಳ್ಳುತ್ತದೆ.

ಈ ರೀತಿಯಾದ ವಿವರಣೆಗಳಲ್ಲಿ ಬ್ರಹ್ಮನು ಜಗತ್ತಿನ ಪೋಷಣೆಗಾಗಿ ಅನ್ನವನ್ನು ಉತ್ಪನ್ನಮಾಡಿದುದೇ ಅಲ್ಲದೆ ಸೃಷ್ಟವಾದ ಆ ಅನ್ನವನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಶ್ರಮವನ್ನೂ ವಹಿಸಿ ಜಗತ್ತನ್ನು ರಕ್ಷಿಸಿದ ವಿಚಾರವು ವಿವೃತವಾಗಿದೆ. ಈ ರಕ್ಷಣೆಗಾಗಿ ಅವನು ಸ್ಥೂಲರೂಪಹೊಂದಬೇಕಾಯಿತು ಎಂಬುದು ಒಂದು ತಾತ್ಪರ್ಯ. ಜಗತ್ಸೃಷ್ಟಿಯೇ ಬಹ್ಮನ ಸ್ಥೂಲರೂಪವಾದ ಪರಿಣಾಮವು ಎಂದು ಹೇಳುವ ಮತವೂ ಪ್ರಸಿದ್ಧವಾಗಿದೆ.

**ಪುರುಷ ಏವೇದಂ ಸರ್ವಂ; ಅಮೃತತ್ವಸ್ಯ ಈಶಾನಃ, ಯದನ್ನೇನಾತಿರೋಹತಿ** ಎಂದಿರುವ ಈ ಋಕ್ಕಿನಲ್ಲಿ ಈಶ್ವರನ ವರ್ಣವು ಪರಮಪುರುಷನ ವ್ಯಾಪಕತ್ವವನ್ನೂ ಪ್ರಭುತ್ವವನ್ನೂ ತಿಳಿಸುತ್ತದೆ.

**ಮುಖ್ಯಾಭಿಪ್ರಾಯವು**

ಈ ಋಕ್ಕಿನಲ್ಲಿ ಮುಖ್ಯವಾಗಿ ಎರಡು ವಿಷಯಗಳ ವರ್ಣನೆ ಇದೆ. ಪೂರ್ವಾರ್ಧದಲ್ಲಿ **ಇದಂ ಸರ್ವಂ ಪುರುಷ ಏವ**—ದೃಶ್ಯಮಾನ್ಯವಾದ ಈ ಸಕಲ ಜಗತ್ತೂ ಈ ಪುರುಷನೇ ಆಗಿರುವನು ಎಂದೂ ಉತ್ತರಾರ್ಧದಲ್ಲಿ ಈ ಪುರುಷನು ಮರಣರಹಿತರಾದ ದೇವತಾದಿಗಳಿಗೂ ಪ್ರಭುವಾಗಿರುವನೆಂಬ ಅಂಶವನ್ನೂ ಸ್ಪಷ್ಟಪಡಿಸುವವು.

ಪೂರ್ವಾರ್ಧದಲ್ಲಿ ಹೇಳಿರುವ **ಇದಂ ಸರ್ವಂ ಪುರುಷ ಏವ** ಎಂಬ ವಾಕ್ಯಕ್ಕೆ ಅರ್ಥವನ್ನು ವಿವರಿಸುವಾಗ ಈ ವಾಕ್ಯದಲ್ಲಿರುವ ಇದಂ ಶಬ್ದವು ಇದನ್ನು ಎಂದರೆ ನಮಗೆ ದೃಷ್ಟಿಗೋಚರವಾಗಿರುವ ಜಗತ್ತನ್ನು ಸೂಚಿಸುವುದು. ಸರ್ವಂ ಎಂಬ ಶಬ್ದವು ಜಗತ್ತನ್ನೂ ಅದರಲ್ಲಿರುವ ಚರಾಚರವಸ್ತುಗಳೆಲ್ಲವನ್ನೂ ಎಂಬರ್ಥವನ್ನು ಸೂಚಿಸುವುದು. ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಎಂದರೆ ನಮ್ಮ ಅನುಭವವೇದ್ಯವಾದ ಈ ಜಗತ್ತೂ ಇದರಲ್ಲಿರುವ ನಾನಾ ವಸ್ತುಗಳು ಮತ್ತು ಪ್ರಾಣಿಗಳು, ಇದರಂತೆಯೇ ಇರುವ ಅಖಿಲಾಂಡಕೋಟಿ ಬ್ರಹ್ಮಾಂಡಗಳೂ ಸಹ ಈ ಪರಮಪುರುಷನೇ ಆಗಿರುವನು ಎಂದರೆ ಅವನ ಅಂಶವೇ ಆಗಿರುವುದು. ಅವ್ಯಕ್ತಾವಸ್ಥೆಯಲ್ಲಿದ್ದ ಆ ಪರಮಪುರುಷನ ಅತ್ಯಲ್ಪ ಭಾಗವು ಈ ಜಗದಾದಿಯಾದ ವಿಶ್ವವಾಗಿ ಪರಿಣಮಿಸಿರುವುದು. ಇದನ್ನೇ **ಸರ್ವಂ ಖಲ್ವಿದಂ ಬ್ರಹ್ಮ** ಎಂಬ ಉಪನಿಷದ್ವಾಕ್ಯವೂ ಸಮರ್ಥಿಸುವುದು. ಹಿಂದೆ ಹೇಳಿರುವಂತೆ ಬ್ರಹ್ಮ (ಅಥವಾ ಪರಮಪುರುಷ) ವ್ಯತಿರಿಕ್ತವಾದ ವಸ್ತುವೇ ಇಲ್ಲದಿರುವುದರಿಂದ ಈ ದೃಶ್ಯಮಾನವಿಶ್ವವೆಲ್ಲವೂ ಪರಮಪುರುಷನೇ ಆಗಿರುವುದು. ಆದರೆ ಇಲ್ಲಿ ಒಂದು ವಿಷಯವನ್ನು ಗಮನದಲ್ಲಿಡಬೇಕು. ಪರಮಪುರುಷನು ಅವ್ಯಕ್ತಸ್ವರೂಪದಲ್ಲಿರುವಾಗ ಜಗದಾದಿಗಳೊಂದೂ ಇರುವುದಿಲ್ಲ. ವ್ಯಕ್ತಸ್ವರೂಪದಲ್ಲಿರುವಾಗ ಎಂದರೆ ಅವ್ಯಕ್ತಸ್ವರೂಪದ ಕೆಲವು ಭಾಗ ವ್ಯಕ್ತಸ್ವರೂಪವಾಗಿ ಪರಿವರ್ತಿತವಾದಾಗ ಜಗದಾದಿಗಳ ಆವಿರ್ಭಾವವಾಗುವುದು ಎಂದಭಿಪ್ರಾಯವು.

ಇನ್ನು **ಯದ್ಭೂತಂ ಯಚ್ಚ ಭವ್ಯಂ** ಎಂಬ ಶಬ್ದಗಳನ್ನು ಪರಿಶೀಲಿಸೋಣ. **ಯದ್ಭೂತಂ** ಎಂದರೆ ಹಿಂದೆ ಇದ್ದದ್ದು, **ಯಚ್ಚ ಭವ್ಯಂ** ಎಂದರೆ ಮುಂದೆ ಉಂಟಾಗುವುದು ಎಂದರ್ಥವು. ಹಿಂದೆ ಇದ್ದದ್ದು, ಮುಂದೆ ಉಂಟಾಗುವುದು ಎಂದರೇನು? ಒಂದು ಸಲ ಸೃಷ್ಟಿಯಾದ ಮೇಲೆ ಜಗದಾದಿಗಳೆಲ್ಲಾ ಯಾವಾಗಲೂ ಇರುವುದಿಲ್ಲವೇ? ಎಂದರೆ, ಹಾಗಲ್ಲ. ಪರಮಾತ್ಮನಿಗೆ ಮುಖ್ಯವಾಗಿ ಎರಡು ಅವಸ್ಥೆಗಳಿರುವವು ಎಂದು ತಿಳಿಯಬೇಕು. ಅವ್ಯಕ್ತ ಮತ್ತು ವ್ಯಕ್ತ ಎಂದು; ವ್ಯಕ್ತಾವಸ್ಥೆಯಲ್ಲಿ ಜಗದಾದಿಗಳು ಸೃಷ್ಟಿಯಾಗಿ ಗೋಚರವಾಗುವವು. ಅವ್ಯಕ್ತಾವಸ್ಥೆಯಲ್ಲಿ ಜಗತ್ತೆಲ್ಲವೂ ನಾಶವಾಗಿ ಪುನಃ ಪರಮಾತ್ಮನಲ್ಲಿಯೇ ಐಕ್ಯವಾಗುವುದು. ಈ ವಿಧವಾದ ವ್ಯತ್ಯಾಸಗಳನ್ನು ಸೃಷ್ಟಿ ಮತ್ತು ಪ್ರಳಯ ಎಂದು ಹೇಳುವರು. ಸೃಷ್ಟಿಯಾದ ಜಗದಾದಿಗಳು ಕೆಲವು ಕಾಲ ಅದೇ ವ್ಯಕ್ತಾವಸ್ಥೆಯಲ್ಲಿ ಇರುವುದಕ್ಕೆ ಸ್ಥಿತಿ ಎನ್ನುವರು. ಈ ಕ್ರಮವು ಎಂದರೆ ಸೃಷ್ಟಿ ಸ್ಥಿತಿ ಲಯ ಎಂಬ ಮೂರು ವಿಧ ವ್ಯಾಪಾರಗಳೂ ಒಂದಾಗುತ್ತಲೊಂದು ನಡೆದು ಬರುತ್ತಿರುವುದು. ಅವ್ಯಕ್ತಾವಸ್ಥೆಯಲ್ಲಿರುವ ಪುರುಷನು ಜಗದಾದಿಗಳ ರೂಪವನ್ನು ತಾಳುವುದೇ

ಸೃಷ್ಟಿಯು ; ಆ ಅವಸ್ಥೆಯಲ್ಲಿಯೇ ಕೆಲವುಕಾಲ ಇರುವುದೇ ಸ್ಥಿತಿಯು ; ಜಗದಾದಿಗಳು ನಾಶವಾಗಿ ಪುನಃ ಮೊದಲಿದ್ದ ಅವಸ್ಥೆಯನ್ನು ಹೊಂದುವುದೇ ಲಯ ಅಥವಾ ಪ್ರಳಯವು. ಈ ಮೂರುವ್ಯಾಪಾರಗಳು ಎಡಬಿಡದೆ ನಡೆದುಬರುತ್ತಿರುವುದರಿಂದ ಈಗಿರುವ ಜಗದಾದಿಗಳಂತೆ ಹಿಂದೆ ಅನೇಕಾವರ್ತಿ ಜಗದಾದಿಗಳ ಉತ್ಪತ್ತಿಯಾಗಿದ್ದಿತು, ಅದನ್ನೇ ಇಲ್ಲಿ **ಯದ್ಭೂತಂ**—ಹಿಂದೆ ಇದ್ದ ಎಂದು ಹೇಳಲಾಗಿದೆ. ಈಗಿರುವ ಜಗದಾದಿಗಳು ನಾಶವಾಗಿ ಮುಂದೆ ಲಯಾನಂತರ ಪುನಃ ಸೃಷ್ಟಿಯಾಗುವ ಜಗದಾದಿಗಳನ್ನು **ಯಚ್ಚ ಭವ್ಯಂ** ಎಂಬ ಶಬ್ದಗಳಿಂದ ನಿರ್ದೇಶಿಸಲಾಗಿದೆ. ಇಲ್ಲಿ ಜಗದಾದಿಗಳೆಂದರೆ ಸಮಸ್ತಲೋಕಗಳನ್ನೊಳಗೊಂಡ ಅನೇಕ ಕೋಟಿ ಬ್ರಹ್ಮಾಂಡಗಳೂ ಅವುಗಳಲ್ಲಿರುವ ಸಕಲ ಪ್ರಾಣಿಗಳೂ, ಚರಾಚರಾತ್ಮಕವಾದ ಸಮಸ್ತವಸ್ತುಗಳೂ ಎಂದರ್ಥವು. ಇವೆಲ್ಲವೂ ಆ ಪುರುಷನೇ ಆಗಿರುವನು ಎಂದಭಿಪ್ರಾಯವು.

ಇನ್ನು ಉತ್ತರಾರ್ಧದಲ್ಲಿರುವ ವಿಷಯವನ್ನು ವಿಮರ್ಶೆಮಾಡಿದರೆ **ಉತಾಮೃತತ್ವಸ್ಯೇಶಾನಃ** ಎಂಬ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. **ಅಮೃತತ್ವ** ಎಂದರೆ ಮರಣರಹಿತರಾದ ದೇವತೆಗಳು ಎಂದೂ **ಈಶಾನಃ** ಎಂದರೆ ಈ ದೇವತೆಗಳಿಗೆ ಈ ಪುರುಷನು ಪ್ರಭುವಾಗಿರುವನೆಂದೂ ಸಾಯಣರ ವಿವರಣೆಯು. ಈ ವಿಧವಾದ ಅರ್ಥವು ಸರಿಯಾಗಿದ್ದರೂ ಇದಕ್ಕಿಂತಲೂ ಗಹನವಾದ ತತ್ತ್ವವನ್ನೊಳಗೊಂಡ ಬೇರೊಂದು ಅರ್ಥವು ಇಲ್ಲಿ ಸಾಧ್ಯವೆಂಬುದನ್ನು ಗಮನಿಸಬೇಕು. ಹಿಂದೆ ಹೇಳಿದಂತೆ **ಅಮೃತ** ಶಬ್ದಕ್ಕೆ ಮರಣಧರ್ಮರಹಿತರಾದ ದೇವತೆಗಳು ಎಂದು ಮಾತ್ರ ಅರ್ಥಮಾಡಿದರೆ ಆಗ **ಅಮೃತಾನಾಂ ಈಶಾನಃ** ಅಥವಾ **ಅಮೃತೇಶಾನಃ** ಎಂಬ ಶಬ್ದಗಳ ಪ್ರಯೋಗವಿರಬೇಕಾಗಿತ್ತು. ಆದರೆ ಇಲ್ಲಿ ಅಮೃತತ್ವ ಎಂಬ ಶಬ್ದಪ್ರಯೋಗವಿದೆ ಈ ಶಬ್ದಕ್ಕೆ **ಅಮೃತಸ್ಯ ಭಾವಃ** ಎಂದರೆ ಮರಣರಹಿತವಾದ ಸ್ಥಿತಿಯೆಂದರ್ಥಮಾಡುವುದು ಸಮಂಜಸವೂ ಯುಕ್ತಿಯುಕ್ತವೂ ಆಗಿರುವುದು. ಮರಣರಹಿತವಾದ ಸ್ಥಿತಿಯೆಂದರೇನು ಎಂದರೆ ಪರಮಪುರುಷನ ಅವ್ಯಕ್ತಸ್ವರೂಪ ಅಥವಾ ಪರಮಪದವೆಂದು ಹೇಳಲ್ಪಡುವ ಮುಕ್ತಿಸ್ವರೂಪವು. ಸಾಮಾನ್ಯಪುರುಷನು ತನ್ನ ಸತ್ಕರ್ಮಗಳಿಂದಲೂ, ತಪಸ್ಸಿನಿಂದಲೂ ಈ ಸಂಸಾರಬಂಧನವನ್ನು ಅತಿಕ್ರಮಿಸಿ ಶಾಶ್ವತವಾದ ಮುಕ್ತಿಯನ್ನು ಪಡೆಯುವುದೇ ಎಂದರೆ ಬ್ರಹ್ಮೈಕ್ಯವಾಗುವುದೇ ಅಮೃತತ್ತ್ವವೆಂದು ಹೇಳಲ್ಪಡುವುದು. ಎಂದರೆ ಅಮೃತತ್ವ ಅಥವಾ ಮುಕ್ತಿಯನ್ನು ಪಡೆದನಂತರ ಪುನರ್ಜನ್ಮವಿಲ್ಲದ್ದರಿಂದ ಮರಣವೂ ಇರುವುದಿಲ್ಲ. ಈ ಅಮೃತತತ್ತ್ವವನ್ನು ಪಡೆದ ಪುರುಷನು ಪುನಃ ಜನ್ಮವೆತ್ತುವುದಿಲ್ಲ. ಆದ್ದರಿಂದ ಮರಣವೂ ಇಲ್ಲ. **ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ** ಎಂದು ಭಗವದ್ವಾಕ್ಯವಿರುವುದು ಎಂದರೆ ವಿಷ್ಣುವಿನ (ಪರಮಾತ್ಮನ) ಪರಮಪದವೆಂಬ ಸ್ಥಾನವನ್ನು (ಮುಕ್ತಿಯನ್ನು) ಪಡೆದನಂತರ ಪುನಃ ಈ ಪ್ರಪಂಚದಲ್ಲಿ ಹಿಂದಿರುಗಿ ಜನ್ಮವೆತ್ತುವುದಿಲ್ಲ ಎಂದು ಈ ವಾಕ್ಯದ ಅರ್ಥವು. ಈ ಶಾಶ್ವತವಾದ ಪರಮಪದವನ್ನೇ ಇಲ್ಲಿ ಅಮೃತತತ್ವವೆಂಬ ಶಬ್ದದಿಂದ ಸೂಚಿಸಿ ಅದಕ್ಕೆ ಈ ಪರಮಪುರುಷನೇ ಈಶಾನಃ ಎಂದರೆ ಪ್ರಭುವೆಂದೂ ತಿಳಿಸಿದೆ. ಎಂದರೆ ಪರಮಾತ್ಮನ ಅನುಗ್ರಹವಿಲ್ಲದೆ ಸಂಸಾರನಿವೃತ್ತಿಯಾಗುವುದಿಲ್ಲ, ಮೋಕ್ಷವೂ ಲಭಿಸುವುದಿಲ್ಲ. ಆದ್ದರಿಂದ ಬ್ರಹ್ಮಸ್ವರೂಪವನ್ನು ತಿಳಿದವನು **ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ** ಬ್ರಹ್ಮನಲ್ಲಿ ಐಕ್ಯವಾಗಿ ಬ್ರಹ್ಮನೇ ಆಗುವನು ಎಂದು ಶ್ರುತಿವಾಕ್ಯವು ಸಮರ್ಥಿಸುವುದು.

**ಯದನ್ನೇನಾತಿರೋಹತಿ**—ಎಂಬ ವಾಕ್ಯದಲ್ಲಿ ಅನ್ನಶಬ್ದಕ್ಕೆ ಆಹಾರವೆಂದರ್ಥವು. **ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ** ಎಂಬ ಶ್ರುತಿ ವಾಕ್ಯಗಳಲ್ಲಿ ಸೂಚಿತವಾಗಿದೆ. ಸರ್ವಪ್ರಾಣಿಗಳೂ ಇದನ್ನು ತಿನ್ನುವುದರಿಂದಲೂ, ತಾನೇ ಇತರ ಪ್ರಾಣಿಗಳಿಂದ ತಿನ್ನಲ್ಪಡುವುದರಿಂದ ಅನ್ನಕ್ಕೆ (ಆಹಾರಕ್ಕೆ) ಅನ್ನವೆಂದು ಹೆಸರುಬಂದಿದೆ. ಪರಮೇಶ್ವರನು ತನ್ನ ಸ್ವಕೀಯವಾವಸ್ಥೆಯಾದ ಅವ್ಯಕ್ತಸ್ವರೂಪವನ್ನು ಬಿಟ್ಟು ಅಥವಾ ಅತಿಕ್ರಮಿಸಿ

(ಸೃಷ್ಟಿಕಾಲದಲ್ಲಿ) ಅನ್ನವೇ ಭೋಗ್ಯವಸ್ತುವಾಗಿವುಳ್ಳ ಪ್ರಾಣಿಗಳ ರೂಪವನ್ನು ಅಥವಾ ಪ್ರಾಣಿಗಳಿಂದ ತುಂಬಿರುವ ಜಗದಾದಿಗಳ ರೂಪವನ್ನು ಪಡೆಯುತ್ತಾನೆ ಎಂದರೆ ಕಾರಣಾವಸ್ಥೆಯನ್ನು ಅತಿಕ್ರಮಿಸಿ (ತ್ಯಜಿಸಿ) ಕಾರ್ಯಾವಸ್ಥೆಯನ್ನು ಎಂದರೆ ಜಗದಾದಿಗಳ ರೂಪವನ್ನು ಪಡೆಯುತ್ತಾನೆ ಎಂದು ಭಾಷ್ಯಕಾರರ ವಿವರಣೆಯು.

---

। ಸಂಹಿತಾಪಾಠಃ ।

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ ।

ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥

। ಪದಪಾಠಃ ।

ಏತಾವಾನ್ । ಅಸ್ಯ । ಮಹಿಮಾ । ಅತಃ । ಜ್ಯಾಯಾನ್ । ಚ । ಪುರುಷಃ ।

ಪಾದಃ । ಅಸ್ಯ । ವಿಶ್ವಾ । ಭೂತಾನಿ । ತ್ರಿಽಪಾತ್ । ಅಸ್ಯ । ಅಮೃತಂ । ದಿವಿ ॥ ೩ ॥

। ಸಾಯಣಭಾಷ್ಯಂ ।

ಅತೀತಾನಾಗತವರ್ತಮಾನರೂಪಂ ಜಗದ್ಯಾವದಸ್ತಿ ಏತಾವಾನ್ಸರ್ವೋಽಪ್ಯಸ್ಯ ಪುರುಷಸ್ಯ ಮಹಿಮಾ । ಸ್ವಕೀಯಸಾಮರ್ಥ್ಯವಿಶೇಷಃ । ನ ತು ತಸ್ಯ ವಾಸ್ತವಸ್ವರೂಪಂ । ವಾಸ್ತವಸ್ತು ಪುರುಷೋಽತೋ ಮಹಿಮ್ನೋಽಪಿ ಜ್ಯಾಯಾನ್ । ಅತಿಶಯೇನಾಧಿಕಃ । ಏತಚ್ಚೋಭಯಂ ಸ್ಪಷ್ಟೀಕ್ರಿಯತೇ। ಅಸ್ಯ ಪುರುಷಸ್ಯ ವಿಶ್ವಾ ಸರ್ವಾಣಿ ಭೂತಾನಿ ಕಾಲತ್ರಯವರ್ತೀನಿ ಪ್ರಾಣಿಜಾತಾನಿ ಪಾದಃ । ಚತುರ್ಥೋಽಂಶಃ । ಅಸ್ಯ ಪುರುಷಸ್ಯಾವಶಿಷ್ಟಂ ತ್ರಿಪಾತ್ಸ್ವರೂಪಮಮೃತಂ ವಿನಾಶರಹಿತಂ ಸದ್ದಿವಿ ದ್ಯೋತನಾತ್ಮಕೇಸ್ವಪ್ರಕಾಶಸ್ವರೂಪೇ ವ್ಯವತಿಷ್ಠತ ಇತಿ ಶೇಷಃ। ಯದ್ಯಪಿ ಸತ್ಯಂಜ್ಞಾನಮನಂತಂ ಬ್ರಹ್ಮ। ತೈ. ಆ. ೮-೧ ಉ. ೨-೧ । ಇತ್ಯಾಮ್ನಾತಸ್ಯ ಪರಬ್ರಹ್ಮಣ ಇಯತ್ತಾಭಾವಾತ್ಪಾದಚತುಷ್ಟಯಂ ನಿರೂಪಯಿತುಮಶಕ್ಯಂ ತಥಾಪಿ ಜಗದಿದಂ ಬ್ರಹ್ಮಸ್ವರೂಪಾಪೇಕ್ಷಯಾಲ್ಪಮಿತಿ ವಿವಕ್ಷಿತತ್ವಾತ್ಪಾದತ್ವೋಪನ್ಯಾಸಃ ॥

। ಪ್ರತಿಪದಾರ್ಥ ।

ಏತಾವಾನ್—ಭೂತ, ವರ್ತಮಾನ ಮತ್ತು ಭವಿಷ್ಯದ್ರೂಪಗಳಾದ ಸಕಲ ಜಗತ್ತೂ। ಅಸ್ಯ—ಈ ಆದಿ ಪುರುಷನ । ಮಹಿಮಾ—ಸಾಮರ್ಥ್ಯ ವಿಶೇಷವೇ ಆಗಿದೆ । ಚ—ಅಲ್ಲದೆ । ಪುರುಷಃ—ಆದಿಪುರುಷನು । ಅತಃ—ಈ ಸಕಲ ಜಗತ್ತಿಗಿಂತಲೂ । ಜ್ಯಾಯಾನ್—ಅಧಿಕನು । ವಿಶ್ವಾ ಭೂತಾನಿ—ಸಕಲ ಭೂತಗಳೂ । ಅಸ್ಯ—ಈ ಪುರುಷನ। ಪಾದಃ—ಕಾಲುಭಾಗ ಮಾತ್ರ । ಅಸ್ಯ—ಈ ಮಹಾಪುರುಷನ । ತ್ರಿಪಾತ್—ಮುಕ್ಕಾಲುಪಾಲು । ದಿವಿ—ಗೋಚರಾತೀತವಾದ ದ್ಯುಲೋಕದಲ್ಲಿ (ಸ್ವಪ್ರಕಾಶ ಸ್ವರೂಪದಲ್ಲಿ) । ಅಮೃತಂ—ವಿಕೃತಿಯನ್ನು ಹೊಂದದೆ ಇರುತ್ತದೆ. (ಯಾವ ಬದಲಾವಣೆಯನ್ನೂ ಹೊಂದದೆ ನಿಜಸ್ಥಿತಿಯಲ್ಲಿರುತ್ತದೆ).

॥ ಭಾವಾರ್ಥ ॥

ಭೂತ, ವರ್ತಮಾನ ಮತ್ತು ಭವಿಷ್ಯದ್ರೂಪಗಳಾದ ಸಕಲ ಜಗತ್ತೂ ಈ ಆದಿಪುರುಷನ ಸಾಮರ್ಥ್ಯವಿಶೇಷವೇ ಆಗಿದೆ. ಅಲ್ಲದೆ, ಆದಿಪುರುಷನು ಸಕಲ ಜಗತ್ತಿಗಿಂತಲೂ ಅಧಿಕನು. ಸಕಲ ಭೂತಗಳೂ ಈ ಈಶ್ವರನ ಕಾಲುಭಾಗ ಮಾತ್ರ. ಈ ಮಹಾಪುರುಷನ ಮುಕ್ಕಾಲುಪಾಲು ಗೋಚರಾತೀತವಾದುದೂ ಸ್ವಪ್ರಕಾಶರೂಪವಾದುದೂ ಆಧ ಲೋಕದಲ್ಲಿ ಯಾವ ಬದಲಾವಣೆಯನ್ನೂ ಹೊಂದದೆ ನಿಜಸ್ಥಿತಿಯಲ್ಲಿರುತ್ತದೆ.

English Translation

Such is his greatness ; and Purusha is greater even than this ; all beings are one-fourth of him ; his other three-fourths (being)immortal (abide) in heaven.

॥ ವಿಶೇಷವಿಷಯಗಳು ॥

ಸೃಷ್ಟವಾದ ಜಗತ್ತಿಗಿಂತಲೂ ಮೀರಿರುವ ಪರಮಪುರುಷನ ಮಹತ್ಸ್ವರೂಪವು ಈ ಋಕ್ಕಿನಲ್ಲಿ ವರ್ಣಿತವಾಗಿದೆ. ಜಗತ್ತಿನ ಪ್ರಮಾಣವೇನು ಮತ್ತು ಜಗತ್ತನ್ನೂ ಮೀರಿ ನಿಂತಿರುವ ಪರಮಪುರುಷನ ಪ್ರಮಾಣವೇನು ಇವುಗಳ ಅಂತರವೇನು ಎಂಬುದನ್ನು ಇಲ್ಲಿ ಸೂಚಿಸಿದೆ. ಆದರೆ ಈ ವಾಕ್ಯಗಳಿಗೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಸುಲಭವಲ್ಲ.

**ಏತಾವಾನ್ ಅಸ್ಯ ಮಹಿಮಾ—**

**ಅತೀತಾನಾಗತವರ್ತಮಾನರೂಪಂ ಜಗದ್ಯಾವದಸ್ತೀತಾವಾನ್ ಸರ್ವೋಽಪ್ಯಸ್ಯ ಪುರುಷಸ್ಯ ಮಹಿಮಾ ಸ್ವಕೀಯಸಾಮರ್ಥ್ಯ ವಿಶೇಷಃ । ನ ತು ತಸ್ಯ ವಾಸ್ತವಂ ಸ್ವರೂಪಂ ।**

ಭೂತ, ಭವಿಷ್ಯತ್ ಮತ್ತು ವರ್ತಮಾನಕಾಲಗಳಿಗೆ ಸಂಬಂಧಿಸಿದ ಸಕಲ ಜಗತ್ತೂ ಸಕಲ ಜಗದ್ವ್ಯವಹಾರಗಳೂ ಈ ಪರಮಪುರುಷನ ಮಹಿಮೆಯೇ ಆಗಿದೆ. ಆದರೆ ಅವೆಲ್ಲವೂ ಇವನ ವಸ್ತುಸ್ಥಿತಿಯಲ್ಲ ಎಂದು ಸಾಯಣರು ವಿವರಿಸಿದ್ದಾರೆ. ಅನಂತರ, **ಪಾದೋಽಸ್ಯ ವಿಶ್ವಾ ಭೂತಾನಿ** ಎಂಬುದಕ್ಕೆ ಸಕಲಭೂತಗಳೂ ಈ ಪರಮಪುರುಷನ ನಾಲ್ಕನೆಯ ಒಂದಂಶ ಮಾತ್ರ ಎಂದೂ ತಾತ್ಪರ್ಯವನ್ನು ಹೇಳಿದ್ದಾರೆ. ಜಗತ್ತು ಈಶ್ವರನ ಪೂರ್ಣಸ್ವರೂಪವನ್ನು ತೋರಿಸದಿದ್ದರೂ ಅವನ ಅಂಶವನ್ನಾದರೂ ಪ್ರಕಾಶಪಡಿಸುತ್ತದೆ ಎಂದು ಈ ವಾಕ್ಯವು ಸ್ಪಷ್ಟಪಡಿಸುತ್ತದೆ. ಆದುದರಿಂದ ಪ್ರಕಾಶಿತವಾಗಿರುವ ಈ ಈಶ್ವರಾಂಶವನ್ನು ಅಸತ್ಯವೆಂದು ಹೇಳಲಾಗುವುದಿಲ್ಲ. ಉತ್ಪನ್ನವಾದ ಯಾವ ಯಾವ ವಸ್ತುಗಳಿರುವುವೋ ಅವೆಲ್ಲಕ್ಕಿಂತಲೂ ಈಶ್ವರನು ಅತ್ಯಧಿಕನು. **ಅತೋ ಜ್ಯಾಯಾಂಶ್ಚ ಪೂರುಷಃ** ಎಂದು ಹೇಳುವ ವಾಕ್ಯವು ಒಂದರ ಸತ್ಯತ್ವವನ್ನೂ ಇನ್ನೊಂದರ ಅಸತ್ಯತ್ವವನ್ನೂ ಸೂಚಿಸುವುದಿಲ್ಲ. ಸತ್ಯಾತ್ಮಕವಾದ ಒಂದೇ ವಸ್ತುವಿನ ಅಂಶವಾದ ಜಗತ್ತು ವ್ಯಾಪ್ಯ ಮತ್ತು ಈಶ್ವರನು ವ್ಯಾಪಕ. **ನ ತು ತಸ್ಯ ವಾಸ್ತವಂ ಸ್ವರೂಪಂ** ಎಂಬ ಸಾಯಣರ ವಿವರಣೆಯ ತಾತ್ಪರ್ಯವೇನು ? ಜಗತ್ತು ಸತ್ಯವೇ ಅಥವಾ ಅಸತ್ಯವೇ ? ಸದಾತ್ಮಕವೇ ಅಥವಾ ಅಸದಾತ್ಮಕವೇ ? ಈ ವಿಷಯವನ್ನು ಉಪನಿಷದ್ವಾಕ್ಯಗಳು ಯಾವ ರೀತಿ ಪ್ರತಿಪಾದಿಸುತ್ತವೆ. ಇತ್ಯಾದಿ ವಿವರಣೆ-

ವನ್ನು ಮುಂದೆ **ನಾಸದಾಸೀತ್** ಎಂಬ ಸೂಕ್ತದ (ಋ ಸಂ. ೧೦-೧೨೯) ತಾತ್ಪರ್ಯವನ್ನು ಪರಿಶೀಲಿಸುವಾಗ ತಿಳಿಸಲಾಗುತ್ತದೆ. ಪ್ರಕೃತದಲ್ಲಿ **ಅತೋ ಜ್ಯಾಯಾಂಶ್ಚ ಪೂರುಷಃ** ಎಂಬ ವಾಕ್ಯದ ಅರ್ಥವನ್ನು ಶ್ರುತಿವಾಕ್ಯಗಳ ಆಧಾರದೊಡನೆ ವಿವರಿಸಲಾಗುತ್ತದೆ.

**ಪುರುಷ**ಶಬ್ದಾರ್ಥವನ್ನು ಹಿಂದೆ ಪೀಠಿಕೆಯಲ್ಲಿ ತಿಳಿಸಿದೆ. ಸಕಲ ಜಗತ್ತಿಗಿಂತಲೂ ಇವನು ಅಧಿಕನು ಎಂದಿರುವಾಗ ಆ ಜಗತ್ತಿನಲ್ಲಿ ಯಾವ ಯಾವ ಬ್ರಹ್ಮತತ್ತ್ವಗಳು ಅಡಗಿವೆ, ಅವುಗಳೆಲ್ಲಕ್ಕಿಂತಲೂ ಪುರುಷನು ಹೇಗೆ ಅಧಿಕನು ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ.

**ಕ್ಷರ, ಅಕ್ಷರ** ಎಂಬ ಎರಡೂ ಆತ್ಮವನ್ನು ನಿರ್ದೇಶಿಸುವ ಪದಗಳು. ನಶ್ವರವಾದ ದೇಹದೊಡನೆ ಕೂಡಿರುವ ಆತ್ಮನಿಗೆ ಕ್ಷರನೆಂದೂ ದೇಹಾತಿರಿಕ್ತನಾಗಿ ನಿತ್ಯನಾದ ಆತ್ಮನಿಗೆ ಅಕ್ಷರನೆಂದೂ ಹೇಳುವ ಸಂಪ್ರದಾಯವು ಉಪನಿಷತ್ತಿನ ಕಾಲದಿಂದಲೂ ಇರುತ್ತದೆ. **ಕ್ಷರಃ ಸರ್ವಾಣಿ ಭೂತಾನಿ** ಎಂದು ಸ್ಪಷ್ಟವಾದ ಸಕಲ ಜಗತ್ತೂ ಕ್ಷರಶಬ್ದದಿಂದ ನಿರ್ದಿಷ್ಟವಾಗುತ್ತದೆ. **ಕ್ಷರಶ್ಚ ಕ್ಷರತೀತಿ । ಕ್ಷರಃ ವಿನಾಶೀ ಇತಿ ಏಕೋ ರಾಶಿಃ** ನಾಶವನ್ನು ಹೊಂದುವ ಸಕಲ ಭೂತಗಳು ಎಂದು ಶಾಂಕರಭಾಷ್ಯವಿರುತ್ತದೆ. ಕಲ್ಪಾಂತದಲ್ಲಿ ಬ್ರಹ್ಮಾದಿಸ್ತಂಬಪರ್ಯಂತವೂ ನಾಶ ಹೊಂದುವ ಸಕಲವೂ ಕ್ಷರಸಂಜ್ಞಕವೆಂದು ಇದೇ ಅಭಿಪ್ರಾಯವನ್ನು ಸೂಚಿಸುತ್ತ ರಾಮಾನುಜಭಾಷ್ಯವೂ ಈ ಅರ್ಥ ವನ್ನೇ ಸಮರ್ಥಿಸುತ್ತದೆ. **ಬ್ರಹ್ಮಾದಿಸ್ತಂಬಪರ್ಯಂತಂ ಕ್ಷರಣಸ್ವಭಾವಾಚಿತ್ಸಂಸೃಷ್ಟಸರ್ವಭೂತಾನಿ** ಎಂದು ಸಕಲ ಜಗತ್ತನ್ನೂ ಇದು ನಿರ್ದೇಶಮಾಡುತ್ತದೆಯೆಂದು ತಿಳಿಸುತ್ತದೆ. **ಅಕ್ಷರ**ಶಬ್ದಕ್ಕೆ ಮಾತ್ರ ತಾತ್ಪರ್ಯ ಭೇದ ವಿರುತ್ತದೆ. ಅಚಿತ್ತಿನೊಡನೆ ಎಂದರೆ ದೇಹಾದಿಗಳೊಡನೆ ಕೂಡಿರುವ ಆತ್ಮನಿಗೆ **ಕ್ಷರ** ವೆಂದು ಹೆಸರಾದರೆ, ಅಚಿತ್ತಿ ನೊಡನೆ ಕೂಡದೆ ಇರುವ ಶುದ್ಧಾತ್ಮನಿಗೆ ಅಕ್ಷರವೆಂದು ಹೆಸರು । ಎಂದು ರಾಮಾನುಜಮತ. **ಅಚಿತ್ಸಂಸರ್ಗ-ವಿಯುಕ್ತಃ ಸ್ವೇನ ರೂಪೇಣಾವಸ್ಥಿತೋ ಮುಕ್ತಾತ್ಮಾ** ಎಂದು ಭಾಷ್ಯವಿರುತ್ತದೆ. ಶಂಕರಾಚಾರ್ಯರು ಅಕ್ಷರ ಶಬ್ದದ ಅರ್ಥವನ್ನು ವಿವರಿಸುತ್ತ **ವಿನಾಶರಹಿತಃ ಭಗವತಃ ಮಾಯಾಶಕ್ತಿಃ** ನಾಶರಹಿತವಾದ ಭಗವಂತನ ಮಾಯಾಶಕ್ತಿಯೆಂದು ತಿಳಿಸಿದ್ದಾರೆ. ಇದರಿಂದ **ಅಕ್ಷರ**ಶಬ್ದದಿಂದ ನಿರ್ದಿಷ್ಟವಾದ ತತ್ತ್ವವು ಪುರುಷಶಬ್ದದಿಂದ ನಿರ್ದಿಷ್ಟವಾದ ಪರಬ್ರಹ್ಮತತ್ತ್ವದಷ್ಟು ಸತ್ಯಾತ್ಮಕವಾಗಿಲ್ಲ ಎಂದು ಅಭಿಪ್ರಾಯವನ್ನು ತಿಳಿಸಿದಂತಾಯಿತು.

ಆದರೆ, ಅಕ್ಷರಶಬ್ದವು ಪರಬ್ರಹ್ಮವಾಚಕವಾಗಿಯೇ ಅನೇಕ ಕಡೆಗಳಲ್ಲಿ ಉಪಯುಕ್ತವಾಗಿದೆ. ಅಕ್ಷರ ಶಬ್ದವು ಪರಬ್ರಹ್ಮವಾಚಕವಾದರೆ, ಪುರುಷ, ಅಕ್ಷರ ಎಂಬ ಎರಡು ಪದಗಳೂ ನಿತ್ಯನಾದ ಬ್ರಹ್ಮನ ಪರ್ಯಾಯಪದಗಳೇ ಅಥವಾ ಅಲ್ಲವೇ ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ. ಪ್ರಕೃತವಾದ ಸೂಕ್ತದಲ್ಲಿ ಯಾವರೀತಿ **ಅತೋ ಜ್ಯಾಯಾಂಶ್ಚ ಪೂರುಷಃ** ಎಂದು ಹೇಳಿದೆಯೋ ಅದರಂತೆಯೇ, **ಉತ್ತಮಃ ಪುರುಷಸ್ತ್ವನ್ಯಃ** ಎಂದು ಗೀತೆಯಲ್ಲಿ ತಿಳಿಸಿದೆ. ಈ ವಾಕ್ಯಗಳು ಪುರುಷನ ಸರ್ವೋತ್ತಮತ್ವವನ್ನು ತಿಳಿಸುತ್ತದೆ. ಆದರೆ, ಈ ಮಹಾಪುರುಷನ ಪಾದವಾದ ಜಗತ್ತು ಸತ್ಯಾತ್ಮಕವೇ ಅಥವಾ ಅಸತ್ಯಾತ್ಮಕವೇ ? ಸತ್ಯಾತ್ಮಕವಾದರೆ, ಸಾಯಣರು **ನ ತು ವಾಸ್ತವಂ ಸ್ವರೂಪಂ** ಎಂದು ವಿವರಿಸಿರುವುದು ಅಷ್ಟು ಸರಿಯಾಗಿರುವುದಿಲ್ಲ. ಅಥವಾ ಅಸತ್ಯಾತ್ಮಕವಾದರೆ, ಸತ್ಯರೂಪದ ಪುರುಷನ ಅಂಶವಾಗಲಾರದು. ಈ ರೀತಿ ಪರಸ್ಪರ ವಿರೋಧವು ಕಾಣುತ್ತದೆ. ಆದುದರಿಂದ ಪ್ರಕೃತದಲ್ಲಿ ವರ್ಣಿತನಾಗಿರುವ ಪುರುಷ, ಇವನ ಮಹಿಮೆಯನ್ನು ಪ್ರಕಟಿಸುವ ಜಗತ್ತು ಇವುಗಳ ಸಂಬಂಧವೇನು, ಅಂತರವೇನು ಎಂಬುದನ್ನು

ತಿಳಿಯಲು ಉಳಿದ ಉಪನಿಷತ್ತು ಮತ್ತು ಭಗವದ್ಗೀತಾವಾಕ್ಯಗಳನ್ನು ಪರಿಶೀಲಿಸಿ ಅಲ್ಲಿಯ ವರ್ಣನೆಗೂ ಪ್ರಕೃತ ಸೂಕ್ತದಲ್ಲಿ ವರ್ಣಿಸಿರುವುದಕ್ಕೂ ಸಾಮಂಜಸ್ಯವಿರುವುದೇ ಎಂಬುದನ್ನು ಪರಿಶೀಲಿಸಬೇಕಾಗಿರುತ್ತದೆ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥**

(ಭ. ಗೀ. ೧೦-೪೨)

ಎಲೈ ಅರ್ಜುನನೇ, ಈ ಸಕಲ ವಿಜ್ಞಾನಗಳನ್ನೂ ಹೊಂದಿ ನಿನಗೆ ಆಗತಕ್ಕ ಪ್ರಯೋಜನವು ತಾನೇ ಏನಿದೆ? ನೀನು ಒಂದು ವಿಷಯವನ್ನು ಮಾತ್ರ ಪೂರ್ಣವಾಗಿ ತಿಳಿದರೆ ಸಾಕು. ಒಂದೇ ಮಾತಿನಲ್ಲಿ ಹೇಳಬೇಕಾದರೆ, ನಾನು ನನ್ನ ಒಂದೇ ಅಂಶದಿಂದ ಈ ಜಗತ್ತನ್ನೆಲ್ಲ ವ್ಯಾಪಿಸಿ ಮತ್ತೂ ಉಳಿದಿರುವೆನು ಎಂಬ ಗೀತಾವಾಕ್ಯವು ಪ್ರಕೃತವಾದ ಋಕ್ಕಿನ ತಾತ್ಪರ್ಯವನ್ನು ತಿಳಿಸುತ್ತದೆ ಎಂದು ಶಂಕರಾಚಾರ್ಯರು ಈ ಶ್ಲೋಕಕ್ಕೆ ತಾತ್ಪರ್ಯವನ್ನು ಹೇಳುವಾಗ ಈ ರೀತಿ ತಿಳಿಸಿದ್ದಾರೆ.

**ವಿಷ್ಟಭ್ಯ ವಿಶೇಷತಃ ಸ್ತಂಭನಂ ಕೃತ್ವಾ ಇದಂ ಕೃತ್ಸ್ನಂ ಜಗತ್ ಏಕಾಂಶೇನ ಏಕಾವಯವೇನ ಸರ್ವಭೂತಸ್ವರೂಪೇಣ ಇತ್ಯೇತತ್ । ತಥಾ ಚ ಮಂತ್ರವರ್ಣಃ ಪಾದೋಽಸ್ಯ ವಿಶ್ವಾ ಭೂತಾನಿ ॥**

(ಭ. ಗೀ. ೧೦-೪೨. ಶ. ಭಾ.)

**ಪಾದೋಽಸ್ಯ ವಿಶ್ವ ಭೂತಾನಿ** ಎಂಬ ಮಂತ್ರದಿಂದ ಯಾವ ತತ್ತ್ವವು ವರ್ಣಿತವಾಗಿದೆಯೋ, ಅದೇ ತತ್ತ್ವವು ಇಲ್ಲೂ ವರ್ಣಿತವಾಗಿದೆ. ಸಕಲ ಜಗತ್ತೂ ನನ್ನ ಅಂಶವಾಗಿದೆ. ನನ್ನ ಒಂದು ಅವಯವ ಎಂದು ಹೇಳಿರುವಾಗ ಸತ್ಯಾತ್ಮಕವಾದ ಪರಬ್ರಹ್ಮನ ಅವಯವ ಎಂದೇ ಹೇಳಿದರೆ ಆಗ ಜಗತ್ತೂ ಸತ್ಯರೂಪವುಳ್ಳದ್ದೇ ಎಂದು ಇದರಿಂದ ಹೇಳಿದಂತಾಯಿತು. ಪ್ರಕೃತವಾದ ಈ ಮಂತ್ರವೇ ಛಾಂದೋಗ್ಯೋಪನಿಷತ್ತಿನಲ್ಲಿ ಪಠಿತವಾಗಿರುತ್ತದೆ. **ಪಾದೋಽಸ್ಯ ವಿಶ್ವಾ ಭೂತಾನಿ** ಎಂಬ ಉಪನಿಷತ್ತಿನ ಭಾಗಕ್ಕೆ ಶಂಕರಾಚಾರ್ಯರ ಭಾಷ್ಯವು ಈ ರೀತಿ ಇರುತ್ತದೆ.

**ತಾವಾನಸ್ಯ ಮಹಿಮಾ ಗಾಯತ್ರ್ಯಾಖ್ಯಸ್ಯ ಬ್ರಹ್ಮಣಃ ಸಮಸ್ತಸ್ಯ ಮಹಿಮಾ ವಿಭೂತಿವಿಸ್ತಾರಃ । ಗಾಯತ್ರೀ ವಾ ಇದಂ ಸರ್ವಂ** ಎಂಬ ಯಾವ ವಾಕ್ಯದಿಂದ ಸಕಲ ಜಂಗಮಸ್ಥಾವರರೂಪವಾದ ಪ್ರಪಂಚವೂ ಗಾಯತ್ರಿಯ ವಿಭೂತಿಯೆಂದು ಹೇಳಿರುತ್ತದೆಯೋ ಅದೇ ಸನ್ನಿವೇಶವು ಗಾಯತ್ರಿಯೇ ಪರಬ್ರಹ್ಮನೆಂದೂ ತಿಳಿಸಿದೆ. (ಗಾಯತ್ರಿಯೇ ಪರಬ್ರಹ್ಮವಾಚಕವಾದ ಪದವೆಂದು ಹಿಂದೆ ತಿಳಿಸಿದೆ). ಗಾಯತ್ರಿಯು ನಾಲ್ಕು ಪಾದಗಳುಳ್ಳದ್ದು. **ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ** ಎಂಬ ವಾಕ್ಯವು ಈ ನಾಲ್ಕು ಪಾದಗಳುಳ್ಳ ಗಾಯತ್ರಿಯ ಮಹಿಮೆಯು ಎಂದು ತಿಳಿಸಿದ್ದಾರೆ. ಆದರೆ ನಾಲ್ಕು ಪಾದಗಳುಳ್ಳ ಗಾಯತ್ರಿಯ ಮೂರು ಪಾದಗಳೂ ಮೂರು ಲೋಕಗಳನ್ನೂ ವ್ಯಾಪಿಸಿ ನಾಲ್ಕನೆಯ ಪಾದವು ಲೌಕಿಕ ಪ್ರತ್ಯಕ್ಷಕ್ಕೆ ಅಗೋಚರವಾಗಿದೆಯೆಂದು ಹಿಂದೆ ಗಾಯತ್ರೀ ಪ್ರಕರಣದಲ್ಲಿ ತಿಳಿಸಿದೆ. (ಭಾಗ 17) ಪ್ರಕೃತವಾದ ಋಕ್ಕಿನಲ್ಲಿ ಸಕಲ ಪ್ರಪಂಚವೂ ಈ ಗಾಯತ್ರ್ಯಾಖ್ಯವಾದ ಬ್ರಹ್ಮನ ಒಂದು ಪಾದವನ್ನು ಮಾತ್ರ ಪ್ರತಿಬಿಂಬಿಸುತ್ತದೆ ಎಂದು ತಿಳಿಸಿದೆ. ಇನ್ನೊಂದು ವಿಷಯವನ್ನು ಮೇಲೆ ಉದಾಹೃತವಾದ ಉಪನಿಷದ್ವಾಕ್ಯದಿಂದ ಅರಿಯಬೇಕು. **ತಾವಾನಸ್ಯ ಮಹಿಮಾ ಅತೋ** ಜ್ಯಾಯಾಂಶ್ಚ

**ಪೂರುಷಃ** ಎಂಬ ವಾಕ್ಯಕ್ಕೆ ಋಕ್ಸಂಹಿತೆಯಲ್ಲಿ **ಅಸ್ಯ** ಎಂಬ ಪದಕ್ಕೆ **ಪುರುಷಸ್ಯ** ಎಂದರ್ಥ ಮಾಡಿದೆ. ಎಂದರೆ ಪುರುಷನ ಮಹಿಮೆ ಮತ್ತು ಪುರುಷನ ನಾಲ್ಕನೇ ಒಂದು ಭಾಗ ಎಂದು ತಿಳಿಸಿದೆ. ಆದರೆ ಉಪನಿಷದ್ವಾಕ್ಯದಲ್ಲಿ **ಅಸ್ಯ** ಎಂಬ ಪದಕ್ಕೆ **ಗಾಯತ್ರ್ಯಾಖ್ಯಸ್ಯ ಬ್ರಹ್ಮಣಃ** ನಾಲ್ಕು ಪಾದಗಳುಳ್ಳ ಬ್ರಹ್ಮನ ನಾಲ್ಕನೇ ಒಂದು ಭಾಗ ಮತ್ತು ಬ್ರಹ್ಮನನ್ನು ಪ್ರತಿಬಿಂಬಿಸುವ ಗಾಯತ್ರಿಗಿಂತಲೂ ಪುರುಷನು ಅಧಿಕನು ಎಂದು ತಿಳಿಸಿದೆ.

ನಾಲ್ಕು ಪಾದಗಳುಳ್ಳ ಗಾಯತ್ರಿಯೇ ಪರಬ್ರಹ್ಮವಾಚಕವಾದ ಪದವೆಂದು ತಿಳಿಸಿರುವಾಗ ಇದಕ್ಕಿಂತಲೂ ಪುರುಷನು ಅಧಿಕನೆಂದರೆ ಬ್ರಹ್ಮನಿಗಿಂತಲೂ ಪುರುಷನು ಅಧಿಕನೆಂದರೆ ಬ್ರಹ್ಮನಿಗಿಂತಲೂ ಅಧಿಕನು ಎಂದಂತಾಯಿತು. ಆದರೆ ಇಲ್ಲಿ **ವಾಚಾರಂಭಣಮಾತ್ರಾತ್** ಎಂದಿರುವುದರಿಂದ ಕೇವಲ ವ್ಯಾವಹಾರಿಕವಾದ ಪ್ರಪಂಚದಲ್ಲಿ ಮಾತ್ರ ವ್ಯಾಪಿಸಿರುವ ಮತ್ತು ಪ್ರಪಂಚರೂಪದಲ್ಲಿ ಪರಿಣಾಮವನ್ನು ಹೊಂದಿರುವ ಬ್ರಹ್ಮನಿಗಿಂತಲೂ ಅಧಿಕವೆಂದು ಹೇಳಿದಂತಾಗುತ್ತದೆ. ಎಂದರೆ ಬ್ರಹ್ಮನ ಮಹಿಮೆಯು ಎರಡು ವಿಧವಾಗಿರುತ್ತದೆ. ಒಂದು ವ್ಯಕ್ತರೂಪ ಮತ್ತು ಇನ್ನೊಂದು ಅವ್ಯಕ್ತರೂಪವಾದುದು.

**ದ್ವೇ ವಾ ಬ್ರಹ್ಮಣೋ ರೂಪೇ ಮೂರ್ತಂ ಚಾ ಮೂರ್ತಂ ಚ, ಮರ್ತ್ಯಂ ಚಾಮೃತಂ ಚ, ಸ್ಥಿತಂ ಚ ಯಚ್ಚ ಸಚ್ಚ ತ್ಯಚ್ಚ ।**

(ಬೃ. ಉ. ೨-೩-೧)

ಬ್ರಹ್ಮನ ರೂಪಗಳೆರಡು. ಮೂರ್ತ ಮತ್ತು ಅಮೂರ್ತ. (ರೂಪವುಳ್ಳದ್ದು ಮತ್ತು ರೂಪರಹಿತವಾದುದು). ಅಲ್ಲದೇ, ಮರಣಧರ್ಮಕ್ಕೆ ಪಾತ್ರವಾದುದು ಮತ್ತು ಮರಣಧರ್ಮರಹಿತವಾದುದು. ಸ್ಥಿರವಾಗಿ ನಿಂತಿರುವುದು ಮತ್ತು ಚಲನಾತ್ಮಕವಾದುದು. ವ್ಯಾವಹಾರಿಕ ಮತ್ತು ಪಾರಮಾರ್ಥಿಕ. **ಏತಾವಾನ್** ಎಂಬ ಪದವು ಮೂರ್ತರೂಪದಲ್ಲಿ ವ್ಯಕ್ತವಾದ ಪರಮಾತ್ಮನ ಸ್ವರೂಪವನ್ನು ತಿಳಿಸುತ್ತದೆ. **ಪುರುಷಃ** ಎಂಬುದು ಅಮೂರ್ತರೂಪವನ್ನು ತಿಳಿಸುತ್ತದೆ. ಜಗತ್ತು ಮರ್ತ್ಯ, ಪುರುಷನು ಅಮರ್ತ್ಯ ; ಜಗತ್ತು ಚಲನಾತ್ಮಕ, ಪುರುಷನು ಸ್ಥಿರನು. ಎರಡೂ ಇವನ ಬೇರೆ ಬೇರೆ ರೂಪಗಳು. ಆದುದರಿಂದ **ವಾಚಾಮಗೋಚರ**ನಾದ ಪರಮಾತ್ಮನನ್ನು ವರ್ಣಿಸುವಾಗ ಕೇವಲ ನಿಷೇಧರೂಪದಲ್ಲಿಯೇ ಇರುತ್ತದೆ. ಈ ಎರಡು ರೂಪಗಳ ವರ್ಣನವೂ ಉಪನಿಷದಾದಿಗಳಲ್ಲಿ ವಿಸ್ತೃತವಾಗಿಯೇ ಇರುತ್ತದೆ. ಮರ್ತ್ಯವೂ, ವಾಕ್ಕಿನಿಂದ ವರ್ಣಿಸಲ್ಪಡಲು ಯೋಗ್ಯವಾದುದೂ, ಬ್ರಹ್ಮಾಂಶಭೂತವಾದುದೂ ಆದ ಜಗತ್ತಿನ ವರ್ಣನವು ಎಲ್ಲಿರುವುದೋ ಅದೇ ಸನ್ನಿವೇಶದಲ್ಲಿ ಇಂದ್ರಿಯಪ್ರತ್ಯಕ್ಷಕ್ಕೆ ಮೀರಿದ ಮತ್ತು ವರ್ಣನಾತೀತವಾದ ಪರಬ್ರಹ್ಮನ ಪ್ರಶಂಸೆಯೂ ಇರುತ್ತದೆ. ವರ್ಣನಾತೀತವಾದ ಬ್ರಹ್ಮನನ್ನು ಪ್ರಶಂಸಿಸುವುದೂ ಅದರ ವರ್ಣನವಲ್ಲವೇ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ, ಅದು ನಿಷೇಧರೂಪದಲ್ಲಿಯೇ ಇರುತ್ತದೆ. ಈಶ್ವರಾಂಶವಾದ ಜಗತ್ತಿಗೂ ಜಗದತಿರಿಕ್ತನಾದ ಪರಮಾತ್ಮನಿಗೂ ಇರುವ ಅಂತರವನ್ನು ತೋರಿಸಿ ಜಗದತಿರಿಕ್ತನಾದರೂ ಈಶ್ವರನು ಜಗತ್ತನ್ನೆಲ್ಲ ವ್ಯಾಪಿಸಿದ್ದಾನೆಂಬ ಪ್ರಶಂಸೆಯುಳ್ಳ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗುತ್ತದೆ. ಈ ವಾಕ್ಯಗಳು ಈಶ್ವರನ ವಿರುದ್ಧಸ್ವರೂಪವನ್ನು ವರ್ಣಿಸಿದರೂ ಲೌಕಿಕಪ್ರತ್ಯಕ್ಷಕ್ಕೆ ಅಸಮಂಜಸವಾಗಿ ಕಾಣುವ ಈ ವಿರುದ್ಧಸ್ವರೂಪವನ್ನು ಹೊಂದಿರುವ ಈಶ್ವರನ ಮಹತ್ತ್ವವನು ಪ್ರಶಂಸಿಸುವುದಾಗಿವೆ.

**ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥**

(ಈಶ. ೫)

ಈ ಪರವಸ್ತುವು ಸಂಚಾರಾತ್ಮಕವಾದುದು(ಜಗದ್ರೂಪದಲ್ಲಿ) ; ಸಂಚಾರರಹಿತವಾದುದು (ಜಗದತಿರಿಕ್ತವಾದ ಪುರುಷ ರೂಪದಲ್ಲಿ). ಇದು ಬಹುದೂರಸ್ಥಿತಿಯುಳ್ಳದ್ದು ಆದರೂ ಬಹಳ ಹತ್ತಿರವಿರತಕ್ಕದ್ದು. ಇದು ಜಗತ್ತಿನಲ್ಲೆಲ್ಲ ಅಂತರ್ಗತವಾಗಿದೆ-ಜಗತ್ತನ್ನು ಮೀರಿರುತ್ತದೆ. ಇದೇ ವರ್ಣನವು ಭಗವದ್ಗೀತೆಯಲ್ಲಿ ಈ ರೀತಿ ಇರುತ್ತದೆ.

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥**

(ಭ. ಗೀ. ೧೩-೧೫)

ಪರಮಪುರುಷನು ಸಕಲ ಭೂತಗಳ ಅಂತರ್ಯಾಮಿಯಾಗಿಯೂ ಅವುಗಳಿಗಿಂತ ಅತಿರಿಕ್ತನಾಗಿಯೂ, ಚರಾತ್ಮಕ ನಾಗಿಯೂ, ಅಚರಾತ್ಮಕನಾಗಿಯೂ, ಅವುಗಳಿಗೆ ಅತ್ಯಂತ ಸಮೀಪದಲ್ಲಿದ್ದರೂ ಅತ್ಯಂತ ದೂರಸ್ಥನಾಗಿಯೂ ಇದ್ದಾನೆ. ಇದೇ ವಿಷಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂ ಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್। ತದನು ಪ್ರವಿಶ್ಯ। ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂ ಚ ॥**

(ತೈ. ಉ. ೨-೬)

ಜಗತ್ತನ್ನು ಸೃಜಿಸಬೇಕೆಂದಿಚ್ಛಿಸಿ ಬ್ರಹ್ಮನು ತಪಸ್ಸನ್ನಾಚರಿಸಿದನು ಮತ್ತು ಸಕಲ ಜಗತ್ತನ್ನೂ ಉತ್ಪನ್ನಮಾಡಿದನು. ನಂತರ ಅದನ್ನು ಪ್ರವೇಶಮಾಡಿದನು. ಆಗ ಸತ್ಯಾತ್ಮಕನೂ ತದತಿರಿಕ್ತನೂ ಆದನು. ವರ್ಣನೆಗೆ ವಿಷಯನೂ ವರ್ಣನಾತೀತನೂ ಆದನು. ಆಧಾರವುಳ್ಳವನೂ ನಿರಾಧಾರನೂ ಆದನು. ವಿಜ್ಞಾನಾತ್ಮನೂ ಅವಿಜ್ಞಾನಾತ್ಮನೂ ಆದನು. ಸತ್ಯ ಮತ್ತು ಅಸತ್ಯಾತ್ಮಕನೂ ಆದನು. ಸಮಸ್ತವೂ ಅವನೇ ಆದನು. ಎಂಬ ಈ ಪ್ರಕರಣದಲ್ಲಿ **ಸತ್ಯ** ಪದವು ಬ್ರಹ್ಮವಾಚ್ಯಗಿದೆ. ಆದರೆ ಬ್ರಹ್ಮನು ಈ ಸತ್ಯಕ್ಕಿಂತಲೂ ಅಧಿಕನು ಎಂದು ಹೇಳುವ ಸನ್ನಿವೇಶವೂ ಇರುತ್ತದೆ. ಉದಾಹರಣೆಗೆ

**ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ ।**

(ಬೃ. ಉ. ೨-೧-೨೦)

ಎಂಬಲ್ಲಿ ಸತ್ಯ ಮತ್ತು ಪರಬ್ರಹ್ಮ ಎಂಬ ಎರಡು ತತ್ತ್ವಗಳಿಗೂ ಇರುವ ವ್ಯತ್ಯಾಸವನ್ನು ತೋರಿಸಿ ಪರಬ್ರಹ್ಮನು ಸತ್ಯಕ್ಕಿಂತಲೂ ಪರತರವಾದ ಸತ್ಯವೆಂದು ವರ್ಣಿಸಿದೆ. ಈ ಪರಬ್ರಹ್ಮನಲ್ಲಿ ವಿವೇಕ, ಅವಿವೇಕ, ತೇಜಸ್ಸು ಮತ್ತು ತಮಸ್ಸು ಇತ್ಯಾದಿ ವಿರುದ್ಧ ಗುಣಗಳೆಲ್ಲವೂ ಅಡಕವಾಗಿವೆ.

**ದ್ವೇ ಅಕ್ಷರೇ ಬ್ರಹ್ಮಪರೇ ತ್ವನಂತೇ ವಿದ್ಯಾವಿದ್ಯೇ ನಿಹಿತೇ ಯತ್ರ ಗೂಢೇ ।**
**ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ ॥**

(ಶ್ವೇ. ಉ. ೫-೧)

ನಾಶರಹಿತವೂ, ಅನಂತವೂ ಆದ ಪರಬ್ರಹ್ಮನಲ್ಲಿ ಎರಡು ತತ್ತ್ವಗಳು ಅಡಗಿವೆ. ಆ ಬ್ರಹ್ಮನಲ್ಲಿ ವಿದ್ಯೆ ಮತ್ತು ಅವಿದ್ಯೆ ಎಂಬೆರಡೂ ಗೂಢವಾಗಿವೆ. ಅವುಗಳಲ್ಲಿ ಅವಿದ್ಯೆಯು ನಾಶವನ್ನು ಹೊಂದತಕ್ಕದ್ದು ಮತ್ತು ವಿದ್ಯೆಯು

ನಿತ್ಯನಾದುದು. ಈ ವಿದ್ಯೆ ಮತ್ತು ಅವಿದ್ಯೆ ಎಂಬೆರಡು ತತ್ತ್ವಗಳನ್ನು ನಿಯಮನ ಮಾಡತಕ್ಕವನು ಪರಬ್ರಹ್ಮನು— ಮತ್ತು ಈ ಎರಡು ರೂಪಗಳನ್ನು ಹೊಂದಿರುವವನು.

**ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇನೈ-ವಾಯತನೇ ನೈಕತರಮನ್ವೇತಿ ॥**

(ಪ್ರಶ್ನೆ. ೫-೨)

ಎಲೈ ಸತ್ಯಕಾಮನೇ, ಓಂ ಎಂಬ ಪ್ರಣವವಾಚ್ಯನಾದ ಪರಬ್ರಹ್ಮನ ಸ್ವರೂಪಗಳೆರಡು. ಅವು ಪರ ಮತ್ತು ಅಪರ ಎಂದು ಎರಡು ವಿಧವಾಗಿವೆ. ಈ ಪ್ರಣವದ ಆಧಾರದ ಮೇಲೆ ಈ ಪರಬ್ರಹ್ಮನನ್ನುಪಾಸಿಸಬೇಕು ಎಂದು ಉಪದೇಶಿಸಿ ಯಾವ ರೀತಿ ಪ್ರಣವದ **ಅ ಉ** ಮತ್ತು **ಮ** ಎಂಬ ಮೂರು ಅಕ್ಷರಗಳು ಲೋಕತ್ರಯವನ್ನು ಪ್ರತಿಬಿಂಬಿಸುವುವೋ ಅದರಂತೆಯೇ ಆ ಮೂರು ವರ್ಣಗಳ ಆಧಾರದ ಮೇಲೆ ಪರಬ್ರಹ್ಮನನ್ನುಪಾಸಿಸಿದರೆ ಪೂರ್ಣವಾದ ಬ್ರಹ್ಮಜ್ಞಾನವು ಲಭಿಸುತ್ತದೆಂದು ಹೇಳಿದೆ. ಈ ಮೂರು ಅಕ್ಷರಗಳೂ ಬ್ರಹ್ಮನ ಮೂರು ತ್ರಿಲೋಕಾತ್ಮವಾದ ಮೂರು ಸ್ವರೂಪವನ್ನು ತಿಳಿಸುತ್ತವೆಯೆಂದು ಈ ರೀತಿಯಾದ ವಿವರವಿರುತ್ತದೆ. **ಅತೋ ಜ್ಯಾಯಾಂಶ್ಚ ಪೂರುಷಃ** ಎಂದು ವರ್ಣಿತನಾಗಿರುವ ಪರಮಪುರುಷನ ಸಾಕ್ಷಾತ್ಕಾರಕ್ಕೆ ಈ ಮೂರು ವಿಧವಾದ ಸ್ವರೂಪದ ಅರಿವು ಬೇಕೆಂದು ತಿಳಿಸಿದೆ. ಯಾವ ಜಗತ್ತು ಈ ಪುರುಷನ ಮಹತ್ತ್ವವನ್ನು ಪ್ರಕಾಶಪಡಿಸುವುವೋ ಅವು ಓಂಕಾರದ ಅಂಶಮಾತ್ರ. ಹೇಗೆಂದರೆ—

**ಸ ಯದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿ-ಸಂಪದ್ಯತೇ । ತಮೃಚೋ ಮನುಷ್ಯಲೋಕಮುಪನಯಂತೇ, ಸ ತತ್ರ ತಪಸಾ ಬ್ರಹ್ಮ-ಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ ॥**

(ಪ್ರಶ್ನೆ. ೫-೩)

ತ್ರಿವರ್ಣಾತ್ಮಕವಾದ ಈ ಪ್ರಣವದಲ್ಲಿ ಯಾರು **ಅ** ಎಂಬ ಒಂದು ವರ್ಣದ ಆಧಾರದ ಮೇಲೆ ಮಾತ್ರ ಉಪಾಸಿಸುವನೋ ಅವನು ಮನುಷ್ಯಲೋಕವಾದ ಪೃಥ್ವಿಗೆ ಪುನಃ ಹಿಂತಿರುಗುತ್ತಾನೆ. ಋಙ್ಮಂತ್ರವು ಅವನನ್ನು ಇಲ್ಲಿಗೆ ಕರೆದೊಯ್ದು ಮಹಿಮೆಯನ್ನು ಅಧಿಕಪಡಿಸುತ್ತದೆ. ಅವನು ತನ್ನ ಮಾಹಾತ್ಮ್ಯದಿಂದ ಕೂಡಿ ತಪಸ್ಸು, ಬ್ರಹ್ಮಚರ್ಯ ಮತ್ತು ಶ್ರದ್ಧೆ ಎಂಬ ಸಂಪತ್ತುಗಳಿಂದ ಕೂಡಿ ತನ್ನ ಮಹಿಮೆಯನ್ನು ವೃದ್ಧಿಪಡಿಸಿಕೊಳ್ಳುತ್ತಾನೆ.

**ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽಂತರಿಕ್ಷಂ ಯಜುರ್ಭಿರುನ್ನೀಯತೇ ಸೋಮಲೋಕಂ । ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ ॥**

ಪುನಃ ಪ್ರಣವದ ಎರಡು ಅಕ್ಷರಗಳ (ಅ+ಉ) ಆಧಾರದ ಮೇಲೆ ಮಾತ್ರ ಉಪಾಸನೆಯನ್ನು ಮಾಡಿದರೆ ಆಗ ಅವುಗಳ ಸಹಾಯದಿಂದ ಮಾನಸಿಕವಾದ ಶುದ್ಧಿಯನ್ನು ಹೊಂದಿ ಅಂತರಿಕ್ಷಸ್ಥವಾದ ಸೋಮಲೋಕವನ್ನು ಸೇರುತ್ತಾನೆ. ಅಲ್ಲಿ ಸೌಖ್ಯವನ್ನನುಭವಿಸಿ ಪುನಃ ಇಲ್ಲಿಗೆ ಹಿಂತಿರುಗುತ್ತಾನೆ.

**ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ । ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ**

**ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವಘನಾತ್ಪ-ರಾತ್ಪರಂ ಪುರಿಶಯಂ ಪುರುಷಮೀಕ್ಷತೇ ।**

(ಪ್ರಶ್ನೆ. ೫-೫)

ಪರಮಪುರುಷನನ್ನು ಪ್ರಣವದ ಮೂರು ಮಾತ್ರೆಗಳ ಆಧಾರದ ಮೇಲೂ ಉಪಾಸನೆಮಾಡಿದರೆ ಆಗ ಆದಿತ್ಯನ ತೇಜಸ್ಸಿನೊಡನೆ ಸೇರಿಕೊಳ್ಳುತ್ತಾನೆ. ಸರ್ಪವು ತನ್ನ ಪೊರೆಯಿಂದ ಬಿಡುಗಡೆಯನ್ನು ಹೊಂದುವಂತೆ ಇವನು ಪೂರ್ಣವಾಗಿ ಬಿಡುಗಡೆಯನ್ನು ಹೊಂದುತ್ತಾನೆ. ಸಾಮಮಂತ್ರಗಳು ಇವನನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತವೆ. ಅಲ್ಲಿಂದ ಅವನು ಹೃದಯಾಂತರ್ಗತನಾದ ಪರಮಪುರುಷನನ್ನು ವೀಕ್ಷಿಸುತ್ತಾನೆ. ಈ ಸಂದರ್ಭದಲ್ಲಿ ಕೆಳಗಿನ ಮಂತ್ರಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ. ಪುರುಷನ ಮರ್ತ್ಯಾತ್ಮಕವಾದ ಲೋಕವ್ಯಾಪ್ತಿಯನ್ನೂ ಅಮೃತತ್ವವನ್ನೂ ನಿರ್ದೇಶಿಸುತ್ತವೆ. ಹೇಗೆಂದರೆ,

**ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।**
**ಕ್ರಿಯಾಸು ಬಾಹ್ಯಾಭ್ಯಂತರಮಧ್ಯಮಾಸು ಸಮ್ಯಕ್ಪ್ರಯುಕ್ತಾಸು ನ ಕಂಪತೇ ಜ್ಞಃ ॥**

(ಪ್ರಶ್ನೆ. ೫-೬)

ಪರಮಪುರುಷನನ್ನು ಪ್ರತಿಬಿಂಬಿಸುವ ಪ್ರಣವದಲ್ಲಿ ಅಡಕವಾಗಿರುವ ಮೂರು ಮಾತ್ರೆಗಳಲ್ಲಿ ಯಾವುದನ್ನಾದರೂ ಪ್ರತ್ಯೇಕವಾಗಿ ಉಪಾಸಿಸಿ ಅದರ ಆಧಾರದ ಮೇಲೆ ಪರಮಪುರುಷನನ್ನು ಉಪಾಸಿಸಿದರೆ ಆಗ ಅವು ಮರಣಧರ್ಮಕ್ಕೆ ಒಳಪಟ್ಟ ಪುರುಷಾಂಶದ ಸಾಕ್ಷಾತ್ಕಾರವನ್ನು ಮಾತ್ರ ಮಾಡಿಸುತ್ತವೆ. ಆದರೆ ಅವನ್ನು ಪೂರ್ಣವಾಗಿ ಉಪಾಸಿಸಿ ಅವುಗಳ ಸಮನ್ವಯದ ಸಹಾಯದಿಂದ ಪುರುಷನನ್ನು ಆರಾಧಿಸಿದರೆ ಆಗ ಪ್ರಾಜ್ಞನು ಕಂಪಿಸುವುದಿಲ್ಲ.

**ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸಾಮಭಿರ್ಯತ್ಕವಯೋ ವೇದಯಂತೇ ।**
**ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್ ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ ॥**

(ಪ್ರಶ್ನೆ. ೫-೭)

ಋಙ್ಮಂತ್ರಗಳ ಸಹಾಯದಿಂದ ಪರಮಪುರುಷನ ಅಂಶವಾದ ಈ ಲೋಕವನ್ನೂ ಯಜುರ್ಮಂತ್ರಗಳಿಂದ ಅಂತರಿಕ್ಷವನ್ನೂ ಸಾಮಮಂತ್ರಗಳ ಸಹಾಯದಿಂದ ಕವಿದೃಷ್ಟವಾದ ಸಾಯುಜ್ಯಲೋಕವನ್ನೂ ಹೊಂದುತ್ತಾನೆ. ಇವೆಲ್ಲವೂ ಪುರುಷನ ಮಹಿಮೆಯನ್ನು ಪ್ರಕಾಶಪಡಿಸುವ ಜಗತ್ತು. ಮತ್ತು ಇವೆಲ್ಲಕ್ಕಿಂತಲೂ ಅಧಿಕವಾದ ದಿವ್ಯಾಂಶವಿರುತ್ತದೆ. ಸಕಲಕ್ಕೂ ಆಯತನವಾದ ಪ್ರಣವದ ಉಪಾಸನೆಯಿಂದ ಜ್ಞಾನಿಯು ಶಾಂತಾತ್ಮಕವೂ, ಜರಾರಹಿತವೂ, ಅಮರ್ತ್ಯವೂ, ಭಯರಹಿತವೂ, ಪರಾತ್ಪರವೂ ಆದ ದಿವ್ಯಾಂಶವನ್ನು ಸಾಕ್ಷಾತ್ಕರಿಸುತ್ತಾನೆ ಎಂದು ಪರಬ್ರಹ್ಮನ ಎರಡು ಸ್ವರೂಪಗಳೂ ಅವುಗಳನ್ನು ಸಾಕ್ಷಾತ್ಕರಿಸುವ ಕ್ರಮವೂ ವರ್ಣಿತವಾಗಿರುತ್ತದೆ.

ಮರಣಧರ್ಮವುಳ್ಳ ಜಗತ್ತಿಗಿಂತಲೂ ಅಧಿಕನಾದ ಪರಮಪುರುಷನ ದಿವ್ಯಸ್ವರೂಪವೇನು ? ಈ ಪುರುಷನನ್ನು ಪ್ರಶಂಸಿಸುವ ಇತರ ನಾಮಗಳಾವುವು ? ಅವೆಲ್ಲವೂ ಒಂದೇ ಅರ್ಥದಲ್ಲಿ ಪ್ರಯುಕ್ತವಾಗಿವೆಯೇ ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿರುತ್ತದೆ.

ಪುರುಷನ ಜಗದತಿರಿಕ್ತತ್ವವು ಮುಂಡಕೋಪನಿಷತ್ತಿನಲ್ಲಿ ಈ ರೀತಿ ವರ್ಣಿತವಾಗಿದೆ—

**ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥**

(ಮು. ಉ. ೨-೧-೨)

ದಿವ್ಯಲೋಕಸ್ಥಿತನೂ, ರೂಪರಹಿತನೂ ಆದ ಪುರುಷನು ಒಳಗೂ ಹೊರಗೂ ವ್ಯಾಪಿಸಿದ್ದಾನೆ. ಅವನು ಅಜನು. ಅಪ್ರಾಣನು, ಮನೋರಹಿತನು ಮತ್ತು ಶುದ್ಧನು, ಪರಾತ್ಪರನಾದ ಅಕ್ಷರನಿಗಿಂತಲೂ ಅಧಿಕನು ಎಂದು ಪುರುಷನ ವರ್ಣನವಿರುತ್ತದೆ. ಜಗದತಿರಿಕ್ತನಾದ ಪರಬ್ರಹ್ಮನು ಸಾಧಾರಣವಾಗಿ **ಅಕ್ಷರ** ಶಬ್ದವಾಚ್ಯನಾಗಿಯೇ ಇರುತ್ತಾನೆ. ಪ್ರಕೃತದಲ್ಲಿ ಪುರುಷನು ಅಕ್ಷರನಿಗಿಂತಲೂ ಅಧಿಕನು ಎಂದು ಹೇಳಿರುವುದರಿಂದ ಇಲ್ಲಿ **ಅಕ್ಷರ** ಶಬ್ದವು ಅಪರ ಬ್ರಹ್ಮನಿಗೆ ಅನ್ವಿತವಾಗುತ್ತದೆ ಎಂದು ತಿಳಿಯಬೇಕು. **ಕ್ಷರಸೇ** ಬ್ರಹ್ಮಾದಿಸ್ತಂಬಪರ್ಯಂತ ಎಂದಿರುವಾಗ ಅಕ್ಷರವು ಪರಬ್ರಹ್ಮವಾಚಕವಾಗಿಯೇ ಇರಬೇಕಾದುದು ನ್ಯಾಯ. ಆದರೂ ಕೆಲವೆಡೆಗಳಲ್ಲಿ ಈ **ಪದಕ್ಕೆ** ಬೇರೆ ಅರ್ಥವೂ ಇರುತ್ತದೆ. ಅಕ್ಷರಕ್ಕಿಂತಲೂ ಪುರುಷನು ಅಧಿಕನು ಎಂದು ಸ್ತುತಿಸುವ ಇತರ ವಾಕ್ಯಗಳನ್ನು ಪರಿಶೀಲಿಸಿ ಅನಂತರ ಪುರುಷ ಮತ್ತು ಅಕ್ಷರ ಇವೆರಡರ ತಾದಾತ್ಮ್ಯವನ್ನು ತೋರಿಸುವ ವಾಕ್ಯಗಳನ್ನು ಉದಾಹರಿಸಲಾಗುತ್ತದೆ.

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥**

(ಮು. ಉ. ೩-೨-೮)

ಪರಮಪುರುಷನ ಸ್ವರೂಪವೆರಡುವಿಧ. ನಾಮರೂಪಗಳಿಂದ ಕೂಡಿದ ಜಗತ್ತು ಮತ್ತು ನಾಮರೂಪರಹಿತವಾದ ಪರಾತ್ಪರತ್ವ. ನಾಮರೂಪಗಳಿಂದ ಕೂಡಿದ ಜಗತ್ತು ಸ್ಥಿರವಲ್ಲ. ಯಾವರೀತಿ ಗಂಗಾದಿನದಿಗಳು ತಮ್ಮ ಪ್ರವಾಹದ ಕೊನೆಯಲ್ಲಿ ಸಮುದ್ರಕ್ಕೆ ಸೇರಿ ತಮ್ಮ ವೈಯಕ್ತಿಕವಾದ ನಾಮರೂಪನಿರ್ದೇಶಗಳಿಲ್ಲದೆ ಸಮುದ್ರದೊಡನೆ ಐಕ್ಯವಾಗುವುವೋ ಹಾಗೆ ಕಲ್ಪಾಂತದಲ್ಲಿ ಬ್ರಹ್ಮಾದಿಸ್ತಂಬಪರ್ಯಂತವಾದ ಜಗತ್ತೆಲ್ಲವೂ ತಮ್ಮ ವೈಯಕ್ತಿಕವಾದ ನಾಮ ಮತ್ತು ರೂಪಗಳನ್ನು ಬಿಟ್ಟು ಪರಾತ್ಪರನಾದ ಪುರುಷನನ್ನು ಸೇರಿ ದಿವ್ಯತ್ವವನ್ನು ಪಡೆಯುತ್ತವೆ ಎಂದು ತಿಳಿಸಿದೆ. ಇಲ್ಲಿ ಪರಾತ್ಪರನೆಂದರೆ ಅರ್ಥವೇನು ಎಂದರೆ **ಪರಾದಕ್ಷರಾತ್ಪರಂ ದಿವ್ಯಂ ಪುರುಷಂ** ಪರಶಬ್ದಕ್ಕೆ ಜಗತ್ತಿಗಿಂತಲೂ ಶ್ರೇಷ್ಠವಾದ ಅಕ್ಷರವೆಂದು ಹೆಸರು. ಆ ಅಕ್ಷರಕ್ಕಿಂತಲೂ ಪುರುಷನು ಅಧಿಕನು ಎಂದರ್ಥವೆಂದು ಶಂಕರಭಾಷ್ಯದಲ್ಲಿ ಆಚಾರ್ಯರು ವಿವರಿಸಿದ್ದಾರೆ. ಇದೇ ವಿಷಯವನ್ನು ಕಠೋಪನಿಷತ್ತಿನಲ್ಲಿ ತಿಳಿಸುತ್ತ ;—

**ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥**

(ಕಠ. ೩-೧೧)

ನಾಮರೂಪಗಳಿಂದ ಪ್ರಕಾಶಿತವಾಗದಿರುವ ಅವ್ಯಕ್ತವು ಮಹತ್ತತ್ತ್ವಕ್ಕಿಂತಲೂ ಅಧಿಕವು. ಈ ಅವ್ಯಕ್ತಕ್ಕಿಂತಲೂ ಪುರುಷನು ಶ್ರೇಷ್ಠನು. ಪುರುಷನಿಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಪುರುಷನೇ ಅತ್ಯಂತ ಶ್ರೇಷ್ಠವಾದ ಗುರಿ ಮತ್ತು ಅತ್ಯುತ್ತಮವಾದ ಗತಿ ಎಂದು ಪ್ರಶಂಸಿಸಿದೆ.

ಈ ಸನ್ನಿವೇಶಗಳಲ್ಲಿ **ಅಕ್ಷರ** ಮತ್ತು **ಅವ್ಯಕ್ತ** ಎಂಬ ಎರಡು ಪದಗಳೂ ಪರಬ್ರಹ್ಮನ ಒಂದು ಸ್ವರೂಪ ಪ್ರಭೇದವನ್ನು ತಿಳಿಸುತ್ತವೆಯೆಂದೂ **ಪುರುಷ**ಪದವು ಈ ಪದಗಳಿಂದ ಸೂಚಿತವಾಗುವ ರೂಪಕ್ಕಿಂತಲೂ ಅಧಿಕ ಎಂಬುದೆಂದೂ ತಿಳಿಯುತ್ತದೆ. ಈ ವಿಷಯವು ಕೊಂಚ ಪರಿಶೀಲನೆಗೆ ಅರ್ಹವಾಗಿದೆ. ತಾತ್ಕಾಲಿಕವಾಗಿ, ಮುಂಡಕದಲ್ಲಿ ೧-೧-೬; ೨-೧-೧ರಿಂದ೩ ಈ ವಾಕ್ಯಗಳಲ್ಲಿ ಪ್ರತಿಪಾದಿತವಾಗಿರುವ **ಪುರುಷ** ಮತ್ತು **ಅಕ್ಷರ** ಎಂಬ ಪದಗಳ ನಿಷ್ಕೃಷ್ಟವಾದ ಅರ್ಥವನ್ನು ಶಂಕರಭಾಷ್ಯದ ಸಹಾಯದಿಂದ ಪರಿಶೀಲಿಸಬಹುದು.

:

೧. **ಅಥ ಪರಾ ಯಯಾ ತದಕ್ಷರಮಧಿಗಮ್ಯತೇ । ಯತ್ತದದ್ರೇಶ್ಯಂ........** ॥

(ಮು. ೧-೧-೫,೬)

೨. **ತದೇತತ್ಸತ್ಯಂ ಯಥಾ...........ಯಥಾಕ್ಷರಾ ದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಂತಿ** ॥

(ಮು. ೨-೧-೧)

೩. **ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ** ॥

(ಮು. ೨-೧-೫)

೪. **ತಸ್ಮಾದಗ್ನಿಃ ಸಮಿಧೋ.................ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ** ॥

(ಮು. ೨-೧-೫)

ಎಂಬ ಈ ವಾಕ್ಯಗಳಲ್ಲಿ ಮು. ಉ. ೨-೧-೧ ಮತ್ತು ೨-೧-೨ ಈ ಎರಡು ಮಂತ್ರಗಳಲ್ಲೂ ನಿರ್ದಿಷ್ಟವಾಗಿರುವ **ಅಕ್ಷರವು** ಬ್ರಹ್ಮನ **ಅಪರ** ರೂಪವನ್ನು ನಿರ್ದೇಶಿಸುವುದೆಂಬುದು ಸ್ಪಷ್ಟವಾಗಿದೆ. ಏಕೆಂದರೆ, **ಪರ** ರೂಪವನ್ನು ಪ್ರತಿಪಾದಿಸುವ **ಪುರುಷನು** ಈ **ಅಕ್ಷರ**ಕ್ಕಿಂತಲೂ ಅಧಿಕನು ಎಂಬುದು ವಾಚ್ಯವಾಗಿಯೇ ಇರುತ್ತದೆ.

೨-೧-೧ರ ಭಾಷ್ಯದಲ್ಲಿ **ತಥಾ ಉಕ್ತಲಕ್ಷಣಾದಕ್ಷರಾತ್** ಎಂದು **ಅಕ್ಷರ** ಶಬ್ದದಿಂದ ಸೂಚಿತವಾಗುವ ಪರಬ್ರಹ್ಮಸ್ವರೂಪವನ್ನು ಹಿಂದೆಯೇ ತಿಳಿಸಿದೆಯೆಂದು ಹೇಳಿದ್ದಾರೆ. ೧-೧-೫ರಿಂದ೬ ರಲ್ಲಿ ಈ ಲಕ್ಷಣವು ವರ್ಣಿತವಾಗಿದೆ. ಆದರೆ, ೨-೧-೨ನೇ ವಾಕ್ಯದ **ಅಕ್ಷರ** ಶಬ್ದಕ್ಕೆ ತಾತ್ಪರ್ಯವನ್ನು ಹೇಳುವಾಗ **ನಾಮರೂಪಬೀಜಭೂತಾತ್ ಅವ್ಯಾಕೃತಾಖ್ಯಾತ್**–ನಾಮ ಮತ್ತು ರೂಪಗಳೆಂಬ ವಿಭಾಗಗಳಿಗೆ ಬೀಜಭೂತವಾದ ಅವ್ಯಾಕೃತವಾದ ಸ್ವರೂಪವೆಂದೂ, ಅದೇ ವಾಕ್ಯದಲ್ಲಿ **ಪುರುಷ**ಶಬ್ದಕ್ಕೆ ಅರ್ಥವನ್ನು ಹೇಳುವಾಗ **ಸರ್ವೋಪಾಧಿಭೇದವರ್ಜಿತಂ ಅಕ್ಷರಸ್ಯೈವ ಸ್ವರೂಪಂ** ಸಕಲವಾದ ವೈಯಕ್ತಿಕವಾದ ಉಪಾಧಿ (ನ್ಯೂನತೆ)ಗಳೂ ಇಲ್ಲದ ಮತ್ತು ಉಪಾಧಿಗಳಿಗೆ ಮೂಲವಾದ ಅದೇ ಅಕ್ಷರದ ಇನ್ನೊಂದಂಶವೆಂದು ತಿಳಿಸಿದ್ದಾರೆ. ೨-೧-೫ ರಲ್ಲಿ **ಪುರುಷ** ಶಬ್ದಕ್ಕೆ ನಿರ್ವಚನವನ್ನು ಮಾತ್ರ ತಿಳಿಸಿ ಅದರ ಸ್ವರೂಪ ವಿವರಣವನ್ನು ಹೇಳಿಲ್ಲ.

ಮು. ಉ. ೨-೧-೨ ರಲ್ಲಿ **ಅಪ್ರಾಣ** ಶಬ್ದದಲ್ಲಿರುವ **ಪ್ರಾಣ** ಶಬ್ದಕ್ಕೆ ವಾಯುವೆಂದರ್ಥಮಾಡಿ, ಅದರ ಮುಂದಿನ ವಾಕ್ಯದ **ಪ್ರಾಣ** ಶಬ್ದಕ್ಕೆ (**ಏತಸ್ಮಾಜ್ಜಾಯತೇ ಪ್ರಾಣಃ** ಮು. ೨-೧-೩) ಹಿರಣ್ಯಗರ್ಭದಿಂದ

**ಪ್ರಥಮತಃ** ಉತ್ಪನ್ನವಾದ ತತ್ತ್ವವೆಂದು ತಿಳಿಸಿದ್ದಾರೆ. **ಪುನಃ** ಬ್ರಹ್ಮಸೂತ್ರದಲ್ಲಿ ೧-೨-೨೩ ನೆಯದಾದ **ರೂಪೋಪನ್ಯಾಸಾಚ್ಚ** ಎಂಬ ಸೂತ್ರಕ್ಕೆ ತಾತ್ಪರ್ಯವನ್ನು ಹೇಳುವಾದ **ಅಪಿ ಚ ಅಕ್ಷರಾತ್ಪರತಃ ಪರಃ ಇತ್ಯಸ್ಯಾನಂತರಂ ಏತಸ್ಮಾಜ್ಜಾಯತೇ ಪ್ರಾಣಃ ಇತಿ ಪ್ರಾಣಪ್ರಭೃತೀನಾಂ ಪೃಥಿವೀಪರ್ಯಂತಾನಾಂ ತತ್ತ್ವಾನಾಂ ಸರ್ಗಮುಕ್ತ್ವಾ ...... .... .... .... .... ತಚ್ಚ ಪರಮೇಶ್ವರಸ್ಯೈವೋಚಿತಂ** ॥ ಎಂದು ವಿವರಿಸಿ ಮು. ಉ. ೧-೧-೬ ರಲ್ಲಿ ಪ್ರತಿಪಾದಿತವಾಗಿರುವ ಅಕ್ಷರದ ವರ್ಣನವೆಂದು ತಿಳಿಸಿದ್ದಾರೆ.

ಉಪನಿಷದ್ವಾಕ್ಯದ ಅಕ್ಷರಶಬ್ದಕ್ಕೆ ತಾತ್ಪರ್ಯವನ್ನು ವಿವರಿಸುವಾಗ **ನಿರ್ಗುಣ, ನಿರುಪಾಧಿಕ** ಎಂದು ವಿವರಿಸಿದ್ದಾರೆ. ಬ್ರಹ್ಮಸೂತ್ರಭಾಷ್ಯದಲ್ಲಿ (ಬ್ರ. ಸೂ. ೧-೨-೨೧, ೨೨, ೨೩) ಇದನ್ನೇ **ಸಗುಣ ಬ್ರಹ್ಮ**ನ ಸ್ವರೂಪವರ್ಣನವೆಂದು ತಿಳಿಸಿದ್ದಾರೆ. ಹೀಗೆ, ಪುರುಷ, ಅಕ್ಷರ ಇವೆರಡೂ ತಾದಾತ್ಮ್ಯಬೋಧಕವಾದ ಪದಗಳೆಂದು ಒಂದು ಕಡೆಯೂ, ಪರಾಪರ ತತ್ತ್ವಗಳನ್ನು ನಿರ್ದೇಶಿಸುವ ಪದಗಳೆಂದು ಇನ್ನೊಂದೆಡೆಯೂ ವಿವೃತವಾಗಿರುತ್ತದೆ. ಹೀಗೆಯೇ ಇನ್ನೂ ಕೆಲವು ಸಂದಿಗ್ಧವಾದ ಸನ್ನಿವೇಶಗಳೂ ಇರುತ್ತವೆ. ಉದಾಹರಣೆಗೆ......

**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ಯದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥**

(ಮು. ಉ. ೩-೧-೩)

ಎಂಬಲ್ಲಿ ಪರಮಪುರುಷನ ಸ್ತುತಿಯಿರುತ್ತದೆ. ಇಲ್ಲಿ **ಬ್ರಹ್ಮಯೋನಿ** ಎಂಬುದು ವಿಶೇಷಣ ಪದ. **ಬ್ರಹ್ಮಯೋನಿ** ಎಂಬುದು ಸಮಸ್ತಪದ. ಇದನ್ನು ಕರ್ಮಧಾರಯವೆಂದಾದರೂ ಹೇಳಬಹುದು ಅಥವಾ ಬಹುವ್ರೀಹಿಯೆಂದಾದರೂ ಹೇಳಬಹುದು.

**ಬ್ರಹ್ಮ ಚ ತದ್ಯೋನಿಶ್ಚಾಸೌ ಬ್ರಹ್ಮಯೋನಿಸ್ತಂ ಬ್ರಹ್ಮಯೋನಿಂ ।**

ಪುರುಷನೇ ಬ್ರಹ್ಮನು ಮತ್ತು (ಸಕಲ ಪ್ರಪಂಚಕ್ಕೂ) ಇವನೇ ಯೋನಿಯು ಎಂದು ಶಂಕರಾಚಾರ್ಯರ ವಿವರಣೆಯಿರುತ್ತದೆ. ಅಥವಾ **ಬ್ರಹ್ಮಯೋನಿಃ ಯಸ್ಯ ಸಃ ತಂ** ಪುರುಷನು ಬೀಜವನ್ನಿಡಲು ಯಾವ ಬ್ರಹ್ಮನು ಯೋನಿಯೋ ಅವನು ಎಂದು ಬಹುವ್ರೀಹಿಯಾದರೆ ಆಗ ಅದು **ಅಕ್ಷರ**ನಿಗೆ ಅನ್ವಯಿಸುತ್ತದೆ. ಮುಂಡಕದ ೧-೧-೬ ನೇ ಮಂತ್ರದಲ್ಲಿರುವ **ಭೂತಯೋನಿಂ** ಎಂಬ ವಿಶೇಷಣವು **ಅಕ್ಷರ** ರೂಪನಾದ ಬ್ರಹ್ಮನಿಗೆ ಅನ್ವಯಿಸುವಂತೆ ಇಲ್ಲಿಯೂ **ಅಕ್ಷರ** ರೂಪನಾದ ಬ್ರಹ್ಮನಿಗೇ ಅನ್ವಿತವಾಗಬೇಕು. **ಪುರುಷ, ಅಕ್ಷರ** ಎರಡೂ ಒಂದೇ ಎಂದರೆ ಆಗ ಚರ್ಚೆಯೇ ಇಲ್ಲ. ಒಂದು ಪರ ಇನ್ನೊಂದು ಅಪರ ಎಂದರೆ ಆಗ ಈ ಚರ್ಚೆಗೆ ಅವಕಾಶವಿರುತ್ತದೆ.

ಪುರುಷನು ಸಗುಣನೇ ಅಥವಾ ನಿರ್ಗುಣನೇ ಎಂದು ಇನ್ನೊಂದು ಚರ್ಚೆಗೆ ಅವಕಾಶವಿರುತ್ತದೆ. **ಅತೋ ಜ್ಯಾಯಾಂಶ್ಚ ಪುರುಷಃ** ಜಗತ್ತಿಗಿಂತಲೂ ಅಧಿಕನು ಎಂದರೆ ಅವ್ಯಕ್ತನಿಗಿಂತಲೂ ಅಧಿಕನು ಎಂದಾಯಿತು. ಅಕ್ಷರನೇ ಅವ್ಯಕ್ತಪದವಾಚ್ಯನು. ಅವ್ಯಕ್ತಪದವಾಚ್ಯನಾದ ಅಕ್ಷರನು ನಿರ್ಗುಣನಾದರೆ, ಅದಕ್ಕಿಂತಲೂ ಅಧಿಕನಾದ ಪುರುಷನು ಖಂಡಿತ ವರ್ಣನಾತೀತನೇ ಆಗಿರಬೇಕು ಆದರೆ, ಪುರುಷನ ನಾನಾ ಸ್ವರೂಪಗಳೂ ಅವಯವಗಳೂ ವರ್ಣಿತವಾಗಿವೆ. ಉದಾಹರಣೆಗೆ—

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವ-ಭೂತಾಂತರಾತ್ಮಾ ॥**

(ಮು. ಉ. ೨-೧-೪)

ಈ ಪುರುಷನು ಸರ್ವಭೂತಾಂತರಾತ್ಮನು. ಅಗ್ನಿಯು ಇವನ ಶಿರಸ್ಸು. ಸೂರ್ಯ ಮತ್ತು ಚಂದ್ರರು ಇವನ ಚಕ್ಷುಸ್ಸುಗಳು. ದಿಕ್ಕುಗಳೇ ಇವನ ಶ್ರೋತ್ರಗಳು, ವೇದಗಳೇ ಮುಖಶಬ್ದಗಳು. ವಾಯುವೇ ಪ್ರಾಣವು. ವಿಶ್ವವೇ ಹೃದಯ ಇತ್ಯಾದಿಯಾಗಿ ಪರಮಪುರುಷನ ಅವಯವಗಳ ವರ್ಣನೆಯಿರುತ್ತದೆ.

ಆದರೆ ಇವನು ಅವ್ಯಕ್ತನಾದ ಅಕ್ಷರನಿಗಿಂತಲೂ ಅಧಿಕನು ಎಂದು ವರ್ಣಿತವಾಗಿರುವ ಸನ್ನಿವೇಶವನ್ನು ಮೇಲೆ ತಿಳಿಸಿದೆ. (ಕಠ. ೩-೧೧) ಅಕ್ಷರನು ಎಲ್ಲೆಲ್ಲಿ ವರ್ಣಿತನಾಗಿದ್ದಾನೆಯೋ ಅಲ್ಲೆಲ್ಲ ವ್ಯಕ್ತತ್ವವೇ ಪ್ರಶಂಸಿತವಾಗಿದೆ. ಉದಾಹರಣೆ— ಎರಡು ಸನ್ನಿವೇಶಗಳನ್ನು ಮಾತ್ರ ಪರಿಶೀಲಿಸಬಹುದು,

**ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ ॥**

(ಮು. ಉ. ೧-೧-೬)

ಈ ಅಕ್ಷರಸಂಜ್ಞಕವಾದ ಬ್ರಹ್ಮವು ದರ್ಶನಾತೀತ, ಗ್ರಾಹ್ಯಾತೀತ, ಗೋತ್ರ (ವಂಶ) ರಹಿತ, ವರ್ಣರಹಿತ, ಪಾದ ಮತ್ತು ಪಾಣಿರಹಿತ, ನಿತ್ಯ, ಸರ್ವವ್ಯಾಪಿ, ಸರ್ವತ್ರಸ್ಥಾಪಿತ, ಅತ್ಯಂತ ಸೂಕ್ಷ್ಮ, ನಾಶರಹಿತ, ಸಕಲ ಭೂತಗಳಿಗೂ ಉತ್ಪತ್ತಿಸ್ಥಾನ, ಎಂಬ ಗುಣಾತೀತವಾದ ಮತ್ತು ಅವಯವರಹಿತವಾದ ಬ್ರಹ್ಮದ ಪ್ರಶಂಸೆಯು ಅಕ್ಷರಾಖ್ಯವಾದ ಬ್ರಹ್ಮದ ಸ್ವರೂಪ ಪ್ರಶಂಸೆಯೆಂಬುದು ಉಪನಿಷತ್ತಿನ **ಅಥ ಪರಾ ಯಯಾ ತದಕ್ಷರಮಧಿಗಮ್ಯತೇ** (ಮು. ಉ. ೩-೧-೫) ಎಂಬ ವಾಕ್ಯದಿಂದಲೇ ತಿಳಿಯುತ್ತದೆ. **ಈದೃಶಮಕ್ಷರಂ ಯಯಾ ವಿದ್ಯಯಾಧಿಗಮ್ಯತೇ** ಎಂದು ಶಂಕರ ಭಾಷ್ಯವೂ ತಿಳಿಸುತ್ತದೆ. ಹೀಗೆಯೇ,

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ ಯತ್ । ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥**

(ಮು. ಉ. ೩-೧-೫)

ಪರಬ್ರಹ್ಮನು ಶಬ್ದರಹಿತನು, ಸ್ಪರ್ಶರಹಿತನು, ರೂಪರಹಿತನು, ಶಾಶ್ವತಸ್ಥಿತಿಯುಳ್ಳವನು. ಹಾಗೆಯೇ, ರಸರಹಿತನು, ಗಂಧವಿಲ್ಲದವನು, ಅನಾದ್ಯನಂತನು, ಮಹತ್ತಿಗಿಂತಲೂ ಅಧಿಕನು. ಈ ಪರಬ್ರಹ್ಮನ ಸಾಕ್ಷಾತ್ಕಾರವಾದರೆ ಪುನಃ ಜನನಮರಣಾದಿಗಳ ಭಯವಿಲ್ಲ ಎಂಬುದು **ಪುರುಷನ** ಪ್ರಶಂಸೆಯೋ ಅಥವಾ ಅಕ್ಷರನ ಪ್ರಶಂಸೆಯೋ ಎಂಬುದು ಸಂಶಯಾಸ್ಪದವಾದ ವಿಷಯ. **ಏಷ ಸರ್ವೇಷು ಭೂತೇಷು** (ಕಠ. ೩-೧೨) ಎಂಬ ಮಂತ್ರದ ಅಭಿಪ್ರಾಯವೇ ಇಲ್ಲಿಯೂ ಅನುವರ್ತಿಸಿದರೆ ಇದು ಪುರುಷನ ಪ್ರಶಂಸೆ. ಆಗ ಪುರುಷನು ನಿರ್ಗುಣನು. ನಿರವಯವನು. ಆದರೆ ಇಲ್ಲಿ ಕೇವಲ **ಮಹತಃ ಪರಂ** ಮಹತಿ ಗಿಂತಲೂ ಅಧಿಕನು ಎಂದು ಇರುವುದರಿಂದ ಇದು **ಅಕ್ಷರನ** ಪ್ರಶಂಸೆಯೆಂದು

ಕೆಲವರ ಮತ. **ಮಹತ್, ಅವ್ಯಕ್ತ, ಪುರುಷ** ಎಂದು (ಕಠ ೩.೧೧) ಮಹತ್ತಿಗೂ ಪುರುಷನಿಗೂ ನಡುವೆ **ಅವ್ಯಕ್ತ** (ಅಕ್ಷರದ) ಸ್ಥಾನವಿರುತ್ತದೆ. ಇಲ್ಲಿಯೂ ಹಾಗೆಯೇ ಇರಬೇಕಾಗಿದ್ದಿತು. ಅದಿಲ್ಲ. ಆದುದರಿಂದ ಇಲ್ಲಿ ಅಕ್ಷರನ ಪ್ರಶಂಸೆ-ಯೆಂಬುದು ಒಂದು ಮತ, ಇದಕ್ಕೆ ಶಂಕರಭಾಷ್ಯವನ್ನೇ ಆಧಾರವಾಗಿ ಉದಾಹರಿಸುತ್ತಾರೆ.

**ಮಹತಃ ಮಹತ್ತತ್ತ್ವಾತ್ ಬುದ್ಧ್ಯಾಖ್ಯಾತ್ಪರಂ ವಿಲಕ್ಷಣಂ..........ಧ್ರುವಂ ಚ ಕೂಟಸ್ಥಂ ನಿತ್ಯಂ** (ಶ.ಭಾ.)

ಎಂದು ಶಂಕರಾಚಾರ್ಯರ ವಿವರಣವಿರುತ್ತದೆ. ಭಗವದ್ಗೀತೆಯಲ್ಲಿ ಅಕ್ಷರನೇ ಕೂಟಸ್ಥನೆಂದೂ ಅದಕ್ಕಿಂತಲೂ ಪುರುಷನು ಅನ್ಯನೆಂದೂ ಹೇಳಿರುತ್ತದೆ. ಆದುದರಿಂದ ಇಲ್ಲಿ **ಅಕ್ಷರನೇ** ನಿರ್ದಿಷ್ಟನೆಂದೂ **ಪುರುಷನು** ಅಲ್ಲವೆಂದೂ ಅವರ ಮತ ಪುರುಷನೂ ಅಕ್ಷರನೂ ಒಂದೇ ಎಂದರೆ ಚರ್ಚೆಯೇ ಇಲ್ಲ. ಬೇರೆ ಬೇರೆಯೆಂದರೆ ಇಂತಹ ಸಂಶಯಾಸ್ಪದವಾದ ಸನ್ನಿವೇಶಗಳು ಸಂಭವಿಸುತ್ತವೆ. ಆದರೆ, ಈ ಎರಡು ತತ್ತ್ವಗಳೂ ಬೇರೆಬೇರೆಯೆಂದು ಭಗವದ್ಗೀತಾವಾಕ್ಯಗಳು ಸ್ಪಷ್ಟಪಡಿಸುತ್ತವೆ. ಹೇಗೆಂದರೆ, ಭಗವದ್ಗೀತೆಯಲ್ಲಿ ಅವ್ಯಕ್ತವಾದ ಅಕ್ಷರೋಪಾಸನೆ ಮತ್ತು ವ್ಯಕ್ತವಾದ ಪುರುಷನ ಉಪಾಸನೆ ಎಂದು ಉಪಾಸನಾಕ್ರಮದಲ್ಲಿ ಎರಡು ವಿಧಗಳನ್ನು ತಿಳಿಸಿದೆ. ಮೊದಲು ಅಕ್ಷರವನ್ನು ಸ್ತುತಿಸುತ್ತ,

**ಅಕ್ಷರಂ ಬ್ರಹ್ಮ ಪರಮಂ** (ಭ. ಗೀ. ೮-೩) ಅತ್ಯಂತ ಶ್ರೇಷ್ಠವಾದ ಅಕ್ಷರವು ಪರಬ್ರಹ್ಮವೆನಿಸುತ್ತದೆ. ಎಂದು ಆರಂಭಿಸಿ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**
(ಭ ಗೀ. ೮-೨೧)

ಅಕ್ಷರವೆಂಬ ಅವ್ಯಕ್ತಕ್ಕೆ ಪರತರವಾದ ಗತಿಯೆಂದು ಹೆಸರು. ಅದೇ ನನ್ನ ಶ್ರೇಷ್ಠವಾದ ಸ್ಥಾನವು. ಅದನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ, ಎಂದು ಅಕ್ಷರನ ಪ್ರಶಂಸೆಯನ್ನು ಮಾಡಿದೆ. ಅಕ್ಷರೋಪಾಸನೆಯ ಫಲವನ್ನು ತಿಳಿಸಿ ಅದರ ಮಹತ್ತ್ವವನ್ನು ಅತಿಶಯವಾಗಿ ಪ್ರಶಂಸಿಸಿದೆ. ತದನಂತರ,

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥**
(ಭ. ಗೀ. ೮-೨೨)

ಸಕಲ ಜಗತ್ತನ್ನು ನಿರ್ಮಿಸಿದವನೂ, ಸಕಲ ಭೂತಗಳನ್ನು ತನ್ನೊಳಗೆ ಅಡಗಿಸಿಕೊಂಡಿರುವವನೂ ಆದ ಪರಮ ಪುರುಷನು ಅನನ್ಯವಾದ ಭಕ್ತಿಯಿಂದ ಲಭ್ಯನಾಗುತ್ತಾನೆ.

ಹೀಗೆ ಉಪಾಸನೆಯಲ್ಲಿ **ಅಕ್ಷರಗತಿ** ಮತ್ತು **ಪುರುಷಗತಿ** ಎಂಬ ಎರಡು ವಿಭಾಗಗಳನ್ನು ಗೀತೆಯಲ್ಲಿ ತಿಳಿಸಿರುತ್ತದೆ. ಮೇಲೆ ಉದಾಹೃತವಾದ ವಾಕ್ಯಗಳಲ್ಲಿ ಈ ಎರಡು ಗತಿಗಳಿಗೂ ಸಮಾನವಾದ ಪ್ರಾಶಸ್ತ್ಯವಿರುತ್ತದೆ. ಆದರೆ ಹನ್ನೆರಡನೇ ಅಧ್ಯಾಯದಲ್ಲಿ **ಪುರುಷಗತಿಯು** ಅಕ್ಷರಗತಿಗಿಂತಲೂ ಉತ್ತಮವಾದುದೆಂದು ತಿಳಿಸಿದೆ. ಇದರ ಪ್ರಕರಣವು ಅರ್ಜುನನ ಪ್ರಶ್ನೆಯರೂಪವಾದ ಆಧಾರವುಳ್ಳದ್ದಾಗಿರುತ್ತದೆ. ಆ ಪ್ರಶ್ನೆಯೇನೆಂದರೆ,

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥**

(ಭ. ಗೀ. ೧೨-೧)

ಎಲೈ ಪರಮಾತ್ಮನೇ, ಸತತವಾಗಿ ಯೋಗಯುಕ್ತರಾಗಿ ನಿನ್ನನ್ನು ಉಪಾಸಿಸುವ ಭಕ್ತರಲ್ಲಿಯೂ, ಅವ್ಯಕ್ತವಾದ ಅಕ್ಷರ ಬ್ರಹ್ಮದ ಉಪಾಸನೆಯನ್ನು ಮಾಡುವವರಲ್ಲಿಯೂ ಉತ್ತಮರು ಯಾರು? ಎಂದು ಅರ್ಜುನನು ಪ್ರಶ್ನಿಸುತ್ತಾನೆ. ಆ ಪ್ರಶ್ನೆಗೆ ಉತ್ತರವನ್ನು ಕೊಡುತ್ತ ಕೃಷ್ಣನು ಅವೆರಡಕ್ಕೂ ಇರುವ ವ್ಯತ್ಯಾಸವನ್ನು ವಿವರಿಸಿದ್ದಾನೆ.

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಃ ತೇ ಮೇ ಯುಕ್ತತಮಾ ಮತಾಃ ।**

(ಭ. ಗೀ. ೧೨-೨)

ನನ್ನಲ್ಲಿ ನೆಲಸಿದವರಾಗಿಯೂ, ಯಾವಾಗಲೂ ಯುಕ್ತಚಿತ್ತರಾಗಿಯೂ ಅತಿಶಯವಾದ ಶ್ರದ್ಧೆಯಿಂದ ಕೂಡಿದವ ರಾಗಿಯೂ ನನ್ನ ಉಪಾಸನೆಯನ್ನು ಮಾಡುವವರೇ ಉತ್ತಮವಾದ ಕರ್ಮಯೋಗಿಗಳೆಂದು ನಾನು ತಿಳಿಯುತ್ತೇನೆ. ಆದರೆ,

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಂ ॥**
**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥**

(ಭ. ಗೀ. ೧೨-೩,೫)

ಅನಿರ್ದೇಶ್ಯವೆಂದರೆ, ತೋರಿಸಿಕೊಡುವುದಕ್ಕಾಗದೆ ಇರುವ ಅವ್ಯಕ್ತವೂ, ಸರ್ವಾಂತರ್ಯಾಮಿಯೂ, ಅಚಿಂತ್ಯವೂ, ಕೂಟಸ್ಥವೆಂದರೆ ಸರ್ವಕ್ಕೂ ಮೂಲವೂ, ಅಚಲವೂ, ನಿತ್ಯವೂ ಆಗಿರುವ **ಅಕ್ಷರದ** ಉಪಾಸನೆಯನ್ನು ಸರ್ವತ್ರ ಸಮಬುದ್ಧಿಯುಳ್ಳವರಾಗಿ ಇಂದ್ರಿಯ ಸಮುದಾಯವನ್ನು ಕಟ್ಟಿನಲ್ಲಿಟ್ಟು ಸರ್ವಭೂತಗಳ ಹಿತಚಿಂತನದಲ್ಲಿ ನಿರತರಾದವರು (ಉಪಾಸನೆಯನ್ನು) ಮಾಡಿದರೆ ಅವರೂ ನನ್ನನ್ನೇ ಸಾಕ್ಷಾತ್ಕರಿಸುತ್ತಾರೆ. ಆದರೆ, ಅಂತಹ ಅವ್ಯಕ್ತದಲ್ಲಿ ಆಸಕ್ತವಾದ ಚೇತಸ್ಸುಳ್ಳವರಿಗೆ ಅಧಿಕವಾದ ಅದರ ಉಪಾಸನೆಯು ಕ್ಲೇಶವುಳ್ಳದ್ದಾಗುತ್ತದೆ. ದೇಹಧಾರಿಗಳಾದ ಮಾನವರಿಗೆ ಅವ್ಯಕ್ತೋಪಾಸನದ ಗತಿಯು ಅತಿಕಷ್ಟವಾಗಿರುತ್ತದೆ

ಈ ರೀತಿಯಾದ ವ್ಯತ್ಯಾಸವನ್ನು ತೋರಿಸುವುದರಲ್ಲಿ ಗೀತಾಕಾರರು ಮೇಲೆ ಉದಾಹೃತವಾದ ಕಠೋಪ ನಿಷತ್ತಿನ **ಅಶಬ್ದಮಸ್ಪರ್ಶಮರೂಪಮವ್ಯಯಂ** (೩-೧೫) ಎಂಬ ಮಂತ್ರದ ತಾತ್ಪರ್ಯವನ್ನೇ ವಿವರಿಸಿರುತ್ತಾರೆ.

ಹೀಗೆ ಎಲ್ಲೆಲ್ಲಿ ಅವ್ಯಕ್ತದ ಪ್ರಶಂಸೆಯಿರುವುದೋ ಅಲ್ಲೆಲ್ಲ ಅವ್ಯಕ್ತ, ಅನಿರ್ದೇಶ್ಯ ಇತ್ಯಾದಿ ವಿಶೇಷಣಗಳು **ಅಕ್ಷರದ** ನಿರ್ಗುಣತ್ವವನ್ನು ತೋರಿಸುತ್ತವೆ. **ಪುರುಷನ** ಪ್ರಶಂಸೆಯಿರುವೆಡೆಗಳಲ್ಲೆಲ್ಲ ಅವನ ಅವಯವಗಳ ವರ್ಣನೆಗಳ ಮೂಲಕ ಸಗುಣತ್ವದ ಪ್ರಶಂಸೆಯಿರುತ್ತದೆ. ಯಾವ ಇದೇ ಅಕ್ಷರವನ್ನು ಪ್ರಶ್ನೋಪನಿಷತ್ತಿನಲ್ಲಿ

**ಜೀವಘನ**ವೆಂದು ಕರೆದಿದೆಯೋ (ಪ್ರ. ೫-೫) ಅದನ್ನೇ ಬೃಹದಾರಣ್ಯಕದಲ್ಲಿ **ಪ್ರಜ್ಞಾನಘನ**ವೆಂದು ಕರೆದಿದೆ (ಬೃ. ಉ. ೪-೫-೧೩) ಹೀಗೆ ಗುಣರಹಿತವಾದ ಅಕ್ಷರವೇ ಪರಬ್ರಹ್ಮವಾದರೆ ಪುರುಷನು ಅದಕ್ಕಿಂತಲೂ ಅಧಿಕನು ಎಂಬ ಮಾತಿಗೆ ಅರ್ಥವಿಲ್ಲ. ಪುರುಷನು ಸಗುಣನು, ಸಾವಯವನು, ಅಕ್ಷರನು, ನಿರ್ಗುಣನು ಮತ್ತು ನಿರವಯವನು ಎಂಬ ವ್ಯತ್ಯಾಸ ಮಾತ್ರವಿರುತ್ತದೆ. ಆದರೆ ಕೆಲವೆಡೆಗಳಲ್ಲಿ ಪುರುಷನನ್ನು ಪರಬ್ರಹ್ಮನೆಂದೂ ಅಕ್ಷರನನ್ನು ಅಪರ ಬ್ರಹ್ಮನೆಂದೂ ತಿಳಿಸಿದೆ. ಅಕ್ಷರನಿಗಿಂತಲೂ ಪುರುಷನು ಅನ್ಯನು ಎಂದು ಭಗವದ್ಗೀತೆಯಲ್ಲೂ ಉಪನಿಷತ್ತುಗಳಲ್ಲೂ ಸ್ಪಷ್ಟವಾಗಿಯೇ ತಿಳಿಸಿದೆ.

ಬೃಹದಾರಣ್ಯಕದಲ್ಲಿ ಪುರುಷನ ರೂಪವನ್ನು ವರ್ಣಿಸಿದರೂ ಸಹ, ಜಗತ್ತಿನಲ್ಲಿ ಉತ್ಪನ್ನವಾದ ಯಾವ ವಸ್ತುವೂ ಎಷ್ಟೇ ಮಹತ್ತ್ವವನ್ನು ಹೊಂದಿದ್ದರೂ ಸಹ ಪರಮಪುರುಷನ ಸಾಮ್ಯವನ್ನು ಹೊಂದುವುದಕ್ಕಾಗುವುದಿಲ್ಲ. ಆದುದರಿಂದ ಲೌಕಿಕಪ್ರತ್ಯಕ್ಷಕ್ಕೆ ಗೋಚರವಾದ ವಸ್ತುವಾವುದೂ ಪುರುಷನಲ್ಲ. ಪುರುಷನನ್ನು ಹೇಗೆ ವರ್ಣಿಸುವುದು ಎಂದರೆ, ಅದರ ಪ್ರಕಾರವು ಹೀಗಿರುತ್ತದೆ.

> **ತಸ್ಯ ಹೈತಸ್ಯ ಪುರುಷಸ್ಯ ರೂಪಂ । ಯಥಾ ಮಾಹಾರಜನಂ ವಾಸೋ ಯಥಾ ಪಾಣ್ಡ್ವಾವಿಕಂ ಯಥೇಂದ್ರಗೋಪೋ ಯಥಾಗ್ನ್ಯರ್ಚಿರ್ಯಥಾ ಪುಂಡರೀಕಂ ಯಥಾ ಸಕೃದ್ವಿದ್ಯುತ್ತಂ ಸಕೃದ್ವಿದ್ಯುತ್ತೇವ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ ವೇದಾಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತ್ಯಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ**
>
> (ಬೃ. ಉ. ೨-೩-೬)

ಈ ಪುರುಷನ ರೂಪವು ಕುಂಕುಮಕೇಸರಿವರ್ಣದ ವಸ್ತ್ರದಂತಿರುತ್ತದೆ. ಅಲ್ಲದೆ ಶುಭ್ರವಾದ ಉಣ್ಣೆಯಂತೆಯೂ, ಇಂದ್ರಗೋಪದಂತೆಯೂ (ಪ್ರಭಾಯುತವಾದ ಚಿಟ್ಟೆ) ಅಗ್ನಿಜ್ವಾಲೆಯಂತೆಯೂ ಶುಭ್ರವಾದ ಕಮಲಪುಷ್ಪದಂತೆಯೂ ಪ್ರಕಾಶಿಸುವ ಮಿಂಚಿನಂತೆಯೂ ಇರುತ್ತದೆ. (ಈ ತತ್ತ್ವವನ್ನರಿತವನು ಮಿಂಚಿನಂತೆ ಪ್ರಕಾಶಯುಕ್ತನಾಗಿರುತ್ತಾನೆ.)

**ಅತೋ ಜ್ಯಾಯಾನ್** ಎಂದು ವರ್ಣಿತವಾಗಿರುವಂತೆ **ಈ** ಪರಮಪುರುಷನನ್ನು ಹೋಲುವ ವಸ್ತುವು ಯಾವುದೂ ಇಲ್ಲದಿರುವುದರಿಂದ ಯಾವ ವಸ್ತುವನ್ನು ಪರಿಶೀಲಿಸಿದರೂ **ಇದು ಪುರುಷನಲ್ಲ ಇದು ಪುರುಷನಲ್ಲ** ಎಂಬ ನಿಷೇಧ ರೂಪವಾಗಿಯೇ ಪುರುಷನನ್ನು ವರ್ಣಿಸಬೇಕಾಗಿರುತ್ತದೆ. ಆದುದರಿಂದಲೇ ಇವನನ್ನು ಸತ್ಯಕ್ಕಿಂತಲೂ ಮೀರಿದ ಸತ್ಯಾತ್ಮಕನು ಎಂದು ಕರೆದಿರುತ್ತದೆ. ಎಂದು ಸ್ತುತಿಸಿದೆ. ಇದೇ ಭಾವವು ಋಕ್ಸಂಹಿತೆಯ ಇತರ ಕಡೆಗಳಲ್ಲಿಯೂ ಪ್ರಕಾಶಿತವಾಗಿದೆ. ಉದಾಹರಣೆಗೆ ಎರಡು ಸನ್ನಿವೇಶಗಳನ್ನು ಮಾತ್ರ ಪರಿಶೀಲಿಸಬಹುದು.

> **ನೈತಾವದೇನಾ ಪರ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ।**
> **ತ್ವಚಂ ಪವಿತ್ರಂ ಕೃಣುತ ಸ್ವಧಾವಾನ್ಯದೀಂ ಸೂರ್ಯಂ ನ ಹರಿತೋ ವಹಂತಿ ॥**
>
> (ಋ.ಸಂ. ೧೦-೩೧-೮)

ದ್ಯಾವಾಪೃಥಿವಿಗಳೇ ವಿಶ್ವದಲ್ಲಿ ಅಧಿಕವಾದ ತತ್ತ್ವಗಳಲ್ಲ. ಅವಕ್ಕಿಂತಲೂ ಮೀರಿದ ತತ್ತ್ವವಿನ್ನೊಂದಿರುತ್ತದೆ. ಜಗತ್ತನ್ನು ಸೃಷ್ಟಿಮಾಡುವ ಹಿರಣ್ಯಗರ್ಭರೂಪನಾದ ಪರತತ್ತ್ವವು ಇವೆಲ್ಲಕ್ಕಿಂತಲು ಅಧಿಕವು. ಅದು ದ್ಯಾವಾಪೃಥಿ-

ವಿಗಳೆಲ್ಲವನ್ನೂ ಧರಿಸಿ ಪೋಷಿಸುತ್ತದೆ. ತನ್ನ ಅಶ್ವಗಳು ತನ್ನ ಅಂಶವಾದ ಆದಿತ್ಯನನ್ನ ವಹಿಸುವುದಕ್ಕೆ ಪೂರ್ವ-ಭಾವಿಯಾಗಿ ತಾನು ಶುದ್ಧವಾದ ತನ್ನ ಶರೀರವನ್ನು ನಿರ್ಮಿಸಿಕೊಳ್ಳುತ್ತಾನೆ. ಇದು ತನ್ನ ವ್ಯಕ್ತವಾದ ಸ್ವರೂಪವು. ಜಗತ್ತಿಗೆ ಗೋಚರನಾಗಲು ಈ ರೂಪದ ಧಾರಣೆ ಎಂದು ವಿವರಿಸಿದೆ. ಹಾಗೆಯೇ, ವಾಗ್ರೂಪವಾದ ಬ್ರಹ್ಮನ ಮಹಿಮೆಯನ್ನು ಪ್ರಶಂಸಿಸುವ ಸಂದರ್ಭದಲ್ಲಿ ಬೇರೊಂದು ಕಡೆ ಇದೇ ಅಭಿಪ್ರಾಯವು ವ್ಯಕ್ತಪಟ್ಟಿದೆ.

**ಅಹಮೇವ ವಾತ ಇವ ಪ್ರ ವಾಮ್ಯಾರಭಮಾಣಾ ಭುವನಾನಿ ವಿಶ್ವಾ ।**
**ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂ ಬಭೂವ ॥**

(ಋ.ಸಂ. ೧೦.೧೨೫.೮)

ಅಪ್ರಾಕೃತರೂಪವುಳ್ಳ ನಾನು ಪ್ರಾಕೃತರೂಪುಳ್ಳ ಸಕಲ ಜಗತ್ತನ್ನೂ ನಿರ್ಮಿಸುತ್ತೇನೆ. ಕಾರಣರೂಪದಿಂದಿರುವ ನಾನು ಕಾರ್ಯರೂಪವಾದ ಜಗತ್ತಿಗೆ. ಆಧಾರಭೂತವಾಗಿದ್ದೇನೆ. ನನಗೆ ಉತ್ಪಾದಕವಾದ ಕಾರಣವು ಬೇರೆ ಯಾವುದೂ ಇಲ್ಲ. ದ್ಯುಲೋಕಕ್ಕಿಂತಲೂ ಅತಿರಿಕ್ತನಾಗಿಯೂ ಪೃಥ್ವಿಗಿಂತಲೂ ಅತಿರಿಕ್ತವಾಗಿಯೂ ನನ್ನ ಮಹಿಮೆಯಿಂದಲೇ ವಿರಾಜಿಸುತ್ತಿದ್ದೇನೆ. ಸರ್ವಜಗತ್ತಿನ ರೂಪದಲ್ಲಿ ಪ್ರಕಾಶಿತವಾಗಿದ್ದರೂ ಜಗದತಿರಿಕ್ತವಾದ ಮತ್ತು ಅವ್ಯಾಕೃತವಾದ ಸ್ವರೂಪವನ್ನು ಹೊಂದಿದ್ದೇನೆ ಎಂದು ಪ್ರಕೃತವಾದ ಋಕ್ಕಿನಲ್ಲಿರುವ ಭಾವವನ್ನು ವಿವರಿಸಿದೆ.

ಇಂತಹ ಪರವಸ್ತುವಿನಿಂದ ಸೃಷ್ಟವಾದ ಜಗತ್ತೆಲ್ಲವೂ ಇದರ ಪಾದಮಾತ್ರ ಎಂದರೆ ಕಾಲುಭಾಗಮಾತ್ರ (**ಪಾದೋಽಸ್ಯ ವಿಶ್ವಾ ಭೂತಾನಿ**) ಇಲ್ಲಿ ಪಾದ, ತ್ರಿಪಾತ್ ಎಂದು ನಿಷ್ಕೃಷ್ಟವಾಗಿ ಅವ್ಯಾಕೃತಬ್ರಹ್ಮನನ್ನು ಅಳತೆ ಮಾಡಲು ಸಾಧ್ಯವಿಲ್ಲ. **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂದು ಪ್ರಶಂಸಿತನಾಗಿರುವ ಬ್ರಹ್ಮನು ಅಳತೆಗೆ ಒಳಪಡುವುದಿಲ್ಲ. **ತಥಾಪಿ ಜಗದಿದಂ ಬ್ರಹ್ಮಸ್ವರೂಪಾಪೇಕ್ಷಯಾಽಲ್ಪಮಿತಿ ವಿವಕ್ಷಿತತ್ವಾತ್ ಪಾದತ್ವೋ-ಪನ್ಯಾಸಃ** ಸಕಲ ಜಗತ್ತೂ ಬ್ರಹ್ಮನಿಗಿಂತಲೂ ಬಹಳ ಮಟ್ಟಿಗೆ ಅಲ್ಪವಾದುದರಿಂದ ಸ್ಥೂಲವಾಗಿ ನಾಲ್ಕನೇ ಒಂದು ಭಾಗವೆಂದು ವರ್ಣಿಸಿದೆಯೆಂದು ಸಾಯಣರು ತಿಳಿಸುತ್ತಾರೆ.

**ತ್ರಿಪಾದಸ್ಯಾಮೃತಂ ದಿವಿ—ತ್ರಿಪಾತ್ ಸ್ವರೂಪಂ ವಿನಾಶರಹಿತಂ ಸತ್ ದ್ಯೋತನಾತ್ಮಕೇ ಸ್ವಪ್ರಕಾಶರೂಪೇ ವ್ಯವತಿಷ್ಠತೇ ।** ವಿನಾಶಾತ್ಮಕವಾದ ಜಗತ್ತಿಗಿಂತಲೂ ಭಿನ್ನವಾದುದು ಪುರುಷ, ಸಾಂತವಾದ ಜಗತ್ತಿಗಿಂತಲೂ ಬೇರೆಯಾದ ಅನಂತವಾದು ಪುರುಷ. ಪರಪ್ರಕಾಶಿತವಾದ ಜಗತ್ತಿಗಿಂತಲೂ ಬೇರೆಯಾದುದು ಪುರುಷ ಮತ್ತು ಇದೇ ಪುರುಷನು ದೇಶಕಾಲಗಳಿಗಿಂತಲೂ ಅತೀತನು. ಇಂದ್ರಿಯಪ್ರತ್ಯಕ್ಷಕ್ಕೆ ಗೋಚರನಲ್ಲ. ಇಂತಹ ಪರಮಪುರುಷನ ಸ್ವರೂಪವರ್ಣನವನ್ನು ಮಾಡುವ ಕೆಲವು ಪ್ರಕರಣಗಳನ್ನು ಮಾತ್ರ **ಸದ್ಯಃ** ತಿಳಿಸಲಾಗುತ್ತದೆ.

ಈ ರೀತಿ ನಿರ್ದೇಶಿಸಿದ ಪುರುಷನನ್ನು **ನೇತಿ ನೇತಿ** ಎಂಬ ಮಹಾವಾಕ್ಯಗಳಿಂದ ಸ್ತುತಿಸುವ ರೀತಿಯನ್ನು ಮೇಲೆ ಸೂಕ್ಷ್ಮವಾಗಿ ತಿಳಿಸಿದೆ. ಹೀಗೆ **ನೇತಿ ನೇತಿ**—ಈ ಬ್ರಹ್ಮನು ಪ್ರಪಂಚವಲ್ಲ, ಪ್ರಪಂಚದಲ್ಲಿರುವ ಯಾವ ಭೂತವೂ ಅಲ್ಲ. ಇವನ ರೂಪವು ಪ್ರಪಂಚಾತಿರಿಕ್ತವಾದುದು ಎಂದು ವರ್ಣಿಸಿರುವುದನ್ನು ಅನೇಕ ಸಂದರ್ಭಗಳಲ್ಲಿ ನೋಡಬಹುದು. ಉದಾಹರಣೆಗೆ,

**ಸ ಏಷ ನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಂಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತ್ಯಭಯಂ ವೈ ಜನಕ ಪ್ರಾಪ್ತೋಽಸೀತಿ ಹೋವಾಚ ಯಾಜ್ಞವಲ್ಕ್ಯಃ ಸ ಹೋವಾಚ ಜನಕೋ ವೈದೇಹಃ ......... ಅಯಮಹಮಸ್ಮಿ||**

(ಬೃ. ಉ. ೪.೨-೪ ; ೪-೨೨-೪ ; ೪-೫-೧೫)

ಈ ಪರಮಾತ್ಮನು ಇದೂ ಅಲ್ಲ ಅದೂ ಅಲ್ಲ (ಜಗತ್ತಿನ ಯಾವ ವಸ್ತುವೂ ಅಲ್ಲ) ಅದು ಅಗ್ರಾಹ್ಯ, ಹಿಡಿತಕ್ಕೆ ಸಿಕ್ಕತಕ್ಕದಲ್ಲ (ಪ್ರಮಾಣಾತೀತವಾದುದು). ಅದನ್ನು ನಾಶಪಡಿಸಲು ಸಾಧ್ಯವಿಲ್ಲ, ಆದುದರಿಂದ ನಾಶರಹಿತವಾದುದು. ಪ್ರಪಂಚದೊಂದಿಗೆ ಲೇಪವನ್ನು ಹೊಂದುವುದಿಲ್ಲ. ಬಂಧರಹಿತವಾದುದು ಮತ್ತು ದುಃಖರಹಿತವಾದುದು, ಅದು ಕಂಪಿಸುವುದಿಲ್ಲ. ಸ್ಥಿರವೂ ಧ್ರುವವೂ ಆಗಿರುತ್ತದೆ.

**ಪ್ರಪಂಚಾತಿರಿಕ್ತನಾದ ಬ್ರಹ್ಮನು (ಪರಮಪುರುಷನು) ।ಕಾಲಾತೀತನು** ಎಂಬುದನ್ನು ಹಿಂದೆ **ಯದ್ಭೂತಂ ಯಚ್ಚ ಭವ್ಯಂ** ಎಂಬ ವಾಕ್ಯವನ್ನು ವಿವರಿಸುವಾಗ ತಿಳಿಸಿದೆ. (ಪು. ಸೂ. ೧೦-೯೦-೨) ಸಕಲ ದೇಶಗಳಿಗಿಂತಲೂ ಅತೀತನು ಎಂಬ ವರ್ಣನವೂ ಅನೇಕ ಕಡೆಗಳಲ್ಲಿರುತ್ತದೆ,

**ಸ ಹೋವಾಚ ಯದೂರ್ಧ್ವಂ ಗಾರ್ಗಿ ದಿವೋ ಯದವಾಕ್ಪೃಥಿವ್ಯಾ ಯದಂತರಾ ದ್ಯಾವಾ-ಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ||**

(ಬೃ. ಉ. ೩-೮-೭)

ಎಲೈ ಗಾರ್ಗಿಯೇ, ಈ ಪರಮಾತ್ಮನು ದ್ಯುಲೋಕಕ್ಕಿಂತಲೂ ಮೀರಿರುವನು, ಪೃಥ್ವಿಗಿಂತಲೂ ತಳಭಾಗದಲ್ಲಿರುವನು. ಅವೆರಡರ ನಡುವೆಯೂ ಇರುವನು, ಸಕಲ ದೇಶಗಳಲ್ಲಿದ್ದೂ ಅವುಗಳಿಗಿಂತಲೂ ಅತೀತನು.

**ಸ ಏವಾಧಸ್ತಾತ್ಸ ಉಪರಿಷ್ಟಾತ್ಸ ಪಶ್ಚಾತ್ಸ ಪುರಸ್ತಾತ್ಸ ದಕ್ಷಿಣತಃ ಸ ಉತ್ತರತಃ ಸ ಏವೇದಂ ಸರ್ವಮಿತ್ಯಥಾತೋಽಹಂಕಾರಾದೇಶಃ ।**

(ಛಾ. ಉ. ೭-೨೫-೧)

ಇತ್ಯಾದ್ಯನೇಕವಾಕ್ಯಗಳಲ್ಲಿ ಬ್ರಹ್ಮನ ಅನಂತತ್ವವನ್ನೂ ಸಕಲ ದೇಶಗಳ ವ್ಯಾಪಕತ್ವವನ್ನೂ ವರ್ಣಿಸಿದೆ.

**ಇಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ । ಭಿದ್ಯೇತೇ ತಾಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ ಸ ಏಷೋಽಕಲೋಽಮೃತೋ ಭವತಿ||**

(ಪ್ರಶ್ನ. ೬-೫)

ಪುರುಷಸಂಬಂಧಿಯಾದ ಈ ಹದಿನಾರು ಕಲೆಗಳೂ ಪುರುಷನನ್ನು ಸೇರಿ ಅವನೊಡನೆ ಐಕ್ಯತೆಯನ್ನು ಹೊಂದುತ್ತವೆ. ಜಗದವಸ್ಥೆಯಲ್ಲಿ ವೈಯಕ್ತಿಕರೂಪವನ್ನು ಹೊಂದಿದ್ದ ಅವು ಪುರುಷನನ್ನು ಸೇರಿ ಅವನೊಡನೆ ಐಕ್ಯವಾದೊಡನೆಯೇ ತಮ್ಮ ವೈಯಕ್ತಿಕವಾದ ಸ್ವರೂಪಗಳನ್ನು ಬಿಟ್ಟು ಕೇವಲ ಪುರುಷಸಂಜ್ಞಕವಾಗಿ ಮಾತ್ರ ಇರುತ್ತವೆ.

ಈ ವಿಧವಾಗಿ ಜಗದ್ರೂಪನೂ ಜಗದತೀತನೂ ಆದ ಪರಮಪುರುಷನ ಸ್ವರೂಪವರ್ಣನವಿರುತ್ತದೆ. ಲೌಕಿಕವಾದ ವಾಗ್ವ್ಯವಹಾರದಲ್ಲಿ ಇವನಿಗೆ ನಾಲ್ಕುಪಾದಗಳೆಂದು ವರ್ಣಿಸಿದೆ. ಒಂದು ಮತ್ತು ಮೂರು ಎಂಬ ವಿಭಾಗವು

ಒಂದು ವಿಧ. ಅಥವಾ ಈ ನಾಲ್ಕು ಪಾದಗಳೂ ವಿಶ್ವದ ನಾಲ್ಕು ಮೂಲತತ್ತ್ವಗಳು ಎಂದೂ ಹೇಳಬಹುದು. ಈ ಎರಡನೆಯ ರೀತಿಯ ವಿಭಾಗವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ವಿವರಿಸುತ್ತ ಪುರುಷನ ನಾಲ್ಕು ಪಾದಗಳಾವುವೆಂದು ಈ ರೀತಿ ತಿಳಿಸಿದೆ. ಆದರೆ ಇಲ್ಲಿ ಹೇಳಿರುವ ತತ್ತ್ವವು ಪುರುಷಸೂಕ್ತದ ತತ್ತ್ವವಿವರಣೆಗಿಂತ ಕೊಂಚ ವ್ಯತ್ಯಸ್ತವಾಗಿದೆ

**ತದೇತಚ್ಚತುಷ್ಪಾದ್ಬ್ರಹ್ಮ ವಾಕ್ಪಾದಃ ಪ್ರಾಣಃ ಪಾದಶ್ಚಕ್ಷುಃ ಪಾದಃ ಶ್ರೋತ್ರಂ ಪಾದ ಇತ್ಯಾಧ್ಯಾತ್ಮಮಥಾಧಿದೈವತಮಗ್ನಿಃ ಪಾದೋ ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದ ಇತ್ಯುಭಯಮೇವಾದಿಷ್ಟಂ ಭವತ್ಯಧ್ಯಾತ್ಮಂ ಚೈವಾಧಿದೈವತಂ ಚ ।**

(ಛಾ. ಉ. ೩-೧೮-೨)

ಬ್ರಹ್ಮನಿಗೆ ನಾಲ್ಕು ಪಾದಗಳು ವಾಕ್ಕು ಒಂದು ಪಾದ. ಎರಡನೆಯದು ಪ್ರಾಣ. ಮೂರನೆಯದು ಚಕ್ಷುಸ್ಸು. ನಾಲ್ಕನೆಯದು ಶ್ರೋತ್ರ. ಇದು ಆಧ್ಯಾತ್ಮಿಕಪರವಾದ ವಿಭಾಗ. ಅಧಿದೈವತಪರವಾದ ವಿಭಾಗವಾವುದೆಂದರೆ; ಮೊದಲನೆಯದು ಅಗ್ನಿ, ಎರಡನೆಯ ಪಾದವು ವಾಯು. ಆದಿತ್ಯನೇ ಮೂರನೇ ಪಾದ ಮತ್ತು ದಿಕ್ಕುಗಳೇ ನಾಲ್ಕನೆಯ ಪಾದ.

**ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಸ ಯ ಏವಂ ವೇದ**

(ಛಾ. ಉ. ೩-೧೮-೩)

ವಾಕ್ಕೇ ಬ್ರಹ್ಮನ ನಾಲ್ಕು ಪಾದಗಳಲ್ಲೊಂದು. ಇದು ಅಗ್ನಿಯೊಡನೆ ಸೇರಿ ಅವನ ಪ್ರಭಾರೂಪದಲ್ಲಿ ಜ್ವಲಿಸುತ್ತವೆ. ಈ ತತ್ತ್ವವನ್ನರಿತವನು ಇದೇ ರೀತಿ ಪ್ರಕಾಶಿಸುತ್ತಾನೆ.

**ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ।**

(ಛಾ. ಉ. ೩-೧೮-೪)

ಬ್ರಹ್ಮನ ಎರಡನೆಯ ಪಾದವಾದ ಪ್ರಾಣವು ವಾಯುವಿನೊಡನೆ ಸೇರಿ ಅವನ ಜ್ಯೋತಿಯ ಜೊತೆಯಲ್ಲಿ ಪ್ರಕಾಶಿಸುತ್ತ ಜಗತ್ತನ್ನು ಬೆಳಗುತ್ತದೆ.

**ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ॥**

(ಛಾ. ಉ. ೩-೧೮-೫)

ಬ್ರಹ್ಮನ ಮೂರನೆಯ ಪಾದವಾದ ಚಕ್ಷುಸ್ಸು ಆದಿತ್ಯನೊಡನೆ ಸೇರಿ ಆದಿತ್ಯನ ಪ್ರಕಾಶದಿಂದ ತಾನೂ ಬೆಳಗುತ್ತದೆ. ಲೋಕವನ್ನು ಬೆಳಗಿಸುತ್ತದೆ. ಹೀಗೆಯೇ,

**ಶ್ರೋತ್ರಮೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ದಿಗ್ಭಿರ್ಜ್ಯೋತಿಷಾ ಭಾತಿ ಚ ತಪತಿ ಚ ॥**

(ಛಾ. ಉ. ೩-೧೮-೬)

ಬ್ರಹ್ಮನ ನಾಲ್ಕನೆಯ ಪಾದವಾದ ಶ್ರೋತ್ರವು ದಿಕ್ಕುಗಳೊಡನೆ ಸೇರಿ ಅವುಗಳ ಪ್ರಭೆಯೊಡನೆ ತನ್ನ ಪ್ರಭೆಯನ್ನು ಸೇರಿಸಿ ಬೆಳಗುತ್ತದೆ. ಪರಮೇಶ್ವರನು ಆಧ್ಯಾತ್ಮಿಕ ಮತ್ತು ಆಧಿಭೌತಿಕವಾದ ಈ ಸಕಲ ಪಾದಗಳನ್ನು ಹೊಂದಿ ಇವುಗಳಿಗಿಂತಲೂ ಅತೀತನಾಗಿದ್ದಾನೆ. ಹೇಗೆಂದರೆ,

ಏಷೋ ಹ ದೇವಃ ಪ್ರದಿಶೋಽನು ಸರ್ವಾಃ ಪೂರ್ವೋ ಹ ಜಾತಃ ಸ ಉ ಗರ್ಭೇ ಅಂತಃ |
ಸ ಏವ ಜಾತಃ ಸ ಜನಿಷ್ಯಮಾಣಃ ಪ್ರತ್ಯಙ್ ಜನಾಸ್ತಿಷ್ಠತಿ ಸರ್ವತೋ ಮುಖಃ ||

(ಶ್ವೇ. ೨-೧೬)

ಪರಮಾತ್ಮನು ಸಕಲ ದಿಕ್ಕುಗಳಿಗೂ ಅಭಿಮುಖನಾಗಿ ನಿಂತಿದ್ದಾನೆ. ಅವನೇ ಎಲ್ಲಕ್ಕಿಂತಲೂ ಮೊದಲು ಉತ್ಪನ್ನನಾದ ಹಿರಣ್ಯಗರ್ಭನು. ಉತ್ಪನ್ನನಾಗಿ ಗರ್ಭವನ್ನು ಪ್ರವೇಶಿಸಿದ್ದಾನೆ. ಹಿಂದೆ ಮತ್ತು ಮುಂದೆಲ್ಲ ಹುಟ್ಟುವವನು ಅವನೇ. ಅವನು ಸರ್ವತೋಮುಖನಾಗಿ ಸರ್ವರಲ್ಲಿಯೂ ಅಂತರ್ಯಾಮಿಯಾಗಿದ್ದಾನೆ.

ಹೀಗೆ ಜಗದ್ವ್ಯಾಪಕವಾದ ಒಂದು ಪಾದ ಮತ್ತು ಜಗದತೀತವಾದ ಮಹತ್ತ್ವ ಇವೆರಡನ್ನು ಪ್ರಶಂಸಿಸುವ ಒಂದೆರಡು ವಾಕ್ಯಗಳನ್ನು ದಾಹರಿಸಿ ಈ ಪ್ರಕರಣವನ್ನು ಮುಗಿಸಲಾಗುತ್ತದೆ. ಲೌಕಿಕ ಪ್ರತ್ಯಕ್ಷಕ್ಕೆ ಗೋಚರನಾಗುವುದು, ಅದೇ ಕಾಲದಲ್ಲಿ ಪ್ರತ್ಯಕ್ಷಾತೀತನಾಗುವುದು, ಇವೆರಡು ಶಕ್ತಿಗಳೂ ಒಟ್ಟಿಗೆ ಪ್ರಶಂಸಿತವಾಗಿವೆ. ಇದೇ ಪರಮಪುರುಷನ ಮಾಹಾತ್ಮ್ಯವರ್ಣನೆ.

ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ |
ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ ||

(ಶ್ವೇ. ಉ ೩-೧೯)

ಪಾದಗಳಿಲ್ಲದೆ ಪುರುಷನು ವೇಗವಾಗಿ ಚಲಿಸುತ್ತಾನೆ. ಹಸ್ತಗಳಿಲ್ಲದೆ ಗ್ರಹಣಮಾಡುತ್ತಾನೆ. ಕಣ್ಣುಗಳಿಲ್ಲದೇ ನೋಡುತ್ತಾನೆ, ಕಿವಿಗಳಿಲ್ಲದೆ ಕೇಳುತ್ತಾನೆ. ಸಕಲ ಜಗತ್ತನ್ನು ಅರಿಯುತ್ತಾನೆ. ಅವನನ್ನು ಅರಿತವರು ಯಾರೂ ಇಲ್ಲ. ಇವನೇ ಅದ್ವಿತೀಯನು. ಪ್ರಥಮನು, ಮಹಾತ್ಮನು ಎಂದು ಎಲ್ಲರೂ ಬಹುವಾಗಿ ಪ್ರಶಂಸಿಸುತ್ತಾರೆ.

ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ |
ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಲಂ ||

(ಶ್ವೇ. ೮-೬-೧೯)

ಪರಮಪುರುಷನು ಕಲಾರಹಿತನು (ಕಳಂಕವಿಲ್ಲದವನು) ಅಥವಾ ವಿಭಾಗರಹಿತನು, ಕ್ರಿಯಾರಹಿತನು, ಶಾಂತನು, ದೋಷರಹಿತನು. ಉರಿಯುವ ಬೆಂಕಿಯಂತೆ ಪ್ರಭಾಯುತನು. ತನ್ನದೇ ಪಾದಭಾಗವಾದ ಮರ್ತ್ಯ ಲೋಕದಿಂದ ತನ್ನ ದಿವ್ಯಪ್ರಭೆಯೊಡಗೂಡಿದ ಅಮೃತಲೋಕಕ್ಕೆ ಸಕಲರನ್ನೂ ಕೊಂಡೊಯ್ಯುವ ಸೇತುವೆಯಾಗಿರುತ್ತಾನೆ. ದ್ಯುಲೋಕದಲ್ಲಿ ಸ್ಥಾಪಿತವಾಗಿರುವ ತನ್ನ ಅಮೃತತ್ವದೊಡನೆ ಶಾಶ್ವತವಾಗಿ ಯೋಜಿಸುವ ದಿವ್ಯ ಸಾಧನವೇ ಇವನು.

## ಮುಖ್ಯಾಭಿಪ್ರಾಯವು.

ಈ ಋಕ್ಕಿನ ನಾಲ್ಕು ಪಾದಗಳಲ್ಲಿಯೂ ನಾಲ್ಕು ವಿಷಯಗಳ ವಿವರಣೆ ಇದ್ದರೂ ಅವುಗಳೆಲ್ಲಾ ಪರಸ್ಪರ ಸಂಬಂಧವನ್ನು ಹೊಂದಿಯೇ ಇರುತ್ತವೆ. ಇವುಗಳನ್ನು ಒಂದೊಂದಾಗಿ ವಿಮರ್ಶೆಮಾಡಬಹುದು.

**ಏತಾವಾನಸ್ಯ ಮಹಿಮಾ**—ಎಂಬ ವಾಕ್ಯದಲ್ಲಿ **ಏತಾವಾನ್** ಎಂಬ ಶಬ್ದಕ್ಕೆ ಎರಡುವಿಧ ಅರ್ಥವನ್ನು ಹೇಳಬಹುದು. ಸಾಯಣರು—**ಅತೀತಾನಾಗತವರ್ತಮಾನರೂಪಂ ಜಗದ್ಯಾವದಸ್ತ್ಯೇತಾವಾನ್ಸರ್ವೋಽಪ್ಯಸ್ಯ**

**ಪುರುಷಸ್ಯ ಮಹಿಮಾ ಸ್ವಕೀಯಸಾಮರ್ಥ್ಯವಿಶೇಷಃ** । ಎಂದರೆ, ಹಿಂದಿನ ಕಲ್ಪಗಳಲ್ಲಿ ಇದ್ದ, ಈಗ ನಮ್ಮ ಕಣ್ಣೆದುರಿಗೆ ಇರುವ ಮತ್ತು ಈ ವರ್ತಮಾನಕಾಲದ ಜಗದಾದಿಗಳು ನಾಶವಾಗಿ ಪ್ರಳಯಾನಂತರ ಮತ್ತೆ ಸೃಷ್ಟಿಸಲ್ಪಡುವ ಜಗದಾದಿಗಳೆಲ್ಲವೂ ಈ ಪರಮಪುರುಷನ ವಿಭೂತಿವಿಶೇಷಗಳೇ ಆಗಿ ಇವನ ಅಸಾಧಾರಣವಾದ ಶಕ್ತಿಸಾಮರ್ಥ್ಯಗಳನ್ನು ಸೂಚಿಸುವುದಾಗಿದೆ, ಎಂದು ಅರ್ಥವಿವರಣೆಮಾಡಿದ್ದಾರೆ. ಇದು ಒಂದು ವಿಧವಾದ ಅರ್ಥವು. ಎರಡನೆಯ ಅರ್ಥ ವೇನೆಂದರೆ—ಈ ಪರಮಪುರುಷನು ಸೃಷ್ಟಿಸ್ಥಿತಿಯಲ್ಲಿ ನಮಗೆ ಗೋಚರವಾಗುವ ಜಗದಾದಿಗಳ ಸ್ವರೂಪ ಮಾತ್ರವೇ ಅಲ್ಲ. ಇದು ಎಲ್ಲಿಯೋ ಅಲ್ಪಸ್ವಲ್ಪ ಮಾತ್ರ. ಅವ್ಯಕ್ತಾವಸ್ಥೆಯಲ್ಲಿರುವ ಈ ಪರಮಾತ್ಮನ ವಿಭೂತಿವಿಶೇಷಗಳು ಎಂದರೆ, **ಅತ್ಯತಿಷ್ಠದ್ದಶಾಂಗುಲಂ** ಮತ್ತು **ಅಮೃತತ್ವಸ್ಯೇಶಾನಃ** ಎಂಬ ವಾಕ್ಯಗಳಲ್ಲಿ ಪ್ರತಿಪಾದಿತವಾಗಿರುವ ಶಕ್ತಿಸಾಮರ್ಥ್ಯಗಳು ದೃಶ್ಯಮಾನವಾದ ಜಗದಾದಿಗಳಿಗಿಂತ ಎಷ್ಟೋ ಅಧಿಕವಾಗಿವೆ. ಈ ಎರಡು ವಿಧವಾದ ಮಹಿಮೆಯುಳ್ಳವನೇ ಈ ಪರಮಪುರುಷನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ಅತೋ ಜ್ಯಾಯಾಂಶ್ಚ ಪೂರುಷಃ**—ಈ ಪರಮಾತ್ಮನಿಗೆ ಮೇಲೆ ಹೇಳಿದ ಶಕ್ತಿಸಾಮರ್ಥ್ಯಾದಿಗಳಿರುವುದರಿಂದ ಇವನು ಮಹಿಮೆಯಿಂದ ಅತ್ಯಧಿಕನು. ಹೇಗೆಂದರೆ, ಜಗದಾದಿಗಳು ಪರಮಾತ್ಮನ ಅಂಶಗಳೇ ಆಗಿದ್ದರೂ ಜಗದಾದಿರೂಪದಲ್ಲಿರುವ ಪರಮಾತ್ಮನ ಸ್ವರೂಪವು ಅವನ ನಿಜವಾದ ಸ್ವರೂಪವಲ್ಲ. ಏಕೆಂದರೆ, ಅವು ಕೆಲವು ಕಾಲ ಮಾತ್ರವಿದ್ದು ಲಯವನ್ನು ಹೊಂದುವವು ಎಂದರೆ ಪರಮಾತ್ಮನ ನಿಜಸ್ವರೂಪದಲ್ಲಿಯೇ ಲೀನವಾಗುವವು. ಅವ್ಯಕ್ತಸ್ವರೂಪವೇ ಅವನ ನಿಜವಾದ ಸ್ವರೂಪವು. ಏಕೆಂದರೆ ಅದಕ್ಕೆ ಯಾವಾಗಲೂ ನಾಶವಿಲ್ಲ. ಅದು ಶಾಶ್ವತವಾದುದು. ಸೃಷ್ಟಿಕಾರ್ಯಕ್ಕಾಗಿ ಪರಮಾತ್ಮನ ಕೆಲವಂಶವು ವ್ಯಕ್ತರೂಪವನ್ನು ಹೊಂದಿದ್ದರೂ, ವ್ಯಕ್ತರೂಪವನ್ನು ಹೊಂದದೆ ಅವ್ಯಕ್ತರೂಪದಲ್ಲಿಯೇ ಬಹುಭಾಗವು ಉಳಿದಿರುವುದು. ಆದ್ದರಿಂದ ಅವ್ಯಕ್ತಸ್ವರೂಪವು ಸೃಷ್ಟಿಕಾಲದಲ್ಲಿಯೂ ಸೃಷ್ಟಿಯಿಲ್ಲದ ಲಯಕಾಲದಲ್ಲಿಯೂ ಎರಡು ಅವಸ್ಥೆಗಳಲ್ಲಿಯೂ ಇದ್ದೇ ಇರುವುದು. ಆದ್ದರಿಂದಲೇ ಅವ್ಯಕ್ತಸ್ವರೂಪದಿಂದಿರುವ ಈ ಪರಮಪುರುಷನ ಮಹಿಮೆಯು ಅತಿಶಯವಾದುದು ಎಂದು ಇಲ್ಲಿ ಹೇಳಿರುವುದು.

ಉತ್ತರಾರ್ಧದಲ್ಲಿರುವ **ಪಾದೋಽಸ್ಯ ವಿಶ್ವಾ ಭೂತಾನಿ** ಮತ್ತು **ತ್ರಿಪಾದಸ್ಯಾಮೃತಂ ದಿವಿ** ಎಂಬ ಎರಡು ವಾಕ್ಯಗಳನ್ನು ಒಟ್ಟಿಗೆ ವಿಮರ್ಶಿಸಬೇಕು. ಮೊದಲನೆಯ ಋಕ್ಕಿನಲ್ಲಿ **ಅತ್ಯತಿಷ್ಠದ್ದಶಾಂಗುಲಂ** ಎಂಬ ವಾಕ್ಯದಲ್ಲಿ ಈ ಪರಮಾತ್ಮನು ವ್ಯಕ್ತರೂಪದಲ್ಲಿ ಸ್ವಲ್ಪಭಾಗಮಾತ್ರವಿದ್ದು ಅದಕ್ಕಿಂತಲೂ ಅತ್ಯಧಿಕವಾಗಿ ಅವ್ಯಕ್ತಸ್ವರೂಪದಲ್ಲಿರುವವನು ಎಂಬರ್ಥವು ಸೂಚಿತವಾಗಿರುವುದಷ್ಟೆ. ಆ ಅಭಿಪ್ರಾಯವನ್ನೇ ಪ್ರಕೃತ ಋಕ್ಕಿನ ಉತ್ತರಾರ್ಧವಾದ **ಪಾದೋಽಸ್ಯ ವಿಶ್ವಾ ಭೂತಾನಿ** ಮತ್ತು **ತ್ರಿಪಾದಸ್ಯಾಮೃತಂ ದಿವಿ** ಎಂಬ ವಾಕ್ಯಗಳಿಂದ ವಿಶದವಾಗಿ ವರ್ಣಿಸಲಾಗಿರುವುದು. ಈ ವಾಕ್ಯಗಳಲ್ಲಿರುವ ಪಾದಶಬ್ದಕ್ಕೆ ನಾಲ್ಕರಲ್ಲಿ ಒಂದು ಭಾಗವೆಂದರ್ಥವು. ಭೂತಾನಿ ಎಂದರೆ ಪಂಚಮಹಾಭೂತಗಳು, ಚರಾಚರಾತ್ಮಕವಾದ ಸಕಲ ವಸ್ತುಗಳನ್ನೂ ಒಳಗೊಂಡ ಜಗದಾದಿಗಳು ಎಂದರ್ಥವು. ಆದ್ದರಿಂದ ಜಗದಾದಿ ಸಮಸ್ತ ವಿಶ್ವವೆಲ್ಲವೂ ಈ ಪರಮಾತ್ಮನ ಕಾಲುಭಾಗ ಮಾತ್ರ. ಎಂದರೆ ಪರಮಾತ್ಮನ ಅವ್ಯಕ್ತಸ್ವರೂಪದಲ್ಲಿ ಕಾಲುಭಾಗ ಮಾತ್ರ ವ್ಯಕ್ತರೂಪವನ್ನು ಹೊಂದಿ ಜಗದಾದಿಯಾಗಿ ಪರಿವರ್ತಿತವಾಗಿದೆ. ಉಳಿದ ಮೂರು ಭಾಗದ ಗತಿಯೇನು ಎಂದರೆ—**ತ್ರಿಪಾದಸ್ಯಾಮೃತಂ ದಿವಿ** ಎಂಬ ವಾಕ್ಯವು ಸ್ಪಷ್ಟಪಡಿಸುವುದು. ಇಲ್ಲಿ **ದಿವಿ** ಎಂದರೆ ಕೇವಲ ಅಂತರಿಕ್ಷ ಅಥವಾ ಸ್ವರ್ಗವೆಂದಲ್ಲ. ನಮಗೆ ಅಂತರಿಕ್ಷ ಅಥವಾ ಸ್ವರ್ಗವು ಹೇಗೆ ಪ್ರತ್ಯಕ್ಷ ಗೋಚರವಲ್ಲವೋ ಅದರಂತೆ ಪ್ರತ್ಯಕ್ಷಗೋಚರವಾಗದಿರುವ ಸ್ಥಾನವೆಂದರ್ಥವು. ಪರಮಾತ್ಮನ ಜಗದಾದಿಪರಿವರ್ತನವಿಲ್ಲದ ಅವ್ಯಕ್ತಸ್ವರೂಪದ

ಉಳಿದ ಮೂರು ಭಾಗವು ಪ್ರತ್ಯಕ್ಷ ಗೋಚರವಲ್ಲದ ಅಮೃತವೆಂದು (ನಾಶರಹಿತವೆಂದು) ಹೇಳಲ್ಪಡುವ ಅವ್ಯಕ್ತದ ಸ್ವರೂಪವಾಗಿಯೇ ಉಳಿದಿದೆ. ಎಂದರೆ ಅದು ಯಾವ ವಿಕಾರವನ್ನೂ ಹೊಂದದೆ ಅದೇ ಸ್ಥಿತಿಯಲ್ಲಿಯೇ ಉಳಿದಿದೆ. ಅದಕ್ಕೆ ನಾಶವಿಲ್ಲ. ಆದ್ದರಿಂದಲೇ ಅದು ಅಮೃತ, ಮುಕ್ತಿ, ಪರಮಪದ ಮುಂತಾದ ಹೆಸರುಗಳಿಂದ ಪ್ರಸಿದ್ಧವಾಗಿದೆ. ಸಂಸಾರದಿಂದ ಮುಕ್ತನದಾ ಆತ್ಮನು(ಪುರುಷನು)ಬ್ರಹ್ಮದಲ್ಲಿ ಐಕ್ಯವಾಗಿ ಈ ಅವ್ಯಕ್ತಸ್ವರೂಪದಲ್ಲಿ ಲೀನನಾದರೆ ಅವನಿಗೆ ಪುನರಾವೃತ್ತಿ ಎಂದರೆ ಪುನರ್ಜನ್ಮವಿಲ್ಲ ಎಂದು ಉಪನಿಷತ್ತುಗಳು ಸಾರುತ್ತವೆ. ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕು. ಪಾದ, **ತ್ರಿಪಾತ್** ಎಂಬ ಶಬ್ದಗಳು ಕಾಲುಭಾಗ, ಮೂರುಭಾಗ ಎಂಬ ಅರ್ಥವನ್ನು ಮಾತ್ರ ಸೂಚಿಸುವುದಿಲ್ಲ. ಪಾದವೆಂದರೆ ಸ್ವಲ್ಪಭಾಗಮಾತ್ರವೆಂದೂ **ತ್ರಿಪಾತ್** ಎಂದರೆ ಬಹುಭಾಗವೆಂದೂ ಅರ್ಥಮಾಡಬಹುದು. ಈ ಅರ್ಥವನ್ನು ವಿಶದವಾಗಿ ತಿಳಿಸುವುದಕ್ಕಾಗಿ ಹಿಂದೆ ಹೇಳಿದಂತೆ ಇಲ್ಲಿಯೂ ಸಮುದ್ರದ ಉದಾಹರಣೆಯನ್ನು ಕೊಡಬಹುದು ಈ ಭೂಮಿಯಲ್ಲಿರುವ ನೀರಿಗೆಲ್ಲಾ ಮುಖ್ಯಾಶ್ರಯಸ್ಥಾನವು ಸಮುದ್ರವೇ ಎಂಬುದ ಎಲ್ಲರಿಗೂ ಅನುಭವವಷ್ಟೆ. ಆ ಸಮುದ್ರದ ನೀರು ಸೂರ್ಯನ ಕಿರಣಗಳಿಂದ ಕಾದು ಮೇಘಗಳಾಗಿ ಅವುಸುರಿಸುವ ವೃಷ್ಟಿಯಿಂದ ಗಂಗಾದಿನದಿಗಳಾಗಿ ಪುನಃ ಸಮುದ್ರವನ್ನೇ ಸೇರುವುದು. ಮೇಘಗಳಾಗಿ ಪರಿವರ್ತಿತವಾಗುವ ನೀರು ಸಮುದ್ರದ ಬಹುಸ್ವಲ್ಪಭಾಗಮಾತ್ರ. ಪರಿವರ್ತಿತವಾಗದೆಉಳಿಯುವ ನೀರಿನಭಾಗವೇ ಅತ್ಯಧಿಕವಾಗಿರುವುದು. ಅದರಂತೆ ಪರಮಾತ್ಮನ ವ್ಯಕ್ತರೂಪವಾದ ಜಗದಾದಿಗಳು ಅವ್ಯಕ್ತಸ್ವರೂಪದ ಸ್ವಲ್ಪಭಾಗ ಮಾತ್ರ. ಯಾವ ವ್ಯತ್ಯಾಸವನ್ನೂ ಹೊಂದದೆ ಉಳಿದಿರುವ ಅವ್ಯಕ್ತಸ್ವರೂಪವೇ ಬಹುಭಾಗದಲ್ಲಿರುವುದು. ಇದಲ್ಲದೆ ಸಮುದ್ರದಿಂದ ಸೂರ್ಯನ ಕಿರಣಗಳ ತಾಪದಿಂದ ಆವಿಯರೂಪದಲ್ಲಿ ಮೇಘಗಳಾಗಿ, ಅನಂತರ ಗಂಗಾದಿನದಿಗಳಾಗಿ ಪ್ರವಹಿಸುವ ಉದಕವು ಕೆಲವು ಕಾಲ ಭೂಮಿಯಮೇಲಿದ್ದು ಕೊನೆಗೆ ಸಮುದ್ರವನ್ನೇ ಸೇರುವಂತೆ ಸಕಲ ಜೀವರಾಶಿಗಳೂ, ಚರಾಚರಾತ್ಮಕವಾದ ಸಕಲ ಜಗತ್ತೂ ಪರಮಾತ್ಮನ ಅವ್ಯಕ್ತಸ್ವರೂಪದಿಂದಲೇ ವ್ಯಕ್ತಸ್ವರೂಪವಾಗಿ ಪರಿವರ್ತಿತವಾಗಿ ಆ ಜಗದಾದಿರೂಪದಲ್ಲಿಯೇ ಕೆಲವು ಕಾಲವಿದ್ದು ಕೊನೆಗೆ ಲಯವನ್ನು ಹೊಂದಿ ಎಂದರೆ ವ್ಯಕ್ತರೂಪವನ್ನು ಕಳೆದುಕೊಂಡು ಪುನಃ ತಮ್ಮ ಸ್ವಸ್ಥಾನವಾದ ಪರಮಾತ್ಮನ ಅವ್ಯಕ್ತಸ್ವರೂಪದಲ್ಲಿಯೇ ಐಕ್ಯವಾಗುವವು. ಸಮುದ್ರವನ್ನು ಸೇರಿದ ಬಳಿಕ ಅವುಗಳಲ್ಲಿ ಐಕ್ಯವಾದ ಗಂಗಾನದಿಗಳಿಗೆ ಹೇಗೆ ಪ್ರತ್ಯೇಕರೂಪವಾಗಲಿ, ನಾಮನಿರ್ದೇಶವಾಗಲಿ ಇರದೆ ಕೇವಲ ಸಮುದ್ರವೆಂಬ ಒಂದೇ ಹೆಸರು ಮಾತ್ರವಿರುವುದೋ ಅದರಂತೆ ಪರಮಾತ್ಮನಿಂದ ಸೃಷ್ಟರಾದ ಜೀವರಾಶಿಗಳೂ ಜಗದಾದಿಗಳೂ ನಾನಾರೂಪಗಳಿಂದಲೂ ನಾನಾಹೆಸರುಗಳಿಂದಲೂ ಕೆಲವು ಕಾಲ ಪ್ರಸಿದ್ಧವಾಗಿದ್ದು ಕೊನೆಗೆ ಲಯಕಾಲದಲ್ಲಿ ತಮ್ಮ ರೂಪಗಳನ್ನೂ ಹೆಸರುಗಳನ್ನೂ ಕಳೆದುಕೊಂಡು ಹಿಂದಿನಂತೆ ಪರಮಾತ್ಮನ ಅವ್ಯಕ್ತಸ್ವರೂಪದಲ್ಲಿಯೇ ಲೀನವಾಗುವವು. ಆಗ ಪರಮಾತ್ಮನ ಅವ್ಯಕ್ತಸ್ವರೂಪವೊಂದು ಹೊರತು ಮತ್ತೇನೂ ಇರುವುದಿಲ್ಲ. ಇದನ್ನೇ ಪರಮಾತ್ಮನ ಅಥವಾ ಪರಮಪುರುಷನ ವಾಸ್ತವ ಅಥವಾ, ನಿಜಸ್ವರೂಪ ಸಹಜಾವಸ್ಥೆ ಎನ್ನುವರು, ಇದರ ವಿಸ್ತಾರವಾದ ವಿವರಣೆಯನ್ನು ಉಪನಿಷತ್ತುಗಳಲ್ಲಿ ನೋಡಬಹುದು.

---

॥ ಸಂಹಿತಾಪಾಠಃ ॥

ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ ।
ತತೋ ವಿಷ್ವಙ್ವ್ಯಕ್ರಾಮತ್ಸಾಶನಾನಶನೇ ಅಭಿ ॥ ೪ ॥

॥ ಪದಪಾಠಃ ॥

ತ್ರಿಽಪಾತ್ । ಊರ್ಧ್ವಃ । ಉತ್ । ಐತ್ । ಪುರುಷಃ । ಪಾದಃ । ಅಸ್ಯ । ಇಹ । ಅಭವತ್ । ಪುನರಿತಿ ।
ತತಃ । ವಿಷ್ವಙ್ । ವಿ । ಅಕ್ರಾಮತ್ । ಸಾಶನಾನಶನೇ ಇತಿ । ಅಭಿ ॥ ೪ ॥

॥ ಸಾಯಣಭಾಷ್ಯಂ ॥

ಯೋಽಯಂ ತ್ರಿಪಾತ್ಪುರುಷಃ ಸಂಸಾರರಹಿತೋ ಬ್ರಹ್ಮಸ್ವರೂಪಃ ಸೋಽಯಮೂರ್ಧ್ವ ಉದೈತ್ । ಅಸ್ಮಾದಜ್ಞಾನಕಾರ್ಯಾತ್ಸಂಸಾರಾದ್ಬಹಿರ್ಭೂತೋಽತ್ರತ್ಯೈರ್ಗುಣದೋಷೈರಸ್ಪೃಷ್ಟ ಉತ್ಕರ್ಷೇಣ ಸ್ಥಿತವಾನ್ । ತಸ್ಯಾಽಸ್ಯ ಸೋಽಯಂ ಪಾದೋ ಲೇಶಃ ಸೋಽಯಮಿಹ ಮಾಯಾಯಾಂ ಪುನರಭವತ್ । ಸೃಷ್ಟಿಸಂಹಾರಾಭ್ಯಾಂ ಪುನಃ ಪುನರಾಗಚ್ಛತಿ । ಅಸ್ಯ ಸರ್ವಸ್ಯ ಜಗತಃ ಪರಮಾತ್ಮ-ಲೇಶತ್ವಂ ಭಗವತಾಪ್ಯುಕ್ತಂ । ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ । ಭ. ಗೀ. ೧೦-೪೨ । ಇತಿ । ತತೋ ಮಾಯಾಯಾಮಾಗತ್ಯಾನಂತರಂ ವಿಷ್ವಙ್ ದೇವಮನುಷ್ಯತಿರ್ಯಗಾದಿರೂಪೇಣ ವಿವಿಧಃ ಸನ್ ವ್ಯಕ್ರಾಮತ್ । ವ್ಯಾಪ್ತವಾನ್ । ಕಿಂ ಕೃತ್ವಾ । ಸಾಶನಾನಶನೇ ಅಭಿಲಕ್ಷ್ಯ । ಸಾಶನಂ ಭೋಜನಾದಿವ್ಯವಹಾರೋಪೇತಂ ಚೇತನಂ ಪ್ರಾಣಿಜಾತಂ ಅನಶನಂ ತದ್ರಹಿತಮಚೇತನಂ ಗಿರಿನದ್ಯಾ-ದಿಕಂ । ತದುಭಯಂ ಯಥಾ ಸ್ಯಾತ್ತಥಾ ಸ್ವಯಮೇವ ವಿವಿಧೋ ಭೂತ್ವಾ ವ್ಯಾಪ್ತವಾನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ತ್ರಿಪಾತ್ ಪುರುಷಃ**—ಇಂದ್ರಿಯ ಪ್ರತ್ಯಕ್ಷಕ್ಕೆ ಗೋಚರವಲ್ಲದ ತನ್ನ ಮುಕ್ಕಾಲುಭಾಗವನ್ನು ಸ್ವಪ್ರಕಾಶಕವಾದ ಲೋಕದಲ್ಲಿ ಸ್ಥಾಪಿಸಿರುವ ಪುರುಷನು । **ಊರ್ಧ್ವಂ**—ಉತ್ಕೃಷ್ಟವಾದ ದಿವ್ಯಲೋಕದಲ್ಲಿ । **ಉದೈತ್**—ಸಂಸಾರಾತೀತನಾಗಿ ಸ್ಥಾಪಿತನಾಗಿದ್ದಾನೆ । **ಅಸ್ಯ**—ಈ ಆದಿಪುರುಷನ । **ಪಾದಃ**—ಉಳಿದ ನಾಲ್ಕನೆಯ ಒಂದು ಭಾಗವು । **ಇಹ**—ಸಂಸಾರರೂಪದಲ್ಲಿ । **ಪುನಃ ಅಭವತ್**—ಪದೇ ಪದೇ ಆವಿರ್ಭೂತವಾಗುತ್ತದೆ । **ತತಃ**—ವ್ಯಕ್ತರೂಪವನ್ನು ಹೊಂದಿದನಂತರ । **ಸಾಶನಾನಶನೇ ಅಭಿ**—ಹಸಿವು ದಾಹಗಳುಳ್ಳ ಪ್ರಾಣಿರೂಪದಲ್ಲಿಯೂ ಇವಿಲ್ಲದ ಅಚೇತನ ರೂಪದಲ್ಲಿಯೂ । **ವಿಷ್ವಙ್**—ನಾನಾರೂಪಗಳಲ್ಲಿ । **ವ್ಯಕ್ರಾಮತ್**—ಜಗತ್ತನ್ನು ವ್ಯಾಪಿಸಿದನು.

॥ ಭಾವಾರ್ಥ ॥

ಇಂದ್ರಿಯ ಪ್ರತ್ಯಕ್ಷಕ್ಕೆ ಗೋಚರವಲ್ಲದ ಮುಕ್ಕಾಲುಭಾಗವನ್ನು ಸ್ವಪ್ರಕಾಶಕವಾದ ಲೋಕದಲ್ಲಿ ಸ್ಥಾಪಿಸಿರುವ ಪುರುಷನು ಉತ್ಕೃಷ್ಟವಾದ ದಿವ್ಯಲೋಕದಲ್ಲಿ ಸಂಸಾರಾತೀತನಾಗಿ ಸ್ಥಾಪಿತನಾಗಿದ್ದಾನೆ. ಈ ಆದಿಪುರುಷನ

ನಾಲ್ಕನೆಯ ಒಂದು ಭಾಗವು ಮಾತ್ರ ಸಂಸಾರರೂಪದಲ್ಲಿ ಪದೇಪದೇ ಆವಿರ್ಭೂತವಾಗುತ್ತದೆ. ಈ ಪರಮಪುರುಷನು ವ್ಯಕ್ತಿರೂಪವನ್ನು ಹೊಂದಿದನಂತರ ಹಸಿವು ದಾಹಗಳುಳ್ಳ ಪ್ರಾಣಿರೂಪದಲ್ಲಿಯೂ ಇವಿಲ್ಲದ ಅಚೇತನ ರೂಪದಲ್ಲಿಯೂ ನಾನಾರೂಪಗಳಲ್ಲಿ ಜಗತ್ತನ್ನು ವ್ಯಾಪಿಸುತ್ತಾನೆ.

## English Translation

Three-fourths of Purusha ascended ; the other fourth that remained in this world proceeds repeatedly and, diversified in various forms, went to all animate and inanimate creation.

॥ ವಿಶೇಷವಿಷಯಗಳು ॥

ಈಶ್ವರನಿಗೂ ಪ್ರಪಂಚಕ್ಕೂ ಇರುವ ಸಂಬಂಧರಾಹಿತ್ಯವನ್ನು ಮೊದಲು ತಿಳಿಸಿ, ನಂತರ ಪುನಃ ಅದೇ ಅವ್ಯಾಕೃತನಾದ ಈಶ್ವರನು ತನ್ನದೇ ಆದ ಅಂಶದಿಂದ ಜಗದ್ರೂಪದಲ್ಲಿ ಪರಿವರ್ತಿತವಾಗುವುದನ್ನು ಈ ಮಂತ್ರದಲ್ಲಿ ವರ್ಣಿಸಿ ಸ್ತುತಿಸಿದೆ. ಈಶ್ವರನ ಲೀಲಾವಿಭೂತಿಯು ಇಲ್ಲಿ ಪ್ರಶಂಸಿಸಲ್ಪಟ್ಟಿದೆ.

**ತ್ರಿಪಾದೂರ್ಧ್ವ ಉದೈತ್ಪುರುಷಃ** ಎಂಬ ಭಾಗಕ್ಕೆ ಮೂರು ಅಥವಾ ನಾಲ್ಕು ವಿಧದಲ್ಲಿ ತಾತ್ಪರ್ಯವನ್ನು ಹೇಳಬಹುದೆಂದು ಭಾಷ್ಯಗಳಿಂದ ತಿಳಿಯುತ್ತದೆ. ಮೊದಲನೆಯದಾಗಿ, ಸಾಯಣರ ವಿವರಣವು ಈ ರೀತಿಯಿದೆ.

೧

**ಯೋಽಯಂ ತ್ರಿಪಾತ್ಪುರುಷಃ ಸಂಸಾರಸ್ಪರ್ಶರಹಿತೋ ಬಹುಲಸ್ವರೂಪಃ ಸೋಽಯಮೂರ್ಧ್ವ ಉದೈತ್ । ಅಸ್ಮಾದಜ್ಞಾನಕಾರ್ಯಾತ್ಸಂಸಾರಾದ್ಬಹಿರ್ಭೂತೋಽತ್ರತ್ಯೈರ್ಗುಣದೋಷೈರಸ್ಪೃಷ್ಟ ಉತ್ಕರ್ಷೇಣ ಸ್ಥಿತವಾನ್ ।**

ತ್ರಿಪಾತ್ಸಂಜ್ಞಕನಾದ ಪುರುಷನು ಅಧೋಲೋಕದಲ್ಲಿದ್ದು (ಬ್ರಹ್ಮನ ಅಪರರೂಪವಾದ ಜಗತ್ತಿನಲ್ಲಿದ್ದು) ಜಗತ್ಸಂಸಾರದ ದೋಷಗಳಿಂದ ಲಿಪ್ತನಾಗದೆ ಊರ್ಧ್ವಲೋಕಕ್ಕೆ ಸೇರಿದವನಾಗಿ ಸ್ವಪ್ರಕಾಶಕವಾದ ಪ್ರಭೆಯಿಂದ ಕೂಡಿ ವಿರಾಜಿಸುತ್ತಾನೆ. ಅಜ್ಞಾನ, ಅಹಂಕಾರ ಇತ್ಯಾದಿ ಸಕಲ ದೋಷಗಳಿಂದಲೂ ಬಾಹ್ಯನೂ, ತ್ರಿಗುಣಾತೀತನೂ ಆಗಿ ಅತ್ಯುತ್ಕೃಷ್ಟವಾದ ಸ್ಥಿತಿಯಲ್ಲಿದ್ದಾನೆ. ಮಹೀಧರ, ರಾಮಾನುಜ (ಶ್ರೀ ಭಾಷ್ಯಕಾರರಾದ ರಾಮಾನುಜರಲ್ಲ) ಇವರೆಲ್ಲರೂ ಅದೇ ಅಭಿಪ್ರಾಯವನ್ನೇ ಸಮರ್ಥಿಸುತ್ತಾರೆ. ಇದಲ್ಲದೇ ಇನ್ನೂ ಕೆಲವು ತಾತ್ಪರ್ಯಗಳೂ ಸಾಧ್ಯವೆಂದೂ ತೋರಿಸಿದ್ದಾರೆ. ಹೇಗೆಂದರೆ—

೨

**ತ್ರಿಪಾತ್** ಶಬ್ದಕ್ಕೆ ಮೂರು ಪಾದಗಳೆಂದರ್ಥ. ಆ ಮೂರು ಪಾದಗಳಿಗಿಂತಲೂ ಊರ್ಧ್ವಸ್ಥಾನದಲ್ಲಿ ಸ್ಥಾಪಿತನಾಗಿದ್ದಾನೆ. ಆ ಮೂರು ಪಾದಗಳು ಯಾವುವೆಂದರೆ, **ಜನ, ಮಹ** ಮತ್ತು **ಸತ್ಯ** ಇವುಗಳನ್ನೊಳಗೊಂಡ ಮೂರು ಲೋಕಗಳು. ಇವುಗಳನ್ನು ಮೀರಿದ ಸ್ಥಾನದಲ್ಲಿ ಸ್ವಯಂ ಪ್ರಕಾಶಿತನಾಗಿದ್ದಾನೆಂದು ತಾತ್ಪರ್ಯ.

೩

ಮೂರನೆಯದಾಗಿ—**ತ್ರಿಪಾದಿತ್ಯನೇನ ಉದರ, ಹೃದಯ, ದಹರಾಣಾಂ ತತ ಊರ್ಧ್ವಮುಪರಿಭಾಗೇ ಸಹಸ್ರಾರೇ ಪುರುಷ ಉದೈತ್ ।** ಪುರುಷದೇಹದಲ್ಲಿ ಉದರ ಹೃದಯ ಮತ್ತು ದಹರ ಎಂಬ ಮೂರು ಸ್ಥಿತಿಗಳಿವೆ. ಇವೆಲ್ಲವನ್ನು ಮೀರಿದ **ಸಹಸ್ರಾರ** ಪ್ರದೇಶದಲ್ಲಿ ಸ್ಥಿತಿತನಾಗಿದ್ದಾನೆ, ಎಂಬುದು ಇನ್ನೊಂದು ತಾತ್ಪರ್ಯ-

೪

ನಾಲ್ಕನೆಯದಾಗಿ—**ಯದ್ವಾ ತ್ರಿಪಾಚ್ಛಬ್ದೇನ ಜಾಗ್ರತ್ಸ್ವಪ್ನಸುಷುಪ್ತೀನಾಂ ಗ್ರಹಣಂ ತತ ಊರ್ಧ್ವಂ ಉಪರಿಭಾಗೇ ತುರೀಯಾಯಾಮುದೈತ್ ಸ್ಥೋಪಲಬ್ಧಿಂ ಪ್ರಾಪ್ತ ಇತ್ಯರ್ಥಃ** । **ಜಾಗ್ರತ್**, **ಸ್ವಪ್ನ** ಮತ್ತು **ಸುಷುಪ್ತಿ** ಎಂಬ ಮೂರು ಅವಸ್ಥೆಗಳೂ ತ್ರಿಪಾಚ್ಛಬ್ದದಿಂದ ಸೂಚಿತವಾಗುತ್ತದೆ. ಈ ಮೂರನ್ನು ಮೀರಿದ ನಾಲ್ಕನೆಯ ಅವಸ್ಥೆಗೆ ಸೇರಿದ್ದಾನೆ ಎಂದು ಅರ್ಥ.

೫

ಐದನೆಯದಾಗಿ—**ತ್ರಿಪಾಚ್ಛಬ್ದೇನ ತತ ಊರ್ಧ್ವಂ** । **ಋಕ್**, ಯಜುಸ್ ಮತ್ತು ಸಾಮ ಎಂಬ ಬ್ರಹ್ಮನನ್ನುಪಾದಿಸುವ ವೇದರಾಶಿಗಳಿಗಿಂತಲೂ ಮೀರಿದ ಸ್ಥಿತಿಯುಳ್ಳವನು ಎಂದು ತಾತ್ಪರ್ಯ. ಹೀಗೆ ನಾನಾರ್ಥಗಳನ್ನು ಹೇಳಿದೆ. ಈ ಅರ್ಥಗಳನ್ನು ಹೇಳಲು ಶ್ರುತಿವಾಕ್ಯಗಳ ಆಧಾರವಿದೆಯೇ ಎಂಬ ವಿಷಯವನ್ನು ಸದ್ಯಃ ಪರಿಶೀಲಿಸಲಾಗುತ್ತದೆ.

ಮೊದಲನೆಯದಾಗಿ. ಸಾಯಣರ ತಾತ್ಪರ್ಯವಿವರಣೆ—ಉತ್ಪನ್ನವಾದ ಪ್ರಪಂಚಕ್ಕೂ ಮತ್ತು ಪ್ರಪಂಚಾತೀತವಾದ ಬ್ರಹ್ಮನಿಗೂ ವ್ಯತ್ಯಾಸವನ್ನು ತೋರಿಸಿದೆ. ಏಕಪಾದವಾದ ಪ್ರಪಂಚವು ಅಜ್ಞಾನದಿಂದ ತುಂಬಿದೆ. ಅನೇಕವಿಧವಾದ ನ್ಯೂನತೆಗಳಿಂದ ಕೂಡಿದೆ. ದೋಷಪೂರಿತವಾಗಿದೆ. ರಜಸ್ಸು ಮತ್ತು ತಮೋಗುಣಗಳಿಂದ ತುಂಬಿದೆ. ಆದರೆ, ತ್ರಿಪಾದಗಳುಳ್ಳ ಎಂದರೆ ಅನಾದ್ಯನಂತವಾದ ಸ್ವರೂಪವುಳ್ಳ ಪರಮಪುರುಷನು ಈ ದೋಷಗಳಿಂದ ಬಾಹ್ಯನಾಗಿದ್ದಾನೆ. ಸಂಸಾರದ ನ್ಯೂನತೆಗಳಿಂದ ಮುಕ್ತನಾಗಿದ್ದಾನೆ ಮತ್ತು ಪರಿಶುದ್ಧನಾಗಿದ್ದಾನೆ ಎಂಬ ಈ ವ್ಯತ್ಯಾಸವನ್ನು ತೋರಿಸಲು **ತ್ರಿಪಾದೂರ್ಧ್ವ ಉದೈತ್** ಪುರುಷಃ ಎಂದು ತಿಳಿಸಿದೆ. ಈ ವ್ಯತ್ಯಾಸವನ್ನು ಉಪನಿಷದ್ವಾಕ್ಯಗಳು ಈ ರೀತಿ ತಿಳಿಸುತ್ತವೆ.

ಯಾವ ಬ್ರಹ್ಮತತ್ತ್ವವನ್ನು **ಸತ್**, **ಅಸತ್** ಎಂದು ಎರಡು ವಿಶೇಷಣಗಳಿಂದಲೂ ವರ್ಣಿಸಿದೆಯೋ, ಅದು ಅಸದಾತ್ಮಕವಾದ ಅವಸ್ಥೆಯಲ್ಲಿರುವಾಗ ತ್ರಿಗುಣಪೂರಿತವಾಗಿರುತ್ತದೆ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಂ ।**
**ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ।**

(ಶ್ವೇ. ೪-೧೦)

(ಸಾಂಖ್ಯಮತದಂತೆ ಪ್ರಕೃತಿಯು ಈಶ್ವರನಿರ್ಮಿತವಲ್ಲ. ಅದು ಅನಾದಿ. ಮೂಲಪ್ರಕೃತಿಗೆ ಉತ್ಪನ್ನವಿಲ್ಲ. ಭಗವದ್ಗೀತೆಯು ಸಾಂಖ್ಯಮತವನ್ನೇ ಪ್ರತಿಪಾದಿಸಿದರೂ, ಸಕಲ ವಿಧವಾದ ಪ್ರಕೃತಿಯೂ ಈಶ್ವರನ ಅಂಶವೆಂದೇ ತಿಳಿಸುತ್ತದೆ.) ಪ್ರಕೃತಿಯು ಈಶ್ವರನ ಮಾಯಾರೂಪವಾದ ಸೃಷ್ಟಿ. ಈ ಮಾಯಾಪೂರಿತನಾದ ಮಾಯಿಯೇ ಈಶ್ವರನು, ಅವಿದ್ಯಾಯುತವಾದ ಸಕಲ ಜಗತ್ತನ್ನೂ ಈಶ್ವರನು ಆವರಿಸಿದ್ದಾನೆ. ಸಕಲ ಜಗತ್ತೂ ಈಶ್ವರನಿಂದ ಆವೃತವಾಗಿದ್ದರೂ ಸಹ ಈಶ್ವರನ ನಾಲ್ಕು ಪಾದಗಳನ್ನೂ ಅರಿತ ಹೊರತು ಪೂರ್ಣವಾದ ಸಾಕ್ಷಾತ್ಕಾರವಾಗುವುದಿಲ್ಲ. (ಅಕೃತ್ಸ್ನ) ಜಗತ್ತನ್ನು ಪ್ರವೇಶಿಸುವ ಕಾಲದಲ್ಲಿ ತನ್ನ ನಿಜವಾದ ರೂಪವನ್ನು ಮರೆಸಿಕೊಳ್ಳುತ್ತಾನೆ ಎಂಬ ಅಭಿಪ್ರಾಯವು ಋಕ್ಸಂಹಿತೆಯಲ್ಲಿಯೂ ತಿಳಿಸಲ್ಪಟ್ಟಿದೆ.

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನ್ಯಸೀದತ್ಪಿತಾ ನಃ ।**
**ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾँ ಆ ವಿವೇಶ ॥**

(ಋ. ಸಂ. ೧೦-೮೧-೧)

ವಿಶ್ವಕರ್ಮನು ಸಕಲ ಜಗತ್ತನ್ನೂ ತನ್ನಿಂದ ನಿರ್ಮಿತವಾದ ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸಿದನು. ಕೊನೆಯಲ್ಲಿ ತನ್ನನ್ನು ಅರ್ಪಿಸಿದನು. ಪುನಃ ಜಗತ್ತನ್ನು ಸೃಜಿಸಬೇಕೆಂದಿಚ್ಛಿಸಿ ಅದನ್ನು ಪ್ರಥಮತಃ ಮರೆಸಿದನು ಎಂದಿದೆ. ಇಲ್ಲಿ **ಪ್ರಥಮಚ್ಛತ್ ಅವರಾನ್ ಆ ವಿವೇಶ** ಎಂಬ ವಾಕ್ಯಕ್ಕೆ ಸಾಯಣರು ಈ ರೀತಿ ತಿಳಿಸಿದ್ದಾರೆ.

**ಪ್ರಥಮಮಚ್ಛತ್ ಪ್ರಥಮಂ ಮುಖ್ಯಂ ನಿಷ್ಪ್ರಪಂಚಂ ಪಾರಮಾರ್ಥಿಕಂ ರೂಪಮಾವೃಣ್ವನ್ ಸ್ವಸೃಷ್ಟಾನ್ ಪ್ರಾಣಿಹೃದಯಪ್ರದೇಶಾನಾವಿವೇಶ ಆವಿಷ್ಟವಾನ್ ಜೀವರೂಪೇಣ ।**

ಪ್ರಪಂಚಾತೀತವಾದ ತನ್ನ ಪಾರಮಾರ್ಥಿಕವಾದ ಸ್ವರೂಪವನ್ನು ಮರೆಸಿ ತನ್ನಿಂದ ಸೃಷ್ಟವಾದ ಜಗತ್ತಿನ ರೂಪದಲ್ಲಿ ಸಕಲ ಭೂತಗಳಲ್ಲೂ ಪ್ರವೇಶಿಸಿದನು ಎಂದರ್ಥವೆಂದು ವಿವರಿಸಿದೆ. ಆದುದರಿಂದ ಜಗತ್ತನ್ನು ಉತ್ಪನ್ನ ಮಾಡಿದನಂತರ ಈಶ್ವರನ ಸ್ವರೂಪವು ಎರಡು ಬಗೆಯಾಯಿತು. ನಾಮ ಮತ್ತು ರೂಪಗಳಿಂದ ಕೂಡಿದ ಜಗತ್ತು ಮತ್ತು ನಾಮರೂಪ ರಹಿತವಾದ ಈಶ್ವರ. ನಾಮರೂಪರಹಿತನಾದ ಈಶ್ವರನೇ **ತ್ರಿಪಾದೂರ್ಧ್ವ ಉದೈತ್** ಎಂದು ವರ್ಣಿತನಾಗಿದ್ದಾನೆ. ಈ ವಿಭಾಗವು ಹೇಗೆ ಎಂಬುದನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

**ಬ್ರಹ್ಮ ವಾ ಇದಮಗ್ರ ಆಸೀತ್ । ತದ್ದೇವಾನಸೃಜತ । ತದ್ದೇವಾನ್ಸೃಷ್ಟ್ವೈಷು ಲೋಕೇಷು ವ್ಯಾರೋಹಯದಸ್ಮಿನ್ನೇವ ಲೋಕೇಽಗ್ನಿಂ ವಾಯುಮಂತರಿಕ್ಷೇ ದಿವ್ಯೇವ ಸೂರ್ಯಂ ।**

(ಶ. ಬ್ರಾ. ೧೧-೨-೩-೧)

ಸೃಷ್ಟಿಗೆ ಆರಂಭದಲ್ಲಿ ಬ್ರಹ್ಮನು ಮಾತ್ರವಿದ್ದನು. ಅನಂತರ ಅವನು ದೇವತೆಗಳನ್ನು ಉತ್ಪನ್ನಮಾಡಿದನು. ಅವರನ್ನು ಸೃಜಿಸಿ ಅವರನ್ನು ಈ ಮೂರು ಲೋಕಗಳಲ್ಲೂ ಸ್ಥಾಪಿಸಿದನು. ಪೃಥ್ವಿಯಲ್ಲಿ ಅಗ್ನಿಯನ್ನೂ, ಅಂತರಿಕ್ಷದಲ್ಲಿ ವಾಯುವನ್ನೂ ಮತ್ತು ದ್ಯುಲೋಕದಲ್ಲಿ ಸೂರ್ಯನನ್ನೂ ಸ್ಥಾಪಿಸಿದನು.

**ಅಥ ಯೇಽತ ಊರ್ಧ್ವಾ ಲೋಕಾಃ । ತದ್ಯಾ ಅತ ಊರ್ಧ್ವಾ ದೇವತಾಸ್ತೇಷು ತಾ ದೇವತಾ ವ್ಯಾರೋಹಯತ್ಸ ಯಥಾ ಹೈವೇಮ ಆವಿರ್ಲೋಕಾ ಇಮಾಶ್ಚ ದೇವತಾ ಏವಮು ಹೈವ ತ ಆವಿರ್ಲೋಕಾಸ್ತಾಶ್ಚ ದೇವತಾ ಯೇಷು ತಾ ದೇವತಾ ವ್ಯಾರೋಹಯತ್ ।**

(ಶ. ಬ್ರಾ. ೧೧-೨-೩-೨)

ಈ ಲೋಕಗಳಿಗಿಂತಲೂ ಉನ್ನತವಾದ ಲೋಕಗಳಲ್ಲಿ ಇವರಿಗಿಂತಲೂ ಉತ್ತಮರಾದ ದೇವತೆಗಳನ್ನು ಸ್ಥಾಪಿಸಿದನು. ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾಗುವ ಈ ಲೋಕಗಳು ಮತ್ತು ಇವುಗಳಲ್ಲಿ ಸ್ಥಾಪಿತವಾದ ದೇವತೆಗಳಂತೆಯೇ ಉಳಿದ ಲೋಕಗಳೂ ಆಯಾ ದೇವತೆಗಳೂ ಪ್ರತ್ಯಕ್ಷ ಗೋಚರರಾದರು.

**ಅಥ ಬ್ರಹ್ಮೈವ ಪರಾರ್ಧಮಗಚ್ಛತ್ । ತತ್ಪರಾರ್ಧಂ ಗತ್ವೈಕ್ಷತ ಕಥಂ ನ್ವಿಮಾನ್ ಲೋಕಾ-ನ್ಪ್ರತ್ಯವೇಯಾಮಿತಿ ತದ್ದ್ವಾಭ್ಯಾಮೇವ ಪ್ರತ್ಯವೈದ್ರೂಪೇಣ ಚೈವ ನಾಮ್ನಾ ಸ ಚ ಯಸ್ಯ ಕಸ್ಯ ಚ ನಾಮಾಸ್ತಿ ತನ್ನಾಮ ಯಸ್ಯೋ ಅಪಿ ನಾಮ ನಾಸ್ತಿ ಯದ್ವೇದ ರೂಪೇಣೇದಗ್ಂ ರೂಪಮಿತಿ ತದ್ರೂಪಮೇತಾವದ್ವಾ ಇದಂ ಯಾವದ್ರೂಪಂ ಚೈವ ನಾಮ ಚ ॥**

(ಶ. ಬ್ರಾ. ೧೧-೨-೩-೩)

ಅನಂತರ ಬ್ರಹ್ಮನು ಪ್ರಧಾನಲೋಕಕ್ಕೆ ಸರಿದನು. ಇಲ್ಲಿ ಪ್ರಧಾನಲೋಕವಾವುದು ಎಂಬುದಕ್ಕೆ ಸಾಯಣರು ವಿವರಣೆಯನ್ನು ಹೇಳುತ್ತ **ಪರಾರ್ಧಂ ಉತ್ಕೃಷ್ಟಸರ್ವಲೋಕಾವಧಿಭೂತಂ ಸತ್ಯಲೋಕಾಖ್ಯಂ ಸ್ಥಾನಂ । ಪ್ರತ್ಯವೇಯಾಂ ಪ್ರತ್ಯೇಕಂ ಪ್ರಾಪ್ನುಯಾಂ** । ಉಳಿದ ಸಕಲಲೋಕಗಳಿಗಿಂತಲೂ ಉತ್ಕೃಷ್ಟವಾದ ಸತ್ಯಲೋಕವೇ ಇಲ್ಲಿ **ಪರಾರ್ಧ**ವಾಚ್ಯವಾಗಿರುತ್ತದೆ. ಉಳಿದ ಲೋಕಗಳಲ್ಲಿ ದೇವತೆಗಳನ್ನು ಸ್ಥಾಪಿಸಿ ತಾನು ಮಾತ್ರ ಗೋಚರಾತೀತನಾಗಿ ಅಂಶಕ್ಕಿಂತಲೂ ಮೀರಿದ ತನ್ನ ಸ್ವಪ್ರಕಾಶಕವಾದ ಸ್ಥಿತಿಯಲ್ಲಿ ಪ್ರತ್ಯೇಕತೆಯನ್ನು ಹೊಂದಿದನು ಎಂದು ತಿಳಿಸಿದ್ದಾರೆ. ಆ ಲೋಕದಲ್ಲಿ ಪ್ರತ್ಯೇಕತೆಯನ್ನು ಹೊಂದಿದನಂತರ ಪುನಃ ಉಳಿದ ಲೋಕಗಳನ್ನು ಯಾವ ರೀತಿ ವ್ಯಾಪಿಸಲಿ ಎಂದು ಚಿಂತಿಸಿದನು. ಆಗ ನಾಮರೂಪರಹಿತನಾದ ಬ್ರಹ್ಮನು ಈ ಲೋಕಗಳನ್ನು **ನಾಮ** ಮತ್ತು **ರೂಪ** ಈ ಎರಡು ವಸ್ತುಗಳ ಮೂಲಕ ವ್ಯಾಪಿಸುತ್ತೇನೆ ಎಂದು ನಿಶ್ಚಯಮಾಡಿದನು. ಅನಂತರ ಅದೇ ರೀತಿ ನಾಮ ರೂಪಗಳಿಂದ ಜಗತ್ತನ್ನು ವ್ಯಾಪಿಸಿದನು. ಜಗತ್ತಿನಲ್ಲಿ ಯಾವ ಯಾವ ತತ್ತ್ವಗಳಿವೆಯೋ ಅವೆಲ್ಲವೂ ನಾಮ ಮತ್ತು ರೂಪಗಳಿಂದಲೇ ನಿರ್ದೇಶಿಸಲ್ಪಡುತ್ತವೆ.

**ತೇ ಹೈತೇ ಬ್ರಹ್ಮಣೋ ಮಹತೀಽಅಭ್ವೇ । ಸ ಯೋ ಹೈತೇ ಬ್ರಹ್ಮಣೋ ಮಹತೀ ಅಭ್ವೇ ವೇದ ಮಹದ್ಧೈವಾಭ್ವಂ ಭವತಿ ।**

(ಶ. ಬ್ರಾ, ೧೧-೨-೩-೪)

ನಾಮ ಮತ್ತು ರೂಪ ಇವೆರಡೂ ಸಹ ಸೃಷ್ಟವಾದ ಜಗತ್ತಿನಲ್ಲಿ ಬ್ರಹ್ಮನ ಪ್ರಮಾಣಗಳು. ಈ ತತ್ತ್ವವನ್ನರಿತವನು ಅದೇ ಪ್ರಮಾಣವನ್ನು ಹೊಂದುತ್ತಾನೆ.

**ತೇ ಹೈತೇ ಬ್ರಹ್ಮಣೋ ಮಹತೀ ಯಕ್ಷೇ । ಸ ಯೋ ಹೈತೇ ಬ್ರಹ್ಮಣೋ ಮಹತೀ ಯಕ್ಷೇ ವೇದ ಮಹದ್ಧೈವ ಯಕ್ಷಂ ಭವತಿ ತಯೋರನ್ಯತರಜ್ಜ್ಯಾಯೋ ರೂಪಮೇವ ಯದ್ಯಪಿ ನಾಮ ರೂಪಮೇವ ತತ್ಸ ಯೋ ವೇದ ಜ್ಯಾಯಾನ್ ಹ ತಸ್ಮಾದ್ಭವತಿ ಯಸ್ಮಾ-ಜ್ಜ್ಯಾಯಾನ್ಬುಭೂಷತಿ ।**

(ಶ. ಬ್ರಾ. ೧೧-೨-೩-೫)

ಬ್ರಹ್ಮನು ಜಗತ್ತಿನಲ್ಲಿ **ನಾಮ** ಮತ್ತು **ರೂಪ** ಈ ಎರಡು ಪ್ರಕಾರಗಳಿಂದ ಮಾತ್ರ ತನ್ನ ಸ್ವರೂಪವನ್ನು ವ್ಯಕ್ತಪಡಿಸುತ್ತಾನೆ. ಈ ತತ್ತ್ವವನ್ನರಿತವನು ತನ್ನನ್ನೇ ಅತ್ಯತಿಶಯವನ್ನಾಗಿ ವ್ಯಕ್ತಪಡಿಸಿಕೊಳ್ಳುತ್ತಾನೆ. ಇವೆರಡರಲ್ಲಿ ರೂಪವು

ನಾಮಕ್ಕಿಂತಲೂ ಅಧಿಕವಾದುದು. ಯಾವುದು ನಾಮವನ್ನು (ಹೆಸರು) ಹೊಂದಿರುವುದೋ ಅವೆಲ್ಲಕ್ಕೂ ರೂಪವಿದ್ದೇ ಇರುತ್ತದೆ.

**ಮರ್ತ್ಯಾ ಹ ಹಾ ಅಗ್ರೇ ದೇವಾ ಆಸುಃ । ಸ ಯದ್ವೈವ ತೇ ಬ್ರಹ್ಮಣಾಪುರಥಾಮೃತಾ ಆಸುಃ.... .... .... ವಾಗ್ವೈ ನಾಮ ವಾಚಾ ಹಿ ನಾಮ ಗೃಹ್ಣಾತಿ ತೇನೋ ನಾಮಾ-ಪ್ನೋತ್ಯೇತಾವದ್ವಾ ಇದಗ್ಂ ಸರ್ವಂ ಯಾವದ್ರೂಪಂ ಚೈವ ನಾಮ ಚ ತತ್ಸರ್ವ-ಮಾಪ್ನೋತಿ ಸರ್ವಂ ವಾ ಅಕ್ಷಯ್ಯಮೇತೇನೋ ಹಾಸ್ಯಾಕ್ಷಯ್ಯಗ್ಂ ಸುಕೃತಂ ಭವತ್ಯ-ಕ್ಷಯ್ಯೋ ಲೋಕಃ ॥**

(ಶ. ಬ್ರಾ ೧೧-೨-೩.೬)

ದೇವತೆಗಳೂ ಸಹ ಮೊದಲು ಮರ್ತ್ಯರೇ ಆಗಿದ್ದರು. ಆದರೆ ಬ್ರಹ್ಮನಿಂದ ಅವರು ಅಮೃತರಾದೊಡನೆಯೇ ಅಮರ್ತ್ಯ-ರಾದರು. ನಾಮರೂಪಗಳನ್ನು ಹೊಂದಿರುವ ಎಲ್ಲ ತತ್ತ್ವಗಳಿಗೂ ಇದು ಅನ್ವಯಿಸುತ್ತದೆ. ಇವುಗಳಲ್ಲಿ ನಾಮವು ವಾಕ್ಕಿನಿಂದಲೂ ರೂಪವು ಮನಸ್ಸಿನಿಂದಲೂ ಯುಕ್ತವಾಗಿರುತ್ತವೆ. ಮತ್ತು ನಾಮ ಮತ್ತು ರೂಪ ಇವೆರಡರ ವ್ಯಾಪ್ತಿಯು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಜಗತ್ತಿನ ವ್ಯಾಪ್ತಿಯು ಇರುತ್ತದೆ. ಪೂರ್ಣವಾಗಿ ಬ್ರಹ್ಮಸ್ವರೂಪವನ್ನು ಹೊಂದಿ ನಾಮರೂಪಗಳಿಂದ ರಹಿತವಾದರೆ ಆಗ ಸಕಲವೂ ಅಮರ್ತ್ಯವಾಗುತ್ತವೆ. ಆದರೂ ಇವೆಲ್ಲ ಬ್ರಹ್ಮನ ಪಾದಮಾತ್ರವಾದ ಜಗತ್ತೇ ಆಗಿರುತ್ತವೆ. **ತ್ರಿಪಾತ್** ಸಂಜ್ಞಕನಾದ ಬ್ರಹ್ಮನು ಮಾತ್ರ **ಪರಾರ್ಧ** ಲೋಕ (ಸತ್ಯಲೋಕ) ದಲ್ಲಿರುತ್ತಾನೆ, ನಾಮರೂಪಾತೀತನಾಗಿಯೂ ಗೋಚರಾತೀತನಾಗಿಯೂ ಇರುತ್ತಾನೆಂದು ಪ್ರಕೃತಸೂಕ್ತದಲ್ಲಿ ವರ್ಣಿಸಿರುವ ವಿಷಯವನ್ನು ತಿಳಿಸಿದೆ. ನಾಮ ಮತ್ತು ರೂಪಗಳಿಂದ ಜಗತ್ತೆಲ್ಲವೂ ಪ್ರಕಾಶಿತ ವಾದರೂ ಸಹ ಪರಬ್ರಹ್ಮನಸ್ವರೂಪವು ಮಾತ್ರ ಗೋಚರಾತೀತವಾಗಿಯೇ ಇರುತ್ತದೆ. ಸತ್ಯಸ್ಯ **ಸತ್ಯಂ** ಎಂಬ ವರ್ಣನೆಯಲ್ಲಿ ಒಂದು ಸತ್ಯವು ಜಗತ್ತಿಗೆ ಅನ್ವಯಿಸುತ್ತದೆ. ಇನ್ನೊಂದು ಸತ್ಯವು ಪರಬ್ರಹ್ಮನಿಗೆ ಅನ್ವಿತವಾಗುತ್ತದೆ. ಒಂದು ಸತ್ಯವು, ಇನ್ನೊಂದು ಸತ್ಯವನ್ನು ಮರೆಸಿದೆ. ಜಗತ್ತು ತನ್ನ ನ್ಯೂನತೆಗಳಿಂದ ಕೂಡಿ ಪರಸತ್ಯವು ಕಣ್ಣಿಗೆ ಕಾಣದಿರುವಂತೆ ಮಾಡುತ್ತದೆ. ಹೇಗೆಂದರೆ

**ತದೇತದಮೃತಂ ಸತ್ಯೇನ ಚ್ಛನ್ನಂ ಪ್ರಾಣೋ ವಾ ಅಮೃತಂ ನಾಮರೂಪೇ ಸತ್ಯಂ ತಾಭ್ಯಾ-ಮಯಂ ಪ್ರಾಣಶ್ಛನ್ನಃ ।**

(ಬೃ. ಉ. ೧-೬-೩)

ಪ್ರಾಣವು ದೇಹಾಂತರ್ವರ್ತಿಯಾಗಿ ಆತ್ಮಭೂತವಾಗಿರುತ್ತದೆ. ಇದು ನಾಶರಹಿತವಾದುದು. ನಾಮ ಮತ್ತು ರೂಪಗಳು ವಿನಾಶಿಗಳು. ಕಾರ್ಯಾತ್ಮಕವಾದ ಶರೀರರೂಪದ ಅವಸ್ಥೆಯುಳ್ಳವು. ಆತ್ಮರೂಪನಾದ ಈ ಪ್ರಾಣವು ವಿನಾಶಿಯಾದ ಈ ಶರೀರದಿಂದ ಮುಚ್ಚಲ್ಪಟ್ಟಿದೆ.

**ಏತದೇವ ಸಂಸಾರತತ್ತ್ವಮವಿದ್ಯಾವಿಷಯಂ ಪ್ರದರ್ಶಿತಂ । ಅತ ಊರ್ಧ್ವಂ ವಿದ್ಯಾವಿಷಯ ಆತ್ಮಾಧಿಗಂತವ್ಯ ಇತಿ ಚತುರ್ಥ ಆರಭ್ಯತೇ ॥**

(ಶಂ. ಭಾ.)

ಈ ರೀತಿ ಪ್ರಾಣರೂಪನಾದ ಆತ್ಮನು ಅವಿದ್ಯೆಗೆ ವಿಷಯವಾದ ಶರೀರದಿಂದ ಮುಚ್ಚಲ್ಪಟ್ಟು ಆತ್ಮಜ್ಞಾನಕ್ಕೆ ಅವಕಾಶವನ್ನು ಕೊಡುವುದಿಲ್ಲ. ಆದುದರಿಂದ ಈ ಆತ್ಮನ ನಿಜವಾದ ಸ್ವರೂಪವನ್ನು ತಿಳಿಯಬೇಕಾದರೆ, ಶರೀರಕ್ಕಿಂತಲೂ ಎಂದರೆ ಜಗತ್ತನ್ನು ಆವರಿಸಿರುವ ನಾಮ ಮತ್ತು ರೂಪ ಎಂಬ ಉಪಾಧಿಗಳಿಗಿಂತಲೂ ಊರ್ಧ್ವಲೋಕಸ್ಥನಾದ ಆತ್ಮನನ್ನು ತಿಳಿಯಬೇಕು. ಅದೇ ನಿಜವಾದ ವಿದ್ಯೆಗೆ ವಿಷಯವಾಗಿರುತ್ತದೆ. ಅದನ್ನೇ **ತ್ರಿಪಾದೂರ್ಧ್ವ ಉದೈತ್** ಎಂದು ವರ್ಣಿಸಿದೆ.

ಬ್ರಹ್ಮನ ಏಕಪಾದವಾದ ಜಗತ್ತನ್ನೇ ಪೂರ್ಣಬ್ರಹ್ಮನೆಂದು ತಿಳಿದಿರುವವರೂ ಇದ್ದಾರೆ. ಆ ಜ್ಞಾನವೆಂತಹುದು ಮತ್ತು ಅವರ ಅಜ್ಞಾನದ ಫಲವೇನು ಎಂದರೆ—

**ತಂ ನ ಪಶ್ಯಂತಿ। ಅಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ವಾಕ್ಪಶ್ಯಂಶ್ಚಕ್ಷುಃ ಶೃಣ್ವಞ್ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತ್ಯಾತ್ಮೇತ್ಯೇವೋಪಾಸೀತ ಅತ್ರ ಹ್ಯೇತೇ ಸರ್ವ ಏಕಂ ಭವಂತಿ। ತದೇತತ್ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾನೇನ ಹ್ಯೇತತ್ಸರ್ವಂ ವೇದ ॥**

(ಬೃ ಉ. ೧-೪-೭)

ಸರ್ವಾಂತರ್ಯಾಮಿಯಾಗಿದ್ದರೂ ಪರಬ್ರಹ್ಮನನ್ನು ಯಾರೂ ನೋಡಲಾರರು. ಆವನು ದೃಷ್ಟಿಗೆ ಗೋಚರನಾದರೆ ಆಗ ಆವನ ಸ್ವರೂಪವು ನ್ಯೂನತೆಯನ್ನು ಹೊಂದಿದಂತಾಗುತ್ತದೆ. ಅದು ಉಸಿರಾಡುತ್ತಿರುವಾಗ ಪ್ರಾಣಸಂಜ್ಞಕವಾಗುತ್ತದೆ. ನೋಡುವಾಗ ಚಕ್ಷುಸ್ಸೆಂದು ಕರೆಯಲ್ಪಡುತ್ತದೆ. ಕೇಳುವಾಗ ಶ್ರೋತ್ರವೆಂದೂ, ಚಿಂತಿಸುವಾಗ ಮನಸ್ಸೆಂದು ಪ್ರಖ್ಯಾತವಾಗಿದೆ. ಇವೆಲ್ಲ ಅದರ ಕರ್ಮಗಳು. ಯಾರಾದರೂ ಇವುಗಳಲ್ಲಿ ಯಾವುದಾದರೂ ಒಂದನ್ನು ಮಾತ್ರ ಆರಾಧಿಸಿದರೆ ಆಗ ಬ್ರಹ್ಮನ ಪೂರ್ಣವಾದ ಸ್ವರೂಪವು ಅರಿತಂತಾಗುವುದಿಲ್ಲ. ಇವುಗಳನ್ನೆಲ್ಲ ಮೀರಿದ ಆತ್ಮನೆಂದು ಉಪಾಸಿಸಿದರೆ ಮಾತ್ರ ಇದರ ಪೂರ್ಣವಾದ ಅರಿವುಂಟಾಗುತ್ತದೆ. ಲೌಕಿಕಾತೀತವಾದ ಈ ಸ್ಥಿತಿಯಲ್ಲಿ ಮಾತ್ರ ಪ್ರಾಣಾದಿತತ್ತ್ವಗಳೆಲ್ಲವೂ ಐಕ್ಯವನ್ನು ಹೊಂದಿ ಸಾಮರಸ್ಯವನ್ನು ಪಡೆಯುತ್ತವೆ. ಅದೇ ಸಕಲ ಜ್ಞಾನಕ್ಕೂ **ಪದನೀಯ**ವಾಗುತ್ತದೆ ಎಂದರೆ ಎಲ್ಲಕ್ಕೂ ಮಾರ್ಗದರ್ಶಕವಾಗುತ್ತದೆ. ಅದರ ಸಹಾಯದಿಂದಲೇ ಸಕಲ ಜ್ಞಾನವೂ ಲಭಿಸುತ್ತದೆ.

ಯಾವ ಬ್ರಹ್ಮನ ಏಕಪಾದಾತ್ಮಕವಾದ ಜಗತ್ತನ್ನು ಸಾಯಣರು ಭಾಷ್ಯದಲ್ಲಿ ಅಜ್ಞಾನಪೂರಿತವೆಂದು ತಿಳಿಸಿರುವರೋ ಆ ಅಜ್ಞಾನಾತ್ಮಕವಾದ ಜಗತ್ತಿಗೂ ಜ್ಞಾನ ಮತ್ತು ಪ್ರಕಾಶಾತ್ಮಕವಾದ ಮತ್ತು ತ್ರಿಪಾತ್ಸಂಜ್ಞಕವಾದ ಪರಬ್ರಹ್ಮನಿಗೂ ಇರುವ ವ್ಯತ್ಯಾಸವನ್ನು ಈ ರೀತಿ ಸಿಳಿಸಿದೆ. ಜಗತ್ತಿನ ಅಜ್ಞಾನದ ಸ್ವರೂಪವೇನೆಂದರೆ—

**ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂಧೀರಾಃ ಪಂಡಿತಂಮನ್ಯಮಾನಾಃ।**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ॥**

(ಕಠ. ೨-೫)

ಅಜ್ಞಾನದ ಕೂಪದಲ್ಲಿ ಮುಳುಗಿ, ತಾವೇ ಪ್ರಜ್ಞರೆಂದೂ, ವಿವೇಕಿಗಳೆಂದಲೂ ತಿಳಿದು ಮೂಢರು ಅಲೆಯುತ್ತಿರುತ್ತಾರೆ. ಅವರಿಗೆ ಉತ್ತಮಲೋಕದ ಅರಿವೇ ಇರುವುದಿಲ್ಲ. ಒಬ್ಬ ಕುರುಡನನ್ನು ಇನ್ನೊಬ್ಬ ಕುರುಡನು ಮಾರ್ಗದರ್ಶಕನನ್ನಾಗಿ

ಇಟ್ಟುಕೊಳ್ಳುವಂತೆ, ಇಹಕ್ಕಿಂತ ಉತ್ತಮವಾದ ಲೋಕವಿರುವುದೆಂದು ತಿಳಿಯದೆ ಇರುವ ಈ ಅಜ್ಞಾನಿಗಳು ಒಬ್ಬರಿಗೊಬ್ಬರು ಮಾರ್ಗದರ್ಶಕರಾಗಿರುತ್ತಾರೆ. ಇದಕ್ಕೆ ಕಾರಣವೇನೆಂದರೆ—

**ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ ।**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶಮಾಪದ್ಯತೇ ಮೇ ॥**

(ಕಠ, ೨-೬)

ಇಹಕ್ಕಿಂತಲೂ ಬೇರೊಂದು ಪರಲೋಕವಿದೆಯೆಂದು ತಿಳಿಯಲು ಅಜ್ಞಾನಿಗಳಿಗೆ ಸಾಧ್ಯವಿಲ್ಲ. ಆರ್ಥಿಕಸಂಪತ್ತಿನಲ್ಲಿಯೇ ಬಿದ್ದು ಅವರು ಹೊರಳಾಡುತ್ತಿರುತ್ತಾರೆ. ಐಹಿಕಮಾತ್ರ ಸತ್ಯ. ಉಳಿದುದು ಅಸತ್ಯ ಎಂದು ಅವರು ವಾದಿಸುತ್ತಾರೆ. ಆದುದರಿಂದಲೇ ಪುನಃ ಪುನಃ ಜನನಮರಣಾದಿಗಳಿಗೆ ವಶರಾಗುತ್ತಾರೆ. ಆದುದರಿಂದ ಏಕಪಾದಾತ್ಮಕವಾದ ಜಗತ್ತಿಗಿಂತಲೂ ಮೀರಿದ ತ್ರಿಪಾದಾತ್ಮಕವಾದ ಬ್ರಹ್ಮಲೋಕವನ್ನು ಅರಿತವರಿಗೆ ಪುನಃಪುನಃ ಜನನಮರಣಾದಿಗಳ ಭಯವಿರುವುದಿಲ್ಲ. ಈ ಎರಡು ಲೋಕಗಳಿಗೂ ಇರುವ ವ್ಯತ್ಯಾಸವೇನೆಂದರೆ—

**ಅನಂದಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛಂತ್ಯವಿದ್ವಾಂಸೋಽಬುಧೋ ಜನಾಃ ॥**

(ಬೃ. ಉ. ೪-೪-೧೧)

ಅಜ್ಞಾನದಿಂದಲೂ ಇತರ ವಿಧವಾದ ಅಂಧಕಾರಗಳಿಂದಲೂ ಆವೃತವಾದ ಈ ಲೋಕಗಳು ಆನಂದದಾಯಕವಾಗಿರುವುದಿಲ್ಲ. ಜ್ಞಾನರಹಿತರೂ, ಅವಿವೇಕಿಗಳೂ ಆದ ಜನರು ಮರಣಾನಂತರ ಇದೇ ದುಃಖಕರವಾದ ಲೋಕಗಳಿಗೆ ಪ್ರವೇಶಿಸಿ ಪುನಃ ಪುನಃ ಜನನಮರಣಾದಿಗಳಿಗೆ ಪಾತ್ರರಾಗುತ್ತಾರೆ.

**ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ॥**

(ಬೃ. ಉ. ೪-೪-೧೨)

ತ್ರಿಪಾದಾತ್ಮಕವಾದ ಪರಮಪುರುಷನ ದಿವ್ಯಸ್ವರೂಪವನ್ನು ಅರಿತವನು ಐಹಿಕವಾದ ಮತ್ತು ನಾಶಕ್ಕೆ ವಿಷಯವಾದ ಲೌಕಿಕವ್ಯವಹಾರಗಳಲ್ಲಿ ಆಸಕ್ತಿಯನ್ನಿಡದೇ ಪರಮಾತ್ಮನನ್ನೇ ಆರಾಧಿಸುತ್ತಾನೆ.

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।**
**ತಾಗ್‌ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥**

(ಈಶ. ೩)

ಈಶ್ವರನ ಏಕಪಾದಾತ್ಮಕವಾದ ಈ ಲೋಕವು ಆಸುರೀಸಂಪತ್ತಿನಿಂದ ಕೂಡಿದೆ. ಕಗ್ಗತ್ತಲೆಯಿಂದ ತುಂಬಿದೆ. ತ್ರಿಪಾದಾತ್ಮಕನಾದ ಪರಮಾತ್ಮನನ್ನು ಅರಿಯದವರು ಆತ್ಮಘಾತಕರಾಗಿ ಪುನಃಪುನಃ ಇದೇ ಅಜ್ಞಾನಾವೃತವಾದ ಲೋಕದಲ್ಲಿ ಹುಟ್ಟಿ ನರಳುತ್ತಿರುವರು. ಪರಮಾತ್ಮನ ಲೋಕವು ಇದಕ್ಕಿಂತ ಉತ್ತಮವಾಗಿರುತ್ತದೆ ಎಂಬುದನ್ನು ತಿಳಿಸಲು **ಊರ್ಧ್ವ ಉದೈತ್ ಪುರುಷಃ** ಎಂದಿರುತ್ತದೆ. ಎಂದರೆ ಆ ದಿವ್ಯಲೋಕದ ಸ್ವರೂಪವೇನೆಂಬುದನ್ನು

ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಇಲ್ಲಿ ಅದನ್ನು ವರ್ಣಿಸುವ ಒಂದೆರಡು ಉದಾಹರಣೆಗಳನ್ನು ಮಾತ್ರ ವಿವರಿಸಲಾಗುತ್ತದೆ. ಈ ವಿವರಣೆಗಳಲ್ಲಿ ದಿವ್ಯಲೋಕವು ಬೇರೆ, ಇಹಲೋಕವು ಬೇರೆ ಎಂಬ ವ್ಯತ್ಯಾಸವಿರುವುದಿಲ್ಲ. ಸರ್ವವ್ಯಾಪಿಯಾದ ಈ ತತ್ತ್ವವು ಜಗತ್ತನ್ನೂ ವ್ಯಾಪಿಸಿ ಜಗತ್ತನ್ನೂ ಮೀರಿರುವುದು ಎಂದು ಮಾತ್ರ ತಾತ್ಪರ್ಯ. ಜಗತ್ತು ಈ ಮಹಾತತ್ತ್ವದ ಏಕಾಂಶಮಾತ್ರ ಎಂದರ್ಥ. ಏಕಪಾದಮಾತ್ರವಾದ ಸಂಸಾರವನ್ನು ತ್ರಿಪಾದದಿಂದ ಪ್ರತ್ಯೇಕಿಸಿದರೆ ಮಾತ್ರ ದುಃಖ ಮತ್ತು ಅಜ್ಞಾನದ ಫಲ. ಆದರೆ, ಪೂರ್ಣವಿಶ್ವದ ಮತ್ತು ವಿಶ್ವಾತ್ಮನ ಸ್ವರೂಪ ವೇನೆಂದರೆ—

**ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ॥**

(ಕಠ. ೫-೮)

ವಿಶ್ವವ್ಯಾಪಕನೂ, ತ್ರಿಪಾತ್ಸಂಜ್ಞಕನೂ ಆದ ಪರಮಪುರುಷನು ಸಕಲ ಜಗತ್ತೂ ನಿದ್ರಿಸುತ್ತಿರುವಾಗ ಎಚ್ಚರವಾಗಿರುತ್ತಾನೆ. ಅದು ಪರಿಶುದ್ಧವಾದ ಪರಬ್ರಹ್ಮ. ಅದು ಅಮೃತ. ಅದರಲ್ಲೇ ಸಕಲ ಲೋಕಗಳೂ ಆಶ್ರಯವನ್ನು ಪಡೆದಿವೆ. ಅದನ್ನು ಮೀರಿ ಯಾವುದೂ ಇರುವಂತಿಲ್ಲ. ಅದೇ ಸತ್ಯಕ್ಕಿಂತಲೂ ಅಧಿಕವಾದ ಸತ್ಯವು.

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥**

(ಕಠ. ೫-೧೧)

ಸಕಲ ಲೋಕಕ್ಕೂ ಚಕ್ಷೂರೂಪನಾದ ಸೂರ್ಯನು ತನ್ನ ಗೋಚರಕ್ಕೆ ವಿಷಯಗಳಾದ ಬಾಹ್ಯಜಗತ್ತಿನ ದೋಷಗಳಿಂದ ಯಾವ ರೀತಿ ಮಲಿನನಾಗುವುದಿಲ್ಲವೋ ಅದರಂತೆ ಸರ್ವಭೂತಗಳಲ್ಲಿಯೂ ವ್ಯಾಪಿಸಿರುವ ಪರಮಾತ್ಮನು ಜಗತ್ತಿನ ಇತರ ದೋಷಗಳಿಂದ ಲಿಪ್ತನಾಗುವುದಿಲ್ಲ. ಲೋಕದ ದುಃಖಗಳಿಂದ ಕುಂಠಿತನಾಗುವುದಿಲ್ಲ. ಅನಿತ್ಯವಾದ ಜಗತ್ತಿಗಿಂತಲೂ ಊರ್ಧ್ವಭಾಗದಲ್ಲಿರುತ್ತಾನೆ. ಈ ರೀತಿ ಊರ್ಧ್ವಲೋಕದಲ್ಲಿ ಪ್ರಕಾಶಿಸುವ ಪರಮಪುರುಷನ ಸ್ವರೂಪ ವೇನೆಂದರೆ—

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**

(ತೈ. ಉ. ೨-೪)

ಈ ಪರಮಪುರುಷನನ್ನು ವಾಕ್ಕಿನಿಂದ ವರ್ಣಿಸಲಾಗುವುದಿಲ್ಲ. ಕೇವಲ ಮನಸ್ಸಿನ ಶಕ್ತಿಯಿಂದ ಚಿಂತಿಸಲಾಗುವುದಿಲ್ಲ. ದಿವ್ಯಾತ್ಮನೂ ದಿವ್ಯಲೋಕಸ್ಥನೂ ಆದ ಮಹಾಪುರುಷನನ್ನು ಸಾಕ್ಷಾತ್ಕರಿಸಲು ಅವನು ಊರ್ಧ್ವಭಾಗದಲ್ಲಿರುವುದರಿಂದ ಲೌಕಿಕವಾದ ಸಾಧನವಾವುದೂ ಸಾಧ್ಯವಿಲ್ಲ. ಆದುದರಿಂದ ದಿವ್ಯಜ್ಞಾನದಿಂದ ಮಾತ್ರ ಸಾಧ್ಯ.

**ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥**

(ಕಠ. ೨-೨೩)

ಈ ಜಗದ್ವ್ಯಾಪಕನೂ ಮತ್ತು ಜಗತ್ತಿಗಿಂತಲೂ ಊರ್ಧ್ವಭಾಗದಲ್ಲಿರುವವನೂ ಆದ ಪರಮಪುರುಷನ ಸ್ವರೂಪವು ಕೇವಲ ವೇದಾಧ್ಯಯನದಿಂದಾಗಲಿ, ಕೇವಲ ಬುದ್ಧಿಶಕ್ತಿಯಿಂದಾಗಲಿ ಅಥವಾ ಕೇವಲ ಗುರೂಪದೇಶದಿಂದಾಗಲಿ ಸಾಧ್ಯವಿಲ್ಲ. ಏಕಪಾದ್ಮಾತ್ಮಕವಾದ ಜಗತ್ತಿಗಿಂತಲೂ ಮೀರಿದ ಈ ಸ್ವರೂಪವನ್ನು ಸಾಕ್ಷಾತ್ಕರಿಸಬೇಕಾದರೆ ಉತ್ತಮವಾದ ಧ್ಯಾನದಿಂದ ಮಾತ್ರ ಸಾಧ್ಯ. ಇತ್ಯಾದಿಯಾಗಿ ಊರ್ಧ್ವಲೋಕಸ್ಥನಾದ ಪರಮಪುರುಷನ ಮಹಾತ್ಮ್ಯವರ್ಣನವಿರುತ್ತದೆ. ಇದು ಸಾಯಣರು ಹೇಳಿರುವ ತಾತ್ಪರ್ಯ. ಎಂದರೆ—

ಏಕಪಾದಾತ್ಮಕವಾದ ಜಗತ್ತು ಅಜ್ಞಾನಾವೃತವಾದುದು ಮತ್ತು ದೋಷದಿಂದಲೂ ದುಃಖದಿಂದಲೂ ವ್ಯಾಪ್ತವಾದುದು. ನಾಶವನ್ನು ಹೊಂದತಕ್ಕದ್ದು, ಇದಕ್ಕಿಂತಲೂ ಉತ್ತಮವಾದ, ಪೂರ್ಣವಾದ ಜ್ಞಾನ ಮತ್ತು ಪ್ರಕಾಶಗಳಿಂದ ಕೂಡಿದ, ದೋಷರಹಿತವಾದ ಮತ್ತು ದುಃಖರಹಿತವಾಗಿ ಪೂರ್ಣಾನಂದಕಲಿತವಾದ ದಿವ್ಯಲೋಕವು ಇಲ್ಲಿ ಸೂಚಿತವಾಗಿದೆಯೆಂದು ಸಾಯಣರಮತ. ಈ ಲೋಕವು ದಿವ್ಯಸ್ವರೂಪವನ್ನು ಸೂಚಿಸುವ ಋಕ್ಸಂಹಿತಾ ವಾಕ್ಯವು ಹೀಗಿರುತ್ತದೆ.

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ |**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮೃತಂ ಕೃಧೀಂದ್ರಾಯೇಂದೋ ಪರಿಸ್ರವ ||**

(ಋ. ಸಂ. ೯-೧೧೩-೧೧)

ಪೂರ್ಣಾನಂದಪ್ರಾಪಕವಾದ ಬ್ರಹ್ಮಲೋಕದಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡು ಎಂದು ಪ್ರಾರ್ಥಿಸಿದೆ. ಈ ಬ್ರಹ್ಮಲೋಕವೇ ಪ್ರಕೃತವಾದ ಋಕ್ಕಿನಲ್ಲಿ **ಊರ್ಧ್ವ ಉದೈತ್** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿದೆಯೆಂದು ಸಾಯಣರ ಮತ.

೨

ಎರಡನೆಯದಾಗಿ—ತ್ರಿಪಾಚ್ಛಬ್ದಕ್ಕೆ ಮೂರು ಲೋಕಗಳೆಂದರ್ಥಮಾಡಿದೆ. ಈ ಮೂರು ಲೋಕಗಳನ್ನು ಮೀರಿದ ಉತ್ತಮವಾದ ಲೋಕವೆಂದರ್ಥವೆಂದೂ ತಿಳಿಸಿದೆ. ಈ ಮೂರು ಲೋಕಗಳಾವುವೆಂದರೆ; **ಜನ, ಮಹ** ಮತ್ತು **ಸತ್ಯ**ಲೋಕಗಳೆಂದು ತಿಳಿಸಿದೆ. **ಜನ, ಮಹ,** ಮತ್ತು **ಸತ್ಯ**ಲೋಕಗಳು ಋಕ್ಸಂಹಿತೆಯ ವಿಭಾಗಗಳಿಗೆ ಸರಿಯಾಗುವುದಿಲ್ಲ. ಈ ಲೋಕವಿಭಾಗಗಳು ಒಂದೊಂದೆಡೆಯಲ್ಲಿ ಒಂದೊಂದು ವಿಧವಾಗಿರುತ್ತದೆ. ಆದರೆ, ಕೊನೆಯಲ್ಲಿ ಪರಬ್ರಹ್ಮಲೋಕವು ಈ ಎಲ್ಲ ಲೋಕಗಳಿಗಿಂತಲೂ ಉತ್ತಮವಾದ ಪ್ರದೇಶದಲ್ಲಿದ್ದು ಅತ್ಯುತ್ತಮವಾದ ಸ್ಥಾನದಲ್ಲಿರುತ್ತದೆ ಎಂಬ ಅಂಶವು ಮಾತ್ರ ಎಲ್ಲ ಕಡೆಗಳಲ್ಲಿಯೂ ಒಂದೇ ವಿಧವಾಗಿ ವರ್ಣಿತವಾಗಿರುತ್ತದೆ. ಕೆಲವೆಡೆಗಳಲ್ಲಿ ಲೋಕಗಳ ಸಂಖ್ಯೆಯ ವಿಷಯದಲ್ಲಿ ಅಭಿಪ್ರಾಯಭೇದಗಳಿದ್ದರೂ ಸಹ ಈಶ್ವರತತ್ತ್ವವು ಜಗದತಿರಿಕ್ತವಾಗಿ ರಹಸ್ಯಸ್ಥಾನದಲ್ಲಿ ಮಾನವನ ಪ್ರತ್ಯಕ್ಷಕ್ಕೆ ಗೋಚರವಾಗದ ರೀತಿಯಲ್ಲಿರುತ್ತದೆ ಎಂಬ ವಿಷಯವು ಸ್ಪಷ್ಟವಾಗಿರುತ್ತದೆ. ಈ ವಿಷಯವು ಋಕ್ಸಂಹಿತೆಯಲ್ಲಿಯೂ ಅನೇಕ ಸಂದರ್ಭಗಳಲ್ಲಿ ಉಕ್ತವಾಗಿರುತ್ತದೆ.

**ದೂರೇ ತನ್ನಾಮ ಗುಹ್ಯಂ ಪರಾಚೈರ್ಯತ್ತ್ವಾ ಭೀತೇ ಅಹ್ವಯೇತಾಂ ವಯೋಧೈ |**
**ಉದಸ್ತಭ್ನಾಃ ಪೃಥಿವೀಂ ದ್ಯಾಮಭೀಕೇ ಭ್ರಾತುಃ ಪುತ್ರಾನ್ಮಘವನ್ತಿತ್ವಿಷಾಣಃ ||**

ಋ. ಸಂ. ೧೦-೫೫-೧)

ಎಲೈ ಇಂದ್ರನೇ, ಸತ್ಯಾನ್ವೇಷಣದಲ್ಲಿ ಪರಾಙ್ಮುಖರಾದ ಮಾನವರ ದೃಷ್ಟಿಗೆ ಗೋಚರವಾಗದ ರೀತಿಯಲ್ಲಿ ನಿ ಸ್ವರೂಪವು ಗುಹ್ಯವಾದ ಪ್ರದೇಶದಲ್ಲಿ ಮರೆಯಾಗಿದೆ. ದ್ಯಾವಾಪೃಥಿವಿಗಳು ನಿನ್ನ ಸ್ವರೂಪಕ್ಕೆ ಬೆದರಿ ನಿನ್ನ ಸಹಾಯ ವನ್ನು ಅಪೇಕ್ಷಿಸಿದಾಗ ನೀನು ಪರ್ಜನ್ಯನ ಮೂಲಕ ವೃಷ್ಟಿಯನ್ನು ಸುರಿಸಿ ದ್ಯಾವಾಪೃಥಿವಿಗಳಿಗೆ ಸಹಾಯಮಾಡಿ ಆದರೆ ನಿನ್ನ ಸ್ವರೂಪವನ್ನು ಮಾತ್ರ ಅವುಗಳಿಗೆ ಪೂರ್ಣವಾಗಿ ತೋರಿಸಲಿಲ್ಲ.

**ಇದಂ ತ ಏಕಂ ಪರ ಊ ತ ಏಕಂ ತೃತೀಯೇನ ಜ್ಯೋತಿಷಾ ಸಂ ವಿಶಸ್ವ ।**
**ಸಂವೇಶನೇ ತನ್ವ೧ ಶ್ಚಾರುರೇಧಿ ಪ್ರಿಯೋ ದೇವಾನಾಂ ಪರಮೇ ಜನಿತ್ರೇ ॥**

(ಋ. ಸಂ. ೧೦-೫೬-೧)

ಎಲೈ ಪರಮಾತ್ಮನೇ, ಇಲ್ಲಿ ಪ್ರಕಾಶಿತವಾಗುವ ಅಗ್ನಿರೂಪವಾದ ಜ್ಯೋತಿಯು ನಿನ್ನ ಒಂದಂಶ. ಅಂತರಿಕ್ಷದ ಪ್ರಕಾಶಿಸುವ ಜ್ಯೋತಿಯು ಇನ್ನೊಂದಂಶ. ಮೂರನೆಯ ಜ್ಯೋತಿಯು ಆದಿತ್ಯರೂಪದಲ್ಲಿರುತ್ತದೆ. ಮತ್ತು ಆದಿತ್ಯಾಂ ರ್ಗತವಾದ ದಿವ್ಯಜ್ಯೋತಿಯು ಇವೆಲ್ಲಕ್ಕಿಂತಲೂ ಮೀರಿದುದು, ಅದು ಸಕಲ ದೇವಾಧಿದೇವತೆಗಳಿಗೂ ಉತ್ಪತ್ತಿಸ್ಥಾನದ ಪ್ರಕಾಶಿಸುತ್ತಿರುತ್ತದೆ, ಎಂಬುದಾಗಿ ದ್ಯಾವಾಪೃಥಿವೀ ಮತ್ತು ಅಂತರಿಕ್ಷ ಈ ಮೂರು ಲೋಕಗಳನ್ನೂ ವ್ಯಾಪಿಸಿಯು ಮತ್ತು ಅವನ್ನು ಮೀರಿಯೂ ಇರುವ ಪರತತ್ತ್ವವು ವರ್ಣಿತವಾಗಿರುತ್ತದೆ. ಈ ಲೋಕಗಳ ವಿಭಾಗವು ಉಪನಿಷದಾ ಗಳಲ್ಲಿ ಒಂದೊಂದೆಡೆಯಲ್ಲಿ ಒಂದೊಂದು ಪ್ರಕಾರವಾಗಿ ವರ್ಣಿತವಾಗಿರುತ್ತದೆ. ಪರಮಾತ್ಮನು ಜಗತ್ತಿನ ರೂಪದಲ್ಲಿ ಪ್ರಕಾಶಿತನಾಗಿ ವ್ಯಾಪಿಸಿರುವ ಲೋಕಗಳಾವುವು; ಆ ಲೋಕಗಳನ್ನು ಮೀರಿ ತನ್ನ ಉತ್ತಮಲೋಕದ ದಿವ್ಯಸ್ಥ ಯಲ್ಲಿರುವ ಸ್ವರೂಪವೇನು ಎಂಬ ವಿಷಯದಲ್ಲಿ ಉಪನಿಷತ್ತುಗಳ ಅಭಿಪ್ರಾಯವನ್ನು ಪರಿಶೀಲಿಸಿದರೆ, ಪ್ರಕೃತವಾ ಋಕ್ಕಿನ **ತ್ರಿಪಾದೂರ್ಧ್ವ ಉದೈತ್ಪುರುಷಃ** ಎಂಬ ವಾಕ್ಯಕ್ಕೆ ಈ ರೀತಿಯಾದ ತಾತ್ಪರ್ಯವು ಹೊಂದಿಕೊಳ್ಳುವುದೆ ಎಂಬ ವಿಷಯವನ್ನು ವಿಮರ್ಶಿಸಲು ಅನುಕೂಲವಾಗುತ್ತದೆ. ಈಶ್ವರನಿಂದ ಉತ್ಪನ್ನವಾದ ಲೋಕಗಳ ವಿಭಾಗವ ಬೃಹದಾರಣ್ಯಕದಲ್ಲಿ ಈ ರೀತಿ ವಿವೃತವಾಗಿರುತ್ತದೆ.

**ಸ ಹೋವಾಚೋವಾಚ ವೈ ಸೋಽಗಚ್ಛನ್ನ್ವೈ ತೇ ತದ್ಯತ್ರಾಶ್ವಮೇಧಯಾಜಿನೋ ಗಚ್ಛಂತೀ ಕ್ವ ನ್ವಶ್ವಮೇಧಯಾಜಿನೋ ಗಚ್ಛಂತೀತಿ ದ್ವಾತ್ರಿಂಶತಂ ವೈ ದೇವರಥಾಹ್ನ್ಯಾನ್ಯಯಂ ಲೋಕಸ್ತಂ ಸಮಂತಂ ಪೃಥಿವೀ ದ್ವಿಸ್ತಾವತ್ಪರ್ಯೇತಿ ತಾಂ ಸಮಂತಂ ಪೃಥಿವೀಂ ದ್ವಿಸ್ತಾವತ್ಸ- ಮುದ್ರಃ ಪರ್ಯೇತಿ ತದ್ಯಾವತೀ ಕ್ಷುರಸ್ಯ ಧಾರಾ ಯಾವದ್ವಾ ಮಕ್ಷಿಕಾಯಾಃ ಪತ್ರ ತಾವಾನಂತರೇಣಾಕಾಶಸ್ತಾನಿಂದ್ರಃ ಸುಪರ್ಣೋ ಭೂತ್ವಾ ವಾಯವೇ ಪ್ರಾಯಚ್ಛತ್ ।**

(ಬೃ. ಉ. ೩-೩)

ಇಲ್ಲಿ ವಿಶ್ವವು ಮೂರು ವಿಧವಾಗಿ ವಿಭಾಗಿಸಲ್ಪಟ್ಟಿದೆ.

(೧) ಮಧ್ಯಭಾಗ, (೨) ಪೃಥ್ವಿಯನ್ನು ಸುತ್ತಿಸುವ ಆವರಣ, (೩) ಇದರ ಸುತ್ತಲೂ ವ್ಯಾಪಿಸಿರುವ **ಸಮುದ್ರ.** (ಸಮುದ್ರಶಬ್ದಕ್ಕೆ ಪಾರ್ಥಿವ ಸಮುದ್ರವೆಂದರ್ಥವಲ್ಲ) ಪೃಥ್ವೀ ಮತ್ತು ಅಂತರಿಕ್ಷ ಇವೆರಡೂ ವಿಶ್ವರೂಪವಾದ **ಅಂಡದ** ಎರಡು ಭಾಗಗಳು. ಸೂರ್ಯನ ಅಶ್ವವು ಜಗತ್ತಿನ ಅಗಲವನ್ನು ದಾಟಲು ೩೨ ದಿನಗಳು ಬೇಕು. ಪೃಥ್ವಿಯನ್ನು ***** ಸ್ಟಲು ೬೪ ದಿನ. ಅಂತರಿಕ್ಷವನ್ನು ದಾಟಲು ೧೨೮ ದಿನಗಳು. ಒಟ್ಟು ವಿಶ್ವದ ಸುತ್ತಳತೆಯನ್ನು ಬಳಸಲು ಸೂರ್ಯನ

ಅಶ್ವಕ್ಕೆ ೪೧೬ ದಿನಗಳು ಬೇಕಾಗುತ್ತವೆ. ಇತ್ಯಾದಿಯಾಗಿ ಸೂರ್ಯಸಂಚಾರಕ್ಕೆ ಆಧಾರವಾದ ಲೋಕಗಳ ವರ್ಣನೆಯಿರುತ್ತವೆ. ಇವೆಲ್ಲವೂ ಯಜ್ಞಾಶ್ವವು ಸಂಚರಿಸುವ ಲೋಕಗಳು. ಆದರೆ ಈ ಲೋಕಗಳು ಮೋಕ್ಷಸಾಧಕವಾದ ಮತ್ತು ಆನಂದಪೂರಿತವಾದ ಲೋಕಗಳಲ್ಲ. ಇದಕ್ಕಿಂತಲೂ ಮಿಗಿಲಾದ ಅತ್ಯುತ್ತಮವಾದ ಲೋಕವಿರುತ್ತದೆ. ಯಜ್ಞಕರ್ಮಾಚರಣೆಯಿಂದ ಕೆಲವು ಉತ್ತಮಲೋಕಗಳು ಲಭಿಸುತ್ತವೆ. ಆದರೆ ಇವು ಶಾಶ್ವತಸುಖವನ್ನು ಕೊಡತಕ್ಕವಲ್ಲ. ಶಾಶ್ವತವಾದ ಸುಖವನ್ನು ಕೊಡತಕ್ಕ ಲೋಕವೇ ಬೇರೆ. ಈ ಲೋಕಗಳಿಗಿರುವ ವ್ಯತ್ಯಾಸವನ್ನು ಮುಂಡಕೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.

> **ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।**
> **ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವೇಮಂ ಲೋಕಂ ಹೀನತರಂ ವಾ ವಿಶಂತಿ ॥**
> (ಮು. ಉ. ೧-೨-೧೦)

ಯಜ್ಞಕರ್ಮವನ್ನೂ ತತ್ಸಂಬಂಧಿಯಾದ ದಾನಕರ್ಮವನ್ನೂ ಅತ್ಯುತ್ತಮವಾದ ಕಾರ್ಯವೆಂದು ತಿಳಿದು ಅಜ್ಞಾನಾವೃತರಾದ ಜನರು ಅದರಲ್ಲೇ ನಂಬಿಕೆಯನ್ನಿಟ್ಟಿರುತ್ತಾರೆ. ಪರಮಾತ್ಮಜ್ಞಾನವು ಅವರಿಗಿಲ್ಲವೇ ಇಲ್ಲ. ಆದರೆ ಆ ಕರ್ಮಾನುರೋಧವಾದ ಫಲಗಳನ್ನನುಭವಿಸಿ ತತ್ಫಲವಾದ ಉತ್ತಮಲೋಕಗಳಲ್ಲಿ ವಾಸಮಾಡಿ ಕರ್ಮವಾಸನೆಯು ಮುಗಿದ ನಂತರ ಪುನಃ ಅಧೋಲೋಕಕ್ಕೆ ಹಿಂತಿರುಗಿ ವಿಷಯವಾಸನಾಸಕ್ತರಾಗುತ್ತಾರೆ.

> **ತಪಃಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷ್ಯಚರ್ಯಾ ಚರಂತಃ ।**
> **ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥**
> (ಮು. ೧-೨-೧೧)

ಅರಣ್ಯದಲ್ಲಿ ಶುದ್ಧವಾದ ಜೀವನವನ್ನು ನಡೆಸುತ್ತ ತಪಸ್ಸನ್ನಾಚರಿಸುತ್ತಲೂ, ಪರವಸ್ತುವನ್ನುಪಾಸಿಸುತ್ತಲೂ, ಭಿಕ್ಷಾವೃತ್ತಿಯಿಂದ ಜೀವಿಸುತ್ತಲೂ ಇರುವ ಪ್ರಶಾಂತಾತ್ಮರಾದ ವಿವೇಕಿಗಳು ಸೂರ್ಯದ್ವಾರದ ಮೂಲಕ ಅತ್ಯುತ್ತಮವಾದ ಮತ್ತು ನಿಷ್ಕಲ್ಮಷವಾದ ದಿವ್ಯಲೋಕಕ್ಕೆ ಹೋಗಿ ಅಮೃತತ್ವವನ್ನು ಪಡೆಯುತ್ತಾರೆ. ಅದೇ ಪರಮಾತ್ಮನ ದಿವ್ಯಲೋಕ. ಎಂದರೆ, ಪರಲೋಕವು ಒಂದು ಮತ್ತು ಅಪರಲೋಕಗಳು ಅನೇಕ ಎಂಬ ವ್ಯತ್ಯಾಸವನ್ನು ತಿಳಿಸಿದಂತೆ ಆಯಿತು. ಇದೇ ಅಪರಲೋಕಗಳ ವ್ಯವಸ್ಥೆಯನ್ನು ಬೃಹದಾರಣ್ಯಕದಲ್ಲಿ ಪುನಃ ಈ ರೀತಿ ತಿಳಿಸಿದೆ—

> **ಅಥ ಹೈನಂ ಗಾರ್ಗೀ ವಾಚಕ್ನವೀ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯದಿದಂ ಸರ್ವಮಪ್ಸ್ವೋತಂ ಚ ಪ್ರೋತಂ ಚ ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ ವಾಯೌ ಗಾರ್ಗೀತಿ ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತ್ಯಂತರಿಕ್ಷಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಂತರಿಕ್ಷಲೋಕಾ ಓತಾಶ್ಚ ಪ್ರೋತಾಶ್ಚೇತಿ ಗಂಧರ್ವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಗಂಧರ್ವಲೋಕಾ ಓತಾಶ್ಚ ಪ್ರೋತಾಶ್ಚೇತ್ಯಾದಿತ್ಯಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಾದಿತ್ಯಲೋಕಾ ಓತಾಶ್ಚ ಪ್ರೋತಾಶ್ಚೇತಿ ಚಂದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಚಂದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ನಕ್ಷತ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ನಕ್ಷತ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ದೇವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು**

**ದೇವಲೋಕಾ ಓತಾಶ್ಚ ಪ್ರೋತಾಶ್ಚೇತಿ ಇಂದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಿಂದ್ರ-ಲೋಕಾ ಓತಾಶ್ಚ ಪ್ರೋತಾಶ್ಚೇತಿ ಪ್ರಜಾಪತಿಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಪ್ರಜಾಪತಿಲೋಕಾ ಓತಾಶ್ಚ ಪ್ರೋತಾಶ್ಚೇತಿ ಬ್ರಹ್ಮಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಬ್ರಹ್ಮಲೋಕಾ ಓತಾಶ್ಚ ಪ್ರೋತಾಶ್ಚೇತಿ ಸ ಹೋವಾಚ ಗಾರ್ಗಿ ಮಾತಿಪ್ರಾಕ್ಷೀರ್ಮಾ ತೇ ಮೂರ್ಧಾ ವ್ಯಪಪ್ತದನತಿಪ್ರಶ್ನ್ಯಾಂ ವೈ ದೇವತಾಮತಿ ಪೃಚ್ಛಸಿ ಗಾರ್ಗಿ ಮಾತಿಪ್ರಾಕ್ಷೀರಿತಿ ತತೋ ಹ ಗಾರ್ಗೀ ವಾಚಕ್ನವ್ಯುಪರರಾಮ ॥**

ಗಾರ್ಗಿಗೂ ಯಾಜ್ಞವಲ್ಕ್ಯನಿಗೂ ನಡೆದ ಸಂಭಾಷಣೆಯಲ್ಲಿ ಅಪರ ಲೋಕಗಳಿಗೂ ಪರಲೋಕಕ್ಕೂ ಇರುವ ವ್ಯಾತ್ಯಾಸವು ಹೇಳಲ್ಪಟ್ಟಿದೆ. ಅಪರಲೋಕಗಳು ವರ್ಣನೆಗೆ ಯೋಗ್ಯವಾದವು. ಪರಲೋಕವು ವರ್ಣನಾತೀತವಾದುದು, ಮತ್ತು ಅನಂತವಾದುದು ಎಂಬ ವಿಷಯವು ತಿಳಿಯುತ್ತದೆ. ಈ ಸಂಭಾಷಣೆಯು ಈ ರೀತಿಯಿದೆ—

ಎಲೈ ಯಾಜ್ಞವಲ್ಕ್ಯನೇ, ಸಕಲ ವಸ್ತುವೂ ಜಲದಲ್ಲಿ ಓತಪ್ರೋತವಾಗಿ (ಹಾಸುಹೊಕ್ಕುಗಳಾಗಿ) ಸೇರಿಕೊಂಡಿವೆಯಲ್ಲವೇ; ಜಲವು ಯಾವ ತತ್ತ್ವದಲ್ಲಿ ಹಾಸು ಹೊಕ್ಕುಗಳಂತೆ ಸೇರಿಕೊಂಡಿವೆ ಹೇಳು ಎಂದು ಗಾರ್ಗಿಯು ಪ್ರಶ್ನಿಸುತ್ತಾಳೆ. ಅದಕ್ಕೆ ಉತ್ತರವಾಗಿ ಯಾಜ್ಞವಲ್ಕ್ಯನು **ವಾಯುವಿನಲ್ಲಿ** ಎಂದನು. ಹೀಗೆಯೇ ವಾಯುವಿನ ವಿಷಯದಲ್ಲಿ ಪ್ರಶ್ನಿಸಿದಾಗ,

| | |
|---|---|
| ವಾಯುವು | ಅಂತರಿಕ್ಷಲೋಕಗಳಲ್ಲಿಯೂ |
| ಅಂತರಿಕ್ಷಲೋಕಗಳು | ಗಂಧರ್ವಲೋಕಗಳಲ್ಲಿಯೂ |
| ಗಂಧರ್ವಲೋಕಗಳು | ಆದಿತ್ಯಲೋಕಗಳಲ್ಲಿಯೂ |
| ಆದಿತ್ಯಲೋಕಗಳು | ಚಂದ್ರಲೋಕಗಳಲ್ಲಿಯೂ |
| ಚಂದ್ರಲೋಕಗಳು | ನಕ್ಷತ್ರಲೋಕಗಳಲ್ಲಿಯೂ |
| ನಕ್ಷತ್ರಲೋಕಗಳು | ದೇವಲೋಕಗಳಲ್ಲಿಯೂ |
| ದೇವಲೋಕಗಳು | ಇಂದ್ರಲೋಕಗಳಲ್ಲಿಯೂ |
| ಇಂದ್ರಲೋಕಗಳು | ಪ್ರಜಾಪತಿಲೋಕಗಳಲ್ಲಿಯೂ |

ಓತಪ್ರೋತರೂಪಗಳಾಗಿ ಸೇರಿಕೊಂಡಿವೆಯೆಂದು ಪ್ರತಿಯೊಂದು ಪ್ರಶ್ನೆಗೂ ಯಾಜ್ಞವಲ್ಕ್ಯನು ಉತ್ತರವನ್ನು ಕೊಡುತ್ತ ಬಂದನು. ಆದರೆ ಬ್ರಹ್ಮಲೋಕವು ಯಾವುದರದಲ್ಲಿ ಐಕ್ಯವಾಗಿದೆಯೆಂಬ ಪ್ರಶ್ನೆಗೆ ಯಾಜ್ಞವಲ್ಕ್ಯನು ಉತ್ತರವನ್ನು ಹೇಳದೆ ತನ್ನ ಅಸಮಾಧಾನವನ್ನು ಮಾತ್ರ ವ್ಯಕ್ತಪಡಿಸುತ್ತಾನೆ. ಬ್ರಹ್ಮಲೋಕದ ವಿಷಯವನ್ನು ಚರ್ಚಿಸಹೋದರೆ ತಲೆಯು ಸಿಡಿದುಹೋಗುತ್ತದೆ ಎಂದು ಗದರಿಸುತ್ತಾನೆ. ಪರಬ್ರಹ್ಮದ ವಿಷಯವು ವಾಕ್ಕಿನ ವರ್ಣನೆಗೆ ಮೀರಿದುದು ಆದುದರಿಂದ ಪರಬ್ರಹ್ಮದ ಪರಲೋಕವೂ ವರ್ಣನಾತೀತವಾದುದು ಎಂದು ಪರಲೋಕದ ಅವರ್ಣನೀಯತ್ವವನ್ನು ತಿಳಿಸುತ್ತಾನೆ. **ತ್ರಿಪಾದೂರ್ಧ್ವ ಉದೈತ್ಪುರುಷಃ** ಎಂಬ ವಾಕ್ಯದಿಂದ ಈ ಪರಲೋಕವೇ ನಿರ್ದಿಷ್ಟವಾಗಿರುತ್ತದೆ.

ಸಾಧಾರಣವಾಗಿ ಉಪನಿಷತ್ತುಗಳಲ್ಲಿ ಲೋಕತ್ರಯದ ವರ್ಣನವೇ ಅಧಿಕವಾಗಿರುತ್ತದೆ. **ಭೂಃ ಭುವಃ** ಮತ್ತು **ಸುವಃ** ಎಂಬ ಮೂರು ವಿಭಾಗ ಮಾತ್ರ ಅನೇಕ ಸನ್ನಿವೇಶಗಳಲ್ಲಿ ನಿರ್ದಿಷ್ಟವಾಗಿದೆ.

ಛಾ. ಉ. ೧-೩-೭; ೨-೨೧-೧; ೩-೧೫-೫;

ಬೃ. ಉ. ೧-೨-೩; ೧-೫-೪; ೩-೯-೮. ಪ್ರಶ್ನ. ೫-೭. ಇತ್ಯಾದಿ. ಈ ಲೋಕಗಳ ಸೃಷ್ಟಿ ಮತ ಕ್ರಮವು ಐತರೇಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್; ಸ ಈಕ್ಷತ ಲೋಕಾನ್ನು ಸೃಜ ಇತಿ । ಸ ಇಮಾಂಲ್ಲೋಕಾನಸೃಜತ ಅಂಭೋ ಮರೀಚೀರ್ಮರಮಾಪೋಽದೋಽಂಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾಂತರಿಕ್ಷಂ ಮರೀಚಯಃ । ಪೃಥಿವೀ ಮರೋ ಯಾ ಅಧಸ್ತಾತ್ತಾ ಆಪಃ**

(ಐ. ಉ. ೧-೧-೨)

ಸೃಷ್ಟಿಗೆ ಪೂರ್ವದಲ್ಲಿ ಕೇವಲ ಆತ್ಮಮಾತ್ರವಿದ್ದಿತು. ಎರಡನೆಯ ವಸ್ತುವಾವುದೂ ಇರಲಿಲ್ಲ. ಆಗ ಆತ್ಮನಿ ಜಗತ್ಸೃಷ್ಟಿಯ ಆಸೆಯುಂಟಾಯಿತು. ಆಗ **ಅಂಭಃ, ಮರಂ, ಮರೀಚೀ** ಮತ್ತು **ಆಪಃ** ಎಂಬ ಲೋಕಗಳನು ಉತ್ಪನ್ನಮಾಡಿದನು. ದ್ಯುಲೋಕಕ್ಕೆ ಮೀರಿದುದು **ಅಂಭಃ** ಎಂಬ ಲೋಕವು. ಅದಕ್ಕೆ ದ್ಯುಲೋಕವೇ ಆಧಾರ ಮರೀಚಿಯೇ ಅಂತರಿಕ್ಷಪ್ರದೇಶವು. ಪೃಥ್ವಿಗೆ ಮರವೆಂಬ ಹೆಸರಾಯಿತು. ಪೃಥ್ವಿಗಿಂತಲೂ ತಳಭಾಗದ ಪ್ರದೇಶಕ **ಆಪಃ** ಎಂಬ ಹೆಸರುಂಟಾಯಿತು. ಈ ಸಕಲ ಲೋಕಗಳಿಗೂ ಸಾಮರಸ್ಯವನ್ನು ತೋರಿ ಅವುಗಳಲ್ಲಿ ಪರಸ್ಪ ಸಂಬಂಧವನ್ನು ಕಲ್ಪಿಸುವ ತತ್ತ್ವವಾವುದೆಂದರೆ, ಅದು **ಅಕ್ಷರ** ಎಂದು ಬೃಹದಾರಣ್ಯಕವು ತಿಳಿಸಿದೆ. (ಬೃ. ಉ ೩-೮-೩-೭) ತೈತ್ತಿರೀಯದಲ್ಲಿ ಈ ಲೋಕಗಳ ಸಂಖ್ಯೆ ನಾಲ್ಕು ಎಂದು ನಿರ್ದೇಶಿಸಿದೆ. ಬೃಹದಾರ್ಣ್ಯಕದಲ್ಲಿ ಯಾ ರೀತಿ ಈ ಸಕಲ ಲೋಕಗಳೂ ಆಕಾಶದಲ್ಲಿ ಹೆಣೆದುಕೊಂಡಿವೆ ಯೆಂದು ಹೇಳಲಾಗಿದೆಯೋ ಅದರಂತೆಯೇ ತೈತ್ತಿರೀಯೊ ಪನಿಷತ್ತಿನಲ್ಲಿಯೂ ನಿರ್ದೇಶಿಸಿದೆ. ಆದರೆ ಅಲ್ಲಿ ಲೋಕಗಳ ಹೆಸರುಗಳು ಬೇರೆ ಬೇರೆಯಾಗಿವೆ.

**ಭೂರ್ಭುವಃಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮುಹ ಸ್ಮೈತಾಂ ಚತುರ್ಥೀಂ ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೊಕಾ ಮಹೀಯಂತೇ ।**

(ತೈ. ಉ. ೧-೫)

**ಭೂಃ ಭುವಃ** ಮತ್ತು **ಸುವಃ** ಎಂಬ ವ್ಯಾಹೃತಿಗಳು ಮೂರು ಲೋಕಗಳನ್ನು ಪ್ರತಿಬಿಂಬಿಸುತ್ತವೆ. **ಭೂ** ಎಂಬುದು ಪೃಥ್ವಿಯನ್ನೂ **ಭುವಃ** ಎಂಬುದು ಅಂತರಿಕ್ಷವನ್ನೂ **ಸುವಃ** ಎಂಬುದು ದ್ಯುಲೋಕವನ್ನೂ ನಿರ್ದೇಶಿಸುತ್ತವೆ **ಮಹಃ** ಎಂಬುದು ಆದಿತ್ಯಲೋಕದ ಪ್ರತಿನಿಧಿ. ಇಲ್ಲಿ ಆದಿತ್ಯಲೋಕವೆಂಬುದಕ್ಕೆ ವಿಶೇಷಾರ್ಥವಿದೆ.

ಸಾಧಾರಣವಾಗಿ ದ್ಯುಲೋಕವೇ ಆದಿತ್ಯಲೋಕವೆಂದು ಪ್ರಸಿದ್ಧವಾಗಿದೆ. ಇಲ್ಲಿ ದ್ಯುಲೋಕದ ಜೊತೆಗೆ ಪುನ ಆದಿತ್ಯಲೋಕವೆಂದು ಹೇಳಿರುವುದರಿಂದ ಅಗ್ನಿ, ವಾಯು ಮತ್ತು ಆದಿತ್ಯಲೋಕಗಳನ್ನು ಮೀರಿದ ಆದಿತ್ಯಲೋ ಹೆಂದರ್ಥ. ಆದಿತ್ಯನ ಸ್ವರೂಪವು ಎರಡುವಿಧ. ಒಂದು ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾಗನ ಆದಿತ್ಯಮಂಡ ಇನ್ನೊಂದು ಆದಿತ್ಯಾಂತರ್ಗತವಾದ ಹಿರಣ್ಮಯಪುರುಷ.

**ಆದಿತ್ಯೋ ವಾ ಬ್ರಹ್ಮೇತ್ಯಾದೇಶಃ । ಸ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇ ।**

(ಛಾ. ಉ. ೩-೧೯-೧ ಮತ್ತು ೪)

ಆದಿತ್ಯನ ಬಾಹ್ಯಮಂಡಲಾಂತರ್ಗತನಾದ ಪರಮಪುರುಷನೇ ಬ್ರಹ್ಮನು. ಆದಿತ್ಯನೇ ಈ ಪರಬ್ರಹ್ಮನು ಎಂದು ಉಪಾಸಿಸಬೇಕೆಂದು ಉಪದೇಶಿಸಿದೆ. ಆದುದರಿಂದ **ಮಹರ್ಲೋಕ**ವು ಈ ಬ್ರಹ್ಮಲೋಕವೆಂದು ನಾಲ್ಕನೆಯದಾಗಿ ಪರಿಗಣಿಸಲ್ಪಟ್ಟಿದೆ. ಇದೇ ಋಕ್ಸಂಹಿತೆಯಲ್ಲಿ **ಗುಹ್ಯ** ಎಂಬ ವಿಶೇಷಣದಿಂದ ವರ್ಣಿತವಾಗಿರುವ ವಿಷಯವು ಹಿಂದೆ ತಿಳಿಸಲ್ಪಟ್ಟಿದೆ. ಈ **ಮಹರ್ಲೋಕ**ವೇ ಭೂರಾದಿ ಮೂರು ಲೋಕಗಳಿಗಿಂತ ಉತ್ತಮವಾದ ಸ್ವರೂಪವನ್ನು ಹೊಂದಿರುತ್ತದೆ. ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾಗುವ ಮೂರು ಲೋಕಗಳು ಮತ್ತು ನಾಲ್ಕನೆಯದಾದ ಬ್ರಹ್ಮ ಇವುಗಳಿಗೆ ಅಧಿಪತಿಗಳಾದ ದೇವತೆಗಳು ಇವರ ಸ್ವರೂಪವನ್ನು ತೈತ್ತಿರೀಯದಲ್ಲಿ ಈ ರೀತಿ ವರ್ಣಿಸಿದೆ. ಬಾಹ್ಯ ಲೋಕಗಳಿಗೂ ಹೃದಯಾಂತರ್ಗತವಾದ ಆಕಾಶಕ್ಕೂ ಇಲ್ಲಿ ತಾದಾತ್ಮ್ಯವನ್ನು ತೋರಿಸಿದೆ.

**ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ । ಆಪ್ನೋತಿ ಮನಸಸ್ಪತಿಂ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರ-ಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮಪ್ರಾಣಾರಾಮಂ ಮನ ಆನಂದಂ । ಶಾಂತಿಸಮೃದ್ಧಮಮೃತಂ । ಇತಿ ಪ್ರಾಚೀನಯೋಗ್ಯೋಪಾಸ್ಸ್ವ ॥**

(ತೈ. ಉ. ೧-೬)

ಮೇಲಿನ ಪ್ರಕರಣದಲ್ಲಿ ಬಾಹ್ಯಲೋಕಗಳನ್ನು ವಿಭಾಗಿಸಿ ಅವುಗಳ ಅಧಿಪತಿಗಳನ್ನು ವರ್ಣಿಸಿದೆ. ಪ್ರಕೃತವಾದ ಉದಾಹರಣೆಯಲ್ಲಿ ಬಾಹ್ಯಾಕಾಶಕ್ಕೆ ಪ್ರತಿನಿಧಿಯಾದ ಹೃದಯಾಕಾಶದಲ್ಲಿ ಅಂತರ್ಗತನಾದ ಪರಬ್ರಹ್ಮನ ಸ್ವರೂಪವನ್ನು ವರ್ಣಿಸಿದೆ. ಇಲ್ಲಿ ಮನೋಮಯನಾದ ಪುರುಷನು ಸ್ಥಾಪಿತನಾಗಿದ್ದಾನೆ. ಅವನು ಹಿರಣ್ಮಯನು ಅವನು **ಭೂಃ** ಎಂಬ ವ್ಯಾಹೃತಿಯ ಮೂಲಕ ಅಗ್ನಿಯಲ್ಲಿಯೂ, **ಭುವಃ** ಎಂಬುದರ ಸಹಾಯದಿಂದ ವಾಯುವಿನಲ್ಲಿಯೂ **ಸುವಃ** ಎಂಬುದರ ಸಹಾಯದಿಂದ ಆದಿತ್ಯನಲ್ಲಿಯೂ ವ್ಯಾಪಿಸಿದ್ದಾನೆ. ಅಥವಾ ಆ ರೂಪಗಳಿಂದ ಪ್ರಕಾಶಿಸುತ್ತಿದ್ದಾನೆ. **ಮಹಃ** ಎಂಬ ಉತ್ತಮವಾದ ವ್ಯಾಹೃತಿಯು ಬ್ರಹ್ಮನಲ್ಲಿ ಪ್ರತಿಷ್ಠಿತವಾಗಲು ಎಂದರೆ, ಬ್ರಹ್ಮರೂಪದಲ್ಲಿ ಸ್ಥಾಪಿತವಾಗಲು ಸಾಧಕವಾಗುತ್ತದೆ. ವಾಕ್ಕು, ಚಕ್ಷುಸ್, ಶ್ರೋತ್ರ, ಮನಸ್ಸು ಮತ್ತು ವಿಜ್ಞಾನ ಇವೆಲ್ಲಕ್ಕೂ ಅಧಿಪತಿಯಾಗುತ್ತಾನೆ. ಆದುದರಿಂದ ಈ ಬ್ರಹ್ಮನನ್ನು ಉಪಾಸಿಸುವವನೂ ಸಹ ಸಕಲವಾದ ಇಂದ್ರಿಯಗಳಿಗೂ ಅಧಿಪತಿಯಾಗಿರುತ್ತಾನೆ. ಮತ್ತು ವ್ಯಾಹೃತಿಗಳ ಸಹಾಯದಿಂದ ಸಕಲ ಲೋಕಗಳ ಆಶ್ರಯವನ್ನು ಪಡೆಯುತ್ತಾನೆ. ತಾನೇ ವಿರಾಡ್ರೂಪದ ಬ್ರಹ್ಮಸ್ವರೂಪವನ್ನು ಹೊಂದುತ್ತಾನೆ. ಆಕಾಶಶರೀರನೂ, ಸತ್ಯಾತ್ಮನೂ, ಪ್ರಾಣಾರಾಮನೂ ಮತ್ತು ಮನ ಆನಂದನೂ ಆಗುತ್ತಾನೆ. ಪೂರ್ಣವಾದ ಬ್ರಹ್ಮಾನಂದವನ್ನು ಪಡೆಯುತ್ತಾನೆ. ಇದು ಲೌಕಿಕವಾದ ಆನಂದಕ್ಕಿಂತಲೂ ಊರ್ಧ್ವಭಾಗದಲ್ಲಿರುತ್ತದೆ. ಈ ಆನಂದದಾಯಕವಾದ ಬ್ರಹ್ಮಲೋಕವನ್ನು ಕೆಲವೆಡೆಗಳಲ್ಲಿ **ಮಹರ್ಲೋಕ** ವೆಂದೂ ಇನ್ನು ಕೆಲವೆಡೆಗಳಲ್ಲಿ **ಸತ್ಯ**

ಲೋಕವೆಂದೂ ಪ್ರಶಂಸಿಸಿದೆ. ಇದನ್ನೇ ಪ್ರಕೃತದಲ್ಲಿ **ತ್ರಿಪಾದೂರ್ಧ್ವಮುದೈತ್** ಎಂಬ ವಾಕ್ಯವು ತಿಳಿಸುತ್ತದೆ ಎಂದು ಒಂದು ವಿಧವಾದ ತಾತ್ಪರ್ಯವನ್ನು ಹೇಳಿದೆ.

೩

**ಯದ್ವಾ, ತ್ರಿಪಾದಿತ್ಯನೇನ ಉದರ, ಹೃದಯ, ದಹರಾಣಾಂ ತತ ಊರ್ಧ್ವಮುಪರಿಭಾಗೇ ಸಹಸ್ರಾರೇ ಪುರುಷ ಉದೈತ್ ।**

ಅಥವಾ **ಉದರ ಹೃದಯ** ಮತ್ತು **ದಹರ** ಈ ಮೂರು ಸ್ಥಾನಗಳನ್ನು ಮೀರಿದ ಸಹಸ್ರಾರಾತ್ಮಕವಾದ ಬ್ರಹ್ಮಚಕ್ರ ದಲ್ಲಿ ಪ್ರಕಾಶಿಸುತ್ತಿದ್ದಾನೆಂದೂ ಅರ್ಥವಾಗುತ್ತದೆ ಎಂಬುದೂ ಒಂದು ವಿಧ. ಇದು ಪುರುಷದೇಹಾಂತರ್ಗತವಾದ ಪರಮಾತ್ಮನ ವರ್ಣನೆ. ದೇಹದ ವಿಭಾಗವನ್ನು ಉಪನಿಷತ್ತುಗಳಲ್ಲಿ ಒಂದೊಂದು ಕಡೆ ಒಂದೊಂದು ವಿಧವಾಗಿ ವಿವರಿಸಿದೆ. **ದಹರವೆಂಬುದು** ಹಿರಣ್ಮಯಪುರುಷನು ಸ್ಥಾಪಿತವಾಗಿರುವ ಆಕಾಶರೂಪವೆಂದೂ ಅದೇ ಪುರುಷನ ಸ್ಥಾನ ವೆಂದೂ ತಿಳಿಸಿದೆ. ಈ ವಿಭಾಗಕ್ರಮವನ್ನು ಪ್ರಕೃತದಲ್ಲಿ ಪರಿಶೀಲಿಸಬಹುದು. ಪುರುಷದೇಹವನ್ನು ಸಾಧಾರಣವಾಗಿ ಬ್ರಹ್ಮನಿಗೆ ಆವಾಸಸ್ಥಾನವಾದ ಪುರಿಯೆಂದು ಸ್ತುತಿಸಿದೆ. ಉದಾಹರಣೆಗೆ,

**ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।**
**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್ ॥**

(ಬೃ. ಉ. ೨-೫-೧೮)

ಎರಡು ಪಾದಗಳುಳ್ಳ ಪಟ್ಟಣವನ್ನು (ದುರ್ಗವನ್ನು) ಬ್ರಹ್ಮನು ನಿರ್ಮಿಸಿದನು. ನಾಲ್ಕುಪಾದಗಳುಳ್ಳ ದುರ್ಗಗಳನ್ನು ನಿರ್ಮಿಸಿದನು. ಅನಂತರ ಅವನು ಪಕ್ಷಿಯ ರೂಪವನ್ನು ಹೊಂದಿ ಈ ದೇಹರೂಪವಾದ ಪುರವನ್ನು ಪ್ರವೇಶಿಸಿದನು. ಈ ರೀತಿ ಪುರಪ್ರವೇಶಮಾಡಿದುದರಿಂದಲೇ ಪುರುಷನೆಂದು ಹೆಸರು. ಛಾಂದೋಗ್ಯೋಪನಿಷತ್ತಿನಲ್ಲಿ ಈ **ದಹರ ಪುರವನ್ನು** ಈ ರೀತಿ ಸ್ತುತಿಸಿದೆ.

**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತ ಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ।**

( ಛಾ. ಉ ೮-೧-೧ )

ಈ ಬ್ರಹ್ಮಪುರದಲ್ಲಿ (ಪುರುಷದೇಹದಲ್ಲಿ) ಸೂಕ್ಷ್ಮವೂ ಪುಂಡರೀಕರೂಪವೂ ಆದ ಒಂದು ವಾಸಸ್ಥಾನವಿರುತ್ತದೆ. ಅದರ ನಡುವೆ ಹೃದಯಾಕಾಶವಿರುತ್ತದೆ. ಆ ಹೃದಯಾಕಾಶಸ್ಥವಾದ ತತ್ತ್ವವೇ ಪರತತ್ತ್ವವು. ಅದನ್ನು ಅರಸಿ ಅದರ ಸಾಕ್ಷಾತ್ಕಾರವನ್ನು ಮಾಡುವುದೇ ಪ್ರತಿಯೊಂದು ವ್ಯಕ್ತಿಯ ಧ್ಯೇಯವಾಗಿರಬೇಕು.

**ತಂ ಚೇದ್ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ಸ ಬ್ರೂಯಾತ್ ।**

( ಛಾ. ಉ. ೮-೧-೨)

ಈ ಬ್ರಹ್ಮಪುರಾಂತರ್ಗತವಾದುದೂ ದಹರಾತ್ಮಕವೂ ಆದ ಪುಂಡರೀಕರೂಪವಾದ ಅಂತರಾಕಾಶದಲ್ಲಿರುವ ತತ್ತ್ವವಾವುದು? ನಾವು ಅನ್ವೇಷಣಮಾಡುವ ಆ ತತ್ತ್ವದ ಸ್ವರೂಪವೇನು ? ಎಂಬುದಾಗಿ ಶಿಷ್ಯರು ಗುರುಹನ್ನು ಪ್ರಶ್ನಿಸಿದರೆ ಆಗ, ಗುರುವಿನ ಉತ್ತರವು ಹೀಗಿರುತ್ತದೆ.

**ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ದ್ಯಾವಾ-**
**ಪೃಥಿವೀ ಅಂತರೇವ ಸಮಾಹಿತೇ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ**
**ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ಸಮಾಹಿತಮಿತಿ ||**

( ಛಾ. ಉ. ೮-೧-೩ )

ವಿಶ್ವವ್ಯಾಪಿಯಾದ ಬಾಹ್ಯಾಕಾಶವು ಎಷ್ಟು ದೂರ ಪ್ರಸರಿಸುವುದೋ ಅಷ್ಟು ದೂರ ಹೃದಯಾಕಾಶವೂ ಪ್ರಸರಿಸುತ್ತದೆ. ದ್ಯಾವಾಪೃಥಿವಿಗಳೆರಡೂ ಅದರಲ್ಲೇ ಅಡಗಿವೆ. ಅಗ್ನಿ ಮತ್ತು ವಾಯುಗಳೂ, ಸೂರ್ಯ ಮತ್ತು ಚಂದ್ರರೂ. ವಿದ್ಯುತ್ ಮತ್ತು ನಕ್ಷತ್ರಗಳೂ ಮತ್ತು ಪ್ರಕೃತದಲ್ಲಿ ಅಸ್ತಿತ್ವರೂಪದಲ್ಲಿರುವುದೂ ಇಲ್ಲದೇ ಇರುವುದೂ ಸಕಲವೂ ಹೃದಯಾಕಾಶದಲ್ಲಿ ಅಂತರ್ಗತವಾಗಿವೆ.

**ತಂ ಚೇದ್ಬ್ರೂಯುರಸ್ಮಿಂಶ್ಚೇದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಂ ಸರ್ವಾಣಿ ಚ ಭೂತಾನಿ**
**ಸರ್ವೇ ಚ ಕಾಮಾ ಯದೈತಜ್ಜರಾ ವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋಽತಿಶಿಷ್ಯತ ಇತಿ।**

( ಛಾ. ಉ. ೮-೧-೪)

ಈ ಬ್ರಹ್ಮಪುರಿಯರಿಯಲ್ಲಿ ಸಕಲ ಭೂತಗಳೂ, ಸಕಲ ಕಾಮಗಳೂ ಅಂತರ್ಗತವಾಗಿದ್ದರೆ ಇದಕ್ಕೆ ವಾರ್ಧಕ್ಯವು ಯಾವಾಗ, ಅದಕ್ಕೆ ಕ್ಷಯವುಂಟೇ ? ಇದೂ ಸಹ ವಾರ್ಧಕ್ಯದಿಂದ ಕ್ಷಯಿಸಿದರೆ ಉಳಿಯುವುದಾವುದು ? ಎಂದು ಶಿಷ್ಯರು ಪ್ರಶ್ನಿಸಿದರೆ, ಅದಕ್ಕೆ ಉತ್ತರವಾಗಿ, ಗುರುವು ಈ ರೀತಿ ಹೇಳುತ್ತಾನೆ.

**ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತ ಏತತ್ಸತ್ಯಂ ಬ್ರಹ್ಮಪುರಮಸ್ಮಿ-**
**ನ್ಕಾಮಾಃ ಸಮಾಹಿತಾ ಏಷ ಆತ್ಮಾಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ**
**ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ**
**ಅನ್ವಾವಿಶಂತಿ...................... ||**

(ಛಾ. ಉ. ೮-೧-೫)

ಪ್ರತಿಯೊಂದು ವ್ಯಕ್ತಿಯೂ ವೃದ್ಧತ್ವವನ್ನು ಪಡೆಯುವಾಗ ಇದಕ್ಕೆ ವೃದ್ಧತ್ವವಿಲ್ಲ. ವ್ಯಕ್ತಿಯ ನಾಶವಾದರೂ ಇದರ ನಾಶವಿಲ್ಲ. ಬ್ರಹ್ಮಪುರಿಯೆಂದರೆ ದೇಹವಲ್ಲ ಮತ್ತು ಈ ದಹ್ರಾಕಾಶ. ಇದರಲ್ಲೇ ಸಕಲ ಕಾಮಗಳೂ ಅಡಗಿವೆ. ಈ ಆಕಾಶಾತ್ಮನು ದೋಷರಹಿತನು, ದಾಹರಹಿತನು, ದುಃಖರಹಿತನು, ಸತ್ಯಕಾಮನು ಮತ್ತು ಸತ್ಯಸಂಕಲ್ಪನು ಇದನ್ನೇ ಮುಂಡಕೋಪನಿಷತ್ತಿನಲ್ಲಿ ಈ ರೀತಿ ಸ್ತುತಿಸಿದೆ. ಇಲ್ಲಿ ವಿಶ್ವಾತ್ಮನನ್ನು ನಿರ್ದೇಶಿಸಿದೆ.

**ಯಃ ಸರ್ವಜ್ಞಃ ಸರ್ವವಿತ್ ಯಸ್ಯೈವ ಮಹಿಮಾ ಭುವಿ।**
**ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಪ್ರತಿಷ್ಠಿತಃ ||**

(ಮು. ಉ. ೨-೨-೭)

**ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।**
**ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪಮಮೃತಂ ಯದ್ವಿಭಾತಿ ॥**
(ಮು. ಉ. ೨-೨-೭)

ಪ್ರಕಾಶಮಾನವಾದುದೂ, ಹೃದಯಾಕಾಶರೂಪವಾದುದೂ ಆದ ಬ್ರಹ್ಮಪುರಿಯಲ್ಲಿ ಸರ್ವಜ್ಞನಾದ ಪರಮಾತ್ಮನು ವಾಸಿಸುತ್ತಾನೆ. ಇವನು ಮನೋಮಯನು. ಪ್ರಣ ಮತ್ತು ಶರೀರಗಳಿಗೆ ಪ್ರಚೋದಕನು, ನೇತೃವು ಅನ್ನದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಹೃದಯಕ್ಕೆ ನಿಯಾಮಕನು. ಬ್ರಹ್ಮಪುರಿಯಲ್ಲಿ ಪ್ರತಿಷ್ಠಿತನಾಗಿರುವ ಈ ಪರಮಾತ್ಮನ ದಿವ್ಯಜ್ಞಾನದಿಂದ ವಿವೇಕಿಗಳು ಆನಂದಮಯವೂ, ಅಮೃತವೂ ಆದ ಪರಮಪುರುಷನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ, ಎಂಬ ಈ ದಹ್ರಾಕಾಶಸ್ಥನಾದ ಪುರುಷನ ವರ್ಣನವು ಮಹಾನಾರಯಣೋಪನಿಷತ್ತಿನಲ್ಲಿ ಹೀಗೆ ಪ್ರಶಂಸಿಸಿದೆ.

**ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸ್ಥಗ್ಂಸ್ಥಂ ।**
**ತತ್ರಾಪಿ ದಹರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥**
(ಮ. ಉ ೧೦-೨೩)

ಬ್ರಹ್ಮಪುರಿಯ ಮಧ್ಯದಲ್ಲಿರುವ ಪುಂಡರೀಕದಲ್ಲಿ ಸ್ಥಾಪಿತನಾಗಿರುವ ಪರಮಾತ್ಮನನ್ನು ಉಪಾಸಿಸಬೇಕು ಎಂದು ಛಾಂದೋಗ್ಯದಲ್ಲಿ ಹೇಳಿರುವಂತೆ ಇಲ್ಲಿಯೂ ಸ್ತುತಿಸಿದೆ **ಪ್ರಾಣಾಗ್ನಯ ಏವ ಏತಸ್ಮಿನ್ ಪುರೇ ಜಾಗ್ರತಿ** (ಪ್ರಶ್ನ. ೩-೪) ಎಂದು ಪ್ರಶ್ನೋಪನಿಷತ್ತಿನಲ್ಲಿ ತಿಳಿಸಿದೆ. ಈ ರೀತಿ ದಹರಾಕಾಶದ ಮಹಿಮೆಯು ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಇದು ಸ್ಥೂಲವಾದ ದೇಹ, ಹೃದಯ ಇವನ್ನೆಲ್ಲ ಮೀರಿ ಅತ್ಯಂತ ಗೂಢವಾದ ಮತ್ತು ಸೂಕ್ಷ್ಮವಾದ ಹೃದಯದ ಮಧ್ಯಭಾಗಸ್ಥವಾಗಿದೆ. ಈ ದಹರಾಕಾಶಸ್ಥನಾದ ಪರಮಾತ್ಮನೇ ಪ್ರಕೃತದಲ್ಲಿ **ತ್ರಿಪಾದೂರ್ಧ್ವ ಉದೈತ್** ಎಂದು ವರ್ಣಿತನಾಗಿದ್ದಾನೆ ಎಂಬುದು ಈ ಮತವಾಗಿದೆ. ಪರಮಾತ್ಮನ ಆವಾಸಸ್ಥಾನವೂ ಬಾಹ್ಯಾಕಾಶವನ್ನು ದೇಹದಲ್ಲಿ ಪ್ರತಿಬಿಂಬಿಸುವುದೂ ಆದ ಇದೇ ದಹ್ರಾಕಾಶದ ಮಹಿಮೆಯು ಇನ್ನೂ ಅನೇಕ ಕಡೆಗಳಲ್ಲಿ ಅತ್ಯತಿಶಯವಾಗಿ ವರ್ಣಿಸಿದೆ.

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥**
(ಕಠ. ೫-೧)

ಜನ್ಮರಹಿತನೂ, ಋಜುಚೇತಸ್ಸುಳ್ಳವನೂ ಆದ ಪರಮಾತ್ಮನ ಬ್ರಹ್ಮಪುರಿಗೆ ಒಟ್ಟಿಗೆ ಹನ್ನೊಂದು ದ್ವಾರಗಳಿರುತ್ತವೆ. ಈ ಬ್ರಹ್ಮಪುರಿಯಲ್ಲಿರುವ ಪರಮಾತ್ಮನ ಸಾಕ್ಷಾತ್ಕಾರವಾದರೆ ಆಗ ದುಃಖವಿಮೋಚನವು, ಎಂಬಲ್ಲಿ ಬ್ರಹ್ಮಪುರಿಗೆ ಹನ್ನೊಂದು ದ್ವಾರಗಳಿವೆಯೆಂದು ನಿರ್ದೇಶಿಸಿದೆ. ಆದರೆ ಶ್ವೇತಾಶ್ವತರೋಪನಿಷತ್ತಿನಲ್ಲಿ ವಿವರಿಸುತ್ತ

**ನವದ್ವಾರೇ ಪುರೇ ದೇಹೀ ಹಂಸೋ ಲೇಲಾಯತೇ ಬಹಿಃ ।**
**ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ ॥**
( ಶ್ವೇ. ಉ. ೩-೧೮)

ಒಂಭತ್ತು ದ್ವಾರಗಳುಳ್ಳ ಬ್ರಹ್ಮಪುರಿಯಲ್ಲಿ ವಾಸಿಸುವ ಪರಮಾತ್ಮನು ಬಾಹ್ಯಜಗತ್ತಿನಲ್ಲಿಯೂ ಕ್ರೀಡಾಸಕ್ತನಾಗಿದ್ದಾನೆ. ಸಕಲ ಲೋಕಕ್ಕೂ ಅವನೇ ಪ್ರಭುವು. ಸಕಲ ಚರಾತ್ಮಕವಾದ ಜಗತ್ತಿಗೂ ಅಚರಾತ್ಮಕವಾದ ಜಗತ್ತಿಗೂ ಅವನೇ

ನಿಯಾಮಕನು. ಅವನೇ ಸಕಲರಿಗೂ ಉಪಾಸ್ಯದೇವತೆಯಾಗಿದ್ದಾನೆ. ಭಗವದ್ಗೀತೆಯಲ್ಲಿಯೂ ಸಹ **ನವದ್ವಾರೇ ಪುರೇ ದೇಹೀ** ಎಂಬ ಇದೇ ವರ್ಣನವನ್ನು ತಿಳಿಸಿ ಪರಮಾತ್ಮನ ಅಲೌಕಿಕವಾದ ದಿವ್ಯಸ್ವರೂಪವನ್ನು ಅತಿಶಯವಾಗಿ ಪ್ರಶಂಸಿಸಿದೆ.

ಹೀಗೆ ದೇಹಾಂತರ್ಗತವಾದ ದಹರಾಕಾಶವು ಯೋಗೋಪನಿಷತ್ತುಗಳಲ್ಲಿ ಅನೇಕವಿಧವಾಗಿ ವರ್ಣಿತವಾಗಿವೆ. ಪ್ರಕೃತದಲ್ಲಿ ನಮಗೆ ಆ ವಿವರವು ಅನವಶ್ಯಕ. ದೇಹ, ಹೃದಯ ಇವುಗಳಿಗಿಂತಲೂ ಮೀರಿದ ಗುಹ್ಯಾಕಾಶದಲ್ಲಿ ಈಶ್ವರನ ಸ್ಥಾನವಿರುತ್ತದೆ ಎಂಬುದನ್ನು ಶ್ರುತಿವಾಕ್ಯಗಳು ಯಾವ ರೀತಿ ನಿರ್ದೇಶಿಸುತ್ತವೆ ಎಂಬುದನ್ನು ಪರಿಶೀಲಿಸುವುದು ಮಾತ್ರ ಪ್ರಕೃತವಾದ ಉದ್ದಿಶ್ಯವಾಗಿರುತ್ತದೆ. ಇಂದ್ರ ಮತ್ತು ವಿರಾಟ್ ಇವರುಗಳ ಸಂಯುಕ್ತರೂಪವಾದ ಪರಮಾತ್ಮನಿಗೆ ಈ ಹೃದಯಾಂತರ್ಗತವಾದ ಆಕಾಶವೇ ಆವಾಸಸ್ಥಾನವೆಂಬುದನ್ನು ಬೃಹದಾರಣ್ಯಕದಲ್ಲಿ ಈ ರೀತಿ ತಿಳಿಸಿದೆ.

**ಅಥೈತದ್ವಾಮೇಽಕ್ಷಣಿ ಪುರುಷರೂಪಮೇಷಾಸ್ಯ ಪತ್ನೀ ವಿರಾಟ್ ತಯೋರೇಷ ಸಂಸ್ತಾವೋ ಯ ಏಷೋಽಂತರ್ಹೃದಯ ಆಕಾಶೋಽಥೈನಯೋರೇತದನ್ನಂ ಯ ಏಷೋಽಂತರ್ಹೃದಯೇ ಲೋಹಿತಪಿಂಡೋಽಥೈತಯೋರೇತತ್ಪ್ರಾವರಣಂ ಯದೇತದಂತರ್ಹೃದಯೇ ಜಾಲಕಮಿವಾಥೈನಯೋರೇಷಾಸೃತಿಃ ಸಂಚರಣೀ ಯೈಷಾ ಹೃದಯಾದೂರ್ಧ್ವಾ ನಾಡ್ಯುಚ್ಚರತಿ ಯಥಾ ಕೇಶಃ ಸಹಸ್ರಧಾ ಭಿನ್ನ ಏವಮಸ್ಯೈತಾ ಹಿತಾ ನಾಮ ನಾಡ್ಯೋಽಂತರ್ಹೃದಯೇ ಪ್ರತಿಷ್ಠಿತಾ ಭವಂತ್ಯೇತಾಭಿರ್ವಾ ಏತದಾಸ್ರವದಾಸ್ರವತಿ ತಸ್ಮಾದೇಷ ಪ್ರವಿವಿಕ್ತಾಹಾರತರ ಇವೈವ ಭವತ್ಯಸ್ಮಾಚ್ಛಾರೀರಾದಾತ್ಮನಃ ||**

( ಬೃ. ಉ. ೪-೨-೩ ) .

(ಇಲ್ಲಿ ಉದಾಹೃತವಾಗಿರುವ ಮೇಲಿನ ವಾಕ್ಯದಲ್ಲಿ ಇಂದ್ರನ ಸ್ವರೂಪವು ವರ್ಣಿತವಾಗಿದೆ) ದಕ್ಷಿಣಚಕ್ಷುಸ್ಸಿನಲ್ಲಿ ಪುರುಷ ರೂಪದಿಂದ ಪ್ರಕಾಶಿಸುವ ವಿರಾಟ್‌ತತ್ತ್ವವೇ ಇಂದ್ರನ ಪತ್ನಿಯು ಮತ್ತು ಪುರುಷರೂಪದಲ್ಲಿ ಪ್ರಕಾಶಿಸುತ್ತಿವೆ ಇಂದ್ರ ಮತ್ತು ತತ್ಪತ್ನಿಯಾದ **ವಿರಾಟ್** ಇವರ ಸಂಗಮಸ್ಥಾನವೇ ಹೃದಯಾಕಾಶವು. ಅಂತರ್ಹೃದಯದಲ್ಲಿರುವ ಲೋಹಿತ ಪಿಂಡವೇ ಅವರ ಆಹಾರವು. ಅಂತರ್ಹೃದಯದಲ್ಲಿ ಬಲೆಯಂತಿರುವ ಆವರಣವೇ ಅವರಿಗೆ ಆಚ್ಛಾದಕವಾದ ವಸ್ತ್ರವು. ಅಂತರ್ಹೃದಯದಿಂದ ಊರ್ಧ್ವಮುಖವಾಗಿ ಹೋಗುವ ಅವಕಾಶವೇ ಅವರ ಸಂಚಾರಮಾರ್ಗವು. **ಹಿತಾ** ಎಂಬ ಹೆಸರಿನಿಂದ ಪ್ರಸಿದ್ಧವಾದ ಈ ಮಾರ್ಗವು ಒಂದು ಕೂದಲನ್ನು ಸಾವಿರ ಭಾಗವಾಗಿ ಸೀಳಿದರೆ ಎಷ್ಟು ಸೂಕ್ಷ್ಮವಾಗಿರುವುದೇ ಅಷ್ಟೇ ಸೂಕ್ಷ್ಮವಾಗಿರುತ್ತದೆ. ಇದೇ ಅವರ ಆಹಾರದ ಮಾರ್ಗವು. ಇಂದ್ರ ಮತ್ತು ವಿರಾಟ್‌ತತ್ತ್ವಗಳ ಸಂಯುಕ್ತ ದಿವ್ಯಾತ್ಮತತ್ತ್ವವು ಶಾರೀರಕವಾದ ಆತ್ಮಕ್ಕಿಂತಲೂ ಭಿನ್ನವಾದುದು ಮತ್ತು ಅದರಂತೆ ಜರಾಮರಣಾದಿಗಳಿಗೆ ಸಿಲುಕತಕ್ಕದ್ದಲ್ಲ. ಇದು ನಿತ್ಯ.

ಪರಮಾತ್ಮನನ್ನು ಧ್ಯಾನಮಾಡಲು ಸಾಧನವಾದ ಬುದ್ಧಿ ಮತ್ತು ಮನಸ್ಸು ಇವುಗಳಿಗೆ ಆಶ್ರಯವಾದ ಶಿರಸ್ಸಿಗಿಂತಲೂ ಉಪನಿಷತ್ಕಾರರು ಹೃದಯಕ್ಕೆ ತಧಿಕವಾದ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಮುಖ್ಯಪ್ರಾಣಗಳಿಗೆ ಹೃದಯವೇ ಆಶ್ರಯವಾದುದರಿಂದ ಈ ಪ್ರಾಶಸ್ತ್ಯವಿರುತ್ತದೆ. ಹೇಗೆಂದರೆ,

**ಯದ್ವೈ ತತ್ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಹೃದಯ-
ಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ ।**

(ಛಾ. ಉ. ೩-೧೨-೪)

ಪುರುಷನ ನಿಜವಾದ ಶರೀರವಾವುದೆಂದರೆ, ದೇಹದ ಅಂತರಾಳದಲ್ಲಿರುವ ಹೃದಯವೇ ಆಗಿದೆ. ಆ ಹೃದಯದಲ್ಲಿಯೇ ಸಕಲ ಮುಖ್ಯಪ್ರಾಣಗಳೂ ಸ್ಥಾಪಿತವಾಗಿವೆ. ಆ ಹೃದಯವನ್ನು ಮೀರಿ ಅವು ಸರಿಯಲಾರವು. ಆದುದರಿಂದ ಶರೀರಕ್ಕೆ ಉತ್ತಮಾಂಗವೆನಿಸಿದ ಶಿರಸ್ಸಿಗಿಂತಲೂ ಹೃದಯವೇ. ಅಧಿಕ. ಈ ಹೃದಯವು **ಗಾಯತ್ರ್ಯಾಖ್ಯವಾದ** ಪರತತ್ತ್ವಕ್ಕೆ ಆಶ್ರಯವಾಗಿದೆ. ನಾಲ್ಕು ಪಾದಗಳುಳ್ಳ ಗಾಯತ್ರಿಯ ಅಂಗಗಳಾದ ಪೃಥ್ವೀ, ದೇಹ ಮತ್ತು ಹೃದಯ ಇವುಗಳನ್ನು ಮೀರಿದ ಹೃದಯಾಕಾಶವು ಪರಮಪುರುಷನ ಆವಾಸಸ್ಥಾನವು. ಈ ಸಂದರ್ಭದಲ್ಲಿಯೇ ಛಾಂದೋಗ್ಯೋಪನಿಷತ್ತಿನಲ್ಲಿ

**ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವೀತಿ ॥**

(ಛಾ. ಉ. ೩-೧೨-೬)

ಎಂಬ ಋಕ್ಸಂಹಿತೆಯ ಮಂತ್ರವು (೧೦-೯೦-೩) ಉದಾಹೃತವಾಗಿರುತ್ತದೆ.

**ಯದ್ವೈ ತದ್ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾದಾಕಾಶೋ ಯೋ
ವೈ ಸ ಬಹಿರ್ಧಾ ಪುರುಷಾದಾಕಾಶಃ ॥**

(ಛಾ. ಉ. ೩-೧೨-೭)

**ಅಯಂ ವಾವ ಸ ಯೋಽಯಮಂತಃ ಪುರುಷ ಆಕಾಶೋ ಯೋ ವೈ ಸೋಽಂತಃ ಪುರುಷ
ಆಕಾಶಃ ॥** (ಛಾ. ಉ. ೩-೧೨-೮)

ಇತ್ಯಾದಿಯಾಗಿ ಬಾಹ್ಯಾಕಾಶವನ್ನು ಪ್ರತಿಬಿಂಬಿಸುವ ಅಂತರಾಕಾಶದಲ್ಲಿ ಸ್ಥಾಪಿತನಾಗಿರುವ ಪರಮಪುರುಷನ ದಿವ್ಯಸ್ಥಾನವಾದ ಹೃದಯಾಕಾಶವು ವರ್ಣಿತವಾಗಿರುತ್ತದೆ. ದಹರಾಕಾಶಸ್ಥನಾದ ಈ ಪರಮಪುರುಷನ ಪ್ರಸಾರವು ಯಾವ ಯಾವ ಬಗೆಯಲ್ಲಿರುತ್ತದೆ ? ವ್ಯಕ್ತವಾದ ಪರಮಪುರುಷನ ಆವಿರ್ಭಾವಗಳಿಗೆ ಮೀರಿದ ಅವ್ಯಕ್ತವಾದ ಸ್ಥಿತಿಯು ಹೇಗಿರುತ್ತದೆ ? ಇತ್ಯಾದಿಯಾದ ಉಪನಿಷತ್ತುಗಳ ವಿವರಣವು **ತ್ರಿಪಾದೂರ್ಧ್ವ ಉದೈತ್** ಎಂಬ ವಾಕ್ಯದ ತಾತ್ಪರ್ಯವನ್ನು ಹೇಗೆ ತಿಳಿಸುತ್ತವೆ ಎಂಬ ವಿಷಯವನ್ನು ಸ್ಥೂಲವಾಗಿ ಮಾತ್ರ ಪರಿಶೀಲಿಸಬಹುದು:

**ತಸ್ಯ ಹ ವಾ ಏತಸ್ಯ ಹೃದಯಸ್ಯ ಪಂಚ ದೇವಸುಷಯಃ ಸ ಯೋಽಸ್ಯ ಪ್ರಾಙ್ ಸುಷಿಃ ಸ
ಪ್ರಾಣಸ್ತಚ್ಚಕ್ಷುಃ ಸ ಆದಿತ್ಯಸ್ತದೇತತ್ತೇಜೋಽನ್ನಾದ್ಯಮಿತ್ಯುಪಾಸೀತ ತೇಜಸ್ವ್ಯನ್ನಾದೋ
ಭವತಿ ಯ ಏವಂ ವೇದ ।**

(ಛಾ. ಉ. ೩-೧೩-೧)

ಪರಮಾತ್ಮನನ್ನು ಉಪಾಸಿಸುವ ದೇವತೆಗಳ ಸಂಚಾರಕ್ಕೆ ಈ ಹೃದಯದಲ್ಲಿ ಐದು ದ್ವಾರಗಳಿವೆ. ಇವಕ್ಕೆ ದೇವಸುಷಿಗಳೆಂದು ಹೆಸರು. ಪೂರ್ವಾಭಿಮುಖವಾಗಿರುವ ಸುಷಿಯು ಪ್ರಾಣಸಂಜ್ಞಕವಾದುದು. ಅದೇ ಚಕ್ಷುಸ್ಸು ಮತ್ತು ಆದಿತ್ಯನು. ಅದನ್ನು **ಅನ್ನಾದ್ಯ** (ಅನ್ನವನ್ನು ತಿನ್ನತಕ್ಕವನು) ಎಂದು ಆರಾಧಿಸಬೇಗು.

**ಅಥ ಯೋಽಸ್ಯ ದಕ್ಷಿಣಃ ಸುಷಿಃ ಸ ವ್ಯಾನಸ್ತಚ್ಛ್ರೋತ್ರಂ ಸ ಚಂದ್ರಮಾಸ್ತದೇತಚ್ಛ್ರೀಶ್ಚ ಯಶಶ್ಚೇತ್ಯುಪಾಸೀತ ಶ್ರೀಮಾನ್ಯಶಸ್ವೀ ಭವತಿ ।**

(ಛಾ. ಉ. ೩-೧೩-೨)

ದಕ್ಷಿಣದ ಕಡೆ ಇರುವ ದ್ವಾರವು ವ್ಯಾನಸಂಜ್ಞಕವಾದುದು. ಅದೇ ಶ್ರೋತ್ರವು ಮತ್ತು ಚಂದ್ರರೂಪದಲ್ಲಿರತಕ್ಕದ್ದು. ಅದನ್ನು ಶ್ರೀ ಮತ್ತು ಯಶಸ್ಸು ಎಂದು ಉಪಾಸಿಸಬೇಕು.

**ಅಥ ಯೋಽಸ್ಯ ಪ್ರತ್ಯಙ್ಸುಷಿಃ ಸೋಽಪಾನಃ ಸಾ ವಾಕ್ಸೋಽಗ್ನಿಸ್ತದೇತದ್ಬ್ರಹ್ಮವರ್ಚಸಮನ್ನಾದ್ಯಮಿತ್ಯುಪಾಸೀತ ॥**

(ಛಾ. ಉ. ೩-೧--೩)

ಪಶ್ಚಿಮಭಾಗದ ಸುಷಿಯು (ದ್ವಾರವು) ಅಪಾನಸಂಜ್ಞಕವಾದುದು. ಅದೇ ವಾಕ್ಕು. ಅದೇ ಅಗ್ನಿಯು. ಅದನ್ನು ಬ್ರಹ್ಮವಿದ್ಯಾಧಿದೇವತೆಯೆಂದೂ ಅನ್ನಾದ್ಯವೆಂದೂ ಉಪಾಸಿಸಬೇಕು.

**ಅಥ ಯೋಽಸ್ಯೋದಙ್ಸುಷಿಃ ಸ ಸಮಾನಸ್ತನ್ಮನಃ ಸ ಪರ್ಜನ್ಯಸ್ತದೇತತ್ಕೀರ್ತಿಶ್ಚ ವ್ಯುಷ್ಟಿಶ್ಚೇತ್ಯುಪಾಸೀತ ॥**

(ಛಾ. ಉ. ೩-೧೩-೪)

ಉತ್ತರಾಭಿಮುಖವಾದ ಸುಷಿಯು ಸಮಾನಸಂಜ್ಞಕವಾದುದು. ಅದು ಮನಸ್ತತ್ತ್ವವು. ಅದೇ ಪರ್ಜನ್ಯಾತ್ಮಕವು. ಅದನ್ನು ಕೀರ್ತಿ ಮತ್ತು ಲಾವಣ್ಯ ಎಂದು ಉಪಾಸಿಸಬೇಕು. ಹಾಗೆ ಆರಾಧಿಸುವವನು ಕೀರ್ತಿಯುತನೂ ಮತ್ತು ಲಾವಣ್ಯಯುತನೂ ಆಗುತ್ತಾನೆ.

**ಅಥ ಯೋಽಸ್ಯೋರ್ಧ್ವಃ ಸುಷಿಃ ಸ ಉದಾನಃ ಸ ವಾಯುಃ ಸ ಆಕಾಶಸ್ತದೇತದೋಜಶ್ಚ ಮಹಶ್ಚೇತ್ಯುಪಾಸೀತ ॥**

(ಛಾ. ಉ. ೩-೧೩-೫)

ಊರ್ಧ್ವದಿಕ್ಕಿಗೆ ಪ್ರಸರಿಸುವ ಸುಷಿಯು ಉದಾನಸಂಜ್ಞಕವಾಗಿದೆ. ಅದೇ ವಾಯುರೂಪವಾದುದು. ಅದೇ ಆಕಾಶವು. ಅದನ್ನು ಓಜಸ್ಸು ಮತ್ತು ಮಹಃ ಎಂದು ಆರಾಧಿಸಬೇಕು.

**ತೇ ವಾ ಏತೇ ಪಂಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ಸ ಯ ಏತಾನೇವಂ ಪಂಚ ಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದಾಸ್ಯ ಕುಲೇ ವೀರೋ ಜಾಯತೇ ಪ್ರತಿಪದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ ವೇದ ॥**

(ಛಾ. ಉ. ೩-೧೩.೬)

ಹೃದಯಾಂತರ್ಗತವಾದ ದಹರಾಕಾಶದಲ್ಲಿ ಸ್ಥಾಪಿತನಾಗಿರುವ ಪರಮಪುರುಷನ ಸೇವೆಯನ್ನು ಮಾಡುವ ಈ ಐದು ಪ್ರಾಣಗಳೂ ಬ್ರಹ್ಮಪುರುಷರೆಂದು ಪ್ರಸಿದ್ಧರಾಗಿದ್ದಾರೆ. ಇವರು ಸ್ವರ್ಗಲೋಕದ ದ್ವಾರಪಾಲಕರು. ಈ ತತ್ತ್ವವನ್ನರಿತು

ಈ ಪಂಚಪ್ರಾಣಗಳನ್ನೂ ಪರಮಾತ್ಮನ ಆರಾಧಕರೆಂದೂ, ಸ್ವರ್ಗಲೋಕದ ದ್ವಾರಪಾಲಕರೆಂದೂ ಉಪಾಸಿಸಿದರೆ ಆ ಪುರುಷನ ವಂಶದಲ್ಲಿ ವೀರಪುರುಷರು ಉತ್ಪನ್ನರಾಗುತ್ತಾರೆ. ಈ ದ್ವಾರಪಾಲಕರಿಂದ ಆರಾಧಿಸಲ್ಪಡುವವನೂ, ಪಂಚಪ್ರಾಣಗಳಿಗಿಂತಲೂ ಅಧಿಕನೂ, ಶರೀರದ ಸ್ಥೂಲಶರೀರವನ್ನು ಮೀರಿ ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾದ ದಹರಾಕಾಶಸ್ಥನೂ ಪ್ರಕೃತವಾದ ಮಂತ್ರದಲ್ಲಿ (೧೦-೯೦-೪) **ಊರ್ಧ್ವ ಉದೈತ್** ಎಂದು ವರ್ಣಿತನೂ ಆದ ಪರಮ ಪುರುಷನ ದಿವ್ಯಸ್ವರೂಪವೇನೆಂದರೆ—

**ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವ-ನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃಪುರುಷೇ ಜ್ಯೋತಿಸ್ತ-ಸ್ಯೈಷಾ ದೃಷ್ಟಿರ್ಯತ್ರೈತದಸ್ಮಿನ್ ಶರೀರೇಸಂಸ್ಪರ್ಶೇನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿಃ...........ಭವತಿ ಯ ಏವಂ ವೇದ ಯ ಏವಂ ವೇದ ।**

(ಛಾ. ಉ. ೩-೧೩-೭)

ದ್ಯುಲೋಕಕ್ಕಿಂತಲೂ ಊರ್ಧ್ವಪ್ರದೇಶದಲ್ಲಿ ಪ್ರಜ್ವಲಿಸುವುದೂ, ಸಕಲ ವಸ್ತುಗಳ ಪೃಷ್ಠಭಾಗದಲ್ಲೂ ಪ್ರಕಾಶಿಸು ವುದೂ, ಅತ್ಯುನ್ನತರಾದ ಲೋಕಗಳಲ್ಲೆಲ್ಲಾ ಪ್ರಜ್ವಲಿಸುವುದೂ ಆದ ಯಾವ ದಿವ್ಯವಿಭೂತಿಯಿರುವುದೋ ಅದೇ ಪರಮತತ್ತ್ವವೇ ಪುರುಷನ ಹೃದಯಾಂತರ್ಗತವಾದ ದಹರಾಕಾಶದಲ್ಲಿಯೂ ಸ್ಥಾಪಿತವಾಗಿದೆ. ಇಂದ್ರಿಯಪ್ರತ್ಯಕ್ಷಕ್ಕೆ ಮೀರಿದ್ದರೂ ಸಹ ಅದರ ಸಾಕ್ಷಾತ್ಕಾರವಾದರೆ ಅದು ದಿವ್ಯಚಕ್ಷುಸ್ಸಿಗೆ ಗೋಚರವಾಗುತ್ತದೆ. ದಹರಾಕಾಶವನ್ನು ಹೊಂದಿರುವ ಹೃದಯವೇ ಜಾಗ್ರದವಸ್ಥೆಯಲ್ಲಿಯೂ ಮತ್ತು ಸುಪ್ತಾವಸ್ಥೆಯಲ್ಲಿಯೂ ಆತ್ಮನಿಗೆ ಆಶ್ರಯದಾತೃವಾಗಿದೆ.

**ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷಸ್ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽಂತರ್ಹೃ-ದಯ ಆಕಾಶಸ್ತಸ್ಮಿಞ್ಛೇತೇ ತಾನಿ ಯದಾ ಗೃಹ್ಣಾತ್ಯಥ ಹೈತತ್ಪುರುಷಃ ಸ್ವಪಿತಿ ನಾಮ ತದ್ಗೃಹೀತ ಏವ ಪ್ರಾಣೋ ಭವತಿ ಗೃಹೀತಾ ವಾಗ್ಗೃಹೀತಂ ಚಕ್ಷುರ್ಗೃಹೀತಂ ಶ್ರೋತ್ರಂ ಗೃಹೀತಂ ಮನಃ ॥**

(ಬೃ. ಉ. ೨-೧-೧೭)

ಎಂಬ ಈ ಪ್ರಕರಣದಲ್ಲಿ ಸುಪ್ತಾವಸ್ಥೆಯಲ್ಲಿರುವ ಪರಮಪುರುಷನು ಹೃದಯಾಂತರ್ಗತವಾದ ದಹರಾಕಾಶದಲ್ಲಿ ಹೊಂದುವ ಅನುಭವವನ್ನು ತಿಳಿಸಿದೆ. ಈ ವಿಷಯವನ್ನು ಇದೇ ಪ್ರಕರಣದ ನಾಲ್ಕನೇ ಭಾಗದಲ್ಲಿ ಆತ್ಮನ ನಾಲ್ಕು ಅವಸ್ಥೆಗಳನ್ನು ವರ್ಣಿಸುವಾಗ ವಿವರಿಸಲಾಗುತ್ತದೆ.

ಪರಮಪುರುಷನು ಇಲ್ಲಿ ವಾಸಿಸುವುದರಿಂದಲೇ ಹೃದಯವೂ ಸಹ ಆ ಹೆಸರಿನಿಂದ ಪ್ರಸಿದ್ಧವಾಗಿದೆಯೆಂದು ಉಪನಿಷತ್ಕಾರರು ತಿಳಿಸುತ್ತಾರೆ. ಹೇಗೆಂದರೆ,

**ಸ ವಾ ಏಷ ಆತ್ಮಾ ಹೃದಿ ತಸ್ಯೈತದೇವ ನಿರುಕ್ತಂ ಹೃದ್ಯಯಮಿತಿ। ತಸ್ಮಾದ್ಧೃದಯಮಹರ-ಹರ್ವಾ ಏವಂವಿತ್ಸ್ವರ್ಗಂ ಲೋಕಮೇತಿ ।**

( ಛಾ. ಉ. ೮-೩-೩ )

ಪರಮಾತ್ಮನು ಹೃದಯಸ್ಥನಾಗಿದ್ದಾನೆ. ನಿರುಕ್ತಕಾರರು **ಹೃದಯ** ಶಬ್ದದ ನಿರ್ವಚನವನ್ನು ಈ ರೀತಿ ತಿಳಿಸಿವ್ದಾರೆ. **ಅಯಂ**—ಈ ಪರಮಾತ್ಮನು ; **ಹೃದಿ**—ಹೃದ್ರೂಪವಾದ ಪುಂಡರೀಕದಲ್ಲಿದ್ದಾನೆ. ಆದುದರಿಂದ ಹೃದಯವೆಂಬ ಹೆಸರು ಎಂದು ತಾತ್ಪರ್ಯ. ಈ ತತ್ತ್ವವನ್ನರಿತವನು ಉತ್ತಮವಾದ ಲೋಕವನ್ನು ಹೊಂದುತ್ತಾನೆ. ಇದನ್ನೇ ಕಠೋಪನಿಷತ್ತಿನಲ್ಲಿ ಪ್ರಶಂಸಿಸುತ್ತ **ಅಣೋರಣೀಯಾನ್** ಅತ್ಯಂತ ಸೂಕ್ಷ್ಮವಾದುದಕ್ಕಿಂತಲೂ ಸೂಕ್ಷ್ಮತರವಾದ ಈ ಪರಮಾತ್ಮನು ಗುಹ್ಯಪ್ರದೇಶದಲ್ಲಿ ಅಡಗಿದ್ದಾನೆಂದು ಸ್ತುತಿಸಿದೆ.

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।**

( ಕಠ. ೬-೧೭ )

ಪರಮಪುರುಷನು ಅಂಗುಷ್ಠಮಾತ್ರನು. ಅಂತರಾತ್ಮನಾದ ಈ ಪುರುಷನು ಜನರ ಹೃದಯಾಂತರಾಳವಾದ ಗುಹ್ಯ ಪ್ರದೇಶದಲ್ಲಿ ಗೋಚರಾತೀತನಾಗಿ ಅಡಗಿದ್ದಾನೆ.

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥**

( ಕಠ. ೨-೧೨ )

**ಊರ್ಧ್ವ ಉದೈತ್** ಎಂದು ವರ್ಣಿತವಾಗಿರುವ ಈ ಪುರುಷನು ಗೋಚರಾತೀತನು. ಹೃದಯಾಕಾಶವೆಂಬ ಗುಹ್ಯವಾದ ಪ್ರದೇಶದಲ್ಲಿ ಅಡಗಿದ್ದಾನೆ. ಗಭೀರವಾದ ಹೃದಯಾಕಾಶದಲ್ಲಿ ಪುರಾತನನಾದ ಪರಮಪುರುಷನು ಅಡಗಿರುವ ರಹಸ್ಯವನ್ನರಿತು ಅಲ್ಲಿ ಪ್ರವೇಶಿಸಿ ಯಾರು ಈ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವರೋ ಅವರು ಶೋಕವನ್ನು ದಾಟುತ್ತಾರೆ.

**ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ । ಏತದ್ಯೋ ವೇದ ನಿಹಿತಂ**
**ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ ।**

( ಮು. ಉ. ೨-೧-೧೦ )

ವಿಶ್ವವ್ಯಾಪಿಯಾದ ಪರಮಾತ್ಮನೇ ಸಕಲ ಯಜ್ಞಕರ್ಮರೂಪನು ; ತಪೋರೂಪನು. ಪರಾತ್ಪರನಾದವನೂ, ಹೃದಯದ ಗುಹ್ಯಾಕಾಶದಲ್ಲಿ ಅಡಗಿರುವವನೂ ಆದ ಈ ಪರಮಪುರುಷನನ್ನು ಯಾವನು ಪೂರ್ಣವಾಗಿ ಅರಿಯುವನೋ ಅವನು ತನ್ನ ಅವಿದ್ಯಾರೂಪದ ಗ್ರಂಥಿಗಳನ್ನು ಬಿಡಿಸಿ ಮುಕ್ತನಾಗುತ್ತಾನೆ. ಇವನನ್ನು ಅರಿಯುವ ಸಾಧನವೇನೆಂದರೆ:—

**ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥**

( ಕಠ. ೨-೧೬ )

ಹೃದಯದ ನಾಡಿಗಳು ನೂರೊಂದಿವೆ. ಅವುಗಳಲ್ಲಿ ಒಂದು ಮಾತ್ರ ಊರ್ಧ್ವಮುಖವಾಗಿ ಹೊರಟು ಶಿರಸ್ಸಿನ ಅಗ್ರಭಾಗವನ್ನು ಸೇರುತ್ತವೆ. ಅದರ ಮಾರ್ಗವನ್ನನುಸರಿಸಿ ಪುರುಷನನ್ನು ಹುಡುಕುವವನು ಅಮೃತತ್ವವನ್ನು

ಹೊಂದುತ್ತಾನೆ. ಇತರ ನಾಡಿಗಳು ಬೇರೆಬೇರೆಯಾಗಿ ಪ್ರಸರಿಸುತ್ತವೆ. ಈ ಉಪನಿಷತ್ತಿನ ವರ್ಣನೆಯ ಪ್ರಕಾರ ಹೃದಯದ ಒಂದು ನಾಡಿಯು ಮಾತ್ರ ಪರಮಪುರುಷನ ಸಾಕ್ಷಾತ್ಕಾರಕ್ಕೆ ಸಾಧಕವಾಗುತ್ತದೆ. ಉಳಿದವು ಚದುರಿ ಹೋಗಿವೆ. ಕೆಲವು ಉಪನಿಷತ್ತುಗಳು ಈ ನಾಡಿಗಳನ್ನು ಸೂರ್ಯರಶ್ಮಿಗಳಿಗೆ ಹೋಲಿಸಿವೆ, ಹೃದಯದ ನಾಡಿಗಳು ಅನಂತವೆಂದು ಕೆಲವು ಉಪನಿಷತ್ತುಗಳ ಮತ. ಈ ಪ್ರಕರಣವನ್ನು ವಿವರಿಸುವ ಪ್ರಶ್ನೋಪನಿಷತ್ತಿನ ವಾಕ್ಯಗಳನ್ನು ಮಾತ್ರ ಉದಾಹರಿಸಿ ಈ ಪ್ರಕರಣವನ್ನು ಮುಗಿಸಲಾಗುತ್ತದೆ.

**ಹೃದಿ ಹ್ಯೇಷ ಆತ್ಮಾ । ಅತ್ರೈತದೇಕಶತಂ ನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯಾಂ ದ್ವಾಸಪ್ತತಿರ್ದ್ವಾಸಪ್ತತಿಃ ಪ್ರತಿಶಾಖಾನಾಡೀಸಹಸ್ರಾಣಿ ಭವಂತ್ಯಾಸು ವ್ಯಾನಶ್ಚರತಿ ।**

(ಪ್ರಶ್ನ ೩-೬)

ಹೃದಯದಲ್ಲಿ ಆತ್ಮನು ವಾಸಿಸುತ್ತಾನೆ. ಈ ಹೃದಯದಲ್ಲಿ ನೂರೊಂದು ನಾಡಿಗಳಿವೆ. ಪ್ರತಿಯೊಂದೂ ನೂರು ವಿಭಾಗಾತ್ಮಕವಾಗಿರುತ್ತದೆ. ಪ್ರತಿಯೊಂದು ವಿಭಾಗವು ಎಪ್ಪತ್ತೆರಡು ಸಾವಿರಭಾಗಗಳಾಗಿರುತ್ತವೆ. ಇವುಗಳ ಕ್ರಮವು ಈ ರೀತಿಯಿರುತ್ತದೆ.

ಮುಖ್ಯನಾಡಿಗಳು ೧೦೧. ಇವುಗಳಲ್ಲಿ ಪ್ರತಿಯೊಂದು ನೂರು ಭಾಗ. ಎಂದರೆ. ೧೦೧×೧೦೦= ೧೦೧೦೦ ಪುನಃ ಇವು ೭೨,೦೦೦ ವಿಭಾಗ. ಎಂದರೆ ಒಟ್ಟಿನಲ್ಲಿ ಲೆಕ್ಕವು ಹೀಗಿರುತ್ತದೆ. ೧೦೧+೧೦೧+೧೦೦×೧೦೧× ೧೦೦×೭೨೦೦೦ =೭೨೭,೨೧೦,೨೦೧ ಎಂದರೆ ೭೨ ಕೋಟಿ, ೭೨ ಲಕ್ಷ ಮತ್ತು ೧೦,೨೦೧, ಎಂದು ಭಾಷ್ಯಕಾರರು ವಿವರಿಸಿದ್ದಾರೆ. ಈ ಲೆಕ್ಕಗಳು ಪ್ರಕೃತದಲ್ಲಿ ಅವಶ್ಯವಿಲ್ಲ. ಒಟ್ಟಿನಲ್ಲಿ ಊರ್ಧ್ವಮುಖವಾದ ನಾಡಿಯಿಂದ ಪರಮಪುರುಷನ ಸಾಕ್ಷಾತ್ಕಾರವಾಗುವುದೆಂಬ ಅಭಿಪ್ರಾಯವು ಪ್ರಕೃತದಲ್ಲಿ ಉಪಯುಕ್ತವಾದುದು. ಅದನ್ನೇ ಪ್ರಶ್ನೋಪನಿಷತ್ತಿನಲ್ಲಿ"

**ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ॥**

(ಪ್ರಶ್ನ. ೩-೭)

ಇತ್ಯಾದಿಯಾಗಿ ವರ್ಣಿಸಿದೆ.

ಹೀಗೆ—ದೇಹ, ಹೃದಯ ಇವುಗಳನ್ನು ಮೀರಿದ ಹೃದಯಾಂತರ್ಗತವಾದ ದಹರಾಕಾಶಸ್ಥನಾದ ಪರಮ ಪುರುಷನನ್ನು **ತ್ರಿಪಾದೂರ್ಧ್ವ ಉದೈತ್** ಎಂಬ ವಾಕ್ಯವು ಪ್ರಶಂಸಿಸುತ್ತದೆಯೆಂದು ಒಂದು ಮತ. ಆದರೆ, ಇಲ್ಲಿ **ಸಹಸ್ರಾರ** ಎಂಬ ಪದದ್ದ ಅರ್ಥವೇನು ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ. ಈ ರೂಪವನ್ನು ವಿವರಿಸಲು ಯೋಗೋಪನಿಷತ್ತುಗಳ ವಾಕ್ಯಗಳನ್ನುದಾಹರಿಸಿ ಅವುಗಳ ತಾತ್ಪರ್ಯವನ್ನು ವಿಶದಪಡಿಸಬೇಕಾಗುತ್ತದೆ. ಅದಕ್ಕೆ ಸದ್ಯಃ ಅವಕಾಶವಿಲ್ಲ. ಪ್ರಕೃತವೂ ಇಲ್ಲ.

**೪**

**ಯದ್ವಾ ತ್ರಿಪಾಚ್ಛಬ್ದೇನ ಜಾಗ್ರತ್ಸ್ವಪ್ನಸುಷುಪ್ತೀನಾಂ ಗ್ರಹಣಂ ತತ ಊರ್ಧ್ವಮುಪರಿಭಾಗೇ ತುರೀಯಾಯಾಮುದೈತ್ಸ್ವೋಪಲಬ್ಧಿಂ ಪ್ರಾಪ್ತ ಇತ್ಯರ್ಥಃ**

**ತ್ರಿಪಾತ್** ಎಂಬ ಪದದಿಂದ **ಜಾಗ್ರತ್, ಸ್ವಪ್ನ** ಮತ್ತು **ಸುಷುಪ್ತಿ** ಎಂಬ ಮೂರು ಅವಸ್ಥೆಗಳು ನಿರ್ದಿಷ್ಟವಾಗುತ್ತವೆ ಅವುಗಳೆಲ್ಲವನ್ನೂ ಮೀರಿದುದು ನಾಲ್ಕನೆಯ ಅವಸ್ಥೆ. ಆ ಮೊದಲನೆಯ ಮೂರು ಅವಸ್ಥೆಗಳನ್ನೂ ದಾಟಿ ಉತ್ತಮ

ನಾದ ತುರೀಯಾವಸ್ಥೆಯಲ್ಲಿ (ನಾಲ್ಕನೆಯದು) ಪರಮಪುರುಷನು ಸ್ಥಿತನಾಗಿದ್ದಾನೆ ಎಂಬುದೇ ಈ ವಾಕ್ಯದ ತಾತ್ಪರ್ಯವೆಂದು ಹೇಳುವುದು ಇನ್ನೊಂದು ಮತ. ಈ ತಾತ್ಪರ್ಯವನ್ನು ಹೇಳುವುದಕ್ಕೂ ಶ್ರುತಿವಾಕ್ಯಗಳು ಸಹಾಯಮಾಡುತ್ತವೆ. ಜಿತೇಂದ್ರಿಯರಿಗೆ ಮಾತ್ರ ತುರೀಯಾವಸ್ಥೆಯ ಅನುಭವವು ಸಾಧ್ಯ. ಉಳಿದವರಿಗೆ ಗುಹ್ಯಪ್ರದೇಶಸ್ಥನಾದ ಪರಮಪುರುಷನ ಸಾಕ್ಷಾತ್ಕಾರವಿಲ್ಲ.

**ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜದೇತದ್ಯತಯೋ ವಿಶಂತಿ ।**

(ತೈ. ಆ. ೧೦-೧೨-೩)

ಜಿತೇಂದ್ರಿಯರಾದವರೂ, ಅತೀಂದ್ರಿಯಜ್ಞಾನವುಳ್ಳವರೂ ಆದ ಋಷಿಗಳು ಸ್ವರ್ಗಕ್ಕಿಂತಲೂ ಉತ್ಕೃಷ್ಟವಾದುದೂ, ಗೂಢವಾದುದೂ ಆದ ತಮ್ಮ ಹೃದಯಾಕಾಶದಲ್ಲಿ ಪ್ರಕಾಶಿಸುವ ಪರಮಾತ್ಮನನ್ನು ಕಂಡು ತಾವೂ ಅಲ್ಲಿ ಪ್ರವೇಶಿಸಿ ಆ ದಿವ್ಯತತ್ತ್ವದೊಡನೆ ತಾವೂ ಪ್ರಕಾಶಿಸುತ್ತಾರೆ. ಈ ಸಾಕ್ಷಾತ್ಕಾರವು ತುರೀಯಾವಸ್ಥೆಯಲ್ಲಿ ಮಾತ್ರ ಸಾಧ್ಯ.

**ನಿವಿಶಂತೇ ಸ್ವಾಪಕಾಲೇ ಸ್ವಸ್ವವಿಷಯೇಭ್ಯಃ ಪ್ರತಿನಿವೃತ್ತಾನಿ ಆತ್ಮನಿವೃತ್ತಾನಿ ಲೀಯಂತೇ ಪುನಃ ಪ್ರಬೋಧಕಾಲೇ ಅಧಿ ವಿಶ್ವೇ ವಿಶ್ವಸ್ಯೋಪರಿ ಸುವತೇ ಚ ಉದ್ಯಂತಿ । ಸ್ವಸ್ವವಿಷಯಾನ್ ಲಭಂತ ಇತ್ಯರ್ಥಃ ॥**

(ಸಾ. ಭಾ.)

ನಿದ್ರಾಕಾಲದಲ್ಲಿ (ಸುಷುಪ್ತಿ) ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಬಿಟ್ಟು ವಿಷಯಸಂಪರ್ಕದಿಂದ ನಿವೃತ್ತಿಯನ್ನು ಹೊಂದಿ ಆತ್ಮನಲ್ಲಿ ಲೀನವಾಗುತ್ತವೆ. ಪುನಃ ಜಾಗ್ರತ್ಕಾಲದಲ್ಲಿ ವಿಶ್ವಾಭಿಮುಖವಾಗಿ ಆವಿರ್ಭೂತಗಳಾಗಿ ತಮ್ಮ ತಮ್ಮ ವಿಷಯಗಳ ಸಂಪರ್ಕವನ್ನು ಹೊಂದುತ್ತವೆ. ಇದು ಇಂದ್ರಿಯವೃತ್ತಿಗಳ ಸ್ವರೂಪವು. ಈ ಇಂದ್ರಿಯವೃತ್ತಿಗಳಿಗೂ ಪರಮಾತ್ಮನಿಗೂ ಏನು ಸಂಬಂಧ ? ಈ ಇಂದ್ರಿಯವೃತ್ತಿಗಳ ಯಾವ ಸ್ಥಿತಿಯಲ್ಲಿ ಆತ್ಮಸಾಕ್ಷಾತ್ಕಾರವಾಗುತ್ತದೆ ? ಆ ಸಾಕ್ಷಾತ್ಕಾರದಿಂದ ಲಭಿಸತಕ್ಕ ಫಲದ ಸ್ವರೂಪವೇನು ? ಅದರ ವೈಶಿಷ್ಟ್ಯವೇನು ? ಎಂಬುದನ್ನು ಮಾಂಡೂಕ್ಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ।**

(ಮಾ. ಉ. ೧-೩)

ಇಂದ್ರಿಯಗಳ ಮೂಲಕ ಬಾಹ್ಯವಿಷಯಗಳಲ್ಲಿ ಎಚ್ಚರವನ್ನು ಹೊಂದಿರುವ ಅವಸ್ಥೆಯಲ್ಲಿ ಆತ್ಮನು ಜಾಗರಿತಸ್ಥಾನನೆನಿಸಿಕೊಳ್ಳುತ್ತಾನೆ. ಹೊರಗೆ, ಎಂದರೆ ತನಗಿಂತಲೂ ಬೇರೆಯಾಗಿರುವ ವಿಷಯದಲ್ಲಿ ಅರಿವು ಉಳ್ಳವನಾದುದರಿಂದ ಬಹಿಷ್ಪ್ರಜ್ಞನು. ಇವನಿಗೆ ಏಳು ಅಂಗಗಳೂ ಮತ್ತು ಹತ್ತೊಂಭತ್ತು ಮುಖಗಳೂ ಇರುತ್ತವೆ. (೫ ಬುದ್ಧೀಂದ್ರಿಯ, ೫ ಕರ್ಮೇಂದ್ರಿಯ ೫ ವಾಯುಗಳು—ಇವು ೧೫—ಅಲ್ಲದೇ ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ.) ಈ ದ್ವಾರಗಳಿಂದ ಬಾಹ್ಯದೃಷ್ಟಿಯುಳ್ಳ ಆತ್ಮನು ಶಬ್ದಾದಿಸ್ಥೂಲವಿಷಯಗಳನ್ನು ಭೋಗಿಸುತ್ತಿರುತ್ತಾನೆ. ಇದು ಆತ್ಮನ ಮೊದಲನೆಯ ಪಾದ ಅಥವಾ ಅವಸ್ಥೆ. ಇದೇ ಅವಸ್ಥೆಯನ್ನು ಕಠೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.

**ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ।**

(ಕಠ. ಉ. ೨-೧-೧)

ಚಕ್ಷುರಾದೀಂದ್ರಿಯಗಳನ್ನು ಯಾವಾಗಲೂ ಬಾಹ್ಯವಿಷಯಗಳಲ್ಲೇ ಆಸಕ್ತವಾಗಿರುವಂತೆ ಬಿಟ್ಟು ಹೊರಗಿರತಕ್ಕ ವಿಷಯಗಳಲ್ಲೇ ತೃಪ್ತಿಯನ್ನು ಪಡೆಯುವುದೂ ಕಾಮಾದಿಗಳಿಂದ ಲಿಪ್ತವಾಗುವುದೂ ಆದ ಇಂದ್ರಿಯಸಂಬಂಧವಿರುವಾಗ ಆತ್ಮನಿಗೆ ಜಾಗ್ರದವಸ್ಥೆಯಿರುತ್ತದೆ. ಆಗ ಇಂದ್ರಿಯಗಳ ವ್ಯಾಪಾರಗಳೆಲ್ಲವೂ ಬಾಹ್ಯವಾಗಿಯೇ ಇರುತ್ತವೆ. ಹೃದಯಾಂತರ್ಗತನಾದ ಆತ್ಮನಲ್ಲಿಗೆ ಪ್ರಸರಿಸಲಾರವು. ಇದು ಮೊದಲನೆಯ ಸ್ಥಿತಿ. ಎರಡನೆಯದಾಗಿ,

**ಸ್ವಪ್ನಃಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ತೈಜಸೋ ದ್ವಿತೀಯಃ ಪಾದಃ ।**

(ಮಾ. ಉ. ೧-೪)

ಈ ಅವಸ್ಥೆಯಲ್ಲಿರುವ ಆತ್ಮನಿಗೆ ತೈಜಸನೆಂದು ಹೆಸರು. ಇವನು ಸ್ವಪ್ನಸ್ಥಾನನು, ಚಕ್ಷುರಾದೀಂದ್ರಿಯರೂಪವಾದ ಬಾಹ್ಯಸಾಧನಗಳಿಂದ ಬಾಹ್ಯವಿಷಯಗಳ ಅರಿವು ಆಗುವುದರಿಂದ ಹೊರಗಿನ ವಿಷಯದ ರೂಪವನ್ನೇ ತಾಳಿರುವ ಬರಿಯ ಮನಸ್ಸಿನ ಅಲುಗಾಟ ಮಾತ್ರವಾಗಿದ್ದು ಅಂತಹ ಅನಿತ್ಯವಾದ ಸಂಸ್ಕಾರವನ್ನೇ ಮನಸ್ಸಿನಲ್ಲಿ ಉಂಟುಮಾಡುತ್ತದೆ. ಅದೇ ಸಂಸ್ಕಾರವನ್ನು ಹೊಂದಿದ ಮನಸ್ಸು, ಚಿತ್ರವನ್ನು ಬರೆದ ಬಟ್ಟೆಯಂತೆ ಹೊರಗಿನ ಸಾಧನವನ್ನು ಬಯಸದೆಯೇ ಅವಿದ್ಯಾಕಾಮಕರ್ಮಗಳಿಂದ ಪ್ರೇರಿಸಲ್ಪಟ್ಟು ಎಚ್ಚರವನ್ನು ಹೊಂದಿರುವಂತೆಯೇ ತೋರುತ್ತದೆ. ಆದುದರಿಂದಲೇ,

**ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮುಪಾದಾಯ ।**

(ಬೃ. ಉ. ೪-೩-೯)

ಸರ್ವಸಾಧನಸಂಪತ್ತೂ ಇರುವ ಜಾಗ್ರತ್ತಿನ ವಾಸನೆಯನ್ನು ತೆಗೆದುಕೊಂಡು ಆತ್ಮನು ಕನಸ್ಸನ್ನು ಅನುಭವಿಸುತ್ತಾನೆ. ಮನಸ್ಸು ಮಾತ್ರ ಇಂದ್ರಿಯಗಳಿಗಿಂತಲೂ ಒಳಗೆ ಇರುವುದರಿಂದಲೂ ಅದರ ವಾಸನಾರೂಪವಾದ ಪ್ರಜ್ಞೆಯು ಕನಸ್ಸಿನಲ್ಲಿ ಇವನಿಗೆ ಆಗುವುದೆಂಬ ಕಾರಣದಿಂದಲೂ, ಇವನು ಈ ಅವಸ್ಥೆಯಲ್ಲಿ ಅಂತಃಪ್ರಜ್ಞನೆನಿಸಿಕೊಳುತ್ತಾನೆ. ಆದರೂ ಇಲ್ಲಿ ವಾಸನಾರೂಪವಾಗಿರುವ ಪ್ರಜ್ಞೆಯು ಭೋಜ್ಯವಾಗಿರುತ್ತದೆ. ಇದು ಸ್ವಪ್ನಾವಸ್ಥೆಯೆಂಬ ಎರಡನೆಯ ಪಾದವು. ಈ ಎರಡು ಅವಸ್ಥೆಗಳಲ್ಲದೆ ಸುಷುಪ್ತಿ ಎಂಬ ಮತ್ತೊಂದವಸ್ಥೆ ಇರುವುದು

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಂ। ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥**

(ಮಾ. ಉ. ೧-೫)

ಈ ಅವಸ್ಥೆಯಲ್ಲಿ ಆತ್ಮನು ನಿದ್ರಿಸುತ್ತಿರುವನು. ಯಾವ ಕಾಮವನ್ನೂ ಬಯಸುವುದಿಲ್ಲ. ಯಾವ ಕನಸ್ಸನ್ನೂ ಕಾಣುವುದಿಲ್ಲ. ಈ ಕಾಲದಲ್ಲಿ ಸುಷುಪ್ತಿಸ್ಥಾನನೂ, ಏಕೀಭೂತನೂ, ಪ್ರಜ್ಞಾನಘನನೂ, ಆನಂದಮಯನೂ, ಆನಂದ ಭೋಗಿಯೂ, ಚೇತೋಮುಖನೂ ಆಗಿರುತ್ತಾನೆ. ಇದು ಮೂರನೆಯ ಪಾದವು. ಮತ್ತು ಮನಸ್ಸು ವಿಷಯ ಮತ್ತು ವಿಷಯಿಗಳ ಅಲುಗಾಡುವ ಆಯಾಸದ ದುಃಖವು ಇಲ್ಲದಿರುವುದರಿಂದ ಆತ್ಮನು ಆನಂದಮಯನು. ಆನಂದಪ್ರಚುರ ನಾಗಿರುವನು (ಆನಂದಸ್ವರೂಪನೆಂದರ್ಥವಲ್ಲ). ಆದರೆ ಈ ಆನಂದವೂ ನಿತ್ಯವಾಗಿ ಉಳಿಯುವುದಿಲ್ಲ ನಶ್ವರವಾದುದು. ಇದು ಮೂರನೆಯ ಪಾದವು.

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ।**

(ಮಾ. ಉ. ೧-೬)

ಈತನೇ ಸರ್ವೇಶ್ವರನು. ಈತನೇ ಸರ್ವಜ್ಞನು. ಈತನೇ ಸರ್ವಾಂತರ್ಯಾಮಿಯು. ಈತನೇ ಎಲ್ಲಕ್ಕೂ ಕಾರಣನು. ಸಕಲ ಭೂತಗಳಿಗೂ ಉತ್ಪತ್ತಿಪ್ರಳಯಗಳೂ ಇವನೇ ಆಗಿದ್ದಾನೆ. ಇಂತಹ ಪರಮಾತ್ಮನಿಗೆ ನಾಲ್ಕು ಅವಸ್ಥೆಗಳು. ಮೇಲೆ ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ತಿಳಿಸಿದೆ. ಅದನ್ನೇ ಮೂರು ಪಾದಗಳು ಎಂದೂ ಹೇಳುತ್ತಾರೆ. ಆದುದರಿಂದಲೇ **ತ್ರಿಪಾತ್** ಎಂಬ ವಿಶೇಷಣವಿರುತ್ತದೆ. ನಾಲ್ಕನೆಯ ಅವಸ್ಥೆಯು ಯಾವುದೆಂದರೆ, ತುರೀಯಾವಸ್ಥೆ.

**ನಾಂತಃಪ್ರಜ್ಞಂ ನ ಬಹಿಷ್ಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಂ । ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯ-ಮೇಕಾತ್ಮಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ।**

(ಮಾ ಉ. ೧-೭)

ಆತ್ಮನು ಈ ತುರೀಯಾವಸ್ಥೆಯಲ್ಲಿ ಅಂತಃಪ್ರಜ್ಞನೂ ಅಲ್ಲ. ಬಹಿಷ್ಪ್ರಜ್ಞನೂ ಅಲ್ಲ. ಪ್ರಜ್ಞಾನಘನನೂ ಅಲ್ಲ. ಪ್ರಜ್ಞನೂ ಅಲ್ಲ. ವ್ಯವಹಾರಾತೀತನು. ಅಲಕ್ಷಣನು. ಅಚಿಂತ್ಯನು. ಏಕಾತ್ಮಪ್ರತ್ಯಯಸಾರನು. ಶಾಂತನೂ, ಶಿವನೂ, ಅದ್ವೈತನೂ ಆದ ಆತ್ಮನು. ಆದುದರಿಂದಲೇ **ತ್ರಿಪಾದೂರ್ಧ್ವ ಉದೈತ್** ಎಂದು ವರ್ಣಿತನಾಗಿದ್ದಾನೆ. ಅವನ ಸ್ವರೂಪವೇನೆಂದರೆ—

**ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ ॥**

(ಛಾ. ಉ. ೮-೩-೪)

ತುರೀಯಾವಸ್ಥೆಯಲ್ಲಿರುವ ಈ ಪರಮಾತ್ಮನು ಪ್ರಶಾಂತಾತ್ಮನಾಗಿದ್ದಾನೆ. ಶರೀರದ ಶೃಂಖಲೆಯನ್ನು ದಾಟಿ ಅತ್ಯುತ್ತಮವಾದ ತನ್ನ ದಿವ್ಯಜ್ಯೋತಿಯಿಂದ ಬೆಳಗುತ್ತಾನೆ. ಇವನು ದೇಹಾತಿರಿಕ್ತನಾದುದರಿಂದ ಅಮರ್ತ್ಯನು. ಭೀತಿರಹಿತನು. ಸತ್ಯಾತ್ಮಕನಾದ ಪರಬ್ರಹ್ಮನು. ಸ್ವಯಂಜ್ಯೋತಿಯಿಂದ ಪ್ರಕಾಶಿಸುವ ಈ ತುರೀಯಾವಸ್ಥೆಯನ್ನೇ ಮೇಲಿನ ವಾಕ್ಯದಲ್ಲಿ (ಛಾ. ಉ. ೮-೩-೨) **ಬ್ರಹ್ಮಲೋಕವೆಂದು** ಸ್ತುತಿಸಿದೆ. (ಮೈತ್ರ್ಯುಪನಿಷತ್ತಿನಲ್ಲಿ ಪಠಿತವಾದ ೧೦-೯೦-೩,ಳನೇ ಋಕ್ಕುಗಳನ್ನೇ ನಿರ್ದೇಶಿಸಿದೆ. ಮೈ. ಉ. ೭-೧೧)

ಹೀಗೆ **ತ್ರಿಪಾದೂರ್ಧ್ವ ಉದೈತ್** ಎಂಬ ವಾಕ್ಯಕ್ಕೆ ಮೇಲೆ ವಿವರಿಸಿದಂತೆ ನಾಲ್ಕು ವಿಧವಾಗಿ ತಾತ್ಪರ್ಯ ಮಾಡಬಹುದಲ್ಲದೆ, ಐದನೆಯ ವಿಧವಾಗಿಯೂ ತಾತ್ಪರ್ಯವನ್ನು ಹೇಳಬಹುದೆಂದು ತಿಳಿಸಿದೆ. ಈ ತಾತ್ಪರ್ಯಕ್ರಮವನ್ನು ತಿಳಿಸಲಾಗುತ್ತದೆ.

ಋ

**ಯದ್ವಾ ತ್ರಿಪಾಚ್ಛಬ್ದೇನ ವೇದತ್ರಯೀ ಸಂಗೃಹ್ಯತೇ । ತತ ಊರ್ಧ್ವಂ ಇತ್ಯನೇನ ಯತ್ರ ಸರ್ವೇಷಾಂ ವೇದಾನಾಂ ಪ್ರತಿಪಾದಕತಯಾ [ಏಕೀಭಾವಃ ತಸ್ಮಿನ್ಧಾಮ್ನಿ ಸ್ವರೂಪೇ ಉಪಲಬ್ಧಿಂ ಗತಃ ॥**

**ಋಕ್, ಯಜುಸ್** ಮತ್ತು **ಸಾಮ** ಈ ಮೂರು ವೇದಗಳೂ **ತ್ರಿಪಾತ್** ಸಂಜ್ಞಕವಾಗಿರುತ್ತವೆ. ಇವುಗಳ ವರ್ಣನೆಗೂ ಸಿಲುಕದೆ ಅನಿರ್ವಾಚ್ಯನೂ ಅವರ್ಣ್ಯನೂ ಆದ ಪರಮಪುರುಷನು ಸ್ತುತನಾಗಿದ್ದಾನೆ ಎಂಬುದೇ ಇಲ್ಲಿನ ತಾತ್ಪರ್ಯವೆಂದು ಒಂದು ಮತ. ಈ ತಾತ್ಪರ್ಯಕ್ಕೂ ಶ್ರುತಿವಾಕ್ಯಗಳ ಆಧಾರವಿರುತ್ತದೆ.

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**

(ತೈ. ಉ. ೨-೯)

ಬ್ರಹ್ಮನಿಗೆ ಸವಿಕಲ್ಪಕತ್ವ, ನಿರ್ವಿಕಲ್ಪಕತ್ವ ಎಂಬ ಎರಡು ಸ್ಥಿತಿಗಳಿವೆ. ಸಗುಣನು, ಸಾವಯವನು ಎಂಬ ಪ್ರಪಂಚಾವಸ್ಥೆಯಲ್ಲಿರುವಾಗ ಬ್ರಹ್ಮನ ಸ್ವರೂಪವನ್ನು ವೇದಗಳು ವರ್ಣಿಸಬಲ್ಲವು. ಪ್ರಪಂಚಾತಿರಿಕ್ತನಾದ ಪರಮ ಪುರುಷನನ್ನು ವೇದಗಳು ವರ್ಣಿಸಲಾರವು. ಆದುದರಿಂದ ಅವನು ವಾಗ್ವರ್ಣನೆಗೆ ಅತೀತನು. ಧ್ಯಾನದಿಂದ ಮಾತ್ರ ಸಾಕ್ಷಾತ್ಕಾರಕ್ಕೆ ಸಾಧ್ಯ ಇತ್ಯಾದಿ ಪರಬ್ರಹ್ಮನ ಸ್ವರೂಪವು ವಾಗ್ವರ್ಣನೆಗೆ ಮೀರಿದುದು ಎಂಬ ವಿಷಯವನ್ನು ಹಿಂದೆ ಋಗ್ವೇದ ಸಂಹಿತೆಯ ೧೨ನೇ ಭಾಗದಲ್ಲಿ ವಿವರಿಸಿದೆ. ಆದುದರಿಂದ ಪುನಃ ಇಲ್ಲಿ ವಿವರಿಸುವ ಆವಶ್ಯಕತೆಯಿಲ್ಲ.

ಹೀಗೆ ಐದು ವಿಧವಾದ ತಾತ್ಪರ್ಯವನ್ನು ಹೇಳಬಹುದಾಗಿದೆ. ತ್ರಿಪಾದಗಳಿಗಿಂತಲೂ ಮೀರಿದವನಾದರೂ ಸಹ ಪುನಃ ತನ್ನ ಪಾದಮಾತ್ರವಾದ ಪ್ರಪಂಚರೂಪದಲ್ಲಿ ಪರಿಣಾಮವನ್ನು ಹೊಂದುತ್ತಾನೆ ಎಂದು **ಪಾದೋಽಸ್ಯೇಹಾಭವತ್ಪುನಃ** ಎಂಬ ವಾಕ್ಯದಿಂದ ತಿಳಿಸಿದೆ.

**ಪಾದ**ಶಬ್ದಕ್ಕೆ ಸಾಯಣರು **ಲೇಶ**ವೆಂದರ್ಥ ಮಾಡಿದ್ದಾರೆ. **ಸೋಽಯಂ ಪಾದಃ ಲೇಶಃ ಪುನಃ ಅಭವತ್**—ಸೃಷ್ಟಿ **ಸಂಹಾರಾಭ್ಯಾಂ ಪುನಃ ಪುನಃ ಅಗಚ್ಛತಿ**—ಸೃಷ್ಟಿ ಮತ್ತು ಸಂಹಾರರೂಪಕ್ರಿಯೆಗಳಿಂದ ಜಗತ್ತಿನ ರೂಪದಲ್ಲಿ ಪುನಃ ಪುನಃ ತನ್ನ ಲೇಶಮಾತ್ರವನ್ನು ಪ್ರಕಾಶಪಡಿಸುತ್ತಾನೆ ಎಂದರ್ಥ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥**

(ಭ. ಗೀ. ೯-೭)

ಎಲೈ ಕೌಂತೇಯನೇ, ಕಲ್ಪಾಂತದಲ್ಲಿ ಸಕಲ ಭೂತಗಳೂ ನನ್ನಲ್ಲಿಯೇ ಲಯವನ್ನು ಹೊಂದುತ್ತವೆ. ಪುನಃ ಕಲ್ಪದ ಆದಿಯಲ್ಲಿ ನಾನೇ ಅವನ್ನು ಸೃಜಿಸುತ್ತೇನೆ. ಹೀಗೆ ಸೃಷ್ಟಿ, ಸ್ಥಿತಿ ಮತ್ತು ಪ್ರಳಯ ಈ ಮೂರು ಕಾರ್ಯಗಳಿಗೂ ಕಾರಣನಾದ ಪರಬ್ರಹ್ಮನನ್ನು ಉಪನಿಷತ್ತುಗಳು ಈ ರೀತಿ ಪ್ರಶಂಸಿಸುತ್ತವೆ.

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ।**

(ಛಾ. ಉ. ೩-೧೪-೧)

**ತಜ್ಜಲಾನಿತಿ** ಎಂಬುದು ಬ್ರಹ್ಮನ ಪಾಪಂಚಿಕವಾದ ಮೂರು ಕಾರ್ಯಗಳನ್ನು ತೋರಿಸುತ್ತದೆ. ತಜ್ಜ, ತಲ್ಲ, **ತದನಿತಿ** ಎಂಬುದು ಈ ಮೂರುಕಾರ್ಯವಿಶೇಷಗಳು. ಜಗತ್ತಿಗೂ ಬ್ರಹ್ಮನಿಗೂ ಇರುವ ಸಂಬಂಧವನ್ನು ತೋರಿಸುತ್ತವೆ. ಮೊದಲನೆಯದಾಗಿ ; **ತಜ್ಜಂ—ತಸ್ಮಾದ್ಬ್ರಹ್ಮಣೋ ಜಾತಂ ತೇಜೋಽಬನ್ನಾದಿಕ್ರಮೇಣ ಸರ್ವಂ । ಅತಸ್ತಜ್ಜಂ ।** ತೇಜಸ್ಸು, ಸಲಿಲ (ಜಲ), ಅನ್ನ ಇತ್ಯಾದಿ ಕ್ರಮಗಳಿಂದ ಸಕಲವೂ ಬ್ರಹ್ಮನಿಂದಲೇ ಉತ್ಪನ್ನವಾದುದರಿಂದ (ಅದರಿಂದಲೇ ಜಾತವಾದುದು) **ತಜ್ಜಂ** ಎಂದು ವರ್ಣಿಸಿದೆ.

> **ತಥಾ ತೇನೈವ ಜನನಕ್ರಮೇಣ ಪ್ರತಿಲೋಮತಯಾ ತಸ್ಮಿನ್ನೇವ ಬ್ರಹ್ಮಣಿ ಲೀಯತೇ ತದಾತ್ಮತಯಾ ಶ್ಲಿಷ್ಯತ ಇತಿ ತಲ್ಲಂ ।**
>
> (ಶ. ಭಾ.)

ಯಾವ ರೀತಿ ಜಗತ್ತು ಉತ್ಪನ್ನವಾಯಿತೋ ಅದೇ ರೀತಿ ಅದೇ ಬ್ರಹ್ಮನಲ್ಲಿ ಲಯವನ್ನು ಹೊಂದಿ ಬ್ರಹ್ಮರೂಪವನ್ನೇ ಪುನಃ ಹೊಂದುವುದರಿಂದ ಅದು **ತಲ್ಲಂ** ಎಂದು ಪ್ರಸಿದ್ಧವಾಯಿತು.

> **ತಥಾ ತಸ್ಮಿನ್ನೇವ ಸ್ಥಿತಿಕಾಲೇ ಅನಿತಿ ಪ್ರಾಣಿತಿ ಚೇಷ್ಟತ ಇತಿ ।**

ಜಗತ್ತಿನ ಸ್ಥಿತಿಕಾಲದಲ್ಲಿ ಅದೇ ಬ್ರಹ್ಮನಲ್ಲಿ ಆಶ್ರಯವನ್ನು ಪಡೆದು ಉಸಿರಾಡುತ್ತದೆ. ಆದುದರಿಂದ ಉತ್ಪತ್ತಿ (ಜ) ಲಯ (ಲೀ) ಮತ್ತು ಉಸಿರಾಡುವುದು, ಸ್ಥಿತಿ (ಅನಿತಿ) ಈ ಮೂರು ಕಾರ್ಯಗಳಿಂದಲೂ **ತಜ್ಜಲಾನಿತಿ** ಎಂದು ಬ್ರಹ್ಮನ ವರ್ಣನವಿರುತ್ತದೆ.

> **ಏವಂ ಬ್ರಹ್ಮಾತ್ಮಕತಯಾ ತ್ರಿಷು ಕಾಲೇಷು ಅವಶಿಷ್ಟಂ ತದ್ವ್ಯತಿರೇಕೇಣ ಅಗ್ರಹಣಾತ್ ।**

ಹೀಗೆ ಸೃಷ್ಟಿ, ಮತ್ತು ಲಯ ಈ ಮೂರು ಅವಸ್ಥೆಗಳಲ್ಲಿಯೂ ಬ್ರಹ್ಮನಿಗಿಂತಲೂ ಬೇರೆಯಾದ ಜಗತ್ತೇ ಇಲ್ಲವೆಂದು ತಾತ್ಪರ್ಯ. ಆದುದರಿಂದಲೇ,

> **ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ।**
>
> (ಭ. ಗೀ. ೧೦)

ಸಕಲ ಜಗತ್ತನ್ನೂ ನನ್ನ ಒಂದಂಶದಿಂದ ವ್ಯಾಪಿಸಿದ್ದೇನೆ ಎಂದು ಗೀತೆಯಲ್ಲಿ ಘೋಷಿಸಿದೆ.

**ಪಾದೋಽಸ್ಯೇಹಾಭವತ್ಪುನಃ** ಎಂಬ ವಾಕ್ಯದಿಂದಲೂ **ಸಾಶನಾನಶನೇ ಅಭಿ** ಎಂಬುದರಿಂದಲೂ ಸೃಷ್ಟಿ, ಸ್ಥಿತಿ, ಲಯ ಎಂಬ ಮೂರಂಶವೂ ನಿರ್ದಿಷ್ಟವಾಗಿದೆ. ಆದುದರಿಂದ ಅದೇ ಕ್ರಮದಲ್ಲಿ ಜಗತ್ತಿಗೂ, ಬ್ರಹ್ಮನಿಗೂ ಇರುವ ಸಂಬಂಧವನ್ನು ಈ ಮೂರು ಸ್ಥಿತಿಗಳಲ್ಲಿಯೂ ವಿವರಿಸಲಾಗುತ್ತದೆ. ಇದೇ ಅಭಿಪ್ರಾಯವು ಮುಂದಿನ ಋಕ್ಕಿನಲ್ಲಿಯೂ ಅನುವರ್ತಿಸುವುದರಿಂದ ಇದೇ ವಿಷಯವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ.

### ಮುಖ್ಯಾಭಿಪ್ರಾಯವು

ಈ ಋಕ್ಕಿನಲ್ಲಿ ಸೃಷ್ಟಿಕ್ರಮವನ್ನು ವಿವರಿಸಲಾಗಿದೆ. ಸೃಷ್ಟಿಗೆ ಪೂರ್ವದಲ್ಲಿದ್ದ ಪರಮಾತ್ಮನ ಅವ್ಯಕ್ತಾವಸ್ಥೆಯೂ ಅನಂತರ ಸೃಷ್ಟಿಕಾಲದಲ್ಲಿ ಅದು ಹೇಗೆ ವ್ಯಕ್ತಾವ್ಯಕ್ತಿಯನ್ನು ಹೊಂದಿ ಚರಾಚರಾತ್ಮಕವಾದ ಜಗದಾದಿ ರೂಪಗಳನ್ನು ಪಡೆಯಿತು ಎಂಬುದನ್ನು ಇಲ್ಲಿ ವರ್ಣಿಸಿದೆ.

**ತ್ರಿಪಾದೂರ್ಧ್ವ ಉದೈತ್ಪುರುಷಃ**— ಈ ವಾಕ್ಯದಲ್ಲಿರುವ **ತ್ರಿಪಾತ್, ಊರ್ಧ್ವಃ, ಉದೈತ್, ಪುರುಷಃ** ಎಂಬ ಶಬ್ದಗಳಿಗೆ ಸ್ವಲ್ಪವಿವರಣೆಯು ಆವಶ್ಯಕವು. **ತ್ರಿಪಾತ್** ಎಂದರೆ ಮೂರು ಪಾದಗಳು, ಪಾದವೆಂದರೆ ನಾಲ್ಕರಲ್ಲಿ ಒಂದು ಭಾಗಮಾತ್ರ. ಈ ಅರ್ಥಗಳನ್ನೇ ಈ ಋಕ್ಕಿನಲ್ಲಿ ಹೇಳಬಹುದಾದರೂ ಈ ಶಬ್ದಗಳ ಮುಖ್ಯಾರ್ಥವು ಇನ್ನೂ ವಿಸ್ತಾರವಾಗಿರುವುದು. ಮುಕ್ಕಾಲುಭಾಗ, ಕಾಲುಭಾಗ ಎನ್ನುವುದಕ್ಕಿಂತ, ಬಹುಹೆಚ್ಚಾದಭಾಗ, ಎಲ್ಲೋ ಅಲ್ಪಸ್ವಲ್ಪಭಾಗ ಎಂಬರ್ಥವೇ ಉಚಿತವಾಗಿರುವುದು. ಈ ಅರ್ಥವನ್ನೇ ಋಷಿಯು ಮನಸ್ಸಿನಲ್ಲಿ ಭಾವಿಸಿ ಅದನ್ನು ವಾಕ್ಯಗಳಲ್ಲಿ ಹೇಳುವಾಗ ಮುಕ್ಕಾಲು ಭಾಗ, ಕಾಲುಭಾಗ ಎಂದು ಹೇಳಿರುವನು. ಹೇಗೆಂದರೆ ದೊಡ್ಡ ಸಂಖ್ಯೆಯನ್ನು ಅಥವಾ ಸಂಖ್ಯಾತೀತವಾದುದನ್ನು ವರ್ಣಿಸುವಾಗ ಸಹಸ್ರ ಎಂಬ ಶಬ್ದವನ್ನು ಉಪಯೋಗಿಸುವಂತೆ, ಬಹುಭಾಗ ಎಂಬುದನ್ನು ಸೂಚಿಸುವುದಕ್ಕಾಗಿ **ತ್ರಿಪಾತ್** – ಮುಕ್ಕಾಲುಭಾಗ ಎಂಬ ಶಬ್ದವನ್ನು ಇಲ್ಲಿ ಉಪಯೋಗಿಸಲಾಗಿದೆ. ಅದರಂತೆಯೇ ಸ್ವಲ್ಪಭಾಗಮಾತ್ರ ಎಂಬುದನ್ನು ಸೂಚಿಸುವುದಕ್ಕಾಗಿ ಪಾದ-ಕಾಲುಭಾಗ ಎಂಬ ಶಬ್ದವನ್ನು ಉಪಯೋಗಿಸಲಾಗಿದೆ.

**ಊರ್ಧ್ವಃ**-ಊರ್ಧ್ವಃ ಎಂದರೆ ಮೇಲುಭಾಗವು. **ಉದೈತ್** ಎಂದರೆ ಇರುವುದು, ಸ್ಥಾಪಿತವಾಗಿರುವುದು ಎಂದರ್ಥವು. ನಮಗೆ ಪ್ರತ್ಯಕ್ಷಗೋಚರವಲ್ಲದ ಸ್ವರ್ಗಾದಿಲೋಕಗಳು ಅಂತರಿಕ್ಷಕ್ಕಿಂತಲೂ ಮೇಲುಭಾಗದಲ್ಲಿ ಇರುವವು ಎಂಬ ವಿಷಯವು ಋಗ್ವೇದದಲ್ಲಿ ಅನೇಕಕಡೆ ಹೇಳಿರುವುದು. ಎಂದರೆ ಪೃಥಿವಿ ಅಥವಾ ಭೂಲೋಕಕ್ಕಿಂತ ಉತ್ತಮವಾದ ಸ್ವರ್ಗಾದಿಲೋಕಗಳೂ ಪರಮಪದವೆಂದು ಹೇಳಲ್ಪಡುವ ಪರಮಾತ್ಮನ ಅವ್ಯಕ್ತಾವಸ್ಥೆಯು ಊರ್ಧ್ವಭಾಗ-ದಲ್ಲಿರುವುದೆಂದು ಹೇಳುವುದು ರೂಢಿಯು. ಸ್ವರ್ಗಕ್ಕೂ, ಅವ್ಯಕ್ತಾವಸ್ಥೆಗೂ ಪ್ರತ್ಯೇಕಸ್ಥಾನ ನಿರ್ದೇಶವೇನೂ ಇಲ್ಲ. ತೈತ್ತಿರೀಯಸಂಹಿತೆಯಲ್ಲಿ ಹೇಳಿರುವಂತೆ–**ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್** ಮನುಷ್ಯಲೋಕವೂ, ದೇವಲೋಕವೂ ಒಂದರೊಳಗೊಂದು ಎಂದರೆ ಒಂದೇ ಪ್ರದೇಶದಲ್ಲಿ ಹಾಸುಹೊಕ್ಕುಗಳಂತೆ ಓತಪ್ರೋತವಾಗಿ ಇರುವವು. ಮನುಷ್ಯಲೋಕವು ನಮ್ಮ ಬಾಹ್ಯೇಂದ್ರಿಯಗಳಿಗೆ ಗೋಚರವಾಗುವುದು. ದೇವಲೋಕಾದಿಗಳು ಸೂಕ್ಷ್ಮರೂಪದಲ್ಲಿರುವುದರಿಂದ ಅವುಗಳು ನಮ್ಮ ಸಮೀಪದಲ್ಲಿಯೂ ಸುತ್ತಲೂ ಆವರಿಸಿದ್ದರೂ ಅವು ನಮ್ಮ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ಏಕೆಂದರೆ ನಮ್ಮ ಚಕ್ಷುರಾದೀಂದ್ರಿಯಗಳ ಶಕ್ತಿಗೆ ಪರಿಮಿತಿಯುಂಟು. ಈ ಇಂದ್ರಿಯಗಳು ಪೃಥಿವ್ಯಾದಿಪಂಚಭೂತಗಳ (ಸ್ಥೂಲರೂಪಗಳಿಂದ ನಿರ್ಮಿತವಾಗಿರುವುದರಿಂದ ಸ್ಥೂಲರೂಪವಾದ ವಸ್ತುಗಳನ್ನು ಮಾತ್ರ ನೋಡಬಲ್ಲವು. ಸೂಕ್ಷ್ಮರೂಪದಲ್ಲಿರುವ ವಸ್ತುಗಳನ್ನು ಅವು ನೋಡಲಾರವು. ಪಂಚಭೂತಗಳ ಸೂಕ್ಷ್ಮರೂಪದಿಂದ ನಿರ್ಮಿತವಾದ ನಮ್ಮ ಸೂಕ್ಷ್ಮದೇಹವು ಮಾತ್ರ ಸೂಕ್ಷ್ಮರೂಪದಲ್ಲಿರುವ ದೇವಲೋಕಾದಿಗಳನ್ನು ನೋಡಬಲ್ಲವು. ಆದ್ದರಿಂದಲೇ ಮನುಷ್ಯನು ಮೃತನಾದ ಮೇಲೆ ಅವನ ಸ್ಥೂಲಶರೀರವು ಪಂಚಭೂತಗಳ ಸ್ಥೂಲರೂಪಗಳಲ್ಲಿ ಸೇರಿಹೋಗುವವು. ಆದರೆ ಸೂಕ್ಷ್ಮರೂಪದ ಅವನ ಶರೀರವು—ಈ ಶರೀರದಲ್ಲಿ ಪಂಚೇಂದ್ರಿಯಗಳು ಮನಸ್ಸು ಸೂಕ್ಷ್ಮರೂಪದಲ್ಲಿರುವುವು—ಸೂಕ್ಷ್ಮರೂಪದಲ್ಲಿದ್ದು ಅವನ ಸುಕೃತದುಷ್ಕೃತಗಳಿಗನುಸಾರವಾಗಿ ಸ್ವರ್ಗನರಕಾದಿಗಳಲ್ಲಿ (ಇವು ಸೂಕ್ಷ್ಮರೂಪದಲ್ಲಿರುವ ಲೋಕಗಳು) ತಮ್ಮ ಫಲಾಫಲಗಳನ್ನು ಅನುಭವಿಸುವುದು. ಆದ್ದರಿಂದ ಈ ಪ್ರಪಂಚದಲ್ಲಿ ಇರುವುದು ನಮ್ಮ ದೃಷ್ಟಿಗೆ ಗೋಚರವಾಗುವ ಸ್ಥೂಲಪ್ರಪಂಚ ಮಾತ್ರವೇ ಅಲ್ಲ. ಸೂಕ್ಷ್ಮರೂಪದಲ್ಲಿರುವ ಇತರ ಲೋಕಗಳು ಈ ಭೂಲೋಕವನ್ನು ಆವರಿಸಿ ಇರುವವು. ಈ ಸ್ಥೂಲಸೂಕ್ಷ್ಮಲೋಕಗಳು ಸೃಷ್ಟಿಯ ವಿಕಾರಗಳೇ ಹೊರತು ಸೃಷ್ಟಿಗೆ ಮೀರಿದ್ದಲ್ಲ. ಆದರೆ ಈ ಸ್ಥೂಲಸೂಕ್ಷ್ಮರೂಪದ ಲೋಕಗಳಿಗಿಂತಲೂ ಅತಿಸೂಕ್ಷ್ಮ

ವಾಗಿರುವುದೂ ಮನಸ್ಸಿನಲ್ಲಿ ಯೋಚಿಸಲೂ ಸಾಧ್ಯವಾಗದ ಪರಮಾತ್ಮನ ಅವ್ಯಕ್ತಸ್ವರೂಪವಿರುವುದು. ಇದು ಸೃಷ್ಟಿ ಕಾರ್ಯಕ್ಕೆ ಒಳಪಟ್ಟಿರುವುದಿಲ್ಲ. ಎಂದರೆ ಸೃಷ್ಟಿಯಾದ ವಸ್ತುಗಳಂತೆ ಇದಕ್ಕೆ ನಾಶವಿರುವುದಿಲ್ಲ. ಯಾವಾಗಲೂ ಒಂದೇ ವಿಧವಾದ ಅವಸ್ಥೆಯಲ್ಲಿರುವುದು, ಶಾಶ್ವತವಾದುದು. ಈ ಅವ್ಯಕ್ತಸ್ವರೂಪದ ಬಹುಭಾಗವು ಸೃಷ್ಟ್ಯಾದಿಗಳಲ್ಲಿ ವಿಕಾರವನ್ನು ಹೊಂದದೆ ಊರ್ಧ್ವಪ್ರದೇಶದಲ್ಲಿ ಎಂದರೆ ನಮ್ಮ ಕಣ್ಣಿಗೆ ಕಾಣದಂತೆ ಹಾಗೆಯೇ ಉಳಿದಿರುವುದು ಎಂದು **ತ್ರಿಪಾದೂರ್ಧ್ವ ಉದೈತ್ ಪುರುಷಃ** ಎಂಬ ವಾಕ್ಯದ ತಾತ್ಪರ್ಯವು.

**ಉದೈತ್ ಪುರುಷಃ—ಪುರುಷಃ** ಎಂದರೆ ಪರಮಾತ್ಮನು, ಪರಬ್ರಹ್ಮನು, ಪರವಸ್ತುವು. ಈ ಬ್ರಹ್ಮನ ನಿಜಸ್ವರೂಪವಾದ ಎಂದರೆ ನಾಶವಿಲ್ಲದೆ ಯಾವಾಗಲೂ ಇರುವ ಅವ್ಯಕ್ತಸ್ವರೂಪವು ಅಥವಾ ಸ್ವರೂಪದ ಬಹುಭಾಗವು ಅದೇ ಸ್ಥಿತಿಯಲ್ಲಿರುವುದು

**ಪಾದಃ ಅಸ್ಯ ಅಭವತ್ ಪುನಃ**—ಅವ್ಯಕ್ತಸ್ವರೂಪದ ಕಾಲುಭಾಗವು ಅಥವಾ ಅತ್ಯಲ್ಪಭಾಗವು ತನ್ನ ನಿಜ ಅಥವಾ ಶಾಶ್ವತಸ್ವರೂಪವನ್ನು ಬಿಟ್ಟು ಪ್ರಪಂಚರೂಪವಾಗಿ ಪರಿಣಮಿಸುವುದು. ಇಲ್ಲಿ **ಪುನಃ**—ಮತ್ತೆ ಎಂಬ ಶಬ್ದದಿಂದ ಈಗ ಸೃಷ್ಟಿಯಾಗುವ ಪ್ರಪಂಚವು ಹಿಂದಿನ ಕಲ್ಪದಲ್ಲಿದ್ದಂತೆ, ಹಿಂದೆ ಸೃಷ್ಟಿಯಾಗಿದ್ದಂತೆ ಈಗಲೂ ಸೃಷ್ಟಿಯಾಗಿರುವುದು ಎಂಬ ವಿಷಯವನ್ನು ಸೂಚಿಸುವುದು. ಸೃಷ್ಟಿಲಯಗಳು ಒಂದಾವರ್ತಿಮಾತ್ರ ಆಗುವುದಿಲ್ಲ. ಹಿಂದೆ ಎಂದರೆ ಭೂತಕಾಲದಲ್ಲಿ ಅನೇಕಕೋಟಿಸಾರಿ ನಡೆದಿರುವವು. ಮುಂದೆಯೂ ಅನೇಕಸಾರಿ ನಡೆಯುವವು. ಹೀಗೆ ಎಡಬಿಡದೆ ನಡೆಯುತ್ತಿರುವ ಸೃಷ್ಟಿಲಯಗಳಲ್ಲಿ ಈಗ ನಡೆಯುವುದು ಒಂದು ಸಲ ಮಾತ್ರ. ಹಿಂದೆ ನಡೆದಂತೆ ಈಗಲೂ ನಡೆಯುವುದು ಎಂದು ತಿಳಿಸುವುದಕ್ಕಾಗಿಯೇ ಪುನಃ ಎಂಬ ಶಬ್ದದ ಪ್ರಯೋಗವಿದೆ. ಸೃಷ್ಟಿಸ್ಥಿತಿಲಯಕಾರ್ಯಗಳು ಒಂದಾಗುತ್ತಲೊಂದು ಅವಿಚ್ಛಿನ್ನವಾಗಿ ನಡೆದುಬರುತ್ತಿರುವುದು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು

ಇನ್ನು ಈ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿರುವ ವಿಷಯವನ್ನು ಪರಿಶೀಲಿಸಬಹುದು. ಸೃಷ್ಟಿಯೆಂದರೇನು, ಅದು ಹೇಗಾಯಿತು ಎಂಬ ವಿಷಯವು-**ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ** ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ, ಸೃಷ್ಟಿಕಾಲದಲ್ಲಿ ಪರಮಾತ್ಮನ ಅವ್ಯಕ್ತಸ್ವರೂಪದ ಸ್ವಲ್ಪಭಾಗವು ವ್ಯಕ್ತರೂಪವನ್ನು ಹೊಂದಿತು ಎಂದು ಹೇಳಿದಮಾತ್ರಕ್ಕೇ ಸೃಷ್ಟಿಯನ್ನು ವಿವರಿಸಿದಂತಾಗಲಿಲ್ಲ. ಸೃಷ್ಟಿಸಲ್ಪಡುವ ವಸ್ತುಗಳಲ್ಲಿ ಎರಡುವಿಧ. ಚೇತನಯುಕ್ತವಾದವೂ, ಆಹಾರಾದಿಗಳನ್ನು ಸೇವಿಸಿ ವೃದ್ಧಿನಾಶಗಳನ್ನು ಹೊಂದುವವೂ ಆದ ಮನುಷ್ಯಾದಿಪ್ರಾಣಿಗಳು. ಇವುಗಳನ್ನು ಚರವೆಂದು ಹೇಳುವುದು ರೂಢಿಯು. ಏಕೆಂದರೆ ಇವುಗಳು ಒಂದು ಸ್ಥಳದಿಂದ ಮತ್ತೊಂದುಸ್ಥಳಕ್ಕೆ ಸಂಚರಿಸಬಲ್ಲವು. ಸಂಚರಿಸುವ ಶಕ್ತಿಯಿಲ್ಲದೆ ಆಹಾರಾದಿಗಳನ್ನು ಸೇವಿಸದೆ ವಿಕಾರಾದಿಗಳನ್ನು ಹೊಂದದೆ ಇರುವ ಪರ್ವತಾದಿಗಳು ಅಚರವೆಂದು ಹೇಳಲ್ಪಡುವವು. ಈ ಎರಡು ವಿಧವಾದ ವರ್ಗಗಳಿಂದ ಕೂಡಿದ ಜಗದಾದಿಗಳನ್ನು ನಿರ್ಮಿಸುವುದೇ ಸೃಷ್ಟಿಯು. ಪ್ರಕೃತಋಕ್ಕಿನಲ್ಲಿ ಪ್ರಾಣಿವರ್ಗವನ್ನು **ಸಾಶನ** (ಆಹಾರವನ್ನು ಭಕ್ಷಿಸುವ) ಎಂದೂ ಪರ್ವತಾದಿಗಳನ್ನು **ಅನಶನ** (ಆಹಾರವನ್ನು ಭಕ್ಷಿಸದಿರುವ) ಎಂದೂ ಕರೆಯಲಾಗಿದೆ. ಈ ಎರಡು ವಿಧವಾದ ವಸ್ತುಗಳನ್ನು ಪರಮಾತ್ಮನು ಹೇಗೆ ಸೃಷ್ಟಿಸಿದನು ಎಂಬುದನ್ನು ವಿಶದವಾಗಿ ವರ್ಣಿಸುವುದು ಇಲ್ಲಿ ಆವಶ್ಯಕವು.

ಒಂದು ವಸ್ತುವನ್ನು ನಿರ್ಮಿಸಬೇಕಾದರೆ ಲೋಕವ್ಯವಹಾರದಲ್ಲಿ ರೂಢಿಯಲ್ಲಿರುವಂತೆ ಮೂರು ವಸ್ತುಗಳಿರಬೇಕು.—(೧) ಮೂಲವಸ್ತುವು (Raw materials) (೨) ನಿರ್ಮಾಣಮಾಡುವ ಮನುಷ್ಯನು (೩) ಯಂತ್ರಗಳು ಮೊದಲಾದ ಸಾಧನಸಾಮಗ್ರಿಗಳು. ಈ ವಸ್ತುನಿರ್ಮಾಣಕ್ರಮವನ್ನು ಒಂದು ಉದಾಹರಣೆಯ ಮೂಲಕ

ವಿವರಿಸಲಾಗುವುದು. ಒಂದು ಮಡಕೆಯನ್ನು ಮಾಡಬೇಕಾದರೆ ಅದಕ್ಕೆ ಮೂಲವಸ್ತುವೇ ಮಣ್ಣು. ನಿರ್ಮಾಣ ಮಾಡುವವನು ಕುಂಬಾರನು ; ಚಕ್ರ, ಕೋಲು, ನೀರು ಇವುಗಳು ಸಾಧನಸಾಮಗ್ರಿಗಳು. ಇದರಂತೆಯೇ ಒಂದು ಬಟ್ಟೆಯನ್ನು ನಿರ್ಮಿಸಬೇಕಾದರೆ ಮೂಲವಸ್ತುವು ಹತ್ತಿಯು ; ನಿರ್ಮಾಪಕನು ನೇಯಿಗೆಯವನು ; ಚರಕ, ಮಗ್ಗ ಇತ್ಯಾದಿಗಳು ಸಾಧನಸಾಮಗ್ರಿಗಳು, ಇತ್ಯಾದಿ. ಆದರೆ ಪರಮಾತ್ಮನು ಜಗತ್ಸೃಷ್ಟಿಮಾಡುವಾಗ ಈ ಮೂರುವಿಧವಾದ ಉಪಕರಣಗಳಿದ್ದವೇ ಎಂದರೆ ಇಲ್ಲ. ನಿರ್ಮಾತೃವಾದ ಪರಮಾತ್ಮನೊಬ್ಬನೇ ಇದ್ದು ಮೂಲವಸ್ತುವಾಗಲಿ, ಸಾಧನ ಸಾಮಗ್ರಿಗಳಾಗಲೀ ಯಾವುದೂ ಇಲ್ಲದೇ ತನ್ನ ಸಂಕಲ್ಪಮಾತ್ರದಿಂದಲೇ ಎಲ್ಲವನ್ನೂ ಸೃಷ್ಟಿಮಾಡಿದನು. ಅವ್ಯಕ್ತಾವಸ್ಥೆ ಯಲ್ಲಿದ್ದ ಪರಮಾತ್ಮನೇ ಜಗದಾದಿರೂಪವಾಗಿ ಪರಿವರ್ತಿತನಾದ್ದರಿಂದ ಮೂಲವಸ್ತುಗಳ ಮತ್ತು ಸಾಧನಸಾಮಗ್ರಿಗಳ ಅವಶ್ಯಕತೆ ಇರಬೇಕಾಗಿಲ್ಲ. ಮನುಷ್ಯಾದಿಗಳು ಒಂದು ವಸ್ತುವನ್ನು ನಿರ್ಮಿಸಬೇಕಾದರೆ ಅವರಿಗೆ ಮೂಲವಸ್ತು ಮತ್ತು ಸಾಧನಸಾಮಗ್ರಿಗಳು ಬೇಕೇಬೇಕು. ಏಕೆಂದರೆ ಮನುಷ್ಯರೇ ಬೇರೆ, ಮೂಲವಸ್ತುವೇ ಬೇರೆ. ಹೀಗೆ ಎರಡುವಿಧ ವಸ್ತುಗಳಿದ್ದು ಮೂರನೆಯ ಸಾಧನವೆಂಬ ವಸ್ತುವಿನ ಅವಶ್ಯಕತೆಯೂ ಇದ್ದೇ ಇರುತ್ತದೆ. ಪರಮಾತ್ಮನ ವಿಷಯದಲ್ಲಿ ಮೂಲವಸ್ತುವೂ, ನಿರ್ಮಾಪಕನೂ, ಸಾಧನಸಾಮಗ್ರಿಗಳೂ ಎಲ್ಲವೂ ಆ ಪರಮಾತ್ಮನೇ ಆಗಿರುವುದರಿಂದ ಸೃಷ್ಟಿ ಕಾರ್ಯದಲ್ಲಿ ಅವನಿಗೆ ಯಾವ ವಿಧವಾದ ಸಹಾಯವೂ ಅವಶ್ಯಕವಿಲ್ಲ. ಅವ್ಯಕ್ತಸ್ವರೂಪದಲ್ಲಿರುವ ಅವನೇ ವ್ಯಕ್ತ ಸ್ವರೂಪವಾದ ಜಗದಾದಿಗಳಾಗಿ ಪರಿವರ್ತಿತನಾಗುವುದು. ಈ ಪರಿವರ್ತನಕ್ಕೇ ಸೃಷ್ಟಿಯೆಂದು ಹೆಸರು. ಮುಂದಿನ ಋಕ್ಕಿನಲ್ಲಿಯೂ ಈ ಸೃಷ್ಟಿಯ ಪ್ರಸ್ತಾಪವಿರುವುದರಿಂದ, ಈ ಸೃಷ್ಟಿಯ ಕ್ರಮವು ಹೇಗೆ ಮುಂದುವರೆಯಿತು ? ನಾಮ ರೂಪರಹಿತವಾದ ಅವ್ಯಕ್ತವು ನಾಮರೂಪಗಳಿಂದ ಬೇರೆಬೇರೆಯಾಗಿ ಕಾಣುವ ಈ ಚರಾಚರಾತ್ಮಕವಾದ ವ್ಯಕ್ತ ರೂಪವಾದ ಜಗತ್ತು ಹೇಗೆ ಉದ್ಭವಿಸಿತು ಎಂಬುದನ್ನು ಅಲ್ಲಿ ವಿವರಿಸಲಾಗುವುದು.

---

॥ ಸಂಹಿತಾಪಾಠಃ ॥

ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ ।

ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ೫ ॥

॥ ಪದಪಾಠಃ ॥

ತಸ್ಮಾತ್ । ವಿऽರಾಟ್ । ಅಜಾಯತ । ವಿऽರಾಜಃ । ಅಧಿ । ಪುರುಷಃ ।

ಸಃ । ಜಾತಃ । ಅತಿ । ಅರಿಚ್ಯತ । ಪಶ್ಚಾತ್ । ಭೂಮಿಂ । ಅಥೋ ಇತಿ । ಪುರಃ ॥ ೫ ॥

॥ ಸಾಯಣಭಾಷ್ಯಂ ॥

ವಿಷ್ವಙ್ ವ್ಯಕ್ರಾಮದಿತಿ ಯದುಕ್ತಂ ತದೇವಾತ್ರ ಪ್ರಪಂಚ್ಯತೇ । ತಸ್ಮಾದಾದಿಪುರುಷಾದ್ವಿ- ರಾಡ್ಬ್ರಹ್ಮಾಂಡದೇಹೋಽಜಾಯತ । ಉತ್ಪನ್ನಃ । ವಿವಿಧಾನಿ ರಾಜಂತೇ ವಸ್ತೂನ್ಯತ್ರೇತಿ ವಿರಾಟ್ ।

ವಿರಾಜೋಽಧಿ ವಿರಾಡ್ದೇಹಸ್ಯೋಪರಿ ತಮೇವ ದೇಹಮಧಿಕರಣಂ ಕೃತ್ವಾ ಪುರುಷಸ್ತದ್ದೇಹಾಭಿಮಾನೀ ಕಶ್ಚಿತ್ಪುಮಾನಜಾಯತ । ಸೋಽಯಂ ಸರ್ವವೇದಾಂತವೇದ್ಯಃ ಪರಮಾತ್ಮಾ ಸ್ವಯಮೇವ ಸ್ವಕೀಯಯಾ ಮಾಯಯಾ ವಿರಾಡ್ದೇಹಂ ಬ್ರಹ್ಮಾಂಡರೂಪಂ ಸೃಷ್ಟ್ವಾ ತತ್ರ ಜೀವರೂಪೇಣ ಪ್ರವಿಶ್ಯ ಬ್ರಹ್ಮಾಂಡಾಭಿಮಾನೀ ದೇವತಾತ್ಮಾ ಜೀವೋಽಭವತ್ । ಏತಚ್ಚಾಥರ್ವಣಿಕಾ ಉತ್ತರತಾಪನೀಯೇ ವಿಸ್ಪಷ್ಟಮಾಮನಂತಿ । ಸ ವಾ ಏಷ ಭೂತಾನೀಂದ್ರಿಯಾಣಿ ವಿರಾಜಂ ದೇವತಾಃ ಕೋಶಾಂಶ್ಚ ಸೃಷ್ಟ್ವಾ ಪ್ರವಿಶ್ಯಾಮೂಢೋ ಮೂಢ ಇವ ವ್ಯವಹರನ್ನಾಸ್ತೇ ಮಾಯಯೈವ । ಸೃ. ತಾ. ೨-೧-೯ । ಇತಿ । ಸ ಜಾತೋ ವಿರಾಟ್ ಪುರುಷೋಽತ್ಯರಿಚ್ಯತ । ಅತಿರಿಕ್ತೋಽಭೂತ್ । ವಿರಾಡ್ವ್ಯತಿರಿಕ್ತೋ ದೇವತಿರ್ಯಙ್ಮನುಷ್ಯಾದಿರೂಪೋಽಭೂತ್ । ಪಶ್ಚಾದ್ದೇವಾದಿಜೀವಭಾವಾದೂರ್ಧ್ವಂ ಭೂಮಿಂ ಸಸರ್ಜೇತಿ ಶೇಷಃ । ಅಥೋ ಭೂಮಿಸೃಷ್ಟೇರನಂತರಂ ತೇಷಾಂ ಜೀವಾನಾಂ ಪುರಃ ಸಸರ್ಜ । ಪೂರ್ಯಂತೇ ಸಪ್ತಭಿರ್ಧಾತುಭಿರಿತಿ ಪುರಃ ಶರೀರಾಣಿ ॥

॥ ಪ್ರತಿಪದಾರ್ಥ ॥

**ತಸ್ಮಾತ್**—ಆದಿಪುರುಷನಿಂದ । **ವಿರಾಟ್**—ಅನೇಕ ಪ್ರಕಾರಗಳಲ್ಲಿ ಮೆರೆಯುವ ಬ್ರಹ್ಮಾಂಡವು । **ಅಜಾಯತ**—ಉತ್ಪನ್ನವಾಯಿತು । **ವಿರಾಜಃ ಅಧಿ**—ಈ ವಿರಾಡ್ದೇಹವನ್ನೇ ಆಶ್ರಯಿಸಿ । **ಪುರುಷಃ**—ದೇಹಾಭಿಮಾನಿಯಾದ ಪುರುಷನು ಕಾಣಿಸಿಕೊಂಡನು । **ಸಃ ಜಾತಃ**—ಚೇತನಾಚೇತನರೂಪದಲ್ಲಿ ಕಾಣಿಸಿಕೊಂಡ ಪುರುಷನು । **ಅತ್ಯರಿಚ್ಯತ**—ತನಗಿಂತಲೂ ಬೇರೆಯಾದ ದೇವತಿರ್ಯಙ್ಮನುಷ್ಯಾದಿರೂಪಗಳನ್ನು ಧರಿಸಿದನು । **ಪಶ್ಚಾತ್**—ಅನಂತರ । **ಭೂಮಿಂ**—ಭೂಮಿಯನ್ನೂ । **ಅಥೋ**—ಅನಂತರ । **ಪುರಃ**—ಪಾಂಚಭೌತಿಕ ಶರೀರಾದಿಗಳನ್ನೂ ನಿರ್ಮಿಸಿದನು.

॥ ಭಾವಾರ್ಥ ॥

ಅನೇಕ ಪ್ರಕಾರಗಳಲ್ಲಿ ಮೆರೆಯುವ ಬ್ರಹ್ಮಾಂಡವು ಆದಿಪುರುಷನಿಂದ ಉತ್ಪನ್ನವಾಯಿತು. ಈ ವಿರಾಡ್ದೇಹವನ್ನೇ ಆಶ್ರಯಿಸಿ ದೇಹಾಭಿಮಾನಿಯಾದ ಪುರುಷನು ಕಾಣಿಸಿಕೊಂಡನು. ಚೇತನಾಚೇತನರೂಪದಲ್ಲಿ ಕಾಣಿಸಿಕೊಂಡ ಪುರುಷನು ತನಗಿಂತಲೂ ಬೇರೆಯಾದ ದೇವತಿರ್ಯಙ್ಮನುಷ್ಯಾದಿರೂಪಗಳನ್ನು ಧರಿಸಿದನು. ಅನಂತರ ಭೂಮಿಯನ್ನು ನಿರ್ಮಿಸಿದನು.

English Translation

From him was born Viiaj, and from Viraj Purusha ; he, as soon as born, became manifested, and afterwards (created) the earth (and) then corporeal forms.

॥ ವಿಶೇಷವಿಷಯಗಳು ॥

**ತತೋ ವಿಷ್ವಙ್ವ್ಯಕ್ರಾಮತ್ ಸಾಶನಾನಶನೇ ಅಭಿ** ಎಂಬ ಹಿಂದಿನ ಋಕ್ಕಿನ ತಾತ್ಪರ್ಯವನ್ನು ಈ ಸಂದರ್ಭದಲ್ಲಿ ವಿವರಿಸುವುದಾಗಿ ತಿಳಿಸಿದೆ. ಉತ್ಪತ್ತಿ, ಸ್ಥಿತಿ ಮತ್ತು ಲಯ ಎಂಬ ಮೂರು ಅವಸ್ಥೆಗಳೂ ಒಂದಾದ

ಮೇಲೊಂದು ಕ್ರಮವಾಗಿ ಅನುವರ್ತಿಸುತ್ತವೆ ಎಂಬ ಅಭಿಪ್ರಾಯವು ಹಿಂದಿನ ಋಕ್ಕಿನಲ್ಲಿ **ಪಾದೋಽಸ್ಯೇ-ಹಾಭವತ್ಪುನಃ** ಎಂಬ ವಾಕ್ಯದಿಂದ ತಿಳಿಸಲ್ಪಟ್ಟಿದೆ. **ಪುರುಷ, ವಿರಾಟ್** ಇವರ ಪರಸ್ಪರ ಉತ್ಪಾದ್ಯೋತ್ಪಾದಕ-ಭಾವವು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ. ಈ ಎರಡೂ ಬೇರೆ ಬೇರೆ ತತ್ತ್ವಗಳಲ್ಲ. ಬೇರೆ ಬೇರೆ ಆವಿರ್ಭಾವಗಳು. ಜಗತ್ತಿನರೂಪದಲ್ಲಿ ಆವಿರ್ಭಾವವನ್ನು ಪಡೆದ ವಿರಾಟ್ಪುರುಷನು ದೇವತಿರ್ಯಙ್ಮನುಷಾದಿರೂಪಗಳಲ್ಲಿ ಪರಿಣಾಮವನ್ನು ಹೊಂದಿದನು ಎಂಬ ಅಭಿಪ್ರಾಯವು **ಸ ಜಾತೋಽತ್ಯರಿಚ್ಯತ** ಎಂಬ ವಾಕ್ಯದಿಂದ ತಿಳಿಯುತ್ತದೆ. ಅಲ್ಲದೇ, **ಸಾಶನಾನಶನೇ ಅಭಿ** ಎಂಬ ವಾಕ್ಯವೂ ಇದೇ ವಿಷಯವನ್ನು ತಿಳಿಸುತ್ತದೆ. ಈ ರೀತಿ ವರ್ಣಿತವಾದ ಸೃಷ್ಟಿ, ಸ್ಥಿತಿ ಮತ್ತು ಪುನಃ ಲಯ ಎಂಬ ಅವಸ್ಥಾವಿಶೇಷಗಳ ವರ್ಣನೆಯೇನೆಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿರುತ್ತದೆ.

ಅದ್ವಿತೀಯನಾದ ಪರಮಾತ್ಮನು ಸದ್ವಿತೀಯನಾಗಲು ಇಚ್ಛಿಸಿ ಜಗತ್ತನ್ನು ಉತ್ಪನ್ನ ಮಾಡಿದನು ಎಂಬ ವಿಷಯವನ್ನು ಹಿಂದೆ ವಿಶ್ವಕರ್ಮಸೂಕ್ತಗಳಲ್ಲಿ ಸೂಚಿಸಿದೆ. ಈ ಸೃಷ್ಟಿಯಲ್ಲಿ ಯಾವ ಕ್ರಮವನ್ನು ಅನುಸರಿಸಿದೆ ಎಂಬುದನ್ನು ಅಲ್ಲಿ ತಿಳಿಸಿಲ್ಲ. ಅಲ್ಲದೇ, ಉತ್ಪನ್ನವಾದ ಸಕಲ ಭೂತಗಳಿಗೂ ಈಶ್ವರನೇ ಪೋಷಕನಾದರೂ ಸಕಲವೂ ಲಯವನ್ನು ಹೊಂದುತ್ತವೆ ಎಂಬುದರ ಅರ್ಥವೇನು ಎಂಬುದನ್ನು ಪ್ರಕೃತದಲ್ಲಿ ತಿಳಿಸಬೇಕಾಗಿದೆ.

ಸೃಷ್ಟಿಕ್ರಮವು ಚಕ್ರಾಕಾರವಾಗಿರುತ್ತದೆ. ಈ ವಿಷಯದಲ್ಲಿ ಸಂಹಿತಾ ಮತ್ತು ಬ್ರಾಹ್ಮಣಗಳ ವಾಕ್ಯಗಳೆಲ್ಲವೂ ಒಂದೇ ಅಭಿಪ್ರಾಯವನ್ನು ತಿಳಿಸುತ್ತವೆ. **ತಸ್ಮಾದ್ವಿರಾಡಜಾಯತ; ವಿರಾಜೋ ಅಧಿ ಪೂರುಷಃ** ಎಂಬ ಪ್ರಕೃತವಾದ ವಾಕ್ಯವೇ ಇದಕ್ಕೆ ಉದಾಹರಣೆಯಾಗಿರುತ್ತದೆ. **ಪಾದೋಽಸ್ಯೇಹಾಭವತ್ಪುನಃ** ಎಂಬ ವಾಕ್ಯದಲ್ಲಿ (ಹಿಂದಿನ ಮಂತ್ರ) **ಪುನಃ** ಎಂದಿರುವುದರಿಂದ ಸಂಹಾರಾನಂತರ ಪುನಃ ಸೃಷ್ಟಿಯೆಂದರ್ಥಮಾಡಿದೆ. ಸೃಷ್ಟಿಸಂಹಾರಗಳು ಅನಾದಿ ಮತ್ತು ಅನಂತ. ಈಶ್ವರನ ಲೀಲೆಯು ಅನುಸ್ಯೂತವಾಗಿ ಈ ಕಾರ್ಯಗಳ ರೂಪದಲ್ಲಿ ಪ್ರಕಾಶಿತವಾಗುತ್ತದೆ. ಸಂಹಾರಾನಂತರ ಪುನಃ ಸೃಷ್ಟಿ ಎಂದಿರುವುದರಿಂದ ಜಗತ್ತಿಗೆ ಸಂಹಾರಕರ್ತನಾರು? ಸಂಹಾರದ ಸ್ವರೂಪವೇನು ? ಸಂಹಾರಕಾರ್ಯಗಳು ಯಾವ ರೀತಿ ವರ್ಣಿತವಾಗಿವೆ; ಎಂಬ ಅಂಶಗಳನ್ನು ಪರಿಶೀಲಿಸಿ ನಂತರ **ಸ ಜಾತೋಽತ್ಯರಿಚ್ಯತ** ಎಂಬ ವಾಕ್ಯದ ತಾತ್ಪರ್ಯವನ್ನು ತಿಳಿಯಬಹುದು. ಈ ಸಂದರ್ಭದಲ್ಲಿ ಇನ್ನೂ ಒಂದಂಶವನ್ನು ಗಮನಿಸಬೇಕಾಗಿದೆ.

**ಪಾದೋಽಸ್ಯೇಹಾಭವತ್ಪುನಃ** ಎಂಬ ವಾಕ್ಯದ ತಾತ್ಪರ್ಯಕ್ಕೂ ಸೃಷ್ಟಿಯನ್ನು ಪ್ರಶಂಸಿಸುವ ಇತರ ವಾಕ್ಯಗಳ ತಾತ್ಪರ್ಯಕ್ಕೂ ಸಾಮಂಜಸ್ಯವು ತೋರುವುದಿಲ್ಲ. ಹೇಗೆಂದರೆ—

**ಆತ್ಮಾ ವಾ ಇದ ಮೇಕ ಏವಾಗ್ರ ಆಸೀತ್**..................(ಐ. ಉ. ೧-೧-೧)

**ಅಸದೇವೇದಮಗ್ರ ಆಸೀತ್**..................................(ಛಾ. ಉ. ೩-೧೯-೧)

**ಆತ್ಮೈವೇದಮಗ್ರ ಆಸೀತ್ ಪುರುಷವಿಧಃ**...................(ಬೃ. ಉ. ೧-೪-೧)

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ**...........(ತೈ. ಉ. ೨-೭-೧)

ಇತ್ಯಾದ್ಯನೇಕ ವಾಕ್ಯಗಳು ಸೃಷ್ಟಿಯ ಆದಿಯನ್ನು ತಿಳಿಸುತ್ತವೆ. ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನಾದ ಆತ್ಮನು ಮಾತ್ರ ಇದ್ದುದನ್ನೂ, ಒಂದು ನಿರ್ದಿಷ್ಟವಾದ ಕಾಲದಲ್ಲಿ ಸೃಷ್ಟಿಯು ಆರಂಭವಾಯಿತೆಂದೂ ಈ ವಾಕ್ಯಗಳು ಸ್ಪಷ್ಟವಾಗಿ ತಿಳಿಸುತ್ತವೆ. ಆದುದರಿಂದ **ಪುನಃ** ಎಂಬ ಪದಕ್ಕೆ ಅರ್ಥವೇನು ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ.

ಈ ಸಂದರ್ಭದಲ್ಲಿ, ಉಪನಿಷತ್ತಿನ ಸಾರಾಂಶವನ್ನು ಬೋಧಿಸುವ ವೇದಾಂತಸೂತ್ರಗಳ ತಾತ್ಪರ್ಯವನ್ನೂ ಕೂಂ
ಗಮನಿಸಬೇಕಾಗಿದೆ.

ವೇದಾಂತಮತದಂತೆ, ಸೃಷ್ಟಿಗೆ ಒಂದು ನಿರ್ದಿಷ್ಟವಾದ ಕಾರಣವಿರುತ್ತದೆ. ಪ್ರತಿಯೊಂದು ಚೇತನವೂ ಕರ
ವಾಸನೆಯಿಂದ ಪೂರಿತವಾಗಿರುವುದರಿಂದ ಈ ಕರ್ಮವಾಸನೆಗನುಸಾರವಾಗಿ ಪ್ರತಿಯೊಂದು ಚೇತನವೂ ಜನ್ಮವ
ಹೊಂದಲೇಬೇಕಾಗಿರುತ್ತದೆ. ಹೀಗೆ ಒಂದೊಂದು ಜನ್ಮಕ್ಕೂ ಹಿಂದಿನ ಕಾರಣವಿದ್ದೇ ಇರುತ್ತದೆ. ಸಂಸಾರವು ಅನಾ
ಎಂಬುದು ಇದರಿಂದ ನಿಷ್ಕೃಷ್ಟವಾಗಿ ತಿಳಿಯುತ್ತದೆ.

**ನ ಕರ್ಮಾವಿಭಾಗಾದಿತಿ ಚೇನ್ನ, ಅನಾದಿತ್ವಾತ್ ।**

(ಬ್ರ. ಸೂ. ಶಂ. ಭಾ. ೨.೩-೫)

ಇತ್ಯಾದಿಯಾದ ವೇದಾಂತಸೂತ್ರವಾಕ್ಯಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ. ಹೀಗೆ ಸ್ಥೂಲದೃಷ್ಟಿಯಿಂದ ಪರಿಶೀ
ದರೆ ಉಪನಿಷದ್ವಾಕ್ಯಗಳಿಗೂ, ವೇದಾಂತವಾಕ್ಯಗಳಿಗೂ ವಿರೋಧವಿರುವಂತೆ ತೋರುತ್ತದೆ. ಆದರೆ, **ಆದಿ,** ಅ
ಎಂಬ ಪದಗಳಿಗೆ ಸರಿಯಾದ ಅರ್ಥವೇನೆಂಬುದನ್ನು ಗಮನಿಸಿದರೆ ಇಲ್ಲಿ ಪರಸ್ಪರ ವಿರೋಧವಿಲ್ಲವೆಂಬುದು ತಿಳಿಯುತ್ತ

**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ** ಎಂಬ ಭಗವದ್ಗೀತಾವಾಕ್ಯವನ್ನು ಮೇ
ಉದಾಹರಿಸಿ ಇದರ ತಾತ್ಪರ್ಯವನ್ನು ವಿವರಿಸಿದೆ. ಕಲ್ಪದ ಕ್ಷಯವಾದನಂತರ ಪರಮಾತ್ಮನು ಅದ್ವಿತೀಯನಾ
ಉಳಿಯುತ್ತಾನೆ. ಪುನಃ ಕಲ್ಪಕ್ಕಿಂತ ಮುಂಚೆ ಜಗತ್ತಿನ ಸೃಷ್ಟಿಯಿಲ್ಲದುದರಿಂದ ಒಬ್ಬನೇ ಉಳಿದಿರುತ್ತಾನೆಂದರ್ಥ.

**ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।**
**ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥**

(ಋ. ಸಂ. ೧೦-೧೯೦-೩)

ಇತ್ಯಾದಿ ಋಕ್ಕುಗಳಲ್ಲಿ ಕಲ್ಪಾಂತರಗಳು ಸೂಚಿತವಾಗಿವೆ. **ಯಥಾಪೂರ್ವಂ** ಎಂದರೆ **ವಿಧಾತಾ ಯಥಾಪೂರ್ವ
ಪೂರ್ವಸ್ಮಿನ್ ಕಲ್ಪೇ ಯಥಾ ಸೃಷ್ಟವಾನ್ ತಥೈವಾಗಾಮಿನ್ಯಪಿ ಕಲ್ಪೇ ಇತ್ಯರ್ಥಃ** ಹಿಂದಿನ ಕಲ್ಪದಲ್ಲಿ ಯಾ
ರೀತಿ ಜಗತ್ತನ್ನು ಉತ್ಪನ್ನಮಾಡಿದನೋ ಅದೇ ರೀತಿ ಮುಂದಿನ ಕಲ್ಪದಲ್ಲೂ ಉತ್ಪನ್ನಮಾಡುತ್ತಾನೆಂಬ ತಾತ್ಪರ್ಯವೆಂ
ಸಾಯಣರು ವಿವರಿಸಿದ್ದಾರೆ. ಹೀಗೆ ಪ್ರತಿಯೊಂದು ಕಲ್ಪದ ಕೊನೆಯಲ್ಲಿಯೂ ಜಗತ್ತೆಲ್ಲವೂ ಬ್ರಹ್ಮನಲ್ಲಿ ಲೀನವಾ
ವುದರಿಂದ ಬ್ರಹ್ಮನಿಗೆ **ತಲ್ಲಂ** ಎಂಬ ವಿಶೇಷಣವಿರುತ್ತದೆ. ಈ ಲಯದಲ್ಲಿ ಎರಡು ಬಗೆ. (೧) ವೈಯಕ್ತಿಕವಾದ ಲಂ
ಮತ್ತು (೨) ವಿಶ್ವಾತ್ಮಕವಾದ ಲಯ. ಎರಡು ವಿಧವಾದ ಲಯಕ್ಕೂ ಬ್ರಹ್ಮನೇ ಕಾರಣನು ಮತ್ತು ಗುರಿ.

**ಭರ್ತಾ ಸನ್ಭ್ರಿಯಮಾಣೋ ಬಿಭರ್ತಿ । ಏಕೋ ದೇವೋ ಬಹುಧಾ ನಿವಿಷ್ಟಃ । ಯದಾ ಭಾರ
ತಂದ್ರಯತೇ ಸ ಭರ್ತುಂ । ನಿಧಾಯ ಭಾರಂ ಪುನರಸ್ತಮೇತಿ । ತಮೇವ ಮೃತ್ಯುಮಮೃತ
ತಮಾಹುಃ । ತಂ ಭರ್ತಾರಂ ತಮು ಗೋಪ್ತಾರಮಾಹುಃ ।**

(ತೈ. ಆ. ೩-೧೪-೧)

ಇಲ್ಲಿ ಪ್ರಾಣವು ಮೃತ್ಯುರೂಪದಿಂದ ಸ್ತುತವಾಗಿದೆ. ಶರೀರವನ್ನು ಪೋಷಿಸುವುದರಿಂದ ಅದು ಭರ್ತೃವೆನ್ನಿಸಿಕೊಂಡಿ
ಶರೀರರೂಪವಾದ ಭಾರವನ್ನು ಬಿಡಬೇಕೆಂದು ತೋರಿದಾಗ ಅದು ಮಾಯವಾಗುತ್ತದೆ. ಆಗ ಅದು ಮೃತ್ಯುವೆನ್ನಿ

ಕೊಳ್ಳುತ್ತದೆ. ಅದೇ ಮೃತ್ಯುವಾದರೂ ಅದೇ ಅಮೃತ್ಯುವು. ಅನೇಕರೂಪದಲ್ಲಿದ್ದು ಸಕಲ ವಸ್ತುಗಳಲ್ಲಿಯೂ ವ್ಯಾಪ್ತಿಯನ್ನು ಹೊಂದಿದೆಯೆಂದು ಮೇಲಿನ ವಾಕ್ಯಗಳು ಪ್ರಾಣರೂಪನಾದ ಬ್ರಹ್ಮನನ್ನು ಪ್ರಶಂಸೆ ಮಾಡಿವೆ. ಅವನೇ ಧಾರಕನು ಮತ್ತು ಅವನೇ ಮೃತ್ಯುವು. ಹೇಗೆಂದರೆ,

**ಬ್ರಹ್ಮ ವೈ ಮೃತ್ಯವೇ ಪ್ರಜಾಃ ಪ್ರಾಯಚ್ಛತ್ ।**

(ಶ. ಬ್ರಾ. ೧೧-೩-೩-೧)

ಬ್ರಹ್ಮನು ಸಕಲ ಪ್ರಜೆಗಳನ್ನು ಮೃತ್ಯುವಿಗೆ ಅರ್ಪಿಸಿದನು ಎಂಬುದರಿಂದಲೇ ಅವನು ಮೃತ್ಯುವು. ತನ್ನಲ್ಲೇ ಲಯವನ್ನು ಹೊಂದಿಸುತ್ತಾನೆಂದರ್ಥ. ಆದುದರಿಂದ ಸೃಷ್ಟಿಗೆ ಪೂರ್ವದಲ್ಲಿ ಕೇವಲ ಮೃತ್ಯುವಲ್ಲದೆ, ಇನ್ನಾವುದೂ ಇರಲಿಲ್ಲ, ಇದ್ದ ತತ್ತ್ವಗಳಾವುವು ಎಂದರೆ,

**ನೈವೇಹ ಕಿಂಚನಾಗ್ರ ಆಸೀತ್ ಮೃತ್ಯುನೈವೇದಮಾವೃತಮಾಸೀತ್ । ಅಶನಾಯಯಾ, ಅಶನಾಯಾ ಹಿ ಮೃತ್ಯುಃ, ತನ್ಮನೋಽಕುರುತ ।**

(ಬೃ. ಉ. ೧-೨-೧)

ಆರಂಭದಲ್ಲಿ ಮೃತ್ಯುವಲ್ಲದೇ ಉಳಿದಾವುದೂ ಇರಲಿಲ್ಲವೆಂದರೆ ಮೃತ್ಯುವಿನಿಂದಲೇ ಸಕಲವೂ ವ್ಯಾಪ್ತವಾಗಿದ್ದಿತೆಂದರ್ಥ. ಮೃತ್ಯು ಮತ್ತು ಅಶನಾಯಾ (ಹಸಿವು) ಎರಡೂ ಒಂದೇ ಆದುದರಿಂದ **ಅಶನಾಯಾ** ವ್ಯಾಪ್ತವಾಗಿಯೇ ಇದ್ದಿತು. ಆ ಮೃತ್ಯುವೇ ಸೃಷ್ಟಿಗೆ ಮೂಲವಾಯಿತು. (ಉದಾಹೃತವಾಗಿರುವ ಈ ವಾಕ್ಯಗಳ ತಾತ್ಪರ್ಯವನ್ನು ತಿಳಿಸುವಾಗ ಅನೇಕ ವಿಧವಾಗಿ ಪೂರ್ವಪಕ್ಷ ಮತ್ತು ಸಮಾಧಾನಗಳನ್ನೊಳಗೊಂಡ ದೊಡ್ಡ ಚರ್ಚೆಯಿರುತ್ತದೆ).

**ಸ ಯದ್ಯದೇವಾಸೃಜತ । ತತ್ತದತ್ತುಮಧ್ರಿಯತ, ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ । ಸರ್ವಸ್ಯೈತಸ್ಯಾತ್ತಾ ಭವತಿ । ಸರ್ವಮಸ್ಯಾನ್ನಂ ಭವತಿ ।**

(ಬೃ. ಉ ೧-೨-೫)

ಸೃಷ್ಟಿಯಾದನಂತರ ಎಲ್ಲವನ್ನೂ ಭಕ್ಷಿಸಬೇಕೆಂಬ ಹಸಿವುಂಟಾಯಿತು. ಆದುದರಿಂದ ಎಲ್ಲವನ್ನೂ ಭಕ್ಷಿಸತೊಡಗಿದನು. ಹೀಗೆ ಸಕಲವನ್ನು ಭಕ್ಷಿಸುವುದರಿಂದಲೇ (**ಅದನಾತ್**) ಇವನಿಗೆ ಅದಿತಿಯೆಂಬ ಹೆಸರೂ ಪ್ರಸಿದ್ಧವಾಗಿದೆ. ಸೃಷ್ಟವಾದ ಸಕಲವೂ ಇವನಿಗೆ ಅನ್ನವಾಗುತ್ತದೆ.

**ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥**

(ಕಠ.. ಉ. ೨-೨೫)

ಬ್ರಹ್ಮ, ಕ್ಷತ್ರ ಎರಡೂ ಈ ವಿಧಾತೃವಿಗೆ ಅನ್ನವಾಗಿವೆ. ಮೃತ್ಯುವೇ ವಿಧಾತೃವಿಗೆ ಅನ್ನಸಂಪಾದಕವಾದ ಸಾಧನವಾಗಿದೆ ಎಂದು ಮೃತ್ಯುರೂಪನಾದ ಪರಬ್ರಹ್ಮನ ಪ್ರಶಂಸೆಯಿರುತ್ತದೆ. ಮೃತ್ಯುರೂಪನಾದ ಪರಮಾತ್ಮನ ವರ್ಣನವು ಅನೇಕ ಸನ್ನಿವೇಶಗಳಲ್ಲಿದ್ದರೂ ಎಲ್ಲಾ ಒಂದೇ ವಿಧವಾಗಿರುವುದಿಲ್ಲ. ವೈವಿಧ್ಯವಿರುತ್ತದೆ. ತೈತ್ತಿರೀಯೋಪನಿಷತ್ತಿನಲ್ಲಿ ಒಂದು ಕ್ರಮವಿಧವಿದ್ದರೆ ಛಾಂದೋಗ್ಯದಲ್ಲಿ ಇನ್ನೊಂದು ವಿಧವಾಗಿರುತ್ತದೆ. ಆದರೆ ತಾತ್ಪರ್ಯವು ಒಂದೇ ಆಗಿರುತ್ತದೆ. ಅನೇಕ ಕಡೆಗಳಲ್ಲಿ ಈ ವರ್ಣನವು ಉತ್ತಮವಾದ ಕಾವ್ಯಾತ್ಮಕವಾಗಿರುತ್ತದೆ. ತೈತ್ತಿರೀಯದಲ್ಲಿ ಈ ರೀತಿಯಿರುತ್ತದೆ.

**ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿ-ಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥**

(ತೈ. ಉ. ೩-೧)

ವರುಣಪುತ್ರನಾದ ಭೃಗುವು ತನ್ನ ಪಿತೃವಾದ ವರುಣನನ್ನು ಎಲೈ ಪೂಜ್ಯನಾದ ತಂದೆಯೇ, ನನಗೆ ಬ್ರಹ್ಮೋಪದೇಶವನ್ನು ಮಾಡು ಎಂದು ಪ್ರಾರ್ಥಿಸಿದಾಗ ವರುಣನು ಈ ರೀತಿ ಬ್ರಹ್ಮನನ್ನು ಪ್ರಶಂಸಿಸಿ ಉಪದೇಶಿಸಿದ್ದಾನೆ. ಎಲೈ ಭೃಗುವೇ, ಯಾವ ಮಹಾತತ್ತ್ವದಿಂದ ಜಗತ್ತಿನಲ್ಲಿ ಸಕಲವೂ ಉತ್ಪನ್ನವಾಗುವುದೋ, ಯಾವುದರಿಂದ ಸಕಲವೂ ಪೋಷಿತವಾಗುವುದೋ ಮತ್ತು ಯಾವುದರಲ್ಲಿಯೇ ಎಲ್ಲವೂ ಲಯವನ್ನು ಹೊಂದುವುದೋ ಅದನ್ನೇ ಬ್ರಹ್ಮವೆಂದು ತಿಳಿ. ಅದೇ ಪರಬ್ರಹ್ಮವು. ಇದನ್ನೇ ಮುಂಡಕೋಪನಿಷತ್ತಿನಲ್ಲಿ ವಿವರಿಸುತ್ತ,

**ತದೇತತ್ಸತ್ಯಂ ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।**
**ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಂತಿ ॥**

(ಮು. ಉ. ೨-೧-೧)

ಪ್ರಜ್ವಲಿಸುವ ಅಗ್ನಿಯಿಂದ ಸಾವಿರಾರು ಅಗ್ನಿ ಕಣಗಳು ಹೊರಟು ಯಾವ ರೀತಿ ಪ್ರಸರಿಸುವುವೋ ಅದೇ ರೀತಿ ನಾನಾ ವಿಧವಾದ ಭೂತರಾಶಿಗಳು ಅಕ್ಷರರೂಪವಾದ ಪರಬ್ರಹ್ಮನಿಂದ ಹೊರಟು ಸರ್ವತ್ರ ಜಗದ್ರೂಪದಲ್ಲಿ ಪ್ರಸರಿಸುತ್ತವೆ. ಮತ್ತು ಪುನಃ ಪ್ರಳಯಕಾಲದಲ್ಲಿ ಅವನನ್ನೇ ಸೇರಿಕೊಳ್ಳುತ್ತವೆ. ಇದೊಂದೇ ಸತ್ಯವು.

ಪ್ರಳಯಕಾಲದ ವರ್ಣನವು ಅನೇಕ ವಿಧವಾಗಿರುವುದೆಂದು ಮೇಲೆ ತಿಳಿಸಿದೆ. ಪ್ರಳಯವು ಪ್ರಶಾಂತವಾದ ಸ್ಥಿತಿಗೆ ಸಾಧಕವಾಗುವುದೆಂದು ಕೆಲವೆಡೆಗಳಲ್ಲಿಯೂ, ಭೀಕರವಾದ ಸ್ಥಿತಿಯನ್ನು ಹೊಂದುತ್ತದೆಂದು ಇನ್ನೂ ಕೆಲವು ಸನ್ನಿವೇಶಗಳಲ್ಲೂ ಈ ವಿಷಯವು ತಿಳಿಸಲ್ಪಟ್ಟಿದೆ. ಉದಾಹರಣೆಗೆ—

**ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ಯಸ್ಮಿನ್ನಿದಂ ಸಂ ಚ ವಿ ಚೈತಿ ಸರ್ವಂ ।**
**ತಮೀಶಾನಂ ವರದಂ ದೇವಮೀಡ್ಯಂ ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥**

(ಶ್ವೇ. ಉ. ೪-೧೧)

ಪ್ರಭಾಯುತನಾದ ಯಾವ ಪರಬ್ರಹ್ಮನು ಒಬ್ಬನೇ ಆದರೂ ಸಕಲ ವಿಶ್ವಕ್ಕೂ ಪ್ರಭುವಾಗಿರುವನೋ, ಯಾವನಲ್ಲಿ ಸಕಲ ವಿಶ್ವವೂ ಪ್ರಳಯಕಾಲದಲ್ಲಿ ಐಕ್ಯವನ್ನು ಹೊಂದಿ ಪ್ರಶಾಂತತೆಯನ್ನು ಹೊಂದುವುದೋ ಆ ಪರತತ್ತ್ವವನ್ನು ಅರಿತವನು ಪೂರ್ಣವಾದ ಪ್ರಶಾಂತತೆಯನ್ನು ಹೊಂದುತ್ತಾನೆ ಎಂದಿರುವುದು. ಆದರೆ, ಇದೇ ಶ್ವೇತಾಶ್ವತರದಲ್ಲಿ ಬೇರೆಡೆಯಲ್ಲಿ ಇದೇ ಪ್ರಳಯವನ್ನು ವರ್ಣಿಸುತ್ತ,

**ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾನ್ ಲ್ಲೋಕಾನೀಶತ ಈಶನೀಭಿಃ ।**
**ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ ಭುವನಾನಿ ಗೋಪಾಃ ॥**

(ಶ್ವೇ. ಉ. ೩-೨)

ಎಂಬಲ್ಲಿ ಪ್ರಳಯಕಾರಕನಾದ ರುದ್ರನ ಭೀಮಸ್ವರೂಪವು ವರ್ಣಿತವಾಗಿದೆ. ಈ ರುದ್ರನೊಬ್ಬನೇ ಸಕಲ ಜಗತ್ತಿಗೂ ನಿಯಾಮಕನು. ಉಳಿದ ಯಾರಿಗೂ ಸ್ವಾತಂತ್ರ್ಯವಿಲ್ಲ. ಸಕಲ ಜಗತ್ತನ್ನೂ ತನ್ನಲ್ಲೇ ಲಯವಾಗುವಂತೆ ಮಾಡಿಕೊಳ್ಳುತ್ತಾನೆ. ಈ ರುದ್ರನು ಸಕಲ ದುಷ್ಕರ್ಮಕಾರರಿಗೂ ತೀವ್ರವಾದ ದಂಡವನ್ನು ವಿಧಿಸುತ್ತಾನೆ.

ಹೀಗೆ ಉತ್ಪನ್ನವಾದ ಸಕಲ ವಸ್ತುಗಳನ್ನೂ ತನ್ನಲ್ಲೇ ಎಳೆದುಕೊಳ್ಳುವುದೇ ಪ್ರಳಯವೇ ವಿನಾ ಜಗತ್ತಿನ ಅತ್ಯಂತವಾದ ನಾಶವೆಂದರ್ಥವಲ್ಲ.

**ಯಸ್ಮಿನ್ನಿದಂ ಸಂ ಚ ವಿ ಚೈತಿ ಸರ್ವಂ ।**

(ವಾ. ಸಂ. ೩೨-೮)

ಈಶ್ವರನಲ್ಲಿ ಎಲ್ಲವೂ ಲಯವನ್ನು ಹೊಂದುತ್ತವೆ ಮತ್ತು ಪುನಃ ಅವನಿಂದಲೇ ಹೊರಟು ವಿಕಾಸವನ್ನೂ ಹೊಂದಿ ಜಗತ್ತಿನ ರೂಪದಲ್ಲಿ ಪ್ರಸರಿಸುತ್ತವೆ ಎಂದು ಯಾವ ಈ ಸೃಷ್ಟಿಯ ವರ್ಣನವಿದೆಯೋ ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಪಾದೋಽಸ್ಯೇಹಾಭವತ್ಪುನಃ** ಎಂದು ವರ್ಣಿಸಿದೆ. ಈ ರೀತಿ ಪ್ರಳಯ ಮತ್ತು ಉತ್ಪತ್ತಿ ಎರಡನ್ನೂ ನಿಯಮಿಸುವುದರಿಂದ ಈಶ್ವರನನ್ನು ಜೇಡರ ಹುಳುವಿಗೆ ಹೋಲಿಸಿದೆ. ಇದೇ ಅಂಶವನ್ನು ಶ್ವೇತಾಶ್ವತರದಲ್ಲಿ ವರ್ಣಿಸುತ್ತ—

**ಏಕೈಕಂ ಜಾಲಂ ಬಹುಧಾ ವಿಕುರ್ವನ್ನಸ್ಮಿನ್ ಕ್ಷೇತ್ರೇ ಸಂಹರತ್ಯೇಷ ದೇವಃ ।**
**ಭೂಯಃ ಸೃಷ್ಟ್ವಾ ಪತಯಸ್ತಥೇಶಃ ಸರ್ವಾಧಿಪತ್ಯಂ ಕುರುತೇ ಮಹಾತ್ಮಾ ॥**

(ಶ್ವೇ. ಉ. ೫-೩)

**ಯಸ್ತಂತುನಾಭ ಇವ ತಂತುಭಿಃ ಪ್ರಧಾನಜೈಃ ಸ್ವಭಾವತಃ ।**
**ದೇವ ಏಕಃ ಸ್ವಮಾವೃಣೋತಿ ಸ ನೋ ದಧಾತು ಬ್ರಹ್ಮಾಪ್ಯಯಂ ॥**

(ಶ್ವೇ ಉ. ೬.೧೦)

ಈಶ್ವರನು ತನ್ನ ಮಾಯಾರೂಪವಾದ ಒಂದೇ ಜಾಲವನ್ನು ಹರಡಿ ಅದನ್ನು ಅನೇಕ ರೀತಿಯಲ್ಲಿ ಪ್ರಸರಿಸುತ್ತಾನೆ. ಈ ಕ್ಷೇತ್ರದಲ್ಲಿ (ಜಗತ್ತಿನಲ್ಲಿ) ಎಲ್ಲಾ ಭೂತಗಳನ್ನು ಅದರಲ್ಲಿ ಅಡಕಮಾಡುತ್ತಾನೆ. ಅನಂತರ ಪುನಃ ಮಹಾತ್ಮನಾದ ಈಶ್ವರನು ಲೋಕಪಾಲಕರನ್ನು ಉತ್ಪನ್ನಮಾಡಿ ತನ್ನ ಸರ್ವಾಧಿಪತ್ಯವನ್ನು ತೋರಿಸುತ್ತಾನೆ. ಇದನ್ನೇ ಋಕ್ಸಂಹಿತೆಯಲ್ಲಿ **ಯದ್ದೇವಾ ಯತಯೋ ಯಥಾ ಭುವನಾನ್ಯಪಿನ್ವತ** (೧೦-೩೨-೭) ಎಂಬ ವಾಕ್ಯದಿಂದ ತಿಳಿಸಿದೆ. ಆದರೆ, ಈ ವಿಧವಾದ ಸೃಷ್ಟಿಯಲ್ಲಿಯೂ ಉತ್ಪನ್ನವಾದ ಸಕಲ ಭೂತಗಳನ್ನೂ ಸಂಹಾರಮಾಡುವುದರಲ್ಲಿಯೂ ಈಶ್ವರನಿಗೆ **ನೈರ್ಘೃಣ್ಯ**ವಿಲ್ಲ ಎಂಬುದನ್ನು ಬ್ರಹ್ಮಸೂತ್ರವು ಸ್ಪಷ್ಟಪಡಿಸುತ್ತದೆ.

**ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ।**

(ಬ್ರ. ಸೂ. ೨-೧-೩೪)

ಸೃಷ್ಟಿಯಲ್ಲಾಗಲಿ, ಸಂಹಾರದಲ್ಲಾಗಲಿ ಈಶ್ವರನಿಗೆ ಪಕ್ಷಪಾತವಿಲ್ಲ. ಮತ್ತು ಕ್ರೌರ್ಯವಿಲ್ಲ. ಪ್ರತಿಯೊಂದು ಚೇತನದ ಸ್ವಭಾವಾನುಗುಣವಾಗಿಯೂ, ಕರ್ಮಾನುರೋಧವಾಗಿಯೂ ಅವನ್ನು ಪುನಃ ಜಗತ್ತಿನಲ್ಲಿ ಸೃಜಿಸುತ್ತಾನೆ. ಮತ್ತು ಜೇಡರ ಹುಳುವಿನಂತೆ ತನ್ನ ಮಾಯಾಜಾಲದಿಂದಲೇ ಎಲ್ಲವನ್ನೂ ಆವರಿಸುತ್ತಾನೆ.

**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।**
**ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಂ ॥**

(ಮು. ಉ. ೧-೧-೭)

ಪೃಥ್ವಿಯಲ್ಲಿ ಓಷಧಿ ಮತ್ತು ಲತೆಗಳು ಪ್ರಸರಿಸುವಂತೆಯೂ, ಜೇಡರ ಹುಳುವು ತನ್ನ ನೂಲನ್ನೂ ಪ್ರಸರಿಸುವಂತೆಯೂ, ಪುರುಷನ ದೇಹದಿಂದ ರೋಮಗಳು ಉತ್ಪನ್ನವಾಗಿ ಪ್ರಸರಿಸುವಂತೆಯೂ, ಈಶ್ವರನಿಂದ ಸಕಲ ವಸ್ತುಗಳೂ ಉತ್ಪನ್ನವಾಗಿ ಜಗತ್ತಿನಲ್ಲಿ ಪ್ರಸಾರವನ್ನು ಹೊಂದುತ್ತವೆ.

**ತತ್ಕರ್ಮ ಕೃತ್ವಾ ವಿನಿವರ್ತ್ಯ ಭೂಯಸ್ತತ್ವಸ್ಯ ತತ್ವೇನ ಸಮೇತ್ಯ ಯೋಗಂ ।**
**ಏಕೇನ ದ್ವಾಭ್ಯಾಂ ತ್ರಿಭಿರಷ್ಟಭಿರ್ವಾ ಕಾಲೇನ ಚೈವಾತ್ಮಗುಣೈಶ್ಚ ಸೂಕ್ಷ್ಮೈಃ ॥**
(ಶ್ವೇ. ಉ. ೬-೩)

**ಆರಭ್ಯ ಕರ್ಮಾಣಿ ಗುಣಾನ್ವಿತಾನಿ ಭಾವಾಂಶ್ಚ ಸರ್ವಾನ್ ವಿನಿಯೋಜಯೇದ್ಯಃ ॥**
(ಶ್ವೇ. ಉ. ೬-೪)

ಕರ್ಮಾನುರೋಧವಾದ ಸ್ಥಿತಿಯನ್ನು ಹೊಂದುವಂತೆ ಜಗತ್ತಿನ ಎಲ್ಲ ಭೂತಗಳನ್ನೂ ಉತ್ಪನ್ನಮಾಡಿದನಂತರ ಪುನಃ ತಮ್ಮ ತಮ್ಮ ಕರ್ಮಕ್ಕೆ ತಕ್ಕ ಫಲವನ್ನು ಹೊಂದುವಂತೆ ಆಯಾ ಆತ್ಮಗುಣಗಳಿಂದ ಕೂಡಿದ ದೇಹದೊಡನೆ ಸಕಲವನ್ನೂ ಸೇರಿಸುತ್ತಾನೆ. ಪ್ರಕೃತಿಯ ಗುಣಗಳೊಂದಿಗೆ ಸಕಲ ಚೇತನಗಳನ್ನೂ ಯೋಜಿಸಿ ತಾನು ಮಾತ್ರ ಜಗತ್ತಿಗಿಂತ ದೂರ ಸರಿದು ನಿಲ್ಲುತ್ತಾನೆ. ಆದುದರಿಂದ ಅವನೇ **ಆದಿಃ ಸ ಸಂಯೋಗನಿಮಿತ್ತಹೇತುಃ** ಚೇತನಾಚೇತನಗಳ ಸಂಯೋಗಕ್ಕೆ ಅವನೇ ಕಾರಣನು ಎಂದು ಸ್ತುತನಾಗಿದ್ದಾನೆ. (೬-೫).

ಉತ್ಪನ್ನವಾದ ಸಕಲ ಭೂತಗಳನ್ನೂ ತಮ್ಮ ತಮ್ಮ ವಾಸನಾನುಗುಣವಾದ ಕರ್ಮದೊಂದಿಗೆ ಯೋಜಿಸಿ ತಾನು ಮಾತ್ರ ಜಗತ್ತಿಗಿಂತ ದೂರ ಸರಿದನು (**ವಿನಿವರ್ತ್ಯ ಭೂಯಃ, ತ್ರಿಪಾದೂರ್ಧ್ವ ಉದೈತ್**) ಎಂದರೆ, ಈಶ್ವರನು ಬೇರೆ, ಉತ್ಪನ್ನವಾದ ಜಗತ್ತೇ ಬೇರೆ ಎಂದಾಗುವುದಿಲ್ಲವೇ ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ. ಉತ್ಪನ್ನವಾದ ಜಗತ್ತು ಈಶ್ವರನಿಗಿಂತಲೂ ಬೇರೆಯಲ್ಲ ಎಂದು ತಿಳಿಸುವುದೇ **ಪಾದೋಽಸ್ಯೇಹಾಭವತ್ಪುನಃ** ಎಂಬ ವಾಕ್ಯದ ಉದ್ದಿಶ್ಯ. ತನ್ನಿಂದ ಉತ್ಪನ್ನವಾದ ಜಗತ್ತಿನಲ್ಲಿ ತಾನೇ ಪ್ರವೇಶಿಸಿದನು ಎಂಬ ಅಭಿಪ್ರಾಯವು ಋಕ್ಸಂಹಿತಾ ಮತ್ತು ಬ್ರಾಹ್ಮಣಾದಿಗಳಲ್ಲಿ ಅನೇಕ ಕಡೆಗಳಲ್ಲಿ ಪುನಃ ಪಠಿತವಾಗಿವೆ. ಇಲ್ಲಿ ಸಂದರ್ಭಾನುಸಾರವಾಗಿ ಒಂದೆರಡು ಉದಾಹರಣೆಗಳನ್ನು ಮಾತ್ರ ಕೊಡಲಾಗುತ್ತದೆ. ಈ ವಿಷಯದಲ್ಲಿ ಋಕ್ಸಂಹಿತೆಯ ೧೦-೭೨ ; ೧೦-೮೧ ಮತ್ತು ೮೨ ನೇ ಸೂಕ್ತಗಳು ಹೇಳುವ ಅಭಿಪ್ರಾಯವನ್ನು ಆಯಾ ಪ್ರಕರಣಗಳಲ್ಲಿ ತಿಳಿಸಲಾಗಿದೆ.

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।**
**ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥**
ಋ. ಸಂ. ೧೦-೧೨೧-೧)

ಸೃಷ್ಟಿಯು ಆರಂಭವಾಗಿ ಮೊದಲು ಹಿರಣ್ಯಗರ್ಭನು ಉತ್ಪನ್ನನಾದನು. ಅವನೇ ಉತ್ಪನ್ನವಾದ ಸಕಲ ಭೂತಗಳಿಗೂ ಒಡೆಯನು. ಅವನು ದ್ಯಾವಾಪೃಥಿವಿಗಳನ್ನೆಲ್ಲ ತನ್ನಲ್ಲೇ ಧರಿಸಿದನು. ದ್ಯಾವಾಪೃಥಿವಿಗಳು ಅವನಲ್ಲದೆ ಬೇರೆಯಲ್ಲ. ಅವನ ಸ್ವರೂಪ ವಿಸ್ತಾರವೇ ಸಕಲ ಪ್ರಪಂಚವು. ಅದು ಹೇಗೆಂದರೆ—ಈ ಹಿರಣ್ಯಗರ್ಭನೇ ಪ್ರಜಾಪತಿಯು.

**ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।**
**ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ॥**
(ಋ. ಸಂ. ೧೦-೧೨೧-೧೦)

ಎಂಬಲ್ಲಿ ಪ್ರಜಾಪತಿಗೂ, ಹಿರಣ್ಯಗರ್ಭನಿಗೂ ತಾದಾತ್ಮ್ಯವನ್ನು ತೋರಿಸಿದೆ. ಇದೇ ಮಂಡಲದ ೧೨೧ನೇ ಸೂಕ್ತದ ೧ನೇ ಋಕ್ಕಿನಲ್ಲಿ ಪ್ರಶಂಸಿತನಾದ ಹಿರಣ್ಯಗರ್ಭನೇ ಇಲ್ಲಿ ಪ್ರಜಾಪತಿಯೆಂದು ವರ್ಣಿತನಾಗಿದ್ದಾನೆ. ಪರಮಪುರುಷರೂಪನಾದ ಪ್ರಜಾಪತಿಯೇ ಅಂಡರೂಪದಲ್ಲಿ ಉತ್ಪನ್ನನಾಗಿ ಜಗತ್ತಿಗೆ ಮೂಲನಾದನು ಎಂಬುದನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಸ ಏವ ಪುರುಷಃ ಪ್ರಜಾಪತಿರಭವತ್ ।...............ಸ ವೈ ಸಪ್ತಪುರುಷೋ ಭವತಿ ।............... ಸೋಽಯಂ ಪುರುಷಃ ಪ್ರಜಾಪತಿರಕಾಮಯತ । ಭೂಯಾನ್ತ್ಸ್ಯಾಂ ಪ್ರಜಾಯೇಯೇತಿ । ...............ಸೋಽಪೋಽಸೃಜತ ।...............ಸೋಽಕಾಮಯತ । ಆಭ್ಯೋಽದ್ಭ್ಯೋಽಧಿ ಪ್ರಜಾಯೇಯೇತಿ ಸೋಽನಯಾ ತ್ರಯ್ಯಾ ವಿದ್ಯಯಾ ಸಹಾಪಃ ಪ್ರಾವಿಶತ್ತತ ಆಣ್ಡಗ್ಂ ಸಮವರ್ತತ ।...............ತಾ ವಾ ಏತಾ ನವಸೃಷ್ಟಯಃ............... ॥**

(ಶ. ಬ್ರಾ. ೬-೧-೧-೧ ರಿಂದ ೧೫)

ಪುರುಷಪ್ರಜಾಪತಿಯು ವೇದತ್ರಯವನ್ನು ಪ್ರಕಾಶಪಡಿಸಿ ತನ್ನ ಸ್ವರೂಪವನ್ನು ವಿಸ್ತರಿಸಬೇಕೆಂದು ಇಚ್ಛಿಸಿ ಸರ್ವತ್ರ ವಾಗ್ರೂಪದಲ್ಲಿ ವ್ಯಾಪಿಸಿದನು. ಸರ್ವತ್ರ ವ್ಯಾಪಿಸಿದುದರಿಂದಲೇ ಅದಕ್ಕೆ **ಆಪಃ** ಎಂಬ ಹೆಸರುಂಟಾಯಿತು. ಈ ಜಲವೇ ವಾರಿಯೆಂದೂ ಪ್ರಸಿದ್ಧವಾಯಿತು. ಈ ಜಲದ ಆಧಾರದ ಮೇಲೆ ತ್ರಯೀವಿದ್ಯೆಯ ಸಹಾಯದಿಂದ ಪುನಃ ಪ್ರಜೋತ್ಪತ್ತಿಯನ್ನು ಮಾಡಬೇಕೆಂದು ಇಚ್ಛಿಸಿ ಜಲದೊಳಕ್ಕೆ ಪ್ರವೇಶಿಸಿದನು. ಆಗ ಒಂದು ಅಂಡವು ಉತ್ಪನ್ನವಾಯಿತು. ಈ ಅಂಡದಿಂದ ಪರಬ್ರಹ್ಮವು ಹುಟ್ಟಿತು. ಪುರುಷನಿಗಿಂತಲೂ ಬ್ರಹ್ಮದ ಸೃಷ್ಟಿಯೇ ಪೂರ್ವಭಾವಿ. ಹೀಗೆ ಸೃಷ್ಟಿಕರ್ತನು ತನ್ನಲ್ಲಿ ತಾನೇ ತನ್ನ ಸೃಷ್ಟಿಯ ಸಹಾಯದಿಂದಲೇ ಉತ್ಪನ್ನನಾದನು. ಯಾವ ಇದೇ ವಿಷಯವನ್ನು ತೈತ್ತಿರೀಯಾರಣ್ಯಕದಲ್ಲಿ **ಆತ್ಮನಾತ್ಮಾನಂ ವಿಧಾಯ । ತದೇವಾನು ಪ್ರಾವಿಶತ್** ಎಂದು ತಿಳಿಸಿದೆಯೋ ಅದರ ವಿವರವನ್ನು ಮುಂದೆ ದ್ಯಾವಾಪೃಥಿವಿಗಳ ಸೃಷ್ಟಿಕ್ರಮವನ್ನು ತಿಳಿಸುವಾಗ ವಿಶದಪಡಿಸಲಾಗುತ್ತದೆ. ಹೀಗೆ ಅದ್ವಿತೀಯವಾದ ತತ್ತ್ವವು ಬ್ರಹ್ಮಾಂಡರೂಪದಲ್ಲಿ ಪರಿಣತವಾಗಿ ನಾನಾ ರೂಪದಲ್ಲಿ ವ್ಯಾಪಿಸಿವೆ ಎಂಬ ವಿಷಯವು ಉಪನಿಷತ್ತುಗಳಲ್ಲಿ ಬಹಳವಾಗಿ ವಿವೃತವಾಗಿರುತ್ತದೆ.

ಆದರೆ, ಒಂದು ವಿಧದಲ್ಲಿ ಈ ಸೃಷ್ಟಿಯ ವರ್ಣನವು ಉಪನಿಷತ್ತುಗಳಲ್ಲಿ ವಿವೃತವಾಗಿರುವ ತತ್ತ್ವ ಪ್ರತಿಪಾದನೆಗೆ ವಿರುದ್ಧವಾಗಿ ಕಂಡುಬರುತ್ತದೆ. ಆತ್ಮನಲ್ಲದೇ ಇನ್ನಾವ ತತ್ತ್ವವೂ ಇಲ್ಲ. ಆತ್ಮಜ್ಞಾನವೇ ಸಕಲ ಜ್ಞಾನವು ಎಂಬ ಉಪದೇಶಕ್ಕೂ ಜಗತ್ತಿನ ನಾನಾ ವಿಧವಾದ ಅವಸ್ಥಾವರ್ಣನೆಗೂ ಸಾಮಂಜಸ್ಯವಿರುವುದಿಲ್ಲ. ಆದುದರಿಂದ ಆತ್ಮನಲ್ಲದೇ ಬೇರೆ ಸೃಷ್ಟಿಯೇ ಅಸಂಭವ. ಆದರೆ, ಬಾಹ್ಯತತ್ತ್ವವೂ ಸತ್ಯಾತ್ಮಕವಾದುದು. ಬಾಹ್ಯ ತತ್ತ್ವಗಳ ವೈವಿಧ್ಯವೂ ಸತ್ಯಾತ್ಮಕವು. ಹೀಗಿರುವಾಗ, ಜಗತ್ತಿನ ವೈವಿಧ್ಯವನ್ನು ಅಸತ್ಯ ಎಂದು ಹೇಳಲು ಸಾಧ್ಯವಿಲ್ಲವೆಂದು ಉಪನಿಷತ್ಕಾರರ ಮತವಾಗಿದೆ. ಅಲ್ಲದೇ ಈ ವಿಷಯದಲ್ಲಿ ಬ್ರಹ್ಮಸೂತ್ರವೂ ಸಹ ಅನೇಕ ಪೂರ್ವಪಕ್ಷಗಳನ್ನು ನಿರೀಕ್ಷಿಸಿ ಅದಕ್ಕೆ ತಕ್ಕ ಸಮಾಧಾನವನ್ನೂ ತೋರಿಸಿದೆ. ಉದಾಹರಣೆಗೆ—

**ಅಸದಿತಿ ಚೇನ್ನ; ಪ್ರತಿಷೇಧಮಾತ್ರತ್ವಾತ್** । ಎಂಬ ಸೂತ್ರವೂ (ಬ್ರ. ಸೂ. ೨. ೧-೭) ಇದೇ ಅಭಿಪ್ರಾಯವನ್ನು ಮುಂದುವರಿಸುವ **ತದನನ್ಯತ್ವಮಾರಂಭಣಶಬ್ದಾದಿಭ್ಯಃ** (ಬ್ರ. ಸೂ. ೨-೧-೧೪) ಎಂಬ

ಸೂತ್ರವೂ ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿ ಕಾರ್ಯಕಾರಣ ಸಂಬಂಧವನ್ನು ಚರ್ಚಿಸಿದೆ. ಜಗತ್ತು ಕಾರ್ಯ. ಈಶ್ವರನು ಕಾರಣ. ಕಾರಣಕ್ಕಿಂತಲೂ ಕಾರ್ಯವು ಬೇರೆಯೇ ಅಥವಾ ಕಾರಣವೇ ಕಾರ್ಯರೂಪದಲ್ಲಿ ಪರಿಣತ ವಾಗುತ್ತದೆಯೇ ಎಂಬ ಚರ್ಚೆಯಿರುತ್ತದೆ. ಸಾಂಖ್ಯ ಮತ್ತು ನ್ಯಾಯವೈಶೇಷಿಕಗಳಲ್ಲಿ ಪ್ರತಿಪಾದಿತವಾಗಿರುವ ಸತ್ಕಾರ್ಯ ಮತ್ತು ಅಸತ್ಕಾರ್ಯವಾದಗಳ ವಿವರವು ಸದ್ಯಃ ಪ್ರಕೃತವಾದರೂ ಈ ಸಂದರ್ಭದಲ್ಲಿ ಸಾಧ್ಯವಿಲ್ಲ. ಇದೇ ಚರ್ಚೆಗೆ ಮೂಲವಾದ ಕೆಲವು ವೈದಿಕ ವಾಕ್ಯಗಳನ್ನು ಮಾತ್ರ ಪ್ರಕೃತದಲ್ಲಿ ಪರೀಲಿಸಬಹುದಾಗಿದೆ. ಕಾರಣವೇ ಕಾರ್ಯ ಮತ್ತು ಕಾರ್ಯವೇ ಕಾರಣ ಎಂಬ ಅಭಿಪ್ರಾಯವು ಪ್ರಕೃತವಾದ ಋಕ್ಕಿನಲ್ಲಿ ಸ್ಪಷ್ಟವಾಗಿರುತ್ತದೆ. **ತಸ್ಮಾದ್ವಿರಾಡ-ಜಾಯತ; ವಿರಾಜೋ ಅಧಿ ಪೂರುಷಃ** ಪುರುಷನು **ವಿರಾಟ್** ಎಂಬ ಮೂಲದ್ರವ್ಯವನ್ನು ತನ್ನೊಳಗಿನಿಂದಲೇ ಉತ್ಪನ್ನಮಾಡಿದನು. ಪುನಃ ಪುರುಷನು ಅದೇ ಮೂಲಸಾಮಗ್ರಿಯೊಡನೆ ಐಕ್ಯನಾಗಿದ್ದಾನೆ. ಪ್ರಪಂಚರೂಪದಲ್ಲಿ ಉತ್ಪನ್ನನಾಗಿದ್ದಾನೆ. ಈ ವಾಕ್ಯಕ್ಕೆ ವಾಜಸನೇಯ ಸಂಹಿತಾಭಾಷ್ಯವು ಈ ರೀತಿಯಿರುತ್ತದೆ.

> **ತತಃ। ತಸ್ಮಾದಾದಿಪುರುಷಾದ್ವಿರಾಡ್ಬ್ರಹ್ಮಾಂಡದೇಹೋಽಜಾಯತ । ತಮೇವ ದೇಹಂ ಅಧಿಕರಣಂ ಕೃತ್ವಾ ಪುರುಷಸ್ತದ್ದೇಹಾಭಿಮಾನೀ ಏಕ ಏವ ಪುಮಾನ್ ಅಜಾಯತ। ಸರ್ವವೇದಾನ್ತವೇದ್ಯಃ ಪರಮಾತ್ಮಾ ಸ್ವಮಾಯಯಾ ವಿರಾಡ್ದೇಹಂ ಬ್ರಹ್ಮಾಂಡರೂಪಂ ಸೃಷ್ಟ್ವಾ ತತ್ರ ಜೀವರೂಪೇಣ ಪ್ರವಿಶ್ಯ ಬ್ರಹ್ಮಾಂಡಾಭಿಮಾನೀ ದೇವತಾತ್ಮಾ ಜೀವೋಽಭವ-ದಿತ್ಯರ್ಥಃ ॥**

ಆದಿಪುರುಷನಿಂದ ಬ್ರಹ್ಮಾಂಡದೇಹ ಉತ್ಪನ್ನವಾಯಿತು. ಇದೇ ವಿರಾಟ್ಸಂಜ್ಞಕವಾಗಿದೆ. **ವಿವಿಧಾನಿ ರಾಜಂತೇ ವಸ್ತೂನ್ಯತ್ರೇತಿ ವಿರಾಟ್** ವಿಧವಿಧವಾಗಿ ಮೆರೆಯುವುದು ಎಂದರ್ಥ. ಈ ದೇಹವನ್ನೇ ಅಧಿಕರಣವನ್ನಾಗಿ ಮಾಡಿಕೊಂಡು ವೇದಾನ್ತ ಪ್ರತಿಪಾದ್ಯನಾದ ಪುರುಷನು ಬ್ರಹ್ಮಾಂಡರೂಪವಾದ ದೇಹವನ್ನು ಸೃಜಿಸಿ ಅದರಲ್ಲಿ ಜೀವರೂಪ ದಿಂದ ಪ್ರವೇಶಿಸಿ ಚೇತನಾತ್ಮಕನಾದ ಜೀವರೂಪಿಯಾದನು. ಇದೇ ಪುರುಷ ಮತ್ತು ವಿರಾಟ್ ಎಂಬ ತತ್ತ್ವಗಳ ಸಂಬಂಧವನ್ನು ಮನುಸ್ಮೃತಿಯಲ್ಲಿ ಈ ರೀತಿ ತಿಳಿಸಿದೆ.

> **ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।**
> **ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ಪ್ರಭುಃ ॥**
>
> (ಮನು. ೧-೩೨)

ಬ್ರಹ್ಮನು ತನ್ನ ದೇಹವನ್ನು ಎರಡಾಗಿ ವಿಭಾಗಿಸಿದನು. ಅವುಗಳಲ್ಲಿ ಒಂದು ಪುರುಷರೂಪವಾಯಿತು. ಇನ್ನೊಂದು ಸ್ತ್ರೀರೂಪವನ್ನು ಹೊಂದಿತು. ಅದರಿಂದ ವಿರಾಟ್ಟಿನ ಉತ್ಪತ್ತಿಯಾಯಿತು.

> **ತಪಸ್ತಪ್ತ್ವಾಸೃಜದ್ಯಂ ತು ಸ ಸ್ವಯಂ ಪುರುಷೋ ವಿರಾಟ್ ।**
> **ತಂ ಮಾ ವಿತ್ತಾಸ್ಯ ಸರ್ವಸ್ಯ ಸ್ರಷ್ಟಾರಂ ದ್ವಿಜಸತ್ತಮಾಃ ॥**
>
> (ಮನು. ೧-೩೩)

ಅನಂತರ ಅದೇ ವಿರಾಟ್ಪುರುಷನು ತಪಸ್ಸನ್ನಾಚರಿಸಿ ಮನುವಾದ ನನ್ನನ್ನು ಸೃಜಿಸಿದನು. ನಾನೇ ಸಕಲ ಜಗತ್ತಿಗೂ ನಿರ್ಮಾಪಕನೆಂದು ತಿಳಿಯಿರಿ. ಎಂಬ ಅಭಿಪ್ರಾಯವು ವೈದಿಕ ವಾಕ್ಯಗಳಿಗೆ ಅನುಸಾರವಾಗಿದೆ. ಹೀಗೆ ಕಾರ್ಯಕಾರಣ

ಗಳು ಒಂದರಿಂದ ಇನ್ನೊಂದು ಉತ್ಪನ್ನವಾಗುತ್ತದೆ ಎಂಬ ಅಭಿಪ್ರಾಯವು ಋಕ್ಸಂಹಿತೆಯಲ್ಲಿಯೇ ಬೇರೆ ಕಡೆಯಲ್ಲಿ ಇದೇ ರೀತಿಯಾಗಿ ತಿಳಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವಂತೆಯೇ ಅಲ್ಲಿಯೂ ಸಹ ಇದೇ ಸಂಬಂಧವು ನಿರ್ದಿಷ್ಟವಾಗಿದೆ.

**ಭೂರ್ಜಜ್ಞ ಉತ್ತಾನಪದೋ ಭುವ ಆಶಾ ಅಜಾಯಂತ |**
**ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ ||**

(ಋ. ಸಂ. ೧೦-೭೨-೪)

ಊರ್ಧ್ವಪದಾತ್ಮಕವಾದ ವೃಕ್ಷದಿಂದ ಭೂಮಿಯೂ, ಭೂಮಿಯಿಂದ ದಿಕ್ಕುಗಳೂ ಉತ್ಪನ್ನವಾದವು. ಅದಿತಿಯಿಂದ ದಕ್ಷನೂ, ದಕ್ಷನಿಂದ ಅದಿತಿಯೂ ಉತ್ಪನ್ನರಾದರು, ಎಂದು ಪರಸ್ಪರ ಉತ್ಪಾದ್ಯೋತ್ಪಾದಕ ಸಂಬಂಧವು ಇಲ್ಲಿ ಹೇಳಿರುವಂತೆಯೇ ತಿಳಿಸಿದೆ. ಋಕ್ಸಂಹಿತೆಯಲ್ಲಿ **ವಿರಾಟ್** ಶಬ್ದವು ಕೆಲವೆಡೆಗಳಲ್ಲಿ ಛಂದಸ್ಸನ್ನು ನಿರ್ದೇಶಿಸುತ್ತದೆ. ಕೆಲವೆಡೆಗಳಲ್ಲಿ ಇಂದ್ರನಿಗೆ ವಿಶೇಷಣವಾಗಿರುತ್ತದೆ. ಛಂದಸ್ಸಿಗೂ, ಪುರುಷನಿಗೂ ಸಂಬಂಧವನ್ನು ತೋರಿಸುತ್ತ ಶತಪಥ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಚತ್ವಾರಿಂಶದಕ್ಷರಾ ವಿರಾಡ್ವಿರಾಜಮಭಿಸಂಪದ್ಯತೇ ತತೋ ವಿರಾಡಜಾಯತ ವಿರಾಜೋ ಅಧಿ ಪೂರುಷ ಇತ್ಯೇಷಾ ವೈ ಸಾ ವಿರಾಟ್.............. ||**

(ಶ. ಬ್ರಾ. ೧೩-೬-೧-೨)

ವಿರಾಟ್ಛಂದಸ್ಸು ೪೦ ಅಕ್ಷರಗಳುಳ್ಳದ್ದು. ಆ ಛಂದಸ್ಸಿನಿಂದ ವಿರಾಟ್‌ತತ್ತ್ವವು ಉತ್ಪನ್ನವಾಯಿತು. (ಇದು ಸ್ತ್ರೀರೂಪ) ಈ ವಿರಾಟ್ಟಿನಿಂದ ಪುರುಷನು ಉತ್ಪನ್ನನಾದನು. ಈ ವಿರಾಟ್ಟಿನ ಸಹಾಯದಿಂದ ಯಜಮಾನನು ಯಜ್ಞರೂಪನಾದ ಪುರುಷನನ್ನು ಉತ್ಪನ್ನಮಾಡುತ್ತಾನೆ. ಇತ್ಯಾದಿಯಾದ ಪ್ರಶಂಸೆಯಲ್ಲಿ **ವಿರಾಟ್**‌ತತ್ತ್ವವು ಸ್ತ್ರೀರೂಪದಲ್ಲಿದ್ದು ಪುರುಷನ ಆವಿರ್ಭಾವಕ್ಕೆ ಕಾರಣವಾಗಿರುತ್ತದೆ ಎಂದು ಪುರುಷ ಮತ್ತು ವಿರಾಟ್‌ಗಳ ಪರಸ್ಪರ ಸಂಬಂಧವು ವಿವೃತವಾಗಿದೆ. ಮತ್ತು ಪ್ರಕೃತವಾದ ಸೂಕ್ತವನ್ನೇ ಶತಪಥಬ್ರಾಹ್ಮಣದಲ್ಲಿ ವಿವರಿಸಿದೆ ಇಂದ್ರನೇ ಪರಮಪುರುಷ ನೆಂದಾದರೆ, ಅವನ ಪತ್ನಿಯು ವಿರಾಟ್ ಎಂದು ಬೃಹದಾರಣ್ಯಕದಲ್ಲಿ ವರ್ಣಿತವಾಗಿದೆ.

**ಅಥೈತದ್ವಾಮೇಽಕ್ಷಣಿ ಪುರುಷರೂಪಮೇಷಾಸ್ಯ ಪತ್ನೀ ವಿರಾಟ್ ತಯೋರೇಷ ಸಂಸ್ತಾವೋ ಯ ಏಷೋಽಂತರ್ಹೃದಯ ಆಕಾಶಃ ||**

(ಬೃ. ಉ. ೪-೨-೩)

ದಕ್ಷಿಣಾಕ್ಷಿಯಲ್ಲಿ (ಬಲಗಣ್ಣಿನಲ್ಲಿ) ಇಂದ್ರನು ವಿರಾಜಿಸುತ್ತಾನೆ. ಇವನೇ ಪರಮಪುರುಷನು. ವಾಮಾಕ್ಷಿ(ಎಡಗಣ್ಣು)ಯಲ್ಲಿ ಇವನ ಪತ್ನಿಯಾದ ವಿರಾಟ್ ತತ್ತ್ವವು ವಿರಾಜಿಸುತ್ತದೆ. ಈ ಎರಡು ತತ್ತ್ವಗಳಿಗೂ ಹೃದಯಾಕಾಶವೇ ಸಂಯೋಗ ಸ್ಥಾನವು ಎಂದು ಪುರುಷ ಮತ್ತು ವಿರಾಟ್ ತತ್ತ್ವದ ಸಂಬಂಧವನ್ನು ತಿಳಿಸಿದೆ. **ಅಥೋ ನೋ ದುಹಿತಾ ವಿರಾಟ್** (ಋ. ಸಂ. ೧೦-೧೩೪-೩) ಎಂದು ಶಚಿಯು ವಿರಾಟ್ ತತ್ತ್ವವನ್ನು ತನ್ನ ಪುತ್ರಿಯೆಂದು ಕರೆಯುತ್ತಾಳೆ. ಆದರೆ ಇಲ್ಲಿ ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವೇನೆಂದು ಹೇಳುವುದಕ್ಕಾಗುವುದಿಲ್ಲ. ಛಾಂದೋಗ್ಯೋಪನಿಷತ್ತಿನಲ್ಲಿ ಇದೇ ವಿರಾಟ್ ತತ್ತ್ವವನ್ನು ವಿವರಿಸುತ್ತ,

**ತಸ್ಮಾತ್ಸರ್ವಾಸು ದಿಕ್ಷ್ವನ್ನಮೇವ ದಶ ಕೃತಂ ಸೈಷಾ ವಿರಾಡನ್ನಾದೀ ತಯೇದಗ್ಂ ಸರ್ವಂ ದೃಷ್ಟಂ ಭವತ್ಯನ್ನಾದೋ ಭವತಿ ಯ ಏವಂ ವೇದ ||**

(ಛಾ. ಉ. ೪-೩-೮)

ಯಾವ ದಶದಿಕ್ಕುಗಳಲ್ಲೂ ಅನ್ನವು ಪ್ರಕ್ಷಿಪ್ತವಾಗುವುದೋ ಆ ಅನ್ನಸಂಪತ್ತು ಮತ್ತು ಅನ್ನಭಕ್ಷಕವಾದ ಶಕ್ತಿ ಎರಡೂ ವಿರಾಟ್ ಅಲ್ಲದೆ ಬೇರೆಯಲ್ಲ. ಈ ವಿರಾಡಿನ ಸಹಾಯದಿಂದಲೇ ಸಕಲ ಜಗತ್ತೂ ಪ್ರಕಾಶಕ್ಕೆ ಬಂದಿತು. ಈ ತತ್ತ್ವವನ್ನರಿತವನೂ ಪ್ರಕಾಶಕ್ಕೆ ಬರುತ್ತಾನೆ ಎಂಬ ಪ್ರಶಂಸೆಯಿದೆ.

ಸಾಧಾರಣವಾಗಿ ಎಲ್ಲೆಲ್ಲಿ **ವಿರಾಟ್** ಶಬ್ದದ ಪ್ರಯೋಗವಿರುತ್ತದೆಯೋ ಅಲ್ಲೆಲ್ಲ ಸ್ತ್ರೀಲಿಂಗವಾಚಕವಾಗಿಯೇ ಇರುತ್ತದೆ. (ಆದರೆ, ೯-೬೬-೧೮ ರಲ್ಲಿ ಇಂದ್ರನಿಗೆ ಇದು ವಿಶೇಷಣವಾಗಿರುತ್ತದೆ). ವಿರಾಡಿನ ಸ್ವರೂಪವನ್ನು ಅಥರ್ವವೇದದಲ್ಲಿ ಈ ರೀತಿ ವರ್ಣಿಸಿದೆ.

**ವಿರಾಡ್ವಾಗ್ವಿರಾಟ್ ಪೃಥ್ವೀ ವಿರಾಡಂತರಿಕ್ಷಂ ವಿರಾಟ್ ಪ್ರಜಾಪತಿಃ |**
**ವಿರಾಣ್ಮೃತ್ಯುಃ ಸಾಧ್ಯಾನಾಮಧಿರಾಜೋ ಬಭೂವ ||**

(ಅ. ವೇ. ೯-೧೦-೨೪)

ವಿರಾಟ್ಟೇ ವಾಗ್ದೇವಿಯು, ವಿರಾಟ್ಟೇ ಪೃಥ್ವಿಯು. ಅದೇ ಅಂತರಿಕ್ಷವು. ಅದೇ ಪ್ರಜಾಪ್ರತಿಯು. ಅದೇ ಮೃತ್ಯುದೇವತೆಯು. ಸಾಧ್ಯರಿಗೆಲ್ಲ ಪ್ರಭುವು. ಅದೇ ಸರ್ವಸ್ವವು. ಇದಲ್ಲದೇ ವಿರಾಟ್‌ಛಂದಸ್ಸಿನ ಮಾಹಾತ್ಮ್ಯವೂ ಅತ್ಯಧಿಕವಾದುದು. ಈ ಛಂದಸ್ಸಿಗೂ ವಾಕ್ಕಿಗೂ (ವಾಗ್ದೇವಿ) ಅನೇಕ ವೇಳೆ ತಾದಾತ್ಮ್ಯವನ್ನೇ ಹೇಳಿರುತ್ತದೆ. **ವಿವಿಧಾನಿ ರಾಜಂತೇಽತ್ರ ವಸ್ತೂನೀತಿ ವಿರಾಟ್** ಎಂದು ಸಾಯಣರು ವಿವರಿಸುವಂತೆ (೧೦-೯೦-೫) ಅನೇಕ ವಿಧವಾಗಿ ಪ್ರಕಾಶಿಸುವುದರಿಂದ ಅಥವಾ ಸಕಲ ಲೋಕವೂ ಇವನಲ್ಲೇ ವಿಧವಿಧವಾಗಿ ಪ್ರಕಾಶಿಸುವುದರಿಂದ **ವಿರಾಟ್** ಎಂಬ ಹೆಸರು ಪ್ರಸಿದ್ಧವಾಗಿದೆ ಎಂಬುದೇ ತಾತ್ಪರ್ಯವಾದರೆ, ಇದೇ ರೀತಿ ವಾಗ್ದೇವಿಯೂ ವರ್ಣಿತಳಾಗಿದ್ದಾಳೆ. ಹೇಗೆಂದರೆ—

**ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ | ಧಿಯೋ ವಿಶ್ವಾ ವಿ ರಾಜತಿ ||**

(ಋ. ಸಂ. ೧-೩.೧೨)

ಎಂಬಲ್ಲಿಯೂ ವಾಗ್ದೇವಿಯಾದ ಸರಸ್ವತಿಯು ಅನೇಕ ವಿಧವಾಗಿ ವಿರಾಜಿಸುತ್ತಾಳೆ ಎಂಬ ವರ್ಣನೆಯಿರುತ್ತದೆ. ಮತ್ತು ಮೇಲೆ ಉದಾಹರಿಸಿರುವ ಅಥರ್ವವೇದದ ವಾಕ್ಯದಲ್ಲಿ ವಾಕ್ಕಿಗೂ ವಿರಾಡಿಗೂ ತಾದಾತ್ಮ್ಯವನ್ನೇ ಹೇಳಿರುತ್ತದೆ. ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಹಿಂದಿನ ಭಾಗಗಳಲ್ಲಿ ತಿಳಿಸಿರುವಂತೆ,

**ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ ಸಂಜಗ್ಮಾನೋ ನಿ ಷಿಂಚತ್ |**
**ಸ್ವಾಧ್ಯೋಽಜನಯನ್ ಬ್ರಹ್ಮ ದೇವಾ ವಾಸ್ತೋಷ್ಪತಿಂ ವ್ರತಪಾಂ ನಿರತಕ್ಷನ್ ||**

(ಋ. ಸಂ. ೧೦-೬೧.೭)

ಪ್ರಜಾಪತಿಯು ತನ್ನ ಪುತ್ರಿಯೊಡನೆ ಸಂಗಮನ ಮಾಡಿದಾಗ ಪೃಥ್ವಿಯೊಡಗೂಡಿ ರೇತಸ್ಸನ್ನು ಸುರಿಸಿದನು. ಆಗ ಬ್ರಹ್ಮನ ಜನನವಾಯಿತು, ಎಂದಿರುತ್ತದೆ. ಇಲ್ಲಿ ಪುತ್ರಿಯು ಯಾರು ಎಂಬುದಕ್ಕೆ ಸಾಯಣರು ನಿಷ್ಕೃಷ್ಟವಾದ

ಅರ್ಥವನ್ನು ಹೇಳಿಲ್ಲ. **ಉಷಸ್, ವಾಕ್ಕು** ಹೀಗೆ ವೈಕಲ್ಪಿಕವಾದ ಅರ್ಥವನ್ನು ಹೇಳಬಹುದು. ಪುತ್ರಿಯನ್ನೇ ಪತ್ನಿಯನ್ನಾಗಿ ಮಾಡಿಕೊಂಡು ಪುತ್ರೋತ್ಪಾದನಕ್ರಿಯೆಯನ್ನು ನೆರವೇರಿಸಿದನು ಎಂದಿರುತ್ತದೆ. ಈ ಸಂದರ್ಭದಲ್ಲಿ ಅಲೌಕಿಕವಾದ ತಾತ್ಪರ್ಯವಿರುತ್ತದೆ. ಪ್ರಜಾಪತಿಗೂ ಮತ್ತು ವಿರಾಟ್ಟಿಗೂ ಇರುವ ಸಂಬಂಧವೇನು, ಇವರಿಬ್ಬರ ಸಂಬಂಧದಿಂದ ಪ್ರಜೋತ್ಪತ್ತಿಯು ಹೇಗೆ ಎಂದರೆ, ಇವರ ಸಂಬಂಧವು ಶತಪಥಬ್ರಾಹ್ಮಣದಲ್ಲಿ ಈ ರೀತಿ ವರ್ಣಿತವಾಗಿರುತ್ತದೆ.

**ಪ್ರಜಾಪತಿರ್ವಿರಾಜಮಸೃಜತ । ಸಾಸ್ಮಾತ್ಸೃಷ್ಟಾ ಪರಾಚ್ಯೈತ್ ।**

(ಶ. ಬ್ರಾ. ೧೩-೨-೬-೩)

ಪ್ರಜಾಪತಿಯು ವಿರಾಟ್ಟನ್ನು ಉತ್ಪನ್ನಮಾಡಿದನು. ಉತ್ಪನ್ನಳಾದೊಡನೆಯೇ ಅವಳು ಅಲ್ಲಿಂದ ತಪ್ಪಿಸಿಕೊಂಡಳು ಎಂದಿರುತ್ತದೆ. ಎಂದರೆ ಪ್ರಜಾಪತಿಯ ಪುತ್ರಿಯಾಯಿತು. (ಈ ವಿರಾಟ್ಟೇ ವಾಗ್ದೇವಿಯೆಂದೂ ಪ್ರಸಿದ್ಧಳಾಗಿದ್ದಾಳೆ). ಈ ವಿರಾಟ್ಟಿನಿಂದಲೇ ಪುರುಷನೂ ಉತ್ಪನ್ನನಾದನು ಎಂದು ಹೇಳುವ ಶತಪಥಬ್ರಾಹ್ಮಣದ ವಾಕ್ಯವನ್ನು ಮೇಲೆ ಮೇಲೆ ಉದಾಹರಿಸಿದೆ. ಅಲ್ಲದೆ,

**ಪ್ರಜಾಪತಿರ್ವಿರಾಜಮಪಶ್ಯತ್ತಯಾ ಭೂತಂ ಚ ಭವ್ಯಂ ಚಾಸೃಜತ ತಾಮೃಷಿಭ್ಯಸ್ತಿ-**
**ರೋಽದಧಾತ್ತಾಂ ಜಮದಗ್ನಿಸ್ತಪಸಾಪಶ್ಯತ್ತಯಾ ವೈ ಸ ಪೃಶ್ನೀನ್ಕಾಮಾನಸೃಜತ ।**

(ತೈ. ಸಂ. ೩-೩-೫-೨)

ಪ್ರಜಾಪತಿಯು ವಿರಾಟ್ಟನ್ನು ವೀಕ್ಷಿಸಿದನು. (ಇಲ್ಲಿಯೂ **ವಿರಾಟ್** ಎಂದರೆ ಯಾರು ಎಂಬುದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ). ಅವಳೊಡನೆ ಸೇರಿ ಭೂತ ಮತ್ತು ಭವಿಷ್ಯತ್ಕಾಲದ ಸಕಲ ಪ್ರಜೆಗಳನ್ನು ಉತ್ಪನ್ನಮಾಡಿದನು. ಅವಳನ್ನು ಋಷಿಗಳಿಂದ ಮರೆಸಿದನು. ಆಗ ಜಮದಗ್ನಿಯು ಅವಳನ್ನು ತನ್ನ ತಪೋಮಹಿಮೆಯಿಂದ ನೋಡಿ ಅವಳಿಂದ ಪೃಶ್ನಿಗಳನ್ನು ಉತ್ಪನ್ನಮಾಡಿದನು ಎಂದು ತಿಳಿಸಿರುತ್ತದೆ. ತೈತ್ತಿರೀಯಸಂಹಿತೆಯ ಈ ವಾಕ್ಯವೂ ಶತಪಥಬ್ರಾಹ್ಮಣದ ವಾಕ್ಯದ ಅಭಿಪ್ರಾಯವನ್ನೇ ತಿಳಿಸುತ್ತದೆ. ಇನ್ನು ಕೆಲವೆಡೆಗಳಲ್ಲಿ ವಿಶ್ವಕರ್ಮನು ವಾಕ್ಕಿನೊಡನೆ ಸೇರಿ ಪ್ರಜೋತ್ಪತ್ತಿಯನ್ನುಂಟುಮಾಡಿದನೆಂದು ತಿಳಿಸಿದೆ.

ಹೀಗೆ **ವಿರಾಟ್** ಶಬ್ದಕ್ಕೆ ಯಾವ ಅರ್ಥವನ್ನು ಹೇಳಿದರೂ ಸಹ, ಒಟ್ಟಿನಲ್ಲಿ ಸೃಷ್ಟಿಕರ್ತನು ತನ್ನಿಂದ ಉತ್ಪನ್ನವಾದ ವಸ್ತುವಿನೊಡನೆಯೇ ತಾನು ಸೇರಿ ಪ್ರಪಂಚರೂಪದ ವಿಸ್ತೃತಿಯನ್ನು ಹೊಂದುತ್ತಾನೆ ಎಂಬುದು ಸ್ಪಷ್ಟವಾಗಿದೆ. ಯಾವ ಯಾವ ರೂಪದಲ್ಲಿ ಪುರುಷರೂಪನಾದ ಪ್ರಜಾಪತಿಯು ವಿಸ್ತೃತಿಯನ್ನು ಹೊಂದುತ್ತಾನೆ ಎಂಬ ವಿಷಯದಲ್ಲಿಯೂ ಮತಭೇದವಿರುತ್ತದೆ. ಆದರೆ ಸಕಲವೂ ಈಶ್ವರನ ಅಂಶವೇ ಆಗಿದೆ ಎಂಬುದರ ವಿಷಯದಲ್ಲಿ ಮತಭೇದವಿಲ್ಲ. ಈ ವಿಷಯದಲ್ಲಿ ಉಪನಿಷತ್ತುಗಳ ಒಟ್ಟು ಸಾರಾಂಶವನ್ನು ಭಗವದ್ಗೀತೆಯಲ್ಲಿ ಈ ರೀತಿ ತಿಳಿಸಿದೆ.

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥**

(ಭ. ಗೀ. ೭ ೭)

ಎಲೈ ಧನಂಜಯನೇ, ನನಗಿಂತಲೂ ಬೇರೆಯಾದುದಾಗಲಿ ಅಥವಾ ಶ್ರೇಷ್ಠವಾದುದಾಗಲಿ ಯಾವುದೂ ಇಲ್ಲ. ಸೂತ್ರದಲ್ಲಿ ಯಾವ ರೀತಿ ಮಣಿಗಳು ಒಟ್ಟಿಗೆ ಜೋಡಿಸಲ್ಪಟ್ಟಿವೆಯೋ ಆ ರೀತಿ ಜಗತ್ತಿನ ಸಕಲ ವಸ್ತುಗಳೂ ನನ್ನಲ್ಲಿ

ಪೋಣಿಸಲ್ಪಟ್ಟಿವೆ. ನನ್ನಿಂದ ಬೇರೆಮಾಡಲ್ಪಟ್ಟುದು ಯಾವುದೂ ಇಲ್ಲ. ಈ ವಿಧವಾದ ಸೃಷ್ಟಿಯಲ್ಲಿ ಎರಡು ಬಗೆಗಳಿರುತ್ತವೆ. ಅದನ್ನೇ ಹಿಂದಿನ ಋಕ್ಕಿನಲ್ಲಿ **ಸಾಶನಾನಶನೇ ಅಭಿ** ಎಂದು ವರ್ಣಿಸಿರುತ್ತೆ. ಸಾಶನವೆಂದರೆ, ಭೋಜನಾದಿವ್ಯವಹಾರಗಳಿಂದ ಕೂಡಿದ ಚೇತನಾತ್ಮಕವಾದ ಪ್ರಾಣಿಗಳೆಂದೂ, ಅನಶನವೆಂದರೆ ಅದಿಲ್ಲದ ಅಚೇತನ ವಸ್ತುಗಳೆಂದೂ ತಾತ್ಪರ್ಯ. ಇವೆರಡಕ್ಕೂ ತಾನೇ ಮೂಲಕಾರಣನು. ಎಲ್ಲವನ್ನೂ ತಾನೇ ವ್ಯಾಪಿಸಿದ್ದಾನೆ. ಹೀಗೆ ಚೇತನಗಳ ರೂಪದಲ್ಲಿ ಯಾವ ರೀತಿ ಸೃಷ್ಟಿಕಾರ್ಯವನ್ನು ನಡೆಸುತ್ತಾನೆಂದರೆ;

**ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವನ್ತ್ಯಂಡಜಂ ಜೀವಜ-ಮುದ್ಭಿಜಮಿತಿ ।**

(ಛಾ. ಉ. ೬-೩-೧)

ಮೊಟ್ಟೆಯರೂಪದಲ್ಲಿ ಉತ್ಪನ್ನವಾಗಿ ಬೆಳೆಯುವುದು, ಮೊಟ್ಟೆಯಿಲ್ಲದೆ ಸಶರೀರಗಳಾಗಿ ಹುಟ್ಟಿ ಬೆಳೆಯುವುದು ಮತ್ತು ಸಸ್ಯಾದಿ ಮೊಳಕೆಯರೂಪದಲ್ಲಿ ಹುಟ್ಟಿ ಬೆಳೆಯುವುದು ಎಂದು ಸೃಷ್ಟಿಯಲ್ಲಿ ಮೂರು ವಿಭಾಗಗಳಿರುತ್ತವೆ. ಈ ಪ್ರಕಾರವಾಗಿ ಸೃಷ್ಟಿಯನ್ನು ರಚಿಸಿ.

**ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ।**

(ಛಾ. ಉ. ೬-೩-೨)

ಈ ಸೃಷ್ಟಿವಿಭಾಗಗಳನ್ನು ರಚಿಸಿ ನಾನು ಈ ಮೂರು ಭಾಗಗಳಲ್ಲಿಯೂ ವ್ಯಾಪಿಸಿರುತ್ತೇನೆ. (ತೇಜಸ್ಸು, ಜಲ ಮತ್ತು ಅನ್ನ) ಮತ್ತು ಅವನ್ನು ಸಚೇತನವನ್ನಾಗಿ ಮಾಡಿ ನಾಮ ಮತ್ತು ರೂಪಗಳಿಂದಲೂ ವಿಭಾಗಿಸಿ ಪ್ರತಿಯೊಂದಕ್ಕೂ ಪ್ರತ್ಯೇಕವಾದ ವ್ಯಕ್ತಿತ್ವವನ್ನು ಕೊಡುತ್ತೇನೆ ಎಂದು ಪರಮಾತ್ಮನು ಸಂಕಲ್ಪಿಸಿದನು.

ಸೃಷ್ಟಿಗಾಗಿ ಸಂಕಲ್ಪಿಸಿದನಂತರ ಮೊದಲು ಉತ್ಪನ್ನವಾದ ತತ್ತ್ವಗಳಾವುವೆಂದರೆ, ಛಾಂದೋಗ್ಯೋಪನಿಷತ್ತಿನಪ್ರಕಾರ ಮೂರು ರೂಪಗಳು.

**ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ ॥**

(ಛಾ. ಉ. ೬-೨-೩)

ಅದ್ವಿತೀಯನಾದ ನಾನು ಅನೇಕ ರೂಪದಲ್ಲಿ ಬೆಳೆಯಬೇಕು ಎಂದು ಚಿಂತಿಸಿ ಪ್ರಥಮತಃ ತೇಜಸ್ಸನ್ನು ನಿರ್ಮಿಸಿದೆನು. ಆಗ ತೇಜಸ್ಸೂ ವೃದ್ಧಿಯನ್ನು ಹೊಂದಬೇಕೆಂದಿಚ್ಛಿಸಿತು. ಆ ಇಚ್ಛೆಯ ಫಲವಾಗಿ ಜಲವನ್ನು ನಿರ್ಮಿಸಿತು.

**ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜಂತ ತಸ್ಮಾದ್ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ ॥**

(ಛಾ. ಉ. ೬-೨-೪)

ಜಲವೂ ಸಹ ತಾನು ವೃದ್ಧಿಯನ್ನು ಹೊಂದಬೇಕೆಂದಿಚ್ಛಿಸಿತು. ಆ ಇಚ್ಛೆಯ ಫಲವಾಗಿ ಅನ್ನವು ನಿರ್ಮಿತವಾಯಿತು. ಆದುದರಿಂದಲೇ, ವೃಷ್ಟಿಧಾರೆಯು ಬಿದ್ದ ಸ್ಥಳದಲ್ಲೆಲ್ಲ ಅತ್ಯಧಿಕವಾದ ಅನ್ನವು ಉತ್ಪನ್ನವಾಗುತ್ತದೆ. ಹೀಗೆ ತೇಜಸ್ಸು; ತೇಜಸ್ಸಿನಿಂದ ಜಲ; ಜಲದಿಂದ ಅನ್ನ.

**ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋದ್ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಸ್ತ್ರಿವೃತ್ತ್ರಿವೃದೇಕೈಕಾ ಭವತಿ ॥**

(ಛಾ. ಉ. ೬-೩-೪)

ಹೀಗೆ ಉತ್ಪನ್ನವಾದ ಪ್ರತಿಯೊಂದು ತತ್ತ್ವವನ್ನೂ ಮೂರು ವಿಭಾಗವಾಗಿ ವಿಂಗಡಿಸಿದನು. ಯಾವ ಮುಖ್ಯದೇವತೆಗಳಿದ್ದಾರೆಯೋ ಅವರೂ ತ್ರಿಭಾಗಾತ್ಮಕರಾಗಿದ್ದಾರೆ. ಹೀಗೆ ಮೂರು ವಿಧವಾದ ತತ್ತ್ವಗಳು ಛಾಂದೋಗ್ಯದಲ್ಲಿ ಪ್ರತಿಪಾದಿತವಾಗಿವೆ. ತೈತ್ತಿರೀಯದಲ್ಲಿ ಕೊಂಚ ವ್ಯತ್ಯಸ್ತವಾಗಿದೆ.

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ ॥**

(ತೈ. ಉ. ೨-೧)

ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು. ಆಕಾಶದಿಂದ ವಾಯುವು. ವಾಯುವಿನಿಂದ ಅಗ್ನಿಯು. ಅಗ್ನಿಯಿಂದ ಜಲವು. ಜಲದಿಂದ ಪೃಥ್ವಿಯು. ಪೃಥ್ವಿಯಿಂದ ಓಷಧಿಗಳು. ಓಷಧಿಗಳಿಂದ ಅನ್ನವು. ಅನ್ನದಿಂದ ಪುರುಷನು. ಈ ಪುರುಷನೇ ಅನ್ನರಸಮಯನು, ಎಂದಿರುತ್ತದೆ. ಇದೇ ಸೃಷ್ಟಿಕ್ರಮವನ್ನು ಐತರೇಯೋಪನಿಷತ್ತಿನಲ್ಲಿ ತಿಳಿಸುತ್ತ ಪಂಚಮಹಾಭೂತಗಳ ಉತ್ಪತ್ತಿಯನ್ನು ವಿವರಿಸಿದೆ. (ಐ. ಉ. ೩-೩).

ಈ ಉತ್ಪತ್ತಿಯಲ್ಲಿ ಅಚೇತನಾತ್ಮಕ ಮತ್ತು ಚೇತನಾತ್ಮಕ ಎಂಬ ಎರಡು ಬಗೆಯಿರುತ್ತದೆ. ಎಲ್ಲವೂ ಒಂದೇ ಮೂಲದಿಂದ ಉತ್ಪನ್ನವಾಗಿವೆ. ಹೇಗೆಂದರೆ.

**ಕೋಽಯಮಾತ್ಮೇತಿ ವಯಮುಪಾಸ್ಮಹೇ । .... .... .... ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ .... .... .... ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ । ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನಿ, ಇಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನಿ ಇತರಾಣಿ ಚೇತರಾಣಿ ಚಾಂಡಜಾನಿ ಚ, ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ । ಸರ್ವಂ ತತ್ ಪ್ರಜ್ಞಾನೇತ್ರಂ, ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ । ಸ ಏತೇನ ಪ್ರಜ್ಞಾನೇ-ನಾಸ್ಮಾಲ್ಲೋಕಾದುತ್ಕ್ರಮ್ಯ.... .... .... ಅಮೃತಃ ಸಮಭವತ್ ॥**

(ಐ. ಉ. ೫-೧)

ಜಗತ್ತಿನ ಮೂಲತತ್ತ್ವವಾವುದು ? ಎಂಬುದೇ ಪ್ರಶ್ನೆ. ಅದು ಆತ್ಮ ಎಂದು ಉಪಾಸಿಸಬೇಕು ಎಂಬುದೇ ಉತ್ತರ. ಈ ಆತ್ಮನು ಯಾರು ? ಅವನ ಸ್ವರೂಪವೇನು ? ಎಂದರೆ ಯಾವುದರಿಂದ ಜಗತ್ತಿನ ಸಕಲ ವ್ಯವಹಾರಗಳೂ ನಡೆಯುವುವೋ ಅದೇ ಆತ್ಮನು. ದರ್ಶನ, ಶ್ರವಣ, ಜ್ಞಾನ—ಈ ಜ್ಞಾನದ ವಿಶೇಷಾಂಶಗಳಾದ ಪ್ರಜ್ಞಾನ, ವಿಜ್ಞಾನ,

ಸಂಜ್ಞಾನ, ಮೇಧಾ, ಸ್ಮೃತಿ ಇತ್ಯಾದಿ ಸಕಲವೂ ಈ ಆತ್ಮನ ವ್ಯಾಪಾರಗಳೇ. ಈ ಆತ್ಮನೇ ಬ್ರಹ್ಮನು. ಇವನೇ ಇಂದ್ರನು. ಪ್ರಜಾಪತಿಯೂ ಇವನೇ ಮತ್ತು ಸಕಲ ದೇವತೆಗಳೂ ಇವನೇ. ಪಂಚಮಹಾಭೂತಗಳೂ, ಪೃಥ್ವಿಯೂ, ವಾಯುವೂ, ಆಕಾಶವೂ, ಜಲವೂ, ಜ್ಯೋತಿಗಳೂ ಸಕಲವೂ ಇವನೇ. ಸ್ಥೂಲ ಮತ್ತು ಸೂಕ್ಷ್ಮ ರೂಪವಾದ ಸಕಲ ವಸ್ತುಗಳಿಗೂ ಇವನೇ ಮೂಲವು. ಅಂಡಜ, ಸ್ವೇದಜ ಮತ್ತು ಉದ್ಭಿಜ್ಜ ಇತ್ಯಾದಿ ಸಕಲವೂ ಇವನೇ. ಗೋವುಗಳು, ಪುರುಷರು, ಆನೆಗಳು ಇತ್ಯಾದಿಯಾಗಿ ನೆಲದ ಮೇಲೆ ಸಂಚರಿಸುವ ಪ್ರಾಣಿಗಳು ಯಾವುವು ಇರುವುವೋ, ಅಂತರಿಕ್ಷದಲ್ಲಿ ಹಾರುವ ಪಕ್ಷಿಗಳು ಯಾವುವು ಇವೆಯೋ, ಚರಾಚರಾತ್ಮಕವಾದ ಉಳಿದ ಯಾವ ಚೇತನ ಮತ್ತು ಅಚೇತನಗಳಿವೆಯೋ ಅವೆಲ್ಲವೂ ಪರಬ್ರಹ್ಮನ ರೂಪಾಂತರಗಳೇ ಆಗಿವೆ. ಇವೆಲ್ಲವೂ ಪ್ರಜ್ಞಾನಾತ್ಮನಾದ ಆತ್ಮನ ಅಂಶಗಳಾಗಿ, ಆತ್ಮನ ನಿಯಮನದಲ್ಲಿಯೇ ಇರುತ್ತವೆ. ಅಲ್ಲದೇ, ಪೃಥಿವ್ಯಾದಿ ಲೋಕಗಳ ಮತ್ತು ಋಗಾದಿ ಮಂತ್ರಗಳ ಮತ್ತು ಇತರ ಸಕಲ ಜಗತ್ತತ್ತ್ವಗಳ ಉತ್ಪತ್ತಿಕ್ರಮವನ್ನು ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ.

ಸಕಲ ಲೋಕದ ಉತ್ಪತ್ತಿಗೂ ಬ್ರಹ್ಮನೇ ಕಾರಣನಾದರೆ, ಅದರ ರಕ್ಷಣೆಗೂ ಅವನಲ್ಲದೆ ಬೇರೆ ಕಾರಣರಿಲ್ಲ. ಲಯ ಮತ್ತು ಪುನರುತ್ಪತ್ತಿಗೆ ನಿಮಿತ್ತನಾದ ಈಶ್ವರನು ಜಗತ್ತಿನ ಸ್ಥಿತಿಗೂ ಮೂಲಕಾರಣನು. ಅವನಲ್ಲದೆ ಜಗತ್ತು ಉಸಿರಾಡುವುದು ಕೂಡ ಸಾಧ್ಯವಿಲ್ಲ.

**ಸಲಿಲ ಏಕೋ ದ್ರಷ್ಟಾದ್ವೈತೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯ ಏಷಾಸ್ಯ ಪರಮಾ ಗತಿರೇಷಾಸ್ಯ ಪರಮಾ ಸಂಪದೇಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನಂದ ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ।**

(ಬೃ. ಉ. ೪-೩-೩೨)

ದ್ವೈತವಿಲ್ಲದೆ ಕೇವಲ ಅದ್ವೈತದರ್ಶನವನ್ನು ಹೊಂದುವವನು ಮಾತ್ರ ಬ್ರಹ್ಮಲೋಕವಾಸಿಯಾಗುತ್ತಾನೆ. ಈ ದರ್ಶನವೇ ಮಾನವನ ಉತ್ತಮವಾದ ಗತಿಯು. ಇದೇ ಉತ್ತಮವಾದ ಸಂಪತ್ತು, ಅತ್ಯುತ್ತಮವಾದ ಆನಂದ. ಈ ಉತ್ತಮವಾದ ಆನಂದದ ಅಂಶದ ಆಧಾರದ ಮೇಲೆ ಸಕಲಭೂತಗಳೂ ತಮ್ಮ ಜೀವಿತವನ್ನು ಹೊಂದಿವೆ.

**ರಸೋ ವೈ ಸಃ । ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ ॥**

(ತೈ. ಉ. ೨-೭)

ಈ ಪರಮಾತ್ಮನು ಸಕಲ ಜಗತ್ತಿಗೂ ಸಾರನಾಗಿದ್ದಾನೆ. ಈ ಸಾರಗ್ರಹಣದಿಂದಲೇ ಪ್ರತಿಯೊಂದು ವ್ಯಕ್ತಿಗೂ ಆನಂದವು ಲಭಿಸುತ್ತದೆ. ಈ ಆನಂದಮಾತ್ರವಿಲ್ಲದಿದ್ದರೆ ಯಾವ ಪ್ರಾಣಿಯು ತಾನೆ ಉಸಿರಾಡುತ್ತಿತ್ತು ಮತ್ತು ಜೀವಿಸುತ್ತಿದ್ದಿತು ? ಈ ಸಾರವೇ ನಿಜವಾದ ಆನಂದವನ್ನು ಕೊಡತಕ್ಕದ್ದು ಎಂದು ಜಗತ್ತಿನ ಜೀವಾತುವಾದ ಪರಬ್ರಹ್ಮನನ್ನು ಪ್ರಶಂಸಿಸಿದೆ. ಹೀಗೆ ಜಗತ್ಪೋಷಕವಾದ ಆತ್ಮನ ಆಶ್ರಯವನ್ನು ಪಡೆಯುವುದು ಸಕಲ ಜಗತ್ತಿನ ಸ್ವಾಭಾವಿಕವಾದ ಆಕಾಂಕ್ಷೆಯಾಗಿದೆ.

**ತತೋ ವಿಷ್ವಙ್ ವ್ಯಕ್ರಾಮತ್** ಎಂದು ಹಿಂದಿನ ಋಕ್ಕಿನಲ್ಲಿರುತ್ತದೆ. **ಸ ಜಾತೋ ಅತ್ಯರಿಚ್ಯತ** ಎಂದು ಈ ಋಕ್ಕಿನ ಪಾದವಾಗಿರುತ್ತದೆ. ಸಾಯಣರು ಎರಡು ಸನ್ನಿವೇಶದಲ್ಲೂ ಒಂದೇ ತಾತ್ಪರ್ಯವನ್ನು ಹೇಳಿವ್ದಾರೆ. **ದೇವತಿರ್ಯಙ್ಮನುಷ್ಯಾದಿರೂಪಃ ಅಭವತ್** ಎಂಬುದೇ ತಾತ್ಪರ್ಯ.

**ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುಃ**

(ಬೃ. ಉ. ೪-೪-೨೨)

ಇತ್ಯಾದಿ ಉಪನಿಷದ್ವಾಕ್ಯಗಳು ಈ ಅಭಿಪ್ರಾಯವನ್ನು ವಿಶದಪಡಿಸುತ್ತವೆ. ಇದರಲ್ಲಿ ಎರಡು ಅಭಿಪ್ರಾಯಗಳು ಸ್ಪಷ್ಟವಾಗಿವೆ. ಸಕಲ ಜಗತ್ತನ್ನೂ ತನ್ನ ರೂಪಾಂತರಗಳಿಂದಲೇ ವ್ಯಾಪಿಸಿಯೂ ಆ ಸಕಲ ಜಗತ್ತನ್ನೂ ಮೀರಿಯೂ ಇರುವ ಪರಮಾತ್ಮನಿಗೂ, ಜಗತ್ತಿಗೂ ಇರುವ ಸಂಬಂಧವು ಎರಡು ವಿಧವಾಗಿರುತ್ತದೆ. ಅವನು ಜಗತ್ತಿಗೆ ರಕ್ಷಕನು ಮತ್ತು ಜಗತ್ತಿಗೆ ನಿಯಾಮಕನು. ಇದರಲ್ಲಿ ಎರಡು ಅಂಶಗಳು ಸೂಚಿತವಾಗಿರುತ್ತವೆ. ಮೊದಲನೆಯದಾಗಿ, ಜಗತ್ತಿಗೆ ಪೋಷಕನಾದ ಈಶ್ವರನು ಸಕಲ ವಸ್ತುಗಳನ್ನೂ ಆಯಾ ನಿರ್ದಿಷ್ಟವಾದ ಸ್ಥಾನದಲ್ಲಿರುವಂತೆ ನಿಯಮಿಸುತ್ತಾನೆ. ಎರಡನೆಯದಾಗಿ ಜಗತ್ತಿಗೆ ನಿಯಾಮಕನಾದ ಈಶ್ವರನು ಸಕಲ ಚೇತನಗಳಿಗೂ ಮಾರ್ಗದರ್ಶಕನಾಗಿ ಆಯಾ ಕರ್ಮಗಳಿಗೆ ಪ್ರಚೋದಿಸುತ್ತಾನೆ ಎಂಬ ಎರಡು ಮುಖ್ಯವಾದ ತಾತ್ಪರ್ಯವಿರುತ್ತದೆ. ಹಿಂದೆ ಅಂತರ್ಯಾಮಿ ಪ್ರಕರಣವನ್ನು (ಬೃ. ಉ. ೩-೭) ವಿವರಿಸುವಾಗ ಈ ವಿಷಯಗಳನ್ನು ವಿವರಿಸಿ ತಿಳಿಸಿದೆ. ಇದರಂತೆಯೇ ಛಾ. ಉ. ೩-೭; ಬೃ. ಉ. ೨-೫ (**ತೇಜೋಮಯ; ಅಮೃತಮಯಃ** ಪುರುಷಃ) ಇತ್ಯಾದಿ ಪ್ರಕರಣಗಳೂ ಇದನ್ನು ವಿವರಿಸುತ್ತವೆ.

**ಮುಖ್ಯಾಭಿಪ್ರಾಯವು**

ಹಿಂದಿನ ಋಕ್ಕಿನಲ್ಲಿ **ವಿಷ್ವಙ್ ವ್ಯಕ್ರಾಮತ್**—ಎಂಬ ವಾಕ್ಯಕ್ಕೆ **ದೇವತಿರ್ಯಗಾದಿರೂಪೇಣ ವಿವಿಧಃ ಸನ್ ವ್ಯಾಪ್ತವಾನ್** । ದೇವತೆಗಳು, ಮನುಷ್ಯರು, ತಿರ್ಯಗ್ಜಂತುಗಳೇ ಮೊದಲಾದ ನಾನಾವಿಧ ಪ್ರಾಣಿವರ್ಗಗಳಿಂದಲೂ, ಅಚೇತನಗಳಾದ ಪರ್ವತಾದಿಗಳಿಂದಲೂ ಕೂಡಿದ ಜಗತ್ತಿನ ರೂಪದಿಂದ ಪರಮಪುರುಷನು ವ್ಯಕ್ತನಾದನು ಎಂದು ಹೇಳಿರುವುದನ್ನೇ ಈ ಋಕ್ಕಿನಲ್ಲಿ ಇನ್ನೂ ವಿಶದವಾಗಿ ವಿವರಿಸಲಾಗಿದೆ—

**ತಸ್ಮಾದ್ವಿರಾಟ್ ಅಜಾಯತ**—ಆ ಪರಮಪುರುಷ ಅಥವಾ ಪರಮಾತ್ಮನಿಂದ ವಿರಾಟ್ ಎಂಬ ಬ್ರಹ್ಮಾಂಡವೇ ದೇಹವಾಗಿವುಳ್ಳ ಒಂದು ದೊಡ್ಡ ಗೋಲಕವು ಅಥವಾ ಪುರುಷನು ಉತ್ಪನ್ನನಾದನು. ವಿರಾಟ್ ಶಬ್ದಕ್ಕೆ **ವಿವಿಧಾನಿ ರಾಜಂತೇ ವಸ್ತೂನ್ಯತ್ರೇತಿ ವಿರಾಟ್** । ನಾನಾವಿಧವಾದ ಚರಾಚರಾತ್ಮಕವಾದ ವಸ್ತುಗಳು ಈ ಬ್ರಹ್ಮಾಂಡದಲ್ಲಿರುವುದರಿಂದ ಇದಕ್ಕೆ ವಿರಾಟ್ ಎಂದು ಹೆಸರು.

**ವಿರಾಜೋ ಅಧಿ ಪೂರುಷಃ—ವಿರಾಡ್ದೇಹಸ್ಯೋಪರಿ ತಮೇವ ದೇಹಮಧಿಕರಣಂ ಕೃತ್ವಾ ಪುರುಷಸ್ತದ್ದೇಹಾಭಿಮಾನೀ ಕಶ್ಚಿತ್ಪುಮಾನಜಾಯತ । ಸೋಽಯಂ ಸರ್ವವೇದ್ಯಃ ಪರಮಾತ್ಮಾ । ಸ ಏವ ಸ್ವಕೀಯಯಾ ಮಾಯಯಾ ವಿರಾಡ್ದೇಹಂ ಬ್ರಹ್ಮಾಂಡರೂಪಂ ಸೃಷ್ಟ್ವಾ ತತ್ರ ಜೀವರೂಪೇಣ ಪ್ರವಿಶ್ಯ ಬ್ರಹ್ಮಾಂಡಾಭಿಮಾನೀ ದೇವತಾತ್ಮಾ ಜೀವೋಽಭವತ್ ।** ಅನಂತರ ವಿರಾಟ್ ಎಂಬ ಬ್ರಹ್ಮಾಂಡದ ಅಭಿಮಾನಿಯಾದ ಒಬ್ಬ ಪುರುಷನು ಉತ್ಪನ್ನನಾದನು. ಎಂದರೆ ಅವ್ಯಕ್ತರೂಪದಿಂದಿದ್ದ ಪರಮಾತ್ಮನಿಂದ ಬ್ರಹ್ಮಾಂಡದೇಹಾಭಿಮಾನಿಯಾದ ಓರ್ವ ಪುರುಷನು ಉತ್ಪನ್ನನಾದನು. ಆ ಪುರುಷನೇ ಬ್ರಹ್ಮಾಂಡವನ್ನು ಸೃಷ್ಟಿಮಾಡಿ ಅದರಲ್ಲಿ ನಾನಾವಿಧ

ಪ್ರಾಣಿಗಳಲ್ಲಿ ಚೈತನ್ಯರೂಪದಿಂದ ಪ್ರವೇಶಮಾಡಿದನು. ಅವ್ಯಕ್ತದಿಂದ ವ್ಯಕ್ತರೂಪವು ಹೇಗೆ ಉದ್ಭವಿಸಿತು ಎಂಬ ವಿಷಯವು ಋಗ್ವೇದದಲ್ಲಿಯೂ, ಉಪನಿಷತ್ತುಗಳಲ್ಲಿಯೂ ಈ ರೀತಿ ವರ್ಣಿಸಿದೆ.

**ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ ।**

(ಋ. ಸಂ. ೧೦-೭೨-೨)

**ದೇವಾನಾಂ ಯುಗೇ ಪ್ರಥಮೇಽಸತಃ ಸದಜಾಯತ ।**

(ಋ. ಸಂ. ೧೦-೭೨-೩)

ಎಂಬ ಋಕ್ಕುಗಳಲ್ಲಿ **ಅಸತ್, ಸತ್** ಎಂಬ ಶಬ್ದಪ್ರಯೋಗಗಳಿವೆ. **ಅಸತ್** ಎಂದರೆ ಅವ್ಯಕ್ತವು, **ಸತ್** ಎಂದರೆ ವ್ಯಕ್ತವು. **ಅಸತಃ ಸದಜಾಯತ** ಎಂದರೆ ಅವ್ಯಕ್ತಸ್ವರೂಪದಿಂದ ವ್ಯಕ್ತಸ್ವರೂಪವಾದ ಜಗದಾದಿಗಳ ಉತ್ಪತ್ತಿಯಾಯಿತು ಎಂದು ಇಲ್ಲಿ ಹೇಳಿದೆ. ಈ ವಿಷಯವು ತೈತ್ತಿರೀಯೋಪನಿಷತ್ತಿನಲ್ಲಿ ಇನ್ನೂ ವಿಶದವಾಗಿ ವಿವರಿಸಲ್ಪಟ್ಟಿದೆ.

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಗ್ಂ ಸ್ವಯಮಕುರುತ । ತಸ್ಮಾತ್ತತ್ಸುಕೃತಮುಚ್ಯತ ಇತಿ ॥**

(ತೈ. ಉ. ೨-೭)

ಸೃಷ್ಟಿಗೆ ಪೂರ್ವದಲ್ಲಿ ಎಂದರೆ ಹಿಂದಿನ ಕಲ್ಪದಲ್ಲಿ ಸೃಷ್ಟಿಯಾಗಿದ್ದ ಜಗದಾದಿಗಳ ಸಂಹಾರಾನಂತರ ಲಯಕಾಲದಲ್ಲಿ ನಾಮರೂಪಸಹಿತವಾದ ಈ ಜಗದಾದಿಗಳು ಯಾವುವೂ ಇರಲಿಲ್ಲ **ಅಸತ್** ಎಂದು ಕರೆಯಲ್ಪಡುವ ಪರಮಾತ್ಮನ ಅವ್ಯಕ್ತಸ್ವರೂಪಮಾತ್ರವಿದ್ದಿತು. ಸೃಷ್ಟಿಕಾಲದಲ್ಲಿ ಅದೇ ಅವ್ಯಕ್ತಸ್ವರೂಪವು (ಎಂದರೆ ಅದರಲ್ಲಿ ಸ್ವಲ್ಪಭಾಗವು) ವ್ಯಕ್ತರೂಪವಾಗಿ ಪರಿವರ್ತಿತವಾಯಿತು. ಇದನ್ನೇ ನಾಮರೂಪಸಹಿತವಾದ ಸತ್ ಅಥವಾ ಜಗತ್ತು ಎಂದು ಕರೆಯುವರು. ಇಲ್ಲಿ ಅವ್ಯಕ್ತವೇ ಬೇರೆ ವ್ಯಕ್ತವೇ ಬೇರೆ ಎಂದು ಎರಡು ವಸ್ತುಗಳಿಲ್ಲ. ಅವ್ಯಕ್ತಸ್ವರೂಪದಿಂದಿರುವ ಆ ಆತ್ಮನೇ ಅಥವಾ ಪರಮಾತ್ಮನೇ (ಸ್ವಯಂ) ತಾನೇ ತನ್ನನ್ನು ಜಗದಾದಿರೂಪಗಳಾಗಿ ಪರಿವರ್ತಿಸಿಕೊಂಡನು ಎಂದಭಿಪ್ರಾಯವು. ಈ ಜಗದಾದಿಗಳು ಹೇಗೆ ಆತ್ಮನಿಂದ ಪರಿವರ್ತಿತವಾಯಿತು ಎಂದರೆ,

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥**

(ತೈ. ಉ. ೨-೧)

ಅವ್ಯಕ್ತಸ್ವರೂಪದಿಂದಿದ್ದ ಆತ್ಮನಿಂದ (ಪರಮಾತ್ಮನಿಂದ) ಮೊದಲು ಆಕಾಶವು ಉತ್ಪನ್ನವಾಯಿತು. ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಉದಕವೂ, ಉದಕದಿಂದ ಪೃಥಿವಿಯೂ ಉತ್ಪನ್ನವಾದವು. ಪೃಥಿವಿಯಿಂದ ನಾನಾವಿಧ ಓಷಧಿಗಳ (ಸಸ್ಯವರ್ಗ ಮತ್ತು ವೃಕ್ಷಗಳ) ಉತ್ಪತ್ತಿಯಾಯಿತು. ಈ ಓಷಧಿ ವರ್ಗದಿಂದ ಪ್ರಾಣಿಗಳು ಭುಜಿಸಲು ಅರ್ಹವಾದ ಆಹಾರವೂ, ಆ ಆಹಾರದಿಂದ ಮನುಷ್ಯರೇ ಮೊದಲಾದ ಪ್ರಾಣಿಗಳೂ ಉತ್ಪನ್ನವಾದವು ಎಂದು ಸೃಷ್ಟಿಯ ಕ್ರಮವನ್ನು ಒಂದಾಗುತ್ತಲೊಂದನ್ನು ವಿವರಿಸಿದೆ. ಅನಂತರ—

**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್‌ಂ ಸರ್ವಮಸೃಜತ ।**

(ತೈ. ಉ. ೨-೬)

ಪರಮಾತ್ಮನು ಸೃಷ್ಟಿಗೆ ಪೂರ್ವದಲ್ಲಿ ಒಬ್ಬನೇ ಇದ್ದನು. ಅವ್ಯಕ್ತರೂಪದಿಂದಿದ್ದ ಇವನನ್ನು ಬಿಟ್ಟು ಇನ್ನಾವ ವಸ್ತುವೂ ಆಗ ಇರಲಿಲ್ಲ. ಆಗ ತಾನು ಅನೇಕ ರೂಪಗಳಾಗಿ ಆಗಬೇಕೆಂಬ ಇಚ್ಛೆಯು ಆ ಪರಮಾತ್ಮನಲ್ಲಿ ಉದಯಿಸಿತು. ಅದಕ್ಕಾಗಿ ಅವನು ತಪಸ್ಸನ್ನಾಚರಿಸಿದನು. ಇಲ್ಲಿ ತಪಸ್ಸೆಂದರೆ ಧ್ಯಾನಮಾತ್ರ. ಅವನ ಧ್ಯಾನ ಅಥವಾ ಸಂಕಲ್ಪ ಮಾತ್ರದಿಂದ ಈ ಸಮಸ್ತ ಜಗತ್ತನ್ನೂ ಸೃಷ್ಟಿಸಿದನು ಎಂದಿದೆ.

ಈ ಸೃಷ್ಟಿಯಲ್ಲಿ ಒಂದು ಕ್ರಮವಿರುವುದನ್ನು ಇಲ್ಲಿ ಗಮನಿಸಬಹುದು. ಆತ್ಮನು ಅವ್ಯಕ್ತಸ್ವರೂಪದಲ್ಲಿರುವಾಗ ಅವನು ದೃಷ್ಟಿಗೋಚರನಲ್ಲ. ಬಹಳ ಸೂಕ್ಷ್ಮಾವಸ್ಥೆಯಲ್ಲಿರುವನು. ಆ ಅವ್ಯಕ್ತವು ಸ್ಥೂಲರೂಪವಾದ ಜಗದಾದಿಗಳಾಗಿ ಪರಿವರ್ತಿತವಾಗುವಾಗ ಒಂದೇ ಸಲ ಆ ರೀತಿ ಆಗುವುದಿಲ್ಲ. ಅತಿಸೂಕ್ಷ್ಮವಾಗಿರುವ ಅವ್ಯಕ್ತವು ಸ್ವಲ್ಪಮಟ್ಟಿಗೆ ತನ್ನ ಸೂಕ್ಷ್ಮಾವಸ್ಥೆಯನ್ನು ಕಡಿಮೆಮಾಡಿಕೊಂಡು ಆಕಾಶವಾಗಿ ಪರಿವರ್ತಿತವಾಗುವುದು ಎಂದರೆ ಆಕಾಶವೂ ಸಹ ಕಣ್ಣಿಗೆ ಕಾಣಿಸದಿದ್ದರೂ ಅದು ಅವ್ಯಕ್ತಾವಸ್ಥೆಗಿಂತ ಸ್ಥೂಲರೂಪದಲ್ಲಿರುವುದು ಎಂದು ತಿಳಿಯಬೇಕು. ಇಲ್ಲಿ ಆಕಾಶವೆಂದರೆ (ether) ಶೂನ್ಯವಲ್ಲ. ಅದು ಸೂಕ್ಷ್ಮರೂಪದಲ್ಲಿರುವ ವಸ್ತುವಿಶೇಷವೆಂದೇ ತಿಳಿಯಬೇಕು. ಹೇಗೆಂದರೆ,

ಆಧುನಿಕವಿಜ್ಞಾನಿಗಳು (Scientists) ವಿಶ್ವದಲ್ಲಿರುವ ಸಮಸ್ತವಸ್ತುಗಳು (matter) ಮೂರುವಿಧ ಅವಸ್ಥೆಗಳಲ್ಲಿ ಎಂದರೆ ಘನ (Solid) ದ್ರವ (Liquid) ಆವಿ (gas) ಎಂಬ ರೂಪಗಳಲ್ಲಿರುವವು ಎಂದು ನಿರ್ಧರಿಸಿದಾರೆ. ಆದರೆ ಇದು ಹಿಂದಿನ ಮಾತು. ಈಚಿಗೆ ನಡೆದ ಅಥವಾ ನಡೆಯುತ್ತಿರುವ ಸಂಶೋಧನೆಗಳಿಂದ ವಸ್ತುವು ಈ ಮೂರು ರೂಪಗಳಲ್ಲಲ್ಲದೆ ಬೇರೆರೂಪದಲ್ಲಿಯೂ ಇರಬಹುದೆಂಬ ಸಂಗತಿಯು ವ್ಯಕ್ತಪಟ್ಟಿದೆ. ವಸ್ತುವು ಮೇಲೆ ಹೇಳಿದ ಮೂರು ರೂಪಗಳಲ್ಲಿ ಕೆಲವು ಗೊತ್ತಾದ ನಿಯಮಗಳಿಗೆ ಒಳಪಟ್ಟು ಆಯಾ ಅವಸ್ಥೆಗಳಲ್ಲಿರುವುದಲ್ಲದೆ ಒಂದು ರೂಪದಿಂದ ಮತ್ತೊಂದು ರೂಪಕ್ಕೆ ಪರಿವರ್ತಿಸಬಹುದಾಗಿದೆ. ವಸ್ತುವು ಈ ಮೂರು ಅವಸ್ಥೆಗಳನ್ನು ದಾಟಿ ಎಂದರೆ ಅವೆಗಿಂತಲೂ ಸೂಕ್ಷ್ಮಾವಸ್ಥೆಯಲ್ಲಿದ್ದರೆ ಆಗ ಆ ವಸ್ತುವು ಮೇಲಿನ ಮೂರುವಿಧ ಅವಸ್ಥೆಗಳ ನಿಯಮಗಳಿಗೆ ಒಳಪಡುವುದಿಲ್ಲ. ಎಂದರೆ ಅವರ ಮತದಂತೆ ವಸ್ತುವೆಂದೇ ಪರಿಗಣಿಸಲ್ಪಡುವುದಿಲ್ಲ. ಎಂದರೆ ವಸ್ತುವೂ (matter) ಶಕ್ತಿಯೂ (energy) ಬೇರೆ ಬೇರೆಯೆಂದು ಪರಿಗಣಿಸಲಾಗಿತ್ತು ಈಗ ವಸ್ತುವು ಶಕ್ತಿಯಾಗಿಯೂ, ಶಕ್ತಿಯು ವಸ್ತುವಾಗಿಯೂ ಪರಿವರ್ತಿತವಾಗಲು ಸಾಧ್ಯವೆಂದು ಒಪ್ಪಬೇಕಾಗಿದೆ. ಅತ್ಯಂತ ಸೂಕ್ಷ್ಮವಾದ ವಸ್ತುವಿನ ಕಣವು (atom) ವಿಭಾಗಿಸಲ್ಪಟ್ಟರೆ ಅದು ವಸ್ತುವಾಗಿಯೇ ಉಳಿಯುವುದಿಲ್ಲ. ವಸ್ತುವಿನ ಗುಣಗಳು ಅದಲ್ಲಿರುವುದಿಲ್ಲ. ಮತ್ತು ವಸ್ತುವಿನ ನಿಯಮಗಳಿಗೆ ಒಳಪಡುವುದಿಲ್ಲ. ಎಂದರೆ ವಿಭಾಗಿಸಲ್ಪಟ್ಟ ಕಣವು (atom) ಶಕ್ತಿಯಾಗಿ (energy) ಪರಿಣಮಿಸುವುದು. ಅದರ ಗುಣಗಳು ಬೇರೆಯಾಗಿ ಬೇರೆ ನಿಯಮಗಳಿಗೆ ಒಳಪಟ್ಟಿರುವವು, ಆದರೂ ಪ್ರಾಚೀನರು ಇದನ್ನು ಎಂದರೆ ಶಕ್ತಿಯನ್ನು (energy) ವಸ್ತುವಿನ ನಾಲ್ಕನೆಯ ಅವಸ್ಥೆಯೆಂದು ಹೇಳುವರು ಪಂಚಭೂತಗಳಲ್ಲಿ ಇದಕ್ಕೆ ತೇಜಸ್ಸೆಂದು ಹೆಸರು. ಈ ಶಕ್ತಿಯು (energy) ಬೆಂಕಿಯ ಔಷ್ಣ್ಯ, ಸೂರ್ಯರಶ್ಮಿ, ವಿದ್ಯುತ್ತು ಮೊದಲಾದ ಅನೇಕ ರೂಪಗಳಲ್ಲಿರಬಲ್ಲದು. ಇದಕ್ಕಿಂತಲೂ ಸೂಕ್ಷ್ಮವಾದ ವಸ್ತುವಿಕಾರಕ್ಕೆ ಆಕಾಶವೆಂದು (ether) ಹೆಸರು. ಸಮಸ್ತವಸ್ತುಗಳೂ ಈ ಐದುವಿಧವಾದ ಅವಸ್ಥೆ ಅಥವಾ ರೂಪಗಳಲ್ಲಿರಬಲ್ಲವೆಂದು ಪ್ರಾಚೀನರ

ಮತ. ಇವುಗಳನ್ನೇ ಉಪನಿಷದಾದಿಗಳಲ್ಲಿ ಹೇಳಿರುವ ಆಕಾಶ, ವಾಯು, ತೇಜಃ, ಆಪ, ಪೃಥಿವೀ ಎಂಬ ಪಂಚಭೂತಗಳು. ಇವುಗಳಲ್ಲಿ ಒಂದಕ್ಕಿಂತ ಮತ್ತೊಂದು ಸ್ಥೂಲವಾಗಿರುವವು. ಎಂದರೆ ಆಕಾಶಕ್ಕಿಂತ ವಾಯುವೂ, ವಾಯುವಿಗಿಂತ ತೇಜಸ್ಸೂ, ತೇಜಸ್ಸಿಗಿಂತ ಉದಕವೂ, ಉದಕಕ್ಕಿಂತ ಪೃಥ್ವಿಯೂ ಹೆಚ್ಚು ಸ್ಥೂಲವಾಗಿರುವವು. ಅವ್ಯಕ್ತಸ್ವರೂಪವು ಕ್ರಮ ಕ್ರಮವಾಗಿ ಈ ಅವಸ್ಥೆಗಳನ್ನು ಹೊಂದಿ ಕೊನೆಯದಾದ ಪೃಥ್ವಿ (ಘನ) ರೂಪವನ್ನು ಪಡೆಯಿತು. ಪೃಥ್ವಿಯಿಂದ ಓಷಧ್ಯಾದಿಸಸ್ಯವರ್ಗವೂ ಅದರಿಂದ ಪ್ರಾಣಿವರ್ಗವೂ ಉತ್ಪನ್ನವಾಯಿತು. ಈ ಕ್ರಮವು ಆಧುನಿಕತತ್ತ್ವಕ್ಕೆ (Evolntion) ಹೊಂದಿಕೊಂಡು ಇದೆ.

ಈ ಪಂಚಭೂತಗಳ ಸೃಷ್ಟಿಯಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಅವ್ಯಕ್ತದ ಸ್ವಲ್ಪಭಾಗವು ಆಕಾಶವಾಗಿ ಪರಿವರ್ತಿತವಾಯಿತಷ್ಟೆ. ಪುನಃ ಆ ಆಕಾಶವು ವಾಯೂರೂಪವಾಗಿ ಪರಿವರ್ತಿತವಾದಾಗ ಆಕಾಶವೆಲ್ಲಾ ವಾಯುರೂಪವಾಗಿ ಪರಿವರ್ತಿತವಾಗಲಿಲ್ಲ. ಆಕಾಶದಲ್ಲಿ ಕೆಲವು ಭಾಗ ಹಾಗೆಯೇ ಇದ್ದು ಕೆಲವು ಭಾಗ ಮಾತ್ರ ವಾಯುವಿನ ರೂಪವನ್ನು ಪಡೆಯಿತು. ಅದರಂತೆಯೇ ವಾಯುವು ತೇಜಸ್ಸಾಗಿ ಪರಿವರ್ತಿತವಾದಾಗ ವಾಯುವಿನ ಕೆಲವು ಭಾಗಮಾತ್ರ ತೇಜಸ್ಸಾಗಿ ಪರಿವರ್ತಿತವಾಯಿತು. ಇದರಂತೆಯೇ ಉದಕ ಮತ್ತು ಪೃಥ್ವಿಗಳ ಪರಿವರ್ತನೆಯು. ಆದ್ದರಿಂದ ಪ್ರಪಂಚದಲ್ಲಿ ಆಕಾಶವು ಬಹುಭಾಗದಲ್ಲಿರುವುದು ಅದಕ್ಕಿಂತ ಸ್ವಲ್ಪ ಕಡಿಮೆ ಭಾಗದಲ್ಲಿ ವಾಯುವೂ ಅದಕ್ಕಿಂತ ಅಲ್ಪಭಾಗದಲ್ಲಿ ತೇಜಸ್ಸೂ, ಅದಕ್ಕಿಂತ ಅಲ್ಪಭಾಗದಲ್ಲಿ ಉದಕವೂ ಅದಕ್ಕಿಂತ ಅಲ್ಪಭಾಗದಲ್ಲಿ ಪೃಥ್ವಿಯೂ ಇರುವುದೆಂದು ತಿಳಿಯಬೇಕು. ಇದಲ್ಲದೆ ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವಿರುವುದು ವಾಯುವಿನಲ್ಲಿ (ಇದು ಆಕಾಶದ ಪರಿವರ್ತವಾಗಿರುವುದರಿಂದ) ಶಬ್ದ ಮತ್ತು ಸ್ಪರ್ಶವೆಂಬ ಎರಡು ಗುಣಗಳಿರುವವು. ತೇಜಸ್ಸಿನಲ್ಲಿ (ಇದರಲ್ಲಿ ಆಕಾಶ, ವಾಯು ಇವೆರಡೂ ಸೇರಿರುವುದರಿಂದ) ಹಿಂದಿನ ಶಬ್ದಸ್ಪರ್ಶಗಳ ಜತೆಗೆ ರೂಪವೂ ಸೇರಿ ಮೂರು ಗುಣಗಳಿರುವವು. ಉದಕದಲ್ಲಿ ಇದರಂತೆಯೇ ಹಿಂದಿನ ಮೂರು ಗುಣಗಳಾದ ಶಬ್ದಸ್ಪರ್ಶರೂಪಗಳ ಜತೆಗೆ ರಸ (ದ್ರವತ್ವ)ವೂ ಸೇರಿರುವುದು. ಪೃಥ್ವಿಯಲ್ಲಿ (ಎಂದರೆ ಘನಪದಾರ್ಥದಲ್ಲಿ) ಹಿಂದಿನ ಶಬ್ದಸ್ಪರ್ಶ ರೂಪ, ರಸವೆಂಬ ನಾಲ್ಕು ಗುಣಗಳ ಜತೆಗೆ ಗಂಧ (ವಾಸನೆ) ಯೆಂಬ ಗುಣವೂ ಸೇರಿ ಅದು ಐದು ಗುಣಗಳನ್ನೊಳಗೊಂಡಿರುವುದು. ಮೇಲೆ ಹೇಳಿದ ಐದು ಪಂಚಭೂತಗಳಲ್ಲಿ ಆಕಾಶ, ವಾಯು ತೇಜಸ್ಸು (energy) ಗಳಲ್ಲಿ ರೂಢಿಯಲ್ಲಿರುವ ಸಾಮಾನ್ಯಾರ್ಥವೇ ಇದೆ ಎಂದರೆ ವಸ್ತುವು ಈ ಮೂರು ರೂಪಗಳಲ್ಲಿರುವಾಗ ಕಣ್ಣಿಗೆ ಕಾಣಿಸುವುದಿಲ್ಲ. ಸೂಕ್ಷ್ಮರೂಪದಲ್ಲಿರುವವು. ಒಂದಕ್ಕಿಂತ ಮತ್ತೊಂದು ಸ್ವಲ್ಪಸ್ವಲ್ಪ ಸ್ಥೂಲವಾಗಿದ್ದರೂ ಒಟ್ಟನಲ್ಲಿ ಈ ಮೂರೂ ಸೂಕ್ಷ್ಮರೂಪಗಳೆಂದೇ ಹೇಳಬೇಕು. ಉದಕ ಮತ್ತು ಪೃಥ್ವಿಯ ವಿಷಯದಲ್ಲಿ ಇವೆರಡೂ ಕಣ್ಣಿಗೆ ಕಾಣಿಸುವ ವಸ್ತುಗಳಾದ್ದರಿಂದ ಒಂದಕ್ಕಿಂತ ಮತ್ತೊಂದು ಸ್ಥೂಲವಾಗಿರುವುದೆಂದು ಅನುಭವದಿಂದಲೇ ಹೇಳಬಹುದು. ಇಲ್ಲಿ ಉದಕ ಅಥವಾ ಆಪ ಎಂದರೆ ನೀರು ಎಂದು ಮಾತ್ರ ಅರ್ಥವಲ್ಲ. ದ್ರವರೂಪದಲ್ಲಿರುವ ವಸ್ತುವು ಎಂದರ್ಥವು. ನೀರು ಯಾವಾಗಲೂ (ಎಂದರೆ ಉಷ್ಣದೇಶಗಳಲ್ಲಿ) ಬಹುಭಾಗವು ದ್ರವರೂಪದಲ್ಲಿರುವುದರಿಂದ ದ್ರವರೂಪದಲ್ಲಿರುವ ವಸ್ತುವನ್ನು ನಿರ್ದೇಶಿಸುವುದಕ್ಕಾಗಿ ಉಪನಿಷದಾದಿಗಳಲ್ಲಿ ಆಪಃ ಎಂಬ ಶಬ್ದವನ್ನು ಉಪಯೋಗಿಸಲಾಗಿದೆ. ಅದರಂತೆಯೇ ಘನಪದಾರ್ಥವನ್ನು (ಘಟ್ಟಿಯಾದ ವಸ್ತುವನ್ನು) ನಿರ್ದೇಶಿಸುವುದಕ್ಕಾಗಿ ಪೃಥಿವೀ ಎಂಬ ಶಬ್ದದ ಪ್ರಯೋಗವಿದೆ. ಈ ರೀತಿಯಾದ ಪಂಚಭೂತಗಳ ಸೃಷ್ಟಿಕ್ರಮವನ್ನು ಪುರಾಣಾದಿಗಳಲ್ಲಿ ಪಂಚೀಕರಣವಿಧಾನವೆಂದು ಕರೆಯಲಾಗಿದೆ. ಈ ಪಂಚಭೂತಗಳನ್ನು (ಎಂದರೆ ಈ ಐದುವಿಧ ಅವಸ್ಥೆಗಳಲ್ಲಿರುವ ಬೇರೆ ಬೇರೆ ವಸ್ತುಗಳನ್ನು) ಬೇರೆ ಬೇರೆ ಪ್ರಮಾಣದಲ್ಲಿ ಸೇರಿಸಿದರೆ ಬೇರೆ ಬೇರೆ ವಸ್ತುಗಳಾಗಿ ಪರಿಣಮಿಸುವವು. ಹೇಗೆಂದರೆ–ಚಿನ್ನಕ್ಕೂ,

ಸೀಸಕ್ಕೂ ವ್ಯತ್ಯಾಸವೇನೆಂದರೆ—ಎರಡು ಲೋಹಗಳೂ ಒಂದೇ ಮೂಲವಸ್ತುವಿನಿಂದ ಉತ್ಪನ್ನವಾಗಿದ್ದರೂ ಅವುಗಳಲ್ಲಿರುವ ಕಣಗಳ ಒಳರಚನೆಯು ಅಥವಾ ಪಂಚಭೂತಗಳು ಬೇರೆ ಬೇರೆ ಪ್ರಮಾಣದಲ್ಲಿ ಮಿಶ್ರವಾಗಿರುವಿಕೆಯೇ ಅವುಗಳು ಬೇರೆ ಬೇರೆ ಲೋಹಗಳಾಗಿರುವುದಕ್ಕೆ ಕಾರಣವಾಗಿದೆ. ಇದರಂತೆಯೇ ಎಲ್ಲಾ ವಸ್ತುಗಳ ವಿಷಯವೂ ಎಂದು ತಿಳಿಯಬೇಕು.

ಇನ್ನು ಈ ಋಕ್ಕಿನ ಉತ್ತರಾರ್ಧದಲ್ಲಿರುವ **ಸ ಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋ ಪುರಃ** ಎಂಬ ಎರಡು ವಾಕ್ಯಗಳಲ್ಲಿರುವ ಅರ್ಥವನ್ನು ಪರಿಶೀಲಿಸಬಹುದು. **ಸ ಜಾತೋ ಅತ್ಯರಿಚ್ಯತ** ಎಂಬ ವಾಕ್ಯದಲ್ಲಿ ಆ ಪರಮಾತ್ಮನು ಜಗದಾದಿಯಾಗಿ ಪರಿವರ್ತಿತನಾದಾಗ ಅವನು ತನ್ನ ಸಹಜಾವಸ್ಥೆಯಾದ ಅವ್ಯಕ್ತಸ್ವರೂಪಕ್ಕಿಂತಲೂ ಅತಿರಿಕ್ತವಾದ ಎಂದರೆ ಬೇರೆಯಾದ ಅವಸ್ಥೆಯನ್ನು ಹೊಂದಿದನು ಎಂಬರ್ಥವಿರುವುದು. ಎಂದರೆ ಕಣ್ಣಿಗೆ ಕಾಣಿಸದಿರುವ ಅವ್ಯಕ್ತಾವಸ್ಥೆಗಿಂತಲೂ ಬೇರೆಯಾದುದೂ ನಾಮರೂಪಗಳಿಂದ ಸಹಿತವಾದುದೂ, ದೃಷ್ಟಿಗೆ ಗೋಚರವಾಗುವುದೂ ಆದ ಜಗದಾದಿರೂಪಗಳನ್ನು ಹೊಂದಿದನು ಎಂದರೆ—ಒಂದು ಕಣ್ಣಿಗೆ ಕಾಣದಿರುವ ಅವ್ಯಕ್ತವು ಮತ್ತೊಂದು ಕಣ್ಣಿಗೆ; ಕಾಣಿಸುವ ವ್ಯಕ್ತರೂಪವು. ಅವ್ಯಕ್ತವನ್ನು ಬಿಟ್ಟು ವ್ಯಕ್ತರೂಪನಾಗಿ ಗೋಚರಿಸಿದನು ಎಂದಭಿಪ್ರಾಯವು. ಅವ್ಯಕ್ತ ಸ್ವರೂಪದಲ್ಲಿ ನಾಮರೂಪಗಳಿಲ್ಲದೆ ಎಲ್ಲವೂ ಒಂದೇ ವಿಧವಾಗಿರುವುದು. ಸಮುದ್ರದಲ್ಲಿರುವ ನೀರಿನಂತೆ. ವ್ಯಕ್ತರೂಪದಲ್ಲಿ ದೇವತೆಗಳು, ಮನುಷ್ಯರು, ತಿರ್ಯಗ್ಜಂತುಗಳು, ಅಚರಾತ್ಮಕವಾದ ಪರ್ವತಾದಿಗಳು ಇತ್ಯಾದಿಯಾಗಿ ನಾನಾ ವಸ್ತುಗಳಿರುವವು. ಸಮುದ್ರದ ನೀರಿನಿಂದಲೇ ಉಂಟಾದ ಗಂಗಾದಿ ನಾನಾನದಿಗಳಂತೆ. ಸಮುದ್ರದ ನೀರು ಗಂಗಾದಿ ನಾನಾನದಿಗಳ ರೂಪದಲ್ಲಿರುವಾಗ ಅವು ಬೇರೆಬೇರೆ ನದಿಗಳಂತೆಯೂ, ಸರೋವರಗಳಂತೆಯೂ, ಇತರ ಜಲಾಶಯ ಗಳಂತೆಯೂ ಬೇರೆಬೇರೆ ಹೆಸರುಗಳನ್ನೂ, ಆಕಾರಗಳನ್ನೂ ಪಡೆದಿರುವವು. ಆದರೆ ಆ ನದಿಗಳೆಲ್ಲವೂ ಸಮುದ್ರವನ್ನು ಸೇರಿದ ಮೇಲೆ ಅವುಗಳ ನೀರೆಲ್ಲವೂ ಸಮುದ್ರದ ನೀರಿನೊಡನೆ ಮಿಶ್ರವಾಗಿ ಎಲ್ಲವೂ ಸಮುದ್ರವೆಂಬ ಒಂದೇ ಹೆಸರಿನಿಂದ ಸೂಚಿಸಲ್ಪಡುವವು. ಆ ಸಮುದ್ರದಲ್ಲಿ ಸೇರಿಹೋದ ನೀರಿನಲ್ಲಿ ಗಂಗಾನದಿಯ ನೀರು ಯಾವುದು ? ಸಿಂಧೂನದಿಯ ನೀರು ಯಾವುದು ? ಎಂದು ಪ್ರತ್ಯೇಕವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಇದರಂತೆಯೇ ಅವ್ಯಕ್ತಾವಸ್ಥೆ ಯಲ್ಲಿ ನಾಮರೂಪಗಳೊಂದೂ ಇರುವುದಿಲ್ಲ. ಒಂದೇ ಒಂದು ಸ್ವರೂಪಮಾತ್ರವಿರುವುದು. ವ್ಯಕ್ತಾವಸ್ಥೆಯಲ್ಲಿ ನಾನಾ ರೂಪಗಳಿರುವವು. ಅವುಗಳಿಗೆಲ್ಲಾ ಪ್ರತ್ಯೇಕವಾದ ರೂಪಗಳೂ, ಹೆಸರುಗಳೂ ಇರುವವು, ಲಯಕಾಲದಲ್ಲಿ ಅವು ಆತ್ಮನಲ್ಲಿ ಸೇರಿಹೋಗಿ ಐಕ್ಯವಾದಾಗ ಅವುಗಳು ತಮ್ಮ ಪ್ರತ್ಯೇಕತೆಯನ್ನು ಎಂದರೆ ನಾಮರೂಪಗಳನ್ನು ಕಳೆದುಕೊಂಡು ಅವ್ಯಕ್ತವೆಂಬ ಒಂದೇ ವಸ್ತುವಾಗಿ ಪ್ರಕಾಶಿಸುವುದು ಎಂದಭಿಪ್ರಾಯವು.

**ಪಶ್ಚಾದ್ಭೂಮಿಮಥೋ ಪುರಃ**—ಹಿಂದೆ ಹೇಳಿದಂತೆ ದೇವಮನುಷ್ಯಾದಿ ಜೀವರುಗಳನ್ನು ಸೃಷ್ಟಿಸಿದನಂತರ ಅವರು ವಾಸಿಸುವುದಕ್ಕಾಗಿ ಈ ಭೂಮಿಯನ್ನು ಸೃಷ್ಟಿಸಿದನು. [ಇಲ್ಲಿ ಭೂಮಿಯೆಂದರೆ ಭೂಲೋಕಮಾತ್ರವಲ್ಲ. ಭೂಮಿ, ಅಂತರಿಕ್ಷ, ಸ್ವರ್ಗ ಎಂಬ ಲೋಕತ್ರಯಗಳು. ಅವುಗಳಲ್ಲಿ ವಾಸಿಸುವ ಜೀವರುಗಳೂ, ಪರ್ವತಾದಿಗಳೂ ಎಂದರ್ಥವು. ಈ ಲೋಕಗಳ ಸೃಷ್ಟಿಯಾದನಂತರ ದೇವಮನುಷ್ಯಾದಿಗಳ ನಾನಾವಿಧವಾದ ಶರೀರಗಳನ್ನೂ ಸೃಷ್ಟಿ ಮಾಡಿದನು. ಇಲ್ಲಿ **ಪುರಃ** ಎಂಬ ಶಬ್ದಕ್ಕೆ ಸಾಯಣರು **ಪೂರ್ಯಂತೇ ಸಪ್ತಭಿರ್ಧಾತುಭಿರಿತಿ ಪುರಃ ಶರೀರಾಣಿ** ಸಪ್ತಧಾತುಗಳಿಂದ ನಿರ್ಮಿತವಾಗಿರುವುದರಿಂದ **ಪುರಃ** ಎಂದರೆ ಶರೀರಗಳು ಎಂದು ಅರ್ಥವಿವರಣೆಮಾಡಿದಾರೆ. ಭೂಮಿಯನ್ನು ಸೃಷ್ಟಿಮಾಡಿದ ಮೇಲೆ ನಾನಾವಿಧಶರೀರಗಳನ್ನು ಎಂದರೆ ದೇವತೆಗಳಿಗೂ ಮನುಷ್ಯರಿಗೂ ಇತರ ಪ್ರಾಣಿ

ಗಳಿಗೂ ಅವಶ್ಯಕವಾದ ವಿಧವಿಧವಾದ ಶರೀರಗಳನ್ನು ಸೃಷ್ಟಿಮಾಡಿದನು. ಸೃಷ್ಟಿಮಾಡಿ ಆ ಶರೀರಾದಿಗಳಲ್ಲಿ ಆ ಪರಮಾತ್ಮನು ಚೈತನ್ಯರೂಪದಿಂದ ಪ್ರವೇಶಿಸಿದನು. **ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ** । ಪ್ರಾಣಿಗಳ ಶರೀರದಲ್ಲಿ ಗೂಢವಾಗಿ ಪ್ರವಿಷ್ಟನಾಗಿ ಅವುಗಳ ಚಲನವಲನಾದಿಗಳನ್ನು ಪರಮಾತ್ಮನೇ ಪ್ರೇರಿಸುವನು ಎಂದು ಶ್ರುತಿಯು ಸಮರ್ಥಿಸುವುದು. **ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್** ಎಂಬ ಉಪನಿಷದ್ವಾಕ್ಯದಲ್ಲಿ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಿ ಅದರಲ್ಲಿ ತಾನು ಅಂತರಾತ್ಮನಾಗಿ ಪ್ರವೇಶಿಸಿದನು ಎಂದು ವಿವರಿಸಿದೆ.



॥ ಸಂಹಿತಾಪಾಠಃ ॥

**ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।**

**ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥**

॥ ಪದಪಾಠಃ ॥

ಯತ್ । ಪುರುಷೇಣ । ಹವಿಷಾ । ದೇವಾಃ । ಯಜ್ಞಂ । ಅತನ್ವತ ।

ವಸಂತಃ । ಅಸ್ಯ । ಆಸೀತ್ । ಆಜ್ಯಂ । ಗ್ರೀಷ್ಮಃ । ಇಧ್ಮಃ । ಶರತ್ । ಹವಿಃ ॥ ೬ ॥

॥ ಸಾಯಣಭಾಷ್ಯಂ ॥

ಯದ್ಯದಾ ಪೂರ್ವೋಕ್ತಕ್ರಮೇಣೈವ ಶರೀರೇಷೂತ್ಪನ್ನೇಷು ಸತ್ಸು ದೇವಾ ಉತ್ತರಸೃಷ್ಟಿಸಿದ್ಧ್ಯರ್ಥಂ ಬಾಹ್ಯದ್ರವ್ಯಸ್ಯಾನುತ್ಪನ್ನತ್ವೇನ ಹವಿರಂತರಾಸಂಭವಾತ್ಪುರುಷಸ್ವರೂಪೇಣ ಮಾನಸಾ ಹವಿಷ್ಟ್ವೇನ ಸಂಕಲ್ಪ್ಯ ಪುರುಷೇಣ ಪುರುಷಾಖ್ಯೇನ ಹವಿಷಾ ಮಾನಸಂ ಯಜ್ಞಮತನ್ವತ ಅನ್ವತಿಷ್ಠನ್। ತದಾನೀಮಸ್ಯ ಯಜ್ಞಸ್ಯ ವಸಂತೋ ವಸಂತರ್ತುರೇವಾಜ್ಯಮಾಸೀತ್ । ಅಭೂತ್ । ತಮೇವಾಜ್ಯತ್ವೇನ ಸಂಕಲ್ಪಿತವಂತ ಇತ್ಯರ್ಥಃ । ಏವಂ ಗ್ರೀಷ್ಮ ಇಧ್ಮ ಆಸೀತ್ । ತಮೇವೇಧ್ಮತ್ವೇನ ಸಂಕಲ್ಪಿತವಂತ ಇತ್ಯರ್ಥಃ । ತಥಾ ಶರದ್ಧವಿರಾಸೀತ್ । ತಾಮೇವ ಪುರೋಡಾಶಾದಿಹವಿಷ್ಟ್ವೇನ ಸಂಕಲ್ಪಿತವಂತ ಇತ್ಯರ್ಥಃ । ಪೂರ್ವಂ ಪುರುಷಸ್ಯ ಹವಿಃಸಾಮಾನ್ಯರೂಪತ್ವೇನ ಸಂಕಲ್ಪಃ । ಅನಂತರಂ ವಸಂತಾದೀನಾಮಾಜ್ಯಾದಿವಿಶೇಷರೂಪತ್ವೇ ಸಂಕಲ್ಪ ಇತಿ ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

**ಯತ್**—ಪಾಂಚಭೌತಿಕಶರೀರಾದಿಗಳು ಉತ್ಪನ್ನವಾದನಂತರ । **ದೇವಾಃ**—ಪುರುಷನ ಅಂಶಗಳಾದ ದೇವತೆಗಳು । **ಪುರುಷೇಣ**—ಪುರುಷಸಂಜ್ಞಕವಾದ । **ಹವಿಷಾ**—ಹವಿಸ್ಸಿನಿಂದ । **ಯಜ್ಞಂ**—ಯಜ್ಞವನ್ನು । **ಅತನ್ವತ**—ನೆರವೇರಿಸಿದರು । **ಅಸ್ಯ**—ಈ ಯಜ್ಞಕ್ಕೆ । **ವಸಂತಃ**—ವಸಂತಋತುವು । **ಆಜ್ಯಂ**—ತುಪ್ಪವಾಗಿ ।

**ಆಸೀತ್**—ಆಯಿತು । **ಗ್ರೀಷ್ಮಃ**—ಗ್ರೀಷ್ಮಋತುವು । **ಇಧ್ಮಃ**—ಸಮಿತ್ತುಗಳಾಯಿತು । **ಶರತ್**—ಶರದೃತುವು । **ಹವಿಃ**— ಹವಿಸ್ಸಾಯಿತು.

॥ ಭಾವಾರ್ಥ ॥

ಜಗತ್ಸೃಷ್ಟಿಯಾದನಂದರ, ಪುರುಷನ ಅಂಶಗಳಾದ ದೇವತೆಗಳು ಪುರುಷಸಂಜ್ಞಕವಾದ ಹವಿಸ್ಸಿನಿಂದ ಯಜ್ಞವನ್ನು ನೆರವೇರಿಸಿದರು. ಈ ಯಜ್ಞಕ್ಕೆ ವಸಂತಋತುವು ತುಪ್ಪವಾಯಿತು. ಗ್ರೀಷ್ಮವು ಸಮಿತ್ತುಗಳಾಗಿಯೂ ಶರದೃತುವು ಹವಿಸ್ಸೂ ಆದವು.

## English Translation

When the gods performed the sacrifice with Purusha as the offering, then Spring was its ghi, Summer the fuel, and Autmn the oblation.

॥ ವಿಶೇಷವಿಷಯಗಳು ॥

ಪರಮಪುರುಷನು ಜಗತ್ಸೃಷ್ಟಿಗಾಗಿ ಸಂಕಲ್ಪಿಸಿ ಆ ಸಂಕಲ್ಪದ ಪರಿಣಾಮವಾಗಿ ನಾನಾ ಶಕ್ತಿಗಳು ಉತ್ಪನ್ನವಾಗಿ ಅವುಗಳ ಮೂಲಕ ಪುರುಷನು ವಿಧವಿಧವಾಗಿ ಪ್ರಕಾಶಿಸುವುದರಿಂದ(ವಿರಾಜಿಸುವುದರಿಂದ)ಅವನು ವಿರಾಟ್ಸಂಜ್ಞಕನಾದನು. ಪುರುಷನಿಂದ ವಿರಾಟ್, ವಿರಾಟ್ಟಿನಿಂದ ಪುರುಷ ಹೀಗೆ ಅವಸ್ಥಾವಿಶೇಷಗಳನ್ನು ಹೊಂದುವ ದಿವ್ಯಸ್ವರೂಪವನ್ನು ಹಿಂದೆ ವಿವರಿಸಿದೆ. ಈಶ್ವರಸಂಕಲ್ಪದ ಫಲವಾಗಿ ಉತ್ಪನ್ನವಾದ ಸೃಷ್ಟಿಯಲ್ಲಿ ಎರಡು ಕ್ರಮ. ಒಂದು ಪೂರ್ವಸೃಷ್ಟಿ ಇನ್ನೊಂದು ಉತ್ತರಸೃಷ್ಟಿ. **ಸ ಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋ** ಪುರಃ ಎಂಬ ವಾಕ್ಯದಲ್ಲಿ ಪೂರ್ವಸೃಷ್ಟಿಯ ಕ್ರಮವನ್ನು ತಿಳಿಸಿದೆ. ಪೃಥಿವ್ಯಾದಿಪಂಚಮಹಾಭೂತಗಳೂ, ದೇವತಿರ್ಯಙ್ಮನುಷ್ಯಾದಿ ಚೇತನಗಳೂ, ಈ ಚೇತನಗಳಿಗೆ ಆಶ್ರಯವನ್ನು ಕೊಡಲು ಜ್ಞಾನಾದೀಂದ್ರಿಯಗಳನ್ನೊಳಗೊಂಡ ಶರೀರಗಳೂ ಪೂರ್ವಸೃಷ್ಟಿಗೆ ಸೇರಿದವು. ಪೂರ್ವಸೃಷ್ಟಿಯ ಕಾಲದಲ್ಲಿ ಪರಮಾತ್ಮನು ಆತ್ಮಯಜ್ಞವನ್ನು ನೆರವೇರಿಸಿ ತನ್ನನ್ನೇ ಆಹುತಿಯಾಗಿ ಅರ್ಪಿಸಿದನು. ಅದರ ಫಲವಾಗಿ ಜಗತ್ಸೃಷ್ಟಿ ಎಂಬ ವಿಷಯವನ್ನು ಹಿಂದೆ ವಿಶ್ವಕರ್ಮಸೂಕ್ತಗಳಲ್ಲಿ ವಿವರಿಸಿದೆ. ಉತ್ತರಸೃಷ್ಟಿಗೆ ಅಂಗವಾಗಿ ದೇವತೆಗಳು ಪುರುಷನನ್ನು ಆಹುತಿರೂಪದಲ್ಲಿ ಅರ್ಪಿಸಿ ಯಜ್ಞವನ್ನು ನೆರವೇರಿಸಿದರು ಎಂದು ಪ್ರಕೃತ ಋಕ್ಕಿನಲ್ಲಿ ಹೇಳಲ್ಪಟ್ಟಿದೆ. ವಿರಾಟ್ಪುರುಷನಿಂದ ಸೃಷ್ಟವಾದ ಸಕಲ ಶಕ್ತಿಗಳೂ ಪ್ರಕಾಶಮಾನವಾಗಿರುವುದರಿಂದ ಅವೆಲ್ಲವೂ ದೇವತೆಗಳೆಂದು ವ್ಯವಹರಿಸಲ್ಪಡುತ್ತವೆ. ಪಂಚಮಹಾಭೂತಗಳಿಗೂ ಜ್ಞಾನಾದೀಂದ್ರಿಯಗಳಿಗೂ ಪ್ರತಿಯೊಂದಕ್ಕೂ ವಿಶೇಷಶಕ್ತಿಯಿರುವುದರಿಂದ ಈ ಶಕ್ತಿಗಳೇ ದೇವತೆಗಳೆಂದು ವ್ಯವಹರಿಸಲ್ಪಡುತ್ತವೆ. ಹಿಂದೆ ವರ್ಣಿಸಿದಂತೆ ಗುಣರಹಿತವೂ ಅನಿರ್ವಚನೀಯವೂ ಆದ ಪರಬ್ರಹ್ಮವು ನಾಮ ಮತ್ತು ರೂಪಗಳನ್ನು ಹೊಂದಿ ತನ್ನ ಅಂಶಮಾತ್ರದಿಂದ ಜಗತ್ತಿನಲ್ಲಿ ವೈವಿಧ್ಯವನ್ನು ಹೊಂದಿದುದು ಪೂರ್ವಸೃಷ್ಟಿ; ವಿಧವಿಧವಾದ ಈ ಶಕ್ತಿಗಳು ತಮ್ಮ ಪ್ರಭಾವದಿಂದ ಇನ್ನೂ ವಿಸ್ತಾರವನ್ನು ಹೊಂದಿ ಕಾರ್ಯರೂಪದಲ್ಲಿ ಪ್ರಸರಿಸುವುದು ಉತ್ತರಸೃಷ್ಟಿ. ದೇವತೆಗಳೆಂದು ವ್ಯವಹರಿಸಲ್ಪಡುವ ಈ ಶಕ್ತಿಗಳು ಪುರುಷಯಜ್ಞವನ್ನಾಚರಿಸಿದವು ಅನಂತರ ಉತ್ತರಸೃಷ್ಟಿಯಾಯಿತು ಎಂಬುದರ ತಾತ್ಪರ್ಯವೇನು ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕು. ಈ ವಾಕ್ಯಕ್ಕೆ ಸಾಯಣರ ವಿವರಣವು ಈ ರೀತಿಯರುತ್ತದೆ.

**ಯತ್ ಯದಾ ಪೂರ್ವೋಕ್ತಕ್ರಮೇಣೈವ ಶರೀರೇಷೂತ್ಪನ್ನೇಷು ದೇವಾಃ ಉತ್ತರ-ಸೃಷ್ಟಿಸಿದ್ಧ್ಯರ್ಥಂ ಬಾಹ್ಯದ್ರವ್ಯಸ್ಯ ಅನುತ್ಪನ್ನತ್ವೇನ ಹವಿರಂತರಾಸಂಭವನಾತ್ ಪುರುಷ-ಸ್ವರೂಪಮೇವ ಮನಸಾ ಹವಿಷ್ಟ್ವೇನ ಸಂಕಲ್ಪ್ಯ ಪುರುಷಾಖ್ಯೇನ ಹವಿಷಾ ಮಾನಸಂ ಯಜ್ಞಮತನ್ವತ ॥**

ಹಿಂದೆ ವಿವರಿಸಿದಂತೆ ಪಂಚಮಹಾಭೂತಾದಿಶರೀರಗಳ ಸೃಷ್ಟಿಯಾದನಂತರ, ದೇವತೆಗಳು ಉತ್ತರಸೃಷ್ಟಿಗಾಗಿ ಯಜ್ಞವನ್ನಾಚರಿಸಿದರು. ಈ ಯಜ್ಞಕ್ಕೆ ಬೇಕಾದ ಸಾಮಗ್ರಿಗಳು ಪುರುಷನಲ್ಲದೆ ಬೇರೆ ಸಿಗಲಿಲ್ಲ. ಬಾಹ್ಯದ್ರವ್ಯಗಳು ಇನ್ನೂ ಉತ್ಪನ್ನವಾಗಿರಲಿಲ್ಲ. ಆದುದರಿಂದ ಪುರುಷರೂಪವಾದ ಹವಿಸ್ಸಿನಿಂದ ಮಾನಸಿಕವಾದ ಸಂಕಲ್ಪವನ್ನು ಮಾಡಿ, ಮಾನಸಿಕವಾದ ಯಜ್ಞವನ್ನು ನೆರವೇರಿಸಿದರು ಎಂದು ವಿವರಿಸಿರುವ ಈ ಪ್ರಕರಣದಲ್ಲಿ ಮಾನಸಿಕಯಜ್ಞದ ಸ್ವರೂಪವೂ ಅದರ ಫಲವಾದ ಉತ್ತರ ಸೃಷ್ಟಿಯೂ ಮುಖ್ಯವಿಷಯಗಳು. ಈ ಅಂಶಗಳು ವೈದಿಕ ವಾಕ್ಯಗಳಲ್ಲಿ ಯಾವ ರೀತಿ ವರ್ಣಿತವಾಗಿವೆ ಎಂಬುದನ್ನು ಪರಿಶೀಲಿಸಲಾಗುತ್ತದೆ. ತೈತ್ತಿರೀಯಾರಣ್ಯಕದಲ್ಲಿ ಪಠಿತವಾಗಿರುವ ಈ ಮಂತ್ರಕ್ಕೆ ಭಟ್ಟಭಾಸ್ಕರರು ಈ ರೀತಿ ವ್ಯಾಖ್ಯಾನವನ್ನು ಹೇಳಿದ್ದಾರೆ. ಇದರ ಹಿಂದಿನ ಋಕ್ಕಿನಲ್ಲಿ ಹೇಳಿರುವ ಅಭಿಪ್ರಾಯವೇ ಇಲ್ಲಿಯೂ ಅನುವರ್ತಿಸಿ ಇರುವುದರಿಂದ ಅದನ್ನೂ ಉದಾಹರಿಸಿ ವಿವರಿಸಲಾಗುತ್ತದೆ. ಇಲ್ಲಿ ಎರಡು ವಿಧವಾದ ಸೃಷ್ಟಿಯೂ ವಿವೃತವಾಗಿರುತ್ತದೆ.

(೧) **ತಸ್ಮಾದ್ವಿರಾಡಜಾಯತ**—ಎಂಬ ಮಂತ್ರಕ್ಕೆ ಭಟ್ಟಭಾಸ್ಕರರ ಭಾಷ್ಯ—

**ಇದಾನೀಂ ಸೃಷ್ಟಿರುಚ್ಯತೇ । ತಸ್ಮಾತ್ ಪ್ರಣವಾಖ್ಯಾತ್ ನಾರಾಯಣಾತ್ । (ಅವ್ಯಕ್ತಾದಿತಿ ಕೇಚಿತ್) ತಸ್ಮಾತ್ ಪ್ರಕೃತಾನ್ಮಹಾಪುರುಷಾತ್ ವಿರಾಡಜಾಯತ ಪ್ರಜಾಪತಿಃ । ತತೋ ವಿರಾಜೋ ಅಧಿ ವಿರಾಜಮೇವಾಧಿಕರಣೀಕೃತ್ಯ ಪುರುಷೋಽಜಾಯತ ದಶಹೋತ್ರಾಖ್ಯಃ ಪ್ರಜಾಪತಿಃ ಪುರುಷಸಮಷ್ಟ್ಯಾತ್ಮನಾ ಅಜಾಯತ । ಯಥೋಕ್ತಂ । ಸ ಮಾನಸೀನ ಆತ್ಮಾ ಜನಾನಾಂ ॥**

(ತೈ. ಆ. ಭಾ. ೩-೧೨)

ಇದು (ಪೂರ್ವ) ಸೃಷ್ಟಿಯ ವಿಷಯ. ಪ್ರಣವಸಂಜ್ಞಕನೂ, ನಾರಾಯಣರೂಪನೂ ಆದ ಮಹಾಪುರುಷನಿಂದ ವಿರಾಟ್ಟಿನ ಉತ್ಪತ್ತಿ. ಸಕಲ ವಸ್ತುಗಳೂ ಇವನಲ್ಲಿಯೇ ಅಂತರ್ಗತವಾಗಿ ಪ್ರಕಾಶಿಸುತ್ತವೆ (ವಿರಾಜಿಸುತ್ತವೆ) ಯಾದ್ದರಿಂದ **ವಿರಾಟ್** ಎಂಬ ಹೆಸರು. **ಮನೋರೂಪನಾದ ಪ್ರಜಾಪತಿಯೇ** ವಿರಾಟ್‌ಸಂಜ್ಞಕನು. ಈ ವಿರಾಟ್ಟಿನಿಂದ ಉತ್ಪನ್ನನಾದವನು ಪುರುಷನು. ಇವನು **ದಶಹೋತ್ರ**ರೂಪನು. ಸಕಲ ಜನರಲ್ಲಿಯೂ **ಮನೋ**ರೂಪದಿಂದ ವ್ಯಾಪಿಸಿದ್ದಾನೆ ಎಂಬ ಈ ವಿವರಣೆಯಲ್ಲಿ,

೧) **ದಶಹೋತ್ರಾಖ್ಯಃ** ಎಂಬ ವಿಶೇಷಣವೂ,

(೨) **ಮಾನಸೀನಃ** ಎಂಬುದೂ ಪ್ರಕೃತವಾದ ಋಕ್ಕಿನ ಮುಖ್ಯತಾತ್ಪರ್ಯವನ್ನು ಸೂಚಿಸುತ್ತವೆ. ಈ ಎರಡು ವಿಶೇಷಣಗಳೂ ಪುರುಷನ ಯಾವ ಮುಖ್ಯಸ್ವರೂಪವನ್ನು ತಿಳಿಸುತ್ತವೆಯೆಂಬುದನ್ನು ಪರಿಶೀಲಿಸಬೇಕು.

ಇದೇ **ಮಾನಸೀನಃ** ಎಂಬ ವಿಶೇಷಣವನ್ನು ವಿವರಿಸುತ್ತ ಭಾಷ್ಯಕಾರರು (ಭಟ್ಟಭಾಸ್ಕರರು) ತಮ್ಮ ವಿವರಣೆಗೆ ಪೋಷಕವಾದ ಬ್ರಾಹ್ಮಣವಾಕ್ಯವನ್ನೂ ಉದಾಹರಿಸಿದ್ದಾರೆ.

**ಸ ವೈರಾಜಃ ಪುರುಷಃ ಜಾತಃ ಪ್ರಾದುರ್ಭಾವಾನಂತರಂ ಅತ್ಯರಿಚ್ಯತ ಸ್ವಯಮೇವ ಆತ್ಮಾನಮತ್ಯರೇಚಯತ್ । ಅನೇಕಧಾಭಾವಲಕ್ಷಣಂ ಸ್ವರೂಪಾತಿರೇಕಮಭಜತ ಭೂತೇಂದ್ರಿಯಾದೀನ್ಯಸೃಜತೇತಿ ಯಾವತ್ । ಉಕ್ತಂ ಚ—ಅಸತೋಽಧಿ ಮನೋಽಸೃಜ್ಯತ । ಮನಃ ಪ್ರಜಾಪತಿಮಸೃಜತ । ಪ್ರಜಾಪತಿಃ ಪ್ರಜಾ ಅಸೃಜತ । ಇತಿ ॥**

(ತೈ. ಆ ಭಾ.)

ಸಕಲ ಭೂತಗಳೊಡನೆಯೂ ವಿರಾಜಿಸುವ ಪರಮಪುರುಷನು ತಾನು ಉತ್ಪನ್ನನಾದನಂತರ (ಪ್ರಾದುರ್ಭವಿಸಿದನಂತರ) ದೇವತಿರ್ಯಙ್ಮಾನವಾದಿರೂಪಗಳಲ್ಲಿ ಪ್ರಸರಿಸಿ ಜಗತ್ತನ್ನು ವ್ಯಾಪಿಸಿದನು. ಇದೇ ವಿಷಯವನ್ನು ತೈತ್ತಿರೀಯ ಬ್ರಾಹ್ಮಣವಾಕ್ಯವೂ ಈ ರೀತಿ ತಿಳಿಸುತ್ತದೆ. ಅಸತ್ತಿನಿಂದ ಮನಸ್ಸು ಉತ್ಪನ್ನವಾಯಿತು. ಮನಸ್ಸಿನಿಂದ ಪ್ರಜಾಪತಿಯು. ಪ್ರಜಾಪತಿಯಿಂದ ಪ್ರಜೆಗಳು (ತೈ ಬ್ರಾ. ೨-೨-೯). ಎಂದರೆ ಹಿಂದೆ **ತದಸದೇವ ಸನ್ಮನೋಽಕುರುತ ಸ್ಯಾಮಿತಿ** (ತೈ. ಬ್ರಾ. ೨-೨-೯) ಎಂಬಲ್ಲಿ ಯಾವ **ಮನಸ್ತತ್ತ್ವವು** ಪ್ರಶಂಸಿತವಾಗಿದೆಯೋ ಅದೇ ಮನಸ್ತತ್ತ್ವವು ಇಲ್ಲಿಯೂ ಪ್ರಶಂಸಿತವಾಗಿದೆ. ಸಕಲ ಜಗತ್ತೂ ಈಶ್ವರನ ಮನೋರೂಪವಾಗಿಯೇ ಇದ್ದಿತು. ಕೇವಲ ಅವನ ಸಂಕಲ್ಪರೂಪವಾಗಿ ಮಾತ್ರವಿದ್ದಿತು. ಆದುದರಿಂದಲೇ, **ತದ್ವಾ ಇದಂ ಮನಸ್ಯೇವ ಪರಮಂ ಪ್ರತಿಷ್ಠಿತಂ** ಎಂದೂ ಇದೇ ಸಂದರ್ಭದಲ್ಲಿ ತಿಳಿಸಿದೆ. ಈ ಸಂಕಲ್ಪವಿಶೇಷವೇ ಪ್ರಕೃತ ಋಕ್ಕಿನಲ್ಲಿ (ಋ. ಸಂ. ೧೦-೯೦-೩) **ಯತ್ಪುರುಷೇಣ ಹವಿಷಾ** ಎಂಬ ಪದಗಳಿಂದ ಸೂಚಿತವಾಗಿದೆ. ಹೇಗೆಂದರೆ—**ಯತ್ಪುರುಷೇಣ ಹವಿಷಾ** ಎಂಬ ಋಕ್ಕಿಗೆ ತೈತ್ತಿರೀಯಾರಣ್ಯಕದ ಭಾಷ್ಯ

**ಯತ್ ಯದಾ ಪುರುಷೇಣ ಪ್ರಜಾಪತಿನಾ ಹವಿಷಾ ಹವಿಷ್ಟೇನ ಸಂಕಲ್ಪಿತೇನ ಹವಿರಂತರಸ್ಯಾಭಾವಾತ್ ದೇವಾಃ ಪ್ರಾಣಾಃ ಪ್ರಾಜಾಪತ್ಯಾಃ ಇಂದ್ರಿಯಾಣಿ ಚ ಯಜ್ಞಂ ಸಂಕಲ್ಪಾತ್ಮಕಂ ಅತನ್ವತ ಯಜ್ಞಮಿವ ಅಕುರ್ವತ ।**

(ತೈ. ಆ. ಭಾ. ೩-೧೨)

ಬೇರೆ ಯಾವ ಹವಿಸ್ಸೂ ಇಲ್ಲದುದರಿಂದ ಪ್ರಜಾಪತಿಯ ಪ್ರಾಣಗಳೂ ಮತ್ತು ಇಂದ್ರಿಯಗಳೂ ಸಂಕಲ್ಪರೂಪವಾದ ಯಜ್ಞವನ್ನು ಆಚರಿಸಿದವು. ಎಂದರೆ, **ದಶಹೋತ್ರಾಖ್ಯನಾದ** ಪುರುಷನ ಸಂಕಲ್ಪರೂಪವಾದ ಯಜ್ಞವು ಎಂದು ತಾತ್ಪರ್ಯ. ಇದನ್ನೇ ಸಾಯಣರು ಪ್ರಕೃತವಾದ ಋಕ್ಕನ್ನು ವಿವರಿಸುವಾಗ (ಋ. ಸಂ. ೧೦-೯೦-೬) **ಉತ್ತರಸೃಷ್ಟ್ಯರ್ಥಂ ಪುರುಷಸ್ವರೂಪಮೇವ ಮನಸಾ ಸಂಕಲ್ಪ್ಯ ಪುರುಷಾಖ್ಯೇನ ಹವಿಷಾ ಮಾನಸಂ ಯಜ್ಞಮತನ್ವತ** ಎಂದು ತಿಳಿಸಿದ್ದಾರೆ. ಇದೇ ವಿಷಯವನ್ನು **ದಶಹೋತ್ರಾಖ್ಯಃ ಪ್ರಜಾಪತಿಃ ಪುರುಷಸಮಷ್ಟ್ಯಾತ್ಮನಾ ಅಜಾಯತ** ಎಂಬ ವಾಕ್ಯದಿಂದಲೂ **ಸ ಮಾನಸೀನಃ** ಎಂಬ ಉದಾಹರಣೆಯಿಂದಲೂ ಭಟ್ಟಭಾಸ್ಕರರು ವಿವರಿಸಿದ್ದಾರೆ.

ಹೀಗೆ ಉತ್ತರಸೃಷ್ಟಿಗೆ ಪೂರ್ವಭಾವಿಯಾದ ಯಜ್ಞದ ಸ್ವರೂಪವೇನು, ಈ ಯಜ್ಞದಲ್ಲಿ **ದಶಹೋತ್ರಾಖ್ಯ**ನಾದ ಪುರುಷನ ಕಾರ್ಯವೇನು ? ಹೇಗೆ ? ಮತ್ತು **ಮನೋ**ರೂಪವಾದ ಯಜ್ಞವೆಂದರೇನು ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ವಿವರಿಸಬೇಕಾಗಿರುತ್ತದೆ. **ದೇವಾ ಯಜ್ಞಮತನ್ವತ** ಎಂಬಲ್ಲಿ **ದೇವಾಃ** ಎಂಬುದಕ್ಕೆ ಪ್ರಜಾಪತಿಯ ಪ್ರಾಣಗಳು ಮತ್ತು ಇಂದ್ರಿಯಗಳು ಎಂದರ್ಥವಿರುವುದರಿಂದ ಪ್ರಜಾಪತಿಯೇ ಈ ರೂಪಗಳಿಂದಿದ್ದು ಪುನಃ ಉತ್ತರ

ಸೃಷ್ಟಿಗಾಗಿ ಯಜ್ಞವನ್ನಾಚರಿಸಿದನು ಎಂದರ್ಥ. ಎಂದರೆ, ಪೂರ್ವಸೃಷ್ಟಿಯೂ ಯಜ್ಞಮೂಲ; ಉತ್ತರಸೃಷ್ಟಿಯೂ ಯಜ್ಞಮೂಲ. ಇವೆಲ್ಲವೂ ದಶಹೋತ್ರಾಖ್ಯನಾದ ಪ್ರಜಾಪತಿಯ ಸಂಕಲ್ಪರೂಪವಾದ ಕಾರ್ಯಗಳು. ಹೇಗೆಂದರೆ,

**ಆದೌ ಸಿಸೃಕ್ಷುಃ ಪ್ರಜಾಪತಿಃ ಸೃಷ್ಟ್ಯರ್ಥಂ ಕೇನ ಚಿದ್ಯಾಗೇನ ಆಧ್ಯಾತ್ಮಿಕೇನ ಇಷ್ಟವಾನ್** ಮೊದಲು ಸೃಷ್ಟ್ಯರ್ಥವಾಗಿ ಸಂಕಲ್ಪಿಸಿದ ಪ್ರಜಾಪತಿಯು ಯಾವ ರೂಪದ ಯಜ್ಞವನ್ನು ಆಚರಿಸಿದನು ಎಂಬ ಪ್ರಶ್ನೆಗೆ ಉತ್ತರವಾಗಿ ಆ ಯಜ್ಞದ ವಿಶೇಷಾಂಗಗಳನ್ನೂ ಅದರ ಕ್ರಮವನ್ನೂ ತೈತ್ತಿರೀಯ ಆರಣ್ಯಕದಲ್ಲಿ ಈ ರೀತಿ ವಿವರಿಸಿದೆ.

**ಚಿತ್ತಿಃ ಸ್ರುಕ್ । ಚಿತ್ತಮಾಜ್ಯಂ । ವಾಗ್ವೇದಿಃ । ಆಧೀತಂ ಬರ್ಹಿಃ । ಕೇತೋ ಅಗ್ನಿಃ। ವಿಜ್ಞಾತ-ಮಗ್ನಿಃ । ವಾಕ್ಪತಿರ್ಹೋತಾ । ಮನ ಉಪವಕ್ತಾ । ಪ್ರಾಣೋ ಹವಿಃ । ಸಾಮಾಧ್ವರ್ಯುಃ ॥**

(ತೈ. ಆ. ೩-೧)

ಸೃಷ್ಟಿಕರ್ತನಿಗೆ ಜಗತ್ಸೃಷ್ಟಿಯನ್ನು ಮಾಡಬೇಕೆಂಬ ಸಂಕಲ್ಪರೂಪವಾದ ಯಾವ ಬುದ್ಧಿಯಿರುವುದೋ ಅದಕ್ಕೆ ಚಿತ್ತಿಯೆಂದು ಹೆಸರು. ಯಾಗಕ್ಕೆ ಯಾವ ರೀತಿ **ಸ್ರುಕ್** ಎಂಬ ಸಾಧನವಿಲ್ಲದಿದ್ದರೆ ಸಾಧ್ಯವಿಲ್ಲವೋ ಹಾಗೆ ಸೃಷ್ಟಿರೂಪವಾದ ಯಾಗಕ್ಕೆ **ಚಿತ್ತಿಯೇ** ಸ್ರುಗ್ರೂಪವಾದ ಮುಖ್ಯಸಾಧನ.

**ಚಿತ್ತಮಾಜ್ಯಂ**—ಹವಿಸ್ಸಿನ ರೂಪದಲ್ಲಿ ಅರ್ಪಿಸುವ ಆಜ್ಯಕ್ಕೆ ಸ್ರುಕ್ಪಾತ್ರೆಯೇ ಆಧಾರವಾಗಿರುವಂತೆ **ಚಿತ್ತಿಯು** ಚಿತ್ತಕ್ಕೆ ಆಧಾರ. ಸಂಕಲ್ಪರೂಪವಾದ ಪ್ರಜಾಪತಿಯ ಈ ಯಜ್ಞಕ್ಕೆ **ಚಿತ್ತವೇ** ಆಜ್ಯವು. ಸಕಲವಾದ ಧ್ಯೇಯತತ್ತ್ವಗಳಿಗೂ ಚಿತ್ತವು ಆಶ್ರಯವಾಗಿರುವುದರಿಂದ ಪ್ರಧಾನವಾದ ಉಪಕರಣವೆಂದರ್ಥ.

**ವಾಗ್ವೇದಿಃ**—ಯಜ್ಞಕರ್ಮಗಳನ್ನು ಪ್ರಕಾಶಪಡಿಸಲು ಯಜ್ಞವೇದಿಯು ಸಾಧನವಾಗಿರುವಂತೆ ಮಾನಸಿಕವಾದ ಸಂಕಲ್ಪವನ್ನು ಪ್ರಕಾಶಪಡಿಸಲು ಸಾಧನವಾಗಿರುವ ವಾಕ್ಕೇ ವೇದಿಯು.

**ಆಧೀತಂ ಬರ್ಹಿಃ**—ಯಜ್ಞವೇದಿಯಲ್ಲಿ ಹರಡಿರುವ ದರ್ಭೆಗಳಂತೆ, ವಾಗ್ವರ್ಣನೆಗೆ ಅವಕಾಶವನ್ನು ಕೊಟ್ಟು ವಾಕ್ಕಿನ ಪ್ರಸಾರಕ್ಕೆ ಸಹಾಯಮಾಡುವ ಆಧೀತ (ರೂಪ)ವೇ ಬರ್ಹಿಯು.

**ಕೇತೋ ಅಗ್ನಿಃ**—ಸಮಷ್ಟಿರೂಪದಲ್ಲಿರುವ ತತ್ತ್ವವನ್ನು ನಾಮ ಮತ್ತು ರೂಪಗಳಿಂದ ವಿಭಾಗಿಸುವಂತೆ ಮಾಡಿ ವೈಯಕ್ತಿಕಸ್ವರೂಪವನ್ನು ಕೊಡುವ ಶಕ್ತಿಯೇ ಅಗ್ನಿಯು. ಯಜ್ಞಕ್ಕೆ ಆಹವನೀಯಾಗ್ನಿಯಿರುವಂತೆ ಸಂಕಲ್ಪರೂಪವಾದ ಯಜ್ಞಕ್ಕೆ **ಕೇತವೇ ಆಹವನೀಯಾಗ್ನಿರೂಪವು.**

**ವಿಜ್ಞಾತಮಗ್ನಿಃ**—ವಿಶ್ವವು ನನ್ನಿಂದ ಸೃಷ್ಟವಾಗಿದೆ ಎಂಬ ಯಾವ ಜ್ಞಾನ ಮತ್ತು ಸಂತುಷ್ಟಿಗಳಿವೆಯೋ ಅವೇ ಅದೇ ಅಗ್ನಿಧ್ರವು.

**ವಾಕ್ಪತಿರ್ಹೋತಾ**—ವಾಕ್ಕುಗಳಿಗೆ ಉತ್ಪತ್ತಿಸ್ಥಾನವಾದ ಪ್ರಜಾಪತಿಯ ವಾಗೀಂದ್ರಿಯವೇ ಹೋತೃವು.

**ಮನ ಉಪವಕ್ತಾ**—ಸಕಲ ಕರ್ಮಗಳಿಗೂ ಮೂಲವಾದ ಪ್ರಜಾಪತಿಯ ಮನಸ್ಸೇ ಬ್ರಹ್ಮ.

**ಪ್ರಾಣೋ ಹವಿಃ**—ಪ್ರಜಾಪತಿಯ ಮುಖ್ಯಶಕ್ತಿಯಾದ ಪ್ರಾಣವೇ ಹವಿಸ್ಸು.

**ಸಾಮಾಧ್ವರ್ಯುಃ**—ಸೃಷ್ಟ್ಯರ್ಥವಾಗಿ ಮಾಡತಕ್ಕ ತಪಸ್ಸೇ ಸಾಮವು. ಈ ಸಾಮವೇ ಅಧ್ವರನಿರ್ವಾಹಕ ವಾದ ಅಧ್ವರ್ಯುವು. ಯಜ್ಞವು ಸಾಂಗವಾಗಿ ನೆರವೇರಲು ಅಧ್ವರ್ಯುವಿನ ಆವಶ್ಯಕತೆಯಿರುವಂತೆ ಸೃಷ್ಟಿರೂಪವಾದ ಅಧ್ವರಕ್ಕೆ (ಯಜ್ಞಕ್ಕೆ) ತಪೋರೂಪವಾದ ಸಾಮವು.

ಹೀಗೆ **ಚಿತ್ತಿ, ಚಿತ್ತ**, ವಾಕ್, ಆಧೀತ, ಕೇತ, ವಿಜ್ಞಾತ, ವಾಕ್ಪತಿ, ಮನಸ್, ಪ್ರಾಣ, ಸಾಮ ಎಂಬ ಹತ್ತು ಅಂಗಗಳುಳ್ಳ ಪ್ರಜಾಪತಿ (ಸಂಕಲ್ಪ) ರೂಪವಾದ ಯಜ್ಞವು ವರ್ಣಿತವಾಗಿದೆ. (**ದಶಹೋತಾ ದಶಭೂತೋ ಯಜ್ಞಾತ್ಮಾ ಪ್ರಜಾಪತಿಃ**). ಸಾಯಣರು ತಮ್ಮ ವಿವರಣದಲ್ಲಿ ಈ ರೀತಿ ತಿಳಿಸಿದ್ದಾರೆ.

**ಚಿತ್ತಿಚಿತ್ತಶಬ್ದಾಭ್ಯಾಂ ನಿರ್ವಿಕಲ್ಪಕಸವಿಕಲ್ಪಕಭೇದಜನಕಾವಂತಃಕರಣವೃತ್ತಿಭೇದೌ ವಿವಕ್ಷಿತೌ।**

ನಿರ್ವಿಕಲ್ಪಕ ಎಂದರೆ ವಿಶೇಷಣಗಳಾವುವೂ ಇಲ್ಲದ ನಿರ್ಗುಣನೂ, ಅನಿರ್ವಾಚ್ಯನೂ ಆದ ಪರಬ್ರಹ್ಮನು **ಚಿತ್ತಿ** ಶಬ್ದದಿಂದಲೂ, ಸಾವಯವಗಳಿಂದ ಕೂಡಿ ವರ್ಣನೆಗೆ ಪಾತ್ರನಾದ ಸಗುಣಬ್ರಹ್ಮನು ಚಿತ್ತಶಬ್ದದಿಂದಲೂ ನಿರ್ದಿಷ್ಟ ರಾಗಿದ್ದಾರೆ. ಅವ್ಯಕ್ತ ಮತ್ತು ವ್ಯಕ್ತರೂಪಗಳೆರಡೂ ಸೂಚಿತವಾಗಿವೆ. **ಕೇತ** ಮತ್ತು **ವಿಜ್ಞಾತ** ಶಬ್ದಗಳೂ ಸಹ ನಿರ್ವಿಕಲ್ಪಕ ಮತ್ತು ಸವಿಕಲ್ಪಕಾತ್ಮಕವಾದ (ನಿರ್ಗುಣ, ನಿರ್ವಿಶಿಷ್ಟ ಮತ್ತು ಸಗುಣ ಸವಿಶೇಷರೂಪವಾದ) ಬ್ರಹ್ಮ ಜ್ಞಾನವನ್ನು ತಿಳಿಸುತ್ತವೆ. ಉಳಿದ ಶಬ್ದಗಳು ಪ್ರಸಿದ್ಧವಾಗಿಯೇ ಇವೆ (**ಮನಃ ಪ್ರಾಣೌ ಪ್ರಸಿದ್ಧೌ** ಇತ್ಯಾದಿ).

**ಏವಂ ಚಿತ್ತ್ಯಾದಯೋ ದಶ ಶರೀರಗತಾಃ ಪದಾರ್ಥವಿಶೇಷಾಃ ಸ್ರುಗಾದಯೋ ದಶಪದಾರ್ಥಾ ಹೋಮನಿಷ್ಪಾದಕಾಃ .... .... ....।ಅಸ್ಮಿನ್ಮಂತ್ರೇ ಸ್ರುಗಾದೀನಾಂ ಹೋಮಸಾಧನಾನಾಂ ದಶಾನಾಮಭಿಹಿತತ್ವಾದಯಂ ಮಂತ್ರೋ ದಶಹೋತೇತ್ಯುಚ್ಯತೇ ॥**

ಈ ರೀತಿ **ಚಿತ್ತಿ, ಚಿತ್ತ** ಇತ್ಯಾದಿ ಹತ್ತು ಪದಗಳೂ ತಾತ್ತ್ವಿಕ ದೃಷ್ಟಿಯಿಂದ ಶರೀರಗತವಾದ ಹತ್ತು ಪದಾರ್ಥಗಳನ್ನು ಯಜ್ಞದೃಷ್ಟಿಯಿಂದ ಯಜ್ಞಸಾಧನಗಳಾದ ಹತ್ತು ಸ್ರುಗಾದಿ ಪದಾರ್ಥಗಳನ್ನು ನಿರ್ದೇಶಿಸುತ್ತವೆ. ಈ ವಿಧವಾಗಿ ಸುಗ್ರಾದಿ ಹತ್ತು ಪದಾರ್ಥಗಳ ವಿವಕ್ಷೆಯಿರುವುದರಿಂದ ಈ ಮಂತ್ರಕ್ಕೆ **ದಶಹೋತಾ** ಎಂಬ ಹೆಸರು ಎಂದು ಸಾಯಣರು ವಿವರಿಸಿದ್ದಾರೆ.

ಸೃಷ್ಟಿಕರ್ತನಾದ ಪ್ರಜಾಪತಿಯು **ದಶಹೋತಾ** ಎಂದು ವರ್ಣಿತನಾಗಿರುವಂತೆಯೇ, ಚತುರ್ಹೋತಾ, ಪಂಚಹೋತಾ ಇತ್ಯಾದಿ ವಿಶೇಷಣಗಳಿಂದಲೂ ವರ್ಣಿತನಾಗಿದ್ದಾನೆ. ಸೃಷ್ಟಿರೂಪವಾದ ಯಜ್ಞದಲ್ಲಿ ಈ ವಿಶೇಷಣಗಳ ಅರ್ಥವೇನು ಎಂದು ತಿಳಿಯಲು ಈ ವರ್ಣನೆಗಳಿರುವ ತೈತ್ತಿರೀಯಬ್ರಾಹ್ಮಣದ ವಾಕ್ಯಗಳನ್ನು ಪರಿಶೀಲಿಸಬೇಕಾಗಿದೆ. ಈ ಸಂದರ್ಭದಲ್ಲಿಯೂ ಸಹ ದಶಹೋತೃರೂಪನಾದ ಪ್ರಜಾಪತಿ ಮತ್ತು ಅವನ ಮನಃಸಂಕಲ್ಪಾತ್ಮಕವಾದ ಯಜ್ಞ ಇವು ವಿವಕ್ಷಿತವಾಗಿವೆ. ಪ್ರಕೃತವಾದ ಸಂದರ್ಭಕ್ಕೆ ಎಷ್ಟು ಉಪಯುಕ್ತವೋ ಅಷ್ಟನ್ನು ಮಾತ್ರ ಸಂಗ್ರಹಿಸಿ ಉದಾಹರಿಸಿ ವಿವರಿಸಲಾಗುತ್ತದೆ.

ಪ್ರಜಾಪತಿರಕಾಮಯತ ಪ್ರಜಾಃ ಸೃಜೇಯೇತಿ । ಸ ಏತಂ ದಶಹೋತಾರಮಪಶ್ಯತ್ ; ತಂ ಮನಸಾನುದ್ರುತ್ಯ ದರ್ಭಸ್ತಂಬೇಽಜುಹೋತ್ । ತತೋ ವೈ ಸ ಪ್ರಜಾ ಅಸೃಜತ । ತಾ

**ಅಸ್ಮಾತ್ಸೃಷ್ಟಾ ಅಪಾಕ್ರಾಮನ್ । ತಾ ಗ್ರಹೇಣಾಗೃಹ್ಣಾತ್ । .... .... .... ಪ್ರಜಾಪತಿರ್ವೈ ದಶಹೋತಾ ॥**

(ತೈ. ಬ್ರಾ. ೨-೨-೧-೧)

ಪ್ರಜಾಪತಿಯುಪ್ರಜೆಗಳನ್ನು ಸೃಜಿಸಬೇಕೆಂದು ಸಂಕಲ್ಪಿಸಿದಾಗ **ಚಿತ್ತಿಃಸ್ರುಕ್** ಎಂಬ ದಶಹೋತೃಕವಾದ ಮಂತ್ರವನ್ನು ಅದರ ತತ್ತ್ವಾರ್ಥವನ್ನು ಸಾಕ್ಷಾತ್ಕರಿಸಿದನು. ಅದನ್ನು ಮನಸ್ಸಿನಲ್ಲಿ ಧ್ಯಾನಿಸಿ ದರ್ಭಸ್ತಂಭದಲ್ಲಿ ಆಹುತಿರೂಪದಲ್ಲಿ ಅರ್ಪಿಸಿದನು ಆಗ ಪ್ರಜೆಗಳನ್ನು ಸೃಜಿಸಿದನು. ಈ ರೀತಿ ಸೃಷ್ಟರಾದ ಪ್ರಜೆಗಳು ತಪ್ಪಿಸಿಕೊಳ್ಳಲು ಪ್ರಯತ್ನಿಸಿದರು. ಆಗ ಪ್ರಜಾಪತಿಯು ತನ್ನ **ವಾಚಸ್ಪತೇ ವಿಧೇ ನಾಮನ್** ಎಂಬ ಗ್ರಹರೂಪವಾದ ಮಂತ್ರಶಕ್ತಿಯಿಂದ ಅವನ್ನು ನಿಯಮನಮಾಡಿದನು. ಪ್ರಜಾಪತಿಯೇ ದಶಹೋತೃವು.

**ಪ್ರಜಾಪತಿರ್ದಶಹೋತಾ । ಪ್ರಜಾಪತಿರೇವ ಭೂತ್ವಾ ಪ್ರ ಜಾಯತೇ । ಮನಸಾ ಜುಹೋತಿ । ಮನ ಇವ ಹಿ ಪ್ರಜಾಪತಿಃ । ಪ್ರಜಾಪತೇರಾಪ್ತ್ಯೈ । ಪೂರ್ಣಯಾ ಜುಹೋತಿ । ಪೂರ್ಣ ಇವ ಹಿ ಪ್ರಜಾಪತಿಃ । ಪ್ರಜಾಪತೇರಾಪ್ತ್ಯೈ । ನ್ಯೂನಯಾ ಜುಹೋತಿ । ನ್ಯೂನಾದ್ಧಿ ಪ್ರಜಾಪತಿಃ ಪ್ರಜಾ ಅಸೃಜತ ಪ್ರಜಾನಾಗ್ಂ ಸೃಷ್ಟ್ಯೈ ॥**

(ತೈ. ಬ್ರಾ. ೨-೨-೧ ೨)

ಪ್ರಜಾಪತಿಯೇ ದಶಹೋತೃರೂಪನು. ಪ್ರಜಾಪತಿಯೇ ಪ್ರಜೆಗಳ ರೂಪದಲ್ಲಿ ಉತ್ಪನ್ನನಾಗುತ್ತಾನೆ. ಆದುದರಿಂದ ಅವನ ಸ್ವರೂಪವು ಎರಡು ವಿಧ. ಒಂದು ವ್ಯಕ್ತ ಇನ್ನೊಂದು ಅವ್ಯಕ್ತ. ಒಂದು ಪೂರ್ಣ ಇನ್ನೊಂದು ನ್ಯೂನ (ಅಪೂರ್ಣ). ಅವ್ಯಕ್ತವಾದ ಸ್ವರೂಪವನ್ನು ಆರಾಧಿಸಲು ಪೂರ್ಣಪಾತ್ರೆಯಿಂದ ಆಹುತಿಯನ್ನರ್ಪಿಸತಕ್ಕದ್ದು. ಜಗದ್ರೂಪದ ವ್ಯಕ್ತವಾದ ಮತ್ತು ಪೂರ್ಣವಲ್ಲದ ಸ್ವರೂಪವನ್ನಾರಾಧಿಸಲು ನ್ಯೂನಪಾತ್ರೆಯಿಂದ (**ಚತುರ್ಗೃಹೀತೇನಾಜ್ಯೇನ ಯುಕ್ತಾ ಯೇಯಮುಪೂರ್ಣಾ ಸ್ರುಕ್**) ಆಹುತಿಯನ್ನರ್ಪಿಸಿ ಆರಾಧಿಸತಕ್ಕದ್ದು. ಇದು ಪ್ರಜಾಸೃಷ್ಟಿಗೆ ಸಹಾಯ ಮಾಡುತ್ತದೆ.

ಈ ಎರಡು ವಿಧವಾದ ಪ್ರಜಾಪತಿಯ ಅನುಗ್ರಹಕ್ಕಾಗಿ ಗ್ರಹಾದಿಮಂತ್ರಗಳ ಮಾನಸಿಕವಾದ ಉಚ್ಚಾರಣೆಯು ವಿಹಿತವಾಗಿದೆ. ಯಾವ ರೀತಿ ಪ್ರಜಾಪತಿಯು ತನ್ನ ಮನಃಸಂಕಲ್ಪಮಾತ್ರದಿಂದಲೇ ಜಗತ್ತನ್ನು ನಿರ್ಮಿಸಿದನೋ ಅದಕ್ಕೆ ಅನುಗುಣವಾಗಿ ಮಾನಸಿಕವಾದ ಉಚ್ಚಾರಣವು ವಿಹಿತವಾಗಿದೆ.

**ಪ್ರಜಾಪತಿರ್ವೈ ದಶಹೋತಾ । ಚತುರ್ಹೋತಾ ಪಂಚಹೋತಾ । ಷಡ್ಢೋತಾ ಸಪ್ತಹೋತಾ ।**

(ತೈ ಬ್ರಾ. ೨-೨-೩)

ಎಂಬ ವಾಕ್ಯದಲ್ಲಿ ಪ್ರಜಾಪತಿಯೇ ಎಲ್ಲ ರೂಪಗಳನ್ನೂ ಧರಿಸುತ್ತಾನೆಂದು ತಿಳಿಸಿದೆ. ಪ್ರಜಾಪತಿಯೇ ಚತುರ್ಹೋತೃವು. ಚತುರ್ಹೋತೃತ್ವವು ಹೇಗೆಂದರೆ,

(೧) **ಪೃಥಿವೀ ಹೋತಾ**; (೨) **ದ್ಯೌರಧ್ವರ್ಯುಃ**, (೩) **ರುದ್ರೋಽಗ್ನೀತ್**; (೪) **ಬೃಹಸ್ಪತಿರುಪವಕ್ತಾ** ।

(ಪ್ರಜಾಪತಿಯ ಆಧ್ಯಾತ್ಮಿಕಸ್ವರೂಪವು ಯಾವರೀತಿ ಯಾಜ್ಞಿಕಪ್ರಕ್ರಿಯೆಗಳಿಂದ ವರ್ಣಿತವಾಗಿರುವುದೆಂದು ತಿಳಿಸುವುದೇ ಪ್ರಕೃತ ಉದ್ದಿಶ್ಯವಾಗಿರುವುದರಿಂದ ಯಾಜ್ಞಿಕ ಕ್ರಿಯಾಕಲಾಪಗಳನ್ನು ಇಲ್ಲಿ ವಿವರಿಸಿಲ್ಲ. ಬ್ರಾಹ್ಮಣವಾಕ್ಯಗಳನ್ನು ಉದಾಹರಿಸುವುದರಲ್ಲಿಯೂ ಸಹ ಪ್ರಜಾಪತಿಯ ಆಧ್ಯಾತ್ಮಿಕಸ್ವರೂಪವಿವರಣವೇ ಉದ್ದಿಷ್ಟವಾಗಿದೆ).

ಪ್ರಜಾಪತಿಯ ಪಂಚಹೋತೃತ್ವವು—

**(೧) ಅಗ್ನಿರ್ಹೋತಾ, (೨) ಅಶ್ವಿನಾಽಧ್ವರ್ಯೂ, (೩) ತ್ವಷ್ಟಾಗ್ನೀತ್. (೪) ಮಿತ್ರ ಉಪವಕ್ತಾ ।** (ಅಶ್ವಿನಿಗಳು ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃರೂಪರು).

ಷಡ್ಢೋತೃಕವಾದ ಮಂತ್ರವು ಎರಡು ವಿಧ. ಮೊದಲನೆಯದು,

**(೧) ಸೂರ್ಯಂ ತೇ ಚಕ್ಷುಃ (೨) ವಾತಂ ಪ್ರಾಣಃ, (೩) ದ್ಯಾಂ ಪೃಷ್ಠಂ, (೪) ಅಂತರಿಕ್ಷಮಾತ್ಮಾ (೫) ಅಂಗೈರ್ಯಜ್ಞಂ, (೬) ಪೃಥಿವೀಗ್ಂ ಶರೀರೈಃ ।**

ಎರಡನೆಯದು,

**(೧) ವಾಗ್ಘೋತಾ, (೨) ದೀಕ್ಷಾ ಪತ್ನೀ, (೩) ವಾತೋಽಧ್ವರ್ಯುಃ (೪) ಆಪೋಽಭಿಗರಃ, (೫) ಮನೋ ಹವಿಃ, (೬) ತಪಸಿ ಜುಹೋಮಿ ।**

(ತೈ. ಆ. ೩-೬)

ಸಪ್ತಹೋತೃತ್ವ—

**(೧) ಮಹಾಹವಿರ್ಹೋತಾ, (೨) ಸತ್ಯಹವಿರಧ್ವರ್ಯುಃ (೩) ಅಚ್ಯುತಪಾಜಾ ಅಗ್ನೀತ್, (೪) ಅಚ್ಯುತಮನಾ ಉಪವಕ್ತಾ, (೫) ಅನಾಧೃಷ್ಯಶ್ಚಾ ಪ್ರತಿಧೃಷ್ಯಶ್ಚ ಯಜ್ಞಸ್ಯಾಭಿಗರೌ, (೭) ಆಯಾಸ್ಯ ಉದ್ಗಾತಾ ।**

ಇತ್ಯಾದಿಯಾಗಿ ಸೃಷ್ಟಿರೂಪವಾದ ಯಜ್ಞದಲ್ಲಿ ಪ್ರಜಾಪತಿಯ ಸ್ಥಾನನಿರ್ದೇಶಗಳಿರುತ್ತವೆ.

ಇದಲ್ಲದೇ, ಸೃಷ್ಟಿಕಾಲದಲ್ಲಿ ಪ್ರಜಾಪತಿಯೇ ಅಗ್ನ್ಯಾದಿರೂಪಗಳನ್ನೂ ಧರಿಸಿ ಜಗತ್ತನ್ನು ವ್ಯಾಪಿಸಿದನು ಎಂಬ ವರ್ಣನವೂ ಈ ರೀತಿಯಿರುತ್ತದೆ.

**ಪ್ರಜಾಪತಿರಕಾಮಯತ ಪ್ರಜಾಯೇಯೇತಿ । ಸ ಏತಂ ದಶಹೋತಾರಮಪಶ್ಯತ್ । ತೇನ ದಶಧಾತ್ಮಾನಂ ವಿಧಾಯ । ದಶಹೋತ್ರಾತಪ್ಯತ ।**

(ತೈ. ಬ್ರಾ. ೨-೨-೪)

ಸೃಷ್ಟಿಗಾಗಿ ಸಂಕಲ್ಪವನ್ನು ಮಾಡಿದ ಪ್ರಜಾಪತಿಯು ದಶಹೋತೃಕವಾದ ಮಂತ್ರವನ್ನು (ಚಿತ್ತಿಃಸ್ರುಕ್ ಇತ್ಯಾದಿ) ಸಾಕ್ಷಾತ್ಕರಿಸಿದುದೇ ಅಲ್ಲದೇ, ತನ್ನ ಸ್ವರೂಪವನ್ನೂ ಹತ್ತು ಭಾಗವಾಗಿ ಮಾಡಿ ಜಗತ್ತನ್ನು ವ್ಯಾಪಿಸಿದನು ಎಂದಿರುತ್ತದೆ. ಯಾವ ಯಾವ ರೂಪದಲ್ಲಿ ಎಂಬ ವಿವರಣವು ಯಾಜ್ಞಿಕಪ್ರಕ್ರಿಯೆಯಲ್ಲಿ ವರ್ಣಿತವಾಗಿದೆ.

(೧) **ಬ್ರಾಹ್ಮಣ ಏಕಹೋತಾ । ಸ ಯಜ್ಞಃ**—ಬ್ರಾಹ್ಮಣನು ತಪೋಮಯನು. ತಪಸ್ಸೇ ಯಜ್ಞ ರೂಪವು. ಈ ರೀತಿಯಾಗಿ ತಪೋಮಯವಾದ ಯಜ್ಞದಿಂದ ಜಗತ್ತಿಗೆಲ್ಲ ಉಪಕಾರವನ್ನು ಮಾಡುವುದರಿಂದ ಪ್ರಜಾಪತಿಯು ಇಲ್ಲಿ ಬ್ರಾಹ್ಮಣನೆಂದು ವರ್ಣಿತನಾಗಿದ್ದಾನೆ. ತಪಸ್ಸೇ ಸೃಷ್ಟಿಗೆ ಆಧಾರ, ಯಜ್ಞವೇ ಸೃಷ್ಟಿಯ ಪೋಷಕವು. ಪ್ರಜಾಪತಿಯು ಬ್ರಾಹ್ಮಣರೂಪದಲ್ಲಿ ಇವೆಲ್ಲದರ ಪೋಷಕನು.

(೨) **ಅಗ್ನಿರ್ದ್ವಿಹೋತಾ; । ಸ ಭರ್ತಾ**—ಪಾಕಹವಿರ್ವಹನಗಳಿಂದ ಸಕಲ ವಿಶ್ವವನ್ನೂ ಅಗ್ನಿರೂಪದಿಂದ ಭರಿಸುವುದರಿಂದ ಅಗ್ನಿರೂಪನಾದ ಪ್ರಜಾಪತಿಯು ದ್ವಿಹೋತೃವೆಂದು ವರ್ಣಿತನಾಗಿದ್ದಾನೆ.

(೩) **ಪೃಥಿವೀ ತ್ರಿಹೋತಾ। ಸ ಪ್ರತಿಷ್ಠಾ**—ಅಗ್ನಿ, ಅನ್ನ ಮತ್ತು ಯಾಗಗಳಿಂದ ಸಕಲ ಪ್ರತಿಷ್ಠೆಗಳಿಗೂ ಕಾರಣವಾದುದರಿಂದ ಪೃಥಿವೀಭೂತನಾದ ಪ್ರಜಾಪತಿಗೆ ತ್ರಿಹೋತೃತ್ವವು.

(೪) **ಅಂತರಿಕ್ಷಂ ಚತುರ್ಹೋತಾ। ಸ ವಿಷ್ಠಾಃ**—ವಾಗ್ವಲಸ್ತ್ವ್ಯವಕಾಶಸ್ಥಾನಗಳಿಂದ ಸಕಲ ಜಗತ್ತನ್ನೂ ವಿಧವಿಧವಾಗಿ ಸ್ಥಾಪಿಸುವುದರಿಂದ ಅಂತರಿಕ್ಷರೂಪನಾದ ಪ್ರಜಾಪತಿಗೆ ಚತುರ್ಹೋತೃತ್ವವು.

(೫) **ವಾಯುಃ ಪಂಚಹೋತಾ । ಸ ಪ್ರಾಣಃ**—ಪ್ರಾಣಾದಿ ಪಂಚ ವೃತ್ತಿಗಳಿಂದ ಸಕಲ ಜಗತ್ತನ್ನು ಪ್ರಾಣಯುಕ್ತವನ್ನಾಗಿ ಮಾಡುವುದರಿಂದ ಪಂಚಹೋತೃವೆಂದು ಸ್ತುತವಾಗಿದೆ.

(೬) **ಚಂದ್ರಮಾಷ್ಷಡ್ಢೋತಾ । ಸ ಋತೂನ್ಕಲ್ಪಯಾತಿ**—ಋತು (೬) ಕಲ್ಪನೆಗಳಿಂದ ವಿಶ್ವವನ್ನು ಧರಿಸುವುದರಿಂದ ಚಂದ್ರಮಾರೂಪನಾದ ಪ್ರಜಾಪತಿಗೆ ಷಡ್ಢೋತೃತ್ವವು.

(೭) **ಅನ್ನಗ್ಂ ಸಪ್ತಹೋತಾ। ಸ ಪ್ರಾಣಸ್ಯ ಪ್ರಾಣಃ**—ಶೀರ್ಷಣ್ಯಾದಿ ಸಪ್ತ(೭) ಪ್ರಾಣವೃತ್ತಿಗಳಿಂದ ಸಕಲ ವಿಶ್ವವನ್ನು ಚೈತನ್ಯಯುಕ್ತವಾಗಿರುವಂತೆ ಮಾಡುವುದರಿಂದ ಸಪ್ತಹೋತೃತ್ವವು.

(೮) **ದ್ಯೌರಷ್ಟಹೋತಾ; । ಸೋಽನಾಧೃಷ್ಯಃ**—ಇಂದ್ರಿಯಾತ್ಮಗಳಾದ ಪ್ರಾಣಾದ್ಯಂತಃಕರಣಗಳಿಂದ ವಿಶ್ವವನ್ನು ವೃಷ್ಟ್ಯಾದಿಗಳ ಮೂಲಕ ಜಗತ್ತಿಗೆ ತೃಪ್ತಿಕಾರಕವಾಗಿರುವುದರಿಂದಲೂ, ಸುಖಸ್ಥಾನವಾಗಿರುವುದರಿಂದಲೂ ಪ್ರಜಾಪತಿಗೆ ಅಷ್ಟಹೋತೃತ್ವ.

(೯) **ಆದಿತ್ಯೋ ನವಹೋತಾ। ಸ ತೇಜಸ್ವೀ**—ಹಿಂದೆ ಹೇಳಿದ ಎಂಟು ಶಕ್ತಿಗಳೊಡಗೂಡಿದ ತನ್ನ ದಿವ್ಯ ತೇಜಸ್ಸಿನಿಂದ ಲೋಕವನ್ನು ಬೆಳಗುತ್ತಾನೆ.

(೧೦) **ಪ್ರಜಾಪತಿರ್ದಶಹೋತಾ। ಸ ಇದಗ್ಂ ಸರ್ವಂ।**—ಮೇಲೆ ವರ್ಣಿತವಾದ ಸಕಲ ತತ್ತ್ವಗಳಿಂದ ಕೂಡಿ ಸ್ಥಾವರಜಗತ್ತಿನಲ್ಲಿ ತನ್ನ ಸ್ವರೂಪವನ್ನು ವ್ಯಕ್ತಪಡಿಸಿ ಅದನ್ನೆಲ್ಲ ಮೀರಿದ ಸ್ಥಿತಿಯಲ್ಲಿ ಸ್ವಸ್ವರೂಪವನ್ನು ಹೊಂದಿರುವ ಪ್ರಜಾಪತಿಯು **ದಶಹೋತೃ**ವೆಂದು ವರ್ಣಿತನಾಗಿದ್ದಾನೆ.

ದಶಹೋತ್ರಾಖ್ಯನಾದ ಪ್ರಜಾಪತಿಯಿಂದ ಸಂಕಲ್ಪರೂಪವಾದ ಯಜ್ಞದಿಂದ ಪೂರ್ವಸೃಷ್ಟಿಯಾದನಂತರ, ಪುನಃ ಬಾಹ್ಯಸಾಮಗ್ರಿಗಳ ಅಭಾವದಿಂದ ಅದೇ ರೂಪದಲ್ಲಿ ಮಾನಸಿಕಸಂಕಲ್ಪದಿಂದಲೇ ಉತ್ತರಸೃಷ್ಟಿಯೂ ನೆರವೇರಿಸಲ್ಪಟ್ಟಿತು. ಈ ಯಜ್ಞಕ್ಕೆ ದೇವತೆಗಳು ಸಾಹಾಯ್ಯಕರಾದರು ಎಂದಿರುತ್ತದೆ. ದೇವತೆಗಳೆಂದರೆ

ಪ್ರಜಾಪತಿಯ ಪ್ರಾಣಗಳು ಮತ್ತು ಪ್ರಾಜಾಪತ್ಯವಾದ ಇಂದ್ರಿಯಗಳು ಎಂದರ್ಥ ಮಾಡಿದೆ. ಪೂರ್ವಸೃಷ್ಟಿ ಮತ್ತು ಉತ್ತರಸೃಷ್ಟಿ ಎರಡೂ ಮಾನಸಿಕಸಂಕಲ್ಪರೂಪವೇ ಎಂದು ಹೇಳಲ್ಪಟ್ಟಿದೆ. ಪ್ರಜಾಪತಿಯೇ ಮನೋರೂಪವಾಗಿರುವುದರಿಂದ ಅವನ ಕಾರ್ಯಗಳೂ ಸಹ ಮಾನಸಿಕವಾದ ಸ್ವರೂಪವೇ ಆಗಿರುತ್ತವೆ. ಆದುದರಿಂದಲೇ **ಸ ಮಾನಸೀನ ಆತ್ಮಾ ಜನಾನಾಂ** ಎಂದು ವರ್ಣಿತವಾಗಿರುತ್ತದೆ. ಸೃಷ್ಟಿಗೆ ಪೂರ್ವಭಾವಿಯಾದ ಮಾನಸಿಕಸ್ವರೂಪವು ಶ್ರುತಿವಾಕ್ಯಗಳಲ್ಲಿ ಈ ರೀತಿ ವರ್ಣಿತವಾಗಿದೆ.

**ನೇವ ವಾ ಇದಮಗ್ರೇಽಸದಾಸೀನ್ನೇವ ಸದಾಸೀತ್ । ಆಸೀದಿವ ವಾ ಇದಮಗ್ರೇ ನೇವಾಸೀತ್ತದ್ಧ ತನ್ಮನ ಏವಾಸ ॥**

(ಶ. ಬ್ರಾ. ೧೦-೫-೩-೧)

ಸೃಷ್ಟಿಗೆ ಪೂರ್ವದಲ್ಲಿ ಮೂಲತತ್ತ್ವವು ಸದಾತ್ಮಕವಾಗಿಯಾಗಲಿ ಅಸದಾತ್ಮಕವಾಗಿಯಾಗಲಿ ಇರಲಿಲ್ಲ. ಭಾವಾತ್ಮಕವಾಗಿಯೂ ಇದ್ದಿತು. ಅಭಾವಾತ್ಮಕವಾಗಿಯೂ ಇದ್ದಿತು. ಮತ್ತು ಪೂರ್ಣವಾದ ಮನೋರೂಪದಲ್ಲಿ ಇದ್ದಿತು.

**ತಸ್ಮಾದೇತದೃಷಿಣಾಭ್ಯನೂಕ್ತಂ । ನಾಸದಾಸೀನ್ನೋಸದಾಸೀತ್ತದಾನೀಮಿತಿ ನೇವ ಹಿ ಸನ್ಮನೋ ನೇವಾಸತ್ ॥**

(ಶ. ಬ್ರಾ. ೧೦-೫-೩-೨)

ಆದುದರಿಂದಲೇ **ನಾಸದಾಸೀತ್** ಎಂಬ ಸೂಕ್ತ ದ್ರಷ್ಟೃಗಳಾದ ಋಷಿಗಳಿಂದ ಈ ರೀತಿ ಹೇಳಲ್ಪಟ್ಟಿದೆ. (೧೦-೧೨೯-೧) ಪೂರ್ವದಲ್ಲಿಅಸ್ತಿತ್ವವೂ ಇರಲಿಲ್ಲ. ಅಭಾವರೂಪವೂ ಇರಲಿಲ್ಲ. ಎಂದರೆ, **ಮನಸ್ಸು** ಈ ಎರಡು ಅವಸ್ಥೆಗಳಿಗಿಂತಲೂ ಬೇರೆಯಾದುದರಿಂದ ಈ ರೀತಿ ವರ್ಣಿಸಿದೆ. ಆ ಕಾಲದಲ್ಲಿ ಅದ್ವಿತೀಯವಾಗಿದ್ದ ಮನಸ್ಸಿಗೆ ಸೃಷ್ಟಿಯ ಇಚ್ಛೆಯುಂಟಾಗಿ,

**ತದಿದಂ ಮನಃ ಸೃಷ್ಟಮಾವಿರಬುಭೂಷತ್ । ನಿರುಕ್ತತರಂ ಮೂರ್ತತರಂ ತದಾತ್ಮಾನಮನ್ವೈಚ್ಛತ್ತತ್ತಪೋಽತಪ್ಯತ ತತ್ಪ್ರಾಮೂರ್ಛತ್ತತ್‌ಷಟ್‌ತ್ರಿಗ್‌ಂಶತಗ್‌ಂ ಸಹಸ್ರಾಣ್ಯಪಶ್ಯದಾತ್ಮನೋಽಗ್ನೀನರ್ಕಾನ್ಮನೋಮಯಾನ್ಮನಶ್ಚಿತಸ್ತೇ ಮನಸೈವಾಧೀಯಂತ ಮನಸಾಚೀಯಂತ ಮನಸೈಷು ಗ್ರಹಾ ಅಗೃಹ್ಯಂತ ಮನಸಾಸ್ತುವತ ಮನಸಾ ಶಗ್‌ಂಸನ್ಯತ್ಕಿಂಚ ಯಜ್ಞೇ ಕರ್ಮ ಕ್ರಿಯತೇ ಯತ್ಕಿಂಚ ಯಜ್ಞಿಯಂ ಕರ್ಮ ಮನಸೈವ ತೇಷು ತನ್ಮನೋಮಯೇಷು ಮನಶ್ಚಿತ್ಸು ಮನೋಮಯಮಕ್ರಿಯತ ತದ್ಯತ್ಕಿಂಚೇಮಾನಿ ಭೂತಾನಿ ಮನಸಾ ಸಂಕಲ್ಪಯಂತಿ ತೇಷಾಮೇವ ಸಾ ಕೃತಿಸ್ತಾನೇವಾದಧತಿ ತಾಂಶ್ಚಿನ್ವಂತಿ ತೇಷು ಗ್ರಹಾನ್ ಗೃಹ್ಣಂತಿ ತೇಷು ಸ್ತುವತೇ ತೇಷು ಶಗ್‌ಂಸಂತ್ಯೇತಾವತೀ ವೈ ಮನಸೋ ವಿಭೂತಿರೇತಾವತೀ ವಿಸೃಷ್ಟಿರೇತಾವನ್ಮನಃ ಷಟ್‌ತ್ರಿಗ್‌ಂಶತ್ಸಹಸ್ರಾಣ್ಯಗ್ನಯೋಽರ್ಕಾಸ್ತೇಷಾಮೇಕೈಕ ಏವ ತಾವಾನ್ಯಾವಾನಸೌ ಪೂರ್ವಃ ॥**

(ಶ. ಬ್ರಾ. ೧೦-೫-೩-೩)

ಸೃಷ್ಟ್ಯನಂತರ ಮನಸ್ಸು ತಾನೂ ವ್ಯಕ್ತರೂಪದಲ್ಲಿ ಪ್ರಕಾಶಿತವಾಗಬೇಕೆಂದಿಚ್ಛಿಸಿತು. ಮೂರ್ತರೂಪದಲ್ಲಿ ಗೋಚರವಾಗಬೇಕೆಂದೂ ಇಚ್ಛಿಸಿತು. ಅದು ತಪಸ್ಸನ್ನಾಚರಿಸಿತು. ಅದರ ಫಲವಾಗಿ ಅದು ಸಾಂದ್ರತೆಯನ್ನು

(ಘನತೆಯನ್ನು) ಪಡೆಯಿತು. ಆ ಒಡನೆಯೇ ಅದು ತನ್ನನ್ನೇ ಪ್ರತಿಬಿಂಬಿಸುವ ಮೂವತ್ತು ಆರು ಸಾವಿರಸಂಖ್ಯೆಯುಳ್ಳ ಪೂಜ್ಯವಾದ ಅಗ್ನಿಚಿತಿಯನ್ನು ಕಂಡಿತು. ಅವೆಲ್ಲವೂ ಮನಸ್ಸಿನಿಂದಲೇ ನಿರ್ಮಿತವಾಗಿದ್ದುವು. ಮಾನಸಿಕವಾಗಿಯೇ ಯಜ್ಞವೇದಿಯಲ್ಲಿ ಸ್ಥಾಪಿತವಾಗಿದ್ದವು. ಸೋಮಪಾತ್ರೆಗಳೂ ಮಾನಸಿಕವಾಗಿಯೇ ಸಿದ್ಧವಾದವು. ಮಂತ್ರಗಳೆಲ್ಲವೂ ಮಾನಸಿಕವಾಗಿಯೇ ಪಠಿತವಾದವು. ಯಾವ ಯಾವ ಯಜ್ಞಕರ್ಮಗಳು ನೆರವೇರಲ್ಪಡಬೇಕೋ ಅವೆಲ್ಲವೂ ಮಾನಸಿಕವಾಗಿಯೇ ನೆರವೇರಲ್ಪಟ್ಟವು. ಮಾನಸಿಕವಾಗಿಯೇ ನಿರ್ಮಿತವಾದ ಆ ಯಜ್ಞಕುಂಡದಲ್ಲಿ ಮಾನಸಿಕವಾಗಿಯೇ ಅಗ್ನಿಯನ್ನು ಪ್ರತಿಷ್ಠಾಪಿಸಿ ಸಕಲ ಪೂಜೆಗಳೂ ಸಕಲ ಹವಿಸ್ಸುಗಳೂ ಮಾನಸಿಕವಾಗಿಯೇ ಅರ್ಪಿತವಾದವು.

ಹೀಗೆ ಸೃಷ್ಟಿ, ಸೃಷ್ಟಿಗೆ ಮೂಲ, ಸೃಷ್ಟಿಕಾರ್ಯಗಳು ಸಕಲವೂ ಮನೋರೂಪವಾಗಿರುವುದರಿಂದ ಪ್ರಜಾಪತಿಗೂ ಮನಸ್ಸಿಗೂ ತಾದಾತ್ಮ್ಯವನ್ನೂ ಹೇಳಿರುತ್ತದೆ.

**ತಸ್ಮಾನ್ಮನಸಾ ಪ್ರಜಾಪತಯೇ ಜುಹ್ವತಿ ಮನ ಇವ ಹಿ ಪ್ರಜಾಪತಿಃ**

(ತೈ. ಸಂ. ೨-೫-೧೧-೫)

ಪ್ರಜಾಪತಿಯು ಯಾವ ರೀತಿ ಜಗತ್ತನ್ನೆಲ್ಲ ವ್ಯಾಪಿಸಿರುವನೋ ಅದೇ ರೀತಿ ಮನಸ್ಸೂ ವ್ಯಾಪಿಸಿರುವುದರಿಂದ ಮನಸ್ಸಂಕಲ್ಪರೂಪದಲ್ಲಿಯೇ ಪ್ರಜಾಪತಿಯನ್ನುದ್ದೇಶಿಸಿ ಹವಿಸ್ಸನ್ನರ್ಪಿಸತಕ್ಕದ್ದು ಎಂದು ಮನಸ್ಸಿನ ಮತ್ತು ಮನಸ್ಸಂಕಲ್ಪದ ಸ್ವರೂಪವನ್ನು ವಿವರಿಸಿದೆ. ಲೌಕಿಕವಾದ ದೇಹದ ಪ್ರಭಾವಕ್ಕೆ ಒಳಪಟ್ಟ ಮನಃಸಂಕಲ್ಪಗಳು ಬಂಧಹೇತುಗಳಾಗುತ್ತವೆಯೆಂಬ ಅನೇಕ ಸನ್ನಿವೇಶಗಳಲ್ಲಿರುವ ವರ್ಣನೆಗಳು ಈ ಅಭಿಪ್ರಾಯಕ್ಕೆ ವಿರುದ್ಧವಾಗಿಲ್ಲ. ಪರಬ್ರಹ್ಮವನ್ನು ಪ್ರತಿಬಿಂಬಿಸುವ ಮನಸ್ತತ್ತ್ವವೇ ಇಲ್ಲಿ ವಿವಕ್ಷಿತವಾದ ವಿಷಯ. ಅದಿತತ್ತ್ವದ ಮನಃಸಂಕಲ್ಪವೇ ಯಜ್ಞರೂಪವಾಗಿರುತ್ತದೆ.

**ಮನೋ ವೈ ಯಜ್ಞಸ್ಯ ಬ್ರಹ್ಮಾ ತದ್ಯದಿದಂ ಮನಃ ಸೋಽಸೌ ಚಂದ್ರಃ ಸ ಬ್ರಹ್ಮಾ ಸ ಮುಕ್ತಿಃ ಸಾತಿಮುಕ್ತಿರಿತ್ಯತಿಮೋಕ್ಷಾ ಅಥ ಸಂಪದಃ ॥**

(ಬೃ. ಉ. ೩-೧-೬)

ಮನಸ್ಸೇ ಯಜ್ಞಕ್ಕೆ ಪ್ರಧಾನವಾದ ಬ್ರಹ್ಮ, ಮೇಲಿನ ಲೋಕದಲ್ಲಿ ಬೆಳಗುವ ಚಂದ್ರನೂ, ಬ್ರಹ್ಮನೂ ಮನೋರೂಪಗಳೇ. ಮನಸ್ಸೇ ಆತ್ಯಂತಿಕವಾದ ಮುಕ್ತಿಹೇತುವು.

**ಮನೋಮಯೋಽಯಂ ಪುರುಷೋ ಭಾಃಸತ್ಯಸ್ತಸ್ಮಿನ್ನಂತರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂಚ ॥**

(ಬೃ. ಉ. ೫-೬-೧)

ಈ ಪರಮಪುರುಷನು ಮನೋಮಯನು ಪರಿಪೂರ್ಣವಾದ ತೇಜೋಮಯನು. ಇವನು ತನ್ನ ಸಂಕಲ್ಪಮಾತ್ರದಿಂದಲೇ ಸಕಲ ಜಗತ್ತಿಗೂ ಪ್ರಭುವೂ ನಿಯಾಮಕನೂ ಆಗಿರುತ್ತಾನೆ.

**ಮನೋ ಹ್ಯಾತ್ಮಾ ಮನೋ ಹಿ ಲೋಕೋ ಮನೋ ಹಿ ಬ್ರಹ್ಮ ಮನ ಉಪಾಸ್ಸ್ವೇತಿ ॥**

(ಛಾ. ಉ. ೭-೩)

ಸಕಲ ಜಗತ್ತನ್ನೊಳಗೊಂಡ ಪರಮಾತ್ಮನೇ ಮನೋರೂಪನು. ಸೃಷ್ಟಿಗೆ ಮೂಲ, ಸೃಷ್ಟಿಕಾರ್ಯ ಎರಡಕ್ಕೂ ಈ ರೂಪ ವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಪುರುಷೇಣ ಹವಿಷಾ ಎಂದಿರುವುದಕ್ಕೆ ಸಾಯಣರು **ಪುರುಷಸ್ವರೂಪಮೇವ ಮನಸಾ ಸಂಕಲ್ಪ್ಯ ಮಾನಸಂ ಯಜ್ಞಮತನ್ವತ** ಎಂದು ತಾತ್ಪರ್ಯವನ್ನು ಹೇಳಿದ್ದಾರೆ.

**ದೇವಾಃ** ಎಂದರೆ ಅದೇ ಪುರುಷ ಪ್ರಜಾಪತಿಯ ಇಂದ್ರಿಯಗಳು ಎಂದರ್ಥಮಾಡಿದೆ. **ಸೃಷ್ಟಿಕಾಮಃ ಪ್ರಜಾಪತಿರೇವ ಪ್ರಾಣಾದಿವೃತ್ತಿಭೇದೇನೋಚ್ಯತೇ** ಸೃಷ್ಟಿಯಲ್ಲಿ ಇಚ್ಛೆಯುಳ್ಳ ಪ್ರಜಾಪತಿಯೇ ಈ ರೀತಿ ವ್ಯವಹರಿಸಲ್ಪಟ್ಟಿದ್ದಾನೆ ಎಂದು ಈ ವಾಕ್ಯದ ತಾತ್ಪರ್ಯವನ್ನು ವಿವರಿಸಿದೆ. (ಭಾ. ಭಾ) ಅಥವಾ ದೇಹದ ಇಂದ್ರಿಯಗಳು ಆದಿತ್ಯಾದಿ ದೇವತೆಗಳನ್ನು ಪ್ರತಿಬಿಂಬಿಸುವುದರಿಂದ **ದೇವಾಃ** ಎಂಬುದಕ್ಕೆ ದೇವತೆಗಳು ಎಂದೂ ಅರ್ಥಮಾಡಬಹುದು. ಹೇಗೆಂದರೆ—

**ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು ।**
**ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥**
(ಮು. ಉ. ೩-೨-೭)

ಎಂಬಲ್ಲಿ ದೇಹಾಂತರ್ಗತವಾದ ಸಕಲ ಅವಯವಗಳೂ ಮರಣಾನಂತರ ತಮ್ಮ ತಮ್ಮ ಸ್ವಸ್ಥಾನಕ್ಕೆ ಹೋಗಿ ಸೇರವುವು ಎಂದು ತಿಳಿಸಿದೆ. **ದೇವಾಶ್ಚ ಸರ್ವೇ ಪ್ರತಿದೇವತಾಸು** ಎಂದರೆ, ಚಕ್ಷುರಾದೀಂದ್ರಿಯಗಳು ತಮ್ಮ ತಮ್ಮ ಸ್ವಸ್ಥಾನ ವಾದ ಆದಿತ್ಯಾದಿಗಳಲ್ಲಿ ಹೋಗಿ ಐಕ್ಯವಾಗುವುವು ಎಂದರ್ಥ. ದೇಹಾಂತರ್ಗತವಾಗಿದ್ದಾಗ ಇಂದ್ರಿಯಗಳು ಬಾಹ್ಯ ಜಗತ್ತಿನಲ್ಲಿ ಪ್ರಕಾಶಿಸುವಾಗ ಆದಿತ್ಯಾದಿ ದೇವತೆಗಳು, ಆದುದರಿಂದ ಪ್ರಕೃತದಲ್ಲಿ ದೇವತೆಗಳು ಸಂಕಲ್ಪರೂಪವಾದ ಯಜ್ಞವನ್ನು ಆಚರಿಸಿದರು ಎಂದು ಹೇಳುವಂತೆಯೇ, ಪ್ರಜಾಪತಿಯ ಇಂದ್ರಿಯಗಳು ಆಚರಿಸಿದವು ಎಂದರೂ ತಾತ್ಪರ್ಯವೊಂದೇ ಆಗುತ್ತದೆ.

ಹೀಗೆ ಸೃಷ್ಟಿಯಲ್ಲಿ ಪೂರ್ವ ಸೃಷ್ಟಿ ಮತ್ತು ಉತ್ತರ ಸೃಷ್ಟಿ ಎಂಬ ಎರಡು ವಿಭಾಗಗಳು ಸ್ಥೂಲವಾದವು. ಇವುಗಳಲ್ಲಿ ಅವಾಂತರ ಸೃಷ್ಟಿಗಳೂ ಸೇರಿವೆ. ಪ್ರಜಾಪತಿಯು ಯಜ್ಞವನ್ನಾಚರಿಸಿ ಇಂದ್ರಾದಿಗಳನ್ನು ಸೃಜಿಸಿದನು. ಅದಕ್ಕೆ ಪ್ರತಿಯಾಗಿ ಇಂದ್ರಾದಿಗಳು ಯಜ್ಞವನ್ನಾಚರಿಸಿ ತಮ್ಮ ಪಿತೃವಾದ ಪ್ರಜಾಪತಿಯನ್ನು ತೃಪ್ತಿಗೊಳಿಸಿದರು. ಇದರ ಫಲವಾಗಿ ಜಗತ್ತಿನ ನಾನಾ ಭಾಗಗಳೂ ಉತ್ಪನ್ನವಾದವು ಎಂಬ ಯಜ್ಞ ಮತ್ತು ಯಜ್ಞಫಲಗಳಾದ ಸೃಷ್ಟಿ ಈ ವಿಷಯವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

ಸೃಷ್ಟಿಗೆ ಪೂರ್ವದಲ್ಲಿದ್ದ ಸಲಿಲದಲ್ಲಿ ಸುವರ್ಣಾಂಡವು ಆವಿರ್ಭೂತವಾಗಿ ಅದರಿಂದ ಪ್ರಜಾಪತಿಯು ಪುರುಷ ರೂಪದಲ್ಲಿ ಉತ್ಪನ್ನನಾದ (ಆವಿರ್ಭೂತನಾದ) ವಿಷಯವನ್ನು ಮೇಲೆ ತಿಳಿಸಿದೆ. ಪ್ರಕೃತದಲ್ಲಿ ಜಗತ್ಸೃಷ್ಟಿಗಾಗಿ ಪ್ರಜಾಪತಿಯು ಯಜ್ಞ, ಇವನಿಂದ [illegible] ಇಂದ್ರಾದಿಗಳಿಂದ ನೆರವೇರಿಸಲ್ಪಟ್ಟ ಯಜ್ಞ ಇವುಗಳ ವಿವರವನ್ನು ಸಂಗ್ರಹಿಸಿ ಸೂಕ್ಷ್ಮವಾಗಿ ಮಾತ್ರ ತಿಳಿಸಲಾಗುತ್ತದೆ.

**ತತಃ ಸಂವತ್ಸರೇ ಪುರುಷಃ ಸಮಭವತ್ । ಸ ಪ್ರಜಾಪತಿಃ ।** (ಸಂವತ್ಸರೋ ವೈ ಯಜ್ಞಃ ಪ್ರಜಾಪತಿಃ ೧೧-೧.೧.೧)..................**ಸೋಽರ್ಚಞ್ಛ್ರಾಮ್ಯಂಶ್ಚಚಾರ ಪ್ರಜಾಕಾಮಃ ।**
**ಸ ಆತ್ಮನ್ಯೇವಪ್ರಜಾಪತಿಮುಧತ್ತ ಸ ಆಸ್ಯೇನೈವ ದೇವಾನಸೃಜತ ತೇ ದೇವಾದಿವಮಭಿಪದ್ಯಾ-**

**ಸೃಜ್ಯಂತ ತದ್ದೇವಾನಾಂ ದೇವತ್ವಂ ಯದ್ದಿವಮಭಿಪದ್ಯಾಸೃಜ್ಯಂತ ತಸ್ಮೈ ಸಸೃಜಾನಾಯ ದಿವೇವಾಸ ತದ್ದೇವ ದೇವಾನಾಂ ದೇವತ್ವಂ ಯದಸ್ಮೈ ಸಸೃಜಾನಾಯ ದಿವೇವಾಸ ॥**

(ಶ. ಬ್ರಾ. ೧೧-೧-೬-೭)

ಸಲಿಲದಲ್ಲಿ ವಿಹರಿಸುತ್ತಿದ್ದ ಅಂಡದಿಂದ ಒಂದು ಸಂವತ್ಸರಾನಂತರ ಪ್ರಜಾಪತಿಯು ಉತ್ಪನ್ನನಾದನು. ಈ ಪ್ರಜಾಪತಿಯೇ ಸಂವತ್ಸರರೂಪನು ಮತ್ತು ಯಜ್ಞರೂಪನು. (ಪ್ರಜಾಪತಿಯೇ ಯಜ್ಞರೂಪನೆಂಬುದನ್ನು ಹಿಂದೆ ವಿಶ್ವಕರ್ಮ ಸೂಕ್ತಗಳ ವಿವರಣೆಯಲ್ಲಿ ತಿಳಿಸಿದೆ). ಯಜ್ಞರೂಪನಾದ ಈ ಪ್ರಜಾಪತಿಯೇ ಸ್ತುತಿಮಂತ್ರಗಳನ್ನು ಗಾನಮಾಡುತ್ತಲೂ ಮತ್ತು ತಪಸ್ಸನ್ನಾಚರಿಸುತ್ತಲೂ ಸಂಚರಿಸುತ್ತಿದ್ದನು. ಪ್ರಜೋತ್ಪತ್ತಿಗೆ ಸಾಧಕವಾದ ಗರ್ಭವನ್ನು ತನ್ನ ಮುಖದ ಉಸಿರಿನಿಂದ (ಪ್ರಾಣದಿಂದ) ದೇವತೆಗಳನ್ನು ಸೃಜಿಸಿದನು. ದ್ಯುಲೋಕವನ್ನು ಪ್ರವೇಶಮಾಡುವವರಾಗಿ ದೇವತೆಗಳು ಸೃಷ್ಟರಾದರು. ಪ್ರಕಾಶಮಾನವಾದ ದ್ಯುಲೋಕವನ್ನು ಪ್ರವೇಶಿಸಿ ತಾವೂ ಪ್ರಕಾಶಿಸುವುದರಿಂದಲೇ **ದೇವತೆಗಳು** ಎಂಬ ಹೆಸರು ಪ್ರಸಿದ್ಧವಾಯಿತು. ಪ್ರಕಾಶಮಾನರಾದ ದೇವತೆಗಳ ಉತ್ಪತ್ತಿಯಾದನಂತರವೇ ಪ್ರಜಾಪತಿಗೆ ಹಗಲಿನ ಪ್ರಕಾಶವಾದಂತೆ ಭಾಸವಾಯಿತು.

**ತಾ ವಾ ಏತಾಃ । ಪ್ರಜಾಪತೇರಧಿದೇವತಾ ಅಸೃಜ್ಯಂತಾಗ್ನಿರಿಂದ್ರಃ ಸೋಮಃ ಪರಮೇಷ್ಠೀ ಪ್ರಾಜಾಪತ್ಯಃ ॥**

(ಶ. ಬ್ರಾ. ೧೧-೧-೬-೧೪)

ಅಗ್ನಿ, ಇಂದ್ರ, ಸೋಮ ಮತ್ತು ಪರಮೇಷ್ಠೀ ಪ್ರಾಜಾಪತ್ಯ ಇವರು ಪ್ರಜಾಪತಿಯಿಂದ ಪ್ರಥಮತಃ ಉತ್ಪನ್ನರಾದ ದೇವತೆಗಳು. ಇವರು ಉತ್ಪನ್ನರಾದನಂತರ,

**ತಾಃ ಸಹಸ್ರಾಯುಷೋ ಜಜ್ಞಿರೇ । ತಾ ಯಥಾ ನದ್ಯೈ ಪಾರಂ ಪರಾಪಶ್ಯೇದೇವಗ್ಂ ಸ್ವಸ್ಯಾಯುಷಃ ಪಾರಂ ಪರಾಚಖ್ಯುಃ ॥**

(ಶ. ಬ್ರಾ. ೧೧-೧-೯-೧೫)

ಸಾವಿರ ವರ್ಷಗಳ ಪರಿಮಿತಿಯುಳ್ಳ ಆಯುಸ್ಸುಳ್ಳವರಾಗಿ ಮಾತ್ರವಾದರು. ದೂರದಲ್ಲಿ ನಿಂತಿದ್ದರೂ ಸಹ ನದಿಯ ಒಂದು ದಡದಿಂದ ಇನ್ನೊಂದು ದಡವನ್ನು ಯಾವ ರೀತಿ ನೋಡಬಹುದೋ ಅದೇ ರೀತಿ ಈ ದೇವತೆಗಳೂ ತಮ ಆಯುಸ್ಸಿನ ಪರಿಮಿತಿಯ ಕೊನೆಯ ಭಾಗವನ್ನು ನೋಡಬಲ್ಲವರಾದರು.

**ತಾ ಅರ್ಚಂತ್ಯಃ ಶ್ರಾಮ್ಯಂತ್ಯಶ್ಚೇರುಃ । ತತ ಏನಂ ಪರಮೇಷ್ಠೀ ಪ್ರಾಜಾಪತ್ಯೋ ಯಜ್ಞಮಪಶ್ಯದ್ಯದ್ದರ್ಶಪೂರ್ಣಮಾಸೌ ತಾಭ್ಯಾಮಯಜತ ತಾಭ್ಯಾಮಿಷ್ಟ್ವಾಕಾಮಯತಾಹಮೇವೇದಗ್ಂ ಸರ್ವಗ್ಂ ಸ್ಯಾಮಿತಿ ಸ ಆಪೋಽಭವದಾಪೋ ವಾ ಇದಗ್ಂ ಸರ್ವಂ ತಾ ಯತ್ಪರಮೇ ಸ್ಥಾನೇ ತಿಷ್ಠಂತಿ ಯೋ ಹೀಹಾಭಿಖನೇದಪ ಏವಾಭಿವಿಂದೇತ್ಪರಮಾದ್ವಾ ಏತತ್ಸ್ಥಾನಾದ್ವರ್ಷತಿ ಯದ್ದಿವಸ್ತಸ್ಮಾತ್ಪರಮೇಷ್ಠೀ ನಾಮ ॥**

(ಶ. ಬ್ರಾ. ೧೧-೧-೬-೧೬)

ಈ ದೇವತೆಗಳೂ ಸಹ ಸ್ತುತಿಮಂತ್ರಗಳನ್ನು ಪಠಿಸಿ ಗಾನಮಾಡುತ್ತಲೂ, ತಪಸ್ಸನ್ನಾಚರಿಸುತ್ತಲೂ ಸಂಚರಿಸುತ್ತಿದ್ದರು. ಅವರಲ್ಲಿ ಪರಮೇಷ್ಠೀ ಪ್ರಾಜಾಪತ್ಯನು ದರ್ಶಪೂರ್ಣಮಾಸಗಳ ತತ್ತ್ವವನ್ನು ಸಾಕ್ಷಾತ್ಕರಿಸಿ ಅವುಗಳ ಆಚರಣೆಯಿಂದ

ಪೂಜೆಯನ್ನರ್ಪಿಸಿದನು. ಅನಂತರ ನಾನೇ ಸರ್ವವ್ಯಾಪಿಯಾಗಬೇಕು ಎಂದು ಆಶಿಸಿದನು. ಸಲಿಲವು ಸರ್ವವ್ಯಾಪಕವಾದ ಶಕ್ತಿಯನ್ನು ಹೊಂದಿದ್ದುದರಿಂದ ತಾನೂ ಸಲಿಲ (ಜಲ) ರೂಪಿಯಾದನು. ಜಲದ ಸ್ಥಿತಿಯು ಪೃಥ್ವಿಯಲ್ಲಿರುವುದರಿಂದ ಅತ್ಯೆತ್ತರವಾದ ಪ್ರದೇಶವಾದ ಅಂತರಿಕ್ಷದಿಂದಲೂ ವೃಷ್ಟಿಯು ಸುರಿಯುತ್ತದೆ. ಅದೇ ಪರಮೇಷ್ಠಿಯ ಮಹತ್ತ್ವ.

**ಸ ಪರಮೇಷ್ಠೀ ಪ್ರಜಾಪತಿಂ ಪಿತರಮಬ್ರವೀತ್ । ಕಾಮಪ್ರಂ ವಾ ಅಹಂ ಯಜ್ಞಮದರ್ಶಂ ತೇನ ತ್ವಾ ಯಾಜಯಾನೀತಿ ತಥೇತಿ ತಮಯಾಜಯತ್ಸ ಇಷ್ಟ್ವಾ ಕಾಮಯತಾಹ-ಮೇವೇದಗ್ಂ ಸರ್ವಗ್ಂ ಸ್ಯಾಮಿತಿ ಸ ಪ್ರಾಣೋಽಭವತ್ಪ್ರಾಣೋ ವಾ ಇದಗ್ಂ ಸರ್ವಮಯಂ ವೈ ಪ್ರಾಣೋ ಯೋಽಯಂ ಪವತೇ ಸ ಪ್ರಜಾಪತಿಸ್ತಸ್ಯ ದೃಷ್ಟಿರ್ಯದೇವ ವೇದೇತ್ಥಾ-ದ್ವಾತೀತಿ ಯದ್ವೈ ಕಿಂ ಚ ಪ್ರಾಣಿ ಸ ಪ್ರಜಾಪತಿಃ ಸ ಯೋ ಹೈವಮೇತಾಂ ಪ್ರಜಾಪತೇರ್ದೃಷ್ಟಿಂ ವೇದಾವಿರಿವ ಹೈವ ಭವತಿ ॥**

(ಶ. ಬ್ರಾ. ೧೧-೧-೬-೧೭)

ಸರ್ವಕಾಮಗಳನ್ನೂ ತೃಪ್ತಿಗೊಳಿಸಬಲ್ಲ ಒಂದು ಯಜ್ಞತತ್ತ್ವವನ್ನು ನಾನು ಸಾಕ್ಷಾತ್ಕರಿಸಿಕೊಂಡಿದ್ದೇನೆ. ನಿನ್ನನ್ನು ತೃಪ್ತಿಗೊಳಿಸಲು ಆ ಯಜ್ಞವನ್ನು ನಾನು ಆಚರಿಸುತ್ತೇನೆ ಎಂದು ಪ್ರಾಜಾಪತ್ಯ ಪರಮೇಷ್ಠಿಯು ಪಿತೃವಾದ ಪ್ರಜಾಪತಿಗೆ ಹೇಳಿದನು. ಹಾಗೆಯೇ ಆಗಲಿ ಎಂದು ಪ್ರಜಾಪತಿಯು ಉತ್ತರಕೊಟ್ಟನು. ಅದರಂತೆಯೇ ಯಜ್ಞವೂ ನೆರವೇರಿತು. ಆ ಯಜ್ಞವು ನೆರವೇರಿದೊಡನೆಯೇ, ನಾನು ಸರ್ವವ್ಯಾಪಕನಾಗಬೇಕು ಎಂದು ಪ್ರಜಾಪತಿಯು ಇಚ್ಛಿಸಿದನು. ಆ ಇಚ್ಛೆಗೆ ಅನುಸಾರವಾಗಿ ಸರ್ವವ್ಯಾಪಕವಾದ ಪ್ರಾಣರೂಪನಾದನು. ವಾಯುರೂಪದಿಂದ ಎಲ್ಲೆಲ್ಲೂ ಬೀಸುವವನು ಪ್ರಜಾಪತಿಯೇ ಅಲ್ಲದೆ ಬೇರೆಯಿಲ್ಲ. ಈ ತತ್ತ್ವವನ್ನರಿಯುವುದೂ ಪ್ರಜಾಪತಿಯ ದರ್ಶನಶಕ್ತಿಯೇ ಆಗಿದೆ. ಪ್ರಾಣ (ವಾಯು) ವಿರತಕ್ಕ ಸಕಲವೂ ಪ್ರಜಾಪತಿಯ ಅಂಶವೇ ಆಗಿರುತ್ತದೆ. ಈ ತತ್ತ್ವವನ್ನರಿತವನೂ ಅದೇ ದರ್ಶನಶಕ್ತಿಯನ್ನು ಪಡೆಯುತ್ತಾನೆ.

**ಸ ಪ್ರಜಾಪತಿರಿಂದ್ರಂ ಪುತ್ರಮಬ್ರವೀತ್ । ಅನೇನ ತ್ವಾ ಕಾಮಪ್ರೇಣ ಯಜ್ಞೇನ ಯಾಜಯಾನಿ ಯೇನ ಮಾಮಿದಂ ಪರಮೇಷ್ಠ್ಯಯಾಯಜದಿತಿ ತಥೇತಿ ತಮಯಾಜಯತ್ಸ ಇಷ್ಟ್ವಾಕಾಮಯ-ತಾಹಮೇವೇದಗ್ಂ ಸರ್ವಗ್ಂ ಸ್ಯಾಮಿತಿ ಸ ವಾಗಭವದ್ವಾಗ್ವಾ ಇದಗ್ಂ ಸರ್ವಂ ತಸ್ಮಾದಾಹುರಿಂದ್ರೋ ವಾಗಿತಿ ।**

(ಶ. ಬ್ರಾ. ೧೧-೧-೬-೧೮)

ಪರಮೇಷ್ಠಿಯು ನನ್ನ ತೃಪ್ತಿಗಾಗಿ ನೆರವೇರಿಸಿದ ಈ ಕಾಮಪ್ರವಾದ (ಇಚ್ಛಾಪೂರಕವಾದ) ಯಜ್ಞವನ್ನಾಚರಿಸಿ ನಾನೂ ಸಹ ನಿನಗೆ ಹರ್ಷವನ್ನುಂಟುಮಾಡುತ್ತೇನೆ ಎಂದು ಪ್ರಜಾಪತಿಯು ತನ್ನ ಪುತ್ರನಾದ ಇಂದ್ರನಿಗೆ ಹೇಳಿದನು. ಹಾಗೆಯೇ ಆಗಲಿ ಎಂದು ಇಂದ್ರನು ಅದಕ್ಕೆ ಒಪ್ಪಿದನು. ಪ್ರಜಾಪತಿಯು ಆ ಯಜ್ಞವನ್ನು ನೆರವೇರಿಸಿದೊಡನೆಯೇ ಇಂದ್ರನು ತಾನೂ ಸರ್ವವ್ಯಾಪಕನಾಗಬೇಕೆಂದಿಚ್ಛಿಸಿದನು. ಆಗ ಸರ್ವವ್ಯಾಪಕವಾದ ವಾಗ್ರೂಪವನ್ನು ಹೊಂದಿದನು. ಆದುದರಿಂದಲೇ ಇಂದ್ರನಿಗೂ, ವಾಕ್ಕಿಗೂ ತಾದಾತ್ಮ್ಯವನ್ನು ಹೇಳುತ್ತಾರೆ.

**ಸ ಇಂದ್ರೋಽಗ್ನೀಷೋಮೌ ಭ್ರಾತರಾವಬ್ರವೀತ್ । ಅನೇನ ವಾಂ ಕಾಮಪ್ರೇಣ ಯಜ್ಞೇನ ಯಾಜಯಾನಿ ಯೇನ ಮಾಮಿದಂ ಪಿತಾ ಪ್ರಜಾಪತಿರಯೀಯಜದಿತಿ ತಥೇತಿ ತಾವಯಾ-**

**ಜಯುತ್ತಾವಿಷ್ಟ್ವಾಕಾಮಯೇತಾಮಾವಮೇವೇದಗ್‌ಂ ಸರ್ವಗ್‌ಂ ಸ್ಯಾವೇತಿ ತಯೋರನ್ನಾದ ಏವಾನ್ಯತರೋಽಭವದನ್ನಮನ್ಯತರೋಽನ್ನಾದ ಏವಾಗ್ನಿರಭವದನ್ನಗ್‌ಂ ಸೋಮೋಽನ್ನಾ- ವಶ್ಚ ವಾ ಇದಗ್‌ಂ ಸರ್ವಮನ್ನಂ ಚ ||**

(ಶ- ಬ್ರಾ. ೧೧-೧-೬-೧೯)

ಪ್ರಜಾಪತಿಯ ಯಜ್ಞದಿಂದ ತೃಪ್ತಿಯನ್ನು ಹೊಂದಿದ ಇಂದ್ರನು ತನ್ನ ಸಹೋದರರಾದ ಅಗ್ನಿ ಮತ್ತು ಸೋಮದೇವತೆಗಳನ್ನು ಕುರಿತು ನಮ್ಮ ಪಿತೃವಾದ ಪ್ರಜಾಪತಿಯು ಯಾವ ಯಜ್ಞವನ್ನಾಚರಿಸಿ ನನ್ನನ್ನು ತೃಪ್ತಿಗೊಳಿಸಿದನೋ ಅದೇ ಯಜ್ಞಾಚರಣೆಯಿಂದ ನಿಮ್ಮನ್ನೂ ತೃಪ್ತಿಗೊಳಿಸುತ್ತೇನೆ ಎಂದು ತಿಳಿಸಿದನು. ಅವರು ಅದಕ್ಕೆ ಒಪ್ಪಿಕೊಂಡರು. ಇಂದ್ರನು ಆ ಇಚ್ಛಾಪೂರಕವಾದ ಯಜ್ಞವನ್ನಾಚರಿಸಿದೊಡನೆಯೇ ಅಗ್ನಿ ಮತ್ತು ಸೋಮ ಇಬ್ಬರೂ ತಾವೂ ಸರ್ವ ವ್ಯಾಪಿಗಳಾಗಬೇಕೆಂದಿಚ್ಛಿಸಿದರು. ಆ ಇಚ್ಛೆಗನುಸಾರವಾಗಿಯೇ ಅಗ್ನಿಯು ಅನ್ನವನ್ನು ಭಕ್ಷಿಸುವವನಾದನು ಮತ್ತು ಸೋಮನು ಅನ್ನರೂಪನಾದನು. ಅನ್ನ ಮತ್ತು ಅನ್ನವನ್ನು ಸೇವಿಸುವವರು ಇವರಿಂದಲೇ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ. ಅವರೇ ಸೋಮ ಮತ್ತು ಅಗ್ನಿರೂಪರು.

**ತಾ ವಾ ಏತಾಃ । ಪಂಚ ದೇವತಾ ಏತೇನ ಕಾಮಪ್ರೇಣ ಯಜ್ಞೇನಾಯಜಂತ ತಾ ಯತ್ಕಾಮಾ ಅಯಜಂತ ಸ ಆಭ್ಯಃ ಕಾಮಃ ಸಮಾರ್ಧ್ಯತ ಯತ್ಕಾಮೋ ಹ ವಾ ಏತೇನ ಯಜ್ಞೇನ ಯಜತೇ ಸೋಽಸ್ಮೈ ಕಾಮಃ ಸಮೃಧ್ಯತೇ ।**

(ಶ. ಬ್ರಾ. ೧೧-೧-೬-೨೦)

ಈ ಐದು ದೇವತೆಗಳೂ ಒಟ್ಟಿಗೆ ಸೇರಿ ಅನಂತರ ಈ ಯಾಗವನ್ನಾಚರಿಸಿದರು. ಯಾವ ಯಾವ ಇಚ್ಛೆಯನ್ನು ಹೊಂದಿ ಅದನ್ನು ಪಡೆಯಬೇಕೆಂಬ ಉದ್ದಿಶ್ಯದಿಂದ ಯಾಗವನ್ನಾಚಸಿದರೋ ಆ ಇಚ್ಛೆಯೆಲ್ಲವೂ ಕೈಗೂಡಿದವು. ಹೀಗೆಯೇ ಈ ಯಾಗವನ್ನು ಯಾರು ಆಚರಿಸಿದರೂ ಅವರ ಇಷ್ಟಾರ್ಥವು ಕೈಗೂಡುತ್ತದೆ. ಕಾಮಪ್ರಸಂಜ್ಞಕವಾದ ಯಾಗಾಚರಣೆಯಿಂದ ಉತ್ಪನ್ನವಾದ ಲೋಕಗಳು ಯಾವ ಯಾವುವು ಎಂದರೆ,

**ತಾ ಇಷ್ಟ್ವಾ ಪ್ರಾಚೀಂ ದಿಶಮಪಶ್ಯನ್ । ತಾಂ ಪ್ರಾಚೀಮೇವಾಕುರ್ವತ ಸೇಯಂ ಪ್ರಾಚ್ಯೇವ ದಿಕ್ತಸ್ಮಾದಿಮಾಃ ಪ್ರಜಾಃ ಪ್ರಾಚ್ಯಃ ಸರ್ಪಂತಿ ಪ್ರಾಚೀಗ್ ಹ್ಯೇತಾಮಕುರ್ವತೋಽಸ್ಯೈನಾ- ಮಿತಃ ಕುರ್ವೀಮಹೀತಿ ತಾಮೂರ್ಜಮಕುರ್ವತೇಮಾಂ ಖಲೂರ್ಜಂ ಪಶ್ಯೇಮೇತಿ ಸಾಸೌ ದ್ಯೌರಭವತ್ ।**

(ಶ. ಬ್ರಾ. ೧೧-೧-೬-೨೧)

ಕಾಮಪ್ರಯಾಗದ ಆಚರಣೆಯ ಫಲವಾಗಿ ಪ್ರಜಾಪತಿ ಮತ್ತು ಅವನಿಂದ ಉತ್ಪನ್ನರಾದ ಇಂದ್ರಾದಿದೇವತೆಗಳು ಪ್ರಥಮತಃ ಪೂರ್ವದಿಕ್ಕಿನ ಸ್ವರೂಪವನ್ನು ಸಾಕ್ಷಾತ್ಕರಿಸಿದರು. ಅನಂತರ ಅದನ್ನೇ ಮುಂಭಾಗದ ದಿಕ್ಕನ್ನಾಗಿ ಕಲ್ಪಿಸಿದರು. ದೇವತೆಗಳೇ ಈ ದಿಕ್ಕನ್ನು ಮುಂಭಾಗದ ದಿಕ್ಕನ್ನಾಗಿ ಕಲ್ಪಿಸಿದುದರಿಂದ ಇಲ್ಲಿಯ ಪ್ರಜೆಗಳೆಲ್ಲರೂ ಮುಂದುವರಿಯುವ ರೀತಿಯಲ್ಲಿಯೇ (ಪ್ರಗತಿಪರರಾಗಿಯೇ) ನಡೆಯುತ್ತಾರೆ. ಈ ದಿಕ್ಕಿನ ಸ್ವರೂಪವನ್ನು ಇನ್ನೂ ಉತ್ತಮಪಡಿಸೋಣ ಎಂದು ದೇವತೆಗಳು ಇಚ್ಛಿಸಿ ಅದನ್ನು ಶಕ್ತಿಯುತವನ್ನಾಗಿ ಮಾಡಿದರು. ನಾವು ಅದರ ದರ್ಶನ

ವನ್ನು ಹೊಂದೋಣ ಎಂದು ಅವರು ಆಶಿಸಿದೊಡನೆಯೇ ಶಕ್ತಿರೂಪವಾದ ಆ ತತ್ತ್ವವು ಮೇಲ್ಭಾಗಕ್ಕೆ ಸರಿದು ದೇವತೆಗಳನ್ನು ಸಮೀಪಿಸಿತು. ಅದೇ ದ್ಯುಲೋಕವಾಯಿತು.

**ಅಥ ದಕ್ಷಿಣಾಂ ದಿಶಮಪಶ್ಯನ್ । ತಾಂ ದಕ್ಷಿಣಾಮೇವಾಕುರ್ವತ ಸೇಯಂ ದಕ್ಷಿಣೈವ ದಿಕ್ತಸ್ಮಾದು ದಕ್ಷಿಣತ ಏವ ದಕ್ಷಿಣಾ ಉಪತಿಷ್ಠಂತೇ ದಕ್ಷಿಣತೋಽಭ್ಯಜಂತಿ ದಕ್ಷಿಣಾಗ್ ಹ್ಯೇತಾಮಕುರ್ವತೋಽಪ್ಯೇನಾಮಿತಃ ಕುರ್ವೀಮಹೀತಿ ತಂ ಲೋಕಮಕುರ್ವತೇಮಂ ಖಲು ಲೋಕಂ ಪಶ್ಯೇಮೇತಿ ತದಿದಮಂತರಿಕ್ಷಮಭವದೇಷ ವೈ ಲೋಕಃ ಸಾ ಯಥಾ ಹೈವೇಯಂ ಪ್ರತಿಷ್ಠಾವಿರಸ್ಮಿಂಲ್ಲೋಕೇ ಪೃಥಿವ್ಯೇವಮು ಹೈವೇಷಾ ಪ್ರತಿಷ್ಠಾವಿರಮುಷ್ಮಿಂಲ್ಲೋಕ ಇದಮಂತರಿಕ್ಷಗ್ಂ ಸ ಯದಿಹ ಸನ್ನಮುಂ ಲೋಕಂ ನ ಪಶ್ಯತಿ ತಸ್ಮಾದಾಹುಃ ಪರೋಕ್ಷಮಸೌ ಲೋಕ ಇತಿ ॥**

(ಶ. ಬ್ರಾ. ೧೧-೧.೬-೨೨)

ಅನಂತರ ದಕ್ಷಿಣದಿಕ್ಕಿನ ದರ್ಶನವಾಯಿತು. ಅದನ್ನೇ ಬಲಭಾಗದ ದಿಕ್ಕನ್ನಾಗಿ ಕಲ್ಪಿಸಿದರು. ಆದುದರಿಂದಲೇ ಯಜ್ಞವೇದಿಯ ಬಲಭಾಗದಲ್ಲಿ ದಕ್ಷಿಣೆಯು (ಗೋವುಗಳು) ಸ್ಥಾಪಿತವಾಗುತ್ತವೆ. ಇದನ್ನು ಉತ್ತಮಗೊಳಿಸೋಣ ಎಂದು ಅವರು ಆಶಿಸಿದರು. ಆ ಇಚ್ಛೆಯ ಫಲವಾಗಿ ಅದು ಅಂತರಿಕ್ಷವಾಗಿ ಪರಿವರ್ತಿತವಾಯಿತು. ಅದೇ ವಾಯು ರೂಪವನ್ನೂ ಹೊಂದಿತು. ಇಲ್ಲಿ ಯಾವ ರೀತಿ ಸಕಲವೂ ಪ್ರತಿಷ್ಠಿತವಾಗಲು ಪೃಥ್ವಿಯೇ ಆಧಾರವಾಗಿದೆಯೋ ಅದರಂತೆಯೇ ಅಂತರಿಕ್ಷದಲ್ಲಿ ವಾಯುವೇ ಪ್ರತಿಷ್ಠೆಯ ಆಧಾರವಾಗಿರುತ್ತದೆ. ಆದರೆ, ಪೃಥ್ವಿಯ ಮೇಲೆ ನಿಂತಿದ್ದಾಗ ಅಂತರಿಕ್ಷವು ದೃಶ್ಯವಾಗುವುದಿಲ್ಲ. ಆದುದರಿಂದಲೇ ಅಂತರಿಕ್ಷವು ಅದೃಶ್ಯವೆಂದು ಜನರು ಹೇಳುತ್ತಾರೆ.

**ಅಥ ಪ್ರತೀಚೀಂ ದಿಶಮಪಶ್ಯನ್ । ತಾಮಾಶಾಮಕುರ್ವತ ತಸ್ಮಾದ್ಯಪ್ರಾಙ್ಸೃತ್ವಾವಿಂದತ ಏತಾಮೇವ ತೇನ ದಿಶಮೇತ್ಯಾಶಾಗ್ ಹ್ಯೇತಾಮಕುರ್ವತೋಽಪ್ಯೇನಾಮಿತಃ ಕುರ್ವೀಮಹೀತಿ ತಾಗ್ ಶ್ರಿಯಮಕುರ್ವತೇಮಾಂ ಖಲು ಶ್ರಿಯಂ ಪಶ್ಯೇಮೇತಿ ಸೇಯಂ ಪೃಥಿವ್ಯಭವಚ್ಛ್ರೀರ್ವಾ ಇಯಂ ತಸ್ಮಾದ್ಯೋಽಸ್ಯೈ ಭೂಯಿಷ್ಠಂ ವಿಂದತೇ ಸ ಏವ ಶ್ರೇಷ್ಠೋ ಭವತಿ ॥**

(ಶ. ಬ್ರಾ. ೧೧-೧-೬-೨೩)

ಅನಂತರ ಪ್ರಜಾಪತಿಯೂ ಮತ್ತು ಇಂದ್ರಾದಿದೇವತೆಗಳೂ ಸಹ ಪಶ್ಚಿಮದಿಕ್ಕಿನ ದರ್ಶನವನ್ನು ಪಡೆದರು. ಅದನ್ನು ಆಶೆಯ ಪ್ರತಿನಿಧಿಯನ್ನಾಗಿ ಮಾಡಿದರು. ಆದುದರಿಂದಲೇ, ಪೂರ್ವಾಭಿಮುಖವಾಗಿ ಹೋಗಿ ಪುನಃ ಪಶ್ಚಿಮಾಭಿಮುಖ ವಾಗಿ ಹಿಂತಿರುಗಿದರೆ ಆಗ ಆಶಾಪೂರ್ಣವಾಗುತ್ತದೆ. ಇದನ್ನೂ ಉತ್ತಮಗೊಳಿಸೋಣ ಎಂದು ದೇವತೆಗಳು ಇಚ್ಛಿಸಿದರು. ಆ ಇಚ್ಛೆಯ ಫಲವಾಗಿ ಅದನ್ನು ಸಂಪದ್ರೂಪದಲ್ಲಿ ಪರಿವರ್ತಿಸಿದರು. ಆ ಸಂಪತ್ತಿನ ಸ್ವರೂಪದ ದರ್ಶನವನ್ನು ಹೊಂದೋಣ ಎಂದು ಅಪೇಕ್ಷಿಸಿದನಂತರ ಅದು ಪೃಥ್ವೀರೂಪಕ್ಕೆ ಮಾರ್ಪಾಡನ್ನು ಹೊಂದಿತು. ಈ ಪೃಥ್ವಿಯ ಆಶ್ರಯವನ್ನೂ ಅನುಗ್ರಹವನ್ನೂ ಹೊಂದಿದವನು ಅತ್ಯುತ್ತಮವಾದ ಸಂಪತ್ತನ್ನು ಹೊಂದುತ್ತಾನೆ.

**ಅಥೋದೀಚೀಂ ದಿಶಮಪಶ್ಯನ್ । ತಾಮಪೋಽಕುರ್ವತೋಽಪ್ಯೇನಾಮಿತಃ ಕುರ್ವೀಮಹೀತಿ ತಂ ಧರ್ಮಮಕುರ್ವತ ಧರ್ಮೋ ವಾ ಆಪಸ್ತಸ್ಮಾದ್ಯದೇಮಂ ಲೋಕಮಾಪ ಆಗಚ್ಛಂತಿ**

**ಸರ್ವಮೇವೇದಂ ಯಥಾಧರ್ಮಂ ಭವತ್ಯಥ ಯದಾವೃಷ್ಟಿರ್ಭವತಿ ಬಲಿಯಾನೇವ ತರ್ಹ್ಯಬಲೀಯಸ ಆದತ್ತೇ ಧರ್ಮೋ ಹ್ಯಾಪಃ ||**

(ಶ. ಬ್ರಾ. ೧೧-೧.೬.-೨೪)

ಅನಂತರ ಅವರು ಉತ್ತರದಿಕ್ಕನ್ನು ಸಾಕ್ಷಾತ್ಕರಿಸಿಕೊಂಡರು. ಅದನ್ನು ಜಲರೂಪದಲ್ಲಿ ಪರಿವರ್ತಿಸಿದರು. ಇದನ್ನು ಉತ್ತಮಪಡಿಸೋಣ ಎಂದು ಇಚ್ಛಿಸಿದರು. ಜಲವೇ ಧರ್ಮರೂಪವಾದುದರಿಂದ ಅದನ್ನು ಧರ್ಮಕ್ಕೆ ಪ್ರತಿನಿಧಿಯಾಗಿರುವಂತೆ ಮಾಡಿದರು. ಆದುದರಿಂದ ಪೃಥ್ವಿಗೆ ಜಲವು ಪ್ರವಹಿಸಿ ಬರುವಾಗಲೆಲ್ಲ ಆಯಾ ಧರ್ಮಕ್ಕನುಸಾರವಾಗಿಯೇ ಬರುತ್ತದೆ. ಜಲರಹಿತವಾದ ಕ್ಷಾಮವು ಪ್ರಾಪ್ತವಾದರೆ ಆಗ ಜಲಲೋಪವಾದುದರಿಂದ ಧರ್ಮವೂ ಲುಪ್ತವಾಗುತ್ತದೆ. ಧರ್ಮಾಭಾವದ ಕಾಲದಲ್ಲಿ ಅಧರ್ಮವು ಹರಡಿ ದೇಹಬಲವನ್ನು ಹೊಂದಿದವರು ದೈಹಿಕವಾದ ಆಶಕ್ತಿಯನ್ನು ಹೊಂದಿದವರನ್ನು ಹಿಂಸಿಸಿ ತಮ್ಮ ಅನ್ಯಾಯವನ್ನು ಪ್ರದರ್ಶಿಸುತ್ತಾರೆ. ದೇಹಕ್ಕೆ ಶಾಂತಿಯಿರುವುದಿಲ್ಲ. (ಇದನ್ನೇ ಮತ್ಸ್ಯನ್ಯಾಯವೆನ್ನುತ್ತಾರೆ).

**ತಾ ವಾ ಏತಾಃ | ಏಕಾದಶದೇವತಾಃ | ಪಂಚ ಪ್ರಯಾಜಾಃ | ದ್ವಾವಾಜ್ಯಭಾಗೌ ಸ್ವಿಷ್ಟ-ಕೃತ್ತ್ರಯೋಽನುಯಾಜಾಃ |**

(ಶ. ಬ್ರಾ. ೧೧-೧.೬-೨೫)

ಐದು ಪ್ರಯಾಜಗಳು, ಎರಡು ಆಜ್ಯಭಾಗಗಳು, ಸ್ವಿಷ್ಟಕೃತ್, ಮೂರು ಅನುಯಾಜಗಳು. ಯಜ್ಞದ ಈ ಹನ್ನೊಂದು ಭಾಗಗಳೂ ಹನ್ನೊಂದು ದೇವತೆಗಳೆಂದು ಪ್ರಸಿದ್ಧವಾಗಿವೆಯೆಂದು ತಿಳಿಸಿ ಯಜ್ಞಭಾಗಗಳಿಗೂ, ದೇವತೆಗಳಿಗೂ ತಾದಾತ್ಮ್ಯವನ್ನು ತಿಳಿಸಿದೆ. ಆದುದರಿಂದ ಯಜ್ಞವೇ ಸೃಷ್ಟಿಗೆ ಸಾಧನ ಮತ್ತು ಯಜ್ಞರಾಹಿತ್ಯವೇ ನಾಶಕ್ಕೆ ಸಾಧನವೆಂದು ತಿಳಿಸಿದೆ. ಹೇಗೆಂದರೆ—

**ದೇವಾಶ್ಚ ವಾ ಅಸುರಾಶ್ಚ | ಉಭಯೇ ಪ್ರಾಜಾಪತ್ಯಾಃ ಪಸ್ಪೃಧಿರೇ | ತತೋಽಸುರಾ ಅತಿಮಾನೇನ್ನೈವ ಕಸ್ಮಿನ್ನು ವಯಂ ಜುಹುಯಾಮೇತಿ ಸ್ವೇಸ್ವೇಷ್ವಾಸ್ಯೇಷು ಜುಹ್ವತಶ್ಚೇರು ಸ್ತೇಽತಿಮಾನೇನ್ನೈವ ಪರಾಬಭೂವುಸ್ತಸ್ಮಾನ್ನಾತಿಮನ್ಯೇತ ಪರಾಭವಸ್ಯ ಹೈತನ್ಮುಖಂ ಯದತಿಮಾನಃ ||**

(ಶ. ಬ್ರಾ. ೧೧-೧-೮-೧)

ದೇವತೆಗಳು ಮತ್ತು ಅಸುರರು ಈ ಎರಡು ಗುಂಪಿನವರೂ ಯಜ್ಞರೂಪನಾದ ಪ್ರಜಾಪತಿಯಿಂದಲೇ ಉತ್ಪನ್ನರಾದರು ಅಸುರರು ಸ್ವಾಭಿಮಾನದಿಂದ ಕೂಡಿದವರಾಗಿ ನಾವು ಯಾರಿಗೆ ಆಹುತಿಯನ್ನರ್ಪಿಸಬೇಕು ಎಂದು ನಿಜವಾದ ಯಜ್ಞವನ್ನು ತಿರಸ್ಕರಿಸಿ ತಮ್ಮ ಬಾಯಿಯಲ್ಲಿಯೇ ಆಹುತಿಯನ್ನರ್ಪಿಸಿಕೊಂಡರು. ಅವರು ತಮ್ಮ ಅಹಂಕಾರದಿಂದಲೇ ಅಪ್ರಯೋಜಕರಾದರು. ಸ್ವಾರ್ಥ ಮತ್ತು ಅಹಂಕಾರಗಳು ನಾಶಸಾಧನಗಳು.

**ಅಥ ದೇವಾಃ | ಅಥೈತಮಾತ್ಮನಃ ಪ್ರತಿಮಾನಸೃಜತ ಯದ್ಯಜ್ಞಂ ತಸ್ಮಾದಾಹುಃ ಪ್ರಜಾ-ಪತೇರ್ಯಜ್ಞ ಇತ್ಯಾತ್ಮನೋ ಹ್ಯೇತಂ ಪ್ರತಿಮಾನಸೃಜತ ||**

(ಶ. ಬ್ರಾ. ೧೧-೧-೮-೨)

ದೇವತೆಗಳು ಮಾತ್ರ ಸ್ವಾರ್ಥರಹಿತರಾಗಿ ಪರಸ್ಪರ ಶ್ರೇಯಸ್ಸಿಗಾಗಿ ಆಹುತಿಯನ್ನು ಅರ್ಪಿಸತೊಡಗಿದರು. ಆಗ ಯಜ್ಞರೂಪನಾದ ಪ್ರಜಾಪತಿಯು ತನ್ನನ್ನೇ ಅವರಿಗೆ ಆಹುತಿರೂಪದಲ್ಲಿ ಅರ್ಪಿಸಿದನು. ಆಗ ಯಜ್ಞವು ದೇವತೆಗಳಿಗೆ ಸೇರಿದುದಾಯಿತು. ಅದೇ ಅವರ ಅನ್ನ.

**ಸ ದೇವೇಭ್ಯ ಆತ್ಮಾನಂ ಪ್ರದಾಯ । ಅಥೈತಮಾತ್ಮನಃ ಪ್ರತಿಮಾಮಸೃಜತ ಯದ್ಯಜ್ಞಂ ತಸ್ಮಾದಾಹುಃ ಪ್ರಜಾಪತಿರ್ಯಜ್ಞ ಇತ್ಯಾತ್ಮನೋ ಹ್ಯೇತಂ ಪ್ರತಿಮಾಮಸೃಜತ ॥**

(ಶ. ಬ್ರಾ. ೧೧.೧.೮.೩)

ಪ್ರಜಾಪತಿಯು ದೇವತೆಗಳಿಗೆ ತನ್ನನ್ನೇ ಅರ್ಪಿಸಿದನಂತರ. ತನ್ನ ಪ್ರತಿನಿಧಿಯಾದ ಯಜ್ಞವನ್ನು ಉತ್ಪನ್ನಮಾಡಿದನು. ಈ ರೀತಿ ತನ್ನನ್ನೇ ಪ್ರತಿಬಿಂಬಿಸಲು ತನ್ನದೇ ಆದ ರೂಪವುಳ್ಳ ಯಜ್ಞವನ್ನು ಪ್ರಜಾಪತಿಯು ನಿರ್ಮಿಸಿದುದಕ್ಕಾಗಿ ಪ್ರಜಾಪತಿಯೇ ಯಜ್ಞವೆಂದು ತಾದಾತ್ಮ್ಯವನ್ನು ಹೇಳಿದೆ.

ವಿಶ್ವವೆಲ್ಲವೂ ಯಜ್ಞಮಯವಾಗಿರುವುದರಿಂದ ಪುರುಷನ (ಮಾನವನ) ಜೀವನವನ್ನೂ ಯಜ್ಞರೂಪವೆಂದು ಹೇಳಿದೆ. ಆದುದರಿಂದಲೇ ಮಾನವನಿಗೆ ಮೂರು ಜನ್ಮಗಳೆಂದೂ ತಿಳಿಸಿದೆ. ಹೇಗೆಂದರೆ—

**ತ್ರಿರ್ಹ ವೈ ಪುರುಷೋ ಜಾಯತೇ । ಏತನ್ನ್ವೇವ ಮಾತುಶ್ಚಾಧಿ ಪಿತುಶ್ಚಾಗ್ರೇ ಜಾಯತೇಽಥ ಯಂ ಯಜ್ಞ ಉಪನಮತಿ ಸ ಯದ್ಯಜತೇ ತದ್ದ್ವಿತೀಯಂ ಜಾಯತೇಽಥ ಯತ್ರ ಮ್ರಿಯತೇ ಯತ್ರೈನಮಗ್ನಾವಭ್ಯಾದಧತಿ ಸ ಯತ್ತತಃ ಸಂಭವತಿ ತತ್ತೃತೀಯಂ ಜಾಯತೇ ತಸ್ಮಾತ್ತ್ರಿಃ ಪುರುಷೋ ಜಾಯತ ಇತ್ಯಾಹುಃ ।**

(ಶ. ಬ್ರಾ. ೧೧-೨-೧-೧)

ಪುರುಷನು ಮೂರು ಸಲ ಜನ್ಮವನ್ನು ಹೊಂದುತ್ತಾನೆ. ಈ ಮೂರು ವಿಧವೂ ಹೀಗಿರುತ್ತವೆ. ಮೊದಲು ಮಾತಾ ಪಿತೃಗಳಿಂದ ಹುಟ್ಟುವುದು. ಎರಡನೆಯ ಸಹ ಯಜ್ಞಮೂಲವಾದ ಪೂಜಾದಿಗಳಿಂದ ಪೂತವಾದ ದೇಹವನ್ನು ಪಡೆಯುವುದು. ಅವನ ಮರಣಾನಂತರ ಚಿತೆಯ ಮೇಲೆ ಇಟ್ಟು ದಹಿಸಿದನಂತರ ಪುನಃ ಜನ್ಮವನ್ನು ಪಡೆಯುವುದು ಮೂರನೆಯ ಸಲ. ಎಲ್ಲವೂ ಯಜ್ಞಮಯವೇ ಆಗಿರುತ್ತದೆ.

ಹೀಗೆ ಸೃಷ್ಟಿಗೆ ಮೂಲವೂ ಯಜ್ಞ, ಸೃಷ್ಟಿಕಾರ್ಯವೂ ಯಜ್ಞರೂಪ ಮತ್ತು ಸೃಷ್ಟವಾದ ಸಕಲ ಜಗತ್ತೂ ಯಜ್ಞರೂಪವೇ ಆಗಿದೆ. ಪೂರ್ವಸೃಷ್ಟಿಗೆ ವಿಶ್ವಕರ್ಮನ ಆತ್ಮಯಜ್ಞವು ಮೂಲವಾಗಿರುವಂತೆಯೇ, ಉತ್ತರ ಸೃಷ್ಟಿಗೆ ದೇವತೆಗಳು ಪರಮಪುರುಷನ ರೂಪವಾದ ಹವಿಸ್ಸನ್ನು ಅರ್ಪಿಸಿ ಆದಿಪುರುಷನ ಸೃಷ್ಟಿಕಾರ್ಯವನ್ನು ಮುಂದು ವರಿಸುತ್ತಾರೆ ಎಂಬುದೇ ಪ್ರಕೃತಋಕ್ಕಿನ ಮುಖ್ಯತಾತ್ಪರ್ಯ. ಅದನ್ನೇ ಪುರುಷೇಣ ಹವಿಷಾ ದೇವಾ ಯಜ್ಞ-ಮತನ್ವತ ಎಂದು ಈ ಋಕ್ಕಿನ ಪೂರ್ವಾರ್ಧದಲ್ಲಿ ತಿಳಿಸಿದೆ.

**ವಸಂತೋಽಸ್ಯಾಸೀದಾಜ್ಯಂ** ಎಂಬ ಉತ್ತರಾರ್ಧದಲ್ಲಿ ಯಜ್ಞಕ್ಕೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳಿದೆ. ಪುರುಷಾತ್ಮಕವಾದ ಯಜ್ಞದಲ್ಲಿ ಪುರುಷನೇ ಹವಿಸ್ಸು. ಪುರುಷನೇ ಯಜ್ಞವು ಮತ್ತು ಯಜ್ಞನೇ ಸಂವತ್ಸರವು. ಆದುದರಿಂದ ಪುರುಷನೇ ಸಂವತ್ಸರವು. ಹೀಗೆ ಒಂದಕ್ಕೊಂದಕ್ಕೆ ತಾದಾತ್ಮ್ಯವನ್ನು ತಿಳಿಸಿದೆ.

ಯಜ್ಞಕ್ಕೆ ಯಾವ ರೀತಿ ಆಜ್ಯ, ಇಧ್ಮ ಮತ್ತು ಹವಿಸ್ಸು ಇವು ಮೂರೂ ಪೋಷಕಗಳೋ ಆ ರೀತಿ ಸಂವತ್ಸರಕ್ಕೆ ವಸಂತ, ಗ್ರೀಷ್ಮ ಮತ್ತು ಶರತ್ ಈ ಮೂರು ಅವಯವಗಳೂ ಪೂರಕಗಳೂ ಮತ್ತು ಪೋಷಕಗಳೂ ಆಗಿವೆ. ಯಜ್ಞವೇ ಸಕಲ ಜಗತ್ಸೃಷ್ಟಿಗೂ ಮೂಲವೆಂದೂ ಜಗತ್ಪೋಷಣೆಗೂ ಆಧಾರವೆಂದೂ ವಿಶದಪಡಿಸಿ ಈ ವಿಷಯದಲ್ಲಿ ಶ್ರುತಿವಾಕ್ಯಗಳನ್ನುದಾಹರಿಸಿ ಹಿಂದೆ ವಿವರಿಸಿ ತಿಳಿಸಿದೆ. ಅದರಂತೆಯೇ ಸಂವತ್ಸರತತ್ತ್ವವೂ ಸಹ ಸಕಲ ಲೋಕಕ್ಕೂ ಸಕಲ ವ್ಯವಹಾರಗಳಿಗೂ ಮೂಲವೆಂದು ಹೇಳಿರುವ ವಾಕ್ಯಗಳೇ, ಸಂವತ್ಸರಕ್ಕೂ ಯಜ್ಞಕ್ಕೂ ತಾದಾತ್ಮ್ಯವನ್ನು ಹೇಳಿರುತ್ತವೆ.

**ಸಂವತ್ಸರೋ ಹಿ ಸರ್ವೇಷಾಂ ಭೂತಾನಾಂ ಪ್ರತಿಷ್ಠಾ ।**

(ಶ. ಬ್ರಾ. ೮-೪-೧-೨೨)

ಸಂವತ್ಸರವೇ ಸಕಲ ಲೋಕಗಳಿಗೂ ಸಕಲ ಭೂತಗಳಿಗೂ ಪ್ರತಿಷ್ಠೆಯಾಗಿರುತ್ತದೆ. ಎಂದರೆ ಆಧಾರವಾಗಿರುತ್ತದೆ. (Foundation) ಏತಕ್ಕೆಂದರೆ, ಪ್ರಜಾಪತಿಯು ಸಂವತ್ಸರರೂಪದಲ್ಲಿಯೇ ಜಗತ್ತಿನ ಸಕಲ ವಸ್ತುಗಳನ್ನು ಉತ್ಪನ್ನಮಾಡುತ್ತಾನೆಂಬುದು ಪ್ರಸಿದ್ಧವಾಗಿದೆ.

**ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರೇಣ ವೈ ಸಯುಗ್ಭೂತ್ವಾ ಪ್ರಾಜನಯತ್ ॥**

(ಶ. ಬ್ರಾ. ೮-೨-೨-೮)

ವೈಶ್ವಾನರಾಗ್ನಿರೂಪನಾದ ಪ್ರಜಾಪತಿಯು ಸಂವತ್ಸರದೊಂದಿಗೆ ಐಕ್ಯವನ್ನು ಹೊಂದಿ ಸಕಲ ಜಗತ್ತನ್ನೂ ಉತ್ಪನ್ನ ಮಾಡುತ್ತಾನೆ. ಈ ಮೂರೂ ಬೇರೆ ಬೇರೆ ತತ್ತ್ವಗಳಲ್ಲ.

**ಪ್ರಜಾಪತಿರೇಷೋಽಗ್ನಿಃ ಸಂವತ್ಸರ ಉ ಪ್ರಜಾಪತಿಸ್ತಸ್ಯ ಯದೂರ್ಧ್ವಂ ॥**

(ಶ. ಬ್ರಾ. ೮-೪-೨-೧೭)

ಪ್ರಜಾಪತಿಯೇ ಅಗ್ನಿಯು. ಸಂವತ್ಸರವೇ ಪ್ರಜಾಪತಿಯು. ಈ ತತ್ತ್ವಗಳು ಮೂಲಪುರುಷನ ಅವಸ್ಥಾವಿಶೇಷಗಳೇ ವಿನಾ ಬೇರೆಯಲ್ಲ. ವಿಶ್ವಕರ್ಮನ ಯಜ್ಞದಿಂದ ಉತ್ಪನ್ನರಾದ ಸಕಲ ದೇವತೆಗಳೂ ಯಾವ ರೀತಿ ವಿಶ್ವಕರ್ಮಾಖ್ಯನಾದ ಪುರುಷನ ಅವಯವಗಳಂತೆ ಪರಸ್ಪರ ಸಂಬಂಧವನ್ನು ಹೊಂದಿರುವರೋ, ಅದರಂತೆ ವಸಂತಾದಿ ಋತುಗಳೂ ಸಂವತ್ಸರದ ಅವಯವಗಳಾಗಿ ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ. ಸಂವತ್ಸರವು ಸೃಷ್ಟಿಕಾರ್ಯದಲ್ಲಿ ಪ್ರಜಾಪತಿಯನ್ನು ಪ್ರತಿಬಿಂಬಿಸುವಂತೆ, ಸಂವತ್ಸರದ ಅವಯವಗಳಾದ ವಸಂತಾದಿ ಋತುಗಳೂ ದೇವತೆಗಳನ್ನು ಪ್ರತಿಬಿಂಬಿಸುತ್ತವೆ. ಈ ವಿಷಯವನ್ನು ಅಗ್ನಿಚಯನದ **ಋತವ್ಯ** ಪ್ರಕರಣದಲ್ಲಿ ವಿಶದವಾಗಿ ತಿಳಿಸಿದೆ. ಪಾರ್ಥಿವವಾದ ಯಜ್ಞಕುಂಡವು ವಿಶ್ವಯಜ್ಞವನ್ನು ಪ್ರತಿಬಿಂಬಿಸುತ್ತದೆ. ವಿಶ್ವಾತ್ಮಕನಾದ ಪ್ರಜಾಪತಿಯೇ ಯಜ್ಞವೇದಿ, ಯಜ್ಞಾಹುತಿ ಎಲ್ಲವೂ ಆಗಿರುತ್ತಾನೆ. ದೇವತೆಗಳು ಯಜ್ಞಕ್ರಿಯೆಯ ಸಾಮಗ್ರಿಗಳು ಮತ್ತು ಯಜ್ಞಕರ್ತರು (ಉತ್ತರಸೃಷ್ಟಿಕಾಲದಲ್ಲಿ ಮಾತ್ರ) ಅದರಂತೆಯೇ ಅಶ್ವಯಜ್ಞವನ್ನು ಪ್ರತಿಬಿಂಬಿಸುವ ಪಾರ್ಥಿವವಾದ ಯಜ್ಞದಲ್ಲಿ ಯಜ್ಞವೇದಿನಿರ್ಮಾಣಕ್ಕೆ ಸಾಮಗ್ರಿಗಳಾದ ಸಕಲವಾದ ಇಷ್ಟಿಕೆಗಳೂ (ಇಟ್ಟಿಗೆ) ಪ್ರಜಾಪತಿಯ ಅವಯವಗಳಾದ ದೇವತೆಗಳನ್ನೂ ಮತ್ತು ಸಂವತ್ಸರದ ಅವಯವಗಳಾದ ವಸಂತಾದಿಋತುಗಳನ್ನು ನಿರ್ದೇಶಿಸುತ್ತವೆ. ವಸಂತಾದಿ ಋತುಗಳು ಒಂದು ದೃಷ್ಟಿಯಿಂದ ಯಜ್ಞವೇದಿನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳು. ಇನ್ನೊಂದು ದೃಷ್ಟಿಯಿಂದ ಯಜ್ಞಾಹುತಿರೂಪಗಳು (ಆಜ್ಯ, ಇಧ್ಮ ಇತ್ಯಾದಿಗಳು) ಹೇಗೆಂದರೆ—

**ಋತವ್ಯಾ ಉಪದಧಾತಿ । ಋತವ ಏತೇ ಯದೃತವ್ಯಾ ಋತೂನೇವೈತದುಪದಧಾತಿ ತದೇತತ್ಸರ್ವಂ ಯದೃತವ್ಯಾಃ ಸಂವತ್ಸರೋ ವಾ ಋತವ್ಯಾಃ ಸಂವತ್ಸರ ಇದಗ್ಂ ಸರ್ವ-ಮಿದಮೇವೈತತ್ಸರ್ವಮುಪದಧಾತ್ಯಥೋ ಪ್ರಜನನಮೇತತ್ಸಂವತ್ಸರೋ ವಾ ಋತವ್ಯಾಃ ಸಂವತ್ಸರಃ ಪ್ರಜನನಂ ಪ್ರಜನನಮೇವೈತದುಪದಧಾತಿ ॥**

(ಶ. ಬ್ರಾ. ೮-೭-೧-೧)

ಋತುಸಂಬಂಧಿಯಾದ ಇಷ್ಟಿಕೆಗಳು ಋತುರೂಪವಾಗಿಯೇ ಇರುತ್ತವೆ. ಋತುಗಳೇ ಸಂವತ್ಸರಾತ್ಮಕಗಳಾದುದರಿಂದ ಋತುಗಳಲ್ಲಿ ಸರ್ವಸ್ವವೂ ಅಡಕವಾಗಿವೆ. ಸಂವತ್ಸರವು ಪ್ರಜನನಕ್ಕೆ (ಸಂತಾನೋತ್ಪತ್ತಿಗೆ) ಮೂಲವಾದುದರಿಂದ ಋತುಗಳೂ ಆ ಶಕ್ತಿಯನ್ನು ಹೊಂದಿವೆಯೆಂದರ್ಥ. ಆದುದರಿಂದ ಋತುಸಂಬಂಧಿಯಾದ ಇಷ್ಟಿಕೆಗಳನ್ನು ಸ್ಥಾಪಿಸಿ ಯಜ್ಞವೇದಿಯನ್ನು ನಿರ್ಮಾಣ ಮಾಡುವುದರಿಂದ ಪ್ರಜನನಕ್ಕೆ ಸಾಧನವನ್ನು ಸ್ಥಾಪಿಸಿದಂತಾಗುತ್ತದೆ. ಎಂದು ಸೃಷ್ಟಿಕಾರ್ಯಕ್ಕೂ ಮತ್ತು ಯಜ್ಞಾಂಗವಾದ ಕಾರ್ಯಗಳಿಗೂ ಸಂಬಂಧವನ್ನು ತೋರಿಸಿ ಯಜ್ಞಾತ್ಮಕವಾದ ಸಂವತ್ಸರದ ಅವಯವಗಳಾದ ಋತುಗಳ ಮಹತ್ತ್ವವನ್ನು ಪ್ರಶಂಸಿಸಿದೆ. ಅಲ್ಲದೆ—

**ಯದ್ವೇವರ್ತವ್ಯಾ ಉಪದಧಾತಿ । ಕ್ಷತ್ರಂ ವಾ ಋತವ್ಯಾ ವಿಶ ಇಮಾ ಇತರಾ ಇಷ್ಟಕಾಃ ಕ್ಷತ್ರಂ ತದ್ವಿಶ್ಯತ್ತಾರಂ ದಧಾತಿ ತಾಃ ಸರ್ವಾಸು ಚಿತಿಷೂಪದಧಾತಿ ಸರ್ವಸ್ಯಾಂ ತದ್ವಿಶಿ ಕ್ಷತ್ರಮತ್ತಾರಂ ದಧಾತಿ ॥**

(ಶ. ಬ್ರಾ. ೮-೭-೧-೨)

ಸಂವತ್ಸರಾತ್ಮಕವಾದ ಕಾಲವು ಸಕಲ ಜಗತ್ತಿಗೂ ನಿಯಾಮಕವಾದುದರಿಂದ ಸಂವತ್ಸರದ ಅವಯವಗಳಾದ ಋತುಗಳೂ ನಿಯಾಮಕವಾಗಿರುತ್ತವೆ. ಜಗತ್ತಿನ ಸಕಲ ವಸ್ತುಗಳ ಸ್ಥಿತಿಗತಿಗಳೂ ಇವುಗಳ ಅಧೀನ. ಹಾಗೆಯೇ, ಅವನ್ನು ಪ್ರತಿಬಿಂಬಿಸುವ ಇಷ್ಟಿಕೆಗಳು ಪ್ರಭುಗಳು. (ಯಜ್ಞವೇದಿಯ) ಇತರ ಇಷ್ಟಿಕೆಗಳು ಅವುಗಳ ಪ್ರಜೆಗಳೋ ಎಂಬಂತಿವೆ. ಅವುಗಳ ಸರ್ವತೋಮುಖವಾದ ಪ್ರಭುತ್ವವನ್ನು ತೋರಿಸಲು ಪ್ರತಿಸಾಲಿನಲ್ಲಿಯೂ ಅವನ್ನು ಪ್ರತಿಷ್ಠಾಪಿಸಬೇಕು.

ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ದೇವತೆಗಳಲ್ಲಿ ಪರಸ್ಪರ ಐಕಮತ್ಯವಿಲ್ಲದಿದ್ದರೆ ಪ್ರಜಾಪತಿಯ ಸೃಷ್ಟಿಕಾರ್ಯವನ್ನು ಮುಂದುವರಿಸಲಾಗುವುದಿಲ್ಲ. ಅವರವರ ಸೃಷ್ಟಿಯಲ್ಲಿ ವೈವಿಧ್ಯವಿದ್ದರೂ, ಪರ್ಯವಸಾನದಲ್ಲಿ ಎಲ್ಲವೂ ಸಾಮರಸ್ಯವನ್ನು ಹೊಂದುವಂತಿರಬೇಕು. ಇಲ್ಲದಿದ್ದರೆ ಅವು ನಾಶವನ್ನು ಹೊಂದುತ್ತವೆ. ಹಾಗೆಯೇ, ಋತುಗಳೂ ಸಹ ಬಾಹ್ಯಪ್ರಪಂಚದ ದೃಷ್ಟಿಗೆ ಬೇರೆ ಬೇರೆಯಾಗಿ ಕಂಡರೂ, ಅವೆಲ್ಲವೂ ಒಟ್ಟಿಗೆ ಸಾಮರಸ್ಯವನ್ನು ಹೊಂದಿದ ವಿನಾ ಸಂವತ್ಸರದ ಸೃಷ್ಟಿಕಾರ್ಯವನ್ನು ಮುಂದುವರಿಸಲಾಗುವುದಿಲ್ಲ ಎಂಬ ವಿಷಯವನ್ನು ಈ ರೀತಿ ತಿಳಿಸಲಾಗಿದೆ. ಮತ್ತು ಇಷ್ಟಿಕೆಗಳನ್ನು ನಿರ್ದೇಶಿಸುವಾಗ **ಯದ್ವೇವ ಋತವ್ಯಾ** ಎಂದು ಅವುಗಳ ದಿವ್ಯತ್ವವನ್ನು ಪ್ರಶಂಸಿಸುವ ವಾಕ್ಯಗಳೂ ಈ ಅಂಶವನ್ನು ಸ್ಪಷ್ಟಪಡಿಸುತ್ತವೆ.

**ಯದ್ವೇವರ್ತವ್ಯಾ ಉಪದಧಾತಿ । ಸಂವತ್ಸರ ಏಷೋಽಗ್ನಿಃ ಸ ಋತವ್ಯಾಭಿಃ ಸಂಗ್ಂಹಿತಃ ಸಂವತ್ಸರಮೇವೈತದೃತುಭಿಃ ಸಂತನೋತಿ ಸಂದಧಾತಿ ತಾ ವೈ ನಾನಾಪ್ರಭೃತಯಃ ಸಮಾನೋದರ್ಕಾ ಋತವೋ ವಾ ಅಸೃಜ್ಯಂತ ತೇ ಸೃಷ್ಟಾ ನಾನೈವಾಸನ್ ॥**

(ಶ. ಬ್ರಾ. ೮-೭-೧-೩)

ಋತುಸಂಬಂಧಿಯಾದ ದ್ವಿವ್ಯೇಷ್ಟಿಕೆಗಳನ್ನು ಸ್ಥಾಪಿಸುವ ಉದ್ದಿಶ್ಯವೇನು ? ಇತರ ಇಷ್ಟಿಕೆಗಳಿಂದ ವೇದಿನಿರ್ಮಾಣ ವಾಗುವುದಿಲ್ಲವೇ ಎಂಬ ಪ್ರಶ್ನೆಯು ಸಂಭವಿಸಿದರೆ ಅದಕ್ಕೆ ಉತ್ತರರೂಪವಾಗಿ ಈ ವಾಕ್ಯವಿರುತ್ತದೆ ಸಂವತ್ಸರವು ಅನುಸ್ಯೂತವಾಗಿ ಮುಂದುವರಿಯಬೇಕಾದರೆ ಋತುಗಳ ಸಹಾಯವಿಲ್ಲದಿದ್ದರೆ ಸಾಧ್ಯವಿಲ್ಲ. ಅಗ್ನಿಚಿತಿಯೂ ಸಂವತ್ಸರರೂಪವೇ ಆದುದರಿಂದ ಸಂವತ್ಸರಾವಯುವಗಳಾದ ಈ ಇಷ್ಟಿಕೆಗಳಿಂದಲೇ ಸಾಧ್ಯ. ಅದಿಲ್ಲದಿದ್ದರೆ ಅನುಸ್ಯೂತವಾದ (ತಡೆಯಿಲ್ಲದ) ಸಂಬಂಧವಿರುವುದಿಲ್ಲ. ಆರಂಭದಲ್ಲಿ ಈ ಋತುಗಳು ಬೇರೆ ಬೇರೆ ರೂಪವನ್ನು ಹೊಂದಿದ್ದರೂ ಕೊನೆಯಲ್ಲಿ ಸಾಮರಸ್ಯವನ್ನು ಹೊಂದುತ್ತವೆ. ಋತುಗಳೂ ಪ್ರಥಮತಃ ಉತ್ಪನ್ನವನ್ನು ಹೊಂದಿದುದರಿಂದ ವೈವಿಧ್ಯವು ನಿಯತವಾಗಿದ್ದೇ ಇದ್ದಿತು. ಆದರೆ—

**ತೇಽಬ್ರುವನ್ । ನ ವಾ ಇತ್ಥಗ್‌ಂ ಸಂತಃ ಶಕ್ಷ್ಯಾಮಃ ಪ್ರಜನಯಿತುಗ್‌ಂ ರೂಪೈಃ ಸಮಾಯಾ- ಮೇತಿ ತ ಏಕೈಕಮೃತುಗ್‌ಂ ರೂಪೈಃ ಸಮಾಯಂಸ್ತಸ್ಮಾದೇಕೈಕಸ್ಮಿನ್ನೃತೌ ಸರ್ವೇಷಾ- ಮೃತೂನಾಗ್‌ಂ ರೂಪಂ ತಾ ಯನ್ನಾನಾಪ್ರಭೃತಯೋ ನಾನಾ ವ್ಯಸೃಜ್ಯಂತಾಥ ಯತ್ಸಮಾನೋದರ್ಕಾ ರೂಪೈರ್ಹಿ ಸಮಾಯನ್।**

(ಶ. ಬ್ರಾ. ೮.೭ ೧.೪)

ವೈವಿಧ್ಯವನ್ನು ಹೊಂದಿ ಉತ್ಪನ್ನವಾದ ಋತುಗಳು ಪರಸ್ಪರ ಕಲೆತು ಈ ರೀತಿ ಯೋಚಿಸಿದವು. ನಾವು ಬೇರೆ ಬೇರೆ ಸ್ವರೂಪವನ್ನು ಹೊಂದಿದ್ದರೆ ಪ್ರಜನನಕಾರ್ಯವು ಮುಂದುವರಿಯುವುದಿಲ್ಲ. ನಾವು ನಮ್ಮ ನಮ್ಮ ರೂಪಗಳೊಂದಿಗೆ ಐಕ್ಯವನ್ನು ಹೊಂದೋಣ. ಹಾಗೆಯೇ ಪ್ರತಿಯೊಂದು ಋತುವಿನಲ್ಲಿಯೂ ಉಳಿದ ಋತುಗಳು ತಮ್ಮ ವೈಯಕ್ತಿಕವಾದ ರೂಪವನ್ನು ಸಂಯೋಜಿಸಿದವು. ಆದುದರಿಂದಲೇ, ಪ್ರತಿಯೊಂದು ಋತುವಿನಲ್ಲಿಯೂ ಎಲ್ಲಾ ಋತುಗಳ ಅಂಶವೂ ಇರುತ್ತದೆ. ಹೀಗೆ ಅವು ಪರಸ್ಪರ ಸಂಬಂಧವನ್ನು ಹೊಂದದೇ ಇರುವಂತೆ ಕಾಣಿಸಿಕೊಂಡರೂ ಪೂರ್ಣವಾದ ಸಂಬಂಧವಿದ್ದೇ ಇರುತ್ತದೆ. ಈ ಸಂಬಂಧವೇ ಪ್ರಜನನಕ್ಕೆ ಆಧಾರವಾಗಿರುತ್ತದೆ. ಪ್ರಜನನಕ್ಕೆ ಮೂಲವಾದ ಯಜ್ಞದಲ್ಲಿ ನಾನಾ ಸಾಮಗ್ರಿಗಳ ಸಂಬಂಧವನ್ನು ಕಲ್ಪಿಸುವುದಕ್ಕಾಗಿಯೇ ಯಜ್ಞವೇದಿಯ ಪ್ರತಿಯೊಂದು ಸಾಲಿನಲ್ಲೂ ಈ ಇಷ್ಟಿಕೆಗಳ ಸ್ಥಾಪನವು ಇದ್ದೇ ಇರುತ್ತದೆ. ಸಂವತ್ಸರಾತ್ಮಕವಾದ ಯಜ್ಞವು ಪ್ರಜಾಪತಿಯ ಅವಸ್ಥಾವಿಶೇಷವಾದರೆ, ಆಗ ಯಜ್ಞಾವಯವಗಳಾದ ಋತವ್ಯಗಳು (ಇಷ್ಟಿಕೆಗಳು) ಪ್ರಜಾಪತಿಯ ಅವಯವಗಳಾದ ಯಾವ ಯಾವ ದೇವತೆಗಳನ್ನು ನಿರ್ದೇಶಿಸುತ್ತವೆ. ಎಂದರೆ—

**ಸ ಉಪದಧಾತಿ । ತಪಶ್ಚ ತಪಸ್ಯಶ್ಚ ಶೈಶಿರಾವೃತೂ ಇತಿ ನಾಮನೀ ಏನಯೋರೇತೇ ನಾಮಭ್ಯಾ- ಮೇವೈನೇ ಏತದುಪದಧಾತ್ಯಸೌ ವಾ ಆದಿತ್ಯಸ್ತಪಸ್ತಸ್ಮಾದೇತಾವೃತೂ ಅನಂತರ್ಹಿತೌ ತದ್ವೈತೇತಸ್ಮಾದೇತಾವೃತೂ ಅನಂತರ್ಹಿತೌ ತಸ್ಮಾದೇತೌ ತಪಶ್ಚ ತಪಸ್ಯಶ್ಚ ॥**

(ಶ. ಬ್ರಾ. ೮-೭.೧೫)

ಮಾಘ ಮತ್ತು ಫಾಲ್ಗುನ ಎಂಬ ಎರಡೂ ಶಿಶಿರಋತುವಿನ ಮಾಸಗಳು ಎಂದು ಪ್ರಶಂಸಿಸುವ ವಾಜಸನೇಯಸಂಹಿತೆಯ ವಾಕ್ಯವನ್ನು (೧೫-೫೭) ಪಠಿಸುತ್ತ ಈ ಋತುವಿನ ಪ್ರತಿನಿಧಿಯಾದ ಇಷ್ಟಿಕೆಗಳನ್ನು ಸ್ಥಾಪಿಸಬೇಕು. ತಪಿಸುವ (ದಹಿಸುವ) ಆದಿತ್ಯನೇ ತಪ ಎಂದು ನಿರ್ದಿಷ್ಟನಾಗಿದ್ದಾನೆ. ಋತುಗಳ ವಿಭಾಗಕ್ಕೆ ಅವನೇ ಕಾರಣನು. ಆದುದರಿಂದಲೇ

ತಪ, ತಪಸ್ಯ ಎಂಬ ನಾಮನಿರ್ದೇಶವಿರುತ್ತದೆ ಎಂದು ಅಗ್ನಿಗೂ ಸಂವತ್ಸರಕ್ಕೂ ಇರುವ ಸಂಬಂಧವನ್ನೂ ಮತ್ತು ಋತವ್ಯಸಂಜ್ಞಕವಾದ ಇಷ್ಟಿಕೆಗಳ ಸಹಾಯದಿಂದ ಮುಂದುವರಿಯುವ ಅಗ್ನಿಕಾರ್ಯವನ್ನೂ ಈ ರೀತಿ ತಿಳಿಸಿದೆ.

**ಅಗ್ನೇರಂತಃಶ್ಲೇಷೋಽಸೀತಿ। ಸಂವತ್ಸರ ಏಷೋಽಗ್ನಿಃ ಸ ಋತವ್ಯಾಭಿಃ ಸಗ್ಂಹಿತಃ ಸಂವತ್ಸರಮೇವೈತದೃತುಭಿಃಸಂತನೋತಿ ಸಂದಧಾತಿ ಕಲ್ಪೇತಾಂ ದ್ಯಾವಾಪೃಥಿವೀ ಕಲ್ಪಂತಾಮಾಪ ಓಷಧಯ ಇತೀದಮೇವೈತತ್ಸರ್ವಮೃತುಭಿಃ ಕಲ್ಪಯತಿ ಕಲ್ಪಂತಾಮಗ್ನಯಃ ಪೃಥಙ್ಮಮ ಜ್ಯೈಷ್ಠ್ಯಾಯ ಸವ್ರತಾ ಇತ್ಯಗ್ನಯೋ ಹ್ಯೇತೇ ಪೃಥಗ್ಯದೇತಾ ಇಷ್ಟಕಾಸ್ತೇ ಯಥಾನಯೋರೃತ್ವೋರ್ಜ್ಯೈಷ್ಠ್ಯಾಯ ಕಲ್ಪೇರನ್ನೇವಮೇತದಾಹ ಯೇಽಗ್ನಯಃ ಸಮನಸೋಽಂತರಾ ದ್ಯಾವಾಪೃಥಿವೀ ಇಮೇ ಇತಿ ಯಥೈವ ಯಜುಸ್ತಥಾ ಬಂಧುಃ ಶೈಶಿರಾವೃತೂ ಅಭಿಕಲ್ಪಮಾನಾ ಇಂದ್ರಮಿವ ದೇವಾ ಅಭಿಸಂವಿಶಂತ್ವಿತಿ ಯಥೇಂದ್ರಂ ದೇವಾ ಅಭಿಸಂವಿಷ್ಟಾ ಏವಮಿಮಾವೃತೂ ಜ್ಯೈಷ್ಠ್ಯಾಯಾಭಿಸಂವಿಶಂತ್ವಿತ್ಯೇತದ್ದ್ವೇ ಇಷ್ಟಕೇ ಭವತೋ ದ್ವೌ ಹಿ ಮಾಸಾವೃತುಃ ಸಕೃತ್ಸಾದಯತ್ಯೇಕಂ ತದೃತುಂ ಕರೋತಿ ॥**

(ಶ. ಬ್ರಾ. ೮-೭-೧-೬)

ಎಲೈ ಸಂವತ್ಸರದ ಪ್ರತಿನಿಧಿಯಾದ ಅಗ್ನಿಚಿತಿಯೇ, ಅಗ್ನಿಯ ನಾನಾಕಾರ್ಯಗಳಿಗೆ ಒಂದು ಸಂಬಂಧವನ್ನು ಕಲ್ಪಿಸಿ ಅದನ್ನು ಮುಂದುವರಿಸಲು ಋತವ್ಯಸಂಜ್ಞಕವಾದ ಇಷ್ಟಿಕೆಗಳು ನಿನಗೆ ಸಹಾಯಮಾಡುತ್ತಿವೆ ಎಂದು ಯಜ್ಞಕರ್ತನು ಅಗ್ನಿಚಿತಿಯನ್ನು ಪ್ರಶಂಸಿಸಿ ಋತುಗಳ ಸಂಯೋಗಕಾರಕನಾಗಿ ಸಂವತ್ಸರವು ನಿರ್ವಿಘ್ನವಾಗಿ ಮುಂದುವರಿದು ತನ್ನ ಕಾರ್ಯವನ್ನು ನಿರ್ವಿಘ್ನವಾಗಿ ನೆರವೇರಿಸುವಂತೆ ಮಾಡುತ್ತಾನೆ. ದ್ಯಾವಾಪೃಥಿವಿಗಳು ಪರಸ್ಪರ ಸಂಬಂಧವನ್ನು ಮುಂದುವರಿಸಿ ಲೋಕಕ್ಕೆ ಕ್ಷೇಮವನ್ನುಂಟುಮಾಡಲಿ; ಜಲವು ಓಷಧಿಗಳಿಗೆ ಪೋಷಕವಾಗಿರಲಿ ಎಂದು ಆಶಿಸುತ್ತ ಋತುಗಳ ಸಹಾಯದಿಂದ ವಿಶ್ವದ ಸಕಲ ಭಾಗಗಳಿಗೂ ಒಂದು ಸಂಬಂಧವನ್ನು ಕಲ್ಪಿಸುತ್ತಾನೆ. ಋತುಗಳನ್ನು ಪ್ರತಿಬಿಂಬಿಸುವ ಈ ಒಂದೊಂದು ಇಷ್ಟಿಕೆಯೂ ಅಗ್ನಿಯ ಒಂದೊಂದಂಶವನ್ನು ನಿರ್ದೇಶಿಸುತ್ತದೆ. ಇವುಗಳು ಪರಸ್ಪರ ಸಂಬಂಧವನ್ನು ಮುಂದುವರಿಸುವುದರಿಂದ ಅಗ್ನಿಯ ಒಂದೊಂದು ಅಂಶವೂ ತನ್ನ ವೈಯಕ್ತಿಕವಾದ ಕಾರ್ಯವನ್ನು ನೆರವೇರಿಸುತ್ತ ಕೊನೆಯಲ್ಲಿ ಎಲ್ಲವೂ ಸೇರಿ ಒಂದೇ ಸಾಮರಸ್ಯರೂಪವಾದ ಲೋಕಕಲ್ಯಾಣದಲ್ಲಿ ಪರ್ಯವಸಾನವನ್ನು ಹೊಂದಲಿ ಎಂದು ಪ್ರಾರ್ಥಿಸಿ, ಋತವ್ಯವಾದ ಇಷ್ಟಿಕೆಗಳನ್ನು ಪೂಜಿಸುತ್ತಾನೆ. ಸಕಲ ವಸ್ತುಗಳ ಮೇಲೂ ಪ್ರಭುತ್ವವನ್ನು ಹೊಂದಿರುವ ಈ ಇಷ್ಟಿಕೆಗಳ ಅನುಗ್ರಹದಿಂದ ಯಜಮಾನನಿಗೂ ಪ್ರಭುತ್ವವು ಲಭಿಸುತ್ತದೆ. ದೇವತೆಗಳು ತಮ್ಮ ಪ್ರಭುವಾದ ಇಂದ್ರನಲ್ಲಿಗೆ ಹೋಗಿ ಸೇರುವಂತೆ ದ್ಯಾವಾಪೃಥಿವಿಗಳ ಅಂತರವನ್ನೆಲ್ಲ ಆಕ್ರಮಿಸಿರುವ ಅಗ್ನ್ಯಂಶಗಳೆಲ್ಲ ಒಟ್ಟಿಗೆ ಸೇರಲಿ ಮತ್ತು ಈ ತಪ ಮತ್ತು ತಪಸ್ಯ ಎಂಬ ಶಿಶಿರಋತುವಿನ ಮಾಸಗಳೊಡನೆ ಸಂಯೋಗವನ್ನೂ ಹೊಂದಲಿ ಎಂದು ಪ್ರಾರ್ಥಿಸಿ ಋತವ್ಯೇಷ್ಟಿಕೆಗಳನ್ನು ಸ್ಥಾಪಿಸುತ್ತಾನೆ. ಈ ಎರಡು ಇಷ್ಟಿಕೆಗಳನ್ನು ಸ್ಥಾಪಿಸುವ ಉದ್ದಿಶ್ಯವೇನೆಂದರೆ—

**ತದ್ಯದೇತೇ ಅತ್ರೋಪದಧಾತಿ। ಸಂವತ್ಸರ ಏಷೋಽಗ್ನಿ ಇಮ ಉ ಲೋಕಾಃ ಸಂವತ್ಸರಸ್ತಸ್ಯ ದ್ಯೌರೇವಪಂಚಮೀ ಚಿತಿರ್ದ್ಯೌರಸ್ಯ ಶಿಶಿರ ಋತುಸ್ತದ್ಯದೇತೇ ಅತ್ರೋಪದಧಾತಿ ಯದೇವಾಸ್ಯೈತೇ ಆತ್ಮನಸ್ತದಸ್ಮಿನ್ನೇತತ್ಪ್ರತಿದಧಾತಿ ತಸ್ಮಾದೇತೇ ಅತ್ರೋಪದಧಾತಿ ॥**

(ಶ. ಬ್ರಾ. ೮-೭-೧-೭)

ಅಗ್ನಿಚಿತಿಯೇ ಸಂವತ್ಸರವು ಮತ್ತು ಸಂವತ್ಸರವೇ ದ್ಯಾವಾಪೃಥಿವಿಗಳೆರಡರ ರೂಪದಲ್ಲಿಯೂ ಇರುತ್ತದೆ. ಆದುದರಿಂದ ದ್ಯಾವಾಪೃಥಿವಿಗಳೆರಡನ್ನೂ ಪ್ರತಿಬಿಂಬಿಸುವ ಈ ಋತವ್ಯೇಷ್ಟಿಕೆಗಳ ಸ್ಥಾಪನವು. ಅಲ್ಲದೇ ಶಿಶಿರವು ದ್ಯುಲೋಕದ ಪ್ರತಿನಿಧಿ. ಇದರ ಸ್ಥಾಪನದಿಂದ ಲೋಕತ್ರಯವನ್ನೂ ವ್ಯಾಪಿಸುವ ಅಗ್ನಿಯನ್ನು ಸ್ಥಿರವಾಗಿ ಮೂರು ಲೋಕಗಳಲ್ಲೂ ಸ್ಥಾಪಿಸಲು ಸಾಧ್ಯ.

**ಯದ್ವೇವೈತೇ ಅತ್ರೋಪದಧಾತಿ। ಪ್ರಜಾಪತಿರೇಷೋಽಗ್ನಿಃ। ಸಂವತ್ಸರ ಉ ಪ್ರಜಾಪತಿಸ್ತಸ್ಯ ಶಿರ ಏವ ಪಂಚಮೀ ಚಿತಿಃ ಶಿರೋಽಸ್ಯ ಶಿಶಿರ ಋತುಸ್ತದ್ಯದೇತೇ ಅತ್ರೋಪದಧಾತಿ ಯದೇವಾಸ್ಯೈತೇ ಆತ್ಮನಸ್ತದಸ್ಮಿನ್ನೇತತ್ಪ್ರತಿದಧಾತಿ ತಸ್ಮಾದೇತೇ ಅತ್ರೋಪದಧಾತಿ॥**

(ಶ. ಬ್ರಾ. ೮-೭-೧-೮)

ಅದೇ ಇಷ್ಟಿಕೆಗಳನ್ನು ಇಲ್ಲೇ ಸ್ಥಾಪಿಸಲು ಕಾರಣವೇನು ಎಂದರೆ, ಅದಕ್ಕೆ ಕಾರಣವು ಈ ರೀತಿಯಿರುತ್ತದೆ. ಅಗ್ನಿಚಿತಿಯು ಸೃಷ್ಟಿಗೆ ಮೂಲನಾದ ಪ್ರಜಾಪತಿಯಲ್ಲದೆ ಬೇರೆಯಲ್ಲ. ಪ್ರಜಾಪತಿಯೇ ಸಂವತ್ಸರವು. ಐದನೆಯ ಸಾಲು ಅಗ್ನಿಯ ಶಿರಸ್ಸು ಮತ್ತು ಶಿಶಿರವು ಸಂವತ್ಸರದ ಶಿರಸ್ಸು. ಇವುಗಳನ್ನು ಸ್ಥಾಪಿಸುವುದರಿಂದ ಶಿರಸ್ಸನ್ನು ಶರೀರದೊಡನೆ ಸೇರಿಸಿದಂತಾಗುತ್ತದೆ. ಎಂದು ಸೃಷ್ಟಿಕಾರ್ಯದಲ್ಲಿ ನಿರತರಾದ ದೇವತೆಗಳಿಗೂ, ಋತುಗಳಿಗೂ ಸಂಬಂಧವನ್ನು ಈ ರೀತಿ ತೋರಿಸಿದೆ. ಋತವ್ಯೇಷ್ಟಿಕೆಗಳ ಸ್ಥಾನವನ್ನು ತಿಳಿಸುತ್ತ,

**ಸ ಪುರಸ್ತಾತ್ಸ್ವಯಮಾತೃಣ್ಣಾಯೈ ಚ ವಿಶ್ವಜ್ಯೋತಿಷಶ್ಚರ್ತವ್ಯೇ ಉಪದಧಾತಿ। ದ್ಯೌರ್ವಾ ಉತ್ತಮಾ ಸ್ವಯಮಾತೃಣ್ಣಾದಿತ್ಯ ಉತ್ತಮಾ ವಿಶ್ವಜ್ಯೋತಿರರ್ವಾಚೀನಂ ತದ್ದಿವಶ್ಚಾ-ದಿತ್ಯಾಚ್ಚರ್ತೂನ್ದಧಾತಿ ತಸ್ಮಾದರ್ವಾಚೀನಮೇವಾತ ಋತವೋಽಥೋ ಪ್ರಜನನ-ಮೇತದರ್ವಾಚೀನಂ ತದ್ದಿವಶ್ಚಾದಿತ್ಯಾಚ್ಚ ಸ್ಥಿತಗ್ಂ ಹ್ಯೇವಾತಃ ಪರಾತ್ಪ್ರಜನನಂಯಾವಂತೋ ಹ್ಯೇವ ಸನಾಗ್ರೇ ದೇವಾಸ್ತಾವಂತೋ ದೇವಾಃ ॥**

(ಶ. ಬ್ರಾ. ೮-೭-೧-೯)

ಎಂದು ನಿರ್ದೇಶಿಸಿದೆ. ಸ್ವಯಂ ಛಂಧ್ರವುಳ್ಳ ಇಷ್ಟಿಕೆಯು ದ್ಯುಲೋಕದ ಪ್ರತಿನಿಧಿಯು ಮತ್ತು ವಿಶ್ವಜ್ಯೋತಿಸಂಜ್ಞಕವಾದ ಇಷ್ಟಿಕೆಯು ಆದಿತ್ಯನನ್ನು ಪ್ರತಿಬಿಂಬಿಸುತ್ತದೆ. ಇವೆರಡಕ್ಕೂ ಪೂರ್ವಭಾವಿಯಾಗಿಯೇ ಋತವ್ಯೇಷ್ಟಿಕೆಯನ್ನು ಸ್ಥಾಪಿಸಬೇಕು. ಹಾಗೆ ಮಾಡುವುದರಿಂದ ದ್ಯುಲೋಕಕ್ಕೂ ಆದಿತ್ಯಾದಿ ತೇಜೋಮಂಡಲಗಳಗೂ ಆಧಾರವನ್ನು ಕೊಟ್ಟಂತಾಗುತ್ತದೆ. ಆಗ ಅವುಗಳಿಗಿಂತ ತಳಭಾಗದ ಪ್ರದೇಶದಲ್ಲಿಯೇ ಪ್ರಜನನಶಕ್ತಿಯನ್ನೂ ಸ್ಥಾಪಿಸಿದಂತಾಗುತ್ತದೆ. ಈ ಪ್ರಜನನಶಕ್ತಿಯು ಅಪರಿಮಿತವಾದುದು. ಮತ್ತು ಲೌಕಿಕವಾದುದು. ದ್ಯುಲೋಕದ ಮತ್ತು ಆದಿತ್ಯಲೋಕದ ಸ್ಥಾನದಲ್ಲಿ ಉತ್ಪನ್ನವಾಗುವ ದೇವತೆಗಳ ಸಂಖ್ಯೆಯು ಮಿತಿಯುಳ್ಳದ್ದು. ಹಿಂದೆ ದೇವತೆಗಳ ಸಂಖ್ಯೆಯು ಎಷ್ಟೋ ಈಗಲೂ ಅದೇ ಸಂಖ್ಯೆಯುಳ್ಳದ್ದಾಗಿದೆ.

**ಅಥೋ ಇಮೇ ವೈ ಲೋಕಾ ಋತವ್ಯಾಃ। ಇಮಾಂಸ್ತಲ್ಲೋಕಾನೂರ್ಧ್ವಾಂಶ್ಚಿತಿಭಿಶ್ಚಿ-ನೋತ್ಯಥೋ ಕ್ಷತ್ರಂ ವಾ ಋತವ್ಯಾಃ ಕ್ಷತ್ರಂ ತದೂರ್ಧ್ವಂ ಚಿತಿಭಿಶ್ಚಿನೋತ್ಯಥೋ ಸಂವತ್ಸರೋ ವಾ ಋತವ್ಯಾಃ ಸಂವತ್ಸರಂ ತದೂರ್ಧ್ವಂ ಚಿತಿಭಿಶ್ಚಿನೋತಿ ॥**

(ಶ ಬ್ರಾ. ೮-೭-೧-೧೨)

ಋತವ್ಯೇಷ್ಟಿಕೆಗಳು ಮೂರು ಲೋಕಗಳನ್ನು ಪ್ರತಿಬಿಂಬಿಸುತ್ತದೆ. ಒಂದೊಂದು ಸಾಲೂ ಒಂದೊಂದು ಲೋಕದ ಪ್ರತಿನಿಧಿ. ಒಂದರ ಮೇಲೆ ಇನ್ನೊಂದನ್ನು ಸ್ಥಾಪಿಸುವುದರಿಂದ ಒಂದು ಲೋಕದ ಮೇಲೆ ಇನ್ನೊಂದು ಲೋಕವನ್ನು ಸ್ಥಾಪಿಸಿದಂತೆ. ಅಷ್ಟೇ ಅಲ್ಲದೆ, ಋತ್ವಾತ್ಮಕವಾದ ಇಷ್ಟಿಕೆಗಳು ತಮ್ಮದೇ ಆದ ಪ್ರಭುತ್ವವನ್ನು ಹೊಂದಿರುವುದರಿಂದ (ಈ ವಿಷಯವನ್ನು ಹಿಂದೆ ತಿಳಿಸಿದೆ) ಪ್ರಜಾರೂಪದ ಇತರ ಇಷ್ಟಿಕೆಗಳಿಗೆ ಮಾರ್ಗದರ್ಶಕವಾಗಿರುತ್ತವೆ. ಈ ಸಕಲವಾದ ಋತವ್ಯೇಷ್ಟಿಕೆಗಳೂ ಸೇರಿ ಸಂವತ್ಸರವನ್ನು ಪೂರ್ಣಗೊಳಿಸುತ್ತವೆ. ವೈವಿಧ್ಯವನ್ನು ಹೊಂದಿದಂತೆ ಕಾಣುವ ಈ ಋತುಗಳಲ್ಲಿಯೇ ಸಂವತ್ಸರತ್ವವೂ ಅಂತರ್ಗತವಾಗಿರುವಂತೆ ವೈವಿಧ್ಯವನ್ನು ಹೊಂದಿದಂತೆ ಕಾಣುವ ಸಕಲ ದೇವತೆಗಳಲ್ಲಿಯೂ ಪ್ರಜಾಪತಿಯು ಅಂತರ್ಗತನಾಗಿ ಇರುತ್ತಾನೆ ಎಂಬ ವಿಷಯವನ್ನು ಹಿಂದೆ ತಿಳಿಸಿದೆ.

> **ತಾ ಹ್ಯೆತಾ ಏವ ಸಂಯಾನ್ಯಃ । ಏತದ್ವೈ ದೇವಾ ಋತವ್ಯಾಭಿರೇವೇಮಾಂಲ್ಲೋಕಾನ್ತ್ಸಮಯುರಿತಶ್ಚೋರ್ಧ್ವಾನಮುತಶ್ಚಾರ್ವಾಚಸ್ತಥೈವೈತದ್ಯಜಮಾನ ಋತವ್ಯಾಭಿರೇವೇಮಾಂಲೋಕಾನ್ತ್ಸಂಯಾತೀತಶ್ಚೋರ್ಧ್ವಾನಮುತಶ್ಚಾರ್ವಾಚಃ ॥**
>
> (ಶ. ಬ್ರಾ. ೮-೭-೧.೧೩)

ದ್ಯಾವಾಪೃಥಿವಿಗಳಿಗೆಲ್ಲ ನೇರವಾದ ಸಂಬಂಧವನ್ನು ಕಲ್ಪಿಸುವುವೇ ಈ ಋತುರೂಪವಾದ ಇಷ್ಟಿಕೆಗಳು. ಇವುಗಳ ಸಹಾಯದಿಂದ ದೇವತೆಗಳು ದ್ಯುಲೋಕ ಮತ್ತು ಅಂತರಿಕ್ಷಗಳಿಂದ ಪೃಥ್ವಿಗೂ ಮತ್ತು ಪೃಥ್ವಿಯಿಂದ ದ್ಯುಲೋಕ ಮತ್ತು ಅಂತರಿಕ್ಷಲೋಕಗಳಿಗೂ ದೇವತೆಗಳು ಸಂಚಾರಮಾಡುತ್ತಾರೆ. ಈ ಇಷ್ಟಿಕೆಗಳು ಮಾನವರ ಮತ್ತು ದೇವತೆಗಳ ಪರಸ್ಪರ ಸಂಬಂಧವನ್ನು ಕಲ್ಪಿಸಿ ವಿಶ್ವಸಮನ್ವಯಕ್ಕೆ ಸಾಧಕಗಳಾಗಿವೆ. ಸಂವತ್ಸರಾವಯವಗಳಾದ ವಸಂತಾದಿ ಋತುಗಳಿಗೂ ಮತ್ತು ಪ್ರಜಾಪತಿಯ ಅವಯವಗಳಾದ ದೇವತೆಗಳಿಗೂ ಮತ್ತು ಯಜ್ಞಾಂಗವಾದ ಇಷ್ಟಿಕೆಗಳಿಗೂ ಸಂಬಂಧವನ್ನು ತೋರಿಸಿ ಒಂದರ ಪ್ರಶಂಸೆಯೇ ಇನ್ನೊಂದಕ್ಕೂ ಅನ್ವಯಿಸುತ್ತದೆ ಎಂಬ ವಿಷಯವನ್ನು ಸ್ಪಷ್ಟವಾಗಿ ತಿಳಿಸಿದೆ.

ಹೀಗೆ ಯಜ್ಞಸಾಧನವನ್ನೂ ಯಜ್ಞಫಲವನ್ನೂ ವರ್ಣಿಸುವ ಸಂದರ್ಭದಲ್ಲಿ ವಸಂತಾದಿ ಋತುಗಳ ಮಹತ್ತ್ವವು ಪ್ರಶಂಸಿಸಲ್ಪಟ್ಟಿದೆ ಮತ್ತು ಯಜ್ಞಕ್ಕೂ ಋತುಗಳಿಗೂ ಇರುವ ಸಾಕ್ಷಾತ್ಸಂಬಂಧವೂ ವಿವರಿಸಲ್ಪಟ್ಟಿದೆ. ಆದುದರಿಂದ ವಿಶ್ವಕರ್ತನಾದ ಪ್ರಜಾಪತಿಗೂ ವಸಂತಾದಿಋತುಗಳಿಗೂ ಸಾಕ್ಷಾತ್ಸಂಬಂಧವನ್ನೇ ಹೇಳಿದಂತಾಯಿತು.

ಇದಲ್ಲದೇ, ಯಜ್ಞಾಹುತಿಗೆ ಬೇಕಾದ ಸಾಮಾಗ್ರಿಗಳನ್ನು ವರ್ಣಿಸುವಾಗ ಸಂವತ್ಸರದ ಋತ್ವಾದ್ಯವಯವಗಳ ಪ್ರಶಂಸೆಯು ಯಾವ ರೀತಿಯಿದೆಯೆಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ. ಈ ವಿವರಣವನ್ನು ಸಂಗ್ರಹಮಾಡಿ ತಿಳಿಸಲಾಗುತ್ತದೆ. ಈ ಪ್ರಕರಣವು ಪ್ರಕೃತವಾದ ಋಕ್ಕಿನ ಭಾವವನ್ನು ಇನ್ನು ವಿಶದವಾಗಿ ತಿಳಿಸುತ್ತದೆ.

> **ಸಂವತ್ಸರೋ ಯಜ್ಞಃ .... ....... । ಋತವ ಋತ್ವಿಜಃ .... .... .... । ಮಾಸಾ ಹವೀಗ್ಂಷಿ .... .... .... । ಅರ್ಧಮಾಸಾ ಹವಿಷ್ಪಾತ್ರಾಣಿ .... .... .... ಅಹೋರಾತ್ರೇ ಪರಿವೇಷ್ಟ್ರೇ.... ॥**
>
> (ಶ. ಬ್ರಾ. ೧೧-೨-೭-೧ ರಿಂದ ೫)

ಸಂವತ್ಸರವೇ ಯಜ್ಞವು, ಸಂವತ್ಸರಾವಯವಗಳಾದ ಋತುಗಳೇ ಋತ್ವಿಕ್ಕುಗಳು. ಮಾಸಗಳೇ ಹವಿಸ್ಸುಗಳು. ಅರ್ಧಮಾಸಗಳೇ ಹವಿಷ್ಪಾತ್ರೆಗಳು. ಅಹೋರಾತ್ರಗಳೇ ಪರಿವೇಷ್ಟೃಸಂಜ್ಞಕಗಳಾದ ಆವರಣಗಳು ಎಂಬ ಈ

ವರ್ಣನೆಯಿಂದ ಋತ್ವಾದಿಗಳಿಂದ ಪೂರ್ಣತೆಯನ್ನು ಹೊಂದಿದ ಸಂವತ್ಸರವು ಪ್ರಶಂಸಿತವಾಗಿರುತ್ತದೆ. ಸಂವತ್ಸರವು ಆದಿತ್ಯನ ಪರಿಭ್ರಮಣದಿಂದ ನಿರ್ದಿಷ್ಟವಾಗತಕ್ಕದ್ದು. ಆದುದರಿಂದಲೇ ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವಿರುತ್ತದೆ. ಮತ್ತು ಋತುಗಳು ಆದಿತ್ಯನ ಚಲನವನ್ನು ಆಶ್ರಯಿಸಿರುತ್ತವೆ. ಹೇಗೆಂದರೆ—

**ಆದಿತ್ಯಸ್ತ್ವೇವ ಸರ್ವರ್ತವಃ। ಯದ್ಯೈವೋದೇತ್ಯಥ ವಸಂತೋ ಯದಾ ಸಂಗವೋಽಥ ಗ್ರೀಷ್ಮೋ ಯದಾ ಮಧ್ಯಂದಿನೋಽಥ ವರ್ಷಾ ಯದಾಪರಾಹ್ಣೋಽಥ ಶರದ್ಯದೈವಾಸ್ತಮೇತ್ಯಥ ಹೇಮಂತಸ್ತಸ್ಮಾದು ಮಧ್ಯಂದಿನ ಏವಾದಧೀತ ತರ್ಹಿ ಹ್ಯೇಷೋಽಸ್ಯ ಲೋಕಸ್ಯ ನೇದಿಷ್ಠಂ ಭವತಿ ॥**

(ಶ. ಬ್ರಾ. ೨-೨-೩-೯)

ಸಕಲ ಋತುಗಳೂ ಆದಿತ್ಯನ ಅವಯವಗಳೇ ಆಗಿವೆ. ಆದಿತ್ಯನು ಉದಯಿಸುವಾಗ ವಸಂತ; ಗೋವುಗಳನ್ನು ಕ್ಷೀರಕ್ಕಾಗಿ ಅಟ್ಟುವಾಗ ಅದು ಗ್ರೀಷ್ಮ. ಮಧ್ಯಾಹ್ನಸಮಯವೇ ವರ್ಷರ್ತು(ಮಳೆಗಾಲ). ಅಪರಾಹ್ಣಕಾಲವೇ ಶರತ್ಕಾಲವು. ಮತ್ತು ಸೂರ್ಯಾಸ್ತಮಯಕಾಲವು ಹೇಮಂತ ಋತುವು. ಸೂರ್ಯನು ಮಧ್ಯಭಾಗದಲ್ಲಿರುವಾಗ ಯಜ್ಞಾಚರಣೆಯು ವಿಹಿತವಾಗಿರುತ್ತದೆ. ಸಕಲ ಋತುಗಳಿಗೂ ಮತ್ತು ಯಜ್ಞದ ಸಕಲ ಭಾಗಗಳಿಗೂ ಸಮನ್ವಯವನ್ನು ಕಲ್ಪಿಸುವ ಭಾಗವಾಗಿರುತ್ತದೆ.

ಈ ರೀತಿ ಅನೇಕ ವಿಧಗಳಲ್ಲಿ ವಿಶ್ವಕರ್ತನಾದ ಪ್ರಜಾಪತಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ತೋರಿಸುವುದೇ ಅಲ್ಲದೇ, ಪ್ರಜಾಪತಿಯ ಅಂಶಗಳಾದ ದೇವತೆಗಳು ಯಾವ ರೀತಿ ಪ್ರಜಾಪತಿಯನ್ನೇ ಹವಿಸ್ಸನ್ನಾಗಿ ಅರ್ಪಿಸಿ ಯಜ್ಞಮಾಡುವರು ಎಂದು ತಿಳಿಸಿದೆಯೋ ಅದೇ ರೀತಿ ಸಂವತ್ಸರದ ಅಂಶಗಳಾದ ಋತುಗಳೂ ಯಜ್ಞವನ್ನಾಚರಿಸಿ ಸಂವತ್ಸರರೂಪವಾದ ಹವಿಸ್ಸನ್ನರ್ಪಿಸಿ ಲೋಕಕಲ್ಯಾಣಕ್ಕೆ ಸಾಧಕವಾಗುತ್ತವೆ ಎಂದೂ ತಿಳಿಸಿರುತ್ತದೆ. ಇಲ್ಲಿ ಯಜಮಾನನಾರು ಉಳಿದ ಋತ್ವಿಕ್ಕುಗಳಾರು ? ಈ ಯಜ್ಞಕ್ರಮವೇನು ಎಂಬುದನ್ನು ಈ ರೀತಿ ನಿರ್ದೇಶಿಸಿದೆ.

**ಸಂವತ್ಸರೋ ಯಜಮಾನಃ । ತಮೃತವೋ ಯಾಜಯಂತಿ ವಸಂತ ಆಗ್ನೀಧ್ರಸ್ತಸ್ಮಾದ್ವಸಂತೇ ದಾವಾಶ್ಚರಂತಿ ತದ್ಧ್ಯಗ್ನಿರೂಪಂ ಗ್ರೀಷ್ಮೋಽಧ್ವರ್ಯುಸ್ತಪ್ತ ಇವ ವೈ ಗ್ರೀಷ್ಮಸ್ತಪ್ತಮಿವಾಧ್ವರ್ಯುರ್ನಿಷ್ಕ್ರಾಮತಿ ವರ್ಷಾ ಉದ್ಗಾತಾ ತಸ್ಮಾದ್ಯದಾ ಬಲವದ್ವರ್ಷತಿ ಸಾಮ್ನ ಇವೋಪಬ್ದಿಃ ಕ್ರಿಯತೇ ಶರದ್ಬ್ರಹ್ಮಾ ತಸ್ಮಾದ್ಯದಾ ಸಸ್ಯಂ ಪಚ್ಯತೇ ಬ್ರಹ್ಮಣ್ವತ್ಯಃ ಪ್ರಜಾ ಇತ್ಯಾಹುರ್ಹೇಮಂತೋ ಹೋತಾ ತಸ್ಮಾದ್ಧೇಹನ್ವಷಟ್ಕೃತಾಃ ಪಶವಃ ಸೀದಂತ್ಯೇತಾ ಹ ವಾ ಏನಂ ದೇವತಾ ಯಾಜಯಂತಿ ಸ ಯದ್ಯೇನಮ್ಯೇಷಾವೀರಾ ಯಾಜಯೇಯುರೇತಾ ಏವ ದೇವತಾ ಮನಸಾ ಧ್ಯಾಯೇದೇತಾ ಹ್ಯೇನ್ಸಂ ದೇವತಾ ಯಾಜಯಂತಿ ॥**

(ಶ. ಬ್ರಾ. ೧೧-೨-೩-೩೨)

ಸಂವತ್ಸರವೇ ಯಜಮಾನನು. ವಸಂತಾದಿ ಋತುಗಳೇ ಋತ್ವಿಕ್ಕುಗಳ ರೂಪದಲ್ಲಿದ್ದು ಆ ಯಜಮಾನನಿಗಾಗಿ ಯಜ್ಞಕಾರ್ಯವನ್ನು ನಿರ್ವಹಿಸುತ್ತವೆ. ಯಾವ ಯಾವ ಋತುಗಳಿಗೆ ಯಾವ ಋತ್ವಿಕ್ಕಿನ ಸ್ಥಾನವೆಂದರೆ, ಆಯಾ ಸ್ಥಾನಗಳನ್ನು ನಿರ್ದೇಶಿಸಿ ಯಜ್ಞಕ್ರಮವನ್ನು ಈ ರೀತಿ ತಿಳಿಸಿದೆ. ಮತ್ತು ಅವುಗಳ ಸ್ವರೂಪವನ್ನು ವರ್ಣಿಸಿದೆ.

(೧) **ವಸಂತ** ಕಾಲದಲ್ಲಿ ಕಾಡಿನಲ್ಲಿ ದಾವಾಗ್ನಿಯು ಉಲ್ಬಣಸ್ಥಿತಿಯನ್ನು ಹೊಂದುತ್ತದೆ. ಆದುದರಿಂದ ವಸಂತವು **ಅಗ್ನೀಧ್ರ** ಸಂಜ್ಞಕವಾದ ಋತ್ವಿಕ್ಕೆಂದು ಪರಿಗಣಿತವಾಗಿದೆ.

(೨) ಅಧ್ವರ್ಯುವು ಯಜ್ಞಕ್ರಿಯೆಗಳಲ್ಲಿ ಭಾಗವನ್ನು ವಹಿಸಿದ ಮೇಲೆ ಯಜ್ಞಾಗ್ನಿಯ ದಾಹದಿಂದ ಬೆಂದವನಂತೆ ಕಾಣುತ್ತಾನೆ. ಇದೇ ರೀತಿ **ಗ್ರೀಷ್ಮ** ಕಾಲದಲ್ಲಿ ಕಾಷ್ಠಾದಿಗಳೆಲ್ಲವೂ ದಗ್ಧವಾಗುವುದರಿಂದ **ಗ್ರೀಷ್ಮ**ಋತುವು **ಅಧ್ವರ್ಯು** ಸಂಜ್ಞಕವಾದ ಋತ್ವಿಕ್ಕೆಂದು ಪರಿಗಣಿತವಾಗಿದೆ.

(೩) ವರ್ಷಾಕಾಲದಲ್ಲಿ ವೃಷ್ಟಿಪತನವಾಗುವಾಗ (ಮಳೆಯು ಸುರಿಯುವಾಗ) ಗಾನಮಾಡುವಂತೆ ಆಕರ್ಷಕವಾದ ಶಬ್ದವುಂಟಾಗುತ್ತದೆ. ಈ ಶಬ್ದವು ಯಜ್ಞಕಾಲದಲ್ಲಿ ಸಾಮಮಂತ್ರಗಳನ್ನು ಗಾನಮಾಡುವ ಉದ್ಗಾತೃವಿನ ದಿವ್ಯವಾದ ಶಬ್ದದಂತಿರುತ್ತದೆ. ಆದುದರಿಂದ **ವರ್ಷರ್ತುವು ಉದ್ಗಾತೃ**ವೆಂದು ಹೇಳಲ್ಪಟ್ಟಿದೆ.

(೪) ಶರತ್ಕಾಲದಲ್ಲಿ ಧಾನ್ಯಾದಿಗಳೆಲ್ಲವೂ ಪೌಷ್ಕಲ್ಯವನ್ನು ಹೊಂದುತ್ತವೆ ಎಂದರೆ ಪೂರ್ಣವಾಗಿ ಪಕ್ವವಾಗುತ್ತವೆ. ಆದುದರಿಂದಲೇ ಪ್ರಜೆಗಳೆಲ್ಲರೂ **ಬ್ರಹ್ಮಣ್ವತ್ಯಃ** (ಸರಿಪಕ್ವವಾದ ಸ್ಥಿತಿಯುಳ್ಳವರು) ಎಂದು ತಿಳಿಯಲ್ಪಡುತ್ತಾರೆ. ಈ ಕಾರಣದಿಂದ **ಶರದೃತುವು ಬ್ರಹ್ಮಾ** ಎಂದು ಪ್ರಸಿದ್ಧವಾಗಿದೆ.

(೫) ಯಜ್ಞಾಂತ್ಯದಲ್ಲಿ ಹೋತೃವು ವಷಟ್ಕಾರಾತ್ಮಕವಾದ ಮಂತ್ರವನ್ನು ಪಠಿಸಿದೊಡನೆಯೇ ಆಹುತಿಯು ಅಗ್ನಿಗೆ ಅರ್ಪಿತವಾಗಿ ಸೀದುಹೋಗುವಂತೆ ಪಶುಗಳೆಲ್ಲವೂ ಈ ಋತುವಿನಲ್ಲಿ ಕ್ಷಯವನ್ನು ಹೊಂದುವುದರಿಂದ **ಹೇಮಂತರ್ತು**ವಿಗೆ **ಹೋತೃ**ವೆಂಬ ಹೆಸರು ವಿವಕ್ಷಿತವಾಗಿದೆ.

ಸಂವತ್ಸರಾತ್ಮಕವಾದ ಯಜಮಾನನಿಗಾಗಿ ಯಜ್ಞವನ್ನು ವಸಂತಾದಿ ಸಂಜ್ಞಕವಾದ ದೇವತೆಗಳು ನಿರ್ವಹಿಸುತ್ತಾರೆ. ಮತ್ತು ಪ್ರಕೃತವಾದ ಋಕ್ಕಿನಲ್ಲಿ **ವಸಂತೋ ಅಸ್ಯಾಸೀದಾಜ್ಯಂ; ಗ್ರೀಷ್ಮ ಇಧ್ಮಶ್ಶರದ್ಧವಿಃ** ಎಂಬ ಯಾವ (ಅಭಿಪ್ರಾಯವು ಸೂಚಿತವಾಗಿದೆಯೋ ಆ ಅಭಿಪ್ರಾಯಗಳೆಲ್ಲವೂ ಮೇಲೆ ಉದಾಹೃತವಾದ ವಾಕ್ಯಗಳಲ್ಲಿ ವಿವಕ್ಷಿತವಾಗಿವೆ. ಆದರೆ ಇಲ್ಲಿ ಇನ್ನೊಂದು ಪ್ರಶ್ನೆಯು ಸಂಭವಿಸುತ್ತದೆ. ಮೇಲೆ ಉದಾಹೃತವಾಗಿರುವ ವಾಕ್ಯಗಳಲ್ಲಿ ಋತುಗಳ ಸಂಖ್ಯೆಯು ಒಂದು ಸಲ ಆರು ಮತ್ತೊಂದು ಸಲ ಐದು ಹೀಗಿರುತ್ತದೆ. ಮತ್ತು ಪ್ರಕೃತವಾದ ಋಕ್ಕಿನಲ್ಲಿ (೧೦-೯೦.೬) ಆ ಸಂಖ್ಯೆಯು ಮೂರು ಎಂದು ಮಾತ್ರ ಪಠಿತವಾಗಿದೆ. ಇದರಲ್ಲಿ ಸಾಮಂಜಸ್ಯವಿದೆಯೇ ಎಂಬ ಪ್ರಶ್ನೆಯು ಸಂಭವಿಸಿದರೆ, ಅಂತಹ ಆಕ್ಷೇಪಗಳಿಗೆ ಹಿಂದೆಯೇ ಸಮಾಧಾನವನ್ನು ಹೇಳಿರುತ್ತದೆ. (ಋಗ್ವೇದ ಸಂಹಿತಾ ಭಾಗ ೧೨ ಪು. 300) ಋ. ಸಂ. ೧-೧೬೪-೨ ಋಕ್ಕನ್ನು ವಿವರಿಸುವಾಗ ಅಲ್ಲಿ ಸಾಯಣರು **ತ್ರಿನಾಭಿ**ಯೆಂಬ ಪದಕ್ಕೆ **ಗ್ರೀಷ್ಮ, ವರ್ಷ** ಮತ್ತು **ಹೇಮಂತ** ಎಂಬ ಮೂರು ಋತುಗಳು ವಿವಕ್ಷಿತವಾಗಿವೆಯೆಂದು ತಿಳಿಸಿದ್ದಾರೆ. ಮತ್ತು ಪ್ರಕೃತದಲ್ಲಿ ವಿವಕ್ಷಿತವಾದ ಪುರುಷ ಪ್ರಜಾಪತಿಗೂ ಋತುಗಳಿಗೂ ಸಾಕ್ಷಾತ್ಸಂಬಂಧವೇನು ಎಂದರೆ—

**ಸ ಯಃ ಸ ಪ್ರಜಾಪತಿರ್ವ್ಯಸ್ರಗ್ಂಸತ । ಸಂವತ್ಸರಃ ಸೋಽಥ ಯಾ ಅಸ್ಯೈತಾಃ ಪಂಚ ತನ್ವೋ ವ್ಯಸ್ರಗ್ಂಸಂತರ್ತವಸ್ತೇ ಪಂಚ ವಾ ಋತವಃ ಪಂಚೈತಾಶ್ಚಿತಯಸ್ತದ್ಯತ್ಪಂಚ ಚಿತೀಶ್ಚಿನೋತ್ಯೃತುಭಿರೇವೈನಂ ತಚ್ಚಿನೋತಿ ತಸ್ಮಾಚ್ಚಿತಯಃ ॥**

(ಶ. ಬ್ರಾ ೬-೧-೨-೧೮)

ಪರಿಪೂರ್ಣನಾಗಿದ್ದ ಪ್ರಜಾಪತಿಯು ವಿಭಾಗಾತ್ಮಕನಾದಾಗ ಸಂವತ್ಸರ ರೂಪನಾದನು. ಘನರೂಪವನ್ನು ಹೊಂದಿದ್ದ ಅವನ ಐದು ಅವಯವಗಳೂ ಐದು ಋತುಗಳ ರೂಪವನ್ನು ತಾಳಿದವು. ಈ ಅವಯವಗಳು ಐದು ಸಂಖ್ಯೆಯುಳ್ಳ ವಾದುದರಿಂದಲೇ ಅಗ್ನಿಚಿತಿಗೆ ಐದು ಸಾಲುಗಳಿರುತ್ತವೆ. ಇವೆಲ್ಲವೂ ಐದು ಋತುಗಳುಳ್ಳ ಸಂವತ್ಸರವನ್ನೂ ಮತ್ತು ಐದು ಅವಯವಗಳುಳ್ಳ ಪ್ರಜಾಪತಿಯನ್ನೂ ನಿರ್ದೇಶಿಸುತ್ತವೆಯೆಂದು ತಿಳಿಸಿದೆ. ಅಲ್ಲದೇ, ತ್ರಿಭಾಗಾತ್ಮಕವಾದ ಸಂವತ್ಸರಕ್ಕೂ ಪುರುಷನಿಗೂ ಸಂಬಂಧವನ್ನು ತೋರಿಸುತ್ತ ಮೂರು ಋತುಗಳ ಸ್ವರೂಪವನ್ನು ಈ ರೀತಿ ವರ್ಣಿಸಿದೆ.

> **ಯಾ ಓಷಧೀಃ ಪೂರ್ವಾ ಜಾತಾಃ | ದೇವೇಭ್ಯಸ್ತ್ರಿಯುಗಂ ಪುರೇತ್ಯೃತವೋ ವೈ ದೇವಾಸ್ತೇಭ್ಯ ಏತಾಸ್ತ್ರಿಃ ಪುರಾ ಜಾಯಂತೇ ವಸಂತಾ ಪ್ರಾವೃಷಿ ಶರದಿ ಮನ್ವೈ ನು ಬಭ್ರೂಣಾಮಹಮಿತಿ ಸೋಮೋ ವೈ ಬಭ್ರುಃ ಸೌಮ್ಯಾ ಓಷಧಯ ಔಷಧಃ ಪುರುಷಃ ಶತಂ ಧಾಮಾನೀತಿ ಯದಿದಗ್ಂ ಶತಾಯುಃ ಶತಾರ್ಧ................ತಾನೇತದಾಹ ||**

(ಶ. ಬ್ರಾ. ೭-೨-೪-೨೬)

ಓಷಧಿಗಳು ದೇವತೆಗಳಿಗಿಂತಲೂ ಪೂರ್ವದಲ್ಲಿ ಉತ್ಪನ್ನವಾದವು. ದೇವತೆಗಳೇ ಋತುಗಳಲ್ಲದೇ ಬೇರೆಯಲ್ಲ. ವಸಂತ ಕಾಲದಲ್ಲೂ, ವರ್ಷಾಕಾಲದಲ್ಲೂ ಮತ್ತು ಶರತ್ಕಾಲದಲ್ಲೂ ಸಹ ವರ್ಷದಲ್ಲಿ ಮೂರು ಸಲ ಈ ಓಷಧಿಗಳು ಪೌಷ್ಕಲ್ಯ ವನ್ನು ಪಡೆಯುತ್ತವೆ. ಬಭ್ರುವರ್ಣದ ಈ ವಸ್ತುವು ಸೋಮರೂಪದಲ್ಲಿದೆ. ಪುರುಷನನ್ನುದ್ದೇಶಿಸಿದ ಯಾಗದಲ್ಲಿ ಅರ್ಪಿತವಾಗುವ ಈ ಸೋಮವು ಓಷಧಿಗಳಿಂದ ಉತ್ಪನ್ನವಾಗಿದೆ. ಈ ಸೋಮದ ಆವಿರ್ಭಾವಕ್ಕೆ ಮೂರು ಋತುಗಳೂ ಕಾರಣವಾಗಿರುವುದರಿಂದ ಆಯಾ ಮೂಲಕಾರಣವಾದ ಋತುಗಳೇ ಪುರುಷನ ಯಜ್ಞದಲ್ಲಿ ಆಹುತಿಗಳೆಂದು ವರ್ಣಿತ ವಾಗಿವೆ. ಇದೇ ಅಭಿಪ್ರಾಯಗಳು ಅನೇಕ ವಿಧದಲ್ಲಿ ಅನೇಕ ಕಡೆಗಳಲ್ಲಿ ವಿವರಿಸಲ್ಪಟ್ಟಿದೆ. ಮುಖ್ಯವಾದ ಅಭಿಪ್ರಾಯ ಗಳನ್ನು ಮಾತ್ರ ಶ್ರುತಿವಾಕ್ಯಗಳನ್ನುದಾಹರಿಸಿ ವಿವರಿಸಿ ತಿಳಿಸಿದೆ.

## ಮುಖ್ಯಾಭಿಪ್ರಾಯವು

ಇದುವರೆಗೂ ಪರಮಪುರುಷನೇ ನೆರವೇರಿಸಿದ ಸೃಷ್ಟಿಕ್ರಮವು ಪೂರ್ವಸೃಷ್ಟಿಯೆಂದು ಕೆಲವರು ಹೇಳುವರು. ಈ ಪೂರ್ವಸೃಷ್ಟಿಯಿಂದ ದೇವಶರೀರಾದಿಗಳು ಉತ್ಪನ್ನವಾದವೆಂದು ಹಿಂದಿನ ಋಕ್ಕುಗಳಲ್ಲಿ ಹೇಳಿದೆಯಷ್ಟೆ. ಈಗ ಉತ್ತರಸೃಷ್ಟಿಯು ಹೇಗೆ ಮುಂದುವರೆಯಿತು ಎಂಬುದನ್ನು ವಿವರಿಸುವುದಕ್ಕಾಗಿ ಆ ಸೃಷ್ಟಿಗೆ ಪೂರ್ವಭಾವಿಯಾಗಿ ದೇವತೆಗಳು ಆಚರಿಸಿದ ಯಜ್ಞಾನುಷ್ಠಾನವನ್ನು ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕಿನಲ್ಲಿಯೂ ವಿವರಿಸಲಾಗಿದೆ. ಯಜ್ಞಮಾಡಬೇಕಾದರೆ ಅದಕ್ಕೆ ಸಂಭಾರಸಾಮಗ್ರಿಗಳು ಅವಶ್ಯಕವಷ್ಟೆ. ಆದರೆ ಆ ಕಾಲದಲ್ಲಿ ಯಜ್ಞಕ್ಕೆ ಬೇಕಾದ ವಸ್ತುಗಳು ಸೃಷ್ಟಿಸಲ್ಪಟ್ಟಿರಲಿಲ್ಲವಾದ್ದರಿಂದ ದೇವತೆಗಳು ಪರಮಪುರುಷನನ್ನೇ ಹವಿಸ್ಸೆಂದು ಮನಸ್ಸಿನಲ್ಲಿ ಭಾವಿಸಿ ಅದರಂತೆ ಮಾನಸಯಾಗವನ್ನು ನೆರವೇರಿಸಿದರು. ಇಲ್ಲಿ ಪರಮಪುರುಷನನ್ನೇ ಹವಿಸ್ಸೆಂದು ಹೇಳಿದ್ದರೂ ಹವಿಸ್ಸೊಂದು ಇದ್ದ ಮಾತ್ರಕ್ಕೆ ಯಜ್ಞಸಾಮಗ್ರಿಗಳೆಲ್ಲಾ ಇದ್ದಂತಾಗಲಿಲ್ಲ. ಆದ್ದರಿಂದ ಈ ಋಕ್ಕಿನ ಪೂರ್ವಾರ್ಧದಲ್ಲಿ ಪುರುಷಾಖ್ಯ ವಾದ ಹವಿಸ್ಸಿಂದ ಯಜ್ಞಮಾಡಿದರು ಎಂದು ಸಾಮಾನ್ಯವಾಗಿ ಹೇಳಿ ಉತ್ತರಾರ್ಧದಲ್ಲಿ ಅದನ್ನು ವಿಶದವಾಗಿ ವಿವರಿಸ ಲಾಗಿದೆ. ಎಂದರೆ ಯಜ್ಞಕ್ಕೆ ಬೇಕಾದ ಸಾಮಗ್ರಿಗಳಾಗಿ ಯಾವ ಯಾವ ವಸ್ತುವನ್ನು ಉಪಯೋಗಿಸಿದರು ಎಂದು ಹೇಳಲಾಗಿದೆ.

ಯಜ್ಞಕ್ಕೆ ಅನೇಕ ಸಾಮಗ್ರಿಗಳು ಬೇಕಾಗಿದ್ದರೂ ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಹೇಳಿವೆ. ಅವು ಯಾವವು ಎಂದರೆ—**ಆಜ್ಯ** (ತುಪ್ಪ) **ಇಧ್ಮ** (ಸಮಿತ್ತು) **ಹವಿಃ** (ಪುರೋಡಾಶಾದಿಗಳು) **ಬರ್ಹಿಃ** (ಕತ್ತರಿಸಿದ ದರ್ಭೆಗಳು) **ಪಶು** (ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸಲ್ಪಡುವ ಪಶು) **ಪರಿಧಿ** (ಅಗ್ನಿಕುಂಡದ ಸುತ್ತಲೂ ರಾಕ್ಷಸರು ಬಂದು ವಿಘ್ನಮಾಡದಂತೆ ತಡೆಯುವುದಕ್ಕಾಗಿ ಇಡುವ ದರ್ಭೆಗಳು) **ಸಮಿಧಃ** (ಅಗ್ನಿಯಲ್ಲಿ ಆಹುತಿ ರೂಪದಲ್ಲಿ ಅರ್ಪಿಸುವುದಕ್ಕಾಗಿ ಉಪಯೋಗಿಸುವ ಸಮಿತ್ತುಗಳು ಅಥವಾ ಒಣಗಿದ ಕೆಲವು ವೃಕ್ಷದ ಕಡ್ಡಿಗಳು). ಇನ್ನೂ ಅನೇಕ ಸಾಮಗ್ರಿಗಳು ಬೇಕಾಗಿದ್ದರೂ ಮುಖ್ಯವಾದ ಈ ಏಳು ಸಾಮಗ್ರಿಗಳನ್ನು ಮಾತ್ರ ಈ ಸೂಕ್ತದಲ್ಲಿ ಹೇಳಿದೆ. ಈ ಏಳರಲ್ಲಿ ಮೊದಲನೆಯ ಮೂರನ್ನು ಪ್ರಕೃತ ಋಕ್ಕಿನಲ್ಲಿಯೂ ಮುಂದಿನ ಎರಡನ್ನು **ತಂ ಯಜ್ಞಂ ಬರ್ಹಿಷಿ** (೭ ನೇ ಋಕ್ಕು) ಎಂಬ ಋಕ್ಕಿನಲ್ಲಿಯೂ ಉಳಿದ ಎರಡನ್ನು **ಸಪ್ತಾಸ್ಯಾಸನ್** ಎಂಬ ೧೫ ನೆಯ ಋಕ್ಕಿನಲ್ಲಿಯೂ ಹೇಳಲಾಗಿದೆ. **ಸಪ್ತಾಸ್ಯಾಸನ್** ಎಂಬ ಈ ಹದಿನೈದನೆಯ ಋಕ್ಕು ದೇವತೆಗಳು ನೆರವೇರಿಸಿದ ಯಜ್ಞಾನುಷ್ಠಾನಕ್ಕೆ ಸಂಬಂಧ ಪಟ್ಟಿರುವುದರಿಂದ ಈ ಋಕ್ಕನ್ನು ೭ ನೇ ಋಕ್ಕು ಆದನಂತರ ಈ ಸೂಕ್ತದಲ್ಲಿ ಸೇರಿಸಬೇಕಾಗಿತ್ತು. ಆದರೆ ಕಾರಣಾಂತರ ದಿಂದ ಅದು ಈ ಸೂಕ್ತದ ೧೫ ನೆಯ ಋಕ್ಕಾಗಿ ಪಠಿತವಾಗಿದೆ. ಯಜುರ್ವೇದ ಮೊದಲಾದ ಇತರ ವೇದಗಳಲ್ಲಿ ಈ ಪುರುಷಸೂಕ್ತವಿರುವ ಕಡೆ ಈ ಲೋಪವನ್ನು ಸರಿಪಡಿಸಿರುವಂತೆ ಕಾಣುತ್ತದೆ.

ಪೂರ್ವಾರ್ಧದಲ್ಲಿ ಪುರುಷರೂಪವಾದ ಹವಿಸ್ಸಿನಿಂದ ಎಂದು ಸಾಮಾನ್ಯವಾಗಿ ಹವಿಸ್ಸಿನ ವಿವರಣೆ ಇದೆಯಷ್ಟೆ. ಉತ್ತರಾರ್ಧದಲ್ಲಿ ವಿವರಿಸಿರುವ ಯಜ್ಞಸಾಮಗ್ರಿಗಳ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಬಹುದು. **ವಸಂತೋ ಅಸ್ಯಾಸೀದಾಜ್ಯಂ** ಎಂಬಲ್ಲಿ ಯಜ್ಞಾನುಷ್ಠಾನಕ್ಕೆ ಮುಖ್ಯಸಾಮಗ್ರಿಯಾದ **ಆಜ್ಯ** (ಘೃತವು) ಯಾವುದೆಂಬುದನ್ನು ತಿಳಿಸಿದೆ. ವಸಂತಋತುವೇ ಈ ಆಜ್ಯವು. ಇಲ್ಲಿ ವಸಂತಋತುವು ಯಾವುದು ಎಂಬ ಪ್ರಶ್ನೆಯು ಸಹಜವು. **ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ** (ತೈ. ಸಂ. ೪-೪-೧೧-೧) **ಇತಿ ಮಂತ್ರಾತ್ ವಸಂತೋ ಮಧುಮಾಧವಮಾಸದ್ವಯಾತ್ಮಕ ಋತುಃ** । ಮೇಲಿನ ಶ್ರುತಿವಾಕ್ಯದಂತೆ ಚೈತ್ರ ಮತ್ತು ವೈಶಾಖಮಾಸಗಳೆರಡು ಸೇರಿದರೆ ಆ ಕಾಲವು ವಸಂತಋತುವೆಂದು ಹೇಳಲ್ಪಡುವುದು. ಅದರಂತೆ **ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ** (ತೈ. ಸಂ. ೪-೪-೧೧-೧) **ಇತಿ ಮಂತ್ರಾತ್ ಶುಕ್ರಶುಚಿಮಾಸಯುಗಾತ್ಮಕ ಋತುಃ** । ಜ್ಯೇಷ್ಠ ಆಷಾಢ ಮಾಸಗಳಿಗೆ ಗ್ರೀಷ್ಮಋತುವೆಂದು ಹೆಸರು. ಮತ್ತು **ಇಷಶ್ಚೋರ್ಜಶ್ಚ ಶಾರದಾವೃತೂ** (ತೈ. ಸಂ. ೪-೪.೧೧-೧) **ಇತಿ ಮಂತ್ರಾತ್ ಇಷೋರ್ಜಮಾಸದ್ವಯಾತ್ಮಕಃ ಋತುಃ ಶರದಿತ್ಯುಚ್ಯತೇ** । ಕಾರ್ತಿಕ ಮತ್ತು ಮಾರ್ಗಶಿರ ಮಾಸಗಳಿಗೆ ಶರದೃತುವೆಂದು ಹೆಸರು. ಈ ಮೂರು ಋತುಗಳಲ್ಲಿ ವಸಂತಋತುವನ್ನು ಯಜ್ಞದಲ್ಲಿ ಉಪಯೋಗಿಸುವ ಆಜ್ಯವೆಂದೂ, ಗ್ರೀಷ್ಮಋತುವನ್ನು **ಇಧ್ಮಃ** ಎಂದರೆ ಸಮಿತ್ತುಗಳೆಂದೂ, ಶರದೃತುವನ್ನು ಪುರೋಡಾಶಾದಿರೂಪವಾದ ಹವಿಸ್ಸೆಂದೂ ಮನಸ್ಸಿನಲ್ಲಿ ಭಾವಿಸಿ ದೇವತೆಗಳು ಯಜ್ಞವನ್ನು ನೆರವೇರಿಸಿದರು.

ಇಲ್ಲಿ ಒಂದು ಮುಖ್ಯವಾದ ವಿಷಯವನ್ನು ಗಮನಿಸಬೇಕು. ಒಂದು ಸಂವತ್ಸರದಲ್ಲಿ ಎರಡೆರಡು ತಿಂಗಳಿಗೆ ಒಂದೊಂದು ಋತುವಿನಂತೆ ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ ಎಂಬ ಆರು ಋತುಗಳಿದ್ದರೂ ವಸಂತ, ಗ್ರೀಷ್ಮ, ಶರತ್ ಎಂಬ ಮೂರು ಋತುಗಳನ್ನು ಮಾತ್ರ ದೇವತೆಗಳು ಏತಕ್ಕಾಗಿ ಆರಿಸಿಕೊಂಡರು ? ಇತರ ಋತುಗಳನ್ನು ಏತಕ್ಕಾಗಿ ಬಿಟ್ಟರು ಎಂಬುದು ವಿಮರ್ಶಾರ್ಹವಾಗಿದೆ.

(೧) **ವಸಂತಃ । ಅಸ್ಯ ಋತುಪುರುಷಸ್ಯ ಜಾಯಾ ಇದಮಾಜ್ಯಂ । ತೇಜಃ ಲೋಕೇ ವಸಂತರ್ತಾವಜಾವಿಕಾದಿಪಶೂನಾಂ ನವಪಲ್ಲವಿತತರುಪಲ್ಲವ ಶಾಖಾ ಪತ್ರಪುಷ್ಪಾದಿಚರ್ವಣಾತ್ ಕ್ಷೀರಬಾಹುಲ್ಯೇನಾಜ್ಯಸಮೃದ್ಧಿದರ್ಶನಾತ್ ಸ ಏವ ವಸಂತಃ ಸ್ವಸ್ಯ ಯಜ್ಞಪುರುಷಸ್ಯ ಹವಿರಾಹುತಯೇ ಆಜ್ಯರೂಪೋ ಬಭೂವೇತ್ಯರ್ಥಃ ।** ವಸಂತ ಎಂಬ ಋತುಪುರುಷನಿಗೆ ಆಜ್ಯವೇ ಪತ್ನಿಯೆಂದು ಹೇಳಲ್ಪಡುವುದು. ಏಕೆಂದರೆ ಈ ಋತುವಿನಲ್ಲಿ ವೃಕ್ಷಾದಿಗಳೂ, ತೃಣಲತಾದಿಗಳೂ ಹೊಸದಾಗಿ ಚಿಗುರಿ ತೃಣಪತ್ರಪುಷ್ಪಾದಿಗಳು ಗೋವುಗಳೇ ಮೊದಲಾದ ಪಶುಗಳಿಗೆ ಯಥೇಷ್ಟವಾದ ಆಹಾರವಾಗಿ ಪರಿಣಮಿಸುವುದರಿಂದ ಅವುಗಳು ಯಥೇಚ್ಛವಾಗಿ ಹಾಲನ್ನು ಕೊಡುವವು. ಆ ಹಾಲಿನಿಂದ ಬಹಳವಾದ ಆಜ್ಯವು ಲಭಿಸುವುದು. ಆದ್ದರಿಂದ ಆಜ್ಯಸಮೃದ್ಧಿಗೆ ಕಾರಣವಾದ ವಸಂತಋತುವನ್ನೇ ದೇವತೆಗಳು ಆಜ್ಯವೆಂದು ಭಾವಿಸಿ ಆಹುತಿಯನ್ನರ್ಪಿಸುವುದು ಸಹಜವಾಗಿದೆ ಎಂದಭಿಪ್ರಾಯವು.

(೨) **ಗ್ರೀಷ್ಮಃ । ಜ್ವಾಲಯಾಗ್ನಿಮೇಧಯತೀತಿ ತಥೋಕ್ತಃ । ಸಮಿತ್ಸಂಜ ಆಸೀದಿತ್ಯನುಷಂಗಃ । ಅನೇನ ಗ್ರೀಷ್ಮರ್ತೌ ಸಕಲಗುಲ್ಮತರುಲತಾದೀನಾಂ ದ್ರವಶೋಷಣಾದನಲಸ್ತತ್ಸಮಿತ್ಸಂಸ್ಕಾರಮಾತ್ರೇಣೈಧತ ಇತಿ ಕೃತ್ವಾ ಸ ಏವ ಯಜ್ಞೇಶ್ವರಪ್ರೀತ್ಯೈ ಇಂಧನರಾಶಿರೂಪೋಽಭವದಿತ್ಯರ್ಥಃ ।** ಒಣಗಿದ ಕಟ್ಟಿಗೆಗಳನ್ನು ಹಾಕುವುದರಿಂದ ಅಗ್ನಿಯು ಚೆನ್ನಾಗಿ ಪ್ರಜ್ವಲಿಸುವುದೆಂಬುದು ಅನುಭವವೇದ್ಯವಷ್ಟೆ. ಗ್ರೀಷ್ಮರ್ತುವಿನಲ್ಲಿ ಎಂದರೆ ಬೇಸಿಗೆಯಲ್ಲಿ ಸಮಸ್ತ ವೃಕ್ಷಗಳೂ, ಲತೆಗಳೂ ತಮ್ಮಲ್ಲಿರುವ ರಸವನ್ನು ಅಥವಾ ದ್ರವವನ್ನು ಶೋಷಣೆ (ಒಣಗಿಹೋಗುವುದು) ಯಿಂದ ಕಳೆದುಕೊಂಡು ಚೆನ್ನಾಗಿ ಒಣಗಿಹೋಗಿ ಅಗ್ನಿಯಲ್ಲಿ ಹಾಕಿದೊಡನೆಯೇ ಚೆನ್ನಾಗಿ ಹೊತ್ತಿ ಉರಿಯುವವು. ಆದ್ದರಿಂದ ಸಮಿತ್ಸಂಜಕ್ಕಾಗಿ ಎಂದರೆ ಇಧ್ಮಕ್ಕಾಗಿ ಬೇಕಾಗುವ ಒಣಗಿದ ಕಾಷ್ಠಗಳು ಈ ಗ್ರೀಷ್ಮಋತುವಿನಲ್ಲಿ ಯಥೇಷ್ಟವಾಗಿ ದೊರೆಯುವುದರಿಂದ ದೇವತೆಗಳು ಗ್ರೀಷ್ಮರ್ತುವನ್ನು ಇಧ್ಮವೆಂದು ಸಂಕಲ್ಪಿಸಿ ಯಜ್ಞವನ್ನು ನೆರವೇರಿಸಿದರು.

(೩) **ಶರತ್ । ಹವಿರ್ಹವಿಷ್ಯಂ ನೂತನಶಾಲ್ಯಾದಿವ್ರೀಹಿಧಾನ್ಯಜನ್ಯಾನ್ನಮಾಸೀತ್ । ಪ್ರಾಯೇಣ ಶರದಿ ಶಾಲ್ಯಾದಿನವಧಾನ್ಯಾಗಮಪ್ರಸಿದ್ಧೇರ್ಯಜ್ವಿನೋ ಲೋಕೇ ಶರತ್ಕಾಲ ಏವ ಆಗ್ರಯಣೋಪಯೋಗಿನವೀನಧಾನ್ಯಾನ್ನೇನ ಯಜ್ಞಪುರುಷಂ ಯಜಂತೇ । ಅತಃ ಸ ಏವ ಯಜ್ಞಪುರುಷೋ ಹವಿಷ್ಟ್ವೇನ ಹೂಯತ ಇತ್ಯರ್ಥಃ ।** ಇಲ್ಲಿ ಹವಿಸ್ಸೆಂದರೆ ಯವವ್ರೀಹ್ಯಾದಿಧಾನ್ಯಗಳಿಂದ ಸಿದ್ಧವಾದ ಅನ್ನ ಅಥವಾ ಪಿಷ್ಟದಿಂದ ಮಾಡಿದ ಪುರೋಡಾಶವು. ಇವುಗಳನ್ನು ಮಾಡುವುದಕ್ಕೆ ಧಾನ್ಯವು ಅವಶ್ಯಕವು. ಸಾಧಾರಣವಾಗಿ ಶರತ್ಕಾಲದಲ್ಲಿ ಧಾನ್ಯಾದಿಗಳು ಬಲಿತು ಸುಗ್ಗಿಯ ಕಾಲವಾಗಿರುವುದರಿಂದ ಹೊಸ ಧಾನ್ಯಗಳು ಈ ಋತುವಿನಲ್ಲಿ ಯಥೇಷ್ಟವಾಗಿ ದೊರೆಯುವವು. ಆದ್ದರಿಂದ ಧಾನ್ಯಾದಿಗಳಿಂದ ಲಬ್ಧವಾಗುವ ಹವಿಸ್ಸನ್ನು (ಪುರೋಡಾಶಾದಿಗಳನ್ನು) ಹೋಮ ಮಾಡುವಾಗ ಈ ಧಾನ್ಯಸಮೃದ್ಧಿಗೆ ಕಾರಣಭೂತವಾದ ಶರದೃತುವನ್ನು ಹವಿಸ್ಸೆಂದು ಭಾವಿಸಿ ದೇವತೆಗಳು ಯಜ್ಞಾನುಷ್ಠಾನವನ್ನು ನೆರವೇರಿಸಿರುವುದು ಉಚಿತವಾಗಿಯೇ ಇದೆ.

ಮೇಲೆ ಹೇಳಿದ ಕಾರಣಗಳಲ್ಲದೆ ಯಜ್ಞಾದಿಕರ್ಮಾನುಷ್ಠಾನಕ್ಕೆ ವಸಂತ, ಗ್ರೀಷ್ಮ, ಶರತ್ ಎಂಬ ಮೂರು ಋತುಗಳು ಮಾತ್ರ ಪ್ರಶಸ್ಯವಾದವೆಂದು ಅನೇಕ ಕಡೆಗಳಲ್ಲಿ ಹೇಳಿದೆ—

(1) **ವಸಂತಾ ಬ್ರಾಹ್ಮಣೋಽಗ್ನಿಮಾದಧೀತ । ವಸಂತೋ ವೈ ಬ್ರಾಹ್ಮಣಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಬ್ರಹ್ಮವರ್ಚಸೀ ಭವತಿ । ಮುಖಂ ವಾ ಏತದೃತೂನಾಂ । ಯದ್ವಸಂತಃ । ಯೋ ವಸಂತಾಗ್ನಿಮಾಧತ್ತೇ । ಮುಖ್ಯ ಏವ ಭವತಿ ।**

(ತೈ. ಬ್ರಾ. ೧-೧-೨-೬, ೭)

ಬ್ರಾಹ್ಮಣನಾದವನು ವಸಂತಋತುವಿನಲ್ಲಿಯೇ ಯಜ್ಞಮಾಡಬೇಕು. ಏಕೆಂದರೆ ವಸಂತಋತುವು ಬ್ರಾಹ್ಮಣನ ಸ್ವಂತ ಋತುವೆಂದು ಭಾವಿಸಲ್ಪಟ್ಟಿದೆ. ತನ್ನ ಸ್ವಂತ ಋತುವಾದ ವಸಂತಋತುವಿನಲ್ಲಿ ಯಜ್ಞಮಾಡಿದ ಬ್ರಾಹ್ಮಣನು ಬ್ರಹ್ಮವರ್ಚಸ್ಸಿನಿಂದ ಶೋಭಿಸುವನು. ಋತುಗಳಲ್ಲೆಲ್ಲಾ ಇದೇ ಮೊದಲನೆಯ ಋತುವು ಮತ್ತು ಮುಖ್ಯವಾದುದು. ಆದ್ದರಿಂದ ವಸಂತಋತುವಿನಲ್ಲಿ ಯಜ್ಞಮಾಡಿದವನು ತನ್ನ ಸ್ವಜನರಲ್ಲಿ ಮುಖ್ಯನೂ (ಗಣ್ಯನಾದವನೂ) ಗೌರವಾನ್ವಿತನೂ ಆಗುವನು.

(2) **ಗ್ರೀಷ್ಮೇ ರಾಜನ್ಯ ಆದಧೀತ । ಗ್ರೀಷ್ಮೋ ವೈ ರಾಜನ್ಯಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಇಂದ್ರಿಯಾವೀ ಭವತಿ ।**

(ತೈ. ಬ್ರಾ. ೧-೧-೨-೭)

ರಾಜನಾದವನು (ಕ್ಷತ್ರಿಯನು) ಗ್ರೀಷ್ಮರ್ತುವಿನಲ್ಲಿ ಯಜ್ಞಮಾಡಬೇಕು. ಗ್ರೀಷ್ಮಋತುವೇ ರಾಜನ ಸ್ವಂತ ಋತುವು. ತನ್ನ ಸ್ವಂತವಾದ ಗ್ರೀಷ್ಮಋತುವಿನಲ್ಲಿ ಯಜ್ಞಮಾಡುವ ರಾಜನು ಶಕ್ತಿಸಾಮರ್ಥ್ಯಗಳುಳ್ಳ ಪರಾಕ್ರಮಶಾಲಿಯಾಗುವನು.

(3) **ಶರದಿ ವೈಶ್ಯ ಆದಧೀತ । ಶರದ್ವೈ ವೈಶ್ಯಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಪಶುಮಾನ್ಭವತಿ ॥**

ವೈಶ್ಯನಾದವನು ಶರದೃತುವಿನಲ್ಲಿ ಯಜ್ಞಮಾಡಬೇಕು. ಈ ಶರದೃತುವೇ ವೈಶ್ಯನಿಗೆ ಸ್ವಂತ ಋತುವು. ತನ್ನ ಸ್ವಂತ ಋತುವಾದ ಶರದೃತುವಿನಲ್ಲಿ ಯಜ್ಞಮಾಡುವ ವೈಶ್ಯನು ಪಶುಸಂಪತ್ತಿನಿಂದ ಕೂಡಿ ಸುಖಿಸುವನು. ಇತ್ಯಾದಿಯಾಗಿ ಅನೇಕಕಡೆ ಈ ಮೂರು ಋತುಗಳು ಯಜ್ಞಾರ್ಹಗಳೆಂದು ಪ್ರಶಸ್ತ್ಯವಾದವುಗಳೆಂದೂ ವರ್ಣಿತವಾಗಿವೆ. ಆದ್ದರಿಂದ ಅವುಗಳನ್ನೇ ಯಜ್ಞಸಾಮಗ್ರಿಗಳನ್ನಾಗಿ ಭಾವಿಸಿ ದೇವತೆಗಳು ಮಾನಸಯಾಗವನ್ನಾಚರಿಸಿದರೆಂದು ಇಲ್ಲಿ ಉಕ್ತವಾಗಿದೆ.



॥ ಸಂಹಿತಾಪಾಠಃ ॥

**ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ ।**

**ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥**

॥ ಪದಪಾಠಃ ॥

**ತಂ । ಯಜ್ಞಂ । ಬರ್ಹಿಷಿ । ಪ್ರ । ಔಕ್ಷನ್ । ಪುರುಷಂ । ಜಾತಂ । ಅಗ್ರತಃ ।**

**ತೇನ । ದೇವಾಃ । ಅಯಜಂತ । ಸಾಧ್ಯಾಃ । ಋಷಯಃ । ಚ । ಯೇ ॥ ೭ ॥**

॥ ಸಾಯಣಭಾಷ್ಯಂ ॥

ಯಜ್ಞಂ ಯಜ್ಞಸಾಧನಭೂತಂ ತಂ ಪುರುಷಂ ಪಶುತ್ವಭಾವನಯಾ ಯೂಪೇ ಬದ್ಧಂ ಬರ್ಹಿಷಿ ಮಾನಸೇ ಯಜ್ಞೇ ಪ್ರೌಕ್ಷನ್ । ಪ್ರೋಕ್ಷಿತವಂತಃ । ಕೀದೃಶಮಿತ್ಯತ್ರಾಹ । ಅಗ್ರತಃ ಸರ್ವಸೃಷ್ಟೇಃ ಪೂರ್ವಂ ಪುರುಷಂ ಜಾತಂ ಪುರುಷತ್ವೇನೋತ್ಪನ್ನಂ । ಏತಚ್ಚ ಪ್ರಾಗೇವೋಕ್ತಂ ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷ ಇತಿ । ತೇನ ಪುರುಷರೂಪೇಣ ಪಶುನಾ ದೇವಾ ಅಯಜಂತ । ಮಾನಸಯಾಗಂ ನಿಷ್ಪಾದಿತವಂತ ಇತ್ಯರ್ಥಃ । ಕೇ ತೇ ದೇವಾ ಇತ್ಯತ್ರಾಹ । ಸಾಧ್ಯಾಃ ಸೃಷ್ಟಿಸಾಧನಯೋಗ್ಯಾಃ ಪ್ರಜಾಪತಿಪ್ರಭೃತಯಃ ತದನುಕೂಲಾ ಋಷಯೋ ಮಂತ್ರದ್ರಷ್ಟಾರಶ್ಚ ಯೇ ಸಂತಿ । ತೇ ಸರ್ವೇಽಪ್ಯಯಜಂತೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗ್ರತಃ—ಜಗತ್ ಸೃಷ್ಟಿಗಿಂತಲೂ ಮೊದಲು । **ಜಾತಂ**—ಉತ್ಪನ್ನನೂ । **ಯಜ್ಞಂ**—ಯಜ್ಞಕ್ಕೆ ಸಾಧನಭೂತನೂ ಆದ । **ತಂ ಪುರುಷಂ**—ಆ ವಿರಾಟ್ಪುರುಷನನ್ನು । **ಬರ್ಹಿಷಿ**—ದರ್ಭಾಸನದ ಮೇಲೆ ಸ್ಥಾಪಿಸಿ । **ಪ್ರೌಕ್ಷನ್**—ಪ್ರೋಕ್ಷಣೆಮಾಡಿದರು । **ತೇನ**—ಪುರುಷರೂಪವಾದ ಪಶುವಿನಿಂದ । **ದೇವಾಃ**—ದೇವತೆಗಳೂ । **ಸಾಧ್ಯಾಃ**—ಸಾಧ್ಯರೂ । **ಋಷಯಃ**—ಋಷಿಗಳೂ ಸೇರಿ । **ಯೇ**—ಯಜ್ಞಮಾಡಲು ಯಾರು ಯಾರು ಅರ್ಹರೋ ಅವರೆಲ್ಲರೂ ಸೇರಿ । **ಅಯಜಂತ**—ಯಾಗವನ್ನು ನಿರ್ವಹಿಸಿದರು.

॥ ಭಾವಾರ್ಥ ॥

ಜಗತ್ಸೃಷ್ಟಿಗಿಂತಲೂ ಮೊದಲೂ ಉತ್ಪನ್ನನೂ, ಯಜ್ಞಕ್ಕೆ ಸಾಧನಭೂತನೂ ಆದ ವಿರಾಟ್ಪುರುಷನನ್ನು ದರ್ಭಾಸನದ ಮೇಲೆ ಸ್ಥಾಪಿಸಿ ಪ್ರೋಕ್ಷಣೆ ಮಾಡಿದರು. ಪುರುಷರೂಪವಾದ ಪಶುವನ್ನು ಆಹುತಿಯಾಗಿ ಅರ್ಪಿಸಿ ದೇವತೆಗಳೂ ಸಾಧ್ಯರೂ ಋಷಿಗಳೂ ಸೇರಿ ಎಲ್ಲರೂ ಯಾಗವನ್ನು ನಿರ್ವಹಿಸಿದರು.

English Translation

They immolated as the victim upon the sacred grass Purusha, born before (creation), with him the deities who were Sadhyas and those who were Rishis sacrificed.

॥ ವಿಶೇಷವಿಷಯಗಳು ॥

ಸೃಷ್ಟಿಗೆ ಪೂರ್ವದಲ್ಲಿ ವಿರಾಟ್‌ತತ್ತ್ವದಿಂದ ಉತ್ಪನ್ನನಾದ ಪುರುಷನನ್ನು ಯಜ್ಞಸ್ಥಾನದಲ್ಲಿರಿಸಿ ದೇವಾದಿಗಳು ಪ್ರೋಕ್ಷಿಸಿ ಯಜ್ಞವನ್ನು ನೆರವೇರಿಸಿದರು ಎಂಬುದೇ ಈ ಋಕ್ಕಿನ ಮುಖ್ಯಾಭಿಪ್ರಾಯವು. ಪುರುಷನೇ ಯಜ್ಞ ಮತ್ತು ಪುರುಷನೇ ಯಜ್ಞಸಾಧನ. ಈ ಸಾಧನದ ಸ್ವರೂಪವೇನು ಮತ್ತು ಯಜ್ಞದ ಸ್ವರೂಪವೇನು ಎಂಬುದನ್ನು ಮುಂದೆ ಇದೇ ಸೂಕ್ತದ ೧೫ನೇ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ತಿಳಿಸಲಾಗುತ್ತದೆ. **ದೇವಾಃ** ಮತ್ತು **ಋಷಯಃ** ಎಂಬ ಪದಗಳಿಗೆ ಪ್ರಕೃತದಲ್ಲಿ ಏನರ್ಥವೆಂಬುದನ್ನು ತಿಳಿಸಿದೆ. ಪ್ರಜಾಪತಿಯ ಪ್ರಾಣಗಳು ಮತ್ತು ಇಂದ್ರಿಯಗಳು ಪ್ರಜಾಪತಿಯ ಯಜ್ಞಕ್ಕೆ ಸಾಹಾಯ್ಯಕಗಳಾಗಿದ್ದವು ಎಂಬುದನ್ನು ಮತ್ತು ದೇವ ಮತ್ತು ಋಷಿ

ಶಬ್ದಕ್ಕೆ ಈ ಅರ್ಥಗಳು ಹೇಗೆ ಸಾಧ್ಯ ಎಂಬುದನ್ನೂ ಸಹ ತಿಳಿಸಿದೆ. ಇಲ್ಲಿ **ಸಾಧ್ಯಾಃ** ಎಂಬುವರು ಯಾರು, ಅವರು ಇತರ ದೇವತೆಗಳ ಗುಂಪಿಗೆ ಸೇರಿದವರೇ ಅಥವಾ ಬೇರೆಯೇ, ದೇವತೆಗಳ ಸಮಾನರೇ ಅಥವಾ ಅವರಿಗಿಂತಲೂ ಅಧಿಕರೇ ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿರುತ್ತದೆ. **ಸೃಷ್ಟಿಸಾಧನಯೋಗ್ಯಾಃ ಪ್ರಜಾಪತಿಪ್ರಭೃತಯಃ** ಸೃಷ್ಟಿಯನ್ನು ಸಾಧಿಸಲು ಯೋಗ್ಯರೇ ಸಾಧ್ಯರು. ಪ್ರಜಾಪತಿಯೇ ಮುಂತಾದವರು ಎಂದು ಸಾಯಣರು ವಿವರಿಸಿದಾರೆ. ಭಟ್ಟಭಾಸ್ಕರರ ವಿವರಣವು ಈ ರೀತಿಯಿದೆ.

**ಸಾಧ್ಯಾಶ್ಚ ಋಷಯಶ್ಚ ದ್ವಿಪ್ರಕಾರಾ ಅಪಿ ದೇವಾ ಅಯಜಂತ । ಸಾಧಯಂತೀತಿ ಸಾಧ್ಯಾಃ । ಪ್ರಾಣಾಃ । ಋಷಯಃ ದ್ರಷ್ಟಾರಃ ಇಂದ್ರಿಯಾಣಿ । ದ್ವಯೇಽಪಿ ದೇವನಶೀಲಾಃ ದೇವಾ ಇತ್ಯುಚ್ಯಂತೇ । ತೇನ ವಿರಾಜಾ ಪುರುಷೇಣ ಅಯಜಂತ ॥**

(ತೈ. ಆ. ಭಾ ೩-೧೨)

ಮನಸ್ಸಂಕಲ್ಪವನ್ನು ನೆರವೇರಿಸುವ ಶಕ್ತಿಯುಳ್ಳ ಪ್ರಾಣಗಳೇ ಸಾಧ್ಯರೆಂದು ವ್ಯವಹೃತರಾಗಿದ್ದಾರೆ. ಇಂದ್ರಿಯಗಳೇ ಋಷಿಶಬ್ದದಿಂದ ವ್ಯವಹೃತರು. ಪ್ರಾಣ ಮತ್ತು ಇಂದ್ರಿಯಗಳು ಇವು ತಮ್ಮ ಪ್ರಕಾಶಕವಾದ ಸ್ವರೂಪವನ್ನು ಹೊಂದಿರುವುದರಿಂದ **ದೇವಾಃ** ಎಂಬ ವಿಶೇಷಣದಿಂದ ವರ್ಣಿತರು. ಇವರು ಪ್ರಜಾಪತಿಯ ಸಂಕಲ್ಪರೂಪವಾದ ಯಜ್ಞವನ್ನು ನಿರ್ವಹಿಸಿದರು. ಅದು ಉತ್ತರಸೃಷ್ಟಿಗೆ ಸಾಧಕವಾಯಿತು ಎಂದು ತಿಳಿಸಿದೆ.

**ಸಾಧ್ಯಾಃ** ಎಂಬ ಪದಕ್ಕೆ ಪ್ರಜಾಪತಿಪ್ರಭೃತಯಃ ಎಂದು ಸಾಯಣರು ತಾತ್ಪರ್ಯವನ್ನು ಹೇಳಿರುವುದು ಔಚಿತ್ಯವಿರುತ್ತದೆ. ಹೇಗೆಂದರೆ—

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।**
**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**

(ಋ. ಸ. ೧೦-೯೦.೧೬)

ದೇವತೆಗಳು ಯಜ್ಞವನ್ನಾಚರಿಸಿ ಯಜ್ಞರೂಪನಾದ ಪರಮಪುರುಷನನ್ನು ಆರಾಧಿಸಿದರು. ಲೋಕದಲ್ಲಿ ಯಾರು ಯಾರು ಈ ಮಾರ್ಗವನ್ನನುಸರಿಸಿ ಪರಮಾತ್ಮನನ್ನು ಯಜ್ಞಾಚರಣೆಯ ಮೂಲಕ ಆರಾಧಿಸುವರೋ ಅವರು ನಿತ್ಯ ಸುಖವನ್ನು ಕೊಡುವ ಸ್ವರ್ಗವನ್ನು ಸೇರುತ್ತಾರೆ. ಸೃಷ್ಟಿಸಾಧಕರಾದ ಸಾಧ್ಯರೆಂಬ ದೇವತೆಗಳು ಇದೇ ಲೋಕದಲ್ಲಿ ಪರಮಾತ್ಮನನ್ನು ಆರಾಧಿಸುತ್ತ ಸೃಷ್ಟಿಗಿಂತಲೂ ಪೂರ್ವ ಅವರ ಮಹತ್ತ್ವವನ್ನು ಪ್ರಶಂಸಿಸಿದೆ. ಸಾಧ್ಯರ ಲೋಕ ವಾವುದು ಎಂಬುದೇ ಅನೇಕ ಸಂದರ್ಭಗಳಲ್ಲಿ ಜಿಜ್ಞಾಸೆಗೆ ಅವಕಾಶವಾಗಿದೆ. ಅಲ್ಲದೇ. ಸೃಷ್ಟಿಕಾರ್ಯದಲ್ಲಿ ಪ್ರಜಾಪತಿಗೆ ಯಾವ ವಿಧದಲ್ಲಿ ಇವರು ಸಹಾಯಮಾಡಿದರು ಎಂಬುದೂ ಸಹ ಪ್ರಕೃತದಲ್ಲಿ ಪರಿಶೀಲಿಸಬೇಕಾದ ವಿಷಯವಾಗಿದೆ.

ನಿರುಕ್ತಕಾರರ ಮತದಂತೆ ಸಾಧ್ಯರು ದ್ಯುಲೋಕಸ್ಥರೆಂದು ತಿಳಿಯುತ್ತದೆ.

**ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವಂ ದೇವಯುಗಮಿತ್ಯಾಖ್ಯಾನಂ ।**

(ನಿ. ೧೨-೪೧)

ನೈರುಕ್ತರು (ಯಾಸ್ಕರಿಗಿಂತಲೂ ಪ್ರಾಚೀನರಾದ ನಿರುಕ್ತಮತದವರು) **ಸಾಧ್ಯರನ್ನು** ದ್ಯುಲೋಕಸ್ಥರಾದ ದೇವತೆಗಳೆಂದು ಪರಿಗಣಿಸಿದ್ದಾರೆ. ದೇವತೆಗಳಲ್ಲೆಲ್ಲ ಅವರೇ ಪ್ರಥಮರು ಮತ್ತು ಅತ್ಯುತ್ತಮವಾದ ಲೋಕವನ್ನು

ಆಶ್ರಯಿಸುವವರು ಎಂದು ಹಿಂದಿನವರು ತಿಳಿದಿದ್ದಾರೆ ಎಂದು ನಿರುಕ್ತದ ಅಭಿಪ್ರಾಯವಿರುತ್ತದೆ. ಛಾಂದೋಗ್ಯೋಪ ನಿಷತ್ತಿನಲ್ಲಿ ಸಾಧ್ಯರ ಉತ್ತಮವಾದ ಲೋಕವನ್ನು ತಿಳಿಸುವ ಸನ್ನಿವೇಶವೊಂದಿರುತ್ತದೆ. ಆ ಪ್ರಕರಣವು ಒಟ್ಟು ಐದು ಲೋಕಗಳನ್ನು ನಿರ್ದೇಶಿಸಿ ಅವುಗಳಲ್ಲೆಲ್ಲ ಸಾಧ್ಯರ ಲೋಕವೇ ಅತ್ಯುತ್ತಮವಾದುದೆಂದು ತಿಳಿಸುತ್ತದೆ. ಹೇಗೆಂದರೆ—

**ತದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ।**

(ಛಾ. ಉ. ೩-೬-೧)

ಅಮೃತತ್ವವನ್ನು ಹೊಂದಿರುವ ರಸಗಳಲ್ಲಿ ವೇದಗಳೇ ಅತ್ಯುತ್ತಮವಾದ ರಸಗಳು. ಅವುಗಳಲ್ಲಿ ಮೊದಲನೆಯದಾದ ಋಗ್ವೇದರೂಪವಾದ ಅಮೃತವನ್ನು ವಸುಗಳು ಅಗ್ನಿರೂಪವಾದ ಮುಖದಿಂದ ಉಪಭೋಗಿಸಿ ತಮ್ಮ ಸ್ಥಿತಿಯನ್ನು ವ್ಯವಸ್ಥಿತವನ್ನಾಗಿ ಮಾಡಿಕೊಳ್ಳುತ್ತಾರೆ. ಇದು ವಸುಲೋಕದ ಅನುಭವವು. (ಪಾರ್ಥಿವವು).

**ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವಂತೀಂದ್ರೇಣ ಮುಖೇನ ।**

(ಛಾ. ಉ. ೩-೭-೧)

ಯಜೂರೂಪವಾದ ಅಮೃತವನ್ನು ರುದ್ರರು ಇಂದ್ರರೂಪವಾದ ಮುಖದಿಂದ ಅನುಭವಿಸುತ್ತಾರೆ. ಇದು ಅಂತರಿಕ್ಷ ಲೋಕದ ಅನುಭವವು

**ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ವರುಣೇನ ಮುಖೇನ ।**

(ಛಾ. ಉ. ೩-೮-೧)

ಸಾಮರೂಪವಾದ ಅಮೃತವನ್ನು ಆದಿತ್ಯರು ವರುಣರೂಪವಾದ ಮುಖದಿಂದ ಅನುಭವಿಸುತ್ತಾರೆ. ಇದು ವರುಣ ಲೋಕದ ಅನುಭವವು.

**ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ಸೋಮೇನ ಮುಖೇನ ।**

(ಛಾ. ಉ. ೩-೯-೧)

ಅಥರ್ವವೇದರೂಪವಾದ ಅಮೃತವನ್ನು ಮರುತ್ತುಗಳು ಸೋಮರೂಪವಾದ ಮುಖದಿಂದ ಅನುಭವಿಸುತ್ತಾರೆ. ಇದು ಸೋಮಲೋಕದ ಅನುಭವವು.

**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥**

(ಛಾ. ಉ. ೩-೧೦-೧)

ಐದನೆಯದೂ ಉಪನಿಷದ್ರೂಪವೂ ಆದ ಅಮೃತಲೋಕದಲ್ಲಿ ಸಾಧ್ಯರು ವಾಸಿಸುತ್ತ ಬ್ರಹ್ಮರೂಪವಾದ ಮುಖದಿಂದ ಅಮೃತವನ್ನು ಅನುಭವಿಸುತ್ತಾರೆ. ಎಂದರೆ, ದೇವತೆಗಳು ತಿನ್ನುವುದೂ ಇಲ್ಲ. ಪಾನಮಾಡುವುದೂ ಇಲ್ಲ. ಅಮೃತದ ದರ್ಶನಮಾತ್ರದಿಂದಲೇ ತೃಪ್ತಿಯನ್ನು ಹೊಂದುತ್ತಾರೆ, ಎಂಬ ಈ ರೀತಿಯಾದ ವರ್ಣನದಿಂದ ಸಾಧ್ಯರ ಅತ್ಯುತ್ತಮವಾದ ಲೋಕವನ್ನು ಪ್ರಶಂಸಿಸಿದೆ. ಅಲ್ಲದೆ,

**ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತಿ ।**

(ಛಾ. ಉ. ೩.೧೦-೨, ೩)

ಸಾಧ್ಯರು ಅತ್ಯುತ್ತಮವಾದ ಲೋಕದಲ್ಲಿದ್ದು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ. ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಹೊಂದುತ್ತಾರೆ. ಈ ತತ್ತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬ ನಾಗುತ್ತಾನೆ. ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾದ ರೂಪವನ್ನೇ ಪಡೆಯುತ್ತಾನೆ.

**ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ।**

(ಛಾ. ಉ. ೩.೧೦-೪)

ಸಾಧ್ಯರೂಪವನ್ನು ಹೊಂದಿದ ಯಜ್ಞಕರ್ತನೂ, ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವಾರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರ ಮಾರ್ಗವಾದುದೂ, ಊರ್ಧ್ವ ಮತ್ತು ಅರ್ವಾಗ್ರೂಪವಾದುದೂ ಆದ ಸಂಚಾರವು ಇರುವವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಸಾಧ್ಯಲೋಕದ ಮತ್ತು ಸಾಧ್ಯರ ಸಂಬಂಧವಾದ ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಹೇಳಿದೆ.

ಸಾಧ್ಯರ ಯಜ್ಞಕ್ರಿಯೆ ಮತ್ತು ಅದರಿಂದ ಸೃಷ್ಟಿಕಾರ್ಯವು ಮುಂದುವರಿಯುವ ಕ್ರಮ ಈ ವಿಷಯದಲ್ಲಿ ಶ್ರುತಿವಾಕ್ಯಗಳ ಅಭಿಪ್ರಾಯವೇನೆಂಬುದನ್ನು ಪರಿಶೀಲಿಸುವುದೇ ಪ್ರಕೃತದ ಉದ್ದಿಶ್ಯ. ಆದರೆ, ಸಾಧ್ಯರು ಯಾವ ಲೋಕಕ್ಕೆ ಸೇರಿದವರು ಮತ್ತು ಯಾವ ರೀತಿಯ ದಿವ್ಯತ್ವವನ್ನು ಹೊಂದಿರುವರು, ಪ್ರಜಾಪತಿಗೂ ಇವರಿಗೂ ಇರುವ ಸಾಕ್ಷಾಂತ್ಸಂಬಂಧವು ಎಂತಹುದು ಎಂಬ ವಿಷಯದ ವಿಮರ್ಶೆಯೂ ಅವಶ್ಯವಾಗಿರುತ್ತದೆ. ಸಾಧ್ಯರ ಲೋಕ ಮತ್ತು ಅವರು ಪ್ರಜಾಪತಿಯ ಸೃಷ್ಟಿಕಾರ್ಯಕ್ಕೆ ಸಹಾಯಮಾಡಿದುದು ಈ ವಿಷಯದಲ್ಲಿ ಬೃಹದ್ದೇವತಾಕಾರರ ಅಭಿಪ್ರಾಯವು ಈ ರೀತಿಯಿರುತ್ತದೆ.

**ಗಾಯತ್ರೀ ಚೈಕವಿಂಶಶ್ಚ ಯಚ್ಚ ಸಾಮ ರಥಂತರಂ ।**
**ಸಾಧ್ಯಾಃ ಸಾಮ ಚ ವೈರಾಜಂ ಆಪ್ತ್ಯಾಶ್ಚ ವಸುಭಿಃ ಸಹ ॥**

(ಬೃ. ದೇ. ೧-೧೧೬)

ಗಾಯತ್ರೀ, ಏಕವಿಂಶಸ್ತೋಮ, ರಥಂತರಸಾಮ, ವೈರಾಜಸಾಮ, ಸಾಧ್ಯರು, ಆಪ್ತ್ಯರು ಮತ್ತು ವಸುಗಳು ಇವರೆಲ್ಲರೂ ಅಗ್ನಿಲೋಕಕ್ಕೆ ಸೇರಿದವರು, ಸಾಧ್ಯರು, ಆಪ್ತ್ಯರು ಮತ್ತು ವಸುಗಳು ಇವರು ಮೊದಲನೆಯ ಲೋಕದವರು ಎಂದು ನಿರುಕ್ತಕಾರರ ಮತ. (ನಿ ೭-೮). ಆದರೆ, ಇವರಲ್ಲಾರೂ ಸಹ ಪೃಥಿವೀಲೋಕಕ್ಕೆ ಸಂಬಂಧಿಸಿಲ್ಲವೆಂದು ನಿಘಂಟುವಿನಿಂದ ತಿಳಿಯುತ್ತದೆ. (೫-೫-೬).

**ಆದಿತ್ಯಾಃ ಕೇಶಿಸಾಧ್ಯಾಶ್ಚ ಸವಿತಾ ವಸುಭಿರ್ಮನುಃ ।**
**ದಧ್ಯಙ್ ಅಥರ್ವಾ ವಿಶ್ವೇ ಚ ವಾಜಿನೋ ದೇವಪತ್ನಯಃ ॥**

(ಬೃ. ದೇ. ೨-೧೨)

ಆದಿತ್ಯರು, ಕೇಶಿಗಳು (ಅಗ್ನಿಯ ಮೂರು ರೂಪಗಳು), ಸಾಧ್ಯರು, ಸವಿತೃ, ವಸುಗಳು ವಿಶ್ವೇದೇವತೆಗಳು, ದೇವಪತ್ನಿಯರು ಇವರೆಲ್ಲರೂ ಆದಿತ್ಯಲೋಕಕ್ಕೆ ಸೇರಿದವರು ಎಂದು ತಿಳಿಸಿದೆ. ಸಾಧ್ಯರು ಉತ್ತಮನಾದ ಲೋಕದ ನಿತ್ಯದೇವತೆಗಳಾದುದರಿಂದ ಇವರು ಪ್ರಜಾಪತಿಯ ಸೃಷ್ಟಿಕಾರ್ಯಕ್ಕೆ ಸಹಾಯಮಾಡತಕ್ಕವರು. ಹೇಗೆಂದರೆ;—

**ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।**
**ಆಹರತ್ಸಹಿತಃ ಸಾಧ್ಯೈರ್ವಿಶ್ವೇದೇವೈಃ ಸಹೇತಿ ಚ ॥**

(ಬೃ. ದೇ. ೫-೯೭)

ಪ್ರಜಾಪತಿಯು ಸಂತಾನ ಸೃಷ್ಟಿಯನ್ನು ಅಪೇಕ್ಷಿಸಿ ಸಾಧ್ಯರೊಡನೆಯೂ, ವಿಶ್ವೇದೇವತೆಗಳೊಡನೆಯೂ ಕೂಡಿ ತ್ರಿಸಾಂವತ್ಸರಿಕವಾದ ಸತ್ರವನ್ನು ಆಚರಿಸಿದನು ಎಂದು ಪ್ರಜಾಪತಿಯು ತನ್ನ ಸೃಷ್ಟಿಕಾರ್ಯದಲ್ಲಿ ಸಾಧ್ಯರ ಸಹಾಯವನ್ನು ಅಪೇಕ್ಷಿಸಿದುದನ್ನು ತಿಳಿಸಿದೆ. ಅಲ್ಲದೇ,

**ಐಂದ್ರಾತ್ಪುರುಷಸೂಕ್ತಂ ಚ ಅನ್ತ್ಯಯಾ ಪೌರುಷಸ್ಯ ತು ।**
**ಯಜ್ಞೈನಮಭಜತ್ಸಾಧ್ಯಾ ಯಜ್ಞಾರ್ಥಂ ಸೋಽರ್ಥ ಉಚ್ಯತೇ ॥**

(ಬೃ. ದೇ. ೭-೧೪೩)

ಋ. ಸಂ. ೧೦– ೮೯ನೇ ಸೂಕ್ತದಲ್ಲಿ ಇಂದ್ರನ ಸ್ತುತಿಯಾದನಂತರ, ೧೦-೯೦ನೇ ಸೂಕ್ತದಲ್ಲಿ ಸಾಧ್ಯರು ಯಜ್ಞಾರ್ಥವಾಗಿ ಪ್ರಜಾಪತಿಯನ್ನು ವಿಭಾಗಿಸಿ ಯಜ್ಞವನ್ನಾಚರಿಸುದುದು ತಿಳಿಸಿದೆಯೆಂದು ಈ ವಾಕ್ಯವು ಪ್ರಶಂಸಿದೆ. ಇದೇ ಮಹತ್ವವುಳ್ಳ ಸಾಧ್ಯರ ಸ್ವರೂಪವನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ —

**ಛಂಧಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್। ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥**

(ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯಸಂಜ್ಞಕರು. ಛಂದೋರೂಪರಾದ ಈ ಸಾಧ್ಯರು ಹಿಂದೆ ಅಗ್ನಿಯನ್ನು ಮಥಿಸಿ ಅಗ್ನಿಯನ್ನು ಪೂಜಿಸಿದರು. ಮತ್ತು ಅದರ ಫಲವಾಗಿ ಸ್ವರ್ಗವನ್ನು ಪಡೆದರು ಎಂದಿರುತ್ತದೆ. ಕೆಲವೆಡೆಗಳಲ್ಲಿ ಆದಿತ್ಯರು ಮತ್ತು ಅಂಗಿರಸ್ಸುಗಳೂ ಸಾಧ್ಯಸಂಜ್ಞಕರು ಎಂದು ತಿಳಿಸಿದೆ. ಇವರೆಲ್ಲರೂ ಯಜ್ಞಸಾಧನವಾದ ಪ್ರಜಾಪತಿ ರೂಪವಾದ ಹವಿಸ್ಸನ್ನರ್ಪಿಸಿ ಯಜ್ಞವನ್ನು ನೆರವೇರಿಸಿದರು ' ಎಂದು ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. ಮತ್ತು ಪ್ರಕೃತವಾದ ಋಕ್ಕಿನಲ್ಲಿ ಸಾಧ್ಯ ಶಬ್ದಕ್ಕೆ ಯಾವ ವಿವರಣವನ್ನು ಹೇಳಿದೆಯೋ ಅದೇ ವಿವರಣವನ್ನು ಸಮರ್ಥಿಸುವ ವಾಕ್ಯಗಳು ಶತಪಥಬ್ರಾಹ್ಮಣದಲ್ಲಿ ಈ ರೀತಿಯಿರುತ್ತದೆ.

**ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಪ್ಯೇತರ್ಹಿ ಸಾಧಯಂತಿ ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ...............ಯತ್ಕಿಂಚಾಮೃತಂ ॥**

(ಶ. ಬ್ರಾ. ೧೦-೨-೨-೩)

ಸಾಧ್ಯರು ಅತಿ ಪ್ರಾಚೀನಕಾಲದಿಂದಲೇ ಬ್ರಹ್ಮಲೋಕವಾಸಿಗಳಾಗಿದ್ದಾರೆ. ದೇವತೆಗಳಿಗಿಂತಲೂ ಅತಿ ಪ್ರಾಚೀನರು. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯ ದೇಹಾಂತರ್ಗತವಾಗಲು ಆರಂಭದಲ್ಲಿ ಸಪ್ತಪ್ರಾಣಗಳೇ ಅವನನ್ನು ಸಾಧ್ಯನನ್ನಾಗಿ ಮಾಡಿದವು. ಅಮೃತತ್ವ ಮತ್ತು ಶುದ್ಧಿ ಇವೆರಡೂ ಸಾಧ್ಯರೂಪರಾದ ಸಪ್ತಪ್ರಾಣಗಳಿಂದ ಮಾತ್ರ ಸಾಧ್ಯವಾಯಿತು. ಸೃಷ್ಟಿಕಾರ್ಯಕ್ಕೆ ಇವೆರಡು ಗುಣಗಳೂ ಅತ್ಯಗತ್ಯವಾಗಿರುತ್ತವೆ ಎಂಬ ಈ ವಿಷಯವನ್ನೇ ಋಕ್ಸಂಹಿತೆಯೂ ಈ ರೀತಿ ತಿಳಿಸುತ್ತದೆ.

**ಪಶ್ಚೇದಮನ್ಯದಭವದ್ಯಜತ್ರಮಮರ್ತಸ್ಯ ಭುವನಸ್ಯ ಭೂನಾ ।**
**ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥**

(ಋ. ಸಂ. ೧೦-೧೪೯-೩)

ಅಮೃತತ್ವವನ್ನೂ ಶುದ್ಧಿಯನ್ನೂ ಹೊಂದಿದುದರಿಂದಲೇ, ಪೂಜ್ಯವಾದ ಪರವಸ್ತುವು ಅಮರ್ತ್ಯವಾದ ಲೋಕದೊಡನೆ ಆವಿರ್ಭವಿಸಿತು. ಈ ಪರವಸ್ತುವನ್ನೇ ಸಪರ್ಣವಾದ ಗರುತ್ಮಂತನೆಂದೂ ಕರೆಯುತ್ತಾರೆ. ಈ ಮೂಲವಸ್ತುವಿನ ಸಹಾಯದಿಂದಲೇ ಉಳಿದ ಅಮರ್ತ್ಯವಾದ ವಸ್ತುಗಳೆಲ್ಲವೂ ಪೂಜಾರ್ಹವಾಗಿವೆ ಎಂಬ ಈ ಋಕ್ಸಂಹಿತಾವಾಕ್ಯವನ್ನುದಾಹರಿಸಿ, ಮೇಲೆ ಉದಾಹೃತವಾದ ಶತಪಥಬ್ರಾಹ್ಮಣದಲ್ಲಿ ಸಾಧ್ಯಶಬ್ದಕ್ಕೂ ಮತ್ತು ಯಜ್ಞಶಬ್ದಕ್ಕೂ ಅರ್ಥವನ್ನು ಹೇಳಿ ಅವೆರಡಕ್ಕೂ ಇರುವ ಸಂಬಂಧವನ್ನು ತಿಳಿಸಿದೆ.

ಪ್ರಜಾಪತಿಯ ಯಜ್ಞದಲ್ಲಿ ಇಂದ್ರಿಯಗಳೂ ಪ್ರಾಣಗಳೂ ಯಜ್ಞಕಾರ್ಯವನ್ನು ನಿರ್ವಹಿಸಿದವು ಎಂಬ ಅರ್ಥವೂ ಸಾಧ್ಯವೆಂದು ಭಾಷ್ಯಗಳು ತಿಳಿಸುತ್ತವೆ. **ಸಾಧಯಂತೀತಿ ಸಾಧ್ಯಾಃ ಪ್ರಾಣಾಃ** ಅಥವಾ **ಸೃಷ್ಟಿಸಾಧನಯೋಗ್ಯಾಃ ಪ್ರಜಾಪತಿಪ್ರಭೃತಯಃ** ಎಂಬ ತಾತ್ಪರ್ಯವು ಸಾಧ್ಯವೇ ಎಂದರೆ, ಅದಕ್ಕೆ ಶ್ರುತಿವಾಕ್ಯಗಳ ಪ್ರಮಾಣಗಳೂ ಇರುವುದರಿಂದ ಆ ಅರ್ಥವೂ ಉಚಿತವಾಗಿರುತ್ತದೆ ಎಂದು ಹೇಳಬಹುದು. ಪ್ರಜಾಪತಿಯ ಆತ್ಮಯಾಗದಲ್ಲಿ ಪ್ರಾಣಗಳ ಮತ್ತು ಇಂದ್ರಿಯಗಳ ಕರ್ತವ್ಯವೇನು ಎಂದರೆ, ಅದರ ವಿವರಣವನ್ನು ಶತಪಥ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಅಸದ್ವಾ ಇದಮಗ್ರ ಆಸೀತ್ । ತದಾಹುಃ ಕಿಂ ತದಸದಾಸೀದಿತ್ಯೃಷಯೋ ವಾವ ತೇಽಗ್ರೇಽಸದಾಸೀತ್ತದಾಹುಃ ಕೇ ತ ಋಷಯ ಇತಿ ಪ್ರಾಣಾ ವಾ ಋಷಯಸ್ತೇ ಯತ್ಪುರಾಸ್ಮಾತ್ ಸರ್ವಸ್ಮಾದಿದಮಿಚ್ಛಂತಃ ಶ್ರಮೇಣ ತಪಸಾರಿಷಂಸ್ತಸ್ಮಾದೃಷಯಃ ॥**

(ಶ. ಬ್ರಾ. ೬-೧-೧-೧)

ಭಾವರೂಪವಾದ ಜಗತ್ಸೃಷ್ಟಿಗೆ ಪೂರ್ವದಲ್ಲಿ ಅಸದಾತ್ಮಕವಾದ ತತ್ತ್ವವು ಮಾತ್ರವಿದ್ದಿತು. ಆ ಅಸದಾತ್ಮಕವಾದ ತತ್ತ್ವವಾವುದು ? ಎಂದು ಪ್ರಶ್ನಿಸಿದರೆ, ಯಾವ ತತ್ತ್ವವನ್ನು **ಋಷಯಃ** ಎಂದು ಕರೆಯುತ್ತೇವೆಯೋ ಅದೇ ಎಂದು

ಉತ್ತರವಿರುತ್ತದೆ. ಆ ಋಷಿಗಳಾರು ? ಎಂದರೆ, ಪ್ರಾಣಗಳೇ ಋಷಿಸಂಜ್ಞಕಗಳಾಗಿರುತ್ತವೆ. ಪ್ರಪಂಚವು ಭಾವರೂಪವಾಗಿ ಪರಿವರ್ತಿತವಾಗುವುದಕ್ಕೆ ಪೂರ್ವದಲ್ಲಿ ಈ ಪ್ರಾಣಗಳೇ ತಮ್ಮ ತಪಸ್ಸಿನಿಂದಲೂ, ಶ್ರಮದಿಂದಲೂ ಕೃಶವಾಗಿದ್ದುದರಿಂದ (**ಅರಿಷನ್**) ಅವು **ಋಷಿ** ಸಂಜ್ಞಕಗಳಾದವು. ಋಷಿಗಳೆಂದು ಹೆಸರಿನಿಂದ ಪ್ರಸಿದ್ಧವಾಗಿರುವ ಪ್ರಾಣಗಳೇ **ದೇವಾಃ** ಎಂದೂ ವ್ಯವಹರಿಸಲ್ಪಡುತ್ತವೆ.

> **ಸ ಯೋಽಯಂ ಮಧ್ಯೇ ಪ್ರಾಣಃ । ಏಷ ಏವೇಂದ್ರಸ್ತಾನೇಷ ಪ್ರಾಣಾನ್ಮಧ್ಯತ ಇಂದ್ರಿಯೇಣೈಂದ್ಧ ಯದೈಂದ್ಧ ತಸ್ಮಾದಿಂಧ ಇಂಧೋ ಹ ವೈ ತಮಿಂದ್ರ ಇತ್ಯಾಚಕ್ಷತೇ ಪರೋಕ್ಷಂ ಪರೋಕ್ಷ-ಕಾಮಾ ಹಿ ದೇವಾಸ್ತ ಇದ್ಧಾಃ ಸಪ್ತ ನಾನಾ ಪುರುಷಾನಸೃಜಂತ ॥**
>
> (ಶ. ಬ್ರಾ. ೬.೧.೧.೨)

ಈ ಪ್ರಾಣಗಳಲ್ಲೆಲ್ಲ ಮುಖ್ಯವಾಗಿ ಮಧ್ಯಭಾಗದಲ್ಲಿರುವ ಪ್ರಾಣವೇ **ಇಂದ್ರ** ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇಂದ್ರನಾಮಕವಾದ ಈ ಮುಖ್ಯಪ್ರಾಣವು ತನ್ನ ಅಸಾಧಾರಣವಾದ ಶಕ್ತಿಯಿಂದ (ಇಂದ್ರಿಯದಿಂದ) ತನ್ನ ಮುಖ್ಯ ಸ್ಥಾನದಿಂದಲೇ ಪ್ರೇರಿಸುತ್ತ ಉಳಿದ ಪ್ರಾಣಗಳಿಗೂ ಚೈತನ್ಯವನ್ನುಂಟುಮಾಡಿತು. ಈ ರೀತಿ ಚೈತನ್ಯಗೊಳಿಸುದುದರಿಂದಲೇ ಅದು **ಇಂಧ** ಎಂಬ ವಿಶೇಷಣದಿಂದ ವರ್ಣಿತವಾಗುತ್ತದೆ. ಪರೋಕ್ಷಕಾಮರಾದ ದೇವತೆಗಳು ಈ ಮುಖ್ಯ ಪ್ರಾಣವನ್ನೇ **ಇಂದ್ರ** ಎಂದು ಕರೆಯುತ್ತಾರೆ. ಈ ಎಲ್ಲ ಪ್ರಾಣಗಳೂ ಚೈತನ್ಯವನ್ನು ಹೊಂದಿ ಏಳು ಪುರುಷರ ಆವಿರ್ಭಾವಕ್ಕೆ ಕಾರಣವಾದವು.

> **ತೇಽಬ್ರುವನ್ । ನ ವಾ ಇತ್ಥಗ್‌ಂ ಸಂತಃ ಶಕ್ಷ್ಯಾಮಃ ಪ್ರಜನಯಿತುಮಿಮಾನ್ತ್ಸಪ್ತ ಪುರುಷಾ-ನೇಕಂ ಪುರುಷಂ ಕರವಾಮೇತಿ ತ ಏತಾನ್ತ್ಸಪ್ತ ಪುರುಷಾನೇಕಂ ಪುರುಷಮಕುರ್ವನ್ಯ-ದೂರ್ಧ್ವಂ ನಾಭೇಸ್ತೌ ದ್ವೌ ಸಮೌಬ್ಜನ್ಯದವಾರ್ಙ್‌ನಾಭೇಸ್ತೌ ದ್ವೌ ಪಕ್ಷಃ ಪುರುಷಃ ಪಕ್ಷ-ಪುರುಷಃ ಪ್ರತಿಷ್ಠೈಕ ಆಸೀತ್ ॥**
>
> (ಶ. ಬ್ರಾ. ೬.೧.೧.೩)

ಈ ಏಳು ಪುರುಷರೂ ಪ್ರತ್ಯೇಕತೆಯನ್ನು ಹೊಂದಿದ್ದರೆ ನಮ್ಮ ಸೃಷ್ಟಿಕಾರ್ಯವಾಗುವುದಿಲ್ಲ. ಇವರಲ್ಲಿ ಐಕ್ಯತೆಯನ್ನುಂಟುಮಾಡಿ ಒಂದೇ ಪುರುಷತತ್ತ್ವವು ಸ್ಥಾಪಿತವಾಗುವಂತೆ ಮಾಡೋಣ ಎಂದು ಆ ಪ್ರಾಣಗಳು ಯೋಚಿಸಿ ಅವೆಲ್ಲವೂ ಸೇರಿ ಒಂದೇ ಪುರುಷತತ್ತ್ವವನ್ನು ಹೊಂದುವಂತೆ ಮಾಡಿದವು. ನಾಭಿಗೆ ಮೇಲ್ಭಾಗದಲ್ಲಿ ಎರಡು ಪುರುಷತತ್ತ್ವವನ್ನೂ, ಕೆಳಭಾಗದಲ್ಲಿ ಎರಡನ್ನೂ ಅಡಕವಾಗುವಂತೆ ಮಾಡಿದವು. ಎರಡು ಪಾರ್ಶ್ವಗಳಿಗೂ ಎರಡು ಪುರುಷರು ಯೋಜಿಸಲ್ಪಟ್ಟರು. ಇದೆಲ್ಲಕ್ಕೂ ಆಧಾರಭೂತವಾಗಿ ಏಳನೆಯ ಪುರುಷತತ್ತ್ವವು ಪ್ರತಿಷ್ಠಾಪಿತವಾಯಿತು.

> **ಅಥ ಯೈತೇಷಾಗ್‌ಂ ಸಪ್ತಾನಾಂ ಪುರುಷಾಣಾಂ ಶ್ರೀಃ । ಯೋ ರಸ ಆಸೀತ್ತಮೂರ್ಧ್ವಗ್‌ಂ ಸಮುದೌಹಂಸ್ತದಸ್ಯ ಶಿರೋಽಭವದ್ಯಚ್ಛ್ರಿಯಗ್‌ಂ ಸಮುದೌಹಂಸ್ತಸ್ಮಾಚ್ಛಿರ-ಸ್ತಸ್ಮಿನ್ನೇತಸ್ಮಿನ್ ಪ್ರಾಣಾ ಅಶ್ರಯಂತ ತಸ್ಮಾದ್ವೇವೈತಚ್ಛಿರೋಽಥ ಯತ್ಪ್ರಾಣಾ ಅಶ್ರಯಂತ ತಸ್ಮಾದು ಪ್ರಾಣಾಃ ಶ್ರಿಯೋಽಥ ಯತ್ಸರ್ವಸ್ಮಿನ್ನಶ್ರಯಂತ ತಸ್ಮಾದು ಶರೀರಂ ॥**
>
> (ಶ. ಬ್ರಾ. ೬.೧.೧.೪)

ಆಧಾರಭೂತವಾದ ಪಾದ, ಎರಡು ಪಾರ್ಶ್ವಗಳು ಇತ್ಯಾದ್ಯವಯವಗಳೆಲ್ಲವೂ ನಿರ್ಮಿತವಾದಾಗ ಅದೇ ಪುರುಷನ ಶಿರಸ್ಸನ್ನು ನಿರ್ಮಿಸಲು ಮೂಲಭೂತರಾದ ಏಳು ಪುರುಷರಲ್ಲಿ ಇದ್ದ ಸತ್ತ್ವದ ಸ್ವರೂಪವೇನು ? ಯಾವ ಶಕ್ತಿಯು ಪುರುಷನ ಶಿರಸ್ಸನ್ನು ಸ್ಥಾಪಿಸಿತು ಎಂದರೆ, ಆ ಏಳು ಶಕ್ತಿಗಳೂ ಸಹ ತಮ್ಮ ದಿವ್ಯಸಂಪತ್ತನ್ನು (ಶ್ರೀಃ) ಈ ಅದ್ವಿತೀಯವಾದ ಪುರುಷತತ್ತ್ವದಲ್ಲಿ ಅಡಕವಾಗುವಂತೆ ಮಾಡಿದವು. ಆದುದರಿಂದಲೇ ಅದಕ್ಕೆ **ಶಿರಸ್** ಎಂಬ ಹೆಸರು. ಅಲ್ಲದೇ, ಸಕಲ ಪ್ರಾಣಗಳೂ ಈ ಸತ್ತ್ವವನ್ನೇ ಆಶ್ರಯಿಸುವುದರಿಂದಲೂ ಸಹ ಇದು **ಶಿರಸ್** ಎಂದು ಪ್ರಸಿದ್ಧವಾಗಿದೆ. ಈ ಶ್ರೀಯನ್ನೇ ಆಶ್ರಯಿಸಿರುವುದರಿಂದ ಪ್ರಾಣಗಳೂ ಶರೀರದ ಉಳಿದ ಅಂಗಗಳೂ **ಶ್ರಿಯಃ** ಎಂದೇ ವ್ಯವಹೃತವಾಗಿವೆ. ಇವೆಲ್ಲವೂ ಸೇರಿ ಒಂದೇ ಕಡೆ ಆಶ್ರಯವನ್ನು (ಶ್ರೀ) ಪಡೆದುದರಿಂದ ಎಲ್ಲಕ್ಕೂ ಆಶ್ರಯಭೂತವಾದ ತತ್ತ್ವವು **ಶರೀರ** ಎಂದು ಕರೆಯಲ್ಪಟ್ಟಿತು.

**ಸ ಏವ ಪುರುಷಃ ಪ್ರಜಾಪತಿರಭವತ್ । ಸ ಯಃ ಸ ಪುರುಷಃ ಪ್ರಜಾಪತಿರಭವದಯಮೇವ ಸ ಯೋಽಯಮಗ್ನಿಶ್ಚೀಯತೇ ।**

(ಶ. ಬ್ರಾ ೬-೧-೧-೫)

ಪ್ರತ್ಯೇಕವಾಗಿದ್ದ ಯಾವ ಏಳು ಪುರುಷತತ್ತ್ವಗಳಿಂದ ಅದ್ವಿತೀಯನಾದ ಒಬ್ಬನೇ ಪುರುಷನು ಆವಿರ್ಭವಿಸಿದನೋ ಅವನೇ **ಪ್ರಜಾಪತಿ**ಯೆನ್ನಿಸಿಕೊಂಡನು. (ಎಂದರೆ ಸಕಲ ಪ್ರಜೆಗಳಿಗೂ ಪ್ರಭುವೆಂದರ್ಥ). ಪ್ರಜಾಪತಿರೂಪನಾದ ಆ ಪುರುಷನೇ ಯಜ್ಞಾಗ್ನಿಚಿತಿರೂಪದಲ್ಲೂ ಇದ್ದಾನೆ. ಅಗ್ನಿಚಿತಿಯಲ್ಲಿ ಯಾವ ಆರಾಧನೆಯನ್ನು ನೆರವೇರಿಸಿದರೂ ಅದೆಲ್ಲವೂ ಆ ಪರಮಪುರುಷನಿಗೆ ಅರ್ಪಿತವಾದುದಾಗಿಯೇ ಇರುತ್ತದೆ.

**ಸ ವೈ ಸಪ್ತಪುರುಷೋ ಭವತಿ । ಸಪ್ತಪುರುಷೋ ಹ್ಯಯಂ ಪುರುಷೋ ಯಚ್ಚತ್ವಾರ ಆತ್ಮಾ ತ್ರಯಃ ಪಕ್ಷಪುಚ್ಛಾನಿ ಚತ್ವಾರೋ ಹಿ ತಸ್ಯ ಪುರುಷಸ್ಯಾತ್ಮಾ ತ್ರಯಃ ಪಕ್ಷಪುಚ್ಛಾನ್ಯಥ ಯದೇಕೇನ ಪುರುಷೇಣಾತ್ಮಾನಂ ವರ್ಧಯತಿ ।ತೇನ ವೀರ್ಯೇಣಾಯಮಾತ್ಮಾ ಪಕ್ಷ ಪುಚ್ಛಾನ್ಯುದ್ಯಚ್ಛತಿ ॥**

(ಶ. ಬ್ರಾ. ೬-೧-೧.೬)

ಪುರುಷನೇ ಪ್ರಜಾಪತಿಯು ; ಪ್ರಜಾಪತಿಯೇ ಯಜ್ಞಾಗ್ನಿರೂಪನು. ಪುರುಷನು ಏಳು ತತ್ತ್ವಗಳನ್ನೊಳಗೊಂಡಿದ್ದಾನೆ. ಯಜ್ಞಾಗ್ನಿಯೂ ಏಳು ಅವಯವಗಳನ್ನು ಹೊಂದಿದೆ. ಶರೀರದ ಭಾಗಗಳು ನಾಲ್ಕು, ಎರಡು ಪಾರ್ಶ್ವಗಳು ಮತ್ತು ಒಂದು ಪುಚ್ಛ. ಇತ್ಯಾದಿಯಾದ ಸಮಾನಸ್ವರೂಪವು ಎರಡು ಅವಸ್ಥೆಗಳಲ್ಲಿಯೂ ಇರುತ್ತದೆ.

ಅದ್ವಿತೀಯನಾಗಿದ್ದ ಈ ಪುರುಷಪ್ರಜಾಪತಿಯು ನಾನಾಸ್ವರೂಪವುಳ್ಳ ಜಗತ್ತಿನ ರೂಪದಲ್ಲಿ ತನ್ನ ಮಹತ್ತ್ವವನ್ನು ಪ್ರಕಾಶಿಸಬೇಕೆಂದಿಚ್ಛಿಸಿದನು. ಆ ಸಂಕಲ್ಪದ ಫಲವೇ ಚಿದಚಿದಾತ್ಮಕವಾದ ಜಗತ್ತಿನ ರೂಪವನ್ನು ಹೊಂದಿದೆ. ಆ ಜಗತ್ಸೃಷ್ಟಿಯ ವೈವಿಧ್ಯವನ್ನು ಮುಂದಿನ ಋಕ್ಕುಗಳ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಹೀಗೆ ಪುರುಷಪ್ರಜಾಪತಿಯ ಪ್ರಾಣ ಮತ್ತು ಇಂದ್ರಿಯಗಳನ್ನು ಪ್ರತಿಬಿಂಬಿಸುವ ಸಾಧ್ಯ ಮತ್ತು ಋಷಿಸಂಜ್ಞಕರಾದ ಯಜ್ಞಕರ್ತರು ಪ್ರಜಾಪತಿಯನ್ನೇ ಆಹುತಿರೂಪವನ್ನಾಗಿ ಕಲ್ಪಿಸಿ ಸೃಷ್ಟಿಮೂಲವಾದ ಯಜ್ಞವನ್ನು

ನೆರವೇರಿಸಿ ಉತ್ತರಸೃಷ್ಟಿಗೆ ಕಾರಣರಾದರು ಎಂದು ತಿಳಿಸಲ್ಪಟ್ಟಿದೆ. ಇದೇ ಸಾಧ್ಯರ ಸೃಷ್ಟಿಕಾರ್ಯದ ಮಹತ್ತ್ವವನ್ನು ಪ್ರಶಂಸಿಸುವ ತೈತ್ತಿರೀಯಸಂಹಿತಾವಾಕ್ಯವು ಈ ರೀತಿಯಿರುತ್ತದೆ.

**ಸಾಧ್ಯಾ ವೈ ದೇವಾ ಅಸ್ಮಿನ್ ಲೋಕ ಆಸನ್ನಾನ್ಯತ್ಕಿಂಚನ ಮಿಷತ್ತೇಽಗ್ನಿಮೇವಾಗ್ನಯೇ ಮೇಧಾಯಾಲಭಂತ ನ ಹ್ಯನ್ಯದಾಲಂಭ್ಯಮವಿಂದನ್ತತೋ ವಾ ಇಮಾಃ ಪ್ರಜಾಃ ಪ್ರಾಜಾಯಂತ ಯದಗ್ನಾವಗ್ನಿಂ ಮಥಿತ್ವಾ ಪ್ರಹರತಿ ಪ್ರಜಾನಾಂ ಪ್ರಜನನಾಯ ॥**

(ತೈ. ಸಂ. ೭-೩-೫-೧)

ಸೃಷ್ಟಿಗೆ ಪೂರ್ವದಲ್ಲಿ ಸಾಧ್ಯರಲ್ಲದೇ ಬೇರೆ ಯಾವ ವಸ್ತುವೂ ಇರಲಿಲ್ಲ. ಅವರು ಅಗ್ನಿಯನ್ನುದ್ದೇಶಿಸಿ ಅಗ್ನಿಯನ್ನೇ ಅಗ್ನಿಯಲ್ಲಿ ಆಹುತಿರೂಪದಲ್ಲಿ ಅರ್ಪಿಸಿದರು. ಆಹುತಿಯನ್ನಾಗಿ ಅರ್ಪಿಸಲು ಬೇರೆ ಯಾವುದೂ ಇರಲಿಲ್ಲ. ಈ ಆಹುತಿಯ ಅರ್ಪಣೆಯ ಫಲವಾಗಿ ಸಕಲ ಪ್ರಜೆಗಳೂ ಉತ್ಪನ್ನವಾದವು. ಆದುದರಿಂದಲೇ ಪ್ರಜಾಕಾಮನು ಪ್ರಜೋತ್ಪತ್ತಿಯ ಸಲುವಾಗಿ ಅಗ್ನಿಯ ಸಹಾಯದಿಂದ ಅಗ್ನಿಮಥನವನ್ನು ಮಾಡಿ ಯಜ್ಞವನ್ನು ನಿರ್ವಹಿಸುತ್ತಾನೆ. ಎಂದು ಸೃಷ್ಟಿಕಾರ್ಯದಲ್ಲಿ ಸಾಧ್ಯರು ಭಾಗವಹಿಸಿ ಪ್ರಜಾಪತಿರೂಪನಾದ ಅಗ್ನಿಯನ್ನು ಪೂಜಿಸಿದ ಮತ್ತು ಪುರುಷ ಪ್ರಜಾಪತಿಯ ಸೃಷ್ಟಿಕಾಲದಲ್ಲಿ ನೆರವಾದ ವಿಷಯವನ್ನು ತಿಳಿಸಿದೆ.

ಇದಲ್ಲದೇ, ದೇವತೆಗಳಲ್ಲಿ ಸಾಧ್ಯರೇ ಅತ್ಯುತ್ತಮರಾದವರು ಮತ್ತು ನಿತ್ಯವಾದ ಬ್ರಹ್ಮಲೋಕದಲ್ಲಿದ್ದು ಬ್ರಹ್ಮಮಯವಾದ ಸ್ಥಿತಿಯನ್ನೇ ಹೊಂದಿ ಬ್ರಹ್ಮಾನುಭವವನ್ನು ಪಡೆಯುತ್ತಾ ಬ್ರಹ್ಮನ ಸಕಲ ಸ್ಥಿತಿಯಲ್ಲಿಯೂ ತಮ್ಮ ಸ್ವರೂಪವನ್ನು ಪ್ರಕಾಶಪಡಿಸುತ್ತಾರೆ ಎಂಬ ವಿಷಯವನ್ನು ಮೇಲೆ ತಿಳಿಸಿದೆ. ಈ ರೀತಿ ಬ್ರಹ್ಮಾನುಭವವನ್ನು ಪಡೆಯುವ ದೇವತೆಗಳಲ್ಲಿ ಕರ್ಮದೇವರು ಮತ್ತು ಆಜಾನದೇವರು ಎಂದು ಎರಡು ವಿಧ. ಉತ್ತಮವಾದ ಕರ್ಮವನ್ನು ಆಚರಿಸಿ ಅದರ ಫಲವಾಗಿ ದೇವತ್ವವನ್ನು ಪಡೆದ ಋಭ್ವಾದಿಗಳು ಕರ್ಮದೇವರು. ಉತ್ತಮವಾದ ಜನ್ಮದಿಂದಲೇ ದೇವತ್ವವನ್ನು ಪ್ರಕಾಶಪಡಿಸುವ ದೇವತೆಗಳು ಆಜಾನದೇವರು. ಸಾಧ್ಯರು ಈ ಎರಡು ಗುಂಪುಗಳಿಗಿಂತಲೂ ಉತ್ತಮರು. ಪ್ರಜಾಪತಿಯ ಸಾಕ್ಷಾತ್ಪ್ರಾಣಮಯರಾಗಿ ಅವನ ಯಜ್ಞವನ್ನು ಪೂರ್ಣಗೊಳಿಸಿ ಸೃಷ್ಟಿಕಾರ್ಯವನ್ನು ಮುಂದುವರೆಸುತ್ತಾರೆಂಬುದೇ ಈ ಋಕ್ಕಿನ ಮುಖ್ಯ ತಾತ್ಪರ್ಯ.

### ಮುಖ್ಯಾಭಿಪ್ರಾಯವು-

ಈ ಋಕ್ಕಿನಲ್ಲಿ ದೇವತೆಗಳು ಯಜ್ಞಪಶುವನ್ನು ಪ್ರೋಕ್ಷಣಾದಿಗಳಿಂದ ಸಂಸ್ಕರಿಸಿ ಯಜ್ಞವನ್ನು ನೆರವೇರಿಸಿದರು ಎಂಬ ವಿಷಯವು ಉಕ್ತವಾಗಿದೆ. ಪೂರ್ವಾರ್ಧದಲ್ಲಿರುವ—**ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ** ಎಂಬ ವಾಕ್ಯದಲ್ಲಿ **ಯಜ್ಞಂ** ಮೊದಲಾದ ಶಬ್ದಗಳ ಅರ್ಥವನ್ನು ವಿವರಿಸುವುದು ಅವಶ್ಯಕವಾಗಿದೆ.

**ಯಜ್ಞಂ—ಯಜ್ಞಸಾಧನಭೂತಂ** । ಯಜ್ಞಶಬ್ದಕ್ಕೆ ಇಲ್ಲಿ ಯಜ್ಞಮಾಡಲು ಸಾಧನಸಾಮಗ್ರಿಯಾದ ಪಶುವು ಎಂಬರ್ಥವನ್ನು ಹೇಳಲಾಗಿದೆ. ಆ ಪಶುವು ಯಾವುದು ಎಂದರೆ **ಪುರುಷಂ**—ಪುರುಷರೂಪದಿಂದಿರುವ ಮತ್ತು **ಜಾತಮಗ್ರತಃ** ಇತರ ವಸ್ತುಗಳ ಸೃಷ್ಟಿಗಿಂತಲೂ ಮೊದಲೇ ಆವಿರ್ಭೂತನಾಗಿದ್ದ ಪುರುಷರೂಪನಾದ ಪರಮಾತ್ಮನು ಎಂದು ತಿಳಿಯಬೇಕು. ಸೃಷ್ಟಿಕಾರ್ಯವು ಇನ್ನೂ ಪ್ರಾರಂಭದೆಶೆಯಲ್ಲಿದ್ದು ಎಲ್ಲಾ ವಸ್ತುಗಳ ಸೃಷ್ಟಿಯೂ ಮುಗಿದಿರಲಿಲ್ಲವಾದ್ದರಿಂದ ಯಜ್ಞಕ್ಕೆ ಬೇಕಾದ ಪಶುವೂ ದೊರೆಯುವಂತಿರಲಿಲ್ಲ. ಆದ್ದರಿಂದ ದೇವತೆಗಳು ಪರಮಪುರುಷನನ್ನೇ

ಪಶುವೆಂದು ಭಾವಿಸಿ ಮಾನಸಯಾಗಮಾಡಿದರು. ಹಿಂದಿನ ಋಕ್ಕಿನಲ್ಲಿ ದೇವತೆಗಳು ಮಾಡಿದ ಯಜ್ಞದಲ್ಲಿ ವಸಂತವೇ ಆಜ್ಯವಾಯಿತು; ಗ್ರೀಷ್ಮವೇ ಇಧ್ಮವಾಯಿತು, ಶರದೃತುವೇ ಹವಿಸ್ಸಾಯಿತು ಎಂದು ಹೇಳಿರುವರು. ಈ ಆಜ್ಯ, ಸಮಿತ್ತುಗಳು, ಹವಿಸ್ಸು ಎಂಬ ಹೋಮಸಾಧನದ್ರವ್ಯಗಳಿಂದಲೇ ಯಜ್ಞವನ್ನು ನೆರವೇರಿಸಬಹುದಲ್ಲವೇ ? ಪಶುವಿನ ಅವಶ್ಯಕತೆಯೇನು ? ಎಂದರೆ ಎಷ್ಟೇ ಹೋಮದ್ರವ್ಯಗಳಿರಲಿ ಪಶುವನ್ನು ಸಂಪಾದಿಸಿದ ಹೊರತು ಯಜ್ಞವನ್ನು ಮಾಡುವಂತಿಲ್ಲ. ಅಷ್ಟೇ ಅಲ್ಲ, ಪಶುವನ್ನು ಮೊದಲು ಸಿದ್ಧಪಡಿಸಿಕೊಂಡೇ ಅಗ್ನಿಮಥನಾದಿ ಯಜ್ಞಾಂಗಕರ್ಮಗಳನ್ನಾರಂಭಿಸಬೇಕು ಎಂದು ಯಜುರ್ವೇದದಲ್ಲಿ ಹೇಳಿದೆ—**ಯತ್ಪಶುಮಾಲಭ್ಯಾಗ್ನಿಂ ಮಂಥೇತ್**............ **ಯತ್ಪಶುಮಾಲಭ್ಯಾಗ್ನಿಂ ಮಂಥತಿ ಹವ್ಯಾಯೈವಾಸನ್ನಾಯ ಸರ್ವಾ ದೇವತಾ ಜನಯತಿ** (ತೈ. ಸಂ. ೬-೩-೫-೧) ಮತ್ತು **ಅಗ್ನಿಃ ಸರ್ವಾ ದೇವತಾ ಇತಿ ಯದ್ಧವಿರಾಸಾದ್ಯಾಗ್ನಿಂ ಮಂಥತಿ ಹವ್ಯಾಯೈವಾಸನ್ನಾಯ ಸರ್ವಾ ದೇವತಾ ಜನಯತಿ** (ತೈ. ಸ. ೬-೨-೧-೭) ಎಂದು ಹೇಳಿರುವುದರಿಂದ ಯಜ್ಞಕ್ರಿಯೆಗೆ ಪೂರ್ವಭಾವಿಯಾಗಿ ಅಗ್ನಿಮಥನಮಾಡುವುದಕ್ಕೆ ಮುಂಚೆಯೇ ಹವಿಸ್ಸನ್ನು ಎಂದರೆ ಪಶುವನ್ನು ಸಿದ್ಧಪಡಿಸಿಕೊಂಡಿರಬೇಕು. ಎಂದರೆ ಯಜ್ಞಮಾಡುವ ಯಜಮಾನರು ಯಜ್ಞಮಾಡುವುದಕ್ಕೆ ಪೂರ್ವಭಾವಿಯಾಗಿಯೇ ಪಶುವನ್ನು ಸಿದ್ಧಪಡಿಸಿಕೊಳ್ಳಬೇಕು. ಯಜ್ಞವನ್ನು ಪ್ರಾರಂಭಿಸಿದ ಮೇಲೆ ಎಲ್ಲಿಂದಲಾದರೂ ಪಶುವನ್ನು ತರಬಹುದೆಂದು ಹೇಳಕೂಡದು. ಪಶುವನ್ನು ಮೊದಲು ಸಿದ್ಧಪಡಿಸಿಕೊಂಡೇ ಅಗ್ನಿಮಥನವನ್ನು ಮಾಡಿ ಇತರ ದೇವತೆಗಳ ಸನ್ನಿಧಿಗಾಗಿ ಅವರನ್ನು ಆಹ್ವಾನಿಸಬೇಕು. ಆದ್ದರಿಂದ ಇಲ್ಲಿ ದೇವತೆಗಳು ನೆರವೇರಿಸಿದ ಮಾನಸಯಜ್ಞದಲ್ಲಿ ಮೊದಲ ಕರ್ತವ್ಯವಾದ ಪಶುವನ್ನು ಸಿದ್ಧಪಡಿಸಿಕೊಂಡರೆಂಬ ವಿಷಯವು ಈ ಋಕ್ಕಿನ **ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್** ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಪಶುಸಂಪಾದನಾನಂತರದಲ್ಲಿ ಅಗ್ನಿಮಥನಪೂರ್ವಕವಾಗಿ ನಡೆಯುವ ಯಜ್ಞದಲ್ಲಿ ಪಶುಸಂಸ್ಕಾರವೂ ಮುಖ್ಯವಾದುದು. ಇದಕ್ಕಾಗಿ ಯಜ್ಞವೇದಿಯಲ್ಲಿ ಪಶುವನ್ನು ಕಟ್ಟುವ ಯೂಪಸ್ತಂಭವನ್ನು ನೆಡಲಾಗುವುದು. ಇದನ್ನು ಆಜ್ಯಾದಿಗಳಿಂದ ಲೇಪಿಸಿ ಸಂಸ್ಕರಿಸುವರು. (ಈ ಯೂಪಸ್ತಂಭದ ಸ್ಥಾಪನಾದಿ ವಿಷಯವನ್ನು ನಾವು ಋ. ಸಂ. ಭಾಗ 16 ಪುಟ 51–72ಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ). ಅನಂತರ ಪಶುವನ್ನು ವಿಧ್ಯುಕ್ತಮಂತ್ರಪೂರ್ವಕವಾಗಿ ನೀರಿನಿಂದ ಪ್ರೋಕ್ಷಿಸುವರು. ಅದನ್ನೇ ಇಲ್ಲಿ **ಪ್ರೌಕ್ಷನ್** ಎಂಬ ಶಬ್ದದಿಂದ ನಿರ್ದೇಶಿಸಲಾಗಿದೆ. ಯಜ್ಞದಲ್ಲಿ ನೆರವೇರಿಸಬೇಕಾದ ಕರ್ಮಾಂಗಗಳು ಅನೇಕವಿದ್ದರೂ ಅವುಗಳನ್ನೆಲ್ಲಾ ಇಲ್ಲಿ ಎಂದರೆ ಈ ಸೂಕ್ತದಲ್ಲಿ ವಿಸ್ತಾರವಾಗಿ ವಿವರಿಸಲಾಗಿಲ್ಲ, ವಿವರಿಸುವುದು ಸಾಧ್ಯವೂ ಇಲ್ಲ. ಆದ್ದರಿಂದ ಮುಖ್ಯಕರ್ಮಗಳನ್ನು (ಅದರಲ್ಲಿಯೂ ಅತಿಮುಖ್ಯವಾದವನ್ನು) ಮಾತ್ರ ಇಲ್ಲಿ ಸೂಕ್ಷ್ಮವಾಗಿ ಸೂಚಿಸಲಾಗಿದೆ.

ಈ ವಾಕ್ಯದಲ್ಲಿರುವ **ಬರ್ಹಿಷಿ** ಎಂಬ ಶಬ್ದದ ಉಪಯೋಗವೇನು ಎಂದರೆ—ಯಜ್ಞದಲ್ಲಿ ಆಹ್ವಾನಿಸಲ್ಪಟ್ಟ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಅವರ ಆಸನಗಳಿಗೆಂದು ಯಜ್ಞವೇದಿಕೆಯಲ್ಲಿ ಒಂದೇ ಸಮನಾದ ಅಳತೆಗೆ ಕತ್ತರಿಸಿದ ದರ್ಭೆಗಳನ್ನು ಒಂದು ಪದರವಾದ ಮೇಲೆ ಮತ್ತೊಂದು ಪದರದಂತೆ ಮೂರು ಪದರಗಳನ್ನಾಗಿ ಮೆತ್ತಗಿರುವಂತೆ ಹರಡುವರು. ಇದರ ಮೇಲೆ ದೇವತೆಗಳು ಬಂದು ಕೂಡುವಂತೆ ಆಹ್ವಾನಿಸುವರು. ಮತ್ತು ಹೋಮಮಾಡುವ ಘೃತ, ಹವಿಸ್ಸು ಮೊದಲಾದ ದ್ರವ್ಯಗಳನ್ನು ನೆಲದ ಮೇಲೆ ಇಡದೆ ಮೇಲೆ ಹೇಳಿದಂತೆ ಹಾಸಿದ ದರ್ಭೆಗಳ ಮೇಲೆಯೇ ಇಡುವರು. ಈ ವಿಧವಾದ ದರ್ಭೆಗೆ **ಬರ್ಹಿಃ** ಎಂದು ಹೆಸರು. ಯಾಸ್ಕರು ಈ ವಿಷಯದಲ್ಲಿ **ಪ್ರಾಚೀನಾಂ ಬರ್ಹಿಃ** (ಋ. ಸಂ. ೧೦-೧೧೦.೪) ಎಂಬ ಋಕ್ಕನ್ನುದಾಹರಿಸಿ ಅದರ ನಿರ್ವಚನವನ್ನು ಈ ರೀತಿ ಹೇಳಿರುವರು—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ। ಚ ಸ್ಯೋನಂ ಸ್ಯೋನಮಿತಿ ಸುಖನಾಮ । ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ॥**

(ನಿ. ೮-೯)

ಎಂದರೆ ಯಜ್ಞಕಾಲದಲ್ಲಿ ಆಹ್ವಾನಿತರಾದ ದೇವತೆಗಳು ಬಂದು ಕುಳಿತುಕೊಳ್ಳಲು ಯಜ್ಞವೇದಿಯಲ್ಲಿ ಆಸನವನ್ನು ಸಿದ್ಧಿಪಡಿಸುವುದಕ್ಕಾಗಿ ದರ್ಭೆಗಳನ್ನು ಒಂದೇ ಸಮನಾಗಿ ಕತ್ತರಿಸಿ ಒಂದರ ಮೇಲೊಂದು ಪದರದಂತೆ (ಮೆತ್ತಗಿರುವುದಕ್ಕಾಗಿ) ಮೂರ ಪದರಗಳನ್ನು ಹಾಸಿ ಸಿದ್ಧಪಡಿಸುವರು. ಈ ವಿಷಯದಲ್ಲಿ **ತ್ರಿವೃದ್ಬರ್ಹಿರ್ಭವತಿ । ಮಾತಾ ಪಿತಾ ಪುತ್ರಃ** ಇತ್ಯಾದಿ ಶ್ರುತಿವಾಕ್ಯವೂ ಇರುವುದು. ಈರೀತಿ ಆಸನಕ್ಕಾಗಿ ಅಥವಾ ಹವಿರ್ದ್ರವ್ಯವನ್ನು ಇಡುವುದಕ್ಕಾಗಿ ಹರಡುವ ದರ್ಭೆಯ ಚೂರುಗಳಿಗೆ ಬರ್ಹಿಸ್ಸೆಂದು ಹೆಸರು ಎಂದು ಬರ್ಹಿಶ್ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು. ಪ್ರಕೃತ ಋಕ್ಕಿನಲ್ಲಿ ಬರ್ಹಿಷಿ ಎಂಬ ಶಬ್ದವು (ಸಪ್ತಮ್ಯೇಕವಚನ)। ಹವಿಸ್ಸಾದ ಯಜ್ಞಪಶುವನ್ನು ಸ್ಥಾಪಿಸುವುದಕ್ಕಾಗಿ ನಿರ್ದಿಷ್ಟವಾದ ಪ್ರದೇಶವನ್ನು ಸೂಚಿಸುವುದಾಗಿದೆ.

**ಪುರುಷಂ ಜಾತಮಗ್ರತಃ**—ಸೃಷ್ಟಿಕಾರ್ಯವು ಪೂರ್ಣವಾಗಿರಲಿಲ್ಲವಾದ್ದರಿಂದ ಆಗ ಈಗಿರುವಂತೆ ಯಾಜ್ಞಾರ್ಹ ಪಶುಗಳಿರಲಿಲ್ಲ. ಆದ್ದರಿಂದ ಎಲ್ಲರಿಗಿಂತಲೂ ಮೊದಲೇ ಪುರುಷರೂಪದಿಂದ ಉತ್ಪನ್ನನಾಗಿದ್ದ (ಆವಿರ್ಭೂತನಾಗಿದ್ದ) ಪರಮಪುರುಷನನ್ನೇ ಯಜ್ಞಪಶುವೆಂದು ಮನಸ್ಸಿನಲ್ಲಿ ಭಾವಿಸಿ ದೇವತೆಗಳು ಯಜ್ಞಕರ್ಮವನ್ನು ನೇರವೇರಿಸಿದರು ಎಂದಭಿಪ್ರಾಯವು.

**ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ**—ಎಂಬ ಉತ್ತರಾರ್ಧದಲ್ಲಿರುವ ವಾಕ್ಯದಲ್ಲಿ ದೇವತೆಗಳೂ, ಸಾಧ್ಯರೂ, ಋಷಿಗಳೂ ಎಲ್ಲರೂ, ಸೇರಿ ಯಜ್ಞಸಾಧನಭೂತನಾದ ಪುರುಷನೆಂಬ ಪಶುವಿನಿಂದ ಯಜ್ಞವನ್ನಾಚರಿಸಿದರು ಎಂಬ ಅಭಿಪ್ರಾಯವು ಉಕ್ತವಾಗಿದೆ. ಈ ವಾಕ್ಯದಲ್ಲಿರುವ ದೇವಾಃ ಸಾಧ್ಯಾಃ ಋಷಯಃ ಎಂಬ ಶಬ್ದಗಳಿಗೆ ಅರ್ಥವೇನು, ಅವರ ಸ್ವರೂಪವೇನು, ಅವರಿಗೆ ಈ ಹೆಸರು ಬರಲು ಕಾರಣವೇನು ಎಂಬುದನ್ನು ವಿವರಿಸುವುದು ಅವಶ್ಯಕವಾಗಿದೆ—

**ದೇವಾಃ**—ದೇವತೆಗಳಿಗೆ ಈ ಹೆಸರು ಬರಲು ಕಾರಣವೇನು ಎಂದರೆ ಈ ವಿಷಯದಲ್ಲಿ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದಾರೆ—

**ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ ಯೋ ದೇವಃ ಸಾ ದೇವತಾ ॥**

(ನಿ. ೭-೧೫)

ಎಂದರೆ ತನ್ನನ್ನು ಆರಾಧಿಸುವ ಭಕ್ತಜನರಿಗೆ ಐಶ್ವರ್ಯಾದಿಗಳನ್ನು ಕೊಡುವುದರಿಂದ (ದಾನಾದ್ವಾ) ದೇವನೆಂಬ ಹೆಸರು. ಅಥವಾ ತೇಜೋಮಯವಾದ ಶರೀರಕಾಂತಿಯಿಂದ ಬೆಳಗುವವನಾದ್ದರಿಂದ (ದೀಪನಾದ್ವಾ ದ್ಯೋತನಾದ್ವಾ

ಎರಡೂ ಒಂದೇ ಅರ್ಥ) ದೇವನೆಂಬ ಹೆಸರು. ಅಥವಾ ದ್ಯುಲೋಕವಾದ ಸ್ವರ್ಗದಲ್ಲಿ ವಾಸಿಸುವುದರಿಂದ ದೇವನೆಂಬ ಹೆಸರು. ದೇವನಿಗೆ ದೇವತೆಯೆಂಬ ಹೆಸರೂ ಉಂಟು ಎಂದು ಈ ಶಬ್ದದ ಅರ್ಥವಿವರಣೆಮಾಡಿದಾರೆ. ಸೃಷ್ಟಿಕ್ರಮದಲ್ಲಿ ಮನುಷ್ಯರಿಗಿಂತಲೂ ದೇವತೆಗಳೇ ಮೊದಲು ಸೃಷ್ಟಿಸಲ್ಪಟ್ಟರೆಂದು ಅನೇಕಕಡೆ ಹೇಳಿದೆ. ಅದಿತಿಪುತ್ರರಿಗೂ (ಆದಿತ್ಯರು) ದೇವತೆಗಳೆಂಬ ಹೆಸರಿದೆ. ಅದಿತಿಗೆ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬ ಎಂಟು ಮಂದಿ ಪುತ್ರರೆಂದು ಹೇಳಿದ್ದರೂ ಇತರ ದೇವತೆಗಳೂ ಅದಿತಿಪುತ್ರರೆಂದು ಕರೆಯುವ ರೂಢಿ ಇದೆ.

**ಸಾಧ್ಯಾಃ**—ಈ ಸಾಧ್ಯರು ಯಾರು? ಇವರು ದೇವತೆಗಳಗುಂಪಿಗೆ ಸೇರಿದವರೇ ಎಂದರೆ ದೇವತೆಗಳಿಗಿಂತಲೂ ಪೂರ್ವದಲ್ಲಿ ಉತ್ಪನ್ನರಾದವರೂ ಅವರಿಗಿಂತ ಶ್ರೇಷ್ಠರಾದವರೂ ಎಂದು ಹೇಳುವುದಕ್ಕೆ ಅನೇಕ ಆಧಾರಗಳಿವೆ. ಸಾಧ್ಯರ ವಿಷಯವಾಗಿ ತೈತ್ತಿರೀಯಸಂಹಿತೆಯಲ್ಲಿ—

> **ಸಾಧ್ಯಾ ವೈ ದೇವಾ ಅಸ್ಮಿನ್ ಲೋಕ ಆಸನ್ನಾನ್ಯತ್ಕಿಂಚನ ಮಿಷತ್ತೇಽಗ್ನಿಮೇವಾಗ್ನಯೇ ಮೇಧಾಯಾಲಭಂತ ನ ಹ್ಯನ್ಯದಾಲಂಭ್ಯಮವಿಂದನ್ತತೋ ವಾ ಇಮಾಃ ಪ್ರಜಾಃ ಪ್ರಾಜಾಯಂತ ||**

(ತೈ. ಸಂ. ೬-೩-೫-೧)

ಪೂರ್ವದಲ್ಲಿ ಸಾಧ್ಯರೆಂಬುವರು ಈ ಲೋಕದಲ್ಲಿದ್ದರು. ಆಗ ಅವರು ಮಾತ್ರವೇ ಇದ್ದರು. ಇತರ ಯಾವ ಪ್ರಾಣಿ ವರ್ಗವೂ ಇರಲಿಲ್ಲ ಎಂದರೆ ಸೃಷ್ಟಿಯಾಗಿರಲಿಲ್ಲ. ಆಗ ಅವರು ಯಜ್ಞಮಾಡಬೇಕೆಂದು ಇಚ್ಛಿಸಿದರು. ಆದರೆ ಆಗ ಅಗ್ನಿ ಇರಲಿಲ್ಲ. ಇಲ್ಲಿ **ಅಗ್ನಿಃ ಸರ್ವಾ ದೇವತಾಃ** ಎಂದು ಹೇಳಿರುವುದರಿಂದ ಅಗ್ನಿಯೆಂದರೆ ಪರಮಪುರುಷನೆಂದೇ ತಿಳಿಯಬೇಕು. ಆಗ ಪರಮಪುರುಷನನ್ನು ಬಿಟ್ಟು ಬೇರೆ ಯಾವ ವಸ್ತುವೂ ಎಂದರೆ ಯಜ್ಞಪಶುವಿಗೆ ಅರ್ಹವಾಗಿದ್ದ ಯಾವ ಪಶುವೂ ಇರಲಿಲ್ಲವಾದ್ದರಿಂದ ಆ ಪುರುಷನನ್ನೇ ಪಶುವನ್ನಾಗಿ ಭಾವಿಸಿ ಅವನನ್ನೇ ಅಗ್ನಿಯನ್ನಾಗಿಯೂ ಭಾವಿಸಿ ಯಜ್ಞಮಾಡಿ ಪ್ರಜಾಸೃಷ್ಟಿಯನ್ನು ಮಾಡಿದರು ಎಂಬರ್ಥವು ಸೂಚಿತವಾಗಿದೆ.

ಆದರೆ ಇದೇ ಋಕ್ಕು ಮೊದಲನೆಯ ಮಂಡಲದ ೧೬೪ ನೆಯ ಸೂಕ್ತದಲ್ಲಿ ೫೦ ನೇ ಋಕ್ಕಾಗಿ ಪಠಿತವಾಗಿರುವುದು. ಅದರ ಭಾಷ್ಯದಲ್ಲಿ ಸಾಯಣರು ಸಾಧ್ಯರ ವಿಷಯದಲ್ಲಿ ಈ ರೀತಿ ಹೇಳಿದಾರೆ—

> **ಸಾಧ್ಯಾಃ ಸಾಧನಾ ಯಜ್ಞಾದಿಸಾಧನವಂತಃ ಕರ್ಮದೇವಾ ಇತ್ಯರ್ಥಃ |...................ಸಾಧ್ಯಾ ದೇವಾಃ ಸಾಧನಾಶ್ಛಂದೋಽಭಿಮಾನಿನಃ | ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ | ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ನಾದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ || ಐ. ಬ್ರಾ. ೧-೧೬ | ಇತಿ ಬ್ರಾಹ್ಮಣಂ | ಏತೇ ದೇವಾಃ ಸ್ವರ್ಗೇ ಸಂತಿ ||**

(ಸಾ. ಭಾ. ೧-೧೬೪-೫೦)

ಎಂದರೆ ಯಜ್ಞಾದಿಸಾಧನಗಳಿಂದ ಉತ್ತಮಪದವಿಯನ್ನು ಪಡೆದ ಕರ್ಮದೇವತೆಗಳು ಎಂದರ್ಥವು. ಇವಲ್ಲದೆ ಸಾಧ್ಯರೆಂದರೆ ಛಂದೋಭಿಮಾನಿಗಳಾದ ದೇವತೆಗಳು. ಇವರು ಯಾರು ಎಂದರೆ ಆದಿತ್ಯರು, ಅಂಗಿರಸರು, ಇವರೆಲ್ಲರೂ

ಸಾಧ್ಯರೆಂದು ಹೇಳಲ್ಪಡುವರು. ಈ ವಿಷಯದಲ್ಲಿ ಐತರೇಯಬ್ರಾಹ್ಮಣಶ್ರುತಿಯು—ಛಂದೋಭಿಮಾನಿದೇವತೆಗಳಾದ ಈ ಸಾಧ್ಯರೆಂಬುವರು ಎಲ್ಲರಿಗಿಂತಲೂ ಮೊದಲು ಎಂದರೆ ಸೃಷ್ಟಿಗೆ ಪ್ರಾರಂಭದಲ್ಲಿ ಅಗ್ನಿಯಿಂದ ಅಗ್ನಿಯನ್ನೂ (ಇಲ್ಲಿ ಅಗ್ನಿಯೆಂದರೆ ಪರಮಪುರುಷ) ಯಜ್ಞಮಾಡಿ ಆರಾಧಿಸಿ ಸ್ವರ್ಗಲೋಕವನ್ನೈದಿದರು. ಇಲ್ಲಿ ಆದಿತ್ಯರನ್ನೂ, ಅಂಗಿರಸರನ್ನೂ ಸಾಧ್ಯರೆಂದು ನಿರ್ದೇಶಿಸಿರುವುದರಿಂದ ಅವರು ಯಜ್ಞಮಾಡಿ ಸ್ವರ್ಗಲೋಕಪನ್ನು ಪಡೆದರು ಎಂದು ಬ್ರಾಹ್ಮಣವಾಕ್ಯದ ಅರ್ಥವು. ಆ ಸಾಧ್ಯರು ಈಗಲೂ ಆ ಸ್ವರ್ಗದಲ್ಲಿಯೇ ಇದಾರೆ ಎಂದು ಈ ಋಕ್ಕಿನಲ್ಲಿ ಹೇಳಿದೆ.

**ಸಾಧ್ಯಾಃ**—ಈ ಪದವನ್ನು ರಶ್ಮಿನಾಮಗಳಲ್ಲಿ ಪಠಿಸಿದೆ. (ನಿ. ೨-೧೫) ಮತ್ತು ಇದೇ ಋಕ್ಕನ್ನು ವಿವರಿಸುವಾಗ ಮುಂದೆ **ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವಂ ದೇವಯುಗಮಿತ್ಯಾಖ್ಯಾನಂ ।** ನಿರುಕ್ತಕಾರರ ಮತದಂತೆ ದ್ಯುಲೋಕದ ದೇವತೆಗಳೆಂದರ್ಥ. ಅಥವಾ ದೇವತೆಗಳಲ್ಲಿ ಪ್ರಥಮರು ಎಂಬುದು ಸಾಂಪ್ರದಾಯಿಕವಾದ ಮತವೆಂದು ಯಾಸ್ಕರು ತಿಳಿಸಿದ್ದಾರೆ. (ನಿ. ೧೨-೪೧) **ಸಾಧ್ಯರ** ಸ್ವರೂಪವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ತಿಳಿಸಿದೆ. ಉದಾಹರಣೆಗೆ, ಐತರೇಯಬ್ರಾಹ್ಮಣದಲ್ಲಿ ಇದೇ ಭಾಗವನ್ನು ವಿವರಿಸುತ್ತಾ ;

> **ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್।**
> **ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥**

(ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯರು ಅವರು ಪೂರ್ವದಲ್ಲಿ ಅಗ್ನಿಯಿಂದ (ಅಗ್ನಿಮಥನದಿಂದ) ಅಗ್ನಿಯನ್ನು ಪೂಜಿಸಿದರು. ಅದರ ಫಲವಾಗಿ ಸ್ವರ್ಗಲೋಕವನ್ನು ಪಡೆದರು. ಹಾಗೆಯೇ ಆದಿತ್ಯರೂ, ಅಂಗಿರಸ್ಸುಗಳೂ ಸಹ ಅಗ್ನಿಯಿಂದ ಅಗ್ನಿಪೂಜೆಯನ್ನು ನೆರವೇರಿಸಿ ಸ್ವರ್ಗಲೋಕವನ್ನು ಪಡೆದರು, ಎಂದಿದೆ. ಇದನ್ನೇ **ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ ।** ಆದಿತ್ಯರೂ, ಅಂಗಿರಸ್ಸುಗಳೂ, ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿದ್ದಾರೆಂದು ಸಾಯಣರು ತಿಳಿಸಿದ್ದಾರೆ. ಅಂಗಿರಸ್ಸುಗಳೂ ಅಗ್ನಿಯನ್ನು ಹುಡುಕಿ ತಂದುದೂ, ಅಗ್ನಿಪೂಜೆಯನ್ನು ಮಾಡಿದುದೂ ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಋಕ್ಸಂಹಿತೆಯಲ್ಲಿಯೂ ಇತರ ಕಡೆಗಳಲ್ಲಿಯೂ ಈ ಪದಕ್ಕೆ ಅಂಕಿತನಾಮವಾಗಿಯೂ, ಒಂದು ಋಷಿಸಂತತಿಯ ನಾಮಧೇಯವಾಗಿಯೂ ಮತ್ತು ದೇವತೆಗಳ ಗುಂಪಿಗೆ ಸೇರಿದ ಹೆಸರಾಗಿಯೂ ಮೂರು ವಿಧವಾದ ಅನ್ವಯವಿದೆ. ಈ ಮೂರು ಸನ್ನಿವೇಶಗಳಲ್ಲಿಯೂ ಸಹ ಅಂಗಿರಸ್ಸುಗಳಿಗೂ ಯಜ್ಞರೂಪಿಯಾದ ಅಗ್ನಿಗೂ ಸಾಕ್ಷಾತ್ಸಂಬಂಧವನ್ನು ಹೇಳಿದೆ. ಮೊದಲನೆಯದಾಗಿ,

> **ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥**

(ಮುಂಡಕೋಪನಿಷತ್ ೧.೧-೩)

ಎಂಬಲ್ಲಿ ಅಂಗಿರಸ್ಸು ತತ್ತ್ವಜ್ಞಾನಿಯಾದ ಒಬ್ಬ ಋಷಿಯೆಂದೂ ಅವನು ಶೌನಕನಿಗೆ **ಯಜ್ಞಾಗ್ನಿ** ವಿದ್ಯೆಯನ್ನು ಉಪದೇಶಿಸಿದನೆಂದೂ ತಿಳಿಸಿದೆ. ಎರಡನೆಯದಾಗಿ,

ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನು ಯಜ್ಞಾಗ್ನಿಯು. ಆ ಯಜ್ಞಾಗ್ನಿಯಿಂದಲೇ ಅಂಗಿರಸ್ಸೆಂಬ ಋಷಿಯು ಉತ್ಪನ್ನನಾಗಿ ಆ ಸಂತತಿಯು ಪ್ರವರ್ಧಮಾನವಾಗಿ ಬೆಳೆಯಿತು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ ತಿಳಿಸಿದೆ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**

(ಋ. ಸಂ. ೧-೩೧-೧)

ಇತ್ಯಾದಿ ಋಕ್ಕುಗಳಲ್ಲಿ ಈ ವಿಷಯವನ್ನು ಸೂಚಿಸಿರುವಂತೆ ಐತರೇಯಬ್ರಾಹ್ಮಣದಲ್ಲೂ ಸಹ, **ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್** (ಐ. ಬ್ರಾ. ೩-೩೪) ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ. ಹೀಗೆಯೇ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಯಜ್ಞಾಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯನ್ನು,

**ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।**
**ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥**

(ಋ. ಸಂ. ೫-೧೧-೬)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲೂ ಮತ್ತು

**ಸಮಿದ್ಭಿರ್ಹ್ಯೇತಮಂಗಿರಸ ಐಂಧತ ।**

(ಶ. ಬ್ರಾ. ೧-೪-೧-೨೫)

ಇತ್ಯಾದಿ ಬ್ರಾಹ್ಮಣ ವಾಕ್ಯಗಳಲ್ಲೂ ವಿವರಿಸಿದೆ. ಯಜ್ಞಾಗ್ನಿಯನ್ನು ಪಡೆದು, ಆ ಯಜ್ಞಾಗ್ನಿಯನ್ನು ಅಗ್ನಿಯಿಂದಲೇ ಪೂಜಿಸಿದ ಅಂಗಿರಸ್ಸುಗಳನ್ನು ಕೃತಜ್ಞತೆಯಿಂದಲೂ, ಭಕ್ತಿಯಿಂದಲೂ,

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**
**ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥**

(ಋ. ಸಂ. ೧೦-೧೪-೬)

ಎಂದು ಪ್ರಶಂಸಿಸಿದೆ. ಆ ಅಂಗಿರಸ್ಸುಗಳನ್ನೇ ಸಾಧ್ಯರೆಂದು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿದೆಯೆಂದು ಒಂದು ಮತ. ಅದನ್ನು ಐತರೇಯಬ್ರಾಹ್ಮಣದ ವಿವರಣೆಯಿಂದಲೂ, ಸಾಯಣಭಾಷ್ಯದ ವಿವರಣೆಯಿಂದಲೂ ತಿಳಿಯಬಹುದು. ಇದಲ್ಲದೆ **ಸಾಧ್ಯ**ರೆಂಬುವರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದರೆಂದೂ ಅವರನ್ನು ಬಹಳವಾಗಿ ಪ್ರಶಂಸಿಸಿದೆ.

**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥**

(ಛಾ. ಉ. ೩-೧೦-೧)

ಬ್ರಹ್ಮಮುಖದ ಸಹಾಯದಿಂದ **ಸಾಧ್ಯರು** ಐದನೆಯ ಅಮೃತವನ್ನು ಸೇವಿಸುತ್ತಾರೆ. [ಐದನೆಯ ಅಮೃತವೆಂದರೆ ಉಪನಿಷತ್ತೆಂದರ್ಥ. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಆನಂದವನ್ನನುಭವಿಸುತ್ತಾರೆಂದು ತಾತ್ಪರ್ಯ.] ಸೇವಿಸುವು ಸೆಂದರೆ ಭುಜಿಸುವುದೆಂದಾಗಲಿ, ಪಾನಮಾಡುವುದೆಂದಾಗಲಿ ಅರ್ಥವಲ್ಲ. ದೇವತೆಗಳಾದ ಸಾಧ್ಯರು ಭುಜಿಸುವುದೂ

ಇಲ್ಲ, ಪಾನಮಾಡುವುದೂ ಇಲ್ಲ: ಉಪನಿಷದ್ರೂಪವಾದ ಅಮೃತವನ್ನು ಕೇವಲ ವೀಕ್ಷಿಸುತ್ತಾ ಆನಂದವನ್ನನು ಭವಿಸುವರೆಂದು ತಾತ್ಪರ್ಯ.

**ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥**

(ಛಾ. ಉ. ೩-೧೦-೨, ೩)

ಈ ಸಾಧ್ಯರು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ. ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಪಡೆಯುತ್ತಾರೆ. ಈ ತತ್ತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬನಾಗುತ್ತಾನೆ, ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತಾ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾದ ರೂಪವನ್ನೇ ಪಡೆಯುತ್ತಾನೆ.

**ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥**

(ಛಾ. ಉ. ೩-೧೦-೪)

ಸಾಧ್ಯರೂಪವನ್ನು ಹೊಂದಿದ ಈ ಯಜ್ಞಕರ್ತನೂ, ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವಾರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರ ಮಾರ್ಗವಾದುದೂ, ಊರ್ಧ್ವಾರ್ವಾಗ್ರೂಪವಾದುದೂ ಆದ ಸಂಚಾರವು ಇರುವವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕನ್ನೇ ಶತಪಥಬ್ರಾಹ್ಮಣದಲ್ಲಿ ಉದಹರಿಸಿ ಈ ರೀತಿ ವಿವರಿಸಿದೆ.

**ಯಾನ್ವೈ ತಾನ್ಸಪ್ತಪುರುಷಾನ್ । ಏಕಂ ಪುರುಷಮಕುರ್ವನ್ತ್ಸ ಪ್ರಜಾಪತಿರಭವತ್ಸ ಪ್ರಜಾ ಅಸೃಜತ ಸ ಪ್ರಜಾಃ ಸೃಷ್ಟ್ವೋರ್ಧ್ವ ಉದಕ್ರಾಮತ್ಸ ಏತಂ ಲೋಕಮಗಚ್ಛದ್ಯತ್ರೈಷ ಏತತ್ತಪತಿ ನೋ ಹ ತರ್ಹ್ಯನ್ಯ ಏತಸ್ಮಾದತ್ರ ಯಜ್ಞಿಯ ಆಸ ತಂ ದೇವಾ ಯಜ್ಞೇನೈವ ಯಷ್ಟುಮಧ್ರಿಯಂತ ।**

(ಶ. ಬ್ರಾ. ೧೦-೨-೨-೧)

**ಸಪ್ತ ಪುರುಷಾನೇಕಂ ಪುರುಷಮಕುರ್ವನ್** ಸಪ್ತ ಪುರುಷರನ್ನೂ ಒಂದೇ ಪುರುಷನನ್ನಾಗಿ ಪರಿವರ್ತಿಸಿದರು ಎಂದು ಹಿಂದೆ ತಿಳಿಸಿದೆ. (ಶ. ಬ್ರಾ. ೬-೧-೧-೩) ಅದ್ವಿತೀಯನಾದ ಈ ಪುರುಷನೇ ಪ್ರಜಾಪತಿಯು. ಈ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋದನು. ಆಗ ಯಜ್ಞಕ್ಕೆ ಬೇರೆ ಪಶುಗಳಿಲ್ಲದಿದ್ದರಿಂದ ದೇವತೆಗಳು ಈ ಪ್ರಜಾಪತಿಯನ್ನೇ ಯಜ್ಞಪಶುವನ್ನಾಗಿ ಮಾಡಿದರು. ಆದುದರಿಂದಲೇ—

**ತಸ್ಮಾದೇತದೃಷಿಣಾಭ್ಯನೂಕ್ತಂ । ಯಜ್ಞೇನ ಯಜ್ಞಮಯಜಂತ ದೇವಾ ಇತಿ ಯಜ್ಞೇನ ಹಿ ತಂ ಯಜ್ಞಮಯಜಂತ ದೇವಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ನಿತಿ ತೇ ಹಿ ಧರ್ಮಾಃ ಪ್ರಥಮೋಽಕ್ರಿಯಂತ ತೇ ಹ ನಾಕಂ ಮಹಿಮಾನಃ ಸಚಂತೇತಿ ಸ್ವರ್ಗೋ ವೈ ಲೋಕೋ**

**ನಾಕೋ ದೇವಾ ಮಹಿಮ್ನಾನಸ್ತೇ ದೇವಾಃ ಲೋಕಙ್ಗ್‌ಂ ಸಚಂತ ಯೋ ತಂ ಯಜ್ಞಮಯು-ಜನ್ನಿತ್ಯೇತತ್ ।**

(ಶ. ಬ್ರಾ. ೧೦-೨-೨-೨)

ಯಜ್ಞದಿಂದ ಪ್ರಜಾಪ್ರತಿರೂಪಿಯಾದ ಯಜ್ಞವನ್ನರ್ಪಿಸಿದ್ದರು; ಈ ನಿಯಮವೇ ಪ್ರಥಮತಃ ಸ್ಥಾಪಿತವಾದ್ದುದರಿಂದ ಇದನ್ನೇ **ತಾನಿ ಧರ್ಮಾಣಿ ಪ್ರಥಮಾನ್ಯಾಸನ್** ಎಂದು ಋಷಿಗಳು ಹೇಳಿದ್ದಾರೆ. ಈ ನಿಯಮಗಳು ಅಂತರಿಕ್ಷಕ್ಕೆ ವ್ಯಾಪ್ತವಾದವು. ಆದುಧರಿಂದಲೇ ಈ ಯಜ್ಞದಿಂದ ಪ್ರಜಾಪತಿರೂಪವಾದ ಯಜ್ಞವನ್ನು ನೆರವೇರಿಸುವವರು ಸ್ವರ್ಗಕ್ಕೆ ಸೇರುವರು ಎಂದು ತಿಳಿಸಿದೆ. ಅದೇ ಪ್ರಕಾರವಾಗಿ ಯಜ್ಞಕರ್ತರಾದ ದೇವತೆಗಳೆಲ್ಲರೂ ಸ್ವರ್ಗವಾಸಿಗಳಾಗಿದ್ದಾರೆ.

**ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾ ಇತಿ । ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಪ್ಯೇತರ್ಹಿ ಸಾಧಯಂತಿ ಪಕ್ಷೇದ-ಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ ಪಶ್ಚಾದ್ಧ್ಯೇವೇದಮನ್ಯದ್ಯಜ್ಞಿಯಮಾಸ ಯತ್ಕಿಂಚಾಮೃತಂ ॥**

(ಶ. ಬ್ರಾ. ೧೦-೨-೨-೩)

ಸಾಧ್ಯರು ಪೂರ್ವದಿಂದಲೇ ಈ ಸ್ವರ್ಗನಿವಾಸಿಗಳಾಗಿದ್ದಾರೆ. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯು ದೇಹರೂಪಿಗಳಾಗಲು ಪ್ರಾರಂಭದಲ್ಲಿ ಸಪ್ತಪ್ರಾಣಗಳೇ ಅವನನ್ನು ಸಾಧ್ಯನನ್ನಾಗಿ ಮಾಡಿದವು. ಆದುದರಿಂದಲೇ ಇದೇ ವಿಷಯವನ್ನು ಋಕ್ಸಂಹಿತಾವಾಕ್ಯದಲ್ಲಿಯೂ ಈ ರೀತಿ ವರ್ಣಿಸಿದೆ.

ಋಷಿಶಬ್ದದ ನಿರ್ವಚನವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ಹೇಳಿದೆ. ಜೊತೆಯಲ್ಲಿಯೇ ಸೃಷ್ಟಿಗೂ ಋಷಿಗೂ ಇರತಕ್ಕ ಸಂಬಂಧವನ್ನೂ ಸಹ ತಿಳಿಸಿದೆ.

**ಅಸದ್ವಾ ಇದಮಗ್ರ ಆಸೀತ್ । ತದಾಹುಃ ಕಿಂ ತದಸದಾಸೀದಿತ್ಯೃಷಯೋ ವಾವ ತೇಽಗ್ರೇಽ-ಸದಾಸೀತ್ತದಾಹುಃ ಕೇ ತ ಋಷಯ ಇತಿ ಪ್ರಾಣಾ ವಾ ಋಷಯಸ್ತೇ ಯತ್ಪುರಾಸ್ಮಾತ್ಸರ್ವ-ಸ್ಮಾದಿದಮಿಚ್ಛಂತಃ ಶ್ರಮೇಣ ತಪಸಾರಿಷಂಸ್ತಸ್ಮಾದೃಷಯಃ ।**

(ಶ. ಬ್ರಾ. ೬-೧-೧-೧)

ಸೃಷ್ಟಿಗೆ ಪೂರ್ವದಲ್ಲಿ ಅಸತ್ತು ಮಾತ್ರವಿದ್ದಿತು. ಈ ಋಷಿಗಳೇ ಆ ರೂಪದಲ್ಲಿದ್ದರು. ಋಷಿಗಳಾರೆಂದರೆ ಅವರೆ ಮುಖ್ಯಪ್ರಾಣರು ಸೃಷ್ಟಿಗೆ ಪೂರ್ವದಲ್ಲಿ ಜಗತ್‌ಸೃಷ್ಟಿಯನ್ನಿಚ್ಛಿಸಿ ಅದಕ್ಕಾಗಿ ತಪಸ್ಸನ್ನಾಚರಿಸಿ ಶ್ರಮಿಸಿದರು. ಆದುದರಿಂದ ಅವರಿಗೆ ಋಷಿಗಳೆಂದು ಹೆಸರು. ಎಂದು ಋಷಿಶಬ್ದದ ನಿರ್ವಚನವನ್ನು ಹೇಳಿದೆ. (ತಪಸಾರಿಷಂಸ್ತಸ್ಮಾದೃಷಯಃ) ಮತ್ತು,

**...............ತ್ವಯಿ ತಂತುಮೇತಮಿತಿ ಯೋಽಸಾವೃಷಿಭಿಸ್ತಂತುಸ್ತತಸ್ತಮೇತದಾಹ ।**

(ಶ. ಬ್ರಾ. ೮-೬-೩-೨೨)

ವಿಶ್ವಾತ್ಮಕವಾದ ಯಜ್ಞತಂತುವನ್ನು ನೂತರು; ಜಗತ್ತಿನ ವಿಸ್ತೃತಿಗೆ ಕಾರಣರಾದರು ಎಂದು ಋಷಿಶಕ್ತಿಯನ್ನು ಪ್ರಶಂಸಿಸಿದೆ. ಆದುದರಿಂದಲೇ ಸೃಷ್ಟಿಮೂಲನಾದ ಬ್ರಹ್ಮಸ್ವರೂಪರೆಂದೂ ಹೇಳಿದೆ.

**ಪ್ರಾಣಾ ವಾ ಋಷಯಃ ಪ್ರಥಮಜಾಸ್ತದ್ಧಿ ಬ್ರಹ್ಮ ಪ್ರಥಮಜಂ ।**

(ಶ. ಬ್ರಾ. ೮-೬-೧-೫)

ಎಂದು ಋಷಿಗಳಿಗೂ, ಬ್ರಹ್ಮನಿಗೂ ತಾದಾತ್ಮ್ಯವನ್ನು ತೋರಿಸಿದೆ. ಇದೊಂದು ವಿಧವಾದ ನಿರ್ವಚನವಾದರೆ, ಇದಕ್ಕೆ ಪ್ರತಿಯಾಗಿ ಇನ್ನೊಂದು ನಿರ್ವಚನವೂ ಸಾಧ್ಯವಾಗುತ್ತದೆ. ವಾಚಸ್ಪತ್ಯದಲ್ಲಿ ಹೇಳಿರುವಂತೆ,

**ಋಷತಿ ಜ್ಞಾನೇನ ಸಂಸಾರಪಾರಂ ।**

ಸಂಸಾರಪಾರವನ್ನು ಜ್ಞಾನದ ಮೂಲಕ ದಾಟುವುದರಿಂದ **ಋಷ್** ಧಾತುವಿನಿಂದ ನಿಷ್ಪನ್ನವಾದ ಋಷಿಶಬ್ದಕ್ಕೆ ಜ್ಞಾನಿಗಳೆಂದರ್ಥವಾಗುತ್ತದೆ. ಹೀಗೆ ಒಂದು ನಿರ್ವಚನದ ಪ್ರಕಾರ ಜಗಸ್ಸೃಷ್ಟಿಗೆ ಋಷಿಗಳು ಮೂಲಕಾರಣರೆಂದೂ, ಇನ್ನೊಂದು ನಿರ್ವಚನದ ಪ್ರಕಾರ ಸಂಸಾರನಿವೃತ್ತಿಗೆ ಕಾರಣರೆಂದೂ ಅರ್ಥವಾಗುತ್ತದೆ. ಅಗಸ್ತ್ಯನಲ್ಲಿ ಈ ಎರಡು ಶಕ್ತಿಗಳೂ ಇದ್ದವೆಂದು ೧-೧೭೯-೬ನೇ ಋಕ್ಕಿನ ವರ್ಣನೆಯಿರುತ್ತದೆ. **ಉಭೌ ವರ್ಣೌ ಪುಪೋಷ** ಎಂಬಲ್ಲಿ ಕಾಮಸಂತೃಪ್ತಿಯನ್ನು ಪಡೆದುದರಿಂದ ಸೃಷ್ಟಿಸಾಮರ್ಥ್ಯವೂ, ಆಧ್ಯಾತ್ಮಿಕವಾದ ಜ್ಞಾನವನ್ನು ಪಡೆದುದರಿಂದ ಸಂಸಾರ ನಿವೃತ್ತಿಗೆ ಸಾಧನವಾದ ಶಕ್ತಿಯೂ ವರ್ಣಿತವಾಗಿದೆ.

**ಋಷೀ (ಋಷ್) ಗತೌ** । ಎಂಬ ಗತ್ಯರ್ಥಕವಾದ ಧಾತುವಿನಿಂದ ಋಷಿಶಬ್ದವು ನಿಷ್ಪನ್ನವಾಗಿದೆಯೆಂದು ಮೇಲೆ ಹೇಳಿದ ನಿರ್ವಚನವು ತಿಳಿಸುತ್ತದೆ. ಅಲ್ಲದೇ **ದೃಶ್** ಧಾತುವಿನಿಂದಲೂ ಋಷಿಶಬ್ದವು ನಿಷ್ಪನ್ನವಾಗಿರಲು ಸಾಧ್ಯವೆಂದು Monier Williams ಎಂಬ ಪಂಡಿತನು ತನ್ನ Sanskrit-English Dectionary ಯಲ್ಲಿ ತಿಳಿಸಿ **ಋಷಿಕೃತ್** ಎಂಬ ಶಬ್ದಕ್ಕೆ ಅರ್ಥವನ್ನು ಹೇಳುವಾಗ ಎರಡು ಆಧಾರಗಳನ್ನು ತೋರಿಸಿ, Causing to see, enlightening ಎಂಬರ್ಥವನ್ನು ಹೇಳಿದ್ದಾನೆ. ಈ ಉದಾಹರಣೆಗಳಲ್ಲಿ ಮೊದಲನೆಯದಾಗಿ,

**ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ ಯಮಗಾಮ ದೂರಾತ್ ।**
**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ॥**

(ಋ. ಸಂ. ೧-೩೧-೧೬)

ಎಂಬ ಋಕ್ಕಿನಲ್ಲಿ **ಋಷಿಕೃತ್** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ. ಸಾಯಣರು ಈ ಪದಕ್ಕೆ **ದರ್ಶನಕಾರೀ** ಎಂಬಂರ್ಥವನ್ನು ಹೇಳಿದ್ದಾರೆ. ಇದರಂತೆಯೇ,

**ಋಷಿಮನಾ ಯ ಋಷಿಕೃತ್ಸ್ವರ್ಷಾಃ ಸಹಸ್ರಣೀಥಃ ಪದವೀಃ ಕವೀನಾಂ ।**
**ತೃತೀಯಂ ಧಾಮ ಮಹಿಷಃ ಸಿಷಾಸನ್ತ್ಸೋಮೋ ವಿರಾಜಮನು ರಾಜತಿ ಷ್ಟುಪ್ ॥**

(ಋ. ಸಂ. ೯-೯೬-೧೮)

ಎಂಬ ಋಕ್ಕಿನಲ್ಲಿಯೂ ಸಹ **ಋಷಿಮನಾಃ** ಎಂಬ ಪದಕ್ಕೆ **ಸರ್ವದರ್ಶನಶೀಲಮನಸ್ಕಃ** ಎಂದೂ, **ಋಷಿಕೃತ್** ಎಂಬುದಕ್ಕೆ **ಸರ್ವಸ್ಯ ದರ್ಶನಕರ್ತಾ** ಎಂದೂ ಅರ್ಥಮಾಡಿದೆ. ಲೌಕಿಕವಾಗಿಯೂ ಸಹ ತತ್ತ್ವಜ್ಞಾನಕ್ಕೆ ದರ್ಶನವೆಂಬ ಪರ್ಯಾಯಪದವು ಈ ಅಭಿಪ್ರಾಯವನ್ನು ತಿಳಿಸುತ್ತದೆ.



॥ ಸಂಹಿತಾಪಾಠಃ ॥

ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಂ ।
ಪಶೂನ್ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ಗ್ರಾಮ್ಯಾಶ್ಚ ಯೇ ॥ ೮ ॥

॥ ಪದಪಾಠಃ ॥

ತಸ್ಮಾತ್ । ಯಜ್ಞಾತ್ । ಸರ್ವಽಹುತಃ । ಸಂಽಭೃತಂ । ಪೃಷತ್ಽಆಜ್ಯಂ ।
ಪಶೂನ್ । ತಾನ್ । ಚಕ್ರೇ । ವಾಯವ್ಯಾನ್ । ಆರಣ್ಯಾನ್ । ಗ್ರಾಮ್ಯಾಃ । ಚ । ಯೇ ॥ ೮ ॥

॥ ಸಾಯಣಭಾಷ್ಯಂ ॥

**ಸರ್ವಹುತಃ** । ಸರ್ವಾತ್ಮಕಃ ಪುರುಷೋ ಯಸ್ಮಿನ್ಯಜ್ಞೇ ಹೂಯತೇ ಸೋಽಯಂ ಸರ್ವಹುತ್ । ತಾದೃಶಾತ್ತಸ್ಮಾತ್ಪೂರ್ವೋಕ್ತಾನ್ಮಾನಸಾದ್ಯಜ್ಞಾತ್ಪೃಷದಾಜ್ಯಂ ದಧಿಮಿಶ್ರಮಾಜ್ಯಂ ಸಂಭೃತಂ । ಸಂಪಾದಿತಂ । ದಧಿ ಚಾಜ್ಯಂ ಚೇತ್ಯೇವಮಾದಿಭೋಗ್ಯಜಾತಂ ಸರ್ವಂ ಸಂಪಾದಿತಮಿತ್ಯರ್ಥಃ । ತಥಾ ವಾಯವ್ಯಾನ್ವಾಯುದೇವತಾಕಾಲ್ಲೋಕಪ್ರಸಿದ್ಧಾನಾರಣ್ಯಾನ್ಪಶೂಂಶ್ಚಕ್ರೇ । ಉತ್ಪಾದಿತವಾನ್ । ಆರಣ್ಯಾ ಹರಿಣಾದಯಃ । ತಥಾ ಯೇ ಚ ಗ್ರಾಮ್ಯಾ ಗವಾಶ್ವಾದಯಃ ತಾನಪಿ ಚಕ್ರೇ । ಪಶೂನಾಮಂತರಿಕ್ಷದ್ವಾರಾ ವಾಯುದೇವತ್ಯತ್ವಂ ಯಜುರ್ಬ್ರಾಹ್ಮಣೇ ಸಮಾಮ್ನಾಯತೇ । ವಾಯವಃ ಸ್ಥೇತ್ಯಾಹ ವಾಯುರ್ವಾ ಅಂತರಿಕ್ಷಸ್ಯಾಧ್ಯಕ್ಷಾಃ । ಅಂತರಿಕ್ಷದೇವತ್ಯಾಃ ಖಲು ವೈ ಪಶವಃ । ವಾಯವ ಏವೈನಾನ್ಪರಿದದಾತಿ । ತೈ. ಬ್ರಾ. ೩-೨-೧-೩ । ಇತಿ ॥

॥ ಪ್ರತಿಪದಾರ್ಥ ॥

**ಸರ್ವಹುತಃ**—ಜಗದ್ವ್ಯಾಪಿಯಾದ ವಿರಾಟ್ಪುರುಷನೇ ಆಹುತಿಯಾಗಿ ಉಳ್ಳ । **ತಸ್ಮಾತ್ ಯಜ್ಞಾತ್**—ಆ ಯಜ್ಞದಿಂದ । **ಪೃಷದಾಜ್ಯಂ**—ದಧಿಮಿಶ್ರವಾದ ಆಜ್ಯವು (ಮೊಸರು ತುಪ್ಪವು) । **ಸಂಭೃತಂ**—ಸಂಪಾದಿತವಾಯಿತು । **ವಾಯವ್ಯಾನ್**—ವಾಯುದೇವತಾಕವಾದ ಯಾವ ಪಕ್ಷ್ಯಾದಿಗಳುಂಟೋ । **ತಾನ್**—ಅವನ್ನು । **ಚಕ್ರೇ**—ನಿರ್ಮಿಸಿದನು । **ಆರಣ್ಯಾನ್**—ಅರಣ್ಯವಾಸಿಗಳಾದ ಮೃಗಾದಿಗಳನ್ನೂ । **ಯೇ ಚ ಗ್ರಾಮ್ಯಾಃ**—ಗವಾಶ್ವಾದಿಗಳೇ ಮೊದಲಾದ ಗ್ರಾಮದಲ್ಲಿ ವಾಸಿಸುವ ಪಶುಗಳನ್ನೂ ಉತ್ಪನ್ನಮಾಡಿದನು.

॥ ಭಾವಾರ್ಥ ॥

ಜಗದ್ವ್ಯಾಪಿಯಾದ ವಿರಾಟ್ ಪುರುಷನೇ ಆಹುತಿಯಾಗಿ ಉಳ್ಳ ಆ ಯಜ್ಞದಿಂದ ದಧಿಮಿಶ್ರವಾದ ಆಜ್ಯವು ಉತ್ಪನ್ನವಾಯಿತು. ಅನಂತರ ಪಕ್ಷ್ಯಾದಿಗಳನ್ನು ಆರಣ್ಯಕವಾದ ಮೃಗಗಳನ್ನೂ ಗ್ರಾಮವಾಸಿಗಳಾದ ಗವಾಶ್ವಾದಿಗಳನ್ನೂ ಪುರುಷನು ಉತ್ಪನ್ನ ಮಾಡಿದನು.

## English Translation

From that victim, in whom the universal oblation was offered, the mixture of curds and butter was produced, (then) he made those animals over whom Vayu presides, those that are wild, and those that are tame.

|| ವಿಶೇಷವಿಷಯಗಳು ||

(೧) ಸರ್ವಮೇಧ, (೨) ಆಜ್ಯದ ಮಹತ್ತ್ವ ಮತ್ತು (೩) ಪಶ್ವಾದಿಗಳ ಜನ್ಮ ಇವು ಇಲ್ಲಿ ತಿಳಿಸಲ್ಪಟ್ಟಿವೆ. ಈ ವಿಷಯಗಳನ್ನು ಪ್ರಕೃತದಲ್ಲಿ ವಿವರಿಸಲಾಗುತ್ತದೆ.

೧

ಸರ್ವಾತ್ಮಕನಾದ ಪುರುಷನನ್ನೇ ಆಹುತಿಯನ್ನಾಗಿ ಅರ್ಪಿಸಿದ ಯಜ್ಞದಿಂದ ಉತ್ಪನ್ನವಾದ ವಸ್ತುಗಳ ವಿವರಣವು **ಸರ್ವಹುತ್** ಎಂದು ವರ್ಣಿತವಾಗಿರುವ ಯಜ್ಞದ ಸರ್ವಮೂಲತ್ವವನ್ನೂ ತೋರಿಸುತ್ತದೆ. ಯಾವುದು ಸಕಲ ವಿಶ್ವದ ಉತ್ಪತ್ತಿಗೂ ಮೂಲವೋ ಅದೇ ಸಕಲ ವಿಶ್ವವನ್ನೂ ಭಕ್ಷಿಸುತ್ತದೆ **ಅದ್ಯತೇಽತ್ತಿ ಚ ಭೂತಾನಿ** ಎಂದು ಹಿಂದೆ ವರ್ಣಿಸಿದೆ. ಇದೇ ಸರ್ವಮೇಧವೆಂದೂ ಪ್ರಸಿದ್ಧವಾಗಿದೆ. ಸರ್ವಮೇಧವನ್ನು ವರ್ಣಿಸುವ ಯಾಜ್ಞಿಕ ಪ್ರಕ್ರಿಯೆಯು ಈ ರೀತಿಯಿರುತ್ತದೆ. ಈ ವರ್ಣನೆಯಲ್ಲಿ ಆಧ್ಯಾತ್ಮಿಕತತ್ತ್ವವೂ ಅಡಕವಾಗಿರುತ್ತದೆ. ಇದು ದಶರಾತ್ರಾತ್ಮಕವಾದ ಯಜ್ಞಕ್ರಿಯೆಯೆಂದು ಪ್ರಸಿದ್ಧವಾಗಿದೆ. (**ಸರ್ವಹುತಃ** ಎಂಬ ಪದದಿಂದ ಇಲ್ಲಿ **ಪುರುಷಮೇಧವೇ** ವಿವಕ್ಷಿತವಾದರೂ, **ಸರ್ವಮೇಧವೂ** ಇದೇ ತತ್ತ್ವವನ್ನು ಪ್ರತಿಪಾದಿಸುತ್ತದೆ).

> **ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಗ್ಂ ಹುತ್ವಾ ಭೂತಾನಿ ಚಾತ್ಮನಿ ಸರ್ವೇಷಾಂ ಭೂತಾನಾಗ್ ಶ್ರೈಷ್ಠ್ಯಗ್ ಸ್ವಾರಾಜ್ಯಮಾಧಿ-ಪತ್ಯಂ ಪರ್ಯೈತ್ತಥೈವೈತದ್ಯಜಮಾನಃ ಸರ್ವಮೇಧೇ ಸರ್ವಾನ್ ಮೇಧಾನ್ ಹುತ್ವಾ ಸರ್ವಾಣಿ ಭೂತಾನಿ ಶ್ರೈಷ್ಠ್ಯಗ್ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ||**
>
> (ಶ. ಬ್ರಾ. ೧೩-೭-೧-೧)

ಸ್ವಯಂಭುವಾದ ಪರಬ್ರಹ್ಮನು ತಪಸ್ಸನ್ನಾಚರಿಸಿದನು. ಕೇವಲ ಈ ತಪಸ್ಸಿನಿಂದ ನಿರಂತರವಾದ ಸ್ಥಿತಿಯೂ ಮತ್ತು ಬೆಳೆವಣಿಗೆಯೂ ಸಾಧ್ಯವಿಲ್ಲ. ಆದುದರಿಂದ ಸಕಲ ಭೂತಗಳಲ್ಲಿಯೂ ನನ್ನನ್ನೇ ಆಹುತಿರೂಪದಲ್ಲಿ ಅರ್ಪಿಸುತ್ತೇನೆ ಮತ್ತು ಸಕಲ ಭೂತಗಳನ್ನೂ ನನ್ನಲ್ಲಿಯೇ ಅರ್ಪಿಸಿಕೊಳ್ಳುತ್ತೇನೆ ಎಂದು ಪರಸ್ಪರ ಆಹುತಿರೂಪದ ಯಜ್ಞವನ್ನಾಚರಿಸಲು ಸಂಕಲ್ಪಿಸಿದನು. ಇದೇ ರೀತಿಯಲ್ಲಿ ಸಂಕಲ್ಪರೂಪವಾದ ಯಜ್ಞದ ಆಚರಣೆಯಿಂದ ಸಕಲ ಲೋಕಗಳ ಸ್ವಾರಾಜ್ಯವನ್ನೂ, ಪ್ರಭುತ್ವವನ್ನೂ ಹೊಂದಿದನು.

> **ತೇನ ಹೈತೇನ ವಿಶ್ವಕರ್ಮಾ ಭೌವನ ಈಜೇ । ತೇನೇಷ್ಟ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವಮಭವದತಿತಿಷ್ಠತಿ ಸರ್ವಾಣಿ ಭೂತಾನೀದಗ್ಂ ಸರ್ವಂ ಭವತಿ ಯ ಏವಂ ವಿದ್ವಾನ್ತ್ಸರ್ವಮೇಧೇನ ಯಜತೇ ಯೋ ವೈತದೇವಂ ವೇದ ||**
>
> (ಶ. ಬ್ರಾ. ೧೩-೭-೧-೧೪)

ವಿಶ್ವಕರ್ಮಾ ಭೌವನನು (ಪುರುಷ, ಪ್ರಜಾಪತಿ, ವಿಶ್ವಕರ್ಮಾ, ಹಿರಣ್ಯಗರ್ಭ ಎಲ್ಲವೂ ಒಂದೇ ತತ್ತ್ವವನ್ನು ಪ್ರತಿಪಾದಿಸುವ ಪದಗಳು) ಈ ಸರ್ವಮೇಧವನ್ನು ಆಚರಿಸಿದನು. ಅದರ ಫಲವಾಗಿ ವಿಶ್ವದ ಸಕಲ ಭೂತಗಳನ್ನೂ ತನ್ನ ನಿಯಮನದಲ್ಲಿಟ್ಟುಕೊಂಡು, ತಾನು ಸರ್ವವ್ಯಾಪಿಯಾಗಿ ಸಕಲ ವಿಧವಾದ ಪ್ರಭುತ್ವವನ್ನೂ ಹೊಂದಿದನು. ಈ ತತ್ತ್ವವನ್ನರಿತು ಇದನ್ನಾಚರಿಸಿದರೆ ಅದೇ ಪದವಿಯನ್ನು ಯಜ್ಞಕರ್ತನು ಪಡೆಯುತ್ತಾನೆಂದು ಪ್ರಶಂಸಿಸಿದೆ. ವಿಶ್ವಕರ್ಮ ಭೌವನನು ಆಚರಿಸಿದ ಸರ್ವಮೇಧದ ಸ್ವರೂಪವೇನು ಎಂದರೆ, ಅದರ ವಿವರಣವು ಈ ರೀತಿಯಿರುತ್ತದೆ. [**ಪುರುಷಮೇಧ** ಮತ್ತು **ಸರ್ವಮೇಧ**ಗಳ ಕ್ರಿಯಾಕಲಾಪಗಳು ಬೇರೆ ಬೇರೆಯಾಗಿದ್ದರೂ ಸಹ, **ಸರ್ವಹುತಃ** ಎಂಬ ಪದದಿಂದ ವಿವಕ್ಷಿತವಾಗುವ ತತ್ತ್ವವೊಂದೇ ಆದುದರಿಂದ ಆ ಕಲಾಪಗಳನ್ನು ವಿವರಿಸುವುದರ ಮೂಲಕ **ಅದ್ಯತೇಽತ್ತಿ ಚ ಭೂತಾನಿ** ಎಂಬ ವಾಕ್ಯದ ತಾತ್ಪರ್ಯವನ್ನು ತಿಳಿಸಿ, ಸಕಲ ಜಗತ್ತೂ ವಿಶ್ವಕರ್ಮನಿಗೆ ಆಹುತಿರೂಪದಲ್ಲಿ ಅರ್ಪಿಸಿ ಸರ್ವಾಂತರ್ಯಾಮಿಯಾಗುವ ವಿಷಯವನ್ನು ಇಲ್ಲಿ ತಿಳಿಸಲಾಗುತ್ತದೆ. ಮತ್ತು ಋಕ್ಕಿನ ವಿಶೇಷವಿಷಯದಲ್ಲಿ ಪುರುಷಮೇಧದ ಸ್ವರೂಪವನ್ನು ವಿವರಿಸಲಾಗುತ್ತದೆ.]

ವಿಶ್ವಕರ್ಮಾ ಭೌವನನು ಆಚರಿಸಿದ ಸರ್ವಮೇಧದ ಸ್ವರೂಪ ಮತ್ತು ಅದರ ಫಲಗಳು—ಈ ವಿವರಣವು ವಿಧಿರೂಪದಲ್ಲಿರುತ್ತದೆ.

**ಸ ವಾ ಏಷ ಸರ್ವಮೇಧೋ ದಶರಾತ್ರೋ ಯಜ್ಞಕ್ರತುರ್ಭವತಿ । ದಶಾಕ್ಷರಾ ವಿರಾಡ್ವಿರಾಡು ಕೃತ್ಸ್ನಮನ್ನಂ ಕೃತ್ಸ್ನಸ್ಯೈವಾನ್ನಾದ್ಯಸ್ಯಾವರುದ್ಧ್ಯೈ ತಸ್ಮಿನ್ನಗ್ನಿಂ ಪರಾರ್ಧ್ಯಂ ಚಿನೋತಿ ಪರಮೋ ವಾ ಏಷ ಯಜ್ಞಕ್ರತೂನಾಂ ಯತ್ಸರ್ವಮೇಧಃ ಪರಮೇಣೈವೈನಂ ಪರಮತಾಂ ಗಮಯತಿ ।**

(ಶ. ಬ್ರಾ. ೧೩-೭-೧-೨)

ಸಕಲ ವಿಧವಾದ ಅನ್ನಸಂಪತ್ತಿಯೂ ಲಭಿಸಬೇಕಾದರೆ ಸರ್ವಮೇಧರೂಪವಾದ ಯಜ್ಞವನ್ನಾಚರಿಸಬೇಕು. ಅನ್ನವು ವಿರಾಡ್ರೂಪದಲ್ಲಿರುತ್ತದೆ ವಿರಾಟ್ಟು ದಶಾಕ್ಷರ (೧೦) ವುಳ್ಳದ್ದು. ಇದರ ಅನುಗ್ರಹವು ದಶರಾತ್ರಾತ್ಮಕವಾದ ಸರ್ವಮೇಧದಿಂದ ಮಾತ್ರ ಸಾಧ್ಯವಾಗುತ್ತದೆ. ಉಳಿದ ಸಕಲವಿಧವಾದ ಯಜ್ಞಕ್ರಿಯೆಗಳಿಗಿಂತಲೂ ಸರ್ವಮೇಧವೇ ಅತ್ಯುತ್ತಮವಾದುದು. ಆದುದರಿಂದ ಸರ್ವೋತ್ತಮವಾದ ಅಗ್ನಿಚಿತಿಯನ್ನು ನಿರ್ಮಿಸಿ ಈ ಯಾಗವನ್ನಾಚರಿಸಬೇಕು. ವಿಶ್ವಕರ್ಮಾ ಭೌವನನು ಇದೇ ಯಾಗವನ್ನಾಚರಿಸಿದುದ್ದರ ಫಲವಾಗಿ ಅತ್ಯುತ್ತಮವಾದ ಸ್ಥಾನವನ್ನು ಹೊಂದಿದನು. ಎಂದಿದೆ.

**ತಸ್ಯಾಗ್ನಿಷ್ಟುದಗ್ನಿಷ್ಟೋಮಃ ಪ್ರಥಮಮಹರ್ಭವತಿ। ಅಗ್ನಿರ್ವಾ ಅಗ್ನಿಷ್ಟುದಗ್ನಿಷ್ಟೋಮೋಽಗ್ನಿಮುಖಾ ಉ ವೈ ಸರ್ವೇ ದೇವಾಃ ಸರ್ವೇಷಾಂ ದೇವಾನಾಮಾಪ್ತ್ಯೈ ತಸ್ಯಾಗ್ನೇಯಾ ಗ್ರಹಾ ಭವಂತ್ಯಾಗ್ನೇಯ್ಯಃ ಪುರೋರುಚಃ ಸರ್ವಮಾಗ್ನೇಯಮಾಸದಿತಿ ।**

(ಶ ಬ್ರಾ. ೧೩-೭-೧-೩)

ಮೊದಲನೆಯ ದಿವಸ ಅಗ್ನಿಪ್ರಶಂಸಕವಾದ ಅಗ್ನಿಷ್ಟೋಮವು. ಅಗ್ನಿಷ್ಟುದಗ್ನಿಷ್ಟೋಮವೇ ಸರ್ವವ್ಯಾಪಕನಾದ ಅಗ್ನಿಯು. ಸಕಲ ದೇವತೆಗಳೂ ತಮ್ಮ ಆಹಾರಕ್ಕಾಗಿ ಅಗ್ನಿಯನ್ನೇ ನಂಬಿರುತ್ತಾರೆ. ಆದುದರಿಂದ ಸಕಲ

**ಇಂದ್ರಸ್ತುದುಕ್ಥ್ಯೋ ದ್ವಿತೀಯಮಹರ್ಭವತಿ । ಇಂದ್ರೋ ವೈ ಸರ್ವೇ ದೇವಾಃ ಸರ್ವೇಷಾಂ ದೇವಾನಾಮಾಪ್ತ್ಯೈ ತಸ್ಮಾದೈಂದ್ರಾ ಗ್ರಹಾ ಭವಂತಿ ॥**

(ಶ. ಬ್ರಾ. ೧೩-೭-೧-೪)

ಇಂದ್ರಪ್ರಶಂಸಕವಾದ ಉಕ್ಥ್ಯವೇ ಎರಡನೆಯ ದಿವಸದ ಕ್ರಿಯೆಯು. ಇದೇ ಇಂದ್ರಸ್ತುದುಕ್ಥ್ಯವೆಂದು ಕರೆಯಲ್ಪಟ್ಟಿದೆ. ಇಂದ್ರನೇ ಸಕಲದೇವತೆಗಳ ಸಮನ್ವಯಸ್ವರೂಪನಾದುದರಿಂದ ಇವನನ್ನು ಪೂಜಿಸಿದರೆ ಸಕಲ ದೇವತೆಗಳ ಅನುಗ್ರಹವೂ ಲಭಿಸುತ್ತದೆ.

**ಸೂರ್ಯಸ್ತುದುಕ್ಥ್ಯೋ ದ್ವಿತೀಯಮಹರ್ಭವತಿ । ಸೂರ್ಯೋ ವೈ ಸರ್ವೇ ದೇವಾಃ ಸರ್ವೇಷಾಂ ದೇವಾನಾಮಾಪ್ತ್ಯೈ ಸೌರ್ಯಾ ಗ್ರಹಾ ಭವಂತಿ ॥**

(ಶ. ಬ್ರಾ. ೧೩-೧-೧-೫)

ಸೂರ್ಯನನ್ನು ಪ್ರಶಂಸಿಸುವ ಸೂರ್ಯಸ್ತುದುಕ್ಥ್ಯ ಎಂಬುದೇ ಮೂರನೆಯ ದಿನದ ಕ್ರಿಯಾಕಲಾಪವು. ಸಕಲ ದೇವತೆಗಳೂ ಸೂರ್ಯನಲ್ಲಿಯೇ ಅಂತರ್ಗತರಾಗಿರುವುದರಿಂದ ಈ ಕ್ರಿಯೆಯ ಫಲವಾಗಿ ಸಕಲ ದೇವತೆಗಳ ಅನುಗ್ರಹವೂ ಪೂರ್ಣವಾಗಿ ಲಭಿಸುತ್ತದೆ.

**ವೈಶ್ವದೇವಶ್ಚತುರ್ಥಮಹರ್ಭವತಿ । ವಿಶ್ವೇ ವೈ ಸರ್ವೇ ದೇವಾಃ ಸರ್ವೇಷಾಂ ದೇವಾನಾ-ಮಾಪ್ತ್ಯೈ ವೈಶ್ವದೇವಾ ಗ್ರಹಾ ಭವಂತಿ ॥**

(ಶ. ಬ್ರಾ. ೧೩-೭-೧-೬)

ನಾಲ್ಕದಿನ ವೈಶ್ವದೇವಗ್ರಹವು ವಿಶ್ವೇದೇವತೆಗಳಿಗೆ ಪರಿಕ್ಲೃಪ್ತವಾಗಿರುವುದು. ಸಕಲ ದೇವತೆಗಳೂ ಇವರಲ್ಲೇ ಅಂತರ್ಗತರಾಗಿದ್ದಾರೆ. ಆದುದರಿಂದಲೇ, ಇವರ ಪ್ರಶಂಸೆಯಿಂದ ಸಕಲ ದೇವತೆಗಳ ಅನುಗ್ರಹವೂ ಪೂರ್ಣವಾಗಿ ಲಭಿಸುತ್ತದೆ.

**ಆಶ್ವಮೇಧಿಕಂ ಮಧ್ಯಮಂ ಪಂಚಮಮಹರ್ಭವತಿ । ತಸ್ಮಿನ್ನಶ್ವಂ ಮೇಧ್ಯಮಾಲಭತೇಽಶ್ವ-ಮೇಧಸ್ಯೈವಾಪ್ತ್ಯೈ ॥**

(ಶ. ಬ್ರಾ. ೧೩-೭-೧-೭)

ಐದನೆಯ ದಿವಸವು ಆಶ್ವಮೇಧಿಕಕ್ರಿಯೆಗಳಿಗೆ ಸಂಬಂಧಿಸಿದುದಾಗಿದೆ. (ಏಕವಿಂಶರೂಪನಾದ ಆದಿತ್ಯನೇ ಅಶ್ವಮೇಧವು- ಶ. ಬ್ರಾ. ೧೩-೫-೧.೫). ಆದಿತ್ಯರೂಪವುಳ್ಳ ಈ ಅಶ್ವಮೇಧ ಅಥವಾ ಅಶ್ವಮೇಧರೂಪವಾದ ಆದಿತ್ಯನ ಪೂಜೆಗೆ ಯೋಗ್ಯವಾದ ಅಶ್ವವನ್ನು ಹೊಂದಿ ಈ ಕಾರ್ಯಗಳನ್ನು ನೆರವೇರಿಸಿ ಅಶ್ವಮೇಧರೂಪವಾದ ಆದಿತ್ಯನ ದಿವ್ಯಾನುಗ್ರಹವನ್ನು ಸಂಪಾದಿಸತಕ್ಕದ್ದು.

**ಪೌರುಷಮೇಧಿಕಂ ಮಧ್ಯಮಗ್ಂ ಷಷ್ಠಮಹರ್ಭವತಿ । ತಸ್ಮಿನ್ಮೇಧ್ಯಾನ್ಪುರುಷಾನಾಲಭತೇ ಪುರುಷಮೇಧಸ್ಯೈವಾಪ್ತ್ಯೈ ।**

(ಶ. ಬ್ರಾ. ೧೩-೭-೧-೮)

ಪುರುಷಮೇಧಾತ್ಮಕವಾದ ಆರನೆಯ ದಿನ ಈ ಯಜ್ಞಕ್ಕೆ ವಿಹಿತವಾದ ಪುರುಷರನ್ನು ಸಂಪಾದಿಸಿ ಅವರ ಸಹಾಯದಿಂದ ನೆರವೇರಿದ ಕರ್ಮದಿಂದ ಇಷ್ಟಾರ್ಥವನ್ನು ಪಡೆಯತಕ್ಕದ್ದು.

**ಅಪ್ತೋರ್ಯಾಮಃ ಸಪ್ತಮಮಹರ್ಭವತಿ । ಸರ್ವೇಷಾಂ ಯಜ್ಞಕ್ರತೂನಾಮಾಪ್ತ್ಯೈ ತಸ್ಮಿನ್ತ್ಸರ್ವಾನ್ಮೇಧ್ಯಾನಾಲಭತೇ ಯಚ್ಚ ಪ್ರಾಣಿ ಯಚ್ಚಾಪ್ರಾಣಂ ವಪಾ ವಪಾವತಾ ಜುಹೋತಿ ತ್ವಚ ಉತ್ಕರ್ತಮವಪಾಕಾನಾಗ್ಂ ಸಂವ್ರಶ್ಚ್ಯೌಷಧಿವನಸ್ಪತೀನಾಂ ಪ್ರಕಿರಂ ಶುಷ್ಕಾಣಾಂ ಚಾರ್ದ್ರಾಣಾಂ ಚಾನ್ನಮನ್ನಂ ಜುಹೋತ್ಯನ್ನಸ್ಯಾನ್ನಸ್ಯಾಪ್ತ್ಯೈ ಸರ್ವ ಜುಹೋತಿ ಸರ್ವಸ್ಮೈ ಜುಹೋತಿ ಸರ್ವಸ್ಯಾಪ್ತ್ಯೈ ಸರ್ವಸ್ಯಾವರುದ್ಧ್ಯೈ ಪ್ರಾತಃಸವನೆ ಹುತಾಸು ವಪಾಸ್ವೇವಮೇವ ತೃತೀಯಸವನೇ ಹುತೇಷು ಹವಿಃಷು ।—**

(ಶ. ಬ್ರಾ. ೧೩-೭-೧-೯)

ಏಳನೆಯ ದಿನವು ಅಪ್ತೋರ್ಯಾಮಸಂಜ್ಞಕವಾದುದು. ಇದು ಸಕಲ ವಿಧವಾದ ಸೋಮಯಾಗವನ್ನು ನಿರ್ವಹಿಸಲು ಸಾಧಕವಾದುದು. ಈ ಯಾಗಕ್ಕೆ ಸಂಬಂಧಿಸಿದ ಸಕಲವಿಧವಾದ ಚೇತನಾಚೇತನಾತ್ಮಕವಾದ ಆಹುತಿಯನ್ನು ಸಂಪಾದಿಸಿ ಅವುಗಳ ವಪೆಯನ್ನು ವಿಧ್ಯುಕ್ತವಾಗಿ ಅರ್ಪಿಸತಕ್ಕದ್ದು. ರಸವತ್ತಾದ ಮತ್ತು ಶುಷ್ಕವಾದ ಓಷಧಿಗಳು ಮತ್ತು ವೃಕ್ಷಾವಯವಗಳು ಇವುಗಳೆಲ್ಲವನ್ನು ಅರ್ಪಿಸಿದರೆ ಸಕಲ ವಿಧವಾದ ಅನ್ನಸಂಪತ್ತಿಗೂ ಸಾಧಕವಾಗುತ್ತದೆ.

**ತ್ರಿಣವಮಷ್ಟಮಮಹರ್ಭವತಿ । ವಜ್ರೋ ವೈ ತ್ರಿಣವೋ ವಜ್ರೇಣ ಖಲು ವೈ ಕ್ಷತ್ರಗ್ಂ ಸ್ಪೃತಂ ತದ್ವಜ್ರೇಣೈವ ಕ್ಷತ್ರಗ್ಂ ಸ್ಪೃಣೋತಿ ॥**

(ಶ. ಬ್ರಾ ೧೩-೭-೧-೧೦)

ಎಂಟನೆಯದು ತ್ರಿಣವಾತ್ಮಕವಾದ ದಿನ. ತ್ರಿಣವ (ಸೋಮ) ವೇ ವಜ್ರಾಯುಧವು. ವಜ್ರಾಯುಧದ ಸಹಾಯದಿಂದಲೇ ಕ್ಷತ್ರದ ಲಾಭವು ಸಾಧ್ಯ. ಪ್ರಭುತ್ವವೂ ಸಾಧ್ಯ.

**ತ್ರಯಸ್ತ್ರಿಗ್ಂಶಂ ನವಮಮಹರ್ಭವತಿ । ಪ್ರತಿಷ್ಠಾ ವೈ ತ್ರಯಸ್ತ್ರಿಗ್ಂಶಃ ಪ್ರತಿಷ್ಠಿತ್ಯೈ ॥**

(ಶ. ಬ್ರಾ. ೧೩-೭-೧-೧೧)

ತ್ರಯಸ್ತ್ರಿಂಶಸ್ತೋಮವೇ ಸಕಲಕ್ಕೂ ಆಧಾರಭೂತವು. ಆದುದರಿಂದ ಪ್ರತಿಷ್ಠೆಗೆ ಸಾಧಕವೂ, ತ್ರಯಸ್ತ್ರಿಂಶಾತ್ಮಕವೂ ಆದ ನವಮಾಹಸ್ಸಿನಲ್ಲಿ ವಿಧ್ಯುಕ್ತವಾಗಿ ಕಾರ್ಯವನ್ನು ನಿರ್ವಹಿಸತಕ್ಕದ್ದು.

**ವಿಶ್ವಜಿತ್ಸರ್ವಪೃಷ್ಠೋಽತಿರಾತ್ರೋ ದಶಮಮಹರ್ಭವತಿ । ಸರ್ವಂ ವೈ ವಿಶ್ವಜಿತ್ಸರ್ವಪೃಷ್ಠೋಽತಿರಾತ್ರಃ ಸರ್ವಗ್ಂ ಸರ್ವಮೇಧಃ ಸರ್ವಸ್ಯಾಪ್ತ್ಯೈ ಸರ್ವಸ್ಯಾವರುದ್ಧ್ಯೈ ॥**

(ಶ. ಬ್ರಾ. ೧೩-೭-೧-೧೨)

ದಶಮ (೧೦ನೇ) ದಿನವು ಸಕಲ ಪೃಷ್ಠಸ್ತುತಿಗಳನ್ನೊಳಗೊಂಡ ವಿಶ್ವಜಿದತಿರಾತ್ರಸಂಜ್ಞಕವಾಗಿರುತ್ತದೆ. ಈ ರೀತಿಯಾದ ವಿಶ್ವಜಿದತಿರಾತ್ರವೇ ಸರ್ವವ್ಯಾಪಕವಾಗಿರುತ್ತದೆ. ಆದುದರಿಂದ ಸಕಲವನ್ನೂ ಪಡೆಯಲಿಚ್ಛೆಯುಳ್ಳವನು ಈ ಕರ್ಮವನ್ನಾಚರಿಸಬೇಕು.

**ತೇನ ಹೈತೇನ ವಿಶ್ವಕರ್ಮಾ ಭೌವನ ಈಜೇ ।**

(ಶ. ಬ್ರಾ. ೧೩-೭-೧-೧೪)

ಮೇಲೆ ವಿವೃತವಾದ ಸರ್ವಮೇಧಾತ್ಮಕವಾದ ಯಾಗವನ್ನು ವಿಶ್ವಕರ್ಮಾ ಭೌವನನು ಆಚರಿಸಿದನು ಎಂಬ ವಿಷಯವನ್ನು ಈ ಪ್ರಕರಣ ಆದಿಯಲ್ಲಿ ತಿಳಿಸಿದೆ-

**ತಗ್ಂ ಹ ಕಶ್ಯಪೋ ಯಾಜಯಾಂಚಕಾರ । ತದಪಿ ಭೂಮಿಃ ಶ್ಲೋಕಂ ಜಗೌ ನ ಮಾ ಮರ್ತ್ಯಃ ಕಶ್ಚನ ದಾತುಮರ್ಹತಿ ವಿಶ್ವಕರ್ಮನ್ಭೌವನ ಮಂದ ಆಸಿಥ ಉಪಮಂಕ್ಷ್ಯತಿ ಸ್ಯಾ ಸಲಿಲಸ್ಯ ಮಧ್ಯೇ ಮೃಷೈಷ ತೇ ಸಂಗರಃ ಕಶ್ಯಪಾಯೇತಿ ॥**

(ಶ. ಬ್ರಾ. ೧೩-೭-೧-೧೫)

ವಿಶ್ವಕರ್ಮಾ ಭೌವನನು ನೆರವೇರಿಸಿದ ಈ ಸರ್ವಮೇಧಯಾಗದ ಕಾಲದಲ್ಲಿ ಕಶ್ಯಪನು ಋತ್ವಿಕ್ಕಾಗಿದ್ದನು. ಆಗ ವಿಶ್ವಕರ್ಮನು ಪೃಥ್ವಿಯನ್ನೇ ಅವನಿಗೆ ಧಾರೆಯೆರೆದನು. ಆದರೆ ಪೃಥ್ವಿಯು ಅದಕ್ಕೆ ಒಪ್ಪಲಿಲ್ಲ. ಯಾವ ಮಾನವನಾದರೂ ನನ್ನನ್ನು ಧಾರೆಯೆರೆದರೆ ನಾನು ಸಲಿಲದೊಳಕ್ಕೆ ಪ್ರವೇಶಿಸಿ ಮರೆಸಿಕೊಳ್ಳುತ್ತೇನೆ. ನಿನ್ನ ಈ ದಾನ ಪ್ರತಿಜ್ಞೆಯು ವ್ಯರ್ಥವಾಗುತ್ತದೆ ಎಂದಳು.

ಈ ರೀತಿ ವರ್ಣಿತವಾಗಿರುವ ಸರ್ವಮೇಧಪ್ರಕರಣದಲ್ಲಿ ಯಾವ ಯಾವ ಯಾಜ್ಞಿಕಪ್ರಕ್ರಿಯೆಗಳೂ ಮತ್ತು ಕ್ರಿಯಾಕಲಾಪಗಳೂ ನಿರ್ದಿಷ್ಟವಾಗಿಯೋ ಅವು ಪ್ರಕೃತದಲ್ಲಿ ಅವಶ್ಯವಿಲ್ಲ. ಸರ್ವಾಂತರ್ಯಾಮಿಯಾದ ಪರಮಪುರುಷನು ತನ್ನದೇ ಅವಯವವಾದ ಸಕಲ ಜಗತ್ತನ್ನೂ ತನ್ನನ್ನು ಆಹುತಿಯನ್ನಾಗಿ ಅರ್ಪಿಸಿ ಆ ಸರ್ವಾತ್ಮಕವಾದ ಆಹುತಿಯಿಂದ ನೆರವೇರಿಸಿದ ಯಜ್ಞದ ಫಲವಾಗಿ ಜಗತ್ಸೃಷ್ಟಿಯು ಅವಿಚ್ಛಿನ್ನವಾಗಿ ಯಾವ ರೀತಿ ನಡೆಯುತ್ತಿದೆ ಎಂಬುದನ್ನು ವಿವರಿಸುವ ಶ್ರುತಿವಾಕ್ಯಗಳನ್ನುದಾಹರಿಸಿ ಅವನ್ನು ವಿವರಿಸುವುದೇ ಪ್ರಕೃತದ ಉದ್ದಿಶ್ಯ. ಆದುದರಿಂದ ಇಲ್ಲಿ ಯಜ್ಞಸಂಬಂಧಿಯಾದ ಕಲಾಪಗಳನ್ನು ವಿವರಿಸಿಲ್ಲ. ವಿಶ್ವಾತ್ಮಕವಾದ ಯಜ್ಞದಲ್ಲಿ ಪರಮಪುರುಷನ ಸಕಲ ಸ್ವರೂಪವೂ ಆಹುತಿಯಾಗಿ ಅರ್ಪಿತವಾಯಿತು ಮತ್ತು ಅದರ ಫಲವು ಅತಿ ಮಹತ್ತ್ವವುಳ್ಳದ್ದು ಎಂಬ ವಿವರಣವು ವಾಜಸನೇಯಸಂಹಿತೆಯಲ್ಲಿ ಈ ರೀತಿಯಿರುತ್ತದೆ. ಈ ವಿವರಣವನ್ನು ಮೇಲಿನ ದೃಷ್ಟಿಯಿಂದ ಮಾತ್ರ ಸಂಗ್ರಹಿಸಿ ತಿಳಿಸಲಾಗುತ್ತದೆ.

**ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚಂದ್ರಮಾಃ ।**
**ತದೇವ ಶುಕ್ರಂ ತದ್ಬ್ರಹ್ಮ ತಾ ಆಪಃ ಸ ಪ್ರಜಾಪತಿಃ ॥**

(ವಾ. ಸಂ. ೩೨-೧)

ಯಾವ ಪರಮಾತ್ಮನಲ್ಲಿ ಸಕಲ ದೇವತೆಗಳೂ ಓತಪ್ರೋತರೂಪದಲ್ಲಿ ಅಂತರ್ಗತರಾದ್ದಾರೆಂದು ಹಿಂದೆ ವರ್ಣಿಸಿದೆಯೋ ಆ ಪರಮಾತ್ಮನ ಸ್ವರೂಪವರ್ಣನವು. ಸರ್ವಮೇಧಪ್ರಕರಣವನ್ನು ತಿಳಿಸುವಾಗ ಪ್ರಕೃತದಲ್ಲಿ ಈ ಪ್ರಶಂಸೆಯ ಪ್ರಯೋಜನವೇನೆಂದರೆ, ಅದನ್ನು ಭಾಷ್ಯಕಾರರು ಈ ರೀತಿ ವಿವರಿಸಿದ್ದಾರೆ.

**ಸ್ವಯಂಭುಬ್ರಹ್ಮದೃಷ್ಟಾಃ ಆತ್ಮದೇವತ್ಯಾಃ ಸಪ್ತಮೇಽಹನಿ ಅಪ್ತೋರ್ಯಾಮಸಂಜ್ಞಿಕೇ ಸರ್ವಹೋಮೇ ವಿನಿಯುಕ್ತಾಃ ಅಪ್ತೋರ್ಯಾಮಃ ಸಪ್ತಮಮಹರ್ಭವತೀತ್ಯುಪಕ್ರಮ್ಯ ಸರ್ವಂ ಜುಹೋತಿ ಸರ್ವಸ್ಯಾಪ್ತ್ಯೈ ಸರ್ವಸ್ಯಾವರುದ್ಧ್ಯೈ ಇತಿ ಶ್ರುತೇಃ ॥**

(ವಾ. ಸಂ. ಭಾ. ೩೨-೧)

ಸ್ವಯಂಭುಬ್ರಹ್ಮನಿಂದ ದೃಷ್ಟರಾದ ಸಕಲದೇವತೆಗಳೂ ತತ್ಸಂಬಂಧಿಗಳಾದ ಸಕಲ ಚೇತನಾಚೇತನವಸ್ತುಗಳೂ ಅಪ್ತೋರ್ಯಾಮಸಂಜ್ಞಕವಾದ ಏಳನೆಯ ದಿವಸ ಆಹುತಿರೂಪದಲ್ಲಿ ಅರ್ಪಿಸಿ ಸಕಲ ಸಿದ್ಧಿಯನ್ನು ಪಡೆಯಬಹುದೆಂದು ಶತಪಥಬ್ರಾಹ್ಮಣದ ವಾಕ್ಯದಲ್ಲಿ (೧೩-೭-೧-೯) ಯಾವ ವಿಷಯವನ್ನು ತಿಳಿಸಿದೆಯೋ ಆ ವಾಕ್ಯಕ್ಕೆ ಈ ಮಂತ್ರವೇ ಆಧಾರವು. ಅಗ್ನ್ಯಾದಿದೇವತೆಗಳೆಲ್ಲರೂ ಪರಮಾತ್ಮನ ಅಂಶಗಳು ಎಂಬ ವಿಷಯವನ್ನು ತಿಳಿಸುವುದೇ ಪ್ರಕೃತದ ಉದ್ದಿಶ್ಯ. ಸರ್ವಮೇಧಾಂಗವಾದ ಅಪ್ತೋರ್ಯಾಮಾತ್ಮಕವಾದ ವಿಧಿಯಲ್ಲಿ ಪಠಿಸುವ ಮಂತ್ರವು ಎಂದು ಭಾಷ್ಯಕಾರರು ವಿವರಿಸಿದ್ದಾರೆ. **ಸರ್ವಂ ಜುಹೋತಿ** ಎಂಬಲ್ಲಿ **ಸರ್ವ** ಶಬ್ದಾರ್ಥವೇನು ಎಂದರೆ, ವಿಶ್ವಾತ್ಮನ ವಿಭೂತಿ ವಿಶೇಷಗಳಾದ ಸಕಲವೂ ಎಂದರ್ಥ. ಅವು ಯಾವವೆಂದರೆ ;—

ಯಾವ ಆದಿಕಾರಣವಾದ ಪರಬ್ರಹ್ಮವಿದೆಯೋ ಅದೇ ಅಗ್ನಿಯು, ಅದೇ ಆದಿತ್ಯನು. ಅದೇ ವಾಯುವು ; ಅದೇ ಚಂದ್ರನು. ಅದೇ ಪ್ರಕಾಶವು, ಜಲಗಳೂ ಅದೇ. ಅದೇ ಬ್ರಹ್ಮಾಂಡವು. ಪ್ರಜಾಪತಿಯೆಂದು ಯಾವ ತತ್ತ್ವವು ನಿರ್ದಿಷ್ಟವಾಗಿರುವುದೋ ಅದೂ ಆ ಪರಬ್ರಹ್ಮವೇ ಅಲ್ಲದೆ ಬೇರೆಯಲ್ಲ.

**ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।**
**ನೈನಮೂರ್ಧ್ವಂ ನ ತಿರ್ಯಂಚಂ ನ ಮಧ್ಯೇ ಪರಿಜಗ್ರಭತ್ ॥**
(ವಾ. ಸಂ. ೩೨-೨)

ತ್ರುಟಿ, ಕಾಷ್ಠ ಮತ್ತು ಘಂಟಾ ಇತ್ಯಾದ್ಯನೇಕವಾದ ಕಾಲವಿಶೇಷಗಳೂ ಪ್ರಭಾಯುತನಾದ ಈ ಪರಮಪುರುಷನಿಂದಲೇ ಸಮುತ್ಪನ್ನವಾಗಿವೆ. ಊರ್ಧ್ವಭಾಗದಿಂದಲಾಗಲಿ, !ಮಧ್ಯಭಾಗದಿಂದಾಗಲಿ ಅಥವಾ ಇನ್ನಾವ ಕ್ರಮದಿಂದಾಗಲಿ ಅವನನ್ನು ಅರಿಯಲು ಯಾರಿಗೂ ಸಾಧ್ಯವಿಲ್ಲ. ಯಾವ ವಿಧದಲ್ಲೂ ಅವನು ಪ್ರತ್ಯಕ್ಷವಿಷಯನಲ್ಲ.

**ನ ತಸ್ಯ ಪ್ರತಿಮಾ ಅಸ್ತಿ ಯಸ್ಯ ನಾಮ ಮಹದ್ಯಶಃ ।**
**ಹಿರಣ್ಯಗರ್ಭ ಇತ್ಯೇಷ ಮಾ ಮಾ ಹಿಂಸೀದಿತ್ಯೇಷಾ ಯಸ್ಮಾನ್ನ ಜಾತ ಇತ್ಯೇಷಃ ॥**
(ವಾ. ಸಂ. ೩೨-೩)

ಮಹಾಮಹಿಮನಾದ ಈ ಪರಮಪುರುಷನಿಗೆ ಸಮಾನನಾದವನು ಯಾರೂ ಇಲ್ಲ. ಹಿರಣ್ಯಗರ್ಭನೊಬ್ಬನೇ ಸಕಲರ ಪ್ರಭುವು (೨೫-೧೦-೧೩) ಇತ್ಯಾದಿ ವಾಕ್ಯಗಳೂ **ಮಾ ಮಾ ಹಿಂಸೀಃ** (೨.೧೦-೨) ಇತ್ಯಾದಿ ವಾಕ್ಯಗಳೂ, **ಯಸ್ಮಾನ್ನ ಜಾತಃ ಪರೋ** (೮-೩೬) ಇತ್ಯಾದಿ ವಾಕ್ಯಗಳೂ ಪರಮಪುರುಷನ ಅದ್ವಿತೀಯತ್ವವನ್ನೂ, ಲೋಕಾತಿರಿಕ್ತತ್ವವನ್ನೂ, ವಿಶ್ವಪ್ರಭುತ್ವವನ್ನೂ, ಸರ್ವಾಂತರ್ಯಾಮಿತ್ವವನ್ನೂ ತಿಳಿಸುತ್ತವೆ.

**ಏಷೋ ಹ ದೇವಃ ಪ್ರದಿಶೋಽನು ಸರ್ವಾಃ ಪೂರ್ವೋ ಹ ಜಾತಃ ಸ ಉ ಗರ್ಭೇ ಅಂತಃ ।**
**ಸ ಏವ ಜಾತಃ ಸ ಜನಿಷ್ಯಮಾಣಃ ಪ್ರತ್ಯಙ್ ಜನಾಸ್ತಿಷ್ಠತಿ ಸರ್ವತೋಮುಖಃ ॥**
(ವಾ. ಸಂ. ೩೨-೪)

ಈ ಪರಮಾತ್ಮನು ಸಕಲದಿಕ್ಕುಗಳನ್ನೂ ವ್ಯಾಪಿಸಿರುತ್ತಾನೆ. ಜಗತ್ತಿಗಿಂತಲೂ ಮೊದಲು ಗರ್ಭರೂಪದಲ್ಲಿ ಅಂತರ್ಗತನಾಗಿದ್ದನು. ಹಿಂದೆ ಹುಟ್ಟಿದವನೂ ಇವನೇ, ಮುಂದೆ ಉತ್ಪನ್ನನಾಗುವನೂ ಇವನೇ. ಸಕಲವನ್ನು ವ್ಯಾಪಿಸಿ ಸ್ಥಾಪಿತನಾಗಿರುತ್ತಾನೆ. ಸರ್ವತೋಮುಖನಾಗಿದ್ದಾನೆ.

**ಯಸ್ಮಾಜ್ಜಾತಂ ನ ಪುರಾ ಕಿಂ ಚ ನೈವ ಯ ಆ ಬಭೂವ ಭುವನಾನಿ ವಿಶ್ವಾ ।**
**ಪ್ರಜಾಪತಿಃ ಪ್ರಜಯಾ ಸಗ್ಂ ರರಾಣಸ್ತ್ರೀಣಿ ಜ್ಯೋತೀಗ್ಂಷಿ ಸಚತೇ ಸ ಷೋಡಶೀ ॥**

(ವಾ. ಸಂ. ೩೨-೫)

ಈ ಪರಮಾತ್ಮನಿಗಿಂತಲೂ ಪೂರ್ವಭಾವಿಯಾಗಿ ಉತ್ಪನ್ನವಾದ ವಸ್ತುವೇ ಇಲ್ಲ. ಸಕಲ ವಿಶ್ವವನ್ನೂ ಇವನೊಬ್ಬನೇ ವ್ಯಾಪಿಸಿದ್ದನು. ಹದಿನಾರು ಅವಯವಗಳುಳ್ಳ ಲಿಂಗಶರೀರಿಯಾದ ಪ್ರಜಾಪತಿಯು ಸೂರ್ಯ, ವಾಯು ಮತ್ತು ಅಗ್ನಿರೂಪಗಳಾದ ಮೂರು ಜ್ಯೋತಿರ್ಮಂಡಲಗಳನ್ನು ನಿಯಮಿಸುತ್ತಾನೆ.

**ಯೇನ ದ್ಯೌರುಗ್ರಾ ಪೃಥಿವೀ ಚ ದೃಢಾ ಯೇನ ಸ್ವಸ್ತಭಿತಂ ಯೇನ ನಾಕಃ ।**
**ಯೋ ಅಂತರಿಕ್ಷೇ ರಜಸೋ ವಿಮಾನಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

(ವಾ. ಸಂ. ೩೨-೬ ; ಋ. ಸಂ. ೧೦-೧೨೧-೫)

ಇದೇ ಪ್ರಜಾಪತಿಯ ಮಹತ್ತ್ವದಿಂದ ದ್ಯುಲೋಕವು ಅಧಿಕವಾದ ಬಲವನ್ನು ಹೊಂದಿದೆ. ಪೃಥ್ವಿಯು ದೃಢವಾಗಿ ಸ್ಥಾಪಿತವಾಗಿದೆ. ಅಂತರಿಕ್ಷವು ಭದ್ರವಾಗಿ ಸ್ಥಾಪಿತವಾಗಿದೆ. ಮತ್ತು ಅಂತರಿಕ್ಷಪ್ರದೇಶದ ಪೂರ್ಣಪ್ರದೇಶವು ಈ ಪರಮಾತ್ಮನ ಆಳತೆಗೆ ಮಾತ್ರ ಸಿಕ್ಕಿದೆ. ಈ ಮಹತ್ತ್ವವುಳ್ಳ ಪ್ರಜಾಪತಿಯನ್ನುದ್ದೇಶಿಸಿ ಹವಿಸ್ಸನ್ನರ್ಪಿಸೋಣ. (**ಕ** ಶಬ್ದಕ್ಕೆ ಪ್ರಜಾಪತಿಯೆಂದು ಒಂದು ವಿಧವಾಗಿ ಅರ್ಥಮಾಡಿದೆ. ಅಥವಾ **ಕಿಂ** ಶಬ್ದದಿಂದ **ಕಸ್ಮೈ** ಎಂದಾದರೆ, ಯಾವ ದೇವನನ್ನು ಉದ್ದೇಶಿಸಿ ಹವಿಸ್ಸನ್ನರ್ಪಿಸೋಣ ಎಂಬ ಪ್ರಶ್ನಾರ್ಥಕವಾದ ವಾಕ್ಯವಾಗುತ್ತದೆ. ಆಂಗ್ಲವ್ಯಾಖ್ಯಾನಕಾರರು ಎರಡನೆಯ ಅರ್ಥವನ್ನು ಹೇಳಿದ್ದಾರೆ. ಎಂದರೆ, ಅದ್ವಿತೀಯನಾದ ಪ್ರಜಾಪತಿಯನ್ನು ಬಿಟ್ಟು ಉಳಿದ ಇನ್ನಾವ ದೇವತೆಯೂ ಇವನಿಗಿಂತಲೂ ಅಧಿಕನಲ್ಲವಾದುದರಿಂದ ಇವನಲ್ಲದೆ ಬೇರಾವ ದೇವತೆಯನ್ನುದ್ದೇಶಿಸಿ ಹವಿಸ್ಸನ್ನರ್ಪಿಸೋಣ ಎಂದು ತಾತ್ಪರ್ಯ. ಭಾಷ್ಯಕಾರರ ವ್ಯಾಖ್ಯಾನವೂ ಈ ಅರ್ಥವನ್ನು ಅನುಮೋದಿಸುತ್ತದೆ. **ತಂ ವಿಹಾಯ ಕಸ್ಮೈ ದೇವಾಯ ಹವಿಷಾ ವಿಧೇಮ** ಎಂದು ಭಾಷ್ಯಕಾರರ ವಾಕ್ಯವಿರುತ್ತದೆ )

**ಯಂ ಕ್ರಂದಸೀ ಅವಸಾ ತಸ್ತಭಾನೇ ಅಭ್ಯೈಕ್ಷೇತಾಂ ಮನಸಾ ರೇಜಮಾನೇ ।**
**ಯತ್ರಾಧಿ ಸೂರ ಉದಿತೋ ವಿಭಾತಿ ಕಸ್ಮೈ ದೇವಾಯ ಹವಿಷಾ ವಿಧೇಮ ।**
**ಆಪೋ ಹ ಯದ್ಬೃಹತೀಃ । ಯಶ್ಚಿದಾಪಃ ॥**

(ವಾ. ಸಂ ೩೨-೭ ; ಋ. ಸಂ. ೧೦-೧೨೧-೬)

ಇವನ ಮಹತ್ತ್ವದಿಂದಲೇ ಭರಿಸಲ್ಪಟ್ಟ ದ್ಯಾವಾಪೃಥಿವಿಗಳೆರಡೂ ಈ ಪ್ರಜಾಪತಿಯನ್ನು ಭೀತಿಯಿಂದ ನಡಗುತ್ತ ನೋಡುತ್ತಿರುತ್ತವೆ. ಈ ಲೋಕಗಳ ಮೇಲ್ಭಾಗದಲ್ಲಿ ಸೂರ್ಯನು ಉದಯಿಸಿ ಇವನ ನಿಯಮನಕ್ಕೆ ಒಳಗಾಗಿದ್ದಾನೆ. **ಆಪೋ ಹ ಯತ್, ಯಶ್ಚಿದಾಪಃ** ಎಂಬ ಎರಡು ಮಂತ್ರಗಳ ಭಾಗಗಳು ಇಲ್ಲಿ ಉದಾಹೃತವಾಗಿದೆ. (೨೭-೫೫-೨೬) ಈ ವಾಕ್ಯಗಳ ತಾತ್ಪರ್ಯವು ಹೀಗಿರುತ್ತದೆ (ಋ. ಸಂ. ೧೦-೧೨೧-೭-೮).

ವಿಶ್ವವ್ಯಾಪಕವಾದ ಸಲಿಲವು ಈ ವಿಶ್ವಗರ್ಭವನ್ನು ಧರಿಸಿದ್ದಾಗ ಸಕಲ ದೇವತೆಗಳಿಗೂ ಪ್ರಾಣರೂಪನಾದ ಈ ಪ್ರಜಾಪತಿಯು ಉತ್ಪನ್ನನಾದನು (ಋ. ಸಂ. ೧೦-೧೨೧-೭).

ಹಿರಣ್ಯಗರ್ಭನು ಸರ್ವವ್ಯಾಪಕವಾದ ಜಲದಲ್ಲಿ ಯಜ್ಞಮೂಲವನ್ನೂ ಮತ್ತು ಸೃಷ್ಟಿಹೇತುವನ್ನೂ ಕಂಡನು. ಮತ್ತು ಸಕಲ ದೇವತೆಗಳಿಗೂ ತಾನೇ ಮೂಲನಾದನು (ಋ. ಸಂ. ೧೦-೧೨೧-೮).

ಇಂತಹ ಮಹತ್ವವುಳ್ಳ ಪ್ರಜಾಪತಿಯನ್ನುದ್ದೇಶಿಸಿ ಹವಿಸ್ಸನ್ನರ್ಪಿಸೋಣ.

**ವೇನಸ್ತತ್ಪಶ್ಯನ್ನಿಹಿತಂ ಗುಹಾ ಸದ್ಯತ್ರ ವಿಶ್ವಂ ಭವತ್ಯೇಕನೀಡಂ ।**
**ತಸ್ಮಿನ್ನಿದಗ್ಂ ಸಂ ಚ ವಿ ಚೈತಿ ಸರ್ವಗ್ಂ ಸ ಓತಃ ಪ್ರೋತಶ್ಚ ವಿಭೂಃ ಪ್ರಜಾಸು ॥**

(ವಾ. ಸಂ. ೩೨-೮)

ಪ್ರಾಜ್ಞನಾದ ತತ್ತ್ವಜ್ಞನು ರಹಸ್ಯಾತ್ಮಕವೂ ಸರ್ವಾತ್ಮಕವೂ ಆದ ಅದ್ವಿತೀಯ ತತ್ತ್ವವನ್ನು ಸಾಕ್ಷಾತ್ಕರಿಸುತ್ತಾನೆ. ಜಗತ್ತಿನ ಸಕಲ ವೈವಿಧ್ಯಗಳೂ ಇಲ್ಲೇ ಐಕ್ಯವನ್ನು ಹೊಂದುತ್ತವೆ. ಇಲ್ಲಿಂದಲೇ ಪ್ರಸರಿಸಿ ಹರಡುತ್ತವೆ. ಮತ್ತು ಓತಪ್ರೋತರೂಪದಲ್ಲಿ ಸೇರಿಕೊಂಡಿವೆಯೆಂಬ ತತ್ತ್ವವನ್ನು ಅರಿಯುತ್ತಾನೆ.

**ಪ್ರ ತದ್ವೋಚೇದಮೃತಂ ನು ವಿದ್ವಾನ್ ಗಂಧರ್ವೋ ಧಾಮ ವಿಭೃತಂ ಗುಹಾ ಸತ್ ।**
**ತ್ರೀಣಿ ಪದಾನಿ ನಿಹಿತಾ ಗುಹಾಸ್ಯ ಯಸ್ತಾನಿ ವೇದ ಸ ಪಿತುಃ ಪಿತಾಸತ್ ॥**

(ವಾ. ಸಂ. ೩೨-೯)

ರಹಸ್ಯಸ್ವರೂಪವನ್ನು ಹೊಂದಿರುವುದೂ, ಸರ್ಗಸ್ಥಿತಿಪ್ರಳಯಗಳಿಗೆ ಕಾರಣವಾಗಿರುವುದೂ, ಕಾಲತ್ರಯರೂಪವಾಗಿರುವುದೂ ಆದ ಪರತತ್ತ್ವವನ್ನು ಯಾವ ತತ್ತ್ವಜ್ಞಾನಿಯು ಅರಿಯುವನೋ ಅವನು ಚತುರ್ಮುಖಬ್ರಹ್ಮನಿಗಿಂತಲೂ ಅಧಿಕವಾದ ಪರಬ್ರಹ್ಮನ ಸ್ವರೂಪವನ್ನೇ ಹೊಂದುತ್ತಾನೆ.

**ಸ ನೋ ಬಂಧುರ್ಜನಿತಾ ಸ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।**
**ಯತ್ರ ದೇವಾ ಅಮೃತಮಾನಶಾನಾಸ್ತೃತೀಯೇ ಧಾಮನ್ನಧ್ಯೈರಯಂತ ॥**

(ವಾ. ಸಂ. ೩೨-೧೦)

ಅದ್ವಿತೀಯನಾದ ಈ ಪರಮಾತ್ಮನೇ ನಮ್ಮೆಲ್ಲರ ಬಂಧುವು. ನಮ್ಮ ಉತ್ಪಾದಕನು. ಯಾವ ಪರಮಾತ್ಮನ ಸನ್ನಿಧಾನದಲ್ಲಿ ಅಮೃತತತ್ವವನ್ನು ಹೊಂದಿದ ದೇವತೆಗಳೆಲ್ಲರೂ ಸ್ವತಂತ್ರರಾಗಿ ವಿಹರಿಸುವರೋ ಆ ಪರಮಾತ್ಮನು ಸಕಲ ಧರ್ಮಗಳಿಗೂ ಹೇತುಭೂತನಾಗಿರುತ್ತಾನೆ.

**ಪರೀತ್ಯ ಭೂತಾನಿ ಪರೀತ್ಯ ಲೋಕಾನ್ ಪರೀತ್ಯ ಸರ್ವಾಃ ಪ್ರದಿಶೋ ದಿಶಶ್ಚ ।**
**ಉಪಸ್ಥಾಯ ಪ್ರಥಮಜಾಮೃತಸ್ಯಾತ್ಮನಾತ್ಮಾನಮಭಿ ಸಂವಿವೇಶ ॥**

(ವಾ. ಸಂ. ೩೨-೧೧)

ಉತ್ಪನ್ನವಾದ ಸಕಲ ಭೂತಗಳನ್ನು ಆವರಿಸುತ್ತಲೂ, ಸಕಲ ಲೋಕಗಳನ್ನೂ ಸಕಲ ದಿಕ್ಕುಗಳನ್ನೂ ಅವಾಂತರ ದಿಕ್ಕುಗಳನ್ನೂ ವ್ಯಾಪಿಸುತ್ತಲೂ, ಆದಿಯಲ್ಲೇ ಸೃಷ್ಟವಾದ ತ್ರಯೀರೂಪದ ತತ್ತ್ವವನ್ನು ಆರಾಧಿಸುತ್ತಲೂ (ವೇದೋಕ್ತವಾದ ಯಜ್ಞಾದಿಕರ್ಮಗಳನ್ನು ನೆರವೇರಿಸುತ್ತಲೂ ತನ್ನ ದಿವ್ಯವಾದ ಆತ್ಮನಲ್ಲಿಯೇ ಪ್ರವೇಶಿಸಿದ್ದಾನೆ.

**ಪರಿ ದ್ಯಾವಾಪೃಥಿವೀ ಸದ್ಯ ಇತ್ವಾ ಪರಿ ಲೋಕಾನ್ ಪರಿ ದಿಶಃ ಪರಿ ಸ್ವಃ ।**
**ಋತಸ್ಯ ತಂತುಂ ವಿತತಂ ವಿಚೃತ್ಯ ತದಪಶ್ಯತ್ತದಭವತ್ತದಾಸೀತ್ ॥**

(ವಾ. ಸಂ. ೩೨-೧೨)

ದ್ಯಾವಾಪೃಥಿವಿಗಳನ್ನೆಲ್ಲ ಸುತ್ತಿ, ಲೋಕಗಳಲ್ಲಿಯೂ ಸಂಚರಿಸಿ, ಸತ್ಯಾತ್ಮಕವಾದ ಯಜ್ಞತಂತುವನ್ನು ಸಕಲ ಜಗತ್ತಿನಲ್ಲಿಯೂ ಹರಡಿ ಜಗತ್ತನ್ನೆಲ್ಲ ಕರ್ತವ್ಯಪರವಾಗುವಂತೆ ಮಾಡಿ ಕೊನೆಯಲ್ಲಿ ಪುನಃ ತನ್ನದೇ ಆದ ಸ್ವರೂಪವನ್ನು ಹೊಂದಿ ಆತ್ಮಸಾಕ್ಷಾತ್ಕಾರಮಾಡಿಕೊಂಡಿದ್ದಾನೆ.

**ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।**
**ಸನಿಂ ಮೇಧಾಮಯಾಸಿಷಗ್ಂ ಸ್ವಾಹಾ ॥**

(ವಾ. ಸಂ. ೩೨-೧೩)

ಯಜ್ಞಗೃಹಕ್ಕೆ ಪಾಲಕನೂ, ಅದ್ಭುತರೂಪವುಳ್ಳವನೂ, ಇಂದ್ರನಿಗೆ ಪ್ರೀತಿಪಾತ್ರನಾದ ಮಿತ್ರನೂ, ಇಷ್ಟಾರ್ಥಪ್ರದನೂ ಆದ ಅಗ್ನಿಯಿಂದ ನಾನು ಅತ್ಯುತ್ತಮವಾದ ಬುದ್ಧಿಯನ್ನು ಯಾಚಿಸುತ್ತೇನೆ. ಕರ್ಮಾದಿಗಳಿಗೆ ಉಪಯುಕ್ತವಾದ ಧನವನ್ನು ಯಾಚಿಸುತ್ತೇನೆ. ಆ ಮೇಧೆಯ ಸ್ವರೂಪವೇನೆಂದರೆ—

**ಯಾಂ ಮೇಧಾಂ ದೇವಗಣಾಃ ಪಿತರಶ್ಚೋಪಾಸತೇ ।**
**ತಯಾ ಮಾಮದ್ಯ ಮೇಧಯಾಗ್ನೇ ಮೇಧಾವಿನಂ ಕುರು ಸ್ವಾಹಾ ॥**

(ವಾ. ಸಂ. ೩೨-೧೪)

ಎಲೈ ಅಗ್ನಿಯೇ, ಯಾವ ಅತ್ಯುತ್ತಮವಾದ ಕರ್ಮಬುದ್ಧಿಯನ್ನು ಪಿತೃಗಳೂ ದೇವತೆಗಳೂ ಉಪಾಸಿಸುವರೋ ಆ ಯಜ್ಞಕರ್ಮಾತ್ಮಕವಾದ ಬುದ್ಧಿಯನ್ನು ನನಗೆ ಅನುಗ್ರಹಿಸು.

**ಮೇಧಾಂ ಮೇ ವರುಣೋ ದದಾತು ಮೇಧಾಮಗ್ನಿಃ ಪ್ರಜಾಪತಿಃ ।**
**ಮೇಧಾಮಿಂದ್ರಶ್ಚ ವಾಯುಶ್ಚ ಮೇಧಾಂ ಧಾತಾ ದದಾತು ಮೇ ಸ್ವಾಹಾ ॥**

(ವಾ. ಸಂ. ೩೨-೧೫)

ವರುಣನೂ, ಅಗ್ನಿಯೂ, ಪ್ರಜಾಪತಿಯೂ, ಇಂದ್ರನೂ, ವಾಯುವೂ ನನಗೆ ಕರ್ಮವಿಷಯಕವಾದ ಮೇಧೆಯನ್ನನು ಗ್ರಹಿಸಲಿ. ನನ್ನ ಈ ಆಹುತಿಯು ಉತ್ತಮವಾದ ಆಹುತಿಯಾಗಿರುವುದರಿಂದ ಶ್ರೇಷ್ಠವಾಗಿ ಹುತವಾಗಲಿ.

**ಇದಂ ಮೇ ಬ್ರಹ್ಮ ಚ ಕ್ಷತ್ರಂ ಚೋಭೇ ಶ್ರಿಯಮಶ್ನುತಾಂ ।**
**ಮಯಿ ದೇವಾ ದಧತು ಶ್ರಿಯಮುತ್ತಮಾಂ ತಸ್ಯೈ ತೇ ಸ್ವಾಹಾ ॥**

(ವಾ. ಸಂ. ೩೨-೧೬)

ನನ್ನ ಕರ್ಮಕ್ಕೆ ಫಲರೂಪವಾಗಿ ಲಭಿಸುವ ಸಂಪತ್ತನ್ನು ಸಕಲರಾದ ಬ್ರಾಹ್ಮಣರೂ ಮತ್ತು ಕ್ಷತ್ರಿಯರೂ ಅನುಭವಿಸಲಿ. ಯಜ್ಞಕರ್ಮಾಚರಣೆಯಿಂದಲೇ ಲೋಕಕಲ್ಯಾಣವಾಗುವುದರಿಂದ ಆ ಯಜ್ಞಕ್ಕೆ ಉಪಯುಕ್ತವಾದ ಸಕಲ ಸಂಪತ್ತುಗಳನ್ನು ದೇವತೆಗಳು ನನಗೆ ಒದಗಿಸಲಿ; ಎಂಬ ಈ ಮಂತ್ರಗಳು **ಸರ್ವಮೇಧದ** ಪ್ರಕರಣದಲ್ಲಿ ಪಠಿತವಾಗತಕ್ಕವೆಂದು ನಿರ್ದಿಷ್ಟವಾಗಿವೆ.

ಹೀಗೆ ವಿಶ್ವಕರ್ಮನಿಂದ ಆರಂಭಿಸಲ್ಪಟ್ಟ ಸರ್ವಮೇಧಾತ್ಮಕಯಾಗವನ್ನು ಸಕಲರೂ ಆಚರಿಸಬೇಕೆಂಬ ವಿಧಿಯಲ್ಲಿ ವಿಶ್ವಕರ್ಮನ ಸರ್ವೇಶ್ವರತ್ವವನ್ನು ಪ್ರಶಂಸಿಸಿದೆ. ಪ್ರಕೃತದಲ್ಲಿ, ಸರ್ವಮೇಧಾತ್ಮಕವಾದ ಯಜ್ಞವು ಸೃಷ್ಟಿಗೆ ಮೂಲವೆಂದು ಹೇಳಿರುವುದರಿಂದಲೂ, ಸೃಷ್ಟಿಯಲ್ಲೂ ವೈವಿಧ್ಯವಿರುವುದರಿಂದಲೂ ಆಧ್ಯಾತ್ಮಿಕದೃಷ್ಟಿಯಿಂದ ಈ ಯಜ್ಞದ ಸ್ವರೂಪವನ್ನು ಬೃಹದಾರಣ್ಯಕದಲ್ಲಿ ಈ ರೀತಿ ತಿಳಿಸಿರುತ್ತದೆ. ವಿಶ್ವದಲ್ಲಿ ಸಮಸ್ತವಾದ ಸೃಷ್ಟಿಗೂ ಯಜ್ಞಾಗ್ನಿಯೇ ಮೂಲವೆಂದು ಇದರಿಂದ ತಿಳಿಯುತ್ತದೆ. ಈ ಪ್ರಕರಣವನ್ನು ಸರ್ವಮೇಧವೆಂದುಕರೆಯದೆ ಇದ್ದರೂ, ಸರ್ವಮೇಧದ ವರ್ಣನೆಗಳೆಲ್ಲವೂ ಈ ಪ್ರಕರಣದಲ್ಲಿರುತ್ತವೆ. ಹೇಗೆಂದರೆ—

**ಅಸೌ ವೈ ಲೋಕೋಽಗ್ನಿರ್ಗೌತಮ ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿರ್ದಿ-**
**ಶೋಽಂಗಾರಾ ಅವಾಂತರದಿಶೋ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ**
**ಜುಹ್ವತಿ ತಸ್ಯಾ ಆಹುತ್ಯೈ ಸೋಮೋ ರಾಜಾ ಸಂಭವತಿ ।**

(ಬೃ. ಉ. ೬-೨-೯)

ಅಂತರಿಕ್ಷಲೋಕವೇ ಯಜ್ಞಾಗ್ನಿಯು, ಆದಿತ್ಯನೇ ಸಮಿತ್ತು. ಆದಿತ್ಯನ ರಶ್ಮಿಗಳೇ ಧೂಮಗಳು. ಹಗಲೇ ಜ್ವಾಲೆಯು. ಅಂತರಿಕ್ಷದಿಕ್ಕುಗಳೇ ಅಂಗಾರಗಳು. ಅವಾಂತರ ದಿಕ್ಕುಗಳೇ ಕಿಡಿಗಳು. ಈ ಯಜ್ಞಾಗ್ನಿಯಲ್ಲಿ ದೇವತೆಗಳು ಶ್ರದ್ಧಾ ರೂಪದ ಆಹುತಿಯನ್ನರ್ಪಿಸುತ್ತಾರೆ. ಇದರ ಫಲವಾಗಿ ಸೋಮರಾಜನು ಉತ್ಪನ್ನನಾಗುತ್ತಾನೆ.

**ಪರ್ಜನ್ಯೋ ವಾ ಅಗ್ನಿರ್ಗೌತಮ; ತಸ್ಯ ಸಂವತ್ಸರ ಏವ ಸಮಿತ್, ಅಭ್ರಾಣಿ ಧೂಮಃ,**
**ವಿದ್ಯುದರ್ಚಿಃ, ಅಶನಿರಂಗಾರಾಃ, ಹ್ರಾದುನಯೋ ವಿಸ್ಫುಲಿಂಗಾಃ ತಸ್ಮಿನ್ನೇತಸ್ಮಿನ್ನಗ್ನೌ**
**ದೇವಾಃ ಸೋಮಂ ರಾಜಾನಂ ಜುಹ್ವತಿ; ತಸ್ಯಾ ಆಹುತ್ಯೈ ವೃಷ್ಟಿಃ ಸಂಭವತಿ ।**

(ಬೃ. ಉ. ೬-೨-೧೦)

ಪರ್ಜನ್ಯನೇ ಅಗ್ನಿಯು; ಸಂವತ್ಸರವೇ ಸಮಿತ್ತು, ಮೋಡಗಳೇ ಹೊಗೆಗಳು, ವಿದ್ಯುತ್ತೇ (ಮಿಂಚು) ಜ್ವಾಲೆಯು, ಸಿಡಿಲೇ ಅಂಗಾರಗಳು (ಇದ್ದಿಲು) ಗುಡುಗೇ ಕಿಡಿಗಳು. ದೇವತೆಗಳು ಈ ಅಗ್ನಿಯಲ್ಲಿ ಸೋಮರಾಜನನ್ನು ಆಹುತಿ ರೂಪದಲ್ಲಿ ಅರ್ಪಿಸುತ್ತಾರೆ. ಈ ಯಜ್ಞದ ಫಲವಾಗಿ ವೃಷ್ಟಿಯು ಉತ್ಪನ್ನವಾಗುತ್ತದೆ. (ಅಂತರಿಕ್ಷದಿಂದ ಸೋಮ ; ಸೋಮನಿಂದ ವೃಷ್ಟಿ) ಈ ಎರಡು ತತ್ತ್ವಗಳ ಉತ್ಪತ್ತ್ಯನಂತರ ;

**ಅಯಂ ವೈ ಲೋಕೋಽಗ್ನಿರ್ಗೌತಮ ; ತಸ್ಯ ಪೃಥಿವ್ಯೇವ ಸಮಿತ್, ಅಗ್ನಿರ್ಧೂಮಃ,**
**ರಾತ್ರಿರರ್ಚಿಃ ಚಂದ್ರಮಾ ಅಂಗಾರಾಃ, ನಕ್ಷತ್ರಾಣಿ ವಿಸ್ಫುಲಿಂಗಾಃ ; ತಸ್ಮಿನ್ನೇತಸ್ಮಿನ್ನಗ್ನೌ**
**ದೇವಾ ವೃಷ್ಟಿಂ ಜುಹ್ವತಿ । ತಸ್ಯಾ ಆಹುತ್ಯಾ ಅನ್ನಂ ಸಂಭವತಿ ।**

(ಬೃ. ಉ. ೬-೨-೧೧)

ಈ ಲೋಕವೇ ಅಗ್ನಿಯು, ಪೃಥ್ವಿಯೇ ಸಮಿತ್ತು, ಅಗ್ನಿಯೇ ಧೂಮವು. ರಾತ್ರಿಯೇ ಜ್ವಾಲೆಯು ; ಚಂದ್ರನೇ ಅಂಗಾರವು; ನಕ್ಷತ್ರಗಳೇ ಕಿಡಿಗಳು. ಈ ಯಜ್ಞಾಗ್ನಿಯಲ್ಲಿ ದೇವತೆಗಳು ವೃಷ್ಟಿರೂಪವಾದ ಆಹುತಿಯನ್ನರ್ಪಿಸುತ್ತಾರೆ. ತತ್ಫಲವಾಗಿ ಅನ್ನವು ಉತ್ಪನ್ನವಾಗುತ್ತದೆ.

**ಪುರುಷೋ ವಾ ಅಗ್ನಿರ್ಗೌತಮ, ತಸ್ಯ ವ್ಯಾತ್ತಮೇವ ಸಮಿತ್, ಪ್ರಾಣೋ ಧೂಮಃ, ವಾಗರ್ಚಿಃ, ಚಕ್ಷುರಂಗಾರಾಃ, ಶ್ರೋತ್ರಂ ವಿಸ್ಫುಲಿಂಗಾಃ, ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ । ತಸ್ಯಾ ಆಹುತ್ಯೈ ರೇತಃ ಸಂಭವತಿ ॥**

(ಬೃ. ಉ. ೬-೨-೧೨)

ಪುರುಷನೇ ಯಜ್ಞಾಗ್ನಿಯು, ತೆರೆದ ಮುಖವೇ ಸಮಿತ್ತು ; ಪ್ರಾಣವೇ ಧೂಮವು, ವಾಕ್ಕೇ ಜ್ವಾಲೆಯು, ಚಕ್ಷುಸ್ಸೇ ಅಂಗಾರವು, ಕಿವಿಯೇ ಕಿಡಿಗಳು. ಈ ಯಜ್ಞಾಗ್ನಿಯಲ್ಲಿ ದೇವತೆಗಳು ಅನ್ನರೂಪವಾದ ಆಹುತಿಯನ್ನರ್ಪಿಸುತ್ತಾರೆ. ಈ ಆಹುತಿಯ ಫಲವಾಗಿ ರೇತಸ್ಸು ಉತ್ಪನ್ನವಾಗುತ್ತದೆ.

**ಅಥೈನಮಗ್ನಯೇ ಹರಂತಿ, ತಸ್ಯಾಗ್ನಿರೇವಾಗ್ನಿರ್ಭವತಿ । ಸಮಿತ್ಸಮಿತ್ . ಧೂಮೋ ಧೂಮಃ, ಅರ್ಚಿರರ್ಚಿಃ, ಅಂಗಾರಾ ಅಂಗಾರಾಃ, ವಿಸ್ಫುಲಿಂಗಾ ವಿಸ್ಫುಲಿಂಗಾಃ, ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಪುರುಷಂ ಜುಹ್ವತಿ, ತಸ್ಯಾ ಆಹುತ್ಯೈ ಪುರುಷೋ ಭಾಸ್ವರವರ್ಣಃ ಸಂಭವತಿ ॥**

(ಬೃ. ಉ. ೬-೨-೧೪)

ಅನಂತರ (ಪುರುಷನು ಮೃತನಾದನಂತರ)ಅವನನ್ನು ಅಗ್ನಿಗೆ ಅರ್ಪಿಸುತ್ತಾರೆ. ಇದು ಸಾಕ್ಷಾದಗ್ನಿಯಾದುದರಿಂದ ಸಮಿತ್ತೇ ಸಮಿತ್ತು ಮತ್ತು ಧೂಮ, ಜ್ವಾಲೆ, ಅಂಗಾರ, ಕಿಡಿಗಳು ಎಲ್ಲವೂ ಅದಕ್ಕೆ ಸಹಜವಾಗಿಯೇ ಇರುತ್ತದೆ. ಈ ಅಗ್ನಿಯಲ್ಲಿ ದೇವತೆಗಳು ಪುರುಷನನ್ನು ಅರ್ಪಿಸುತ್ತಾರೆ. ಇದರ ಫಲವಾಗಿ ತೇಜೋಯುತನಾದ ಪುರುಷನು ಉತ್ಪನ್ನನಾಗುತ್ತಾನೆ.

ಈ ರೀತಿ, ಸಕಲ ವಿಶ್ವವೂ ಯಜ್ಞಮಯವಾಗಿಯೇ ಇರುತ್ತದೆ ಎಂದೂ, ಪ್ರತಿಯೊಂದು ಯಜ್ಞದ ಫಲವಾಗಿಯೂ ಒಂದೊಂದು ಹೊಸಸೃಷ್ಟಿಯು ಸಂಭವಿಸುತ್ತದೆಯೆಂದೂ ಸೃಷ್ಟಿಯ ಯಜ್ಞಮೂಲತ್ವವು ವರ್ಣಿತವಾಗಿರುತ್ತದೆ. ಸೃಷ್ಟಿಗೆ ಯಜ್ಞವೇ ಹೇತುವು. ಪುನಃ ಸೃಷ್ಟವಾದ ಸಕಲ ವಸ್ತುಗಳೂ ಪುನಃ ಯಜ್ಞಕ್ಕೆ ಆಹುತಿಯು ; ಪುನಃ ಸೃಷ್ಟಿ. ಹೀಗೆ ಈ ಸರ್ವಮೇಧತತ್ತ್ವವು ವಿಶ್ವದ ಐಕ್ಯವನ್ನೂ ಈ ಐಕ್ಯದ ನೆಲೆಯು ಪರಮಾತ್ಮನೆಂಬ ಬೃಹತ್ತತ್ತ್ವವನ್ನೂ ತಿಳಿಸುತ್ತದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮನೆಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದು ಕರೆದಿವೆ. ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ವಿಶ್ವಸೃಷ್ಟಿಯು ಪ್ರಜಾಪತಿಯ ಸರ್ವಮೇಧದರೂಪದ ತಪಸ್ಸಿನ ಫಲ. ಜಗತ್ಕಾರಣನೂ, ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನೂ ಆಗಿದ್ದ ಪ್ರಜಾಪತಿಯು ಸೃಷ್ಟಿಸಾಧನವಾದ ಯಜ್ಞವನ್ನು ನಿರ್ವಹಿಸಬೇಕಾದರೆ ಅದಕ್ಕೆ ತನ್ನನ್ನೇ ಎಂದರೆ ಸಕಲ ವಿಶ್ವವನ್ನೂ ಒಳಗೊಂಡ ತನ್ನ ಪೂರ್ಣರೂಪವನ್ನೇ ಆಹುತಿಯನ್ನಾಗಿ ಅರ್ಪಿಸಬೇಕಾಯಿತು. ಇದನ್ನೇ ಋಕ್ಸಂಹಿತೆಯಲ್ಲಿಯೂ ವರ್ಣಿಸುತ್ತಾ—

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।**
**ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

(ಋ. ಸಂ. ೧೦-೧೨-೧-೨)

ಇತ್ಯಾದಿಯಾಗಿ ವರ್ಣಿತವಾಗಿರುವಂತೆ ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಪ್ರಜಾಪತಿಯು ಸೃಷ್ಟಿಕಾರ್ಯವನ್ನು ನಿರ್ವಹಿಸಿದನು. ಅವನ ಆಜ್ಞೆಯನ್ನೇ ದೇವಾದಿಗಳೆಲ್ಲರೂ ನಿರ್ವಹಿಸುತ್ತಾರೆ. ಮೃತ್ಯುವೂ ಅಮೃತತ್ವವೂ ಆ

ಪ್ರಜಾಪತಿಯ ಛಾಯೆಗಳು. ಅಂತಹ ವಿಶ್ವಹೇತುವಾದ ಪ್ರಜಾಪತಿಗೆ ನಾವೂ ಸಹ ಯಜ್ಞಾದಿಕರ್ಮಗಳನ್ನಾಚರಿಸಿ ಪುರೋಡಾಶಾದಿಗಳಿಂದ ಆರಾಧಿಸೋಣ ಎಂದು ಯಜ್ಞದ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಇದೇ ವಿಶ್ವಯಜ್ಞವು ಸೃಷ್ಟಿ ಸ್ಥಿತಿ ಮತ್ತು ಲಯಗಳಿಗೆಲ್ಲ ಮೂಲವೆಂದೂ ಶ್ರೇಯಸ್ಸಿಗೆ ಸಾಧಕವೆಂದೂ ಸಹ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಅಥ ದೇವಾಃ । ಅನ್ಯೋನ್ಯಸ್ಮಿನ್ನೇವ ಜುಹ್ವತಶ್ಚೇರುಸ್ತೇಭ್ಯಃ ಪ್ರಜಾಪತಿರಾತ್ಮಾನಂ ಪ್ರದದೌ ಯಜ್ಞೋ ಹೈಷಾಮಾಸ ಯಜ್ಞೋ ಹಿ ದೇವಾನಾಮನ್ನಂ ॥**

(ಶ. ಬ್ರಾ. ೧೧-೧-೮-೨)

ದೇವತೆಗಳು ಯಜ್ಞವನ್ನಾಚರಿಸಿ ಪರಸ್ಪರ ಪೋಷಕವಾದ ಆಹುತಿಗಳನ್ನರ್ಪಿಸಿದರು. ಆಗ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನು. ಆಗ ಅದೇ ಸರ್ವಮೇಧವಾಯಿತು. ಆ ಸರ್ವಮೇಧವೇ ಪುನಃ ದೇವತೆಗಳ ಸ್ವತ್ತಾಯಿತು. ಆದುದರಿಂದಲೇ ಯಜ್ಞವನ್ನು ದೇವತೆಗಳ ಅನ್ನವೆಂದು (ಎಂದರೆ ಅನ್ನಕ್ಕೆ ಸಾಧಕವೆಂದು) ಕರೆಯುತ್ತಾರೆ. ಅಲ್ಲದೆ,

**ಸ ಏತೇನ ಯಜ್ಞೇನ ದೇವೇಭ್ಯ ಆತ್ಮಾನಂ ನಿರಕ್ರೀಣೀತ ಸ ಯದ್ವ್ರತಮುಪೈತಿ ಯಥೈವ ತತ್ಪ್ರಜಾಪತಿರ್ದೇವೇಭ್ಯ ಆತ್ಮಾನಂ ಪ್ರಾಯಚ್ಛತ್ ।**

(ಶ. ಬ್ರಾ. ೧೧-೧-೮-೩)

ದೇವತೆಗಳ ಯಜ್ಞದಿಂದ ತೃಪ್ತನಾದ ಪ್ರಜಾಪತಿಯು ಅವರಿಗೆ ಪುನಃ ತನ್ನನ್ನೇ ಅರ್ಪಿಸಿದನಂತರ ಯಜ್ಞಪ್ರತಿನಿಧಿಯಾದ ತನ್ನ ಪ್ರತಿರೂಪವನ್ನು ಪುನಃ ಸೃಜಿಸಿದನು. ಈ ರೀತಿ ಯಜ್ಞಾರ್ಥವಾಗಿ ತನ್ನ ಪ್ರತಿರೂಪವನ್ನು ಸೃಜಿಸಿ ಯಜ್ಞವನ್ನು ಪ್ರತಿಬಿಂಬಿಸಿದುದರಿಂದ ತತ್ತ್ವವೇತ್ತರು ಪ್ರಜಾಪತಿಯನ್ನೇ ಯಜ್ಞವೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ. ಈ ವಿಷಯವನ್ನು ಹಿಂದೆ ವಿವರಿಸಿ ತಿಳಿಸಿದೆ.

೨

ಮೇಲೆ ವರ್ಣಿತವಾದಸರ್ವಮೇಧದಿಂದ (ಅಥವಾ ಪುರುಷಮೇಧದ ಫಲವಾಗಿ) ಪೃಷದಾಜ್ಯವು ಸಂಪಾದಿತವಾಯಿತೆಂದು ತಿಳಿಸಿದೆ. ಯಜ್ಞಸಂಪಾದನೆಗೆ ಆಜ್ಯವೇ ಮುಖ್ಯವಾದ ಸಾಧನ. ಈ ಮುಖ್ಯಸಾಧನವೇ ಯಜ್ಞದಿಂದ ಉತ್ಪನ್ನವಾಗಿದೆಯೆಂದು ತಿಳಿಸಿದೆ. ಯಜ್ಞದಲ್ಲಿ ಆಜ್ಯದ ಮಹತ್ತ್ವವೇನು ಎಂಬುದನ್ನು ಈ ರೀತಿ ತಿಳಿಸಿದೆ.

**ದೇವರಥೋ ವಾ ಏಷ ಯದ್ಯಜ್ಞಸ್ತಸ್ಯೈತಾವಂತೌ ರಶ್ಮೀ ಯದಾಜ್ಯಪ್ರಉಗೇ ತದ್ಯದಾಜ್ಯೇನ ಪವಮಾನಮನುಶಂಸತಿ ಪ್ರಉಗೇಣಾಜ್ಯಂ ॥**

(ಐ. ಬ್ರಾ. ೨-೩೭)

ಯಜ್ಞವೇ ದೇವತೆಗಳ ರಥವು. ಆಜ್ಯ ಮತ್ತು ಪ್ರಉಗವು ಈ ರಥದ ಅಂತರ್ನಿಯಾಮಕವಾದ ಕಡಿವಾಣಗಳು, ಎಂದರೆ ಯಜ್ಞದ ನಿರ್ವಹಣಕ್ಕೆ ಅತ್ಯುತ್ತಮವಾದ ಸಾಧನವೆಂದು ತಾತ್ಪರ್ಯ. ಆದುದರಿಂದಲೇ, ದೇವತೆಗಳು ಈ ರಹಸ್ಯವನ್ನರಿತು ಯಜ್ಞಕ್ಕೆ ಆಜ್ಯದ ಸ್ಥಾನವನ್ನು ಕಲ್ಪಿಸಿದರು. ಇವರ ಮಹತ್ವ ಮತ್ತು ಫಲಗಳೇನೆಂದರೆ ;—

**ತಸ್ಮಾದಾಜ್ಯಸ್ಯೈವ ಯಜೇದಾಜ್ಯಗ್ಂ ಹ ವಾ ಅನಯೋರ್ದ್ಯಾವಾಪೃಥಿವ್ಯೋಃ ಪ್ರತ್ಯಕ್ಷಗ್ಂ ರಸಸ್ತತ್ಪ್ರತ್ಯಕ್ಷಮೇವೈನೇ ಏತೇತ್ ಸ್ವೇನ ರಸೇನ ಮೇಧೇನ ಪ್ರೀಣಾತಿ ತಸ್ಮಾದಾಜ್ಯಸ್ಯೈವ ಯಜೇತ್ ।**

(ಶ. ಬ್ರಾ. ೨-೪-೩-೧೦)

ಆಜ್ಯವೇ ದ್ಯಾವಾಪೃಥಿಗಳೆರಡಕ್ಕೂ ಬಲದಾಯಕವಾದ ಉತ್ತಮವಾದ ರಸವು. ಆದುದರಿಂದ ಆಜ್ಯಾಹುತಿಯನ್ನು ಅರ್ಪಿಸುವವನು ದ್ಯಾವಾಪೃಥಿವಿಗಳ ತಮ್ಮ ತಮ್ಮ ರಸಗಳನ್ನೇ ಅರ್ಪಿಸುವುದರಿಂದ ಅವಕ್ಕೆ ತೃಪ್ತಿಯನ್ನುಂಟು ಮಾಡುತ್ತಾನೆ. ಆದುದರಿಂದ ಆಜ್ಯವಿಲ್ಲದೇ ಇನ್ನಾವ ಆಹುತಿಯೂ ವಿಹಿತವಲ್ಲ.

**ಏತೇನ ವೈ ದೇವಾಃ ಯಜ್ಞೇನೇಷ್ಟ್ವಾ ಉಭಯೀನಾಮೋಷಧೀನಾಂ ಯಾಶ್ಚ ಮನುಷ್ಯಾ ಉಪಜೀವಂತಿ ಯಾಶ್ಚ ಪಶವಃ ಕೃತ್ಯಾಮಿವ ತ್ವದ್ವಿಷಮಿವ ತ್ವದಪಜಘ್ನುಸ್ತತ ಅಶ್ನನ್ಮನುಷ್ಯಾ ಆಲಿಶಂತ ಪಶವಃ ॥**

(ಶ. ಬ್ರಾ. ೨-೪.೩.೧೧)

ಈ ಆಜ್ಯಾಹುತಿಯ ಅರ್ಪಣೆಯಿಂದ ದೇವತೆಗಳು ಯಜ್ಞವನ್ನು ಆಚರಿಸಿದುದರಿಂದಲೇ, ಪಶುಗಳಃ ಭಕ್ಷಿಸುವ ಓಷಧಿಗಳಿಂದಲೂ, ಮಾನವರಿಗೆ ಆಹಾರವಾದ ಓಷಧಿಗಳಿಂದಲೂ ಸಹ ವಿಷವನ್ನು ನಾಶಮಾಡಿದರು. ಇದರ ಫಲವಾಗಿ ಮಾನವರೂ ಮತ್ತು ಪಶುಗಳೂ ಸಹ ತಮ್ಮ ಆಹಾರವನ್ನು ಸುಖವಾಗಿ ಭಕ್ಷಿಸಲು ಅವಕಾಶವಾಯತು ಎಂದು ಆಜ್ಯಾಹುತಿಯಿಂದ ಲಭಿಸುವ ಲೋಕಕ್ಷೇಮವನ್ನು ವರ್ಣಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ (೧೦-೯೦-೮) ಪೃಷದಾಜ್ಯವು ಪ್ರಶಂಸಿತವಾಗಿದೆ. ದಧಿಮಿಶ್ರಿತವಾದ ಆಜ್ಯವೆಂದು ಭಾಷ್ಯಕಾರರು ತಾತ್ಪರ್ಯವನ್ನು ಹೇಳಿದ್ದಾರೆ. ಯಾಗದಲ್ಲಿ ದಧಿಯ ಸ್ಥಾನವೇನು, ಆಜ್ಯದ ಸ್ಥಾನವೇನು ಮತ್ತು ಇವೆರಡರ ಪ್ರಭಾವವೇನು ಎಂಬ ವಿಷಯವನ್ನು ಶತಪಥಬ್ರಾಹ್ಮಣದಲ್ಲಿ ತಿಳಿಸುವಾಗ ದ್ಯಾವಾಪೃಥಿವಿಗಳಿಗೂ ಪೃಷದಾಜ್ಯಕ್ಕೂ ಇರುವ ಸಂಬಂಧವನ್ನೂ ಮತ್ತು ದ್ಯಾವಾಪೃಥಿವಿಗಳೆರಡಕ್ಕೂ ಸಂಬಂಧಿಸಿದ ಯಜ್ಞದಲ್ಲಿ ಇವುಗಳ ಉಪಯುಕ್ತತೆಯನ್ನೂ ಸ್ತುತಿಸಿದೆ.

**ಕೂರ್ಮಮುಪದಧಾತಿ । .... ...... ......। ತಸ್ಯ ಯದಧರಂ ಕಪಾಲಂ । ಅಯಗ್ಂ ಸ ಲೋಕಸ್ತತ್ಪ್ರತಿಷ್ಠಿತಮಿವ ಭವತಿ ಪ್ರತಿಷ್ಠಿತ ಇವ ಹ್ಯಯಂ ಲೋಕೋಽಥ ಯದುತ್ತರಗ್ಂ ಸಾ ದ್ಯೌಸ್ತದ್ವ್ಯವಗೃಹೀತಾಂತಮಿವ ಭವತಿ ವ್ಯವಗೃಹೀತಾಂತೇವ ಹಿ ದ್ಯೌರಥ ಯದಂತರಾ ತದಂತರಿಕ್ಷಗ್ಂ ಸ ಏಷ ಇಮ ಇವ ಲೋಕಾ ಇಮಾನೇವೈತಲ್ಲೋಕಾನುಪದಧಾತಿ ।**

(ಶ. ಬ್ರಾ. ೭-೫-೧-೨)

ಯಜ್ಞಗರ್ಭರೂಪದಲ್ಲಿ ಪ್ರತಿಷ್ಠಾಪಿತವಾಗುವ ಕೂರ್ಮದ ಅಡಿಯ ಚಿಪ್ಪು ಪೃಥ್ವಿಯನ್ನು ಪ್ರತಿಬಿಂಬಿಸುತ್ತದೆ. ಮೇಲ್ಭಾಗದ ಚಿಪ್ಪು ದ್ಯುಲೋಕವನ್ನು ಪ್ರತಿಬಿಂಬಿಸುತ್ತದೆ. ದ್ಯುಲೋಕದ ಅಂತ್ಯಪ್ರದೇಶಗಳು ಬಾಗಿರುವಂತೆಯೇ ಈ ಚಿಪ್ಪಿನ ಕೊನೆಯ ಪ್ರದೇಶಗಳೂ ಬಾಗಿವೆ. ದ್ಯಾವಾಪೃಥಿವಿಗಳ ಮಧ್ಯಪ್ರದೇಶವೆಲ್ಲವೂ ವಾಯುವಿನಿಂದ ತುಂಬಿರುವಂತೆ ಕೂರ್ಮದ ಈ ಎರಡು ಚಿಪ್ಪುಗಳ ಮಧ್ಯಭಾಗವೂ ವಾಯುವಿನಿಂದ ತುಂಬಿರುತ್ತದೆ. ಇದನ್ನು ಸ್ಥಾಪಿಸುವುದ

ರಿಂದ ದ್ಯಾವಾಪೃಥಿವಿಗಳೆರಡಕ್ಕೂ ಸೇರಿದಂತೆ ಅವುಗಳ ಮಧ್ಯಭಾಗದಲ್ಲಿ ಯಜ್ಞವೇದಿಯನ್ನು ಸ್ಥಾಪಿಸಿದಂತೆ ಆಗುತ್ತದೆ. ಅಲ್ಲದೇ—

**ತಮಭ್ಯನಕ್ತಿ ದಧ್ನಾ ಮಧುನಾ ಘೃತೇನ ದಧಿ ಹ್ಯೇವಾಸ್ಯ ಲೋಕಸ್ಯ ರಸೋ ಘೃತಮಂತರಿಕ್ಷಸ್ಯ ಮಧ್ವಮುಷ್ಯ ಸ್ವೇನೈವೈನಮೇತದ್ರೂಪೇಣ ಸಮರ್ಧಯತ್ಯಥೋ ದಧಿ ಹ್ಯೇವಾಸ್ಯ ಲೋಕಸ್ಯ ರಸೋ ಘೃತಮಂತರಿಕ್ಷಸ್ಯ ಮಧ್ವಮುಷ್ಯ ಸ್ವೇನೈವೈನಮೇತದ್ರಸೇನ ಸಮರ್ಧಯಂತಿ ॥**

(ಶ. ಬ್ರಾ. ೭-೫-೧-೩)

ಕೂರ್ಮವನ್ನು ಸ್ಥಾಪಿಸಿದನಂತರ ಅದಕ್ಕೆ ದಧಿ, ಮಧು ಮತ್ತು ಘೃತ ಇವುಗಳ ಲೇಪವನ್ನು ಮಾಡುತ್ತಾನೆ. ಅವುಗಳಲ್ಲಿ ದಧಿಯು ಪೃಥ್ವೀರೂಪದ್ದಾಗಿದೆ. ಘೃತವು ಅಂತರಿಕ್ಷರೂಪದ್ದಾಗಿಯೂ ಮತ್ತು ಮಧುವು ದ್ಯುಲೋಕದ ರೂಪದ್ದಾಗಿಯೂ ಇರುತ್ತವೆ. ಈ ಲೋಕಗಳನ್ನೆಲ್ಲ ಪ್ರತಿಬಿಂಬಿಸುವ ಕೂರ್ಮವನ್ನು ಆಯಾ ಲೋಕಗಳ ಪ್ರತಿನಿಧಿಯಿಂದಲೇ ಲೇಪಿಸಿದಂತಾಗುತ್ತದೆ. ಅಥವಾ ದಧಿಯು ಈ ಲೋಕದ ಸಾರ, ಘೃತವು ಅಂತರಿಕ್ಷದ ಸಾರ ಮತ್ತು ಮಧುವು ದ್ಯುಲೋಕದ ಸಾರ. ಮೂರು ಲೋಕಗಳನ್ನೂ ಪ್ರತಿಬಿಂಬಿಸುವ ಕೂರ್ಮವನ್ನು ಅದರ ಪೂರ್ಣವಾದ ಸಾರದಿಂದಲೇ ತುಂಬಿಸಿದಂತಾಗುತ್ತದೆ. ಎಲ್ಲಕ್ಕಿಂತಲೂ ಅಧಿಕವಾಗಿ ವಿಶ್ವಕ್ಕೆಲ್ಲ ಸಾರವೆಂದು ಘೃತವು ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿದೆ. ಆದುದರಿಂದಲೇ ಅದಕ್ಕೆ ಯಜ್ಞದಲ್ಲಿ ಅಧಿಕವಾದ ಪ್ರಾಶಸ್ತ್ಯವಿರುತ್ತದೆ. ಹೇಗೆಂದರೆ—

**ಅಥೈನಮಭಿಜುಹೋತಿ । ಜಾಯತ ಏಷ ಏತದ್ಯಚ್ಚೀಯತೇ ಸ ಏಷ ಸರ್ವಸ್ಮಾ ಅನ್ನಾಯ ಜಾಯತೇ ಸರ್ವಸ್ಯಾ ಅಸ್ಯೈಷ ರಸೋ ಯದಾಜ್ಯಮಪಾಂ ಚ ಹ್ಯೇಷ ಓಷಧೀನಾಂ ಚ ರಸೋಽಸ್ಯೈವೈನಮೇತತ್ಸರ್ವಸ್ಯ ರಸೇನ ಪ್ರೀಣಾತಿ ಯಾವಾನು ವೈ ರಸಸ್ತಾವಾನಾತ್ಮಾನೇ-ನೈವೈನಮೇತತ್ಸರ್ವೇಣ ಪ್ರೀಣಾತಿ ಪಂಚಗೃಹೀತೇನ ಪಂಚಚಿತಿಕೋಽಗ್ನಿಃ ಪಂಚರ್ತವಃ ಸಂವತ್ಸರಃ ಸಂವತ್ಸರೋಽಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈನಮೇತದನ್ನೇನ ಪ್ರೀಣಾತಿ ॥**

(ಶ. ಬ್ರಾ. ೭-೨-೩-೪)

ಅಗ್ನಿಚಿತಿಯು ನಿರ್ಮಿತವಾದೊಡನೆಯೇ ಅಗ್ನಿಯು ಉತ್ಪನ್ನನಾಗುತ್ತಾನೆ. ಮತ್ತು ಸಕಲವಿಧವಾದ ಅನ್ನಗಳಿಗೂ ಅವನೇ ಉತ್ಪಾದಕನೂ ಆಗಿರುತ್ತಾನೆ. ಓಷಧಿಗಳಿಗೂ ಜಲಗಳಿಗೂ ರಸಭೂತವಾದ ಘೃತವೇ ವಿಶ್ವಕ್ಕೆಲ್ಲ ರಸರೂಪವಾಗಿರುತ್ತದೆ. ವಿಶ್ವದ ಚೈತನ್ಯಕ್ಕೆ ಆಧಾರಭೂತವಾಗಿರುತ್ತದೆ. ಆದುದರಿಂದ ಅಗ್ನಿಯಲ್ಲಿ ಘೃತವನ್ನು ವಿಧ್ಯುಕ್ತವಾಗಿ ಅರ್ಪಿಸುವುದರಿಂದ ವಿಶ್ವಚೈತನ್ಯಕ್ಕೆ ಆಧಾರವಾದ ರಸವನ್ನು ಅರ್ಪಿಸಿದಂತಾಗುತ್ತದೆ. ಅದೇ ಚೈತನ್ಯದ ಪ್ರಮಾಣವನ್ನು ಹೊಂದಿರುವ ಸಕಲ ವಿಶ್ವಾತ್ಮಕವಾದ ದೇಹದ ಅರ್ಪಣೆಯಿಂದಲೇ ಅಗ್ನಿಗೆ ತೃಪ್ತಿಯನ್ನುಂಟುಮಾಡಿದಂತಾಗುತ್ತದೆ. ಎಂದು ತಿಳಿಸಿ ಘೃತದ ಆಧ್ಯಾತ್ಮಿಕಸ್ವರೂಪವನ್ನು ಸಹ ಇದೇ ಸಂದರ್ಭದಲ್ಲಿ ವಿವರಿಸಿರುತ್ತೆ. ಹೇಗೆಂದರೆ—

ಅಗ್ನಿಯೇ ಸಂವತ್ಸರಾತ್ಮಕವು. ಸಂವತ್ಸರಕ್ಕೆ ಐದು ಅವಯವಗಳು ಇರುವಂತೆ (ವಸಂತಾದಿ ಋತುಗಳು) ಅಗ್ನಿಚಿತಿಗೂ ಐದು ಸಾಲುಗಳಿರುತ್ತವೆ. ಆದುದರಿಂದಲೇ ಐದು ಚಮಸಪಾತ್ರೆಗಳಿಂದ ಘೃತದ ಅರ್ಪಣೆಯಿರುತ್ತದೆ. ಈ ಐದು ಭಾಗವೂ ಅಗ್ನಿಯ ಮಹಾರೂಪದ ಐದು ಅವಯವಗಳನ್ನು ತೃಪ್ತಿಪಡಿಸುತ್ತದೆ ಎಂದು ಸಂವತ್ಸರದ ಋತ್ವಾತ್ಮಕವಾದ ಅವಯವಗಳು ಮತ್ತು ಘೃತದ ಅವಯವಗಳು ಇವೆಲ್ಲಕ್ಕೂ ಪರಸ್ಪರ ಸಂಬಂಧವನ್ನು ತಿಳಿಸುವಾಗ

ಘೃತಕ್ಕೂ ಯಜ್ಞಕ್ಕೂ ಇರುವ ನಿಕಟವಾದ ಸಂಬಂಧವನ್ನು ಪ್ರಶಂಸಿಸಿದೆ. ವಿಶ್ವಜೀವನಕ್ಕೆ ಯಜ್ಞವು ಪೋಷಕವು. ಆ ಯಜ್ಞಕ್ಕೆ ಘೃತವು ಪೋಷಕವು. ಆದುದರಿಂದಲೇ ವಿಶ್ವಾತ್ಮಕವಾದ ಸಾರವೆಂದೂ, ಸೃಷ್ಟಿ ಮತ್ತು ಪೋಷಣೆ ಎರಡಕ್ಕೂ ಮುಖ್ಯಾಧಾರವೆಂದು ಪ್ರಶಂಸಿಸಿದೆ.

**ಆಜ್ಯೇನ ಜುಹೋತಿ । ತೇಜೋ ವಾ ಆಜ್ಯಂ ತೇಜಸೈವಾಸ್ಮಿಂಸ್ತತ್ತೇಜೋ ದಧಾತ್ಯಾಜ್ಯೇನ ಜುಹೋತ್ಯೇತದ್ವೈ ದೇವಾನಾಂ ಪ್ರಿಯಂ ಧಾಮ ಯದಾಜ್ಯಂ ಪ್ರಿಯೇಣೈವೈನಾನ್ಧಾಮ್ನಾ ಸಮರ್ಧಯತಿ ॥**

(ಶ. ಬ್ರಾ. ೧೩.೨-೧-೨)

ಘೃತವೇ ವಿಶ್ವಕ್ಕೆಲ್ಲ ತೇಜಸ್ಸನ್ನುಂಟುಮಾಡುವ ಶಕ್ತಿಯಾಗಿದೆ. ಅದೇ ತೇಜೋಮಯವಾಗಿದೆ. ತೇಜಸ್ಸಿನಿಂದಲೇ ಯಜಮಾನನಲ್ಲಿ ತೇಜಸ್ಸನ್ನು ಸ್ಥಾಪಿಸುತ್ತದೆ. ಇದೇ ತೇಜೋಮಯವಾದ ಘೃತವು ದೇವತೆಗಳಿಗೆಲ್ಲ ಅತ್ಯಂತ ಪ್ರೀತಿಕರವಾದ ಆಶ್ರಯವಾಗಿದೆ. ಆದುದರಿಂದಲೇ ಯಜ್ಞಕ್ಕೂ ಘೃತಕ್ಕೂ ಅತ್ಯತಿಶಯವಾದ ಸಂಬಂಧವಿರುತ್ತದೆ. ಅಲ್ಲದೆ,

**ಆ ತ್ವಾ ಜಿಘರ್ಮಿ ಮನಸಾ ಘೃತೇನೇತಿ । ಆ ತ್ವಾ ಜುಹೋಮಿ ಮನಸಾ ಚ ಘೃತೇನ ಚೇತ್ಯೇತತ್ಪ್ರತಿಕ್ಷಿಯಂತಂ ಭುವಾನಿ ವಿಶ್ವೇತಿ ಪ್ರತ್ಯಙ್ಹ್ಯೇಷ ಸರ್ವಾಣಿ ಭುವನಾನಿ ಕ್ಷಿಯತಿ । .... .... .... .... .... .... । ಧ್ವಾಭ್ಯಾಮಭಿಜುಹೋತಿ । ದ್ವಿಪಾದ್ಯಜಮಾನೋ ಯಜಮಾನೋಽಗ್ನಿರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈನಮೇತದ್ರೇತೋ ಭೂತಗ್ಂ ಸಿಂಚತಿ ॥**

(ಶ. ಬ್ರಾ. ೭-೩-೩-೨೧)

ಧ್ಯಾನಾತ್ಮಕವಾದ ಮನಸ್ಸಿನಿಂದ ಘೃತವನ್ನು ಅರ್ಪಿಸುತ್ತೇನೆ ಎಂಬುದೇ ಯಜಮಾನನ ಸಂಕಲ್ಪ. ಯಜಮಾನನು ಎರಡು ಪಾದಗಳುಳ್ಳವನು. ಯಜಮಾನನೂ ಅಗ್ನಿರೂಪನೇ ಆಗಿದ್ದಾನೆ. ಇದರ ಪ್ರಮಾಣಕ್ಕನುಗುಣವಾಗಿ ಎರಡು ಪಾತ್ರೆಗಳಿಂದ ಆಹುತಿಯನ್ನು ಅರ್ಪಿಸುತ್ತಾನೆ. ಈ ರೀತಿ ಯಜ್ಞಾಗ್ನಿಯಲ್ಲಿ ಘೃತರೂಪವಾದ ಆಹುತಿಗಳನ್ನರ್ಪಿಸುವುದರಿಂದ ವಿಶ್ವಸೃಷ್ಟಿಗೆ ಹೇತುವಾದ ಬೀಜವನ್ನೇ ಅರ್ಪಿಸಿದಂತಾಯಿತು ಎಂದು ಯಜ್ಞ, ಸೃಷ್ಟಿ ಮತ್ತು ಘೃತ ಇವುಗಳ ಪರಸ್ಪರಸಂಬಂಧವನ್ನು ತಿಳಿಸಿದೆ.

ಯಜ್ಞದಿಂದ ಪಶ್ವಾದಿಗಳಿಗೆ ಅನ್ನವು ಲಭಿಸಿ ತತ್ಫಲವಾಗಿ ಪೃಷದಾಜ್ಯದ ಉತ್ಪತ್ತಿ, ಪುನಃ ಪೃಷದಾಜ್ಯದ ಅರ್ಪಣೆಯಿಂದ ಯಜ್ಞಾಚರಣೆ, ಈ ರೀತಿ ವಿಶ್ವದ ಸೃಷ್ಟಿ ಮತ್ತು ಸ್ಥಿತಿಕಾರ್ಯಗಳಿಗೆ ಅತ್ಯುಪಯುಕ್ತವಾದ ಯಜ್ಞ ಮತ್ತು ಘೃತಗಳ ಅನ್ಯೋನ್ಯಾಶ್ರಯವು ತಿಳಿಸಲ್ಪಟ್ಟಿದೆ.

೩

ಸರ್ವಾತ್ಮಕವಾದ ಈ ಯಜ್ಞದಿಂದ ವಾಯುದೇವತಾಕವಾದ ಪಶುಗಳನ್ನೂ ಉಳಿದ ಗ್ರಾಮ್ಯ ಮತ್ತು ಆರಣ್ಯಕವಾದ ಪಶುಗಳನ್ನೂ ಪ್ರಜಾಪತಿಯು ಉತ್ಪನ್ನಮಾಡಿದನು ಎಂದು ಈ ಮಂತ್ರದ ಉತ್ತರಾರ್ಧವು ತಿಳಿಸುತ್ತದೆ.(ವಾಯವ್ಯಾನ್ ಎಂಬುದಕ್ಕೆ ಅಂತರಿಕ್ಷದಲ್ಲಿ ಸಂಚರಿಸುವ ಪಕ್ಷಿಗಳೆಂದು ಪ್ರತಿಪದಾರ್ಥದಲ್ಲಿ ತಿಳಿಸಿದೆ. ಈ ಅರ್ಥವೂ ಸಾಧ್ಯ.

ಆದರೆ ವಾಯುದೇವತಾಕವಾದ ಪಶುಗಳು ಎಂಬ ತಾತ್ಪರ್ಯವೂ ರೂಢಿಯಲ್ಲಿರುವುದರಿಂದ ಈ ವಿಶೇಷಣದ ತಾತ್ಪರ್ಯ ವೇನು ಎಂಬುದನ್ನು ಇಲ್ಲಿ ಸಂಗ್ರಹವಾಗಿ ತಿಳಿಸಿ ೧೦ನೇ ಋಕ್ಕಿನ ವಿಶೇಷವಿಷಯಗಳಲ್ಲಿ ಇದನ್ನು ವಿಸ್ತಾರವಾಗಿ ತಿಳಿಸಲಾಗುತ್ತದೆ.

ಆದಿತ್ಯದೇವತಾಕ ಮತ್ತು ವಾಯುದೇವತಾಕ ಎಂದು ಯಜ್ಞಪಶುಗಳು ಎರಡು ವಿಧ ಅಥವಾ ಆದಿತ್ಯ ಮತ್ತು ವಾಯು ಈ ಎರಡು ದೇವತೆಗಳೂ ಪಶುಗಳಿಗೆ ಅಧಿದೇವತೆಗಳಾಗಿರುವುದರಿಂದ ಈ ವಿಭಾಗವು ಹೇಳಲ್ಪಟ್ಟಿದೆ ಯೆಂದಾದರೂ ಹೇಳಬಹುದು. ವಾಯುದೇವತಾಕವೆಂದು ಹೇಳುವುದೇ ಅಧಿಕವಾಗಿ ರೂಢಿಯಲ್ಲಿರುತ್ತದೆ. ತೈತ್ತಿರೀಯಬ್ರಾಹ್ಮಣದಲ್ಲಿ ಈ ವಿಷಯವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ವಾಯವಸ್ಸ್ಥೇತ್ಯಾಹ । ವಾಯುರ್ವಾ ಅಂತರಿಕ್ಷಸ್ಯಾಧ್ಯಕ್ಷಾಃ । ಅಂತರಿಕ್ಷದೇವತ್ಯಾಃ ಖಲು ವೈ ಪಶವಃ । ವಾಯವ ಏವೈನಾನ್ಪರಿ ದದಾತಿ । ಪ್ರ ವಾ ಏನಾನೇತದಾಕರೋತಿ । ಯದಾಹ । ವಾಯವಸ್ಸ್ಥೇತ್ಯುಪಾಯವಸ್ಸ್ಥೇತ್ಯಾಹ । ಯಜಮಾನಾಯೈವ ಪಶೂ-ನುಪಹ್ವಯತೇ ॥**

(ತೈ. ಬ್ರಾ. ೩. ೨-೩,೪)

ವಾಯುವೇ ಅಂತರಿಕ್ಷಕ್ಕೆ ಅಧಿಪತಿಯು. ಅಂತರಿಕ್ಷಸ್ಥರಾದ ದೇವತೆಗಳೇ ಪಶುಗಳ ಅಧಿದೇವತೆಗಳು. ಆದುದರಿಂದಲೇ ವಾಯುವು ಪಶುಗಳನ್ನು ಸ್ವೀಕರಿಸುತ್ತಾನೆ. ಆದುದರಿಂದಲೇ ವಾಯುದೇವನಿಗೆ ತೃಪ್ತಿಯನ್ನುಂಟುಮಾಡುವ ಮಂತ್ರಗಳನ್ನು ಪಠಿಸಿ ಆಯಾ ಪಶುಗಳನ್ನು ಯಜ್ಞಕ್ಕಾಗಿ ಸಿದ್ಧಪಡಿಸಿಕೊಳ್ಳುತ್ತಾನೆ ಎಂದು ತಿಳಿಸಿದೆ. ಶತಪಥ ಬ್ರಾಹ್ಮಣದಲ್ಲಿ ಇದೇ ವಿಷಯವನ್ನು ಒಂದು ಇತಿಹಾಸ ರೂಪದಲ್ಲಿ ತಿಳಿಸಿದೆ. ಪ್ರಥಮದಲ್ಲಿ ಹೋತೃವು ವಾಯುವನ್ನು ಪ್ರಾರ್ಥಿಸುವಾಗ,

**ಸ ಯಾತ್ರ್ಯೈತಾಗ್ಂ ಹೋತಾ ಶಗ್ಂಸತಿ। ಏಕಯಾ ಚ ದಶಭಿಶ್ಚ ...... .... .... ...... ವಾಯು-ಪ್ರಣೇತಾ ವೈ ಪಶವಃ ಪ್ರಾಣೋ ವೈ ವಾಯುಃ ಪ್ರಾಣೇನ ಹಿ ಪಶವಶ್ಚರಂತಿ ॥**

(ಶ. ಬ್ರಾ. ೪-೪-೧-೧೫)

**ಏಕಯಾ ಚ ದಶಭಿಃ** ಎಂಬ ಮಂತ್ರದಲ್ಲಿ ವಾಯುವನ್ನೂ ಇತರ ದೇವತೆಗಳನ್ನೂ ಉದ್ದೇಶಿಸಿ ಅರ್ಪಿಸುವ ಪಶುಗಳ ಸಂಖ್ಯೆಯು ವಿಹಿತವಾಗಿದೆ. ಈ ಮಂತ್ರಗಳನ್ನು ಪಠಿಸಿ ಪಾನಪಾತ್ರೆಗಳನ್ನು ಸಡಲಿಸುವಂತೆ ವಾಯುವನ್ನು ಪ್ರಾರ್ಥಿಸಿದೆ- ಪಶುಗಳೆಲ್ಲವೂ ವಾಯುವಿನ ನಿಯಮನಕ್ಕೆ ಒಳಪಟ್ಟವು. ಪ್ರಾಣವೇ ವಾಯುವಾದುದರಿಂದ ಇವೆಲ್ಲವೂ ಪ್ರಾಣಾನಧಾವೆಂದು ಹೇಳಬೇಕು. ಈ ರೀತಿ ವಾಯುವಿನ ಪ್ರಾಧಾನ್ಯವು ನಿರ್ದಿಷ್ಟವಾಗಿದೆ. ಆದರೆ;—

**ಸ ಹ ದೇವೇಭ್ಯಃ ಪಶುಭಿರಪಚಕ್ರಾಮ । ತಂ ದೇವಾಃ ಪ್ರಾತಃಸವನೇಽನ್ವಮಂತ್ರಯಂತ ಸ ನೋಪಾವರ್ತತ ತಂ ಮಾಧ್ಯಂದಿನೇ ಸವನೇಽನ್ವಮಂತ್ರಯಂತ ಸ ಹ ನೈವೋಪಾವವರ್ತ ತಂ ತೃತೀಯಸವನೇಽನ್ವಮಂತ್ರಯಂತ ॥**

(ಶ. ಬ್ರಾ. ೪-೪.೧-೧೬)

ಒಂದು ಸಲ ವಾಯುವು ದೇವತೆಗಳನ್ನು ಬಿಟ್ಟು ತನ್ನ ಪಶುಗಳ ಸಮೇತವಾಗಿ ದೂರಪ್ರದೇಶಕ್ಕೆ ಹೊರಟುಹೋದನು. ದೇವತೆಗಳು ಅವನನ್ನು ಪ್ರಾತಃಸವನಕಾಲದಲ್ಲಿ ಕರೆದರು, ಅವನು ಹಿಂತಿರುಗಲಿಲ್ಲ. ಮಾಧ್ಯಂದಿನಸವನಕಾಲದಲ್ಲಿ ಕರೆದರು. ಆಗಲೂ ಹಿಂತಿರುಗಲಿಲ್ಲ. ಆಗ ಪುನಃ ತೃತೀಯಸವನಕಾಲದಲ್ಲಿ ಕರೆದರು. ಆಗ,

**ಸ ಹೋಽಪಾವತ್ಸ್ಯನ್ನುವಾಚ । ಯದ್ವ ಉಪಾವರ್ತೇಯ ಕಿಂ ಮೇ ತತಃ ಸ್ಯಾದಿತಿ ತ್ವಯ್ಯೇ-ವೈತಾನಿ ಪಾತ್ರಾಣಿ ಯುಜ್ಯೇರಂಸ್ತ್ವಯಾ ವಿಮುಚ್ಯೇರನ್ನಿತಿ ತದೇನೇನೈತತ್ಪಾತ್ರಾಣಿ ಯುಜ್ಯಂತೇ ತದ್ವೈಂದ್ರವಾಯವಾಗ್ರಾನ್ಪ್ರಾತಃಸವನೇ ಗೃಹ್ಣಾತ್ಯಥೈನೇನೈತತ್ಪಾತ್ರಾಣಿ ವಿಮುಚ್ಯಂತೇ ಯದಾಹ ನಿಯುದ್ಭಿರ್ವಾಯವಿಹ ತಾ ವಿಮುಂಚೇತಿ ಪಶವೋ ವೈ ನಿಯುತ-ಸ್ತತ್ಪಶುಭಿರೇವೈತತ್ಪಾತ್ರಾಣಿ ವಿಮುಚ್ಯಂತೇ ॥**

(ಶ. ಬ್ರಾ. ೪-೪-೧-೧೭)

ವಾಯುವು ಆ ಪ್ರಾರ್ಥನೆಗನುಸಾರವಾಗಿ ಹಿಂತಿರುಗಲು ಮನಸ್ಸುಮಾಡಿ ನಾನು ಹಿಂತಿರುಗಿದರೆ ನನಗೆ ಸಿಕ್ಕುವ ಪ್ರತಿಫಲವೇನು? ಎಂದು ದೇವತೆಗಳನ್ನು ಪ್ರಶ್ನಿಸಿದನು. ಈ ಪಾತ್ರೆಗಳನ್ನು ಯೋಜನಮಾಡುವುದೂ ಮತ್ತು ದೇವತೆಗಳಿಗೆ ಪಾನಮಾಡಲು ಸಹಾಯವಾಗುವಂತೆ ಸಡಲಿಸುವುದೂ ನಿನ್ನ ಅಧೀನದಲ್ಲಿರುತ್ತದೆ. ಆದುದರಿಂದಲೇ ಅಧ್ವರ್ಯುವು ಇಂದ್ರ ಮತ್ತು ವಾಯುಗಳಿಗೆ ಅರ್ಪಿಸಲು ಹಿಡಿದಾಗ ಇವು ಯೋಜಿತವಾಗಿರುತ್ತವೆ. **ನಿಯುದ್ಭಿರ್ವಾಯವಿಹ** ಎಂಬ ಮಂತ್ರವನ್ನು ಪಠಿಸಿ ವಾಯುವನ್ನು ಸ್ತುತಿಸಿದಾಗ ಅವು ಸಡಿಲವಾಗುತ್ತವೆ. **ನಿಯುತ್** ಎಂದರೆ ಪಶುಗಳು. ಈ ಪಶುಗಳ ಸಹಾಯದಿಂದ ಆ ಪಾತ್ರೆಗಳು ಸಡಿಸಲ್ಪಡುತ್ತವೆ. ಎಂದರೆ ಪಾನಾರ್ಹವಾಗುತ್ತವೆ, ಎಂದಿರುತ್ತದೆ. ಆದರೆ, ಕೆಲವೆಡೆಗಳಲ್ಲಿ ಆದಿತ್ಯನೂ ಪಶುಗಳ ಅಧಿದೇವತೆಯೆಂದೂ ಹೇಳಿದೆ. ಉದಾಹರಣೆಗೆ—

**ಅಥ ದಧಿ ಗೃಹ್ಣಾತಿ । ಆದಿತ್ಯಾನಾಂ ವೈ ತೃತೀಯಸವನಮಾದಿತ್ಯಾನ್ ವಾ ಅನು ಪಶವಸ್ತ-ತ್ಪಶುಷ್ವೇವೈತತ್ಪಯೋ ದಧಾತಿ ತದಿದಂ ಪಶುಷು ಪಯೋ ಹಿತಂ ॥**

(ಶ. ಬ್ರಾ. ೪-೩-೫-೧೪)

ಇತ್ಯಾದಿ ಸ್ಥಳಗಳಲ್ಲಿ ಆದಿತ್ಯನೇ ಪಶುಗಳ ಪಾಲಕನಾದುದರಿಂದ ಅವನೇ ಅಧಿದೇವತೆಯೆಂದು ಸ್ತುತಿಸಿದೆ. ಆದಿತ್ಯನಿಂದಲೇ ವೃಷ್ಟಿಯು. ವೃಷ್ಟಿಯಿಂದಲೇ ಅನ್ನ. ಈ ಅನ್ನದಿಂದಲೇ ಪಶುಗಳ ರಕ್ಷಣೆಯಾದುದರಿಂದ ಆದಿತ್ಯನೇ ಪಶುಸಂರಕ್ಷಕನೆಂದಾಯಿತು. ಆದುದರಿಂದ ಪಶುಗಳಿಗೆ ಆದಿತ್ಯನೇ ಅಧಿದೇವತೆ ಇತ್ಯಾದಿಯಾಗಿ ಆಯಾ ಪ್ರಕರಣಾನುಸಾರವಾಗಿ ತಿಳಿಸಿದೆ.

ಈ ಪಶುಗಳು ಎರಡು ವಿಧ. ಗ್ರಾಮ್ಯ ಮತ್ತು ಆರಣ್ಯ. ಈ ಎರಡು ವಿಧವಾದ ಪಶುಗಳೂ ಮಾನವನು ಯಜ್ಞಮಾಡಲು ಸಾಧಕವಾಗಿರುತ್ತವೆ. ಆದುದರಿಂದ ಅದೇ ಪಶುಗಳನ್ನು ಅನುಗ್ರಹಿಸಬೇಕೆಂದೂ ಯಜ್ಞಕಾಲದಲ್ಲಿ ಪ್ರಾರ್ಥಿಸಿದೆ. ಈ ಪ್ರಾರ್ಥನೆಗನುಸಾರವಾಗಿಯೇ ಅವುಗಳ ಸೃಷ್ಟಿ ಮತ್ತು ರಕ್ಷಣೆ. ಈ ಪ್ರಾರ್ಥನೆಯು ಈ ರೀತಿಯಿರುತ್ತದೆ.

**ಶ್ವೇತೋ ರಶ್ಮಿಃ ಪರಿ ಸರ್ವಂ ಬಭೂವ । ಸುವನ್ಮಹ್ಯಂ ಪಶೂನ್ ವಿಶ್ವರೂಪಾನ್ ॥**

(ತೈ. ಆ. ೩-೧೧)

ಶ್ವೇತರೂಪವಾದ ಆದಿತ್ಯರಶ್ಮಿಯು ನನಗೆ ವಿಶ್ವರೂಪಾತ್ಮಕವಾದ ಪಶುಗಳನ್ನು ಅನುಗ್ರಹಿಸಲಿ ಎಂಬ ಪ್ರಾರ್ಥನೆಯಿದೆ. ವಿಶ್ವರೂಪಾತ್ಮಕವಾದ ಪಶುಗಳೂ ಎರಡು ವಿಧ.

**ಯೇ ಗ್ರಾಮ್ಯಾಃ ಪಶವೋ ವಿಶ್ವರೂಪಾಃ | ವಿರೂಪಾಸ್ಸಂತೋಬಹುಧೈಕರೂಪಾಃ | ತೇಷಾಗ್ಂ ಸಪ್ತಾನಾಮಿಹ ರಂತಿರಸ್ತು ||**

(ತ್ರೈ. ಆ. ೩-೧೧)

**ಗೋ, ಅಶ್ವ, ಅಜ, ಅವಿ, ಪುರುಷ, ಗರ್ದಭ, ಉಷ್ಟ್ರ** ಎಂಬ ಪ್ರಭೇದಗಳಿದ್ದರೂ ಅವೆಲ್ಲವೂ ಒಂದೇ ವಿಶೇಷ ಲಕ್ಷಣವುಳ್ಳವು. ಆದುದರಿಂದ **ಏಕರೂಪಾಃ** ಎಂದಿರುತ್ತದೆ. ಎರಡನೆಯದಾಗಿ;—

**ಯ ಆರಣ್ಯಾಃ ಪಶವೋ ವಿಶ್ವರೂಪಾಃ | ವಿರೂಪಾಸ್ಸಂತೋಬಹುಧೈಕರೂಪಾಃ || ತೇಷಾಗ್ಂ ಸಪ್ತಾನಾಮಿಹ ರಂತಿರಸ್ತು ||**

(ತ್ರೈ. ಆ. ೩-೧೧)

**ದ್ವಿಖುರ, ಶ್ವಾಪದ, ಪಕ್ಷಿ, ಸರೀಸೃಪ, ಹಸ್ತಿ, ಮರ್ಕಟ, ನಾದೇಯ** (ನದಿಗೆ ಸಂಬಂಧಿಸಿದುದು) ಈ ಏಳೂ ಆರಣ್ಯಪಶುಗಳು. ಇವುಗಳೂ ಬೇರೆ ಬೇರೆ ರೂಪಗಳನ್ನು ಹೊಂದಿದ್ದರೂ ಎಲ್ಲಕ್ಕೂ ಒಂದೇ ವಿಶೇಷಗುಣವಿದೆ. ಈ ಏಳು ಪ್ರಾಣಿಗಳೊಂದಿಗೂ ನಮ್ಮ ಸುಖವು ಬೆಳೆಯಲಿ ಇತ್ಯಾದಿಯಾಗಿ ಪ್ರಾರ್ಥಿಸಿದ ಕ್ರಮವಿದೆ. ಈ ಎರಡು ಜಾತಿಯ ಪ್ರಾಣಿಗಳನ್ನು ಪ್ರಜಾಪತಿಯು ಯಜ್ಞದ ಫಲವಾಗಿ ಉತ್ಪನ್ನಮಾಡಿದನು ಎಂದು ಪ್ರಶಂಸಿಸಿದೆ. ಈ ಸಕಲಪ್ರಾಣಿಗಳ ಸೃಷ್ಟಿಕ್ರಮವೇನು ಎಂಬುದನ್ನು ಮುಂದೆ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ.—

## ಮುಖ್ಯಾಭಿಪ್ರಾಯವು

**ಸರ್ವಹುತಃ** ಎಂಬ ಶಬ್ದಕ್ಕೆ ಸಾಯಣರು— **ಸರ್ವಾತ್ಮಕಃ ಪುರುಷಃ ಯಸ್ಮಿನ್ ಯಜ್ಞೇ ಹೂಯತೇ ಸೋऽಯಂ ಸರ್ವಹುತ್ |** ಸರ್ವಾತ್ಮಕನಾದ ಪರಮಪುರುಷನು ಯಾವ ಯಜ್ಞದಲ್ಲಿ ಆಹ್ವಾನಿಸಲ್ಪಟ್ಟು ಆರಾಧಿಸಲ್ಪಡುವನೋ ಆ ಯಜ್ಞಕ್ಕೆ **ಸರ್ವಹುತ್** ಎಂದು ಹೆಸರು ಎಂದು ಅರ್ಥವಿವರಣೆಮಾಡಿದಾರೆ ಅಥವಾ ಸರ್ವವನ್ನೂ ಎಂದರೆ ಚರಾಚರಾತ್ಮಕವಾದ ಈ ಜಗತ್ತನ್ನೆಲ್ಲಾ ಒಳಗೊಂಡಿರುವ ಪರಮಾತ್ಮನನ್ನೇ ಹೋಮಸಾಧನದ್ರವ್ಯವನ್ನಾಗಿ ಭಾವಿಸಿ ದೇವತೆಗಳು ನೆರವೇರಿಸಿದ ಮಾನಸಯಜ್ಞದಿಂದ ಎಂದೂ ಅರ್ಥಮಾಡಬಹುದು. ಈ ಶಬ್ದವು ಮುಂದಿನ ಋಕ್ಕಿನಲ್ಲಿಯೂ ಪಠಿತವಾಗಿದೆ ಅಲ್ಲಿಯೂ ಇದೇ ಅರ್ಥವು.

**ಸಂಭೃತಂ ಪೃಷದಾಜ್ಯಂ**—ಪೃಷದಾಜ್ಯವೆಂದರೆ **ದಧಿಮಿಶ್ರಮಾಜ್ಯಂ** ಮೊಸರಿನಿಂದ ಮಿಶ್ರಿತವಾದ ಆಜ್ಯವು (ಘೃತವು) ಎಂಬು ಸಾಯಣರ ವಿವರಣೆಯು. **ದಧಿ** ಮತ್ತು **ಆಜ್ಯ** ಎಂಬ ಎರಡು ಪ್ರತ್ಯೇಕ ವಸ್ತುಗಳೆಂದೂ ಅರ್ಥಮಾಡಬಹುದು. ಭಟ್ಟಭಾಸ್ಕರರು ಈ ಶಬ್ದಕ್ಕೆ—

**ಪೃಷದಾಜ್ಯಂ | ಪೃಷತ್ ವಿಚಿತ್ರಂ ಆಜ್ಯಂ ಪಶ್ವಾದಿಭಾವೇನ ಪಾನೀಯಂ ಪೃಷದಾಜ್ಯಂ ಅಪಾಂ ಪರಿಣಾಮಾತ್ಮಾ ದ್ರವ್ಯವಿಶೇಷಃ | ಪಶವ್ಯಃ ಆಜ್ಯಸ್ಯೈವ ಅವಸ್ಥಾವಿಶೇಷ ಇತ್ಯೇಕೇ |**

**ಪೃಷತ್** ಎಂದರೆ ವಿಚಿತ್ರವಾದ, ಆಜ್ಯಂ—ತುಪ್ಪವು. ತುಪ್ಪವು ವಿಚಿತ್ರವಾಗಿರುವುದು ಎಂದರೇನು ? ನಾನಾವಿಧ ಪಶುಗಳ ಹಾಲಿನಲ್ಲಿ ಉತ್ಪನ್ನವಾಗುವ ತುಪ್ಪವು ನಾನಾರೀತಿಯಾಗಿರುವುದು. ಗೋವಿನ ಹಾಲಿನಿಂದ ಉತ್ಪನ್ನವಾದ ತುಪ್ಪ, ಎಮ್ಮೆಯ ಹಾಲಿನಿಂದ ಉತ್ಪನ್ನವಾದ ತುಪ್ಪ, ಆಡಿನ ಹಾಲಿನಿಂದ ಉಂಟಾದ ತುಪ್ಪ ಇತ್ಯಾದಿ ಇವುಗಳ ವರ್ಣವೂ ಗುಣಗಳೂ ವ್ಯತ್ಯಾಸವಾಗಿರುವುದರಿಂದ ವಿಚಿತ್ರ ಅಥವಾ ನಾನಾವಿಧವಾದ ಆಜ್ಯವೆಂದು ಹೇಳಿದೆ. ಅಥವಾ ಹಾಲಿನ ಅವಸ್ಥಾವಿಶೇಷಕ್ಕೆ (ಮೊಸರು) **ಪೃಷತ್** ಎಂದು ಹೇಳಬಹುದು. ಆಗ ಪೃಷದಾಜ್ಯಂ ಎಂದರೆ ದಧಿ ಮಿಶ್ರಿತವಾದ ಆಜ್ಯವೆಂದರ್ಥವಾಗುವುದು. ಇಂತಹ ಪೃಷದಾಜ್ಯರೂಪವಾದ ಹವಿರ್ದ್ರವ್ಯವು ದೇವತೆಗಳು ನೆರವೇರಿಸಿದ ಆ ಯಜ್ಞದಿಂದ ಉತ್ಪನ್ನವಾಯಿತು ಎಂದಭಿಪ್ರಾಯವು.

**ಪಶೂಂಸ್ತಾಂಶ್ಚಕ್ರೇ ವಾಯವ್ಯಾನ್**—ಹಾಗೆಯೇ ಆ ಯಜ್ಞದಿಂದ ಪ್ರಸಿದ್ಧವಾದ ಅನೇಕ ಪಶುಗಳ ಉತ್ಪತ್ತಿಯಾಯಿತು. ಇಲ್ಲಿ **ವಾಯವ್ಯಾನ್** ಎಂಬ ಶಬ್ದವು **ಪಶೂನ್** ಎಂಬ ಶಬ್ದಕ್ಕೆ ವಿಶೇಷಣವಾಗಿದೆ. ವಾಯುವಿಗೂ, ಪಶುಗಳಿಗೂ ಇರುವ ಸಂಬಂಧವೇನು, ಎಂದರೆ ಈ ವಿಷಯದಲ್ಲಿ ಭಾಷ್ಯಕಾರರು—

> **ವಾಯವಃಸ್ಥೇತ್ಯಾಹ । ವಾಯುರ್ವಾ ಅಂತರಿಕ್ಷಸ್ಯಾಧ್ಯಕ್ಷಾಃ । ಅಂತರಿಕ್ಷದೇವತ್ಯಾಃ ಖಲು ವೈ ಪಶವಃ । ವಾಯವ ಏವೈನಾನ್ಪರಿದದಾತಿ ।**
>
> (ತೈ. ಬ್ರಾ. ೩–೨–೧–೩)

ಎಂಬ ಬ್ರಾಹ್ಮಣವಾಕ್ಯವನ್ನುದಾಹರಿಸಿದಾರೆ. ಎಂದರೆ ಪಶುಗಳಿಗೆ ಅಂತರಿಕ್ಷಸ್ಥದೇವತೆಗಳೇ ಅಭಿಮಾನಿದೇವತೆಗಳು. ಅಂತರಿಕ್ಷಕ್ಕೆ ವಾಯುವೇ ಮುಖ್ಯದೇವತೆಯು ಆದ್ದರಿಂದ ಇಲ್ಲಿ **ವಾಯವ್ಯಾನ್ ಪಶೂನ್** ಎಂದು ಹೇಳಿದೆ.

**ಆರಣ್ಯಾನ್ ಗ್ರಾಮ್ಯಾನ್**—ಪಶುಗಳಲ್ಲಿ ಎರಡುವಿಧ–ಅರಣ್ಯದಲ್ಲಿ ಸ್ವೇಚ್ಛೆಯಾಗಿ ಸಂಚಾರಮಾಡಿ ಕೊಂಡಿರುವ ಜಿಂಕೆಯೇ ಮೊದಲಾದ ಪಶುಗಳಿಗೆ ಆರಣ್ಯಪಶುಗಳೆಂದೂ, ಗ್ರಾಮಾದಿಗಳಲ್ಲಿ ಮನುಷ್ಯರ ಸಹವಾಸ ದಲ್ಲಿದ್ದುಕೊಂಡು ಅವರಿಂದ ಪೋಷಿತವಾದ ಗೋವುಗಳು, ಅಶ್ವಗಳು ಮೊದಲಾದ ಪಶುಗಳಿಗೆ ಗ್ರಾಮ್ಯಪಶುಗಳೆಂದೂ ಹೇಳುವ ರೂಢಿ ಇದೆ. ಸಾಧಾರಣವಾಗಿ ವೇದಮಂತ್ರಗಳಲ್ಲಿ ಅನೇಕಕಡೆ—**ಸಪ್ತ ಗ್ರಾಮ್ಯಾಃ ಪಶವಃ ಸಪ್ತಾರಣ್ಯಾಃ** ಎಂದು ಹೇಳಿದೆ. ಗ್ರಾಮ್ಯಪಶುಗಳು ಏಳೆಂದರೆ—**ಗೋಶ್ವಾಜಾವಿಪುರುಷಗರ್ದಭೋಷ್ಟ್ರಾಃ ।** (ಭಟ್ಟ ಭಾ.) ಗೋವುಗಳು, ಅಶ್ವಗಳು, ಆಡು, ಕುರಿ, ಪುರುಷ, ಕತ್ತೆ, ಒಂಟೆ ಇವು ಏಳೂ ಗ್ರಾಮ್ಯಪಶುಗಳು. ಆರಣ್ಯಕಪಶುಗಳ ಸಂಖ್ಯೆಯು ಅತಿವಿಸ್ತಾರವಾಗಿರುವುದರಿಂದ ಅವುಗಳನ್ನೆಲ್ಲಾ ಇಲ್ಲಿ ವಿವರಿಸುವುದು ಅನಾವಶ್ಯಕವು. ತೈತ್ತಿರೀಯಸಂಹಿತೆಯ ಐದನೆಯ ಕಾಂಡದಲ್ಲಿ ಅಶ್ವಮೇಧಯಾಗದಲ್ಲಿ ಪಶುಹೋಮಕ್ಕಾಗಿ ಉಕ್ತವಾಗಿರುವ ಪಶುಗಳ ಪಟ್ಟಿಯಲ್ಲಿ 5, 6 ನೇ ಪ್ರಪಾಠಕದ ಕೊನೆಯ ೧೧–೨೪, ೧೮-೨೩ ಅನುವಾಕಗಳಲ್ಲಿ ಸುಮಾರು ೮೧ ಪಶುಗಳ ಹೆಸರುಗಳನ್ನು ಹೇಳಿದೆ.



॥ಸಂಹಿತಾಪಾಠಃ॥

ತಸ್ಮಾದ್ಯಜ್ಞಾತ್ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।

ಛಂದಾಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ೯ ॥

॥ ಪದಪಾಠಃ ॥

ತಸ್ಮಾತ್ । ಯಜ್ಞಾತ್ । ಸರ್ವऽಹುತಃ । ಋಚಃ । ಸಾಮಾನಿ । ಜಜ್ಞಿರೇ ।

ಛಂದಾಂಸಿ । ಜಜ್ಞಿರೇ । ತಸ್ಮಾತ್ । ಯಜುಃ । ತಸ್ಮಾತ್ । ಅಜಾಯತ ॥ ೯ ॥

॥ಸಾಯಣಭಾಷ್ಯಂ॥

ಸರ್ವಹುತಸ್ತಸ್ಮಾತ್ಪೂರ್ವೋಕ್ತಾದ್ಯಜ್ಞಾದೃಚಃ ಸಾಮಾನಿ ಜಜ್ಞಿರೇ । ಉತ್ಪನ್ನಾಃ । ತಸ್ಮಾದ್ಯಜ್ಞಾಚ್ಛಂದಾಂಸಿ ಗಾಯತ್ರ್ಯಾದೀನಿ ಜಜ್ಞಿರೇ । ತಸ್ಮಾದ್ಯಜ್ಞಾದ್ಯಜುರಪ್ಯಜಾಯತ ॥

॥ ಪ್ರತಿಪದಾರ್ಥ ॥

**ಸರ್ವಹುತಃ**—ಸರ್ವಾತ್ಮಕವಾದ ವಿರಾಟ್ಪುರುಷನೇ ಆಹುತಿಯಾಗಿ ಉಳ್ಳ । **ತಸ್ಮಾತ್ ಯಜ್ಞಾತ್**—ಆ ಯಜ್ಞದಿಂದ । **ಋಚಃ**—ಋಙ್ಮಂತ್ರಗಳೂ । **ಸಾಮಾನಿ**—ಸಾಮಮಂತ್ರಗಳೂ । **ಜಜ್ಞಿರೇ**—ಉತ್ಪನ್ನವಾದವು । **ತಸ್ಮಾತ್**—ಅದರಿಂದಲೇ । **ಛಂದಾಂಸಿ**—ಗಾಯತ್ರ್ಯಾದಿಛಂದಸ್ಸುಗಳೂ । **ಜಜ್ಞಿರೇ**—ಉತ್ಪನ್ನವಾದವು । **ತಸ್ಮಾತ್**—ಆ ಯಜ್ಞದಿಂದಲೇ । **ಯಜುಃ**—ಯಜುಸ್ಸೂ । **ಅಜಾಯತ**—ಉತ್ಪನ್ನವಾಯಿತು.

॥ ಭಾವಾರ್ಥ ॥

ಸರ್ವಾತ್ಮಕನಾದ ವಿರಾಟ್ಪುರುಷನೇ ಆಹುತಿಯಾಗಿ ಉಳ್ಳ ಆ ಯಜ್ಞದಿಂದಲೇ ಋಙ್ಮಂತ್ರಗಳೂ ಸಾಮಗಳೂ ಉತ್ಪನ್ನವಾದವು. ಅದರಿಂದಲೇ ಗಾಯತ್ರ್ಯಾದಿ ಛಂದಸ್ಸುಗಳೂ ಉತ್ಪನ್ನವಾದವು. ಆ ಯಜ್ಞದಿಂದಲೇ ಯಜುಸ್ಸೂ ಉತ್ಪನ್ನವಾಯಿತು.

English Translation

From that victim, in whom the universal oblation was offered, the Richas and Samans were produced ; from him the metres were born ; ftom him the Yajus was born.

॥ ವಿಶೇಷವಿಷಯಗಳು ॥

**ಸರ್ವಹುತಃ** ಎಂದರೆ ಸರ್ವಾತ್ಮಕನಾದ ಪುರುಷನನ್ನೇ ಆಹುತಿಯನ್ನಾಗಿ ಅರ್ಪಿಸಿದ ಯಾಗದಿಂದ ಎಂದ-ತಾತ್ಪರ್ಯ. ಪ್ರಕೃತದಲ್ಲಿ ಪುರುಷಮೇಧವನ್ನು ನಿರ್ದೇಶಿಸಿದೆ. ಪುರುಷಶಬ್ದದ ನಿರ್ವಚನವನ್ನು ಹಿಂದೆ ತಿಳಿಸಿದೆ

ವಿಶ್ವದಲ್ಲಿ ಯಾವ ಯಾವ ವಸ್ತುಗಳಿರುವುವೋ ಅವೆಲ್ಲವೂ ಯಜ್ಞಾತ್ಮನಾದ ಪುರುಷನಿಗೆ ಅನ್ನವು. ಆದುದರಿಂದಲೇ ಪುರುಷಮೇಧವೆಂಬ ಹೆಸರು. **ಸರ್ವಹುತಃ** ಎಂಬ ವಿಶೇಷಣದಿಂದ ವರ್ಣಿತವಾಗಿರುವ ಈ ಯಜ್ಞದಿಂದ ಋಗಾದಿ ವೇದಗಳೂ, ಗಾಯತ್ರ್ಯಾದಿಛಂದಸ್ಸುಗಳೂ ಉತ್ಪನ್ನವಾದವು ಎಂದು ಈ ಋಕ್ಕಿನಲ್ಲಿ ತಿಳಿಸಿದೆ ಯಜ್ಞಕ್ಕೂ ಪುರುಷನಿಗೂ ತಾದಾತ್ಮ್ಯವನ್ನು ಹೇಳಿ ಯಜ್ಞಾವಯವಗಳೂ ಪುರುಷನ ಅವಯವಗಳೂ ಬೇರೆ ಬೇರೆಯಲ್ಲ ಎಂಬುದನ್ನು ಶ್ರುತಿವಾಕ್ಯಗಳ ಆಧಾರದ ಮೇಲೆ ಹಿಂದೆ ತಿಳಿಸಿದೆ. ಋಗಾದಿ ವೇದಗಳಿಗೂ ಮತ್ತು ಯಜ್ಞಕ್ಕೂ ಅಥವಾ ಯಜ್ಞರೂಪನಾದ ಪುರುಷನಿಗೂ ಇರುವ ಸಂಬಂಧವೇನು ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕು. ಕೆಲವೆಡೆಗಳಲ್ಲಿ ಇವೆರಡಕ್ಕೂ ಕಾರ್ಯಕಾರಣಸಂಬಂಧವನ್ನು ತಿಳಿಸಿದೆ. ಇನ್ನು ಕೆಲವೆಡೆಗಳಲ್ಲಿ ಅವಯವ ಮತ್ತು ಅವಯವಿ ಎಂಬ ಸಂಬಂಧವನ್ನು ತಿಳಿಸಿದೆ. ಎಂದರೆ, ಋಗಾದಿಗಳು ಯಜ್ಞದ ಅಥವಾ ಯಜ್ಞರೂಪನಾದ ಪುರುಷನ ಅವಯವಗಳು ಎಂದು ತಾತ್ಪರ್ಯ.

ಋಗಾದಿವೇದಗಳಿಗೂ ಪರಮಪುರುಷನಿಗೂ ತಾದಾತ್ಮ್ಯ ಅಥವಾ ಅವಯವ ಮತ್ತು ಅವಯವಿ ಸಂಬಂಧವನ್ನು ತಿಳಿಸಿರುವ ಶ್ರುತಿವಾಕ್ಯಗಳು :—

**ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ತತ್ಸಾಮ ತದುಕ್ಥಂ ತದ್ಯಜುಸ್ತ-ದ್ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೋಷ್ಣೌ ತೌ ಗೋಷ್ಣೌ ಯನ್ನಾಮ ತನ್ನಾಮ ॥**

(ಛಾ. ಉ. ೧-೭-೫)

ಚಕ್ಷುಸ್ಸಿನ ಅಂತರಾಳದಲ್ಲಿರುವ ಈ ಪುರುಷನೇ ಋಗ್ವೇದವು, ಇವನೇ ಸಾಮವೇದವು, ಇವನೇ ಉಕ್ಥವು, ಇವನೇ ಯಜುರ್ವೇದವು. ಮತ್ತು ಇವನೇ ಮಂತ್ರಾತ್ಮಕವಾದ ಬ್ರಹ್ಮನು. ಈ ಪುರುಷನ ರೂಪವೂ ಮತ್ತು ಆದಿತ್ಯಾಂತರ್ಗತನಾದ ಪರಮಪುರುಷನ ರೂಪವೂ ಒಂದೇ ಆಗಿದೆ. ಎರಡೂ ಭಿನ್ನವಲ್ಲವೆಂದು ತಾತ್ಪರ್ಯ. ಅಲ್ಲದೇ, ಯಾವ ಪರಮಪುರುಷನನ್ನೇ ಅನೇಕ ಕಡೆಗಳಲ್ಲಿ ಉದ್ಗೀಥವೆಂದು ಪ್ರಶಂಸಿಸಿದೆಯೋ ಆ ಉದ್ಗೀಥದ ಅವಯವಗಳೇ ಋಗಾದಿ ವೇದಗಳು,

**ಸಾಮವೇದ ಏವೋದ್ಯಜುರ್ವೇದೋ ಗೀರ್ಋಗ್ವೇದಸ್ಥಂ ॥**

(ಛಾ. ಉ. ೧-೩-೭)

ಉದ್ಗೀಥಾವಯವಗಳಾದ **ಉತ್** ಎಂಬುದೇ ಸಾಮವೇದ ; **ಗೀ** ಎಂಬದು ಯಜುರ್ವೇದ ಮತ್ತು **ಥಂ** ಎಂಬುದು ಋಗ್ವೇದ, ಎಂದರೆ ಉದ್ಗೀಥಾತ್ಮಕನಾದ ಪರಮಪುರುಷನ ಅವಯವಗಳು ಎಂದಾಯಿತು, ಹೀಗೆಯೇ ಇನ್ನೂ ಅನೇಕ ಸಂದರ್ಭಗಳಲ್ಲಿ ತಾದಾತ್ಮ್ಯವನ್ನು ತೋರಿಸಿದೆ.

ಋಗಾದಿವೇದಗಳು ಪರಮಪುರುಷನಿಂದ ಉತ್ಪನ್ನವಾದ ವಾಗ್ರಾಶಿಗಳು ಎಂದು ವರ್ಣಿಸಿರುವ ಶ್ರುತಿ ವಾಕ್ಯಗಳು ;—

**ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಂ ರಸಾನ್ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ॥**

(ಛಾ. ಉ. ೪-೧೭-೧)

ಪ್ರಜಾಪತಿಯೂ ತಾನು ಸೃಜಿಸಿದ ಲೋಕಗಳಲ್ಲಿ ತನ್ಮಯನಾಗಿ ಧ್ಯಾನಿಸಿದನು. ಆ ಧ್ಯಾನದ ಫಲವಾಗಿ ಅವುಗಳ ರಸರೂಪವಾದ ಅಗ್ನ್ಯಾದಿಗಳನ್ನು ಪ್ರಕಾಶಪಡಿಸಿದನು. ಪೃಥ್ವಿಯಿಂದ ಅಗ್ನಿಯನ್ನೂ, ಅಂತರಿಕ್ಷದಿಂದ ವಾಯುವನ್ನೂ ಮತ್ತು ದ್ಯುಲೋಕದಿಂದ ಆದಿತ್ಯನನ್ನೂ ಉತ್ಪನ್ನಮಾಡಿ ಅವು ಪ್ರಕಾಶಿಸುವಂತೆ ಮಾಡಿದನು. ಅನಂತರ,

**ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾನಾಂ ರಸಾನ್ಪ್ರಾವೃಹದಗ್ನೇ-ರ್ಋಚೋ ವಾಯೋರ್ಯಜೂಗ್ಂಷಿ ಸಾಮಾನ್ಯಾದಿತ್ಯಾತ್ ॥**

(ಛಾ. ಉ. ೪-೧೭-೨)

ಈ ಮೂರು ದೇವತೆಗಳಲ್ಲೂ ತನ್ಮಯನಾಗಿ ಧ್ಯಾನಿಸಿದನು. ಅದರ ಫಲವಾಗಿ ಅವರ ರಸವನ್ನು ಹಿಂಡಿದನು. ಅಗ್ನಿಯಿಂದ ಋಗ್ವೇದವನ್ನೂ, ವಾಯುವಿನಿಂದ ಯಜುರ್ವೇದವನ್ನೂ ಮತ್ತು ಆದಿತ್ಯನಿಂದ ಸಾಮವೇದವನ್ನೂ ಪ್ರಕಾಶ ಪಡಿಸಿದನು. ಈ ಮೂರು ವೇದಗಳೇ ಭೂರಾದಿವ್ಯಾಹೃತಿಗಳ ರೂಪದಲ್ಲಿ ಆವಿರ್ಭಾವವನ್ನು ಹೊಂದಿದವು. ಭೂರಾದಿವ್ಯಾಹೃತಿಗಳ ಮತ್ತು ಋಗಾದಿಗಳ ಅತ್ಯುತ್ತಮವಾದ ಸಾರವೇ ಪ್ರಣವವು.

**ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚರ್ಚೋಯಜೂಗ್ಂಷಿ ಸಾಮಾನಿ ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ ॥**

(ಬೃ. ಉ. ೧-೨-೫)

ಪ್ರಜಾಪತಿಯು ತನ್ನಿಂದಲೇ ಉತ್ಪನ್ನವಾದ ವಾಕ್ಕಿನ ಸಹಾಯದಿಂದ ಜಗತ್ತಿನಲ್ಲಿರುವ ಸಕಲವನ್ನೂ ಉತ್ಪನ್ನ ಮಾಡಿದನು. ಅವು ಯಾವುವೆಂದರೆ, ಋಗ್ವೇದ, ಯಜುರ್ವೇದ, ಸಾಮವೇದ, ಛಂದಸ್ಸುಗಳು, ಯಜ್ಞ, ಪ್ರಜೆಗಳು, ಪಶುಗಳು ಇತ್ಯಾದಿ ಸಕಲವೂ ಸೇರಿವೆ.

ಯಜ್ಞಾವಯವಗಳಿಗೂ, ಋಗಾದಿವೇದಿಗಳಿಗೂ ತಾದಾತ್ಮ್ಯವನ್ನು ಹೇಳಿರುವ ಪ್ರಕರಣಗಳು—

**ತಸ್ಯ ವಾ ಏತಸ್ಯಾಗ್ನೇಃ । ವಾಗೇವೋಪನಿಷದ್ವಾಚಾ ಹಿ ಚೀಯತೇ ಋಚಾಯಜುಷಾ ಸಾಮ್ನೇತಿ ನು ದೈವ್ಯಾಥ ಯನ್ಮಾನುಷ್ಯಾ ವಾಚಾ ಹೀದಂ ಕುರುತ ॥**

(ಶ. ಬ್ರಾ. ೧೦-೫-೧,೧)

ವಾಕ್ಕೇ ಅಗ್ನಿಚಿತಿಯ ರಹಸ್ಯತತ್ತ್ವ. ವಾಕ್ಕಿನಿಂದಲೇ ಇದು ನಿರ್ಮಿತವಾಗಿದೆ. ಋಗ್ವೇದ, ಯಜುರ್ವೇದ, ಸಾಮವೇದ ಇವೇ ಅಗ್ನಿಚಿತಿಯ ಅವಯವಗಳು. ಅಧ್ವರ್ಯುವು ಯಜ್ಞಕಾರ್ಯಗಳಿಗೆ ನಿರ್ದೇಶಕೊಡುವುದೂ ವಾಕ್ಕಿನ ಆಧಾರದ ಮೇಲೆ,

**ಸ ವಾ ಏಷಾ ವಾಕ್ತ್ರೇಧಾ ವಿಹಿತಾ । ಋಚೋ ಯಜೂಗ್ಂಷಿ ಸಾಮಾನಿ । ತೇನಾಗ್ನಿಸ್ತ್ರೇಧಾ ವಿಹಿತ ಏತೇನ ಹಿ ತ್ರಯೇಣ ಚೀಯತೇ ॥**

(ಶ. ಬ್ರಾ. ೧೦-೫-೧-೨)

ವಾಕ್ಕು ಮೂರು ಅವಯವಗಳನ್ನು ಹೊಂದಿದೆ. ಅವೇ ಋಗ್ಯಜುಸ್ಸಾಮಗಳು. ಇವುಗಳಿಂದ ನಿರ್ಮಿತವಾದುದರಿಂದಲೇ ಅಗ್ನಿಚಿತಿಯೂ ಮೂರು ಅವಯವಗಳನ್ನು ಹೊಂದಿರುತ್ತದೆ. ಹೀಗೆ, ಯಜ್ಞಕುಂಡ ಅಥವಾ ಯಜ್ಞವೇದಿ ಇವುಗಳ

ನಿರ್ಮಾಣವೇ ಅಲ್ಲದೇ, ಯಜ್ಞಾಂಗವಾದ ಸಕಲವೂ ಋಗಾದಿಗಳಿಂದಲೇ ಕಲ್ಪಿತವೆಂದು ಇದೇ ಅಭಿಪ್ರಾಯವನ್ನು ಈ ಪ್ರಕರಣದಲ್ಲಿ ವಿಶದವಾಗಿ ತಿಳಿಸಿದೆ. ಅಲ್ಲದೇ, ಈ ಋಗಾದಿಗಳೊಂದಿಗೆ ಛಂದಸ್ಸೂ ಸೇರಿದೆ. ಆದುದರಿಂದಲೇ ಯಜ್ಞರೂಪನಾದ ಪ್ರಜಾಪತಿಗೆ ಅಷ್ಟು ಮಹತ್ತ್ವವಿರುತ್ತದೆ. ಹೇಗೆಂದರೆ—

**ಪ್ರಜಾಪತಿಸ್ತ್ರಯ್ಯಾ ವಿದ್ಯಯಾ ಸಹಾಪಃ ಪ್ರಾವಿಶತ್...................... ॥ ತದ್ಯಾನಿ ತ್ರೀಣಿ ಪ್ರಥಮಾನಿ । ಇಮೇ ತೇ ಲೋಕಾ ಅಥ ಯಚ್ಚತುರ್ಥಂ ಯಜುಸ್ತ್ರಯೀ ಸಾ ವಿದ್ಯಾ ಜಗತೀ ಸಾ ಭವತಿ ಜಗತೀ ಸರ್ವಾಣಿ ಛಂದಾಗ್ಂಸಿ ಸರ್ವಾಣಿ ಛಂದಾಗ್ಂಸಿ ತ್ರಯೀ ವಿದ್ಯಾಥ ಯಾನಿ ಚತ್ವಾರ್ಯುತ್ತಮಾನಿ ದಿಶಸ್ತಾನೀಮೇ ಚ ವೈ ಲೋಕಾ ದಿಶಶ್ಚ ಪ್ರಜಾಪತಿರಥೈಷಾ ತ್ರಯೀ ವಿದ್ಯಾ ॥**

(ಶ. ಬ್ರಾ. ೬-೩-೧-೧೧)

ಪ್ರಜಾಪತಿಯು ಮೂರು ವಿದ್ಯೆಗಳೊಡನೆ (ಮೂರು ವೇದಗಳೊಡನೆ) ಜಲಕ್ಕೆ ಪ್ರವೇಶಿಸಿದನು. ಅದರ ಫಲವೇ ಈ ಮೂರು ಲೋಕಗಳು. ಇವುಗಳೊಂದಿಗೆ ಜಗತಿಯೂ ಸೇರಿದ್ದಿತು. ಜಗತಿಯೇ ಸಕಲ ಛಂದಸ್ಸುಗಳನ್ನೂ ತನ್ನಲ್ಲಿ ಹೊಂದಿರುತ್ತದೆ. ಇವೆಲ್ಲವೂ ಸೇರಿ ದಿಕ್ಕುಗಳನ್ನು ನಿರ್ಮಿಸಿದವು. ಮೂರು ವೇದಗಳೂ ಸಕಲ ಛಂದಸ್ಸನ್ನೂ ಒಳಗೊಂಡಿರುವ ಜಗತಿಯೂ ಪ್ರಜಾಪತಿಯಲ್ಲಿಯೇ ಅಡಕವಾಗಿರುವುದರಿಂದ ಯಜ್ಞವೂ ತ್ರಯೀಮಯವಾದಂತೆಯೇ- ಈ ತಾದಾತ್ಮ್ಯಭಾವನೆಯಿಂದಲೇ ಅಧ್ವರ್ಯ್ವಾದಿಗಳು ಯಜ್ಞವನ್ನು ನಿರ್ವಹಿಸುತ್ತಾರೆ. ಯಜ್ಞರೂಪನಾದ ಪ್ರಜಾಪತಿಯಿಂದಲೇ ಉತ್ಪನ್ನವಾದ ಈ ವೇದಗಳಲ್ಲಿಯೇ ಸಕಲ ಜಗತ್ತೂ ಅಡಗಿವೆ. ಹೇಗೆಂದರೆ—

**ಅಥ ಸರ್ವಾಣಿ ಭೂತಾನಿ ಪರ್ಯೈಕ್ಷತ್ । ಸ ತ್ರಯ್ಯಾಮೇವ ವಿದ್ಯಾಯಾಗ್ಂ ಸರ್ವಾಣಿ ಭೂತಾನ್ಯಪಶ್ಯದತ್ರ ಹಿ ಸರ್ವೇಷಾಂ ಛಂದಸಾಮಾತ್ಮಾ ಸರ್ವೇಷಾಗ್ ಸ್ತೋಮಾನಾಗ್ಂ ಸರ್ವೇಷಾಂ ಪ್ರಾಣಾನಾಗ್ಂ ಸರ್ವೇಷಾಂ ದೇವಾನಾಮೇತದ್ವಾ ಅಸ್ತ್ಯೇತದ್ಧ್ಯಮೃತಂ.... ॥**

(ಶ. ಬ್ರಾ. ೧೦-೪-೨-೨೧)

ಪ್ರಜಾಪತಿಯು ಸಕಲ ಚರಾಚರ ವಸ್ತುಗಳನ್ನೂ ಪರೀಕ್ಷಿಸಿದನು. ಆ ಕಾಲದಲ್ಲಿ ಅವೆಲ್ಲವೂ ವೇದಗಳಲ್ಲಿಯೇ ಅಡಗಿದ್ದುದನ್ನು ಕಂಡನು. ಸಕಲ ಛಂದಸ್ಸುಗಳ ಅವಯವಗಳೂ ಈ ವೇದಗಳಲ್ಲಿಯೇ ಅಂತರ್ಗತವಾಗಿವೆ. ಈ ವೇದಗಳೇ ನಿತ್ಯವಾದುದರಿಂದ ಸಕಲ ಸ್ತೋಮಗಳ ಮತ್ತು ಸಕಲ ಪ್ರಾಣಗಳ ಮತ್ತು ಸಕಲ ದೇವತೆಗಳ ಅವಯವಗಳೆಲ್ಲವೂ ಇಲ್ಲಿಯೇ ಅಡಗಿವೆ.

**ಸ ಐಕ್ಷತ ಪ್ರಜಾಪತಿಃ । ತ್ರಯ್ಯಾಂ ವಾವ ವಿದ್ಯಾಯಾಗ್ಂ ಸರ್ವಾಣಿ ಭೂತಾನಿ ಹಂತ ತ್ರಯೀಮೇವ ವಿದ್ಯಾಮಾತ್ಮಾನಮಭಿ ಸಂಸ್ಕರವಾ ಇತಿ ॥**

(ಶ. ಬ್ರಾ. ೧೦-೪-೨-೨೨)

ಜಗತ್ತಿನಲ್ಲಿರುವ ಸಕಲ ವಸ್ತುಗಳೂ ಈ ಮೂರು ವೇದಗಳಲ್ಲಿ ಅಡಗಿವೆ. ಇವು ನನ್ನ ಅವಯವಗಳು. ಇವುಗಳ ಆಧಾರದ ಮೇಲೆಯೇ (ಯಜ್ಞವೇದಿರೂಪವಾದ) ನನ್ನ ದೇಹವನ್ನು ನಿರ್ಮಿಸಿ ಈ ವೇದಗಳೆಲ್ಲವೂ ಅಲ್ಲಿ ಅಡಕವಾಗು

ವಂತೆ ಮಾಡುತ್ತೇನೆ ಎಂದು ಸಂಕಲ್ಪಿಸಿ ಅದರಿಂದ ಅಗ್ನಿಚಿತಿಯನ್ನು ನಿರ್ಮಿಸಿದನು. ಪುನಃ ಆ ಯಜ್ಞದಿಂದಲೇ ಋಗಾದಿ ವೇದಗಳೂ ಸಕಲ ಛಂದಸ್ಸುಗಳೂ ಉತ್ಪನ್ನವಾದವು. ಈ ವಿಷಯವೇ ಪ್ರಕೃತವಾದ ಋಕ್ಕಿನಲ್ಲಿ ಹೇಳಲ್ಪಟ್ಟಿದೆ.

**ಮುಖ್ಯಾಭಿಪ್ರಾಯವು**

**ಸರ್ವಹುತಃ** ಎಂಬ ಶಬ್ದದ ಅರ್ಥವಿವರಣೆಯನ್ನು ನಾವು ಹಿಂದಿನ ಋಕ್ಕಿನಲ್ಲಿಯೇ ಮಾಡಿದೇವೆ. ಪರಮ ಪುರುಷ ಅಥವಾ ಪರಮಪುರುಷನಿಂದ ಸೃಷ್ಟವಾದ ಸಕಲ ವಸ್ತುಗಳನ್ನೂ ಪಶುವೆಂದು ಭಾವಿಸಿ ದೇವತೆಗಳು ನೆರವೇರಿಸಿದ ಮಾನಸಯಜ್ಞವೆಂದು **ಸರ್ವಹುತ್** ಶಬ್ದಕ್ಕೆ ಅರ್ಥವಿವರಣೆಮಾಡಲಾಗಿದೆ. ಹಿಂದಿನ ಋಕ್ಕಿನಲ್ಲಿ ಆ ವಿಧವಾದ ಯಜ್ಞದಿಂದ **ಪೃಷದಾಜ್ಯ** ಎಂದರೆ ದಧಿಮಿಶ್ರಿತವಾದ ಆಜ್ಯವೂ, ಅರಣ್ಯ ಮತ್ತು ಗ್ರಾಮಗಳಲ್ಲಿ ವಾಸಿಸುವ ಎರಡುವಿಧ ಪಶುವರ್ಗವೂ ಉತ್ಪತ್ತಿಯಾಯಿತೆಂದು ಹೇಳಿದೆಯಷ್ಟೆ. ಅವುಗಳಲ್ಲದೆ ಮುಂದೆ ಯಾವ ಯಾವ ವಸ್ತುಗಳು ಆ ಯಜ್ಞದಿಂದ ಉತ್ಪತ್ತಿಯಾದವು ಎಂಬುದನ್ನು ಮುಂದಿನ ಐದು ಋಕ್ಕುಗಳಲ್ಲಿ (೯-೧೩) ಹೇಳಲಾಗಿದೆ.

ಪ್ರಕೃತಋಕ್ಕಿನಲ್ಲಿ ಆ ಯಜ್ಞದಿಂದ **ಋಚಃ** ಎಂದರೆ ಋಕ್ಕುಗಳು ಉತ್ಪತ್ತಿಯಾದವು.

**ಋಕ್ ಶ್ಲೋಕಬದ್ಧರೂಪಾ ಆಖ್ಯಾಯಿಕಪ್ರಚುರಾ ಚ । ತಾ ಋಚೋ ಜಜ್ಞಿರೇ ಉತ್ಪನ್ನಾ ಬಭೂವುಃ । ಋಚಾಂ ಹೌತ್ರಕರ್ಮಾರ್ಹತ್ವಾತ್ತತ್ರ ಋಗ್ವೇದ ಇತ್ಯರ್ಥಃ ।**

ಋಕ್ಕುಗಳು ಎಂದರೆ ಛಂದೋಬದ್ಧವಾದುದೂ ದೇವತೆಗಳ ಸ್ತುತಿ ಅಥವಾ ಯಾವುದಾದರೊಂದು ವಿಷಯಪ್ರತಿಪಾದನೆಯನ್ನು ಒಳಗೊಂಡಿರುವುದೂ ಆದ ವೇದವಾಕ್ಯವೆಂದರ್ಥವು. ಪ್ರತಿಯೊಂದು ಋಕ್ಕಿನಲ್ಲಿಯೂ ಒಂದರಿಂದ ಏಳರವರೆಗೆ ಪಾದಗಳಿರುವವು. ಗಾಯತ್ರೀ ಛಂದಸ್ಸಿನಲ್ಲಿ ಮೂರು ಪಾದಗಳಿರುವವು. ತ್ರಿಷ್ಟುಪ್, ಜಗತೀ ಮುಂತಾದವುಗಳಲ್ಲಿ ನಾಲ್ಕು ಪಾದಗಳಿರುವವು. **ಏಕಪದಾ** ಎಂಬ ಛಂದಸ್ಸಿನಲ್ಲಿ ಒಂದು ಪಾದಮಾತ್ರವಿರುವುದು. ದ್ವಿಪದಾ (ವಿರಾಟ್) ಎಂಬ ಛಂದಸ್ಸಿನಲ್ಲಿ ಎರಡು ಪಾದಗಳಿರುವವು. ಪಂಕ್ತಿಛ್ಛಂದಸ್ಸಿನಲ್ಲಿ ಐದು ಪಾದಗಳಿರುವವು. ಮಹಾಸತೋಬೃಹತೀ, ಮಹಾಪಂಕ್ತಿ ಮೊದಲಾದ ಛಂದಸ್ಸುಗಳಲ್ಲಿ ಆರು ಪಾದಗಳಿರುವವು. ಶಕ್ವರೀ ಛಂದಸ್ಸಿನಲ್ಲಿ ಏಳು ಪಾದಗಳಿರುವವು. **ಅತಿಧೃತಿ** ಎಂಬ ಛಂದಸ್ಸಿನಲ್ಲಿ ಎಂಟು ಪಾದಗಳಿರುವವು.

ಒಂದೊಂದು ಛಂದಸ್ಸಿನ ಪಾದಗಳಲ್ಲಿ ಇಷ್ಟೇ ಅಕ್ಷರಗಳಿರಬೇಕೆಂಬ ನಿಯಮವಿದೆ. ಗಾಯತ್ರೀ ಛಂದಸ್ಸಿನ ಪಾದಗಳಲ್ಲಿ ಎಂಟೆಂಟು ಅಕ್ಷರಗಳಿರುವದು. ತ್ರಿಷ್ಟುಪ್ ಛಂದಸ್ಸಿನ ಪಾದಗಳಲ್ಲಿ ಹನ್ನೊಂದು ಅಕ್ಷರಗಳೂ ಜಗತೀ ಛಂದಸ್ಸಿನ ಪಾದಗಳಲ್ಲಿ ಹನ್ನೆರಡೂ ಅಕ್ಷರಗಳೂ ಇರುವವು. ಪ್ರತಿಯೊಂದು ಛಂದಸ್ಸಿನ ಋಕ್ಕುಗಳಲ್ಲಿರುವ ಎಲ್ಲಾ ಪಾದಗಳಿಗೂ ಒಂದೇ ಸಮನಾದ (ಸಂಖ್ಯೆಯ) ಅಕ್ಷರಗಳಿರಬೇಕೆಂಬ ನಿಯಮವಿಲ್ಲ. ಮೊದಲನೆಯ ಪಾದದಲ್ಲಿ ೧೨ ಅಕ್ಷರಗಳೂ ಎರಡನೆಯ ಪಾದದಲ್ಲಿ ೮ ಅಕ್ಷರಗಳು ಇತ್ಯಾದಿಯಾಗಿ ಒಂದೇ ಋಕ್ಕಿನ ಪಾದಗಳಲ್ಲಿ ಬೇರೆ ಬೇರೆ ಸಂಖ್ಯೆಯ ಅಕ್ಷರಗಳಿರಬಹುದು. ಈ ರೀತಿ ವಿಧವಿಧವಾದ ಅಕ್ಷರ ಸಂಖ್ಯೆಯುಳ್ಳ ಅನೇಕ ಪಾದಗಳನ್ನೊಳಗೊಂಡಿರುವ ಋಕ್ಕುಗಳಿಗೆ ಬೇರೆ ಬೇರೆ ಹೆಸರುಗಳಿರುವವು. ಇವುಗಳನ್ನೆಲ್ಲಾ ನಾವು ಋ. ಸಂ. ಮೊದಲನೆಯ ಭಾಗದ 222 ನೇ ಪೇಜಿನಲ್ಲಿಯೂ ಅದರ ಮುಂದಿನ ಪೇಜುಗಳಲ್ಲಿಯೂ ಛಂದೋಽನುಕ್ರಮಣಿಕೆ ಎಂಬ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಇಲ್ಲಿ ಮುಖ್ಯವಾದ ಛಂದಸ್ಸುಗಳ ಹೆಸರುಗಳನ್ನು ಅವುಗಳಲ್ಲಿರುವ ಒಟ್ಟು ಪಾದಗಳ ಮತ್ತು ಅಕ್ಷರ ಸಂಖ್ಯೆಯನ್ನು ಮಾತ್ರ ವಿವರಿಸಲಾಗಿದೆ—

| | |
|---|---|
| ಗಾಯತ್ರೀ | ೩ ಪಾದ ೨೪ ಅಕ್ಷರ |
| ಪದಪಂಕ್ತಿಃ | ೫—೨೬ |
| ,, | ೫—೨೫ |
| ಉಷ್ಣಿಗ್ಗರ್ಭಾ | ೩—೨೪ |
| ಪಾದನಿಚೃತ್ | ೩—೨೧ |
| ಅತಿನಿಚೃತ್ | ೩—೨೦ |
| ಯವಮಧ್ಯಾ | ೩—೨೪ |
| ವರ್ಧಮಾನಾ | ೩—೨೧ |
| ಪ್ರತಿಷ್ಠಾ | ೩—೨೧ |
| ಹ್ರಸೀಯಸೀ | ೩—೧೯ |
| ವಿಪರೀತಾ ಹ್ರಸೀಯಸೀ | ೩—೧೯ |
| ಉಷ್ಣಿಕ್ | ೩—೨೮ |
| ಪುರಉಷ್ಣಿಕ್ | ೩—೨೮ |
| ಕಕುಪ್ | ೩—೨೮ |
| ಕಕುಪ್ನ್ಯಂಕುಶಿಕಾ | ೩—೨೭ |
| ತನುಶಿರಾ | ೩—೨೮ |
| ಪಿಪೀಲಿಕಮಧ್ಯಾ | ೩—೨೮ |
| ಅನುಷ್ಟುಪ್ಗರ್ಭಾ | ೪—೨೯ |
| ಉಷ್ಣಿಕ್ಗರ್ಭಾ | ೪—೨೮ |
| ಅನುಷ್ಟುಪ್ | ೪—೩೨ |
| ಮಹಾಪದಪಂಕ್ತಿಃ | ೬—೩೧ |
| ಕೃತಿಃ | ೩—೩೨ |
| ಪಿಪೀಲಿಕಮಧ್ಯಾ | ೩—೩೨ |
| ತಾವಿರಾಟ್ | ೩—೩೦ |
| ನಷ್ಟರೂಪೀ | ೩—೩೨ |
| ವಿರಾಟ್ | ೩—೩೦ |
| ವಿರಾಟ್ | ೩—೩೩ |
| ಬೃಹತೀ | ೪—೩೬ |
| ಪುರಸ್ತಾದ್ಬೃಹತೀ | ೪—೩೬ |
| ನ್ಯಂಕುಸಾರಿಣೀ | ೪—೩೬ |
| ಉರೋಬೃಹತೀ | ೪—೩೬ |
| ಸ್ಕಂಧೋಗ್ರೀವೀ | ೪—೩೬ |
| ಉಪರಿಷ್ಟಾದ್ಬೃಹತೀ | ೪—೩೬ |
| ವಿಷ್ಟಾರಬೃಹತೀ | ೪—೩೬ |
| ಊರ್ಧ್ವಬೃಹತೀ | ೪—೩೬ |
| ಪಿಪೀಲಿಕಮಧ್ಯಾ | ೪—೩೪ |
| ವಿಷಮಪದಾ | ೪—೩೬ |
| ಬೃಹತೀ | ೪—೩೬ |
| ಪಂಕ್ತಿಃ | ೫—೪೦ |
| ವಿರಾಟ್ | ೪—೪೦ |
| ಸತೋಬೃಹತೀ | ೪—೪೦ |
| ವಿಪರೀತಾ | ೪—೪೦ |
| ಪ್ರಸ್ತಾರಪಂಕ್ತಿಃ | ೪—೪೦ |
| ಆಸ್ತಾರಪಂಕ್ತಿಃ | ೪—೪೦ |
| ಸಂಸ್ತಾರಪಂಕ್ತಿಃ | ೪—೪೦ |
| ವಿಷ್ಟಾರಪಂಕ್ತಿಃ | ೪—೪೦ |
| ತ್ರಿಷ್ಟುಪ್ | ೪—೪೪ |
| ಜಗತೀ | ೪—೪೬ |
| ತ್ರಿಷ್ಟುಪ್ | ೪—೪೬ |
| ಅಭಿಸಾರಿಣೀ | ೪—೪೪ |
| ,, | ೪—೩೯ |
| ವೈರಾಜತ್ರಿಷ್ಟುಪ್ | ೪—೩೯ |
| ವಿರಾಟ್ಸ್ಥಾನಾ | ೪—೪೦ |
| ವಿಪರೀತಾ ವಿರಾಡ್ರೂಪಾ | ೪—೪೧ |
| ವಿರಾಡ್ರೂಪಾ | ೪—೪೧ |
| ಜೋತಿಷ್ಮತೀ | ೪—೪೪ |
| ಜ್ಯೋತಿಃ | ೪—೪೪ |
| ಮಹಾಬೃಹತೀ | ೫—೪೪ |
| ಯವಮಧ್ಯಾ | ೫—೪೪ |
| ಪಂಕ್ತ್ಯುತ್ತರಾ | ೫—೪೪ |
| ಜಗತೀ | ೪—೪೮ |
| ಮಹಾಸತೋಬೃಹತೀ | ೫—೪೮ |

| | | | |
|---|---|---|---|
| ಮಹಾಪಂಕ್ತಿಃ | ೬—೪೮ | ಆನುಷ್ಟುಭಃ ಪ್ರಗಾಥಃ | ೪—೩೨ |
| | ೬—೪೮ | | ೩—೨೪ |
| ಬಾರ್ಹತಃಪ್ರಗಾಥಃ | ೪—೩೬ | | ೩—೨೪ |
| | ೪—೪೦ | ಅತಿಜಗತೀ | ೫—೫೨ |
| ಕಾಕುಭಃ ಪ್ರಗಾಥಃ | ೩—೨೮ | ಶಕ್ವರೀ | ೭—೫೬ |
| | ೪—೪೦ | | |
| ಮಹಾಬಾರ್ಹತಃ ಪ್ರಗಾಥಃ | ೫—೪೪ | ಅತಿಶಕ್ವರೀ | ೫—೬೦ |
| | ೫—೪೮ | ಅಷ್ಟಿಃ | ೫—೬೪ |
| ವಿಪರೀತೋತ್ತರಃ | ೪—೩೬ | ಅತ್ಯಷ್ಟಿಃ | ೭—೬೮ |
| | ೪—೪೦ | ಧೃತಿಃ | ೭—೭೨ |
| ಪ್ರಗಾಥಃ | ೪—೩೬ | ಅತಿಧೃತಿಃ | ೮—೭೨ |
| | ೪—೪೦ | | |
| | ೩—೨೪ | | |

ಇವು ಮುಖ್ಯವಾದ ಛಂದಸ್ಸುಗಳು. ಇವುಗಳ ವಿಸ್ತಾರವಾದ ವಿವರಣೆಯನ್ನು ಛಂದೋನುಕ್ರಮಣಿಕೆಯಲ್ಲಿ ನೋಡಬಹುದು. ಈ ವಿಧವಾದ ಛಂದಸ್ಸಿನ ನಿಯಮಗಳಿಗೆ ಬದ್ಧವಾದ ಮತ್ತು ಕ್ಲಿಪ್ತಾಕ್ಷರಸಂಖ್ಯೆಯ ಪಾದಗಳುಳ್ಳ ವಾಕ್ಯಗಳಿಗೆ ಋಕ್ಕುಗಳೆಂದು ಹೆಸರು. ಈ ಋಕ್ಕುಗಳ ಸಮೂಹವೇ ಋಗ್ವೇದವು. ಇಲ್ಲಿ ಋಕ್ಕುಗಳು ಉತ್ಪನ್ನವಾದವು ಎಂದರೆ ಋಗ್ವೇದವು ಉತ್ಪನ್ನವಾಯಿತು ಎಂದರ್ಥವು. ಯಜ್ಞಾದಿಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು ವೇದಗಳ ಪ್ರಯೋಗವೂ ಇರುವುದು. ಇವುಗಳಲ್ಲಿ ಒಂದಿಲ್ಲದಿದ್ದರೂ ಯಜ್ಞವು ಸಾಂಗವಾಗುವುದಿಲ್ಲ ಎಂದರೆ ನೆರವೇರುವುದೇ ಇಲ್ಲ. ಈ ಋಗ್ವೇದವು ಹೋತೃವೆಂಬ ಋತ್ವಿಜನ ಮುಖ್ಯ ವೇದವಾಗಿದೆ. ಎಂದರೆ ಹೋತೃವು ಋಗ್ವೇದವನ್ನು ಪೂರ್ತಿಯಾಗಿ ಅಧ್ಯಯನಮಾಡಿ ಅವುಗಳ ಮಂತ್ರಗಳನ್ನು ಯಜ್ಞಾದಿಕರ್ಮಗಳಲ್ಲಿ ಸಂದರ್ಭಾನು ಸಾರವಾಗಿ ಪಠಿಸಬೇಕಾಗಿರುವುದು.

**ಸಾಮಾನಿ ಜಜ್ಞಿರೇ**—ಸಾಮವೇದದ ಬಹುಭಾಗವು ಋಗ್ವೇದದ ಋಕ್ಕುಗಳೇ ಆಗಿವೆ. ಇತರ ಭಾಗವೂ ಇದೆ. ಇದನ್ನು ಸಪ್ತಸ್ವರಗಳಲ್ಲಿ ಉದ್ಗಾತೃವೆಂಬ ಋತ್ವಿಜನೂ ಅವನ ಸಹಾಯಕಋತ್ವಿಗಳೂ ಯಜ್ಞದಲ್ಲಿ ಗಾನಮಾಡುವರು. ಋಗ್ವೇದಕ್ಕಿರುವ ಪ್ರಾಶಸ್ತ್ಯವೇ ಸಾಮವೇದಕ್ಕೆ ಇದೆ.

**ಛಂದಾಂಸಿ ಜಜ್ಞಿರೇ**—ಛಂದಸ್ಸಿನ ವಿಷಯವನ್ನು ನಾವು ಈ ಋಕ್ಕಿನ ವಿಶೇಷವಿಷಯಗಳಲ್ಲಿ ಹಿಂದೆಯೇ ಹೇಳಿದ್ದೇವೆ.

**ಯಜುಸ್ತಸ್ಮಾದಜಾಯತ**—ಯಜುರ್ವೇದಮಂತ್ರಗಳಲ್ಲಿ ಯಜ್ಞಮಾಡುವ ಕ್ರಮವೂ, ಯಾವ ಯಾವ ಕಾಲದಲ್ಲಿ ಯಾವ ಯಾವ ಋತ್ವಿಕ್ಕುಗಳು ಯಾವ ಯಾವ ಕರ್ಮಗಳನ್ನು ಹೇಗೆ ಮಾಡಬೇಕೆಂಬ ವಿಸ್ತಾರವಾದ ವಿವರಣೆಯೂ ಇರುವುದು. ಈ ಮಂತ್ರಗಳು ಛಂದಸ್ಸಿನ ನಿಯಮಗಳಿಗೆ ಒಳಪಟ್ಟಿಲ್ಲ. ಗದ್ಯರೂಪದ ವಾಕ್ಯಗಳೂ ಅವುಗಳ ವಿವರಣೆಗಳೂ ಮಧ್ಯ ಮಧ್ಯ ಋಗ್ವೇದಮಂತ್ರಗಳ ಉದಾಹರಣೆಗಳೂ ಇರುವವು. ಈ ವೇದವು ಅಧ್ವರ್ಯು ಎಂಬ ಋತ್ವಿಜನ ಮತ್ತು ಆ ವರ್ಗದ ಋತ್ವಿಗ್ಜನರ ವೇದವಾಗಿರುವುದು.

ಈ ಮೂರು ವಿಧವಾದ ವೇದಗಳೂ ಸರ್ವಹುತ್ ಎಂಬ ಯಜ್ಞದಿಂದ ಉತ್ಪನ್ನವಾದವು ಎಂದು ಈ ಋಕ್ಕಿನಲ್ಲಿ ಹೇಳಲಾಗಿದೆ.

॥ ಸಂಹಿತಾಪಾಠಃ ॥

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।
ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ೧೦ ॥

॥ ಪದಪಾಠಃ ॥

ತಸ್ಮಾತ್ । ಅಶ್ವಾಃ । ಅಜಾಯಂತ । ಯೇ । ಕೇ । ಚ । ಉಭಯಾದತಃ ।
ಗಾವಃ । ಹ । ಜಜ್ಞಿರೇ । ತಸ್ಮಾತ್ । ತಸ್ಮಾತ್ । ಜಾತಾಃ । ಅಜಾವಯಃ ॥ ೧೦ ॥

॥ ಸಾಯಣಭಾಷ್ಯಂ ॥

**ತಸ್ಮಾತ್ಪೂರ್ವೋಕ್ತಾದ್ಯಜ್ಞಾದಶ್ವಾ ಅಜಾಯಂತ । ಉತ್ಪನ್ನಾಃ । ತಥಾ । ಯೇ ಕೇ ಚಾಶ್ವವ್ಯತಿರಿಕ್ತಾ ಗರ್ದಭಾ ಅಶ್ವತರಾಶ್ಚೋಭಯಾದತ ಊರ್ಧ್ವಾಧೋಭಾಗಯೋರುಭಯೋರ್ದಂತಯುಕ್ತಾಃ ಸಂತಿ ತೇಽಪ್ಯಜಾಯಂತ । ತಥಾ । ತಸ್ಮಾದ್ಯಜ್ಞಾದ್ಗಾವಶ್ಚ ಜಜ್ಞಿರೇ । ಕಿಂಚ ತಸ್ಮಾದ್ಯಜ್ಞಾದಜಾವಯಶ್ಚ ಜಾತಾಃ ॥**

॥ ಪ್ರತಿಪದಾರ್ಥ ॥

**ತಸ್ಮಾತ್**—ಆ ವಿಶ್ವಯಜ್ಞದಿಂದ । **ಅಶ್ವಾಃ**—ಅಶ್ವಗಳು । **ಅಜಾಯಂತ**—ಉತ್ಪನ್ನವಾದವು । **ಚ**—ಮತ್ತು । **ಉಭಯಾದತಃ**—ಎರಡು ಸಾಲು ಹಲ್ಲುಗಳಿರುವ ಇತರ । **ಯೇ ಕೇ**-ಯಾವ ಯಾವ ಪ್ರಾಣಿಗಳಿವೆಯೋ ಅವೂ ಉತ್ಪನ್ನವಾದವು । **ತಸ್ಮಾತ್**—ಆ ಯಜ್ಞದಿಂದಲೇ । **ಗಾವೋ ಹ**—ಗೋವುಗಳೂ । **ಜಜ್ಞಿರೇ**—ಹುಟ್ಟಿದವು । **ತಸ್ಮಾತ್**—ಅದರಿಂದಲೇ । **ಅಜಾವಯಃ**—ಆಡು, ಕುರಿ ಮುಂತಾದವು । **ಜಾತಾಃ**—ಹುಟ್ಟಿದವು.

॥ ಭಾವಾರ್ಥ ॥

ವಿರಾಟ್ಪುರುಷನನ್ನು ಆಹುತಿಯಾಗಿ ಅರ್ಪಿಸಿದನಂತರ ಆ ಯಜ್ಞದಿಂದ ಎರಡು ಸಾಲು ಹಲ್ಲುಗಳುಳ್ಳ ಅಶ್ವಗಳೂ, ಅಶ್ವವ್ಯತಿರಿಕ್ತವಾದ, ಇತರ ಪ್ರಾಣಿಗಳೂ, ಅದರಿಂದಲೇ ಗೋವುಗಳೂ, ಆಡು, ಕುರಿ ಮತ್ತು ತಜ್ಜಾತೀಯವಾದ ಇತರ ಪ್ರಾಣಿಗಳೂ ಉತ್ಪನ್ನವಾದವು.

## English Translation

From him were born horses and whatsoever animals have two rows of teeth ; cows were born from him; from him were born goats and sheep.

॥ ವಿಶೇಷವಿಷಯಗಳು ॥

**ತಸ್ಮಾದಶ್ವಾ ಅಜಾಯಂತ** ಎಂದು ಯಜ್ಞರೂಪನಾದ ಪ್ರಜಾಪತಿಯಿಂದ ತನ್ನ ಆತ್ಮಯಜ್ಞದ ಫಲವಾಗಿ ಉತ್ಪನ್ನವಾದ ಪ್ರಾಣಿಗಳು ಇಲ್ಲಿ ತಿಳಿಸಲ್ಪಟ್ಟಿವೆ. ಪ್ರಥಮತಃ ಅಶ್ವಗಳು, ಮತ್ತು ಗರ್ದಭಾದಿಗಳು. **ಉಭಯಾದತಃ**

ಎಂದರೆ ಎರಡು ಕಡೆಯೂ ಕಡಿದು ತಿನ್ನುವ (ಎರಡು ಸಾಲು ಹಲ್ಲುಗಳುಳ್ಳ) ಪ್ರಾಣಿಗಳೆಂದು ತಾತ್ಪರ್ಯ. ಅಶ್ವಗಳೊಡನೆ ಸೇರಿಸಿರುವುದರಿಂದ ಪ್ರಕೃತದಲ್ಲಿ ಗರ್ದಭಾದಿಗಳೆಂದು ಊಹಿಸಲ್ಪಟ್ಟಿರುತ್ತದೆ. ವೇದತ್ರಯದೊಂದಿದೆ ಉದಕದಲ್ಲಿ ಪ್ರಜಾಪತಿಯು ಪ್ರವೇಶಿಸಿದನು ಎಂದು ಹಿಂದಿನ ಋಕ್ಕಿನಲ್ಲಿ ತಿಳಿಸಿದೆ. ಅದರ ಫಲವಾಗಿ ಗರ್ಭವು ಆವಿರ್ಭಾವವಾಯಿತು. ಅದು ಎಲ್ಲಕ್ಕಿಂತಲೂ ಅಗ್ರವಾಗಿ (ಮೊದಲು) ಉತ್ಪನ್ನವಾದುದರಿಂದ **ಅಗ್ನಿ**ಯೆಂದು ಕರೆಯಲ್ಪಟ್ಟಿತು. (ಶ. ಬ್ರಾ. ೬-೧-೧-೧೦, ೧೧). ಅಗ್ನಿರೂಪವಾದ ಈ ತತ್ತ್ವದ ಅಂಶದಿಂದಲೇ ಅಶ್ವಾದಿ ಸಕಲ ಪ್ರಾಣಿಗಳೂ ಉತ್ಪನ್ನವಾದವು. ಅಶ್ವವೆಂಬ ಹೆಸರು ಹೇಗೆ ಬಂದಿತು ಎಂಬುದಕ್ಕೆ ಈ ನಿರ್ವಚನರೂಪದ ವಾಕ್ಯವಿರುತ್ತದೆ. ಮತ್ತು ಯಜ್ಞಮೂಲನಾದ ಪ್ರಜಾಪತಿ ಅಥವಾ ಅಗ್ನಿರೂಪನಾದ ಪ್ರಜಾಪತಿಯಿಂದಲೇ ಅಶ್ವಾದಿಗಳ ಉತ್ಪತ್ತಿಯೆಂದೂ ಈ ವಾಕ್ಯವು ತಿಳಿಸುತ್ತದೆ. ಹೇಗೆಂದರೆ—

**ಅಥ ಯದಶ್ರು ಸಂಕ್ಷರಿತಮಾಸೀತ್ಸೋಽಶ್ರುರಭವದಶ್ರುರ್ಹ ವೈ ತಮಶ್ವ ಇತ್ಯಾಚಕ್ಷತೇ........ ಅಥ ಯದರಸದಿವ ಸ ರಾಸಭೋಽಭವದಥ ಯಃ ಕಪಾಲೇ ರಸೋ ಲಿಪ್ತ ಆಸೀತ್ ಸೋಽಜೋಽಭವತ್ ॥**

(ಶ. ಬ್ರಾ. ೬-೧-೧-೧೧)

ಯಜ್ಞರೂಪನಾದ ಈ ಪ್ರಜಾಪತಿಯ ಗರ್ಭಸಂಬಂಧಿಯಾದ ಅಶ್ರುವೇ ಅಶ್ವವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ರಸನಾತ್ಮಕವಾದ (ಶಬ್ದಮಾಡುವ) ರೂಪವೇ ರಾಸಭ (ಗರ್ದಭ) ವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಮತ್ತು ಪ್ರಜಾಪತಿಗರ್ಭದ ಚಿಪ್ಪಿಗೆ ಅಂಟಿಕೊಂಡಿದ್ದ ಲೇಪವು ಅಜವಾಯಿತು. ಇದೇ ರೀತಿ ನೇರವಾಗಿ ಯಜ್ಞದಿಂದಲೇ ಈ ಪ್ರಾಣಿಗಳು ಉತ್ಪನ್ನವಾದ ಕ್ರಮವನ್ನೂ ಈ ರೀತಿ ತಿಳಿಸಿದೆ—

**ಏಷ ವೈ ಪ್ರಜಾಪತಿಃ । ಯ ಏಷ ಯಜ್ಞಸ್ತಾಯತೇ ಯಸ್ಮಾದಿಮಾಃ ಪ್ರಜಾಃ ಪ್ರಜಾತಾ ಏತಮ್ವೇವಾಪ್ಯೇತರ್ಹ್ಯನುಪ್ರಜಾಯಂತೇ ॥**

(ಶ. ಬ್ರಾ. ೪-೫-೫-೧)

ಇಲ್ಲಿ ನೆರವೇರುತ್ತಿರುವ ಯಜ್ಞವೇ ಜಗತ್ಸೃಷ್ಟಿಗೆ ಪೂರ್ವದಲ್ಲಿ ನಡೆದ ಯಜ್ಞರೂಪದ ಪ್ರಜಾಪತಿಯು. ಆದಿಯಲ್ಲಿ ನಿರ್ವಹಿಸಲ್ಪಟ್ಟ ಯಜ್ಞದಿಂದ ಸಕಲ ಪ್ರಾಣಿಗಳೂ ಉತ್ಪನ್ನವಾದಂತೆಯೇ ಈಗಲೂ ನೆರವೇರುವ ಯಜ್ಞದ ಫಲವಾಗಿ ಪ್ರಾಣಿಗಳು ಉತ್ಪನ್ನವಾಗುತ್ತವೆ.

**ಉಪಾಗ್ಂಶುಪಾತ್ರಮೇವಾನ್ವಜಾಃ ಪ್ರಜಾಯಂತೇ । ತದ್ವೈ ತತ್ಪುನರ್ಯಜ್ಞೇ ಪ್ರಯುಜ್ಯತೇ ತಸ್ಮಾದಿಮಾಃ ಪ್ರಜಾಃ ಪುನರಭ್ಯಾವರ್ತಂ ಪ್ರಜಾಯಂತೇ ॥**

(ಶ. ಬ್ರಾ. ೪-೫-೫-೨)

ಯಜ್ಞದ ಉಪಾಂಶುಗ್ರಹವನ್ನನುಸರಿಸಿ ಆಡುಗಳು ಉತ್ಪನ್ನರಾದವು. ಪುನಃ ಅದೇ ಗ್ರಹವು ಈಗಲೂ ಉಪಯೋಗಿಸಲ್ಪಡುತ್ತದೆ. ಆದುದರಿಂದಲೇ ಪ್ರಾಣಿಗಳು ಇದರ ಫಲವಾಗಿ ಈಗಲೂ ಪದೇ ಪದೇ ಹಿಂದಿನಂತೆಯೇ ಆ ಗ್ರಹವನ್ನನುಸರಿಸಿ ಉತ್ಪನ್ನವಾಗುತ್ತವೆ.

ಅಂತರ್ಯಾಮಪಾತ್ರಮೇವಾನ್ವವಯಃ ಪ್ರಜಾಯಂತೇ । .... ...... ...... ಅಥ ಯದೇತಯೋರುಭಯೋಃ । ಸಹ ಸತೋರುಪಾಗ್ಂಶುಂ ಪೂರ್ವಂ ಜುಹೋತಿ ತಸ್ಮಾದು ಸಹ ತತೋಽಜಾವಿಕಸ್ಯೋಭಯಸ್ಯೈವಾಜಾಃ ಪೂರ್ವಾ ಯಂತ್ಯನೂಚ್ಯೋಽವಯಃ ॥
(ಶ. ಬ್ರಾ. ೪-೫-೫-೩, ೪)

ಅಂತ್ಯರ್ಯಾಮಗ್ರಹವನ್ನನುಸರಿಸಿ ಅವಿಗಳು (ಎಂದರೆ-ಕುರಿಗಳು) ಉತ್ಪನ್ನವಾದವು. ಉಪಾಂಶುಗ್ರಹ ಮತ್ತು ಅಂತರ್ಯಾಮಗ್ರಹ ಇವುಗಳಲ್ಲಿ ಒಂದಾದ ಮೇಲೆ ಇನ್ನೊಂದನ್ನು ಅರ್ಪಿಸುವುದರಿಂದ ಮೊದಲು ಅಜ (ಆಡು) ಅನಂತರ ಅವಿ (ಕುರಿ) ಗಳು ಹೀಗೆ ಕ್ರಮವನ್ನನುಸರಿಸುತ್ತವೆ.

ಶುಕ್ರಪಾತ್ರಮೇವಾನು ಮನುಷ್ಯಾಃ ಪ್ರಜಾಯಂತೇ । .... .... .... ಏಷ ವೈ ಶುಕ್ರೋ ಯ ಏಷ ತಪತ್ಯೇಷ ಉ ಏವೇಂದ್ರಃ ಪುರುಷೋ ವೈ ಪಶೂನಾಮೈಂದ್ರ ಸ್ತಸ್ಮಾತ್ಪಶೂನಾಮೀಷ್ಟೇ ॥
(ಶ. ಬ್ರಾ. ೪-೫-೫.೭)

ಶುಕ್ರಗ್ರಹವನ್ನನುಸರಿಸಿ ಮಾನವನು ಉತ್ಪನ್ನನಾದನು. ಐಹಿಕವಾದ ಯಾಗದಲ್ಲಿ ಉಪಯೋಗಿಸುವ ಶುಕ್ರಗ್ರಹವು ಅಂತರಿಕ್ಷದ ಸೂರ್ಯನಂತೆಯೇ ಪ್ರಭಾಯುತವಾಗಿರುತ್ತದೆ. ಆದುದರಿಂದ ಇಂದ್ರಸದೃಶವೇ ಆಗುತ್ತದೆ. ಇದರ ಪ್ರಭಾವದಿಂದ ಉತ್ಪನ್ನನಾದ ಮಾನವನು ಇತರ ಪ್ರಾಣಿಗಳ ಮೇಲೆ ಇಂದ್ರನಂತೆಯೇ ಪ್ರಭುತ್ವವನ್ನು ನಿರ್ವಹಿಸುತ್ತಾನೆ.

ಇದೇ ರೀತಿ ಇತರ ಪ್ರಾಣಿಗಳ ಉತ್ಪನ್ನವೂ ವಿವರಿಸಲ್ಪಟ್ಟಿರುತ್ತದೆ. ಹಿಂದಿನ ಋಕ್ಕಿನಲ್ಲಿ ಯಾವ ಛಂದಸ್ಸುಗಳು ಯಜ್ಞದಿಂದ ಉತ್ಪನ್ನವಾದವೆಂದು ತಿಳಿಸಿದೆಯೋ ಅದೇ ಛಂದಸ್ಸುಗಳಿಗೂ ಹಾಗೆಯೇ ಯಜ್ಞೋತ್ಪನ್ನವಾದ ಪ್ರಾಣಿಗಳಿಗೂ ಇರುವ ಸಾದೃಶ್ಯವನ್ನು ಈ ರೀತಿ ತಿಳಿಸಿದೆ.

ಪಶವೋ ವೈ ದೇವಾನಾಂ ಛಂದಾಗ್ಂಸಿ । ತದ್ಯೈವೇದಂ ಪಶವೋ ಯುಕ್ತಾ ಮನುಷ್ಯೇಭ್ಯೋ ವಹಂತ್ಯೇವಂ ಛಂದಾಗ್ಂಸಿ ಯುಕ್ತಾನಿ ದೇವೇಭ್ಯೋ ಯಜ್ಞಂ ವಹಂತಿ ತದ್ಯತ್ರ ಛಂದಾಗ್ಂಸಿ ದೇವಾನ್ತ್ಸಮತರ್ಪಯನ್ನಥ ಛಂದಾಗ್ಂಸಿ ದೇವಾಃ ಸಮತರ್ಪಯಂಸ್ತದ. ತಸ್ತತ್ಪ್ರಾಗಭೂದ್ಯಚ್ಛಂದಾಗ್ಂಸಿ ಯುಕ್ತಾನಿ ದೇವೇಭ್ಯೋ ಯಜ್ಞವವಾಕ್ಷುರ್ಯದ್ದೇವಾನ್ತ್ಸಮತೀತೃಪನ್ ॥
(ಶ. ಬ್ರಾ. ೪-೪.೩-೧

ಛಂದಸ್ಸುಗಳೇ ದೇವತೆಗಳ ಪಶುಗಳು, ಪೃಥ್ವಿಯಲ್ಲಿರುವ ಪಶುಗಳು ಮಾನವರಿಗೆ ಯಜ್ಞಸಾಧಕವಾಗಿರುವಂತೆ ಇದೇ ಛಂದಸ್ಸುಗಳು ದೇವತೆಗಳಿಗೆ ಯಜ್ಞಫಲವನ್ನೊದಗಿಸಲು ಸಾಧಕವಾಗಿರುತ್ತವೆ. ಯಾವ ಯಾವ ಸಂದರ್ಭಗಳಲ್ಲಿ ಛಂದಸ್ಸುಗಳು ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದವೋ ಆಯಾ ಸಂದರ್ಭಗಳಲ್ಲೆಲ್ಲ ದೇವತೆಗಳೂ ಛಂದಸ್ಸುಗಳನ್ನು ಪುಷ್ಟಿಗೊಳಿಸಿದರು, ಇತ್ಯಾದಿಯಾಗಿ ಯಜ್ಞೋತ್ಪನ್ನವಾದ ಛಂದಸ್ಸುಗಳು, ಪಶುಗಳು ಇತ್ಯಾದಿಗಳ ಪ್ರಭಾವವನ್ನು ತಿಳಿಸಿದೆ.

## ಮುಖ್ಯಾಭಿಪ್ರಾಯವು

ಹಿಂದೆ ಇದೇ ಸೂಕ್ತದ ಎಂಟನೆಯ ಋಕ್ಕಿನಲ್ಲಿ ಆರಣ್ಯಾನ್ ಗ್ರಾಮ್ಯಾನ್ ಪಶೂನ್ ಎಂದು ಯಜ್ಞದಲ್ಲಿ ಪಶುಗಳ ಉತ್ಪತ್ತಿಯಾಯಿತೆಂದು ಸಾಮಾನ್ಯವಾಗಿ ಹೇಳಿದೆಯಷ್ಟೆ. ಆ ವಿಷಯದಲ್ಲಿ ಎಂದರೆ ಗ್ರಾಮ್ಯ ಪಶುಗಳ

ವಿಷಯದಲ್ಲಿ ಸ್ವಲ್ಪ ವಿಶದವಾದ ವಿವರಣೆಯು ಈ ಋಕ್ಕಿನಲ್ಲಿ ಉಕ್ತವಾಗಿದೆ. ಎಂದರೆ ಯಾವ ಯಾವ ಪಶುಗಳ ಉತ್ಪತ್ತಿಯಾಯಿತು ಎಂಬ ವಿಷಯದಲ್ಲಿ ಸ್ವಲ್ಪ ವಿಸ್ತಾರವಾದ ವಿವರಣೆ ಇದೆ.

**ತಸ್ಮಾದಶ್ವಾ ಅಜಾಯಂತ ಯೇ ಕೇ ಚ ಉಭಯಾದತಃ**—ಆ ಯಜ್ಞದಿಂದ ಅಶ್ವಗಳ ಉತ್ಪತ್ತಿಯಾಯಿತು. ಅಶ್ವವೆಂದರೆ—**ಶ್ವಾನೋ ನ ಭವತೀತ್ಯಶ್ವಾಃ** ಶ್ವಾನವೆಂದರೆ ನಾಯಿಯು. ಸ್ವಲ್ಪಮಟ್ಟಿಗೆ ನಾಯಿಯನ್ನೇ ಹೋಲುತ್ತಿರುವ ಆಕಾರವಿದ್ದರೂ ನಾಯಿಯಲ್ಲವಾದ ಪ್ರಾಣಿಯೇ ಅಶ್ವ—ಕುದುರೆ ಎಂದು ಅಶ್ವಶಬ್ದದ ರೂಪ ನಿಷ್ಪತ್ತಿಯು. ಈ ಅಶ್ವಶಬ್ದಕ್ಕೆ **ಉಭಯಾದತಃ** ಎಂಬ ಪದವು ವಿಶೇಷಣವಾಗಿದೆ. **ಊರ್ಧ್ವಾಧೋ ದಶನಾನಿ ಯೇಷಾಂ ತೇ**—ಈ ಪ್ರಾಣಿಗಳಲ್ಲಿ ಎಂದರೆ ಅಶ್ವಜಾತಿಯ ಪ್ರಾಣಿಗಳ ಮೇಲಿನ ಮತ್ತು ಕೆಳಗಿನ ಎರಡು ದವಡೆಗಳಲ್ಲಿಯೂ ಹಲ್ಲುಗಳಿರುವವು. ಇಂತಹ ಅಶ್ವಾದಿಗಳ ಉತ್ಪತ್ತಿಯಾಯಿತೆಂದಭಿಪ್ರಾಯವು.

**ಗಾವೋ ಹ ಜಜ್ಞಿರೇ**—ಅನಂತರ ಗೋವುಗಳ ಉತ್ಪತ್ತಿಯಾಯಿತು. ಈ ಗೋವುಗಳಿಗೆ ಊರ್ಧ್ವದಂತಪಂಕ್ತಿಮಾತ್ರವಿರುವುದು. ಅಧೋದಂತಪಂಕ್ತಿ ಇರುವುದಿಲ್ಲ.

**ತಸ್ಮಾಜ್ಜಾತಾ ಅಜಾವಯಃ—ಅಜಾಃ ಅವಯಶ್ಚ ಜಾತಾಃ ।** ಮತ್ತು ಆ ಯಜ್ಞದಿಂದ ಆಡುಗಳು ಮತ್ತು ಕುರಿಗಳು ಉತ್ಪನ್ನವಾದವು. ಮೇಲೆ ಹೇಳಿದ ಅಶ್ವ, ಗೋವುಗಳು, ಆಡು, ಕುರಿ ಇವುಗಳೆಲ್ಲವೂ ಯಜ್ಞಾನುಷ್ಠಾನಕ್ಕೆ ಅತ್ಯವಶ್ಯಕವಾದ ಪ್ರಾಣಿಗಳು. ಗೋವಿನಿಂದ ಲಬ್ಧವಾಗುವ ಹಾಲು, ಮೊಸರು, ತುಪ್ಪ ಇವುಗಳ ಉಪಯೋಗವು ಯಜ್ಞಾದಿಗಳಲ್ಲಿ ವಿಶೇಷವಾಗಿದೆ. ಆಜ್ಯಾದಿಹೋಮದ್ರವ್ಯಾದಿಗಳಿಲ್ಲದೆ ಯಜ್ಞವು ನೆರವೇರುವಂತಿಲ್ಲ. ಆದ್ದರಿಂದ ಗೋವುಗಳು ಯಜ್ಞಕ್ಕೆ ಅವಶ್ಯಕವಾದ ಪ್ರಾಣಿಗಳು. ಹಾಗೆಯೇ ಯಜ್ಞಪಶುಗಳಿಗಾಗಿ ಅಶ್ವ, ಆಡು, ಕುರಿ ಎಂಬ ಪ್ರಾಣಿಗಳ ಆವಶ್ಯಕತೆಯೂ ಇದೆ. ಆದ್ದರಿಂದ ಈ ಪ್ರಾಣಿಗಳ ಅಥವಾ ಗ್ರಾಮ್ಯಪಶುಗಳ ಉತ್ಪತ್ತಿಯಾಯಿತೆಂದು ಇಲ್ಲಿ ವಿಶದವಾಗಿ ವಿವರಿಸಲಾಗಿದೆ.



॥ ಸಂಹಿತಾಪಾಠಃ ॥

**ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।**
**ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ॥**

॥ ಪದಪಾಠಃ ॥

**ಯತ್ । ಪುರುಷಂ । ವಿ । ಅದಧುಃ । ಕತಿಧಾ । ವಿ । ಅಕಲ್ಪಯನ್ ।**
**ಮುಖಂ । ಕಿಂ । ಅಸ್ಯ । ಕೌ । ಬಾಹೂ ಇತಿ । ಕೌ । ಊರೂ ಇತಿ । ಪಾದಾ । ಉಚ್ಯೇತೇ ಇತಿ ॥**

॥ ಸಾಯಣಭಾಷ್ಯಂ ॥

ಪ್ರಶ್ನೋತ್ತರರೂಪೇಣ ಬ್ರಾಹ್ಮಣಾದಿಸೃಷ್ಟಿಂ ವಕ್ತುಂ ಬ್ರಹ್ಮವಾದಿನಾಂ ಪ್ರಶ್ನಾ ಉಚ್ಯಂತೇ । ಪ್ರಜಾಪತೇಃ ಪ್ರಾಣರೂಪಾ ದೇವಾ ಯದ್ಯದಾ ಪುರುಷಂ ವಿರಾಡ್ರೂಪಂ ವ್ಯದಧುಃ ಸಂಕಲ್ಪೇನೋತ್ಪಾದಿತವಂತಃ ತದಾನೀಂ ಕತಿಧಾ ಕತಿಭಿಃ ಪ್ರಕಾರೈರ್ವ್ಯಕಲ್ಪಯನ್ । ವಿವಿಧಂ ಕಲ್ಪಿತವಂತಃ । ಅಸ್ಯ ಪುರುಷಸ್ಯ ಮುಖಂ ಕಿಮಾಸೀತ್ । ಕೌ ಬಾಹೂ ಅಭೂತಾಂ । ಕಾ ಊರೂ । ಕೌ ಚ ಪಾದಾವುಚ್ಯೇತೇ । ಪ್ರಥಮಂ ಸಾಮಾನ್ಯರೂಪಃ ಪ್ರಶ್ನಃ ಪಶ್ಚಾನ್ಮುಖಂ ಕಿಮಿತ್ಯಾದಿನಾ ವಿಶೇಷವಿಷಯಾಃ ಪ್ರಶ್ನಾಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಪುರುಷಂ**—ವಿರಾಟ್ಪುರುಷನನ್ನು । **ವ್ಯದಧುಃ**—ಯಜ್ಞಾಹುತಿಯನ್ನಾಗಿ ಸಂಕಲ್ಪಿಸಿದರೋ ಆಗ । **ಕತಿಧಾ**—ಎಷ್ಟು ಪ್ರಕಾರವಾಗಿ । **ವ್ಯಕಲ್ಪಯನ್**—ಅವನನ್ನು ವಿಭಾಗಿಸಿದರು । **ಅಸ್ಯ**—ಈ ಪುರುಷನ । **ಮುಖಂ**—ಮುಖವು । **ಕಿಂ**—ಯಾವುದು । **ಅಸ್ಯ**—ಇವನ । **ಬಾಹೂ**—ಬಾಹುಗಳು । **ಕಾ**—ಯಾವುವು । **ಊರೂ**—ತೊಡೆಗಳೂ । **ಪಾದಾ**—ಪಾದಗಳೂ । **ಕೌ**—ಯಾವುವು ಎಂದು । **ಉಚ್ಯೇತೇ**—ಪ್ರಸಿದ್ಧವಾಗಿವೆ ?

॥ ಭಾವಾರ್ಥ ॥

ಈ ವಿರಾಟ್ಪುರುಷನನ್ನು ಯಜ್ಞಾಹುತಿರೂಪದಲ್ಲಿ ಅರ್ಪಿಸಲು ಸಂಕಲ್ಪಿಸಿದಾಗ ಅವನನ್ನು ಎಷ್ಟು ಪ್ರಕಾರವಾಗಿ ವಿಭಾಗಿಸಿದರು ? ಈ ಪುರುಷನ ಮುಖವಾವುದು ? ಇವನ ಬಾಹುಗಳು ಯಾವುವು ? ಇವನ ತೊಡೆಗಳೂ ಮತ್ತು ಪಾದಗಳೂ ಯಾವುವು ?

## English Translation

When they immolated Purusha, into how many portions did they divide him ? What was his mouth called, what his arms, what his thighs what were his feet called ?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಪ್ರಶ್ನೋತ್ತರರೂಪವಾಗಿ ಸೃಷ್ಟಿಕ್ರಮವು ವಿವೃತವಾಗಿದೆ. ಹಿಂದೆ ಈ ಸೂಕ್ತದ ನಾಲ್ಕನೆಯ ಋಕ್ಕಿನ ಉತ್ತರಾರ್ಧದಲ್ಲಿ **ತತೋ ವಿಷ್ವಙ್ ವ್ಯಕ್ರಾಮತ್-ದೇವಮನುಷ್ಯತಿರ್ಯಗಾದಿರೂಪೇಣ ವಿವಿಧಃ ಸನ್ ವ್ಯಾಪ್ತವಾನ್ ।** ದೇವತೆಗಳು, ಮನುಷ್ಯರು, ತಿರ್ಯಗ್ಜಂತುಗಳು ಮೊದಲಾದ ಅನೇಕವಿಧ ಪ್ರಾಣಿಗಳ ಉತ್ಪತ್ತಿಯಾಯಿತು ಎಂದರೆ ಪರಮಾತ್ಮನೇ ನಾನಾವಿಧಶರೀರಗಳಿಂದ ಆವಿರ್ಭೂತನಾದನು ಎಂದು ಹೇಳಿದೆಯಷ್ಟೆ. ಇದುವರೆಗೂ ದೇವತೆಗಳ ಮತ್ತು ಪಶುಗಳ ಉತ್ಪತ್ತಿಯನ್ನು ಹೇಳಿದ್ದಾಯಿತು. ಪ್ರಕೃತ ಋಕ್ಕಿನಲ್ಲಿ ಮನುಷ್ಯರ ಉತ್ಪತ್ತಿಯು ಹೇಗಾಯಿತು ಎಂಬ ಪ್ರಶ್ನೆಯು ಸೂಚಿತವಾಗಿ ಅದಕ್ಕೆ ಪ್ರತ್ಯುತ್ತರರೂಪದಿಂದ ಮುಂದಿನ ಋಕ್ಕಿನಲ್ಲಿ ಬ್ರಾಹ್ಮಣಾದಿವರ್ಣಚತುಷ್ಟಯಗಳ ಉತ್ಪತ್ತಿಕ್ರಮವನ್ನು ವಿವರಿಸಲಾಗಿದೆ.

**ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್**—ವಿರಾಟ್ಪುರುಷನ ಉತ್ಪತ್ತಿಯಾದನಂತರ ಮುಂದೆ ಮನುಷ್ಯವರ್ಗದ ಸೃಷ್ಟಿಯು ಯಾವ ಪ್ರಕಾರವಾಗಿ ಅಥವಾ ಎಷ್ಟು ವಿಧವಾಗಿ ಆಯಿತು ಎಂಬ ಪ್ರಶ್ನೆಯು ಇಲ್ಲಿ

ಉಕ್ತವಾಗಿದೆ ಇಲ್ಲಿ **ಕತಿಧಾ** ಎಂದರೆ ಎಷ್ಟುವಿಧವಾಗಿ ಎಂಬರ್ಥವು ಎಂದರೆ ಮನುಷ್ಯರಲ್ಲಿ ಯಾವ ಯಾವ ಭೇದಗಳು, ಎಷ್ಟು, ಹೇಗೆ ಉಂಟಾದವು ಎಂದಭಿಪ್ರಾಯವು. ಅದನ್ನೇ ಈ ಋಕ್ಕಿನ ಉತ್ತರಾರ್ಧದಲ್ಲಿ ಸ್ವಲ್ಪ ವಿಶದವಾಗಿ ಪ್ರಶ್ನೆಯರೂಪದಲ್ಲಿ ಕೇಳಲಾಗಿದೆ.

**ಮುಖಂ ಕಿಮಸ್ಯ, ಕೌ ಬಾಹೂ, ಕೌ ಊರೂ, ಕೌ ಪಾದೌ**— ಈ ಪರಮಪುರುಷನ ಮುಖದಿಂದ ಉತ್ಪನ್ನವಾದದ್ದೇನು ? ಬಾಹುಗಳಿಂದ ಯಾರು ಉತ್ಪನ್ನರಾದರು, ಊರೂ ಎಂದರೆ ತೊಡೆಗಳಿಂದ ಉತ್ಪನ್ನರಾದವರು ಯಾರು ? ಪಾದಗಳಿಂದ ಯಾರು ಉತ್ಪನ್ನರಾದರು ಎಂಬ ಈ ನಾಲ್ಕು ಪ್ರಶ್ನೆಗಳಿಗೂ ಮುಂದಿನ ಋಕ್ಕಿನ ನಾಲ್ಕು ಪಾದಗಳಲ್ಲಿ ಕ್ರಮವಾಗಿ ಉತ್ತರವು ವಿವೃತವಾಗಿದೆ.

। ಸಂಹಿತಾಪಾಠಃ ।

ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ ।

ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥

॥ ಪದಪಾಠಃ ॥

ಬ್ರಾಹ್ಮಣಃ । ಅಸ್ಯ । ಮುಖಂ । ಆಸೀತ್ । ಬಾಹೂ ಇತಿ । ರಾಜನ್ಯಃ । ಕೃತಃ ।

ಊರೂ ಇತಿ । ತತ್ । ಅಸ್ಯ । ಯತ್ । ವೈಶ್ಯಃ । ಪತ್ಽಭ್ಯಾಂ । ಶೂದ್ರಃ । ಅಜಾಯತ ॥

। ಸಾಯಣಭಾಷ್ಯಂ ।

**ಇದಾನೀಂ ಪೂರ್ವೋಕ್ತಾನಾಂ ಪ್ರಶ್ನಾನಾಮುತ್ತರಾಣಿ ದರ್ಶಯತಿ । ಅಸ್ಯ ಪ್ರಜಾಪತೇ- ರ್ಬ್ರಾಹ್ಮಣೋ ಬ್ರಾಹ್ಮಣತ್ವಜಾತಿವಿಶಿಷ್ಟಃ ಪುರುಷೋ ಮುಖಮಾಸೀತ್ । ಮುಖಾದುತ್ಪನ್ನ ಇತ್ಯರ್ಥಃ। ಯೋಽಯಂ ರಾಜನ್ಯಃ ಕ್ಷತ್ರಿಯತ್ವಜಾತಿಮಾನ್ಪುರುಷಃ ಸ ಬಾಹೂ ಕೃತಃ । ಬಾಹುತ್ವೇನ ನಿಷ್ಪಾದಿತಃ। ಬಾಹುಭ್ಯಾಮುತ್ಪಾದಿತ ಇತ್ಯರ್ಥಃ । ತತ್ತದಾನೀಮಸ್ಯ ಪ್ರಜಾಪತೇರ್ಯದೂರೂ ತದ್ರೂಪೋ ವೈಶ್ಯಃ ಸಂಪನ್ನಃ । ಊರೂಭ್ಯಾಮುತ್ಪನ್ನ ಇತ್ಯರ್ಥಃ । ತಥಾಸ್ಯ ಪದ್ಭ್ಯಾಂ ಪಾದಾಭ್ಯಾಂ ಶೂದ್ರಃ ಶೂದ್ರತ್ವ- ಜಾತಿಮಾನ್ಪುರುಷೋಽಜಾಯತ । ಇಯಂ ಚ ಮುಖಾದಿಭ್ಯೋ ಬ್ರಾಹ್ಮಣಾದೀನಾಮುತ್ಪತ್ತಿರ್ಯಜುಃ- ಸಂಹಿತಾಯಾಂ ಸಪ್ತಮಕಾಂಡೇ ಸ ಮುಖತಸ್ತ್ರಿವೃತಂ ನಿರಮಿಮೀತ । ತೈ. ಸಂ. ೭-೧-೧-೪ । ಇತ್ಯಾದೌ ವಿಸ್ಪಷ್ಟಮಾಮ್ನಾತಾ । ಅತಃ ಪ್ರಶ್ನೋತ್ತರೇ ಉಭೇ ಅಪಿ ತತ್ಪರತ್ವೈವ ಯೋಜನೀಯೇ ॥**

। ಪ್ರತಿಪದಾರ್ಥ ।

**ಬ್ರಾಹ್ಮಣಃ**—ಬ್ರಾಹ್ಮಣನೇ । **ಅಸ್ಯ**—ಈ ಪುರುಷನ । **ಮುಖಂ**—ಮುಖವಾಗಿ । **ಆಸೀತ್**—ಆದನು (ಇವನ ಮುಖದಿಂದ ಬ್ರಾಹ್ಮಣನು ಉತ್ಪನ್ನನಾದನು) । **ಬಾಹೂ**—ಬಾಹುಗಳು । **ರಾಜನ್ಯಃ**—ಕ್ಷತ್ರಿಯರೂಪವಾಗಿ।

**ಕೃತಃ**—ಮಾಡಲ್ಪಟ್ಟವು. (ಬಾಹುಗಳಿಂದ ಕ್ಷತ್ರಿಯರು ಉತ್ಪನ್ನರಾದರು) | **ತತ್**—ಆಗ | **ಅಸ್ಯ**—ಈ ಪುರುಷನ | **ಊರೂ**—ತೊಡೆಗಳು | **ವೈಶ್ಯಃ**—ವೈಶ್ಯರೂಪದಲ್ಲಿ ಪರಿಣಮಿಸಿದವು | **ಪದ್ಭ್ಯಾಂ**—ಪಾದಗಳಿಂದ | **ಶೂದ್ರಃ**—ಶೂದ್ರನು | ಅಜಾಯತ—ಉತ್ಪನ್ನನಾದನು.

|| **ಭಾವಾರ್ಥ** ||

ಈ ಪುರುಷನ ಮುಖದಿಂದ ಬ್ರಾಹ್ಮಣನೂ, ಬಾಹುಗಳಿಂದ ಕ್ಷತ್ರಿಯರೂ ಪ್ರಶ್ನೆಗಳಿಗೆ ಉತ್ಪನ್ನರಾದರು. ಇವನ ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಉತ್ಪನ್ನರಾದರು.

## English Translation

His mouth became the Brahmins, his arms became the Rajanya, his thighs became the Vaisyas ; the Sudra was born from his feet.

|| ವಿಶೇಷವಿಷಯಗಳು ||

**ಮುಖಂ ಕಿಮಸ್ಯ ಕೌ ಬಾಹೂ**........ಇತ್ಯಾದಿಯಾದ ಹಿಂದಿನ ಋಕ್ಕಿನಲ್ಲಿರುವ ಪ್ರಶ್ನೆಗಳಿಗೆ ಈ ಮಂತ್ರವು ಉತ್ತರ ರೂಪವಾಗಿರುತ್ತದೆ.

(೧) ಪ್ರಶ್ನೆ—**ಮುಖಂ ಕಿಂ ?** ಈ ಪುರುಷನ ಮುಖವಾವುದು ?

**ಉತ್ತರ—ಬ್ರಾಹ್ಮಣೋಽಸ್ಯ ಮುಖಮಾಸೀತ್ :** ಬ್ರಾಹ್ಮಣನೇ ಈ ಪುರುಷನ ಮುಖ. ಎಂದರೆ ಮುಖದಿಂದ ಉತ್ಪನ್ನನಾದವನು ಎಂದರ್ಥ.

(೨) ಪ್ರಶ್ನೆ—**ಕೌ ಬಾಹೂ ?** ಈ ಪುರುಷನ ಬಾಹುಗಳಾವುವು ?

**ಉತ್ತರ—ಬಾಹೂ ರಾಜನ್ಯಃ ಕೃತಃ**—ಕ್ಷತ್ರಿಯನು ಬಾಹುಗಳೆಂದು ಪರಿಗಣಿತನು ಎಂದರೆ, ಕ್ಷತ್ರಿಯನು ಪುರುಷನ ಬಾಹುಗಳಿಂದ ಉತ್ಪನ್ನನಾದನು ಎಂದರ್ಥ.

(೩) ಪ್ರಶ್ನೆ—**ಕೌ ಊರೂ ?** ಈ ಪುರುಷನ ತೊಡೆಗಳಾವುವು ?

**ಉತ್ತರ—ಊರೂ ತದಸ್ಯ ಯದ್ವೈಶ್ಯಃ**—ವೈಶ್ಯನು ಪರಮಪುರುಷನ ತೊಡಗಳು. ಎಂದರೆ, ಅವನ ತೊಡೆಗಳಿಂದ ಉತ್ಪನ್ನನಾದವನೆಂದು ತಾತ್ಪರ್ಯ.

(೪) ಪ್ರಶ್ನೆ—**ಕೌ ಪಾದೌ ?**—ಪುರುಷನ ಪಾದಗಳಾವುವು ?

**ಉತ್ತರ—ಪದ್ಭ್ಯಾಂ ಶೂದ್ರೋ ಅಜಾಯತ**—ಅವನ ಪಾದಗಳಿಂದ ಶೂದ್ರನು ಉತ್ಪನ್ನನಾದನು.

ಇದೇ ವಿಷಯವನ್ನು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ತಿಳಿಸಿರುತ್ತದೆ.

ಪ್ರಜಾಪತಿರ್ವಾವ ಜ್ಯೇಷ್ಠಸ್ಸ ಹ್ಯೇತೇನಾಗ್ರೇಽಯಜತ ಪ್ರಜಾಪತಿರಕಾಮಯತ ಪ್ರ ಜಾಯೇ ಯೇತಿ ಸ ಮುಖತಸ್ತ್ರಿವೃತಂ ನಿರಮಿಮೀತ ತಮಗ್ನಿರ್ದೇವತಾಽನ್ವಸೃಜ್ಯತ ಗಾಯತ್ರೀ-ಚ್ಛಂದೋ ರಥಂತರಗ್‌ಂ ಸಾಮ ಬ್ರಾಹ್ಮಣೋ ಮನುಷ್ಯಾಣಾಮಜಃ ಪಶೂನಾಂ ತಸ್ಮಾತ್ತೇ ಮುಖ್ಯಾ ಮುಖತೋ ಹ್ಯಸೃಜ್ಯಂತ ॥

(ತೈ. ಸಂ. ೭-೧-೧-೪)

ಅತ್ಯುತ್ತಮನಾದ ಯಜ್ಞವನ್ನು ನಿರ್ವಹಿಸಿ ಪ್ರಜಾಪತಿಯು ಪ್ರಜಾಕಾಮನಾದನು. ತ್ರಿವೃತ್ಸ್ತೋಮವನ್ನು ನಿರ್ಮಿಸಿದನು. ಅನಂತರ ದೇವತೆಗಳಲ್ಲಿ ಅಗ್ನಿಯೂ, ಛಂದಸ್ಸುಗಳಲ್ಲಿ ಗಾಯತ್ರಿಯೂ, ಸಾಮಗಳಲ್ಲಿ ರಥಂತರವೂ ಮಾನವರಲ್ಲಿ ಬ್ರಾಹ್ಮಣನೂ, ಪಶುಗಳಲ್ಲಿ ಆಡೂ ಸೃಷ್ಟವಾದವು. ಮುಖದಿಂದ ಉತ್ಪನ್ನರಾದುದರಿಂದ ಇವುಗಳಿಗೆ ಮುಖ್ಯಸ್ಥಾನವಿದೆ.

ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾನ್ವಸೃಜ್ಯತ ತ್ರಿಷ್ಟುಪ್ ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಮವಿಃ ಪಶೂನಾಂ ತಸ್ಮಾತ್ತೇ ವೀರ್ಯಾವಂತೋ ವೀರ್ಯಾದ್ಧ್ಯಸೃಜ್ಯಂತ ॥

(ತೈ. ಸಂ ೭-೧-೧-೪, ೫)

ಉರಸ್ಸು (ಎದೆ) ಮತ್ತು ಬಾಹುಗಳಿಂದ ಪಂಚದಶಸ್ತೋಮವನ್ನು ನಿರ್ಮಿಸಿದನು. ಅನಂತರ ದೇವತೆಗಳಲ್ಲಿ ಇಂದ್ರನೂ, ಛಂದಸ್ಸುಗಳಲ್ಲಿ ತ್ರಿಷ್ಟುಪ್ಪೂ, ಸಾಮಗಳಲ್ಲಿ ಬೃಹತ್ತೂ, ಮಾನವರಲ್ಲಿ ರಾಜನ್ಯನೂ, ಪಶುಗಳಲ್ಲಿ ಕುರಿಯೂ ಉತ್ಪನ್ನವಾದವು. ವೀರ್ಯದಿಂದ ಉತ್ಪನ್ನರಾದುದರಿಂದ ಅವರೆಲ್ಲರೂ ವೀರ್ಯವಂತರು.

ಮಧ್ಯತಸ್ಸಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಚ್ಛಂದೋ ವೈರೂಪಗ್‌ಂ ಸಾಮ ವೈಶ್ಯೋ ಮನುಷ್ಯಾಣಾಂ ಗಾವಃ ಪಶೂನಾಂ ತಸ್ಮಾತ್ತ ಆದ್ಯಾ ಅನ್ನಧಾನಾದ್ಧ್ಯಸೃಜ್ಯಂತ ತಸ್ಮಾದ್ಭೂಯಾಗ್‌ಂಸೋಽನ್ಯೇಭ್ಯೋ ಭೂಯಿಷ್ಠಾ ಹಿ ದೇವತಾ ಅನ್ವಸೃಜ್ಯಂತ ॥

(ತೈ. ಸಂ. ೭-೧-೧-೫)

ದೇಹದ ಮಧ್ಯಪ್ರದೇಶದಿಂದ (ಉದರ) ಸಪ್ತದಶಸ್ತೋಮವನ್ನು ನಿರ್ಮಿಸಿದನು. ಅನಂತರ ವಿಶ್ವೇದೇವತೆಗಳೂ, ಛಂದಸ್ಸಿನಲ್ಲಿ ಜಗತಿಯೂ, ಸಾಮಗಳಲ್ಲಿ ವೈರೂಪವೂ ಮಾನವರಲ್ಲಿ ವೈಶ್ಯರೂ, ಪಶುಗಳಲ್ಲಿ ಗೋವುಗಳೂ ಉತ್ಪನ್ನವಾದವು. ಉದರದಿಂದ ಉತ್ಪನ್ನವಾದುದರಿಂದ ಅವೆಲ್ಲವೂ ಅನ್ನಯೋಗ್ಯವಾದವು. ಅನೇಕ ದೇವತೆಗಳನ್ನವಲಂಬಿಸಿ ಉತ್ಪನ್ನವಾದುದರಿಂದ ವೈಶ್ಯಾದಿಗಳು ಇತರರಿಗಿಂತಲೂ ಅಧಿಕ ಸಂಖ್ಯೆಯಲ್ಲಿರುತ್ತಾರೆ.

ಪತ್ತ ಏಕವಿಗ್‌ಂಶಂ ನಿರಮಿಮೀತ ತಮನುಷ್ಟುಪ್ ಛಂದಃ ಅನ್ವಸೃಜ್ಯತ ವೈರಾಜಗ್‌ಂ ಸಾಮ ಶೂದ್ರೋ ಮನುಷ್ಯಾಣಾಮಶ್ವಃ ಪಶೂನಾಂ ತಸ್ಮಾತ್ತೌ ಭೂತಸಂಕ್ರಾಮಿಣಾವಶ್ವಶ್ಚ ಶೂದ್ರಶ್ಚ ತಸ್ಮಾಚ್ಛೂದ್ರೋ ಯಜ್ಞೇಽನವಕ್ಲೃಪ್ತಾಃ ನ ಹಿ ದೇವತಾ ಅನ್ವಸೃಜ್ಯತ ತಸ್ಮಾತ್ಪಾದಾವುಪಜೀವತಃ ಪತ್ತೋ ಹ್ಯಸೃಜ್ಯೇತಾಂ ॥

(ತೈ. ಸಂ. ೭-೧-೧-೫, ೬)

ಪಾದಗಳಿಂದ ಏಕವಿಂಶಸ್ತೋಮವನ್ನು ಪ್ರಜಾಪತಿಯು ನಿರ್ಮಿಸಿದನು. ಅನಂತರ ಛಂದಸ್ಸುಗಳಲ್ಲಿ ಅನುಷ್ಟುಪ್ಪೂ, ಸಾಮಗಳಲ್ಲಿ ವೈರಾಜವೂ, ಮಾನವರಲ್ಲಿ ಶೂದ್ರರೂ, ಪಶುಗಳಲ್ಲಿ ಅಶ್ವವೂ ಉತ್ಪನ್ನವಾದವು. ಆದುದರಿಂದಲೇ ಶೂದ್ರ ಮತ್ತು ಅಶ್ವಗಳು ಇತರರ ಅಧೀನದಲ್ಲಿರುತ್ತಾರೆ. ಶೂದ್ರನು ದೇವತೆಗಳನ್ನವಲಂಬಿಸಿ ಉತ್ಪನ್ನನಾಗಲಿಲ್ಲ. ಆದುದ ರಿಂದಲೇ ಅವನಿಗೆ ಯಜ್ಞಾಧಿಕಾರವಿಲ್ಲ. ಪಾದಗಳಿಂದ ಉತ್ಪನ್ನವಾದುದರಿಂದ ಅಶ್ವ ಮತ್ತು ಶೂದ್ರರು ತಮ್ಮ ಕಾಲುಗಳನ್ನೇ ಅವಲಂಬಿಸಿ ಜೀವಿಸಬೇಕಾಗಿರುತ್ತದೆ.

ಋಕ್ಸಂಹಿತೆಯಲ್ಲಿಯೂ, ತೈತ್ತಿರೀಯಸಂಹಿತೆಯಲ್ಲಿಯೂ ವರ್ಣವಿಭಾಗವು ಇಷ್ಟು ನಿಷ್ಕೃಷ್ಟವಾಗಿ ಉಕ್ತ ವಾಗಿರುವಾಗ ಕೆಲವು ಆಂಗ್ಲವ್ಯಾಖ್ಯಾಕಾರರೂ ಮತ್ತು ಅವರನ್ನನುಸರಿಸಿದ ಕೆಲವು ಭಾರತೀಯರೂ ಋಕ್ಸಂಹಿತೆಯಲ್ಲಿ ವರ್ಣವಿಭಾಗದ ಪ್ರಸ್ತಾಪವೇ ಇಲ್ಲವೆನ್ನುತ್ತ ತಮ್ಮ ವಾದಕ್ಕೆ ತಮಗನುಗುಣವಾದ ವ್ಯಾಖ್ಯಾನವನ್ನು ಮಾಡುತ್ತ ಸಂಪ್ರದಾಯವಿರುದ್ಧವಾದ ಕೆಲವು ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಪ್ರಥಮತಃ, ಅವರು ತಿಳಿಸುವ ಅಭಿಪ್ರಾಯಗಳು ಸಹೇತುಕವೇ, ಎಂದರೆ ಯುಕ್ತಿಯುಕ್ತವಾಗಿವೆಯೋ, ಅವಕ್ಕೆ ನ್ಯಾಯವಾದ ಆಧಾರವಿರುತ್ತದೆಯೋ ಎಂಬು ದನ್ನು ಪರಿಶೀಲಿಸ ಬೇಕಾದುದು ಪ್ರಕೃತ ಅವಶ್ಯವಾಗಿರುತ್ತದೆ.

ಪುರುಷಸೂಕ್ತದಲ್ಲಿ (ಋ. ಸಂ. ೧೦–೯೦) ವರ್ಣವಿಭಾಗದ ಕ್ರಮವು ಸ್ಪಷ್ಟವಾಗಿ ಹೇಳಲ್ಪಟ್ಟಿದ್ದರೂ ಸಹ‹ ಈ ಸೂಕ್ತವು ಋಕ್ಸಂಹಿತೆಯ ಪ್ರಾಚೀನವಾದ ಭಾಗಗಳಿಗೆ ಸೇರಿದ್ದಲ್ಲ. ಇದು ಬಹಳ ಅರ್ವಾಚೀನವಾದುದರಿಂದ ಇಲ್ಲಿ ಹೇಳಿರುವ ಅಭಿಪ್ರಾಯಗಳನ್ನು ಋಕ್ಸಂಹಿತೆಯ ಅಭಿಪ್ರಾಯವೆಂದು ಹೇಳಲು ಸಾಧ್ಯವಿಲ್ಲ ಎಂಬುದೇ ಅವರ ಮುಖ್ಯವಾದ ಈ ಅಭಿಪ್ರಾಯವು ಅಷ್ಟು ಸರಿಯಲ್ಲ. ವೇದದ ಭಾಗಗಳಲ್ಲಿ ಕೆಲವು ಪ್ರಾಚೀನ ಇನ್ನು ಕೆಲವು ಅರ್ವಾಚೀನ ಎಂದು ವಿಭಾಗಮಾಡಲು ಆಂಗ್ಲವ್ಯಾಖ್ಯಾಕಾರರು ತೋರಿಸಿರುವ ಪ್ರಮಾಣಗಳು ಯಾವುವೂ ಸರಿಯಲ್ಲ. ಪುರುಷಸೂಕ್ತವು ಇತ್ತೀಚಿನದು, ಅದು ಋಗ್ವೇದಸಂಹಿತೆಯಲ್ಲಿ ಪ್ರಕ್ಷಿಪ್ತಭಾಗ ಎಂದು ಹೇಳುವುದು ಸಂಪ್ರದಾಯವಿರುದ್ಧವಾದುದು ಮಾತ್ರವಲ್ಲದೇ, ಹಾಗೆ ಹೇಳಲು ಭಾವದೃಷ್ಟಿಯಿಂದಾಗಲಿ ಅಥವಾ ಭಷಾದೃಷ್ಟಿ ಯಿಂದಾಗಲಿ ಅವಕಾಶವೇ ಇರುವುದಿಲ್ಲ. ಆಧುನಿಕಕಾವ್ಯಗಳ್ನು ಅಳೆಯುವ ಪ್ರಮಾಣಗಳಿಂದ ವೇದದ ಸ್ವರೂಪ ವನ್ನು ನಿಷ್ಕರ್ಷಿಸಲು ಖಂಡಿತ ಸಾಧ್ಯವಿಲ್ಲ. ಆದುದರಿಂದ ಪುರುಷಸೂಕ್ತವು ಪ್ರಕ್ಷಿಪ್ತಭಾಗ ಎಂದು ಹೇಳಲು ಇವರು ತೋರಿಸಿರುವ ಕಾರಣಗಳಲ್ಲಿ ಯಾವುದೂ ಸಾಧುವಾಗಿಲ್ಲ. ಅಲ್ಲದೇ ;—

ವರ್ಣವ್ಯವಸ್ಥೆಯು ಋಕ್ಸಂಹಿತಾಭಾಗಗಳಲ್ಲಿ ಪುರುಷಸೂಕ್ತವಲ್ಲದೆ ಇತರ ಕಡೆಗಳಲ್ಲಿಯೂ ಅನೇಕಸಂದರ್ಭ ಗಳಲ್ಲಿ ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಆ ಪ್ರಕರಣಗಳನ್ನು ಉದಾಹರಿಸಿ ಈ ವಿಷಯವನ್ನು ವಿಶದಪಡಿಸುವ ಮೊದಲು ಆಂಗ್ಲಪಂಡಿತರಲ್ಲಿ ಮುಖ್ಯರೆನಿಸುವ ಕೆಲವರ ಅಭಿಪ್ರಾಯಗಳನ್ನು ತಿಳಿಸುವುದು ಅವಶ್ಯಕವಾಗಿರುತ್ತದೆ.

ಋಕ್ಸಂಹಿತೆಯಲ್ಲಿ ವರ್ಣವ್ಯವಸ್ಥೆಯು ಸೂಚಿತವಾಗಿಲ್ಲ (ನಾಲ್ಕು ವರ್ಣಗಳ ವಿಭಾಗಗಳಿಲ್ಲ) ಎಂದು ತಿಳಿಸುವ ಪಂಡಿತರ ಅಭಿಪ್ರಾಯ—

**ಆರ್ಯ** ಮತ್ತು **ದಾಸ** ಎಂಬ ಎರಡು ಪಂಗಡಗಳಿರುವ ವ್ಯತ್ಯಾಸವನ್ನು ಋಕ್ಸಂಹಿತೆಯ **ವರ್ಣ** ಎಂಬ ಪದವು ತಿಳಿಸುತ್ತದೆ. ಉದಾಹರಣೆಗೆ—

ಯೇನೇಮಾ ವಿಶ್ವಾ ಚ್ಯವನಾ ಕೃತಾನಿ ಯೋ ದಾಸಂ ವರ್ಣಮಧರಂ ಗುಹಾಕಃ ।
ಶ್ವಘ್ನೀವ ಯೋ ಜಿಗೀವಾँ ಲಕ್ಷಮಾದದರ್ಯಃ ಪುಷ್ಟಾನಿ ಸ ಜನಾಸ ಇಂದ್ರಃ ॥
(ಋ. ಸಂ. ೨-೧೨-೪)

ಎಂಬ ಋಕ್ಕಿನಲ್ಲಿ **ದಾಸಂ ವರ್ಣಂ** ಎಂಬುದರಿಂದ ಉತ್ತಮವಾದ ಯಜ್ಞಾದಿಕರ್ಮಗಳನ್ನು ನೆರವೇರಿಸುವ ಆರ್ಯಜನರಿಗೆ ಹಿಂಸೆಗಳನ್ನು ಕೊಡುತ್ತಿದ್ದ ದಸ್ಯುಗಳು ಎಂಬ ಪಂಗಡವು ಸೂಚಿತವಾಗಿರುತ್ತದೆಂದೂ, ಮತ್ತು

ಸಸಾನಾತ್ಯಾँ ಉತ ಸೂರ್ಯಂ ಸಸಾನೇಂದ್ರಃ ಸಸಾನ ಪುರುಭೋಜಸಂ ಗಾಂ ।
ಹಿರಣ್ಯಯಮುತ ಭೋಗಂ ಸಸಾನ ಹತ್ವೀ ದಸ್ಯೂನ್ ಪ್ರಾರ್ಯಂ ವರ್ಣಮಾವತ್ ॥
(ಋ. ಸಂ. ೩-೩೪-೯)

ಎಂಬಲ್ಲಿ ದಸ್ಯುವನ್ನು ನಾಶಮಾಡಿ ಉತ್ತಮವರ್ಣದವರಾದ ಆರ್ಯರನ್ನು ಇಂದ್ರನು ರಕ್ಷಿಸಿದನು ಎಂದಿರುತ್ತದೆ. ದಸ್ಯುವರ್ಣ, ಆರ್ಯವರ್ಣ ಎಂಬೆರಡು ವಿಭಾಗಗಳು ಈ ಉದಾಹರಣೆಗಳಿಂದ ತಿಳಿಯುತ್ತದೆ. ಆದರೆ ಇದು ಆಯಾ ಪಂಗಡದವರ ವರ್ಣ (ದೇಹದ ಬಣ್ಣ) ವಿಭಾಗವನ್ನು ತೋರಿಸುವುದೇ ವಿನಾ ಚಾತುರ್ವರ್ಣ್ಯವ್ಯವಸ್ಥೆಯು ಇದರಿಂದ ನಿರ್ದಿಷ್ಟವಾಗುವುದಿಲ್ಲ.

**ಬ್ರಾಹ್ಮಣ, ರಾಜನ್ಯ, ವೈಶ್ಯ** ಮತ್ತು **ಶೂದ್ರ** ಈ ನಾಲ್ಕುವರ್ಣವಿಭಾಗಗಳು ಪುರುಷಸೂಕ್ತದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದ್ದರೂ ಋಕ್ಸಂಹಿತೆಯ ಪ್ರಾಚೀನಭಾಗಗಳಲ್ಲಿ ಈ ವರ್ಣವಿಭಾಗವು ಎಲ್ಲೂ ಹೇಳಲ್ಪಟ್ಟಿಲ್ಲ. ಎಂದರೆ ಪುರುಷಸೂಕ್ತವು ಋಕ್ಸಂಹಿತಾಕಾಲಕ್ಕಿಂತಲೂ ಬಹಳ ಇತ್ತೀಚಿನದು ಮತ್ತು ಸಂಹಿತೆಯಲ್ಲಿ ಬಹಳ ಕಾಲಗಳ ನಂತರ ಪ್ರಕ್ಷಿಪ್ತವಾಗಿದೆಯೆಂದು ಮ್ಯಾಕ್ಸ್‌ಮುಲ್ಲರ್, ವೀಬರ್, ಮೂಯಿರ್ ಇತ್ಯಾದಿಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

| | |
|---|---|
| Max Muller—Ancient Sanskrit Literature— | p. 570 f. |
| Muir—Original Sanskrit Texts. Vol. I. | p. 7-15 |
| Colebrooke- Essays. Vol. I. | p. 309 |
| Arnold—Vedic Metre. | p. 167 |

ಕೆಲವು ಅಭಿಪ್ರಾಯಗಳನ್ನು ಸಂಗ್ರಹಮಾಡಿ ಉದಾಹರಿಸಲಾಗುತ್ತದೆ.

" As compared with by far the largest part of the hymns of the Rig-veda, the Purusha Sukta has every character of modernness both in its diction and ideas "

(Muir. O. S. T. Vol. I. p. 12)

" That remarkable hymn (the Purusha Sukta) is in langnage and Metre and style, very different from the rest of the prayers with which it is associated. It has a decidedly more modern tone "

(Colebrooke Misc. Essays. I. 309)

" There can be little doubt for instance, that the ninetieth hymn of the tenth book .... .... is modern both is its character and in its dicton ".

(Max Muller. A. S. L. p. 570)

Except in the Purusha Sukta there is no distinct reference in the hymns to any recognised system of four castes.

(Muir O. S. T. Vol. I. p. 358)

ಇತ್ಯಾದ್ಯಭಿಪ್ರಾಯಗಳುಳ್ಳ ವಾಕ್ಯಗಳಿಂದ ಕೆಳಗಿನ ಅಂಶಗಳು ಸ್ಪಷ್ಟವಾಗಿ ತಿಳಿದುಬರುತ್ತವೆ.

(೧) ಪುರುಷಸೂಕ್ತದಲ್ಲಲ್ಲದೇ, ಬ್ರಾಹ್ಮಣಾದಿ ನಾಲ್ಕು ವರ್ಣವ್ಯವಸ್ಥೆಗಳು ಸಂಹಿತೆಯಲ್ಲಿ ಇನ್ನಾವ ಭಾಗದಲ್ಲೂ ಹೇಳಲ್ಪಟ್ಟಿಲ್ಲ. ಸೂಚಿತವಾಗಿಯೂ ಇಲ್ಲ.

(೨) ವರ್ಣವೆಂಬ ಪದದ ಪ್ರಯೋಗವಿದ್ದರೂ ಸಹ, (ಮೇಲಿನ ಉದಾಹರಣೆಗಳಲ್ಲಿ ತಿಳಿಸಿದಂತೆ) ಕೇವಲ ಎರಡು ಪಂಗಡಗಳ ದೇಹದ ವರ್ಣವನ್ನು ಮಾತ್ರ ತಿಳಿಸುತ್ತದೆ.

(೩) ಜಾತಿಯನ್ನು ತೋರಿಸುವ **ಬ್ರಾಹ್ಮಣ** ಮತ್ತು **ಕ್ಷತ್ರಿಯ** ಪದಗಳ ಪ್ರಯೋಗವು ಎಲ್ಲೋ ಕೆಲವೆಡೆಗಳಲ್ಲಿ ಮಾತ್ರವಿರುತ್ತದೆ. **ರಾಜನ್ಯ** ಪದವು ಪುರುಷಸೂಕ್ತದಲ್ಲಲ್ಲದೇ ಇತರೆಡೆಗಳಲ್ಲೆಲ್ಲೂ ಪ್ರಯುಕ್ತವಾಗಿಲ್ಲ. **ವೈಶ್ಯ** ಮತ್ತು **ಶೂದ್ರ** ಎಂಬ ಪದಗಳೂ ಸಹ ಇಲ್ಲಲ್ಲದೆ ಇನ್ನು ಬೇರೆಲ್ಲೂ ಇಲ್ಲ.

(೪) **ಬ್ರಾಹ್ಮಣ** ಎಂಬುದು ಸೂಕ್ತದ್ರಷ್ಟೃ, ಮಂತ್ರಕರ್ತ, ಪುರೋಹಿತ ಇತ್ಯಾದಿಯಾದ ಅರ್ಥಗಳಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಜಾತಿಯನ್ನು ನಿರ್ದೇಶಿಸುವುದಿಲ್ಲ.

(೫) ವಂಶಗತವಾದ ಸಾಮಾಜಿಕಸ್ಥಿತಿಯನ್ನು ಬ್ರಾಹ್ಮಣಪದವು ತೋರಿಸುವುದಿಲ್ಲ. ಆಯಾ ವೈಯಕ್ತಿಕವಾದ ಸ್ವರೂಪಯೋಗ್ಯತೆಯನ್ನು ತೋರಿಸುತ್ತದೆ. ಇದು Muir ಎಂಬುವನ ಅಭಿಪ್ರಾಯ (O. S. T. Vol. I).

Muir ಎಂಬ ಪಂಡಿತನು ಹೇಳಿರುವ ಮೇಲಿನ ಅಭಿಪ್ರಾಯಗಳನ್ನು ಇತರ ಪಂಡಿತರೂ ಅನುಮೋದಿಸಿದ್ದಾರೆ. ಇದನ್ನೇ ಅನುಮೋದಿಸುವ Zimmer (ಜಿಮ್ಮರ್) ಎಂಬುವನು ರಾಜಕೀಯ ಕಾರಣಗಳಿಗಾಗಿ ಜಾತಿವ್ಯವಸ್ಥೆಯು ಋಕ್ಸಂಹಿತೆಗಿಂತಲೂ ಬಹಳ ಅರ್ವಾಚೀನಕಾಲದಲ್ಲಿ ನಿರ್ಮಿತವಾಯಿತೆಂದಭಿಪ್ರಾಯಪಟ್ಟಿದ್ದಾನೆ.

ಯಾಗಾದಿಕಾರ್ಯಗಳಿಗಾಗಿ ಪುರೋಹಿತನ ಅವಶ್ಯಕತೆಯೂ ಸಹ ಹಿಂದಿನ ಕಾಲದಲ್ಲಿರಲಿಲ್ಲ. ಕ್ಷತ್ರಿಯನೇ ಈ ಕಾರ್ಯವನ್ನು ನಿರ್ವಹಿಸುತ್ತಿದ್ದನು. **ದೇವಾಪಿ ಅರ್ಷ್ಟಿಷೇಣನೇ** ಇದಕ್ಕೆ ಉದಾಹರಣೆ—(ಋ. ಸಂ. ೧೦-೯೮ **ನೇ** ಸೂಕ್ತಕ್ಕೆ ನಿರುಕ್ತಕಾರರ ವಿವರಣವು ಇದನ್ನು ಸ್ಪಷ್ಟಪಡಿಸುತ್ತದೆ). ಇತ್ಯಾದಿಯಾಗಿ ವಾದಿಸುವ ಪಂಡಿತರೂ ಕೆಲವರಿದ್ದಾರೆ. ಆದರೆ ಇವರ ವಾದಗಳು ಸಪ್ರಮಾಣವಾಗಿಲ್ಲ ಎಂದು ಈ ಅಭಿಪ್ರಾಯಗಳನ್ನು ಕೆಲವು ಆಂಗ್ಲ ಪಂಡಿತರೇ ಖಂಡಿಸಿದ್ದಾರೆ. ಋಕ್ಸಂಹಿತಾವಾಕ್ಯಗಳೇ ವರ್ಣವ್ಯವಸ್ಥೆಯನ್ನು ಖಚಿತವಾಗಿ ತಿಳಿಸುತ್ತವೆಯೆಂದು ಇವರು ಪ್ರಮಾಣಗಳನ್ನುದಾಹರಿಸಿ ತಮ್ಮ ವಾದವನ್ನು ಸಮರ್ಥಿಸಿದ್ದಾರೆ.

ಋಕ್ಸಂಹಿತಾವಾಕ್ಯಗಳೇ ವರ್ಣವ್ಯವಸ್ಥೆಯನ್ನು ತಿಳಿಸುತ್ತವೆ ಎಂಬ ಪಂಡಿತರ ಅಭಿಪ್ರಾಯಗಳು— (Macdonell ಮತ್ತು Keith ಇವರ ಅಭಿಪ್ರಾಯಗಳು).

**ಬ್ರಹ್ಮ, ಕ್ಷತ್ರ** ಇತ್ಯಾದಿ ವರ್ಣನಿರ್ದೇಶಕವಾದ ಪದಗಳಿದ್ದರೂ ಅವುಗಳು ವರ್ಣವನ್ನು ನಿರ್ದೇಶಿಸುವುದಿಲ್ಲ ಎಂಬ ಮಾತಿಗೆ ಅರ್ಥವಿಲ್ಲ. ಬ್ರಹ್ಮಶಬ್ದವು ಬ್ರಾಹ್ಮಣವಾಚಕವಲ್ಲ, ಆದರೆ ಕೇವಲ ಸೂಕ್ತದ್ರಷ್ಟೃ ಎಂದು ಹೇಳುವುದೂ ಸಾಧುವಲ್ಲ. ಹೀಗೆ ಹೇಳುವ **ಮೂಯಿರ್** ಎಂಬ ಪಂಡಿತನೇ ತಿಳಿಸುವಂತೆ ವಂಶಪರಂಪರಾಪ್ರಾಪ್ತನಾದ ವೃತ್ತಿಯನ್ನಿಟ್ಟು ಕೊಂಡಿರುವ ಗುಂಪು ಈ ಪದದಿಂದ ನಿರ್ದಿಷ್ಟವಾಗುತ್ತದೆ ಎಂದು ಅವನೇ ಒಪ್ಪಿಕೊಂಡಿದ್ದಾನೆ. ಅಲ್ಲದೇ, ಋಕ್ಸಂಹಿತೆಯಲ್ಲಿಯೇ, ವರ್ಣನಿರ್ದೇಶಕವಾದ ವಿಭಾಗಗಳು ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿವೆ. ಉದಾಹರಣೆ—

**ಬ್ರಹ್ಮ ಜಿನ್ವತಮುತ ಜಿನ್ವತಂ ಧಿಯೋ ಹತಂ ರಕ್ಷಾಂಸಿ ಸೇಧತಮಮೀವಾಃ ।**
**ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಸುನ್ವತೋ ಅಶ್ವಿನಾ ॥**
**ಕ್ಷತ್ರಂ ಜಿನ್ವತಮುತ ನೄನ್ಹತಂ ರಕ್ಷಾಂಸಿ ಸೇಧತಮಮೀವಾಃ ।**
**ಧೇನೂರ್ಜಿನ್ವತಮುತ ಜಿನ್ವತಂ ವಿಶೋ ಹತಂ ರಕ್ಷಾಂಸಿ ಸೇಧತಮಮೀವಾಃ ॥**

(ಋ. ಸಂ. ೮-೩೫-೧೬, ೧೭, ೧೮)

ಎಂಬ ಈ ಋಕ್ಕುಗಳಲ್ಲಿ **ಬ್ರಾಹ್ಮಣ ಕ್ಷತ್ರಿಯ** ಮತ್ತು **ವೈಶ್ಯ** ಎಂಬ ವರ್ಣಗಳನ್ನು ನಿರ್ದೇಶಿಸುವ ಪದಗಳು ಇರುತ್ತವೆ.

ಎಲೈ ಅಶ್ವಿನೀದೇವತೆಗಳೇ, ನೀವು ಬ್ರಾಹ್ಮಣರನ್ನು ತೃಪ್ತಿಪಡಿಸಿರಿ, ಕ್ಷತ್ರಿಯನನ್ನು ತೃಪ್ತಿಪಡಿಸಿರಿ ಮತ್ತು ವೈಶ್ಯನನ್ನು ತೃಪ್ತಿಪಡಿಸಿರಿ ಎಂಬ ಪ್ರಾರ್ಥನೆಯಲ್ಲಿ ಮೂರು ವರ್ಣಗಳೂ ಸ್ಪಷ್ಟವಾಗಿ ಹೇಳಲ್ಪಟ್ಟಿವೆ.

" The Kshatriyas were no doubt a hereditary body; monarchy was already heredtitary and it is admitted that Sudras were a separate body. Thus all the elemets of the caste system were already in existence "

(Vedic Index of Names and subjects by Macdonell and Keith. Vol. II. p. 251)

ಇದೇ ವಾದವನ್ನು ಮುಂದುವರಿಸುತ್ತ Macdonell ಮತ್ತು Keith ಎಂಬುವರು ಋಕ್ಸಂಹಿತೆಯಲ್ಲಿಯೂ ವರ್ಣವ್ಯವಸ್ಥೆಯ ಸಾಮಗ್ರಿಗಳು ಸ್ಪಷ್ಟವಾಗಿ ಕಾಣುತ್ತವೆಯೆಂದು ಪ್ರತಿಪಾದಿಸಲು ಈ ರೀತಿ ತಿಳಿಸುತ್ತಾರೆ. ಅವರ ಅಭಿಪ್ರಾಯವನ್ನು ಸಂಗ್ರಹಿಸಿ ತಿಳಿಸಲಾಗುತ್ತದೆ.

**ದೇವಾಪಿಯ** ಉದಾಹರಣೆಯಿಂದ ಪೌರೋಹಿತ್ಯವು ಬ್ರಾಹ್ಮಣನ ವೃತ್ತಿಮಾತ್ರವಲ್ಲ, ಕ್ಷತ್ರಿಯನೂ ಆ ಕಾರ್ಯಕ್ಕೆ ಅರ್ಹನು ಎಂದು ತಿಳಿಯುವುದರಿಂದ ಇದೇ ವರ್ಣಕ್ಕೆ ಇದೇ ವೃತ್ತಿಯೆಂದು ಹೇಳಲು ಸಾಧ್ಯವಿಲ್ಲ ಎಂಬ Muir ಇತ್ಯಾದಿ ಪಂಡಿತರ ವಾದವೂ ಸಾಧುವಲ್ಲ. ಇವೆಲ್ಲವೂ ಕೆಲವು ವಿಶೇಷ ಸನ್ನಿವೇಶಗಳನ್ನು ತಿಳಿಸುವುವೇ ವಿನಾ **ದೇವಾಪಿಯ** ಉದಾಹರಣೆಯು ವರ್ಣವ್ಯವಸ್ಥೆಯ ಅಭಾವವನ್ನು ಸೂಚಿಸುವುದಿಲ್ಲ. ಇದೇ ವಿಧವಾದ ಇನ್ನೂ

ಅನೇಕ ಉದಾಹರಣೆಗಳಿರುತ್ತವೆ. ಆದರೆ, ಅವೆಲ್ಲವೂ ಜ್ಯಾತಿವ್ಯವಸ್ಥೆಯ ಕಾಲಕ್ಕೆ ಸಂಬಂಧಪಟ್ಟವೇ ಆಗಿವೆ. Muir ಇತ್ಯಾದಿಗಳು ಒಪ್ಪಿಕೊಳ್ಳುವಂತೆ, ಉಪನಿಷತ್ಕಾಲದಲ್ಲಿ ಪೂರ್ಣವಾದ ವರ್ಣವ್ಯವಸ್ಥೆಯು ನೆಲೆಸಿದ್ದಿತು. ಆ ಕಾಲದಲ್ಲಿ ಕ್ಷತ್ರಿಯರು ತತ್ತ್ವೋಪದೇಶವನ್ನು ಮಾಡುತ್ತಿದ್ದರು ಎಂಬುದಕ್ಕೆ ಅನೇಕ ಉದಾಹರಣೆಗಳಿವೆ. ತತ್ತ್ವೋಪದೇಶವು ಬ್ರಾಹ್ಮಣನ ವೃತ್ತಿ. ಕ್ಷತ್ರಿಯರು ಹೇಗೆ ಮಾಡುತ್ತಿದ್ದರು ಎಂದು ಕೇಳಬೇಕಾಗುತ್ತದೆ. ಎಂದರೆ ಇವೆಲ್ಲ ವಿಶೇಷಸನ್ನಿವೇಶಗಳು.

ಅದೂ ಅಲ್ಲದೇ, ಪೌರೋಹಿತ್ಯವನ್ನು ವಹಿಸಿದ ದೇವಾಪಿಯು ರಾಜಪುತ್ರನೆಂಬುದಕ್ಕೆ ಪೂರ್ಣವಾದ ಆಧಾರವೂ ಇಲ್ಲ. ಈ ಒಂದೆರಡು ಉದಾಹರಣೆಗಳಿಂದ ಸಾಮಾನ್ಯನಿಯಮವನ್ನು ನಿಷೇಧಿಸುವುದು ಸರಿಯಲ್ಲ ಎಂದು ಈ ಪಂಡಿತರು ಸಮರ್ಥಿಸುತ್ತಾರೆ. ಅಲ್ಲದೇ ಬ್ರಾಹ್ಮಣ, ಕ್ಷತ್ರಿಯ ಮತ್ತು ವಿಶಃ (ಪ್ರಜೆಗಳು) ಎಂಬ ವಿಭಾಗಗಳು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿವೆ. ಉದಾಹರಣೆಗೆ—

**ಸ ಇತ್ಕ್ಷೇತಿ ಸುಧಿತ ಓಕಸಿ ಸ್ವೇ ತಸ್ಮಾ ಇಳಾ ಪಿನ್ವತೇ ವಿಶ್ವದಾನೀಂ ।**
**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ॥**

(ಋ. ಸಂ. ೪-೫೦-೮)

ಯಾವ ರಾಜನ ರಾಜ್ಯದಲ್ಲಿ ಬ್ರಹ್ಮತತ್ತ್ವವನ್ನು ಬೋಧಿಸುವ ಬ್ರಾಹ್ಮಣನಿಗೆ ಪುರಸ್ಕಾರವಿರುತ್ತದೆಯೋ, ಆ ರಾಜನಿಗೆ ಸಕಲ ಪ್ರಜೆಗಳೂ ಗೌರವವನ್ನು ಸಲ್ಲಿಸುತ್ತಾರೆ ಎಂದು ಆಯಾ ಪಂಗಡದ ವಿಭಾಗವು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಅದೂ ಅಲ್ಲದೇ, **ಪಂಚಜನಾಃ ಪಂಚಕ್ಷಿತಯಃ, ಪಂಚಚರ್ಷಣ್ಯಃ** ಇತ್ಯಾದಿ ಪದಗಳೂ ಈ ವಿಭಾಗಗಳನ್ನು ಸ್ಪಷ್ಟವಾಗಿ ನಿರ್ದೇಶಿಸುತ್ತವೆ. ಈ ಪದಗಳಿಗೆ ದೇವಮಾನವಾದಿ ಗುಂಪುಗಳೆಂಬ ಅರ್ಥವು ಕೆಲವೆಡೆಗಳಲ್ಲಿ ಹೇಳಿದ್ದರೂ ಸಹ, ಅನೇಕ ಸನ್ನಿವೇಶಗಳಲ್ಲಿ ಪಂಚಮಸಹಿತರಾದ ನಾಲ್ಕು ವರ್ಣದ ಜನರು ಎಂದು ಯಾಸ್ಕರೂ, ಸಾಯಣರೂ ನಿಷ್ಕೃಷ್ಟವಾಗಿ ತಿಳಿಸಿದ್ದಾರೆ. ಬ್ರಹ್ಮಪದವು ಬ್ರಾಹ್ಮಣ ಪಂಗಡವನ್ನೇ ನಿರ್ದೇಶಿಸುವುದೆಂದೂ, ಅದರಂತೆಯೇ ಕ್ಷತ್ರಿಯ ಪದವು ರಾಜ್ಯವನ್ನಾಳುವ ರಾಜನನ್ನೇ ನಿರ್ದೇಶಿಸತಕ್ಕದ್ದು ಎಂದೂ ತಿಳಿಸುವ ಕೆಲವು ಉದಾಹರಣೆಗಳನ್ನು ಪರಿಶೀಲಿಸಿ ಸಹ Muir ಇತ್ಯಾದಿಗಳ ಅಭಿಪ್ರಾಯಕ್ಕೆ ಅವಕಾಶವಿಲ್ಲವೆಂಬುದು ವಿಶದವಾಗುತ್ತದೆ. ಉದಾಹರಣೆಗೆ—

(೧) **ಯದಿಂದ್ರಾಗ್ನೀ ಮದಥಃ ಸ್ವೇ ದುರೋಣೇ ಯದ್ಬ್ರಹ್ಮಣಿ ರಾಜನಿ ವಾ ಯಜತ್ರಾ ।**

(ಋ. ಸಂ. ೧-೧೦೮-೭)

**ಪೂಜ್ಯರಾದ ಎಲೈ ಇಂದ್ರಾಗ್ನಿಗಳೇ, ನೀವು ನಿಮ್ಮ ಸ್ವಂತಗೃಹದಲ್ಲಾಗಲಿ, ಅಥವಾ ಬ್ರಾಹ್ಮಣನ ಗೃಹದಲ್ಲಾಗಲಿ ಅಥವಾ ರಾಜನ ಗೃಹದಲ್ಲಾಗಲಿ ಹರ್ಷವನ್ನನುಭವಿಸಿರಿ.**

(೨) **ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಪ್ರ ಕ್ರಂದನುರ್ನಭನ್ಯಸ್ಯ ವೇತು ।**

**(ಋ. ಸಂ. ೭-೪೨-೧)**

**ಬ್ರಾಹ್ಮಣರಾದ ಅಂಗಿರಸ್ಸುಗಳು ಇಲ್ಲಿ ಬಂದು ನಮ್ಮ ಯಜ್ಞಗೃಹವನ್ನು ವ್ಯಾಪಿಸಲಿ. ಪರ್ಜನ್ಯನು ನಮ್ಮ ಸ್ತುತಿಗಳನ್ನು ಇಚ್ಛಿಸಲಿ.**

(೩) **ನ ನೂನಂ ಬ್ರಹ್ಮಣಾಮೃಣಂ ಪ್ರಾಶೂನಾಮಸ್ತಿ ಸುನ್ವತಾಂ ।**

(ಋ. ಸಂ. ೮.೩೨-೧೬)

ಸೋಮವನ್ನು ಹಿಂಡುವ ಬ್ರಾಹ್ಮಣರು ಯಾವ ದೇವಋಣವನ್ನೂ ಹೊಂದಿರುವುದಿಲ್ಲ. ಇತ್ಯಾದ್ಯನೇಕ ವಾಕ್ಯಗಳು ಬ್ರಾಹ್ಮಣನ ವೈಯಕ್ತಿಕ ಸ್ಥಾನವನ್ನು ತಿಳಿಸುತ್ತವೆ. ಮತ್ತು

(೧) **ಮಮ ದ್ವಿತಾ ರಾಷ್ಟ್ರಂ ಕ್ಷತ್ರಿಯಸ್ಯ ವಿಶ್ವಾಯೋರ್ವಿಶ್ವೇ ಅಮೃತಾ ಯಥಾ ನಃ ।**

(ಋ. ಸಂ. ೪.೪೨-೧)

ರಾಜ್ಯವು ಕ್ಷತ್ರಿಯನಾದ ನನ್ನ ಅಧೀನದಲ್ಲಿದ್ದು ನನ್ನ ನಿಯಮನಕ್ಕೆ ಒಳಪಟ್ಟಿರುವುದಾಗಿದೆ.

(೨) **ಆ ರಾಜಾನಾ ಮಹ ಋತಸ್ಯ ಗೋಪಾ ಸಿಂಧುಪತೀ ಕ್ಷತ್ರಿಯಾ ಯಾತಮರ್ವಾಕ್ ।**

(ಋ. ಸಂ. ೭-೬೪-೨)

ಋತದ ಪಾಲಕರೂ, ನದೀಪತಿಗಳೂ, ಕ್ಷತ್ರಿಯರೂ ಆದ ಎಲೇ ರಾಜರೇ (ಮಿತ್ರಾವರುಣರೇ) ಇಲ್ಲಿ ದಯಮಾಡಿ.

(೩) **ಋತಾವಾನಾ ನಿ ಷೇದತುಃ ಸಾಮ್ರಾಜ್ಯಾಯ ಸುಕ್ರತೂ ।**
**ಧೃತವ್ರತಾ ಕ್ಷತ್ರಿಯಾ ಕ್ಷತ್ರಮಾಶತುಃ ॥**

(ಋ. ಸಂ. ೮-೨೪-೮)

ಋತಪಾಲಕರೂ (ಸತ್ಯವಂತರೂ) ಉತ್ತಮವಾದ ಕರ್ಮವುಳ್ಳವರೂ, ಧೃತವ್ರತರೂ ಆದ ಕ್ಷತ್ರಿಯರು (ಮಿತ್ರಾವರುಣರು) ಸಾಮ್ರಾಜ್ಯ ಪದವಿಯನ್ನು ಪಡೆಯಲು ಕುಳಿತಿದಾರೆ. ಮತ್ತು ಕ್ಷಾತ್ರಶಕ್ತಿಯನ್ನು ಸಹ ಹೊಂದುತ್ತಾರೆ.

(೪) **ನ ದೂತಾಯ ಪ್ರಹ್ಯೇ ತಸ್ಥ ಏಷಾ ತಥಾ ರಾಷ್ಟ್ರಂ ಗುಪಿತಂ ಕ್ಷತ್ರಿಯಸ್ಯ ।**

(ಋ. ಸಂ. ೧೦-೧೦೯-೩)

ಅದೇ ರೀತಿಯಲ್ಲಿ ಕ್ಷತ್ರಿಯನ ರಾಜ್ಯವೂ ಸುರಕ್ಷಿತವಾಗಿರುತ್ತದೆ. ಇತ್ಯಾದಿ. ಋಕ್ಸಂಹಿಂತೆಯಲ್ಲದೇ, ಉಳಿದ ಸಂಹಿತಾ ಮತ್ತು ಬ್ರಾಹ್ಮಣಗಳಿಂದ ವರ್ಣಿತವಾಗಿರುವ ವರ್ಣವ್ಯವಸ್ಥೆಯ ಕ್ರಮ—

ಮೇಲಿನ ಉದಾಹರಣೆಗಳಿಂದ ವರ್ಣವ್ಯವಸ್ಥೆಯು ಋಕ್ಸಂಹಿತಾಕಾಲದಲ್ಲೇ ನಿಷ್ಕೃಷ್ಟವಾಗಿ ಏರ್ಪಟ್ಟಿದ್ದಿತು ಎಂದು ಖಚಿತವಾಗಿ ಹೇಳಬಹುದು ಎಂದು Macdonell ಮತ್ತು Keith ಇವರ ಅಭಿಪ್ರಾಯವಾಗಿರುತ್ತದೆ. ಅವರು ಈ ರೀತಿ ತಿಳಿಸಿದ್ದಾರೆ.

" The relation between the later and earlier periods of the Vedic history of caste must probably be regarded in the main as the hardening of a system already formed by the time of Rigveda.

(Index. Vol. II. p. 252)

ಇದರಂತೆಯೇ ಉಳಿದ ಸಂಹಿತಾ ಮತ್ತು ಬ್ರಾಹ್ಮಣ ವಾಕ್ಯಗಳಲ್ಲಿಯೂ ವರ್ಣವಿಭಾಗವು ಸ್ಪಷ್ಟವಾಗಿ ನಿರ್ದಿಷ್ಟವಾಗಿರುತ್ತದೆ. ಅಲ್ಲದೇ, ಜಗತ್ಸೃಷ್ಟಿಯಕಾಲದಲ್ಲೇ, ಪ್ರಜಾಪತಿಯ ಸಂಕಲ್ಪದ ಫಲವಾಗಿ ಈ ವರ್ಣಗಳು ಸೃಷ್ಟವಾದವು ಎಂದೂ ಸಹ ಈ ವಾಕ್ಯಗಳು ತಿಳಿಸುತ್ತವೆ. ಉದಾಹರಣೆಗೆ

**ಭೂರಿತಿ ವೈ ಪ್ರಜಾಪತಿಃ । ಇಮಾಮಜನಯತ ಭುವ ಇತ್ಯಂತರಿಕ್ಷಗ್ಂ ಸ್ವರಿತಿ ದಿವಮೇತಾವದ್ವಾ ಇದಗ್ಂ ಸರ್ವಂ ಯಾವದಿಮೇ ಲೋಕಾಃ ಸರ್ವೇಣೈವಾಧಿಯತೇ ॥ ಭೂರಿತಿ ವೈ ಪ್ರಜಾಪತಿಃ । ಬ್ರಹ್ಮಾಜನಯತ ಭುವ ಇತಿ ಕ್ಷತ್ರಗ್ಂ ಸ್ವರಿತಿ ವಿಶಮೇತಾವದ್ವಾ ಇದಗ್ಂ ಸರ್ವಂ ಯಾವದ್ಬ್ರಹ್ಮ ಕ್ಷತ್ರಂ ಸರ್ವೇಣೈವಾಧಿಯತೇ ॥**

(ಶ. ಬ್ರಾ. ೨-೧-೪-೧೧, ೧೨)

ಪ್ರಜಾಪತಿಯು **ಭೂಃ** ಎಂದು ಉಸುರಿದನು. ಅದರಿಂದ ಪೃಥ್ವಿಯು ಉತ್ಪನ್ನವಾಯಿತು. **ಭುವಃ** ಎಂದುದರಿಂದ ಅಂತರಿಕ್ಷವೂ ಮತ್ತು **ಸ್ವಃ** ಎಂದುದರಿಂದ ದ್ಯುಲೋಕವೂ ಉತ್ಪನ್ನವಾದವು. ಸಕಲ ವಿಶ್ವವೂ ಇವುಗಳಲ್ಲಿ ಅಡಕವಾಗಿದೆ. ಅನಂತರ **ಭೂಃ** ಎನ್ನುವುದರಿಂದ ಬ್ರಾಹ್ಮಣನನ್ನೂ, **ಭುವಃ** ಎನ್ನುವುದರಿಂದ ಕ್ಷತ್ರಿಯನನ್ನೂ ಮತ್ತು **ಸ್ವಃ** ಎನ್ನುವುದರಿಂದ ವೈಶ್ಯನನ್ನೂ ಉತ್ಪನ್ನಮಾಡಿದನು. ಸಕಲ ವಿಶ್ವವೂ ಈ ಮೂರು ಶಕ್ತಿಗಳಿಂದ ವ್ಯಾಪ್ತವಾಗಿದೆ ಯೆಂದು ವರ್ಣಗಳ ಸೃಷ್ಟಿಯ ಮೂಲವೂ ವರ್ಣಿತವಾಗಿದೆ. ಇದರಂತೆಯೇ ವರ್ಣಗಳ ಉತ್ಪತ್ತಿಕ್ರಮವನ್ನು ತಿಳಿಸುವ ಇನ್ನು ಕೆಲವು ವಾಕ್ಯಗಳನ್ನು ಉದಾಹರಿಸಿ ಅನಂತರ ಈ ವರ್ಣಗಳ ಪರಸ್ಪರ ಸಂಬಂಧಗಳನ್ನು ತಿಳಿಸುವ ಕೆಲವು ಪ್ರಕರಣಗಳನ್ನು ವಿವರಿಸಲಾಗುತ್ತದೆ. ವಾಜಸನೇಯಸಂಹಿತಾ ವಾಕ್ಯದಲ್ಲಿ ಈ ರೀತಿ ತಿಳಿಸಿದೆ.

**ಏಕಯಾಸ್ತುವತ ಪ್ರಜಾ ಅಧೀಯಂತ ಪ್ರಜಾಪತಿರಧಿಪತಿರಾಸೀತ್ । ತಿಸೃಭಿರಸ್ತುವತ ಬ್ರಹ್ಮಾಸೃಜ್ಯತ ಬ್ರಹ್ಮಣಸ್ಪತಿರಧಿಪತಿರಾಸೀತ್ । .... .... .... ಪಂಚದಶಭಿರಸ್ತುವತ ಕ್ಷತ್ರಮಸೃಜ್ಯತೇಂದ್ರೋಽಧಿಪತಿರಾಸೀತ್ .... .... ನವದಶಭಿರಸ್ತುವತ ಶೂದ್ರಾರ್ಯಾವಸೃಜ್ಯೇತಾಮಹೋರಾತ್ರೇ ಅಧಿಪತ್ನೀ ಆಸ್ತಾಂ ।**

(ವಾ. ಸಂ. ೧೪-೭೮)

ಪ್ರಜಾಪತಿಯು ಒಂದು ಮಂತ್ರದಿಂದ ತನ್ನನ್ನು ಸ್ತುತಿಸಿದನು. ಸಕಲ ಪ್ರಾಣಿಗಳೂ ಉತ್ಪನ್ನವಾದವು. ಮೂರು ಮಂತ್ರಗಳಿಂದ ಸ್ತುತಿಸಿದಾಗ ಬ್ರಾಹ್ಮಣನು ಉತ್ಪನ್ನನಾದನು. ಹದಿನೈದು ಮಂತ್ರಗಳಿಂದ ಸ್ತುತಿಮಾಡಿಕೊಂಡಾಗ ಕ್ಷತ್ರಿಯನು ಉತ್ಪನ್ನನಾದನು. ಅವರಿಗೆ ಇಂದ್ರನು ಪ್ರಭುವಾದನು. ಹತ್ತೊಂಭತ್ತು ಮಂತ್ರಗಳಿಂದ ಆತ್ಮಪ್ರಶಂಸೆಯನ್ನು ಮಾಡಿಕೊಂಡಾಗ ಶೂದ್ರರೂ, ಆರ್ಯರೂ (ವೈಶ್ಯರೂ) ಉತ್ಪನ್ನರಾದರು. ಅಹೋರಾತ್ರಗಳು ಅವರ ಅಧಿಪತಿಗಳಾದರು.

**ತೈತ್ತಿರೀಯ ಬ್ರಾಹ್ಮಣದಲ್ಲಿ—**

**ಸರ್ವಗ್ಂ ಹೇದಂ ಬ್ರಹ್ಮಣಾ ಹೈವ ಸೃಷ್ಟಂ । ಋಗ್ಭ್ಯೋ ಜಾತಂ ವೈಶ್ಯಂ ವರ್ಣಮಾಹುಃ । ಯಜುರ್ವೇದಂ ಕ್ಷತ್ರಿಯಸ್ಯಾಹುರ್ಯೋನಿಂ । ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ । ಪೂರ್ವೇ ಪೂರ್ವೇಭ್ಯೋ ವಚ ಏತದೂಚುಃ ॥**

(ತೈ. ಬ್ರಾ. ೩-೧೨-೯-೨)

ಸಕಲ ವಿಶ್ವವೂ ಬ್ರಹ್ಮನಿಂದಲೇ ಸೃಷ್ಟವಾಗಿದೆ. ಋಙ್ಮಂತ್ರಗಳಿಂದ ವೈಶ್ಯವರ್ಣವೂ, ಯಜುರ್ಮಂತ್ರಗಳಿಂದ ಕ್ಷತ್ರಿಯ ವರ್ಣವೂ, ಸಾಮವೇದದಿಂದ ಬ್ರಾಹ್ಮಣವರ್ಣವೂ ಉತ್ಪನ್ನವಾದುವು ಎಂದು ಪ್ರಾಜ್ಞರು ಹೇಳುತ್ತಾರೆ. ಈ ತತ್ತ್ವವನ್ನು ಪ್ರಾಚೀನರಾದ ಋಷಿಗಳು ಪ್ರಾಚೀನರಾದ ಶಿಷ್ಯರಿಗೆ ಉಪದೇಶಿಸಿದರು, ಇತ್ಯಾದಿಯಾಗಿರುತ್ತದೆ.

ಈ ರೀತಿ ಸೃಷ್ಟವಾದ ವರ್ಣಗಳನ್ನು ನಿರ್ದೇಶಿಸುವ ಪದಗಳು ಒಂದೇ ರೀತಿಯಿರುವುದಿಲ್ಲ. ಒಂದೊಂದೆಡೆಗಳಲ್ಲಿ ಕೊಂಚ ವ್ಯತ್ಯಾಸವೂ ಇರುತ್ತದೆ. ಉದಾಹರಣೆಗೆ

ಬ್ರಾಹ್ಮಣ, ರಾಜನ್ಯ, ವೈಶ್ಯ, ಶೂದ್ರ ಎಂಬ ವಿಭಾಗವು ಕೆಲವೆಡೆಗಳಲ್ಲಿಯೂ,

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ವಿಭಾಗಗಳು ಕೆಲವೆಡೆಗಳಲ್ಲಿಯೂ ಇರುತ್ತವೆ. (ರಾಜನ್ಯ ಮತ್ತು ಕ್ಷತ್ರಿಯ ಎಂಬುವು ಪರ್ಯಾಯನಾಮಗಳೆಂದು ತಾತ್ಪರ್ಯ).

**ವೈಶ್ಯರಿಗೆ ಆರ್ಯ** ಎಂಬ ಪದಪ್ರಯೋಗವೂ ಇರುವುದು ಮೇಲೆ ಉದಾಹರಿಸಿದ ವಾಜಸನೇಯ ಸಂಹಿತಾ ವಾಕ್ಯದಿಂದ ತಿಳಿಯುತ್ತದೆ.

ಸಕಲ ವರ್ಣವೂ ಪ್ರಜಾಪತಿಯಿಂದಲೇ ಸೃಷ್ಟವಾಗಿರುವಾಗ ಮತ್ತು ಸರ್ವತ್ರ ಪ್ರಜಾಪತಿಯು ವ್ಯಾಪಿಸಿ ಸರ್ವಾಂತರ್ಯಾಮಿಯಾಗಿರುವಾಗ ಮತ್ತು ಸಕಲವೂ ಪ್ರಜಾಪತಿಯ ಅಂಶವೇ ಆಗಿರುವಾಗ ಒಂದು ವರ್ಣವು ಅಧಿಕ ಮತ್ತು ಇನ್ನೊಂದು ವರ್ಣವು ನ್ಯೂನ ಎಂಬ ಭೇದಭಾವವು ಹೇಗೆ ಸಾಧ್ಯ ಎಂಬ ಇನ್ನೊಂದು ಪ್ರಶ್ನೆಯು ಸಹಜವಾಗಿರುತ್ತೆ. ಈ ಪ್ರಶ್ನೆಗೆ ಉತ್ತರವನ್ನು ಕೊಡುವ ಮೊದಲು ವರ್ಣಗಳ ಪರಸ್ಪರ ಸ್ಥಾನವನ್ನು ಉತ್ಕರ್ಷಾಪಕರ್ಷಗಳನ್ನು ತೋರಿಸುವ ಕೆಲವು ವಾಕ್ಯಗಳನ್ನುದಾಹರಿಸಿ ಅವುಗಳ ನಿಜವಾದ ತಾತ್ಪರ್ಯವೇನು ಎಂಬುದನ್ನು ಪರಿಶೀಲಿಸಬೇಕಾಗಿರುತ್ತದೆ. ಕೆಲವು ಉದಾಹರಣೆಗಳನ್ನು ಮಾತ್ರ ಪರಿಶೀಲಿಸಬಹುದು.

> **ತಾನಿ ವಾ ಏತಾನಿ । ಚತ್ವಾರಿ ವಾಚ ಏಹೀತಿ ಬ್ರಾಹ್ಮಣಸ್ಯಾಗಹ್ಯಾದ್ರವೇತಿ ವೈಶ್ಯಸ್ಯ ಚ ರಾಜನ್ಯಬಂಧೋಶ್ಚಾಧಾವೇತಿ ಶೂದ್ರಸ್ಯ ಸ ಯದೇವ ಬ್ರಾಹ್ಮಣಸ್ಯ ತದಾಹೈತದ್ಧಿ ಯಜ್ಞಿಯತಮಮೇತದು ಹ ವೈ ವಾಚಃ ಶಾಂತತಮಂ ಯದೇಹೀತಿ ತಸ್ಮಾದೇಹೀತ್ಯೇವ ಬ್ರೂಯಾತ್ ।**
>
> (ಶ. ಬ್ರಾ. ೧-೧-೪-೧೨)

ಯಾರನ್ನಾದರೂ ನಿರ್ದೇಶಿಸಿ ಹತ್ತಿರಕ್ಕೆ ಕರೆಯುವಾಗ ನಾಲ್ಕು ವಿಧಗಳಿರುತ್ತವೆ. **ಏಹಿ** ಎಂದು ಬ್ರಾಹ್ಮಣನನ್ನು ಸಂಬೋಧಿಸಿ ಕರೆಯತಕ್ಕದ್ದು. **ಆ ಗಹಿ, ಆ ದ್ರವ** ಎಂದು ವೈಶ್ಯ ಮತ್ತು ಕ್ಷತ್ರಿಯರನ್ನು ಸಂಬೋಧಿಸಿ ಕರೆಯತಕ್ಕದ್ದು. **ಆ ಧಾವ** ಎಂದು ಶೂದ್ರನ ವಿಷಯದಲ್ಲಿ ಪ್ರಯೋಗಿಸಬೇಕು.

**ಏಹಿ** ಎಂದರೆ, ದಯಮಾಡಿ ಎಂದು ವಿನಿಯಪೂರ್ವಕವಾಗಿ ಕರೆಯುವ ಪದ.

**ಆ ಗಹಿ** ಎಂದರೆ ನನ್ನನ್ನು ಸಮೀಪಿಸು ಎಂದರೆ ಇಲ್ಲಿ ಹತ್ತಿರಕ್ಕೆ ಬಾ ಎಂಬ ಆಜ್ಞೆ.

**ಆ ದ್ರವ** ಶೀಘ್ರವಾಗಿ ಬಂದು ಸಮೀಪಿಸು ಎಂಬುದೂ ಆಜ್ಞೆ.

**ಆ ಧಾವ** ಓಡಿ ಬಾ ಎಂಬುದೂ ಸಹ ಶೂದ್ರನ ವಿಷಯದಲ್ಲಿ ಪ್ರಯೋಗಿಸುವ ಆಜ್ಞಾರೂಪವಾದ ಪದ.

ಇಷ್ಟರಲ್ಲಿ ಬ್ರಾಹ್ಮಣನು ಗೌರವಕ್ಕೆ ಪಾತ್ರನಾದುದರಿಂದ ಅವನ ವಿಷಯದಲ್ಲಿ ವಿನಯವನ್ನು ಸೂಚಿಸುವ **ಏಹಿ** ಎಂಬ ಪದದ ಪ್ರಯೋಗವು ಉಚಿತವಾಗಿದೆ ಎಂದು ಈ ರೀತಿ ಸ್ಥಾನಮಾನಗಳ ವ್ಯತ್ಯಾಸವನ್ನು ತಿಳಿಸಿದೆ. ಇದೇ ರೀತಿ ಇನ್ನು ಕೆಲವೆಡೆಗಳಲ್ಲಿ ಈ ವಿಧವಾದ ವ್ಯತ್ಯಾಸವು ಹೇಳಲ್ಪಟ್ಟಿದೆ. ಉದಾಹರಣೆಗೆ,

**ಸ ವೈ ನ ಸರ್ವೇಣೇವ ಸಂವದೇತ । ದೇವಾನ್ವಾ ಏಷ ಉಪಾವರ್ತತೇ ಯೋ ದೀಕ್ಷತೇ ಸ ದೇವತಾನಾಮೇಕೋ ಭವತಿ ನ ವೈ ದೇವಾಃ ಸರ್ವೇಣೇವ ಸಂವದಂತೇ ಬ್ರಾಹ್ಮಣೇನ ವೈವ ರಾಜನ್ಯೇನ ವಾ ವೈಶ್ಯೇನ ವಾ ತೇ ಹಿ ಯಜ್ಞಿಯಾಸ್ತಸ್ಮಾದ್ಯದ್ಯೇನಗ್ಂ ಶೂದ್ರೇಣ ಸಂವಾದೋ ವಿಂದೇದೇತೇಷಾಮೇವೈಕಂ ಬ್ರೂಯಾದಿಮಮಿತಿ ವಿಚಕ್ಷ್ವೇಮಮಿತಿ .... .... ತತ್ರ ದೀಕ್ಷಿತಸ್ಯೋಪಚಾರಃ ॥**

(ಶ. ಬ್ರಾ. ೩-೧-೧-೧೦)

ಯಜ್ಞಕ್ಕಾಗಿ ದೀಕ್ಷಿತನಾದವನು ದೇವತೆಗಳಿಗೆ ಸಮಾನನು. ಆದುದರಿಂದ ಅವನು ನಿಕೃಷ್ಟರಾದವರ ಜೊತೆಯಲ್ಲಿ ಯಾರೊಂದಿಗೂ ಮಾತನ್ನಾಡಬಾರದು. ದೇವತೆಗಳು ಬ್ರಾಹ್ಮಣ, ರಾಜನ್ಯ ಮತ್ತು ವೈಶ್ಯ ಈ ಮೂರು ಪಂಗಡಗಳನ್ನು ಬಿಟ್ಟು ಉಳಿದವರಾರೊಂದಿಗೂ ವ್ಯವಹರಿಸುವುದಿಲ್ಲ. ಇವರಿಗೆ ಮಾತ್ರ ಯಾಗಮಾಡುವ ಅಧಿಕಾರವಿರುವುದರಿಂದ ಇವರೊಂದಿಗೆ ವ್ಯವಹರಿಸುತ್ತಾರೆ. ಒಂದುವೇಳೆ ಶೂದ್ರನೊಂದಿಗೆ ಮಾತನಾಡುವ ಪ್ರಸಂಗ ಬಂದರೆ ಆಗ ಅವನನ್ನು "ಹೀಗೆ ಮಾಡಹೇಳು ; ಹಾಗೆ ಮಾಡಹೇಳು " ಎಂದು ಇತರರ ಮೂಲಕ ಹೇಳಿಸಬೇಕು. ಇದು ದೀಕ್ಷಿತನ ವಿಷಯದಲ್ಲಿ ಹೇಳಿರುವ ನಿಯಮ. ಅವನು ಇದನ್ನು ಪಾಲಿಸಬೇಕು. ಹೀಗೆ ಶೂದ್ರನ ವಿಷಯದಲ್ಲಿ ನಿಕೃಷ್ಟಬುದ್ಧಿಯು ವ್ಯಕ್ತವಾಗಿದೆ. ಇನ್ನು ಕೆಲವೆಡೆಗಳಲ್ಲಿ ವೈಶ್ಯ ಮತ್ತು ಶೂದ್ರ ಇವೆರಡು ಜಾತಿಯೂ ನಿಕೃಷ್ಟವೆಂಬ ಭಾವವು ಸೂಚಿತವಾಗಿದೆ. ಉದಾಹರಣೆಗೆ—

**ತದ್ಯದಿತೋ ಯತಾಂ । ಅಶ್ವಃ ಪ್ರಥಮ ಏತಿ ತಸ್ಮಾತ್ ಕ್ಷತ್ರಿಯಂ ಪ್ರಥಮಂ ಯಂತಮಿತರೇ ತ್ರಯೋ ವರ್ಣಾಃ ಪಶ್ಚಾದನುಯಂತ್ಯಥ ಯದಮುತ ಆಯತಾಮಜಃ ಪ್ರಥಮ ಏತಿ ತಸ್ಮಾದ್ಬ್ರಾಹ್ಮಣಂ ಯಂತಮಿ ತರೇ ತ್ರಯೋ ವರ್ಣಾಃ ಪಶ್ಚಾದನು ಯಂತ್ಯಥ ಯನ್ನೈವೇತೋ ಯತಾಂ ನಾಮುತೋ ರಾಸಭಃ ಪ್ರಥಮ ಏತಿ ತಸ್ಮಾನ್ನ ಕದಾಚನ ಬ್ರಾಹ್ಮಣಶ್ಚ ಕ್ಷತ್ರಿಯಶ್ಚ ವೈಶ್ಯಂ ಚ ಶೂದ್ರಂ ಚ ಪಶ್ಚಾದನ್ವಿತಸ್ತಸ್ಮಾದೇವಂ ಯಂತ್ಯಪಾಪವಸ್ಯಸಾಯಾಥೋ ಬ್ರಹ್ಮಣಾ ಚೈವೈತತ್ಕ್ಷತ್ರೇಣ ಚೈತೌ ವರ್ಣಾವಭಿತಃ ಪರಿಗೃಹ್ಣೀತೇಽನಪಕ್ರಮಿಣೌ ಕುರುತೇ ॥**

(ಶ. ಬ್ರಾ. ೬-೪-೪-೧೩)

ಈ ಆಹವನೀಯಾಗ್ನಿಯಿಂದ ಹೊರಡುವ ಪ್ರಾಣಿಗಳಲ್ಲಿ ಅಶ್ವವೇ ಪ್ರಥಮ. ಅನಂತರ ರಾಸಭ (ಕತ್ತೆ). ಅನಂತರ ಗಂಡು ಆಡು.(ಅಜ). ಇವುಗಳಲ್ಲಿ ಅಶ್ವವು ಕ್ಷತ್ರಿಯನನ್ನೂ, ರಾಸಭವು (ಕತ್ತೆ) ವೈಶ್ಯ ಮತ್ತು ಶೂದ್ರರನ್ನೂ, ಗಂಡು ಆಡು (ಅಜ) ಬ್ರಾಹ್ಮಣನನ್ನು ಪ್ರತಿಬಿಂಬಿಸುತ್ತವೆ.

ಆಹವನೀಯಾಗ್ನಿಯಿಂದ ಮುಂದೆ ಸರಿಯುವ ಪ್ರಾಣಿಗಳಲ್ಲಿ ಅಶ್ವವೇ ಮೊದಲು ಹೊರಟದ್ದರಿಂದ ಕ್ಷತ್ರಿಯನು ಮೊದಲು ಹೊರಟು ಅವನನ್ನು ಉಳಿದ ಮೂರು ಪಂಗಡದವರೂ ಅನುಸರಿಸಬೇಕು. ಅಲ್ಲಿಂದ ಹಿಂತಿರುಗುವಾಗ

ಅಜವು ಮೊದಲು ಹೊರಡುತ್ತದೆ. ಆದುದರಿಂದ ಬ್ರಾಹ್ಮಣನು ಮೊದಲು ಆರಂಭಿಸಿ. ಅವನನ್ನು ಇತರರು ಅನುಸರಿಸಬೇಕು. ಮುಂದುವರಿಯುವಾಗಾಗಲಿ ಅಥವಾ ಹಿಂತಿರುಗುವಾಗಾಗಲಿ ರಾಸಭವು ಎಂದೂ ಮುಂದಾಗಿರುವುದಿಲ್ಲ. ಆದುದರಿಂದ ವೈಶ್ಯ ಮತ್ತು ಶೂದ್ರರನ್ನು ಯಾರೂ ಹಿಂಬಾಲಿಸುವುದಿಲ್ಲ. ವೈಶ್ಯ ಮತ್ತು ಶೂದ್ರರು ಯಾವಾಗಲೂ ಬ್ರಾಹ್ಮಣ ಮತ್ತು ಕ್ಷತ್ರಿಯರಿಗೆ ಅಧೀನರಾಗಿಯೇ ಇರತಕ್ಕದ್ದು.

ಇದೇ ರೀತಿಯಲ್ಲಿ ವೃತಿಯನ್ನು ಹೊಂದಿದ ಮೇಲೆಯೂ ಸಹ ದಿಬ್ಬಗಳನ್ನು ಕಟ್ಟುವುದರಲ್ಲಿಯೂ ಆಯಾ ವರ್ಣಕ್ಕನುಸಾರವಾಗಿರಬೇಕು ಎಂಬ ವ್ಯತ್ಯಾಸವನ್ನು ಸೂಚಿಸಿದೆ.

**ತದ್ವೈ ನಮಹತ್ಕುರ್ಯಾತ್ । ನೇನ್ಮಹದಘಂ ಕರವಾಣೀತಿ ಯಾವಾನುದ್ಬಾಹುಃ ಪುರುಷಸ್ತಾವತ್ ಕ್ಷತ್ರಿಯಸ್ಯ ಕುರ್ಯಾನ್ಮುಖದಘ್ನಂ ಬ್ರಾಹ್ಮಣಸ್ಯೋಪಸ್ಥದಘ್ನಂ ಸ್ತ್ರಿಯಾ ಊರುದಘ್ನಂ ವೈಶ್ಯಸ್ಯಾಷ್ಠೀವದ್ದಘ್ನಂ ಶೂದ್ರಸ್ಯೈವಂ ವೀರ್ಯಾ ಹ್ಯೇತ ಇತಿ ॥**

(ಶ. ಬ್ರಾ. ೧೩-೮-೩-೧೧)

ಶ್ಮಶಾನದಲ್ಲಿ ದಿಬ್ಬವನ್ನು ಅವರವರ ಶಕ್ತಿಗನುಸಾರವಾಗಿ ಮಾಡತಕ್ಕದ್ದು. ಅದಕ್ಕಿಂತಲೂ ಅಧಿಕವಾಗಿ ಮಾಡಿದರೆ ಅವರವರ ಪಾಪವನ್ನು ಅಧಿಕಮಾಡಿದಂತೆ ಆಗುತ್ತದೆ. ಬ್ರಾಹ್ಮಣನಿಗೆ ಮುಖಪರ್ಯಂತವೂ, ಕ್ಷತ್ರಿಯನಿಗೆ ಬಾಹು ಪರ್ಯಂತವೂ ವೈಶ್ಯ ಮತ್ತು ಸ್ತ್ರೀಯರಿಗೆ ತೊಡೆಯ ಪರ್ಯಂತವೂ ಮತ್ತು ಶೂದ್ರನಿಗೆ ಮೊಣಕಾಲು ಪರ್ಯಂತವೂ ಮಾಡ ತಕ್ಕದ್ದು. ಅದೇ ಅವರವರ ಶಕ್ತಿಯನ್ನು ತೋರಿಸತಕ್ಕದ್ದಾಗಿದೆ.

ಅಲ್ಲದೆ ಯಜ್ಞಕ್ಕೂ ಬ್ರಾಹ್ಮಣನಿಗೂ ಇರುವ ನಿಕಟವಾದ ಸಂಬಂಧವು ಇನ್ನಾವ ವರ್ಣದವರೊಂದಿಗೂ ಇಲ್ಲವೆಂಬ ವಿಷಯವೂ ಕೆಲವೆಡೆಗಳಲ್ಲಿ ಉಕ್ತವಾಗಿದೆ. ಉದಾಹರಣೆಗೆ—

**ಪ್ರಜಾಪತಿರ್ಯಜ್ಞಮಸೃಜತ ಯಜ್ಞಂ ಸೃಷ್ಟಮನು ಬ್ರಹ್ಮಕ್ಷತ್ರೇ ಅಸೃಜ್ಯೇತಾಂ ಬ್ರಹ್ಮಕ್ಷತ್ರೇ ಅನು ದ್ವಯ್ಯಃ ಪ್ರಜಾ ಅಸೃಜ್ಯಂತ ಹುತಾದಶ್ಚಾಹುತಾದಶ್ಚ ಬ್ರಹ್ಮೈವಾನುಹುತಾದಃ ಕ್ಷತ್ರ‑ಮನ್ವಹುತಾದ ಏತಾ ವೈ ಪ್ರಜಾ ಹುತಾದೋ ಯದ್ಬ್ರಾಹ್ಮಣಾ ಅಥೈತಾ ಅಹುತಾದೋ ಯದ್ರಾಜನ್ಯೋ ವೈಶ್ಯಃ ಶೂದ್ರಸ್ತಾಭ್ಯೋ ಯಜ್ಞ ಉದಕ್ರಾಮತ್ತಂ ಬ್ರಹ್ಮಕ್ಷತ್ರೇ ಅನ್ವೈ‑ತಾಂ ಯಾನ್ಯೇವ ಬ್ರಹ್ಮಣ ಆಯುಧಾನಿ ತೈರ್ಬ್ರಹ್ಮಾನ್ವೈದ್ಯಾನಿ ಕ್ಷತ್ರಸ್ಯ ತೈಃ ಕ್ಷತ್ರಂ ॥**

(ಐ. ಬ್ರಾ. ೩೪-೧೯)

ಪ್ರಜಾಪತಿಯು ಯಜ್ಞವನ್ನು ಉತ್ಪನ್ನಮಾಡಿದನು. ಯಜ್ಞಾನಂತರ ಬ್ರಹ್ಮ ಮತ್ತು ಕ್ಷತ್ರ ಎಂಬ ಎರಡು ಶಕ್ತಿಗಳನ್ನು ನಿರ್ಮಿಸಿದನು. ಈ ಶಕ್ತಿಗಳನ್ನು ಅವಲಂಬಿಸಿ ಎರಡು ವಿಧವಾದ ಪ್ರಜಾಸಂತತಿಗಳು ಉತ್ಪನ್ನವಾದವು. ಅವುಗಳಲ್ಲಿ ಒಂದು ಯಜ್ಞಾಂಶವನ್ನು ತಿನ್ನಲು ಯೋಗ್ಯವಾದುದು. ಇನ್ನೊಂದು ಅದಕ್ಕೆ ಅಧಿಕಾರವನ್ನು ಹೊಂದದೇ ಇರತಕ್ಕದ್ದು ಬ್ರಾಹ್ಮಣರು ಯಜ್ಞಾಂಶವನ್ನು ತಿನ್ನಲು ಅಧಿಕಾರವನ್ನು ಹೊಂದಿ **ಹುತಾದರು** ಎಂದು ಪ್ರಸಿದ್ಧರಾದರು. ಕ್ಷತ್ರಶಕ್ತಿಯಿಂದ ಉತ್ಪನ್ನರಾದ ರಾಜನ್ಯ, ವೈಶ್ಯ ಮತ್ತು ಶೂದ್ರರು **ಅಹುತಾದರು** ಎಂದು ತಿಳಿಯಲ್ಪಟ್ಟರು. ಆದುದರಿಂದ **ಈ** ಮೂರು ಪಂಗಡದವರನ್ನು ಬಿಟ್ಟು ಯಜ್ಞವು ದೂರಕ್ಕೆ ಸರಿಯಿತು. ಆಗ ಬ್ರಹ್ಮ ಮತ್ತು ಕ್ಷತ್ರ ಶಕ್ತಿಗಳೆರಡೂ

ಯಜ್ಞವನ್ನು ಹಿಂಬಾಲಿಸಿ ಹೊರಟವು. ಬ್ರಹ್ಮಶಕ್ತಿಯು ಬ್ರಹ್ಮಸಂಬಂಧಿಯಾದ ಆಯುಧದೊಡನೆಯೂ ಕ್ಷತ್ರಶಕ್ತಿಯು ಕ್ಷತ್ರಸಂಬಂಧಿಯಾದ ಆಯುಧದೊಡನೆಯೂ ಹೊರಟವು.

**ಏತಾನಿ ವೈ ಬ್ರಹ್ಮಣ ಆಯುಧಾನಿ ಯದ್ಯಜ್ಞಾಯುಧಾನ್ಯಥೈತಾನಿ ಕ್ಷತ್ರಸ್ಯಾಯುಧಾನಿ**
**ಯದಶ್ವರಥಃ ಕವಚ ಇಷುಧನ್ವ ತಂ ಕ್ಷತ್ರಮನನ್ವಾಪ್ಯ ನ್ಯವರ್ತತಾಯುಧೇಭ್ಯೋ ಹ ಸ್ಮಾಸ್ಯ-**
**ವಿಜಮಾನಃ ಪರಾಙೇವೈತ್ಯಥೈನಂ ಬ್ರಹ್ಮಾನ್ವೈತ್ತಮಾಪ್ನೋತ್ತಮಾಪ್ತ್ವಾ ಪರಸ್ತಾನ್ನಿರುಧ್ಯಾ-**
**ತಿಷ್ಠತ್ಸ ಆಪ್ತಃ ಪರಸ್ತಾನ್ನಿರುದ್ಧಸ್ತಿಷ್ಠನ್ ಜ್ಞಾತ್ವಾ ಸ್ವಾನ್ಯಾಯುಧಾನಿ ಬ್ರಹ್ಮೋಪಾವರ್ತತ**
**ತಸ್ಮಾದ್ಧಾಪ್ಯೇತರ್ಹಿ ಯಜ್ಞೋ ಬ್ರಹ್ಮಣ್ಯೇವ ಬ್ರಾಹ್ಮಣೇಷು ಪ್ರತಿಷ್ಠಿತಃ ॥**

(ಐ. ಬ್ರಾ. ೩೪-೧೯)

ಬ್ರಹ್ಮಶಕ್ತಿಯ ಆಯುಧಗಳು ಯಜ್ಞಾಯುಧಗಳಲ್ಲದೆ ಬೇರೆಯಲ್ಲ. ಆದರೆ, ಅಶ್ವ, ರಥ, ಕವಚ, ಬಾಣ, ಬಿಲ್ಲು ಇವೆಲ್ಲವೂ ಕ್ಷಾತ್ರಸಂಬಂಧಿಯಾದ ಆಯುಧಗಳು. ಈ ಕ್ಷತ್ರಸಂಬಂಧಿಯಾದ ಆಯುಧಗಳೆಲ್ಲವೂ ಒಟ್ಟಿಗೆ ಸೇರಿದರೂ ಸಹ ಯಜ್ಞವನ್ನು ಪಡೆಯಲು ಶಕ್ತಿಯಿಲ್ಲದವರಾಗಿ ನಡುಗುತ್ತ ಹಿಂತಿರುದವು. ಬ್ರಹ್ಮಶಕ್ತಿಯನ್ನು ಪ್ರತಿಬಿಂಬಿಸುವ ಆಯುಧವು ಯಜ್ಞವನ್ನು ಪಡೆಯಿತು. ಅನಂತರ ಊರ್ಧ್ವಭಾಗದಿಂದ ಅದನ್ನು ತಡೆಯಲು ಬ್ರಹ್ಮಶಕ್ತಿಯನ್ನು ತನ್ನ ಶಕ್ತಿಯೆಂದೇ ತಿಳಿದು ಅದರ ವಶವಾಯಿತು. ಆದುದರಿಂದಲೇ ಈಗಲೂ ಸಹ ಬ್ರಹ್ಮಶಕ್ತಿಯನ್ನು ಹೊಂದಿರುವ ಬ್ರಾಹ್ಮಣನಲ್ಲಿಯೇ ಯಜ್ಞವು ಸ್ಥಾಪಿತವಾಗಿದೆ.

ಹೀಗೆ ಅನೇಕ ಕಡೆಗಳಲ್ಲಿ ಬ್ರಾಹ್ಮಣ್ಯಕ್ಕೆ ಪ್ರಾಶಸ್ತ್ಯವಿದ್ದರೂ ಸಹ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರೆಲ್ಲರೂ ಪ್ರಜಾಪತಿಯ ಪುತ್ರರೇ ಆದುದರಿಂದ ಶಾಶ್ವತವಾಗಿ ಇವರೆಲ್ಲರೂ ಸಮಾನವಾದ ದಿವ್ಯತ್ವವನ್ನು ಹೊಂದಿರುತ್ತಾರೆ. ಮತ್ತು ಎಲ್ಲರೂ ಒಂದೇ ವಿಧವಾದ ದೇವತಾನುಗ್ರಹಕ್ಕೂ ಮತ್ತು ಸೌಖ್ಯಕ್ಕೂ ಅರ್ಹರು ಎಂಬ ವಿಷಯವನ್ನು ಸಂಹಿತಾ ಮತ್ತು ಉಪನಿಷದಾದಿಗಳಲ್ಲೇ ಅನೇಕ ಕಡೆಗಳಲ್ಲಿ ತಿಳಿಸಿದೆ. ಅಲ್ಲದೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಈ ವರ್ಣಗಳು ಮಾನವಜಾತಿಯಲ್ಲಿ ಮಾತ್ರವಲ್ಲ, ದೇವತೆಗಳೂ ಈ ವರ್ಣವಿಭಾಗವನ್ನು ಹೊಂದಿರುತ್ತಾರೆ. ಅವರಲ್ಲಿ ಬ್ರಾಹ್ಮಣರು ಉತ್ತಮರು, ಕ್ಷತ್ರಿಯರು ಅವರಿಗಿಂತಲೂ ಕೆಳಗಿನವರು ಮತ್ತು ವೈಶ್ಯರು ಕ್ಷತ್ರಿಯರಿಗಿಂತಲೂ ನಿಕೃಷ್ಟರು ಎಂಬ ವ್ಯತ್ಯಾಸವಿರುವುದಿಲ್ಲ ಆದುದರಿಂದ ಈಗಿನ ವ್ಯವಹಾರದಲ್ಲಿರುವ ಉತ್ಕರ್ಷಾಪಕರ್ಷಗಳ ಸಾಮಾಜಿಕ ವ್ಯವಸ್ಥೆಗಳಿಂದ ಉತ್ತಮವಾದ ಆದರ್ಶಪ್ರಾಯವಾದ ವರ್ಣವಿಭಾಗದ ಮೂಲತತ್ತ್ವವನ್ನು ದೂಷಿಸುವುದು ಉಚಿತವಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರೆಲ್ಲರೂ ಬ್ರಹ್ಮನಿಂದಲೇ ಉತ್ಪನ್ನರಾಗಿ ಸರ್ವರೂ ಬ್ರಹ್ಮಾಂಶವನ್ನು ಹೊಂದಿದ್ದಾರೆ. ಆದುದರಿಂದ ಉತ್ಕರ್ಷಾಪಕರ್ಷಗಳಿಗೆ ಕಾರಣವಿಲ್ಲ ಎಂಬ ಅಭಿಪ್ರಾಯವು ಅನೇಕ ಕಡೆಗಳಲ್ಲಿ ತಿಳಿಸಲ್ಪಟ್ಟಿದೆ.

ಸಕಲ ವರ್ಣಗಳೂ ಬ್ರಹ್ಮನಿಂದ ಉತ್ಪನ್ನವಾದವು. ಎಲ್ಲವೂ ದಿವ್ಯತ್ವವನ್ನು ಹೊಂದಿವೆ ಎಂದು ತಿಳಿಸುವ ವಾಕ್ಯಗಳು :—

**ಬ್ರಹ್ಮ ವಾ ಇದಮಗ್ರ ಆಸೀದೇಕಮೇವ ತದೇಕಂ ಸನ್ನವ್ಯಭವತ್ । ತಚ್ಛ್ರೇಯೋರೂಪಮತ್ಯ-**
**ಸೃಜತ ಕ್ಷತ್ರಂ ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ**

**ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ ಕ್ಷತ್ರಾತ್ಪರಂ ನಾಸ್ತಿ ತಸ್ಮಾತ್ ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ ಕ್ಷತ್ರ ಏವ ತದ್ಯಶೋ ದಧಾತಿ ಸೈಷಾ ಕ್ಷತ್ರಸ್ಯ ಯೋನಿರ್ಯದ್ಬ್ರಹ್ಮ । ತಸ್ಮಾದ್ಯದ್ಯಪಿ ರಾಜಾ ಪರಮತಾಂ ಗಚ್ಛತಿ ಬ್ರಹ್ಮೈ-ವಾಂತತ ಉಪನಿಶ್ರಯತಿ ಸ್ವಾಂ ಯೋನಿಂ ಯ ಉ ಏನಂ ಹಿನಸ್ತಿ ಸ್ವಾಂ ಸ ಯೋನಿ-ಮೃಚ್ಛತಿ ಸ ಪಾಪೀಯಾನ್ಭವತಿ ಯಥಾ ಶ್ರೇಯಾಗ್ಂಸಂ ಹಿಂಸಿತ್ವಾ ।**

(ಬೃ. ಉ. ೧-೪-೧೧)

ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮನೊಬ್ಬನೇ ಇದ್ದನು. ಒಬ್ಬನೇ ಇದ್ದುದರಿಂದ ವೃದ್ಧಿಯನ್ನು ಹೊಂದಲಿಲ್ಲ. ಅವನು ತನಗಿಂತಲೂ ಮೀರಿದ ಕ್ಷತ್ರವನ್ನು ಉತ್ಪನ್ನಮಾಡಿದನು. ಎಂದರೆ ತನಗೂ ರಕ್ಷಣೆಯನ್ನು ಕೊಡಲು ಸಮರ್ಥವಾದ ಶಕ್ತಿಯನ್ನು ಎಂದರ್ಥ. ಅದೇ ಕ್ಷತ್ರಿಯ ವರ್ಣವೆಂದು ಪ್ರಸಿದ್ಧವಾಯಿತು. ಬ್ರಹ್ಮನನ್ನು ರಕ್ಷಿಸುವ ಶಕ್ತಿಯು ಅದಕ್ಕಿದ್ದುದರಿಂದ ಬ್ರಹ್ಮನಿಗಿಂತಲೂ ಅಧಿಕವೆಂದು ಹೇಳಿದೆ. ಇಂದ್ರಾದಿಗಳೇ ಈ ಕ್ಷತ್ರಿಯ ವಂಶದಲ್ಲಿ ಉತ್ಪನ್ನರಾದವರು. ದೇವತೆಗಳಿಗೆಲ್ಲ ರಾಜನಾದವನು ಇಂದ್ರನು. ಜಲಜಂತುಗಳಿಗೆಲ್ಲ ವರುಣನು ರಾಜನು, ಸೋಮನು ಬ್ರಾಹ್ಮಣರ ರಾಜನು. ಪಶುಗಳಿಗೆಲ್ಲ ರುದ್ರನು, ವಿದ್ಯುತ್ತುಗಳಿಗೆ ಪರ್ಜನ್ಯನು, ಪಿತೃಗಳಿಗೆಲ್ಲ ಯಮನು, ವ್ಯಾಧಿಗಳಿಗೆಲ್ಲ ಮೃತ್ಯುವು, ಜ್ಯೋತಿರ್ಮಂಡಲಗಳಿಗೆಲ್ಲ ಈಶಾನನು.

ಈ ರೀತಿ ಬ್ರಾಹ್ಮಣರಿಗೂ ಕ್ಷತ್ರಿಯನೇ ರಕ್ಷಕನಾದುದರಿಂದ ರಾಜಸೂಯ ಯಾಗದಲ್ಲಿ ಕ್ಷತ್ರಿಯನಿಗಿಂತಲೂ ಬ್ರಾಹ್ಮಣನು ಕೆಳಗಿನ ಸ್ಥಾನದಲ್ಲಿ ನಿಂತುಕೊಂಡು ಪೂಜಿಸುತ್ತಾನೆ. ಆ ಕಾಲದಲ್ಲಿ ಕ್ಷತ್ರಿಯನಿಗಿಂತಲೂ ಅಧಿಕನಾದವನು ಯಾರೂ ಇಲ್ಲವೆಂದರ್ಥ. ಆದರೆ ಅದೇ ಕ್ಷತ್ರಿಯನಿಗೆ ಬ್ರಹ್ಮನೇ ಮೂಲನಾದುದರಿಂದ ಯಜ್ಞಾನಂತರ ಬಂದು ಬ್ರಾಹ್ಮಣನಿಗೆ ಗೌರವವನ್ನು ಸಲ್ಲಿಸುತ್ತಾನೆ. ತಾನು ಬ್ರಾಹ್ಮಣನ ರಕ್ಷಕನಾದರೂ ಅವನಿಗೆ ಯಾವ ವಿಧವಾದ ಅವಮಾನವನ್ನು ಮಾಡಬಾರದು.

**ಸ ನೈವ ವ್ಯಭವತ್ ಸ ವಿಶಮಸೃಜತ । ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ— ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ ।**

(ಬೃ. ಉ. ೧-೪-೧೨-)

ಬ್ರಹ್ಮ ಮತ್ತು ಕ್ಷತ್ರ ಎಂಬ ಎರಡು ತತ್ತ್ವ (ವರ್ಣಗಳು) ಗಳಿದ್ದರೂ ಇದ್ದೂ ಸಾಲದೆಂದು ತೋರಿತು. ಬ್ರಹ್ಮ ಮತ್ತು ಕ್ಷಾತ್ರಧರ್ಮಗಳ ಪೌಷ್ಕಲ್ಯಕ್ಕೆ ಅವಕಾಶವನ್ನುಂಟುಮಾಡುವ ವೈಶ್ಯನನ್ನು ಉತ್ಪನ್ನಮಾಡಬೇಕೆಂಬ ಆವಶ್ಯಕತೆಯೂ ತೋರಿತು. ಗಣಸಂಜ್ಞೆಯಿಂದ ಯಾವ ದೇವತೆಗಳು ವ್ಯವಹರಿಸಲ್ಪಡುವರೋ ಅವರೇ ವೈಶ್ಯ ರೂಪರಾದರು. ಅವರು ಯಾರೆಂದರೆ, ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವತೆಗಳು ಮತ್ತು ಮರುತ್ತುಗಳು.

**ಸ ನೈವ ವ್ಯಭವತ್ಸ ಶೌದ್ರಂ ವರ್ಣಮಸೃಜತ ಪೂಷಣಮಿಯಂ ವೈ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ॥**

(ಬೃ. ಉ. ೧-೪-೧೩)

ಬ್ರಹ್ಮ, ಕ್ಷತ್ರ ಮತ್ತು ವೈಶ್ಯ ಈ ಮೂರು ವರ್ಣಗಳಿದ್ದರೂ ಸಹ ತನ್ನ ವೃದ್ಧಿಗೆ ಅವಕಾಶವಿಲ್ಲವೆಂದು ತಿಳಿದನು. ಆಗ ತನ್ನ ಬೆಳವಣಿಗೆಗೆ ಪೂರ್ಣತೆಯನ್ನು ಉಂಟುಮಾಡುವ ಶೂದ್ರವರ್ಣವನ್ನು ಉತ್ಪನ್ನಮಾಡಿದನು. ಇದೇ **ಪೂಷ** ಸಂಜ್ಞೆಯಿಂದ ವ್ಯವಹರಿಸಲ್ಪಟ್ಟಿತು. ಈ ಪೃಥ್ವಿಯೇ ಪೂಷನು. ಸಕಲವನ್ನು ಪೋಷಿಸುವುದರಿಂದ ಈ ಹೆಸರು.

ಹೀಗೆ ಬ್ರಹ್ಮನ ಪರಿಪೂರ್ಣತೆಗೆ ಶೂದ್ರನೂ ಇಲ್ಲದಿದ್ದರೆ ಸಾಧ್ಯವಿಲ್ಲವೆಂದರೆ, ಶೂದ್ರನಲ್ಲಿರುವ ಬ್ರಹ್ಮಾಂಶವೂ ದಿವ್ಯತ್ವವೂ ತಿಳಿಯುತ್ತದೆ. ಸೃಷ್ಟಿಯಲ್ಲಿ ಒಂದಾದ ಮೇಲೆ ಇನ್ನೊಂದು ವರ್ಣವೆಂದು ವ್ಯಕ್ತವಾಗುವುದೇ ವಿನಾ, ಉತ್ಕರ್ಷಾಪಕರ್ಷಗಳ ವಿಷಯವನ್ನು ಹೇಳಿಲ್ಲ.

ಈ ನಾಲ್ಕು ವರ್ಣಗಳಿಂದಲೂ ಬ್ರಹ್ಮನ ಪೌಷ್ಕಲ್ಯವು ಸಾಧ್ಯವಾಗಲಿಲ್ಲ. ಇವುಗಳೆಲ್ಲಕ್ಕೂ ಸಾಮರಸ್ಯ ವನ್ನುಂಟುಮಾಡುವ ತತ್ತ್ವವನ್ನು ಉತ್ಪನ್ನಮಾಡಬೇಕಾಯಿತು. ಆದುದರಿಂದ,

**ಸ ನೈವ ವ್ಯಭವತ್ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ ತದೇತತ್ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ಪರಂ ನಾಸ್ತ್ಯಥೋ ಅಬಲೀಯಾನ್ ಬಲೀಯಾಂಸಮಾಶಂಸತೇ ಧರ್ಮೇಣ ಯಥಾ ರಾಜ್ಞೈವಂ ಯೋ ವೈ ಸ ಧರ್ಮಃ ಸತ್ಯಂ ವೈ ತತ್ತಸ್ಮಾತ್ಸತ್ಯಂ ವದಂತ-ಮಾಹುರ್ಧರ್ಮಂ ವದತೀತಿ ಧರ್ಮಂ ವಾ ವದಂತಂ ಸತ್ಯಂ ವದತೀತ್ಯೇತದ್ಧ್ಯೇವೈತ-ದುಭಯಂ ಭವತಿ ॥**

(ಬೃ. ಉ. ೧-೪-೧೪)

ಧರ್ಮನಿಯಮವಿಲ್ಲದೆ ಕ್ಷತ್ರಿಯನ ಶಕ್ತಿಯು ಉಲ್ಬಣವನ್ನು ಹೊಂದಿ ದುಷ್ಟಶಕ್ತಿಯಾಗಿ ಪರಿಣಮಿಸಬಹುದು ಎಂದು ಬ್ರಹ್ಮನು ತಿಳಿದು ಶ್ರೇಯೋರೂಪವಾದ ಧರ್ಮವನ್ನು ನಿರ್ಮಿಸಿದನು. ಈ ಧರ್ಮವೇ ಕ್ಷತ್ರಿಯನನ್ನು ನಿಯಮನದಲ್ಲಿಡಲು ಸಮರ್ಥವಾಯಿತು. ಸಕಲವನ್ನೂ ನಿಯಮಿಸಬಲ್ಲ ಕ್ಷತ್ರಿಯನನ್ನು ನಿಯಮನದಲ್ಲಿಡಬಲ್ಲ ಈ ಧರ್ಮಕ್ಕಿಂತಲೂ ಅಧಿಕವಾದುದು ಬೇರೆಯಾವುದೂ ಇಲ್ಲ. ರಾಜನ ಸಹಾಯದಿಂದ ದುರ್ಬಲನೂ ಶಕ್ತಿಯುತನಾದ (ಧರ್ಮರಹಿತನನ್ನು) ಪುರುಷನನ್ನು ಜಯಿಸುವಂತೆ, ಧರ್ಮದ ಸಹಾಯದಿಂದ ಶಕ್ತಿಯಿಲ್ಲದವನೂ ಶಕ್ತಿಯುತನನ್ನು ಜಯಿಸುತ್ತಾನೆ. ಧರ್ಮವೇ ಸತ್ಯವು. ಆದುದರಿಂದ ಸತ್ಯವನ್ನು ಹೇಳುವವನನ್ನು ಧರ್ಮಿಷ್ಠನೆಂದೂ, ಧರ್ಮಿಷ್ಠನನ್ನು ಸತ್ಯವಾಕ್ಕುಳ್ಳವನೆಂದೂ ಹೇಳುತ್ತಾರೆ. ಸತ್ಯ ಮತ್ತು ಧರ್ಮ ಎರಡೂ ಪರಸ್ಪರ ಅಭಿನ್ನವಾಗಿವೆ.

**ತದೇತದ್ಬ್ರಹ್ಮ ಕ್ಷತ್ರಂ ವಿಟ್ ಶೂದ್ರಸ್ತದಗ್ನಿನೈವ ದೇವೇಷು ಬ್ರಹ್ಮಾಭವದ್ಬ್ರಾಹ್ಮಣೋ ಮನುಷ್ಯೇಷು ಕ್ಷತ್ರಿಯೇಣ ಕ್ಷತ್ರಿಯೋ ವೈಶ್ಯೇನ ವೈಶ್ಯಃ ಶೂದ್ರೇಣ ಶೂದ್ರಸ್ತಸ್ಮಾದಗ್ನಾವೇವ ದೇವೇಷು ಲೋಕಮಿಚ್ಛಂತೇ ಬ್ರಾಹ್ಮಣೇ ಮನುಷ್ಯೇಷ್ವೇತಾಭ್ಯಾಂ ಹಿ ರೂಪಾಭ್ಯಾಂ ಬ್ರಹ್ಮಾಭವತ್ ॥**

(ಬೃ. ಉ. ೧-೪-೧೫)

ಈ ಬ್ರಹ್ಮನೇ ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೂಪದಲ್ಲಿ ಪರಿಣಮಿಸಿದನು. ವಿರಾಡ್ರೂಪನಾದ ಈ ಬ್ರಹ್ಮನೇ ದೇವತೆಗಳಲ್ಲಿ ಅಗ್ನಿರೂಪದಿಂದಲೂ, ಬ್ರಾಹ್ಮಣರಲ್ಲಿ ದಿವ್ಯಾಂಶಸಂಭೂತನಾದ ಬ್ರಾಹ್ಮಣನಾಗಿಯೂ, ವೈಶ್ಯರ ನಡುವೆ ದಿವ್ಯತ್ವವನ್ನು ಪಡೆದ ವೈಶ್ಯನಾಗಿಯೂ, ಶೂದ್ರರಲ್ಲಿ ದಿವ್ಯತ್ವವನ್ನು ಪಡೆದ ಶೂದ್ರನಾಗಿಯೂ ಪರಿಣಾಮವನ್ನು ಹೊಂದಿದನು. ಇತ್ಯಾದಿಯಾಗಿ ಈ ಎಲ್ಲ ವರ್ಣಗಳಲ್ಲಿಯೂ ಪರಬ್ರಹ್ಮನ ದಿವ್ಯತ್ವವು ವ್ಯಾಪ್ತವಾಗಿದೆಯೆಂದು ಪ್ರಶಂಸಿತವಾಗಿದೆ.

ಆದುದರಿಂದಲೇ, ಲೋಕಕಲ್ಯಾಣವನ್ನಪೇಕ್ಷಿಸಿ ಈಶ್ವರ ಪ್ರಾರ್ಥನೆಯನ್ನು ಮಾಡುವಾಗ ಸಕಲರಿಗೂ ಶ್ರೇಯಸ್ಸುಂಟಾಗಲೆಂದು ಪ್ರಾರ್ಥಿಸಿದೆ. ಕೇವಲ ಕೆಲವು ವರ್ಣದವರಿಗೆ ಮಾತ್ರ ದಿವ್ಯಾನುಗ್ರಹವು ಲಭಿಸಬೇಕೆಂದು

ಪ್ರಾರ್ಥಿಸಿಲ್ಲ. ಅಥವಾ ಒಂದು ವರ್ಣದವರಿಗೆ ಅಧಿಕವಾಗಿಯೂ ಇನ್ನೊಂದು ವರ್ಣದವರಿಗೆ ಆಯಾ ವರ್ಣಾನುಸಾರವಾಗಿಯೂ ಶ್ರೇಯಸ್ಸುಂಟಾಗಬೇಕೆಂದೂ ಕೋರಿಲ್ಲ. ಈಶ್ವರನ ದಿವ್ಯಾನುಗ್ರಹವು ಸಕಲ ಮಾನವರಲ್ಲಿಯೂ ಒಂದೇ ರೀತಿಯಾಗಿರಬೇಕೆಂದು ಕೋರಿದೆ. ಉದಾಹರಣೆಗೆ—

**ತಾಭಿಸ್ಸರ್ವಾಭೀ ರುಚೇ ಜನಾಯ ನಸ್ಕೃಧಿ । ಯಾ ವೋ ದೇವಾಸ್ಸೂರ್ಯೇ ರುಚೋ ಗೋಷ್ವಶ್ವೇಷು ಯಾ ರುಚಃ । ಇಂದ್ರಾಗ್ನೀ ತಾಭಿಸ್ಸರ್ವಾಭೀ ರುಚಂ ನೋ ಧತ್ತ ಬೃಹಸ್ಪತೇ । ರುಚಂ ನೋ ಧೇಹಿ ಬ್ರಾಹ್ಮಣೇಷು ರುಚಗ್ಂ ರಾಜಸು ನಸ್ಕೃಧಿ । ರುಚಂ ವಿಶ್ಯೇಷು ಶೂದ್ರೇಷು ಮಯಿ ಧೇಹಿ ರುಚಾರುಚಂ ॥**

(ತೈ. ಸಂ. ೫-೭-೬-೨, ೩)

ಎಲೈ ಅಗ್ನಿಯೇ, ಯಾವ ನಿನ್ನ ಪ್ರಭೆಯು ಸೂರ್ಯರಶ್ಮಿಗಳ ರೂಪದಲ್ಲಿ ಪ್ರಸರಿಸಿ ಅಂತರಿಕ್ಷವನ್ನೆಲ್ಲ ವ್ಯಾಪಿಸುವುದೋ ಆ ಪೂರ್ಣಪ್ರಭೆಯೊಂದಿಗೆ ಕೂಡಿದ ದಿವ್ಯಕಾಂತಿಯನ್ನು ಮಾನವರಾದ ನಮಗೂ ಅನುಗ್ರಹಿಸು. ನಮ್ಮ ಗವಾಶ್ವಾದಿಗಳಲ್ಲೂ ಅನುಗ್ರಹವನ್ನು ನೀಡು. ಎಲೈ ಇಂದ್ರಾಗ್ನಿಗಳೇ, ಎಲೈ ಬೃಹಸ್ಪತಿಯೇ, ಯಜ್ಞಕರ್ತರಾದ ನಮ್ಮಲ್ಲೂ (ಬ್ರಾಹ್ಮಣರಲ್ಲೂ) ನಮ್ಮ ಯಜ್ಞಕ್ಕೆ ಸಹಾಯಮಾಡುವ ನಮ್ಮ ರಾಜರಲ್ಲೂ, ನಮಗೆ ಸೇರಿದ ವೈಶ್ಯರಲ್ಲೂ, ಶೂದ್ರರಲ್ಲೂ ನಿಮ್ಮ ಪ್ರಭಾಯುತವಾದ ಕಾಂತಿಯನ್ನು ತುಂಬಿರಿ, ಎಂದಿರುವ ಈ ಪ್ರಾರ್ಥನೆಯಲ್ಲಿ ದಿವ್ಯಾನುಗ್ರಹವು ಎಲ್ಲರಿಗೂ ಒಂದೇ ರೀತಿಯಾಗಿ ಲಭಿಸಲೆಂದು ಪ್ರಾರ್ಥಿಸಿದೆ.

**ಬ್ರಹ್ಮಕ್ಷತ್ರೇ ಚ ವಿಶಿ ಪ್ರತಿಷ್ಠಿತೇ ।**

(ಶ. ಬ್ರಾ. ೧೧-೨-೭-೧೬)

ಯಜ್ಞಯಾಗಾದಿ ಕರ್ಮಗಳನ್ನು ನೆರವೇರಿಸುವುದಕ್ಕಾಗಲಿ, ಇತರ ವಿಧವಾದ ವ್ಯವಹಾರಗಳಿಗಾಗಲಿ ಬ್ರಾಹ್ಮಣರೂ ಮತ್ತು ಕ್ಷತ್ರಿಯರೂ ಸಹ ವೈಶ್ಯಾದಿ ಸಕಲ ಪ್ರಜೆಗಳ ಸಹಾಯವನ್ನೇ ನಂಬಿದ್ದಾರೆ. ಇವರ ಕ್ಷೇಮವು ಅವರನ್ನು ಅವಲಂಬಿಸಿದೆ (**ವಿಶ್** ಎಂದರೆ ರಾಜ್ಯದ ಸಕಲ ಪ್ರಜೆಗಳು ಎಂದರ್ಥ. ಋಕ್ಸಂಹಿತೆಯಲ್ಲಿ ಇದೇ ಅರ್ಥದಲ್ಲಿ ಈ ಪದವು ಅನೇಕ ಕಡೆಗಳಲ್ಲಿ ಪ್ರಯೋಗಿಸಿದೆ) ಎಂದು ಕೃತಜ್ಞತೆಯನ್ನೂ ಸೂಚಿಸಿರುತ್ತದೆ.

ಈರೀತಿ ವೈಶ್ಯ ಮತ್ತು ಶೂದ್ರಾದಿಗಳಿಗೂ ಉತ್ತಮವಾದ ಸಾಧನವನ್ನು ತೋರಿಸಿ ಅವರೂ ದಿವ್ಯಾಂಶಸಂಭೂತರು ಮತ್ತು ಉಳಿದ ವರ್ಣದವರ ಕಲ್ಯಾಣವು ಇವರ ಸಹಾಯದಿಂದಲೇ ಸಾಧ್ಯ ಎಂಬ ಕೃತಜ್ಞತಾಪೂರ್ವಕವಾದ ಮತ್ತು ಗೌರವವನ್ನು ತೋರಿಸತಕ್ಕ ಪ್ರಕರಣಗಳೂ ಅನೇಕವಾಗಿರುತ್ತವೆ. ಆದುದರಿಂದ, ಬ್ರಾಹ್ಮಣರು ತಮ್ಮ ವೈಶಿಷ್ಟ್ಯವನ್ನು ಪ್ರಕಟಿಸಿ ಇತರರನ್ನು ತಮ್ಮ ಸೇವಕರಂತೆ ಕಂಡರು ಎಂಬ ಮಾತಿಗೆ ಅವಕಾಶವಿರುವುದಿಲ್ಲ.

The Brahmins saw their opportunity, through the Purohitship, of gaining practical power during the confusion and difficulties of wars of invasion, and secured it .... .

(Index Vol. II p. 249)

ರಾಜರೂ ಇತರರೂ ಯುದ್ಧದಲ್ಲಿ ತೊಡಗಿ ಬೇರೆ ಕಾರ್ಯಗಳಲ್ಲಿ ಮಗ್ನರಾಗಿದ್ದು ಮನೋವೈಕ್ಲವ್ಯವಿದ್ದಾಗ ಬ್ರಾಹ್ಮಣರು ಅದೇ ಅವಕಾಶವನ್ನು ಕಾದು ತಮ್ಮ ಪೌರೋಹಿತ್ಯರೂಪವಾದ ಪ್ರಭಾವದಿಂದ ತಮ್ಮ ಪ್ರಬಲವಾದ ಸ್ಥಾನವನ್ನು ಭದ್ರಪಡಿಸಿಕೊಂಡು ಇತರರ ಮೇಲೆ ತಮ್ಮ ದರ್ಪವನ್ನು ಪ್ರಕಟಿಸಿದರು ಎಂಬ ಮತ್ತು ಇದೇ ರೀತಿಯ ಇತರ ಟೀಕೆಗಳಿಗೆ ಅವಕಾಶವೇ ಇಲ್ಲ. ಸಕಲ ಲೋಕದ ಕಲ್ಯಾಣವೂ ಬ್ರಾಹ್ಮಣರ ಆಶಯವಾಗಿದ್ದಿತೆಂದು ಮೇಲೆ ಉದಾಹರಿಸಿರುವ ಶ್ರುತಿವಾಕ್ಯಗಳಲ್ಲದೆ ಇನ್ನೂ ನೂರಾರು ಸನ್ನಿವೇಶಗಳು ಇದನ್ನು ಸಮರ್ಥಿಸುತ್ತವೆ. ಅಲ್ಲದೇ, ಬ್ರಾಹ್ಮಣರು ಕ್ಷತ್ರಿಯರಿಂದ ತತ್ತ್ವೋಪದೇಶವನ್ನು ಸ್ವೀಕರಿಸಿದ ಪ್ರಸಂಗಗಳು ಉಪನಿಷತ್ತುಗಳಲ್ಲಿ ಅನೇಕವಾಗಿ ತಿಳಿಸಲ್ಪಟ್ಟಿವೆ. ತತ್ವಜ್ಞಾನ, ಲೋಕದ ಶ್ರೇಯಸ್ಸು ಇವೆರಡೇ ಸಕಲ ವರ್ಣದವರ ಆಶಯವಾಗಿದ್ದಿತು, ಎಂಬುದಕ್ಕೆ ಅನೇಕ ಪ್ರಮಾಣಗಳಿರುತ್ತವೆ, ಆಂಗ್ಲಪಂಡಿತರೂ, ಅವರನ್ನನುಸರಿಸಿ ಅವರ ಅಭಿಪ್ರಾಯವನ್ನೇ ಅಂಧತ್ವದಿಂದ ಅನುಮೋದಿಸುವ ಕೆಲವು ಭಾರತೀಯರೂ ಹೇಳಿರುವ ಕಟುವಾದ ಟೀಕೆಗಳಿಗೆ ಅವಕಾಶವೇ ಇಲ್ಲ. ಪ್ರಸಿದ್ಧವಾದ ಕೆಲವು (ಆಂಗ್ಲ ಪಂಡಿತರೇ ಈ ಟೀಕೆಗಳನ್ನು ಒಪ್ಪುವುದಿಲ್ಲ.)

The Vedic Characteristics of caste are heredity, persuit of a common occupation and restriction on inter-marriage.

(Index, Macdonell & Keith-Vol. II p. 258)

ವಂಶಪರಂಪರಾಪ್ರಾಪ್ತವಾದ ವೃತ್ತಿಯನ್ನವಲಂಬಿಸುವುದು, ಸರ್ವರ ಕಲ್ಯಾಣಕ್ಕಾಗಿ ದುಡಿಯುವುದು ಆದರೆ ತನ್ನ ಸ್ವಭಾವ ಮತ್ತು ಸ್ವಧರ್ಮೋಚಿತವಾದ ಕಾರ್ಯಗಳನ್ನು ಮಾತ್ರ ಮಾಡುವುದು ಇತ್ಯಾದಿಗಳೇ ವರ್ಣವಿಭಾಗದ ಉದ್ದಿಶ್ಯವಾಗಿದ್ದಿತು. ಈ ದೃಷ್ಟಿಯಿಂದಲೇ ವಿವಾಹದ ವಿಷಯದಲ್ಲೂ ಕಟ್ಟುಪಾಡುಗಳು ಇದ್ದವು. ಬೇರೆ ದೃಷ್ಟಿಯಿಂದಲ್ಲ ಎಂಬ ಅಭಿಪ್ರಾಯವನ್ನೂ Keith Macdonell ಮುಂತಾದವರು ತಿಳಿಸಿದ್ದಾರೆ.

ಜ್ಞಾನವೇ ಪ್ರಧಾನವಾಗಿದ್ದಿತು. ಜ್ಞಾನಿಯು ಪೂಜ್ಯನು, ಅವನು ಯಾವ ವರ್ಣದವನಾದರೂ ಆಗಿರಬಹುದು ಎಂಬ ಅಭಿಪ್ರಾಯವು ಸಂಹಿತಾ, ಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಅನೇಕ ಪ್ರಕರಣಗಳಲ್ಲಿ ಹೇಳಲ್ಪಟ್ಟಿದೆ.

ಋಗ್ವೇದಸಂಹಿತೆಯ ಅನೇಕ ಸೂಕ್ತಗಳಿಗೆ ಬ್ರಾಹ್ಮಣರಲ್ಲದ ಇತರ ವರ್ಣದವರೂ ಋಷಿಗಳಾಗಿದ್ದಾರೆ. ವಿಶ್ವಾಮಿತ್ರಋಷಿಯು ಗಾಧಿರಾಜನ ಪುತ್ರನೆಂದು ಹೇಳಲ್ಪಟ್ಟಿದೆ. ದೇವಾಪಿ ಮತ್ತು ಶಂತನು ಎಂಬಿಬ್ಬರು ಋಷ್ಟಿಷೇಣ ಎಂಬ ರಾಜರ್ಷಿಯ ಪುತ್ರರೆಂದು ಹೇಳಲಾಗಿದೆ. ಕವಷ ಐಲೂಷನೆಂಬುವನು ಶೂದ್ರ (ದಾಸಿ) ಸ್ತ್ರೀಯ ಮಗನೆಂದು ಪ್ರಸಿದ್ಧವಾಗಿದೆ. ಇವರೂ ಇನ್ನೂ ಇತರ ವರ್ಣದ ಅನೇಕ ಋಷಿಗಳೂ ತಮ್ಮ ಉತ್ತಮಜ್ಞಾನದಿಂದ ದೇವತೆಗಳನ್ನು ಸ್ತುತಿಸಿ ಬ್ರಾಹ್ಮಣಋಷಿಗಳಿಗೆ ಸರಿಸಮನಾದ ಸ್ಥಾನಮಾನಗಳನ್ನು ಪಡೆದಿರುವುದು ಕಂಡುಬರುವುದು.

ವಿವಾಹ ವಿಚಾರದಲ್ಲಿ ಆಯಾ ವರ್ಣದವರು ತಮ್ಮ ವರ್ಣದವರಲ್ಲಿಯೇ ವಿವಾಹಸಂಬಂಧವನ್ನು ಮಾಡಬೇಕೆಂದು ಕಟ್ಟುನಿಟ್ಟಾದ ನಿಯಮವಿದ್ದಿತಾದರೂ ಅನೇಕ ಸಂದರ್ಭಗಳಲ್ಲಿ ಉತ್ತಮವರ್ಣದ ಬ್ರಾಹ್ಮಣಾದಿಗಳು ತಮಗಿಂತ ಕನಿಷ್ಠ ವರ್ಗದವರ ಕನ್ಯೆಯನ್ನು ವಿವಾಹವಾದ ನಿದರ್ಶನಗಳು ಅನೇಕವಿವೆ. ಶರ್ಯಾತರಾಜನ ಪುತ್ರಿಯಾದ ಸುಕನ್ಯಾ ಎಂಬುವಳು ಚ್ಯವನನೆಂಬ ಬ್ರಾಹ್ಮಣಋಷಿಯನ್ನು ಮದುವೆಯಾದ ವಿಷಯವು ಶತಪಥಬ್ರಾಹ್ಮಣ ೪-೧-೫-೭ ಮೊದಲಾದ ಗ್ರಂಥಗಳಲ್ಲಿ ಸೂಚಿತವಾಗಿದೆ. ಅದರಂತೆಯೇ **ರಥವೀತಿ** ಎಂಬ ರಾಜನ ಪುತ್ರಿಯು

ಶ್ಯಾವಾಶ್ವನೆಂಬ ಋಷಿಯನ್ನು ಮದುವೆಯಾದ ವಿಷಯವು ಬೃಹದ್ದೇವತೆಯಲ್ಲಿ ೫-೫೦ ಉಕ್ತವಾಗಿದೆ. ಉತ್ತಮ ವರ್ಣದವರು (ಬ್ರಾಹ್ಮಣರು) ನಾಲ್ಕು ವರ್ಣದವರಲ್ಲಿಯೂ ವಿವಾಹಸಂಬಂಧವನ್ನು ಬೆಳಸಬಹುದೆಂದೂ ರಾಜರು (ಕ್ಷತ್ರಿಯರು) ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಲ್ಲಿಯೂ, ವೈಶ್ಯರು–ವೈಶ್ಯ ಮತ್ತು ಶೂದ್ರರಲ್ಲಿಯೂ, ಶೂದ್ರರು ಶೂದ್ರರಲ್ಲಿ ಮಾತ್ರವೂ ವಿವಾಹಸಂಬಂಧವನ್ನು ಮಾಡಬಹುದೆಂದು ನಿಯಮವಿದ್ದಿತು. ಇದು ಸಾಮಾನ್ಯ ನಿಯಮ ಆದರೆ ಅನೇಕ ಸಂದರ್ಭಗಳಲ್ಲಿ ಈ ನಿಯಮಕ್ಕೆ ಅಪವಾದಗಳಿರುವುದೂ ಕಂಡುಬರುವುದು.

**ಆಚಾರವ್ಯವಹಾರಗಳು**—ಸಾಧಾರಣವಾಗಿ ಒಂದು ವರ್ಣದವರು ಮತ್ತೊಂದು ವರ್ಣದವರ ಆಚಾರ ವ್ಯವಹಾರಾದಿಗಳಲ್ಲಿ ಪ್ರವೇಶಿಸುತ್ತಿರಲಿಲ್ಲ. ಸಂದರ್ಭ ಬಂದಾಗ ಮಾತ್ರ ಈ ನಿಯಮಕ್ಕೆ ವಿರುದ್ಧವಾಗಿ ಪ್ರವರ್ತಿಸುತ್ತಿದ್ದರೆಂಬುದನ್ನು ಅನೇಕ ನಿದರ್ಶನಗಳ ಮೂಲಕ ಊಹಿಸಬಹುದು. ದೀರ್ಘತಮಸ್ಸೆಂಬ ಋಷಿಯು ಒಂದು ಸಂದರ್ಭದಲ್ಲಿ ವಣಿಗ್ಜನರ (ವರ್ತಕರ) ವೃತ್ತಿಯನ್ನನುಸರಿಸುತ್ತಿದ್ದನೆಂದು ಹೇಳಿದೆ (ಋ. ಸಂ. ೧-೧೧೨-೧೧) ವಿಶ್ವಾಮಿತ್ರನು ತೃತ್ಸು ಜನರ ರಾಜನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಈ ವಿಶ್ವಾಮಿತ್ರನು ರಾಜನಾಗಿದ್ದನೆಂದು ಪಂಚವಿಂಶಬ್ರಾಹ್ಮಣದಲ್ಲಿ (ಪಂ. ಬ್ರಾ. ೧೧-೧೨ ೨) ಹೇಳಿದೆ ಮತ್ತು ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೭-೧೮-೯) ಜಹ್ನುವಿನ ವಂಶಜನಾದ ರಾಜನೆಂದು ಕರೆದಿದೆ. ಋಷ್ಟಿಷೇಣನೆಂಬ ರಾಜನ ಪುತ್ರನಾದ ದೇವಾಪಿ ಎಂಬುವನು ತನ್ನ ತಮ್ಮನಾದ ಶಂತನು ರಾಜನಿಗೆ ಯಜ್ಞಮಾಡಿಸಿದನೆಂದೂ ಆ ಯಜ್ಞದಲ್ಲಿ ತಾನೇ ಪುರೋಹಿತನಾಗಿದ್ದನೆಂದೂ ಹೇಳಿದೆ (ನಿ. ೨-೧೦) ಈ ರೀತಿ ಬ್ರಾಹ್ಮಣವರ್ಗದವರ ಕರ್ತವ್ಯವಾದ ಪೌರೋಹಿತ್ಯಾದಿಗಳನ್ನು ಮಾಡಿಸಲು ಸಮರ್ಥರಾದವರೂ ಇಂದ್ರಾದಿದೇವತೆಗಳನ್ನು ಸ್ವಕೃತವಾದ ಸೂಕ್ತಗಳಿಂದ ಸ್ತುತಿಸುವವರೂ ಆದ ರಾಜರನ್ನು ಎಂದರೆ ಕ್ಷತ್ರಿಯರನ್ನು ರಾಜರ್ಷಿಗಳೆಂದು ಕರೆಯುವ ರೂಢಿ ಇದೆ (ಪಂಚವಿಂಶಬ್ರಾಹ್ಮಣ ೧೨-೧೨-೬; ೧೮-೧೦-೫; ಜೈಮಿನೀಯ ಉಪನಿಷತ್ ಬ್ರಾಹ್ಮಣ ೧.೪-೨; ಐತರೇಯಬ್ರಾಹ್ಮಣ ೭–೧೭-೬ ಇತ್ಯಾದಿ).

ಅನೇಕ ಸಂದರ್ಭಗಳಲ್ಲಿ ಬ್ರಾಹ್ಮಣವರ್ಣದ ಪುರೋಹಿತರುಗಳು ಯುದ್ಧಕಾಲಗಳಲ್ಲಿ ತಮ್ಮ ರಾಜರೊಡನೆ ಹೋಗಿ ಯುದ್ಧದಲ್ಲಿ ಭಾಗವಹಿಸುತ್ತಿದ್ದರೆಂದು ಋ. ಸಂ. ೩.೫೩–೧೨, ೧೩ ; ೧-೧೯೯-೪ ; ೧-೧೫೨-೭ ; ೧-೧೫೭-೨; ೭–೮೩–೪ ; ೧೦–೩೮ ಇತ್ಯಾದಿ ಸ್ಥಳಗಳಲ್ಲಿ ಸೂಚಿತವಾಗಿದೆ.

ಆರ್ಯರ ಪರಿಶುಧ್ಯತೆ—ವೇದಗಳ ಕಾಲದಲ್ಲಿ ಸಾಧಾರಣವಾಗಿ ಬ್ರಾಹ್ಮಣರೂ (ಋಷಿಗಳು ಮುಂತಾದವರು) ರಾಜರೂ ಆರ್ಯಜನಾಂಗದವರಲ್ಲಿಯೇ ವಿವಾಹ ಸಂಬಂಧವನ್ನು ನಡೆಸುತ್ತಿದ್ದುದರಿಂದ ಈ ಎರಡು ವರ್ಣದವರ ವಂಶವು ಇತರ ಜನಾಂಗದ ಜನರೊಡನೆ ಮಿಶ್ರವಾಗುವ ಸಂಭವವಿರಲಿಲ್ಲ. ಕಾಲಕ್ರಮೇಣ ರಾಜರು ಇತರ ದೇಶದ ರಾಜರೊಡನೆ (ಅವರು ಆರ್ಯಜನಾಂಗದವರಲ್ಲದಿದ್ದರೂ) ಸಂಬಂಧವನ್ನು ಬೆಳೆಸುವುದಕ್ಕೆ ಪ್ರಾರಂಭಿಸಿದರು. ಆದ್ದರಿಂದ ಅವರಲ್ಲಿ ಆರ್ಯರ ಪರಿಶುದ್ಧತೆಯು ಕಡಿಮೆಯಾಗುತ್ತಾ ಬಂದಿತು. ಆದರೆ ಋಷಿಗಳೂ ಅವರ ವಂಶಜರಾದ ಬ್ರಾಹ್ಮಣರೂ ಮಾತ್ರ ಆರ್ಯರಲ್ಲದ ಇತರ ಜನಾಂಗದವರೊಡನೆ ವಿವಾಹಾದಿ ಸಂಬಂಧವನ್ನು ಸಂಪೂರ್ಣವಾಗಿ ತ್ಯಜಿಸಿ ತಮ್ಮ ಎಂದರೆ ಆರ್ಯಜನಾಂಗದ ಪಾರಿಶುಧ್ಯತೆಯನ್ನು ಇದುವರೆಗೂ ಕಾಪಾಡಿಕೊಂಡೇಬಂದಿದಾರೆ ವೈಶ್ಯ ಮತ್ತು ಶೂದ್ರವರ್ಣಗಳಲ್ಲಿ ಅವರವರ ವೃತ್ತಿಗಳಿಗೆ ಅನುಸಾರವಾಗಿ ಅನೇಕ ಭೇದಪ್ರಭೇದಗಳು (ಒಳಪಂಗಡಗಳು) ಉದ್ಭವಿಸಿ ನಾನಾವಿಧವಾದ ಪಂಗಡಗಳಿಗೆ ಕಾರಣವಾಯಿತು. ಆದರೂ ವೈಶ್ಯರಲ್ಲಿ ಬಹುಭಾಗದ ಜನರು ಆರ್ಯ ಜನಾಂಗದ ಪವಿತ್ರತೆಯನ್ನೇ ಕಾಪಾಡಿಕೊಂಡು ಬಂದಿದಾರೆ. ಶೂದ್ರರೆಂದು ಕರೆಯಲ್ಪಡುವ ಈಗಿನ ಅನೇಕ ಪಂಗಡ

ಗಳು ಆರ್ಯಜನಾಂಗದವರೇ ಆಗಿದ್ದರೂ ಅವರು ವಿಶೇಷವಾಗಿ ಕೃಷಿ ಮೊದಲಾದ ವೃತ್ತಿಗಳಲ್ಲಿ ನಿರತರಾಗಿ ಯಜ್ಞಾದಿಗಳಲ್ಲಿ ಆಸಕ್ತಿಯನ್ನು ಬಹು ಹಿಂದಿನ ಕಾಲದಿಂದಲೂ ಬಿಟ್ಟಿದ್ದರಿಂದ ಇವರು ಯಜ್ಞಾದಿಗಳಿಗೆ ಅನರ್ಹರು ಎಂಬ ಭಾವನೆಯು ಬೇರೂರಿ ಕಾಲಕ್ರಮದಲ್ಲಿ ಇವರು ಅನರ್ಹರೆಂದೂ ಇತರ ಮೂರುವರ್ಣದವರ ಶುಶ್ರೂಷಾದಿಗಳಲ್ಲಿಯೂ ತಮ್ಮ ಸ್ವಂತ ಕೃಷಿ ಮೊದಲಾದ ವೃತ್ತಿಗಳಲ್ಲಿಯೂ ನಿರತರಾಗಿರತಕ್ಕದ್ದೆಂದೂ ರೂಢಿಯಲ್ಲಿ ಬಂದಿತು. ಈ ಪಂಗಡದವರಲ್ಲಿ ಆರ್ಯಜನಾಂಗದವರಲ್ಲದ ಇತರರ ಬೆರಕೆಯೂ ಸಾಕಾದಷ್ಟು ಪ್ರಮಾಣದಲ್ಲಿದ್ದುದರಿಂದ ಇವರು ಯಜ್ಞಾದಿಗಳಿಗೆ ಅನರ್ಹರು ಎಂಬ ಭಾವನೆಗೆ ಇದೂ ಒಂದು ಕಾರಣವಾಯಿತು.

ನಿಷಾದರು, ಚಂಡಾಲರು, ಅಸ್ಪೃಶ್ಯರು ಇತ್ಯಾದಿ—ಆರ್ಯರು ಈ ದೇಶವನ್ನು ಕ್ರಮಕ್ರಮವಾಗಿ ಆಕ್ರಮಿಸುತ್ತಿರುವಾಗ ಆರ್ಯರಿಗೂ ಈ ದೇಶದ ಪೂರ್ವನಿವಾಸಿಗಳಿಗೂ ಯಾವಾಗಲೂ ಯುದ್ಧವು ನಡೆಯುತ್ತಲೇ ಇರುತ್ತಿತ್ತು. ಈ ಪೂರ್ವನಿವಾಸಿಗಳನ್ನು ಆರ್ಯರು ದಾಸ, ದಸ್ಯು ಕೃಷ್ಣ (ಕಪ್ಪು)ವರ್ಣದವರು ಎಂದು ಕರೆಯುತ್ತಿದ್ದರು. ಇವರು ಆರ್ಯಜನಾಂಗದ ಇಂದ್ರಾದಿ ದೇವತೆಗಳನ್ನು ಯಜ್ಞಾದಿಗಳನ್ನುಮಾಡಿ ಪೂಜಿಸುತ್ತಿರಲಿಲ್ಲ. ಆ ದೇವತೆಗಳಲ್ಲಿ ಇವರಿಗೆ ಗೌರವವೂ ಇರಲಿಲ್ಲ. ಭೂತಗಳು, ದೆವ್ವಗಳು ಮೊದಲಾದವುಗಳಲ್ಲಿ ಇವರಿಗೆ ನಂಬಿಕೆ. ಅದಲ್ಲದೆ ಆರ್ಯರು ಮಾಡುವ ಯಜ್ಞಾದಿಗಳಿಗೆ ವಿಘ್ನವನ್ನೂ ತೊಂದರೆಯನ್ನೂ ಉಂಟುಮಾಡುತ್ತಿದ್ದರು. ಇವರಲ್ಲಿ ಶಂಬರ, ಶುಷ್ಣ, ಪಿಪ್ರು ಮೊದಲಾದವರು ಮುಖಂಡರು. ಇವರನ್ನು ಅಸುರರೆಂದೂ ಕರೆಯಲಾಗಿದೆ. ಆರ್ಯರು ಕಾಲಕ್ರಮದಲ್ಲಿ ಈ ಪೂರ್ವನಿವಾಸಿಗಳನ್ನು ಸಂಪೂರ್ಣವಾಗಿ ಜಯಿಸಿದರೂ ಅವರಲ್ಲಿ ಬಹುಮಂದಿ ಆರ್ಯಜನರೊಡನೆ ವ್ಯವಹಾರ ಸಂಪರ್ಕವನ್ನಿಟ್ಟುಕೊಳ್ಳಲಿಲ್ಲ. ಆರ್ಯರ ದೇವತೆಗಳನ್ನು ಇವರು ಗೌರವಿಸುತ್ತಿರಲಿಲ್ಲ. ಕೆಲವರು ಮಾತ್ರ ಆರ್ಯರ ಕೆಳವರ್ಗದ ಜನರೊಡನೆ ಸೇರಿಹೋಗಿ ಒಂದಾದರು. ಉಳಿದವರು ಪ್ರತ್ಯೇಕವಾಗಿಯೇ ಇದ್ದು ತಮ್ಮ ಹಿಂದಿನ ವೃತ್ತಿಯಿಂದಲೇ ಜೀವಿಸುತ್ತಿದ್ದರು. ವ್ಯವಸಾಯದಲ್ಲಿ ಇವರಿಗೆ ಹೆಚ್ಚು ಆಸಕ್ತಿ ಇರಲಿಲ್ಲ. ಅದನ್ನು ಅನುಸರಿಸುತ್ತಲೂ ಇರಲಿಲ್ಲ. ಕಷ್ಟಪಟ್ಟು ಕೆಲಸಮಾಡುವ ಅಭ್ಯಾಸವು ಈ ಜನರಿಗಿಲ್ಲದ್ದರಿಂದ ಇವರು ಯಾವ ವೃತ್ತಿಯನ್ನೂ ಅವಲಂಬಿಸದೆ ಇದ್ದುದರಿಂದ ಆರ್ಯರು ಇವರನ್ನು ನಿಕೃಷ್ಟಭಾವನೆಯಿಂದ ನೋಡಲು ಅವಕಾಶವಾಯಿತು. ಮೃಗಗಳ ಬೇಟೆಯೇ ಇವರ ಮುಖ್ಯಜೀವನ. ಹೀಗೆ ಪ್ರತ್ಯೇಕವಾಗಿ ಉಳಿದ ಪೂರ್ವನಿವಾಸಿಗಳದೇ ಒಂದು ಪ್ರತ್ಯೇಕ ಪಂಗಡವಾಗಿ ಪರಿಣಮಿಸಿತು. ಆರ್ಯರನ್ನು ಯುದ್ಧದಲ್ಲಿ ಎದುರಿಸುವ ಶಕ್ತಿ ಇವರಿಗಿರಲಿಲ್ಲ. ಇವರನ್ನು ಆರ್ಯರು ಸವ್ಯವಹಾರಕ್ಕೆ ತಮ್ಮೊಡನೆ ಸೇರಿಸಿಕೊಳ್ಳಲು ಇಷ್ಟಪಡಲಿಲ್ಲ. ಈ ಜನರು ಎಲ್ಲಾ ಕಡೆಯೂ ಹರಡಿಕೊಂಡಿದ್ದುದರಿಂದ ಪ್ರತಿಗ್ರಾಮದಲ್ಲಿಯೂ ಇವರು ಊರಿನಿಂದಾಚೆ ಪ್ರತ್ಯೇಕವಾಗಿಯೇ ವಾಸಮಾಡಬೇಕಾಯಿತು. ಈಗಲೂ ಹಾಗೆಯೇ ನಡೆಯುತ್ತಿದೆ.

ಆರ್ಯರು ಈ ದೇಶಕ್ಕೆ ಬಂದಾಗ ಅವರು ಈಗಿನ ಐರೋಪ್ಯರಂತೆ ಬೆಳ್ಳಗಿದ್ದರು. ಈ ದೇಶದ ಪೂರ್ವನಿವಾಸಿಗಳು ಕಪ್ಪಗಿದ್ದರು. ವರ್ಣವೆಂದರೆ ಬಣ್ಣವು. ಕ್ರಮೇಣ ವರ್ಣವೆಂದರೆ ಜಾತಿಯೆಂಬ ಭಾವನೆಯು ರೂಢಿಯಲ್ಲಿ ಬಂದಿತು. ಆದ್ದರಿಂದ ಮೊದಲುವರ್ಣಭೇದವೂ ಜಾತಿಭೇದವೂ ಉಂಟಾಗುವುದಕ್ಕೆ ಜನರ ವರ್ಣ ( ಬಣ್ಣ ) ವ್ಯತ್ಯಾಸವೇ ಮೂಲಕಾರಣವೆಂದು ಪಾಶ್ಚಾತ್ಯರಲ್ಲಿ ಅನೇಕರು ಅಭಿಪ್ರಾಯಪಡುತ್ತಾರೆ.



॥ ಸಂಹಿತಾಪಾಠಃ ॥

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।

ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ ೧೩ ॥

॥ ಪದಪಾಠಃ ॥

ಚಂದ್ರಮಾಃ । ಮನಸಃ । ಜಾತಃ । ಚಕ್ಷೋಃ । ಸೂರ್ಯಃ । ಅಜಾಯತ ।

ಮುಖಾತ್ । ಇಂದ್ರಃ । ಚ । ಅಗ್ನಿಃ । ಚ । ಪ್ರಾಣಾತ್ । ವಾಯುಃ । ಅಜಾಯತ ॥ ೧೩ ॥

॥ ಸಾಯಣಭಾಷ್ಯಂ ॥

ಯಥಾ ದಧ್ಯಾಜ್ಯಾದಿದ್ರವ್ಯಾಣಿ ಗವಾದಯಃ ಪಶವ ಋಗಾದಿವೇದಾ ಬ್ರಾಹ್ಮಣಾದಯೋ ಮನುಷ್ಯಾಶ್ಚ ತಸ್ಮಾದುತ್ಪನ್ನಾ ಏವಂ ಚಂದ್ರಾದಯೋ ದೇವಾ ಅಪಿ ತಸ್ಮಾದೇವೋತ್ಪನ್ನಾ ಇತ್ಯಾಹ । ಪ್ರಜಾಪತೇರ್ಮನಸಃ ಸಕಾಶಾಚ್ಚಂದ್ರಮಾ ಜಾತಃ । ಚಕ್ಷೋಶ್ಚ ಚಕ್ಷುಷಃ ಸೂರ್ಯೋಽಪ್ಯಜಾಯತ । ಅಸ್ಯ ಮುಖಾದಿಂದ್ರಶ್ಚಾಗ್ನಿಶ್ಚ ದೇವಾವುತ್ಪನ್ನೌ । ಅಸ್ಯ ಪ್ರಾಣಾದ್ವಾಯುರಜಾಯತ ॥

॥ ಪ್ರತಿಪದಾರ್ಥ ॥

**ಮನಸಃ**—ಮನಸ್ಸಿನಿಂದ । **ಚಂದ್ರಮಾಃ**—ಚಂದ್ರನು । **ಜಾತಃ**—ಹುಟ್ಟಿದನು । **ಚಕ್ಷೋಃ**—ಕಣ್ಣಿನಿಂದ । **ಸೂರ್ಯಃ**—ಸೂರ್ಯನು । **ಅಜಾಯತ**—ಹುಟ್ಟಿದನು। **ಮುಖಾತ್**—ಮುಖದಿಂದ । **ಇಂದ್ರಶ್ಚ ಅಗ್ನಿಶ್ಚ**—ಇಂದ್ರ ಮತ್ತು ಅಗ್ನಿಗಳು ಹುಟ್ಟಿದರು । **ಪ್ರಾಣಾತ್**—ಪ್ರಾಣದಿಂದ । **ವಾಯುಃ**—ವಾಯುವು । **ಅಜಾಯತ**—ಹುಟ್ಟಿದನು ॥

॥ ಭಾವಾರ್ಥ ॥

ಈ ವಿರಾಟ್ಪುರುಷನ ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ, ಪ್ರಾಣದಿಂದ ವಾಯುವೂ ಹುಟ್ಟಿದರು.

English Translation

The moon was born from his mind ; the sun was born from his eye ; Indra and Agni were born from his mouth, Vayu from his breath·

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕುಗಳಲ್ಲಿ—ದಧ್ಯಾಜ್ಯಾದಿದ್ರವ್ಯಗಳು, ಗೋವುಗಳೇ ಮೊದಲಾದ ಪಶುಗಳು, ಋಗಾದಿವೇದಗಳು, ಬ್ರಾಹ್ಮಣಾದಿವರ್ಗದ ಮನುಷ್ಯರು ಉತ್ಪನ್ನರಾದರೆಂದು ಹೇಳಿದೆಯಷ್ಟೆ. ಅದರಂತೆ ಚಂದ್ರಾದಿದೇವತೆಗಳ ಉತ್ಪತ್ತಿಯೂ ಸಹ ಆಯಿತೆಂದು ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕಿನಲ್ಲಿಯೂ ಹೇಳಿದೆ.

**ಚಂದ್ರಮಾ ಮನಸೋ ಜಾತಃ**—ಚಂದ್ರಶಬ್ದಕ್ಕೆ ಎರಡುವಿಧ ರೂಪನಿಷ್ಪತ್ತಿಯನ್ನು ಹೇಳಬಹುದು. **ಚದಿ—ಆಹ್ಲಾದನೇ । ಚಂದತೀತಿ ಚಂದ್ರಃ ।** ಮನಸ್ಸಿಗೆ ಆಹ್ಲಾದವನ್ನುಂಟುಮಾಡು ಎಂಬರ್ಥವುಳ್ಳ ಚದಿ ಧಾತುವಿನಿಂದ ಚಂದ್ರಶಬ್ದವು ನಿಷ್ಪನ್ನವಾಗಿದೆ. ಇವನನ್ನು ನೋಡುವ ಜನರಿಗೆ ಆಹ್ಲಾದವನ್ನುಂಟುಮಾಡುವವನು ಎಂದರ್ಥವು. ಆಹ್ಲಾದವು ಯಾವಾಗಲೂ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವುದರಿಂದ ಪರಮಪುರುಷನ ಮನಸ್ಸಿನಿಂದ ಚಂದ್ರನು ಉತ್ಪನ್ನನಾದನೆಂದು ಹೇಳಿದೆ. ಅಥವಾ **ಚಂದ್ರಾ ಆಹ್ಲಾದರೂಪಾ ಮಾ ಲಕ್ಷ್ಮೀಃ ಶೋಭಾ ಯಸ್ಯ ಸ ತಥಾವಿಧಃ । ಚಂದ್ರಾ** ಎಂದರೆ ಆಹ್ಲಾಕರವಾದ **ಮಾ**—ಪ್ರಕಾಶವುಳ್ಳ ಎಂದರೆ ಆಹ್ಲಾದಕರವಾಗಿ ಪ್ರಕಾಶಿಸುತ್ತಿರುವ ಎಂದಭಿಪ್ರಾಯವು. ಅಥವಾ **ಚಂದ್ರೇಣ ಜಗದಾಹ್ಲಾದನಾಪ್ಯಾಯಲಕ್ಷಣೇನ ಮೀಯತ ಇತಿ ವಾ ಚಂದ್ರಮಾಃ ।** ಜಗತ್ತಿಗೆ ಆಹ್ಲಾದವನ್ನುಂಟುಮಾಡುವ ಸ್ವಭಾವವುಳ್ಳವನಾದ್ದರಿಂದ ಚಂದ್ರನೆಂದು ಹೆಸರು. ಈ ಶಬ್ದದ ರೂಪನಿಷ್ಪತ್ತಿಯ ವಿಷಯದಲ್ಲಿ ಯಾಸ್ಕರು—

> **ಚಂದ್ರಮಾಶ್ಚಾಯನ್ ದ್ರಮತಿ, ಚಂದ್ರೋ ಮಾತಾ, ಚಾಂದ್ರಂ ಮಾನಮಸ್ಯೇತಿ ವಾ । ಚಂದ್ರಶ್ಚಂದತೇಃ ಕಾಂತಿಕರ್ಮಣಃ । ಚಂದನಮಿತ್ಯಪ್ಯಸ್ಯ ಭವತಿ । ಚಾರು ದ್ರಮತಿ । ಚಿರಂ ದ್ರಮತಿ । ಚಮೇರ್ವಾ ಪೂರ್ವಂ । ಚಾರು ರುಚೇರ್ವಾ ವಿಪರೀತಸ್ಯ ॥**
>
> (ನಿ- ೧೧-೫)

ಪ್ರಕಾಶಮಾನವಾಗಿ ಸಂಚರಿಸುವುದರಿಂದ ಅಥವಾ ಇದರ ಗತಿಯು ಪ್ರಕಾಶವನ್ನು ಬೀರುವುದರಿಂದ ಚಂದ್ರನೆಂದು ಹೆಸರು. ಪ್ರಕಾಶಿಸು ಎಂಬರ್ಥವುಳ್ಳ ಚಂದ್‌ಧಾತುವಿನಿಂದ ಚಂದ್ರಶಬ್ದವು ನಿಷ್ಪನ್ನವಾಗಿದೆ. ಈ ಧಾತುವಿನಿಂದಲೇ ಚಂದನ (ಗಂಧ) ಶಬ್ದದ ನಿಷ್ಪತ್ತಿಯೂ ಆಗಿದೆ. ವಾಸನೆಯನ್ನು ಬಹುಕಾಲ ಉಂಟುಮಾಡುವುದರಿಂದ ಅಥವಾ ಉತ್ತಮವಾದ ವಾಸನೆಯನ್ನು ಸುತ್ತಲೂ ಹರಡುವುದರಿಂದ ಚಂದನವೆಂದು ಹೆಸರು. ಚಾರುಶಬ್ದವು ರುಚಿಶಬ್ದದ ಅಕ್ಷರಗಳನ್ನು ಹಿಂದುಮುಂದು ಮಾಡಿರುವುದರಿಂದ ಉಂಟಾಗಿದೆ ಎಂದು ನಿರ್ವಚನಾಭಿಪ್ರಾಯವು.

**ಚಕ್ಷೋಃ ಸೂರ್ಯಃ ಅಜಾಯತ**—ಪರಮಪುರುಷನ ಕಣ್ಣಿನಿಂದ ಸೂರ್ಯನು ಉತ್ಪನ್ನನಾದನು. ಕಣ್ಣಿಗೂ, ಬೆಳಕಿಗೂ ಸಂಬಂಧವಿದೆ. ಬೆಳಕಿಲ್ಲದಿದ್ದರೆ ಕಣ್ಣಿನ ಉಪಯೋಗವಿಲ್ಲ. ಆದ್ದರಿಂದ ಬೆಳಕನ್ನು ಉಂಟುಮಾಡುವ ಸೂರ್ಯನು ಕಣ್ಣಿನಿಂದ ಉತ್ಪನ್ನನಾದನೆಂದು ಹೇಳುವುದು ಸಕಾರಣವಾಗಿದೆ. ಸೂರ್ಯಶಬ್ದಕ್ಕೆ ಯಾಸ್ಕರು—**ಸೂರ್ಯಃ ಸರ್ತೇರ್ವಾ ಸುವತೇರ್ವಾ ಸ್ವೀರ್ಯತೇರ್ವಾ** (ನಿ. ೧೨-೧೪) ಎಂದರೆ ಸೂರ್ಯನು ಅಂತರಿಕ್ಷದಲ್ಲಿ ಸಂಚರಿಸುವವನಾದ್ದರಿಂದ ಸೂರ್ಯನೆಂದು ಹೆಸರು. ಅಥವಾ ಸಕಲ ಪ್ರಾಣಿಗಳನ್ನು ಉತ್ಪತ್ತಿ ಮಾಡುವವನಾದ್ದರಿಂದ ಎಂದರೆ ಉತ್ಪತ್ತಿಗೆ ಕಾರಣನಾದ್ದರಿಂದ ಸೂರ್ಯನೆಂದು ಹೆಸರು. ಅಥವಾ ಸರ್ವರನ್ನೂ ಪ್ರೇರಿಸುವವನಾದ್ದರಿಂದ ಸೂರ್ಯನೆಂದು ಹೆಸರು ಎಂದು ಮೂರು ವಿಧವಾದ ಅರ್ಥವಿವರಣೆಮಾಡಿದಾರೆ.

**ಮುಖಾದಿಂದ್ರಶ್ಚಾಗ್ನಿಶ್ಚ**—ಪರಮಪುರುಷನ ಮುಖದಿಂದ ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳ ಉತ್ಪತ್ತಿಯಾಯಿತು. ಶರೀರದ ಅವಯವಗಳಲ್ಲಿ ಮುಖ (ಶಿರಸ್ಸು)ಕ್ಕೇ ಪ್ರಾಧಾನ್ಯವಿದೆ. ಆದ್ದರಿಂದ ಮುಖದಿಂದ ಉತ್ಪನ್ನರಾದ ಈ ದೇವತೆಗಳಿಗೆ ದೇವತೆಗಳಲ್ಲಿ ಪ್ರಾಧಾನ್ಯತೆ ಇರುವುದು ಸಹಜವಾಗಿದೆ. ಈ ವಿಷಯದಲ್ಲಿ—**ಅಗ್ನಿರಗ್ರೇ ಪ್ರಥಮೋ ದೇವತಾನಾಂ, ಅಗ್ನಿರ್ಮೂರ್ಧಾ ದಿವಃ, ಅಗ್ನಿರ್ವೈ ದೇವಾನಾಮವಮಃ** ಇತ್ಯಾದಿ ಶ್ರುತಿವಾಕ್ಯ

ಗಳು ಅಗ್ನಿಯ ಪ್ರಾಧಾನ್ಯತೆಯನ್ನೂ, **ಇಂದ್ರೋ ಯಾತೋಽವಸಿತಸ್ಯ ರಾಜಾ** ಇತ್ಯಾದಿ ವಾಕ್ಯಗಳು ಇಂದ್ರನ ಶ್ರೇಷ್ಠತೆಯನ್ನೂ ಪ್ರಶಂಸಿಸುವವು.

**ಪ್ರಾಣಾದ್ವಾಯುರಜಾಯತ**—ಪರಮಪುರುಷನ ಪ್ರಾಣದಿಂದ ವಾಯುವಿನ ಉತ್ಪತ್ತಿಯಾಯಿತು. ಪ್ರಾಣವು ವಾಯುರೂಪದಲ್ಲಿರುವುದೆಂದು ಪ್ರಸಿದ್ಧಿಯು—**ಶರೀರಾನ್ತಃಸಂಚಾರ್ಯರ್ಸುಸ್ತಸ್ಮಾದ್ವಾತೀತಿ ವಾಯುರ್ಬಹಿರ್ವರ್ತೀ ಮಾತರಿಶ್ವಾ** । ಶರೀರದಲ್ಲಿ ಸಂಚರಿಸುವ ವಾಯುವಿಗೆ ಪ್ರಾಣವೆಂದೂ ಹೊರಗಡೆ ಬೀಸುತ್ತಿರುವ ವಾಯುವಿಗೆ ವಾಯುವೆಂದೂ ಹೆಸರು. ವಾಯುಶಬ್ದಕ್ಕೆ ಯಾಸ್ಕರು—**ವಾಯುರ್ವಾತೇರ್ವಾ ಸ್ಯಾದ್ಗತಿಕರ್ಮಣಃ। ಏತೇರಿತಿ ಸ್ಥೌಲಾಷ್ಠೀವಿಃ । ಅನರ್ಥಕೋ ವಕಾರಃ** (ನಿ. ೧೦-೧) । **ವಾ ಗತಿಗಂಧನಯೋಃ** ಎಂಬ ಗತ್ಯರ್ಥಸೂಚಕವಾದ ವಾಧಾತುವಿನಿಂದ ವಾಯುಶಬ್ದವು ನಿಷ್ಪನ್ನವಾಗಿದೆ. ಸದಾ ಸಂಚರಿಸು(ಬೀಸು)ತ್ತಿರುವುದೆಂದರ್ಥವು. ಅಥವಾ **ಇಣ್ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಸ್ಥೌಲಾಷ್ಠೀವಿ ಎಂಬ ಆಚಾರ್ಯರ ಮತವು. ಈ ಸಂದರ್ಭದಲ್ಲಿ ವಾಯುಶಬ್ದದಲ್ಲಿರುವ ವಕಾರಕ್ಕೆ ಯಾವ ಅರ್ಥವೂ ಇರುವುದಿಲ್ಲ. **ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣೇ ಸರ್ವಂ ಪ್ರತಿಷ್ಠಿತಂ** ಇತ್ಯಾದಿಶ್ರುತಿವಾಕ್ಯಗಳು ವಾಯುವಿನ ಮಹತ್ತ್ವವನ್ನು ತಿಳಿಸುವುದಲ್ಲದೆ ವಾಯುವಿಗೂ ಪ್ರಾಣಕ್ಕೂ ತಾದಾತ್ಮ್ಯವನ್ನೂ ಪ್ರಶಂಸಿಸುವುದು.

॥ ಸಂಹಿತಾಪಾಠಃ ॥

**ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।**
**ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾँ ಅಕಲ್ಪಯನ್ ॥**

॥ ಪದಪಾಠಃ ॥

**ನಾಭ್ಯಾಃ । ಆಸೀತ್ । ಅಂತರಿಕ್ಷಂ । ಶೀರ್ಷ್ಣಃ । ದ್ಯೌಃ । ಸಂ । ಅವರ್ತತ ।**
**ಪತ್ಽಭ್ಯಾಂ । ಭೂಮಿಃ । ದಿಶಃ । ಶ್ರೋತ್ರಾತ್ । ತಥಾ । ಲೋಕಾನ್ । ಅಕಲ್ಪಯನ್ ॥ ೧೪ ॥**

॥ ಸಾಯಣಭಾಷ್ಯಂ ॥

**ಯಥಾ ಚಂದ್ರಾದೀನ್ಪ್ರಜಾಪತೇರ್ಮನಃಪ್ರಭೃತಿಭ್ಯೋಽಕಲ್ಪಯನ್ ತಥಾಂತರಿಕ್ಷಾದೀಁಲ್ಲೋಕಾನ್ಪ್ರಜಾಪತೇರ್ನಾಭ್ಯಾದಿಭ್ಯೋ ದೇವಾ ಅಕಲ್ಪಯನ್ । ಉದ್ಪಾಧಿತವಂತಃ । ಏತದೇವ ದರ್ಶಯತಿ । ನಾಭ್ಯಾಃ ಪ್ರಜಾಪತೇರ್ನಾಭೇರಂತರಿಕ್ಷಮಾಸೀತ್ । ಶೀರ್ಷ್ಣಃ ಶಿರಸೋ ದ್ಯೌಃ ಸಮವರ್ತತ । ಉತ್ಪನ್ನಾ । ಅಸ್ಯ ಪದ್ಭ್ಯಾಂ ಪಾದಾಭ್ಯಾಂ ಭೂಮಿರುತ್ಪನ್ನಾ । ಅಸ್ಯ ಶ್ರೋತ್ರಾದ್ದಿಶ ಉತ್ಪನ್ನಾಃ ॥**

॥ ಪ್ರತಿಪದಾರ್ಥ ॥

**ನಾಭ್ಯಾ**—ಪುರುಷನ ಹೊಕ್ಕಳಿನಿಂದ । **ಅಂತರಿಕ್ಷಂ**—ಅಂತರಿಕ್ಷವು । **ಆಸೀತ್**—ಉತ್ಪನ್ನವಾಯಿತು । **ಶೀರ್ಷ್ಣಃ**—ಶಿರಸ್ಸಿನಿಂದ। **ದ್ಯೌಃ**—ದ್ಯುಲೋಕವು। **ಸಮವರ್ತತ**—ಪ್ರಾದುರ್ಭೂತವಾಯಿತು। **ಪದ್ಭ್ಯಾಂ**—ಪಾದ

ಗಳಿಂದ । **ಭೂಮಿಃ**—ಭೂಮಿಯೂ । **ಶ್ರೋತ್ರಾತ್**—ಶ್ರೋತ್ರದಿಂದ (ಕಿವಿಯಿಂದ) । **ದಿಶಃ**—ದಿಕ್ಕುಗಳೂ ಉತ್ಪನ್ನವಾದವು । **ತಥಾ**—ಇದೇರೀತಿ । **ಲೋಕಾನ್**—ಸಕಲ ಲೋಕಗಳನ್ನು । **ಅಕಲ್ಪಯನ್**—ದೇವತೆಗಳು (ಪುರುಷನ ದೇಹದಿಂದ) ನಿರ್ಮಿಸಿದರು

**॥ ಭಾವಾರ್ಥ ॥**

ಪುರುಷನ ಹೊಕ್ಕಳಿನಿಂದ ಅಂತರಿಕ್ಷ ಉತ್ಪನ್ನವಾಯಿತು. ಶಿರಸ್ಸಿನಿಂದ ದ್ಯುಲೋಕವು ಪ್ರಾದುರ್ಭೂತವಾಯಿತು. ಪಾದಗಳಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ ಉತ್ಪನ್ನವಾದವು. ಇದೇರೀತಿ ಸಕಲ ಲೋಕಗಳನ್ನು ದೇವತೆಗಳು ಪುರುಷನ ದೇಹದಿಂದ ನಿರ್ಮಿಸಿದರು.

## English Translation

From his navel came the firmament, from his head the heaven was produced, the earth from his feet, the quarters of space from his ear, so they constituted the world.

॥ ವಿಶೇಷವಿಷಯಗಳು ॥

**ನಾಭ್ಯಾ ಆಸೀದಂತರಿಕ್ಷಂ—ನಹನನೋವ ನಾಭಿಃ** (ನಿ. ೪-೨೧) ಎಲ್ಲ ಅವಯುವಗಳನ್ನೂ ಒಟ್ಟಾಗಿ ಸೇರಿಸುವ ಮಧ್ಯಸ್ಥಾನಕ್ಕೆ ನಾಭಿಯೆಂದು ಹೆಸರು. ಶರೀರದ ಮುಖ್ಯ ಗ್ರಂಥಿಗಳೂ ನಾಡಿಗಳೂ ನಾಭಿಯಲ್ಲಿ ಚಕ್ರರೂಪದಿಂದ ಒಟ್ಟಾಗಿ ಸೇರಿರುವವು. ಆದ್ದರಿಂದ ನಾಭಿಶಬ್ದಕ್ಕೆ (ಶರೀರದ) ಮಧ್ಯಪ್ರದೇಶವು ಎಂದರ್ಥವು. ಅಂತರಿಕ್ಷಶಬ್ದಕ್ಕೆ ಯಾಸ್ಕರು—**ಅಂತರಿಕ್ಷಂ ಕಸ್ಮಾದಂತರಾ ಕ್ಷಾಂತಂ ಭವತ್ಯಂತರೇಮೇ ಇತಿ ವಾ ಶರೀರೇಷ್ವಂತರಕ್ಷಯಮಿತಿ ವಾ** (ನಿ. ೨-೧೦) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ದ್ಯಾವ್ಯಾಪೃಥಿವಿಗಳ ಮಧ್ಯಪ್ರದೇಶದಲ್ಲಿರುವುದರಿಂದ ಅಂತರಿಕ್ಷವೆಂದು ಹೆಸರು. ಅಥವಾ (**ಕ್ಷಾ**) ಭೂಮಿಯ ಕೊನೆಯಾಗಿ ಎಂದರೆ ಅಂಚಿನಲ್ಲಿ ಇರುವುದರಿಂದ ಅಂತರಿಕ್ಷವೆಂದು ಹೆಸರು. ಅಥವಾ ಅಂತರಿಕ್ಷ (ಆಕಾಶ) ದಲ್ಲಿ ದ್ಯಾವಾಪೃಥಿವಿಗಳು ನೆಲಸಿರುವುದರಿಂದ ಅಂತರಿಕ್ಷವೆಂದು ಹೆಸರು. ಅಥವಾ ಶರೀರದಲ್ಲಿ ಇರುವ ಅಂತರಿಕ್ಷವು (ಆಕಾಶವು) ಮರಣಾನಂತರ ಇತರ ಅವಯುವಗಳಂತೆ ನಾಶವಾಗುವುದಿಲ್ಲ (ಅಕ್ಷಯ) ವಾದ್ದರಿಂದ ಅಂತರಿಕ್ಷವೆಂದು ಹೆಸರು ಎಂದು ಅಂತರಿಕ್ಷಶಬ್ದಕ್ಕೆ ಅನೇಕವಿಧವಾದ ಅರ್ಥವನ್ನು ಹೇಳಿದಾರೆ.

ಶರೀರದಲ್ಲಿ ನಾಭಿಯು ಹೇಗೆ ಮಧ್ಯ ಪ್ರದೇಶವಾಗಿರುವುದೋ ಅದರಂತೆ ಆ ನಾಭಿಯಿಂದ ಉತ್ಪನ್ನವಾದ ಅಂತರಿಕ್ಷವೂ ದ್ಯಾವಾಪೃಥಿವಿಗಳ ಮಧ್ಯದಲ್ಲಿರುವ ಮಧ್ಯಪ್ರದೇಶವಾಗಿದೆ. ಹಾಗೆಯೇ ಈ ಋಕ್ಕಿನ ಮುಂದಿನ ಪಾದಗಳಲ್ಲಿ ಹೇಳಿರುವಂತೆ, ಶರೀರದ ಮೇಲುಭಾಗದಲ್ಲಿರುವ ಶಿರಸ್ಸಿನಿಂದ ಎಲ್ಲಕ್ಕಿಂತಲೂ ಮೇಲುಭಾಗದಲ್ಲಿರುವ ದ್ಯು (ಸ್ವರ್ಗ) ಲೋಕವು ಉತ್ಪನ್ನವಾಯಿತು. ಕೆಳಭಾಗದಲ್ಲಿರುವ ಪಾದಗಳಿಂದ ಕೆಳಭಾಗದಲ್ಲಿರುವ ಭೂಮಿಯು ಉತ್ಪತ್ತಿಯಾಯಿತು. ಶೋತ್ರಗಳು ದೂರದ ಶಬ್ದಗಳೆಲ್ಲವನ್ನೂ ಕೇಳಲು ಸಮರ್ಥವಾಗಿರುವುದರಿಂದ ದೂರದಲ್ಲಿರುವ ದಿಕ್ಕುಗಳೆಲ್ಲವೂ ಶ್ರೋತ್ರ (ಕಿವಿ)ದಿಂದ ಉತ್ಪತ್ತಿಯಾಯಿತು. ಮತ್ತು ಇತರ ಲೋಕಗಳು ಉತ್ಪತ್ತಿಯೂ ಆಯಿತು ಎಂದು ಹೇಳಿರುವ ವಿಷಯದಲ್ಲಿ ಕಾರಣಸಹಿತವಾದ ವಿಷಯದ ವಿವರಣೆಯು ಸ್ಪಷ್ಟವಾಗಿರುವುದು.

॥ ಸಂಹಿತಾಪಾಠಃ ॥

ಸಪ್ತಾಸ್ಯಾಸನ್ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ಪುರುಷಂ ಪಶುಂ ॥೧೫॥

॥ ಪದಪಾಠಃ ॥

ಸಪ್ತ । ಅಸ್ಯ । ಆಸನ್ । ಪರಿಽಧಯಃ । ತ್ರಿಃ । ಸಪ್ತ । ಸಂಽಇಧಃ । ಕೃತಾಃ ॥
ದೇವಾಃ । ಯತ್ । ಯಜ್ಞಂ । ತನ್ವಾನಾಃ । ಅಬಧ್ನನ್ । ಪುರುಷಂ । ಪಶುಂ ॥ ೧೫ ॥

॥ ಸಾಯಣಭಾಷ್ಯಂ ॥

ಅಸ್ಯ ಸಾಂಕಲ್ಪಿಕಯಜ್ಞಸ್ಯ ಗಾಯತ್ರ್ಯಾದೀನಿ ಸಪ್ತ ಛಂದಾಂಸಿ ಪರಿಧಯ ಆಸನ್ । ಐಷ್ಟಿಕಸ್ಯಾಹವನೀಯಸ್ಯ ತ್ರಯಃ ಪರಿಧಯ ಉತ್ತರವೇದಿಕಾಸ್ತ್ರಯ ಆದಿತ್ಯಶ್ಚ ಸಪ್ತಮಃ ಪರಿಧಿಪ್ರತಿನಿಧಿರೂಪಃ । ಅತ ಏವಾಮ್ನಾಯತೇ । ನ ಪುರಸ್ತಾತ್ಪರಿದಧ್ಯಾದಾದಿತ್ಯೋ ಹ್ಯೇವೋದ್ಯನ್ಪುರಸ್ತಾದ್ರಕ್ಷಾಂಸ್ಯಪಹಂತೀತಿ । ತತ ಏತ ಆದಿತ್ಯಸಹಿತಾಃ ಸಪ್ತ ಪರಿಧಯೋಽತ್ರ ಸಪ್ತ ಛಂದೋರೂಪಾಃ । ತಥಾ ಸಮಿಧಸ್ತ್ರಿಃ ಸಪ್ತ ತ್ರಿಗುಣೀಕೃತಸಪ್ತಸಂಖ್ಯಾಕಾ ಏಕವಿಂಶತಿಃ ಕೃತಾಃ । ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ । ತೈ. ಸಂ. ೫.೧.೧೦.೩ । ಇತಿ ಶ್ರುತಾಃ ಪದಾರ್ಥಾ ಏಕವಿಂಶತಿದಾರುಯುಕ್ತೇಧ್ಮತ್ವೇನ ಭಾವಿತಾಃ । ಯದ್ಯಃ ಪುರುಷೋ ವೈರಾಜೋಽಸ್ತಿ ತಂ ಪುರುಷಂ ದೇವಾಃ ಪ್ರಜಾಪತಿಪ್ರಾಣೇಂದ್ರಿಯರೂಪಾ ಯಜ್ಞಂ ತನ್ವಾನಾ ಮಾನಸಂ ಯಜ್ಞಂ ತನ್ವಾನಾಃ ಕುರ್ವಾಣಾಃ ಪಶುಮಬಧ್ನನ್ । ವಿರಾಟ್‌ಪುರುಷಮೇವ ಪಶುತ್ವೇನ ಭಾವಿತವಂತಃ । ಏತದೇವಾಭಿಪ್ರೇತ್ಯ ಪೂರ್ವತ್ರ ಯತ್ಪುರುಷೇಣ ಹವಿಷೇತ್ಯುಕ್ತಂ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ಯಜ್ಞಕ್ಕೆ । **ಸಪ್ತ**–ಏಳು ಛಂದಸ್ಸುಗಳೂ । **ಪರಿಧಯಃ**–ಪರಿಧಿಗಳಾಗಿ (ಎಲ್ಲೆಕಟ್ಟುಗಳಾಗಿ) । **ಆಸನ್**—ಆದವು । **ತ್ರಿಃ ಸಪ್ತ**—ಇಪ್ಪತ್ತೊಂದು ತತ್ತ್ವಗಳು । **ಸಮಿಧಃ**—ಸಮಿತ್ತುಗಳಾಗಿ । **ಕೃತಾಃ**—ನಿರ್ದಿಷ್ಟವಾದವು । **ದೇವಾಃ**–ದೇವತೆಗಳು । **ಯತ್**–ಯಾವ ಪುರುಷನನ್ನು । **ಯಜ್ಞಂ**–ಯಜ್ಞಸಾಧನವನ್ನಾಗಿ। **ತನ್ವಾನಾಃ**–ಮಾಡಲಪೇಕ್ಷಿಸಿದರೋ । **ಪುರುಷಂ**—ಆ ಪುರುಷನನ್ನೇ । **ಪಶುಂ**—ಪಶುಸ್ಥಾನದಲ್ಲಿ । **ಅಬಧ್ನನ್**—ಬಂಧಿಸಿದರು.

॥ ಭಾವಾರ್ಥ ॥

ಈ ಯಜ್ಞಕ್ಕೆ ಏಳು ಛಂದಸ್ಸುಗಳೂ ಪರಿಧಿಗಳಾದವು. ಇಪ್ಪತ್ತೊಂದು ತತ್ತ್ವಗಳು ಸಮಿತ್ತುಗಳಾಗಿ ನಿರ್ದಿಷ್ಟವಾದುವು. ಯಜ್ಞಸಾಧನನಾದ ಈ ಪುರುಷನನ್ನು ದೇವತೆಗಳು ಯೂಪಸ್ತಂಭಕ್ಕೆ ಕಟ್ಟಿದರು.

English Translation

Seven were the enclosures of the sacrifice,, thrice seven logs of fuel were prepared, when the gods, celebrating the rite. bound Purusha as the victim.

॥ ವಿಶೇಷವಿಷಯಗಳು ॥

ದೇವತೆಗಳು ಮಾಡಿದ ಮಾನಸಯಾಗದಲ್ಲಿ ಪರಿಧಿಗಳು, ಸಮಿತ್ತುಗಳು ಮೊದಲಾದ ಯಜ್ಞಸಾಧನ ದ್ರವ್ಯಗಳು ಯಾವವು ಎಂಬುದನ್ನು ಈ ಋಕ್ಕಿನಲ್ಲಿ ವಿಮರ್ಶೆಮಾಡಲಾಗಿದೆ.

**ಸಪ್ತಾಸ್ಯಾಸನ್ ಪರಿಧಯಃ**— ಪರಿಧಿಯೆಂದರೆ ಯಜ್ಞದಲ್ಲಿ ಅಗ್ನಿಕುಂಡದ ಎಂದರೆ ಅಗ್ನಿಯ ಸುತ್ತಲೂ ಎಂದರೆ ನಾಲ್ಕು ದಿಕ್ಕುಗಳಲ್ಲಿಯೂ ಇಡುವ ಸಮಿತ್ತುಗಳು ಅಥವಾ ದರ್ಭೆಗಳು. ಯಜ್ಞದಲ್ಲಿ ರಾಕ್ಷಸಾದಿಗಳು ಬಂದು ವಿಘ್ನವನ್ನು ಮಾಡದಿರಲೆಂದು ರಕ್ಷೋಘ್ನಸೂಚಕವಾಗಿ ಈ ವಿಧವಾದ ಪರಿಧಿಗಳನ್ನು ಇಡುವರು. **ಪರಿ**–ಸುತ್ತಲೂ, **ಧಿ**–ಇಡುವದು ಎಂದು ಪರಿಧಿಶಬ್ದದ ಅರ್ಥವು. ದಕ್ಷಿಣ, ಪಶ್ಚಿಮ, ಉತ್ತರ ಎಂಬ ಮೂರು ದಿಕ್ಕುಗಳಲ್ಲಿ ಮಾತ್ರ ಪರಿಧಿಗಳನ್ನು ಇಡುವರು. ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುವ ಸೂರ್ಯನೇ ರಾಕ್ಷಸಾದಿಗಳನ್ನು ನಾಶಮಾಡುವುದರಿಂದ ಆ ದಿಕ್ಕಿಗೆ ಪರಿಧಿಯು ಅವಶ್ಯಕವಿಲ್ಲವೆಂದು ಹೇಳಲಾಗಿದೆ. ಈ ವಿಷಯವು–**ನ ಪುರಸ್ತಾತ್ಪರಿದಧಾತ್ಯಾದಿತ್ಯೋ ಹ್ಯೇವೋದ್ಯನ್ ಪುರಸ್ತಾದ್ರಕ್ಷಾಗ್‌ಸ್ಯಪಹಂತಿ** (ತೈ. ಸಂ. ೨-೬-೬-೩) ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಉಕ್ತವಾಗಿದೆ. ಆದ್ದರಿಂದ ಆದಿತ್ಯಸಹಿತವಾದ ಈ ಏಳು ಪರಿಧಿಗಳು ಯಾವವೆಂದರೆ—ಗಾಯತ್ರಿಯೇ ಮೊದಲಾದ ಏಳು (ಮುಖ್ಯ) ಛಂದಸ್ಸುಗಳು. ಈ ಛಂದಸ್ಸುಗಳೇ ದೇವತೆಗಳ ಮಾನಸಯಜ್ಞದಲ್ಲಿ ಪರಿಧಿಗಳಾದವು ಎಂದಭಿಪ್ರಾಯವು.

**ತ್ರಿಃಸಪ್ತ ಸಮಿಧಃ ಕೃತಾಃ— ತ್ರಿಃಸಪ್ತ** ಎಂದರೆ ೩ × ೭=೨೧ ಇಪ್ಪತ್ತೊಂದು ಸಮಿತ್ತುಗಳು. ಸಮಿತ್ತುಗಳೆಂದರೆ ಹೋಮಮಾಡುವುದಕ್ಕಾಗಿ ಉಪಯೋಗಿಸುವ ಕಾಷ್ಠಗಳು. ಅಶ್ವತ್ಥಾದಿ ಕೆಲವು ವೃಕ್ಷಗಳ ಶಾಖೆಗಳ ಕೊನೆಯಲ್ಲಿ ತುದಿಸಹಿತವಾಗಿರುವ ಅಗ್ರಭಾಗವು. ಇವು ಚೆನ್ನಾಗಿ ಒಣಗಿರಬೇಕು. ಸಮಿತ್ ಶಬ್ದಕ್ಕೆ ಪ್ರಜ್ವಲಿಸುವುದು ಎಂದರ್ಥವು. ಈ ಕಾಷ್ಠಗಳನ್ನು ಅಗ್ನಿಯಲ್ಲಿ ಹಾಕಿ ಹೋಮಮಾಡುವುದರಿಂದ ಅಗ್ನಿಯು ಚೆನ್ನಾಗಿ ಪ್ರಜ್ವಲಿಸುವುದು. ಇಂತಹ ಸಮಿತ್ತುಗಳು ಆ ದೇವತೆಗಳು ಮಾಡಿದ ಯಾಗದಲ್ಲಿ ಇಪ್ಪತ್ತೊಂದು ಇದ್ದವು. ಈ ಇಪ್ಪತ್ತೊಂದು ಸಮಿತ್ತುಗಳು ಯಾವವು ಎಂದರೆ—**ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ** । ಹನ್ನೆರಡು ಮಾಸಗಳು, ಐದು ಋತುಗಳು, ಮೂರು ಲೋಕಗಳು, ಆದಿತ್ಯ ಒಟ್ಟು ಇಪ್ಪತ್ತೊಂದು. ಎಂದರೆ ಚೈತ್ರಾದಿ ೧೨ ಮಾಸಗಳು, ವಸಂತ, ಗ್ರೀಷ್ಮ, ವರ್ಷಾಃ, ಶರತ್, ಹೇಮಂತಶಿಶಿರೌ ಎಂದು ಐದು ಋತುಗಳು ಇಲ್ಲಿ ಹೇಮಂತಶಿಶಿರ ಎಂಬ ಎರಡು ಋತುಗಳನ್ನೂ ಒಂದೇ ಋತುವೆಂದು ಪರಿಗಣಿಸಲಾಗಿದೆ. ಪೃಥಿವೀ, ಅಂತರಿಕ್ಷ, ದ್ಯೌಃ ಎಂದು ಮೂರು ಲೋಕಗಳು, ಆದಿತ್ಯನು. ಇವೆಲ್ಲವೂ ಸೇರಿ ಇಪ್ಪತ್ತೊಂದು ಸಂಖ್ಯೆಯಾಗುವುದು. ಇವುಗಳನ್ನೇ ಇಪ್ಪತ್ತೊಂದು ಸಮಿತ್ತುಗಳೆಂದು ದೇವತೆಗಳು ಭಾವಿಸಿದರು ಎಂದು ಇಲ್ಲಿ ಹೇಳಿದೆ. ಅಥವಾ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು, ಪೃಥಿವ್ಯಾದಿಪಂಚಮಹಾಭೂತಗಳು, ಪ್ರಾಣಾದಿ ಐದು ವಾಯುಗಳು ಸೇರಿ ಇಪ್ಪತ್ತೊಂದು ಸಮಿತ್ತುಗಳಾಗುವವೆಂದು ಕೆಲವರ ಅಭಿಪ್ರಾಯವು.

**ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಂ**– ಯಜ್ಞದಲ್ಲಿ ಪಶುವು ಬಹುಮುಖ್ಯವಾದ ಸಾಮಗ್ರಿಯು. ಪಶುಹೋಮಮಾಡುವಾಗ ಇದರ ಅವಶ್ಯಕತೆಯಿರುವುದು. ಪಶುವಿಲ್ಲದೆ ಯಜ್ಞವಿಲ್ಲ. ಎಂದರೆ ಯಜ್ಞವು ಸಾಧ್ಯವಿಲ್ಲ. ಆದ್ದರಿಂದ ಅಗ್ನಿಮಥನಕ್ಕೆ ಪೂರ್ವಭಾವಿಯಾಗಿಯೇ ಯಜ್ಞಪಶುವನ್ನು ತಂದು ವೇದಿಯಲ್ಲಿ ನೆಟ್ಟಿರುವ ಯೂಪಸ್ತಂಭಕ್ಕೆ ಕಟ್ಟಬೇಕೆಂಬ ವಿಧಿಯಿದೆ. ಆದ್ದರಿಂದ ದೇವತೆಗಳು ಮಾನಸಯಾಗವನ್ನು ಮಾಡಿದಾಗ ವಿರಾಟ್ಪುರುಷನನ್ನೇ ಪಶುವೆಂದು ಭಾವಿಸಿ ಯೂಪಸ್ತಂಭದಲ್ಲಿ ಕಟ್ಟಿದರು ಎಂದರೆ ಕಟ್ಟಿದಂತೆ ಭಾವಿಸಿದರು ಎಂದು ಅಭಿಪ್ರಾಯವು.

॥ ಸಂಹಿತಾಪಾಠಃ ॥

ಯ॒ಜ್ಞೇನ॑ ಯ॒ಜ್ಞಮ॑ಯಜಂತ ದೇ॒ವಾಸ್ತಾನಿ॒ ಧರ್ಮಾ॑ಣಿ ಪ್ರ॒ಥ॒ಮಾನ್ಯಾ॑ಸನ್ ।
ತೇ॒ ಹ॒ ನಾಕಂ॑ ಮಹಿ॒ಮಾನಃ॑ ಸಚಂತ॒ ಯತ್ರ॒ ಪೂರ್ವೇ॑ ಸಾ॒ಧ್ಯಾಃ ಸಂತಿ॑ ದೇ॒ವಾಃ ॥ ೧೬ ॥

॥ ಪದಪಾಠಃ ॥

ಯ॒ಜ್ಞೇನ॑ । ಯ॒ಜ್ಞಂ । ಅ॒ಯ॒ಜ॒ಂತ॒ । ದೇ॒ವಾಃ । ತಾನಿ॑ । ಧರ್ಮಾ॑ಣಿ । ಪ್ರ॒ಥ॒ಮಾನಿ॑ । ಆ॒ಸ॒ನ್ ॥
ತೇ । ಹ॒ । ನಾಕ॑ಂ । ಮ॒ಹಿ॒ಮಾನಃ॑ । ಸ॒ಚ॒ಂತ॒ । ಯತ್ರ॑ । ಪೂರ್ವೇ॑ । ಸಾ॒ಧ್ಯಾಃ । ಸಂತಿ॑ । ದೇ॒ವಾಃ ॥ ೧೬ ॥

॥ ಸಾಯಣಭಾಷ್ಯಂ ॥

ಪೂರ್ವಂ ಪ್ರಪಂಚೇನೋಕ್ತಮರ್ಥಂ ಸಂಕ್ಷಿಪ್ಯಾತ್ರ ದರ್ಶಯತಿ । ದೇವಾಃ ಪ್ರಜಾಪತಿಪ್ರಾಣರೂಪಾ ಯಜ್ಞೇನ ಯಥೋಕ್ತೇನ ಮಾನಸೇನ ಸಂಕಲ್ಪೇನ ಯಜ್ಞಂ ಯಥೋಕ್ತಯಜ್ಞಸ್ವರೂಪಂ ಪ್ರಜಾಪತಿಮಯಜಂತ । ಪೂಜಿತವಂತಃ । ತಸ್ಮಾತ್ಪೂಜನಾತ್ತಾನಿ ಪ್ರಸಿದ್ಧಾನಿ ಧರ್ಮಾಣಿ ಜಗದ್ರೂಪವಿಕಾರಾಣಾಂ ಧಾರಕಾಣಿ ಪ್ರಥಮಾನಿ ಮುಖ್ಯಾನ್ಯಾಸನ್ । ಏತಾವತಾ ಸೃಷ್ಟಿಪ್ರತಿಪಾದಕಸೂಕ್ತಭಾಗಾರ್ಥಃ ಸಂಗೃಹೀತಃ । ಅಥೋಪಾಸನತತ್ಫಲಾನುವಾದಕಭಾಗಾರ್ಥಃ ಸಂಗೃಹ್ಯತೇ । ಯತ್ರ ಯಸ್ಮಿನ್ವಿರಾಟ್ಪ್ರಾಪ್ತಿರೂಪೇ ನಾಕೇ ಪೂರ್ವೇ ಸಾಧ್ಯಾಃ ಪುರಾತನಾ ವಿರಾಡುಪಾಸ್ತಿಸಾಧಕಾ ದೇವಾಃ ಸಂತಿ ತಿಷ್ಠಂತಿ ತನ್ನಾಕಂ ವಿರಾಟ್ಪ್ರಾಪ್ತಿರೂಪಂ ಸ್ವರ್ಗಂ ತೇ ಮಹಿಮಾನಸ್ತದುಪಾಸಕಾ ಮಹಾತ್ಮಾನಃ ಸಚಂತ । ಸಮವಯಂತಿ । ಪ್ರಾಪ್ನುವಂತಿ ॥

॥ ಪ್ರತಿಪದಾರ್ಥ ॥

**ದೇವಾಃ**—ದೇವತೆಗಳು । **ಯಜ್ಞೇನ**—ಮಾನಸಿಕವಾದ ಸಂಕಲ್ಪರೂಪದ ಯಜ್ಞದಿಂದ । **ಯಜ್ಞಂ**—ಯಜ್ಞರೂಪನಾದ ಪ್ರಜಾಪತಿಯನ್ನು । **ಅಯಜಂತ**—ಪೂಜಿಸಿದರು । **ತಾನಿ**—ಆ ಯಜ್ಞ ಪ್ರಕಾರಗಳೇ । **ಪ್ರಥಮಾನಿ ಧರ್ಮಾಣಿ**—ಮುಖ್ಯ ಧರ್ಮಗಳಾಗಿ । **ಆಸನ್**—ಪ್ರಸಿದ್ಧವಾದುವು । **ಯತ್ರ**—ಯಾವ ಸ್ವರ್ಗದಲ್ಲಿ । **ಪೂರ್ವೇ**—ಪುರಾತನರಾದ । **ದೇವಾಃ**—ದೇವತೆಗಳೂ । **ಸಾಧ್ಯಾಃ**—ಸಾಧ್ಯರೂ । **ಸಂತಿ**—ಇರುವರೋ । **ನಾಕಂ**—ಆ ಸ್ವರ್ಗವನ್ನು । **ತೇ ಮಹಿಮಾನಃ**—ವಿರಾಟ್ಪುರುಷನನ್ನು ಉಪಾಸನೆ ಮಾಡುವ ಮಹಾತ್ಮರು । **ಸಚಂತೇ**—ಪಡೆಯುತ್ತಾರೆ.

॥ ಭಾವಾರ್ಥ ॥

ದೇವತೆಗಳು ಮಾನಸಿಕವಾದ ಸಂಕಲ್ಪರೂಪದ ಯಜ್ಞದಿಂದ ಯಜ್ಞರೂಪನಾದ ಪ್ರಜಾಪತಿಯನ್ನು ಪೂಜಿಸಿದರು. ಆ ಯಜ್ಞಪ್ರಕಾರಗಳೇ ಮುಖ್ಯಧರ್ಮಗಳಾಗಿ ಪ್ರಸಿದ್ಧವಾದವು. ಪುರಾತನರಾದ ದೇವತೆಗಳೂ, ಸಾಧ್ಯರೂ ವಾಸಮಾಡುವ ಸ್ವರ್ಗವನ್ನು ವಿರಾಟ್ಪುರುಷನನ್ನು ಉಪಾಸನೆಮಾಡುವ ಮಹಾತ್ಮರು ಪಡೆಯುತ್ತಾರೆ.

## English Translation

By sacrifice the gods worshipped (him who is also) the sacrifice; those were the first duties. Those great ones became partakers of the heaven where the ancient deities Sadhyas abide.

|| ವಿಶೇಷವಿಷಯಗಳು ||

ಅಗ್ನಿಮಂಥನಕಾಲದಲ್ಲಿ **ಯಜ್ಞೇನ ಯಜ್ಞಂ** ಎಂಬ ಈ ಋಕ್ಕನ್ನು ಸಮಾಪ್ತಿಮಂತ್ರವನ್ನಾಗಿ ಉಪಯೋಗಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಜ್ಞೇನ ಯಜ್ಞಮಯಜಂತ ದೇವಾ ಇತಿ ಪರಿದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೨–೧೬).

ಇದು ಯಜ್ಞಫಲವನ್ನು ಸ್ತುತಿಸತಕ್ಕ ಮಂತ್ರವಾಗಿದೆ. ಶ್ರೇಷ್ಠವಾದ ಯಜ್ಞಕ್ಕೆ ಉತ್ತಮವಾದ ಸ್ವರ್ಗ ಪ್ರಾಪ್ತಿಯೇ ಫಲವೆಂದು **ತೇ ಹ ನಾಕಂ ಮಹಿಮಾನಃ ಸಚಂತ** ಎಂದು ಪ್ರಶಂಸಿಸಿದೆ.

**ನಾಕಂ— ನಾಕಂ** ಸ್ವರ್ಗಲೋಕವನ್ನು ; **ನಾಸ್ಮಿನ್ನಕಮಸ್ತೀತಿ ನಾಕಃ ಸ್ವರ್ಗಃ** ದುಃಖವಿಲ್ಲದಿರುವುದರಿಂದ ಸ್ವರ್ಗಕ್ಕೆ ನಾಕವೆಂಬ ಹೆಸರು ಪ್ರಸಿದ್ಧವಾಗಿದೆ. **ನಾಕ**ಶಬ್ದವನ್ನು ಋಕ್ಸಂಹಿತೆಯಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಯಜ್ಞ, ಸ್ವರ್ಗ, ಆದಿತ್ಯ ಇತ್ಯಾದ್ಯರ್ಥಗಳಲ್ಲಿ ಈ ಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ಆರು ಸಾಧಾರಣ ನಾಮಗಳಲ್ಲಿ ಸೇರಿಸಿ ಅವುಗಳ ಅರ್ಥವನ್ನು ಸಾಧಾರಣವೆಂದು ವಿವರಿಸುತ್ತಾ **ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ ।** ದ್ಯುಲೋಕಕ್ಕೂ ಆದಿತ್ಯನಿಗೂ ಸಾಧಾರಣವಾದ ಪರ್ಯಾಯ ಪದಗಳೆಂದೂ ತಿಳಿಸಿದ್ದಾರೆ (ನಿ. ೨–೧೩). ಅನಂತರ ಈ ಶಬ್ದದ ನಿರ್ವಚನವನ್ನು ತಿಳಿಸುತ್ತಾ,

**ನಾಕ ಆದಿತ್ಯೋ ಭವತಿ ನೇತಾ ರಸಾನಾಂ । ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ ।**

(ನಿ. ೨–೧೪)

ರಸದ ವಾಹಕನೂ ಮತ್ತು ತೇಜೋವಾಹಕನೂ ಆದ ಆದಿತ್ಯನಿಗೆ ನಾಕವೆಂದು ಹೆಸರು ಎಂದು ಆದಿತ್ಯನ ಪರ್ಯಾಯವಾಗಿ ಈ ಪದವಿರುವುದನ್ನು ತಿಳಿಸಿ ಅನಂತರ,

**ಅಥ ದ್ಯೌಃ । ಕಮಿತಿ ಸುಖನಾಮ ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ ।**

(ನಿ. ೨-೧೪)

**ಕಂ** ಎಂಬುದು ಸುಖದ ಪರ್ಯಾಯನಾಮವಾಗಿದೆ ; ಸುಖವಿಲ್ಲದಿರುವುದು **ಅಕಂ,** ಅದರ ಅಭಾವವಿಲ್ಲದಿರುವುದು ಎಂದರೆ ಸುಖಾಭಾವಾಭಾವ (ಸುಖಾಭಾವವಿಲ್ಲದಿರುವುದು), ದುಃಖರಹಿತವಾದುದು ಎಂದು ವಿವರಿಸಿ,

**ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಂ ।**

(ಕಾಠಕ. ಸಂ. ೨೧–೨)

ಎಂಬ ವಾಕ್ಯವನ್ನುದಹರಿಸಿ **ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ ।** ಈ ಲೋಕಕ್ಕೆ ಹೋದವರಿಗೆ ದುಃಖವೇ ಇಲ್ಲ. ಸುಕೃತಿಗಳಿಗೆ ಮಾತ್ರ ಈ ಲೋಕಕ್ಕೆ ಪ್ರವೇಶವುಂಟು

ಎಂದು **ನಾಕಶಬ್ದದ** ಅರ್ಥವನ್ನು ತಿಳಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪದವು ಆದಿತ್ಯನ ಪರ್ಯಾಯವಾಗಿ ಕೆಲವು ಕಡೆಯೂ, ಸ್ವರ್ಗದ ಪರ್ಯಾಯವಾಗಿ ಕೆಲವು ಕಡೆಯೂ ಉಪಯೋಗಿಸಲ್ಪಟ್ಟಿದೆ.

**ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ।**

(ಋ. ಸಂ. ೧.೩೪-೮)

**ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ । ಮರುದ್ಭಿರಗ್ನ ಆ ಗಹಿ ॥**

(ಋ. ಸಂ. ೧.೧೯-೬)

ಇತ್ಯಾದಿ ಋಕ್ಕುಗಳಲ್ಲಿ **ನಾಕಶಬ್ದಕ್ಕೆ ಸೂರ್ಯ**ನೆಂದರ್ಥಮಾಡಿದೆ.

**ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ ।**
**ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನಧಿ ಬರ್ಹಿಷಿ ಪ್ರಿಯೇ ॥**

(ಋ. ಸಂ. ೧-೮೫-೭)

ಇತ್ಯಾದಿ ಋಕ್ಕುಗಳಲ್ಲಿ **ನಾಕಶಬ್ದಕ್ಕೆ ಸ್ವರ್ಗ**ವೆಂದರ್ಥಮಾಡಿದೆ.

**ವೃಷ್ಯೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।**

(ಬೃ. ದೇ. ೨-೬೬)

ಎಂಬ ಬೃಹದ್ದೇವತಾವಾಕ್ಯದಲ್ಲಿ ಅಂತಕ್ಷವೆಂದಿದೆ.

**ಇತೋಽಸಾವಾದಿತ್ಯೋ ದ್ವಾವಿಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಂ ।**

(ಛಾ. ಉ. ೨-೧೦-೫)

ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ ಶೋಕರಹಿತವಾದ ಸ್ವರ್ಗಲೋಕವು ಆದಿತ್ಯನ ಲೋಕಕ್ಕಿಂತ ಪರವಾದುದೆಂದು ಹೇಳಿದೆ.

ಶಥಪಥಬ್ರಾಹ್ಮಣದಲ್ಲಿಯೂ, ತೈತ್ತಿರೀಯ ಉಪನಿಷತ್ತಿನಲ್ಲಿಯೂ ಬ್ರಹ್ಮವಿತ್ತಾದ ಮುದ್ಗಲಪುತ್ರನಿಗೆ **ನಾಕ** ಎಂಬ ಹೆಸರು ಪ್ರಸಿದ್ಧವಾಗಿದೆ. ದುಃಖರಹಿತನೆಂದರ್ಥ.

**ಯಜ್ಞೇನ ಯಜ್ಞಮಯಜಂತ** ಎನ್ನುವಾಗ ಯಜ್ಞಶಬ್ದಕ್ಕೆ ಎರಡು ಮೂರು ಅರ್ಥಗಳು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ,

(೧) **ಯಜ್ಞೇನ ನಿರ್ಮಥ್ಯಾಗ್ನಿನಾ ; ಯಜ್ಞಂ-ಹೋಮಸಾಧನಮಾಹವನೀಯಂ ಅಯಜಂತ-ಪೂಜಿತವಂತಃ** । ನಿರ್ಮಂಥ್ಯಾಗ್ನಿಯಿಂದ ಹೋಮಸಾಧನವಾದ ಆಹವನೀಯಾಗ್ನಿಯನ್ನು ಸಂಯೋಜಿಸಿ ಪೂಜಿಸಿದರು ಎಂದರ್ಥ. ಎರಡನೆಯದಾಗಿ,

(೨) **ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮಯಜಂತ ಪೂಜಿತವಂತಃ ।** ಪಶುರೂಪವಾದ ಅಗ್ನಿಯಿಂದ ಯಜ್ಞಾಗ್ನಿಯನ್ನು ಪೂಜಿಸಿದರು ಎಂದೂ ಮೂರನೆಯದಾಗಿ,

(೩) **ಯಜ್ಞೇನ ಜ್ಞಾನಾದಿಯಜ್ಞೇನ ಯಜ್ಞಂ ವಿಷ್ಣುಮಯಜಂತ ।** ಜ್ಞಾನರೂಪವಾದ ಯಜ್ಞದಿಂದ ವಿಷ್ಣುರೂಪವಾದ ಯಜ್ಞವನ್ನು ಪೂಜಿಸಿದರು ಎಂದೂ ಅರ್ಥ. ಸಾಯಣರು ಈ ಮೂರು ಅರ್ಥಗಳಿಗೂ ಶ್ರುತಿವಾಕ್ಯಗಳನ್ನುದಹರಿಸಿ ತಮ್ಮ ಅರ್ಥಗಳನ್ನು ಸಮರ್ಥಿಸಿದ್ದಾರೆ.

ಈ ಮೂರರಲ್ಲಿ ಮೊದಲನೆಯ ಅರ್ಥದ ಸಮರ್ಥನೆಗೆ ಸಾಯಣರು ಕೆಳಗಿನ ತೈತ್ತಿರೀಯಸಂಹಿತಾವಾಕ್ಯವನ್ನುದಹರಿಸಿ ವಿವರಿಸಿದ್ದಾರೆ.

**ಅಗ್ನಿಶ್ಚ ವಾ ಏತೌ ಸೋಮಶ್ಚ ಕಥಾ ಸೋಮಾಯಾತಿಥ್ಯಂ ಕ್ರಿಯತೇ ನಾಗ್ನಯ ಇತಿ ಯದಗ್ನಾವಗ್ನಿಂ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ ಕ್ರಿಯತೇಽಥೋ ಖಲ್ವಾಹುರಗ್ನಿಸ್ಸರ್ವಾ ದೇವತಾ ಇತಿ ಯದ್ಧವಿರಾಸಾದ್ಯಾಗ್ನಿಂ ಮಂಥತಿ ಹವ್ಯಾಯೈವಾಸನ್ನಾಯ ಸರ್ವಾ ದೇವತಾ ಜನಯತಿ ॥**

(ತೈ ಸಂ. ೬-೨-೧-೭)

ದೇವತೆಗಳಿಗೂ ಅಸುರರಿಗೂ ವೈಷಮ್ಯವು ಪ್ರಾಪ್ತವಾದಾಗ ಅಸುರರನ್ನು ಓಡಿಸಲು ಮಾಡಿದ ಪ್ರಯತ್ನದಲ್ಲಿ ನೆರವೇರಿಸಿದ ಯಜ್ಞವಿಧಾನವನ್ನು ಈ ಪ್ರಕರಣದಲ್ಲಿ ಹೇಳಿದೆ. ಆ ಸಂದರ್ಭದಲ್ಲಿ, ಯಜ್ಞಕ್ಕೆ ಪಾದಗಳಂತಿರುವ **ಅಗ್ನಿ, ಸೋಮ** ಎಂಬ ದೇವತೆಗಳು ಪಡೆಯುವ ಆತಿಥ್ಯದ ಸ್ವರೂಪವನ್ನು ಮೇಲಿನ ಸಂಹಿತಾವಾಕ್ಯಗಳಲ್ಲಿ ವರ್ಣಿಸಿದೆ. ಅದರಲ್ಲಿ ಪ್ರಥಮತಃ ಒಂದು ಸಂಶಯವು ಸೂಚಿತವಾಗಿದೆ. ಸ್ಥೂಲವಾಗಿ ನೋಡುವುದಕ್ಕೆ ಈ ಸಂದರ್ಭದಲ್ಲಿ ಸೋಮನಿಗೆ ಮಾತ್ರ ಆತಿಥ್ಯವನ್ನರ್ಪಿಸುವಂತೆಯೂ, ಅಗ್ನಿಗೆ ಆ ಆತಿಥ್ಯ ಲಾಭವಿಲ್ಲದಿರುವಂತೆಯೂ, ತಿಳಿಯುತ್ತದೆ. ಇಬ್ಬರೂ ಒಂದೇ ವಿಧವಾದ ಪೂಜೆಗೆ ಅರ್ಹರಾಗಿರುವಾಗ ಸೋಮನಿಗೆ ಲಭಿಸಿದ ಆತಿಥ್ಯವು ಅಗ್ನಿಗೆ ಏತಕ್ಕಾಗಿ ಲಭಿಸಲಿಲ್ಲ ಎಂಬ ಪ್ರಶ್ನೆಯು ಸಂಭವಿಸಿದಾಗ ಅದಕ್ಕೆ ಉತ್ತರವಾಗಿ **ಅಗ್ನಿಂ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ** ಅಗ್ನಿಮಂಥನವನ್ನು ಮಾಡಿ ಅಗ್ನಿಯನ್ನು ಆದರ ಮೇಲೆ ಸ್ಥಾಪಿಸುವುದರಿಂದಲೇ ಅಗ್ನಿಗೆ ಪೂರ್ಣವಾಗಿ ಆತಿಥ್ಯವನ್ನು ಅರ್ಪಿಸಿದಂತಾಯಿತು. ಅದೂ ಅಲ್ಲದೇ, ಅಗ್ನಿಯೇ ಸಕಲ ದೇವತೆಗಳೂ ಆದುದರಿಂದ ಅಗ್ನಿಯನ್ನು ಮಂಥನಮಾಡಿ ಅಗ್ನಿಯಲ್ಲಿ ಆಹುತ್ಯರ್ಪಣವನ್ನು ಮಾಡುವುದರಿಂದ ಸಕಲ ದೇವತೆಗಳಿಗೂ ಸಹ ಪೂಜೆಯನ್ನು ಸಲ್ಲಿಸಿದಂತೆ ಎಂದು ಸಮಾಧಾನವನ್ನು ಹೇಳಿದೆ **ಯಜ್ಞೇನ ಯಜ್ಞಮಯಜಂತ** ಎಂಬುದರಲ್ಲಿ ಈ ಭಾವವು ಸೂಚಿತವಾಗಿದೆಯೆಂದು ಅರ್ಥ. ಅಗ್ನಿಮಂಥನವನ್ನು ಮಾಡಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸುವುದರಿಂದ ಈ ಯಜನವನ್ನು **ತಾನಿ ಧರ್ಮಾಣಿ ಪ್ರಥಮಾನ್ಯಾಸನ್** ಈ ಕರ್ಮಗಳು ಅತ್ಯಂತ ಶ್ರೇಷ್ಠವಾದುದೂ; ಫಲಗಳನ್ನು ಕೊಡತಕ್ಕದ್ದೂ ಆದವೆಂದು ಪ್ರಶಂಸಿಸಿದೆ.

**ಪ್ರಥಮಾನಿ— ಪ್ರಥಮ ಇತಿ ಮುಖ್ಯನಾಮ । ಪ್ರತಮಾನಿ ಪ್ರಕೃಷ್ಟತಮಾನಿ ।** ಅತ್ಯಂತ ಶ್ರೇಷ್ಠವಾದ ಧರ್ಮಗಳು ಎಂದರ್ಥ. ನಿರುಕ್ತಕಾರರು,

**ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।**
**ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ॥**

(ಋ. ಸಂ. ೧೦-೨೭-೨೩)

ಅಲ್ಲಿ **ಪ್ರಥಮ** ಶಬ್ದಕ್ಕೆ **ಪ್ರಥಮ ಇತಿ ಮುಖ್ಯನಾಮ । ಪ್ರಥಮೋ ಭವತಿ** (ನಿ. ೨-೨೪) ಎಂದು ವಿವರಿಸಿರುವುದನ್ನು ಉದಹರಿಸಿ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವೆಂದು ಸಾಯಣರು ತಿಳಿಸಿದ್ದಾರೆ.

(೨) ಎರಡನೆಯದಾಗಿ, **ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮಯಜಂತ ।** ಪಶುಭೂತವಾದ ಅಗ್ನಿಯಿಂದ ಅಗ್ನಿರೂಪವಾದ ಯಜ್ಞವನ್ನು ಪೂಜಿಸಿದರು ಎಂದಿದೆ. ನಿರುಕ್ತಕಾರರ ವಿವರಣೆಯು ಈ ಎರಡನೆಯ ಅರ್ಥವನ್ನು ಸಮರ್ಥಿಸುತ್ತದೆ.

> **ಯಜ್ಞೇನ ಯಜ್ಞಮಯಜಂತ ದೇವಾಃ । ಅಗ್ನಿನಾಗ್ನಿಮಯಜಂತ ದೇವಾಃ । ಅಗ್ನಿಃ ಪಶುರಾಸೀತ್ತಮಾಲಭಂತ ತೇನಾಯಜಂತ ಇತಿ ಚ ಬ್ರಾಹ್ಮಣಂ ।**
>
> (ನಿ. ೧೨-೪೧)

ದೇವತೆಗಳು ಯಜ್ಞಾದಿಕರ್ಮಗಳಿಂದ ಯಜ್ಞವನ್ನು ನೆರವೇರಿಸಿದರು. ಎಂದರೆ, ದೇವತೆಗಳು ಅಗ್ನಿಮಥನದಿಂದ ಅಗ್ನಿಯನ್ನು ಪೂಜಿಸಿದರು ಎಂಬುದು ಒಂದು ವಿಧ, ಅಥವಾ **ಪಶು**ವಾಗಿದ್ದ ಅಗ್ನಿಯನ್ನು ಕರೆತಂದು ಆ ಪಶುವನ್ನು ಅರ್ಪಿಸಿ ಯಜ್ಞವನ್ನು ನೆರವೇರಿಸಿದರು ಎಂದೂ ಆಗಬಹುದು. ಅಗ್ನಿಯು ಪಶುರೂಪನಾಗಿದ್ದನು ಎಂಬುದರ ಅರ್ಥವೇನು ? ಇದಕ್ಕೆ ಆಧಾರವೇನು ಎಂದರೆ, ನಿರುಕ್ತರಾರರು ಐತರೇಯಬ್ರಾಹ್ಮಣದ ವಾಕ್ಯವನ್ನುದಹರಿಸಿ ಈ ಅರ್ಥವನ್ನು ಹೇಳಿದ್ದಾರೆ. ಐತರೇಯಬ್ರಾಹ್ಮಣದಲ್ಲಿ ಈ ವಿಷಯವನ್ನು ಕೆಳಗೆ ಉದಾಹರಿಸಿರುವ ವಾಕ್ಯಗಳಲ್ಲಿ ತಿಳಿಸಿದೆ.

> **ಅಗ್ನಿಂ ಮಂಥಂತಿ ಸೋಮೇ ರಾಜನ್ಯಾಗತೇ ತದ್ಯಥೈವಾದೋ ಮನುಷ್ಯರಾಜ ಆಗತೇಽನ್ಯಸ್ಮಿನ್ ವಾರ್ಹತ್ಯುಕ್ಷಾಣಂ ವಾ ವೇಹತಂ ವಾ ಕ್ಷದಂತ ಏವಮೇವಾಸ್ಮಾ ಏತತ್ ಕ್ಷದಂತೇ ಯದಗ್ನಿಂ ಮಂಥಂತ್ಯಗ್ನಿರ್ಹಿ ದೇವಾನಾಂ ಪಶುಃ ॥**
>
> (ಐ. ಬ್ರಾ. ೧-೧೫)

ಸೋಮರಾಜನು ಅಥಿತಿಯಾಗಿ ಬಂದಾಗ ಅಗ್ನಿಯನ್ನು ಮಥನಮಾಡಿದರು. ಇದು ಸಹಜವಾದುದು. ಯಾವ ರೀತಿ ಮಾನವರು ತಮ್ಮ ರಾಜನು ತಮ್ಮ ಮನೆಗೆ ಅಥಿತಿಯಾಗಿ ಬಂದಾಗ ವೃಷಭಾದಿಗಳನ್ನು ಅರ್ಪಿಸಿ ಅತಿಥಿಸತ್ಕಾರವನ್ನು ಮಾಡುವರೋ, ಅದರಂತೆಯೇ ದೇವತೆಗಳೂ ಸಹ ಅಗ್ನಿರೂಪವಾದ ಪಶುವನ್ನು ಅರ್ಪಿಸಿ ಸೋಮರಾಜನನ್ನು ಸತ್ಕರಿಸಿದರು. ಅಗ್ನಿಯು ದೇವತೆಗಳ ಪಶುವೆಂಬುದು ಪ್ರಸಿದ್ಧವಾದ ವಿಷಯವಾಗಿದೆ. ಅಗ್ನಿಗೆ ಯಜ್ಞಪಶುವೆಂಬ ಹೆಸರು ಏತಕ್ಕೆ ಬಂದಿತು ? ಹೇಗೆ ಪ್ರಸಿದ್ಧವಾಯಿತು, ಎಂದು ತಿಳಿಸುವ ಸನ್ನಿವೇಶವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> **ಪ್ರಜಾಪತಿರಗ್ನಿರೂಪಾಣ್ಯಭ್ಯಧ್ಯಾಯತ್ । ಸ ಯೋಽಯಂ ಕುಮಾರೋ ರೂಪಾಣ್ಯನುಪ್ರವಿಷ್ಟ ಆಸೀತ್ತಮನ್ವೈಚ್ಛತ್ಸೋಽಗ್ನಿರವೇದನು ವೈ ಮಾ ಪಿತಾ ಪ್ರಜಾಪತಿರಿಚ್ಛತಿ ಹಂತ ತದ್ರೂಪಮಸಾನಿ ಯನ್ನ ಏಷ ನ ವೇದೇತಿ ॥**
>
> (ಶ. ಬ್ರಾ. ೬-೨-೧-೧)

ಪ್ರಜಾಪತಿಯು ಅಗ್ನಿಯ ರೂಪಗಳನ್ನು ಕುರಿತು ಧ್ಯಾನಮಾಡಿದನು. ಬೇರೆಬೇರೆ ರೂಪಗಳಲ್ಲಿ ಪ್ರವೇಶಿಸಿರುವ ಕುಮಾರನನ್ನು ಹುಡುಕಿದನು. ಆಗ ಅಗ್ನಿಗೆ ಈ ಅನ್ವೇಷಣವು ತಿಳಿಯಿತು. ಆಗ ಅವನು "ಪ್ರಜಾಪತಿಯು ನನ್ನನ್ನೇ ಹುಡುಕುತ್ತಿದ್ದಾನೆ. ನಾನು ಅವನಿಗೆ ತಿಳಿಯದಂತಾಗುತ್ತೇನೆ" ಎಂದುಕೊಂಡನು.

**ಸ ಏತಾನ್ಪಂಚ ಪಶೂನಪಶ್ಯತ್ । ಪುರುಷಮಶ್ವಂ ಗಾಮವಿಮಜಂ ಯದಪಶ್ಯತ್ತಸ್ಮಾದೇತೇ ಪಶವಃ ॥**

(ಶ. ಬ್ರಾ. ೬-೨-೧-೨)

ಆಗ ಪುರುಷನನ್ನೂ, ಅಶ್ವವನ್ನೂ, ಗೋವನ್ನೂ, ಕುರಿಯನ್ನೂ, ಆಡನ್ನೂ ನೋಡಿದನು. ಅಗ್ನಿಯು ಅವುಗಳನ್ನು ನೋಡಿದುದರಿಂದ (ಅಪಶ್ಯತ್—ಪಶ್) ಅವುಗಳಿಗೆ ಪಶುಗಳೆಂಬ ಪರ್ಯಾಯನಾಮವು ಪ್ರಸಿದ್ಧವಾಯಿತು.

**ಸ ಏತಾನ್ಪಂಚ ಪಶೂನ್ಪ್ರಾವಿಶತ್ । ಸ ಏತೇ ಪಂಚ ಪಶವೋಽಭವತ್ತಮು ಹೈ ಪ್ರಜಾಪತಿ-ರನ್ವೇವೈಚ್ಛತ್ ॥**

(ಶ. ಬ್ರಾ. ೬-೨-೧-೩)

ಅಗ್ನಿಯು ಆ ಐದು ಪಶುಗಳಲ್ಲಿಯೂ ಪ್ರವೇಶಿಸಿದನು. ಅವುಗಳ ತಾದಾತ್ಮ್ಯವನ್ನೇ ಪಡೆದನು. ಆದರೂ ಸಹ ಪ್ರಜಾಪತಿಯು ಅಗ್ನಿಯನ್ನು ಹುಡುಕುತ್ತಲೇ ಇದ್ದನು. (ಶ ಬ್ರಾ. ೬-೨-೧-೪)

**ಸ ಏತಾನ್ಪಂಚ ಪಶೂನಪಶ್ಯತ್ । ಯದಪಶ್ಯತ್ತಸ್ಮಾದೇತೇ ಪಶವಸ್ತೇಷ್ವೇತಮಪಶ್ಯತ್ತಸ್ಮಾ-ದ್ವೇವೈತೇ ಪಶವಃ ॥**

ಪ್ರಜಾಪತಿಯೂ ಸಹ ಆ ಐದು ಪಶುಗಳನ್ನೂ ನೋಡಿದನು. ಅವನು ದರ್ಶನಮಾಡಿದ್ದರಿಂದಾಗಲಿ (ಪಶ್) ಅಥವಾ ಅವುಗಳಲ್ಲಿ ಅಗ್ನಿಯನ್ನು ದರ್ಶನಮಾಡಿದ್ದರಿಂದಾಗಲಿ (ಪಶ್) ಅವುಗಳಿಗೆ ಪಶುಗಳೆಂಬ ಹೆಸರು ಪ್ರಸಿದ್ಧವಾಯಿತು. ಆಗ ಪ್ರಜಾಪತಿಯು ಈ ರೀತಿಯಾಗಿ ಆಲೋಚಿಸಿದನು

**ಸ ಐಕ್ಷತ । ಇಮೇ ವಾ ಅಗ್ನಿರಿಮಾನೇವಾತ್ಮಾನಮಭಿಸಂಸ್ಕರವೈ ಯಥಾ ವಾ ಅಗ್ನಿಃ ಸಮಿದ್ಧೋ ದೀಪ್ಯತ ಏವಮೇಷಾಂ ಚಕ್ಷುರ್ದೀಪ್ಯತೇ ಯಥಾಗ್ನೇರ್ಧೂಮ ಉದಯತ ಏವಮೇಷಾ-ಮೂಷ್ಮೋದಯತೇ ಯಥಾಗ್ನಿರಭ್ಯಾಹಿತಂ ದಹತ್ಯೇವಂ ಬಪ್ಸತಿ ಯಥಾಗ್ನೇರ್ಭಸ್ಮ ಸೀದ-ತ್ಯೇವಮೇಷಾಂ ಪುರೀಷಗ್‌ಂ ಸೀದತೀಮೇ ವಾ ಅಗ್ನಿರಿಮಾನೇವಾತ್ಮಾನಭಿಸಂಸ್ಕರವಾ ಇತಿ ತಾನ್ನಾನಾ ದೇವತಾಭ್ಯ ಆಲಿಪ್ಸತ ವೈಶ್ವಕರ್ಮಣಂ ಪುರುಷಂ ವಾರುಣಮಶ್ವಮೈಂದ್ರ-ಮೃಷಭಂ ತ್ವಾಷ್ಟ್ರಮವಿಮಾಗ್ನೇಯಮಜಂ ॥**

(ಶ. ಬ್ರಾ. ೬-೨-೧-೫)

"ಇವೇ ಅಗ್ನಿಗಳು. ಇವನ್ನು ನನ್ನ ಆತ್ಮದಲ್ಲಿ ಐಕ್ಯಮಾಡುತ್ತೇನೆ. ಪ್ರಜ್ವಲಿತನಾದ ಅಗ್ನಿಯು ಯಾವ ರೀತಿ ಪ್ರಕಾಶಿಸುತ್ತಾನೆಯೋ, ಈ ಪಶುಗಳ ಕಣ್ಣುಗಳೂ ಅದೇ ರೀತಿ ಪ್ರಕಾಸುತ್ತಿವೆ. ಅಗ್ನಿಯಿಂದ ಧೂಮವು ಹೇಗೆ ಊರ್ಧ್ವಮುಖವಾಗಿ ಹೊರಡುವುದೋ ಅದೇ ರೀತಿ ಇವುಗಳ ಮುಖಗಳಿಂದಲೂ ಧೂಮವು (ಉಸಿರು) ಊರ್ಧ್ವ ಮುಖವಾಗಿ ಹೊರಡುತ್ತಿದೆ. ಅಗ್ನಿಯೊಳಕ್ಕೆ ಅರ್ಪಿಸಿದ ಆಹುತಿಗಳನ್ನು ಅಗ್ನಿಯು ಯಾವ ರೀತಿ ಭಕ್ಷಿಸುತ್ತಾನೋ

ಅದರಂತೆ ಈ ಪಶುಗಳೂ ಸಹ ತಮ್ಮ ಬಾಯಲ್ಲಿ ಹಾಕಿದ ಸಕಲ ವಸ್ತುಗಳನ್ನೂ ನುಂಗುತ್ತವೆ. ಅಗ್ನಿಯ ಭಸ್ಮವು ಕೆಳಕ್ಕೆ ಬೀಳುವಂತೆ ಈ ಪಶುಗಳ ಪುರೀಷವೂ ಕೆಳಕ್ಕೆ ಬೀಳುತ್ತದೆ. ಆದುದರಿಂದ ಇವುಗಳೇ ಅಗ್ನಿಯ ರೂಪಾಂತರಗಳು. ಆದುದರಿಂದ ಇವನ್ನು ನನ್ನಲ್ಲೇ ಐಕ್ಯಮಾಡಿಕೊಳ್ಳುತ್ತೇನೆ" ಎಂದು ಯೋಚಿಸಿ ಅವುಗಳನ್ನು ಬೇರೆ ಬೇರೆ ದೇವತೆಗಳಿಗೆ ಆಹುತಿಗಳನ್ನಾಗಿ ಅರ್ಪಿಸಲು ಮನಸ್ಸು ಮಾಡಿದನು. ಪುರುಷನನ್ನು ವಿಶ್ವಕರ್ಮನಿಗೂ, ಅಶ್ವವನ್ನು ವರುಣನಿಗೂ, ವೃಷಭವನ್ನು ಇಂದ್ರನಿಗೂ, ಕುರಿಯನ್ನು ತ್ವಷ್ಟೃವಿಗೂ, ಆಡನ್ನು ಅಗ್ನಿಗೂ ವಿಭಾಗ ಮಾಡಿದನು. ಆಮೇಲೆ ಪುನಃ ಹೀಗೆ ಯೋಚಿಸಿದನು-

**ಸ ಐಕ್ಷತ । ನಾನಾ ವಾ ಇದಂ ದೇವತಾಭ್ಯ ಆಲಿಪ್ಸೇಽಗ್ನೇರ್ವಹಗ್ಂ ರೂಪಾಣಿ ಕಾಮಯೇ ಹಂತೈನಾನಗ್ನಿಭ್ಯಃ ಕಾಮಾಯಾಲಭಾ ಇತಿ ತಾನಗ್ನಿಭ್ಯಃ ಕಾಮಾಯಾಲಭತ ತದ್ಯದಗ್ನಿಭ್ಯ ಇತಿ ಬಹೂನಿ ಹ್ಯಗ್ನಿರೂಪಾಣ್ಯಭ್ಯಧ್ಯಾಯದಥ ಯತ್ಕಾಮಾಯೇತಿ ಕಾಮೇನ ಹ್ಯಾಲಭತೆ ತಾನಾ-ಪ್ರೀತಾನ್ಪರ್ಯಗ್ನಿಕೃತಾನುದೀಚೋ ನೀತ್ವಾ ಸಮಜ್ಞಪಯತ್ ।**

(ಶ. ಬ್ರಾ. ೬-೨-೧-೬)

"ಇವುಗಳನ್ನು ಪ್ರತ್ಯೇಕವಾಗಿ ಬೇರೆ ಬೇರೆ ದೇವತೆಗಳಿಗೆ ಅರ್ಪಿಸಲು ಮನಸ್ಸು ಮಾಡಿದೆನು. ಆದರೆ ನಾನೇ ಸ್ವತಃ ಅಗ್ನಿಯ ರೂಪವನ್ನು ಇಚ್ಛಿಸುತ್ತೇನೆ. ಆ ಇಚ್ಛೆಯು ನೆರವೇರುವಂತೆ ಇವುಗಳನ್ನು ಅಗ್ನಿಯ ರೂಪಾಂತರಗಳಿಗಾಗಿ ಆಹುತಿರೂಪದಿಂದ ಅರ್ಪಿಸುತ್ತೇನೆ" ಎಂದು ಸಂಕಲ್ಪಿಸಿ ಹಾಗೆಯೇ ಮಾಡಿದನು. ಅಗ್ನಿಯ ರೂಪಗಳು ಬಹಳ ವಾಗಿದ್ದವು. ಅವನ ಇಚ್ಛೆಗನುಗುಣವಾಗಿ ಅವುಗಳನ್ನು ಉತ್ತರದಿಕ್ಕಿಗೆ ಕರೆದುಕೊಂಡು ಹೋಗಿ ಅವುಗಳನ್ನು ಆಹುತಿಯಾಗರ್ಪಿಸಿದನು.

**ತ ಏತೇ ಸರ್ವೇ ಪಶವೋ ಯದಗ್ನಿಃ। ತಸ್ಮಾದಗ್ನೌ ಪಶವೋ ರಮಂತೇ ಪಶುಭಿರೇನ ತತ್ಪಶವೋ ರಮಂತೇ ತಸ್ಮಾದ್ಯಸ್ಯ ಪಶವೋ ಭವಂತಿ ತಸ್ಮಿನ್ನಗ್ನಿರಾಧೀಯತೇಽಗ್ನಿರ್ಹ್ಯೇಷ ಯತ್ಪಶ-ರಸ್ತತೋ ನೈ ಪ್ರಜಾಪತಿರಗ್ನಿರಭವತ್ ।**

(ಶ. ಬ್ರಾ. ೬-೨-೧-೧೨)

ಅಗ್ನಿಯೇ ಈ ಆಹುತಿಪಶುಗಳಾಗಿರುವುದರಿಂದ ಪಶುಗಳೆಲ್ಲವೂ ಅಗ್ನಿಯ ಹತ್ತಿರವಿರಲು ಸಂತೋಷಪಡುತ್ತವೆ. ಒಂದು ಪಶುವು ಇನ್ನೊಂದು ಪಶುವಿನೊಂದಿಗೆ ಕ್ರೀಡಿಸುತ್ತದೆ. ಆದುದರಿಂದಲೇ ಪಶುಸಂಪತ್ತಿನಿಂದ ಕೂಡಿದವನ ಹತ್ತಿರ ಅಗ್ನಿಯು ಅಧೀನವಾಗಿರುತ್ತದೆ. ಅಗ್ನಿಯೇ ಆ ಪಶುವಾದುದರಿಂದ ಪ್ರಜಾಪತಿಯೂ ಅಗ್ನಿರೂಪವನ್ನು ಪಡೆದನು-

**ಯಜ್ಞಮಯಜಂತ** ದೇವಾಃ—ಎಂಬುದಕ್ಕೆ ಸಾಯಣರು **ಅಗ್ನೇರೇವ ಮೂರ್ತಿಭೇದೇನ ದೇವತ್ವಂ ಚ ಪಶುತ್ವಂ ಚ ದ್ರಷ್ಟವ್ಯಂ** । ಮೂರ್ತಿಭೇದದಿಂದ ಅಗ್ನಿಗೇ ದೇವತ್ವವೂ, ಪಶುತ್ವವೂ ಇರುವುದೆಂದೂ ತಿಳಿಸಿದ್ದಾರೆ. ದೇವಾಃ ಎಂದರೆ ಯಜಮಾನರೆಂದೂ ಆಗಬಹುದು. ಅಥವಾ ದೇವತೆಗಳೆಂದಾದರೂ ಆಗಬಹುದು.

೩) ಮೂರನೆಯದಾಗಿ, **ಯಜ್ಞೇನ ಯಜ್ಞಮಯಜಂತ** ಎನ್ನುವುದಕ್ಕೆ **ಯಜ್ಞೇನ ಜ್ಞಾನಾದಿ ಯಜ್ಞೇನ ಯಜ್ಞಂ ವಿಷ್ಣುಮಯಜಂತ** । ಯಜ್ಞರೂಪನಾದ ವಿಷ್ಣುವನ್ನು ಪೂಜಿಸಿದರು ಎಂದರ್ಥಮಾಡಿದೆ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥**

(ಭಗವದ್ಗೀತಾ. ೪–೨೮)

ಎಂದು ಯಜ್ಞದಲ್ಲಿ ಅನೇಕ ಬಗೆಗಳನ್ನು ಹೇಳಿದೆ. ಅದರಲ್ಲಿ ಜ್ಞಾನಯಜ್ಞವೂ ಒಂದಾಗಿದೆ. **ಜ್ಞಾನಂ ಶಾಸ್ತ್ರಾರ್ಥ-ಪರಿಜ್ಞಾನಂ ಯಜ್ಞಃ ಯೇಷಾಂ ತೇ ಜ್ಞಾನಯಜ್ಞಾಃ** (ಶಾಂಕರಭಾಷ್ಯ) ಶಾಸ್ತ್ರಾರ್ಥಪರಿಜ್ಞಾನರೂಪವಾದ ಯಜ್ಞವುಳ್ಳವರು ಯಾರೋ ಅವರನ್ನು ಜ್ಞಾನಯಜ್ಞರೆಂದು ಕರೆದಿದೆ.

**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥**
**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥**

(ಭಗವದ್ಗೀತಾ ೪-೩೦, ೩೧)

ಎಲ್ಲಾವಿಧವಾದ ಯಜ್ಞಗಳನ್ನು ತಿಳಿದವರು ಯಜ್ಞದಿಂದಲೇ ಅವರ ದೋಷಗಳನ್ನು ನಾಶಮಾಡಿಕೊಂಡು ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುತ್ತಾರೆ. ಯಜ್ಞರಹಿತನಾದವನಿಗೆ ಇಹದಲ್ಲಿಯೇ ಉತ್ತಮವಾದ ಸ್ಥಾನ ವಿರುವುದಿಲ್ಲ. ಇನ್ನು ಬ್ರಹ್ಮಲೋಕದ ಪ್ರಾಪ್ತಿಯೆಲ್ಲಿ ಎಂದು ಯಜ್ಞದ ಮಹತ್ತ್ವವನ್ನು ಸ್ತುತಿಸಿದೆ.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥**

(ಭಗವದ್ಗೀತಾ. ೪-೩೨)

ಈ ರೀತಿ ನಾನಾವಿಧವಾದ ಯಜ್ಞಗಳು ಬ್ರಹ್ಮನ ಮುಖದಿಂದ ವಿಸ್ತೃತವಾಗಿವೆ [ಇಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂದಾದರೂ ಅರ್ಥವಾಗಬಹುದು; ಅಥವಾ ಪರಬ್ರಹ್ಮತತ್ತ್ವವನ್ನು ಪ್ರತಿಪಾದಿಸುವ ವೇದವೆಂದಾದರೂ ಅರ್ಥವಾಗಬಹುದು.] ಇವುಗಳೆಲ್ಲವೂ ಕಾಯಿಕ, ವಾಚಿಕ, ಮಾನಸಿಕಕರ್ಮೋದ್ಭವಗಳೆಂದು ತಿಳಿಯಬೇಕು. ಇವುಗಳ ಸ್ವರೂಪವನ್ನು ಅರಿತವನಿಗೆ ಮೋಕ್ಷವು ಲಭಿಸುತ್ತದೆ. ಈ ವಿಧವಾಗಿ ಯಜ್ಞದಲ್ಲಿ ಪ್ರಭೇದಗಳಿದ್ದರೂ ಸಹ,

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥**

(ಭ ಗೀ. ೪-೩೩)

ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಅತ್ಯುತ್ತಮವಾದದ್ದು. ಸಕಲ ಕರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತಿಯನ್ನು ಪಡೆಯುತ್ತವೆ ಇತ್ಯಾದಿಯಾಗಿ ಜ್ಞಾನಯಜ್ಞದ ವೈಶಿಷ್ಟ್ಯವನ್ನು ನಾನಾಕಡೆಗಳಲ್ಲಿ ಪ್ರಶಂಸಿಸಿದೆ. ಇಂತಹ ಜ್ಞಾನಾತ್ಮಕವಾದ ಯಜ್ಞದಿಂದ **ಯಜ್ಞಂ** ಅಜಯಂತ ಎನ್ನುವಾಗ, ಎರಡನೆಯ ಯಜ್ಞಶಬ್ದಕ್ಕೆ ವಿಷ್ಣುವೆಂದಾಗಲಿ ಅಥವಾ ಪ್ರಜಾಪತಿಯೆಂದಾಗಲಿ ಅರ್ಥವನ್ನು ಹೇಳಬಹುದು. **ಯಜ್ಞೋ ವಿಷ್ಣುಃ ಪ್ರಜಾಪತಿಃ** (ಮೈತ್ರೋಪನಿಷತ್ ೬. ೧೬) ಇತ್ಯಾದಿವಾಕ್ಯಗಳಿಂದ ಯಜ್ಞಕ್ಕೂ ವಿಷ್ಣುವಿಗೂ, ಮತ್ತು ಯಜ್ಞಕ್ಕೂ ಪ್ರಜಾಪತಿಗೂ

ತಾದಾತ್ಮ್ಯವನ್ನೇ ಹೇಳಿದೆ. ಆದುದರಿಂದ ಜ್ಞಾನಯಜ್ಞದಿಂದ ವಿಷ್ಣುವನ್ನು ಪೂಜಿಸಿ ಸಾಧ್ಯರು ವಿಷ್ಣುಲೋಕವನ್ನು ಹೊಂದಿದರು ಎಂದು ತಾತ್ಪರ್ಯ. ಪವಿತ್ರವಾದ ಈ ನಾಕದಲ್ಲಿ ಹಿಂದೆ ಯಜ್ಞದಿಂದ ಯಜ್ಞವನ್ನು ಆರಾಧಿಸಿದ ಸಾಧ್ಯಾದಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಪಡೆದಿರುತ್ತಾರೆಂದರ್ಥ.

**ಸಾಧ್ಯಾಃ**—ಈ ಪದವನ್ನು ರಶ್ಮಿನಾಮಗಳಲ್ಲ ಪಠಿಸಿದೆ. (ನಿ. ೨-೧೫) ಮತ್ತು ಇದೇ ಋಕ್ಕನ್ನು ವಿವರಿಸುವಾಗ ಮುಂದೆ **ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವಂ ದೇವಯುಗಮಿತ್ಯಾಖ್ಯಾನಂ ।** ನಿರುಕ್ತಕಾರರ ಮತದಂತೆ ದ್ಯುಲೋಕದ ದೇವತೆಗಳೆಂದರ್ಥ. ಅಥವಾ ದೇವತೆಗಳಲ್ಲಿ ಪ್ರಥಮರು ಎಂಬುದು ಸಾಂಪ್ರದಾಯಿಕವಾದ ಮತವೆಂದು ಯಾಸ್ಕರು ತಿಳಿಸಿದ್ದಾರೆ. (ನಿ. ೧೨-೪೧) **ಸಾಧ್ಯರ** ಸ್ವರೂಪವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ತಿಳಿಸಿದೆ. ಉದಾಹರಣೆಗೆ, ಐತರೇಯ ಬ್ರಾಹ್ಮಣದಲ್ಲಿ ಇದೇ ಭಾಗವನ್ನು ವಿವರಿಸುತ್ತಾ —

> **ಛಂದಾಂಸಿ ವೈ ಸಾಧ್ಯಾದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್॥ ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ।**
>
> (ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯರು. ಅವರು ಪೂರ್ವದಲ್ಲಿ ಅಗ್ನಿಯಿಂದ ( ಅಗ್ನಿಮಥನದಿಂದ ) ಅಗ್ನಿಯನ್ನು ಪೂಜಿಸಿದರು. ಅದರ ಫಲವಾಗಿ ಸ್ವರ್ಗಲೋಕವನ್ನು ಪಡೆದರು. ಹಾಗೆಯೇ ಆದಿತ್ಯರೂ ಅಂಗಿರಸ್ಸುಗಳೂ ಸಹ ಅಗ್ನಿಯಿಂದ ಅಗ್ನಿ ಪೂಜೆಯನ್ನು ನೆರವೇರಿಸಿ ಸ್ವರ್ಗಲೋಕವನ್ನು ಪಡೆದರು, ಎಂದಿದೆ. ಇದನ್ನೇ, **ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ ।** ಆದಿತ್ಯರೂ, ಅಂಗಿರಸ್ಸುಗಳೂ ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿದ್ದಾರೆಂದು ಸಾಯಣರು ತಿಳಿಸಿದ್ದಾರೆ. ಅಂಗಿರಸ್ಸುಗಳು ಅಗ್ನಿಯನ್ನು ಹುಡುಕಿ ತಂದುದೂ, ಅಗ್ನಿಪೂಜೆಯನ್ನು ಮಾಡಿದುದೂ ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಋಕ್ಸಂಹಿತೆಯಲ್ಲಿಯೂ ಇತರಕಡೆಯಲ್ಲಿಯೂ ಈ ಪದಕ್ಕೆ ಅಂಕಿತನಾಮವಾಗಿಯೂ, ಒಂದು ಋಷಿಸಂತತಿಯ ನಾಮಧೇಯವಾಗಿಯೂ ಮತ್ತು ದೇವತೆಗಳ ಗುಂಪಿಗೆ ಸೇರಿದ ಹೆಸರಾಗಿಯೂ ಮೂರು ವಿಧವಾದ ಅನ್ವಯವಿದೆ. ಈ ಮೂರು ಸನ್ನಿವೇಶಗಳಲ್ಲಿಯೂ ಸಹ ಅಂಗಿರಸ್ಸುಗಳಿಗೂ ಯಜ್ಞರೂಪಿಯಾದ ಅಗ್ನಿಗೂ ಸಾಕ್ಷಾತ್ಸಂಬಂಧನನ್ನು ಹೇಳಿದೆ. ಮೊದಲನೆಯದಾಗಿ,

> **ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥**
>
> (ಮುಂಡಕೋಪನಿಷತ್. ೧-೧-೩)

ಎಂಬಲ್ಲಿ ಅಂಗಿರಸ್ಸು ತತ್ತ್ವಜ್ಞಾನಿಯಾದ ಒಬ್ಬ ಋಷಿಯೆಂದೂ ಅವನು ಶೌನಕನಿಗೆ **ಯಜ್ಞಾಗ್ನಿ**ವಿದ್ಯೆಯನ್ನು ಉಪದೇಶಿಸಿದನೆಂದೂ ತಿಳಿಸಿದೆ. ಎರಡನೆಯದಾಗಿ,

ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನು ಯಜ್ಞಾಗ್ನಿಯು. ಆ ಯಜ್ಞಾಗ್ನಿಯಿಂದಲೇ ಅಂಗಿರಸ್ಸೆಂಬ ಋಷಿಯು ಉತ್ಪನ್ನನಾಗಿ ಆ ಸಂತತಿಯು ಪ್ರವರ್ಧಮಾನವಾಗಿ ಬೆಳೆಯಿತು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ ತಿಳಿಸಿದೆ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**

(ಋ. ಸಂ. ೧-೩೧-೧)

ಇತ್ಯಾದಿ ಋಕ್ಕುಗಳಲ್ಲಿ ಈ ವಿಷಯವನ್ನು ಸೂಚಿಸಿರುವಂತೆ ಐತರೇಯಬ್ರಾಹ್ಮಣದಲ್ಲೂ ಸಹ, **ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್** (ಐ. ಬ್ರಾ. ೩-೩೪) ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ. ಹೀಗೆಯೇ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಯಜ್ಞಾಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯನ್ನು,

**ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।**
**ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥**

(ಋ. ಸಂ. ೫-೧೧-೬)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲೂ ಮತ್ತು,

**ಸಮಿದ್ಧಿ ಹ್ಯೇತಮಂಗಿರಸ ಐಂಧತ ।**

(ಶ. ಬ್ರಾ. ೧-೪-೧-೨೫)

ಇತ್ಯಾತಿ ಬ್ರಾಹ್ಮಣವಾಕ್ಯಗಳಲ್ಲೂ ವಿವರಿಸಿದೆ. ಯಜ್ಞಾಗ್ನಿಯನ್ನು ಪಡೆದು, ಆ ಯಜ್ಞಾಗ್ನಿಯನ್ನು ಅಗ್ನಿಯಿಂದಲೇ ಪೂಜಿಸಿದ ಅಂಗಿರಸ್ಸುಗಳನ್ನು ಕೃತಜ್ಞತೆಯಿಂದಲೂ, ಭಕ್ತಿಯಿಂದಲೂ,

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**
**ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥**

(ಋ. ಸಂ. ೧೦-೧೪-೬)

ಎಂದು ಪ್ರಶಂಸಿಸಿದೆ. ಆ ಅಂಗಿರಸ್ಸುಗಳನ್ನೇ ಸಾಧ್ಯರೆಂದು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿದೆಯೆಂದು ಒಂದು ಮತ. ಅದನ್ನು ಐತರೇಯಬ್ರಾಹ್ಮಣದ ವಿವರಣೆಯಿಂದಲೂ, ಸಾಯಣಭಾಷ್ಯದ ವಿವರಣೆಯಿಂದಲೂ ತಿಳಿಯಬಹುದು. ಇದಲ್ಲದೆ ಸಾಧ್ಯರೆಂಬುವರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದರೆಂದೂ ಅವರನ್ನು ಬಹಳವಾಗಿ ಪ್ರಶಂಸಿಸಿದೆ.

**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥**

(ಛಾ. ಉ ೩-೧೦-೧)

ಬ್ರಹ್ಮಮುಖದ ಸಹಾಯದಿಂದ **ಸಾಧ್ಯರು** ಐದನೆಯ ಅಮೃತವನ್ನು ಸೇವಿಸುತ್ತಾರೆ. [ಐದನೆಯ ಅಮೃತವೆಂದರೆ ಉಪನಿಷತ್ತೆಂದರ್ಥ. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಆನಂದವನ್ನನುಭವಿಸುತ್ತಾರೆಂದು ತಾತ್ಪರ್ಯ,] ಸೇವಿಸುವುದೆಂದರೆ ಭಜಿಸುವುದೆಂದಾಗಲಿ, ಪಾನಮಾಡುವುದೆಂದಾಗಲಿ ಅರ್ಥವಲ್ಲ. ದೇವತೆಗಳಾದ ಸಾಧ್ಯರು ಭುಜಿಸುವುದೂ

ಇಲ್ಲ, ಪಾನಮಾಡುವುದೂ ಇಲ್ಲ ಉಪನಿಷದ್ರೂಪವಾದ ಅಮೃತವನ್ನು ಕೇವಲ ವೀಕ್ಷಿಸುತ್ತಾ ಆನಂದವನ್ನನುಭವಿಸುವರೆಂದು ತಾತ್ಪರ್ಯ.

**ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥**

(ಛಾ. ಉ. ೩-೧೦-೨, ೩)

ಈ ಸಾಧ್ಯರು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ. ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಪಡೆಯುತ್ತಾರೆ. ಈ ತತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬನಾಗುತ್ತಾನೆ. ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತಾ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾದ ರೂಪವನ್ನೇ ಪಡೆಯುತ್ತಾನೆ.

**ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾ–ಽರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥**

(ಛಾ. ಉ. ೩-೧೦-೪)

ಸಾಧ್ಯರೂಪವನ್ನು ಹೊಂದಿದ ಈ ಯಜ್ಞಕರ್ತನೂ,। ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವಾರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರಮಾರ್ಗವಾದುದೂ, ಊರ್ಧ್ವಾರ್ವಾಗ್ರೂಪವಾದುದೂ ಆದ ಸಂಚಾರವು ಇರುವವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕನ್ನೇ ಶತಪಥಬ್ರಾಹ್ಮಣದಲ್ಲಿ ಉದಹರಿಸಿ ಈ ರೀತಿ ವಿವರಿಸಿದೆ.

**ಯಾನ್ತ್ಸೈ ತಾನ್ತ್ಸಪ್ತಪುರುಷಾನ್ । ಏಕಂ ಪುರುಷಮಕುರ್ವನ್ತ್ಸ ಪ್ರಜಾಪತಿರಭವತ್ಸ ಪ್ರಜಾ ಅಸೃಜತ ಸ ಪ್ರಜಾಃ ಸೃಷ್ಟ್ವೋರ್ಧ್ವ ಉದಕ್ರಾಮತ್ಸ ಏತಂ ಲೋಕಮಗಚ್ಛದ್ಯತ್ರೈಷ ಏತತ್ತ–ಪತಿ ನೋ ಹ ತರ್ಹ್ಯನ್ಯ ಏತಸ್ಮಾದತ್ರ ಯಜ್ಞಿಯ ಆಸ ತಂ ದೇವಾ ಯಜ್ಞೇನೈವ ಯಷ್ಟು–ಮಧ್ರಿಯಂತ ।**

(ಶ. ಬ್ರಾ. ೧೦-೨-೨,೧)

'**ಸಪ್ತಪುರುಷಾನೇಕಂ ಪುರುಷಮಕುರ್ವನ್**' ಸಪ್ತಪುರುಷರನ್ನೂ ಒಂದೇ ಪುರುಷನನ್ನಾಗಿ ಪರಿವರ್ತಿಸಿದರು ಎಂದು ಹಿಂದೆ ತಿಳಿಸಿದೆ. (ಶ. ಬ್ರಾ. ೬-೧-೧-೩) ಅದ್ವಿತೀಯನಾದ ಈ ಪುರುಷನೇ ಪ್ರಜಾಪತಿಯು. ಈ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋದನು. ಆಗ ಯಜ್ಞಕ್ಕೆ ಬೇರೆ ಪಶುಗಳಿಲ್ಲದಿದ್ದರಿಂದ ದೇವತೆಗಳು ಈ ಪ್ರಜಾಪತಿಯನ್ನೇ ಯಜ್ಞಪಶುವನ್ನಾಗಿ ಮಾಡಿದರು. ಆದುದರಿಂದಲೇ–

**ತಸ್ಮಾದೇತದೃಷಿಣಾಭ್ಯನೂಕ್ತಂ । ಯಜ್ಞೇನ ಯಜ್ಞಮಯಜಂತ ದೇವಾ ಇತಿ ಯಜ್ಞೇನ ಹಿ ತಂ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ನಿತಿ ತೇ ಹಿ ಧರ್ಮಾಃ**

**ಪ್ರಥಮೋಽಕ್ರಿಯಂತ ತೇ ಹ ನಾಕಂ ಮಹಿಮಾನಃ ಸಚಂತೇತಿ ಸ್ವರ್ಗೋ ವೈ ಲೋಕೋ ನಾಕೋ ದೇವಾ ಮಹಿಮಾನಸ್ತೇ ದೇವಾಃ ಲೋಕಗ್ಂ ಸಚಂತ ಯೋ ತಂ ಯಜ್ಞಮಯಜನ್ನಿತ್ಯೇತತ್ ।**

(ಶ. ಬ್ರಾ. ೧೦-೨-೨-೨)

ಯಜ್ಞದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನರ್ಪಿಸಿದರು ; ಈ ನಿಯಮವೇ ಪ್ರಥಮತಃ ಸ್ಥಾಪಿತವಾದುದರಿಂದ ಇದನ್ನೇ **ತಾನಿ ಧರ್ಮಾಣಿ ಪ್ರಥಮಾನ್ಯಾಸನ್** ಎಂದು ಋಷಿಗಳು ಹೇಳಿದ್ದಾರೆ. ಈ ನಿಯಮಗಳು ಅಂತರಿಕ್ಷಕ್ಕೆ ವ್ಯಾಪ್ತವಾದವು. ಆದುದರಿಂದಲೇ ಈ ಯಜ್ಞದಿಂದ ಪ್ರಜಾಪತಿರೂಪವಾದ ಯಜ್ಞವನ್ನು ನೆರವೇರಿಸುವವರು ಸ್ವರ್ಗಕ್ಕೆ ಸೇರುವರು ಎಂದು ತಿಳಿಸಿದೆ. ಅದೇ ಪ್ರಕಾರವಾಗಿ ಯಜ್ಞಕರ್ತರಾದ ದೇವತೆಗಳೆಲ್ಲರೂ ಸ್ವರ್ಗವಾಸಿಗಳಾಗಿದ್ದಾರೆ.

**ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾ ಇತಿ । ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಪ್ಯೇತರ್ಹಿ ಸಾಧಯಂತಿ ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ ಪಶ್ಚಾಹ್ಯೇವೇದಮನ್ಯದ್ಯಜ್ಞಿಯಮಾಸ ಯೆತ್ಕಿಂಚಾಮೃತಂ ॥**

(ಶ. ಬ್ರಾ. ೧೦-೨-೨-೩)

ಸಾಧ್ಯರು ಪೂರ್ವದಿಂದಲೇ ಈ ಸ್ವರ್ಗನಿವಾಸಿಗಳಾಗಿದ್ದಾರೆ. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯು ದೇಹರೂಪಿಗಳಾಗಲು ಪ್ರಾರಂಭದಲ್ಲಿ ಸಪ್ತಪ್ರಾಣಗಳೇ ಅವನನ್ನು ಸಾಧ್ಯನನ್ನಾಗಿ ಮಾಡಿದವು. ಆದುದರಿಂದಲೇ ಇದೇ ವಿಷಯವನ್ನು ಋಕ್ಸಂಹಿತಾವಾಕ್ಯದಲ್ಲಿಯೂ ಈರೀತಿ ವರ್ಣಿಸಿದೆ.

**ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನಾ ।**
**ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥**

(ಋ. ಸಂ. ೧೦-೧೪೯-೩)

ಅನಂತರವೇ ಪೂಜ್ಯವಾದ ಈ ದೇವತೆಯು ಅಮರ್ತ್ಯವಾದ ಲೋಕದೊಡನೆ ಉತ್ಪನ್ನವಾಯಿತು. ಈ ಪರವಸ್ತುವನ್ನೇ ಸುಪರ್ಣನಾದ ಗರುತ್ಮಂತನೆಂದು ಕರೆಯುತ್ತಾರೆ. ಈ ಮೂಲವಸ್ತುವಿನ ಸಹಾಯದಿಂದಲೇ ಉಳಿದ ಅಮರ್ತ್ಯವಾದ ವಸ್ತುಗಳೆಲ್ಲವೂ ಪೂಜಾರ್ಹವಾದವು, ಎಂಬುದಾಗಿ ಸಾಧ್ಯಶಬ್ದಕ್ಕೂ, ಯಜ್ಞಶಬ್ದಕ್ಕೂ ಅರ್ಥವನ್ನು ಹೇಳಿ ಅವೆರಡರ ಸಂಬಂಧವನ್ನು ತಿಳಿಸಿದೆ. ಇದೇ ಮಂತ್ರವು ಬೇರೆ ಸೂಕ್ತದಲ್ಲಿ ಪಠಿತವಾದಾಗ ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ. (ಋ. ಸಂ. ೧೦-೯೦-೧೬)

**ದೇವಾಃ—ಪ್ರಜಾಪತಿಪ್ರಾಣರೂಪಾಃ ; ಯಜ್ಞೇನ ಯಥೋಕ್ತೇನ ಮಾನಸೇನ ಸಂಕಲ್ಪೇನ ; ಯಜ್ಞಂ—ಯಥೋಕ್ತಯಜ್ಞಸ್ವರೂಪಂ ಪ್ರಜಾಪ್ರತಿಂ ; ಅಯಜಂತ....ಪೂಜಿತವಂತಃ ।** ಪ್ರಜಾಪತಿಯ ಪ್ರಾಣರೂಪವಾದ ದೇವತೆಗಳನ್ನು ತಮ್ಮ ಮಾನಸಸಂಕಲ್ಪದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನು ನೆರವೇರಿಸಿದರು. ಆ ಪೂಜಾವಿಶೇಷವು (ಯಜ್ಞವು) ಜಗತ್ತಿನ ಧಾರಣೆಗೆ ಸಹಾಯಕವಾಯಿತು.

**ಯತ್ರ— ಯಸ್ಮಿನ್ವಿರಾಟ್ಪ್ರಾಪ್ತಿರೂಪೇ ನಾಕೇ ; ಪೂರ್ವೇ ಸಾಧ್ಯಾ ಪುರಾತನಾ ವಿರಾಡುಪಾಸಾಧಕಾಃ ಸಂತಿ । ತೇ ವಿರಾಟ್ಪ್ರಾಪ್ತಿರೂಪಂ ಸ್ವರ್ಗಂ ಪ್ರಾಪ್ನುವಂತಿ ।** ವಿರಾಟ್ಪುರುಷನನ್ನು ಆರಾಧಿಸತಕ್ಕ ಈ ಪ್ರಜಾಪತಿಪ್ರಾಣರೂಪರಾದ ಸಾಧ್ಯರೆಲ್ಲರೂ, ವಿರಾಟ್ಪುರುಷನ ಪ್ರಾಪ್ತಿಗೆ ಯೋಗ್ಯವಾದ ಸ್ವರ್ಗವನ್ನು ಪಡೆಯುತ್ತಾರೆ ಎಂದು ಪ್ರಕೃತಸೂಕ್ತದಲ್ಲಿರುವ ಈ ಋಕ್ಕಿಗೆ ಅರ್ಥಮಾಡಿದೆ. ಐತರೇಯ ಬ್ರಾಹ್ಮಣದಲ್ಲಿ ಈ ಯಜ್ಞ ಸೇವನೆಯನ್ನು ಸ್ತುತಿಸುತ್ತಾ,

**ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ॥**

(ಐ. ಬ್ರಾ. ೧-೧೬)

**ಯಜ್ಞೇನ ಯಜ್ಞಮಯಜಂತ** ಎಂಬ ಮಂತ್ರದಲ್ಲಿ ವರ್ಣಿತವಾಗಿರುವ ನಿಯಮದಂತೆಯೂ ಸಾಧ್ಯಾದಿ ದೇವತೆಗಳು ಅನುಸರಿಸಿದಂತೆಯೂ ಯಜ್ಞಾಗ್ನಿಯಿಂದ ಯಜ್ಞವನ್ನು ಸೇವಿಸುವವರು ಸ್ವರ್ಗಲೋಕವನ್ನು ಪಡೆಯುತ್ತಾರೆ. ಈ ತತ್ತ್ವವನ್ನರಿತು ಯಜ್ಞವನ್ನು ನಿರ್ವಹಿಸುವವನ ಆಹುತಿಗಳು ಸ್ವರ್ಗವಾಸಿಗಳಾದ ದೇವತೆಗಳನ್ನು ಸೇರುತ್ತವೆ. ಅವನು ಅಬ್ರಾಹ್ಮಣನಾದರೂ ಸರಿ ಅಥವಾ ಇತರ ವಿಧದಲ್ಲಿ ದೂಷ್ಯನಾಗಿದ್ದರೂ ಸರಿ ಅವನಿಗೆ ಸ್ವರ್ಗ ಲಾಭವು ಸಿದ್ಧವು. ಅವನು ಪಾಪರಹಿತನಾಗುತ್ತಾನೆ, ಎಂದು ತಿಳಿಸಿದೆ. ಈ ರೀತಿ ಪ್ರಕೃತವಾದ ಋಕ್ಕಿಗೆ ಅಧಿದೈವತಪಕ್ಷದಲ್ಲಿಯೂ, ಅಧ್ಯಾತ್ಮಪಕ್ಷದಲ್ಲಿಯೂ ಸಹ ಶಥಪಥಾದಿಬ್ರಾಹ್ಮಣಗಳಲ್ಲಿಯೂ, ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿಯೂ ತಾತ್ಪರ್ಯವನ್ನು ವಿವರಿಸಿದೆ.

## ತೊಂಭತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಷ್ಟಮೇಽನುವಾಕೇ ನವ ಸೂಕ್ತಾನಿ । ಸಂ ಜಾಗೃವದ್ಭಿರಿತಿ ಪಂಚದಶರ್ಚಂ ಪ್ರಥಮಂ ಸೂಕ್ತಂ ವೀತಹವ್ಯಪುತ್ರಸ್ಯಾರುಣನಾಮ್ನ ಆರ್ಷಮಗ್ನಿದೈವತ್ಯಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ಸಂ ಜಾಗೃವದ್ಭಿಃ ಪಂಚೋನಾರುಣೋ ವೈತಹವ್ಯ ಆಗ್ನೇಯಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸೀದಂ ಸೂಕ್ತಂ । ಸೂತ್ರಿತಂ ಚ । ಸಂ ಜಾಗೃವದ್ಭಿಶ್ಚಿತ್ರ ಇಚ್ಛಿಶೋರ್ವಸುಂ ನ ಚಿತ್ರಮಹಸಮಿತಿ ಜಾಗತಂ । ಆ. ೪-೧೩ । ಇತಿ ॥**

**ಅನುವಾದವು**— ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ಎಂಟನೆಯ ಅನುವಾಕದಲ್ಲಿ ಒಂಭತ್ತು ಸೂಕ್ತಗಳಿರುವವು. ಅವುಗಳಲ್ಲಿ **ಸಂ ಜಾಗೃವದ್ಭಿಃ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವೀತಹವ್ಯಋಷಿಯ ಪುತ್ರನಾದ ಅರುಣನೆಂಬುವನು ಋಷಿಯು ; ಅಗ್ನಿಯು ದೇವತೆಯು ; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು- ಅನುಕ್ರಮಣಿಕೆಯಲ್ಲಿ— **ಸಂ ಜಾಗೃವದ್ಭಿಃ ಪಂಚೋನಾರುಣೋ ವೈತಹವ್ಯ ಆಗ್ನೇಯಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನದಲ್ಲಿ ಜಗತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗ

ವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಸಂ ಜಾಗೃವದ್ಭಿಶ್ಚಿತ್ರ ಇಚ್ಛಿಶೋರ್ವರ್ಗಸಂ ನ ಚಿತ್ರಮುಹಸಮಿತಿ ಜಾಗತಂ** ಎಂಬ ಸೂತ್ರದಿಂದ (ಆ. ೪.೧೩) ವಿವೃತವಾಗಿರುವುದು.

## ಸೂಕ್ತ—೯೧

ಮಂಡಲ— ೧೦ । ಅನುವಾಕ—೮ । ಸೂಕ್ತ—೯೧ ॥
ಅಷ್ಟಕ—೮ । ಅಧ್ಯಾಯ—೪ । ವರ್ಗ—೨೦, ೨೧, ೨೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ಅರುಣೋ ವೈತಹವ್ಯಃ ॥
ದೇವತಾ—ಅಗ್ನಿಃ ।
ಛಂದಃ—೧-೧೪. ಜಗತೀ । ೧೫. । ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಸಂ ಜಾಗೃವದ್ಭಿರ್ಜರಮಾಣ ಇಧ್ಯತೇ ದಮೇ ದಮೂನಾ ಇಷಯನ್ನಿಳಸ್ಪದೇ।**
**ವಿಶ್ವಸ್ಯ ಹೋತಾ ಹವಿಷೋ ವರೇಣ್ಯೋ ವಿಭುರ್ವಿಭಾವಾ ಸುಷಖಾ ಸಖೀಯತೇ ೧ ॥**

॥ ಪದಪಾಠಃ ॥

**ಸಂ । ಜಾಗೃವತ್ಽಭಿಃ । ಜರಮಾಣಃ । ಇಧ್ಯತೇ । ದಮೇ । ದಮೂನಾಃ । ಇಷಯನ್ । ಇಳಃ । ಪದೇ ।**
**ವಿಶ್ವಸ್ಯ । ಹೋತಾ । ಹವಿಷಃ । ವರೇಣ್ಯಃ । ವಿಽಭುಃ । ವಿಭಾಽವಾ । ಸುಽಸಖಾ । ಸಖಿಽಯತೇ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಜಾಗೃವದ್ಭಿರ್ಜಾಗರಣಶೀಲೈಃ ಸ್ತೋತೃಭಿರ್ಜರಮಾಣಃ ಸ್ತೂಯಮಾನೋ ದಮೂನಾ ದಮಮನಾ ದಾನಮನಾ ದಾಂತಮನಾ ವೇಳ ಇಳಯಾಸ್ಪದೇ ಸ್ಥಾನ ಉತ್ತರವೇದ್ಯಾಮಿಷಯನ್ನನ್ನಮಿಚ್ಛನ್ ವಿಶ್ವಸ್ಯ ಸರ್ವಸ್ಯ ಹವಿಷೋ ಹೋತಾ ವರೇಣ್ಯೋ ವರಣೀಯೋ ವಿಭುರ್ವ್ಯಾಪ್ತೋ ವಿಭಾವಾ ದೀಪ್ತಿಮಾನ್ ಸುಷಖಾ ಶೋಭನಸಖಾ ಭವಾನ್ ಸಖೀಯತೇ ಸಖಿತ್ವಮಿಚ್ಛತೇ ಯಜಮಾನಾಯ ಸಮಿಧ್ಯತೇ । ಸಮ್ಯಗ್ದೀಪ್ಯತೇ ॥**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ), **ಜಾಗೃವದ್ಭಿಃ**—ಎಚ್ಚರವಾಗಿರುವ ಸ್ತುತಿಕರ್ತರಿಂದ । **ಜರಮಾಣಃ**—ಸ್ತುತಿಸಲ್ಪಡುವವನೂ । **ದಮೂನಾಃ**—ಉದಾರವಾದ ದಾನಸ್ವಭಾವದವನೂ । **ಇಳಃ**—ಪೃಥ್ವಿಯ । **ಪದೇ**—ಉತ್ತರ ವೇದಿ

ರೂಪದ ಯಜ್ಞಸ್ಥಾನದಲ್ಲಿ । **ಇಷಯನ್**—ಅನ್ನವನ್ನು ಇಚ್ಛಿಸುತ್ತ । **ವಿಶ್ವಸ್ಯ ಹವಿಷಃ**—ಸಕಲ ಹವಿಸ್ಸನ್ನೂ । **ಹೋತಾ**—ಅರ್ಪಿಸುವವನೂ । **ವರೇಣ್ಯಃ**—ಪೂಜ್ಯನೂ । **ವಿಭುಃ**—ಸರ್ವವ್ಯಾಪಿಯೂ । **ವಿಭಾವಾ**—ಕಾಂತಿಯುತನೂ । **ಸುಷಖಾ**—ಉತ್ತಮವಾದ ಸ್ನೇಹಿತನೂ ಆದ ನೀನು । **ದಮೇ**—ಯಜ್ಞಗೃಹದಲ್ಲಿ । **ಸಖೀಯತೇ**—ನಿನ್ನನ್ನು ಮಿತ್ರನನ್ನಾಗಿ ಹೊಂದಲು ಇಚ್ಛೆಯುಳ್ಳ ಯಜಮಾನನಿಗಾಗಿ । **ಸಮಿಧ್ಯತೇ**—ಪ್ರಜ್ವಲಿತನಾಗುತ್ತೀಯೆ.

। ಭಾವಾರ್ಥ ।

ಎಲೈ ಅಗ್ನಿಯೇ, ಎಚ್ಚರವಾಗಿರುವ ಸ್ತುತಿಕರ್ತರಿಂದ ಸ್ತುತಿಸಲ್ಪಡುವವನೂ, ಉದಾರವಾದ ದಾನಸ್ವಭಾವದವನೂ, ಪೃಥ್ವಿಯ ಉತ್ತರವೇದಿರೂಪದ ಯಜ್ಞಸ್ಥಾನದಲ್ಲಿ ಅನ್ನವನ್ನು ಇಚ್ಛಿಸುತ್ತ ಸಕಲ ಹವಿಸ್ಸನ್ನೂ ಅರ್ಪಿಸುವವನೂ, ಪೂಜ್ಯನೂ, ಸರ್ವವ್ಯಾಪಿಯೂ, ಕಾಂತಿಯುತನೂ, ಉತ್ತಮವಾದ ಸಖಿಭೂತನೂ ಆದ ನೀನು ಯಜ್ಞಗೃಹದಲ್ಲಿ ನಿನ್ನನ್ನು ಮಿತ್ರನನ್ನಾಗಿ ಹೊಂದಲು ಇಚ್ಛೆಯುಳ್ಳ ಯಜಮಾನನಿಗಾಗಿ ಪ್ರಜ್ವಲಿತನಾಗುತ್ತೀಯೆ.

English Translation

Damunas, being glorified by his diligent (worshipers), desiring food upon the footmark of Ila, is kindled in the chamber (of sacrifice), the offerer of every oblation, the object of veneration, the lord, the resplendent, to him who desires his friendship.

। ಸಂಹಿತಾಪಾಠಃ ।

ಸ ದರ್ಶತಶ್ರೀರತಿಥಿರ್ಗೃಹೇಗೃಹೇ ವನೇವನೇ ಶಿಶ್ರಿಯೇ ತಕ್ವವೀರಿವ ।
ಜನಂಜನಂ ಜನ್ಯೋ ನಾತಿ ಮನ್ಯತೇ ವಿಶ ಆ ಕ್ಷೇತಿ ವಿಶ್ಯೋ೩ ವಿಶಂವಿಶಂ ॥

॥ ಪದಪಾಠಃ ॥

ಸಃ । ದರ್ಶತऽಶ್ರೀಃ । ಅತಿಥಿಃ । ಗೃಹೇऽಗೃಹೇ । ವನೇऽವನೇ । ಶಿಶ್ರಿಯೇ । ತಕ್ವವೀಃऽಇವ ।
ಜನಂऽಜನಂ । ಜನ್ಯಃ । ನ । ಅತಿ । ಮನ್ಯತೇ । ವಿಶಃ । ಆ । ಕ್ಷೇತಿ । ವಿಶ್ಯಃ । ವಿಶಂऽವಿಶಂ ॥ ೨ ॥

। ಸಾಯಣಭಾಷ್ಯಂ ।

ದರ್ಶತಶ್ರೀರ್ದರ್ಶನೀಯವಿಭೂತಿರತಿಥಿರತಿಥಿಭೂತಃ ಸೋऽಗ್ನಿರ್ಗೃಹೇಗೃಹೇ ಯಜಮಾನಾನಾಂ ಗೃಹೇಷು ವನೇವನೇ ಸರ್ವೇಷು ವನೇಷು ಚ ಶಿಶ್ರಿಯೇ । ಶ್ರಯತಿ । ಕಿಂಚ ಜನ್ಯೋ ಜನಹಿತಃ ಸೋऽಗ್ನಿರ್ಜನಂಜನಂ ಸರ್ವಂ ಜನಂ ತಕ್ವವೀರಿವ ಗಚ್ಛನ್ನಿವ ನಾತಿ ಮನ್ಯತೇ । ನ ವಿಸೃಜ್ಯ

ಗಚ್ಛತೀತ್ಯರ್ಥಃ । ತದೇವ ದರ್ಶಯತಿ । ವಿಶ್ವ್ಯೋ ವಿಡ್ಭ್ಯೋ ಹಿತಃ ಸೋಽಗ್ನಿರ್ವಿಶೋ ಮನುಷ್ಯಾನಾ ಕ್ಷೇತಿ । ಕಿಂಚ ವಿಶಂವಿಶಂ ಸರ್ವಾ ವಿಶಃ ಪ್ರಜಾ ಅಧಿತಿಷ್ಠತೀತಿ ಶೇಷಃ ॥

। ಪ್ರತಿಪದಾರ್ಥ ।

**ದರ್ಶತಶ್ರೀಃ**—ಆಕರ್ಷಕವಾದ ಪ್ರಭಾವವುಳ್ಳವನೂ । **ಅತಿಥಿಃ**—ಅತಿಥಿರೂಪನೂ ಆದ । **ಸಃ**—ಅಗ್ನಿಯು । **ಗೃಹೇಗೃಹೇ**—ಸಕಲ ಯಜಮಾನರ ಗೃಹದಲ್ಲಿಯೂ । **ವನೇವನೇ**—ಸಕಲ ವನಗಳಲ್ಲಿಯೂ । **ಶಿಶ್ರಿಯೇ**—ಆಶ್ರಯವನ್ನು ಹೊಂದುತ್ತಾನೆ । **ಜನ್ಯಃ**—ಮಾನವರಿಗೆ ಹಿತಕಾರಿಯಾದ ಅಗ್ನಿಯು । **ತಕ್ವವೀಃ ಇವ**—ಜನರಲ್ಲಿ ಹೋಗುವಂತೆ । **ಜನಂಜನಂ**—ಯಾವ ಮಾನವನನ್ನೂ । **ನಾತಿ ಮನ್ಯತೇ**—ತಿರಸ್ಕರಿಸಿ ಮುಂದೆ ಹೋಗುವುದಿಲ್ಲ । **ವಿಶ್ಯಃ**—ಪ್ರಜೆಗಳಿಗೆ ಹಿತಕಾರಿಯಾದ ಅಗ್ನಿಯು । **ವಿಶಃ ಆ ಕ್ಷೇತಿ**—ಸಕಲ ಮಾನವರಲ್ಲೂ ಆಶ್ರಯವನ್ನು ಹೊಂದಿ ವಾಸ ಮಾಡುತ್ತಾನೆ । **ವಿಶಂ ವಿಶಂ**—ಸಕಲ ಮಾನವರಿಗೂ ಪ್ರಭುವಾಗಿರುತ್ತಾನೆ.

॥ ಭಾವಾರ್ಥ ॥

ಆಕರ್ಷಕವಾದ ಪ್ರಭಾವವುಳ್ಳವನೂ, ಅತಿಥಿರೂಪನೂ ಆದ ಅಗ್ನಿಯು ಸಕಲ ಯಜಮಾನರ ಗೃಹದಲ್ಲಿಯೂ, ಸಕಲ ವನಗಳಲ್ಲಿಯೂ ಆಶ್ರಯವನ್ನು ಹೊಂದುತ್ತಾನೆ. ಮಾನವರಿಗೆ ಹಿತಕಾರಿಯಾದ ಅಗ್ನಿಯು ಮಾನವರಲ್ಲಿಗೇ ಹೋಗುವಂತೆ ಯಾವ ಮಾನವನನ್ನೂ ತಿರಸ್ಕರಿಸಿ ಮುಂದೆ ಹೋಗುವುದಿಲ್ಲ. ಪ್ರಜೆಗಳಿಗೆ ಹಿತಕಾರಿಯಾದ ಅಗ್ನಿಯು ಸಕಲ ಮಾನವರಲ್ಲಿಯೂ ಆಶ್ರಯವನ್ನು ಹೊಂದಿ ವಾಸಮಾಡುತ್ತಾನೆ. ಸಕಲ ಮಾನವರಿಗೂ ಪ್ರಭುವಾಗಿರುತ್ತಾನೆ.

English Translation

Of manifest glory, he resorts as a guest to every house (of his worshippers) to every forest; friendly to man, like one repairing to all men, he disregards them not; kind to all, he dwells amongst all men, (he presides over every one).

॥ ಸಂಹಿತಾಪಾಠಃ ॥

ಸುದಕ್ಷೋ ದಕ್ಷೈಃ ಕ್ರತುನಾಸಿ ಸುಕ್ರತುರಗ್ನೇ ಕವಿಃ ಕಾವ್ಯೇನಾಸಿ ವಿಶ್ವವಿತ್ ।
ವಸುರ್ವಸೂನಾಂ ಕ್ಷಯಸಿ ತ್ವಮೇಕ ಇದ್ದ್ಯಾವಾ ಚ ಯಾನಿ ಪೃಥಿವೀ ಚ ಪುಷ್ಯತಃ ॥ ೩ ॥

। ಪದಪಾಠಃ ॥

ಸುಽದಕ್ಷಃ । ದಕ್ಷೈಃ । ಕ್ರತುನಾ । ಅಸಿ । ಸುಽಕ್ರತುಃ । ಅಗ್ನೇ । ಕವಿಃ । ಕಾವ್ಯೇನ । ಅಸಿ । ವಿಶ್ವಽವಿತ್ ।

ವಸುಃ । ವಸೂನಾಂ । ಕ್ಷಯಸಿ । ತ್ವಂ । ಏಕಃ । ಇತ್ । ದ್ಯಾವಾ । ಚ । ಯಾನಿ । ಪೃಥಿವೀ ಇತಿ ।
ಚ । ಪುಷ್ಯತಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ದಕ್ಷೈರ್ಬಲೈಃ ಸುದಕ್ಷಃ ಸುಬಲೋಽಸಿ । ಭವಸಿ । ಕಿಂಚ ಕ್ರತುನಾ ಕರ್ಮಣಾ ಸುಕ್ರತುಃ ಶೋಭನಕರ್ಮಾಸಿ । ಕಿಂಚ ಕಾವ್ಯೇನ ಮೇಧಾವಿಕರ್ಮಣಾ ಕವಿರ್ಮೇಧಾವ್ಯಸಿ । ಕಿಂಚ ವಿಶ್ವವಿತ್ಸರ್ವಜ್ಞೋಽಸಿ । ಕಿಂಚ ವಸೂನಾಂ ಧನಾನಾಂ ವಸುರ್ವಾಸಯಿತಾಸಿ । ಕಿಂಚ ಹೇ ಅಗ್ನೇ ತ್ವಮೇಕ ಇದೇಕ ಏವ ಕ್ಷಯಸಿ । ನಿವಸಸಿ । ಕಿಂಚ ದ್ಯಾವಾ ಚ ಪೃಥಿವೀ ಚ ದ್ಯಾವಾಭೂಮೀ ಯಾನಿ ವಸೂನಿ ಪುಷ್ಯತಃ ಸಂವರ್ಧಯತಃ ತೇಷಾಂ ದಿವ್ಯಾನಾಂ ಪಾರ್ಥಿವಾನಾಂ ಚ ಧನಾನಾಮೀಶಿಷ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ದಕ್ಷೈಃ**—ಬಲಶಾಲಿಗಳೊಂದಿಗೆ । **ಸುದಕ್ಷಃ**—ಉತ್ತಮವಾದ ಬಲಶಾಲಿಯಾಗಿ । **ಅಸಿ**—ಆಗಿದ್ದೀಯೆ । **ಕ್ರತುನಾ**—ನಿನ್ನ ಕರ್ಮದಿಂದ । **ಸುಕ್ರತುಃ**—ಉತ್ತಮವಾದ ಕರ್ಮವುಳ್ಳವನಾಗಿದ್ದೀಯೆ । **ಕಾವ್ಯೇನ**—ನಿನ್ನ ಉತ್ತಮವಾದ ಪ್ರಜ್ಞಾಕರ್ಮದಿಂದ । **ಕವಿಃ**—ಕಾವ್ಯಕರ್ಮವುಳ್ಳ ಮೇಧಾವಿಯಾಗಿ । **ಅಸಿ**—ಇದ್ದೀಯೆ । **ವಿಶ್ವವಿತ್**—ನೀನು ಸರ್ವಜ್ಞನು । **ವಸೂನಾಂ**—ಸಕಲ ಧನಗಳಿಗೂ । **ವಸುಃ**—ವಾಸಕನಾಗಿದ್ದಿಯೆ । **ತ್ವಂ**—ನೀನು । **ಏಕ ಇತ್**—ಅದ್ವಿತೀಯನಾಗಿ । **ಕ್ಷಯಸಿ**—ವಾಸಮಾಡುತ್ತೀಯೆ । **ದ್ಯಾವಾ ಚ**—ದ್ಯುಲೋಕಕ್ಕೆ ಸಂಬಂಧಿಸಿದುದೂ । **ಪೃಥಿವೀ ಚ**—ಪೃಥ್ವಿಗೆ ಸಂಬಂಧಿಸಿದುದೂ ಆದ । **ಯಾನಿ**—ಯಾವ ಧನಗಳನ್ನು । **ಪುಷ್ಯತಃ**—ನೀನು ಪೋಷಿಸುವೆಯೋ, ಅವೆಲ್ಲಕ್ಕೂ ನೀನು ಒಡೆಯನಾಗಿರುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಬಲಶಾಲಿಗಳಲ್ಲಿ ಉತ್ತಮವಾದ ಬಲಶಾಲಿಯಾಗಿರುತ್ತೀಯೆ. ಕರ್ಮವಂತರಲ್ಲಿ ಉತ್ತಮವಾದ ಕರ್ಮವುಳ್ಳವನಾಗಿದ್ದೀಯೆ. ಪ್ರಾಜ್ಞನಾದುದರಿಂದ ಉತ್ತಮವಾದ ಕವಿಕರ್ಮವುಳ್ಳವನು. ನೀನು ಸರ್ವಜ್ಞನು. ಸಕಲ ಧನಗಳಿಗೂ ವಾಸಕನು. (ಆಶ್ರಯನು) ನೀನು ಅದ್ವಿತೀಯನು. ದ್ಯಾವಾಪೃಥಿವಿಗಳಗೆಲ್ಲ ಸಂಬಂಧಿಸಿದ ಸಕಲ ಧನಗಳಿಗೂ ನೀನು ಪೋಷಕನು ಮತ್ತು ಪ್ರಭುವು.

## English Translation

You, Agni, are vigorous with vigour, you are active with acts (of piety) you are wise with wisdom, knowing all things. You are the dispenser of wealth, you abide alone, you are lord of the treasures of heaven and earth.

॥ ಸಂಹಿತಾಪಾಠಃ ॥

ಪ್ರಜಾನನ್ನಗ್ನೇ ತವ ಯೋನಿಮೃತ್ವಿಯಮಿಳಾಯಾಸ್ಪದೇ ಘೃತವಂತಮಾಸದಃ ।
ಆ ತೇ ಚಿಕಿತ್ರ ಉಷಸಾಮಿವೇತಯೋಽರೇಪಸಃ ಸೂರ್ಯಸ್ಯೇವ ರಶ್ಮಯಃ ॥

॥ ಪದಪಾಠಃ ॥

ಪ್ರಽಜಾನನ್ । ಅಗ್ನೇ । ತವ । ಯೋನಿಂ । ಋತ್ವಿಯಂ । ಇಳಾಯಾಃ । ಪದೇ । ಘೃತಽವಂತಂ ।
ಆ । ಅಸದಃ ।

ಆ । ತೇ । ಚಿಕಿತ್ರೇ । ಉಷಸಾಂಽಇವ । ಏತಯಃ । ಅರೇಪಸಃ । ಸೂರ್ಯಸ್ಯಽಇವ । ರಶ್ಮಯಃ ॥೪॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತವರ್ತ್ವಿಯಮೃತೌ ಭವಂ ಘೃತವಂತಂ ಘೃತೇನ ಸಹಿತಂ ಯೋನಿಂ ನಿವಾಸಸ್ಥಾನಮಿಳಾಯಾಸ್ಪದ ಉತ್ತರವೇದ್ಯಾಂ ಪ್ರಜಾನಂಸ್ತ್ವಮಾಸದಃ । ಆಸೀದಸಿ । ಕಿಂಚ ತೇ ತವ ರಶ್ಮಯ ಉಷಸಾಮಿವ ಯಥೋಷಸಾಮೇತಯಃ ಪ್ರಜ್ಞಾಃ ಪ್ರಕಾಶಲಕ್ಷಣಾ ಆಗತಯೋ ವಾ । ಸೂರ್ಯಸ್ಯೇವ............... ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ। **ಇಳಾಯಾಃ**—ಪೃಥ್ವಿಯಮೇಲೆ ಇರುವ । **ಪದೇ**—ಉತ್ತರವೇದಿ ಸ್ಥಾನದಲ್ಲಿ। **ಋತ್ವಿಯಂ**—ಯಜ್ಞಯೋಗ್ಯವಾದುದೂ । **ಘೃತವಂತಂ**—ಆಜ್ಯದಿಂದ ತೊಯ್ಯಲ್ಪಟ್ಟುದೂ ಆದ । **ತವ ಯೋನಿಂ**—ನಿನ್ನ ನಿವಾಸಸ್ಥಾನವನ್ನು । **ಪ್ರಜಾನನ್**—ಅರಿತವನಾಗಿ । **ಆಸದಃ**—ಸ್ಥಾಪಿತನಾಗಿದ್ದೀಯೆ । **ತೇ**—ನಿನ್ನ । **ರಶ್ಮಯಃ**—ಜ್ವಾಲಾಕಿರಣಗಳು । **ಉಷಸಾಂ**—ಉಷಸ್ಸುಗಳ । **ಏತಯ ಇವ**—ರಶ್ಮಿಗಳಂತೆಯೂ । **ಸೂರ್ಯಸ್ಯ**—ಸೂರ್ಯನ । **ಅರೇಪಸಃ ಇವ**—ದೋಷರಹಿತವಾದ ರಶ್ಮಿಗಳಂತೆಯೂ । **ಆ ಚಿಕಿತ್ರೇ**—ಎಲ್ಲೆಲ್ಲಿಯೂ ಪ್ರಕಾಶಿತವಾಗುತ್ತದೆ.

॥ ಭವಾರ್ಥ ॥

ಎಲೈ ಅಗ್ನಿಯೇ, ಪೃಥ್ವಿಯ ಮೇಲೆ ಉತ್ತರವೇದಿ ಸ್ಥಾನದಲ್ಲಿ ಯಜ್ಞಯೋಗ್ಯವಾದುದೂ, ಆಜ್ಯದಿಂದ ತೊಯ್ಯಲ್ಪಟ್ಟುದೂ ಆದ ನಿನ್ನ ನಿವಾಸಸ್ಥಾನವನ್ನು ನೀನು ಅರಿತು ಅಲ್ಲಿ ಸ್ಥಾಪಿತನಾಗಿದ್ದೀಯೆ. ನಿನ್ನ ಜ್ವಾಲಾ ಕಿರಣಗಳು ಉಷಸ್ಸುಗಳ ರಶ್ಮಿಗಳಂತೆಯೂ, ಸೂರ್ಯನ ದೋಷರಹಿತವಾದ ರಶ್ಮಿಗಳಂತೆಯೂ ಎಲ್ಲೆಲ್ಲಿಯೂ ಪ್ರಕಾಶಿತವಾಗುತ್ತದೆ.

## English Translation

Sagacious Agni, you sit at your station suited to the sacrifice and anointed with butter at the foot-mark of Ila. Your quick-moving rays are manifested like those of the dawns, beautiful as those of the sun.

। ಸಂಹಿತಾಪಾಠಃ ।

ತವ ಶ್ರಿಯೋ ವರ್ಷ್ಯಸ್ಯೇವ ವಿದ್ಯುತಶ್ಚಿತ್ರಾಶ್ಚಿಕಿತ್ರ ಉಷಸಾಂ ನ ಕೇತವಃ ।
ಯದೋಷಧೀರಭಿಸೃಷ್ಟೋ ವನಾನಿ ಚ ಪರಿ ಸ್ವಯಂ ಚಿನುಷೇ ಅನ್ನಮಾಸ್ಯೇ॥

॥ ಪದಪಾಠಃ ॥

ತವ । ಶ್ರಿಯಃ । ವರ್ಷ್ಯಸ್ಯಽಇವ । ವಿಽದ್ಯುತಃ । ಚಿತ್ರಾಃ । ಚಿಕಿತ್ರೇ । ಉಷಸಾಂ । ನ । ಕೇತವಃ ।
ಯತ್ । ಓಷಧೀಃ । ಅಭಿಽಸೃಷ್ಟಃ । ವನಾನಿ । ಚ । ಪರಿ । ಸ್ವಯಂ । ಚಿನುಷೇ । ಅನ್ನಂ । ಆಸ್ಯೇ ॥ ೫ ॥

। ಸಾಯಣಭಾಷ್ಯಂ ।

............ಯಥಾ ವರ್ಷಿತುರ್ಮೇಘಸ್ಯ ಸಂಬಂಧಿನ್ಯೋ ವಿದ್ಯುತ ಉಷಸಾಂ ನ ಯಥಾ ಚೋಷಸಾಂ ಕೇತವಃ ಪ್ರಜ್ಞಾನಾಸ್ತೇಸ್ಥಃ ಪ್ರಕಾಶಾಃ ಪ್ರಜ್ಞಾಯಂತೇ ತದ್ವದಿತ್ಯರ್ಥಃ । ತದೇತ್ಯತ್ರಾಹ । ಯದ್ಯದಾ ತ್ವಮೋಷಧೀರ್ವ್ರೀಹ್ಯಾದ್ಯಾ ವನಾನ್ಯರಣ್ಯಾನಿ ಚಾಭಿಸೃಷ್ಟಃ ಸೃಷ್ಟೋ ದಗ್ಧುಂ ವಿಸೃಷ್ಟಃ ಸನ್ ಸ್ವಯಮಾತ್ಮನಾಸ್ಯೇ ಮುಖೇಽನ್ನಮದನೀಯಂ ಸ್ಥಾವರಲಕ್ಷಣಂ ಪರಿ ಚಿನುಷೇ । ಪರಿಕ್ಷಿಪಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । (**ತ್ವಂ**—ನೀನು) । **ಓಷಧೀಃ**—ಓಷಧಿಗಳನ್ನು । **ವನಾನಿ**—ವನವೃಕ್ಷಗಳನ್ನು । **ಅಭಿಸೃಷ್ಟಃ**—ದಹಿಸಲು ಸ್ವತಂತ್ರನಾಗಿ ವಿಮುಕ್ತನಾದಾಗ । **ಸ್ವಯಂ**—ಇತರರ ಸಹಾಯವಿಲ್ಲದೆ । **ಆಸ್ಯೇ**—ಮುಖದಲ್ಲಿ । **ಅನ್ನಂ**—ಅನ್ನವನ್ನು । **ಪರಿಚಿನುಷೇ**—ಹೊಂದಿಸಿಕೊಳ್ಳುವೆಯೋ (ಆಗ) । **ತವ**—ನಿನ್ನ । **ಶ್ರಿಯಃ**—ಕಾಂತಿಯುತವಾದ ರಶ್ಮಿಗಳು । **ವರ್ಷ್ಯಸ್ಯ**—ವೃಷ್ಟಿಯನ್ನು ಸುರಿಸುವ ಮೇಘಗಳಿಂದ ಉತ್ಪನ್ನವಾದ । **ವಿದ್ಯುತ ಇವ**—ಮಿಂಚುಗಳಂತೆಯೂ । **ಉಷಸಾಂ**—ಉಷಸ್ಸುಗಳ । **ಕೇತವಃ ನ**—ಧ್ವಜಾಕಾರವಾದ ರಶ್ಮಿಗಳಂತೆಯೂ । **ಚಿತ್ರಾಃ**—ನಾನಾರೂಪಗಳುಳ್ಳವಾಗಿ । **ಚಿಕಿತ್ರೇ**—ಗೋಚರವಾಗುತ್ತವೆ.

। ಭಾವಾರ್ಥ ।

ಎಲೈ ಅಗ್ನಿಯೇ, ನೀನು ಲತೆಗಳನ್ನು ವನವೃಕ್ಷಗಳನ್ನು ದಹಿಸಲು ಸ್ವತಂತ್ರನಾಗಿ ಬಿಡಲ್ಪಟ್ಟಾಗ, ಇತರರ ಸಹಾಯವಿಲ್ಲದೇ, ನಿನ್ನ ಮುಖದಲ್ಲಿ ವೃಕ್ಷಾದಿರೂಪವಾದ ಅನ್ನವನ್ನು ಯಾವಾಗ ಹೊಂದಿಸಿಕೊಳ್ಳುವೆಯೋ, ಆ ಗ, ನಿನ್ನ

ಕಾಂತಿಯುತವಾದ ರಶ್ಮಿಗಳು ವೃಷ್ಟಿಯನ್ನು ಸುರಿಸುವ ಮೇಘಗಳಿಂದ ಉತ್ಪನ್ನವಾದ ಮಿಂಚುಗಳಂತೆಯೂ, ಉಷಸ್ಸುಗಳ ಧ್ವಜದಂತಿರುವ ರಶ್ಮಿಗಳಂತೆಯೂ ನಾನಾರೂಪದಿಂದ ಗೋಚರವಾಗುತ್ತವೆ.

## English Translation

Your glories, Agni, like the lightnings of the rain-cloud, are manifested many-tinted, like the manifestations of the dawn, when quitting the plants and the forests, you gather on all sides food for your mouth.

॥ ಸಂಹಿತಾಪಾಠಃ ॥

ತಮೋಷಧೀರ್ದಧಿರೇ ಗರ್ಭಮೃತ್ವಿಯಂ ತಮಾಪೋ ಅಗ್ನಿಂ ಜನಯಂತ ಮಾತರಃ ।
ತಮಿತ್ಸಮಾನಂ ವನಿನಶ್ಚ ವೀರುಧೋಽಂತರ್ವತೀಶ್ಚ ಸುವತೇ ಚ ವಿಶ್ವಹಾ ॥

॥ ಪದಪಾಠಃ ॥

ತಂ । ಓಷಧೀಃ । ದಧಿರೇ । ಗರ್ಭಂ । ಋತ್ವಿಯಂ । ತಂ । ಆಪಃ । ಅಗ್ನಿಂ । ಜನಯಂತ । ಮಾತರಃ ।
ತಂ । ಇತ್ । ಸಮಾನಂ । ವನಿನಃ । ಚ । ವೀರುಧಃ । ಅಂತಃऽವತೀಃ । ಚ ಸುವತೇ । ಚ । ವಿಶ್ವಹಾ ॥೬॥

॥ ಸಾಯಣಭಾಷ್ಯಂ ॥

**ಋತ್ವಿಯಮೃತೌ ಪ್ರಾಪ್ತಂ ಗರ್ಭಂ ಗರ್ಭಭೂತಂ ತಂ ಪ್ರಕೃತಮಗ್ನಿಮೋಷಧೀರೋಷಧ್ಯೋ ದಧಿರೇ । ಧಾರಯಂತಿ । ತಮೇವಾಗ್ನಿಂ ಮಾತರೋ ಧಾರಕತ್ವೇನ ಮಾತೃಸ್ಥಾನೀಯಾ ಆಪಶ್ಚ ಜನಯಂತ । ಜನಯಂತಿ । ಕಿಂಚ ವನಿನೋ ವನಸ್ಪತಯಶ್ಚ ಸಮಾನಂ ಗರ್ಭಭಾವೇನ ಪ್ರವೇಶಾತ್ಸ್ವತುಲ್ಯಂ ತಮಿತ್ತಮೇವಾಗ್ನಿಂ ಜನಯಂತಿ । ಕಿಂಚ ತಮೇವಾಗ್ನಿಮಂತರ್ವತೀರ್ಗರ್ಭವತ್ಯೋ ವೀರುಧ ಓಷಧಯಶ್ಚ ವಿಶ್ವಹಾ ಸರ್ವದಾ ಸುವತೇ । ಜನಯಂತಿ ॥**

॥ ಪ್ರತಿಪದಾರ್ಥ ॥

**ಋತ್ವಿಯಂ**—ವಸಂತಾದಿ ಋತುಕಾಲಗಳಲ್ಲಿ ಆವಿರ್ಭವಿಸುವನೂ । **ಗರ್ಭಂ**—ಗರ್ಭರೂಪನೂ ಆದ । **ತಂ**—ಅಗ್ನಿಯನ್ನು । **ಓಷಧೀಃ**—ಓಷಧಿಗಳು । **ದಧಿರೇ**—ಧರಿಸುತ್ತವೆ । **ತಂ ಅಗ್ನಿಂ**—ಅದೇ ಅಗ್ನಿಯನ್ನು । **ಮಾತರಃ**—ಮಾತೃರೂಪಿಗಳಾದ । **ಆಪಃ**—ಉದಕಗಳು । **ಜನಯಂತ**—ಉತ್ಪನ್ನಮಾಡುತ್ತವೆ । **ವನಿನಃ**—

ವನವೃಕ್ಷಗಳೂ । **ಸವಮಾನಂ**—ತಮ್ಮ ರೂಪವನ್ನೇ ಹೊಂದುವ । **ತಂ ಇತ್**—ಅದೇ ಅಗ್ನಿಯನ್ನು ಉತ್ಪನ್ನ ಮಾಡುತ್ತವೆ । **ಅಂತರ್ವತೀಃ**—ಅಗ್ನಿಯನ್ನು ಗರ್ಭರೂಪದಲ್ಲಿ ಹೊಂದಿರುವ । **ವೀರುಧಃ ಚ**—ಓಷಧಿಗಳೂ । **ವಿಶ್ವಹಾ**—ಯಾವಾಗಲೂ । **ಸುವತೇ**—ಅಗ್ನಿಯನ್ನು ಉತ್ಪನ್ನಮಾಡುತ್ತವೆ.

॥ ಭಾವಾರ್ಥ ॥

ವಸಂತಾದಿ ಋತುಕಾಲಗಳಲ್ಲಿ ಆವಿರ್ಭವಿಸುವವನೂ, ಗರ್ಭರೂಪನೂ ಆದ ಅಗ್ನಿಯನ್ನು ಓಷಧಿಗಳು ಧರಿಸುತ್ತವೆ. ಅದೇ ಅಗ್ನಿಯನ್ನು ಮಾತೃರೂಪಿಗಳಾದ ಉದಕಗಳು ಉತ್ಪನ್ನಮಾಡುತ್ತವೆ. ವನವೃಕ್ಷಗಳೂ, ತಮ್ಮ ರೂಪವನ್ನೇ ಹೊಂದುವ ಅದೇ ಅಗ್ನಿಯನ್ನು ಉತ್ಪನ್ನಮಾಡುತ್ತವೆ. ಅಗ್ನಿಯನ್ನು ಗರ್ಭರೂಪದಲ್ಲಿ ಹೊಂದಿರುವ ಓಷಧಿಗಳೂ ಯಾವಾಗಲೂ ಅಗ್ನಿಯನ್ನು ಉತ್ಪನ್ನಮಾಡುತ್ತವೆ.

English Translation

The plants bear him as the embryo (conceived) in due season; the maternal waters bring forth Agni; the trees and the pregnant creepers bring him forth daily like to themselves.

॥ ಸಂಹಿತಾಪಾಠಃ ॥

ವಾತೋಪಧೂತ ಇಷಿತೋ ವಶಾँ ಅನು ತೃಷು ಯದನ್ನಾ ವೇವಿಷದ್ವಿ-
ತಿಷ್ಠಸೇ ।
ಆ ತೇ ಯತಂತೇ ರಥ್ಯೋ೩ಯಥಾ ಪೃಥಕ್ಛರ್ಧಾಂಸ್ಯಗ್ನೇ ಅಜರಾಣಿ
ಧಕ್ಷತಃ ॥ ೭ ॥

॥ ಪದಪಾಠಃ ॥

ವಾತಽಉಪಧೂತಃ । ಇಷಿತಃ । ವಶಾನ್ । ಅನು । ತೃಷು । ಯತ್ । ಅನ್ನಾ । ವೇವಿಷತ್ । ವಿಽತಿಷ್ಠಸೇ ।
ಆ । ತೇ । ಯತಂತೇ । ರಥ್ಯಃ । ಯಥಾ । ಪೃಥಕ್ । ಶರ್ಧಾಂಸಿ । ಅಗ್ನೇ । ಅಜರಾಣಿ । ಧಕ್ಷತಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯದ್ಯದಾ ತ್ವಂ ವಾತೋಪಧೂತೋ ವಾಯುನಾ ಕಂಪಿತೋ ವಶಾನ್ಕಾಂತಾನ್ವನಸ್ಪತೀನನು ಪ್ರತಿ ತೃಷು ಕ್ಷಿಪ್ರಮಿಷಿತಃ ಪ್ರೇರಿತಶ್ಚ ಸನ್ನನ್ನಾನ್ಯದನೀಯಾನಿ ವನಸ್ಪತ್ಯಾದೀನಿ ಸ್ಥಾವರಾಣಿ

ವೇವಿಷದ್ವ್ಯಾಪ್ನುವನ್ವಿತಿಷ್ಠಸೇ ಇತಸ್ತತೋ ಗಚ್ಛಸಿ ತದಾನೀಂ ಧಕ್ಷತಃ ಕಾನನಾನಿ ದಹತಸ್ತೇ ತವಾಜರಾಣಿ ಜರಾರಹಿತಾನಿ ಶರ್ಧಾಂಸಿ ತೇಜಾಂಸಿ ಯಥಾ ರಥ್ಯೋ ರಥಿನಸ್ತದ್ವತ್ಪೃಥಗಾ ಯತಂತೇ । ಗಚ್ಛಂತಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯುತ್**—ಯಾವಾಗ । (**ತ್ವಂ**—ನೀನು)। **ವಾತೋಪಧೂತಃ**—ವಾಯುವಿನಿಂದ ಚಲಿಸಲ್ಪಟ್ಟು । **ವಶಾನ್ ಅನು**—ಆಕರ್ಷಕವಾದ ವೃಕ್ಷಗಳನ್ನು ಪ್ರವೇಶಿಸಿ । **ತೃಷು**—ಕ್ಷಿಪ್ರವಾಗಿ । **ಇಷಿತಃ**—ಮುಂದುವರೆದು । **ಅನ್ನಾ**—ವೃಕ್ಷರೂಪಗಳಾದ ಅನ್ನಗಳನ್ನು । **ವೇವಿಷತ್**—ವ್ಯಾಪಿಸುತ್ತ । **ವಿತಿಷ್ಠಸೇ**—ಸರ್ವತ್ರ ಸಂಚರಿಸುವೆಯೋ ಆಗ । **ಧಕ್ಷತಃ**—ವೃಕ್ಷಾದಿಗಳನ್ನು ದಹಿಸುವ । **ತೇ**—ನಿನ್ನ । **ಅಜರಾಣಿ**—ಕ್ಷಯರಹಿತಗಳಾದ । **ಶರ್ಧಾಂಸಿ**—ತೇಜಸ್ಸುಗಳು । **ಯಥಾ ರಥ್ಯಃ**—ಸಾರಥಿಗಳಂತೆ । **ಪೃಥಕ್**—ಬೇರೆ ಬೇರೆಯಾಗಿ । **ಆ ಯತಂತೇ**—ಮುಂದೆ ಮುಂದೆ ಹೋಗುತ್ತವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವಾಗ ನೀನು ವಾಯುವಿನಿಂದ ಪ್ರೇರಿತನಾಗಿ, ಆಕರ್ಷಕವಾದ ವನವೃಕ್ಷಗಳನ್ನು ಪ್ರವೇಶಿಸಿ ಮುಂದುವರೆದು ವೃಕ್ಷರೂಪಗಳಾದ ಅನ್ನಗಳನ್ನು ವ್ಯಾಪಿಸುತ್ತ ಸರ್ವತ್ರ ಸಂಚರಿಸುವೆಯೋ, ಆಗ ವೃಕ್ಷಾದಿಗಳನ್ನು ದಹಿಸುವ ನಿನ್ನಕ್ಷಯರಹಿತವಾದ ತೇಜಸ್ಸುಗಳು ಸಾರಥಿಗಳಂತೆ ಪ್ರತ್ಯೇಕವಾಗಿ ಮುಂದೆ ಮುಂದೆ ಹೋಗುತ್ತವೆ.

English Translation.

When, agitated by the wind and quickly moving through the beloved (trees), you spread about devouring the food, the imperishable energies of you, Agni, the devourer, rush forth like charioteers.

॥ಸಂಹಿತಾಪಾಠಃ॥

ಮೇಧಾಕಾರಂ ವಿದಥಸ್ಯ ಪ್ರಸಾಧನಮಗ್ನಿಂ ಹೋತಾರಂ ಪರಿಭೂತಮಂ ಮತಿಂ ।

ತಮಿದರ್ಭೇ ಹವಿಷ್ಯಾ ಸಮಾನಮಿತ್ತಮಿನ್ಮಹೇ ವೃಣತೇ ನಾನ್ಯಂ ತ್ವತ್ ॥

॥ ಪದಪಾಠಃ ॥

ಮೇಧಾಽಕಾರಂ । ವಿದಥಸ್ಯ । ಪ್ರಽಸಾಧನಂ । ಅಗ್ನಿಂ । ಹೋತಾರಂ । ಪರಿಽಭೂತಮಂ । ಮತಿಂ ।

ತಂ । ಇತ್ । ಅರ್ಭೇ । ಹವಿಷಿ । ಆ । ಸಮಾನಂ । ಇತ್ । ತಂ । ಇತ್ । ಮಹೇ । ವೃಣತೇ । ನ । ಅನ್ಯಂ । ತ್ವತ್ ॥ ೮ ॥

॥ ಸಾಯಣಭಾಷ್ಯಂ ॥

**ಮೇಧಾಕಾರಂ ಪ್ರಜ್ಞಾಯಾಃ ಕರ್ತಾರಂ ವಿದಥಸ್ಯ ಯಜ್ಞಸ್ಯ ಪ್ರಸಾಧನಂ ಪ್ರಕರ್ಷೇಣ ಸಾಧಕಂ ಹೋತಾರಂ ದೇವಾನಾಮಾಹ್ವಾತಾರಂ ಪರಿಭೂತಮಮತಿಶಯೇನ ಶತ್ರೂಣಾಂ ಪರಿಭವಿತಾರಂ ಮತಿಂ ಮಂತಾರಂ ಯಂ ತ್ವಾಮಗ್ನಿಂ ವೃಣೀಮಹ ಇತಿ ಶೇಷಃ । ತಮಿತ್ತ್ವಮೇವಾಗ್ನಿಮರ್ಭೇಽಲ್ಪೇ ಹವಿಷಿ ಚ ಪುರೋಡಾಶಾದಿಕೇ ಹವಿಷಿ ಸಮಾನಮಿತ್ಸಹೈವರ್ತ್ವಿಜ ಆ ವೃಣತೇ ! ಪ್ರಾರ್ಥಯಂತೇ । ಮಹೇ ಮಹತಿ ಸೋಮಾತ್ಮಕೇ ಹವಿಷ್ಯಪಿ ತಮಿತ್ತ್ವಮೇವಾಗ್ನಿಂ ವೃಣತೇ ತ್ವತ್ತ್ವತ್ತೋಽನ್ಯಮತಿರಿಕ್ತಂ ದೇವಂ ನ ವೃಣತೇ ॥**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಮೇಧಾಕಾರಂ**—ಪ್ರಜ್ಞೆಯನ್ನು ಒದಗಿಸುವವನೂ, । **ವಿದಥಸ್ಯ**—ಯಜ್ಞಕ್ಕೆ । **ಪ್ರಸಾಧನಂ**—ಸಮಾಪ್ತಿಸಾಧಕನೂ (ಅಲಂಕಾರಪ್ರಾಯನೂ)। **ಹೋತಾರಂ**-ಹೋತೃರೂಪನೂ। **ಪರಿಭೂತಮಂ**-ಶತ್ರುಗಳನ್ನು ಪೂರ್ಣವಾಗಿ ಸೋಲಿಸುವವನೂ । **ಮತಿಂ ಅಗ್ನಿಂ**—ಪ್ರಜ್ಞಾಯುತನೂ ಆದ ನಿನ್ನನ್ನು (ಪೂಜಿಸುತ್ತೇವೆ) । **ತಮಿತ್**—ಅದೇ ನಿನ್ನನ್ನು । **ಅಭೇ ಹವಿಷಿ**—ಚರುಪುರೋಡಾಶಾದಿಗಳನ್ನು ಅರ್ಪಿಸುವ ಸಣ್ಣ ಯಜ್ಞಗಳಲ್ಲೂ । **ಸಮಾನಂ ಇತ್**—ಒಂದೇ ರೀತಿಯಲ್ಲಿ । **ಆ ವೃಣತೇ**—ಋತ್ವಿಕ್ಕುಗಳು ಪ್ರಾರ್ಥಿಸುತ್ತಾರೆ । **ಮಹೇ**—ಸೋಮಾದಿಹವಿಸ್ಸುಗಳನ್ನು ಅರ್ಪಿಸುವ ದೊಡ್ಡಯಾಗಗಳಲ್ಲೂ । **ತಂ ಇತ್**—ಅದೇ ನಿನ್ನನ್ನು । **ವೃಣತೇ**—ಪ್ರಾರ್ಥಿಸಿ ಕರೆಯುತ್ತಾರೆ । **ತ್ವತ್ ಅನ್ಯಂ**—ನಿನ್ನನ್ನು ಬಿಟ್ಟು ಬೇರೆ ಯಾರನ್ನು । **ನ**—ಖಂಡಿತ ಕರೆಯುವುದಿಲ್ಲ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಜ್ಞಾಯುತನೂ, ಪ್ರಜ್ಞೆಯನ್ನು ಯಜಮಾನಾದಿಗಳಿಗೆ ಒದಗಿಸುವವನೂ, ಯಜ್ಞಕ್ಕೆ ಅಲಂಕಾರಪ್ರಾಯನೂ, ಹೋತೃರೂಪನೂ, ಶತ್ರುಗಳನ್ನುಪೂರ್ಣವಾಗಿಸೋಲಿಸುವವನೂ ಆದ ನಿನ್ನನ್ನುಪೂಜಿಸುತ್ತೇವೆ. ಚರುಪುರೋಡಾಶಾದಿಗಳನ್ನು ಅರ್ಪಿಸುವ ಸಣ್ಣ ಯಜ್ಞಗಳಲ್ಲಿಯೂ, ಸೋಮಾದಿಹವಿಸ್ಸುಗಳನ್ನರ್ಪಿಸುವ ದೊಡ್ಡ ಯಜ್ಞಗಳಲ್ಲಿಯೂ ನಿನ್ನನ್ನೇ ಋತ್ವಿಕ್ಕುಗಳು ಪ್ರಾರ್ಥಿಸಿ ಕರೆಯುತ್ತಾರೆ. ನಿನ್ನನ್ನು ಬಿಟ್ಟು ಉಳಿದ ಯಾರನ್ನೂ ಕರೆಯುವುದಿಲ್ಲ.

## English Translation.

( The priest ) selects you, (Agni), the giver of intelligence, the accomplisher of the sacrifice, the invoker of the gods, the chief overcomer of foes, the councillor, alike verily at the lesser and at the greater oblation, and none other than you.

॥ ಸಂಹಿತಾಪಾಠಃ ॥

ತ್ವಾಮಿದತ್ರ ವೃಣತೇ ತ್ವಾಯವೋ ಹೋತಾರಮಗ್ನೇ ವಿದಥೇಷು ವೇಧಸಃ।

ಯದ್ದೇವಯಂತೋ ದಧತಿ ಪ್ರಯಾಂಸಿ ತೇ ಹವಿಷ್ಮಂತೋ ಮನವೋ

ವೃಕ್ತಬರ್ಹಿಷಃ ॥ ೯ ॥

॥ ಪದಪಾಠಃ ॥

ತ್ವಾಂ । ಇತ್ । ಅತ್ರ । ವೃಣತೇ । ತ್ವಾऽಯವಃ । ಹೋತಾರಂ ಃ ಅಗ್ನೇ । ವಿದಥೇಷು । ವೇಧಸಃ ।

ಯತ್ । ದೇವऽಯಂತಃ । ದಧತಿ । ಪ್ರಯಾಂಸಿ । ತೇ । ಹವಿಷ್ಮಂತಃ । ಮನವಃ । ವೃಕ್ತऽಬರ್ಹಿಷಃ ॥೯॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಹೋತಾರಂ ದೇವಾನಾಂ ಹ್ವಾತಾರಮಗ್ನಿಂ ತ್ವಾಮಿತ್ತ್ವಾಮೇವ ತ್ವಾಯವಸ್ತ್ವಾಕಾಮಾ ವೇಧಸಃ ಕರ್ಮಣಾಂ ಕರ್ತಾರ ಋತ್ವಿಜೋऽತ್ರಾಸ್ಮಿಂಲ್ಲೋಕೇ ವಿದಥೇಷು ಯಜ್ಞೇಷು ವೃಣತೇ । ಪ್ರಾರ್ಥಯಂತೇ । ಕದೇತ್ಯತ್ರಾಹ । ಯದ್ಯದಾ ದೇವಯಂತೋ ದೇವಾನ್ಯಷ್ಟುಂ ಸ್ತೋತುಂ ವೇಚ್ಛಂತೋ ವೃಕ್ತಬರ್ಹಿಷಶ್ಛಿನ್ನಬರ್ಹಿಷೋ ಹವಿಷ್ಮಂತಃ ಸಂಸ್ಕೃತಹವಿಷ್ಕಾ ಮನವೋ ಮನುಷ್ಯಾ ಋತ್ವಿಜಸ್ತೇ ತುಭ್ಯಂ ಪ್ರಯಾಂಸಿ ಹವೀಂಷಿ ದಧತಿ ಧಾರಯಂತಿ । ಪ್ರಯಚ್ಛಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವಾಗ । **ದೇವಯಂತಃ**—ದೇವತೆಗಳನ್ನಿಚ್ಛಿಸುವವರೂ । **ವೃಕ್ತಬರ್ಹಿಷಃ**—ಕತ್ತರಿಸಿದ ದರ್ಭೆಯುಳ್ಳವರೂ । **ಹವಿಷ್ಮಂತಃ**—ಹವಿಸ್ಸನ್ನು ಹೊಂದಿರುವವರೂ ಆದ । **ಮನವಃ**—ಯಜಮಾನರು । **ತೇ**—ನಿನ್ನನ್ನುದ್ದೇಶಿಸಿ । **ಪ್ರಯಾಂಸಿ**—ಹವಿಸ್ಸುಗಳನ್ನು । **ದಧತಿ**—ಹಿಡಿದಿರುವರೋ ಆಗ । **ತ್ವಾಯವಃ**—ನಿನ್ನನ್ನೇ ಅಪೇಕ್ಷಿಸುವವರೂ । **ವೇಧಸಃ**—ಕರ್ಮಕರ್ತರೂ ಆದ ಋತ್ವಿಕ್ಕುಗಳು । **ಅತ್ರ ವಿದಥೇಷು**—ಈ ಯಜ್ಞಗಳಲ್ಲಿ । **ಹೋತಾರಂ**—ಹೋತೃರೂಪನಾದ । **ತ್ವಾಂ ಇತ್**—ನಿನ್ನನ್ನೇ । **ವೃಣತೇ**—ಪ್ರಾರ್ಥಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳನ್ನಿಚ್ಛಿಸುವವರೂ, ಸಂಸ್ಕರಿಸಿದ ದರ್ಭೆಯುಳ್ಳವರೂ, ಹವಿಸ್ಸನ್ನು ಹೊಂದಿರುವವರೂ ಆದ ಯಜಮಾನರು ನಿನ್ನನ್ನುದ್ದೇಶಿಸಿ ಯಾವಾಗ ಹವಿಸ್ಸುಗಳನ್ನು ಹಿಡಿದು ನಿಂತಿರುವರೋ ಆಗ ನಿನ್ನನ್ನೇ ಅಪೇಕ್ಷಿಸುವವರೂ, ಕರ್ಮಕರ್ತರೂ ಆದ ಋತ್ವಿಕ್ಕುಗಳು ಈ ಯಜ್ಞಗಳಲ್ಲಿ ಹೋತೃರೂಪನಾದ ನಿನ್ನನ್ನೇ ಪ್ರಾರ್ಥಿಸಿ ಕರೆಯುತ್ತಾರೆ.

## English Translation

The performers of sacred rites, devoted, Agni, to you, select you as the ministrant priest at sacrifices in the world, when the devout worshippers bearing oblations and strewing the clipt sacred grass offer you food.

। ಸಂಹಿತಾಪಾಠಃ ॥

ತವಾಗ್ನೇ ಹೋತ್ರಂ ತವ ಪೋತ್ರಮೃತ್ವಿಯಂ ತವ ನೇಷ್ಟ್ರಂ ತ್ವಮಗ್ನಿ-
ದೃತಾಯತಃ ।
ತವ ಪ್ರಶಾಸ್ತ್ರಂ ತ್ವಮಧ್ವರೀಯಸಿ ಬ್ರಹ್ಮಾ ಚಾಸಿ ಗೃಹಪತಿಶ್ಚ ನೋ
ದಮೇ ॥ ೧೦ ॥

। ಪದಪಾಠಃ ।

ತವ । ಅಗ್ನೇ । ಹೋತ್ರಂ । ತವ । ಪೋತ್ರಂ । ಋತ್ವಿಯಂ । ತವ । ನೇಷ್ಟ್ರಂ । ತ್ವಂ । ಅಗ್ನಿತ್ ।
ಋತಽಯತಃ ।
ತವ । ಪ್ರಽಶಾಸ್ತ್ರಂ । ತ್ವಂ । ಅಧ್ವರಿಽಯಸಿ । ಬ್ರಹ್ಮಾ । ಚ । ಅಸಿ । ಗೃಹಽಪತಿಃ । ಚ । ನಃ । ದಮೇ ॥

॥ ಸಾಯಣಭಾಷ್ಯಂ ।

ಹೇ ಅಗ್ನೇ ತವ ಹೋತ್ರಂ ಹೋತೃಕರ್ಮ ತ್ವಯಾ ವಿನಾ ತಸ್ಯಾಭಾವಾತ್ । ಕಿಂಚ ತವೈವರ್ತ್ವಿಯಮೃತೌ ಭವಂ ಪ್ರಾಪ್ತಾನುಷ್ಠಾನಕಾಲಂ ಪೋತ್ರಂ ಪೋತೃಕರ್ಮ ತ್ವಯಾ ವಿನಾ ತಸ್ಯಾಪ್ಯಭಾವಾತ್ । ಕಿಂಚ ತವೈವ ನೇಷ್ಟ್ರಂ ನೇಷ್ಟೃಕರ್ಮ । ಕಿಂಚರ್ತಾಯತೇ ಋತಂ ಯಜ್ಞಂ ಕರ್ತುಮಿಚ್ಛತೋ ಯಜಮಾನಸ್ಯ ತ್ವಮೇವಾಗ್ನಿನ್ನಾನ್ಯಃ ಕಶ್ಚಿತ್ । ಕಿಂಚ ತವೈವ ಪ್ರಶಾಸ್ತ್ರಂ ಪ್ರಶಾಸ್ತೃಕರ್ಮ । ಕಿಂಚ ಹೇ ಅಗ್ನೇ ತ್ವಮೇವಾಧ್ವರೀಯಸಿ । ಅಧ್ವರಂ ಯಜ್ಞಂ ಕರ್ತುಮಿಚ್ಛಸಿ । ತವ ಹೇತುತ್ವಾತ್ತತ್ಕರ್ತೃತ್ವಂ । ಕಿಂಚ ತ್ವಮೇವ ಬ್ರಹ್ಮಾಸಿ ತ್ವಯಾ ವಿನಾ ತಸ್ಯಾಭಾವಾತ್ । ಕಿಂಚ ನೋಽಸ್ಮಾಕಂ ದಮೇ ಗೃಹೇ ಗೃಹಪತಿರ್ಯಜಮಾನೋಽಸಿ ತ್ವಯಾ ವಿನಾಸ್ಮಾಕಂ ಯಜಮಾನತ್ವಾಭಾವಾತ್ ॥

। ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । ಹೋತ್ರಂ—ಹೋತೃಕರ್ಮವು । ತವ—ನಿನ್ನದು । ಋತ್ವಿಯಂ—ಆಯಾ ಕಾಲಾನುಗುಣವಾಗಿ ನೆರವೇರಿಸುವ । ಪೋತ್ರಂ—ಪೋತೃವಿನ ಕರ್ಮವೂ । ತವ—ನಿನ್ನದೇ ಆಗಿದೆ ।

**ನೇಷ್ಟ್ರಂ**—ನೇಷ್ಟೃವಿನ ಕರ್ಮವೂ । **ತವ**—ನಿನ್ನದೇ ಆಗಿದೆ । **ಋತಾಯತಃ**—ಯಜ್ಞವನ್ನು ಮಾಡಲು ಇಚ್ಛಿಸುವ ಯಜಮಾನನಿಗೆ । **ತ್ವಂ**—ನೀನೇ । **ಅಗ್ನಿತ್**—ಆಗ್ನೀಧ್ರನಾಗಿದ್ದೀಯೆ । **ಪ್ರಶಾಸ್ತ್ರಂ**—ಪ್ರಶಾಸ್ತೃವಿನ ಕರ್ಮವೂ । **ತವ**—ನಿನ್ನದೇ । **ತ್ವಂ**—ನೀನೇ । **ಅಧ್ವರೀಯಸಿ**—ಯಜ್ಞಮಾಡಲಿಚ್ಛೆಯುಳ್ಳ ಅಧ್ವರ್ಯುವು। **ಬ್ರಹ್ಮಾ ಚ ಅಸಿ**—ನೀನೇ ಬ್ರಹ್ಮರೂಪನಾದ ಋತ್ವಿಕ್ಕು । **ನಃ**—ನಮ್ಮ । **ದಮೇ**—ಈ ಯಜ್ಞಗೃಹದಲ್ಲಿ । **ಗೃಹಪತಿಃ**—ಯಜ್ಞಪಾಕಲನೂ ನೀನೇ ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಹೋತೃಕರ್ಮವೂ ನಿನ್ನದು. ಆಯಾ ಕಾಲಾನುಗುಣವಾಗಿ ನೆರವೇರಿಸುವ ಪೋತೃ ಮತ್ತು ನೇಷ್ಟೃಗಳ ಕರ್ಮವೂ ನಿನ್ನದೇ. ಯಜ್ಞವನ್ನು ಮಾಡಲು ಇಚ್ಛಿಸುವ ಯಜಮಾನನಿಗೆ ಉತ್ತಮವಾದ ಆಗ್ನೀಧ್ರನೂ ನೀನು. ಪ್ರಶಾಸ್ತೃವಿನ ಕರ್ಮವೂ ನಿನ್ನದೇ ಆಗಿದೆ. ಬ್ರಹ್ಮರೂಪಿಯಾದ ಋತ್ವಿಕ್ಕಾಗಿ ನೀನೇ ಯಜ್ಞಮಾಡಲಿಚ್ಛೆಯುಳ್ಳ ಅಧ್ವರ್ಯುವೂ ಯಜ್ಞಗೃಹದಲ್ಲಿ ಯಜ್ಞಪಾಲಕನೂ ಆಗಿದ್ದೀಯೆ.

English Translation.

Yours, Agni, is the Hotri, yours, the duly-performed function of the Potri, yours, the function of the Neshtri, you are the Agni of the sacrificer, yours, is the office of the Prashastri, you act as Adhwaryu, and you are the Brahman and the lord of the mansion in our abode.

॥ ಸಂಹಿತಾಪಾಠಃ ॥

ಯಸ್ತುಭ್ಯಮಗ್ನೇ ಅಮೃತಾಯ ಮರ್ತ್ಯಃ ಸಮಿಧಾ ದಾಶದುತ ವಾ ಹವಿಷ್ಕೃತಿ ।
ತಸ್ಯ ಹೋತಾ ಭವಸಿ ಯಾಸಿ ದೂತ್ಯಮುಪ ಬ್ರೂಷೇ ಯಜಸ್ಯಧ್ವರೀಯಸಿ ॥ ೧೧ ॥

॥ ಪದಪಾಠಃ ॥

ಯಃ । ತುಭ್ಯಂ । ಅಗ್ನೇ । ಅಮೃತಾಯ । ಮರ್ತ್ಯಃ । ಸಂऽಇಧಾ । ದಾಶತ್ । ಉತ । ವಾ । ಹವಿಃऽಕೃತಿ ।
ತಸ್ಯ । ಹೋತಾ । ಭವಸಿ । ಯಾಸಿ । ದೂತ್ಯಂ । ಉಪ । ಬ್ರೂಷೇ । ಯಜಸಿ । ಅಧ್ವರಿऽಯಸಿ ॥೧೧॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಅಮೃತಾಯ ಮರಣಧರ್ಮವರ್ಜಿತಾಯ ತುಭ್ಯಂ ಯೋ ಮರ್ತ್ಯೋ ಮನುಷ್ಯಃ ಸಮಿಧಾ ಸಮಿಧಂ ॥ ದ್ವಿತೀಯಾಯಾಃ ಸುಪಾಂ ಸುಲುಗಿತ್ಯಾಕಾರಃ ॥ ದಾಶತ್ ದದಾತಿ ಪ್ರಯಚ್ಛತಿ ಉತ ವಾಪಿ ವಾ ಹವಿಷ್ಕೃತಿ । ಹವಿಷಾಂ ಕೃತ್ ಕರಣಂ ಯಸ್ಮಿನ್ ಸ ಹವಿಷ್ಕೃತ್ । ತಸ್ಮಿನ್ಯಜ್ಞೇ ಹವೀಂಷಿ ದದಾತೀತಿ ಶೇಷಃ । ತಸ್ಯ ಮನುಷ್ಯಸ್ಯ ಹೋತಾ ದೇವಾನಾಮಾಹ್ವಾತಾ ಭವಸಿ । ಕಿಂಚ ತ್ವಂ ದೂತ್ಯಂ ದೇವಾನ್ಪ್ರತಿ ದೂತಕರ್ಮ ಕರ್ತುಂ ಯಾಸಿ । ಗಚ್ಛಸಿ । ಕಿಂಚ ತ್ವಂ ಬ್ರಹ್ಮಾ ಭೂತ್ವಾಸ್ಮಿನ್ಕರ್ಮಣಿ ಯುಷ್ಮಭ್ಯಮಿಮಾನಿ ಹವೀಂಷಿ ಯಜಮಾನೇನ ಪ್ರಹಿತಾನೀತ್ಯುಪ ಬ್ರೂಷೇ । ಉಪಕ್ರಮ್ಯ ಬ್ರವೀಷಿ । ಕಿಂಚ ತ್ವಂ ಯಜಸಿ । ಯಜಮಾನೋ ಭೂತ್ವಾ ದೇವೇಭ್ಯೋ ಹವೀಂಷಿ ದದಾಸಿ । ಕಿಂಚ ತ್ವಂ ತಥಾ ಪೂರ್ವೋಕ್ತಪ್ರಕಾರೇಣಾಧ್ವರೀಯಸಿ । ಅಧ್ವರ್ಯುರಿವಾಚರಸಿ । ಅಥವಾಸ್ಯಂ ಯಜ್ಞಂ ಕರ್ತುಮಿಚ್ಛಸಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಅಮೃತಾಯ**—ಮರಣಧರ್ಮರಹಿತನಾದ । **ತುಭ್ಯಂ**—ನಿನ್ನನ್ನುದ್ದೇಶಿಸಿ । **ಯಃ ಮರ್ತ್ಯಃ**—ಯಾವ ಮಾನವನು । **ಸಮಿಧಾ**—ಸಮಿತ್ತುಗಳನ್ನು । **ದಾಶತ್**—ಅರ್ಪಿಸುವನೋ । **ಉತ ವಾ**—ಮತ್ತು । **ಹವಿಷ್ಕೃತಿ**—ಯಜ್ಞದಲ್ಲಿ ಹವಿಸ್ಸನ್ನರ್ಪಿಸುವನೋ । **ತಸ್ಯ**—ಆ ಯಜಮಾನನಿಗೋಸ್ಕರ । **ಹೋತಾ**—ಹೋತೃರೂಪನಾಗಿ । **ಭವಸಿ**—ಇರುತ್ತೀಯೆ । **ದೂತ್ಯಂ**—ದೇವತೆಗಳನ್ನು ಕರೆಯುವ ಕೆಲಸಕ್ಕೆ । **ಯಾಸಿ**—ಹೋಗುತ್ತೀಯೆ (ಅವರಿಗೆ ಹವಿಸ್ಸನ್ನು ಅರ್ಪಿಸುತ್ತೀಯೆ) । **ಉಪಬ್ರೂಷೇ**—ಯಜ್ಞವನ್ನು ಆರಂಭಿಸಿ ಪ್ರಶಂಸಿಸುತ್ತೀಯೆ । **ಯಜಸಿ**—ದೇವತೆಗಳಿಗೆ ಹವಿಸ್ಸನ್ನರ್ಪಿಸುತ್ತೀಯೆ । **ಅಧ್ವರೀಯಸಿ**—ಯಜ್ಞವನ್ನು ಪೂರ್ಣವಾಗಿ ನಿರ್ವಹಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮರಣಧರ್ಮರಹಿತನಾದ ನಿನ್ನನ್ನುದ್ದೇಶಿಸಿ ಯಾವ ಮಾನವನು ಸಮಿತ್ತುಗಳನ್ನು ಅರ್ಪಿಸುವನೋ, ಮತ್ತು ಯಜ್ಞದಲ್ಲಿ ಹವಿಸ್ಸುಗಳನ್ನರ್ಪಿಸುವನೋ, ಆ ಯಜಮಾನನಿಗೋಸ್ಕರ ನೀನು ಹೋತೃವಾಗಿರುತ್ತೀಯೆ. ದೇವದೂತನಾಗಿ ಹೋಗುತ್ತೀಯೆ. ಯಜ್ಞವನ್ನು ಆರಂಭಿಸಿ ಪ್ರಶಂಸಿಸುತ್ತೀಯೆ. ದೇವತೆಗಳಿಗೆ ಹವಿಸ್ಸನ್ನರ್ಪಿಸುತ್ತೀಯೆ. ಅಧ್ವರ್ಯುವಿನ ಕೆಲಸವನ್ನೂ ಮಾಡುತ್ತೀಯೆ.

## English Translation.

The mortal, Agni, who presents to you, the immortal, fuel at the offering of the oblation—you are his Hotri, you go on his errand (to the gods), you direct (the ceremonial), you offer the sacrifice, you act as the officiating priest.

॥ ಸಂಹಿತಾಪಾಠಃ ॥

ಇಮಾ ಅಸ್ಮೈ ಮತಯೋ ವಾಚೋ ಅಸ್ಮದಾँ ಋಚೋ ಗಿರಃ ಸುಷ್ಟುತಯಃ ಸಮಗ್ಮತ ।
ವಸೂಯವೋ ವಸವೇ ಜಾತವೇದಸೇ ವೃದ್ಧಾಸು ಚಿದ್ವರ್ಧನೋ ಯಾಸು ಚಾಕನತ್ ॥ ೧೨ ॥

॥ ಪದಪಾಠಃ ॥

ಇಮಾಃ । ಅಸ್ಮೈ । ಮತಯಃ । ವಾಚಃ । ಅಸ್ಮತ್ । ಆ । ಋಚಃ । ಗಿರಃ । ಸುऽಸ್ತುತಯಃ । ಸಂ । ಅಗ್ಮತ ।
ವಸುऽಯವಃ । ವಸವೇ । ಜಾತऽವೇದಸೇ । ವೃದ್ಧಾಸು । ಚಿತ್ । ವರ್ಧನಃ । ಯಾಸು । ಚಾಕನತ್ ॥

॥ ಸಾಯಣಭಾಷ್ಯಂ ॥

ಜಾತವೇದಸೇ ಜಾತಪ್ರಜ್ಞಾಯ ವಸವೇ ವಾಸಯಿತ್ರೇऽಸ್ಮಾ ಅಗ್ನಯೇ ಮತಯಃ ಪೂಜಯಿತ್ರ್ಯ ಇಮಾ ವಾಚೋ ವಸೂಯವೋऽಸ್ಮದರ್ಥಂ ಧನಕಾಮಾಃ ಸತ್ಯೋऽಸ್ಮದಸ್ಮತ್ತೋ ನಿರ್ಗತ್ಯಾ ಸಮಗ್ಮತ। ಅಭಿಮುಖ್ಯೇನ ಸಂಗಚ್ಛಂತೇ । ತಮಿಮಮಗ್ನಿಂ ಪ್ರೀಣಯಂತ್ವಿತ್ಯರ್ಥಃ । ಕಾಃ ಪುನಸ್ತಾಃ । ಸುಷ್ಟುತಯಃ ಶೋಭನಸ್ತುತಿರೂಪಾ ಋಚ ಋಗಾತ್ಮಿಕಾ ಗಿರೋ ವಾಚಃ । ತಥಾ ಯಾಸು ವೃದ್ಧಾಸು ಚಿತ್ ಸ್ವತ ಏವ ವೃದ್ಧಾಸ್ವಪಿ ವರ್ಧನಃ ಪುನರಪಿ ವರ್ಧಯಿತಾ ಸನ್ನಗ್ನಿಶ್ಚಾಕನತ್ ಸ್ತೋತ್ರ್ಯಾನ್ಕಾಮಯತೇ । ಇಮಾ ಮತಯ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಮತಯಃ**—ಧ್ಯಾನರೂಪವಾದ ನಮ್ಮ ಸ್ತೋತ್ರಗಳೂ । **ಇಮಾ ವಾಚಃ**—ಈ ಸ್ತುತಿವಾಕ್ಯಗಳೂ । **ವಸೂಯವಃ**—ನಮಗೆ ಧನವನ್ನಪೇಕ್ಷಿಸುತ್ತ । **ಅಸ್ಮತ್**—ನಮ್ಮಿಂದ ಹೊರಟು । **ಜಾತವೇದಸೇ**—ಜಾತಪ್ರಜ್ಞನೂ। **ವಸವೇ**—ವಸತಿದಾಯಕನೂ ಆದ । **ಅಸ್ಮೈ**—ಈ ಅಗ್ನಿಯನ್ನು ಕುರಿತು । **ಆ ಸಮಗ್ಮತ**—ಸುತ್ತು ವರಿದು ಸಮೀಪಿಸುತ್ತವೆ । **ಯಾಸು ವೃದ್ಧಾಸು ಚಿತ್**—ಸ್ವರೂಪದಿಂದಲೇ ವೃದ್ಧಿಯನ್ನು ಹೊಂದಿದ್ದರೂ ಸಹ ಯಾವ ಸ್ತುತಿಗಳನ್ನು । **ವರ್ಧನಃ**—ಇನ್ನೂ ಅಧಿಕವಾಗಿ ವೃದ್ಧಿಪಡಿಸುವನೋ ಅಂತಹ ಅಗ್ನಿಯು । **ಸುಷ್ಟುತಯಃ**—ಉತ್ತಮವಾಗಿ ಪ್ರಶಂಸಿಸುವುವೂ । **ಋಚಃ**—ಋಗ್ರೂಪವುಳ್ಳವೂ ಆದ । **ಗಿರಃ**—ಸ್ತುತಿವಾಕ್ಯಗಳನ್ನು । **ಚಾಕನತ್**—ಅಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ಧ್ಯಾನಾತ್ಮಕವಾದ ನಮ್ಮ ಸ್ತೋತ್ರಗಳೂ, ಈ ಸ್ತುತಿವಾಕ್ಯಗಳೂ ನಮಗೆ ಧನವನ್ನಪೇಕ್ಷಿಸುತ್ತ ನಮ್ಮಿಂದ ಹೊರಟು ಜಾತಪ್ರಜ್ಞನೂ, ವಸತಿದಾಯಕನೂ ಆದ ಈ ಅಗ್ನಿಯನ್ನು ಸುತ್ತುವರಿಯುತ್ತವೆ. ಸ್ವರೂಪದಿಂದಲೇ ವೃದ್ಧಿಯನ್ನು ಹೊಂದಿದ ಅಗ್ನಿಯು ಈ ಸ್ತುತಿಗಳನ್ನು ಇನ್ನೂ ಪುಷ್ಟಿಗೊಳಿಸುತ್ತಾ ಇವನ್ನು ಅಪೇಕ್ಷಿಸುತ್ತಾನೆ.

English Translation.

May these laudatory words, these eulogistic verses, these voices (proceeding) from us, reach him the giver of wealth, Jatavedas; these wealth-desiring (words) in which when they are perfected, the perfecter delights.

॥ ಸಂಹಿತಾಪಾಠಃ ॥

ಇಮಾಂ ಪ್ರತ್ನಾಯ ಸುಷ್ಟುತಿಂ ನವೀಯಸೀಂ ವೋಚೇಯಮಸ್ಮಾ ಉಶತೇ ಶೃಣೋತು ನಃ ।
ಭೂಯಾ ಅಂತರಾ ಹೃದ್ಯಸ್ಯ ನಿಸ್ಪೃಶೇ ಜಾಯೇವ ಪತ್ಯ ಉಶತೀ ಸುವಾಸಾಃ ॥

॥ ಪದಪಾಠಃ ॥

ಇಮಾಂ । ಪ್ರತ್ನಾಯ । ಸುಽಸ್ತುತಿಂ । ನವೀಯಸೀಂ । ವೋಚೇಯಂ । ಅಸ್ಮೈ । ಉಶತೇ । ಶೃಣೋತು । ನಃ ।
ಭೂಯಾಃ । ಅಂತರಾ । ಹೃದಿ । ಅಸ್ಯ । ನಿಽಸ್ಪೃಶೇ । ಜಾಯಾಽಇವ । ಪತ್ಯೇ । ಉಶತೀ । ಸುಽವಾಸಾಃ ॥

॥ ಸಾಯಣಭಾಷ್ಯಂ ॥

ಪ್ರತ್ನಾಯ ಪುರಾಣಾಯೋಶತೇ ಸ್ತೋತ್ರಂ ಕಾಮಯಮಾನಾಯಾಸ್ಮಾ ಅಗ್ನಯೇ ನವೀಯಸೀಂ ನವತರಾಮನ್ಯೈರಕೃತಪೂರ್ವಾಂ ಸುಷ್ಟುತಿಂ ಶೋಭನಸ್ತುತಿಂ ವೋಚೇಯಂ । ಅಹಂ ವಕ್ಷ್ಯಾಮಿ । ಸೋಽಗ್ನಿರಸ್ಮದೀಯಾಂ ಸ್ತುತಿಂ ಶೃಣೋತು । ಕಿಂಚಾಹಮಸ್ಯಾಗ್ನೇರ್ಹೃದಿ ಹೃದಯೇ ತತ್ರಾಪ್ಯಂತರಾ ಮಧ್ಯೇ ನಿಸ್ಪೃಶೇ ಸಂಸ್ಪರ್ಶನಾಯ । ಗುಣೈರನುರಂಜನಾಯೇತ್ಯರ್ಥಃ । ಭೂಯಾಃ । ಭೂಯಾಸಂ ॥ ವ್ಯತ್ಯಯೇನ ಮಧ್ಯಮಃ ॥ ಅಗ್ನೇರ್ಹೃದಿಸ್ಪೃಗಹಂ ಸ್ಯಾಮಿತ್ಯರ್ಥಃ । ಅಥವಾ ಮಮ ಸುಷ್ಟುತೇರನುಪ್ರವೇಶಾತ್ ಭವೇತಿ ಯೋಜ್ಯಂ । ಸಮಾನಮನ್ಯತ್ । ತತ್ರ ದೃಷ್ಟಾಂತಃ । ಪತ್ಯೇ ಪತ್ಯುರ್ಹೃದಯಸ್ಯ ಮಧ್ಯೇ ಸುವಾಸಾಃ ಶೋಭನವಸ್ತ್ರಾದಿನಾ ಮಂಡಿತಾ ಜಾಯೋಶತೀ ಕಾಮಯಮಾನಾ ಯಥೇಷ್ಟತಮಾ ಭವತಿ ತದ್ವದಿತ್ಯರ್ಥಃ ॥

। ಪ್ರತಿಪದಾರ್ಥ ।

**ಪ್ರತ್ನಾಯ**—ಪುರಾತನನೂ । **ಉಶತೇ**—ಸ್ತುತಿಕಾಮನೂ ಆದ । **ಅಸ್ಮೈ**—ಅಗ್ನಿಯನ್ನುದ್ದೇಶಿಸಿ । **ನವೀಯಸೀಂ**—ನೂತನವಾದುದೂ । **ಸುಷ್ಟುತಿಂ**—ಉತ್ತಮವಾಗಿ ಪ್ರಶಂಸಿಸುವುದೂ ಆದ । **ಇಮಾಂ**—ಈ ಸ್ತುತಿಯನ್ನು । **ವೋಚೇಯಂ**—ಪಠಿಸುತ್ತೇನೆ । **ನಃ**—ನಮ್ಮ ಈ ಸ್ತುತಿಯನ್ನು । **ಶೃಣೋತು**—ಅಗ್ನಿಯು ಕೇಳಲಿ । **ಪತ್ಯೇ**—ಪತಿಯ ಹೃದಯದಲ್ಲಿ । **ಸುವಾಸಾಃ**—ಉತ್ತಮವಾದ ವಸ್ತ್ರಾಲಂಕೃತಳೂ । **ಉಶತೀ**—ಅವನನ್ನು ಪ್ರೀತಿಸುವವಳೂ ಆದ । **ಜಾಯಾ ಇವ**—ಪತ್ನಿಯು ಸ್ಥಿತಳಾಗಿರುವಂತೆ । **ಅಸ್ಯ**—ಈ ಅಗ್ನಿಯ । **ಹೃದಿ ಅಂತರಾ**—ಹೃದಯದ ನಡುವೆ । **ನಿಸ್ಪೃಶೇ**—ಅದನ್ನು ಮುಟ್ಟುವಂತೆ । **ಭೂಯಾಃ**—ನಾನು ಇರುವಂತಾಗಲಿ.

। ಭಾವಾರ್ಥ ।

ಪುರಾತನನೂ, ಸ್ತುತಿಕಾಮನೂ ಆದ ಅಗ್ನಿಯನ್ನುದ್ದೇಶಿಸಿ ನೂತನವಾದುದೂ, ಉತ್ತಮವಾಗಿ ಪ್ರಶಂಸಿಸುವುದೂ ಆದ ಸ್ತುತಿಯನ್ನು ಪಠಿಸುತ್ತೇನೆ. ಅಗ್ನಿಯು ಇದನ್ನು ಕೇಳಲಿ. ಪತಿಯ ಹೃದಯದಲ್ಲಿ ಉತ್ತಮವಾದ ವಸ್ತ್ರಾಲಂಕೃತಳೂ, ಅವನನ್ನು ಪ್ರೀತಿಸುವವಳೂ ಆದ ಪತ್ನಿಯು ಸ್ಥಿತಳಾಗಿರುವಂತೆ ಈ ಅಗ್ನಿಯ ಹೃದಯದಲ್ಲಿ ಅದನ್ನು ಮುಟ್ಟುವಂತೆ ನಾನು ಇರುವಂತಾಗಲಿ.

## English Translation

I will address this new laudatory hymn to the ancient Agni, who is gratified (by praise). May he hear us. May I be in the centre of his heart, to touch it, like a loving well-attired wife (in the heart) of her husband.

। ಸಂಹಿತಾಪಾಠಃ ।

ಯಸ್ಮಿನ್ನಶ್ವಾಸ ಋಷಭಾಸ ಉಕ್ಷಣೋ ವಶಾ ಮೇಷಾ ಅವಸೃಷ್ಟಾಸ
ಆಹುತಾಃ ।
ಕೀಲಾಲಪೇ ಸೋಮಪೃಷ್ಠಾಯ ವೇಧಸೇ ಹೃದಾ ಮತಿಂ ಜನಯೇ
ಚಾರುಮಗ್ನಯೇ ॥ ೧೪ ॥

। ಪದಪಾಠಃ ।

ಯಸ್ಮಿನ್ । ಅಶ್ವಾಸಃ । ಋಷಭಾಸಃ । ಉಕ್ಷಣಃ । ವಶಾಃ । ಮೇಷಾಃ । ಅವಽಸೃಷ್ಟಾಸಃ । ಆಽಹುತಾಃ ।
ಕೀಲಾಲಽಪೇ । ಸೋಮಽಪೃಷ್ಠಾಯ । ವೇಧಸೇ । ಹೃದಾ । ಮತಿಂ । ಜನಯೇ । ಚಾರುಂ । ಅಗ್ನಯೇ ॥

॥ ಸಾಯಣಭಾಷ್ಯಂ ॥

ಯಸ್ಮಿನ್ನಗ್ನಾವೃಕ್ಷಣ ಉಕ್ಷಾಣಃ ॥ ವಾ ಷಪೂರ್ವಸ್ಯ ನಿಗಮ ಇತಿ ದೀರ್ಘವಿಕಲ್ಪಃ ॥ ಸೇಚನಸಮರ್ಥಾ ಅಶ್ವಾಸೋಽಶ್ವಾ ಋಷಭಾಸೋ ವೃಷಭಾಶ್ಚ ವಶಾಃ ಸ್ವಭಾವವಂಧ್ಯಾಶ್ಚ ಮೇಷಾಶ್ಚಾವಸೃಷ್ಟಾಸೋ ದೇವತಾರ್ಥಮವಸೃಷ್ಟಾಃ ಪರಿತ್ಯಕ್ತಾಃ ಸಂತೋಽಶ್ವಮೇಧ ಆಹುತಾ ಅಭಿಮುಖ್ಯೇನ ಹುತಾ ಭವಂತಿ ಕೀಲಾಲಪೇ ಸೌತ್ರಾಮಣ್ಯಾಂ ಸುರಾಂ ಪಿಬತೇ । ಕೀಲಾಲಮಿತ್ಯುದಕನಾಮಸು ಪಾಠಾತ್ । ಉದಕಂ ಪಿಬತೇ ಸೋಮಪೃಷ್ಠಾಯ ಸೋಮಯುಕ್ತಃ ಪೃಷ್ಠ ಉಪರಿಭಾಗೋ ಯಸ್ಯ ತಸ್ಮೈ ಸೋಮಪೃಷ್ಠಾಯ ವೇಧಸೇ ವಿಧಾತ್ರೇ ತಸ್ಮಾ ಅಗ್ನಯೇ ಹೃದಾ ಹೃದಯೇನ ಚಾರುಂ ಕಲ್ಯಾಣೀಂ ಮತಿಂ ಸ್ತುತಿಂ ಜನಯೇ । ಜನಯಾಮಿ । ಉತ್ಪಾದಯಾಮಿ ॥

। ಪ್ರತಿಪದಾರ್ಥ ।

**ಯಸ್ಮಿನ್**—ಯಾವ ಅಗ್ನಿಯಲ್ಲಿ । **ಉಕ್ಷಣಃ**—ಪುಂಸಾಮರ್ಥ್ಯಯುತವಾದ । **ಅಶ್ವಾಸಃ**—ಅಶ್ವಗಳೂ । **ಋಷಭಾಸಃ**—ವೃಷಭಗಳೂ । **ವಶಾಃ**—ಸ್ವಭಾವವಾಗಿಯೇ ಬಂಜೆಯಾದ । **ಮೇಷಾಃ**—ಟಗರುಗಳೂ । **ಅವಸೃಷ್ಟಾಸಃ**—ಯಜ್ಞಾರ್ಥವಾಗಿ ಬಿಡಲ್ಪಟ್ಟು । **ಆಹುತಾಃ**—ಆಹುತಿರೂಪದಲ್ಲಿ ಅರ್ಪಿತವಾಗುವುವೋ ಅಂತಹ । **ಕೀಲಾಲಪೇ**—ಉದಕವನ್ನು ಪಾನಮಾಡುವವನೂ (ಸುರೆಯನ್ನು ಪಾನಮಾಡುವವನೂ) । **ಸೋಮಪೃಷ್ಠಾಯ**—ಸೋಮಯುಕ್ತವಾದ ಪೃಷ್ಠಭಾಗವುಳ್ಳವನೂ । **ವೇಧಸೇ**—ಕರ್ಮನಿರ್ಮಾಪಕನೂ ಆದ । **ಅಗ್ನಯೇ**—ಅಗ್ನಿಯನ್ನುದ್ದೇಶಿಸಿ । **ಹೃದಾ**—ಮನಃಪೂರ್ವಕವಾಗಿ । **ಚಾರುಂ**—ಆಕರ್ಷಕವಾದ । **ಮತಿಂ**—ಸ್ತುತಿಯನ್ನು । **ಜನಯೇ**—ನಿರ್ಮಿಸುತ್ತೇನೆ.

। ಭಾವಾರ್ಥ ।

ಪುಂಸ್ಸಾಮರ್ಥ್ಯಯುತವಾದ ಅಶ್ವಗಳೂ, ವೃಷಭಗಳೂ, ಸ್ವಭಾವವಾಗಿಯೇ ಜಂಜೆಯಾದ ಟಗರುಗಳೂ ಯಜ್ಞಾರ್ಥವಾಗಿ ಬಿಡಲ್ಪಟ್ಟು ಯಾವ ಅಗ್ನಿಯಲ್ಲಿ ಆಹುತಿರೂಪವಾಗಿ ಅರ್ಪಿತವಾಗುವುವೋ ಅಂತಹ ಉದಕವನ್ನು ಪಾನಮಾಡುವವನೂ, ಸೋಮಯುಕ್ತವಾದ ಪೃಷ್ಠಭಾಗವುಳ್ಳವನೂ, ಕರ್ಮನಿರ್ಮಾಪಕನೂ ಆದ ಅಗ್ನಿಯನ್ನುದ್ದೇಶಿಸಿ ಮನಃಪೂರ್ವಕವಾಗಿ ಆಕರ್ಷಕವಾದ ಸ್ತುತಿಯನ್ನು ನಿರ್ಮಿಸುತ್ತೇನೆ..

## English Translation.

I offer graceful praise with all my heart to Agni, the drinker of vater, whose back is sprinkled with Soma, the ordainer (of the rite), to vhom vigorous horses and bulls and barren cows and sheep are consigned is burnt offerings.

। ಸಂಹಿತಾಪಾಠಃ ॥

ಅಹಾವ್ಯಗ್ನೇ ಹವಿರಾಸ್ಯೇ ತೇ ಸ್ರುಚೀವ ಘೃತಂ ಚಮ್ವೀವ ಸೋಮಃ ।
ವಾಜಸನಿಂ ರಯಿಮಸ್ಮೇ ಸುವೀರಂ ಪ್ರಶಸ್ತಂ ಧೇಹಿ ಯಶಸಂ ಬೃಹಂತಂ ॥

ನಿರ್ಮಿಸುವಂತೆಯೂ, ದೇವದ್ವೇಷಿಗಳಾದ ಅಸುರರನ್ನು ನಾಶಮಾಡಲು ಯೋಗ್ಯವಾದ ನನ್ನ ಈ ಸ್ತುತಿಯನ್ನು ಋತ್ವಿಕ್ಕುಗಳು ಸಂಸ್ಕರಿಸಿ ಪುಷ್ಟಿಗೊಳಿಸಲಿ.

English Translation.

May (the priests) strengthen this my hymn, the destroyer of the enemies (of the gods), of brilliant path like the rays in the sun, as the carpenter (sends forth) the upright car.

। ಸಂಹಿತಾಪಾಠಃ ।

ವಾವರ್ತ ಯೇಷಾಂ ರಾಯಾ ಯುಕ್ತೈಷಾಂ ಹಿರಣ್ಯಯೀ ।
ನೇಮಧಿತಾ ನ ಪೌಂಸ್ಯಾ ವೃಥೇವ ವಿಷ್ಟಾಂತಾ ॥ ೧೩ ॥

। ಪದಪಾಠಃ ॥

ವವರ್ತ । ಯೇಷಾಂ । ರಾಯಾ । ಯುಕ್ತಾ । ಏಷಾಂ । ಹಿರಣ್ಯಯೀ ।
ನೇಮಽಧಿತಾ । ನ । ಪೌಂಸ್ಯಾ । ವೃಥಾಽಇವ । ವಿಷ್ಟಽಅಂತಾ ॥ ೧೩ ॥

। ಸಾಯಣಭಾಷ್ಯಂ ।

ಯೇಷಾಂ ದೇವಾನಾಂ ಸ್ವಭೂತೇನ ರಾಯಾಸ್ಮಭ್ಯಂ ದಾತವ್ಯೇನ ಧನೇನ ಯುಕ್ತಾ ಸ್ತುತಿರಾವವರ್ತ ತೇಷಾಮೇಷಾಮರ್ಥಾಯ ಹಿರಣ್ಯಯೀ ಹಿರಣ್ಮಯೀ ಹಿರಣ್ಯಾಲಂಕಾರವತ್ಪ್ರೀತಿಕರಾಸ್ಮನ್ಮುಖಾತ್ಪುನಃಪುನರಾವರ್ತತ ಇತ್ಯರ್ಥಃ । ತತ್ರ ದೃಷ್ಟಾಂತಃ । ಪೌಂಸ್ಯಾ ಪೌಂಸ್ಯಾನಿ ಬಲಾನಿ ನೇಮಧಿತಾ ನ ನೇಮಧಿತೌ ಸಂಗ್ರಾಮೇ । ವಿಷ್ಟಾಂತಾ ವ್ಯಾಪ್ತಾವಸಾನಾ ವೃಥೇವ ಯಥಾ ಘಟಿಕಾಯಂತ್ರಮಾಲಾ ತದ್ವದಿತ್ಯರ್ಥಃ ॥

। ಪ್ರತಿಪದಾರ್ಥ ।

**ನೇಮಧಿತಾ**—ಯುದ್ಧಗಳಲ್ಲಿ । **ಪೌಂಸ್ಯಾ**—ಬಲಪ್ರದರ್ಶನ ಅಥವಾ ಪರಾಕ್ರಮಗಳು । **ವೃಥಾ**—ಅನಾಯಾಸವಾಗಿ । **ವಿಷ್ಟಾಂತಾ ನ**—ಜಯವನ್ನು ಉಂಟುಮಾಡುವಂತೇ । **ಯೇಷಾಂ**—ಯಾವ ದೇವತೆಗಳಲ್ಲಿರುವ । **ರಾಯಾ**—ನಮಗೆ ಕೊಡಬೇಕಾದ ಧನದಿಂದ । **ಯುಕ್ತಾ**—ಸಹಿತವಾದ ಸ್ತುತಿಯು । **ವವರ್ತ**—ನಮ್ಮಿಂದ ಪಠಿಸಲ್ಪಡುವುದೋ । **ಏಷಾಂ**—ಅದೇ ದೇವತೆಗಳನ್ನುದ್ದೇಶಿಸಿ । **ಹಿರಣ್ಮಯೀ**—ಹಿರಣ್ಯಾಲಂಕಾರದಂತೆ ಪ್ರಿಯಕರವಾದ ಸ್ತುತಿಗಳು ನಮ್ಮಿಂದ ಪಠಿತವಾಗುತ್ತವೆ.

। ಭಾವಾರ್ಥ ।

ಯುದ್ಧಗಳಲ್ಲಿ ಬಲಪ್ರದರ್ಶನದಿಂದ ಅನಾಯಾಸವಾಗಿ ನಾವು ಜಯವನ್ನು ಗಳಿಸುತ್ತೇವೆ. ಅದರಂತೆ ದೇವತೆಗಳಲ್ಲಿರುವ ಧನವನ್ನು ಪಡೆಯುವುದಕ್ಕಾಗಿ ಸುವರ್ಣಾಭರಣಗಳಂತೆ ಪ್ರಿಯಕರವಾದ ಸ್ತೋತ್ರಾದಿಗಳನ್ನು ಪಠಿಸಿ ದೇವತೆಗಳನ್ನು ಧನಕ್ಕಾಗಿ ಪ್ರಾರ್ಥಿಸುತ್ತೇವೆ.

## English Translation

Those whose (praise) arrives, accompanied by wealth, of them it is (as) a golden (ornament), like manly powers in battle reaching the conclusion, as it were, without an effort.

|| ವಿಶೇಷವಿಷಯಗಳು ||

ದೇವತೆಗಳಲ್ಲಿ ಅವರು ನಮಗೆ ಕೊಡಬೇಕೆಂದಿರುವ ಧನವಿರುವುದು. ಆ ಧನಪ್ರಾಪ್ತಿಗಾಗಿ ನಾವು ಅವರನ್ನು ಸ್ತುತಿಸುತ್ತೇವೆ. ಹೇಗೆಂದರೆ, ಯುದ್ಧಗಳಲ್ಲಿ ಜಯವನ್ನು ಗಳಿಸುವುದಕ್ಕಾಗಿ ನಾವು ನಮ್ಮ ಪರಾಕ್ರಮವನ್ನು ತೋರಿ ಬಲಪ್ರದರ್ಶನದಿಂದ ಅನಾಯಾಸವಾಗಿ ಶತ್ರುಗಳನ್ನು ಗೆಲ್ಲುತ್ತೇವೆ. ಅದರಂತೆ ದೇವತೆಗಳಲ್ಲಿರುವ ಧನವನ್ನು ನಾವು ಪಡೆಯುವುದಕ್ಕಾಗಿ ಸುವರ್ಣಾಭರಣಗಳಂತೆ ಅವರಿಗೆ ಹಿತಕರವಾದ ಸ್ತೋತ್ರಾದಿಗಳನ್ನು ಪಠಿಸಿ ಅವರಿಗೆ ಸಂತೋಷವನ್ನುಂಟುಮಾಡಿ ಎಂದರೆ ಅವರು ನಮ್ಮ ಸ್ತೋತ್ರದಿಂದ ಪ್ರೀತರಾಗಿ ನಮಗೆ ಧನಾದಿಗಳನ್ನು ಕೊಡಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಪ್ರ ತದ್ದುಃಶೀಮೇ ಪೃಥವಾನೇ ವೇನೇ ಪ್ರ ರಾಮೇ ವೋಚಮಸುರೇ ಮಘವತ್ಸು ।
ಯೇ ಯುಕ್ತ್ವಾಯ ಪಂಚ ಶತಾಸ್ಮಯು ಪಥಾ ವಿಶ್ರಾವ್ಯೇಷಾಂ ॥ ೧೪ ॥

॥ ಪದಪಾಠಃ ॥

ಪ್ರ । ತತ್ । ದುಃऽಶೀಮೇ । ಪೃಥವಾನೇ । ವೇನೇ । ಪ್ರ । ರಾಮೇ । ವೋಚಂ । ಅಸುರೇ । ಮಘವತ್ऽಸು ।
ಯೇ । ಯುಕ್ತ್ವಾಯ । ಪಂಚ । ಶತಾ । ಅಸ್ಮऽಯು । ಪಥಾ । ವಿऽಶ್ರಾವಿ । ಏಷಾಂ ॥ ೧೪ ॥

॥ ಸಾಯಣಭಾಷ್ಯಂ ॥

ಯೇ ದೇವಾಃ ಪಂಚ ಶತಾ ಶತಾನಿ ರಥಾನ್ಯುಕ್ತ್ವಾಯಾಶ್ವೈರ್ಯುಕ್ತ್ವಾಸ್ಮಯುಸ್ಮತ್ಕಾಮಾಃ ಸಂತಃ ಪಥಾ ಯಜ್ಞಮಾರ್ಗೇಣ ಗಚ್ಛಂತಿ ತೇಷಾಮೇಷಾಂ ದೇವಾನಾಂ ವಿಶ್ರಾವಿ ದೇವಾನಾಂ ಲೋಕೇ ನಾನಾವಿಶೇಷೇಣ ಶ್ರಾವಕಗುಣಯುಕ್ತಂ ತತ್ಸ್ತೋತ್ರಂ ದುಃಶೀಮೇ ದುಃಶೀಮನಾಮ್ನಿ

**ಪೃಥವಾನೇ । ಪೃಥವಾನಃ ಪೃಥಿಃ । ತಸ್ಮಿನ್ ವೇನೇ ಚಾಸುರೇ ಬಲವತಿ ರಾಮೇ ಚೈತೇಷು ರಾಜಸು ಪ್ರ ವೋಚಂ । ಪ್ರಬ್ರವೀಮಿ । ಪ್ರಖ್ಯಾಪಯಾಮೀತ್ಯರ್ಥಃ । ಮಘವತ್ಸ್ವನ್ಯೇಷು ಧನವತ್ಸು ಚ ಪ್ರಖ್ಯಾಪಯಾಮೀತ್ಯರ್ಥಃ ॥**

। ಪ್ರತಿಪದಾರ್ಥ ।

**ಯೇ**—ಯಾವ ದೇವತೆಗಳು । **ಪಂಚ ಶತಾ**—ಐನೂರು ರಥಗಳನ್ನು । **ಯುಕ್ತ್ವಾಯ**—ಅಶ್ವಗಳೊಡನೆ ಯೋಜಿಸಿ । **ಪಥಾ**—ಯಜ್ಞಮಾರ್ಗದಲ್ಲಿ ಬರುವರೋ । **ಏಷಾಂ**—ಅದೇ ದೇವತೆಗಳಿಗೆ । **ಅಸ್ಮಯು**—ನಮ್ಮ ಮೇಲಿರುವ ಅಭಿಮಾನವು । **ವಿಶ್ರಾವಿ**—ಜಗತ್ಪ್ರಸಿದ್ಧವಾದುದು ಎಂಬ । **ತತ್**—ಈ ಪ್ರಶಂಸಾ ವಾಕ್ಯವನ್ನು । **ದುಃಶೀಮೇ**—ದುಃಶೀಮನಲ್ಲಿಯೂ । **ಪೃಥವಾನೇ**—ಪೃಥವಾನನಲ್ಲಿಯೂ । **ವೇನೇ**—ವೇನನಲ್ಲಿಯೂ । **ಅಸುರೇ**—ಶಕ್ತಿಯುತನಾದ । **ರಾಮೇ**—ರಾಮನಲ್ಲಿಯೂ । **ಪ್ರ ವೋಚಂ**—ಪ್ರಕಟಿಸಿ ಹೇಳುತ್ತೇನೆ । **ಮಘವತ್ಸು**—ಧನವಂತರಾದ ಉಳಿದ ರಾಜರಲ್ಲಿಯೂ । **ಪ್ರ**—ಹೇಳುತ್ತೇನೆ.

॥ ಭಾವಾರ್ಥ ॥

ಯಾವ ದೇವತೆಗಳು ಐನೂರು ರಥಗಳನ್ನು ಅಶ್ವಗಳೊಡನೆ ಯೋಜಿಸಿ ಯಜ್ಞಮಾರ್ಗದಲ್ಲಿ ಬರುವರೋ ಅದೇ ದೇವತೆಗಳಿಗೆ ನಮ್ಮ ಮೇಲಿರುವ ಅಭಿಮಾನವು ಜಗತ್ಪ್ರಸಿದ್ಧವಾದುದು ಎಂಬ ಈ ಪ್ರಶಂಸಾವಾಕ್ಯವನ್ನು ದುಃಶೀಮನಲ್ಲಿಯೂ, ಪೃಥವಾನನಲ್ಲಿಯೂ, ವೇನನಲ್ಲಿಯೂ, ಶಕ್ತಿಯುತನಾದ ರಾಮನಲ್ಲಿಯೂ, ಪ್ರಕಟಿಸಿ ಹೇಳುತ್ತೇನೆ. ಧನವಂತರಾದ ಉಳಿದ ರಾಜರಲ್ಲಿಯೂ ಪ್ರಕಟಿಸಿ ಹೇಳುತ್ತೇನೆ.

English Translation.

This I proclaim in the presence of Duhsima, Prithavana, Vena, the mighty Rama, and (other) opulent (princes): those who (come), having yoked five hundred (chariots), their affection for us is renowned on the road.

। ಸಂಹಿತಾಪಾಠಃ ।

**ಅಧೀನ್ನ್ವತ್ರ ಸಪ್ತತಿಂ ಚ ಸಪ್ತ ಚ ।**

**ಸದ್ಯೋ ದಿದಿಷ್ಟ ತಾನ್ವಃ ಸದ್ಯೋ ದಿದಿಷ್ಟ ಪಾರ್ಥ್ಯಃ ಸದ್ಯೋ ದಿದಿಷ್ಟ ಮಾಯವಃ ॥ ೧೫ ॥**

॥ ಪದಪಾಠಃ ॥

ಅಧಿ । ಇತ್ । ನು । ಅತ್ರ । ಸಪ್ತತಿಂ । ಚ । ಸಪ್ತ । ಚ ।

ಸದ್ಯಃ । ದಿದಿಷ್ಟ । ತಾನ್ವಃ । ಸದ್ಯಃ । ದಿದಿಷ್ಟ । ಪಾರ್ಥ್ಯಃ । ಸದ್ಯಃ । ದಿದಿಷ್ಟ । ಮಾಯವಃ ॥ ೧೫ ॥

। ಸಾಯಣಭಾಷ್ಯಂ ।

**ಅತ್ರೈಷು ರಾಜಸು ತಾನ್ವೋ ನಾಮರ್ಷಿರ್ಗವಾಂ ಸಪ್ತ ಚ ಸಪ್ತತಿಂ ಚ ನು ಕ್ಷಿಪ್ರಂ ಸದ್ಯ ಇತ್ ಸದ್ಯ ಏವಾಧಿ ದಿದಿಷ್ಟ । ಅಧಿಪೂರ್ವೋ ದಿಶಿರ್ಯಾಚನಾರ್ಥಃ । ಯಯಾಚೇ । ಕಿಂಚ ಪಾರ್ಥ್ಯೋ ನಾಮ ಯುವನಾಶ್ವನಾಮಕಸ್ಯ ಕುಲೇ ಪೃಥೋಃ ಪುತ್ರಃ ಕಶ್ಚಿತ್ಸದ್ಯ ಏವ ಗವಾಂ ಸಪ್ತಸಪ್ತತಿಮಧಿ ದಿದಿಷ್ಟ । ಕಿಂಚ ಮಾಯವೋಽಪಿ ಸದ್ಯ ಏವಾಧಿ ದಿದಿಷ್ಟ ॥**

। ಪ್ರತಿಪದಾರ್ಥ ।

**ಅತ್ರ**—ಈ ರಾಜರಲ್ಲಿ । **ತಾನ್ವಃ**—ತಾನ್ವನೆಂಬ ರಾಜರ್ಷಿಯು । **ಸಪ್ತ ಚ ಸಪ್ತತಿಂ ಚ**—ಎಪ್ಪತ್ತೇಳು ಅಶ್ವಗಳನ್ನು । **ಸದ್ಯ ಇತ್**—ಒಡನೆಯೇ । **ಅಧಿ ದಿದಿಷ್ಟ**—ಬೇಡಿದನು । **ಪಾರ್ಥ್ಯಃ**—ಪೃಥುವಿನ ಪುತ್ರನು । **ಸದ್ಯಃ**—ಒಡನೆಯೇ । **ದಿದಿಷ್ಟ**—ಅದೇ ಸಂಖ್ಯೆಯ ಅಶ್ವಗಳನ್ನು ಬೇಡಿದನು । **ಮಾಯವಃ**—ಮಾಯವನೂ । **ಸದ್ಯಃ**—ಒಡನೆಯೇ । **ದಿದಿಷ್ಟ**—ಅದನ್ನೇ ಬೇಡಿದನು.

। ಭಾವಾರ್ಥ ।

ಮೇಲೆ ಹೇಳಿದ ರಾಜರಿಂದ ತಾನ್ವನೆಂಬ ರಾಜರ್ಷಿಯು ಎಪ್ಪತ್ತೇಳು ಅಶ್ವಗಳನ್ನು ಬೇಡಿದನು. ಪಾರ್ಥ್ಯನೂ, ಮಾಯವನೂ ಸಹ ಅದನ್ನೇ ಬೇಡಿದರು.

English Translation

Amongst them Tanwa promptly demanded seven-and-seventy (cows), Parthya demanded promptly, Mayava demanded promptly.



## ತೊಂಭತ್ತನಾಲ್ಕನೆಯ ಸೂಕ್ತವು.

## ಪೀಠಿಕೆ.

ಈ ಸೂಕ್ತಕ್ಕೆ **ಗ್ರಾವಾಣಃ** ಎಂಬುದು ದೇವತೆಯು. ಗ್ರಾವಾಣಃ ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವುದಕ್ಕಾಗಿ ಉಪಯೋಗಿಸುವ ಕಲ್ಲುಗಳು. ಇವುಗಳಿಗೆ ಅದ್ರಿ ಎಂತಲೂ ಬೇರೆ ಹೆಸರಿದೆ. ಈ ಗ್ರಾವಗಳನ್ನು ಈ ಸೂಕ್ತದಲ್ಲಲ್ಲದೆ, ಇದೇ ಮಂಡಲದ ೭೬ ಮತ್ತು ೧೭೫ನೇ ಸೂಕ್ತಗಳಲ್ಲಿಯೂ ಸ್ತುತಿಸಲಾಗಿದೆ. ಈ ಮೂರು ಸೂಕ್ತಗಳಿಗೆ ಗ್ರಾವಗಳೇ ದೇವತೆಯು. ಇತರ ಅನೇಕ ಮಂತ್ರಗಳಲ್ಲಿ ಗ್ರಾವಸ್ತುತಿಯ ವರ್ಣನೆ ಇದೆ. ಈ ಗ್ರಾವಗಳನ್ನು ಬಹಳ ಗೌರವದಿಂದ ಕಾಣುತ್ತಿದ್ದರಲ್ಲದೆ ಈ ಗ್ರಾವಗಳಿಂದ ಸೋಮಲತೆಯನ್ನು ಜಜ್ಜುವಾಗ ಉಂಟಾಗುವ ಶಬ್ದವು ಬಹಳ ಮಧುರವಾಗಿರುವುದೆಂದೂ ಆ ಶಬ್ದವು ಇಂದ್ರನಿಗೆ ಹಿತಕರವಾಗಿರುವುದೆಂದೂ ಆ ಶಬ್ದ ವಿದ್ದೆಡೆಗೆ ಇಂದ್ರನು ತಪ್ಪದೆ ಬರುತ್ತಿದ್ದನೆಂದೂ ಅನೇಕವಿಧವಾದ ವರ್ಣನೆಗಳಿವೆ. ಋ. ಸಂ. ೧-೨೮ನೆಯ ಸೂಕ್ತದಲ್ಲಿ ಸೋಮಲತೆಯನ್ನು ಕಲ್ಲಿನ ಮೇಲಿಟ್ಟು ಜಜ್ಜಿ ರಸವನ್ನು ಹಿಂಡುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸಲಾಗಿದೆ. ಆದ್ದರಿಂದ ಸೋಮಲತೆಗಳಿಂದ ರಸವನ್ನು ಹಿಂಡಿ ತೆಗೆಯುವ ಕ್ರಮವನ್ನೂ, ಇವಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ಇಲ್ಲಿ ಪ್ರಸ್ತಾಪಮಾಡುವುದು ಅಪ್ರಕೃತವಾಗಲಾರದು.

ಯಜ್ಞದಲ್ಲಿ ಸೋಮರಸವನ್ನು ಜಜ್ಜಿ ಹಿಂಡುವುದಕ್ಕಾಗಿ ಉಪಯೋಗಿಸುವ ಅಗಲವಾದ ತಳಭಾಗವೂ ಕಯ್ಯಿಂದ ಹಿಡಿದುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಉದ್ದವಾಗಿಯೂ ಇರುವ ಕಲ್ಲನ್ನು ಮೇಲಕ್ಕೆತ್ತಿ ಒರಳಿನಲ್ಲಿರುವ ಸೋಮಲತೆಯನ್ನು ಕುಟ್ಟಿ ಹಿಂಡಿ ರಸವನ್ನು ತೆಗೆಯುವರು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು— ಸೋಮಯಾಗಗಳಲ್ಲಿ ಸೋಮಪಾನಕ್ಕಾಗಿ ಸೋಮಲತೆಯನ್ನು ಜಜ್ಜಿ, ಹಿಂಡಿ, ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನ ಋತ್ವಿಜರು ತಾವೂ ಪಾನಮಾಡುವುದು ರೂಢಿಯಾಗಿದೆ. ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವುದು. ಇದಕ್ಕೆ **ಅಭಿಷವಣ** ಅಥವಾ **ಸವನ**ವೆಂದು ಹೆಸರು. ಪ್ರಾತಃಕಾಲದ ಕರ್ಮಕ್ಕೆ **ಪ್ರಾತಃಸವನ**ವೆಂದೂ ಮಧ್ಯಾಹ್ನದಲ್ಲಿ ಮಾಡುವ ಸವನಕ್ಕೆ **ಮಾಧ್ಯಂದಿನಸವನ**ವೆಂದೂ, ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದೂ ಹೆಸರು.

ಸೋಮಲತೆಯು ಈಗಿನ ಕಾಲದಲ್ಲಿ ಸಿಕ್ಕುವುದಿಲ್ಲ. ಹಿಂದೆ ನದೀತೀರಗಳಲ್ಲಿಯೂ ಪರ್ವತದ ಮೇಲೆಯೂ ಬೆಳೆಯುತ್ತಿತ್ತು. ಅದನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು. ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು.

ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು. ಈ ಮಿಶ್ರಣಕ್ಕೆ ಆಶಿರದ್ರವ್ಯಗಳೆಂದು ಹೆಸರು. ಹಾಲನ್ನು ಮಿಶ್ರಮಾಡಿದ ಸೋಮರಸಕ್ಕೆ **ಗವಾಶಿರ**ವೆಂದೂ, **ಮೊಸರನ್ನು** ಮಿಶ್ರಮಾಡಿದ ಸೋಮರಸಕ್ಕೆ **ದಧ್ಯಾಶಿರ**ವೆಂದೂ, ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರ**ವೆಂದೂ, ಹೇಳುವರು. ಸೋಮರಸವು ತೀವ್ರವೆಂದು ಕೆಲವು ವೇಳೆ ಹೇಳಲ್ಪಡುವುದು. ಆಗ ಅದು ತೀಕ್ಷ್ಣವಾದ ವಾಸನೆಯಿಂದ ಅಥವಾ ರುಚಿಯಿಂದ (pungent flavour) ಕೂಡಿರುವುದೆಂದು ತಿಳಿಯಬೇಕು. ಸೋಮರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ಭಾಗಕ್ಕೆ **ಋಜೀಷ**ವೆಂದು ಹೆಸರು.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವಾ** ಅಥವಾ **ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು. ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಪ್ಪಟದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ, ಶುಚಿ, ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರು

ವುದು. ಇಂದ್ರನಿಗೂ, ವಾಯುವಿಗೂ ಶುದ್ಧವಾದ ಎಂದರೆ, ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸುವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸುವುದುಂಟು. ಅವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ, ಯವಾಶಿರ** ಎಂಬ ಹೆಸರುಗಳಿವೆ.

। ಸಾಯಣಭಾಷ್ಯಂ ।

**ಪ್ರೈತ ಇತಿ ಚತುರ್ದಶರ್ಚಂ ಚತುರ್ಥಂ ಸೂಕ್ತಂ। ಕದ್ರ್ವಾಃ ಪುತ್ರಸ್ಯ ಸರ್ಪಸ್ಯಾರ್ಬುದಸ್ಯಾರ್ಷಂ ಪಂಚಮೀ ಸಪ್ತಮೀ ಚತುರ್ದಶೀ ತ್ರಿಷ್ಟುಭಃ ಶಿಷ್ಟಾ ಏಕಾದಶ ಜಗತ್ಯಃ। ಸೋಮಾಭಿಷವಾರ್ಥಾ ಗ್ರಾವಾಣೋಽತ್ರ ದೇವತಾ। ತಥಾ ಚಾನುಕ್ರಾಂತಂ। ಪ್ರೈತೇ ಷಳೂನಾ ಸರ್ಪೋಽರ್ಬುದಃ ಕಾದ್ರವೇಯೋ ಗ್ರಾವ್ಣೋಽಸ್ತೌತ್ಪಂಚಮ್ಯಂತ್ಯೇ ತ್ರಿಷ್ಟುಭೌ ಸಪ್ತಮೀ ಚೇತಿ ॥ ಗ್ರಾವಸ್ತೋತ್ರ ಏತತ್ಸೂಕ್ತಂ। ಸೂತ್ರಿತಂ ಚ। ಪ್ರೈತೇ ವದಂತ್ವಿತ್ಯರ್ಬುದಂ ಪ್ರಾಗುತ್ತಮಾಯಾ ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋಃ। ಆ. ೫-೧೨। ಇತಿ। ಯದ್ವಾ। ಇದಮೇಕಮೇವ ಸೂಕ್ತಂ ಗ್ರಾವಸ್ತೋತ್ರಂ। ಸೂತ್ರಿತಂ ಚ। ಅರ್ಬುದಮೇವೇತ್ಯೇಕೇ ಪ್ರ ವೋ ಗ್ರಾವಾಣ ಇತ್ಯೇಕೇ। ಆ. ೫-೧೨। ಇತಿ॥**

ಅನುವಾದವು— **ಪ್ರೈತೇ** ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕದ್ರೂವಿನ ಪುತ್ರನಾದ **ಅರ್ಬುದಃ ಸರ್ಪಃ** ಎಂಬುವನು ಋಷಿಯು; ಸೋಮಾಭಿಷವಾರ್ಥವಾಗಿ ಉಪಯೋಗಿಸಲ್ಪಡುವ ಕಲ್ಲುಗಳೇ ದೇವತೆಯು; ಈ ಸೂಕ್ತದ ಐದು, ಏಳು ಮತ್ತು ಹದಿನಾಲ್ಕನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸವು. ಉಳಿದ ಹನ್ನೊಂದು ಋಕ್ಕುಗಳೂ ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ- **ಪ್ರೈತೇ ಷಳೂನಾ ಸರ್ಪೋಽರ್ಬುದಃ ಕಾದ್ರವೇಯೋ ಗ್ರಾವ್ಣೋಽಸ್ತೌತ್ಪಂಚಮ್ಯಂತೇ ತ್ರಿಷ್ಟುಭೌ ಸಪ್ತಮೀ ಚ** ಎಂದು ಹೇಳಿರುವುದು. ಈ ಸೂಕ್ತದಲ್ಲಿ ಸೋಮಾಭಿಷವಾರ್ಥವಾಗಿ ಉಪಯೋಗಿಸಲ್ಪಡುವ ಕಲ್ಲುಗಳನ್ನು ಸ್ತುತಿಸಲಾಗಿದೆ. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—**ಪ್ರೈತೇ ವದಂತ್ವಿತ್ಯರ್ಬುದಂ ಪ್ರಾಗುತ್ತಮಾಯಾ ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋಃ** ಎಂಬ ಸೂತ್ರದಿಂದ (ಆ. ೫-೧೨) ವಿವೃತವಾಗಿರುವುದು. ಅಥವಾ ಈ ಸೂಕ್ತವೇ ಮುಖ್ಯವಾದ **ಗ್ರಾವಸ್ತುತಿಯು** ಎಂದು ಆಶ್ವಲಾಯನ ಶ್ರೌತಸೂತ್ರದ—**ಅರ್ಬುದಮೇವೇತ್ಯೇಕೇ ಪ್ರ ವೋ ಗ್ರಾವಾಣ ಇತ್ಯೇಕೇ** ಎಂಬ ಸೂತ್ರದಿಂದ (ಆ. ೫-೧೨) ವಿವೃತವಾಗಿರುವುದು.

## ಸೂಕ್ತ—೯೪

ಮಂಡಲ— ೧೦। ಅನುವಾಕ—೮। ಸೂಕ್ತ—೯೪॥
ಅಷ್ಟಕ—೮। ಅಧ್ಯಾಯ—೪। ವರ್ಗ—೨೯, ೩೦, ೩೧॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪॥
ಋಷಿಃ—ಅರ್ಬುದಃ ಕಾದ್ರವೇಯಃ ಸರ್ಪಃ॥
ದೇವತಾ—ಗ್ರಾವಾಣಃ।
ಛಂದಃ—೧-೪, ೬, ೮-೧೩. ಜಗತೀ। ೫, ೭, ೧೪. ತ್ರಿಷ್ಟುಪ್॥

॥ ಸಂಹಿತಾಪಾಠಃ ॥

ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।
ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥ ೧ ॥

॥ ಪದಪಾಠಃ ॥

ಪ್ರ । ಏತೇ । ವದಂತು । ಪ್ರ । ವಯಂ । ವದಾಮ । ಗ್ರಾವಽಭ್ಯಃ । ವಾಚಂ । ವದತ । ವದತ್ಽಭ್ಯಃ ।
ಯತ್ । ಅದ್ರಯಃ । ಪರ್ವತಾಃ । ಸಾಕಂ । ಆಶವಃ । ಶ್ಲೋಕಂ । ಘೋಷಂ । ಭರಥ । ಇಂದ್ರಾಯ ।
ಸೋಮಿನಃ ॥ ೧ ॥

॥ ಸಾಯಣಭಾಷ್ಯಂ ॥

ಏತೇ ಗ್ರಾವಾಣ ಉಪಲಾಃ ಪ್ರ ವದಂತು । ಅಭಿಷವಶಬ್ದಂ ಕುರ್ವಂತು । ವಯಂ ಯಜಮಾನಾ ವದದ್ಭ್ಯೋಽಭಿಷವಶಬ್ದಂ ಕುರ್ವದ್ಭ್ಯೋ ಗ್ರಾವಭ್ಯೋ ಗ್ರಾವ್ಣಾಮರ್ಥಾಯ ವಾಚಂ ಪ್ರ ವದಾಮ । ಕಿಂಚ ಹೇ ಋತ್ವಿಜಃ ಯೂಯಮಪಿ ಸ್ತುತಿಲಕ್ಷಣಾಂ ವಾಚಂ ವದತ । ಪಠತ । ಯದ್ಯದಾದ್ರಯ ಆದರಣೀಯಾ ದೃಢಾ ಆಶವಃ ಸೋಮಾಭಿಷವಾರ್ಥಂ ಕ್ಷಿಪ್ರಕಾರಿಣಃ ಪರ್ವತಾ ಗ್ರಾವಾಣಃ ಸರ್ವೇ ಯೂಯಂ ಸಾಕಂ ಸಹೇಂದ್ರಾಯೇಂದ್ರಾರ್ಥಂ ಶ್ಲೋಕಂ ಶ್ರೋತವ್ಯಂ ಘೋಷಮಭಿಷವಶಬ್ದಂ ಭರಥ ಪೋಷಯಥ ತದಾನೀಂ ಸೋಮಿನಃ ಸೋಮವಂತಃ ಸೋಮೇನ ತೃಪ್ತಾ ಭವಥ ॥

॥ ಪ್ರತಿಪದಾರ್ಥ ॥

**ಏತೇ**—ಈ ಹಿಂಡುವ ಕಲ್ಲುಗಳು। **ಪ್ರ ವದಂತು**—ಹಿಂಡುವ ಶಬ್ದವನ್ನು ಮಾಡಲಿ । **ವಯಂ**—ನಾವೂ । **ವದದ್ಭ್ಯಃ**—ಶಬ್ದವನ್ನು ಮಾಡುವ । **ಗ್ರಾವಭ್ಯಃ**—ಹಿಂಡುವ ಕಲ್ಲುಗಳಿಗೋಸ್ಕರ । **ವಾಚಂ**—ಪ್ರಾರ್ಥನಾ ವಾಕ್ಯನ್ನು । **ಪ್ರ ವದಾಮ**—ಪಠಿಸೋಣ (ಎಲೈ ಋತ್ವಿಕ್ಕುಗಳೇ)। **ವದತ**—ನೀವೂ ಸ್ತುತಿವಾಕ್ಯನ್ನು ಪಠಿಸಿರಿ । **ಅದ್ರಯಃ**—ದೃಢವಾದ ಸ್ವರೂಪವುಳ್ಳವರೂ । **ಆಶವಃ**—ಸೋಮವನ್ನು ಹಿಂಡಲು ಆತುರವುಳ್ಳವರೂ ಆದ । **ಪರ್ವತಾಃ**—ಎಲೈ ಗ್ರಾವಗಳೇ ! **ಯತ್**—ಯಾವಾಗ । **ಸಾಕಂ**—ನೀವು ಒಟ್ಟಿಗೆ ಸೇರಿ । **ಇಂದ್ರಾಯ**—ಇಂದ್ರಾರ್ಥವಾಗಿ । **ಶ್ಲೋಕಂ**—ಕೇಳಲು ಹಿತಕರವಾದ । **ಘೋಷಂ**—ಶಬ್ದವನ್ನು । **ಭರಥ**—ಮಾಡುತ್ತಿರುವಿರೋ ಆಗ । **ಸೋಮಿನಃ**—ನೀವು ಸೋಮರಸವನ್ನು ಹಿಂಡುತ್ತೀರಿ.

॥ ಭಾವಾರ್ಥ ॥

ಈ ಹಿಂಡುವ ಕಲ್ಲುಗಳು ಸೋಮವನ್ನು ಹಿಂಡುವ ಶಬ್ದವನ್ನು ಮಾಡಲಿ. ನಾವೂ ಅದಕ್ಕೆ ಪ್ರತಿಯಾಗಿ ಸ್ತುತಿವಾಕ್ಯವನ್ನು ಪಠಿಸೋಣ. ಎಲೈ ಋತ್ವಿಕ್ಕುಗಳೇ, ನೀವೂ ಸ್ತುತಿವಾಕ್ಯವನ್ನು ಪಠಿಸಿರಿ. ದೃಢವಾದ ಸ್ವರೂಪವುಳ್ಳವರೂ, ಸೋಮವನ್ನು ಹಿಂಡಲು ಆತುರವುಳ್ಳವರೂ ಆದ ಎಲೈ ಗ್ರಾವಗಳೇ, ಯಾವಾಗ ನೀವು ಒಟ್ಟಿಗೆ ಸೇರಿ ಇಂದ್ರಾರ್ಥವಾಗಿ ಕೇಳಲು ಹಿತಕರವಾದ ಶಬ್ದವನ್ನು ಮಾಡುತ್ತಿರುವಿರೋ, ಆಗ ನೀವು ಸೋಮವನ್ನು ಹಿಂಡುತ್ತೀರಿ.

## English Translation

Let these (stones) speak ; let us reply to the speaking stones, and do you (priests) utter (praise) ; when, solid, quick-moving stones, you utter the noise of praise together to Indra, (then you become) full of the Soma juice.

॥ ವಿಶೇಷವಿಷಯಗಳು ॥

**ಗ್ರಾವಭ್ಯಃ**—**ಗ್ರಾವಾಣಃ** ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳುವಾಗ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ಗ್ರಾವಾಣೋ ಹಂತೇರ್ವಾ, ಗೃಹ್ಣಾತೇರ್ವಾ** । (ನಿ. ೯-೯).

ಎಂದರೆ ಗ್ರಾವನ್ ಶಬ್ದವು ಕೊಲ್ಲು ಎಂಬರ್ಥವುಳ್ಳ **ಹನ ಹಿಂಸಾಗತ್ಯೋಃ** ಎಂಬ ಧಾತುವಿನಿಂದಾಗಲಿ, ಸ್ತೋತ್ರಮಾಡು ಎಂಬರ್ಥವುಳ್ಳ ಗೃ ಧಾತುವಿನಿಂದಾಗಲಿ ನಿಷ್ಪನ್ನವಾಗಿದೆ. ಸೋಮರಸವನ್ನು ಹಿಂಡುವಾಗ ಲತೆಗಳನ್ನು ಕಲ್ಲುಗಳಿಂದ ಜಜ್ಜುವುದರಿಂದ ಲತೆಗಳನ್ನು ಹಿಂಸಿಸಿ ಕೊಂದಂತಾಗುವುದು. ಕಲ್ಲುಗಳು ಈ ಕೆಲಸವನ್ನು ಮಾಡುವುದರಿಂದ ಸೋಮಾಭಿಷವಣಕಾರ್ಯದಲ್ಲಿ ಉಪಯುಕ್ತವಾದ ಕಲ್ಲುಗಳಿಗೆ **ಗ್ರಾವಾಣಃ** ಎಂದು ಹೆಸರು. ಮತ್ತು ಸೋಮಾಭಿಷವಣಕಾಲದಲ್ಲಿ ಈ ಕಲ್ಲುಗಳನ್ನು ಸ್ತುತಿಸುವುದರಿಂದ ಇದಕ್ಕೆ **ಗ್ರಾವಾಣಃ** ಎಂಬ ಹೆಸರು ಅಥವಾ ಕೈಯಲ್ಲಿ ಹಿಡಿದುಕೊ ಎಂಬರ್ಥವುಳ್ಳ **ಗ್ರಹ್** ಎಂಬ ಧಾತುವಿನಿಂದಲೂ **ಗ್ರಾವಾಣಃ** ಎಂಬ ಶಬ್ದವು ನಿಷ್ಪನ್ನವಾಗಬಹುದು. ಸೋಮಲತೆಗಳನ್ನು ಜಜ್ಜುವಾಗ ಈ ಕಲ್ಲುಗಳನ್ನು ಕೈಯಲ್ಲಿ ಹಿಡಿದುಕೊಳ್ಳುವುದರಿಂದ ಇವುಗಳಿಗೆ **ಗ್ರಾವಾಣಃ** ಎಂದು ಹೆಸರು.

> **ಪ್ರವದಂತ್ವೇತೇ ಪ್ರವದಾಮ ವಯಂ ಗ್ರಾವಭ್ಯೋ ವಾಚಂ ವದತ ವದದ್ಭ್ಯೋ ಯದದ್ರಯಃ ಪರ್ವತಾ ಆದರಣೀಯಾಃ ಸಹ ಸೋಮಮಾಶವಃ । ಕ್ಷಿಪ್ರಕಾರಿಣಃ, ಶ್ಲೋಕಃ ಶೃಣೋತೇಃ, ಘೋಷೋ ಘುಷ್ಯತೇಃ । ಸೋಮಿನೋ ಯೂಯಂ ಸ್ಥೇತಿ ವಾ ಸೋಮಿನೋ ಗೃಹೇಷ್ವಿತಿ ವಾ** ॥
>
> (ನಿ. ೯-೯)

ಸೋಮರಸವನ್ನು ಹಿಂಡುವ ಈ ಕಲ್ಲುಗಳು ಲತೆಗಳನ್ನು ಜಜ್ಜುವಾಗ ಶಬ್ದಮಾಡಲಿ. ನಾವು ಸಹ (ಋತ್ವಿಕ್ಕುಗಳು) ಈ ಕಲ್ಲುಗಳನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸೋಣ. ಎಲೈ ಅಧ್ವರ್ಯುಮೊದಲಾದ ಋತ್ವಿಗ್ಜನರೇ ನೀವೂ ಸಹ

ಶಬ್ದಮಾಡುತ್ತಿರುವ ಈ ಕಲ್ಲುಗಳನ್ನು ಸ್ತುತಿಸಿರಿ. ಈ ದೊಡ್ಡಕಲ್ಲುಗಳು ಆದರದಿಂದ ಹಿಡಿಯಲ್ಪಡಬೇಕು ಮತ್ತು ಇವು ಸೋಮಲತೆಗಳೊಡನೆ ಸೇರಿ ಅವುಗಳ ಸಂಪರ್ಕದಿಂದ ಸೋಮರಸವನ್ನು ಭಕ್ಷಿಸುವಂತೆ (ಪಾನಮಾಡುವಂತೆ) ಕಾಣುತ್ತಿರುವವು. ಎಲೈ ಗ್ರಾವಗಳೇ, ಸೋಮಾಭಿಷವವನ್ನು ಮಾಡುತ್ತಿರುವ ಅಥವಾ ಯಜಮಾನನ ಯಜ್ಞಗೃಹದಲ್ಲಿ ಸೋಮಾಭಿಷವದಲ್ಲಿ ನಿರತರಾದ ನೀವು ಇಂದ್ರನ ಸೋಮಪಾನಾರ್ಥವಾಗಿ ಬೇಗನೆ ಹಿತಕರವೂ ಘಟ್ಟಿಯಾಗಿ ಧ್ವನಿಗೈವುದೂ ಆದ ಶಬ್ದವನ್ನು (ಲತೆಗಳನ್ನು ಜಜ್ಜುವಾಗ) ಮಾಡಿರಿ ಎಂದು ನಿರ್ವಚನಾಭಿಪ್ರಾಯವು.

ಕೇಳು ಎಂಬರ್ಥವುಳ್ಳ ಶ್ರು ಧಾತುವಿನಿಂದ **ಶ್ಲೋಕ**ಶಬ್ದವು ನಿಷ್ಪನ್ನವಾಗಿದೆ. ಕೇಳುವುದಕ್ಕೆ ಹಿತಕರವಾದ, ಶ್ರಾವ್ಯವಾದ ಎಂದರ್ಥವು. ಘಟ್ಟಿಯಾಗಿ ಶಬ್ದಮಾಡು ಎಂಬರ್ಥವುಳ್ಳ ಘುಷ್ ಧಾತುವಿನಿಂದ **ಘೋಷಃ** ಎಂಬ ಶಬ್ದವು ನಿಷ್ಪನ್ನವಾಗಿದೆ. ಉಚ್ಚಧ್ವನಿಯೆಂದರ್ಥ.

। ಸಂಹಿತಾಪಾಠಃ ।

ಏತೇ ವದಂತಿ ಶತವತ್ಸಹಸ್ರವದಭಿ ಕ್ರಂದಂತಿ ಹರಿತೇಭಿರಾಸಭಿಃ ।
ವಿಷ್ಟ್ವೀ ಗ್ರಾವಾಣಃ ಸುಕೃತಃ ಸುಕೃತ್ಯಯಾ ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ॥ ೨ ॥

। ಪದಪಾಠಃ ॥

ಏತೇ । ವದಂತಿ । ಶತऽವತ್ । ಸಹಸ್ರऽವತ್ । ಅಭಿ । ಕ್ರಂದಂತಿ । ಹರಿತೇಭಿಃ । ಆಸಽಭಿಃ ।
ವಿಷ್ಟ್ವೀ । ಗ್ರಾವಾಣಃ । ಸುऽಕೃತಃ । ಸುऽಕೃತ್ಯಯಾ । ಹೋತುಃ । ಚಿತ್ । ಪೂರ್ವೇ । ಹವಿಃऽಅದ್ಯಂ । ಆಶತ ॥ ೨ ॥

॥ ಸಾಯಣಭಾಷ್ಯಂ ॥

ಶತವತ್ಸಹಸ್ರವತ್ ಯಥಾ ಶತಂ ಮನುಷ್ಯಾಃ ಸಹಸ್ರವದಪರಿಮಿತಾ ಮನುಷ್ಯಾಶ್ಚ ವದಂತಿ ತದ್ವದೇತೇ ಗ್ರಾವಾಣೋ ವದಂತಿ । ಶಬ್ದಂ ಕುರ್ವಂತಿ । ಕಿಂಚ ಹರಿತೇಭಿಃ ಸೋಮಸಂಸರ್ಗಾದ್ಧರಿತವರ್ಣೈರಾಸಭಿರಾಸ್ಯೈರಭಿ ಕ್ರಂದಂತಿ । ಸೋಮಮಭಿಲಕ್ಷ್ಯ ದೇವಾನಾಹ್ವಯಂತೀತ್ಯರ್ಥಃ । ಕಿಂಚ ಸುಕೃತಃ ಶೋಭನಕರ್ಮಾಣೋ ಗ್ರಾವಾಣೋ ವಿಷ್ಟ್ವೀ ಯಜ್ಞಂ ಪ್ರಾಪ್ಯ ಹೋತುರ್ದೇವಾನಾಮಾಹ್ವಾತುರಗ್ನೇಃ ಪೂರ್ವೇ ಚಿತ್ ಪೂರ್ವಮೇವಾದ್ಯಂ ಭಕ್ಷಣೀಯಂ ಹವಿರಾಶತ । ಪ್ರಾಪ್ನುವಂತಿ ॥

। ಪ್ರತಿಪದಾರ್ಥ ।

**ಶತವತ್ ಸಹಸ್ರವತ್**—ಸಾವಿರಾರು ಜನರು ಒಟ್ಟಿಗೆ ಸೇರಿ ಶಬ್ದಮಾಡುವಂತೆ । **ಏತೇ**—ಈ ಹಿಂಡುವ ಕಲ್ಲುಗಳು । **ವದಂತಿ**—ಶಬ್ದಮಾಡುತ್ತವೆ । **ಹರಿತೇಭಿಃ**—ಪಚ್ಚೆವರ್ಣವುಳ್ಳ । **ಆಸಭಿಃ**—ಮುಖಗಳಿಂದ । **ಅಭಿ ಕ್ರಂದಂತಿ**—ಗಟ್ಟಿಯಾಗಿ ಶಬ್ದಮಾಡುತ್ತವೆ । **ಸುಕೃತಃ**—ಉತ್ತಮವಾದ ಕರ್ಮವುಳ್ಳ । **ಗ್ರಾವಾಣಃ**—

ಹಿಂಡುವ ಕಲ್ಲುಗಳು । **ವಿಷ್ಟ್ವೀ**—ಯಜ್ಞವನ್ನು ಸಮೀಪಿಸಿ । **ಹೋತುಃ ಪೂರ್ವೇ ಚಿತ್**—ಹೊತೃರೂಪನಾದ ಅಗ್ನಿಗಿಂತಲೂ ಪೂರ್ವಭಾವಿಯಾಗಿಯೇ । **ಅದ್ಯಂ**—ಭಕ್ಷಿಸಲು ಯೋಗ್ಯವಾದ । **ಹವಿಃ**—ಹವಿಸ್ಸನ್ನು । **ಆಶತ**—ಪಡೆಯುತ್ತವೆ. (ಭಕ್ಷಿಸುತ್ತವೆ)

। ಭಾವಾರ್ಥ ।

ಸಾವಿರಾರು ಜನರು ಒಟ್ಟಿಗೆ ಸೇರಿ ಶಬ್ದಮಾಡುವಂತೆ ಈ ಹಿಂಡುವ ಕಲ್ಲುಗಳು ಶಬ್ದಮಾಡುತ್ತವೆ. ಪಚ್ಚೆವರ್ಣವುಳ್ಳ ಮುಖಗಳಿಂದ ಗಟ್ಟಿಯಾಗಿ ಶಬ್ದಮಾಡುತ್ತವೆ. ಉತ್ತಮವಾದ ಕರ್ಮವುಳ್ಳ ಹಿಂಡುವ ಕಲ್ಲುಗಳು ಯಜ್ಞವನ್ನು ಸಮೀಪಿಸಿ ಹೋತೃರೂಪನಾದ ಅಗ್ನಿಗಿಂತಲೂ ಪೂರ್ವಭಾವಿಯಾಗಿಯೇ ಭಕ್ಷಿಸಲು ಯೋಗ್ಯವಾದ ಹವಿಸ್ಸನ್ನು ಪಡೆಯುತ್ತವೆ. (ಪಾನಮಾಡುತ್ತವೆ)

English Translation

They roar like a hundred, like a thousand (men); they cry aloud with green-tinted faces; obtaining the sacrifice, the pious stones through their piety partake of the sacrificial food, even before (Agni), the invoker (of the gods).

॥ ವಿಶೇಷವಿಷಯಗಳು ॥

ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಉಂಟಾಗುವ ಧ್ವನಿಯನ್ನು ಸಾವಿರಾರು ಜನರು ಒಟ್ಟಿಗೆ ಸೇರಿ ಮಾಡುವ ಶಬ್ದಕ್ಕೆ ಹೋಲಿಸಿದೆ. ಎಂದರೆ ಬಹಳ ಘಟ್ಟಿಯಾಗಿ ಶಬ್ದಮಾಡುವವು ಎಂದರ್ಥವು.

**ಹರಿತೇಭಿಃ ಆಸಭಿಃ**—ಹಸುರುವರ್ಣದ ಮುಖಗಳಿಂದ ; ಸೋಮಲತೆಗಳೂ ಅವುಗಳಿಂದ ಹೊರಸೂಸುವ ರಸವೂ ಪಚ್ಚೆವರ್ಣ ಎಂದರೆ ಹಸಿರುವರ್ಣದ್ದಾಗಿರುವುವು. ಲತೆಗಳನ್ನು ಜಜ್ಜುವ ಕಲ್ಲುಗಳಿಗೆ ಹಸಿರಾದ ಸೋಮ ರಸವು ಅಂಟಿಕೊಳ್ಳುವುದರಿಂದ ಆ ಕಲ್ಲುಗಳು ಹಸಿರುಬಣ್ಣದ ಮುಖಗಳಿಂದ ಶಬ್ದಮಾಡುತ್ತಿರುವವು ಎಂದು ಇಲ್ಲಿ ಪ್ರಕಾರಾಂತರವಾಗಿ ವರ್ಣಿಸಿದೆ.

**ಹೋತುಃ ಚಿತ್ ಪೂರ್ವೇ ಅದ್ಯಂ ಹವಿಃ ಆಶತ**-ಸೋಮಲತೆಗಳನ್ನು ಜಜ್ಜುವಾಗಲೇ ಕಲ್ಲುಗಳಿಗೆ ರಸವು ಮೆತ್ತಿಕೊಳ್ಳುವುದರಿಂದ ಕಲ್ಲುಗಳೇ ಎಲ್ಲರಿಗಿಂತಲೂ ಎಂದರೆ ಹೋತೃ ಅಥವಾ ಅಗ್ನಿಗಿಂತಲೂ ಮೊದಲೇ ಸೋಮಪಾನಮಾಡಿದಂತಾಯಿತೆಂದು ಋಷಿಯು ಪ್ರಕಾರಾಂತರವಾಗಿ ವರ್ಣಿಸಿದಾನೆ.

॥ ಸಂಹಿತಾಪಾಠಃ ॥

ವಿ ತೇ ವದಂತ್ಯವಿದನ್ನನಾ ಮಧು ನ್ಯೂಂಖಯಂತೇ ಅಧಿ ಪಕ್ವ ಆಮಿಷಿ ।
ವೃಕ್ಷಸ್ಯ ಶಾಖಾಮರುಣಸ್ಯ ಬಪ್ಸತಸ್ತೇ ಸೂಭರ್ವಾ ವೃಷಭಾಃ ಪ್ರೇಮ
ರಾವಿಷುಃ ॥ ೩ ॥

॥ ಪದಪಾಠಃ ॥

ಏತೇ । ವದಂತಿ । ಅವಿದನ್ । ಅನಾ । ಮಧು । ನಿ । ಊಂಖಯಂತೇ । ಅಧಿ । ಪಕ್ವೇ । ಆಮಿಷಿ ।

ವೃಕ್ಷಸ್ಯ । ಶಾಖಾಂ । ಅರುಣಸ್ಯ । ಬಪ್ಸತಃ । ತೇ । ಸೂಭರ್ವಾಃ । ವೃಷಭಾಃ । ಪ್ರ । ಈಂ । ಅರಾವಿಷುಃ ॥

॥ ಸಾಯಣಭಾಷ್ಯಂ ॥

ಅರುಣಸ್ಯಾರುಣವರ್ಣಸ್ಯ ವೃಕ್ಷಸ್ಯ ಶಾಖಾಂ ಬಪ್ಸತೋ ಭಕ್ಷಯಂತಸ್ತೇ ಸೂಭರ್ವಾಃ ಶೋಭನ-ಭಕ್ಷಾ ವೃಷಭಾಃ ಪ್ರೇಮರಾವಿಷುಃ । ಪ್ರರುವಂತಿ । ಯಥಾ ಪಕ್ವ ಆಮಿಷ್ಯಧ್ಯಾಮಿಷೇ ಕ್ರವ್ಯಾದೋ ಮಾಂಸಭಕ್ಷಕಾಶ್ಚ ಮಾಂಸವಿಷಯೇ ಯಥಾ ನ್ಯೂಂಖಯಂತೇ ಶಬ್ದವಿಶೇಷಂ ಕುರ್ವಂತಿ ತದ್ವದೇತೇ ಗ್ರಾವಾಣೋ ವದಂತಿ । ಶಬ್ದಂ ಕುರ್ವಂತಿ । ಕಿಂಚ ಮಧು ಮದಕರಂ ಸೋಮಮಾಸ್ಯೇನಾವಿದನ್ । ಲಭಂತೇ ॥

॥ ಪ್ರತಿಪದಾರ್ಥ ॥

**ಏತೇ**—ಈ ಗ್ರಾವಗಳು । **ವದಂತಿ**—ಶಬ್ದಮಾಡುತ್ತವೆ । **ಅನಾ**—ತಮ್ಮ ಮುಖಗಳಿಂದ । **ಮಧು**—ರುಚಿಕರವಾದ ಸೋಮವನ್ನು । **ಅವಿದನ್**—ಹೊಂದುತ್ತವೆ । **ಪಕ್ವೇ**—ಪಕ್ವಮಾಡಿದ । **ಆಮಿಷಿ ಅಧಿ**—ಮಾಂಸದ ಮುಂದೆ ಮಾಂಸಭಕ್ಷಕರು ಶಬ್ದಮಾಡುವಂತೆ । **ನ್ಯೂಂಖಯಂತೇ**—ಅಧಿಕವಾಗಿ ಶಬ್ದಮಾಡುತ್ತವೆ । **ಅರುಣಸ್ಯ**—ಹೊಂಬಣ್ಣದ । **ವೃಕ್ಷಸ್ಯ**—ವೃಕ್ಷದ । **ಶಾಖಾಂ**—ಕೊಂಬೆಯನ್ನು । **ಬಪ್ಸತಃ**—ಭಕ್ಷಿಸುವುವೂ । **ಸೂಭರ್ವಾಃ**—ಉತ್ತಮವಾದ ಭಕ್ಷಣವುಳ್ಳವೂ । **ವೃಷಭಾಃ**—ಶಕ್ತಿಯುತವೂ ಆದ ಗ್ರಾವಗಳು । **ಪ್ರ ಈಂ ಅರಾವಿಷುಃ**—ಅಧಿಕವಾಗಿ ಶಬ್ದಮಾಡುತ್ತವೆ.

॥ ಭಾವಾರ್ಥ ॥

ಈ ಗ್ರಾವಗಳು ಅಧಿಕವಾಗಿ ಶಬ್ದಮಾಡುತ್ತವೆ. ತಮ್ಮ ಮುಖಗಳಿಂದ ರುಚಿಕರವಾದ ಸೋಮವನ್ನು ಹೊರಸೂಸುತ್ತವೆ ಪಕ್ವಮಾಡಿದ ಮಾಂಸದ ಮುಂದೆ ಮಾಂಸಭಕ್ಷಕರು ಶಬ್ದಮಾಡುವಂತೆ ಅಧಿಕವಾಗಿ ಶಬ್ದ ಮಾಡುತ್ತವೆ. ಹೊಂಬಣ್ಣದ ವೃಕ್ಷದ ಲತೆಯನ್ನು ಭಕ್ಷಿಸುವುವೂ, ಉತ್ತಮವಾದ ಭಕ್ಷಣವುಳ್ಳವೂ ಶಕ್ತಿಯುತವೂ ಆದ ಗ್ರಾವಗಳು ಅಧಿಕವಾಗಿ ಶಬ್ದಮಾಡುತ್ತವೆ.

## English Translation.

The speak, they received into their mouth the sweet (Soma juice), they roar (like the eaters of flesh) over the roasted meat: chewing the branch of the purple tree, the voracious bulls have bellowed.

॥ ಸಂಹಿತಾಪಾಠಃ ॥

ಬೃಹದ್ವದಂತಿ ಮದಿರೇಣ ಮಂದಿನೇಂದ್ರಂ ಕ್ರೋಶಂತೋಽವಿದನ್ನನಾ ಮಧು ।

ಸಂರಭ್ಯಾ ಧೀರಾಃ ಸ್ವಸೃಭಿರನರ್ತಿಷುರಾಘೋಷಯಂತಃ ಪೃಥಿವೀ-
ಮುಪಬ್ದಿಭಿಃ ॥ ೪ ॥

। ಪದಪಾಠ ॥

ಬೃಹತ್ । ವದಂತಿ । ಮದಿರೇಣ । ಮಂದಿನಾ । ಇಂದ್ರಂ । ಕ್ರೋಶಂತಃ । ಅವಿದನ್ । ಅನಾ । ಮಧು ।
ಸಂಽರಭ್ಯ । ಧೀರಾಃ । ಸ್ವಸೃಽಭಿಃ । ಅನರ್ತಿಷುಃ । ಆಽಘೋಷಯಂತಃ । ಪೃಥಿವೀಂ । ಉಪಬ್ದಿಽಭಿಃ ॥

। ಸಾಯಣಭಾಷ್ಯಂ ।

ಮದಿರೇಣ ಮದಕರೇಣ ಮಂದಿನಾಭಿಷೂಯಮಾಣೇನ ಸೋಮೇನೇಂದ್ರಂ ಕ್ರೋಶಂತ ಆಹ್ವಯಂತ ಏತೇ ಗ್ರಾವಾಣೋ ಬೃಹದತ್ಯಂತಂ ವದಂತಿ । ಶಬ್ದಂ ಕುರ್ವಂತಿ । ಕಿಂಚಾನಾಸ್ಯೇನ ಮಧು ಮದಕರಂ ಸೋಮಮವಿದನ್ । ಅಲಭಂತ । ಕಿಂಚ ಸಂರಭ್ಯ ಸಂರಬ್ಧಾ ಭೂತ್ವಾ ಧೀರಾ ಧೃಷ್ಟಾಃ ಸಂತ ಉಪಬ್ದಿಭಿಃ ಶಬ್ದೈಃ ಪೃಥಿವೀಮಾಘೋಷಯಂತಃ ಪೂರಯಂತಃ ಸ್ವಸೃಭಿರಂಗುಲಿಭಿಃ ಸಹಾನರ್ತಿಷುಃ । ನೃತ್ಯಂತಿ ॥

॥ ಪ್ರತಿಪದಾರ್ಥ ॥

**ಮದಿರೇಣ**—ಹರ್ಷಕಾರಕವೂ । **ಮಂದಿನಾ**—ಹಿಂಡಲ್ಪಡುವುದೂ ಆದ ಸೋಮದೊಡನೆ । **ಇಂದ್ರಂ**—ಇಂದ್ರನನ್ನು । **ಕ್ರೋಶಂತಃ**—ಕೂಗತಕ್ಕ ಈ ಗ್ರಾವಗಳು । **ಬೃಹತ್**—ಅತ್ಯಧಿಕವಾಗಿ । **ವದಂತಿ**—ಶಬ್ದಮಾಡುತ್ತವೆ । **ಅನಾ**—ತಮ್ಮ ಮುಖದಿಂದ । **ಮಧು**—ರುಚಿಕರವಾದ ಸೋಮವನ್ನು । **ಅವಿದನ್**—ಹೊಂದುತ್ತವೆ । **ಧೀರಾಃ**—ದೃಢವಾದ ಗ್ರಾವಗಳು । **ಸಂರಭ್ಯ**—ಒಟ್ಟುಗೂಡಿ । **ಉಪಬ್ದಿಭಿಃ**—ತಮ್ಮ ಶಬ್ದಗಳಿಂದ । **ಪೃಥಿವೀಂ**—ಪೃಥ್ವಿಯನ್ನು । **ಆಘೋಷಯಂತ**—ತುಂಬುತ್ತ । **ಸ್ವಸೃಭಿಃ**—ಬೆರಳುಗಳೊಡನೆ । **ಅನರ್ತಿಷುಃ**—ನರ್ತನ ಮಾಡುತ್ತವೆ.

। ಭಾವಾರ್ಥ ।

ಹರ್ಷಕಾರಕವೂ, ಹಿಂಡಲ್ಪಡುವುವೂ ಆದ ಸೋಮದೊಡದೆ ಇಂದ್ರನನ್ನು ಕೂಗಿ ಕರೆಯತಕ್ಕ ಗ್ರಾವಗಳು ಅತ್ಯಧಿಕವಾಗಿ ಶಬ್ದಮಾಡುತ್ತವೆ. ತಮ್ಮ ಮುಖದಿಂದ ರುಚಿಕರವಾದ ಸೋಮವನ್ನು ಹೊಂದುತ್ತವೆ. ದೃಢವಾದ ಗ್ರಾವಗಳು ಒಟ್ಟುಗೂಡಿ ತಮ್ಮ ಶಬ್ದಗಳಿಂದ ಪೃಥಿವಿಯನ್ನು ತುಂಬುತ್ತ ಬೆರಳುಗಳೊಡನೆ ನರ್ತನಮಾಡುತ್ತವೆ.

## English Translation

They cry aloud calling upon Indra with the intoxicating effused (Soma), they took the sweet juice into their mouth, seized by the sister (fingers) the bold stones danced, filling the earth with shouts.

॥ ಸಂಹಿತಾಪಾಠಃ ॥

**ಸುಪರ್ಣಾ ವಾಚಮಕ್ರತೋಪ ದ್ಯವ್ಯಾಖರೇ ಕೃಷ್ಣಾ ಇಷಿರಾ ಅನರ್ತಿಷುಃ।**
**ನ್ಯಙ್ನಿ ಯಂತ್ಯುಪರಸ್ಯ ನಿಷ್ಕೃತಂ ಪುರೂ ರೇತೋ ದಧಿರೇ ಸೂರ್ಯಶ್ವಿತಃ ॥ ೫ ॥**

॥ ಪದಪಾಠಃ ॥

ಸುಽಪರ್ಣಾಃ । ವಾಚಂ । ಅಕ್ರತ । ಉಪ । ದ್ಯವಿ । ಆಽಖರೇ । ಕೃಷ್ಣಾಃ । ಇಷಿರಾಃ । ಅನರ್ತಿಷುಃ ।
ನ್ಯಕ್ । ನಿ । ಯಂತಿ । ಉಪರಸ್ಯ । ನಿಃಽಕೃತಂ । ಪುರು । ರೇತಃ । ದಧಿರೇ । ಸೂರ್ಯಽಶ್ವಿತಃ ॥ ೫ ॥

॥ ಸಾಯಣಭಾಷ್ಯಂ ॥

ಸುಪರ್ಣಾಃ ಸುಪತನಾ ಗ್ರಾವಾಣ ಉಪೋಪಲಕ್ಷ್ಯ ಸಮೀಪೇ ದ್ಯವ್ಯಂತರಿಕ್ಷೇ ವಾಚಮಭಿಷವಶಬ್ದಮಕ್ರತ । ಕುರ್ವಂತಿ । ಕಿಂಚಾಖರೇ । ಮೃಗಾಣಾಂ ಪ್ರಜ ಆಖರಃ । ತಸ್ಮಿನ್ನಿಷಿರಾ ಗಮನಶೀಲಾಃ ಕೃಷ್ಣಾಃ ಕಷ್ಣಮೃಗಾ ಇವ ಸೂರ್ಯಶ್ವಿತಃ ಸೂರ್ಯವಚ್ಛ್ವೇತವರ್ಣಾ ದ್ರಷ್ಟಾ।ಅನರ್ತಿಷುಃ । ನೃತ್ಯಂತಿ। ನಿಷ್ಕೃತಂ ಗ್ರಾವಭಿಃ ಪೀಡಿತಂ ಸದುಪರಸ್ಯೋಪಲಸ್ಯ ನ್ಯಗಧೋಮುಖಂ ಸೋಮಂ ನಿ ಯಂತಿ। ನಿಗಮಯಂತಿ । ಕಿಂಚ ಪುರು ಬಹು ರೇತಃ ಸೋಮಲಕ್ಷಣಮುದಕಂ ದಧಿರೇ। ಧಾರಯಂತಿ ॥

॥ ಪ್ರತಿಪದಾರ್ಥ ॥

**ಸುಪರ್ಣಾಃ**—ಉತ್ತಮವಾದ ಚಲನವುಳ್ಳ ಗ್ರಾವಗಳು । **ಉಪ ದ್ಯವಿ**—ಅಂತರಿಕ್ಷದ ಸಮೀಪದಲ್ಲಿ । **ವಾಚಂ**—ಹಿಂಡುವ ಶಬ್ದವನ್ನು । **ಅಕ್ರತ**—ಮಾಡುತ್ತವೆ । **ಆಖರೇ**—ಕೊಟ್ಟಿಗೆಯಲ್ಲಿ । **ಇಷಿರಾಃ**—ಸಂಚಾರಶೀಲಿಗಳಾದ । **ಕೃಷ್ಣಾಃ**—ಕೃಷ್ಣಮೃಗಗಳಂತೆ । **ಅನರ್ತಿಷುಃ**—ನೃತ್ಯಮಾಡುತ್ತವೆ । **ನಿಷ್ಕೃತಂ**—ಹಿಂಡಿದ ಸೋಮವನ್ನು । **ಉಪರಸ್ಯ ನ್ಯಕ್**—ಕಲ್ಲುಗಳ ಅಡಿಯಲ್ಲಿ । **ನಿ ಯಂತಿ**—ಹರಿಯುವಂತೆ ಮಾಡುತ್ತವೆ । **ಸೂರ್ಯಶ್ವಿತಃ**—ಸೂರ್ಯನಂತೆ ಶುಭ್ರವರ್ಣವುಳ್ಳ ಅವು । **ಪುರು**—ಅಧಿಕವಾದ । **ರೇತಃ**—ಸೋಮರೂಪವಾದ ರಸವನ್ನು । **ದಧಿರೇ**—ಧರಿಸುತ್ತವೆ.

॥ ಭಾವಾರ್ಥ ॥

ಉತ್ತಮವಾದ ಚಲನವುಳ್ಳ ಗ್ರಾವಗಳು ಅಂತರಿಕ್ಷದ ಸಮೀಪದಲ್ಲಿ ಹಿಂಡುವ ಶಬ್ದವನ್ನು ಮಾಡುತ್ತವೆ ಸಂಚಾರಶೀಲಗಳಾದ ಕೃಷ್ಣಮೃಗಗಳು ಕೊಟ್ಟಿಗೆಯಲ್ಲಿ ನರ್ತನಮಾಡುವಂತೆ ಇವೂ ನರ್ತನಮಾಡುತ್ತವೆ. ಹಿಂಡಿದ ಸೋಮವನ್ನು ಕಲ್ಲುಗಳ ಅಡಿಯಲ್ಲಿ ಹರಿಯುವಂತೆ ಮಾಡುತ್ತವೆ. ಸೂರ್ಯನಂತೆ ಶುಭ್ರವರ್ಣವುಳ್ಳ ಅವು ಅಧಿಕವಾದ ಸೋಮರೂಪದ ರಸವನ್ನು ಧರಿಸುತ್ತವೆ. (ಉತ್ಪತ್ತಿಮಾಡುತ್ತವೆ)

## English Translation

The well-gliding stones made a noise in the firmament; they danced (like) the black deer in the stall; they exude down from the upper stone the expressed (juice); white as the sun they yield abundant moisture.

॥ ಸಂಹಿತಾಪಾಠಃ ॥

ಉಗ್ರಾ ಇವ ಪ್ರವಹಂತಃ ಸಮಾಯಮುಃ ಸಾಕಂ ಯುಕ್ತಾ ವೃಷಣೋ ಬಿಭ್ರತೋ ಧುರಃ ।
ಯಚ್ಛ್ವಸಂತೋ ಜಗ್ರಸಾನಾ ಅರಾವಿಷುಃ ಶೃಣ್ವ ಏಷಾಂ ಪ್ರೋಥಥೋ ಅರ್ವತಾಮಿವ ॥ ೬ ॥

॥ ಪದಪಾಠಃ ॥

ಉಗ್ರಾಃऽಇವ । ಪ್ರऽವಹಂತಃ । ಸಂऽಆಯಮುಃ । ಸಾಕಂ । ಯುಕ್ತಾಃ । ವೃಷಣಃ । ಬಿಭ್ರತಃ । ಧುರಃ ।
ಯತ್ । ಶ್ವಸಂತಃ । ಜಗ್ರಸಾನಾ । ಅರಾವಿಷುಃ । ಶೃಣ್ವೇ । ಏಷಾಂ । ಪ್ರೋಥಥಃ । ಅರ್ವತಾಂऽಇವ ॥

॥ ಸಾಯಣಭಾಷ್ಯಂ ॥

ವೃಷಣಃ । ಫಲಂ ವರ್ಷತೀತಿ ವೃಷಾ ಯಜ್ಞಃ । ತಸ್ಯ ಧುರೋ ಧುರಂ ಭಾರಂ ಬಿಭ್ರತೋ ಧಾರಯಂತ ಏತೇ ಗ್ರಾವಾಣಃ ಸಾಕಂ ಸೋಮೇನ ಸಹ ಯುಕ್ತಾಃ ಸಂತಃ ಪ್ರವಹಂತೋ ರಥಂ ಪ್ರಕರ್ಷೇಣ ವೋಢಾರ ಉಗ್ರಾ ಉದ್ಗೂರ್ಣಾ ಅಶ್ವಾ ಇವ ಸಮಾಯಮುಃ । ಸಮಾಯಚ್ಛಂತಿ । ಆಯತಾ ಭವಂತೀತ್ಯರ್ಥಃ । ಯದ್ಯದಾ ಶ್ವಸಂತೋಽಭಿಷವಸಮಯ ಉತ್ಪತನನಿಪತನವ್ಯಾಪಾರಜನಿತೇನ ವಾಯುನಾ ಶ್ವಸಂತ ಇವ ಸ್ಥಿತಾ ಗ್ರಾವಾಣೋ ಜಗ್ರಸಾನಾಃ ಸೋಮಂ ಗ್ರಸಮಾನಾ ಅರಾವಿಷುಃ ಶಬ್ದಾಯಂತೇ ತದಾನೀಮೇಷಾಂ ಗ್ರಾವ್ಣಾಂ ಸಂಬಂಧೀ ಪ್ರೋಥಥೋ ಮುಖಾಚ್ಛಬ್ದಃ ಶೃಣ್ವೇ । ಶ್ರೂಯತೇ । ತತ್ರ ದೃಷ್ಟಾಂತಃ । ಅರ್ವತಾಮಿವಾಶ್ವಾನಾಂ ಸಂಬಂಧಿನೋ ಮುಖಾದ್ಧೇಷಾಶಬ್ದೋ ಯಥಾ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪ್ರವಹಂತಃ**—ರಥವನ್ನು ವಹಿಸುವುವೂ । **ಉಗ್ರಾಃ**—ಅಧಿಕವಾದ ಶಕ್ತಿಯುಳ್ಳವೂ ಆದ ಅಶ್ವಗಳಂತೆ । **ವೃಷಣಃ**—ಫಲವರ್ಷಕವಾದ ಯಜ್ಞದ । **ಧುರಃ**—ಭಾರವನ್ನು । **ಬಿಭ್ರತಃ**—ವಹಿಸಿದ ಈ ಗ್ರಾವಗಳು । **ಸಾಕಂ ಯುಕ್ತಾಃ**—ಒಟ್ಟಿಗೆ ಸೇರಿಕೊಂಡು । **ಸಮಾಯಮುಃ**—ಕರ್ಮನಿರತವಾಗುತ್ತವೆ । **ಯತ್**—ಯಾವಾಗ ।

**ಜಗ್ರಸಾನಾಃ**—ಸೋಮವನ್ನು ಹಿಂಡುವ ಕಲ್ಲುಗಳು | **ಶ್ವಸಂತಃ**—ಗಟ್ಟಿಯಾಗಿ ಉಸಿರುಬಿಡುವಂತೆ | **ಅರಾವಿಷುಃ**—ಶಬ್ದಮಾಡುತ್ತವೆಯೋ ಆಗ | **ಏಷಾಂ**—ಇವುಗಳ | **ಪ್ರೋಥಥಃ**—ಮುಖದಿಂದ ಹೊರಡುವ ಶಬ್ದವು | **ಅರ್ವತಾಂ ಇವ**—ಗಟ್ಟಿಯಾಗಿ ಉಸಿರು ಬಿಡುವ ಕುದುರೆಗಳ ಶಬ್ದದಂತೆ | **ಶೃಣ್ವೇ**—ಎಲ್ಲರಿಂದಲೂ ಕೇಳಲ್ಪಡುತ್ತದೆ.

॥ ಭಾವಾರ್ಥ ॥

ರಥವನ್ನು ಎಳೆಯುವುವೂ, ಅಧಿಕವಾದ ಶಕ್ತಿಯುಳ್ಳವೂ ಆದ ಅಶ್ವಗಳಂತೆ ಫಲವರ್ಷಕವಾದ ಯಜ್ಞದ ಭಾರವನ್ನು ವಹಿಸಿದ ಈ ಗ್ರಾವಗಳು ಒಟ್ಟಿಗೆ ಸೇರಿಕೊಂಡು ಕರ್ಮನಿರತವಾಗುತ್ತದೆ. ಯಾವಾಗ ಸೋಮವನ್ನು ಹಿಂಡುವ ಕಲ್ಲುಗಳು ಗಟ್ಟಿಯಾದ ಉಸಿರುಬಿಡುವಂತೆ ಶಬ್ದಮಾಡುತ್ತವೆಯೋ, ಆಗ ಇವುಗಳ ಮುಖದಿಂದ ಹೊರಡುವ ಶಬ್ದವು ಗಟ್ಟಿಯಾಗಿ ಉಸಿರುಬಿಡುವ ಕುದುರೆಗಳ ಶಬ್ದದಂತೆ ಎಲ್ಲರಿಂದಲೂ ಕೇಳಲ್ಪಡುತ್ತದೆ.

English Translation.

Bearing the burden of the sacrifice, yoked with (the Soma) they exerted themselves like spirited horses; when panting and extracting (the Soma) they cried aloud, their snorting is heard like that of horses.

॥ ಸಂಹಿತಾಪಾಠಃ ॥

ದಶಾವನಿಭ್ಯೋ ದಶಕಕ್ಷ್ಯೇಭ್ಯೋ ದಶಯೋಕ್ತ್ರೇಭ್ಯೋ ದಶಯೋಜನೇಭ್ಯಃ।
ದಶಾಭೀಶುಭ್ಯೋ ಅರ್ಚತಾಜರೇಭ್ಯೋ ದಶ ಧುರೋ ದಶ ಯುಕ್ತಾ
ವಹದ್ಭ್ಯಃ ॥ ೭ ॥

॥ ಪದಪಾಠಃ ॥

ದಶಾವನಿಽಭ್ಯಃ । ದಶಽಕಕ್ಷ್ಯೇಭ್ಯಃ । ದಶಽಯೋಕ್ತ್ರೇಭ್ಯಃ । ದಶಽಯೋಜನೇಭ್ಯಃ ।
ದಶಾಭೀಶುಽಭ್ಯಃ । ಅರ್ಚತ । ಅಜರೇಭ್ಯಃ । ದಶ । ಧುರಃ । ದಶ । ಯುಕ್ತಾಃ ವಹತ್ಽಭ್ಯಃ ॥ ೭ ॥

॥ ಸಾಯಣಭಾಷ್ಯಂ ॥

ದಶಾವನಿಭ್ಯಃ । ಕರ್ಮಾಣ್ಯವಂತಿ ಗಚ್ಛಂತೀತ್ಯವನಯಃ । ದಶಾವನಯೋಽಂಗುಲಯೋ ಯೇಷಾಂ ಗ್ರಾಹಕತ್ವೇನ ಸಂಬಂಧಿನಸ್ತೇ ದಶಾವನಯಃ । ತಾನ್ಗ್ರಾವ್ಣಃ । ದ್ವಿತೀಯಾರ್ಥೇ ಚತುರ್ಥೀ । ದಶಕಕ್ಷ್ಯೇಭ್ಯಃ । ಕಕ್ಷ್ಯಾಃ ಪ್ರಕಾಶಕಾ ಅಂಗುಲಯೋ ಯೇಷಾಂ ತೇ ದಶಕಕ್ಷ್ಯಾಃ । ತಾನ್ । ದಶಯೋಕ್ತ್ರೇಭ್ಯಃ । ಯೋಕ್ತ್ರವದ್ಬಂಧನೇ ಸಾಧನಭೂತಾ ದಶಾಂಗುಲಯೋ ಯೇಷಾಂ ತಾನ್ । ದಶಯೋಜನೇಭ್ಯಃ । ಸೋಮೇನ ಸಹ ಯೋಜನೇ ಸಾಧನಭೂತಾ ದಾರಾಶಾಂಗಲಯೋ ಯೇಷಾಂ

ತಾನ್ । ದಶಭೀಶುಭ್ಯಃ । ಕರ್ಮಾಣ್ಯಭಿತೋ ವ್ಯಾಪ್ನುವಂತೀತ್ಯಭೀಶವೋಽಂಗುಲಯೋ ದಶ ಯೇಷಾಂ ತಾನ್ । ಅಜರೇಭ್ಯೋ ಜರಾವಿವರ್ಜಿತಾನ್ದಶ ದಶಭಿರ್ಧುರೋ ಧೂರ್ಭಿರ್ಹಿಂಸಿತೃಭಿಃ । ತೃತೀಯಾರ್ಥೇ ಪ್ರಥಮಾ । ಯುಕ್ತಾ ಯುಕ್ತಾನ್ । ದ್ವಿತೀಯಾರ್ಥೇ ಪ್ರಥಮಾ । ವಹದ್ಭ್ಯೋ ವಹತೋಽಭಿಷವಾಖ್ಯೇ ಕರ್ಮಣಿ ವ್ಯಾಪ್ರಿಯಮಾಣಾನರ್ಚತ । ಸ್ತುತ । ಹೇ ಋತ್ವಿಜ ಇತಿ ಶೇಷಃ ॥ ಅತ್ರ ಯಾಸ್ಕಃ । ಅವನಯೋಽಂಗುಲಯೋ ಭವಂತ್ಯವಂತಿ ಕರ್ಮಾಣಿ ಕಕ್ಷ್ಯಾಃ ಪ್ರಕಾಶಯಂತಿ ಕರ್ಮಾಣಿ ಯೋಕ್ತ್ರಾಣಿ ಯೋಜನಾನೀತಿ ವ್ಯಾಖ್ಯಾತಮಭೀಶವೋಽಭ್ಯಶ್ನುವತೇ ಕರ್ಮಾಣಿ ದಶ ಧುರೋ ದಶ ಯುಕ್ತಾಃ ವಹದ್ಭ್ಯಃ । ಧೂರ್ಧೂರ್ವತೇರ್ವಧಕರ್ಮಣ ಇಯಮಪೀತರಾ ಧೂರೇತಸ್ಮಾದೇವ ವಿಹಂತಿ ವಹಂ ಧಾರಯತೇರ್ವಾ । ನಿ. ೩-೯ । ಇತಿ ॥

। ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ), **ದಶಾವನಿಭ್ಯಃ**—ಕರ್ಮನಿರತವಾದ ಹತ್ತು ಅಂಗುಲಿಗಳುಳ್ಳವೂ । **ದಶಕಕ್ಷ್ಯೇಭ್ಯಃ**—ಕರ್ಮಪ್ರಕಾಶಕವಾದ ಹತ್ತು ಅಂಗುಲಿಗಳುಳ್ಳವೂ । **ದಶಯೋಜನೇಭ್ಯಃ**—ಗ್ರಾವಗಳನ್ನು ಗಟ್ಟಿಯಾಗಿ ಹಿಡಿಯುವ ಹತ್ತು ಅಂಗುಲಿಗಳುಳ್ಳವೂ । **ದಶಾಭೀಶುಭ್ಯಃ**—ಕರ್ಮಸಾಧನವಾದ ಹತ್ತು ಅಂಗುಲಿಗಳುಳ್ಳವೂ । **ಅಜರೇಭ್ಯಃ**—ಜರಾರಹಿತವಾದವೂ । **ದಶ ಧುರಃ**—ಹಿಂಡುವ ಹತ್ತು ಅಂಗುಲಿಗಳಿಂದ । **ಯುಕ್ತಾಃ**—ಹಿಡಿಯಲ್ಪಟ್ಟವೂ । **ವಹದ್ಭ್ಯಃ**—ಹಿಂಡುವ ವ್ಯಾಪಾರವನ್ನು ವಹಿಸಿರುವುವೂ ಆದ ಗ್ರಾವಗಳನ್ನು । **ಅರ್ಚತ**—ಪೂಜಿಸಿರಿ.

। ಭಾವಾರ್ಥ ।

ಎಲೈ ಋತ್ವಿಕ್ಕುಗಳೇ, ಕರ್ಮನಿರತವಾದ ಹತ್ತು ಅಂಗುಲಿಗುಳುಳ್ಳವೂ, ಕರ್ಮಪ್ರಕಾಶಕವಾದ ಹತ್ತು ಅಂಗುಲಿಗಳುಳ್ಳವೂ, ಗ್ರಾವಗಳನ್ನು ಗಟ್ಟಿಯಾಗಿ ಹಿಡಿಯುವ ಹತ್ತು ಅಂಗುಲಿಗಳುಳ್ಳವೂ, ಕರ್ಮಸಾಧನವಾದ ಹತ್ತು ಅಂಗುಲಿಗಳುಳ್ಳವೂ, ಕರ್ಮವ್ಯಾಪಕವಾದ ಹತ್ತು ಅಂಗುಲಿಗಳುಳ್ಳವೂ, ಜರಾರಹಿತವೂ, ಹಿಂಡುವ ವ್ಯಾಪಾರವನ್ನು ವಹಿಸಿರುವುವೂ ಆದ ಗ್ರಾವಗಳನ್ನು ಪೂಜಿಸಿರಿ.

## English Translation

Worship (priests), those imperishable ( stones ) which have ten workers, ten girths, ten yokes, ten agents, ten encompassers, which are possessed of ten burdens, which bear (the srcrifice).

। ಸಂಹಿತಾಪಾಠಃ ।

ತೇ ಅದ್ರಯೋ ದಶಯಂತ್ರಾಸ ಆಶವಸ್ತೇಷಾಮಾಧಾನಂ ಪರ್ಯೇತಿ ಹರ್ಯತಂ ।
ತ ಊ ಸುತಸ್ಯ ಸೋಮ್ಯಸ್ಯಾಂಧಸೋಽಂಶೋಃ ಪೀಯೂಷಂ ಪ್ರಥಮಸ್ಯ ಭೇಜಿರೇ ॥ ೮ ॥

॥ ಪದಪಾಠಃ ॥

ತೇ । ಅದ್ರಯಃ । ದಶಽಯಂತ್ರಾಸಃ । ಆಶವಃ । ತೇಷಾಂ । ಆಽಧಾನಂ । ಪರಿ । ಏತಿ । ಹರ್ಯತಂ । ತೇ । ಊಂ ಇತಿ । ಸುತಸ್ಯ । ಸೋಮ್ಯಸ್ಯ । ಅಂಧಸಃ । ಅಂಶೋಃ । ಪೀಯೂಷಂ । ಪ್ರಥಮಸ್ಯ । ಭೇಜಿರೇ ॥ ೮ ॥

॥ ಸಾಯಣಭಾಷ್ಯಂ ॥

ಅದ್ರಯ ಆದರಣೀಯಾ ಆಶವಃ ಅಕ್ಷಿಪ್ರಕಾರಿಣಸ್ತ ಏತೇ ಪ್ರಕೃತಾ ಗ್ರಾವಾಣೋ ದಶಯಂತ್ರಾಸೋ ದಶಯಂತ್ರಾಃ । ತೇಷಾಮೇಷಾಂ ಗ್ರಾವ್ಣಾಂ ಸಂಬಂಧಿ ಯದಾಧಾನಂ ಪ್ರಕ್ಷೇಪಣಮಭಿಷವಕರ್ಮ ಹರ್ಯತಂ ಸ್ಪೃಹಣೀಯಂ ಪರ್ಯೇತಿ । ಪರಿತೋ ಗಚ್ಛತಿ । ತ ಏತೇ ಗ್ರಾವಾಣ ಏವ ಸುತಸ್ಯಾಭಿಷುತಸ್ಯ ಸೋಮ್ಯಸ್ಯ ಸೋಮಸ್ಯ ಸಂಬಂಧಿನೋಽಂಶೋಃ ಖಂಡಸ್ವರೂಪಸ್ಯಾಂಧಸೋಽನ್ನಸ್ಯ ಪೀಯೂಷಮಮೃತಂ ಪ್ರಥಮಂ ಭೇಜಿರೇ ॥

॥ ಪ್ರತಿಪದಾರ್ಥ ॥

**ಆಶವಃ**—ಕರ್ಮನಿರತವಾದ । **ತೇ ಅದ್ರಯಃ**—ಆ ಗ್ರಾವಗಳು । **ದಶಯಂತ್ರಾಸಃ**—ಹತ್ತು ಅಂಗುಲಿಗಳಿಂದ ಹಿಡಿಯಲ್ಪಟ್ಟವಾಗಿವೆ । **ತೇಷಾಂ**—ಇವುಗಳ । **ಆಧಾನಂ**—ಅಭಿಷವ ಕರ್ಮವು । **ಹರ್ಯತಂ**—ಆಕರ್ಷಕವಾಗಿ । **ಪರ್ಯೇತಿ**—ಸುತ್ತಲೂ ವ್ಯಾಪಿಸುತ್ತದೆ । **ತೇ ಉ**—ಈ ಗ್ರಾವಗಳು ಮಾತ್ರ । **ಸುತಸ್ಯ**—ಹಿಂಡಲ್ಪಟ್ಟ । **ಸೋಮ್ಯಸ್ಯ**—ಸೋಮರಸದ । **ಅಂಶೋಃ**—ಸ್ವಲ್ಪಭಾಗವಾದ । **ಅಂಧಸಃ**—ರಸರೂಪವಾದ ಅನ್ನವೆಂಬ । **ಪೀಯೂಷಂ**—ಅಮೃತವನ್ನು । **ಪ್ರಥಮಸ್ಯ ಭೇಜಿರೇ**—ಮೊದಲು ರುಚಿನೋಡುತ್ತವೆ.

॥ ಭಾವಾರ್ಥ ॥

ಕರ್ಮನಿರತವಾದ ಗ್ರಾವಗಳು ಹತ್ತು ಅಂಗುಲಿಗಳಿಂದ ಹಿಡಿಯಲ್ಪಟ್ಟಿವೆ. ಇವುಗಳ ಅಭಿಷವ ಕರ್ಮವು ಆಕರ್ಷಕವಾಗಿ ಸುತ್ತಲೂ ವ್ಯಾಪಿಸುತ್ತದೆ. ಈ ಗ್ರಾವಗಳು ಮಾತ್ರ ಹಿಂಡಲ್ಪಟ್ಟ ರಸರೂಪವಾದ ಸೋಮವೆಂಬ ಅಮೃತಾನ್ನವನ್ನು ಮೊದಲು ರುಚಿನೋಡುತ್ತವೆ.

English Translation

These stones, having ten reins, swiftly moving, their delightful whirling goes round ; they first tasted the ambrosia of the fragment of food of the expressed Soma.

॥ ಸಂಹಿತಾಪಾಠಃ ॥

ತೇ ಸೋಮಾದೋ ಹರೀ ಇಂದ್ರಸ್ಯ ನಿಂಸತೇಽಂಶುಂ ದುಹಂತೋ ಅಧ್ಯಾಸತೇ ಗವಿ ।

ತೇಭಿರ್ದುಗ್ಧಂ ಪಪಿವಾನ್ತ್ಸೋಮ್ಯಂ ಮಧ್ವಿಂದ್ರೋ ವರ್ಧತೇ ಪ್ರಥತೇ ವೃಷಾಯತೇ ॥ ೯ ॥

॥ ಪದಪಾಠಃ ॥

ತೇ । ಸೋಮಽಅದಃ । ಹರೀ ಇತಿ । ಇಂದ್ರಸ್ಯ । ನಿಂಸತೇ । ಅಂಶುಂ । ದುಹಂತಃ । ಅಧಿ । ಆಸತೇ । ಗವಿ । ತೇಭಿಃ । ದುಗ್ಧಂ । ಪಪಿಽವಾನ್ । ಸೋಮ್ಯಂ । ಮಧು । ಇಂದ್ರಃ । ವರ್ಧತೇ । ಪ್ರಥತೇ । ವೃಷಽಯತೇ ॥

॥ ಸಾಯಣಭಾಷ್ಯಂ ॥

ತೇ ಸೋಮಾದಃ ಸೋಮಸ್ಯಾತ್ತಾರಸ್ತೇ ಪ್ರಕೃತಾ ಏತೇ ಗ್ರಾವಾಣ ಇಂದ್ರಸ್ಯ ಹರೀ ಅಶ್ವೌ ನಿಂಸತೇ। ನಿಕ್ಷಂತಿ। ಚುಂಬಂತಿ। ಪ್ರಾಪ್ನುವಂತೀತ್ಯರ್ಥಃ। ಕಿಂಚ ಗವ್ಯಧಿಷವಣಚರ್ಮಣ್ಯಂಶು ಸೋಮಂ ದುಹಂತ ಆಸತೇ। ಕಿಂಚೇಂದ್ರಸ್ತೇಭಿಸ್ತೈರ್ದುಗ್ಧಂ ಸೋಮ್ಯಂ ಸೋಮಮಯಂ ಮಧ್ವಮೃತಂ ಪಪಿವಾನ್ಪೀತವಾನ್ವರ್ಧತೇ। ವೃದ್ಧಶರೀರೋ ಭವತಿ। ಪ್ರಥತೇ। ವಿಸ್ತೀರ್ಣಶರೀರಶ್ಚ ಭವತಿ। ವೃಷಾಯತೇ ವೃಷೇವಾಚರತಿ ॥

। ಪ್ರತಿಪದಾರ್ಥ ।

**ಸೋಮಾದಃ**—ಸೋಮವನ್ನು ಭಕ್ಷಿಸುವ । **ತೇ**—ಗ್ರಾವಗಳು (ಹಿಂಡುವ ಕಲ್ಲುಗಳು) । **ಇಂದ್ರಸ್ಯ**—ಇಂದ್ರನ । **ಹರೀ**-ಅಶ್ವಗಳನ್ನು । **ನಿಂಸತೇ**-ಸಮೀಪಿಸುತ್ತವೆ । **ಗವಿ ಅಧಿ**-ಹಿಂಡಲು ಆಧಾರವಾದ ಗೋಚರ್ಮದ ಮೇಲೆ । **ಅಂಶುಂ**—ಸೋಮವನ್ನು । **ದುಹಂತಃ**—ಹಿಂಡುತ್ತ । **ಆಸತೇ**—ಸ್ಥಾಪಿತವಾಗಿವೆ । **ತೇಭಿಃ**—ಇವುಗಳಿಂದ । **ದುಗ್ಧಂ**—ಹಿಂಡಲ್ಪಟ್ಟ । **ಸೋಮ್ಯಂ**—ಸೋಮರಸರೂಪವಾದ । **ಮಧು**—ಅಮೃತವನ್ನು । **ಪಪಿವಾನ್**—ಪಾನಮಾಡಿದ । **ಇಂದ್ರಃ**—ಇಂದ್ರನು । **ವರ್ಧತೇ**—ಪುಷ್ಟನಾಗುತ್ತಾನೆ । **ಪ್ರಥತೇ**—ವಿಸ್ತೃತನಾಗಿ ಬೆಳೆಯುತ್ತಾನೆ । **ವೃಷಾಯುತೇ**—ಸಾಮರ್ಥ್ಯಯುತನಾಗುತ್ತಾನೆ.

॥ ಭಾವಾರ್ಥ ॥

ಸೋಮವನ್ನು ಭಕ್ಷಿಸುವ ಗ್ರಾವಗಳು ಇಂದ್ರನ ಅಶ್ವಗಳನ್ನು ಸಮೀಪಿಸುತ್ತವೆ. ಹಿಂಡಲು ಅಧಾರವಾದ ಗೋಚರ್ಮದ ಮೇಲೆ ಸೋಮವನ್ನು ಹಿಂಡಲು ಸ್ಥಾಪಿತವಾಗಿವೆ. ಇವುಗಳಿಂದ ಹಿಂಡಲ್ಪಟ್ಟ ಸೋಮರಸರೂಪವಾದ ಅಮೃತವನ್ನು ಪಾನಮಾಡಿದ ಇಂದ್ರನು ಪುಷ್ಟನಾಗುತ್ತಾನೆ. ವಿಸ್ತೃತನಾಗಿ ಬೆಳೆಯುತ್ತಾನೆ. ಸಾಮರ್ಥ್ಯಯುತನಾಗುತ್ತಾನೆ.

English Translation

These devourers of Soma kiss Indra's horses, milking forth the juice they repose upon the cow, Indra having quaffed the sweet Soma juice milked fotrh by them increases, waxes broad, grows vigorous.

॥ ಸಂಹಿತಾಪಾಠಃ ॥

ವೃಷಾ ವೋ ಅಂಶುರ್ನ ಕಿಲಾ ರಿಷಾಥನೇಳಾವಂತಃ ಸದಮಿತ್ಸ್ಥನಾಶಿತಾಃ ।
ರೈವತ್ಯೇವ ಮಹಸಾ ಚಾರವಃ ಸ್ಥನ ಯಸ್ಯ ಗ್ರಾವಾಣೋ ಅಜುಷಧ್ವ-
ಮಧ್ವರಂ ॥ ೧೦ ॥

॥ ಪದಪಾಠಃ ॥

ವೃಷಾ । ವಃ । ಅಂಶುಃ । ನ । ಕಿಲ । ರಿಷಾಥನ । ಇಳಾऽವಂತಃ । ಸದಂ । ಇತ್ । ಸ್ಥನ । ಆಶಿತಾಃ ।
ರೈವತ್ಯಾऽಇವ । ಮಹಸಾ । ಚಾರವಃ । ಸ್ಥನ । ಯಸ್ಯ । ಗ್ರಾವಾಣಃ । ಅಜುಷಧ್ವಂ । ಅಧ್ವರಂ ॥ ೧೦ ॥

॥ ಸಾಯಣಭಾಷ್ಯಂ ॥

ಅಂಶುಃ ಸೋಮೋ ವೋ ಯುಷ್ಮಾಕಂ ವೃಷಾ ಯಜ್ಞೇ ವರ್ಷಿತಾ ಭವಿಷ್ಯತಿ । ಯೂಯಮಪಿ ನ ರಿಷಾಥನ ಕಿಲ । ನ ರಿಷ್ಯಥ । ನ ಶೀರ್ಣಾ ಭವಥ ಕಿಲ । ಕಿಂಚೇಳಾವಂತೋऽನ್ನವಂತ ಇವ ಯೂಯಂ ಸದಮಿತ್ ಸದೈವಾಶಿತಾ ಭೋಜಿತಾಃ ಸ್ಥನ । ಭವಥ । ಕಿಂಚ ರೈವತ್ಯೇವ ಯಥಾ ರೇವಂತಸ್ತೇಜಸಾ ಯುಕ್ತಾ ಭವಂತಿ ತದ್ವನ್ಮಹಸಾ ತೇಜಸಾ ಯುಕ್ತಾಶ್ಚಾರವಃ ಕಲ್ಯಾಣಾಃ ಸ್ಥನ । ಭವಥ । ಹೇ ಗ್ರಾವಾಣಃ ಯೂಯಂ ಯಸ್ಯ ಯಜಮಾನಸ್ಯಾಧ್ವರಂ ಯಜ್ಞಮಜುಷಧ್ವಂ । ಅಸೇವಧ್ವಂ ॥

॥ ಪ್ರತಿಪದಾರ್ಥ ॥

**ವಃ**—ನಿಮಗೋಸ್ಕರ । **ಅಂಶುಃ**—ಸೋಮನು । **ವೃಷಾ**—(ಯಜ್ಞದಲ್ಲಿ) ವರ್ಷಕನಾಗುತ್ತಾನೆ । (ರಸವನ್ನು ಸುರಿಸುತ್ತಾನೆ) । **ನ ರಿಷಾಥನ ಕಿಲ**—ನೀವೂ ಹಿಂಸಿತರಾಗುವುದಿಲ್ಲ । **ಇಳಾವಂತಃ**—ಅನ್ನವಂತರಾದ ನೀವು । **ಸದಮಿತ್**—ಯಾವಾಗಲೂ । **ಆಶಿತಾಃ**—ಭೋಜನವನ್ನು ಹೊಂದಿದವರಾಗಿ । **ಸ್ಥನ**—ಇರುತ್ತೀರಿ । **ಗ್ರಾವಾಣಃ**—ಎಲೈ ಗ್ರಾವಗಳೇ । **ಯಸ್ಯ**—ಯಾವ ಯಜಮಾನನ । **ಅಧ್ವರಂ**—ಯಜ್ಞವನ್ನು । **ಅಜುಷಧ್ವಂ**—ನೀವು ಸೇವಿಸುವಿರೋ ಅಲ್ಲಿ । **ರೈವತ್ಯೇವ**-ತೇಜೋಯುತರಾದ ಧನಿಕರಂತೆ । **ಮಹಸಾ**—ಪ್ರಭಾಯುತರಾಗಿಯೂ । **ಚಾರವಃ**—ಕಲ್ಯಾಣಾತ್ಮಕರಾಗಿಯೂ । **ಸ್ಥನ**—ಇರುತ್ತೀರಿ.

॥ ಭಾವಾರ್ಥ ॥

ಎಲೈ ಗ್ರಾವಗಳೇ, ನಿಮ್ಮಿಂದ ಹಿಂಡಲ್ಪಟ್ಟ ನಿಮಗೋಸ್ಕರ ಸೋಮನು ಯಜ್ಞದಲ್ಲಿ ರಸವನ್ನು ಸುರಿಸುತ್ತಾನೆ. ನೀವೂ ಹಿಂಸಿತರಾಗುವುದಿಲ್ಲ. ಅನ್ನವಂತರಾದ ನೀವು ಯಾವಾಗಲೂ ಭೋಜನವನ್ನು ಹೊಂದಿದವರಾಗಿ ಇರುತ್ತೀರಿ. ಎಲೈ ಗ್ರಾವಗಳೇ, ಯಾವ ಯಜಮಾನನ ಯಜ್ಞವನ್ನು ನೀವು ಸೇವಿಸುವರೋ, ಅಲ್ಲಿ ತೇಜೋಯುತರಾದ ಧನಿಕರಂತೆ ಪ್ರಭಾಯುತರಾಗಿಯೂ ಕಲ್ಯಾಣಾತ್ಮಕರಾಗಿಯೂ ಇರುತ್ತೀರಿ.

## English Translation

The Soma is your showerer (at the sacrifice); you are unharmed, (like those) abounding in food, you are constantly feeding; like the wealthy (possessed) of splendour, you, O stones, are beautiful (at the sacrifice of him) whose sacrifice you delighted in.

॥ ಸಂಹಿತಾಪಾಠಃ ॥

ತೃದಿಲಾ ಅತೃದಿಲಾಸೋ ಅದ್ರಯೋಽಶ್ರಮಣಾ ಅಶೃಥಿತಾ ಅಮೃತ್ಯವಃ ।
ಅನಾತುರಾ ಅಜರಾಃ ಸ್ಥಾಮವಿಷ್ಣವಃ ಸುಪೀವಸೋ ಅತೃಷಿತಾ ಅತೃಷ್ಣಜಃ ॥

॥ ಪದಪಾಠಃ ॥

ತೃದಿಲಾಃ । ಅತೃದಿಲಾಸಃ । ಅದ್ರಯಃ । ಅಶ್ರಮಣಾಃ । ಅಶೃಥಿತಾಃ । ಅಮೃತ್ಯವಃ ।
ಅನಾತುರಾಃ । ಅಜರಾಃ । ಸ್ಥ । ಅಮವಿಷ್ಣವಃ । ಸುऽಪೀವಸಃ । ಅತೃಷಿತಾಃ । ಅತೃಷ್ಣऽಜಃ ॥ ೧೧ ॥

॥ ಸಾಯಣಭಾಷ್ಯಂ ॥

ಅಶ್ರಮಣಾಃ ಶ್ರಮವರ್ಜಿತಾ ಅಶೃಥಿತಾ ಅನ್ಯೈರಶಿಥಿಲೀಕೃತಾ ಅಮೃತ್ಯವೋऽಮಾರಿತಾ ಅನಾತುರಾ ಅರೋಗಾ ಅಜರಾ ಜರಾರಹಿತಾಃ ಸ್ಥ । ಭವಥ । ಕಿಂಚಾಮವಿಷ್ಣವ ಉತ್ಕ್ಷೇಪಣಾವಕ್ಷೇಪಣಗತ್ಯುಪೇತಾ ಹೇ ಗ್ರಾವಾಣಃ ತೃದಿಲಾ ಅನ್ಯೇಷಾಂ ಭೇದಕಾ ಅತೃದಿಲಾಸಃ ಸ್ವಯಮನ್ಯೇನಾಭಿನ್ನಾಃ ಸುಪೀವಸಃ ಸುಬಲಾ ಅತೃಷಿತಾಸ್ತೃಷ್ಣಾರಹಿತಾ ಅತೃಷ್ಣಜೋ ನಿಃಸ್ಪೃಹಾ ಭವಥ ॥

॥ ಪ್ರತಿಪದಾರ್ಥ ॥

**ಅದ್ರಯಃ**—ಎಲೈ ಗ್ರಾವಗಳೇ ನೀವು । **ಅಶ್ರಮಣಾಃ**—ಶ್ರಮವಿಲ್ಲದವರಾಗಿಯೂ। **ಅಶೃಥಿತಾಃ**—ಇತರರಿಂದ ಹಿಂಸಿತರಾಗದೆಯೂ । **ಅಮೃತ್ಯವಃ**—ಮರಣರಹಿತರಾಗಿಯೂ । **ಅನಾತುರಾಃ**—ರೋಗರಹಿತರಾಗಿಯೂ । **ಅಜರಾಃ**—ಜರಾರಹಿತರಾಗಿಯೂ । **ಸ್ಥ**—ಇರುತ್ತೀರಿ । **ಅಮವಿಷ್ಣವಃ**—ಏರಿಳಿತಗಳುಳ್ಳವರಾಗಿಯೂ । **ತೃದಿಲಾಃ**—ಸೋಮಭೇದಕರಾಗಿಯೂ । **ಅತೃದಿಲಾಸಃ**—ಇತರರ ಹೊಡೆತಕ್ಕೆ ಸಿಕ್ಕದವರಾಗಿಯೂ । **ಸುಪೀವಸಃ**—ಅತ್ಯಧಿಕವಾದ ಶಕ್ತಿಯುಳ್ಳವರಾಗಿಯೂ । **ಅತೃಷಿತಾಃ**—ತೃಷ್ಣಾರಹಿತರಾಗಿಯೂ । **ಅತೃಷ್ಣಜಃ**—ನಿಃಸ್ಪೃಹರಾಗಿಯೂ ಇರುತ್ತೀರಿ.

॥ ಭಾವಾರ್ಥ ॥

ಎಲೈ ಗ್ರಾವಗಳೇ, ನೀವು ಶ್ರಮವಿಲ್ಲದವರಾಗಿಯೂ, ಇತರರಿಂದ ಹಿಂಸಿತರಾಗದೆಯೂ, ಮರಣರಹಿತರಾಗಿಯೂ, ರೋಗರಹಿತರಾಗಿಯೂ, ಜರಾರಹಿತರಾಗಿಯೂ ಇರುತ್ತೀರಿ. ಏರಿಳಿತಗಳುಳ್ಳವರಾಗಿಯೂ(ಮೇಲೆದ್ದು ಕೆಳಕ್ಕೆಬರುವುದು)

ಸೋಮಭೇದಕರಾಗಿಯೂ, ಇತರರ ಹೊಡೆತಕ್ಕೆ ಸಿಕ್ಕದವರಾಗಿಯೂ, ಅತ್ಯಧಿಕವಾದ ಶಕ್ತಿಯುಳ್ಳವರಾಗಿಯೂ ತೃಷ್ಣಾರಹಿತರಾಗಿಯೂ, ನಿಃಸ್ಪೃಹರಾಗಿಯೂ ಇರುತ್ತೀರಿ.

## English Translation

Splitting, but unsplit, you, O stones, are untiring, unrelaxing, immortal, free from disease, undecaying, rising and falling, powerful, unthirsting, not generating thirst.

॥ ಸಂಹಿತಾಪಾಠಃ ॥

ಧ್ರುವಾ ಏವ ವಃ ಪಿತರೋ ಯುಗೇಯುಗೇ ಕ್ಷೇಮಕಾಮಾಸಃ ಸದಸೋ
ನ ಯುಂಜತೇ ।
ಅಜುರ್ಯಾಸೋ ಹರಿಷಾಚೋ ಹರಿದ್ರವ ಆ ದ್ಯಾಂ ರವೇಣ ಪೃಥಿವೀ-
ಮಶುಶ್ರವುಃ ॥ ೧೨ ॥

॥ ಪದಪಾಠಃ ॥

ಧ್ರುವಾಃ । ಏವ । ವಃ । ಪಿತರಃ । ಯುಗೇಽಯುಗೇ । ಕ್ಷೇಮಽಕಾಮಾಸಃ । ಸದಸಃ । ನ । ಯುಂಜತೇ ।
ಅಜುರ್ಯಾಸಃ । ಹರಿಽಸಾಚಃ । ಹರಿದ್ರವಃ । ಆ । ದ್ಯಾಂ । ರವೇಣ । ಪೃಥಿವೀಂ । ಅಶುಶ್ರವುಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಗ್ರಾವಾಣಃ ಯುಗೇಯುಗೇ ಸರ್ವೇಷು ಯುಗೇಷು ಧ್ರುವಾ ಏವ ನಿಶ್ಚಲಾ ಏವ ವೋ ಯುಷ್ಮಾಕಂ ಪಿತರಃ ಪಿತೃಭೂತಾಃ ಪರ್ವತಾಃ ಕ್ಷೇಮಕಾಮಾಸಃ ಕ್ಷೇಮಕಾಮಾಃ ಸದಸೋ ನ ಯುಂಜತೇ । ಸದಾಂಸ್ಯಾತ್ಮನಾ ನ ಸಂಯೋಜಯಂತಿ । ಅಜುರ್ಯಾಸೋ ಜರಾರಹಿತಾ ಹರಿಷಾಚಃ ಸೋಮಸ್ಯ ಸಂಭಕ್ತಾರೋ ಹರಿದ್ರವಃ ಸೋಮಸಂಸರ್ಗಾದ್ಧರಿತವರ್ಣಾ ದ್ಯಾಂ ದಿವಂ ಪೃಥಿವೀಂ ಚ ರವೇಣಾಭಿಷವಶಬ್ದೇನಾಶುಶ್ರವುಃ । ಶ್ರಾವಯಂತಿ ॥

॥ ಪ್ರತಿಪದಾರ್ಥ ॥

(ಎಲೈ ಗ್ರಾವಗಳೇ) **ವಃ**—ನಿಮ್ಮ । **ಪಿತರಃ**—ಪಿತೃರೂಪರಾದ ಪರ್ವತಗಳು । **ಯುಗೇ ಯುಗೇ**—ಅನೇಕ ಯುಗಗಳು ಕಳೆಯುತ್ತಿದ್ದರೂ । **ಧ್ರುವಾ ಏವ**—ನಿಶ್ಚಲರಾಗಿಯೂ ದೃಢರಾಗಿಯೂ । **ಕ್ಷೇಮಕಾಮಾಸಃ**—ಸುಸ್ಥಿತಿಯನ್ನು ಅಪೇಕ್ಷಿಸುವವರಾಗಿಯೂ ಇದ್ದು । **ಸದಸಃ**—ಯಜ್ಞಸಭೆಗಳೊಂದಿಗೆ । **ನ ಯುಂಜತೇ**—ಸಂಬಂಧವನ್ನು ಹೊಂದುವುದಿಲ್ಲ । **ಅಜುರ್ಯಾಸಃ**—ಕ್ಷಯರಹಿತರಾಗಿಯೂ । **ಹರಿಷಾಚಃ**—ಸೋಮ

ವನ್ನು ಹೊಂದಿದವರಾಗಿಯೂ । **ಹರಿದ್ರವಃ**—ಹಚ್ಚೆವರ್ಣವುಳ್ಳವರಾಗಿಯೂ । **ರವೇಣ**—ತಮ್ಮ ಶಬ್ದದಿಂದ । **ದ್ಯಾಂ**—ದ್ಯುಲೋಕವನ್ನೂ । **ಪೃಥಿವೀಂ**—ಪೃಥ್ವಿಯನ್ನೂ । **ಆ ಅಶುಶ್ರವುಃ**—ತುಂಬುತ್ತಾರೆ (ದ್ಯಾವಾಪೃಥಿವಿಗಳೆಲ್ಲವೂ ತಮ್ಮ ಶಬ್ದವನ್ನು ಕೇಳುವಂತೆ ಮಾಡುತ್ತಾರೆ).

। ಭಾವಾರ್ಥ ।

ಎಲೈ ಗ್ರಾವಗಳೇ, ನಿಮ್ಮ ಪಿತೃರೂಪವಾದ ಪರ್ವತಗಳು ಅನೇಕ ಯುಗಗಳು ಕಳೆಯುತ್ತಿದ್ದರೂ ಅಚರರಾಗಿ, ನಿಶ್ಚಲರಾಗಿಯೂ, ದೃಢಕಾಯರಾಗಿಯೂ, ಸುಸ್ಥಿತಿಯನ್ನು ಅಪೇಕ್ಷಿಸುವವರಾಗಿಯೂ ಇದ್ದರೂ ಯಜ್ಞಸಭೆಗಳೊಂದಿಗೆ ಸಂಬಂಧವನ್ನು ಹೊಂದುವುದಿಲ್ಲ. ಈ ಗ್ರಾವಗಳು ಕ್ಷಯರಹಿತರಾಗಿಯೂ ಸೋಮವನ್ನು ಹೊಂದಿದವರಾಗಿಯೂ, ಪಚ್ಚೆವರ್ಣವುಳ್ಳವರಾಗಿಯೂ, ತಮ್ಮ ಶಬ್ದದಿಂದ ದ್ಯುಲೋಕವನ್ನು ಪೃಥ್ವಿಯನ್ನು ತುಂಬುತ್ತಾರೆ.

## English Translation

Your progenitors (the mountains), stable from age to age, desirous of repose, seek not to mix with (religious) assemblies; exempt from decay, enjoying the Soma, flowing green (with Soma), they made heaven and earth resound with their clamour.

। ಸಂಹಿತಾಪಾಠಃ ।

ತದಿದ್ವದಂತ್ಯದ್ರಯೋ ವಿಮೋಚನೇ ಯಾಮನ್ನಂಜಸ್ಪಾ ಇವ ಘೇದು-
ಪಬ್ದಿಭಿಃ ।
ವಪಂತೋ ಬೀಜಮಿವ ಧಾನ್ಯಾಕೃತಃ ಪೃಂಚಂತಿ ಸೋಮಂ ನ ಮಿನಂತಿ
ಬಪ್ಸತಃ ॥ ೧೩ ॥

॥ ಪದಪಾಠಃ ॥

ತತ್ । ಇತ್ । ವದಂತಿ । ಅದ್ರಯಃ । ವಿಽಮೋಚನೇ । ಯಾಮನ್ । ಅಂಜಃಪಾಃಽಇವ । ಘ । ಇತ್ ।
ಉಪಬ್ದಿಽಭಿಃ ।
ವಪಂತಃ । ಬೀಜಂಽಇವ । ಧಾನ್ಯಽಕೃತಃ । ಪೃಂಚಂತಿ । ಸೋಮಂ । ನ । ಮಿನಂತಿ । ಬಪ್ಸತಃ ॥ ೧೩ ॥

। ಸಾಯಣಭಾಷ್ಯಂ ॥

ಅದ್ರಯ ಆದರಣೀಯಾ ಗ್ರಾವಾಣೋ ಯಾಮನ್ ಯಾಮನಿ ಗಮನೇಽಂಜಸ್ಪಾಃ । ಅಂಜಸಾ ಪಾಂತಿ ರಕ್ಷಂತೀತ್ಯಂಜಸ್ಪಾಃ । ತೇಷಾಂ ರಥಾನಾಮಿವೋಪಬ್ದಿಭಿಸ್ತದಿತ್ತದೇವಾಭಿಷವಕರ್ಮ

ವಿಮೋಚನೇ ಘೋತ್ ತತ್ಸೋಮರಸವಿಮೋಚನವೇಲಾಯಾಮಪಿ ವದಂತಿ। ಪ್ರಕಾಶಯಂತಿ। ಕಿಂಚ ಬಪ್ಸತಃ ಸೋಮಂ ಭಕ್ಷಯಂತೋ ಗ್ರಾವಾಣೋ ವಪಂತೋ ಧಾನ್ಯಾಕೃತಃ ಕೃಷೀವಲಾ ಬೀಜಮಿವ ಯಥಾ ಪೃಂಚಂತಿ ತದ್ವತ್ಸೋಮಂ ಪೃಂಚಂತಿ। ಸಂಪರ್ಚಯಂತೀತ್ಯರ್ಥಃ। ನೈನಂ ಮಿನಂತಿ। ನ ಹಿಂಸಂತೀತ್ಯರ್ಥಃ॥

॥ ಪ್ರತಿಪದಾರ್ಥ ॥

**ಯಾಮನ್**—ಸಂಚಾರಕಾಲದಲ್ಲಿ | **ಉಪಬ್ದಿಭಿಃ**—ತಮ್ಮ ಶಬ್ದಗಳಿಂದ | **ಅಂಜಸ್ಪಾ ಇವ**—ರಥಗಳು ತಮ್ಮ ಸಂಚಾರವನ್ನು ಪ್ರಕಾಶಪಡಿಸುವಂತೆ | **ಅದ್ರಯಃ**—ಸೋಮವನ್ನು ಹಿಂಡುವ ಕಲ್ಲುಗಳು | **ವಿಮೋಚನೇ ಘೋತ್**—ಸೋಮರಸವು ಸುರಿಯುವ ಕಾಲದಲ್ಲಿ | **ತದಿತ್**—ತಮ್ಮ ಅಭಿಷವಕರ್ಮವನ್ನು | **ವದಂತಿ**—ಪ್ರಕಟಪಡಿಸುತ್ತವೆ | **ವಪಂತಃ**—ಬೀಜವನ್ನು ಬಿತ್ತುವ | **ಧಾನ್ಯಾಕೃತಃ**—ರೈತರು | **ಬೀಜಮಿವ**—ಬೀಜವನ್ನು ಮುಷ್ಟಿಯಿಂದ ಹಿಡಿಯುವಂತೆ | **ಬಪ್ಸತಃ**—ಸೋಮವನ್ನು ಹಿಡಿದಿರುವ ಗ್ರಾವಗಳು | **ಸೋಮಂ**—ಸೋಮವನ್ನು | **ಪೃಂಚಂತಿ**—ಕಬಳಿಸುತ್ತವೆ | **ನ ಮಿನಂತಿ**—ಅದನ್ನು ಹಿಂಸಿಸುವುದಿಲ್ಲ.

॥ ಭಾವಾರ್ಥ ॥

ರಥಗಳು ಸಂಚಾರಕಾಲದಲ್ಲಿ ತಮ್ಮ ಶಬ್ದಗಳಿಂದ ತಮ್ಮ ಸಂಚಾರವನ್ನು ಪ್ರಕಟಪಡಿಸುವಂತೆ, ಸೋಮವನ್ನು ಹಿಂಡುವ ಕಲ್ಲುಗಳು ಸೋಮರಸವು ಸುರಿಯುವ ಕಾಲದಲ್ಲಿ ತಮ್ಮ ಶಬ್ದದಿಂದ ಅಭಿಷವಕರ್ಮವನ್ನು ಪ್ರಕಟಪಡಿಸುತ್ತವೆ. ಬೀಜವನ್ನು ಬಿತ್ತುವ ರೈತರು ಬೀಜವನ್ನು ಮುಷ್ಟಿಯಿಂದ ಹಿಡಿಯುವಂತೆ ಸೋಮವನ್ನು ಹಿಡಿದಿರುವ ಗ್ರಾವಗಳು ಸೋಮವನ್ನು ಕಬಳಿಸುತ್ತವೆ. ಅದನ್ನು ಹಿಂಸಿಸುವುದಿಲ್ಲ.

English Translation.

The stones proclaim it with their clamour at the issue of the Soma-juice, like the quick-protecting (chariots) on the road; like cultivators sowing the seed, they, devouring the Soma, mix it, and do not hurt it.

॥ ಸಂಹಿತಾಪಾಠಃ ॥

ಸುತೇ ಅಧ್ವರೇ ಅಧಿ ವಾಚಮಕ್ರತಾ ಕ್ರೀಳಯೋ ನ ಮಾತರಂ ತುದಂತಃ।

ವಿ ಷೂ ಮುಂಚಾ ಸುಷುವುಷೋ ಮನೀಷಾಂ ವಿ ವರ್ತಂತಾಮದ್ರಯಶ್ಚಾಯಮಾನಾಃ ॥ ೧೪ ॥

॥ ಪದಪಾಠಃ ॥

ಸುತೇ । ಅಧ್ವರೇ । ಅಧಿ । ವಾಚಂ । ಅಕ್ರತ । ಕ್ರೀಳಯಃ । ನ । ಮಾತರಂ । ತುದಂತಃ ।

ವಿ । ಸು । ಮುಂಚ । ಸುಸುಽವುಷಃ । ಮನೀಷಾಂ । ವಿ । ವರ್ತಂತಾಂ । ಅದ್ರಯಃ । ಚಾಯಮಾನಾಃ ॥

॥ ಸಾಯಣಭಾಷ್ಯಂ ॥

ಚಾಯಮಾನಾಃ ಪೂಜ್ಯಮಾನಾ ಅದ್ರಯ ಆದರಣೀಯಾ ಗ್ರಾವಾಣೋಽಧ್ವರೇಽಧಿ ಯಜ್ಞೇ ಸುತೇ ಸೋಮೇಽಭಿಷುತೇ ಮಾತರಂ ತುದಂತೋ ಹಸ್ತೇನ ತಾಡಯಂತ ಆ ಕ್ರೀಳಯೋ ನಾಕ್ರೀಡಕಾಃ ಕುಮಾರಾಃ ಶಬ್ದಂ ಯಥಾ ಕುರ್ವಂತಿ ತಥಾ ವಾಚಂ ಶಬ್ದಮಕ್ರತ । ಕೃಣ್ವಂತಿ । ಸುಷುವುಷಃ ಸೋಮಮಭಿಷುತವತೋ ಗ್ರಾವ್ಣೋ ಮನೀಷಾಂ ಸ್ತುತಿಂ ವಿ ಮುಂಚ । ವಿಶೇಷೇಣ ಮುಂಚ । ಕಿಂಚಾದ್ರಯೋ ವಿ ವರ್ತಂತಾಂ । ಅಭಿಷವಶಬ್ದಂ ವಿಮುಂಚಂತು ॥

॥ ಪ್ರತಿಪದಾರ್ಥ ॥

**ಮಾತರಂ**—ತಾಯಿಯನ್ನು । **ತುದಂತಃ**—ಆಟಕ್ಕಾಗಿ ತಮ್ಮ ಕೈಗಳಿಂದ ಹೊಡೆಯುತ್ತ । **ಆ ಕ್ರೀಳಯೋ ನ**—ಆಟವಾಡುವ ಮಕ್ಕಳು ಶಬ್ದಮಾಡುವಂತೆ । **ಚಾಯಮಾನಾಃ**—ಪೂಜ್ಯವಾದ । **ಅದ್ರಯಃ**—ಗ್ರಾವಗಳು । **ಅಧ್ವರೇಽಧಿ**—ಯಜ್ಞದಲ್ಲಿ । **ಸುತೇ**—ಸೋಮವನ್ನು ಹಿಂಡುವಾಗ । **ವಾಚಂ**—ಶಬ್ದವನ್ನು । **ಅಕ್ರತ**—ಮಾಡುತ್ತವೆ । **ಸುಷುವುಷಃ**—ಸೋಮವನ್ನು ಹಿಂಡುವ ಗ್ರಾವಗಳ ! **ಮನೀಷಾಂ**—ಸ್ತುತಿಯನ್ನು । **ವಿ ಮುಂಚ**-ಪಠಿಸು । **ಅದ್ರಯಃ**—ಗ್ರಾವಗಳೂ । **ವಿ ವರ್ತಂತಾಂ**—ತಮ್ಮ ಶಬ್ದವನ್ನು ನಿಲ್ಲಿಸಲಿ.

॥ ಭಾವಾರ್ಥ ॥

ತಾಯಿಯನ್ನು ಆಟಕ್ಕಾಗಿ ಹೊಡೆಯುತ್ತ ಆಟವಾಡುವ ಮಕ್ಕಳು ಶಬ್ದಮಾಡುವಂತೆ, ಪೂಜ್ಯವಾದ ಗ್ರಾವಗಳು ಯಜ್ಞದಲ್ಲಿ ಸೋಮವನ್ನು ಹಿಂಡುವ ಗ್ರಾವಗಳನ್ನು ಸ್ತುತಿಸು. ಗ್ರಾವಗಳೂ ತಮ್ಮ ಶಬ್ದವನ್ನು ನಿಲ್ಲಿಸಲಿ.

## English Translation.

(The Soma) being effused at the sacrifice, they made a noise like (children) at play, striking their mother. Proclaim the praise of (the stone), which has effused (the Soma-juice); let the honoured stones relax.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ ಚತುರ್ಥೋಽಧ್ಯಾಯಃ ಸಮಾಪ್ತಃ



ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥
ಶುಭಂ ಭೂಯಾತ್

ಮಂಗಳಂ